# ವಿಷಯಾನುಕ್ರಮಣಿಕೆ.


| ಸಂಧಿ | | ಪುಟ |
|---|---|---|
| ೯ | ಅರ್ಜುನನು ಅಭಿಮನ್ಯುವಿನ ಮರಣವನ್ನು ತಿಳಿದು ಪ್ರಲಾಪಿಸಿದ್ದು | ೫೧೪ |
| ೧೦ | ದ್ರೋಣಾಚಾರ್ಯನು ಶಕಟವ್ಯೂಹವಂ ರಚಿಸಿ ಯುದ್ಧಕ್ಕನುವಾದದ್ದು | ೫೨೦ |
| ೧೧ | ಅರ್ಜುನನ ಕ್ಷೇಮವಾರ್ತೆಯಂ ತಿಳಿಯುವದಕ್ಕಾಗಿ ಸಾತ್ಯಕಿ ಶಕಟವ್ಯೂಹವಂ ಪ್ರವೇಶಿಸಿದ್ದು | ೫೩೨ |
| ೧೨ | ಭೀಮಸೇನನು ಯುದ್ಧದಲ್ಲಿ ದ್ರೋಣನನ್ನು ಧಿಕ್ಕರಿಸಿ ದುರ್ಯೋಧನನ ತಮ್ಮಂದಿರನ್ನು ಸಂಹರಿಸಿದ್ದು | ೫೩೪ |
| ೧೩ | ಭೀಮಸೇನನು ದ್ರೋಣನ ರಥವನ್ನು ಮುರಿದು ಕರ್ಣನನ್ನು ಜೈಸಿ ಶ್ರಮಹೊಂದಿದ್ದು | ೫೩೭ |
| ೧೪ | ಅರ್ಜುನನು ಸೈಂಧವನನ್ನು ಸಂಹರಿಸಿದ್ದು | ೫೪೩ |
| ೧೫ | ಘಟೋತ್ಕಚನು ರಾತ್ರಿಯುದ್ಧದಲ್ಲಿ ಅನೇಕ ದೈತ್ಯರನ್ನು ಸಂಹರಿಸಿದ್ದು | ೫೪೯ |
| ೧೬ | ಕರ್ಣನು ಘಟೋತ್ಕಚನನ್ನು ಕೊಂದದ್ದು | ೫೫೫ |
| ೧೭ | ದ್ರೋಣಾಚಾರ್ಯನು ರಾತ್ರಿ ಯುದ್ಧದಲ್ಲಿ ಶತ್ರುಸೇನೆಯನ್ನು ಕಲಕಾಡಿ ಮಕುಟವರ್ಧನರಂ ಜಯಿಸಿದ್ದು | ೫೬೦ |
| ೧೮ | ಯುದ್ಧದಲ್ಲಿ ಅಶದೃಕನಾದ ದ್ರೋಣನು ಪುತ್ರಮೋಹದಿಂದ ಮಡಿದದ್ದು | ೫೬೪ |
| ೧೯ | ಪಾಂಡವರ ಸೈನ್ಯದ ಮೇಲೆ ಅಶ್ವತ್ಥಾಮನು ಪ್ರಯೋಗಿಸಿದ ನಾರಾಯಣಾಸ್ತ್ರದ ಬಾಧೆಯನ್ನು ಕೃಷ್ಣನು ಪರಿಹರಿಸಿದ್ದು | ೫೭೦ |


## ಕರ್ಣಪರ್ವ.


| ಸಂಧಿ | | ಪುಟ |
|---|---|---|
| ೧ | ದುರ್ಯೋಧನನು ಕರ್ಣನಿಗೆ ಸೇನಾಧಿಪತ್ಯವಂ ಕೊಟ್ಟದ್ದು | ೫೭೪ |
| ೨ | ಭೀಮಸೇನನು ಯುದ್ಧದಲ್ಲಿ ಕ್ಷೇಮಧೂರ್ತನನ್ನು ಕೊಂದದ್ದು | ೫೭೮ |
| ೩ | ಸಾತ್ಯಕಿಯು ಯುದ್ಧದಲ್ಲಿ ವಿಂದಾನುವಿಂದರಂ ಕೊಂದದ್ದು ಮತ್ತು ಭೀಮನೂ ಅಶ್ವತ್ಥಾಮನೂ ಹೋರಾಡಿ ಬಳಲಿದ್ದು | ೫೮೦ |
| ೪ | ಧರ್ಮರಾಯನು ಶತ್ರುಸೈನ್ಯವನ್ನು ಸಂಹರಿಸಿ ದುರ್ಯೋಧನನನ್ನು ಜೈಸಿದ್ದು | ೫೮೩ |
| ೫ | ದುರ್ಯೋಧನನು ಶಲ್ಯನಿಗೆ ತ್ರಿಪುರ ದಹನದ ಕಥೆಯಂ ಹೇಳಲುಪಕ್ರಮಿಸಿದ್ದು | ೫೮೭ |
| ೬ | ಶಿವನು ತ್ರಿಪುರಾಸುರರ ಬಾಧೆಯನ್ನು ದೂರಿದ ದೇವತೆಗಳನ್ನು ಸಮಾಧಾನಗೊಳಿಸಿ ರಾಕ್ಷಸರೊಡನೆ ಯುದ್ಧ ಸನ್ನದ್ಧನಾದದ್ದು | ೫೯೦ |
| ೭ | ಶಿವನು ತ್ರಿಪುರವಂ ದಹಿಸಿ ದೇವತೆಗಳನ್ನು ಸಂತೈಸಿದ್ದು | ೫೯೪ |
| ೮ | ಕರ್ಣನಿಗೆ ಸಾರಥಿಯಾಗುವಂತೆ ದುರ್ಯೋಧನನು ಶಲ್ಯನನ್ನು ಒಡಂಬಡಿಸಿದ್ದು | ೫೯೬ |
| ೯ | ಕರ್ಣನೂ ಶಲ್ಯನೂ ಒಬ್ಬರಿಗೊಬ್ಬರು ಬೈದಾಡಿದ್ದು | ೬೦೦ |
| ೧೦ | ಭೀಮಸೇನನು ಯುದ್ಧದಲ್ಲಿ ಕರ್ಣನ ಮಗನನ್ನು ಕೊಂದದ್ದು | ೬೦೪ |
| ೧೧ | ಕರ್ಣನು ಧರ್ಮರಾಜನನ್ನು ಜೈಸಿದ್ದು | ೬೦೮ |
| ೧೨ | ಭೀಮಸೇನನು ಕರ್ಣನನ್ನು ಸೇನಾ ಸಹಿತ ಗೆದ್ದದ್ದು | ೬೧೩ |
| ೧೩ | ಭೀಮಸೇನನು ಕೌರವನ ತಮ್ಮಂದಿರನ್ನು ಕೊಂದದ್ದು ಮತ್ತು ಕರ್ಣನು ಧರ್ಮರಾಜನನ್ನು ಯುದ್ಧದಲ್ಲಿ ನೋಯಿಸಿದ್ದು | ೬೧೬ |
| ೧೪ | ಧರ್ಮರಾಯನು ಪಾಳೆಯಕ್ಕೆ ಹಿಂತಿರುಗಿದ ಸಂಗತಿಯನ್ನು ಅರ್ಜುನನು ಕೇಳಿ ಯುದ್ಧಸನ್ನದ್ಧನಾಗಲು ಭೀಮನು ಆತನನ್ನು ಧರ್ಮರಾಯನ ಸಂಗಡ ಕಳುಹಿಸಿ ತಾನು ಯುದ್ಧಕ್ಕೆ ನಿಂತದ್ದು | ೬೨೧ |
| ೧೫ | ಭೀಮನು ಕೌರವರ ಸೇನೆಯನ್ನೆಲ್ಲಾ ತಾನೊಬ್ಬನೇ ಗೆದ್ದದ್ದು | ೬೨೪ |
| ೧೬ | ಅರ್ಜುನನು ಕೃಷ್ಣನ ಸಂಗಡ ಧರ್ಮರಾಜನನ್ನು ಕಂಡದ್ದು | ೬೨೮ |
| ೧೭ | ಅರ್ಜುನನು ಧರ್ಮರಾಜನನ್ನು ಹೀಯಾಳಿಸಲಾಗಿ ಕೃಷ್ಣನು ಇಬ್ಬರನ್ನೂ ಸಮಾಧಾನಗೊಳಿಸಿದ್ದು | ೬೩೧ |
| ೧೮ | ಅರ್ಜುನನು ಕರ್ಣನನ್ನು ಕೊಲ್ಲುವುದಕ್ಕೆ ಧರ್ಮರಾಯನಿಂದ ಅಪ್ಪಣೆ ಪಡೆದು ಹೊರಟದ್ದು | ೬೩೫ |
| ೧೯ | ಭೀಮನು ದುಶ್ಶಾಸನನನ್ನು ಕೊಂದದ್ದು | ೬೩೮ |
| ೨೦ | ವೃಷಸೇನನು ಭೀಮನ ರಥವನ್ನು ಮುರಿದು ಅರ್ಜುನನೊಡನೆ ಕಾದಿ ಮಡಿದದ್ದು | ೬೪೯ |
| ೨೧ | ಕರ್ಣಾರ್ಜುನರ ಯುದ್ಧ ಪ್ರಾರಂಭವು | ೬೫೩ |
| ೨೨ | ಕರ್ಣಾರ್ಜುನರ ಯುದ್ಧದಲ್ಲಿ ಲೋಕವೆಲ್ಲವೂ ಎರಡು ಪಕ್ಷವಾದದ್ದು | ೬೫೫ |
| ೨೩ | ಕರ್ಣಾರ್ಜುನರು ತಾರಕಾಸುರ ಷಣ್ಮುಖರಂತೆಯೂ ರಾವಣ ರಾಮರಂತೆಯೂ ಯುದ್ಧ ಮಾಡಿದ್ದು | ೬೫೯ |

ಸಂಧಿ ಪುಟ

೨೪ ಕರ್ಣಾರ್ಜುನರು ಮೂರು ಲೋಕಕ್ಕೂ ಭಯ ವುಂಟಾಗುವಂತೆ ಯುದ್ಧಮಾಡಿದ್ದು ... ೬೬೨

೨೫ ಕರ್ಣನು ಅರ್ಜುನನಮೇಲೆ ಸರ್ಪಾಸ್ತ್ರವಂ ಪ್ರಯೋಗಿಸಿದ್ದು ... .... ೬೬೯

೨೬ ಕರ್ಣನಲ್ಲಿದ್ದ ಜಯಲಕ್ಷ್ಮಿಯು ಅರ್ಜುನನ ಭುಜಕ್ಕೆ ಬಂದದ್ದು ... .... ೬೭೩

೨೭ ಕರ್ಣನು ಮಡಿಯಲಾಗಿ ಕೌರವನು ಪ್ರಲಾಪಿಸಿದ್ದು ... ... ೬೭೮

ಶಲ್ಯಪರ್ವ.

೧ ಶಲ್ಯನು ಸೇನಾಪತಿಯಾಗಿ ಯುದ್ಧಕ್ಕೆ ನಿಂತದ್ದು ೬೮೨

೨ ಧರ್ಮರಾಜನು ಶಲ್ಯನೊಡನೆ ಯುದ್ಧಮಾಡಿದ್ದು ೬೮೫

೩ ಶಲ್ಯನು ಧರ್ಮರಾಯನ ಕೈಯಿಂದ ಮಡಿದದ್ದು ೬೯೦

ಗದಾಪರ್ವ.

೧ ಶಲ್ಯನ ನಂತರ ದುರ್ಯೋಧನನು ಕಾದಿ ಮರೆಯಾದದ್ದು .... .... ೬೯೭

೨ ಅರ್ಜುನನು ಸಂಶಪ್ತಕರನ್ನು ಕೊಂದದ್ದು ಮತ್ತು ಸಹದೇವನಿಂದ ಶಕುನಿಯ ಮರಣವು... ೭೦೨

೩ ದುರ್ಯೋಧನನು ದ್ವೈಪಾಯನ ಸರೋವರವಂ ಪ್ರವೇಶಿಸಿದ್ದು ... ... ೭೦೭

೪ ಭೀಮಾರ್ಜುನ ನಕುಲ ಸಹದೇವರು ಯು ದ್ಧಾಂಕಣದಲ್ಲಿ ಕೌರವನನ್ನು ಹುಡುಕಿ ಕಾಣದೆ ದ್ವೈಪಾಯನ ಸರೋವರವಂ ಮುತ್ತಿದುದು ೭೧೧

೫ ಭೀಮಾದಿಗಳು ಕೌರವನನ್ನು ಮೂದಲಿಸಿ ಸರೋವರದಿಂ ಹೊರಡಿಸಿದ್ದು ... ೭೧೭

೬ ಭೀಮ ದುರ್ಯೋಧನರು ಯುದ್ಧಕ್ಕೆ ಪ್ರಾರಂಭಿಸಿದ್ದು ... ... ೭೨೨

೭ ದುರ್ಯೋಧನನು ಭೀಮನ ಕೈಯಿಂದ ಬಿದ್ದದ್ದು ೭೨೫

೮ ಕೃಪಾಶ್ವತ್ಥಾಮ ಕೃತವರ್ಮರು ಕೌರವನ ಅಪ್ಪಣೆಯಿಂದ ಪಾಂಡವರ ಪಾಳೆಯವಂ ಪ್ರವೇಶಿಸಿದ್ದು ... ... ೭೩೦

೯ ಅಶ್ವತ್ಥಾಮನು ರಾತ್ರಿಯಲ್ಲಿ ಉಪಪಾಂಡವರಂ ಕೊಂದದ್ದು ... ... ೭೩೬

೧೦ ಶ್ರೀ ಕೃಷ್ಣನು ಉತ್ತರೆಯ ಗರ್ಭವನ್ನು ರಕ್ಷಿಸಿದ್ದು ... .... ೭೪೦

೧೧ ವ್ಯಾಸಮುನಿಯು ಧೃತರಾಷ್ಟ್ರನನ್ನು ಸಂತೈಸಿದ್ದು ಮತ್ತು ಗಾಂಧಾರಿ ಕೃಷ್ಣನಿಗೆ ಶಾಪವಂ ಕೊಟ್ಟದ್ದು ... ... ೭೪೩

೧೨ ಗಾಂಧಾರಿ ಯುದ್ಧಾಂಕಣಕ್ಕೆ ಹೋಗಿ ದುರ್ಯೋಧನನ ದೇಹವಂ ಕಂಡು ದುಃಖಿಸಿದ್ದು ೭೪೯

೧೩ ಧರ್ಮರಾಜನಿಗೆ ರಾಜ್ಯಾಭಿಷೇಕವಂ ಮಾಡಿದ್ದು ೭೫೨


ಇಂತು ದಶಪರ್ವ ಭಾರತದ ವಿಷಯಾನುಕ್ರಮಣಿಕೆ ಸಮಾಪ್ತವಾದುದು.





ಆಸ್ಥಾನ ಮಹಾ ವಿದ್ವಾಂಸರಾಗಿಯೂ, ಮಹಾರಾಜಾ ಕಾಲೇಜ್ ರಿಟೈರ್ಡ್ ಕರ್ಣಾಟಕ
ಸೀನಿಯರ್ ಪಂಡಿತರಾಗಿಯೂ, ಇರುವ

ವೇ॥ ಬ್ರ॥ ಶ್ರೀ॥ ಪಿ. ಆರ್. ಕರಿಬಸವಶಾಸ್ತ್ರಿಗಳು ಪರಿಶೋಧಿಸಿದ ಪುಸ್ತಕಗಳು;—

| ಪುಸ್ತಕಗಳು | ರೂ—ಆ—ಪೈ | ಪುಸ್ತಕಗಳು | ರೂ—ಆ—ಪೈ |
|---|---|---|---|
| ಪ್ರತಿಪದ ಟೀಕಾತಾತ್ಪರ್ಯ ಸಹಿತವಾದ ಕರ್ನಾಟಕ | | ಪ್ರಹ್ಲಾದಚರಿತ್ರೆ (ಗ್ಲೇಜ್) | ೧— ೦—೦ |
| ಜೈಮಿನಿಭಾರತ (ಪೂರ್ವಾರ್ಧ) | ೩— ೦—೮ | ಡಿಟೊ ರಫ್ | ೦— ೧೨—೦ |
| ಡಿಟೊ (ಉತ್ತರಾರ್ಧ) ಮುದ್ರಣವಾಗುತ್ತದೆ | | ರಾಮಾಯಣ ಸುಂದರಕಾಂಡ | |
| ಕರ್ಣಾಟಕ ಜೈಮಿನಿಭಾರತ ( ೩೪ ಸಂಧಿ | | ಕನ್ನಡ ಅಕ್ಷರ (ಗ್ಲೇಜ್) | ೦—೧೨—೦ |
| ಮೂಲ ) ಗ್ಲೇಜ್ ಕಾಗದ | ೨— ೮—೦ | ಡಿಟೊ (ರಫ್) | ೦— ೮— ೦ |
| ಡಿಟೊ ರಫ್ ಕಾಗದದ್ದು | ೧— ೮—೦ | ಶಬ್ದಮಾಲಿಕಾ | ೦— ४—೦ |
| ರಾಜಶೇಖರವಿಳಾಸ (ಗ್ಲೇಜ್) | ೧— ೮—೦ | ನಕ್ಷತ್ರಮಾಲಿಕಾ | ೦— ೨—೦ |
| ಡಿಟೊ (ರಫ್) | ೧— ೦—೦ | ಶ್ರೀರುದ್ರ | ೦— ೨—೦ |
| ಶಬರಶಂಕರವಿಲಾಸ | ೦— ೮—೦ | ಶಿವಭಕ್ತಿಸಾರ | ೦— ೧—೦ |

ಇವನ್ನು ಬಿ. ಎ ಕೋದಂಡರಾಮ್ ಬುಕ್ ಡಿಪೊ ಇವರಿಗೆ ಬರೆದು ತರಿಸಿಕೊಳ್ಳಬಹುದು.

ಮತ್ತು ನಮ್ಮಲ್ಲಿ ಕನ್ನಡ ವೇದಾಂತ, ಕಾವ್ಯ, ಜ್ಯೋತಿಷ್ಯ, ಯಕ್ಷಗಾನ, ಶಿವಪುರಾಣ, ವೀರಶೈವ ಗ್ರಂಥಗಳು, ಚಾತುರ್ಯವಾದ ಕಥೆಗಳು, ನಾಟಕಗಳು, ಕಾದಂಬರಿಗಳು ಇನ್ನೂ ಅನೇಕ ವಿಧವಾದ ಪುಸ್ತುಕಗಳು ಸುಲಭ ಕ್ರಯಕ್ಕೆ ದೊರೆಯುತ್ತವೆ. ಅಲ್ಲದೆ ಪ್ರತಿವರ್ಷವೂ, ಪಂಚಾಂಗ ಸಮೇತ ಇರುವ ನಾಲ್ಕು ಮೂರನೆಯ ಇಂಗ್ಲೀಷ್ ಕನ್ನಡ ಪಾಕೆಟ್ ಡೈರಿಗಳೂ ದೊರೆಯುತ್ತವೆ. ಮತ್ತು ಅಪೂರ್ವವಾದ "ಜ್ಯೋತಿಷ್ಯ ಸರ್ವವಿಷಯಾಮೃತ" ವನ್ನು ಮುಖ್ಯವಾಗಿ ನೋಡತಕ್ಕದ್ದು. ಕ್ರಯ ರೂ. ೧-೮-೦. ಟಪಾಲು ಹಾಸಲು ಪ್ರತ್ಯೇಕ. ವಿಳಾಸ:—ಬಿ. ಎ. ಕೋದಂಡರಾಮ್ ಬುಕ್ ಡಿಪೊ ಶ್ರೀರಾಮಪೇಟೆ, ಮೈಸೂರು.

☞ ಎಲ್ಲಾ ತರದ ಕನ್ನಡ ಸ್ಕೂಲ್ ಪುಸ್ತುಕಗಳು ಸಹ ದೊರೆಯುತ್ತೆ.

## ನೋಟೀಸ್.

ನಮ್ಮ ಪ್ರಿಂಟಿಂಗ್ ಆಫೀಸಿನಲ್ಲಿ ಪ್ರಸಿದ್ಧಪತ್ರಿಕೆ ಲಗ್ನಪತ್ರಿಕೆ. ಬಿಲ್ ಫಾರಂ ವಿಜಿಟಿಂಗ್ ಕಾರ್ಡ್ಸ್. ಬ್ಯಾಲನ್ಸ್ ಷೀಟ್. ನೋಟೀಸ್ ಫಾರಂ. ವಕಾಲತ್ ಫಾರಂ ಜಾಬ ಫಾರಂ. ಮೊದಲಾದ ಕೆಲಸಗಳೂ, ಇತರ ವಿಧವಿಧವಾದ ಮುದ್ರಣಕಾರ್ಯಗಳೂ ಇಂಗ್ಲೀಷ್ ಕನ್ನಡ ಭಾಷೆಗಳಲ್ಲಿ ಬಹು ಸೊಗಸಾಗಿ. ಮತ್ತು ನೇತ್ರಾನಂದಕರವಾಗಿ. ಸುಲಭಛಾರ್ಜಿಗೆ ಮಾಡಿಕೊಡಲ್ಪಡುತ್ತವೆ.

ನಮ್ಮ ವಿಳಾಸ;—

☞ ಬಿ. ಎ. ಕೋದಂಡರಾಮ ಬುಕ್ ಡಿಪೋ,
ಪ್ರಿಂಟರ್ಸ್ ಎಂಡ್ ಪಬ್ಲಿಷರ್ಸ್, ಮೈಸೂರು.

ಹೇಮಖುರಶೃಂಗಾದಿಭರಣದ । ಕಾಮಧೇನು ಸಹಸ್ರಕಪಿಲೆಯ । ಸೋಮಸೂರ್ಯಗ್ರಹಣದಲಿ ಸುರನದಿಯ ತೀರದಲಿ ॥ ಶ್ರೀಮುಕುಂದಾರ್ಪಣವೆನಿಸಿ ಶತ । ಭೂಮಿದೇವರಿಗಿತ್ತ ಫಲವಹು । ದೀಮಹಾಭಾರತದೊಳೊಂದಕ್ಷರವ ಕೇಳ್ದರಿಗೆ ॥೧೭॥ ಚೋರ ನಿಂದಿಸಿ ಶಶಿಯ ಬೈದೊಡೆ । ಕ್ಷೀರವನು ಕ್ಷಯರೋಗಿ ಹಳಿದರೆ । ವಾರಣಾಸಿಯ ಹಳಿವ ನಿಂದಿಸಿ ನಕ್ಕೊಡೇನಹುದು ॥ ಭಾರತಕಥಾಪ್ರಸಂಗವ । ಕ್ರೂರಕರ್ಮಿಗಳೆತ್ತ ಬಲ್ಲರು । ಘೋರರೌರವವನು ಕಡಿಸುವುದು ಕೇಳ್ವ ಸಜ್ಜನರಾ ॥೧೮॥

ಪೀಠಿಕಾಸಂಧಿ ೧ಕ್ಕೆ ಪದ ೧೮ಕ್ಕಂ ಮಂಗಳಮಸ್ತು.

---

## ಎರಡನೆಯ ಸಂಧಿ.

ಸೂಚನೆ॥ ರಾಯಜನಮೇಜಯಗೆ ವೈಶಂ ಪಾಯನನುಹೇಳಿದನುಮುನಿದ್ವೈ । ಪಾಯನನುವರ್ಣಿಸಿದ ಭಾರತವರಕಥಾಮೃತವಾ ॥

---

ಸೂತನೈತಂದನು ಜಗದ್ವಿ । ಖ್ಯಾತಶೌನಕಮುಖ್ಯಮುನಿಸಂ । ಘಾತ ಪಾವನನೈಮಿಷಾರಣ್ಯಕವರಾಶ್ರಮಕೆ ॥ ಆತನನು ಕಂಡಖಿಲ ತಪಸ್ವಿ । ವ್ರಾತ ಕುಶಲಪ್ರಶ್ನೆ ಮಧುರ । ಪ್ರೀತಿವಚನಾಮೃತದಿ ಸಂಭಾವನೆಯ ಮಾಡಿದರು ॥೧॥ ಪರಮಪೌರಾಣಿಕಶಿರೋಮಣಿ । ಬರವಿದೆತ್ತಣಿದಾಯ್ತು ಕೌತುಕ । ವರಕಥಾಪೀಯೂಷಸಾರ ವಿಶೇಷ ವೇನುಂಟು ॥ ಚರಿತ ಚತುರಾಶ್ರಮತಪೋನಿ । ಸ್ತರಗೆ ವಿಶ್ರಮವೈ ಭವಾದೃಶ । ದರುಶನವು ನಮಗೆಂದು ನುಡಿದರು ರೋಮಹರ್ಷಣಿಯಾ ॥೨॥ ವಂದಿಸಿದನೈ ವರತಪೋಧನ । ವೃಂದ ಚಿತ್ತೈಸುವುದು ತಾನೇ । ನೆಂದು ನುಡಿವೆನು ಕೌತುಕಾಮೃತರಸದ ಕಡುಗಡಲ ॥ ಹಿಂದೆಕೇಳಿದುದಲ್ಲ ಹೇಳ್ವುದು । ಮುಂದೆ ಹುಸಿ ವರನಿಗಮಶ್ರುತಿಯ । ಕೊಂದವೊರೆಗೆ ಬರಲರಿಯದೆಂದನು ಸೂತ ಕೈಮುಗಿದು ॥೩॥ ಕೇಳಿದನು ಜನಮೇಜಯಕ್ಷಿತಿ । ಪಾಲಕನು ವರ ಸರ್ಪಯಜ್ಞ । ಸ್ಥೂಲಪಾಪವಿಘಾತಿಗೋಸುಗ ವೀಮಹಾಕಥೆಯ ॥ ಕೇಳಿದನು ತಾನಲ್ಲಿ ಮುನಿಜನ ಮೌಳಿ ಮಂಡಿತ ಚರಣಕಮಲವಿ। ಶಾಲವೇದವ್ಯಾಸಕೃತಭಾರತಕಥಾಮೃತವ ॥೪॥ ಹಾ ಮಹಾದೇವಾಯಿದೆಂತೈ । ರೋಮಹರ್ಷಣಿ ಸಾವು ಮಾಡಿದ । ಸೋಮಪಾನಾದಿಗಳ ಪ್ರಶ್ನೋತ್ತರಗಳಿಗೆ ॥ ಈಮಹಾಭಾರತಕಥಾಮೃತ । ರಾಮಣೀಯಕಫಲವಲಾ ನಿಸ್ಸೀಮಪುಣ್ಯರು ಧನ್ಯರಾವೆಂದರು ಮುನಿಸ್ತೋಮ ॥೫॥ ಹೇಳು ಸಾಕೆಲೆ ಸೂತ ದುರಿತ । ವ್ಯಾಳವಿಷಜಾಂಗಳಿಕವನು ನೀ । ಕೇಳಿವಂದದೊಳಂದು ಜನಮೇಜಯನ ಯಾಗದಲಿ ॥ ಮೌಳಿಗಳೊಳಾಸುವೆವು ನಿನ್ನಯ । ಹೇಳಿಕೆಯನೆನೆ ನಿಖಿಳ ಮುನಿಗಳ ನೋಲಗಿಸುವೆನು ನಿಮ್ಮನುಜ್ಞೆಯಲೆಂದು ಕೈಮುಗಿದ ॥೬॥ ಸರ್ಪಯಜ್ಞದಲಾದ ದುರಿತದ । ದರ್ಪವನು ಕೆಡೆಬೀಳಲೊದೆಯಲು । ತರ್ಪಣಾದಿಕ್ರಿಯೆಗಳಲಿ ಸಾಮರ್ಥ್ಯವಿಲ್ಲೆಂದ. ॥ ಪರ್ಪ

ಕಾಹಿತಮೂರ್ತಿ ಮುನಿಮುಖ್ಯ । ದರ್ಪಣನು ಶಿಷ್ಯನನು ಕರೆದು ಸ । ಮರ್ಪಿಸಿದನರಸಂಗೆ ವೇದವ್ಯಾಸ
ಮುನಿರಾಯ ॥೭॥ ರಾಯಕೇಳ್ಕೆ ನಿಮ್ಮ ಪಾಂಡವ । ರಾಯ ಚರಿತವನೆಂದು ವೈಶಂ । ಪಾಯನಗೆ
ಬೆಸಸಿದನು ಕೊಟ್ಟನು ಬಳಿಕ ಪುಸ್ತಕವ ॥ ರಾಯನತಿಭಕ್ತಿಯಲಿ ವೈಶಂ । ಪಾಯನಗೆ ವಂದಿಸಿ ನಿಜಾಭಿ ।
ಪ್ರಾಯವನು ಕೇಳಿದನು ಚಿತ್ತೈಸುವುದು ಮುನಿನಿಕರ ॥೮॥ ವಿತತಪುಸ್ತಕವನು ಸುಗಂಧಾ । ಕ್ಷತೆಯೊಳ
ರ್ಚಿಸಿ ಸೋಮಸೂರ್ಯ । ಕ್ಷಿತಿಜಲಾನಲವಾಯುಗಗನಾದಿಗಳಿಗಭಿನಮಿಸಿ ॥ ಶತಮುಖಾದಿಸಮಸ್ತದೇವ ।
ಪ್ರತತಿಗೆರಗಿ ಸರೋಜಭವಪಶು । ಪತಿಗಳಿಗೆ ಕೈಮುಗಿದು ವಿಮಲಜ್ಞಾನಮುದ್ರೆಯಲಿ ॥೯॥ ಮನ
ದೊಳಾದ್ಯಂಪುರುಷ ಮೀಶಾ । ನನನು ಪುರುಹೂತನ ಪುರಸ್ಕೃತ । ನನಘನೇಕಾಕ್ಷರ ಪರಬ್ರಹ್ಮನ
ಸನಾತನನ ॥ ದನುಜರಿಪು ಸುವ್ಯಕ್ತ ನವ್ಯ । ಕ್ತನನು ಸದಸದ್ರೂಪನವ್ಯಯ । ನೆನೆವ ವಿಷ್ಣುವ
ನೆನೆದು ಮುನಿ ವಿಸ್ತರಿಸಿದನು ಕಥೆಯ ॥೧೦॥ ವೇದನಾಲ್ಕುವರಂಗವಾರು । ಷ್ಷಾಸ್ತ್ರ ಪುರಾಣಸ್ಮೃ
ತಿಗಳೊಳ । ಗಾದ ಪೂರ್ವೋತ್ತರದ ಮೀಮಾಂಸದ ಪರಿಕ್ರಮದ ॥ ವಾದ್ಯವಿಲಸನ್ನ್ಯಾಯವನು ಶ ।
ಬ್ದೋದಧಿಯನಳವಡಿಸಿ ರಚಿಸಿದ । ಬಾದರಾಯಣನಂಘ್ರಿಗಭಿನಮಿಸಿದನು ಮನದೊಳಗೆ ॥೧೧॥
ಅರಸ ಕೇಳ್ಕೆ ನಾರದಾದ್ಯರು । ಸರಸಿರುಹಸಂಭವನ ಸಭೆಯೊಳು । ವರಮಹಾಭಾರತವ ಕೊಂಡಾಡಿ
ದರು ಭಕ್ತಿಯಲಿ ॥ ವರಮಹತ್ವದಿ ಭಾರವತ್ವದಿ । ವರಮಹಾಭಾರತವಿದೆಂದೀ । ಮಹಿತದು
ರ್ಗವಿ ಭೇದಕರವಿವರೇಳುಲೋಕದಲಿ ॥೧೨॥ ಹೇಳಿದನು ಪೌಲೋಮಚರಿತೆಯ । ದ್ದಾಲಕಾಖ್ಯರ ಚರಿತ
ವನು ಮುನಿ । ಹೇಳಿದನು ಫಣಿನಿಕರಗರುಡಾಸ್ತೀಕರ ಸಂಭವವ ॥ ಮೇಲೆ ಬಳಿಕ ಪರೀಕ್ಷಿದವನೀ ।
ಪಾಲ ಶಾಪದ ಮರಣವನು ನೆರೆ । ಹೇಳಿದನು ಮುಭಗಳಿಗೆ ಸರ್ಪಾಧ್ವರದ ಸಂಗತಿಯ ॥೧೩॥ ಕೇಳಿ
ದನು ಜನಮೇಜಯಕ್ಷಿತಿ । ಪಾಲ ವೈಶಂಪಾಯನನ ತಾ । ಕೇಳುವುಚಿತಂಗಳಿಗೆ ಪ್ರಾಯಶ್ಚಿತ್ತರೂಪ
ದಲಿ ॥ ಕೇಳಿರೈ ಮುನಿನಿಕರವೀಕಲಿ । ಕಾಲದಲಿ ಫಲಿಸುವುದು ಲಕ್ಷ್ಮೀ । ಲೋಲನಾಮಸ್ಮೃತಿ
ಮಹಾಭಾರತಕಥಾ ಶ್ರವಣ ॥೧೪॥ ರಾಯ ಚಿತ್ತೈಸೆಂದು ವೈಶಂ । ಪಾಯಮುನಿ ಹೇಳಿದನು
ಕಮಲದ । ಳಾಯತಾಕ್ಷನಬಾಲಕೇಳಿವಿಧೂತಕಿಲ್ಬಿಷವ ॥ ಕಾಯಕಲ್ಮಷಹರವಖಿಳ ನಿ । ಶ್ರೇಯಸದ
ಸದ್ರೂಪವಿನ ಸಂ । ದಾಯಕವ ನಿರ್ಮಲ ಮಹಾಭಾರತಕಥಾಮೃತವ ॥೧೫॥ ಆದಿಸೃಷ್ಟಿ
ಯೊಳುದಿಸಿದರು ದ । ಕ್ಷಾದಿವಿಮಲನವಪ್ರಜೇಶ್ವರ । ರಾದರಂಬುಜಭವನ ಲೀಲಾಮಾತ್ರ
ಸೂತ್ರದಲಿ ॥ ಆದವರೊಳಗತ್ರಿಮುನಿ ಬಳಿ । ಕಾದನಾ ಮುನಿಪತಿಗೆ ಜಗದಾ । ಹ್ಲಾದಕರ ಹಿಮಕಿರ
ಣ ನಾತನಲಾಯ್ತು ಶಶಿವಂಶ ॥೧೬॥ ಸೋಮನಿಂ ಬುಧನಾ ಬುಧಂಗೆಯು । ಭೂಮಿಯಲ್ಲಿ ಪುರೂ
ರವನು ಬಳಿ । ಕಾ ಮಹೀಪತಿಗೂರ್ವಶಿಯೊಳಾಯುಃಕುಮಾರಕನು ॥ ಆ ಮಹೀಶ್ವರಗೆ ನಹುಷ ನಹು
ಷಂ । ಗಾ ಮಹಾತ್ಮ ಯಯಾತಿ ಬಳಿಕೀ । ಸೋಮಕುಲವೆರಡಾಯ್ತು ಯದುಪೂರುಗಳ ದೆಸೆ
ಯಿಂದ ॥೧೭॥ ಯದುಪರಂಪರೆಯಿಂದ ಯಾದವ । ರುದಿಸಿದರು ಪೂರುವಿನದೆಸೆಯಿಂ । ದುದಿಸೆ
ಪೌರವವಂಶವಾಯ್ತು ಯಯಾತಿಪೌತ್ರರಲಿ ॥ ವಿದಿತ ಪೂರ್ವೋತ್ತರದ ಯದುವಂ । ಶದ ಕಥಾ
ವಿಸ್ತಾರವನು ಹೇ । ಳಿದನು ದುಷ್ಯಂತನಲಿ ಶಾಕುಂತಲೆಯ ಕಥೆಸಹಿತ ॥೧೮॥ ಭರತನಾ ದುಷ್ಯಂತ
ನಿಂದವ । ತರಿಸಿದನು ತತ್ಪೂರ್ವ ನೃಪರಿಂ । ಹಿರಿದು ಸಂದನು ಬಳಿಕ ಭಾರತವಂಶವಾಯ್ತಲ್ಲಿ ॥

ಭರತಸೂನು ಸುಹೋತ್ರನಾತನ । ವರಕುಮಾರಕ ಹಸ್ತಿ ಹಸ್ತಿನ । ಪುರಿಗೆ ಹೆಸರಾಯ್ತಾತನಿಂದವೆ
ನೃಪತಿ ಕೇಳೆಂದ ||೧೯|| ವರಕುಮಾರರ ಪಙ್ಕ್ತಿಯಲಿ ಸಂ । ವರಣನಾತಗೆ ಸೂರ್ಯಪುತ್ರಿಗೆ ।
ಕುರುಮಹೀಪತಿ ಜನಿಸಿದನು ಬಳಿಕಾಯ್ತು ಕುರುವಂಶ || ವರಪರಂಪರೆಯೊಳ್ಪ್ರದೀಪನು । ಧರಣಿ
ಪತಿಯಾತನಲಿ ಶಂತನು । ಧರೆಗಧೀಶ್ವರನಾಗಿ ಬೆಳಗಿದನರಸ ಕೇಳೆಂದ ||೨೦|| ಸರಸಿಜಾಸನ ಕೊಟ್ಟ
ಶಾಪದ । ಲರಸಿಯಾದಳು ಗಂಗೆ ಬಳಿ । ಕಿಬ್ಬರಿಗೆ ಮಕ್ಕಳು ವಸುಗಳೆಂಟು ವಸಿಷ್ಠ ಶಾಪದಲಿ || ನಿರ
ಪರಾಧಿಗಳೇಳುಜನನಾಂ । ತರಕೆ ಮರಣವ ಕಂಡರುಳಿದಂ । ಗಿರವು ಭೂಲೋಕದಲಿ ಬಲಿದುದು
ಭೀಷ್ಮನಾಮದಲಿ ||೨೧|| ಶಾಪ ಹಿಂಗಿತು ಸುರನದಿಗೆ ಬಳಿ । ಕಾಪರಾಕ್ರಮಿ ಭೀಷ್ಮ ಶಂತನು । [illegible]
ಪತಿಗೆ ಮಗನಾಗಿ ಬೆಳಗಿದನಖಿಳದಿಕ್ತಟವ || ಭೂಪ ಕೇಳೈ ಯುಪರಿಚರವಸು । ರೂಪ ಗರ್ಭವು [illegible]
ನ ಬಸುರಲಿ । ವ್ಯಾಪಿಸಿತು ಜನಿಸಿದುದು ಮಿಥುನವು ಮತ್ಸ್ಯಜಠರದಲಿ ||೨೨|| ಬಳಿಕ ಮತ್ಸ್ಯದ [illegible]
ರಲುದಿಸಿದ । ನಳಿನಲೋಚನೆ ಮತ್ಸ್ಯಗಂಧಿನಿ । ಬೆಳೆಯುತಿರ್ದಳು ಸಂಗವಾಯ್ತು ಪರಾಶರನ [illegible]
ಬಳಿಕ ಯೋಜನಗಂಧಿ ಯಲ್ಲಿಂ । ದಳಿದನಘ ವ್ಯಾಸಮುನಿಪಂ । ಗಳ ಜಟಾಪರಿಬದ್ಧ ವೇದ [illegible]
ಮುನಿರಾಯ ||೨೩|| ನೆನೆ ವಿಪತ್ತಿನೊಳೆಂದು ತಾಯನು । ತನುಜ ಬೀಳ್ಕೊಂಡನು ಪರಾಶರ
ನಿ ಪುನಃಕನ್ಯಾತ್ವವನು ಕರುಣಿಸಿದನಾಸತಿಗೆ || ವಿನುತಯಮುನಾತೀರದಲಿ ಮಾ । ನಿನಿ[illegible]
ದನು ಬೇಂಟೆಯಾಡುತ । ಜನಪ ಶಂತನು ಮರುಳುಗೊಂಡನು ಮದನನೆಸುಗೆಯಲಿ ||೨೪|| [illegible]
ದ ಬಳಿಹಿಡಿದು ಬಂದೀ । ತರುಣಿಯನು ಕಂಡಾರು ನೀನೆಂ । ದರಸ ಬೆಸಗೊಳುತಿರುವ[illegible]
ತರಕೆ ಪ್ರಿಯವೊಡ್ಡಿಕೆ || ಅರಮನೆಗೆ ನಡೆಯೆನಲು ತಂದೆಯ । ಪರಮವಚನವಪೇಕ್ಷ್ಯವೆನೆ ಕಾ
ತರಿಸಿ ಭಗ್ನಮನೋರಥನು ಮರಳಿದನು ಮಂದಿರಕೆ ||೨೫|| ವಿರಹದಾವಿಗೆ ಗಿಚ್ಚಿ ಭೂಪನಾ । ಶ್ವ
ರನ ಮುಸುಕಿತು ಬರಿದವಸ್ಥೆಯ । ನರಸ ಬಣ್ಣಿಸಲರಿಯೆ ನೇಳೆಂಟೊಂಬತ್ತರ ಬಗೆಯ || ಮರಣ
ಪೀತಂಗೆಂಬ ಜನದು । ಬ್ಬರದ ಗುಜುಗುಜುವಲ್ಲು ಯಮುನಾ । ವರನದಿಯ ತೀರಕ್ಕೆ ಬಂದರು ಭೀಷ್ಮ
ಪಹಿಲವಲಿ ||೨೬|| ಕರೆಸಿದನು ಧೀವರನನಯ್ಯಂ । ಗರಸಿಯಾಗಲಿ ನಿನ್ನ ಮಗಳೆನ । ಲರಸಿಯಾ
ದೊಡೆ ಮಗಳ ಮಕ್ಕಳು ರಾಜ್ಯವಾಳುವರೆ || ಅರಿದು ಸಲಿಸುವೊಡಿನ್ನು ನೀ ಬರಿ । ಯರಸುತನ ನಮಗೇ
ಕೆನಲು ಭೀ । ವರನ ಮಾತಿಂಗೇತನೆಂದನು ರಾಯ ಕೇಳೆಂದ ||೨೭|| ಆದೊಡಿಲ್ಲಿಂ ಮೇಲೆ ನಾರಿಯ ।
ರಾಪವರು ಭಾಗೀರಥಿಗೆ ಸರಿ । ಮೇದಿನಿಯ ಸಲಿಸುವೆನು ನಿನ್ನಯ ಮಗಳ ಮಕ್ಕಳಿಗೆ || ಈ ದಿವಿಜ
ರೀ ಪರಿಪರಿಬ್ರ । ಹ್ಮಾದಿ ದೇವರು ಸಾಕ್ಷಿ ಹೋಗೆಂ । ದಾದಯಾಂಬುಧಿ ನಗುತ ನಿನ್ನಯ ಮಗಳ
ಕರೆಸೆಂದ ||೨೮|| ✓ತರಿಸಿದನು ಪಂಡಿಗೆಯ ಪಡ್ಡಿಯ । ಚರರ ನೇಲಸುಗ್ಗಡಣೆಯಲಿ ಸರ । ಸಿರುಹ
ಮುಖಿಯನು ತಂದು ಮದುವೆಯ ಮಾಡಿದನು ಪಿತಗೆ || ಉರವಣಿಸಿ ಮಗ ನುಡಿದಭಾಷೆಯ । ನರಸ
ಕೇಳಿದು ಬಳಿಕ ಭೀಷ್ಮಗೆ । ವರವನಿತ್ತನು ಮರಣವದು ನಿನ್ನಿಚ್ಛೆ ಹೋಗೆಂದ ||೨೯|| ಬಳಿಕ ಯೋಜ
ನಗಂಧಿಯಲಿ ಮ । ಕ್ಕಳುಗಳವತರಿಸಿದರು ದೀಪ್ತ । ಜ್ವಲನತೇಜರು ಕಲ್ಪಭೂಜರು ಹಿಮಕರಾ
ನ್ವಯಕೆ || ಲಲಿತಮಂಗಳಜಾತಕರ್ಮಾ । ವಳಿಯ ಚಿತ್ರಾಂಗದನನಾನೃಪ । ತಿಲಕ ನೆಗಳೆ ವಿಚಿ
ತ್ರವೀರ್ಯನ ನಾಮಕರಣದಲಿ ||೩೦|| ಇರಲಿರಲು ಶಂತನುಮಹೀಪತಿ । ಸುರರೊಳಗೆ ಸೇರಿದನು

ಬಳಿಕೀ । ಧರಣಿಯೊಡೆತನವಾಯ್ತು ಚಿತ್ರಾಂಗದ ಕುಮಾರಂಗೆ ॥ ಅರಸ ಕೇಳ್ಕೆ ಕೆಲವುಕಾಲಾಂ । ತರದಲಾತನು ಕಾದಿ ಗಂಧ । ರ್ವರಲಿ ಮಡಿದನು ಪಟ್ಟವಾಯ್ತು ವಿಚಿತ್ರವೀರ್ಯಂಗೆ ॥೩೧॥ ರಾಯ ಕೇಳ್ಕೆ ಸಕಲ ರಾಜ್ಯ । ಶ್ರೀಯ ನಾತಂಗಿತ್ತು ಭೀಷ್ಮನು । ತಾಯಚಿತ್ತವಪಡೆದು ಮೆಚ್ಚಿಸಿದನು ಜಗತ್ರಯವ ॥ ರಾಯಗುವರನಮದುವೆಗಬ್ಬದ । ಛಾಯ ತಾಕ್ಷಿಯರನು ವಿಚಾರಿಸಿ । ಹಾಯಿದನು ದಳದುಳದೊಳೊಂದುವಿವಾಹಮಂಟಪಕೆ ॥೩೨॥ ಅಲ್ಲಿ ನೆರೆದಾಕ್ಷತ್ರವರ್ಗವ । ಚೆಲ್ಲಬಡಿದು ವಿವಾಹಶಾಲೆಯ । ಚೆಲ್ಲೆಗಂಗಳ ಕಮಲಮುಖಿಯರ ಮೂವರನು ಪಿಡಿದು ॥ ಘಲ್ಲಣೆಯ ಖಂಡೆಯದ ಚೌಪಟ । ಮಲ್ಲ ಭೀಷ್ಮನು ಪುರಕೆ ತಂದವ । ರೆಲ್ಲರನು ತಮ್ಮಂಗೆ ಮದುವೆಯಮಾಡಲನುವಾದ ॥೩೩॥ ಆಕಮಲಲೋಚನೆಯರೊಳು ಮೊದ । ಲಾಕೆ ಭೀಷ್ಮನ ಗಂಡನೆಂದೇ । ನೂಕಿ ಭಾಷೆಯಮಾಡಿ ನಿಂದಳು ಛಲದ ಬಿಗುಹಿನಲಿ ॥ ಆಕೆ ಮಾಣಲಿ ಮಿಕ್ಕವರು ಬರ । ಲೀಕುಮಾರಂಗೆಂದು ವೈದಿಕ । ಲೌಕಿಕೋತ್ಸವದಿಂದ ಮದುವೆಯ ಮಾಡಿದನು ಭೀಷ್ಮ ॥೩೪॥ ಅರಸ ಚಿತ್ತೈಸಂಬೆಯೆಂಬಳು । ದುರುಳೆ ಭೀಷ್ಮನ ಕೂಟವಲ್ಲದೆ । ಮರಣದೆಡೆಯಲಿ ಬೆರಸಿದಲ್ಲದೆ ಪಂತವಿಲ್ಲೆಂದು ॥ ಪರಶುರಾಮನ ಭಜಿಸಿ ಹಸ್ತಿನ । ಪುರಕೆ ತಂದಳು ಹೇಳಿಸಿದಳೀ । ಸುರನದೀನಂದನನು ಮಾಡಿದಪರಿಯ ಕೇಳೆಂದ ॥೩೫॥ ಸತಿಯನೊಲ್ಲನು ಬೊಮ್ಮಚರಿಯ । ಸ್ಥಿತಿಗೆ ತಪ್ಪುವನಲ್ಲ ನೀವನು । ಚಿತವ ನೆನೆದರೆ ನಡೆಯಿಕೊಟ್ಟೆನು ಕಳನ ಕಾಳೆಗವ ॥ ವ್ರತದನಿಧಿ ಕುರುಭೂಮಿಯಲಿ ಶರ । ತತಿಯಲಿಪ್ಪತ್ತೊಂದು ದಿನ ಭೃಗು । ಸುತನೊಡನೆ ಕಾದಿದನು ವಿರಥನ ಮಾಡಿದನು ಭೀಷ್ಮ ॥೩೬॥ ನುಡಿಯ ಭಂಗಿಸಲೆಂದು ಗುರುವವ । ಗಡಿಸಿಹೊಕ್ಕೊಡೆ ಸರಳಮೊನೆಯಲಿ । ಕೊಡಹಿ ಬಿಸುಟನು ಬಿಟ್ಟುದಿಲ್ಲ ಮಹಾವ್ರತಸ್ಥಿತಿಯ ॥ ನುಡಿಯ ವಿಾರದನಮ್ಮ ಶಿಷ್ಯನ । ನೊಡಬಡಿಸಿಕೊಳ್ಳೆಂದು ನಾಗೆ । ನುಡಿದು ತನ್ನಾಶ್ರಮಕೆ ಸರಿದನು ಪರಶುರಾಮಮುನಿ ॥೩೭॥ ಅಂಬೆ ಭೀಷ್ಮನ ಬೈದು ಕಂಬನಿ । ದುಂಬಿ ಹೋದಳು ಪುರಕೆ ಬಳಿಕೀ । ಯಂಬಿಕೆಯ ನಂಬಾಲೆಯನು ರಮಿಸಿದನು ನೃಪಸೂನು ॥ ಬೆಂಬಲಕೆ ಕಲಿಭೀಷ್ಮನಿರೆ ಚತು । ರಂಬುಧಿಯ ಮಧ್ಯದ ನೃಪಾಲ । ಕದಂಬವೀತಂಗಿದಿರೆ ಸಲಹಿದನಖಿಳಭೂತಳವ ॥೩೮॥ ... ... ...

ಅಂತು ಸಂಧಿ ೨ಕ್ಕೆ ಪದ್ಯ ೫೮ಕಂ ಮಂಗಳಮಸ್ತು.

## ಮೂರನೆಯ ಸಂಧಿ.

ಸೂಚನೆ: ಚಂಡಮುನಿಮಂತ್ರಾಹ್ವಯದಿ ಬರೆ । ಚಂಡಕರ ತತ್ತೇಜನಾಹವ । ಚಂಡವಿಕ್ರಮನವನಿಯಲಿ ಜನಿಸಿದನು ಕಲಿಕರ್ಣ ॥

ಅರಸ ಕೇಳ್ಕೆ ಕೆಲವುಕಾಲಾಂ । ತರಕೆ ನಿಮ್ಮ ವಿಚಿತ್ರವೀರ್ಯನು । ನೆರೆದನಮರಸ್ತ್ರೀಯರಲಿ ಬಳಿಕೀನದೀಸುತನ ॥ ಕರೆದು ನುಡಿದಳು ಮಗನೆ ರಾಜ್ಯವ । ಧರಿಸು ನೀನಿನ್ನುತ್ತರದ ಹಿಮ । ಕರಕುಲವ

ಬೆಳಗೆಂದು ಯೋಜನಗಂಧಿ ಬೆಸಸಿದಳು ||೧|| ತಾಯೆ ನಿಂಪೋಪಾಟಿರಾಜ್ಯ | ಸ್ತ್ರೀಯರೆಂದಾನುಡಿಯೊಳಗೆ ಗಾಂ | ಗೇಯ ಮುಳುಗನೆ ಭೀಷ್ಮವಚನಕೆ ಬೇರೆ ಪೊಳೆಯುಂಟೆ || ಕಾಯದಲ್ಪಸುಖಕ್ಕೆ ಘನನಿ | ಶ್ರೇಯಸವ ಕೆಡಿಸುವೆನೆಯಲವದ | ಕಾಯಿಗೋಸುಗ ಕಲ್ಪವೃಕ್ಷವ ಕಡಿವನಲ್ಲೆಂದ ||೨|| ಮರುಗಿ ಯೋಜನಗಂಧಿ ಚಿಂತೆಯ | ಸೆರೆಗೆ ಸಿಲುಕಿದಳೊಂದುರಾತ್ರಿಯೊ | ಳರಿದು ನೆನೆದಳು ಪೂರ್ವಸೂಚಿತಪುತ್ರಭಾಷಿತವ || ಮುರಿದಭರತಾನ್ವಯದ ಬೆಸುಗೆಯ | ತೆರನು ತೋರಿತೆ ಪುಣ್ಯವೆನುತೆ | ಚ್ಚರಿತು ನುಡಿದಳು ಮಗನೆ ವೇದವ್ಯಾಸ ಬಹುದೆಂದು ||೩|| ಕೆಂಜಡೆಯ ಕೃಷ್ಣಾಜಿನದ ಮೊನೆ | ಮುಂಜೆರಗನುಡಿಗೆಯ ಬಲಾಹಕ | ಪುಂಜಕಾಂತಿಯ ಪಿಂಗತರಮುಖಕೇಶದುನ್ನತಿಯ || ಕಂಜಾಸಾಭನಮೂರ್ತಿಶೋಭಾ | ರಂಜಿತನು ಜನದುರಿತದಶಮುದ | ಭಂಜಕನು ತಾಯ್ಗೆರಗಿ ನುಡಿದನು ವ್ಯಾಸಮುನಿರಾಯ ||೪|| ನೆನೆದಿರೇನೌ ತಾಯೆ ಕೃತ್ಯವ | ನೆನಗೆ ಬೆಸಸೆನೆ ಮಗನೆ ಭಾರತ | ವಿನುತಕುಲಜಲರಾಶಿಯೆಡೆವರೆತುದು ವಿಚಿತ್ರದಲಿ || ತನುಜ ನೀನೆ ಬಲ್ಲೆ ಯೆನೆಕೇಳ್ | ಜನನಿ ನಿಮ್ಮಡಿಯಾಜ್ಞೆಯಲಿ ಸಂ | ಜನಿಪುವೆನು ವೈಚಿತ್ರವೀರ್ಯಕ್ಷೇತ್ರದಲಿ ಸುತರ ||೫|| ಎಂದು ಬಳಿಕೇಕಾಂತಭವನದೊ | ಳೆಂದು ಮುನಿಯಿರಲಂಬಿಕೆಯನರ | ವಿಂದಮುಖಿಯಟ್ಟಿದಳು ಸೊಸೆಯೆನು ಮುನಿಯ ಪೊರೆಗಾಗಿ || ಬಂದು ಮುನಿಪನ ದಿವ್ಯರೂಪವ| ನಿಂದುಮುಖಿ ಕಂಡಕ್ಷಿಗಳಭಯ | ದಿಂದ ಮುಚ್ಚಿದಳಾಕೆ ತಿರುಗಿದಳರಸ ಕೇಳೆಂದ|| ಬಳಿಕಲಂಬಾಲಿಕೆಯನಲ್ಲಿಗೆ | ಕಳುಹಲಾಕೆಗೆ ಭಯದಿ ಮುಖದಲಿ | ಬಿಳುಪು ಮಸಗಿತು ಮುನಿಯ ರೌದ್ರಾಕಾರದರ್ಶನದಿ || ಲಲನೆ ಮರಳಿದ ಳೊಬ್ಬಸತಿಯನು | ಕಳುಹಲಾವಧು ಚಪಲದೃಷ್ಟಿಯೊ | ಳಳುಕದೀಕ್ಷಿಸಲಾಯ್ತು ಗರ್ಭಾಧಾನವನಿಬರಿಗೆ ||೭|| ಬಂದು ಮುನಿಪತಿ ತಾಯ್ಗೆರಗಿ | ದೆಂದನಂಬಿಕೆಯಲ್ಲಿ ಜನಿಸುವ | ನಂದನನು ಜಾತ್ಯಂಧನಂಬಾಲಿಕೆಗೆ ಪಾಂಡುಮಗು || ಬಂದಬಳಿಕಿನ ಚಪಲೆಗತಿಬಲ | ನೆಂದು ಹೇಳಿದು ತನಗೆ ನೇಮವೆ | ಎಂದುತನ್ನಾಶ್ರಮಕೆ ಸರಿದನು ಬಾದರಾಯಣನು ||೮|| ತುಂಬಿದುದು ನವಮಾಸ ಜನಿಸಿದ | ನಂಬಿಕೆಯ ಬಸಿರಿನಲಿಸೂನು ಗ | ತಾಂಬಕನು ಮಗನಾದನಂಬಾಲಿಕೆಗೆ ಪಾಂಡುಮಯ || ಚುಂಬಿಸಿತು ಪರಿತೋಷ ನೆರೆಪುಳ | ಕಾಂಬುಗಳು ಜನಜನಿತವದನೇ | ನೆಂಬೆನುತ್ಸವವನು ಕುಮಾರೋದ್ಭವದ ವಿಭವದಲಿ ||೯|| ಜಾತಕರ್ಮಾದಿಯನು ಪಾರ್ಥಿವ | ಜಾತಿವಿಧಿವಿಹಿತದಲಿ ಗಂಗಾ | ಜಾತ ಮಾಡಿಸಿ ತುಷ್ಟಿವಡಿಸಿದನಖಿಳಯಾಚಕರ || ಈತನೇ ಧೃತರಾಷ್ಟ್ರನೆರಡನೆ | ಯಾತ ಪಾಂಡು ವಿಲಾಸಿನೀಸಂ | ಭೂತನೀತನು ವಿದುರನೆಂದಾಯ್ತುವರಗಭಿಧಾನ ||೧೦|| ಬಳೆಯುತಿರ್ದರ್ರು ಹರಿಣಪಕ್ಷದ | ನಳಿನರಿಪುವಿನವೋಲ್ಕುಮಾರರು | ಕುಲವಿಹಿತಚೌಲೋಪನಯನವನಿಬ್ಬರಿಗೆ ರಚಿಸಿ || ಕಲಿತವಿದ್ಯರ ಮಾಡಿ ತಾಯು | ಮ್ಮಳಿಸದಂತಿರೆ ಸೋಮವಂಶದ | ಬೆಳವಿಗೆಯನೇ ಮಾಡಿ ಕೊಂಡಾಡಿದನು ಕಲಿಭೀಷ್ಮ ||೧೧|| ಧಾರಿಣೀಪತಿ ಚಿತ್ತವಿಸು ಗಾಂ | ಧಾರದೇಶದ ಸುಬಲರಾಜಕು | ಮಾರಿ ಕುಲವಧುವಾದಳಾಧೃತರಾಷ್ಟ್ರಭೂಪತಿಗೆ || ನಾರಿಯರೊಳುತ್ತಮೆಯಲಾ ಗಾಂ | ಧಾರಿಯೆನಿಸಿ ಪತಿವ್ರತಾವಿ | ಸ್ತಾರಗುಣದಲಿ ಮೆರೆದಳಬಲೆ ಸಮಸ್ತಜನ ಹೊಗಳೆ ||೧೨|| ಇತ್ತ ಕುಂತೀಭೋಜನೆಂಬನೃ | ಪೋತ್ತಮನ ಭವನದಲಿ ಮುರಹರ | ನತ್ತೆ ಬೆಳೆಯುತ್ತಿರ್ದಳಾವಸುದೇವನೃಪನನುಜೆ || ಹೆತ್ತವರಿಗೋಲೈಸುವರಿಗೆ ಮ | ಹೋತ್ತಮರಿಗುಳಿದಖಿಳಲೋಕದ | ಚಿತ್ತಕಹುದೆನೆ ನಡೆವ ಗುಣದಲಿ ಮೆರೆದ

ಳಾಕುಂತಿ ॥೧೩॥ ಬಂದುದಿನ ದೂರ್ವಾಸಮುನಿ ನೃಪ । ಮಂದಿರಕೆ ಬರಲಾಮಹೀಪತಿ । ಬಂದಬರವಿನ ಲವರ ಮರೆದನು ರಾಜಕಾರ್ಯದಲಿ ॥ ಇಂದು ಕುಂತೀಭೋಜನೊಡೆತನ । ಬೆಂದುಹೋಗಲಿಯೆಂಬಶಾಪವ । ನಿಂದುಮುಖಿ ನಿಲಿಸಿದಳು ಹೊರಳಿದಳವರಚರಣದಲಿ ॥೧೪॥ ತರುಣಿಯೊಡಗೊಂಡೊಯ್ದು ಕನ್ಯಾ । ಪರಮಭವನದಲಾಮುನಿಯನುಪ । ಚರಿಸಿದಳು ವಿವಿಧಾನ್ನಗಾನರಸಾಯನಂಗಳಲಿ ॥ ಪರಮಹಾದೇವೀಮಗುವಿನಾ । ದರಣೆಗೇವಿನಯೋಪಚಾರಕೆ । ಹಿರಿದು ಮೆಚ್ಚಿದೆನೆಂದು ತಲೆದೂಗಿದನು ದೂರ್ವಾಸ ॥೧೫॥ ಮಗಳೆ ಬಾ ಕೊಳ್ಳೈದುಮಂತ್ರಾ । ಳಿಗಳನಿವು ಸಿದ್ಧಪ್ರಯೋಗವು । ಸೊಗಸು ದಿವಿಜರೊಳಾರ ಮೇಲುಂಟವರ ನೆನೆ ಸಾಕು ॥ ಮಗನು ಜನಿಸುವನೆಂದು ಮುನಿ ಕುಂ । ತಿಗೆ ರಹಸ್ಯದೊಳರುಹಿ ಮುನಿವರೌ । ಳಿಗಳಮಣಿ ಪರಿತೋಷದಲಿ ಸಂದನು ನಿಜಾಶ್ರಮಕೆ ॥೧೬॥ ಮಗುವುತನದಲಿ ಬೊಂಬೆಯಾಟಕೆ । ಮಗುವನೇತಹೆನೆಂದು ಬಂದಳು । ಗಗನನದಿಯಲಿ ಮಿಂದಳುಟ್ಟಳು ಲೋಹಿತಾಂಬರವ ॥ ವಿಗಡಮುನಿಪನ ಮಂತ್ರವನು ಸಾ । ಲಗೆಗೆ ತಂದಳು ರಾಗರಸದಲಿ । ಗಗನಮಣಿಯನು ನೋಡಿ ಕಣ್ಮುಚ್ಚಿದಳು ಯೋಗದಲಿ ॥೧೭॥ ಅರಸ ಕೇಳ್ಕನಿಮಿತ್ತಮಂತ್ರಾ । ಕ್ಷರದ ಕರೆಹಕೆ ತಳುವಿದೊಡೆ ದಿನ । ಕರನ ತೇಜವಕೊಂಬನೇ ದೂರ್ವಾಸ ವಿಗಡನಲಾ ॥ ಧರೆಗೆ ಬಂದನು ಸೂರ್ಯ ಸಾತನ । ಕಿರಣಲಹರಿಯ ಹೊಯ್ಲಿನಲಿ ಸರ । ಸಿರುಹಮುಖಿ ಬೆಚ್ಚಿದಳುಬಿಜಯಂಗೆಯ್ಯ ನೀವೆನುತ ॥೧೮॥ ಎನ್ನ ಬಾರದಲೇ ಋಷಿಪ್ರತಿ । ಪನ್ನ ಮಂತ್ರವಮೋಘವದರಿಂ । ದೆನ್ನ ತೂಕವ ಮಗನೆಹನು ನೀನಂಜಬೇಡೆನುತ ॥ ಕನ್ನಿಕೆಯ ಮುಟ್ಟಿದನು ಮುನ್ನಿನ । ಕನ್ನೆತನಕೆಡದಿರಲಿ ಯೆನುತವ । ತನ್ನ ರಥವಿದ್ದೆಡೆಗೆ ರವಿ ತಿರುಗಿದನು ವಹಿಲದಲಿ ॥೧೯॥ ಅರಸ ಕೇಳಾಶ್ಚರ್ಯವನು ತಾ । ವರೆಯ ಮಿತ್ರನ ಕರಗ ಕ್ರುಪಿನೊ । ಳಿರವರೆಂದೆನೆ ಥಳಥಳಿಸಿ ತೊಳಗುವ ತನುಚ್ಛವಿಯ ॥ ಕುರುಳುದಲೆನಿಟ್ಟೆಸಳುಗಂಗಳ । ಚರಣಕರಪಲ್ಲವದ ಕೆಂಪಿನ । ವರಕುಮಾರನ ಕಂಡು ಬೆರಗಿನೊಳಿರ್ದಳಾಕುಂತಿ ॥೨೦॥ ಅಳುವ ಶಿಶುವನು ತೆಗೆದು ತೆಕ್ಕೆಯ । ಪುಳಕಜಲದಲಿ ನಾಂದಿ ಹರುಷದ । ಬಳಿಯ ಲಜ್ಜೆಯ ಭಯದ ಹೋರಟೆಗಳುಕಿ ಹಳುವಾಗಿ ॥ ಕುಲವನಿಂತಪ್ಪುವುದಲಾ ಸಾ । ಕಿಳುಹಬೇಕೆಂದೆನುತ ಗಂಗಾ । ಜಲದೊಳಗೆ ಹಾಯ್ಕಿವಳು ಜನಪವಾದ ಭೀತಿಯಲಿ ॥ ತಾಯೆ ಬಲ್ಲಿಂದದಲಿ ಕಂದನ । ಕಾಯಿಮೇಣ್ಕೊಲ್ಲೆನುತ ಕಮಲದ । ಳಾಯತಾಕ್ಷಿ ಕುಮಾರಕನ ಹಾಯ್ಕಿದಳುಮಡುವಿನಲಿ ॥ ರಾಯ ಕೇಳೈ ಸಕಲಲೋಕದ । ತಾಯಲಾ ಜಾಹ್ನವಿ ತರಂಗದಿ । ನೋಯಲೀಯದೆ ಮುಳುಗಲೀಯದೆ ಚಾಚಿದಳು ತಡಿಗೆ ॥೨೧॥ ಕೆದರು ಕಾಲಲಿ ಮಳಲ ರಾಶಿಯ । ನೊದೆದು ಕೈಗಳ ಕೊಡಹಿ ಭೋಯೆಂ । ದೊದರುತಿರ್ದನು ಶಿಶುಗಳರಸನು ರವಿಯನೀಕ್ಷಿಸುತ ॥ ಇದನು ಕಂಡನು ಸೂತನೊಬ್ಬನು । ಮುದದ ಮದದಲಿ ತನ್ನ ಮರೆದು । ಬ್ಬಿದನಿದೆತ್ತಣನಿಧಿಯೊ ಶಿವಶಿವಯೆಂದುನಡೆತಂದ ॥೨೨॥ ತರಣಿಬಿಂಬದ ಮರಿಯೊ ಕೌಸ್ತುಭ । ವರಮಣಿಯ ಖಂಡದ ಕಣಿಯೊ ಮ । ರ್ತ್ಯರಿಗೆ ಮಗನಿವನಲ್ಲ ಮಾಯಾಬಾಲಕನೊ ಮೇಣು ॥ ಇರಿಸಿ ಹೋದವಳಾವಳೋ ಶಿಶು । ವರನ ತಾಯ್ಮೈಮೋರೆಹೆಯ್ದೆ ಹರ । ಹರಮಹಾದೇವೆನುತ ತೆಗೆದಪ್ಪಿದನು ಬಾಲಕನ ॥೨೩॥ ತೃಣವಲಾ ತ್ರೈಲೋಕ್ಯ ರಾಜ್ಯವ ॥ ಗಣಿಸುವೆನೆ ತಾನಿನ್ನು ತನ್ನಲಿ । ಋಣವಿಶೇಷವಿದೇನೊ ಮೇಣೀಬಾಲಕಂಗೆನುತ ॥ ಕ್ಷಣದೊಳೊದಗುವಬಾಷ್ಪಲುಳಿತೇ । ಕ್ಷಣನು ಬಂದನು ತಮಗೆ ಹರುಷದ । ಕಣಿಯತಂ

ದೆನು ರಮಣಿ ಕೊಳ್ಳೆಂದಿತ್ತನರ್ಘಕನ ॥೨೫॥ ಆದರಿಸಿದನು ರಾಧೆಯಲಿ ಮಗ । ನಾದ ನೆಂದುತ್ಸವವ ಮಾಡಿ ಮ । ಹೀದಿವಿಜರನು ದಾನಮಾನಂಗಳಲಿಸತ್ಕರಿಸಿ ॥ ಆದಿನಂಮೊದಲಾಗಿಯುದ್ಭವ । ವಾದುದ ವನೈಶ್ವರ್ಯವುನ್ನತ । ನಾದನಾಧಿವಿನಂದನನು ರಾಧೇಯನಾಮದಲಿ ॥೨೬॥ ಹೊಳೆಹೊಳೆದು ಹೊಡೆ ಮರಳಿ ನಡುಹೊ । ಸ್ತಿಲಲಿ ಮಂಡಿಸಿ ಬೀದಿಬೀದಿಗ । ಳೊಳಗೆ ಸುಳಿವರ ಸನ್ನೆಯಲಿಕರೆಕರೆದುನಸುನ ಗುತ ॥ ಲಲಿತರತ್ನದ ಬಾಲದೊಡಿಗೆಯು । ಕಳಚಿಹಾಯ್ಕುವ ಹೆಸರು ಜಗದಲಿ । ಬೆಳೆಯುತಿರ್ದುದು ಹಬ್ಬಿದುದುಜನಜನದಕರ್ಣದಲಿ ॥ ಅರಸ ಕೇಳ್ಕೆ ಕರ್ಣಪಾರಂ । ಪರಿಯೊಳೀತನ ಹೆಸರು ಜಗದಲಿ । ಹರೆದುದಲ್ಲಿಂಬಳಿಕಲೀತನ ನಾಮಕರಣದಲಿ ॥ ಸುರನರೋರಗನಿಕರವೇ ವಿ। ಸ್ತರಿಸಿದುದು ಕರ್ಣಾಭಿಧಾನವ । ನುರುಪರಾಕ್ರಮಿ ಬಳೆಯುತಿರ್ದನು ಸೂತಭವನದಲಿ ॥೨೮॥

**ಅಂತು ಸಂಧಿ ೩ಕ್ಕೆ ಪದ ೮೦ಕ್ಕಂ ಮಂಗಳಮಸ್ತು.**

---

# ನಾಲ್ಕನೆಯ ಸಂಧಿ.

ಸೂಚನೆ॥ ಭರತವಂಶದೊಳೈದುಮಿಗೆನೂ । ರ್ವರುಕುಮಾರರು ಪಾಂಡುಧೃತರಾ ।
ಷ್ಟ್ರರಿಗೆ ಜನಿಸಿದರಮಲಮುನಿಮಂತ್ರೋಪದೇಶದಲಿ ॥

---

ಕೇಳು ಜನಮೇಜಯಧರಿತ್ರೀ । ಪಾಲ ಕುಂತೀಭೋಜಭೂಪತಿ । ಯಾಲಯದೊಳೀಕುಂತಿ ಮೆರೆವಳು ವಿವಿಧವಿಭವದಲಿ ॥ ಕೇಳಿದನು ಗಾಂಗೇಯನಾನೀ । ಲಾಳಕೆಯ ಕುಲರೂಪಲಕ್ಷಣ । ಶೀಲವನು ಪಾಂಡುವಿಗೆ ಪಾಸಟಿಯೆಂದು ರಾಗದಲಿ ॥೧॥ ಕರೆಸಿ ಕುಂತೀಭೋಜನನು ಸ । ತ್ಕರಿಸಿ ಕುಂತಿಯ ಪಾಂಡುವಿಗೆ ಭೂ । ಸುರರ ಮತದಿಂದಗ್ನಿಸಾಕ್ಷಿಕವೆರೆವಿವಾಹವನು ॥ ಪರಮವಿಭವದಲೆಸಗಿ ಮದ್ರೇ । ಶ್ವರನನುಜೆವಾದ್ರಿಯನು ಪಾಂಡುವಿ । ಗರಸಿಯನು ಮಾಡಿದನು ವೈವಾಹಿಕಮುಹೂರ್ತದಲಿ ॥೨॥ ವರವಿವಾಹಮುಹೂರ್ತಸಮನಂ । ತರಸುಲಗ್ನದೊಳಖಿಳರಾಜ್ಯದ । ಧುರದಸಿಂಹಾಸನಕಮಹಾಪಟ್ಟಾಭಿಷೇಚನವ ॥ ಸುರನದೀಸುತಪಾಂಡುವಿಗೆ ವಿ। ಸ್ತರಿಸಿದನು ಧೃತರಾಷ್ಟ್ರವಿದುರರ । ಪರಮಪರಿತೋಷಾನುಮತದಲಿ ಮೆರೆದುದಾವಿಭವ ॥೩॥ ಸೋಮಕುಲದವರಲಿ ಭವತ್ಪ್ರಪಿ । ತಾಮಹನವೋಲ್ಧರ್ಮದಲಿ ಸಂ । ಗ್ರಾಮದಲಿ ಸತ್ಯದಲಿ ಸಾಹಿತ್ಯದಲಿ ವಿನಯದಲಿ ॥ ನಾಮದಲಿ ಶೌರ್ಯದಲಿ ಸುಜನ । ಪ್ರೇಮದಲಿ ನೀತಿಯಲಿ ದೃಢದಲಿ । ಭೂಮಿಯಲಿ ನಾ ಕಾಣೆನವನೀಪಾಲಕೇಳೆಂದ ॥೪॥ ಪಸರಿಸಿದ ಪರಿಧೌತಕೀರ್ತಿ । ಪ್ರಸರದಲಿ ಬಿಳುಪಾಯ್ತು ಜಗ ನಿಪ್ಪಸರದಲಿ ಜಳುಪಿಸುವ ಖಂಡೆಯಸಿರಿಗೆ ನೊಂಪಿನಲಿ ॥ ಮಸಗಿತಗ್ಗದಕೆಂಪು ಪರಬಲ । ವಿಸರದಳನಕ್ರೋಧಮಯತಾಮ । ಸದಿ ನಸಿತಾಭಾಸಮಾದುದು ಭುವನವಿಸ್ತಾರ ॥೫॥ ಓಲಗಿಸುವುದು ಮಿತ್ರರಾಯರ । ಮೌಳಿಮಣಿ ಪಾಂಡುವಿನ ಚರಣನ ।

ಖಾಳಿಯನು ಸೆಣಸುವ ಮಹೇಶ್ವರ ಮೌಳಿಮಣಿಕಿರಣ ॥ ಓಲಗಿಸಿತಾ ಪ್ರಣಯದಮರೀ । ಬಾಲೆಯರ ಪದನಖವನದನೇ । ಪೇಳುವೆನು ಪಾಂಡುನಿನ ಖಂಡೆಯಸಿರಿಯ ಸಡಗರವ ॥೬॥ ಓಲಗಿಸಿಕೊಂಬಾತ ನಂಧನೃ । ಪಾಲನುಳಿದಂತಖಿಳಧರಣೀಪಾಲಕತ್ವವೆ ಪಾಂಡುಭೂಪತಿಗೀಕುಮಾರಕರ ॥ ಲಾಲಿಸುವ ಕುಲನೀತಿವಿಧದಲಿ । ಪಾಲಿಸುವ ಭರ ಭೀಷ್ಮನದು ಸಂ । ಭಾಳಿಸಿತು ನಳನಹುಷಚರಿತವನಿವರಪರಿಪಾಟಿ ॥೭॥ ನೃಪಪರಂಪನೆಯಿಂದಬಂದೀ । ವಿಪುಳವಂಶಸ್ಥಿತಿವಿಸರ್ಗವ । ನಪಹರಿಸಿದನು ಹಿಂದೆ ವೇದವ್ಯಾಸಮುನಿ ಬಂದು ॥ ಕೃಪಯ ಮಾಡನೆ ತನ್ನ ಸಂತತಿ । ಕೃಪಣವಾಯ್ತೆಂದನವರತ ಕುರು । ನೃಪತಿ ಚಿಂತಾಭಾರದಲಿ ಬಳಲುವನು ಧೃತರಾಷ್ಟ್ರ ॥೮॥ ಅರಸ ಚಿತ್ತೈಸೊಂದುದಿನ ಮುನಿ । ವರನು ಬಿಜಯಂಗೈದು ಹಸ್ತಿನ । ಪುರವ ಹೊಕ್ಕನು ರಾಜಭವನಕೆ ಬಂದು ಹರ್ಷದಲಿ ॥ ಸ್ಮರನಸ್ಥಿತಿಸುಜಾದಿಗಳ ಸ । ತ್ಕರಣೆಯನು ಕೈಕೊಂಡು ಮಕ್ಕಳ । ಮುಂದವಿಭವಕೆ ಪ್ರಿಯಸಾಂತು ಮುನೀಂದ್ರನಿಂತೆಂದ ॥೯॥ ಭರತಕುಲದಲಿ ಮಕ್ಕಳಿಲ್ಲದ । ಕೊರತೆ ಕೋಮಲಸೌಖ್ಯಲತೆಗದು । ಕರಗಸವಲಾ ತಂದೆ ಬಾ ಧೃತರಾಷ್ಟ್ರ ಬಾರೆನುತ ॥ ಕರೆದು ಕಟ್ಟೇಕಾಂತದಲಿ ನಿನ್ನರಸಿಗನುಪಮಪುತ್ರಶತವವ । ತರಿಸುವುದು ಕೊಳ್ಳೆಂದು ಕೊಟ್ಟನು ಮಂತ್ರಪಿಂಡಕವ ॥೧೦॥ ಧರಿಸಿದಳು ಗಾಂಧಾರಿ ಗರ್ಭೋೀ । ತ್ಕರವನಿತ್ತು ನಿಜಾಶ್ರಮಕೆ ಮುನಿ । ತಿರುಗಿದನು ದಿನದಿನದೊಳುಬ್ಬಿತು ರಾಯನಭ್ಯುದಯ ॥ ಅರಸ ಕೇಳ್ಕೆ ಬೇಂಟೆಗಾರರು । ಕರೆಯಬಂದರು ಮೃಗನಿಕಾಯದ । ನೆರವಿಗಳ ನೆಲೆಗೊಳಿಸಿ ಪಾಂಡುನೃಪಾಲನೋಲಗಕೆ ॥೧೧॥ ಕೇಳಿದನು ಮೃಗದಿಕ್ಕಹಕ್ಕೆಯ । ದಾಳಿಯನು ಕೊಂಬುಗಳಸಾಗಳೆ । ಬೀಳುಕೊಟ್ಟನು ರಾಜಸಭೆಯನು ರಾಯನುಚಿತದಲಿ ॥ ಬೋಳೆಕವಲಂಬುಗಳ ಹದವಿಲು । ತಾಳಿಕೆಯ ಕುಪ್ಪಸದ ಬೇಂಟೆಯ । ಮೇಳದಲಿ ಭೂಪಾಲ ಹೊರವಂಟನು ನಿಜಾಲಯವ ॥೧೨॥ ಏನನೆಂಬೆನು ನಿಮ್ಮನಪಿತಾ । ಚೋನೃಪಾಲಕಯೆಂಬವ್ಯೋಲ್ವ್ಯಾಸ । ಸಾನುಬಂಧದ ಬೇಗೆ ಕೊಂಡೊಯ್ದುದು ಮಹೀಪತಿಯ ॥ ಕಾನನದೊಳಾಯತದ ಶರಸಂ । ಧಾನಕಲಿತಶರಾಸನನು ಮೃಗ । ಹಾನಿಗಳ ಹೆಕ್ಕಳದೊಳೋಲಾಡಿದನು ಬೇಂಟೆಯಲಿ ॥೧೩॥ ಬಂದುದಾಪಾಂಡುವಿಗೆ ನಿನ್ನಯ । ತಂದೆಗಾದ ವಿಪತ್ತಿನಂದದ । ಲೊಂದುತಾವಿನಲೊಬ್ಬಮುನಿಮೃಗಮಿಥುನರೂಪಿನಲಿ ॥ ನಿಂದು ರಮಿಸುತ್ತಿರೆ ಮೃಗವ್ಯಾಯ । ಪೆಂದುಹೂಡಿದ ನಂಬನಿಬ್ಬರಿ । ಗೊಂದುಶರದಲಿ ಕೀಲಿಸಿದೊಡೊರಲಿದರು ನರರಾಗಿ ॥೧೪॥ ಹಾಮಹಾದೇವಾಯೆನುತ್ತ ಸುನಾಮಮುನಿ ತೆತ್ತಿಸಿದ ಬೆನ್ನಿನ । ತೋಮರದ ಮರುಮೊನೆಯ ಕಿಬ್ಬಸುರಿನ ನಿಜಾಂಗನೆಯ॥ ಕಾಮಿನಿಯ ಕಡುನೊಂದೆಲಾ ಮುಖ । ತಾಮರಸವನು ತೋರುತೋರೆನು । ತಾಮುನೀಶ್ವರನಪ್ಪಿ ಮುಂಡಾಡಿದನುನಿಜಸತಿಯ ॥೧೫॥ ಕಾತರಿಪಮುನಿಮಿಥುನವನು ನಿ । ಸ್ನಾತ ಕಂಡನು ಬಿಲ್ಲ ಕೊಪ್ಪಿನ । ಲಾತಕದಪಿನ ಮಕುಟದೊಲವಿನ ಬೆರಲಬಿರುದನಿಯ ॥ ಬೀತಸೊಂಪಿನ ತಳಿತಬೆರಗಿನ । ಪಾತಕದ ಪುಳಕದ ಮುಖದ ಮ । ಹೀತಳಾಧಿಪ ಸುಯ್ದು ನೊಂದನು ಶಿವಶಿವಾಎನುತ ॥೧೬॥ ಅರಿಯೆನಾನಿವರೆಂದು ಮೃಗವೆಂ । ದಿರಿದೊಡಿದುಮತ್ತೊಂದುಪರಿಯಾ । ಯ್ತುರುವಮಾಣಿಕವೆಂದು ಕೊಂಡೊಡೆ ಕೆಂಡವಾದುವಲಾ ॥ ಸರವಿಯೇ ಹಾವಾದುದೇನೆಂ । ವರಿಯೆನೀಕೌತುಕವನುರೆ ಮೈ । ಮರೆಸಿ ಕೊಂದುದೆ ವಿಧಿಯೆನುತ ಹರಿತಂದನಾಸ್ಥಳಕೆ ॥೧೭॥ ಉಗಿದು ಬಿಸುಟನು ಸರಳ ಮಗ್ಗುಲ । ಮುಗುಚಿ ನೆತ್ತರ

ಹೊನಲಿನೀಚೆಗೆ । ತೆಗೆದು ತೊಳೆತೊಳೆದೊರಸಿದನು ಸಗ್ಗಳೆಯನೀರಿನಲಿ ॥ ಮೃಗವಹರೆ ಮಾನಿ
ಸರಕಟ ಪಾ । ಪಿಗಳಿಗೆತ್ತಣತಪವಿದೆತ್ತಣ । ಮೃಗವಿನೋದಕ್ರೀಡೆ ಕೊಂದಿರೆನುತ್ತ ಬಿಸುಸುಯ್ದು
॥೧೮॥ ಮತ್ತೆ ಸಾವೇ ಪಾಪಿಗಳೆ ನೀ । ನುತ್ತಮನಲಾ ಸಾಕಿದೇತಕೆ । ನುತ್ತ ಮರಳುವಕಂಗಳಡಿಗಡಿ
ಗುಗಿವಮೇಲುಸುರ ॥ ಎತ್ತಿಹಾಯ್ಕುವಕೊರಳ ಬಿಕ್ಕುಳ । ಕೆತ್ತುವಧರದ ರೋಷದಲಿ ಹೊಗೆ । ಸುತ್ತಿ
ದುರಿಮಾತುಗಳ ಸೂಸಿದರವನಿಪನಮೇಲೆ ॥೧೯॥ ಎಲವೊ ರಾಜಬ್ರುವನೆ ತನ್ನಯ । ಲಲನೆಯೊಡನಿರೆ
ಕೊಂದೆ ನಿನ್ನಯ । ಲಲನೆಯನು ನೀ ಕೂಡಿದಾಗಳೆ ಮರಣ ವಿಸಗಹುದು ॥ ಹಲವುಮಾತೇಕೆನುತ
ಹರಣವ । ಕಳೆದುದಾಮುನಿಮಿಥುನವವನಿಪ । ತಿಲಕ ದುಮ್ಮಾನದಲಿ ಬಂದನು ಹಸ್ತಿನಾಪುರಕೆ ॥೨೦॥
ಆದಹದನನು ಭೀಷ್ಮ ಧೃತರಾ । ಷ್ಟ್ರಾದಿಗಳಿಗರುಹಿದರೆ ಹಯಮೇ । ಧಾದಿಯಜ್ಞದಲೀಮಹಾಪಾ
ತಕಪಿಘಾತಕವಾ ॥ ವೈದಿಕೋಕ್ತಿಯ ಮಂತ್ರದಲಿ ಸಂ । ಪಾದಿಸುಪೆನೆನೆ ತ್ರಿರವ ಬಿಮುರಿ ಮ । ಹಾ
ಮದಾಗ್ರಹಬುದ್ಧಿಯಲಿ ಹೊರವಂಟನರಮನೆಯ ॥೨೧॥ ಸಕಲ ಭಂಡಾರವನು ಭೂಸುರ । ನಿಕರದಲಿ
ಚೆಲ್ಲಿದನು ಸುಜನ । ಪ್ರಕರವನು ಗಾಂಗೇಯಧೃತರಾಷ್ಟ್ರಗೆ ಕೈಗೊಳಿಸಿ ॥ ಚಕಿತಚಿತ್ತನು ಮುನಿ
ಹತಿಯ ಪಾ । ತಕದ ನತ್ತಿಯ ಸಬಳವಾವುದೊ । ಸಕಲಯೋಗಾವಳಿಯೊಳೆಸುತ್ತೈದಿವನು ಕಾನನವ
॥೨೨॥ ಅರಸ ಕೇಳ್ಶತಶೃಂಗಶೈಲದ । ವರತಪೋಧನರಾಶ್ರಮಕೆ ನಿ । ಮ್ಮರಸ ಬಂದನು ವಂದಿಸಿದ
ನಾಪರಮಮುನಿವರರ ॥ ಹರುಷದಲಿ ಜಾಬಾಲಿಗಾರ್ಗ್ಯಾಂ । ಗಿರಸಗಾಲವಗೌತಮಾದ್ಯರುಧರಣಿಪನ
ಸಂಭಾಪಿಸಿದರರ್ಘ್ಯಾಸನಾದಿಯಲಿ ॥೨೩॥ ಈತನಮಲಾಷ್ಟಾಂಗಯೋಗಜ । ಧೂತಕಿಲ್ಬಿಷನಾಗಿ
ಬಳಿಕ ಮ । ಹಾತಪಸ್ವಿಗಳೊಳಗೆ ಸಂದನು ತೀವ್ರತೇಜದಲಿ ॥ ಆತಪೋನಿಷ್ಠಂಗೆ ತಾವತಿ । ಭೀತಿ
ಭಕ್ತಿಯೊಳಧಿಕಶುಶ್ರೂ । ಷಾತಿಶಯದಲಿ ಮನವ ಹಿಡಿದರು ಕುಂತಿಮಾದ್ರಿಯರು ॥೨೪॥ ಪರಮ
ವೈರಾಗ್ಯದಿ ನಿರಂತಃ । ಕರಣನಿರುಪಮಭಾವಶುದ್ಧಿಯ । ಮುರಹರಧ್ಯಾನೈಕಪೀಯೂಷಾಭಿಷೇಕದಲಿ॥
ಹೊರೆದು ಹೊಂಗಿದನಿಷ್ಪ್ರಸಂಚೋ । ತ್ಕರದ ಸುಖದುಸ್ಥಿತಿಯಲಿದ್ದನು । ಧರಣಿಪತಿ ಮುನಿಪನ
ಮಹಾಪಾತಕವ ಕೆಡೆಯೊದೆದು ॥೨೫॥ ನಾರಿಯರು ಮರುಗಿದರಕಟ ಮುದಿ । ಹಾರುವನ ತನಿಬೇಂಟೆ
ನಮ್ಮಯ । ಬೇರುಗೊಲೆಯಾಗಿರ್ದುದೇ ಹಾಎನುತ ಬಿಸುಸುಯ್ದು ॥ ವಾರಿಜಾನನೆ ಕುಂತಿ ಮೆಲ್ಲ
ನೆ । ನಾರಿದಳು ನಯದಲಿ ರಹಸ್ಯದ । ಲಾರುಮರಿಯದವೋಲು ಬಿನ್ನಹಮಾಡಿದಳು ಪತಿಗೆ ॥೨೬॥
ಭರತವಂಶಕೆ ಪುತ್ರಶತವವ । ತರಿಸುವುದು ಗಾಂಧಾರಿದೇವಿಗೆ।ವರಮುನೀಶ್ವರನಿತ್ತವರವದು ನಿಮ್ಮಡಿ
ಗಳರಿಯೆ ॥ ದುರುಳಮುನಿಪನಶಾಪವೇ ಸ್ತ್ರೀ । ಪುರುಷಸಂಗವಿರೋಧ ನಮಗಿ । ನ್ನರಸ ನಾಪುತ್ರಸ್ಯಗತಿ
ಯೆಂದಿರದೆ ಶ್ರುತಿವಚನ ॥೨೭॥ ಧರೆಯ ರಾಜ್ಯಸ್ಥಿತಿಗೆ ಸುತರವ।ತರಿಸುವರು ಗಾಂಧಾರಿಗಾ ಪುತ್ರರಿಗೆ
ಸುತರಾಸುತರಸುತರಾಸುತರಸೂನುಗಳ ॥ ಧರೆ ಪರಂಪರೆಯಿಂದಲತ್ತಲೆಸರಿವುದೀ ನಿಮ್ಮಡಿಗೆ ದರ್ಭಾ।
ಸ್ತರಣಸವಿಧಾಧಾನವೇ ಕಡೆಗೆಂದಳಾ ಕುಂತಿ ॥೨೮॥ ವನಜಮುಖಿ ಕೇಳ್ಪುತ್ರಮುಖದ । ರ್ಶನವು
ಸುಲಭವೆ ಪುಣ್ಯಹೀನರಿ । ಗೆನಿತು ಹಲುಬಿದರೇನು ಹಂಗಿಗರಾವು ದುಷ್ಕೃತಿಗೆ ॥ ಮುನಿಯಬೇಡದ
ಬೇಳುವಯಮಾ । ತಿನ ಹವಣ ನೀಬಲ್ಲೆ ಹೇಳಿ । ನ್ನೆನಗೆ ಕರ್ತವ್ಯವನು ಮಾನಿನಿ ಭೀತಿ ಬೇಡೆಂದ ॥೨೯॥
**ನಾರಿಯರು ಮತ್ತಲ್ಲಿ ರಾಜಕು । ಮಾರಿಯರು ಫಲವಾದಿಗಳು ಗಾಂ । ಧಾರಿಗಾದುದು ಪುತ್ರಸಂತತಿ**

ಯೆಂಬಭೇದದಲಿ ॥ ಧೀರಬಿನ್ನವಿಸಿದೆನು ಕಾರ್ಯದ । ಭಾರವನು ನೀಬಲ್ಲೆ ಯೆವಳು ವಿ । ಚಾರಿಯೆನ್ನ ದಿರೆಂದುರಾಯನ ಚರಣಕೆರಗಿದಳು ॥೩೦॥ ಲೋಲಲೋಚನೆ ಧೃಢಪತಿವ್ರತೆ । ಯೇಳು ದುಃಖಿಸ ಬೇಡ ಭೃಗುಜಾ । ಬಾಲಿ ಜಮದಗ್ನ್ಯಾದಿ ದಿವ್ಯಮುನೀಂದ್ರಗಣವಿದೆಲಾ ॥ ಓಲಗಿಸುವುದು ದುಷ್ಕೃತಿಗೆ ನಿ । ಷ್ಫಾಳಿಯವು ಬಳಿಕಹುದು ಮಂತ್ರವಿ । ಶಾಲಬೀಜದಿನಮುದು ಸಂತತಿ ಕಾಂತಕೇಳೆಂದ ॥೩೧॥ ಭವದನುಗ್ರಹದಿಂದ ಸುತರು । ದ್ಭವಿಸಿದರೆ ಲೇಸನ್ಯಥಾಸಂ । ಭವಿಸಿದರೆ ದುಷ್ಕೀರ್ತಿ ವಧುಲೆಂಜಲಿಸಳೇ ಕುಲವ ॥ ಅವನಿಪತಿ ಕೇಳ್ನ್ನಹುಷ ನಳಪೌ । ರವಸುಹೋತ್ರಾಧ್ವರನಿಜಾತ್ಮೋ । ದ್ಭವರ ಪಾರಂಪರೆಗೆ ಗತಿಯೇನೆಂದಳಾ ಕುಂತಿ ॥೩೨॥ ಅರಸಿ ಕೇಳ್ತ್ಬೀಜಪಾರಂ । ಪರೆ ಮುಖಿಯ ತತ್ಕ್ಷೇತ್ರದಲಿ ಮುನಿ । ವರರಕಾರುಣ್ಯದಲಿ ಪುತ್ರೋದ್ಭವವದೇ ವಿಹಿತ ॥ ಪರಮನೈಷ್ಠಿಕಸಿದ್ಧವಿದು ಸರ । ಸಿರುಹಮುಖಿ ನಿಶ್ಶಂಕೆಯಲಿ ನೀಧರಿಸು ಮುನಿಮಂತ್ರೋಪದೇಶವನಿದುವೆ ಸಿದ್ಧೌಷ ॥೩೩॥ ಆದೊಡವನಿಪ ಬಿನ್ನಹವು ತನ । ಗಾದಿಯಲಿ ದೂರ್ವಾಸಮುನಿ ಕರು । ಣೋದಯದಲಿತ್ತುದುಮಂತ್ರಾಕ್ಷರದ ವರವುಂಟು ॥ ನೀ ದಯಾಂಬುಧಿ ನಿನ್ನನುಗ್ರಹ । ವಾದುದಾದೊಡೆ ತದ್ವಿಧಾನದ । ಲಾದಲಸುವೆನು ಪುತ್ರಕಾಮ್ಯವನೆಂದಳಾಕುಂತಿ ॥೩೪॥ ಲೇಸನಾಡಿದೆ ಕುಂತಿ ಮುನಿಯುಪ । ದೇಶಿಸಿದನೇ ನಮ್ಮಭಾಗ್ಯವಿ । ದೈಸಲೇ ನೀ ದೃಢಪತಿವ್ರತೆಯೆನ್ನನುಜ್ಞೆಯಲಿ ॥ ಭಾಸುರರ ನೀಭರತವಂಶವಿ । ಲಾಸರನು ಕೃತಶತ್ರುಪಕ್ಷವಿ । ನಾಶರನು ಬೆಸಲಾಗು ಹೋಗೆನ್ನಾಣೆ ಹೋಗೆಂದ ॥೩೫॥ ತರುಣಿ ಪಾಂಡುವಿನಾಜ್ಞೆಯನು ನಿಜ । ಶಿರದೊಳಾಂತು ಸಮಸ್ತಮುನಿಮು । ಖ್ಯರಿಗೆ ವಂದಿಸಿ ಹರಿಹರಬ್ರಹ್ಮಾದಿಗಳಿಗೆರಗಿ ॥ ಸರಸಿಯಲಿ ಮಿಂದಳು ಮುನೀಂದ್ರನ । ಪರಮಮಂತ್ರಾಕ್ಷರವ ತಾನು । ಚ್ಚರಿಸಿ ನೆನೆದಳು ಯಮನನಾಕ್ಷಣವಾತನೈತಂದ ॥೩೬॥ ಸತಿಯ ಸಮ್ಮುಖನಾಗಿ ನೈವ । ಸ್ವತನು ನುಡಿದನದೇಕೆ ನಮ್ಮನು। ಕ್ಷಿತಿಗೆ ಬರಿಸಿದೆಯೆನಲು ಲಜ್ಜಾವನತಮುಖಿಯಾಗಿ ॥ ಸುತನ ಕರುಣಿಪುದೆನಲು ಭಯಮಾ । ವಿತತವಿಮಲಸ್ವೇದಜಲಕಂ । ಪಿತೆಯ ಮುಟ್ಟಿ ತಥಾಸ್ತುವೆನುತ ಕೃತಾಂತ ಬೀಳ್ಕೊಂಡ ॥೩೭॥ ಧಾರಿಣೀಪತಿ ಕೇಳು ಕುಂತೀ । ನಾರಿಗಾದುದು ಗರ್ಭ ಹರುಷದ । ಭಾರದಲಿ ಸತಿ ತಗ್ಗಿದಳು ನವಪೂರ್ಣಮಾಸದಲಿ ॥ ಚಾರುತರನಕ್ಷತ್ರಶುಭದಿನ । ವಾರಲಗ್ನದೊಳಿಂದುಕುಲವಿ । ಸ್ತಾರ ಕನುಸುಕುಮಾರನವತರಿಸಿದನು ಧರಣಿಯಲಿ ॥೩೮॥ ನಿರ್ಮಲಿನವಾಯ್ತಖಿಲದಿಶದು । ಷ್ಕರ್ಮತತಿ ಬೆಚ್ಚಿದುದು ಸಾಕ್ಷಾ । ದ್ಧರ್ಮವೇ ಧರಣಿಯಲಿ ನೃಪರೂಪಾಗಿಜನಿಸಿತಲಾ ॥ ದುರ್ಮಹೀಶರ ಹೊತ್ತಭಾರದ । ಕರ್ಮವೇದನೆ ಧಾತ್ರಿಗಿಳಿದುದು । ಧರ್ಮವಿನ್ನೆಮಗಹುದೆನುತ ಹೆಚ್ಚಿದುದು ಮುನಿನಿಕರ ॥೩೯॥ ಧರಣಿಪತಿ ಧರ್ಮಜನ ಮುಖಸಂ । ದರುಶನವ ಮಾಡಿದನು ಹೆಚ್ಚಿದ । ಹರುಷಭಾರಕೆ ಚಿತ್ತ ತಗ್ಗಿತು ಮುಗ್ಗಿತಡಿಗಡಿಗೆ ॥ ಹರೆದು ಪುತ್ರೋತ್ಸವದ ನುಡಿ ಗಜ । ಪುರದೊಳಬ್ಬರವಾಯ್ತು ಪಾಂಡುವಿ । ನರಸಿಯಲಿ ಸಂತಾನ ಜನಿಸಿದುದೆಂದು ಜನಜನಿತ ॥೪೦॥ ಕೇಳಿದಳುಗಾಂಧಾರಿ ಕುಂತಿಗೆ । ಬಾಲಕೇಳಿವಿನೋದವೇಕೈ । ಬೋಳವಿಸಿತೇ ಮುನ್ನ ಹಾತಪ್ಪೇನುತಪ್ಪೇನು ॥ ಕಾಳುಮಾಡಿದನೆನಗೆ ಮುನಿಪತಿ । ಶೂಳಿಕಾರನಲಾ ಸುಡೀಗ । ಭಾಳಿಗಳನೆಂದಬಲೆ ಹೊಸೆದಳು ಬಸುರ ನೊಡೆಮುರಿದು ॥೪೧॥ ಉದುರಿದವು ಧರಣಿಯಲಿ ಬಲುಮಾಂ । ಸದ ಸುರಕ್ತದ ಘಟ್ಟಿಗಳು ಖಂ । ಡದ ಸುಧಾಳದ ಜಗಿಯಪೇಸಿಕೆನಿಕರನೂ

ರೊಂದು ॥ ಕೆದರಿದಳು ವಾಮಾಂಘ್ರಿಯಲಿ ಸೂ । ಕಿದಳು ಹಾಯ್ಕಿವಹೊರಗೆನುತ ನೋ । ಡಿದಳು ಕರೆ ಕೈನೆಯರನೆನುತ ಕಠೋರಕೋಪದಲಿ ॥೪೨॥ ತನತನಗೆ ತನು ನಡುಗಿ ಕಾಂತಾ । ಜನವು ಬಂದು ದು ತಾಯೆ ಬೆಸನೇ । ನೆನಲು ಬಿಸುಡಿವನೂರಹೊರಗೆಂಬಾಮುಹೂರ್ತದಲಿ ॥ ಮುನಿಪವೇದವ್ಯಾಸ ಸಾಕೆಯ । ಮನೆಗೆ ಬಂದನು ಕಂಡನೀ ಕಾ । ಮಿನಿಯ ಕೋಲಾಹಲವಿದೇನೆಂದ. ಬೆಸಗೊಂಡ ॥೪೩॥ ಭರತಸಂತಾನಕೆ ಕುಮಾರರ । ಹೆರುವೆಸಾಮುನ್ನೊಂದು ಗರ್ಭವ । ಧರಿಸಿದೆನು ನಿಮ್ಮಡಿಯ ಕೃಪೆಯಲಿ ಮಂತ್ರಭಾವಿತವ ॥ ವರುಷವೆರಡಾಯಿತ್ತುದರ ಭಾರವ । ಧರಿಸಿದೆನು ದಾಯೊದ್ಯರೊಳಗವ । ತರಿಸಿ ದನು ಮಗನೆನುತ ಮುಖದಿರುಹಿದಳು ಗಾಂಧಾರಿ ॥೪೪॥ ಮರುಳೆ ಹೆಂಗುಸಲಾ ಮಹಾತ್ಮರ । ಪರಿಯ ನೀನೆಂತರಿವೆ ಗರ್ಭೋ । ತ್ಕರವ ಕೆಡಿಸಿದೆ ಪಾಪಿ ನೀ ಸಾರೆನುತ ಮುನಿ ಮುಳಿದು ॥ ತರಿಸಿದನು ಘೃತ ಪೂರಿತದ ಕೊ । ಪ್ಪರಿಗೆಗಳನೊಂದೊಂದನೊಂವರೊ । ಳಿರಿಸಿ ಮಂತ್ರಿಸಿ ನೀರ ತಳಿದನು ರಕ್ಷೆಗಳ ರಚಿಸಿ ॥೪೫॥ ಚಿಂತೆಯಿಲ್ಲದೆ ನೂರುದಿನಪರಿ । ಯಂತ ರಕ್ಷಿಸು ಬಳಿಕ ನಿನ್ನಯ । ಸಂತತಿಯ ಸಾಮರ್ಥ್ಯವನು ಗಾಂಧಾರಿ ನೋಡೆಂದು ॥ ಕಂತುಪಿತೃಸನ್ನಿಭನು ಸಖಿಯನು । ಸಂತವಿಸಿ ಮರಳಿದನು ಧರಣೀ । ಕಾಂತ ಕೇಳ್ಕೆ ಬನದೊಳಿತ್ತಲು ಭೀಮನುದ್ಭವವಾ ॥೪೬॥ ನಿಯಮದಲಿ ಕಾಮಿನಿ ಸರೋವಾ । ರಿಯಲಿ ಮಿಂದಳು ಬೀಜಮಂತ್ರ । ವ್ಯಯವ ಮಾದಿದಳಮರನಿಕರವ ನೋಡಿ ಕೈಮುಗಿದ ॥ ಬಯಸಿದಳು ವಾಯುವನು ನಿಜಮೂ । ರ್ತಿಯಲಿ ಬಂದು ಸಮೀರಸಾಕುಂ । ತಿಯನು ನುಡಿಸಿದನೆಮ್ಮ ಬರಿಸಿದ ಹದನದೇನೆಂದ ॥೪೭॥ ಬರಿಸಿವನು ಬೇರೇನು ಸುತನನು । ಕರುಣಿಸುವುದೈಸಲೆ ಯೆನಲು ಸಂ । ಸ್ಪರುಶನದಿ ಭವದಿಷ್ಟಮಸ್ತುಯೆನುತ್ತಲಂಬರಕೆ ॥ ಮರಳಿದನು ಪವಮಾನನೀಪಂ । ಕರುಹಮುಖಿ ಬೆಸಲಾದಳೊಂದೇ । ವರುಷ ಗರ್ಭವ ಧರಿಸಿ ಪರಬಲಕಾಲಭೈರವನ ॥೪೮॥ ಅವನಿಸುತವಾರತ್ರಯೋದಶಿ । ಟವದಮಧ್ಯದೊಳರ್ಕನಿರೆಸಂ । ಭವಿಸಿದನು ಮಘೆಯಲಿ ಶುಭಗ್ರಹಲಗ್ನದುದಯದಲಿ ॥ ಭವದ ಮಾತ್ರದೊಳಾಗ್ರಪಾರ್ಥಿವ । ನಿವಹ ನಡುಗಿತು ಭೂಮಿಪತಿ ಕೇ । ಳುವೆನದೇನನು ಭೀಮಸೇನನ ಜನನದದ್ಭುತವ ॥ ಭೀಮನುದಯಿಸಿದಿರುಳು ರಾಯಪ । ತಾಮಸನು ಜನಿಸಿದನಲ್ಲೆ ನಿ । ಮ್ಮಾಮಹಾತ್ಮನ ಹುಟ್ಟು ಬೆದರಿಸಿತಖಿಳಜನಮನವ ॥ ಭೂಮಿ ನಡುಗಿತು ದೆಸೆಗೆ ಹರೆದವು । ಧೂಮಕೇತುಗಳೊದರಿದವು ಬಳಿ । ಕಾಮಹಾನಗರದಲಿ ಭರದಲಿ ಭೂರಿಗೋಮಾಯು ॥೫೦॥ ಕರೆಸಿದನು ಧೃತರಾಷ್ಟ್ರನವನೀ । ಸುರರ ಬೆಸಗೊಂಡನು ಕುಮಾರನ । ದರುಶನದ ಸಮನಂತರದಲುತ್ಪಾತಫಲಗತಿಯ ॥ ಭರತವಂಶವನುಳಿದಭೂಮೀ । ಶ್ವರರನಂತವನೀತನೇ ಸಂ । ಹರಿಸುವನು ಸಂದೇಹವಿದಕೇನೆಂದರಾದ್ವಿಜರು ॥೫೧॥ ಕುಲಕೆ ಕಂಟಕನಾದೊಡೊಬ್ಬನ । ಕಳೆವುದೂರಳಿವಿನಲಿ ಕಳೆವುದು । ಕುಲವನೊಂದನು ದೇಶದಳಿವಿನಲೂರಕೆಡಿಸುವುದು ॥ ಇಳೆಯನಖಿಳವ ಬಿಸುಟುವುದು ತ । ನ್ನಳಿವ ಮಾಡುವುದೆಂಬವಚನವ । ತಿಳಿವುದೀತನ ಬಿಸುಟುಕಳೆ ನೀನೆಂದನಾವಿದುರ ॥೫೨॥ ಸುತನ ಮೋಹದ ತಿಮಿರವಾದು । ಸ್ಸ್ಥಿತಿಯನೀಕ್ಷಿಸಲೀವುದೇ ದು । ರ್ಮತಿಯೊಳೀತನ ಬಿಸುಡಲೀಸಿದುದಿಲ್ಲ ಗಾಂಧಾರಿ ॥ ಸುತನಿರೀಕ್ಷಣಜಾತಕರ್ಮೋ । ಚಿತದ ದಾನಂಗಳಲಿ ಭೂಸುರ । ತತಿಯ ತಣಿಸಿದನನಿಬರಿಗೆ ಗುಣನಾಮಕರಣದಲಿ ॥೫೩॥ ಜನಪದುರ್ಯೋಧನನು ದುಶ್ಶಾ । ಸನ ವಿಕರ್ಣ ಸುಬಾಹು ದುಸ್ಸಹ । ಕನಕವರ್ಣ ಸುಷೇಣದೀರ್ಘೋದರ ವು

ಹೋದರನು ॥ ಜನವಿಜಯ ಜಲಸಂಧದೃಢವಾ । ಹನವಿವಿಂಶತಿ ಕುಂಡಧಾರಕ । ನೆನಲು ನೂರ್ವರಸಾಮಕರಣವನರಸ ಮಾಡಿಸಿದ ॥೩೪॥ ಜನಪತಿಗೆ ಬಳಿಕೊಬ್ಬವೇಶ್ಯಾಂ । ಗನೆಯ ಸುತನು ಯುಯುತ್ಸುನೂರೊಂ । ದೆನಿಸಿತರಸುಕುಮಾರಕರು ಗಾಂಧಾರಿಯುದರದಲಿ ॥ ಜನಿಸಿದರು ನೂರೊಂದುನೂರ್ವರಿ । ಗನುಜೆದುಶ್ಶಳೆಯಾದಳಾ ಮಾ । ನಿನಿ ಜಯದ್ರಥನರಸಿಯಾದಳು ರಾಯಕ್ಕೇಳೆಂದ ॥೩೫॥ ಅತ್ತಲಾಹದಸಾಯ್ತು ಬಳಿಕಿನ । ಲಿತ್ತ ಧರ್ಮಜಭೀಮಸೇನರ । ಪೆತ್ತಹರುಷದೊಳಿವರು ಮೆರೆದರು ಪಾಂಡುಕುಂತಿಯರು ॥ ಮತ್ತೆ ಕೇಳದ್ಭುತವನುರೆ ಮೊರೆ । ಯುತ್ತ ಹೆಬ್ಬುಲಿ ವರತಪೋಧನ । ರತ್ತಲೈತರೆ ಪಾಂಡು ಕೆಡಹಿದನಾಮೃಗಾಂತಕನಾ ॥೩೬॥ ಆಮಹಾಡಿಭಸಕ್ಕೆ ಮುನಿಪ । ಸ್ತೋಮವುಂಬತು ಪರ್ವತಾಗ್ರದ । ಲಾಮಹೀಪತಿಯರಸಿ ನಡುಗಿದಳಹಹ ಶಿವಯೆನುತ ॥ ಭೀಮ ಬಿದ್ದನುತೊಡೆಯಮೇಲಿಂ । ದೀಮಹಿಗೆ ತಚ್ಛಿಲಶಿಲೆ ನಿ । ರ್ನಾಮವಾದುದು ಹಸುಳೆ ಹೊರಳಿದು ಬಿದ್ದಭಾರದಲಿ ॥೩೭॥ ಶಿಶುವ ತೂಪಿಡದಳು ನಿವಾಳಿಸಿ । ಬಿಸುಟು ರಜವನು ಮಂತ್ರರಕ್ಷಾ । ಪ್ರಸರವನು ಮುನಿಗಳಲಿ ಮಾಡಿಸಿದಳು ಕುಮಾರಂಗೆ ॥ ವಸುಧೆಗತಿಬಲನೊಬ್ಬಕಂದನ । ಬೆಸಲಹನು ಯೆಂದೆನುತ ಸಾರಸ । ಲಸಿತಕಮಲಾಕರದ ತೀರಕೆ ಬಂದಳಾಕುಂತಿ ॥೩೮॥ ಮಿಂದು ಕಡುಶುಚಿಯಾಗಿ ಸುಮನೋವೃಂದದೊಳಗಾರ್ಕೈದು ನೋಡಿಪು । ರಂದರನ ನೆನೆದಳು ಮುನೀಂದ್ರನ ಮಂತ್ರಶಕ್ತಿಯಲಿ ॥ ಬಂದನಲ್ಲಿಗೆ ಜಯಕೆಯೇನರ । ವಿಂದಲೋಚನೆ ಹೇಳೆನಲು ಪೂ । ರ್ಣೇಂದುಮುಖಿ ತಲೆವಾಗಿದಳು ಲಜ್ಜಾನುಭಾವದಲಿ ॥೩೯॥ ಸುತನನಿತ್ತೆನು ನಿನಗೆ ಲೋಕ । ತ್ರಿತಯದಲಿ ಬಲುಗೈಕಣಾ ಪತು । ಪತಿಗೆ ಪುರುಷೋತ್ತಮಗೆ ಸಿಂಪಿಗಿಲೆಂಬಸಂದೇಹ ॥ ಶತಭವಾಂತರಪುಣ್ಯತರು ಕಾ । ಮಿತವ ಫಲಿಸಿತು ಹೋಗೆನುತ ಸುರ । ಪತಿ ಲತಾಂಗಿಗೆ ವರವನಿತ್ತಡರಿದನು ಗಗನವನು ॥೪೦॥ ತೀವಿದವು ನವಮಾಸ ವಿಮಲವಿ । ಭಾವಸುವಿನುದಯದಲಿ ಶುಭಲಗ್ನಾವಲಂಬನತಾರೆಯುತ್ತರಫಲುಗುಣಾಪ್ಪಯದಾ ॥ ಜೀವಕೇಂದ್ರಸ್ಥಿತಿ ದಶಾದಿ । ಗ್ರಾಭವಿತಗ್ರಹರಾಶಿಯಿರೆ ಗಾಂ । ಡೀವಿ ಜನಿಸಿದನೊಡನೆ ಜನಿಸಿತು ಜನದಸುಮ್ಮಾನ ॥೪೧॥ ದೇವದುಂದುಭಿ ಮೊಳಗಿದವು ಕುಸು । ಮಾವಳಿಯ ಮಳೆಸುರಿದುದಾಡುವ । ದೇವವಧುಗಳ ಮೊಳೆವಕಂಗಳಢಾಳ ಮಿಂಚಿದವು ॥ ತೀವಿಮುತ್ಸವುಬ್ಬರಿಸೆ ಭುವ । ನಾವಳಿಯೊಳಿಂದ್ರಾದಿನಿಖಿಳಸು । ರಾವಳಿಗಳುರೆ ಕೂಡೆ ಕೊಂಡಾಡಿತು ಧನಂಜಯನ ॥೪೨॥ ರಣಭಯಂಕರನರ್ಜುನನು ಧಾ । ರಿಣಿಯೊಳುದಿಸವ ಮುನ್ನ ತಿಂಗಳ । ನೆಣಿಸಿದರೆ ಮೂರಾಯ್ತು ಮಥುರೆಯ ರಾಜಭವನದಲಿ ॥ ಗುಣರಹಿತನಚ್ಯುತನು ವರಶಾ । ವಣಬಹುಳದಷ್ಟಮಿಯಿರುಳು ರೋ । ಹಿಣಿಯಲವತರಿಸಿದನಲೈ ದೇವಕಿಯ ಜಠರದಲಿ ॥೪೩॥ ಈತ ನರಋಷಿ ನಿಖಿಳಭುವನ । ಖ್ಯಾತನಾರಾಯಣನಲೈ ಬಳಿ । ಕಾತನುರ್ವೀಭಾರಸಂಹರಣದ ವಿನೋದದಲಿ ॥ ಭೂತಪತಿಮೊದಲಾದದಿವಿಜ । ವ್ರಾತವೇ ನರರೂಪದಲಿ ಸಂ । ಭೂತವಾದುದು ಕೇಳು ನೃಪಕೃಷ್ಣಾವತಾರದಲಿ ॥೪೪॥ ನಾಕು ಮೂವರುಸುತರು ತನಗೆಂದಿದೀಕೆ ಮಾದ್ರೀದೇವಿಗಗ್ಗದ । ಶೋಕಿತೆಗೆ ಮಂತ್ರೋಪದೇಶವಿಧಾನವನು ಕಲಿಸಿ ॥ ನಾಕನಿಲಯರನೊಲಿಸೆನಲು ಬಂ । ದಾಕೆ ಕೃತನಿಯಮದಲಿ ನೆನೆದಳು । ಲೋಕವಿಶ್ರುತರಶ್ವಿನೀದೇವರನು ಹರ್ಷದಲಿ ॥೪೫॥ ಬಂದರವರಿಬ್ಬರು ಮಹೀತಳೆ । ಕಿಂದುವದನೆಗೆ ಸುತರನಿತ್ತರು । ಮಂದಗಮನೆಯ ಕಳುಹಿ ಹಾಯ್ದರು ಗಗನಮಂಡಲಕೆ ॥ ಬಂದು

ವರುಷಕೆ ಕಿರಿಯರರ್ಜುನ । ಗಿಂದ ಬಳಿಕವತರಿಸಿದರು ಮುನಿ । ವೃಂದ ನೆರೆ ಪತಿಕರಿಸಿ ಕೊಂಡಾಡಿತು ಕುಮಾರಕರ ॥೬೬॥ ಕರಿತುರಗನಿಕರವನು ಕುಲಭೃ । ತ್ಯರ ವಿಲಾಸಿನಿಯರನು ರತ್ನಾ । ಭರಣವಸನ ಹಿರಣ್ಯಗೋಮಹಿಷಾದಿವಸ್ತುಗಳ ॥ ತರಿಸಿದನ. ಕಶ್ಯಪನು ಯದುರಾ । ಯರ ಪುರೋಹಿತನಲ್ಲಿಗಾತನ । ಪರುಠವಿಸಿ ಕಳುಹಿದನು ಪಾಂಡುನೃಪಂಗೆ ವಸುದೇವ ॥೬೭॥ ಬಂದನಾಕಶ್ಯಪನು ಕುಂತೀ । ನಂದನರ ಕಂಡಖಿಳವಸ್ತುವ । ನಂದು ಕಾಣಿಕೆಯಿತ್ತು ಕಂಡನು ಪಾಂಡುಭೂಪತಿಯ ॥ ಅಂದು ವಸುದೇವಾದಿ ಯಾದವ । ವೃಂದರೋಹಿಣಿದೇವಕಿಯರಾ । ನಂದಸುಕ್ಷೇಮವನು ಕುಶಲವವರಸಪಿಸಸೊಂಡ ॥೬೮॥ ಯಾದವರ ಸುಕ್ಷೇಮಕುಶಲವ । ಸಾದರಿಸಿ ಬಳಿಕಾದಪರವಾ । ಹ್ಲಾದದಲಿ ಕಶ್ಯಪನೊಳಾಲೋಚಿಸಿ ಮಹೀಪಾಲ ॥ ವೈದಿಕೋಕ್ತಿಯ ಚಾಲವುಪನಯ । ನಾದಿಸಕಲಕ್ರಿಯೆಗಳನು ಗಾ । ರ್ಗ್ಯಾದಿಋಷಿಗಳ ನುಷ್ಠೆಯಲಿ ಮಾಡಿಸಿದದನಿಬರಿಗೆ ॥೬೯॥ ಈತನೇ ಧರ್ಮಜನು ಯೆರಡನೆ । ಯಾತ ಭೀಮನು ಬಳಿಕ ಮೂರನೆ । ಯಾತನರ್ಜುನ ನಲನ್ಕೈದನೆಯಾತಸಹದೇವ ॥ ಈತಗಳು ಕೌಂತೇಯರಾದ್ರೆ । ಯಾತಿ ಶಯಪರಿಭೇದರಹಿತ । ಖ್ಯಾತರೆಂದರು ಪರಮಮುನಿಗಳು ಪಾಂಡುನಂದನರ ... ॥೭೦॥

ಅಂತು ಸಂಧಿ ೪ ಕ್ಕೆ ಪದ ೧೫೦ ಕ್ಕಂ ಮಂಗಳಮಸ್ತು.

## ಐದನೆಯ ಸಂಧಿ.

ಸೂಚನೆ। ವರಮುನಿಯ ಶಾಪದಲಿ ಸರಿದನು , ಸುರರನಗರಿಗೆ ಪಾಂಡು ಹಸ್ತಿನ ।
ಪುರಕೆ ತಂದರು ಪರಮಮುನಿಗಳು ಪಾಂಡುನಂದನರ ॥

ಕೇಳು ಜನಮೇಜಯಧರಿತ್ರೀ । ಪಾಲ ಶತಶೃಂಗಾದ್ರಿಯಲಿ ಭೂ । ಪಾಲನಿರ್ದನು ತನ್ನ ವೀರಕುಮಾರಕರು ಸಹಿತ ॥ ವ್ಯಾಳವನಗಜಸಿಂಹವೃಕಶಾರ್ದೂಲಭಯವನು ಪರಿಹರಿಸಿ ಮುನಿ । ಪಾಳಿಗಾಶ್ರಯವೆನಿಸಿದನು ಪಾವನತಪೋವನವ ॥೧॥ ಅಸಮಸ್ತಮುನೀಂದ್ರರೊಡನ । ಭ್ಯಾಸವಾದಿವ್ಯಾಶ್ರಮದ ಸುಹ । ವಾಸವಾತಪವಾಕುಮಾರಪರಾಕ್ರಮಾಲೋಕ ॥ ಆಸಮಂಜಸಸತಿಯರಿಬ್ಬರು । ಪಾಸನೆಗಳಾವಿ ಭವಕಿಭಪುರಿ । ಯಾಸಮಸ್ತೈಶ್ವರ್ಯವದು ತೃಣವಾಯ್ತು ಭೂಪತಿಗೆ ॥೨॥ ಸುತವಿನೋದದ ಸಿರಿಗೆಯಮರಾ । ವತಿಯ ಸಿರಿ ತೊತ್ತೆಂದು ವಿಮಲ । ವ್ರತತಪೋಲಕ್ಷ್ಮಿಗೆ ವಿಲಾಸಿನಿಮುಕ್ತಿವಧುವೆಂದು ॥ ಯತಿಪದಾಂಬುಜನಿತ್ಯಸೇವಾ । ಸತಿಗೆ ದಾಸಿ ಜಗತ್ರಯಾಟ । ಸ್ಥಿತಿಪದವಿಯೆಂದುಬ್ಬಿದನು ಕಲಿ ಪಾಂಡು ವಿಪಿನದಲಿ ॥೩॥ ವರುಷಹದಿನಾರಾಯ್ತು ಧರಣೀ । ಶ್ವರನ ಹಿರಿಯಮಗಂಗೆ ಭೀಮಗೆ । ವರುಷಹದಿನೈದರ್ಜುನಗೆ ಪಟುನಾಲ್ಕುಹದಿಮೂರು ॥ ಕಿರಿಯರಿಬ್ಬರಿಗನಿಬರಾಮುನಿ । ವರರನಧ್ಯಯನಾದಿವಿದ್ಯಾ । ನಿರತರಾದರು ಬಂದುದೊಂದುವಸಂತಮಯಸಮಯ ॥೪॥ ತೆಗೆದುದಗ್ಗದತಂಪು ನದಿ

ಸರ । ಸಿಗಳ ತಡಿಯಲಿ ಹಜ್ಜೆಯಾದುದು । ಹಗಲುಹಾವಸೆ ಹರೆದುದೊದೊಕ್ಕರಿಸಿದುದು ಹಿಮಜಲವ॥
ಸೊಗಸಿದುವು ನೆಳಲುಗಳು ದೂರಕೆ । ಸೆಗಳಿಕೆಗಳೇರಿದುವು ತಂಗಾ । ಳಿಗೆ ವಿಹಾರಿಸಿ ಧೈರ್ಯ ತೆತ್ತುದು
ಕೂಡೆ ಜನನಿಕರ ॥೫॥ ಯೋಗಿಗೆತ್ತಿದಖಡುಗಧಾರೆವಿ । ಯೋಗಿಗೆತ್ತಿದಸಬಳವಖಿಳವಿ । ರಾಗಿಗಳ
ಹೆಡತಲೆಯದಡಿ ನೃಷ್ಟಿಕರಿಗಲಗಣಸು ॥ ಆಗಮಿಕರೆದೆಶೂಲ ಗರ್ವಿತ । ಗೂಗೆಗಳ ನಖಸಾಳವಗ್ಗದ ।
ಭೋಗಿಗಳ ಕುಲದೈವವೆಸೆದುದು ಕುಸುಮಮಯಸಮಯ ॥೬॥ ಮೊರೆವತುಂಬಿಯಗಾಯಕರ ನಯ ।
ಸರದ ಕೋಕಿಲಪಾಠಕರ ಬಂ । ಧುರದಗಿಳಿಗಳ ಪಂಡಿತರ ಮಾಮರದಕರಿಘಟೆಯ ॥ ಅರಳಿದಂಬುಜಸ
ತ್ತಿಗೆಯಮಂ । ಜರಿಯ ಕುಸುಮದ ಚಾಮರದಚಾ । ತುರವಸಂತನೃಪಾಲ ನಡೆದನು ಪಾಂಡುವಿನ
ಮೇಲೆ ॥೭॥ ಫಲಿತಚೂತದ ಬಿಣ್ಪುಗಳ ನೆರೆ । ತಳಿತಶೋಕೆಯ ಕೆಂಪುಗಳ ಪರಿ । ಪಳಿತಕಮಲದ ಕಂಪು
ಗಳ ಬನಬನದ ಗುಂಪುಗಳ ॥ ಎಳೆಲತೆಯ ನುಣ್ಪುಗಳ ನವಪರಿ । ಮಳದ ವನವನಸೊಂಪುಗಳ ವೆ ।
ಗ್ಗಳಿಕೆ ಝಳಪಿಸಿ ಹೊಯ್ದು ಸೆಳೆದುದು ಜನದ ಕಣ್ಮನವ ॥೮॥ ಪಸರಿಸಿತು ಮಧುಮಾಸ ತಾವರೆ । ಯೆ
ಸಳದೋಣಿಯಮೇಲೆ ಹಾಯ್ದುವು। ಕುಸುಮರಸದುಬ್ಬರದ ತೊರೆಯನು ಕೂಡೆ ತುಂಬಿಗಳು॥ ಒಸರ್ವ
ಮಕರಂದದ ತುಷಾರದ । ಕೆಸರೊಳದ್ದುವು ಕೊಂಚೆಗಳು ಪಗ। ಲೆಸೆವದಂಪತಿವಕ್ಕಿ ಸಾರಸರಾಜಹಂಸೆ
ಗಳು ॥೯॥ ಜಗವ ಹೊರೆದುದು ಬಹಳಪರಿಮಳ । ದೊಗುಮಿಗೆಯ ತಂಗಾಳಿ ವನಪ್ರ । ಥಗಳ ವಳ
ಯವ ಹೊಕ್ಕು ಮರಳಿದುದಿಲ್ಲ ವಿರಹಿಗಳು ॥ ಹೊಗುವಕಾಮನ ವಳದ ತೂಣಿಯ । ಸೊಗಸುಹೊ
ಯ್ದರೆ ಕೈದುವಿಕ್ಕಿತು।ವಿಗಡಮುನಿಜನವೇನನೆಂಬೆನು ನೃಪತಿಕೇಳೆಂದ ॥೧೦॥ ಆವಸಂತದೊಳೊಮ್ಮೆ ಮಾ
ದ್ರಿ । ದೇವಿ ವನದೊಳಗಾಡುತಿರ್ದಳು।ಹೂವಿನಲಿ ಸರ್ವಾಂಗಶೃಂಗಾರದ ವಿಲಾಸದಲಿ ॥ ಆವಳಿವಳೊ
ರ್ವಶಿಯೊ ರಂಭೆಯೊ । ದೇವವಧುಗಳ ಸುಳಿವೊ ತಾನೆನ । ಲಾವಚೆಲುವಿಕೆ ತಿವತಿವಾಯೆಂದರಸ ಬೆರ
ಗಾದ ॥೧೧॥ ತಾಗಿದುವು ಶರನಿಕರ ಕಾಮನ।ಲಾಗುವೇಗವದೆಂತುಟೋ ತೆಗೆ । ಹೂಗಣೆಗಳೈದಲ್ಲ ರೋ
ಮಗಳೆಂಟುಕೋಟಿಯಲಿ ॥ ತೂಗಿ ನೆಟ್ಟವು ಕಣೆಗಳೆಂಬವೊ । ಲಾಗರುವನಳುಕಿದನು ಪ್ರಜ್ಞಾ । ಸಾಗ
ರಂಗಳುಮಧ್ಯಕಟಿಜಾನ್ವಂಘ್ರಿಮಿತವಾಯ್ತು ॥೧೨॥ ಮರೆದು ಹಿಂದೆಲ್ಲವನು ಕುಂತಿಯ । ನರಿಯಲೀ
ಯದೆ ಮೆಲ್ಲಮೆಲ್ಲನೆ । ತುರುಗಿದೆಳಲತೆ ವನದೊಳಾಡುವ ವಧುವ ಸಾರಿದನು ॥ ಸೆರಗ ಹಿಡಿದರೆ ಬೇಡ
ಬೇಡೆಂ । ದೆರಗಿದಳು ಚರಣದಲಿ ತರುಣಿಯ । ತುರುಬ ಹಿಡಿದೆತ್ತಿದನು ಹೆಣಗದರೊಡನೆಜೋಂಪಿ
ಸಿದ ॥೧೩॥ ಕೊಂದೆಲಾ ಕಡುಪಾಪಿ ಮರೆದಾ । ಹಿಂದೆ ಮಾಡಿದಕೃತ್ಯವನು ಮುನಿ । ಯೆಂದನುಡಿ
ಹೊಳ್ಳಹುದೆ ಸುಡು ಮರ್ವಿಷಯಕೆಳಸಿದೆಲಾ ॥ ಬೆಂದುದೇ ನಿನ್ನರಿಪುಧೈರ್ಯವ । ನಿಂದು ನೀಗಿದೆಯ
ಕಟ ನಿನ್ನಯ । ನಂದನರಿಗಾರುಂಟೆನುತ ಹೆಣಗಿದಳು ಲಲಿತಾಂಗಿ ॥೧೪॥ ಕೊಂಬುದೇ ಬಯಲರಿತ
ಗಿರಿತದ । ಡೊಂಬಿನಾಗಮನೀತಿಗೀತಿಯ । ಶಂಬರಾರಿಯ ಸಬಳವಲ್ಲಾ ಬೆಂಗೆಮೂಡಿದುದು ॥ ಬೆಂಬಿ
ಡದೆ ಮರಳಿದೊಡೆ ಮರುಮೊನೆ। ಗೊಂಬುದೆಂಬವೊಲವನಿಪತಿಯೊ । ತ್ತಂಬರದಿ ಹಿಡಿದಬಲೆಯನು
ಕೂಡಿದನು ಕಳವಳಿಸಿ ॥೧೫॥ ಆಸುಖದ ಜೋಂಪಿನಲಿ ಮೈಮರೆ । ದೋಸರಿಸಿದುದು ವದನಕಂಗಳು ।
ಪೈಸರಿಸಿದವು ತಕ್ಕೆ ಸಡಿಲಿತು ದೇಹ ಭಾರಿಸಿತು ॥ ಸೂಸಿದುದು ನಿಟ್ಟುಸಿರು ರಾಣೀ । ವಾಸದುರದಲಿ
ಕದಪನಿಟ್ಟು ಮ । ಹೀಶನೊರಗಿದಹದನ ಕಂಡಳು ಕಾಂತೆ ಭೀತಿಯಲಿ ॥೧೬॥ ಆಕಟ ಪಾಂಡುಮಹೀಶ

ವಿಷಕನ್ನಿಕೆಯನೆನ್ನನುಮುಟ್ಟಿದ್ದೆ ಬೇ। ಡಕಟ ಕೆಡಿಸದಿರೆನ್ನ ನೇತ್ರಾನಲಯೆನೆ ಮಹೀಪನ ॥ ಪ್ರಕಟ ಕುರು
ಕುಲತಿಲಕರೀಬಾ। ಲಕರ ನಾರಿಗೆ ಕೊಟ್ಟೆ ತನ್ನೊಡ। ನಕಟ ಮುನಿಪ್ರ ಮಾತಿನಾವೆಂದೊರಲಿದಳು
ಮಾದ್ರಿ ॥೧೭॥ ಏನಿದೆತ್ತಣ ರಭಸ ಮಾದ್ರೀ। ಮಾನಿನಿಯೊ ಹಾ ರಾಯ ಸಾವಿಡೆ। ಹಾನಿ ಹಿರಿದುಂ
ಟುವೆನಂಗಸ್ಫುರಿತ ಶಕುನದಲಿ ॥ ಏನು ಮಾರಿಯೊ ಶಿವಾಶಿವಾ ಯೆನು। ತಾನಿತಂಬಿನಿ ಗಾಢಗತಿಯಲಿ॥
ಕಾನನದೊಳೈತಂದಳಕ್ಕೆಯ ಸರದ ಒಳಿವಿಡಿದು ॥೧೮॥ ಕಂಡಳವರುಬ್ಬರನು ಧೊಪ್ಪನೆ। ದಿಂಡುಗೆಡೆದಳು
ಮೂರ್ಛೆಯಲಿ ಮರೆ। ಗೊಂಡುದೆಚ್ಚರು ಮಾದ್ರಿ ಮಿಗೆ ಹಲುಬಿದಳು ಗೋಳಿಡುತ ॥ ಚಂಡಿಕೆಗಳ
ಲ್ಲಾಡೆ ಹುದುರು। ಪಾಂಡುನಂದನರೈವರೀತನ। ಕಂಡು ಹಾಯೆಂದೊರಲಿ ಹೊರಳಿದರವನಿಪನಸೋ
ಲೆ ॥೧೯॥ ಬೊಪ್ಪ ದೇಶಿಗರಾದೆವೈ ವಿಧಿ। ತಪ್ಪಿಸಿತಲಾ ನಮ್ಮ ಭಾಗ್ಯವ। ನೊಪ್ಪಿಸಿದೆ ನೀನಾರಿಗೆ
ಮ್ಮನು ಪೂರ್ವಕಾಲದಲಿ ॥ ಮುಪ್ಪಿನಲಿ ನಿಮಗೀಯವಸ್ಥೆಯ। ದೊಪ್ಪುವುದೆ ಹೇರಡವಿಯಲಿ ಮಲ।
ಗಿಪ್ಪುದೇಕೆಂದೊರಲಿ ಮರುಗಿದರಾ ಕುಮಾರಕರು ॥೨೦॥ ಕೇಳಿ ಹರಿತಂದುದು ಮುನಿವ್ರಜ। ವೇಳಿಗೆಯ
ಕಡುಶೋಕರಸದ ಚ। ಡಾಳವನು ನಿಲಿಸಿದರು ಸಂತೈಸಿಯೆ ಕುಮಾರಕರ ॥ ಆಲಿಸಿದಳಾ ಕುಂತಿ ಮೂ
ರ್ಛೆ। ವ್ಯಾಳವಿಷದುಹುಲುಸೆ ಧರಣೀ। ಪಾಲಕನ ನೋಡಿದಳು ಬಿಸುಟ್ಟೆ ತನ್ನನಿಂದೆನುತ ॥೨೧॥
ಅರಸ ತನಗರುಹದೆ ಸುರಸ್ತ್ರೀ। ಯರಿಗೆ ಹೋದೈ ನಿನ್ನ ವಧುಗಳ ತುರುಬ ಕೊಯ್ಸನೆನವರ ತೊತ್ತಿರ
ಮಾಡುವೆನು ತನಗೆ ॥ ಅರಸಿ ನೀನೀಮಕ್ಕಳನು ಸಂ। ವರಿಸಿಕೊಂಡಿಹುದೆಂದು ಮಾದ್ರಿಯು। ಕರವ
ಹಿಡಿದರೆ ಕುಂತಿಗೆಂದಳು ಕಾಂತೆ ವಿನಯದಲಿ ॥೨೨॥ ಮರುಳಲಾ ನೀವಕ್ಕ ನಿಮ್ಮ। ವರಕುಮಾರರು
ನಿಮ್ಮ ಕೈಲಿಡೆ। ಧರಣಿಪತಿ ನಿಡುನಿದ್ರೆಗೈದನು ನನ್ನ ತೋಳಿನಲಿ ॥ ಸುರವಧುಗಳೊಡನಿರಲಿ ನಿನ್ನಯ।
ಹಲುಬಿನೆನ್ನದು ನೋಡು ತನ್ನಯ। ಪ್ರಿಯನೀತನ ನಿನಗೆ ಕೊಡೆನೆಂದಗ್ನಿಗೆರಗಿದಳು ॥೨೩॥ ಮು
ನಿಗಳೀಕೆಯ ತಿಳುಹಿ ಮಾದ್ರಿಗೆ। ಜನಪತಿಯ ಸಹಗಮನದಲಿ ಮತ। ವೆನಿಸಿ ಶವಸಂಸ್ಕಾರವನು ವೈದಿ
ಕವಿಧಾನದಲಿ ॥ ಮುನಿಗಳೀ ಮಾಡಿದರು ಮಾದ್ರೀ। ವನಿತೆ ತನ್ನ ಕುಮಾರರುಬ್ಬರ। ತನುಜ ನೀ ಸಲ
ಹೆಂದು ಕೊಟ್ಟಳು ಧರ್ಮಜನ ಕರೆದು ॥೨೪॥ ಪತಿಯ ಸಹಗಮನದಲಿ ಮಾದ್ರೀ। ಸತಿ ಶರೀರವ ಬಿ
ಟ್ಟಳೈವರು। ಸುತರುಸಹಿತೀ ಕುಂತಿ ಮಿಂದು ಪರೇತಕೃತ್ಯವನು ॥ ಶ್ರುತಿವಿಧಾನದೊಳೆಸಗೆ ಮುನಿಸಂ।
ತತಿಗಳನು ಮುಂದಿಟ್ಟು ಮಾಡಿಸಿ। ಸುತರ ಪಾಲಿಸುತಿರ್ದಳಾ ಶತಶೃಂಗಶೈಲದಲಿ ॥೨೫॥ ಅರಸನವಗತ
ನಾದನಾನೃಪ। ನರಸಿ ಬಾಲಕಿ ಮಕ್ಕಳೈವರು। ಭರತಕುಲಜರು ನಾವು ತಪಸಿಗಳಿರ್ಪುದಾರಣ್ಯ ॥ ಅರಿ
ಗಳೀ ರಾಕ್ಷಸರು ನಾವಿ। ನ್ನಿರಿಸುವುದು ಮತವಲ್ಲ ಹಸ್ತಿನ। ಪುರದೊಳೊಪ್ಪಿಸಿ ಬಹುದು ಮತವೆಂ
ದುದು ಮುನಿಸ್ತೋಮ ॥೨೬॥ ಎಂದು ಕುಂತೀದೇವಿಸಹಿತಾ। ನಂದನರನೈವರನು ಮುನಿಗಳು। ತಂ
ದುಭಪುರಗಾಗಿ ಭೀಷ್ಮಾದಿಗಳಿಗೀಹದನ ॥ ಮುಂದೆ ಸೂಚಿಸಲುತ್ಸವದಲಿ ಐ। ತಂದರನಿಬರು ಶು
ಭಮುಹೂರ್ತದೊ। ಳಂದು ನಗರಿಯ ಹೊಗಿಸಿದನು ಪರಿತೋಷದಲಿ ಭೀಷ್ಮ ॥೨೭॥ ಇವರ ಜನನ
ಕ್ರಮವನಾಪಾಂ। ಡುವಿನ ವಿಕ್ರಮವನು ತಪೋಧನ। ನಿವಹ ಕೊಂಡಾಡಿದುದು ಬಳಿಕಿನ ಮರಣಸಂ
ಗತಿಯ ॥ ಅವನಿಪನ ಸಂಸ್ಕಾರ ಮಾದ್ರೀ। ಯುವತಿಸಹಗಮನೋರ್ಧ್ವದೈಹಿಕ। ವಿವಿಧಕೃತ್ಯವನೀ
ಪ್ರಪಂಚವನವರಿಗರುಹಿದರು ॥೨೮॥ ಮುನಿಗಳಾಕ್ಷಣ ಮರಳಿದರು ತ। ಜ್ಜನಪವೃತ್ತಾಂತವನು ವಿವ

ರಿಸೆ । ಜನಜನಿತ ಬಳಿಕುಚ್ಚಿ ಹರಿದುದು ಶೋಕರಸಜಲಧಿ ॥ ಜನಪಧೃತರಾಷ್ಟ್ರಾದಿಬಾಂಧವ । ಜನ ಪುನಃಸಂಸ್ಕಾರದಲಿ ಭೂ । ಪನನು ದಹಿಸಿದರೂರ್ಧ್ವದೈಹಿಕವಾಯ್ತು ಮಗುಳಲ್ಲಿ ॥೨೯॥ ಅರಸ ಕೇಳೈ ಭೀಷ್ಮಧೃತರಾ । ಷ್ಟ್ರರನು ಬೋಧಿಸಿ ಬಹಳಶೋಕ । ಜ್ವರಕೆ ಬಿಡುಗಡೆಮಾಡಿದನು ಪಾರಾಶರವ್ರತಿಪ ॥ ಕರೆದು ಯೋಜನಗಂಧಿಯನು ನೀ । ವಿರಲು ಬೇಡೌ ತಾಯೆ ನಿಮ್ಮ । ಭರತವಂಶದೊಳೊಗೆದ ಕಿಚ್ಚುರುಹುವುದು ನೃಪಕುಲವ ॥೩೦॥ ಹೇಳಬಾರದು ಮುಂದಣಾಪದು । ಕಾಲಪಿಂಡಿಗೆ ನಾಳೆ ನಾಳೆಗೆ । ನಾಳೆಬಿಟ್ಟತು ವರ್ಣಧರ್ಮಾಶ್ರಮದ ನೆಲೆಪೋಯ್ತು ॥ ಕಾಲಿಸಿಷವ್ರ ಕೌರವಕ್ಷಿತಿ । ಪಾಲ ಪಾಂಡುಕುಮಾರರಲಿ ಕೈ । ಮೇಳವಿಸುವುದು ತಾಯೆ ಬಿಜಯಂಗೈಯಿ ನೀವೆಂದ ॥೩೧॥ ಎನಲು ಯೋಜನಗಂಧಿ ನಿಜಸಂ । ಪನನ ನುಡಿಯನೇದಿಸಿದ್ಧಪಿ । ದೆನುತೆ ಸೊಸೆಯರುಸಹಿತ ನಡೆದಳು ವರತಪೋವನಕೆ ॥ ಮುನಿಪನತ್ತಲು ಬದುಕಾಸಂ । ದನಕ ಮರಳಿದನಿತ್ತ ಗಂಗಾ । ತನುಜ ಸಲಹಿದನಖಿಳಪಾಂಡವಕೌರವವ್ರಜವ ॥೩೨॥ ... ... ...

ಅಂತು ಸಂಧಿ ೫ಕ್ಕೆ ಪದ ೧೮೪ ಕ್ಕಂ ಮಂಗಳಮಸ್ತು.

---

## ಆರನೆಯ ಸಂಧಿ

ಸೂಚನೆ: ಭೀಮದುರ್ಯೋಧನರ ಸೆಣಸಿನ ತಾಮಸಿಕೆ ಹೆಚ್ಚಿದುದು ಕದನೋ ।
ದ್ದಾಮರಸ್ತ್ರಾಭ್ಯಾಸವನು ಮಾಡಿದರು ದ್ರೋಣನಲಿ ॥

---

ಕೇಳು ಜನಮೇಜಯಮಹೀಪತಿ । ಬಾಲಕರು ನೂರಾರು ಹಿರಿದರು । ಬಾಳಕೇಳೀವ್ಯಸನಿಗಳು ಹೊರವಳಯದಲಿ ಪುರದ ॥ ಆಳಿನೇಳಕೆ ಹಿಡಿಗವಡೆ ಗುಳಿ । ಯಾಳು ಚೆಂಡಿನಹೊಣಕೆ ಚಿಣಿಕೋ । ಲಾಳುಗೊತ್ತಿನಪಂಡೆಯೆನೆ ನಾನಾವಿನೋದದಲಿ ॥೧॥ ಗುಡುಗು ಗುತ್ತಿನಚಂಡು ಗುಮ್ಮನ । ಬಡಿವ ಕತ್ತಲೆಗುಮ್ಮಗಂಜುಗೆ । ಗಡಣೆ ಕಣ್ಣುಮುಚ್ಚಸಗವಲ ಹುಲಿಹುಲಿಗೆ ನಿಡುಗವಣ್ಣೆ ॥ ಕಡಸು ಕುಟ್ಟಿಗನಾದಿಯಾದವ । ಗಡಪಿನೋದದಲಾಡಿದರು ವಂ । ಗಡದಲೈವರು ನೂರ್ವರವರತ್ತಂಡಪೊಂದಾಗ ॥೨॥ ಅವರೊಳೊಬ್ಬನೆ ಭೀಮನನಿಬರ । ಸದೆವ ತಾನೋತೊಡವಿಭಾಡಿಸಿ । ಕೆದರುವನು ಗೆದ್ದೋಡಿದೊಡೆ ಬೆಂಬತ್ತಿ ಹಿಡಿದೆಳೆದು ॥ ಸದೆದು ಬಿಡುವನು ಮುನ್ನ ಭೀಷ್ಮಂ । ಗೊದರಿ ದೂರುವನನಿಬರನು ವೇ । ಳದಲಿ ಮಗುಳೊಂದಾಗಿ ಸಂಗಡವಹರು ಸೂರುಳಿದು ॥೩॥ ಕೆಣಕಿ ದುರ್ಯೋಧನನ ನೆತ್ತಿಯ । ನಣೆದುಹಾಯ್ವನು ನಿಮ್ಮ ನೂರ್ವರ । ಬಣಗುಗಳಿಗೆಡಗಾಲ ತೊಡರಿದೆ ಬನ್ನಿ ನೀವೆನುತ ॥ ಗುಣವ ನುಡಿದೊಂದಾಗಿ ಕೆಳೆಗೊಂ । ಡಣಕಿಸದೆ ಮೈಮರಸಿ ಮರೆಯಲಿ । ಹಣಿದು ಬಿಡುವರು ಭೀಮನನು ದುರ್ಯೋಧನಾದಿಗಳು ॥೪॥ ಹೇಳುವರು ಯಮಜಂಗೆ ನಿನ್ನವ । ನೂಳಿಗವ ನಿಲಿಸೆಂದು ಪಾರ್ಥಗೆ ।

ಹೇಳುವರು ಬಳಿಕವರು ಭೀಮನ ಕರೆದು ಗಾರುಡಿಸಿ ॥ ಕೇಳುವನು ಸೈಯೆಂದು ತನ್ನಯ । ಸೋಲ
ದಲಿ ವೈರಿಯೊಪ್ಪುವನು ಪೇ । ಲಾಳನೇರಿಸಿ ಹರಿದು ನದೆವನು ಗುತ್ತಿನಲಿ ಕೆಡಹಿ ॥೫॥ ಅಳುತ ಧೃತ
ರಾಷ್ಟ್ರಂಗೆ ಭೀಮನು । ಕಳೆದಪಲುಗಳನೊಡೆದಪೊಳಕಾ । ಲ್ಗಳನು ತೋರಿಸಿ ಮೊರೆವರವರು ದು
ಯೋಧನಾದಿಗಳು ॥ ಮುಳುಮೊನೆಗಳಲಿ ಗೀರಿ ನೆತ್ತರ । ಗಳೆದು ಹುಡಿಯಲಿ ಹೊರಳಿ ತಾ ಬಂ ।
ದಳುತ ಧೃತರಾಷ್ಟ್ರಂಗೆ ಭೀಷ್ಮಗೆ ದೂರುವನು ಭೀಮ ॥೬॥ ಆಕೆವಾಳರು ಭೀಷ್ಮವಿದುರರು । ನಾಕು
ನಿಮ್ಮೊಳು ನೂರುಸಾಲ್ವರು । ಆಕುಮಾರರು ಜೇರೆ ನೀನಿಹುದೊಬ್ಬ ಜೇರೆಂದು ॥ ನೂಕಿ ನೂರಿಳು
ಮಾಡಿ ಬಿಟ್ಟೊಡೆ । ನಾಕಬಾವದೊಳಿಹರು ಮರುಗನೆ । ವಾಕುಮಾರರು ತಮ್ಮೊಳೊಂದಾಗಿಹರು ಗೆಳೆ
ಯಾಗಿ ॥೭॥ ಬಂದುದಿನ ನೂರಾರುಮಾನಿಸ । ರೊಂದುಗೆಳೆಯಲಿ ಪುರದ ಹೊರಗಿನ । ದೊಂದುತಾ
ವುದವರ್ಣಕೋಟಿಯೆನಿಪ್ಪ ವಡರೊಳಗೆ ॥ ಬಂದು ನಿಂದರು ಕೋಲ ಬಿಸುಟಿ । ವೃಂದ ಹತ್ತಿತು
ಮರನನಿವನ್ಯ । ತಂದು ತಂಡೆಡೆಯಾಡಿ ಬಳಲಿದು ನೋಡಿದನು ಭೀಮ ॥೮॥ ಮರನ ಹಿಡಿದಲುಗಿದೊ
ಡೆಬಿದ್ದರು । ಭರತಕುಲಪಾಲಕರು ನೂರ್ವ । ರರು ಮಹಾಪಾತದಲಿ ತರುಫಲನಿಕರ ಬೀಳ್ವಂತೆ ॥ ಶಿರ
ವೊಡೆದು ಬೆನ್ನೊಡೆದು ಪೊಳಕಾ । ಲ್ಮುರಿದು ಕೈಗಳು ಮುರಿದು ನೆತ್ತರು । ಸುರಿದು ಧೃತರಾಷ್ಟ್ರಂಗೆ
ಸೂರಿದರನಿಬರುಹದನ ॥೯॥ ದುರುಳನವನೊವನಾಪಜೇಷಂ । ದರಸನನುಬಿರನಂತಪ್ಪಿಸ್ಟನು । ಬಿರಿದು
ಹೆಚ್ಚಿತು ಭೀಮದುಯೋಧನಂಗತಿಸ್ಥಿರ ॥ ಮರಳಿತಾವೊಂದಾಗುತಾತನ । ಕರೆಸಿ ವಿವಿಧಕ್ರೀಡೆಯಲಿ
ಪ್ಪಿ । ಮರೆಸಿ ಭೀಮನ ಕಟ್ಟಿಹಾಯ್ಕಿದರೊಂದುಮಡುವಿನಲಿ ॥೧೦॥ ಹಾಸವನು ಹರಿದೆದ್ದು ಬಂದತಿ ।
ರೋಷ ನಡೆದನು ಮತ್ತೆ ತಮ್ಮೊಳು । ಭಾಷೆಗಳಲೊಂದಾಗಿ ಕೂಡಿದರೊಂದುದಿವಸದಲಿ ॥ ಆಸಿತಗ
ಳ್ಳುಮರೆದಕೊತ್ತು ವ । ಹಾಸುರದ ಫಣಿಗಳಲಿ ಕಚ್ಚಿಸಿ । ಗಾಸಿಮಾಡಲು ಬದುಕಿ ಬೇಸರನಡಗ
ದಿಗೆ ಭೀಮ ॥೧೧॥ ಅರಸ ಕೇಳಾಯುಷ್ಯವುಳ್ಳೊಡೆ । ಹರವರುದ್ಯಾಗಳು ನಂ । ಹರಿಸಲರಿಯರು
ಬರಿದೆ ದೈವಂಬಿಡುವುದೇಲೋಕ ॥ ಭರತವಂಶದ ಬಾಳರರುನಿ । ಪ್ಕರನುಗಳು ಭೀಮಂಗೆ ಮಾಡಿದ ।
ಹುರಿಯನಾಹುರಿ ಹರಿದಹರಿಯನು ಮತ್ತೆ ಕಾಳೆಂದ ॥೧೨॥ ಕಾಳಕೂಟಹಲಾಹಲವ ಕಾಕೋಲವಾರದ
ವತ್ಸನಾಭಕ । ರಾಳಸೌರಾಷ್ಟ್ರಕವಶೌಕ್ಲಿಕನುಪ್ರದೀಪಕವ ॥ ಹೇಳಲರಿದೆನಿಪಂತಹುವಿಷವನು । ಮೇಳ
ವಿಸಿ ಬಳಿಕುಳಿದವಿಭುರವಿ । ಶಾಲವಸ್ತುಗಳಿಂದ ಕಜ್ಜಾಯಗಳ ಮಾಡಿಸಿದ ॥೧೩॥ ಬಿಟ್ಟಿಸಿದೊಡೆವಸೀ
ವೃವಂಗೈ । ಮುಟ್ಟಿದೊಡೆಹುಗುಳುಹುದು ಬಳಿಕವ । ನಿಷ್ಟಕೈಕರಣದ ಸುವಾರದವಿದ್ಯೆಯೇನರಿದೋ ॥
ಕೊಟ್ಟರೀತಂಗಲ್ಲವನು ಜಗ । ಜಟ್ಟಿ ಹಾಯಿಕಿಕೊಂಡು ನುಣ್ಣನೆ । ಬಿಟ್ಟುಮುರಿಯಾಳದಲಿ ನದೆವನು
ಮತ್ತೆಕೌರವರಾ ॥೧೪॥ ಮೊಡುವಿನಲಿ ಹಾಯ್ಕಿದರೆ ಹಾವಿನ । ಹೆಡೆಯ ಕೊಂಡೂರಿದರೆ ಬಲುವಿಷ ।
ದಡಗೆಗಳವಲಿಸಿದರೆ ಬಲ್ಲಿಂದದ ವಿಕಾರದಲಿ ॥ ಕೆಡಹಲನುಮಾಡಿದರೆ ನೂರ್ವರ । ಕಡುಹು ಶಾಕಿನಿಯ
ರಿಗೆ ರಕುತವ । ಕುಡಿಸಿದಲ್ಲದೆ ಮುನ್ನ ಸಾವನೆ ಕೇಳಿ ನೀವೆಂದ ॥೧೫॥ ಬಳಗೆಬೆಳೆದುದು ವೈರಪ್ರಹಿ
ಕಡೆ । ಗಳಕೆಹಾಯ್ದುದು ಜನನಿಜನಕರ । ಬಲುನುಡಿಗಳಲಿ ನೂರ್ವರಿರ್ದರು ಶಕುನಿವಿಹತವಿದು ॥
ಬಲುಹುಗುಂದದೆ ಭೀಷ್ಮವಿದುರರ । ಬಳಕೆಯಲಿ ತಾವಡಗಿ ಗುಣದಲಿ । ಕೆಲನ ಮೆಚ್ಚಿಸಿ ನಡೆದರವರು
ಯುಧಿಷ್ಠಿರಾದಿಗಳು ॥೧೬॥ ಆಟದಲಿ ತೊಡಗಿದರು ಮೊದಲಲಿ । ತೋಟಿಯನು ಸಾಕಿತಗಳ ಚಾ ।

ಲಾಟವನು ನಿಲಿಸುವೆನು ಶಸ್ತ್ರಾಸ್ತ್ರಪ್ರಸಂಗದಲಿ ॥ ಆಟವಿಕರುವದಿರಲಿ ಬಲಿದೊಳ । ತೋಟಿ ಬರಿದೇ ಬಿಡದು ಮೃತ್ಯುವಿನೂಟ ಮುಂದಿಹುದೆಂದು ಕರಿಕರಿಗುಂದಿದನು ಭೀಷ್ಮ ॥೧೭॥ ಧರಣಿಪತಿ ಚಿತ್ತೈಸು ಗೌತಮ । ವರಮುನಿಗೆ ಜನಿಸಿದಶರದ್ವನು । ಪರಮಋಷಿಯಾತನು ತಪೋಯುತನಾಗಿ ಧನುಸಹಿತ ॥ ಇರುತ ಕಂಡನು ದೈವಗತಿಯಲಿ । ಸುರವಧುವಸಾಕ್ಷಣಕೆ ಕಾಮ । ಜ್ವರಿತನಾದನು ಚಲಿಸಿತಾತನ ವೀರ್ಯವವನಿಯಲಿ ॥೧೮॥ ಅದು ಶರಸ್ತಂಬದಲಿ ನೆಲೆಯಾ । ದುದು ಮುನಿಚ್ಯುತವೀರ್ಯ ಮುನಿಸುತ। ರುದಿಸಿದರು ಶಂತನುಮಹೀಪತಿ ಕಂಡು ಕೃಪೆಯಿಂದ ॥ ಸದನದಲಿ ತನ್ಮಿಥುನವನು ಸಲ । ಹಿದನು ಕೃಪ ಕೃಪೆಯೆಂಬಹೆಸರಾ । ದುದು ಮಹಾಬಲನಾದನಾತನ ಕರೆಸಿದನು ಭೀಷ್ಮ ॥೧೯॥ ಆಕೃಪಾಚಾರ್ಯನವದೆಸೆಯಿಂ । ದೀಕುಮಾರರು ನಿಖಿಳತರ್ಕ । ವ್ಯಾಕರಣವೊದಲೆನೆ ಚತುರ್ದಶವಿದ್ಯೆಗಳನರಿದು ॥ ಲೋಕವೈದಿಕವಮುಖ್ಯಸಕಲಕ । ಲಾಕುಶಲರಾದರು ಧನುಃಪ್ರವಿ । ವೇಕನಿಪುಣರಸರಸುತಿದ್ದನು ಮತ್ತೆ ಗಾಂಗೇಯನು ॥೨೦॥ ಮುನಿಭರದ್ವಾಜಾಖ್ಯನಿರ್ದನು । ಘನತಪೋನಿಷ್ಠೆಯಲಿ ದಿವಿಜಾಂ । ಗನೆಯ ಕಂಡನು ಗಾಯವಡೆದನು ಮದನನೆಸುಗೆಯಲಿ ॥ ತನುಪರಿಚ್ಯುತವೀರ್ಯವನು ಸ । ತ್ಕನಕಕಲಶದೊಳಿರಿಸಲಲ್ಲಿಯೆ । ಜನಿಸಿದನು ದ್ರೋಣಾಭಿಧಾನನು ಮುನಿಯದೆಸೆಯಿಂದ ॥೨೧॥ ದ್ರೋಣಕಲಶದೊಳಾದದೆಸೆಯಿಂ । ದ್ರೋಣನಾದನು ಬಳಿಕ ಮುನಿಯಾ । ದ್ರೋಣಗುಪನಯನಾದಿವಿಪ್ರಕ್ರಿಯೆಗಳನು ರಚಿಸಿ ॥ ದ್ರೋಣನೊಡನೋದಿಸಿ ನೃಪಾಲ । ಶ್ರೇಣಿಯನು ಶಸ್ತ್ರಾಸ್ತ್ರಕಳೆಯಲಿ । ಜಾಣರನು ಮಾಡಿದನು ಭಾರದ್ವಾಜಮುನಿಯಂದು ॥೨೨॥ ಕೃಪನನುಜೆಯನು ತಂದು ದ್ರೋಣಂ। ಗುಪಯಮವ ಮಾಡಿದನು ಹರ್ಷದಿ । ದ್ರುಪದ ಬಂದಿದ್ರೋಣನೊಡನರಿದನು ಧನುಶ್ರುತಿಯ ॥ ಕೃಪೆಯಲಿದ್ರೋಣಂಗೆ ಜನಿಸಿದ । ನಪರಶಂಕರರೂಪನಾಹವ । ನಿಪುಣನಶ್ವತ್ಥಾಮಭಾರದ್ವಾಜಗೋತ್ರದಲಿ ॥೨೩॥ ತಂದೆಯೊಳ್ಳುಮಮಾಡಿವರು ನೃಪ । ವೃಂದಸಹಿತಿದ್ರೋಣದ್ರುಪದರು । ನಿಂದನಾದ್ರುಪದಾಖ್ಯನಯ್ಯನು ಬವಿಜನಗರಿಯಲಿ ॥ ಅಂದುಸಖ್ಯಪ್ರೀತಿಯನು ಸಾ । ನಂದದೊಳ್ದ್ರೋಣಂಗೆ ವಿರಚಿಸಿ । ಬಂದು ನಿಜರಾಜ್ಯಾಭಿಷೇಕವ ಧರಿಸಿದನು ದ್ರುಪದ ॥೨೪॥ ಇತ್ತಲಿದ್ರೋಣನ ಪಿತನು ಸುರರತ್ತ ಸರಿದನು ಕೆಲವುದಿವಸಕೆ । ತತ್ತಪೋವನದಲ್ಲಿ ವಿಪ್ರಕ್ರಿಯೆಗಳನು ಮಾಡಿ ॥ ಹೊತ್ತದಾರಿದ್ರ್ಯದಲಿ ಮನಮರು । ಗುತ್ತ ದೇಶಾಂತರದೊಳಗೆ ತೊಳ । ಲುತ್ತ ಬಂದನು ತನ್ನ ಮಗಸಹಿತಡವಿಯಲಿ ದ್ರೋಣ ॥೨೫॥ ಪರಶುರಾಮಾಶ್ರಮಕೆ ಮುನಿಯೈ । ತರಲು ಭಾರದ್ವಾಜನನು ಸ । ತ್ಕರಿಸಿ ನುಡಿದನು ಜಾಮದಗ್ನ್ಯನು ಮಧುರವಚನದಲಿ ॥ ಧರೆಯನಿತ್ತೆನು ಬುಧರಿಗೀಯವ । ಸರದೊಳಾನಿರ್ಧನನು ನೀನೇ । ಪರಮಋಷಿಯಾತಿಥ್ಯಪೂಜೆಗಭಾಗ್ಯನಾನೆಂದ ॥೨೬॥ ದನರಹಿತ ನಾ ಹೊತ್ತಭಾರಿಯ । ಧನುವಿದೊಂದಿದೆ ದಿವ್ಯಶರವಿದೆ । ಮನಕೆ ಬಂದುದ ವರಿಸು ನೀನೆನೆ ದ್ರೋಣನಸುನಗುತ ॥ ಎನಗೆ ನಿಮ್ಮಡಿಗಳ ಕೃಪಾಲೋ । ಕನವಲೇ ಪರಿಯಾಪ್ತಿ ಲೋಕದ । ಜನಮನೋರಂಜನವೆ ಬೇಹುದು ಶರವ ಕೊಡಿಯೆಂದ ॥೨೭॥ ಇವು ಮಹಾನಿಸ್ಸೀಮತರವೈ। ಷ್ಣವವಲೇದಿವ್ಯಾಸ್ತ್ರನಿವಹವ । ನವರು ಕೊಟ್ಟರು ಕೊಂಡನುಚಿತವಿಧಾನದಲಿ ದ್ರೋಣ ॥ ಇವು ಮಹಾರಣರಂಗದಲಿ ಶಾ । ತ್ರವನಿವಾರಣವೈಸಲೆವಿಮ್ಮೇ । ವ್ಯವಹೃತಿಗೆ ತಾನೇನುಪಾಯವೆನುತ್ತ ಚಿಂತಿಸಿದ ॥೨೮॥ ಮಗನೆ ಬಲ್ಲೈ ದ್ರುಪದಭೂಪತಿಮಗುವುತನದಿಂ

ದೆಮ್ಮಸಖನೋ । ಲಗಿಸುವೆವು ನಾವಲ್ಲಿ ನೆಲಹನೆ ಮಿತ್ರಭಾವದಲಿ ॥ ಹೋಗುವ ನಡೆ ಪಾಂಚಾಲರಾ
ಯನ । ನಗರಿಯನು ನಾವೆಂದು ಮುನಿಪ್ರಾ । ಋಷಿಗಳ ಮಣಿಯನು ಬೀಳುಕೊಂಡನು ರೇಣುಕಾಸುತನ
॥೨೯॥ ಬಂದನೀತನು ದ್ರುಪದರಾಯನ । ಮಂದಿರಕೆಯಾ ಬಾಗಿಲವನೊಡನೆಂದನೆಲವೋ ನಾವು ನಿಮ್ಮ
ರಸಂಗೆ ಪೂರ್ವದಲಿ ॥ ಸಂದಮಿತ್ರರು ದ್ರೋಣಮುನಿಪತಿ । ಯೆಂದು ನಮ್ಮಭಿಧಾನ ನೀ ಹೇ । ಳೆಂದ
ಕಳುಹಲು ಬಂದು ಬಿನ್ನಹಮಾಡಿದನು ಹದನ ॥೩೦॥ ಸಿರಿಯ ಮದವಧಿಕಪ್ರತಾಪೋ । ತ್ಕರದ ಮದ
ಮೊದಲಾದಮದಸಂ । ಚರಣರುಜದಲಿ ಮಾಸಿಕ್ರೀತನ ಮನದ ಮದವರ್ಗ ॥ ತಿರಿವಹಾರುವರೊಡನೆ
ಭೂಮೀ । ಶ್ವರರಿಗೆತ್ತಣಮೈತ್ರಿ ಹೋಗೆಲೆ । ಕರೆಯಬೇಡೆನೆ ಬಂದು ಬಾಗಿಲವ ನಿವಾರಿಸಿದ ॥೩೧॥
ಮರೆದನೇ ತಪ್ಪೇನು ನಾ ಕಂ । ಡರುಹಿ ಮರಳುವೆವೈಸಲೇ ಯೆನು । ತುರುಬಿದೊಡೆತರುಬಿದರು ಕಂಬಿ
ಯನಿಕ್ಕಿ ಬಾಗಿಲಲಿ ॥ ಒರೆಯನುಗಳಿಚಿ ಖಡ್ಗದಲಿ ಖಡ । ದರಿದನಿಕ್ಕೆಲದವರನೋಲಗ । ಕುರವಣಿಸಿದ
ನು ಮುಂದೆ ನಿಂದನು ದ್ರುಪದಭೂಪತಿಯಾ ॥೩೨॥ ಏನೆಲವೊ ಪಾಂಚಾಲ ಚಿಕ್ಕಂದಾನು ನೀನೊಂದಾ
ಗಿ ತಂದೆಯೊ । ಳೇನನಂದೆವು ಮರೆದು ಕಳೆದಾ ಹಾಮಹಾದೇವಾ ॥ ಏನುಬಂದಿರಿ ಯೆಂಬಗುಣ
ವಚ । ನಾನುರಾಗವು ನಾಲದೇ ಧನ । ವೇನುಫಲ ಕಕ್ಕುಲಿತೆಯೆಮಗಿಲ್ಲೆಂದನಾದ್ರೋಣ ॥೩೩॥ ಸೂರಿ
ಗಳಿಗತಿಮೂರ್ಖರಿಗೆ ಗಂ । ಭೀರರಿಗೆ ಭಂಡರಿಗೆ ವೇದಾ । ಚಾರಸಂಯುಕ್ತರಿಗನಾಚಾರಪ್ರಸಕ್ತರಿಗೆ ॥
ಧೀರರಿಗೆ ಹಂದೆಗಳಿಗೆತ್ತಣ । ಸೇರುವೆಗಳೈ ಭೂಪರಿಗೆ ಬಡ । ಹಾರುವರಿಗೆತ್ತಣದು ಸಖ್ಯತನವೆಂದನಾದ್ರುಪ
ದ ॥೩೪॥ ಎಲವೊ ನಿನ್ನಾಸ್ಥಾನಸಹಿತೀ ಪೊಳಲ ಸುಡುವೆನು ನಿನ್ನ ಸೀಳಿದು । ಬಲಿಯಕೊಡುವೆನು ಭೂತ
ಗಣಕಿದರಲ್ಲ ನೀನೆನಗೆ ॥ ಕಲಿತವಿದ್ಯೆಯ ಕೋಲಮಕ್ಕಳ । ಕಳುಹಿ ಕಟ್ಟಿಸಿ ವಾಮಪಾದದಿ । ತಲೆಯನೊದೆವೆ
ನು ಮರೆಯದಿರು ನೀನೆಂದನಾದ್ರೋಣ ॥೩೫॥ ಎಂದು ಭಾಷೆಯ ಮಾಡಿ ತನ್ನಯ । ನಂದನನ ನೊಡ
ಗೊಂಡು ಜನಪದ । ವೃಂದಪಹಲವನು ಕಳೆದು ಬಂದನು ಹಸ್ತಿನಾಪುರಿಗೆ ॥ ಅಂದು ಸಕಲಕುಮಾರಕರು
ನಲ । ವಿಂದ ನಗರಿಯ ಹೊರಗೆ ಗುರಿಗಳ । ಮುಂದುವರಿದೆಸುತಿರಲು ಮುದದಲಿ ಕಂಡನಾದ್ರೋಣ ॥೩೬॥
ಬೆರಸಿದನು ನೆರವಿಯನು ನೋಡು । ತ್ತಿರೆ ಯುಧಿಷ್ಠಿರನೃಪನ ಹರಳುಂ । ಗುರು ವಿಘಾತಿಯೊಳುಗಿದು ಬಿದ್ದು
ದಗಾಧಕೂಪದಲಿ ॥ ನೆರೆದು ತಡಿಯಲಿ ನಿಂದು ನೂರರು । ಮರುನಿರೀಕ್ಷಿಸಿ ಸಾಧ್ಯವಲ್ಲೆನು । ತಿರೆ ಮಗಂಗೆ
ಮುನೀಂದ್ರನೆಂದನು ಬೇಗ ತೆಗೆಯೆಂದು ॥೩೭॥ ಸರಳ ತೊಡಚಿ ತದೀಯಮಣಿಬಂ । ಧುರದ ಮು
ದ್ರಿಕೆಗೆಚ್ಚ ಹಿಳುಕಿನ । ಶಿರಕೆ ಶರವಾ ಹಿಳುಕಿನಲಿ ಕಣೆಯೆಚ್ಚ ಬಂಧದಲಿ ॥ ಸರಳಸಂದರ್ಭದಲಿ
ನಿಮಿಷಾಂ । ತರಕೆ ಫಣಿಪನ ಹೆಡೆಮಣಿಯನು । ದ್ಧರಿಸುವಂತಿರ ತೆಗೆದು ಬಿಸುಟನು ರತುನಮುದ್ರಿಕೆ
ಯ ॥೩೮॥ ಕಂಡು ಬೆರಗಾದುದು ಕುಮಾರರ । ತಂಡ ತನತನಗೈದಿ ಭೀಷ್ಮನ । ನಂಡಲೆದುದೀಮುನಿ
ಯನೀಗಲೆ ಸಂತವಿಡಿಯೆಂದು ॥ ಚಂಡಭುಜಬಲನವನ ಕಾಣಿಸಿ । ಕೊಂಡು ಕೊಟ್ಟನು ಭೀಷ್ಮನವರಿಗ ।
ಖಂಡವಿಭವವನತುಳಧನಪತಿಯಾದನಾದ್ರೋಣ ॥೩೯॥ ವರಮುಹೂರ್ತದೊಳಿವನ ನೂರರು । ವರ
ನು ಕೊಟ್ಟನು ಶಸ್ತ್ರವಿದ್ಯಾ । ಪರಿಣತರ ಮಾಡೆಂದು ದ್ರೋಣನ ಕೈಯಲಾ ಭೀಷ್ಮ ॥ ಗರುಡಿ ಕಟ್ಟಿ
ತು ನೂರು ಯೋಜನ । ವರೆಯ ವಿಸ್ತಾರದಲಿ ಸಾವಿರ । ಕುರಿಯ ಹೊಯ್ದರು ಪೂಜಿಸಿದರಾ ಚದುರ
ಚಂಡಿಕೆಯ ॥೪೦॥ ಗರುಡಿಪೂಜಾವಿಭವಸಮನಂ । ತರದಲನಿಬರು ಸಮವತೊಡಗಿದ । ರರಸುಮಕ್ಕಳು

ಕೇಳಿದರು ನಾನಾದಿಗಂತದಲಿ ॥ ಬರುತಲಿದ್ದರು ಕೂಡೆ ಹಸ್ತಿನ । ಪುರಿಗೆ ವಿದ್ಯಾರ್ಥಿಗಳು ಪಾರ್ಥಿವ । ವರಕುಮಾರರು ಬಂದು ಕಂಡರು ಶಸ್ತ್ರಪಂಡಿತನಾ ॥೪೧॥ ರಾಯಬಲ್ಲಿರೆ ಮುನ್ನ ಶಿಶುವನು । ತಾಯಿ ಬಿಸುಟಳು ಗಂಗೆಯಲಿ ರಾ । ಧೇಯನಾದನು ರಾಧೆಯೆಂಬವಳೊಲಿದು ಸಾಕಿದೊಡೆ ॥ ಆಯತಾಕ್ಷನು ಪರಶುರಾಮನೊ । ಳಾಯುಧದ ಶ್ರಮಗಲಿತು ಬಳಿಕದು । ವಾಯುವಾದೊಡೆ ಬಂದನಾಗಜಪುರಿಗೆ ಕಲಿಕರ್ಣ ॥೪೨॥ ಬಂದ ಹಸ್ತಿನಪುರಿಗೆ ರಾಧಾ । ನಂದನನು ದುರ್ಯೋಧನನನೈತಂದು ಕಂಡನು ಕೌರವೇಶ್ವರನಿವರ ಕಾಣಿಸಿದ ॥ ಅಂದುಮೊದಲಾಗವರ ಸಖ್ಯಕೆ । ಸಂದ ಕಾಣೆನು ಕರ್ಣ ಕುರುಪತಿ । ಗೊಂದೆಜೀವನವೊಂದೆಮನಮತವೊಂದೆ ಕೇಳೆಂದ ॥೪೩॥ ಬೇಟೆ ಕರ್ಣನಕೂಡೆ ಹಗಲಿರುಳಾಟ ಕರ್ಣನಕೂಡೆ ಷಡುರಸ । ದೂಟ ಕರ್ಣನಕೂಡೆ ಶಸ್ತ್ರಾಭ್ಯಾಸವವಗೂಡೆ ॥ ತೋಟಿಮನವಲಿ ನಗೆಯಮಧುರದ । ನೋಟಕಣ್ಣಿನೊಳುಳಿದವರ ಕೂ । ಡಾಟಗಳು ತಾವಿಬ್ಬರೊಂದೆನಿಸಿದರು ಜಗವರಿಯೆ ॥೪೪॥ ಸುರಗಿಸಬಳಕಠಾರಿಯುಬ್ಬಣ । ಹರಿಗೆ ಹಿರಿಯುಬ್ಬಣವಡಾಯುಧ । ಪರಿಘಚಕ್ರಮುಸುಂಡಿತೋಮರಭಿಂಡಿವಾಳಚಯ ॥ ಪರಶುಕಕ್ಕಡೆಮುಸಲಹಲವು । ದ್ವಿರಥನುಪರ್ವಂಪಾದಿಶಸ್ತ್ರೋ । ತ್ಕರದಲನಿಬರು ಕುಶಲರಾದರು ಮುನಿಯಗರಡಿಯಲಿ ॥೪೫॥ ಜನಪ ಕೇಳ್ಭೀಮದುರ್ಯೋ । ಧನರು ಗದೆಯಲಿ ಮಿಗಿಲು ಕರ್ಣಾ । ರ್ಜುನರು ಧನುವಿನಲಧಿಕರಾದರು ನೃಪಕುಮಾರರಲಿ ॥ ತನತನಕೆ ಸರ್ವಾಯುಧಂಗಳ । ಲನಿಬರರಿದರು ಕೂಡೆ ಗುರುವಿನ । ಮನಕೆ ಹತ್ತಿಯವಾದನರ್ಜುನನಸ್ತ್ರಶಿಕ್ಷೆಯಲಿ ॥

ಅಂತು ಸಂಧಿ ೬ಕ್ಕೆ ಪದ ೨೪೦ಕ್ಕಂ ಮಂಗಳಮಸ್ತು.

---

## ಏಳನೆಯ ಸಂಧಿ.

---

ಸೂಚನೆ॥ ರಾಯಕಟಕಾಚಾರ್ಯನಿಂದಲಿ । ಗಾಯದಲಿನೊಂದನಲಮುಖದಲಿ
ರಾಯದ್ರುಪದನು ಪಡೆದ ಧೃಷ್ಟದ್ಯುಮ್ನದ್ರೌಪದಿಯಾ ॥

---

ಕೇಳು ಜನಮೇಜಯಧರಿತ್ರೀ । ಪಾಲ ಕಲಿತರು ನಿಮ್ಮಪೂರ್ವಜ । ಪಾಲಕರು ಸರಹಸ್ಯಸಾಂಗೋಪಾಂಗವಿದ್ಯೆಗಳ ॥ ಸ್ಥೂಲದಲಿ ಸೂಕ್ಷ್ಮದಲಿ ಬಹಳವಿ । ಶಾಲದಲಿ ಸಂಕೋಚದಲಿ ಲಘು । ಪಾಳಿಯಲಿ ಹಾರದಲಿ ವಿವಿಧಾನುಪ್ರಯೋಗದಲಿ ॥೧॥ ಎಡಬಲದಮುಯಣಾಮುಹೊಳಹಿನ । ಕಡಲ ತೆರೆ

ಮೆರೆಯದತಿಬಲವಲಯ । ಬಿಡೆಯದುಪ್ಪಾಳಿಗಳ ಸೂಟಿಯ ಸರಳ ಸೋಹಿನಲಿ ॥ ಕಡುಗಲಿಗಳೇರಾಟ
ದಲಿ ಮಿಗೆ । ಜಡಿಪವಾಡದಪೃಥ್ವಾಯತಿಕೆಗದು । ಪಡಿಯ ನೆಳಲೇವಂಶದೆಂದುದು ರಾಹುತಿಕೆಗಳಲಿ ॥೨॥
ನಗವನೊಡ್ಡಿದರೊಂದೆಸರಳಲಿ । ಹುಗಿಲುಗಳೆನವಿದೂರಪಾತದ । ಗಗನಯಂತ್ರವನೆಸುವಜೋಕೆಯ
ಜೋದವಿದ್ಯದಲಿ ॥ ಉಗಿವಪಿಡುವೆಡಬಲನ ಬವರಿಯ । ಲಗವಲವ್ವೆಯೆ ದಂತಿಶಿಕ್ಷೆಗೆ । ಮಿಗಿಲು
ಭಗದತ್ತಾದಿಗಳಿಗೆಂದುದು ಕುಮಾರಕರ ॥೩॥ ರಥವ ರಕ್ಷಿಸಿಕೊಂಡು ನಿಜಸಾ । ರಥಿಯ ಕಾಯಿದು
ಮುಂದೆ ಹೂಡಿದ । ರಥಹಯಂಗಳ ಮೈಗಳಲಿ ಮುಸೆಗಾಣದಂದದಲಿ ॥ ಪ್ರಥಿತರಿಪುಶಸ್ತ್ರಾಸ್ತ್ರವನು
ರಿಪು । ರಥಿಕರನು ಸಮರದಲಿ ಜಯಿಸುವ । ರಥಿಕವಿದ್ಯೆಯೊಳಿವರ ಸರಿ ಸುರನರರೊಳಿಲ್ಲೆಂದ ॥೪॥
ಇನಿಬರೊಳು ಬಿಲುಗಾರಸಾರ । ರ್ಜುನನೊ ಕರ್ಣನೊ ಭೀಮದುರಿಯೋಧನರೊ ಮಾದ್ರೀಸುತರೊ
ಮೈಣಾದ್ರಿಶಾಸನಾದಿಗಳೋ ॥ ಮೆಸದಿ ಕೈಯಲಿ ಕಂಗಳೋ ಲೋ । ಚನವೆ ಕಂಗಳೊ ಕಾಣಬೇಕೆಂ ।
ದೆನುತ ಗುರು ರಚಿಸಿದನು ಲಕ್ಷ್ಯವನೊಂದುವೃಕ್ಷದಲಿ ॥೫॥ ಕಾಣಬಾರದು ಲಕ್ಷ್ಯವಗ್ಗದ । ಜಾಣಭಟ
ರಿಗೆ ಕಟ್ಟಿದೊಡೆ ಯಿದು । ಕಾಣಿಸಿದರೈ ಪೂಣಿಸಿದರೈ ಹೂಡಿದಂಬಿನಲಿ ॥ ಕಾಣಿರೇ ಕರ್ಣಾದಿಸುಭಟ
ಶ್ರೇಣಿಯೆಂಬೀಗುರುವಿನಣಕವ । ಸಾಣೆಯಿಟ್ಟಂತೊಲೆಚ್ಚು ಲಕ್ಷ್ಯವ ಕೆಡಹಿದನು ಪಾರ್ಥ ॥೬॥ ಹಿರಿದು
ಮೆಚ್ಚಿ ಧನಂಜಯನನಾ । ದರಿಸಿ ಕೊಟ್ಟನು ಸಕಲವಿದ್ಯೆಯ । ಸುರುತರದ ಪ್ರೇಮದಲಿ ನೆಣಸಿದೊಡೇ
ಕಲವ್ಯಕನಾ ॥ ಬೆರಳ ಕೊಂಡನು ಪಾರ್ಥನನು ಪತಿ । ಕರಿಸಿದನು ತನಗಾದನೆಗಳಿನ । ಧರೆಧುರದ ಭೀತಿ
ಯನು ಗೆಲಿದನು ನರನದೆಸೆಯಿಂದ ॥೭॥ ಇರಲಿರಲು ಫಲುಗುಣನನೆಕ್ಕಟ । ಗರೆದು ಶಸ್ತ್ರಾಸ್ತ್ರಪ್ರಸಂ
ಗದ । ಪರಮಸಿದ್ಧಾಂತವನು ಕಲಿಸಿ ಮಹಾಸ್ತ್ರಸಂಗತಿಯ ॥ ಕರುಣಿಸಿದನಾಗ್ನೇಯಪಾರಂ । ಪರ
ಮಹಾವಾಯವ್ಯವಾರುಣ । ಪರಸುಬ್ರಹ್ಮಾಸ್ತ್ರ ಸೌರೋರಗನಗಾದಿಗಳ ॥೮॥ ಒಂದುದಿನವೊಡ್ಡೋ
ಲಗಕೆ ಗುರು ಬಂದು ಮನ್ನಿಸಿಕೊಂಡು ನಸುನಗ । ತೆಂದನಾಧೃತರಾಷ್ಟ್ರಗಂಗಾಸೂನುವಿದುರರಿಗೆ ॥
ಇಂದುವರಿಯಂತರದ ನಿಮ್ಮಯ । ನಂದನರಸೋದಿಸಿದೆನವರಥಿ । ನಂದನೀಯರೊ ನಿಂದ್ಯರೋನಿಮ್ಮೊ
ಡಬೇಕೆಂದ ॥೯॥ ಸಕಲಶಸ್ತ್ರಾಸ್ತ್ರದಲಿ ಗದೆಯ । ನಿಕರದೇರಾಟದಲಿ ಲೋಕ । ಪ್ರಕಟಮಾರ್ಗಕೃತ
ಚತುರ್ದಶವಿಮಲವಿದ್ಯೆಯಲಿ ॥ ಸಕಲಲಕ್ಷಣಗಣಿತಗಾರುಡ । ವಿಕಟಭರತಾದ್ಯಖಿಲಕಳೆಯಲಿ । ವಿಕಳ
ರೋಸಂಪೂರ್ಣರೋ ನೀವ್ನೋಡಬೇಕೆಂದ ॥೧೦॥ ಲೇಸನೆಂದು ಸುತರವಿದ್ಯಾ । ಭ್ಯಾಸರಚಿತಶ್ರಮ
ವನಾವು । ದೈಸು ನಿಮಗುತ್ಸವವಲೇ ತಪ್ಪಾವುದುಚಿತವಲೇ ॥ ಈಸುದಿನವೀಮಕ್ಕಳೊಡನಾ । ಯಾಸವಿ
ದುಕಾವಮಾನ್ಯರೇ ನಾ । ವೇಸುಧನ್ಯರೊ ನಿಮ್ಮದೆಸೆಯಿಂದೆಂದನಾಭೀಷ್ಮ ॥೧೧॥ ಅದಿಯಲಿ ಪುರದೈದ
ಬಳಿಕಿನೊ । ಳಾದನಗ್ಗದಪರಶುಧರನೀ । ಮೇದಿನಿಯೊಳೀಯುಗದಲನುಪಮಶಸ್ತ್ರವಿದ್ಯೆಯಲಿ ॥ ವೈದ
ಕದಲೀನಿಮ್ಮವೊಲ್ಲೊರೆ । ಯಾದರಾರು ಕುಮಾರಕರ ವು । ಣ್ಯೋದಯದ ಕಂದೆರವೆಯ್ಯಸಲೆ ಯೆಂ
ದನಾಭೀಷ್ಮ ॥೧೨॥ ಬೋಯಿಸನ ಕರೆದುಳಿಳದಿವಸದೊ । ಳಾಯಿದರು ಶುಭದಿನವನವಗೆ ಪ । ಸಾಯ
ದುಡುಗೊರೆಸಹಿತಮನ್ನಿಸಿ ಮನೆಗೆ ಕಳುಹಿದರು ॥ ರಾಯನಾಜ್ಞೆಯೊಳಿಭಪುರದ ಹೊರ । ಗಾಯ
ತದಭೂಮಿಯಲಿ ವಾಸ್ತುವಿ । ಧೇಯವೆನಲಳವಡಿಸಿದರು ಹನ್ನೆರಡುಯೋಜನವ ॥೧೩॥ ತರವಿಡಿದು
ರಚಿಸಿದರು ನೆರೆಯು । ಪ್ಪರಿಗೆಗಳ ಹಂತಿಗಳನಂತಃ । ಪುರವ ತತ್ಪಾರ್ಶ್ವದಲಿ ಭಾರಿಯಭದ್ರಭವನಿಕೆ

ಯ ॥ ಪುರಜನವ ಪರಿಜನದ ನೆಲೆಯು । ಪ್ಪರಿಗಗಳ ರಚಿಸಿದರು ಹಸ್ತಿನ । ಪುರದ ಸಿರಿ ಸಾ
ಮಾನ್ಯವೇ ನರನಾಥಕೇಳೆಂದ ॥೧೪॥ ನೆರೆದುದಗಣಿತಕರಿತುರಂಗಮ । ವರವರೂಥಪದಾತಿಭೂ
ಮೀ । ಶ್ವರರು ಬಂದರು ನೋಡಲೆಂದು ದಿಗಂತಸಂತತಿಯ ॥ ವರಮುಹೂರ್ತದ ದಿವಸದಲಿ
ಸಾ । ಗರದ ತೆರೆ ಬಿಟ್ಟಂತೆ ಕಳನೊಳು । ನೆರೆದು ನಿಂದುದು ಜನನಿಕರವೇನೆಂಬೆನದ್ಭುತವ ॥೧೫॥
ಸಂದಣಿಸಿ ನೃಪರಾಣಿವಾಸದ । ಗೊಂದಣದ ಮಂಡಿಗೆಗಳಿಳಿದವು । ಮುಂದೆ ಹೊಯ್ಕಂಬಿಗಳ ಜೋಡಿಯ
ಜನಪಲಾಯನದ ॥ ಬಂದರಾಗಾಂಧಾರಿಕುಂತಿಗ । ಳಿಂದುಮುಖಿಯರ ಮೇಳದಲಿ ನಡೆ । ತಂದುದಗ
ಣಿತಪುರವಧೂನಿಕುರಂಬವೊಗ್ಗಿನಲಿ ॥೧೬॥ ವಿದುರಧೃತರಾಷ್ಟ್ರರುಸಹಿತ ಸುರ । ನದಿಯಮಗನೈತಂ
ದು ನವಭ । ದ್ರದಲಿ ಕುಳ್ಳಿರ್ದನು ಪಸಾಯತಸಚಿವಜನಸಹಿತ ॥ ಒದರುವಗ್ಗದವಂದಿಗಳ ಪಡೆ ।
ಸದೆವಬಹುವಿಧವಾದ್ಯರವವಿ । ಕ್ಕೊದೆದು ಹೊಯ್ದುದು ಲೋಕವಮರರ ಕರ್ಣಕೋಟರವ ॥ ಪರಿಪರಿ
ಯಶೃಂಗಾರದಲಿ ನೂ । ರ್ವರುಸಹಿತದುರ್ಯೋಧನನು ಸಾ । ಲ್ವರುಸಹಿತ ಯಮನಂದನನು ತಮ್ಮಿರಡು
ಪಾರ್ಶ್ವದಲಿ ॥ ಗುರುತನುಜಕೃಪಕರ್ಣಸುಬಲಾ । ದ್ಯರು ಪುರೋಭಾಗದಲಿ ಭೂಮೀಶ್ವರರಸಂಖ್ಯರು
ಹಿಂದೆ ಬರಲೈತಂದನಾದ್ರೋಣ ॥೧೭॥ ಹೊಯ್ದುಕೋಣನ ಕುರಿಯಹಿಂಡಿನ । ತೊಯ್ದರಕ್ತೋದ
ನದ ರಾಶಿಯ । ನೈದೆ ದೆಸೆದೆಸೆಗಳಲಿ ಬಲಿದರು ಭೂತತುಷ್ಟಿಗಳ ॥ ಕೈದುಗಳ ತನಿಪೆಳಗು ನೈಡಿಲ । ವೈ
ದುನನ ಮಾರಂಕವೆನೆ ಬಂ । ದೈದೆ ರಂಗಸ್ಥಳವ ಹೊಕ್ಕುದು ರಾಜಸುತನಿಕರ ॥೧೮॥ ಬಾಗಿಲಲಿ ಕಟ್ಟುಗೆ
ಯ ಕೈಗಳ । ಲಾಗುರೂಪ್ಪವಕೃಪರು ನಿಂದರು । ಸೀಗುರಿಯ ಸುಳಿಪಿನತರಂಗದ ಸಾಲಸತ್ತಿಗೆಯ ॥
ಸಾಗರದ ಗಳಗರ್ಜನೋದ್ಭಟೆ । ಕೋಗಲಿದಕದು ಪಾಡೆಯೆನೆ ಚಾ । ಪಾಗಮಾಚಾರ್ಯನ ಗಡಾವಣೆ
ಘುಲ್ಲಿಸಿತು ಜಗವ ॥೨೦॥ ಆಮಹಾಕಳನೆಂಟುದಿಕ್ಕಿನಸೀಮೆ ತೀರಲು ಗಳಿಗೆವಟ್ಟಲ । ಸೌಮುಹೂ
ರ್ತಿಕರಾಯತಧ್ವನಿಸಾಧುವಾದದಲಿ ॥ ಸೋಮವಂಶೋದ್ಭವನೃಪಾಲಲ । ಲಾಮನಗ್ಗದಧರ್ಮಸುತನು
ದ್ದಾಮಗುರುವಿಂಗೆರಗಿ ನಿಂದನು ನುಡಿಸಿದನು ಧನುವ ॥೨೧॥ ಅರಸ ಕೇಳು ಯುಧಿಷ್ಠಿರನ ಪರಿ ।
ಪರಿಯಯೆಸುಗೆಯಚಾಪವಿದ್ಯಾ । ನಿರತಿಶಯಕೋಯೆಂದುಗರ್ಜಿಸಿತಾಸಭಾಜಲಧಿ ॥ ಸುರಗಿಹಿರಿಯುಬ್ಬ
ಣವಡಾಯುಧ । ಹುಲಿಗೆಚಕ್ರಮುಸುಂಡಿಮುದ್ಗರ । ಪರಶುಮೊದಲಾದಖಿಳಶಸ್ತ್ರಶ್ರಮವತೋರಿಸಿದ॥
ಕರಿತುರಗದೇರಾಟಮೊದಲಾ । ಗಿರೆ ಸಮಸ್ತನೃಪಾಲವಿದ್ಯಾ । ಪರಿಣತಿಗೆ ಹಿಗ್ಗಿದರುಭೀಷ್ಮಾದಿಗಳು
ಹರುಷದಲಿ ॥ ಪರಿವಿಡಿಗಳಲಿ ನಕುಲಸಹದೇ । ವರು ವಿವಿಂಶತಿಚಿತ್ರಬಲದು । ರ್ಮರ್ಷಣರು ತೋರಿ
ದರು ಶ್ರಮವನು ನೂರ್ವರೊಗ್ಗಿನಲಿ ॥೨೩॥ ಈತ ಧರ್ಮಜನಿವನು ಮಾದ್ರೀ । ಜಾತರೀತ ಸುಲೋಚ
ನನು ಬಳಿ । ಕೀತ ದೀರ್ಘಕವಿಂದನಿವನಿಂತೀತನಿವನೆಂದು ॥ ಈತ ಧನುವಿನಲೀತ ಖಡ್ಗದ । ಲೀತ ಪರಿ
ಘದಲೀತ ಕುಂತದ । ಲೀತಬಲುಹೆಂದಂಧಭೂಪತಿಗರುಹಿದನು ವಿದುರ ॥೨೪॥ ಬಳಿಕ ನಾನಾದೇಶದರ
ಸುಗ । ಳಿಳಿದು ತವಗಳವಟ್ಟಶಸ್ತ್ರಾ । ವಳಿಗಳಲಿ ತೋರಿದರು ಮೆಚ್ಚಿಸಿ ತನ್ಮಹಾಸಭೆಯ ॥ ನೆಲ
ನನ್ನಬ್ಬರಿಸುವಸಭಾಕಳ । ಕಳದ ಮೊರೆಯನು ತಿವಿವಪರಿವೆ । ಗ್ಗಳದಪಾಯವಧಾರು ಮಸಗಿದುದೊಂದು
ಥಟ್ಟಿನಲಿ ॥೨೫॥ ಹಗಲುಕೈದೀವಿಗೆಯ ಬಿರುದಿನ । ವಿಗಡನಿವನಾರೆನಲು ಭೂಪಾ । ಳಿಗಳ ರತ್ನಪ್ರಭೆ
ಯ ಲಹರಿಯ ಲಾವಣಿಗೆ ಮಿಗಿಲು ॥ ಝಗಝಗಿಪತನುರುಚಿಯ ಮಿಂಚನು । ಮಿಗುವಖಡ್ಗಚ್ಛವಿಯ

ತಲೆಯೊ । ತ್ತುಗಳ ಚಾವಡಿಯೊಳಗೆ ಕೌರವರಾಯನೈತಂದ ॥೨೬॥ ಹೋ ನಿರಂತರಗಜಬಜವು ತಾ । ನೇನು ಜೀಯವಧಾರು ಚಿತ್ತವ । ಧಾನವೆಂದುದು ಸಾಲಕಂಚುಕಿನಿಕರ ಕೈನೆಗಹಿ ॥ ಭಾನುವಿನ ಭಾರಣೆಯವೋಲು । ತ್ತಾನಮುಖಚತುರಾಕ್ಷ ಭೂಪನ । ಸೂನು ಹೊಕ್ಕನು ರಂಗವನು ಭೀಷ್ಮಾದಿಗಳಿಗೆರಗಿ ॥೨೭॥ ಬವರಿಯಲಿ ಪಯಪಾಡಿನಲಿ ವ್ಯೆ । ಲವಣಿಯಲಿ ಬಿಸ್ನಾಣದಲಿ ಭಾ । ರವಣೆಯಲಿ ದೆಖ್ಖಾಳದಲಿ ವೇಗಾಯ್ತುರೇಖೆಯಲಿ ॥ ತಿವಿವಮೊನೆಯೊಂಪರಲಿ ಸೂರಂ । ಗವನು ತೋರ್ಪವಿಭೇದದಲಿ ಕೌ । ರವಮಹೀಪತಿ ತೋರಿದನು ಶ್ರಮವನು ಕಠಾರಿಯಲಿ ॥೨೮॥ ಸುರಗಿಯಲಿ ಚಕ್ರದಲಿ ಹಲಪಲಿ । ಹರಿಗೆಯಲಿ ಕಕ್ಕಡೆಯಲಸಿಯಲಿ । ಪರಿಘದಲಿ ಸಬಳದಲಿ ಗದೆಯಲಿ ಭಿಂಡಿವಾಳದಲಿ ॥ ಪರಿಪರಿಯ ಚಿತ್ರದ ಚಮತ್ಕೃತಿ । ಕರವ ತೋರಿಸಿದನು ಶರಾಸನ । ಶರವೆ ಶರಸಂಧಾನದೊಳಗದುದೆನಿಸಿದನು ಸಭೆಯ ॥೨೯॥ ಧೀರರುರೇ ಜಗಜಟ್ಟಿ ರಾಜಕು । ಮಾರ ಚೌಪಟಮಲ್ಲ ಕುರುಕುಲ । ಕೈರವಾಮೃತಕಿರಣ ಧಿರುಧರು ಭಲರೆ ಭಲರೆನುತ ॥ ಭೂರಿಸಭೆಯಲಿ ಸುಲಿದು ಬಿಸುಡುವ । ಸೀರೆಗಳ ತೂಪಿರಿದು ಸುಳಿವು । ಪ್ಪಾರತಿಯ ತನಿಹರಕೆ ತಳಿತುದು ರಾಯನೇಮದಲಿ ॥೩೦॥ ಏರಿ ತೋರಿದನಶ್ವಗಜರಥ । ವಾರನೇಳನು ಸಭೆಯೊಳೊಂದನು । ನೂರುಹರಿಯಲಿ ತೋರಿದನು ಶಸ್ತ್ರಾಸ್ತ್ರಕೌಶಲವ ॥ ಮೀರಿ ಹೆಚ್ಚಿದ ಹರುಷದಿಂದು । ಬ್ಬೇರಿದನು ಧೃತರಾಷ್ಟ್ರನುಬ್ಬಿದ । ಳಾರುಮಡಿಯಲಿ ಜನನಿ ದುರ್ಯೋಧನನ ಪರಿಣತಿಗೆ ॥೩೧॥ ಮಸಗಿದಾನೆಯಕಂಡದಲಿ ಘೀ । ಡಿಸುವ ಕೇಸರಿಯಂತೆ ಜಂಭನ । ಜಸದ ಘಾಡಿಗೆ ಬೆದರದಿದಿರಹ ವಜ್ರಧರನಂತೆ ॥ ಪಸರಿಸಿದ ಪರಿವಾರವಷ್ಯದೊ । ಳಸಮಬಲ ಹೊಳಕಿದನು ಮೇಘದ । ಮುಸುಕನುಗಿದಿನನಂತೆ ಮೈದೋರಿದನು ಕಲಿಭೀಮ ॥೩೨॥ ಗುರುನದೀಸುತ ವಿದುರ ಧೃತರಾ । ಷ್ಟ್ರರಿಗೆ ಕೈಮುಗಿದಾಯುಧದ ಪರಿ । ಪರಿಯ ಚಿತ್ರಶ್ರಮವ ಸಾಂಗೋಪಾಂಗಕೌಶಲವ ॥ ಕರತುರಗದೇರಾಟಮೊದಲಾ । ಗಿರೆ ಸುಯೋಧನರಚಿತವಿದ್ಯಾ । ಪರಿಣತಿಗೆ ಪೆಗ್ಗಳವಿದೆನೆ ತೋರಿದನು ಕಲಿಭೀಮ ॥೩೩॥ ಕೋಲಗುರು ಚಿತ್ತೈಸು ಕುರುಭೂ । ಪಾಲ ಸಮ್ಮುಖನಾಗು ಹಿಡಿ ಮಾ । ರ್ಕೋಲನೆನ್ನೊಡನೆನುತ ತಿವಿದನು ಭೀಮ ಕುರುಪತಿಯ ॥ ಮೇಳವಿಸಿತೆರಡಂಕ ಬಂದಿಗೆ । ಕೋಲಹೊಯ್ದಾಟದಲಿ ಬಳಿಕಾ । ಕೀಲುಗದೆಗಳ ಹಿಡಿದು ತರುಬಿದರಧಿಕರೋಷದಲಿ ॥೩೪॥ ಹೊಯ್ದರೊಡ್ಡಿದರಣದ ಮೊನೆಯಲಿ । ಹಾಯ್ದರೊಳಸುಳಿಯಿಂದ ಕಳೆದರು । ಕಾಯ್ದು ಹೊಗಿದರುಪ್ಪರಕೆ ಜಾರಿದರು ಪಡಿತಳಕೆ॥ಮೆಯ್ದುದೆಗೆದರಡಹೊಯ್ಲಿನಲಿ ಬಲು । ಗಯ್ದುಗಾರರು ಮನದ ಖತಿಗಿದಿರೆಯ್ದದೆನೆ ಹೊಯ್ದಾಡಿದರುಕಲಿಭೀಮಕೌರವರು ॥೩೫॥ ಎಲೆಲೆ ಹಿಡಿಹಿಡಿ ಭೀಮನನು ತೆಗೆ । ಕೆಲಕೆ ದುರ್ಯೋಧನನನಿದುಮಂ । ಗಳದ ಬೆಳುದಿಂಗಳಿನ ಮಳೆ ಸುರಿದುದೆ ಮಹಾದೇವಾ ॥ ಕಳವಳಿಸಿ ಭೀಷ್ಮಾದಿಗಳು ನೃಪ । ತಿಲಕರಿಬ್ಬರ ನಡುವೆ ಹಾಯ್ದರು । ಕುಲಗಿರಿಗಳಂದದಲಿ ಕೃಪಗುರುಸುತರು ಮಹಿಲದಲಿ ॥೩೬॥ ತೆಗೆದರೀತನನಿತ್ತಲಾತನ । ನುಗಿದರತ್ತಲು ಜನದ ಗಳದಿಂ । ದೊಗೆದ ಗಾಢದ ಗಜಬಜವ ಧಟ್ಟಿಸಿದರಲ್ಲಲ್ಲಿ ॥ ಬೆಗಡುಗೊಂಡರು ಭೀಷ್ಮವಿದುರಾ । ದಿಗಳು ಮನದಲಿ ಮೇಲೆ ಹಬ್ಬುವ । ಹಗೆಗಿದುಪಲಕ್ಷಣವಲಾ ಯೆಂದುದು ಬುಧವ್ರಾತ ॥೩೭॥ ಉಳಿಮಸಗಿದಂಬುಧಿಯವೋಲ್ಜನ । ಜಲಧಿಜಾತಕ್ಷೋಭೆಯಲಿ ವೆ । ಗ್ಗಳಿಸಿತಗ್ಗದ ಸಾಧುವಾದ ವಿವಾದರಭಸದಲಿ ॥ ಮೊಳಗಿದುವು ಕಲ್ಪಾಂ

ತಮೋಘಾ । ವಳಿಯ ಗುರುವೆನೆ ವಾದ್ಯತತಿ ಕಳ । ಕಳದೊಳರ್ಜುನದೇವನೆದ್ದನು ಮುನಿಯ ಸನ್ನೆಯಲಿ ॥೩೮॥ ಈತನಾರರ್ಜುನನೆ ಹೋಹೋ । ಮಾತು ಮಾಣಲಿ ಮಾಣಲೆಂಬೀ । ಮಾತು ಓಂಚಿತು ಮುನ್ನ ಮೌನದೊಳಿರ್ದುದಾಸ್ಥಾನ ॥ ಭೀತಕಳಕಳರಂಗದಲಿ ಪುರು । ಹೂತಸುತ ಮೈದೋರಿದನು ಜನ । ವೀತನನು ಕೊಂಡಾಡುತಿರ್ದುದು ರಾಯ ಕೇಳೆಂದ ॥೩೯॥ ದ್ರೋಣ ಕೃಪ ಮೊದಲಾದ ಮಾನ್ಯ । ಶ್ರೇಣಿಗೆರಗಿದನಮರನಿಕರಕೆ । ಗೋಣನೆತ್ತಿದನಿಟ್ಟು ಕರಪುಟವನು ಲಲಾಟದಲಿ॥ ಪ್ರಾಣಪದವಿದು ನಿಖಿಳವಿದ್ಯೆಯ । ಜಾಣತನಕಿದು ವಿನಯವೆಂದುದು । ಕೇಣವಿಲ್ಲದೆ ನೆರವಿ ನೆರೆ ಹೊಗಳಿತು ಧನಂಜಯನ ॥೪೦॥ ನಿಲುವಿನಲಿ ಸಂಸ್ಥಾನದಲಿ ಕೈ । ಚಳಕದಲಿ ಭಂಗಿಯಲಿ ಭರದಲಿ । ಉಳಿಯ ಲೊಯ್ಯಾರದಲಿ ಮೋಹಾಮೋಡಿಯಂದದಲಿ ॥ ಅಳವಿಯಲಿ ಪಟುವಿಡಿಯಲೂಹಾ । ಬಲದಲವಧಾನದಲಿ ಶಸ್ತ್ರಾ । ವಳಿಯ ಸಾಂಗೋಪಾಂಗಕ್ರಮವನು ತೋರಿದನು ಪಾರ್ಥ ॥ ೪೧॥ ತುರಗಚಯರೇವಂತ ಮದಕುಂಜರಮಹಾದಿವಿಜೇಂದ್ರರಥ ಸಂ। ಚರಣವರಮಾರ್ತಾಂಡ ಎಂದಬ್ಬರಿಸೆ ಜನನಿಕರ॥ ತುರಗಗಜರಥ ವಿವಿಧಶಿಕ್ಷಾ । ಪರಿಣತಿಯ ತೋರಿದನು ಗುರುಕೃಪ । ಸುರನದೀಜರು ಮುಳುಗಿದರು ಪುಳಕಾಂಬುಪೂರದಲಿ ॥೪೨॥ ಮತ್ತೆ ಕೊಂಡನು ಧನುವ ನೆರವಿಯ । ನತ್ತ ಹೊಯ್ಹೊಯ್ಹೋಗಹೇಳ್ದು । ವ್ಯರ್ಥತ್ತರೆದೆ ಜರ್ಝರಿತವಾಗಲು ತೋರಬೇಕೆನುತ ॥ ಬತ್ತಳಿಕೆಯಿಂದುಗಿದು ಹೂಡಿವಿಯತ್ತಳಕೆ ಹಾಯ್ಸಿದನು ಕರ್ಬೊಗೆ । ಸುತ್ತಿ ಧಳ್ಳಿಸಿ ಮಸಗಿತಾಗ್ನೇಯಾಸ್ತ್ರಧಾರೆಯಲಿ ॥೪೩॥ ತೆಗೆಸಿದನು ಶಿಖಿಶರವ ಧನುವಿಂ । ದುಗಿಸಿದನು ವಾರುಣವನಭ್ರವ । ಮೊಗೆದುದದ್ಭುತವಾರಿಯುಪಸಂಹರಿಸಿದನು ಮರಳಿ ॥ ಹಗಲನೊಂದೇತುತ್ತು ಮಾಡಿದ । ವಿಗಡತಿಮಿರಾಸ್ತ್ರದಲಿ ತಿಮಿರವ । ತೆಗೆಸಿದನು ಸೂರ್ಯಾಸ್ತ್ರದಲಿ ಬೆರಗಾಗೆ ಸುರನಿಕರ ॥೪೪॥ ಗಿರಿಶರದಲದ್ರಿಗಳ ಮೇಘದ । ಶರದಿನಭ್ರವ ನುರಗಬಾಣದಿ । ನುರುಭುಜಂಗವ ನನಿಲಶರದಲಿ ತೀವ್ರಮಾರುತನ ॥ ಪರುಷವನ ತೋರಿದನು ಜನವ್ರಬ್ಬರಿಸಲಡಿಗಡಿಗಂಧಭೂಪನ । ಕೊರಳು ಕುಸಿದುದು ನುಡಿಯ ನಾಟಕಹರ್ಷಭಾರದಲಿ ॥೪೫॥ ಇವರ ಮುಖವರಳಿದುವು ಗಂಗಾ । ಭವಕೃಪದ್ರೋಣಾದಿಗಳ ಬಳಿ । ಕವರ ತಲೆಬಾಗಿದುವು ಧೃತರಾಷ್ಟ್ರಾದಿ ಕೌರವರ ॥ ಇವರ ಜನನಿಯ ಮುಖದ ಸುಮ್ಮಾ । ನವನು ದುರ್ಯೋಧನನ ಜನನಿಯ । ಬವಳಿದು ಮ್ಮಾನವನು ಬಣ್ಣಿಸಲರಿಯೆ ನಾನೆಂದ ॥೪೬॥ ರಾಯಹೊಯ್ಕುಲುಗುಣನ ಹೊಗಳುವ । ನಾಯಿಗಳ ದೇಸಾಯ್ತು ಕೌತುಕ । ವಾಯಕಿವದಿರ ಪಕ್ಷಪಾತವ ನೋಡುನೋಡೆನುತ ॥ ನಾಯಕವ ತೂಗುತ್ತಲಾ ಕರ್ಣಾಯತಾಂಬಕನೆಡಬಲದ ಕುರು । ರಾಯನನುಜರ ಮೇಳದಲಿ ಹೊರವಂಟನಾ ಕರ್ಣ ॥೪೭॥ ಗುರುಗಳಿಗೆ ಕೈಮುಗಿದು ಶಿರದಲಿ । ತರಣಿಮಂಡಲಕೆರಗಿ ನೋಡುವ । ನೆರವಿಗವನಾರೀತನಾರೆಂಬದ್ಭುತವ ಬೀರಿ ॥ ಅರಸ ಕೇಳ್ಕೈ ವಿವಿಧಶಸ್ತ್ರೋ । ತ್ಕರದ ಕ್ರಮವನು ತೋರಿದನು ಕರಿ । ತುರಗರಥವಾಹನದ ಶಿಕ್ಷಾವಿದ್ಯೆಗಳು ಸಹಿತ ॥೪೮॥ ಅವವಿಧದಲಿ ಪಾರ್ಥತೋರಿದ । ನಾವದಿವ್ಯಾಸ್ತ್ರಪ್ರಪಂಚವ । ಪಾವಕಾನಿಲವಾರುಣಾದಿಯನೈದೆ ವಿರಚಿಸಿದ ॥ ಆವಿಧಾನದಲಾ ವಿಹಾರದ । ಲಾವಿಬಂಧದ ಲರ್ಜುನನ ಬಾ । ಣಾವಳಿಯ ಬಿನ್ನಾಣವನು ತೋರಿದನು ಕಲಿಕರ್ಣ ॥೪೯॥ ಸೊಣಸುವೊಡೆ ಬಾಯೆಂದು ಪಾರ್ಥನ । ಕೆಣಕಿದನು ಘನರೋಷಶಿಖಿಯಲಿ । ಕುಣಿದವಿಬ್ಬರವಿಾಸೆ ಕಂಗಳೊಳುಗುವ ಕೆಂಪಿ

ನಲಿ ॥ ಕಣೆಕಣೆಗಳಾಟದಲಿ ಶರಖಂ । ಡಣೆಯ ಕೋಲಾಟದಲಿ ಖಣಿಖಣಿ । ಖಣಿಲುಖಣಿರವ ಮಸಗ
ಲಿಚ್ಚಾಡಿದರು ಚಳಕದಲಿ ॥೩೦॥ ರಾಯಸಭೆ ಕಳವಳಿಸೆ ಹೋಹೋ । ಹೋಯಿದೇನೇನೆನುತ ಹಿಡಿದರು।
ವಾಯುಸುತಕೃಪಗುರುಜ ದ್ರೋಣಾದ್ಯರು ಧನಂಜಯನ ॥ ಆಯಿತೆಲವೋ ಕರ್ಣ ನೀನಸು । ನಾಯ
ಕನೊ ನೃಪಹಾರದಲಿ ಮೇ । ನ್ನಾಯಕನೊ ನೀನಾವನೆಂದನು ಕೃಪನು ಖಾತಿಯಲಿ ॥೩೧॥ ಈತನಾ
ವನು ಕರ್ಣನೆಂಬುವ । ನೀತನರ್ಜುನನೊಡನೆ ತಾವಮಾ । ರಾತು ಕೈಮಾಡಿದನು ಕೈಕೊಳ್ಳನು ಧನಂಜ
ಯನ ॥ ಈತ ತಪ್ಪಲ್ಲೆನುತ ಮಿಗೆ ಮೈ । ಯಾತನಾಧೃತರಾಷ್ಟ್ರನೀತನ । ಮಾತ ಕಂಡಳು ಕುಂತಿ
ನೆನೆದಳು ಪೂರ್ವಸಂಗತಿಯ ॥೩೨॥ ಎನ್ನ ಮಗನೆನೆ ಬಂದುದಿಲ್ಲದು । ತನ್ನ ವಶವೇ ವಿಷ್ಣುಮಾಯೆ
ಯ । ಬಿನ್ನಣವಲೇ ಮಾತು ಬಿಗಿದುದು ಮನವನೊಳಗಿಕ್ಕಿ ॥ ತನ್ನ ತಾನೇ ಮರುಗಿ ಮೂರ್ಛಾ ।
ಪನ್ನೆಯಾದಳು ಕುಂತಿಯಿತ್ತಲು । ಖಿನ್ನನಾದನು ಕೃಪನ ನುಡಿಯಲಿ ದುಗುಡ ಮಿಗೆ ಕರ್ಣ ॥೩೩॥
ಈತನರಸಲ್ಲೆಂದು ಕೃಪ ಹಳಿ । ದಾತನೇ ತಪ್ಪೇನು ರಾಜ್ಯದೊ । ಳೀತನರಸೆನಿಸುವನು ಕರೆ ನಮ್ಮಯ
ಪುರೋಹಿತರ ॥ ಶಾತಕುಂಭಾಸನವ ಮಂಗಳ । ಜಾತವಸ್ತುವ ತರಿಸು ತರಿಸೆಂ । ದಾತತಕ್ಷಣದಲಿ
ಸುಯೋಧನನೆದ್ದು ರಭಸದಲಿ ॥೩೪॥ ತರಿಸಿ ಭದ್ರಾಸನದೊಳೀತಂ । ಗರಸುಪದವಿಯೊಳಂಗದೇಶದ ।
ಸಿರಿಯನಿತ್ತನು ರಚಿಸಿದನು ಮೂರ್ಧಾಭಿಷೇಚನವ ॥ ಪರುಶನವನಿತ್ತಖಿಳಭೂಮೀ । ಶ್ವರರು ಕಂಡರು
ಪೂರ್ವಶೈಲದ । ತರಣಿಯಂತಿರೆ ಕರ್ಣನೆಸೆದನು ರಾಜತೇಜದಲಿ ॥೩೫॥ ಈತನುತ್ಸವ ತನ್ನದೆಂದೇ ।
ಪ್ರೀತಿಯಲಿ ಬರೆ ಸಿಂಹಪೀಠವ । ನೀತನಿಳಿದೆರಗಿದನು ಪದದಲಿ ಬಳಿಕ ಜನಜನಿತ ॥ ಸೂತಸುತನಿವನೆಂ
ದು ಭುವನ । ಖ್ಯಾತವಾದುದು ಬಳಿಕ ನಸುನಗು । ತೀತನ ಕುಲವನೆತ್ತಿ ಭಂಗಿಸಿ ನುಡಿದನಾಭೀಮ ॥೩೬॥
ಇವನ ತಂದೆಯದಾರು ಪಾಂಡುವೊ । ಪವನನೋ ಕೃಪ ನಿಮ್ಮ ಜನ್ಮವ ।ನೆವಗೆ ಹೇಳಿರೆ ಹಿರಿಯಗುರುಗಳ
ತಾಯದಾವವಳೋ ॥ ಅವಗಡಿಸದಿರಿ ಹಿರಿಯತನಕಂ । ಜುವೆನು ನಿಮಗೆನುತಡಿಗಡಿಗೆ ಕೌ । ರವಮ
ಹೀಪತಿ ಬಂದು ನುಡಿದನು ಗುರುಕೃಪಾದಿಗಳ ॥೩೭॥ ಬಳಿಗೆ ಗಜಬಜವಾಯ್ತು ಕೈದುವ । ಕಳೆದುದ
ಲ್ಲಿಯದಲ್ಲಿ ಗುರುಕೃಪ । ರುಲುಹ ಕೇಳುವರಿಲ್ಲ ಕೈದೊಳಸಾಯ್ತು ಕಳನೊಳಗೆ ॥ ಇಳಿದುಭೀಷ್ಮಾದಿ
ಗಳು ತಮ್ಮಯ।ನಿಳಯಕೈದಿದರೆರಡುಬಲತ।ಮ್ಮೊಳಗೆ ತಾವೇ ಹಣಿದು ಮರಳಿದುದು ರಾಯಕೇಳೆಂದ॥೩೮॥
ಕೆಲರು ಭೀಮನನರ್ಜುನನ ಕೆಲ। ಕೆಲರು ಕರ್ಣನ ಕೌರವೇಂದ್ರನ । ಕೆಲರು ಹೊಗಳುತ ಬಂದು ಹೊಕ್ಕ
ರು ಹಸ್ತಿನಾಪುರವ ॥ ಬಳಿಕಲಾಮರುದಿವಸದಲಿ ಮ । ಕ್ಕಳುಗಳೆಲ್ಲರ ಕರೆಸಿ ಗರುಡಿಯ । ನಿಳಯದಲಿ
ಕುಳ್ಳಿರ್ದು ಗುರು ನುಡಿದನು ಕುಮಾರರಿಗೆ ॥೩೯॥ ಏನಿರೈ ಕುರುವಂಶನಳಿನೀ । ಭಾನುಗಳಿರ ವಿದಗ್ಧ
ಜನಸುರ । ಧೇನುಗಳಿರಾ ಇಂದುನಿಮ್ಮಲಿ ದಕ್ಷಿಣಾರ್ಥಿಗಳು ॥ ಏನನೀವಿರಿ ನಮಗೆ ಕೊಡೆ ಸಂ । ಪೂ
ರ್ಣರೈ ಕೊಡಲಾಪಸತ್ವನಿ । ಧಾನವುಂಟೇಹೇಳಿರೆಂದನು ದ್ರೋಣನನಿಬರಿಗೆ ॥೪೦॥ ಆವುದನು ಬಯ
ಸುವಿರಿ ನಿಮ್ಮಡಿ । ಯಾವಕಾರ್ಯವ ಬೆಸಸಿದುದು ತಂ । ದೇವವಿದಕೆ ವಿಚಾರವೇನೆಂದರು ಕುಮಾರ
ಕರು ॥ ತೀವಿದಗ್ಗದಹರುಷರಸದಲಿ । ಭಾವ ನೆನೆದುದು ಮುನಿ ವರನಶಿ। ಷ್ಯಾವಳಿಗೆ ನುಡಿದನು ನಿಜಾ
ಭಿಪ್ರಾಯಸಂಗತಿಯ ॥೪೧॥ ಕೇಳಿ ಬಲ್ಲಿರೆ ಗಂಗೆಯುತ್ತರ । ಕೂಲದಲಿ ಪಾಂಚಾಲದೇಶನೃ । ಪಾಲ
ನಲ್ಲಿಗೆ ದ್ರುಪದನನೆಂಬವನತುಳಭುಜಬಲನು ॥ ಆಳುತನದಂಗದಲಿ ಪರರಿಗೆ । ಸೋಲನವನೊಟ್ಟೈಸಿ

ದ್ರುಪದನ್ನ । ಪಾಲಕನ ಪಿಡಿದೊಪ್ಪಿಸಿದೊಡೆಮಗಹುದು ಪರಿತೋಷ ॥ ಐಸಲೇ ಗುರುದಕ್ಷಿಣಾರ್ಥವಿ । ದೇಸುಘನ ತಂದೀವೆವೆಂದು ಪ । ಹಾಸದಲಿ ಕೈವೊಯ್ದು ತಮ್ಮೊಳು ನಗುತ ಕೌರವರು ॥ ಆಸುಯೋಧನಕರ್ಣಸಹಿತಮು । ಹೀಶತನುಜರು ಬೀಳುಕೊಂಡರು । ವಾಸಿ ಬಿದ್ದುದು ಪಾಂಡುಸುತಕೌರವಕುಮಾರರಿಗೆ ॥೧೩॥ ಧಾಳಿಯಿಟ್ಟುದು ರಾಯದಳ ಪಾಂ । ಚಾಲದೇಶಕೆ ಮುಂದೆ ಹೊಕ್ಕುದು । ಚೂಳಿಕೆಯಲಿ ಸುಯೋಧನಾದಿಗಳೂರನುರವಣಿಸಿ ॥ ಧೂಳಿಗೋಟೆಯ ಕೊಂಡಿವರು ರಾ । ಜಾಲಯಕೆ ಬರೆ ದ್ರುಪದನನುಜರು । ಸೋಲಿಸಿದರ್ರೆ ಕೌರವೇಂದ್ರನ ಬಲವ ಬರಿಕೈದು ॥೧೪॥ ಪುರದ ಹೊರಬಾಹೆಯಲಿ ತಾವೈ । ವರು ಮಹಾಸನ್ನಾಹಚಾಪ । ಸ್ಫುರಿತತೂಣೀಬದ್ಧಕಂಪಿತಖಡ್ಗಪಾಣಿಗಳು ॥ ಗುರುಸಹಿತಲಿರಿದ್ದರಿತ್ತಲು । ಪುರಜನಂಗಳಮುಸಲಹತಿಯಲಿ । ಮುರಿದು ಬಂದುದು ಕೌರವೇಂದ್ರನ ಬಳವಿ ಘಾತಿಯಲಿ ॥೧೫॥ ಆತುಕೊಂಡರು ಪಾಂಡುಸುತರಭಿ । ಜಾತಸಮರವನಿವರ ಕೈಯಲಿ । ಮಾತುಹಲವಿಲ್ಲೆನುತ ಹೊಕ್ಕರು ಕೊಂದು ಪರಬಲವ ॥ ಘಾತಿಗಾನುವರಿಲ್ಲ ದೊರೆಯೆನು । ತಾತನನು ಮುತ್ತಿದರು ಗುರುಗಳಿಗೀತನೇ ದಕ್ಷಿಣೆಯೆನುತ ಹಿಡಿವರು ಮಹೀಪತಿಯ ॥೧೬॥ ಕೊಂಡುಬಂದರು ದ್ರೋಣನಿದಿರಲಿ । ದಿಂಡುಗೆಡಹಿದರೀತನನು ಕೈ । ಕೊಂಡನೆಲವೋ ದ್ರುಪದಸಖಪೂರ್ವವನು ನೆನೆಯೆನುತ ॥ ಭಂಡನಿವನನು ಸಾಕು ಬಿಡಿ ಸಲೆ । ಚಂಡಿಯಾದನು ದರ್ಪವಿಷಮಂ । ಕೊಂಡು ಮೂರ್ಖತನೇನಮಾಡುವೆನೆಂದನಾದ್ರೋಣ ॥೧೭॥ ಎಲವೊ ಕೊಟ್ಟೆನು ಜೀವದಾನವ । ನಳಲು ನಿನಗೇಕಿನಿತು ಸಾಹಸ । ದಳವಿಯಲಿ ನೀನೆರಹು ಹಗೆಯನು ಭಂಡಹೋಗೆಂದು ॥ ಕಳೆದುಕೊಟ್ಟೆನು ನಿನ್ನ ರಾಜ್ಯದ । ನೆಲದೊಳರ್ಧವನಿತ್ತು ನೀ ನಡೆ । ಬಳಿಕಲೆಂದೊಡಬಡಿಸಿ ದ್ರುಪದನ ಬಿಟ್ಟನಾದ್ರೋಣ ॥೧೮॥ ಅರಸ ಕೇಳ್ಳೆ ದ್ರುಪದನೀಪರಿ । ಪರಿಭವಕೆ ಗುರಿಯಾಗಿ ತನ್ನಯ । ಪುರವ ಹೊಗದೈತಂದು ಗಂಗಾತೀರದೇಶದಲಿ ॥ ಧರಣಿಸುರರಲಿ ಪುತ್ರಕಾಮ್ಯಾ । ಧ್ವರವ ವಿರಚಿಸಲಾಗಸತ್ರೋ । ತ್ಕರುಷವಂತರನರಸಿದನು ನಾನಾಗ್ರಹಾರದಲಿ ॥೧೯॥ ದ್ರೋಣಭಯದಲಿ ಸಕಲವಿಪ್ರ । ಶ್ರೇಣಿಯಿರೆ ಯಾಜೋಪಯಾಜರು । ಪ್ರಾಣನಿಸ್ಪೃಹರಾಗಿ ಮಾಡಿಸಿದರು ಮಹಾಕ್ರತುವ ॥ ಕೇಣವಳಿದಾಹುತಿಯನಮರರ । ಬಾಣಸಿಗ ಗ್ರಾಣಬಡಿಸಿ ದೇವಶ್ರೇಣಿ ತಣಿದುದು ಸಲಿಸಿದರು ಪಾಂಚಾಲನಭಿಮತವ ॥೨೦॥ ಅರಸ ಕೇಳ್ಳೆ ಕುಂಡಮಧ್ಯದೊಳುರಿಯ ಕರುವಿಟ್ಟೆರಸಿದರೊ ಭಾ । ಸುರಮಹಾನಲನಪರರೂಪೋ ತಾನಿದೇನೆನಲು ॥ ಶರವಡಾಯುಧಚಾಪವರ್ಮ । ತ್ಕರಸಹಿತ ರೌದ್ರಾಂಗನಾಗವ । ತರಿಸಿದನು ಪಾಂಚಾಲಭೂಪತಿ ಭುಜವಸೂಳೈಸೆ ॥೨೧॥ ವೇದಿಮಧ್ಯವನೊಡೆದು ಮೂಡಿದ । ಳಾದರಿಸೆ ಜನವಮಮ ಕಾಮನ । ಕೈದುವೋ ತ್ರೈಲೋಕ್ಯಮೋಹನಮಂತ್ರದೇವತೆಯೋ ॥ ಕಾದುವೊಡೆ ಕರೆ ಹರಿಹರಬ್ರ । ಹ್ಮಾದಿಗಳಿಗೊರೆಯೆಂಬ ಪುಂಕ್ರತಿ । ಯಾದುದಾಕಾಮಂಗೆ ದ್ರುಪದಾತ್ಮಜೆಯ ಜನನದಲಿ ॥೨೨॥ ದ್ರೋಣವಧೆಗೀಮಗನು ಪಾರ್ಥಗೆ । ರಾಣಿಯೀಮಗಳೆಂದು ದ್ರುಪದ । ಕ್ಷೋಣಿಪತಿ ಸಲಹಿದನು ಸುತರನು ಸಾನುರಾಗದಲಿ ॥ ದ್ರೋಣನೀತನ ಕರೆಸಿ ಶಸ್ತ್ರದ । ಜಾಣಿಕೆಯ ಕಲಿಸಿದನು ವಿಗಡರ । ಕಾಣೆನೀಕಲಶಜನಪರಿಯಲಿ ರಾಯ ಕೇಳೆಂದ ॥೨೩॥ ಮಗನು ಧೃಷ್ಟದ್ಯುಮ್ನ ದ್ರೌಪದಿ । ಮಗಳು ಧಾರದ್ವಾಜನೆತ್ತಿದ । ಹಗೆಗೆ ಹರಿವಾಯ್ತೆನುತ ಹಿಗ್ಗಿದ ದ್ರುಪದಭೂಪಾಲ ॥ ದುಗುಡದಲಿ ಕುರುರಾಯ ನೀದಾ । ಯಿಗರ ಬಿರುದಿನ ಬಿಂಕದಂಕೆಯ । ಬಿಗಿದಪರಿಯನು ನೆನೆದು ಮರುಗಿದನರಸ ಕೇಳೆಂದ ॥ ... ... ॥೨೪॥

ಅಂತು ಸಂಧಿ ೭ಕ್ಕೆ ಪದ ೩೦೮ಕ್ಕಂ ಮಂಗಳಮಸ್ತು.

# ಎಂಟನೆಯ ಸಂಧಿ.

**ಸೂಚನೆ॥ ವಾಯುಸುತನುರಿವನೆಯ ಕೌರವ । ರಾಯ ಕೃತಕವ ಕಳೆದು ಹೊಕ್ಕನು । ತಾಯಿಯೊಡಹುಟ್ಟಿದರುಸಹಿತ ಮಹಾವನಾಂತರವ ॥**

ಕೇಳು ಜನಮೇಜಯಧರಿತ್ರೀ । ಪಾಲ ಗಜನಗರಿಯಲಿ ಕೌರವ । ರಾಳ ಪಾಂಡವರಾಳ ಸ್ಣೆಸಿನ ಕಾಲುಮುಟ್ಟುಗಳ ॥ ಸೂಳುಮತ್ಸರಬಿರುದುಪಾಡಿನ । ಚೂಳಿಗಲಹದ ಕದಡುಬೂಚಿನ । ತೋಳುವಲರೊಳತ್ರೋಟಿ ಮಸಗಿತು ದಿವಸದಿವಸದಲಿ ॥೧॥ ಬೀದಿಗಲಹದ ಕದಡು ಬೀಡಿನ । ಲೈದೆ ಹಬ್ಬಿತು ಬೀಡುಗಲಹದ । ಕೈದೊಳಸು ಕೊಂಡೆಸಗು ನಟಿಸಿತು ನಾಡುನಾಡಿನಲಿ ॥ ಆದುದೆರಡರಸಿಭಪುರಿಗೈ ಕಾ Ref. ಳಾದುದಿನ್ನೇನೆಂದು ಪುರಜನ । ವೈದೆ ಹೆದುತು ಭೀಮದುರ್ಯೋಧನರ ಹೋರಟೆಗೆ ॥೨॥ ಬೇರೆ ಪಾಂಡವರಿಲಿ ರಾಯನ । ನೂರುಮಕ್ಕಳು ಪುರವನಾಳಲಿ । ಬೇರೆ ಕೌರವರಿರಲಿ ಪಾಂಡವರಾಳಲಿಭಪುರಿಯ ॥ ನೂರರೊಡನೈವರನು ಧರಿಸಿರ । ಲಾರದೀಪುರಿಯೆನುತ ದುಗುಡವ । ಹೇರಿ ಹೊಪಕುಳಿಗೊಳುತಲಿರ್ದುದು ಹಸ್ತಿನಾನಗರ ॥೩॥ ಒಂದುದಿವಸ ಸುಯೋಧನನು ನಿಜ । ಮಂದಿರದೊಳೇಕಾಂತದಲಿ ಮನ। ನೊಂದು ನುಡಿದನು ಶಕುನಿಕರ್ಣಜಯದ್ರಥಾದ್ಯರಿಗೆ ॥ ಅಂದು ಭೀಮಾರ್ಜುನರು ದ್ರುಪದನ ತಂದು ದಕ್ಷಿಣೆಯಿತ್ತುಗುರುವಿಗೆ । ಸಂಪತ್ಕೆ ಸಮರದಲಿ ಪರಿಭವವಾಯ್ತು ತಮಗೆಂದ ॥೪॥ ವನಜವನದಲಿ ತುರುಚೆ ಕಬ್ಬಿನ । ಬನದ ಕದಸಿಗೆ ಚೂತಮುಯಕಾ । ನನದ ಬೊಬ್ಬಲಿ ಭೀಮಸೇನನ ಯಿರವು ತಮ್ಮೊಳಗೆ ॥ ಇನಿತುಪಾರ್ಥನಮೇಲೆ ಯಮಳರ । ಜಿನುಗನಲಿ ಜಾರನು ಯುಧಿಷ್ಠಿರ । ಜನಪನಾಗಲಿ ಮೇಣ್ಮಾ ಮಾಣಲಿ ಭೀತಿಯಿಲ್ಲೆಂದ ॥೫॥ ಹುದುನಡೆಯದಿವರೊಡನೆ ನಮ್ಮಲಿ। ಕದನವೇ ಕೈಗಟ್ಟವುದು ಕಾ । ದಿದೊಡೆ ಹೆಬ್ಬಲವಹುದು ದುರ್ಬಲ ದೈವಗತಿ ಬೇರೆ ॥ ನದಿಗಳರಳಿಯ ಹಾಸು ನವಷಿಷ। ವುದರದೀಪನಚೂರ್ಣವಾವಂ । ಗವಲಿ ಸಾಪತ್ನ್ಯರಲಿ ಸಪರವ ಕಾಣೆ ತಾನೆಂದ ॥೬॥ ದುಗುಡಮೇತಕೆ ಜೀಯ ಡೊಂಬಿನ । ಜಗಳವನು ತೆಗೆದರಿನ್ನವರ ಸುಂ । ಟಿಗೆಯನಾಯ್ಸುವೆನವರ ತನುವನು ಯುದ್ಧರಂಗದಲಿ ॥ ದಿಗುಬಲಿಯ ಕೊಡಿಸುವೆನು ಸಾಕಿ। ನ್ನೊಗುಮಿಗೆಯ ಚಿಂತಾಂಗನೆಯನೋ । ಲಗಿಸದಿರು ಕುರುರಾಯ ಚಿತ್ತೈಸೆಂದನಾಕರ್ಣ ॥೭॥ ಹೊಡೆದು ಹೊಡೆಚಂಡಾಡಿ ರಿಪುಗಳ । ಗಡಣವನು ಯಮರಾಜಧಾನಿಗೆ । ನಡೆಸುವೆನು ನೀ ನೋಡುತಿರು ಸಾಕೊಂದು ನಿಮಿಷದಲಿ ॥ ಕೊಡು ತನಗೆ ನೇಮವನು ದುಗುಡವ । ಬಿಡು ಮನಸ್ಸಿನ ಕಂದುಕುಂದನು । ಹಿಡಿಯದಿರು ಕುರುರಾಯ ಚಿತ್ತೈಸೆಂದನಾಕರ್ಣ ॥೮॥ ಹಬ್ಬುಗೆಯ ಹದಿನಾಲ್ಕುಲೋಕದ । ಮೊಬ್ಬುಗಳನೀಡಾಡಿ ನಭದೊಳ । ಗೊಬ್ಬನೇ ರವಿ ತೊಳಗಿಬೆಳಗುವವೋಲು ಪಾಂಡವರ ॥ ಕೊಬ್ಬುಗಳ ನಿಲಿಸುವೆನು ಧರೆಯೊಳ । ಗೊಬ್ಬನೇ ದುರ್ಯೋಧನನು ಮ । ತ್ತೊಬ್ಬರಿಲ್ಲೆಂದೆನಿಸಿ ತೋರುವೆನೆಂದನಾಕರ್ಣ ॥೯॥ ವಿದುರಭೀಷ್ಮಾದಿಗಳು ನಿನ್ನಯ । ಸದನದೊಳಗುಂಡುಟ್ಟು ಪರರ । ಭ್ಯುದಯವನೆ ಬಯಸುವರು ದೂರುವರೆಮ್ಮನವರು

ಗಳ ॥ ಹದನ ನೀನೇ ಬಲ್ಲೆ ಸಾಕಿ । ನ್ನದರ ಮಾತೇಕರಸ ತನ್ನಯ । ಕದನವನು ಚಿತ್ತೈಸು ಸಾಕಿ ನ್ನೆಂದನಾ ಕರ್ಣ ॥೧೦॥ ಸಹಜವೀನುಡಿ ಕರ್ಣನಾಡಿದ । ನಹುದು ಪಾಂಡವರೆಂಬವರು ಕಡು । ಸಹಸಿಗಳು ಗೆಲಲರಿದು ಕುಹಕೋಪಾಯಮಾರ್ಗದಲಿ ॥ ಅಹಿತರನು ಗೆಲಬಹುದು ಪರಿಕರ । ಸಹಿತವರುಗಳ ನಿಮ್ಮ ಚಿತ್ತಕೆ । ಬಹಡೆ ತನ್ನಭಿಮತವನವಧರಿಸೆಂದನಾ ಶಕುನಿ ॥೧೧॥ ಐದುಮುಖವೀರೈದುಭುಜ ಹದಿ । ನೈದು ಕಂಗಳ ಹಿಗಡರುದ್ರನು । ಪೊಡನಿಯ ಮೇಲೊಂದುತ್ರಿರಭುಜಹೆರಡನಳವಡಿಸಿ ॥ ಅದಿಪುರುಷನು ಭೀಮಸೇನನ । ಲ್ಲದೆ ಜನಿಸಿದನಾತನಿದಿರಲಿ । ಕೈದುಕಾರನದಾವನೈ ಹೇಳೆಂದನಾ ಶಕುನಿ ॥೧೨॥ ಅರಸ ಕೇಳ್ಬಿಲುವಿದ್ಯೆಯಲಿ ಮೂ । ವರು ಕನಾ ಸಾಮರ್ಥ್ಯಪುರುಷರು । ಧರೆಯೊಳೊಬ್ಬಂಗೊಂದು ಗುಣ ಪಾರ್ಥಂಗೆ ಮೂರುಗುಣ ॥ ಭರತನಾಗಿಹನಾತನೊಬ್ಬನ । ಸುಸದಲಿ ಮಾರಾಂತು ಜಯಿಸಿ । ಮರಳಬಲ್ಲವನಾವನೈ ಹೇಳೆಂದನಾ ಶಕುನಿ ॥೧೩॥ ರಾಮಚಂದ್ರನ ಚರಣಯುಗ ನಿ । ಸ್ಸೀಮಭಿಕ್ಷಾಚಾರಿಯರ ಶಿರ । ವಾಮಹಾರಫದೊಳ್ಗೆಸೆದ ಸದ್ಗುಣವು ಸಮರದಲಿ ॥ ಸೌಮನಸ್ಯನು ನಿಷ್ಪ್ರಕಂಪನ । ಸಾಮಸರ್ವಜ್ಞನೆನಿಸಿದಿರಲಿ । ಭೂಮಿಯಲಿ ಬಿಲ್ಲಾಳದಾವನೆಂದನಾ ಶಕುನಿ ॥೧೪॥ ಶತ್ರುಗಳ ಸಂಹರಿಸಿ ರಾಜ್ಯವ । ನೊತ್ತಿಯಾಳ್ವೆಸೆಂಬಸಾಹಸ । ಸತ್ವಗುಣ ನಿನಗಿಲ್ಲ ಪಾಂಡವರತುಲಭುಜಬಲರು ॥ ಕೃತ್ರಿಮದ ಮುಖದಿಂದ ರಿಪುಗಳ । ಕತ್ತುಹಾಯಿಕಿ ನೆಲನನೇಕ । ಚ್ಛತ್ರದಲಿ ಸಲಹುವುದು ಮತ ಕೇಳೆಂದನಾ ಶಕುನಿ ॥೧೫॥ ಸೋದರರುಗಳು ನೀವು ನಿಮ್ಮೊಳು । ಭೇದಮಂತ್ರವ ಮಾಡುವುದುವು । ಯಾದರೆಯೋ ನಾಸ್ಮಿವ್ಮಡಯಲರಮನೆಯ ಸೇವಕರು ॥ ವಾದಿಸುವರುತ್ತಮರ ಸರಿ ಸಮ । ಗಾದೊಡೆಯು ಕಂದುವ ನುಡಿಯಬೇಕಾದರು ಸುಹೋರ್ಸ್ಮಾಣಿ ಬಿನ್ನಹವೆಂದನಾ ಶಕುನಿ ॥೧೬॥ ಪಕ್ಷವೆರಡೇ ಲೋಕದೊಳ್ಪಿತೃ । ಪಕ್ಷ ಮಾತಾಮಾತೃಪಕ್ಷ ಪಿ । ಪಕ್ಷ ತಂದೆಯ ಪಕ್ಷ ಸಪಕ್ಷವು ತಾಯದೆಸೆಯವರು ॥ ತಕ್ಷಕನ ತೆರನಂತೆ ನಿಮ್ಮನು । ಭಕ್ಷಿಸುವರಾವಂಗದಲಿ ನೀನುಪೇಕ್ಷಿಸುವುದೈ ಪಾಂಡುಪುತ್ರರನೆಂದನಾ ಶಕುನಿ ॥೧೭॥ ಮೊಳೆಯಲೇ ಮುರುಡಿಸಲು ಬೇಹುದು । ಬಲಿದಬಳಿಕದು ನಿನ್ನ ಹವಣೇ । ಇಳೆಯೊಳರ್ಧವನಿತ್ತು ರಿಪುಗಳ ಹೆಚ್ಚಿಸಿದಬಳಿಕ ॥ ಗೆಲುವನಾವನು ದೇವದಾನವ । ರೊಳಗೆ ಭೀಮಾರ್ಜುನರ ಕೈಮುನ । ಪಳವನರಿಯಾ ಭಾರವೈ ಮೇಲೆಂದನಾ ಶಕುನಿ ॥೧೮॥ ಧಾರುಣಿಯೊಳು ಪಿಪೀಲಿಕೆಯು ವಿ । ಸ್ತಾರದಲಿ ಮಾಡಿದಮನೆಯ ಕಾಳೋರಗನು ಹೊಗುವಂತೆ ರಿಪುಕುಂತೀಕುಮಾರಕರು ॥ ವೈರದಲಿ ಸಪ್ತಾಂಗವನು ಕೈ । ಸೂರೆಗೊಂಬರು ತಪ್ಪದಿದಕೆ ವಿ । ಚಾರವನು ಕಾಲದಲಿ ಮಾಡುವುದೆಂದನಾ ಶಕುನಿ ॥೧೯॥ ಹಿಂದೆ ನೀನವರುಗಳ ನಾನಾಚಂದದಲಿ ನೋಯಿಸಿದೆ ಮನದಲಿ । ಕಂದುಕುಂದನು ಕಷ್ಟವೃತ್ತಿಯನಾಚರಿಸುತಿಹರು ॥ ಇಂದು ನೀನಾ ಪಾಂಡುಪುತ್ರರ । ನಂದಗೆಡಿಸದೆ ಬಿಟ್ಟೆಯಾದೊಡೆ । ಮುಂದೆ ಕೆಟ್ಟಿತು ರಾಜಕಾರ್ಯವದೆಂದನಾ ಶಕುನಿ ॥೨೦॥ ಇರುಬಿನಲಿ ಸಿಕ್ಕಿರ್ದಹುಲಿಯನು । ಮುರಿದು ಕಳೆಯದೆ ತಳಪಟಕೆ ಪಿ । ಟ್ಟಿರಿಯಬಹುದೇ ಕೊಂದು ಕೂಗದೆ ಬಿಡುವುದೇ ಬಳಿಕ ॥ ಕರುಬರಹಪಾಂಡವರುಗಳಗಲೆ । ಹರಿವ ಸೆಸೆ ಹೊರಬಿದ್ದರಾದೊಡೆ । ತರಿದು ಬಿಸುಡದೆ ಮಾಣ್ಬರೇ ಹೇಳೆಂದನಾ ಶಕುನಿ ॥೨೧॥ ಹರಿಹಯನು ವೃತ್ರಾಸುರನ ಸಂ । ಹರಿಸಲರಿಯದೆ ಗರುವದಿಂದಿರು । ತಿರಲವನು ದಿನದಿನದೊಳಣುವಣುಮಾತ್ರವನು ಬೆಳೆದು ॥ ಧರೆಯ ತುಂಬಲು ತನ್ನ ಸತ್ವದ । ನೆರೆವಣಿಗೆಗೈ

ಬಿಸದೆ ನಾನಾ । ತೆರದೊಳಾಯಸಗೊಳ್ಳನೇ ಹೇಳೆಂದನಾಶಕುನಿ ॥೨೨॥ ಅಡವಿಯಲಿ ಜನಿಸಿದರು ಬೆಳವಿಗೆ । ಯಡವಿಯೊಳಗಿನ್ನವರ ಬಾಳಿಕೆ । ಗಡವಿಯೇ ನೆಲೆಮನೆಯದಲ್ಲದೆಪಾಂಡುಪುತ್ರರಿಗೆ ॥ ಪೊಡವಿಯೊಡೆತನವಲ್ಲದವರನು । ನಡೆಸುವುದು ಕಾಲವಲಿ ರಾಜ್ಯವ । ಕೊಡುವುದಾವಂಗದಲಿ ಮತವಲ್ಲೆಂದನಾಶಕುನಿ ॥೨೩॥ ತಿಮಿರವಡಗಿಪಲೋಕ ರಕ್ಷಾ । ಕ್ರಮಣವಡಗಿವಪಂತಿ ಕರ್ಮಾ । ಭ್ರಮೆಗಳಡಗಿಪಯೋಗ ರುಚಿಯಡಗಿಪನರೋತ್ತಮನು ॥ ಹಿಮವಡಗಿಪಸರೋಜಪಂತಿಹು । ದಮಲವಾತ ಕೇಳ್ವೆಗೆಗಳಡಗಿದೊ । ಡಮರಪದವೆನಿಸುವುದು ಚಿತ್ತೈಸೆಂದನಾಶಕುನಿ॥೨೪॥ಬಿಡದೆ ಸುಖದುಃಖಗಳೊಳೊಂದನು । ಹಿಡಿದು ಸಪ್ಪ್ಯನಹಾರವುಖದಲಿ । ನಡೆಯಲೊಂದರ ತುಷ್ಟಿಯೊಂದರನಷ್ಟ ತನಗಹುದು ॥ ಹಿಡಿವುದಿಹಪರವೆರಡರೊಳಗಳ। ವಡಿಕೆ ತನಗಹುದೊಂದನೊಂದನು । ಬಿಡುವುದಲ್ಲದೆ ಬೇರೆ ಮತವಿಲ್ಲೆಂದನಾಶಕುನಿ ॥೨೫॥ ಭಾವನೈದುನನಣ್ಣತಮ್ಮನು । ಮಾವನಳಿಯನು ಪುತ್ರಮಿತ್ರರು । ಸೇವಕರು ಸಜ್ಜನರು ಸುಜನರು ಸತ್ಯಯುತರೆಂದು ॥ ಭಾವಿಸದಿರಾರುವನು ನಿನ್ನಯ । ಜೀವವುಳ್ಳನ್ನಬರ ನಿನ್ನಯ। ದೈವವೇ ಗತಿಯೆಂದು ನಂಬುದೆಂದನಾಶಕುನಿ ॥೨೬॥ ಶತ್ರುಶೇಷವಿದೆಲ್ಲವೆಂದುಳಿ । ಮತ್ತೆ ಬರಲಾಗವುಕದಾ ಭೂ । ಪೋತ್ತಮರುಗಳು ವೈರಿರಾಯರ ವಂಶಬೀಜವನು ॥ ಬಿತ್ತುವರೆ ನೇತ್ರಾವಳಿಯಮಿಗೆ । ಚಿತ್ತ ಕಾರಾಗಾರದೊಳಗೆ ಕಳತ್ರಸಹಿತನಶನದಲಧಿಕವ್ರತವ ಮಾಡೆಂದ ॥೨೭॥ ವಿಷವನಿಣ್ಣಂಪೆಂಪಳುಕದುಪಭೋ । ಗಿಸಲು ಕೊಲ್ಲದೆ ಬಿಡುವುದೇ ಕರ । ಗಸವ ನಡು ಬಯಲಾದೊಡೆಯು ಕೊಯ್ದುಕ್ಕದೇ ಮರುವ ॥ ಶಿಶುವಿವನು ಸಾಮರ್ಥ್ಯಪ್ರಲೀನನೆ । ಪ್ರಸಿಕದಾ ಯೆಂದುಳಿಹಿದೊಡೆ ರ । ಕ್ಕಸನಹಸು ಮುಂದಕ್ಕೆ ತನಗವನೆಂದನಾಶಕುನಿ ॥೨೮॥ ಕಾಲವನು ಗೂಗೆಗಳು ನಿರ್ಜರ । ರೇಳಿಗೆಯನಾದೈತ್ಯರುಗಳು ತ । ಮಾಳಿ ರವಿರಶ್ಮಿಗಳನಾಬಲುಸಿದ್ದಿಯನು ಚೋರ ॥ ಕಾಲಭುಜಗನು ಗರುಡನುಳಿವನು ತಾಳದಂದದಿ ಪಾಂಡವರು ನಿ । ನ್ನೇಳಿಗೆಯ ಸೈರಿಸರು ಚಿತ್ತೈಸೆಂದನಾಶಕುನಿ ॥೨೯॥ ಪಿಗಡರುದ್ರನು ಲೋಚನಾಗ್ನಿಯೊ । ಳೊಗುಮಿಗೆಯ ಕೋಪದಲಿ ಕಾಮನ । ಸಿಗೆ ದಹಿಸಿದಂದದಲಿ ರಿಪುಕುಂತೀಕುಮಾರಕರ ॥ ಹೊಗೆದು ಕಳೆ ಲಾಕ್ಷಾಭವನದಲಿ । ಹಗೆಗೆ ಹುಲುಮಹುದಲ್ಲದಿದರೊಡೆ । ಪಿಗಟಸುಪ್ರದ್ಯೈರಾಜಕಾರ್ಯವಿದೆಂದನಾಶಕುನಿ ॥೩೦॥ ಪಿಡಿವಫಣಿಯನು ಹೊಡೆವಸಿಡಿಲನು । ಬಿಡಿವಮಾರಿಯ ನಲಿವರುಜೆಯನು । ನುಡಿವುದಿಸವನು ಹಾಸಿವೃದ್ಧಿಯ ಹೆಚ್ಚುಕಂದುಗಳ ॥ ಕಡುವಹಗೆಯನು ಕಾಲಕರ್ಮದ। ಗಡಣವನು ಸುಖದುಃಖದುಪಯದ । ಕಡೆವೊಡಲ ಕಾಣಿಸುವನಾವನೆಂದನಾಶಕುನಿ ॥೩೧॥ ಇನಿತುಚಿಂತಿಸಲೇಕೆ ಕೌರವ । ಜನಪ ನಿಮ್ಮಡಿಗಳಿಗೆ ತಾನೊಂದನುವ ಬಿನ್ನಹಮಾಡುವೆನು ಪಾಂಡವರ ನೆಳಲಿರಲು ॥ ನಿನಗೆ ರಾಜ್ಯವನಾಳ್ವಫಲ ಸಂ । ಜನಿಸಲರಿಯದು ಕಾಲವಲಿ ನೀ । ನೆನೆಯುಪಾಯವನೊಂದನೆಂದು ಕಳಿಂಗ ಕೈಮುಗಿದ ॥೩೨॥ ದೇವದಾನವರಂತೆ ಹದ್ದಿನ । ಹಾವಿನೋಲತಿವೈರಬಂಧದ । ತಾವುತವಣೆಯ ನೀರುಭೇದಿಸುವಂತೆ ಭೇದಿಸುತ ॥ ಕಾವವರ ಕಾವುತ್ತ ಕಂಟಕ । ಜೀವಿಗಳನಪಹರಿಸುತಂತ। ರ್ಭಾವಶುದ್ಧಿಯೊಳಿಳೆಯನಾಳುವುದೆಂದನಾಶಕುನಿ ॥೩೩॥ ವೃತ್ತ್ಯವಿನತಾಳಿಗೆಯೊಳಗ್ಗದ । ಶತ್ರುಗಳ ಸಾಮಿಪ್ಯದಲಿ ದು । ರ್ವೃತ್ತರೋಲಗದೊಳಗೆ ಸಿಂಹದ ಗುಹೆಯೊಳಹಿಪತಿಯ ॥ ಮತ್ತಿನೊಳಗಿಹವೋಲು ಸಲೆ ಬಾ । ಳುತ್ತಲಂತಃಪುರದೊಳರಸಿರು । ತತ್ಯಧಿಕವೆಚ್ಚರಿಕೆಯಿರಬೇಕೆಂದನಾಶಕುನಿ॥

ಹಗೆಯ ಪೆಂಗಳನರಮನೆಗಳೊಳು । ಹೊಗಿಸಲಾಗದು ತನಗವರುಹೇ । ಳಿಗೆಯ ಹಾವಿನವೋಲು ಸುಖತರವಲ್ಲವರಿನೃಪರಾ ॥ ಮಗಳ ಮಕ್ಕಳ ದೆಸೆಯವರನೋ । ಲಗಿಸುವರ ಬಾಹತ್ತರನಿಯೋ । ಗಿಗಳನಂಬುವುದುಚಿತವೇ ಹೇಳೆಂದನಾಶಕುನಿ ॥೩೫॥ ದೈವಹೊಡೆದಂದದಲಿ ಬೆರೆತು ಸ । ಭಾವಲಯದಲಿ ಗರ್ವವಿಭ್ರಮ । ಭಾವಭೂಷಿತನಾಗಿ ವೈಹಾಯಸವನೀಕ್ಷಿಸುತ । ಹಾವಿನಂದದೊಳಿರದೆ ಹಾಸ್ಯರ । ನಾವಲಂಬನನಾಗದೆಯು ಸುಖ । ಜೀವಿಯಾಗಿಹುದುತ್ತಮವು ಕೇಳೆಂದನಾಶಕುನಿ ॥೩೬॥ ಹೀನಮುಖಬಹುಮುಖಪರಾಙ್ಮುಖ । ದೀನಮುಖವಾಚಾಲಮುಖವ । ಜ್ಞಾನಮುಖವಂತರ್ಮುಖಬಹಿರ್ಮುಖವಾದ ಕಾರ್ಯದಲಿ॥ಆನರೇಂದ್ರನ ವರ್ತನಕೆ ದುಃಸ್ಥಾನವಾಗದೆ ಬಿಡದು ಸಂಶಯ।ವೇನಿದಕೆ ಕುರುರಾಯ ಚಿತ್ತೈಸೆಂದನಾಶಕುನಿ ॥೩೭॥ ಶಯನದಲಿ ವನ್ಯಿಯಲಿ ವೈಹಾ । ಳಿಯಲಿ ಬೇಟೆಯಲೂಟದಲಿ ಕೇ । ಳಿಯಲಿ ಸುರತಕ್ರೀಡೆಯಲಿ ಮಜ್ಜನದಸಮಯದಲಿ ॥ ಜಯದ ಜೋಕೆಯಲೋಲಗದಮುರ । ಪಯಲಿ ವಾರಸ್ತ್ರೀಯರುಗಳಲಿ । ಲಯವನ್ನೆಬಿಸಬಹುದು ಚಿತ್ತೈಸೆಂದನಾಶಕುನಿ ॥೩೮॥ ರುಜೆಯನಲುಗುವರದನವನು ದ್ವಿಗು । ರಜವನನುಚಿತಜಾತಧೂಮ । ಧ್ವಜವರುಣವನವಿದ್ಯೆಯನು ಗೃಹವಾಸಕುಂಡಲಿಯ ॥ ವೃಜಿನವನು ಕಂಪಿತವ ವೈರಿ । ವ್ರಜವನುಳುಹುವನೆಗ್ಗನೆಂಬಿದು । ಸುಜನರಭಿಮತ ನಿನ್ನಮತವೇನೆಂದನಾಶಕುನಿ ॥೩೯॥ ಮಣಿದು ಕೂಪದ ಜೀವನವ ಕತೆ । ಗಣಿಸದೇ ಘಟಿಯಂತ್ರಮೃಗರಿಪು । ಹಣುಗಿಪರೆ ಹರಿಣಂಗೆ ಗೆಲವೇ ಕಾರ್ಯಗತಿಯರಿದು ॥ ಮಣಿವುದಳುಕುವುದಾವಪರಿಯಿಂ । ದೆಣಿಸಿ ಮನದಲಿ ವೈರಿರಾಯರ । ಹಣಿದವಾಡುವುಪಾಯವಿದು ಕೇಳೆಂದನಾಶಕುನಿ ॥೪೦॥ ಅಹಿಯ ಬಾಧೆಯ ಬಲೆಗೆ ಸಿಲುಕಿದ । ಮಿಹಿರಬಿಂಬದವೋಲುಮಾಯಾ। ವಿಹರಣದ ವೀಥಿಯಲಿ ಸಿಕ್ಕಿದಜೀವರುಗಳಂತೆ॥ ಅಹಿತರುಪಟಳದೊಳಗೆ ಸಿಲುಕದೆ । ಕುಹಕರವದಿರಪರಿವ ನೆನೆ ಲೇ । ಸಹುದು ಕಾಲಕ್ಷೇಪವಿದಕೇನೆಂದನಾಶಕುನಿ ॥೪೧॥ ನಂಬುವರ ನೆರೆನಂಬು ನಂಬದ । ಡಂಬಕರ ನಂಬದಿರು ಸಂಗರ । ವೆಂಬವಾತಿಗೆ ಹಂಬಲಿಸಿ ಬೆಂಬೀಳ್ವ ಬಾಹಿರರ ॥ ನಂಬಿರಬಿರಲಿರಾಯಹನನವಿ । ಳಂಬನವ ಮಾಡದಿರುರೋಷಾ । ಡಂಬರವ ರಚಿಸದಿರು ಬಹಿರಂಗದಲಿ ನೀನೆಂದ ॥ ಖೂಳನಹುದಾತಾರನನುದು । ಮೇಳನಹಮಿತ್ರನನು ತನಗನು । ಕೂಲೆಯಲ್ಲದಸತಿಯನಂತಪರ್ಯಾಯಿಯಹನರನ ॥ ವ್ಯಾಳಯುತವಹನಿಳಯವಿನಿತುವ । ಕಾಲದಲಿ ವರ್ಜಿಸುವುದಲ್ಲದೊ । ಡೂಳಿಗವು ಹಿರಿದಹುದು ಚಿತ್ತೈಸೆಂದನಾಶಕುನಿ ॥೪೩॥ ಎಲ್ಲರಿಂ ಬಹುಧನವ ಕೊಳುನಿ । ನ್ನಲ್ಲಿ ಕಾಣಿಯ ಬರಿದೆ ನೋಲವಿ । ರಿಲ್ಲವೆನ್ನದೆ ನುಡಿದು ಕಾಲಕ್ಷೇಪವನು ಮಾಡು॥ಬಳ್ಳಿದನು ನಮಗೆಂಬನಯನುಡು।ಯೆಲ್ಲರಲಿ ಬೆಚ್ಚಂತೆ ರಿಪುಗಳ। ಗೆಲ್ಲಗೆಡಹುವಮಂತ್ರವಿದು ಕೇಳೆಂದನಾಶಕುನಿ ॥ಧನವನಿತ್ಯಾದೊಡೆಯುಸಹಭೋ । ಜನವನುಂಡಾದೊಡೆಯುಮೇಣ್ನಿಜ । ತನುಜೆಯರನಿತ್ತಾದೊಡೆಯು ಬಳಿಸಂದು ಬೇಸರದೆ ॥ ತನುವ ಬೆರಸಿದ್ದಾದೊಡೆಯು ನೂ । ತನಗುಣವ ನುಡಿದಾದೊಡೆಯು ರಿಪು । ಜನಪತಿಯ ವಶವಾಳ್ಪುದುಚಿತವಿದೆಂದನಾಶಕುನಿ ॥೪೫॥ ಕೋಶಪಾಸಾದಿಗಳ ಮಾಡಿ ಮ । ಹೀಸುರರ ಮೇಲಾಯುಧಂಗಳ । ಸೂಸಿ ದೈವವ ಮುಟ್ಟಿ ಟವ್ಯಾಜ್ಞೆಗಳಲೊಡಬಡಿಸಿ ॥ ಹೇಸದರಿಭೂಪಾಲರನು ನಿ । ಶ್ಶೇಷವೆನಿಸುವುದಲ್ಲದಿದೊರ್ಡೆ । ಘೈಸರಿಸುವುದು ರಾಜಕಾರ್ಯವಿದೆಂದನಾಶಕುನಿ ॥೪೬॥ ನರಕವಿಲ್ಲದನರರು ನಾರಿಯ । ರುರುಬೆಯಿಲ್ಲದಯತಿಗಳಸುರರ । ವಿರಸವಿಲ್ಲದಸುರರು ಮಾಯಾಪಾಶ

ವನು ಹರಿದ ॥ ಪರಮತತ್ವಜ್ಞಾನಿಯಂತಿಹ । ಧರೆಯೊಳಗೆ ಹಾಗರಸುಗಳು ಹಗೆ । ಹರಿದು ಹೋಗಲಸಾಧ್ಯವಹುದೇನುಂಟು ಹೇಳೆಂದ ॥೪೭॥ ಮಸಗೆ ಮೂಡಿದ ಹೊಲನು ದುಷ್ಟ । ಪ್ರಸರದೇಳಿಗೆ ಪಾಪಿಯೋಲಗ । ಹುಸಿಯಬಾಳುವೆ ಹುದುಪಿನಾರಂಭಪಫಲೋದಯವು ॥ ನಸಿದುಹೋಗವೆ ಲೋಕದೊಳಗವು । ಹೆಸರುವಡೆವವೆ ಹಗೆಯ ಹೆಚ್ಚುಗೆ । ಹಸನ ಕೊಡುವುದೆ ರಾಯ ಚಿತ್ತೈಸೆಂದನಾ ಶಕುನಿ ॥೪೮॥ ಜಾತಿಬಾವನ್ನದಲಿ ಸರ್ಪದ । ಭೀತಿ ಸತ್ಪುರುಷರಿಗೆ ದುರ್ಜನ । ಭೀತಿ ದೇವಾದ್ಯರಿಗೆ ದನುಜಾದಿಗಳ ಬಲುಭೀತಿ ॥ ಜಾತಮಾತ್ರಕೆ ಜನನಮರಣದ । ಭೀತಿ ಬೆಂಬಿಡದಂತೆ ಗೋತ್ರಜ । ಭೀತಿ ಭೂಪಾಲರಿಗೆ ಹಿರಿದಹುದೆಂದನಾಶಕುನಿ ॥೪೯॥ ಕರಣಿಕರು ಕರಣಿಕರೊಡನೆ ಸಹ । ಚರರು ಸಹಚರರೊಡನೆ ಸಾಮಂ । ತರಲಿ ಸಾಮಂತರುಗಳಾ ಮಂತ್ರಿಯಲಿ ಮಂತ್ರಿಗಳು ॥ ತರುಣಿಯರು ತರುಣಿಯರೊಡನೆ ಪು । ಕರರು ಪುಕರರೊಡನೆಯಿರಲೊರ । ಸೊರಸು ಮಿಗೆ ಮಸೆವುದು ಕಣಾ ಭೂಭುಜನೆ ಕೇಳೆಂದ ॥೫೦॥ ವ್ಯಾಕುಲಿತವಿಪ್ರರ ವಿಸತಿಯ ದಿ । ವಾಕರನ ಲೋಕಾಯತರ ರ । ತ್ನಾಕರನ ಲಾವಕರ ಹಿಸುಣರ ದಾಯಭಾಗಿಗಳ ॥ ಶ್ಲೋಕಿಗರ ಮಾಯಾವಿಗಳ ಬ । ಪರ್ಲೇಕರನ ವಿನಿಯೋಗಿಗಳ ಸ । ಪ್ತೈಕಮತ್ಸರದೊಳಗೆ ಬದುಕುವನಾವ ಹೇಳೆಂದ ॥೫೧॥ ಮಂಬು ಮಹಿಯನುಮುಸುಕುವಂತೆ ಧ । ನಂಜಯನು ಕಾನನವ ಸುಡುವಂ । ತಂಬಿಕೆಗಳುಮ್ಮಾಹವನು ಹೊಯ್ವೊಯ್ದ್ವರಸುವಂದದಲಿ ॥ ರಂಜಕರು ಪಾಂಡವರು ನಿನ್ನನು । ರಂಜಿಸುವರಾವಂಗದಲಿ ನವ । ಕುಂಜರನ ಕಾಲಾಟ ಸಿಂಹಕೆ ಸೇರುವುದೆಯೆಂದ ॥೫೨॥ ದನಿಗೆ ನಡೆದೊಳಪೊಕ್ಕು ಮರೆಗೂ । ಡಿನಲಿ ಸಿಲುಕಿದ ಹುಲಿಯವೋಲ್ಕಾ । ನನದಿ ಬೀಸಿಪ್ಪ ಬಲೆಯೊಳಗೆ ಗಾನಕ್ಕೆ ಮನಸೋಲ್ದು ॥ ಹನನವರಿಯಪಮೃಗದವೋಲಿರು । ಬಿನಲಿಕಡಹಿದಕರಿಯವೋಲಿರ್ಪು । ಜನಪರಭ್ಯುದಯದ ವಿನಾಶವನೆಸಗಬೇಕೆಂದ ॥೫೩॥ ಎಂದು ದುರ್ಬೋಧೆಗಳ ನಾನಾ । ಚಂದದಲಿ ಬೋಧಿಸಿ [illegible] ಮು । ನಂದಗೆಡಿಸಿ ತದೀಯವಂಶಭಕ್ಷೋದವಮಾರ್ಗವನು ॥ ಬಂದುಗೂಡಿ ಸುಯೋಧನಂಗಾ । [illegible] ನಿಸಿ ಕಳಿಂಗ ಲೋಕವ । ಕೊಂದವನ್ನೈ ಜನಮೇಜಯಕ್ಷಿತಿಪಾಲ ಕೇಳೆಂದ ॥೫೪॥ ಎಮ್ಮ ಬಹುಮಾನಾವಮಾನವು । ನಿಮ್ಮದಲ್ಲದೆ ಬೇರೆ ನಮ್ಮಯ । ಸೊಮ್ಮುಸಂಬಂಧದಲಿ ಹಿತವರ ಕಾಣೆನಾನಿನ್ನು ॥ ಸಮ್ಮತರು ಪಾಂಡವರಿಗಗ್ನಿಯ । ಲೊಮ್ಮೆ ಹರಿವನು ನೆನೆವನೊದವಿದೊ । ಡೆಮ್ಮ ಸುಕೃತೋದಯದ ಫಲವೆಂದನು ಸುಯೋಧನನು ॥೫೫॥ ಎನೆ ಕಳಿಂಗಾದಿಗಳು ತಂತ । ಮ್ಮನುಮತವ ಹೇಳಿದರು ಕೌರವ । ಜನಪನವರಿಗೆ ಕೇಡನಿಶ್ಚೈಸಿದನು ಮನದೊಳಗೆ ॥ ಜನಕನಲ್ಲಿಗೆ ನಡುವಿರುಳು ಬಂ । ದನುನಯದೊಳೀಮಾತ ತೆಗೆದಂ । ಪನು ವೃಕೋದರನೊಳಿಗವನರ್ಜುನನ ಸಾಹಸವ ॥೫೬॥ ಅರಿಗಳುದ್ಭವವಿನ್ನು ಗಂಟಲ । ನರಿವುದೆಮ್ಮನು ನೂರುಮಕ್ಕಳ । ನರಸ ಬರಿದೇ ಹಡೆದು ಕೆಡಿಸಿದೆ ತಾಯಜೌವನವ ॥ ಇರಲಿ ಭೀಮಾರ್ಜುನರು ಹಸ್ತಿನ । ಪುರದೊಳೆಮ್ಮನಿಬರನು ದೇಶಾಂ । ತರಕೆ ನೇಮಿಸು ಜೀಯ ನೂಕದು ಭೀಮನೊಡನೆಂದ ॥೫೭॥ ಅಕಟ ಮಗನೇ ಧರ್ಮಸುತ ಬಾ । ಧಕನೆ ಭೀಮಾರ್ಜುನರ ಮತಿ ಕಂ । ಟಕದೊಳೆರಗದು ಮಿಗಿಲು ನಡೆಯರು ಧರ್ಮನಂದನನ ॥ ಸಕಲರಾಜ್ಯಕೆ ಪಾಂಡುವೇ ಪಾ । ಲಕನು ತನ್ನೊಳು ತಪ್ಪಿದನೆ ಬಿಡು । ವಿಕಳಮತಿಗಳ ಮಾತನೆಂದನು ಮಗಗೆ ಧೃತರಾಷ್ಟ್ರ ॥೫೮॥ ಬೊಪ್ಪ ಬಿನ್ನಹವವರ ಜನಕನು । ತಪ್ಪಿ ನಡೆಯನು

ನಿಮಗೆ ನೀವಿನ್ನೊಪ್ಪಿಸುವುದಾಪಾಂಡುಸುತರಿಗೆ ರಾಜ್ಯವೈಭವವ ॥ ಅಪ್ಪುದಿಳೆ ಧರ್ಮಾರ್ಜನ ತರುವಾ । ಯಪ್ಪುದಾವಿಧಿಯಲ್ಲಿ ಸಂತತ । ತಪ್ಪದವರಿಗೆ ಸಲಲಿ ನೆಲವಿದು ಹೊಲ್ಲಹೇನೆಂದ ॥೨೯॥ ಜನಪ ಸುಖ ದಲಿ ನಿಮ್ಮ ತಮ್ಮನ । ತನುಜರೊಡನೆಯು ರಾಜ್ಯವಮಾಡುವು । ದನುನಯವಲಾಬೀಳುಕೊಡುವುದು ನಮ್ಮನೂರ್ವರನು ॥ ಜನಪರುಂಟರೋಲೈಸಿಕೊಂಬರೆ । ತನಗಿರದೆ ಖಂಡೆಯದ ಸಿರಿ ಕರೆ । ಜನನಿಯನು ಬೀಳ್ಕೊಂಬೆವಿನ್ನೇನೆಂದು ನಿಂದಿರ್ದ ॥೬೦॥ ಎಲೆಮಗನೆ ಯೆಪ್ಪಾನೆ ಬಾ ಕುರು । ಕುಲತಿಲಕ ನೀಹೋ ಗಲೆನ್ನೊಡ । ಉಳಿವುದೇ ಮರಿಯಾನೆ ಬಾರ್ಕೆ ಕಂದ ಬಾಯೆಂದು ॥ ಸೆಳೆದು ಬಿಗಿಯಪ್ಪಿದನು ಕಂಬನಿ । ದುಳುಕಿದನು ಹೇಳಿನ್ನು ಮೇಲಣ । ಬಳಕೆಯನು ರಿಪುರಾಜಕಾರ್ಯಕೆ ಬುದ್ಧಿಯೇನೆಂದ ॥೬೧॥ ನೀರಪ್ರ ಷವಿಕ್ಕಿದೆವು ಕಿಚ್ಚಿನ । ಭಾರವಣ್ಣೆಯೆಸಮುದೊ ಪುಣ್ಯವ । ಹೋರಿಸುವೆವೊಪ್ಪಗದರೆ ಹೋಗಲಿ ನಮ್ಮ ಹಗೆ ಹರಿದು ॥ ಓರಣಿಸಿತ್ತೆ ವೈರಿಗಳ ವಿಸ್ತಾರ ಮರೆಯಲಿ ಬೀಯ ಬೋಜನ । ಬಾರಿಗುತ್ತಿದು ನಿಮ್ಮ ಚಿತ್ತಕೆ ಬಹೊಡೆ ಮಾಡುವೆವು॥೬೨॥ಆವತೆರದಲಿ ವೈರಿಘಟಕುಲ । ದಾವಗೆಯ ನಿಟಸುವಿರಿ ನಿಮ್ಮೊಳ । ಗಾವು ಹೊರಗೇ ಮಗನೆ ಸೊಗಸೆನೆ ನಿಮ್ಮ ವೈಭವಕೆ ॥ ಸಾವಪಾವಂಗದಲಿ ಮಿಗೆ ಸಂ । ಭಾವಿಸುವು ದಾತೆರನ ನೀ ಹೇ । ಳಾವು ಸೊಗಸುವವೆಂದು ನುಡಿದನು ಮಗಗೆ ಧೃತರಾಷ್ಟ್ರ ॥೬೩॥ ಕರೆಸಿ ಪಾಂಡು ಕುಮಾರಕರ ನೀ । ಧರೆಯ ಹಸುಗೆಯ ಮಾಡಿಕೊಡು ಕರಿ । ತುರಗಭಂಡಾರವನು ಸಮಪಾಲಾದವಿಷ ಯದಲಿ ॥ ಇರವನವರಿಗೆ ವಾರಣಾವತಿ । ಪುರದೊಳಗೆ ಪರುಠವಿಸಿಕೊಡುತಾ । ನುರುಹಿ ಸುಡುವೆನು ಬಳಿಕ ಲಾಕ್ಷಾಭವನರಚನೆಯಲಿ ॥೬೪॥ ಅಹುದು ಮಗನೇ ಮಂತ್ರವಿದು ಮತ । ವಹುದು ಸಮಗಾಂಗೇಯಭೀಷ್ಮ ವಿದುರರು । ಕುಹಕಿಗಳು ಕೃತ ಭಿನ್ನವಾದೊಡೆಭಾರವದು ಮೇಲೆ ॥ ಗಹನಗತಿಯಲಿ ಗೂಢತರಸ । ನ್ನಿಹಿ ತಕರ್ಮಕಲಾಪದಲಿ ರಪು । ದಹನಸಿದ್ಧಿಯ ನೆನೆವುದೆಂದನು ಮಗಗೆ ಧೃತರಾಷ್ಟ್ರ ॥೬೫॥ ಜನಕನನು ಬೀಳ್ಕೊಂಡು ಕೌರವ । ಜನಪ ತನ್ನರಮನೆಯ ಸಚಿವರೊಳ ನುಪಮಿತವಿಶ್ವಾಸಸೂಚಕನನು ಪುರೋ ಚನನ ॥ ನೆನೆದ ಕೌರವರಾಜಕಾರ್ಯದ । ಘನವನರುಹಿ ಸಮಗ್ರಧನಸಾ । ಧನವ ಜೋಡಿಸಿ ಕೊಟ್ಟು ಕಳುಹಿದನವನಗುಪ್ತದಲಿ ॥೬೬॥ ಆಪುರೋಚನನೆಂಬವನು ಬಲು । ಪಾಪಕರ್ಮನು ಕುರುಪತಿಗೆ ಒಳ । ಕಾಪುರಾಂತರದಿಂದ ಬಂದನು ವಾರಣಾವತಿಗೆ ॥ ಆಪುರದ ಜನವರಿಯದಂತಿರೆ । ಕಾಪುರುಷನಳವಡಿ ಸಿದನು ನಸು । ದೀಪತಾಗಿದೊಡೇಕರೂಪಹರಾಜಭವನವನು ॥೬೭॥ ನಿಗಮಸಂಸ್ಥಿತವಾಸ್ತುರಚನಾ ದಿಗಳನಾಯವ್ಯಯದ ತಾರಾದಿಗಳ ರಾಶಿಗ್ರಹಬಲದ ವಿಪರೀತಯೋಗದಲಿ ॥ ಹಗಲು ತೀರಲುತ್ತಳಿತ ಕೈದೀವಿಗೆಯ ಪಂತಿಯ ಬೆಡಗಿನಲಿಕೇ । ಜಗನು ಕೃತ್ರಿಮರಚನೆಯಲಿ ಮಾಡಿಸಿದನರಮನೆಯ ॥೬೮॥ ಅರಗಿನಲಿ ಭಿತ್ತಿಗಳ ನವಸ । ಜ್ಜರಸಗುಡಮಿಶ್ರದಲಿ ನೆಲೆಯು । ಪ್ಪರಿಗೆಗಳನವರಲಿ ಕವಾಟಸ್ತಂಭವೇದಿಗಳ ॥ ವಿರಚಿಸಿದ ನವಸೌಧಪಾ । ಸ್ತರಣನಂಪ್ಯಾವರ್ತದಲಿ ಪರಿ । ಪರಿಯ ಬಿನ್ನಾಣದೊಳಗರಗಿನಮನೆಯ ಮಾಡಿಸಿದ॥೬೯॥ಹಿರಿಯಭವನದ ಸುತ್ತುವಳಯದ । ಮುರುಹಿನಲಿ ಮನೆಮನೆಗಳಾ ಮಂ । ದಿರನಿಕಾಯಕೆ ಬಾಗಿಲೊಂದಾಪ್ರಾವರದೇಶದಲಿ ॥ ಇರವು ತನ್ನದು ಬಾಗಿಲಿಕ್ಕಿದು । ಹೊರಗೆ ಮುದ್ರಿಸಿ ಕಿಚ್ಚಚುಚ್ಚುವ । ಪರುಠವಣೆಯಲಿ ಖಳಪುರೋಚನನಂದು ನಿರ್ಮಿಸಿದ ॥೭೦॥ ಧರಣಿಪತಿ ಕೇಳಿತ್ತ ಹಸ್ತಿನ । ಪುರದೊಳಗೆ ಕುಂತೀಕುಮಾರರ । ಕರೆಸಿ ಕಟ್ಟೇಕಾಂತದಲಿ ಧೃತರಾಷ್ಟ್ರಭೂ

ಪಾಲ ॥ ಬೆರಗುಬಿನ್ನಾಣದಲಿ ಮಕ್ಕಳ । ಮರುಳುಮಾಡಿದನೇನಹೇಳುವೆ । ನುಲಿವನೆಯ ಬೀಡಾರದಲಿ ಬಿಡಿ
ಸಲ್ಕೆ ಮನದಂದ ॥೨೧॥ ದುರುಳರೀಕೌರವರು ನೀವತಿ । ಗರುವರವದಿರು ಪಾಪಕರ್ಮರು । ಪರಮಪು
ಣ್ಯರು ನೀವು ತನ್ನವದಿರು ಕುಮಂತ್ರಿಗಳು ॥ ಎರಳೆತೋಳನಸಾದುಸುಣ್ಣದ । ನೆರವಿಗದುಪಾವಗೆಯ
ಸೇರುವೆ । ಯರಸ ನಿನ್ನೊಡನೆನ್ನ ಕುನ್ನಿಗಳೆನುತ ಬಿಸುಸುಯ್ದ ॥೨೨॥ ತಂದೆಯುಳ್ಳದನಿವಿಗೆಹಿತರಾ ।
ರೆಂದು ಮರುಗುವೆನೆನ್ನ ಮಕ್ಕಳು । ಕೊಂದು ಹಿಂಡೆಯಕೂಳನುಂಬೊಡೆ ಹೇಸುವವರಲ್ಲ ॥ ಇಂದು
ನಿಮಗವಲಂಬಲುಪಪತಿ । ಬಂದಪಾದೊಡೆ ತನ್ನ ತಲೆಯಲಿ । ನಿಂದು ಹೊರೆವುದಕೀರ್ತಿಕಿಲ್ಬಿಷ ಮಗನೆ
ಕೇಳೆಂದ ॥೨೩॥ ತಾತ ಕೆಡುವಿರಿ ನೀವು ತನಗ । ಖ್ಯಾತಿ ಕೌರವರೆಂಬವರು ದು । ರ್ನೀತಿಕಾರರು ಭೀಷ್ಮ
ವಿದುರರು ಧೀತರವದಿರಿಗೆ ॥ ನೀತಿಸಮ್ಮತವಾಗಿ ಚಿತ್ತದೊ । ಳಾತ ಮತವನು ಹೇಳಿ ಸಮ್ಮೊಳು । ಭೀತಿ
ಬೇಡೆಂದರಸ ಹಿಡಿವನು ಧರ್ಮಜನ ಕರವ ॥೨೪॥ ಜಾರೆ ಮತವೆಮಗೇನು ಬೊಪ್ಪನ । ಚಾರಿ ನಿಮ್ಮದು
ನೀವು ಬೊಪ್ಪನ । ಸೂರುಮಡಿಯೆಮಗೊಳ್ಳಿದರು ಜೇಲಿನ್ನು ಹಿತರುಂಟೆ ॥ ಬೇರಿರಿಸಿ ಕೂಡಿರಿಸಿ ನಿಮಗೆ
ಯು । ತೋರಿದುದೆ ಮತ ನಿಮ್ಮ ಸೇವೆಯ । ವಿಾರಬಲ್ಲೆನೆಯೆಂದು ಧರ್ಮಜ ನುಡಿದನರಸಂಗೆ ॥೨೫॥
ಎರೆಯಮಂಚಿಯೊ ತಳಿತಮೊಕ್ಕೆಯೊ । ಹುರಿಯಬಲೆಯೋ ನಾಗಸನ್ನೆಯೊ । ಸರಿಯಗೊರೆಯೋ
ತಕ್ಕಿನುಂಡೆಯೊ ಸವಿಯಚಿತ್ರಕವೋ ॥ ಅರಸನಂಕೆಯ ಮನದಬಯಕೆಯ । ಹೊರೆಯ ಬಳಕೆಯ
ನೀಸಮಂಜಸ । ತರವ ಸಾತ್ವಿಕರೆತ್ತ ಬಲ್ಲರು ಭೂಪ ಕೇಳೆಂದ ॥೨೬॥ ಕಂದ ಮನಮುನಿಸಿಲ್ಲಲೇ ನಾ ।
ಪೆಂದನುಡಿಗೊಡಬಡುಪಿರಾದೊಡೆ । ಮುಂದೆ ಪುರವಿದೆ ವಾರಣಾವತವಿಲ್ಲಿಗರುವತ್ತು ॥ ಸಂದನಾಡು
ಸಮಸ್ತವಸ್ತುಗ । ಳಿಂದ ಪೂರಿತ ಹಸ್ತಿನಾಪುರ । ದಿಂದ ಮಿಗಿಲದು ರಾಜಧಾನಿಸ್ಥಾನ ನಿಮಗೆಂದ
॥೨೭॥ ಹೈಹನಾದ ಭವತ್ಕೃಪಾಸ । ನ್ನಾಹವೇ ಸಾಮ್ರಾಜ್ಯವಾವುದ । ನೂಹಿಸಿದೊಡಾಸ್ಥಿತಿಯೊಳ
ಪಡಿಸುವೆಂದು ವಿನಯದಲಿ ॥ ಗಾಢಗತಕವನರಿಯದವರು । ತ್ಸಾಹದಲಿ ಕೈಕೊಂಡು ಭೀಷ್ಮಗೆ । ಬೇಹ
ವಿದುರದ್ರೋಣಮುಖ್ಯರಿಗರುಹಿದರು ಹದನ ॥೨೮॥ ಧಾರಿಣೀಪತಿ ರತ್ನಮಯಭಂ । ಡಾರಸಹಿತ
ಗಜಾಶ್ವರಥಪದ । ವಾರವನು ಮಾಡಿದನು ಹಸಿಗೆಯನೆರಡುಭಾಗವನು ॥ ಕೌರವರಿಗೊಂದಿವರಿಗೊಂ
ದೆನೆ । ಲೋರಣಾಪಲೀಪವಡಿಸಿ ಬಹು ವಿ । ಸ್ತಾರದಲಿ ಭೀಷ್ಮಾದ್ಯರಹುದೆನಲಿವರಮನ್ನಿಸಿದ ॥೨೯॥
ಇವರು ಶುಭಘಟನಸುಭಮುಹೂರ್ತ । ಪ್ರವರದಲಿ ಹೊರವಂಟರಾಜನ । ನಿವಹ ಮರುಗಿತರಣ್ಯವೇ ಗತಿ
ಯರಸ ನಮಗೆಂದು ॥ ಅವರ ಕಳುಹುತ ಬಂದರಾಕೌ । ರವರು ನಿಂದರು ಭೀಷ್ಮಕಲಶೋ । ದ್ಭವರು
ಸುತರಿಗೆ ಬುದ್ಧಿಹೇಳಿದು ಮರಳಿದರು ಪುರಕೆ ॥೩೦॥ ವಿದುರನೊದನ್ಮೈತರುತಸನ್ಮೆ । ತದಲಿ ಸೂಚಿಸಿ
ಮರಳಿದನು ನೃಪ । ಸುಮತಿ ವರಗಾಂಧಾರಿ ಮೊದಲಾದಖಿಳರಾಣಿಯರು ॥ ಮುದದ ಮೊರೆವಿನಲಿವ
ರ ತೆಗೆದ । ಪ್ಪಿದರು ಭೂಪತಿಸಹಿತ ಕಡುಶೋ । ಕದಲಿ ಕಳುಹಿಸಿಕೊಂಡು ಬಂದರು ಹಸ್ತಿನಾಪುರಕೆ
॥೩೧॥ ಅರಸ ಕೇಳ್ಕೆ ಹಸ್ತಿನಾಪುರ । ವರವ ಹೊರವಡುವಾಮುಹೂರ್ತಕೆ । ವರುಷವಿಪ್ಪತ್ತೊಂಬತಾ
ದುದು ಧರ್ಮನಂದನಗೆ ॥ ವರುಷಹದಿಮೂರರಲಿ ಹಸ್ತಿನಾಪುರದೊಳಿಪ್ಪರು ಹಿಂದೆ ಷೋಡಶ । ವರುಷ
ವನದೊಳಗಿಂತು ಲೆಕ್ಕವನೋಡಿಕೊಳ್ಳೆಂದ ॥೩೨॥ ಬಂದರೈವರು ಕುಂತಿಸಹಿತಾ । ನಂದದಲಿ ವರವಾರ
ಣಾವತ । ಕಂದು ಪುರಜನಕೂಡಿ ಕನ್ನಡಿಕಲಶವಿಭವದಲಿ ॥ ಬಂದು ತಾವಿದಿರಾಗಿ ಕುಂತೀ । ನಂದನರ

ತಪೋಧಾ । ವಳಿಯ ಗುರುವೆನೆ ವಾದ್ಯತತಿ ಕಳ । ಕಳದೊಳರ್ಜುನದೇವನೆದ್ದನು ಮುನಿಯ ಸನ್ನಿ
ಯಲಿ ॥೩೮॥ ಈತನಾರರ್ಜುನನೆ ಹೋಹೋ । ಮಾತು ಮಾಣಲಿ ಮಾಣಲೆಂಬೀ । ಮಾತು ಹಿಂಚಿ
ತು ಮುನ್ನ ಮೌನದೊಳಿರ್ದುದಾಸ್ಥಾನ ॥ ಭೀತಕಳಕಳರಂಗದಲಿ ಪುರು । ಹೂತಸುತ ಪ್ರಿಯದೋರಿ
ದನು ಜನ । ವ್ರಾತನನು ಕೊಂಡಾಡುತಿರ್ದುದು ರಾಯ ಕೇಳೆಂದ ॥೩೯॥ ದ್ರೋಣ ಕೃಪ ಮೊದಲಾದ
ಮಾನ್ಯ । ಶ್ರೇಣಿಗೆರಗಿದನಮರನಿಕರಕೆ । ಗೋಣನೆತ್ತಿದನಿಟ್ಟು ಕರಪುಟವನು ಲಲಾಟದಲಿ॥ ಪ್ರಾಣಪದ
ವಿದು ನಿಖಿಳವಿದ್ಯೆಯ । ಜಾಣತನಕಿದು ವಿನಯವೆಂದುದು । ಕೇಣವಿಲ್ಲದೆ ನೆರವಿ ನೆರೆ ಹೊಗಳಿತು
ಧನಂಜಯನ ॥೪೦॥ ನಿಲುವಿನಲಿ ಸಂಸ್ಥಾನದಲಿ ಕೈ । ಚಳಕದಲಿ ಭಂಗಿಯಲಿ ಭರದಲಿ । ಉಲಿಯ
ಲೊಯ್ಯಾರದಲಿ ನೋಡಾನೋಡಿಯಂದದಲಿ ॥ ಅಳವಿಯಲಿ ಪರಿವಿಡಿಯಲೂಹಾ । ಬಲದಲವಧಾ
ನದಲಿ ಶಸ್ತ್ರಾ । ವಳಿಯ ಸಾಂಗೋಪಾಂಗಶ್ರಮವನು ತೋರಿದನು ಪಾರ್ಥ ॥ ೪೧॥ ತುರಗಚಯದೇ
ವಂತ ಮದಕುಂಜರಮಹಾದಿವಿಜೇಂದ್ರರಥ ಸಂ । ಚರಣವರಮಾರ್ತಾಂಡ ಎಂದಬ್ಬರಿಸೆ ಜನನಿಕರ॥
ತುರಗಗಜರಥ ವಿವಿಧಶಿಕ್ಷಾ । ಪರಿಣತಿಯ ತೋರಿದನು ಗುರುಕೃಪ । ಸುರನಟೀಜರು ಮುಳುಗಿದರು
ಪುಳಕಾಂಬುಪೂರದಲಿ ॥೪೨॥ ಮತ್ತೆ ಕೊಂಡನು ಧನುವ ನೆರವಿಯ । ನತ್ತ ಹೊಯ್ ಹೊಯ್ ಹೋ
ಗಹೇಳ್ದು । ಮೃತ್ತರೆದೆ ಜರ್ಝರಿತವಾಗಲು ತೋರಬೇಕೆನುತ ॥ ಬತ್ತಳಿಕೆಯಿಂದುಗಿದು ಹೂಡಿವಿ
ಯತ್ತಳಕೆ ಹಾಯ್ಸಿದನು ಕರ್ಬೊಗೆ । ಸುತ್ತಿ ಧಳ್ಳಿಸಿ ಮಸಗಿತಾಗ್ನೇಯಾಸ್ತ್ರಧಾರೆಯಲಿ ॥೪೩॥
ತೆಗೆಸಿದನು ಶಿಖಿಶರವ ಧನುವಿಂ । ದಗಿಸಿದನು ವಾರುಣವನಭ್ರವ । ಮೊಗೆದುದಪ್ಪುತವಾರಿಯುಪಸಂ
ಹರಿಸಿದನು ಮರಳಿ ॥ ಹಗಲನೊಂದೇತುತ್ತುಮಾಡಿದ । ವಿಗಡತಿಮಿರಾಸ್ತ್ರದಲಿ ತಿಮಿರವ । ತೆಗೆಸಿದನು
ಸೂರ್ಯಾಸ್ತ್ರದಲಿ ಬೆರಗಾಗೆ ಸುರನಿಕರ ॥೪೪॥ ಗಿರಿಶರದಲದ್ರಿಗಳ ಮೇಘದ । ಶರದಿನಭ್ರವ ನು
ರಗಬಾಣದಿ । ನುರುಭುಜಂಗವ ನನಿಲಶರದಲಿ ತೀವ್ರಮಾರುತನ ॥ ಪರುಠವವ ತೋರಿದನು ಜನವ ।
ಬ್ಬರಿಸಲಡಿಗಡಿಗಂಧಭೂಪನ । ಕೊರಳು ಕುಸಿದುದು ನುಡಿಯ ನಾಟಕಹರ್ಷಭಾರದಲಿ ॥೪೫॥ ಇವರ
ಮುಖವರಳಿದುವು ಗಂಗಾ । ಭವಕೃಪದ್ರೋಣಾದಿಗಳ ಬಳಿ । ಕವರ ತಲೆಬಾಗಿದುವು ಧೃತರಾಷ್ಟ್ರಾದಿ
ಕೌರವರ ॥ ಇವರ ಜನನಿಯ ಮುಖದ ಸುಮ್ಮಾ । ನವನು ದುರ್ಯೋಧನನ ಜನನಿಯ । ಜವಳಿದು
ಮ್ಮಾನವನು ಬಣ್ಣಿಸಲರಿಯೆ ನಾನೆಂದ ॥೪೬॥ ಬಾಯಹೊಯ್ಕುಲುಗಣನ ಹೊಗಳುವ । ನಾಯಿಗಳ
ದೇನಾಯ್ತು ಕೌತುಕ । ವಾಯಕಿವದಿರ ಪಕ್ಷಪಾತವ ನೋಡುನೋಡೆನುತ ॥ ಸಾಯಕವ ತೂಗುತ್ತಲಾ
ಕರ್ಣಾಯತಾಂಬಕನೆಡಬಲದ ಕುರು । ರಾಯನನುಜರ ಮೇಳದಲಿ ಹೊರವಂಟನಾ ಕರ್ಣ ॥೪೭॥
ಗುರುಗಳಿಗೆ ಕೈಮುಗಿದು ಶಿರದಲಿ । ತರಣಿಮಂಡಲಕೆರಗಿ ನೋಡುವ । ನೆರವಿಗವನಾರೀತನಾರೆಂಬ
ದ್ಭುತವ ಬೀರಿ ॥ ಅರಸ ಕೇಳ್ಕೆ ವಿವಿಧಶಸ್ತ್ರೋ । ತ್ಕರದ ಶ್ರಮವನು ತೋರಿದನು ಕರಿ । ತುರಗ
ರಥವಾಹನದ ಶಿಕ್ಷಾವಿದ್ಯೆಗಳು ಸಹಿತ ॥೪೮॥ ಅವವಿಧದಲಿ ಪಾರ್ಥತೋರಿದ । ನಾವದಿವ್ಯಾಸ್ತ್ರಪ್ರಪಂ
ಚವ । ಪಾವಕಾನಿಲವಾರುಣಾದಿಯನೈದೆ ವಿರಚಿಸಿದ ॥ ಆವಿಧಾನದಲಾ ವಿಹಾರದ । ಲಾವಿಬಂಧದ
ಲರ್ಜುನನ ಬಾ । ಣಾವಳಿಯ ಬಿನ್ನಾಣವನು ತೋರಿದನು ಕಲಿಕರ್ಣ ॥೪೯॥ ಸೆಣಸುವೊಡೆ ಬಾಯೆಂ
ದು ಪಾರ್ಥನ । ಕೆಣಕಿದನು ಘನರೋಷಶಿಖಿಯಲಿ । ಕುಣಿದವಿಬ್ಬರವಿಾಸೆ ಕಂಗಳೊಳುಗುವ ಕೆಂಪಿ

# ಒಂಭತ್ತನೆಯ ಸಂಧಿ.

**ಸೂಚನೆ|| ಬೆಂಬಿಡದೆ ಕಲಿಭೀಮ ಹಿಡಿದು ಹಿ | ಡಿಂಬಕನ ಮುರಿದವನತಂಗಿಹಿ | ಡಿಂಬಿಯನು ಕೂಡಿದನು ಪಡೆದನು ಕಲಿಘಟೋತ್ಕಚನ ||**

ಪ|| ಕೇಳು ಜನಮೇಜಯಧರಿತ್ರೀ | ಪಾಲ ಯಮನಂದನನ ಪಾರ್ಥನ | ಕಾಲ್ತೊಡೆದು ಬಸಿವರುಣಜಲದಲಿ ಬಟ್ಟೆ ಕೆಸರಾಯ್ತು || ಮೇಲೆಯಮಳರು ಕುಂತಿಯುಮ್ಮಡೇ | ವೇಳುವೆನು ಬೇಗದಲಿ ಕುರುಭೂ | ಪಾಲ ಹಿಡಿಯಲಿ ಕೊಲಲೆನುತ ಕಳ್ಳಿರ್ದರವನಿಯಲಿ ||೧|| ಉರಿಯಮನೆಯಲಿ ಸಾಯಲೀಯದೆ | ಸೆರಗ ಹಿಡಿದೆಳತಂದು ಕೊಯ್ದನು | ಕೊರಳನಕಟಾ ಭೀಮನೇ ಹಗೆಯೆಂದಳಾಕುಂತಿ || ಅರಸಹಿಡಿಯಲಿ ದಾನವರು ನಿಂ | ದಿರಕೆಯಲಿ ನುಂಗಲಿಕೆ ಪಾರ್ಥರು | ಧರೆಯೊಳಾವೆಂದೊದರಿದರು ಮಾದ್ರೀಕುಮಾರಕರು ||೨|| ಸಾಕುಸಾಕಾನಿರಲು ಹೆಕ್ಕಳಿಸೇಕೆ ಹೋಹೋಯೆನುತ ಹೊತ್ತನು | ನೂಕಿ ಹೆಗಲೆರಡರಲಿ ಕುಂತಿಯ ಧರ್ಮನಂದನನ || ಆಕಿರೀಟಿಯನೆಡದಲಾವಮಾ | ದ್ರೀಕುಮಾರರ ಬಲದಬದಿಯೊಳ | ಗೌಕಿ ನಡೆದನು ಭೀಮನೊಡಹಾಯ್ದಾದೆವು ಕಲುಮರಸಾ ||೩|| ಬಂದನೀಪರಿ ಹಲವುಯೋಜನ | ದಿಂದ ಹೇರಡವಿಯಲಿ ಬಳಲಿದೆ | ನೆಂದನೇ ನೀರಡಿಸಿದನೆ ಮೋಣ್ಣಿದ್ರೆಗೆಳಸಿದನೇ || ತಂದು ತಾನನವಪುಷ್ಪವಲಿ ತರು | ವೃಂದದಡಿಯೊಳಗಿಳುಹಿ ಬಳಿಕರ | ವಿಂದದೆಲೆಯಲಿ ನೀರ ತಂದೆರೆದನು ಮಹೀಶ್ವರಿಗೆ ||೪|| ತಳಿರ ತುಂದೊಟ್ಟಿದನು ತರುವಿನ | ನೆಳಲೊಳಗೆ ವಿಶ್ರಮಿಸಿದರು ತಸು | ಬಳಲಿಕೆಯು ಭಾರಣೆಯ ಕಡು ಜೋಧಿಸಿದಜೊಂಪಿನಲಿ || ಝಳಕೆ ಕಂದಿದಮ್ರಯ ಬಾಡಿದಾಲಿಲಿತವನಸದ ಮಾಸಿಕೆದರಿದ | ತಲೆಯೊಳಿರೆ ತಸ್ಕರವರನು ಕಂಡಳಲಿದನುಭೀಮ ||೫|| ತಾಯೆ ನೀ ಧಿಟ ನಾಗನಗರಿಯ | ರಾಯನರಸಿಯೆ ನಿನ್ನ ಮಕ್ಕಳು | ರಾಯರೆದೆದಲ್ಲಣರ ಭಾರಿಯ ಬಾಹುವಿಕ್ರಮರೇ || ಈಯವಸ್ಥೆಗೆ ಸೋಮವಂಶದ | ರಾಯತನವೆಂತಹುದು ಹೇಳ್ | ತಾಯೆ ಹೇಳೆನ್ನಾಣೆ ಹೇಳೆಂದಳಲಿದನು ಭೀಮ ||೬|| ಜನನಿಯಂಘ್ರಿಯನೊತ್ತಿ ಯಮನಂ | ದನನ ಚರಣವ ಮುಗಿದು ಬಳಿಕ | ರ್ಜುನನ ಯಮಳರ ಪದವನೆಚ್ಚರದಂತೆ ಹಿಡಿಕಿಸುತ || ಅನಿಬರರವನು ನೋಡಿ ಪೂರ್ವವ | ನೆನೆದು ಬಿರಬಿರದಳುತ ಘನಕಾ | ನನದ ಮಧ್ಯದಲಿತಸಿದ್ದನು ಓರದು ಚಿಂತಿಸುತ ||೭|| ಕಾಕುವದು ಬಲುನಿದ್ರೆ ನಿದ್ರೆಯ ನೂಕುವನು ಕಣ್ಣೆವೆಗಳಲಿ ನಸು | ತೂಕಡಿಕೆ ತೋರಿದೊಡೆ ಮ್ರುಗೆದರುವನು ಕೈಯೊಡನೆ || ನೋಕುವದು ಮ್ರಮರವೆ ಮರವೆಯ | ನೋಕಲಿಸುವುದು ಚಿತ್ತವೃತ್ತಿ ನಿ | ರಾಕುಲಾಂತಃಕರಣನಾದನು ಬಳಿಕ ಕಲಿಭೀಮ ||೮|| ವ್ಯಾಳಗಜಭೂದಾರವೃಕಶಾ | ರ್ದೂಲಸಿಂಹಾದಿಗಳ ಭಯವಾ | ಕೀಳದೈತ್ಯಪ್ರಕರಭಯವಹುದೆನ್ನ ಮರವೆಯಲಿ || ಹೇಳಲೇನದನಿನ್ನು ನಿದ್ರಾ | ವ್ಯಾಳವಿಷವನು ಮೊಗೆದು ಸೂಸಿ ವಿಶಾಲಮತಿಯವಧಾನದಲಿ ಕಾದಿರ್ದನೈವರನು ||೯|| ಧರಣಿಪತಿ ಕೇಳೊಂದುಮಾರಿಯ | ಮುರಿವನಿವರಿಗೆ

ತದ ಸಾಂತರ । ದರಸುಪ್ರೈತ್ಯಹಿಡಿಂಬನೆಂಬವನತುಲಭುಜಬಲನು ॥ ಮುರಿಮುರಿದು ಮೂಗಾಳಿಯಲಿ ಮೂ । ಗರಳಿವಮಾನವಗಂಧವಿದು ಗೋ । ಚರಿಸಿತೆಕ್ಷಣದೋ ಮಹಾದೇವೆನುತೆ ಜರೆಗಾವ ॥೧೦॥ ತಾಯೆ ಬಾರೌ ತಂಗಿ ಗಂಧದ । ವಾಯುವಿದೆ ಮೊಸಗಾರನಾಗಿ ನ । ವಾಯಭೋಜನವಿಂದುದೊರಕಿತು ಮನುಜಮಾಂಸದಲಿ ॥ ಸಾಯಲವದಿರ ಬಡಿದು ತಾ ತವು । ಗಾಯವಿದು ಕೃತಪುಣ್ಯಫಲವೆನೆ । ಮಾಯೆಗಾತಿ ಹಸಾಯವೆನುತ ಹಿಡಿಂಬಿ ಗಮಿಸಿದಳು ॥೧೧॥ ಬಂದಳವಳತಿರೌದ್ರರೂಪಿನೊ । ಳಂದು ಕಂಡಳು ದೂರದಲಿ ಹರಿ । ನಂದನನ ಸುಳಿದಲೆಯ ವಿಪ್ರಾಕ್ಷಗಳ ಕರ್ಕಶದ ॥ ಕೆಂದಳದ ಕೇಸುರಿಯ ಕಂಗಳ ಸುಂದರದನಚ್ಛವಿಯಲಿರೆ ಮನ । ಸಂದಳಾವಿಳಸನುಜೆ ನೋಡಿದಳು ಭೀಮಸೇನಂಗೆ ॥೧೨॥ ಇವನ ಬಣ್ಣಿಸ ಮಾಡಿಕೊಂಡೋ । ಡುವೆನು ವಿಪಿನಾಂತರಕೆ ಮುನಿದವ । ನಿವದಿರ್ಕ್ಯವರ ತಿನಲಿ ಮರಡಿಯಲ್ಲಿ ಮಲಗಿದರ ॥ ಇವನು ತನ್ನಯ ರೌದ್ರಮಯರೂ । ಪವನು ಕಂಡೊಡೆ ಹವರುವನಲಾ । ಯುವತಿಯಹೆನೆಂದಸುರೆ ಸುಳಿದಳು ದಿವ್ಯರೂಪಿನಲಿ ॥೧೩॥ ಪೊಳೆವಕಂಗಳ ಕಾಂತಿ ಮರಗ । ತ್ತಲೆಯ ಪೊತ್ತವ ಬಿಗಿಯೆ ಪ್ರಿಸರು । ಮಳಕೆ ತೂಳುವತುಂಬಿಗಳ ತನುಲತೆಯ ಚಲುವಿಕೆಯ ॥ ಲಲನೆ ಸುಳಿದಳು ಕುಚದ ಭಾರಕೆ ಬಳುಕೆ ನಡು ಬಿಡದೊಲೆದು ಮೋಲುದು ॥ ತಳಯ ಸುಳಿಗುರುಳೊಲೆಯಲಾಕಲಿಭೀಮನಿದಿರಿನಲಿ ॥೧೪॥ ಭೀಮ ನೋಡಿದನು ನುಡಿಸಲೊಯ್ಯನೆ । ತಾಮರಸಮುಖಿ ಹೊದ್ದಿದಳು ನಿ । ಸ್ಸೀಮನೈ ನೀನಾರು ಮಲಗಿದಮತ್ತ್ಯವರಾರು ॥ ಈಮಹಾರಣ್ಯದಲಿ ಬರವಿದು । ಕಾಮಿತವೆ ಕೋಮಲರಿಗೆನೆ ನಿ । ಷ್ಕಾಮಮನದಲಿ ಸತಿಯನುಡಿಸಿದನಾರು ನೀನೆಂದು ॥೧೫॥ ದನುಜಹಿಡಿಂಬನಹಾಹಿಡಿಂಬಕ । ನನುಜೆ ತಾನು ಹಿಡಿಂಬಿ ಯಿರಾಕಾ । ನನವಿದೆಮ್ಮಾಶ್ರಮದಗವ್ಯೂತಿಪಿಜಮನುಜರಿಗೆ ॥ ನಿನಗೆ ಕಾಮಿಸಿ ಬಂದೆನಣ್ಣನು । ಮುನಿದಮಡಿವರ ತಿನಲಿ ನೀನೀ । ಳೆನಗೆ ವಲ್ಲಭನಾಗು ಕೊಂಡೊಯ್ವೆನು ಪಿಮಾಚಲಕೆ ॥೧೬॥ ನಿನ್ನನೊಲ್ಲೆನು ಮುನಿದೆಯಾದೊಡೆ । ನಿನ್ನದೈತ್ಯನ ಕೊಂದು ಬಾ ಹೋ । ಗೆನ್ನ ಬಲುಹನು ನೋಡು ನೀನೆನಲಸುರೆ ವಿನಯದಲಿ ॥ ಮುನ್ನಲೇ ಮನುಮಥನ ಶರದಲಿ । ಖಿನ್ನೆಯಾಗಿದೆ ಮರೆಯಹೊಕ್ಕೆನು । ತನ್ನನೀವಲಿ ಮುನಿದು ನುಡಿವರೆ ಏವಳಿಂದುಮುಖಿ ॥೧೭॥ ಅನುಜೆ ತಳುವಿದಳೆಂದು ರೋಷ । ಸ್ತನಿತಗದ್ಗದ ಕಂಠನೊದೆದೆ । ದ್ದನು ಮಹೀಮಂಡಲವನುಗ್ರಾಂಬಕನ ಡೊಂಬಿನಲಿ ॥ ಅನಿಲಸುತನಿದಿರೆದ್ದನೀತನೆ । ದನುಜನಿನ್ನವನಾಯ್ತು ತಪ್ಪೇ । ನೆನುತ ಹಳಚಿದೊಡಾಹಿಡಿಂಬಕ ಜಡಿದು ಬೊಬ್ಬಿರಿದ ॥೧೮॥ ಬರಲಿಬೇಡನ್ನೊ ಕುನ್ನಿ ಮೆಲ್ಲನೆ । ತರುಬಿ ಕಾದುವುದೆಲವೊ ಪ್ರೈಮರೆ । ದೊರಗಿದವರೇಳ್ವರು ಕರ್ಣಾ ಸತ್ತಂತೆ ನಾರೆನುತ ॥ ತರುಬಿ ಹಿಡಿವಾಭೀಮ ಬೆನ್ನಿನೊ । ಳೆರಗಿದನು ಹೆಮ್ಮರಕೆ ಹಾಯಿದ ನುರುದು ಹೊಯ್ದು ಹಿಡಿಂಬ ಕೊಡಹಿದನನಿಲನಂದನನ ॥೧೯॥ ಎದ್ದು ತಿವಿದನು ಖಳನ ಬರುಯೊಳ । ಗದ್ದುವೀತನಮುಷ್ಟಿ ಮುರಿದೊಡ । ನೆದ್ದು ನಿಮಿಷಕೆ ಸಂತವಿಸಿ ಹೆಮ್ಮರನ ಕೊಂಬಿನಲಿ ॥ ಗೆದ್ದೆಯಿದಕೊಳ್ಳೆನುತ ಖಳನು । ಬ್ಬೆದ್ದು ಹೊಯ್ದಾಡೆಮರನಸಹಿತ ಹಿಡಿ । ದುದ್ದ ನೆಲದೊಳಗೊರಸಿ ಕೊಂದನು ಕಲಿಹಿಡಿಂಬಕನ ॥೨೦॥ ಕಳಕಳದೊಳಿವರೆದ್ದು ಯುವತಿ । ಬಳಿ ಮಹಾದೇವೆಮ್ಮನೆಬ್ಬಿಸಿ ಬಳಿಕ ಕಾವದೆ ತಮ್ಮ ಕೆಡಿಸಲು ಕಾಕಬಳಸಿದೆಲಾ ॥ ಬಳಲಿದೆಮ್ಮನು ಹೊತ್ತು ತೊಳಲಿದ । ಬಳಲಿಕೆಯಲೀಕೇಡು ಲೇಸಾ । ಯ್ತುಳಿದೆ ಪುಣ್ಯವಿದೆಂದರಾಯಮನಂದನಾದಿಗಳು ॥೨೧॥ ಖಳ ಮಡಿಯ

ಲವನನುಜೆ ಭೀಮನ | ಸೋಲಿಸಲರಿಯದೆ ಕುಂತಿಗೆಲ್ಲವ | ತಿಳುಹಿ ನುಡಿದಳು ತನ್ನ ಪೂರ್ವಾಪರದ
ಸಂಗತಿಯ || ಹಲವು ಪರಿಯಲಿ ವಿವರಿಸವಳಂ | ದಲೆದು ಭೀಮಗೆ ಹೇಳಿಸಿದಳಾ | ಫಲುಗುಣನ ಕೈ
ಯಿಂದ ಧರ್ಮಜನಿಂದ ನುಡಿಸಿದಳು ||೨೨|| ಆರು ನುಡಿಯಲು ಸರ್ವಥಾ ಖಳ | ನಾರಿಯನು ಕೈಕೊ
ಳ್ಳೆನೆಂದೇ | ವೀರ ಬಲಿದನು ಬಳಿಕ ವೇದವ್ಯಾಸಮುನಿ ಬಂದು || ನಾರಿಯದಲಿತೋರಿ ತಿಳುಹಿ ಕು
ಮಾರಸಂಭವವವಧಿಯೆಂದಾ | ನಾರಿಯನು ಗಂಟಿಕ್ಕಿದನು ಮುನಿ ಭೀಮಸೇನಂಗೆ ||೨೩|| ವೆಲ್ಲಿಯುಪ
ವನ ವರಸರೋವರ| ವೆಲ್ಲಿ ಕೇಳೀಶೈಲ ಹಿಮಗೃಹ | ವೆಲ್ಲಿ ರಮ್ಯೋದ್ಯಾನವೆಲ್ಲಿ ವಿಹಾರವನಭೂಮಿ ||ಅಲ್ಲಿ
ಗಲ್ಲಿಗೆ ದುಮದು ಮಾರುತಿ | ವಲ್ಲಭೆಯ ರಮಿಸಿದನು ಚಾಪಲ | ವಲ್ಲಿ ಜನಿಸಿದ ಕಲಿಘಟೋತ್ಕಚನಾಹಿ
ಡಿಂಬಿಯಲಿ ||೨೪|| ನುಡಿದಸಮಯಕೆ ತನ್ನ ರಮಣಿಯ | ನೊಡಬಡಿಸಿ ಕೌಟುಂಬರಾಜ್ಯದ | ಒಡೆತ
ನವ ನೆರೆಮಾಡಿ ನಿಲಿಸಿದನಾ ಘಟೋತ್ಕಚನ || ನಡೆದು ಬಂದರು ಶಾಲಿಹೋತ್ರನ | ನಡುವೆ ಕಂಡುಪ
ಚರಿಸಿ ಕೊಂಡರು | ಪಡುವಲಭಿಮುಖರಾದರಿನಿಬರು ವಿಪ್ರವೇಷದಲಿ || ... ||೨೫||

ಅಂತು ಸಂಧಿ ೯ ಕ್ಕೆ ಪದ ೪೦೩ ಕ್ಕಂ ಮಂಗಳಮಸ್ತು.

## ಹತ್ತನೆಯ ಸಂಧಿ.

ಸೂಚನೆ|| ವಿಕಟದನುಜಬಲರೇಕಚಕ್ರದೊ | ಳಕುಟಿಲರು ಭೂಸುರರ ರಕ್ಷಿಸಿ |
ಬಕನ ಮುರಿದರು ಮೆರೆದರಮಳಗುಣಾಗ್ರಹಾರದಲಿ ||

||ಪದ|| ಕೇಳು ಜನಮೇಜಯ ಮಹೀಪತಿ | ಶಾಲಿಹೋತ್ರಾಶ್ರಮವನಿನಿಬರು | ಬೀಳುಕೊಂಡರು
ಮತ್ತೆ ಕಂಡರು ಬಾದರಾಯಣನ || ಹೇಳಿದನು ನಿಮಗೇಕಚಕ್ರವಿ | ಶಾಲಪುರವೊಳಗಾರು ತಿಂಗಳು |
ಕಾಲ ಸವೆಯಲಿ ಬಳಿಕ ಬಳಸುವಿರುತ್ತರೋತ್ತರವ ||೧|| ಎಂದು ಮುನಿ ತಿರುಗಿದನು ಕುಂತೀ | ನಂದ
ನರು ಸಾಕ್ಷಾತ್ರತೇಜೋ | ವೃಂದವನು ಮುಸುಕಿದರು ವಿಮಳಬ್ರಹ್ಮರಶ್ಮಿಯಲಿ || ಅಂದವೇರಿದ ಗಡ್ಡ
ದರ್ಭೆಗ | ಳಿಂದ ನೆರಿಯುಡಿಗೆಗಳ ನಾಟಕ | ದಿಂದ ಮಟ್ಟಿಯ ಧಟ್ಟು ನೊಸಲಲಿ ದೇಸಿವಡೆ ಮೆರೆಯೆ ||೨||
ಅವನಿಪತಿ ಕೇಳೇಕಚಕ್ರವ | ನಿವರು ಹೊಕ್ಕರು ವಿಪ್ರನೊಬ್ಬನ | ಭವನದಲಿ ಮಾಡಿದರು ಬೀಡಾರವನು
ವಿನಯದಲಿ || ಇವರು ಯಾಚಕವಿಷಯದಾತಿ | ಥ್ಯವನು ಕೈಕೊಂಡಲ್ಲಿ ಕತಿಪಯ | ದಿವಸವನು ನೂಕಿ
ದರು ಭಿಕ್ಷಾವಿಹಿತವೃತ್ತಿಯಲಿ ||೩|| ತಂದಭಿಕ್ಷಾಶನವನೈವರು | ನಂದನರು ತಾಯಿಗೆ ನಿವೇದಿಸ | ಲಿಂ
ದುಮುಖಿ ಭಾಗವದ್ವಯವಸಾನಂದದಲಿ ಮಾಡಿ || ಒಂದುಭಾಗ ವೃಕೋದರಂಗುಳಿ | ದೊಂದುಭಾ
ಗವ ತಾನು ನಾಲ್ವರು| ನಂದನರು ವಿನಿಯೋಗಿಸುವರವನೀಶ ಕೇಳೆಂದ ||೪|| ಸಿರಿಯ ಹೇಳ್ವೊಡೆಹಸ್ತಿ

ನಾಪುರದರಸುಗಳ ಸಂತಾನ ಶೌರ್ಯದಪರಿಯ ನೋಳ್ಪೊಡೆ ಶಕ್ರಸೂರ್ಯರ ತೇಜಕುರೆ ವಿಗಲು॥ ತಿರಿದಕೊಳನು ತಾಯಿ ಹಸುಗೆಯ । ಲೆರಡುಭಾಗವ ಮಾಡಿ ಮಕ್ಕಳ । ಹೊರೆದಳಿನ್ನುಳಿದವರ ಪಾಡೇ ನರಸ ಕೇಳೆಂದ ॥೫॥ ಉದಯವಾಗದಮುನ್ನ ಸುಬ್ರಾ । ಹ್ಮ್ಯದಮುಹೂರ್ತದಲೆದ್ದು ಜನನಿಯ । ಪದ ಯುಗಕ್ಕಭಿನಮಿಸಿ ಸಂಧ್ಯಾಮತಕೆ ನಡೆತಂದು ॥ ವಿಟತಸಂಧ್ಯೋಪಾಸ್ತಿಜಪನಿಯ । ಮದಪುರಾಣ ಶ್ರವಣ ಮಧ್ಯಾ । ಹ್ನದಲಿಭಿಕ್ಷಾಟನಗಳಿವರಿಗೆ ನಿತ್ಯವಿಧಿಯೆಂದ ॥೬॥ ಭೋಜನೋತ್ತರವೇಳೆಯಲಿ ನೃಪ । ರಾಜವಾರ್ತಾಕಥನದಿಂದ ಮ । ಹಾಜಗಂಗಳೊಳಾಡುತಿರ್ದರು ನಿಜವಿನೋದದಲಿ ॥ ರಾಜತ ನವನು ಮರೆದರಾದ್ವಿಜ । ರಾಜತೇಜದಿ ಮೆರೆದರಾನರ । ರಾಜರಾಜರ ನೀತಿಯಿದು ಭೂಪಾಲ ಕೇಳೆಂದ ॥೭॥ ಇರಲಿರಲು ಮಾಸಾಂತರದಲಾ । ನೆರೆಮನೆಯ ಶೋಕಾರ್ತರವದ । ಬ್ಬರವ ಕೇಳಿದು ಕುಂತಿ ಸಾಯಂಕಾಲಸಮಯದಲಿ ॥ ಭರದಿನೈತಂದಕಟಭೂಸುರ । ವರವಿರೋಧವಿದೇನು ದುಃಖೋ । ತ್ಕರುಷವಾಕಸ್ಮಿಕವದೆಂದಳು ಕುಂತಿ ವಿನಯದಲಿ ॥೮॥ ನಾಳೆ ವೈವಾಹೋತ್ಸವದ ದೆ । ಖ್ಯಾಳವಿದು ಮೊದಲೀವಸಂತದ । ಬಾಲಿಕೆಯರೋಕುಳಿಯ ಮಳೆಯಲಿ ಸಿಡಿಲು ಸುಳಿದುದೆನೆ ॥ ಹೇಳಿರೇ ನಿಮ ಗಾದ್ಧಯವಸೆ । ಕೇಳಲಾಗದೆಯೆನಲು ದ್ವಿಜನಿದ । ಕೇಳಿ ಫಲವೇನವ್ವಯೆಂದನು ಸುಯ್ದುದು ಗುಡ ದಲಿ ॥೯॥ ಹೇಳಬೇಹುದು ತನ್ನ ನಿಷ್ಟುವ । ನಾಳಿಗೊಳ್ಳದಸುಜನನಿಕರಕೆ । ಕೇಳಬೇಹುದು ಟೀನರಹವಿ ಹೀಂದ್ರರುಪಹತಿಯ॥ಹೇಳು ನೀನೆಲೆವಿಪ್ರ ತಾನಿದ । ಕೇಳಿ ದುಃಖಿತೆಯಾಗಲಾಗದೆ । ಹೇಳ್ದು ದುಃಖಂ ಪಂಚಭಿಸ್ಸಹಯೆನ್ನ ದೇವಚನ ॥೧೦॥ ತಾಯೆ ಕೇಳೀವಿಪ್ರಪುರದೊಳ । ಗಾಯವುಂಟೆನಗೆಂದು ರಕ್ಕಸ । ನಾಯಿ ನೆಲಸಿಹನೂರಹೊರಗಣ ಶೈಲಶಿಖರದಲಿ ॥ ಆಯಿದೊಬ್ಬನ ಮನೆಮನೆಗೆ ಮೇ । ಲಾಯಿಮಹಿ ಷದ್ವಯಸಹಿತನಿ । ರ್ದಾಯದಲಿ ಹನ್ನೆರಡುಕಂಡುಗದಕ್ಕಿಯೋಗರವ ॥೧೧॥ ಇನಿತುವನು ಮನೆಮ ನೆಗೆ ಬಾರಿಯ । ದಿನಕೆ ತೆತ್ತೊಡೆತುಷ್ಟನಿಲ್ಲದ । ದಿನಕೆ ನುಂಗುವನೂರನೀಪರಿ ಹಲವುಕಾಲದಲಿ ॥ ಎನಗೆ ಬಂದುದು ತಾಯೆ ನಾಳಿನ । ದಿನದ ಬಾರಿಯಿದಕ್ಕೆ ತನ್ನಯ । ತನುಜತಾನುಳಿದಂತೆ ಮಾನಿಸ ರಿಲ್ಲ ತನಗೆಂದ ॥೧೨॥ ಮಗನನೀವೆನೆ ಪಾರಲೌಕಿಕ । ವೆಗಡಹುದಪಖ್ಯಾತಿ ತನ್ನನು । ತಗಹುದೈಹಿಕ ದಲ್ಲಿ ಬಳಿಕೀಸಂತತಿಚ್ಛೇದ ॥ ಬಗೆಯದೆನ್ನೊಡಲಸುರಘಾತಿಗೆ । ಮಿಗೆ ವಿಭಾಡಿಸಿ ಕೊಡುವೆನೆಂ ದೆನೆನಗುತ ಕುಂತೀದೇವಿ ನುಡಿದಳು ವಿಪ್ರಕೇಳೆಂದು ॥೧೩॥ ಐಸಲೇ ನಿಮಗಾದಗಸಣೆಯು । ದೇಸರಾ ಪತ್ತಂಜಬೇಡ ಮ । ಹಾಸುರನಬಾಣಸದ ಬೀಯಕೆ ರಪಣವುಂಟೆಮಗೆ । ಏಸುಕಂಡುಗದಕ್ಕಿಯೋಗರ । ವೈಸನೀನೆಳವಡಿಸು ಮೇಲುಂ । ಟೀಸುಸಾಧನವನಿತುವನು ತೆಗೆಸೆಂದಳಾಕುಂತಿ ॥೧೪॥ ತಿರುಗಿ ನಿಮ್ಮೂ ರೊಳಗೆ ಕೊಳನು । ತಿರಿದು ಸಲಹುವೆನೆನ್ನ ಮಕ್ಕಳ । ಧರೆಯಸಾಳುವಸತ್ವಸಹಸಿಗಳಿದ್ದು ಫಲವೇನು । ಹೊರೆಯಲರಿಯೆನು ದುರುಳನೆರಡೆಂ । ಟರಿಯನದರೊಳಗೊಬ್ಬನುದರಕೆ । ನೆರಹಲಾರೆನು ಕೊಳನೆಂ ದಳು ಕುಂತಿ ನಸುನಗುತ ॥೧೫॥ ಸಾಕಲಾರೆನು ಮಗನಸಾತನ । ನೂಕುವೆನು ನಿಮ್ಮಸುರನೂಟಕೆ । ಸಾಕು ತನಗುಳಿದವರೆನಲ್ದ್ವಿಜನದಕೆ ಬೆರಗಾಗಿ ॥ ಸಾಕಲಾರದೆ ಮಗನನುರಿಯಲಿ । ನೂಕಿದವರುಂಟೇ ಮಹಾಸತಿ । ಯಾಕೆವಾಳತನಕ್ಕೆ ನಮಿಸಿದೆನೆನುತ ಕೈಮುಗಿದ ॥೧೬॥ ಮರುಳಲಾ ಬ್ರಾಹ್ಮಣ ವೃಥಾವಿ । ಸ್ತರಣವಾಕ್ಯವೆ ತನ್ನ ನುಡಿ ಸಂ । ವರಿಸು ಬಂಡಿಯ ನಡೆಸು ಭಕ್ಷ್ಯವ ಸೂಪದಂಶಕವ ॥ ತರಿಸು

ತುಪ್ಪದ ಕೊಡನನೊದವಿಸು । ಹರವಿಗಳ ಪಾಲ್ಮೊಸರನೆನೆ ಭೂ । ಸುರನು ಕುಂತಿಗೆ ಕೈಯ್ಯಮುಗಿದನು
ತಾಯೆ ಬೇಡೆನುತ ॥೧೭॥ ಎರವು ಮುಯ್ಯುಟ್ಟುಂಟು ವಸ್ತೂ । ತ್ತರದೊಳಗೆ ಭಾವಿಸಲು ಮಕ್ಕಳ ।
ನೆರವಕೊಟ್ಟವರುಂಟೆ ಮಾರಿಯಸಾಲಿಗೆಯ ಸಫಿಗೆ ॥ ನೆರವಿ ಸಗದೇ ಸಮ್ಯನಿಹಪರ । ವೆರಡರಲಿ ಕೇಡ
ಹುದು ಕಷ್ಟವು । ಗರುವೆಯುಹುದೌ ತಾಯೆ ನೀ ದಿಟ ಮನುಜೆಯಲ್ಲೆಂದ ॥೧೮॥ ಏನನಿತ್ತು ದಧೀಚಿ ಲೋ
ಗರ । ಹಾನಿಯನು ಕಾಯಿದನು ಶಿಬಿ ತಾ । ನೇನನಿತ್ತನು ಕೇಳಿದ್ದೆ ಜೀಮೂತವಾಹನನು ॥ ಏನುಮಾ
ಡಿದನೆಂದು ನೀನದ । ನೇನುವನು ಕೇಳ್ದರಿಯಲಾ ಮ । ತ್ತೇನುವನು ನಿನ್ನವಸರಕೆ ಕೊಳ್ಳೆಂದಳಾಕುಂ
ತಿ ॥೧೯॥ ಆವನರ್ಥ ಪರಾರ್ಥದಲಿ ಸಂ । ಜೀವಿನಿಯನೈದಿತು ಪರಾರ್ಥದೊ । ಳಾವನಸು ನಿರ್ವಾಣ
ಮಾಡುದು ಲೋಕಮೂರರಲಿ ॥ ಆವಿರಿಂಚಪುರಂದರಾದಿಯ । ದೇವತತಿಗವರುಬ್ಬರೇ ಸಂ । ಭಾವನೀ
ಯರು ಕೇಳು ಭೂಸುರ ಯೆಂದಳಾಕುಂತಿ ॥೨೦॥ ಬಲುಹಿಸಲಿ ಭೂಸುರನ ಚಿತ್ತವ । ತಿಳುಹಿ ಬಂದಳು
ಮನೆಗೆ ಭೀಮನನ । ಕೆಲಕೆ ಕರೆದಳು ಹೇಳಿದಳು ಹೇರಾಳವೌತಣವ ॥ ಉಳಿದು ಮುದದಲಿ ಭೀಮ ಬಾ
ಹ । ಪ್ಪಳಿಸಿದನು ಯಮನಂದನಾದಿಗ । ಳಳಲಿ ನುಡಿದರು ದೈತ್ಯಜಯಸಂಶಯದಭೇದದಲಿ ॥೨೧॥ ಮರು
ಳುಗಳು ನೀವೆಂದವರ ಚ । ಪ್ಪರಿಸಿದನು ಕಲಿಭೀಮಸೇನನು । ಇರುಳು ತೊಡಗಿತು ವಿಪ್ರಭವನದ ಪಾಕ
ಮಯರಭಸ ॥ ಹೊರೆದಳೆನ್ನನು ತಾಯಿ ಕುಂತಿಯ । ಹರಸುವೆನು ಪಾರಣೆಯ ಹೊತ್ತಿನೊ । ಳರಸು
ಸಾಳಿನೊಳಾನೆನುತ ಹಿಗ್ಗಿದನು ಕಲಿಭೀಮ ॥೨೨॥ ಪರಿಪರಿಯ ಬಹುಭಕ್ಷ್ಯಪಾಕದ । ಪರಿಮಳದಶಾಕಾ
ದಿಗಳ ವೊ । ಗ್ಗರಣೆಗಳ ಸೌರಭಕೆ ತಿಳಿದುದು ನಿದ್ರೆಪವನಜನ ॥ ತರಣಿ ಸುಳಿವನು ಪೂರ್ವಶೈಲದ ।
ಶಿರದ ಬಳಿಯಲಿ ಭೀಮ ಕುಂತಿಯ । ಕರೆದು ಕಳುಹಿದನಾಮಹಾಸುರಗೃಹಕೆ ವಹಿಲದಲಿ ॥೨೩॥ ಏನು
ಬಂದಿರಿ ತಾಯೆ ಚಾಪಳ । ವೇನೆನಲು ತೆಗೆ ಹೊತ್ತು ಬಂದಿಯ । ನೇಸು ಜಂಜಡಬೇಡ ಭಕ್ಷ್ಯವ ಹಿಡಿಸು
ಕುನಿಕಿಲಲಿ ॥ ಭಾನುವುದಿಸಿದನೆನಲು ಘನಸ । ಮ್ಮಾನದಲಿ ಸಾಧನಸಮಗ್ರವ । ಸೂನುಸಹಿತಡಕಿದನು
ಭಾರಿಯ ಬಂಡಿ ಚವಜಡಿಯೆ ॥೨೪॥ ನಳನಳಿಪಬಹುವಿಧದ ಭಕ್ಷ್ಯಾ । ವಳಿಯ ಹೆಡಿಗೆಗಳೋರಣಿಸಿ
ಮಂ । ವಳಿಸಿ ಹೂಡಿದಹಾಲುತುಪ್ಪದ ಹಲವುಹರವಿಗಳ ॥ ಬಳಸಿ ಮುಚ್ಚಿದವಿವಿಧಶಾಕಾ । ವಳಿಯ ಬೋ
ನದ ಬಿಗಿದಕುನಿಕಿಲ । ಕಳವೆಯಕ್ಕಿಯ ಕೂಳರಾಶಿಯ ಬಂಡಿ ಜೋಡಿಸಿತು ॥೨೫॥ ಮರಳಿ ಬಂದಳು
ಕುಂತಿ ಭೀಮನ । ಕರೆದಳೇಳೈ ಪಾರಣೆಗೆ ಕಾ । ತರಿಸದಿರು ಖಳನೊಡನೆ ಸಡೆವುದು ಸತ್ವದನುವರದು॥
ಬರವ ಬರದೇ ಬೀಯಮಾಡದ । ರುರವಣೆಯನರಿದಾನುವುದು ಸಂ । ಹರಿಸು ದೈತ್ಯನನೆಂದು ತಾಯ್ಹ
ರಸಿದಳು ನಂದನನ ॥೨೬॥ ಬೆರಳ ದರ್ಭೆಯ ಹರಿದು ಧೌತಾಂ । ಬರವನುಟ್ಟನು ಬಿಗಿದು ಕುಂತಿಯ ।
ಚರಣರಜವನು ಕೊಂಡು ಧರ್ಮಜನಂಘ್ರಿಗಭಿನಮಿಸಿ ॥ ಪರುಷಮಿಗೆ ಹರಿತಂದು ಬಂಡಿಯ । ಹಿರಿಯ
ಹಲಗೆಯನಡರಿದನು ಬಲು । ಹುರಿಯ ಹಗ್ಗವ ಹಿಡಿದು ಜಡಿದನು ಹೂಡಿದೆತ್ತುಗಳ ॥೨೭॥ ಪುರರೊ
ಳಗೆ ಭಿಕ್ಷಾನ್ನದಿಂದೈ । ವರು ಮಹಾಪಂಡಿತರು ನಿರ್ಧನ । ಪುರುಷರವರೊಳಗೊಬ್ಬನಸುನಂವಮೂರ
ದಾನವಸಾ ॥ ಪರಿವಿಡಿಯಭೋಜನಕೆ ತದ್ದೂ । ಸುರನ ತಾಯ್ಕೊಟ್ಟಗಪ್ಪೇನ । ಚ್ಚರಿಯಸುರ ಪವ
ನಜನ ಮುತ್ತಿತು ನೋಟಕರ ನೆರವಿ ॥೨೮॥ ಪೌರಜನವೈತರಲು ಬಂಡಿಯ । ನೂರಹೊರವಂಡಿಸಿದನೆ
ಲ್ಲರು । ದೂರದಲ್ಲಿರಿ ಸಾವವನೆ ತಾ ಸಾಕು ದೈತ್ಯನಲಿ ॥ ಸಾರಿ ನೀವೆಂದೆನುತ ಹೂಡಿದ । ಹೋರಿಗಳ

ಹೊಯ್ದುಬ್ಬುಬ್ಬಸಿ ರಣ । ಧೀರಮಾರುತಿ ಮಿಕ್ಕು ಹರಿಸಿದನಸುರನಿದ್ದೆಡೆಗೆ ॥೨೯॥ ಎಡೆಯಲೇ ಭಕ್ಷ್ಯಾದಿಗಳ ಬರಿ । ಹೆಡಗೆಯುಳಿದವು ಕೂಳೊಳೆರ್ಘವ । ಹೊಡೆದು ಸುರಿದನು ಹಾಲುತುಪ್ಪದ ಹರವಿಯೋಜೆಯಲಿ ॥ ಕುಡಿದು ಪಕ್ಕಲೆನೀರನೊಯ್ಯನೆ । ನಡೆಸಿ ತಂದನು ಕಂಡು ದನುಜನ । ನುಡಿದನೆಲವೋ ಕುನ್ನಿ ಕೂಳಿದೆ ತಿನ್ನು ಬಾರೆನುತ ॥೩೦॥ ಕಂಡು ಖಳ ಬೆರಗಾದನಿವ । ನುದ್ದಂಡತನವೆಚ್ಚರಿಯಲಾ ಹರಿ । ಖಂಡಪರಶುಗಳಳುಕುವರು ತನ್ನೊಡನೆ ತೊಡಕುವೊಡೆ ॥ ಬಂಡಿತುಂಬಿದಕೂಳನಿವನಿಂ । ದುಂಡು ಬದುಕಲಿ ಯೂರ ಪಾರ್ವರ । ಹಿಂಡುವೆನು ಯಿವಸಹಿತೆನುತೆ ಹಲುಮೊರೆದನಮರಾರಿ ॥೩೧॥ ಮತ್ತೆ ಶೇಷಾನ್ನದಲಿ ತೋರುತ । ತುತ್ತುಗಳ ತೂಗುತ್ತ ಮಾರುತಿ । ಮತ್ತೆ ಕೊಂಡನು ಬಾಯೊಳವನನು ಬೆರಳಲೇಡಿಸುತ ॥ ಇತ್ತಲೆನ್ನ ಯಹಸಿವು ಹೆಚ್ಚಿದೆ । ತುತ್ತು ಹೊಗದೊಳಗಿವನ ತೊಡಗಲ । ದೆತ್ತಲಕಟಾ ವಿಧಿಯೆನುತ ಮುಳಿದೆದ್ದನಮರಾರಿ ॥೩೨॥ ಎರಡುಕೈಯನು ಬಲಿದು ಮುಷ್ಟಿಯೊಳೆರಗಿದನು ಖಳ ಬೆನ್ನನೇನೆಂ । ದರಿಯನಿತ್ತಲು ಭೀಮ ಬಲುತುತ್ತುಗಳ ತೋಟಿಯಲಿ ॥ ಮರನ ಮುರಿದೆರಗಿದೊಡೆ ಪುನರಪಿ । ಮುರಿದು ನೋಡಿದು ಬಹೆನುನಿಲ್ಲೆನು । ತರೆಗೆಲಸ ಪೂರೈಸಲೆಂದನು ನಗುತ ಕಲಿಭೀಮ॥ ಅರಸ ಕೇಳೈ ನಿಮ್ಮ ಭೀಮನ । ಪರಿಯನಾಪರಿ ಬಂಡಿ ತುಂಬಿದ । ಸರಕನೆಲ್ಲವ ಸಂತಪಿಟ್ಟನು ತನ್ನ ಜಠರದಲಿ ॥ ವರಸಮಾಧಾನದಲಿ ಕೈದೊಳೆ । ದುರವಣಿಪತೇಗಿನ ತರಂಗದ । ಪರಬಲಾಂತಕನೆದ್ದು ನಿಂದನು ಸಿಂಹನಾದದಲಿ ॥೩೪॥ ಉಂಡೆವೈ ಸಮುಚಿತ್ತದಲಿ ನೀ । ವ್ಕೊಂಡಿರೈ ಗಾಯಗಳನೆಡೆಯಲಿ । ಹಿಂಡುವಿರಲೈ ಸಾವುಸಹಿತೀಯೂರಹಾರುವರ ॥ ಉಂಡೆವೈ ಹಲಕಾಲಕಿಂದಿನ । ಲುಂಡುದೂಟಕಣಾ ನಿಧಾನವು । ಖಂಡಪರಶುವಿನಾಜ್ಞೆನುತ ಮುದವೇರಿದನು ಭೀಮ ॥೩೫॥ ಖಾತಿಗೊಳ್ಳದಮನ್ನ ಪವನಜ । ನೋತು ಕೊಟ್ಟನು ತನ್ನ ಹೊಯ್ಗಳ । ಸಾತನೀತನು ಮುಳಿದಬಳಿಕಿವನೇನಮಾಡುವನೋ ॥ ಈತನೆದ್ದನು ಗಜರ ಬಳಿಕಿನೊ । ಳಾತನಿದಿರಾದನುಸುರಾರಿಯು । ವಾತಜನ ಹೋರಟೆಗೆ ಕೊರಳಳುಕಿದುದು ವಾಸುಕಿಯು ॥೩೬॥ ಹಿಡಿವರೊಬ್ಬರನೊಬ್ಬರುರದಲಿ । ಹೊಡೆದು ಹಿಂಗಿದರುಲಿದು ಹೆಮ್ಮರ । ನ್ನುಡಿಯೆ ಹೊಯ್ದಾಡಿದರು ತಿವಿದರು ತೋಳಬಲುಹಿನಲಿ ॥ ಕೊಡಹಿದನು ಕಲಿಭೀಮನವನನು । ಗ್ಗಡದ ಸತ್ವದಿಯುಂಡೆಕೂಳಿನ । ಕಡುಹ ತೋರೆಂದೊರಲಿ ತುಡುಕಿದನನಿಲನಂದನನ ॥೩೭॥ ಸಿಕ್ಕಿದನು ಕಲಿಭೀಮನೆನೆ ಕೈ । ಯಿಕ್ಕಿ ಕೊಟ್ಟನು ಮೆಯ್ಯನಸುರನ । ಹೊಕ್ಕು ತಿವಿದನು ತಿರುಗಿ ಬದಿಯೆಲು ನುಗ್ಗುನುಸಿಯಾಗೆ ॥ ಬಿಕ್ಕುಳಿಯ ತಾಳಿಗೆಯ ಮೂಗಿನೊ । ಳೊಕ್ಕ ರುಧಿರದಧಾರೆ ಬಿಗಿದುರೆ । ಡೊಕ್ಕರಿಸಲಸು ನೀಗಿತಸುರನ ತನುವ ನಿಮಿಷದಲಿ ॥೩೮॥ ಕೊಂದು ದನುಜನ ಹೆಣನ ಬಂಡಿಯ । ಹಿಂದೆ ಬಂಧಿಸಿ ಪುರದ ಬಾಹೆಗೆ । ತಂದು ಬಿಟ್ಟನು ತನತನಗೆ ಜನಜಾಲ ಜೋಡಿಯಲಿ ॥ ಬಂದು ಕಂಡುದು ಹೆಣನ ಭೂಸುರ । ರಿಂದು ಧನ್ಯರು ವಿಪ್ರಜಾತಿಗೆ । ಸಂದುದಿನ್ನುಗ್ಗಳಿಕೆಯೆಂದುದು ನೆರೆದಪೌರಜನ ॥೩೯॥ ಈಯಮಾನುಷಶಕ್ತಿಯಮರರ । ರಾಯಗಳವಲ್ಲೆಂದು ವಿಪ್ರನಿ । ಕಾಯಕಿದು ಸಾಮಾನ್ಯವೇ ನಮ್ಮಗ್ರಹಾರದಲಿ ॥ ಕಾಯಿದವರಿವರೆಂದು ವಿಪುಲ । ಶ್ರೀಯಪದ್ಮಜಸೋಮಧರನಾ । ರಾಯಣರು ಕೊಡಲೆಂದು ಹರಸಿತು ಭೂಸುರವ್ರಾತ ... ... ... ... ॥೪೦॥

ಅಂತು ಸಂಧಿ ೧೦ ಕ್ಕೆ ಪದ ೪೬೩ ಕ್ಕಂ ಮಂಗಳಮಸ್ತು.

# ಹನ್ನೊಂದನೆಯ ಸಂಧಿ.

ಸೂಚನೆ|| ವೀರಕುಂತೀತನುಜರಿರುಳಂ | ಗಾರವರ್ಮನ ಗೆಲಿದು ಹೊಕ್ಕರು |
ಧಾರಿಣೀಸುರವೇಷದಲಿ ಪಾಂಚಾಲಪಟ್ಟಣವ ||

ಅರಸ ಕೇಳ್ಕೈ ಕಲಿಬಕಾಸುರ | ಮರಣಸಮನಂತರದೊಳಾಪುರ | ವರದೊಳಿರ್ದರು ವಿಮಲವಿಪ್ರಸ್ತೋಮದೊಡಗೂಡಿ || ವರುಷ ತುಂಬಿತು ನಮ್ಮ ಹಸ್ತಿನ | ಪುರವ ಹೊರವಂಟಂದಿನಲಿ ಯೆಂ | ದರಸ ಕುಂತೀದೇವಿಗೆಂದನು ಧರ್ಮಸುತ ನಗುತ ||೧|| ಆಸಮಯದಲಿ ಬಂದನೊಬ್ಬನು | ಭೂಸುರನು ಸಕುತೂಹಲನು ಬಹು | ದೇಶಪರ್ಯಟನಪ್ರವಾಸಾಭ್ಯಾಸಪರಿಕ್ಷಯಲಿ || ಗ್ರಾಸಯಾಚಕನಾಗಿ ತಮ್ಮ ನಿ | ವಾಸದಲಿ ಸಲೆ ತುಷ್ಟನಾದವ | ಹೇಸುರನ ಮಾತಾಡಿಸಿದನಂದರಸ ವಿನಯದಲಿ ||೨|| ಎತ್ತಣಿಂದಲಿ ಬರವು ಬಳಿಕಿ | ನ್ನೆತ್ತ ಗಮನವು ಪೂರ್ವಸುಕೃತವ | ಹೊತ್ತುದಿಂದಿನದಿವಸವಿದೆಲಾ ಸುಜನಸಂಸರ್ಗ || ಉತ್ತರೋತ್ತರಸಿದ್ಧಿಯಿಲ್ಲಿಂ | ದೆತ್ತಲೆಮಗೆನೆ ಹಸ್ತಿನಾಪುರ | ದತ್ತಣಿಂದವೆ ಬಂದೆವಾವು ದುದೇಶ ನಿಮಗೆಂದ ||೩|| ನಾವು ನಿಮ್ಮೋಪಾದಿಯಲಿ ತೀ | ರ್ಥಾವಲೋಕನಪರರು ಭಿಕ್ಷಾ | ಜೀವಿಗಳು ನೀವೇಸುದಿನ ಗಜಪುರವಹೊರವಂಟು || ಆವನಲ್ಲಿಗೆ ಪತಿ ಯುಧಿಷ್ಠಿರ | ದೇವನೋ ದುರ್ಯೋಧನನೊ ಬಳಿ | ಕಾವುದುಂಟು ವಿಶೇಷಕೌರವಪಾಂಡುತನಯರಲಿ ||೪|| ಮರುಳುಗಳೊ ನಿಮ್ಮೇಣು ನಮ್ಮನು |ಮರುಳುಮಾಡುವಪರಿಯೊ ಪಾಂಡವ | ರರಗುಮನೆಯಲಿ ಬೆಂದುದುಲೋಕಪ್ರಸಿದ್ಧವಲೇ || ಅರಸುಕೌರವರಾಯನಾತನ | ಸಿರಿಯನಾತನ ಬಲುಹನಾತನ| ಪರಿಯನಭಿವರ್ಣಿಸುವೊಡರಿಯೆನು ವಿಪ್ರ ಕೇಳೆಂದ|| ಅಕಟ ಪಾಂಡವರಳಿವರೇ ಬಾ | ಧಕರೆ ಪರರಿಗೆ ಲೇಸಿನಲಿ ಕಂ | ಟಕವು ದುಗ್ಧವಿಷಂಗಳಲಿ ಹಾವಿಂಗೆ ಹಾನಿಯಲೆ || ವಿಕಳಪುಣ್ಯರು ನಿಲಲಿ ಕುರುರಾ | ಜಕದೊಳಗೆ ಭೀಷ್ಮಾದಿವೃದ್ಧ | ಪ್ರಕರಗುರುಸುತ ಗುರುಕೃಪಾದ್ಯರು ಕುಶಲರೇಯೆಂದ ||೬|| ಗುರುಸುತಾದಿಸಮಸ್ತಪರಿಜನ | ಪುರಜನಕೆ ಸುಕ್ಷೇಮ ದ್ರುಪದನ | ವರಕುಮಾರಿಯ ಮದುವೆಗಡ ಪಾಂಚಾಲನಗರದಲಿ || ನೆರವುತಿದೆ ನಾನಾದಿಗಂತದ | ಧರಣಿಪತಿಗಳು ಭೂರಿಯಲಿ ವಿಗೆ | ಭರಿತದಕ್ಷಿಣೆಮೃಷ್ಟಭೋಜನವುಂಟು ನಮಗೆಂದ ||೭|| ನಾರವಿದು ನೃಪಕನ್ನಿಕೆಗೆ ವರ | ನಾರು ಲಗ್ನವದೆಂದು ಬಳಿಕಾ | ದ್ವಾರು ಬಂದರು ಭೂಪತಿಗಳಿದನೆಂದು ಕೇಳಿದಿರಿ || ಭೂರಿಯಲಿ ನಮಗುಂಟೆ ಮೃಷ್ಟಾ | ಹಾರದಕ್ಷಿಣೆ ನಮ್ಮಭೀಷ್ಟಾಪಿ | ಹಾರವಾರ್ತೆಯಿದೆಂದು ಧರ್ಮಜ ನುಡಿದನಾದ್ವಿಜಗೆ ||೮|| ಇವರು ಕಪಟೋಪಾಧ್ಯರೆಂಬುದ | ನವನು ಬಲ್ಲನೆ ಭೂಮಿದೇವ | ಪ್ರವರನೈಸಲೆಯೆಂದು ಬಗೆದನು ಧರ್ಮನಂದನನ || ಅವನಿಯಲಿ ಪಾತಾಳದಲಿ ಸುರ | ಭವನದಲಿ ಪಾಂಚಾಲತನುಜೆಗೆ | ಯುವತಿಯರು ಸರಿಯಲ್ಲವೆಂಬುದ ಕೇಳ್ದವಾವೆಂದ ||೯|| ಈಕೆಗೆಣೆಯಹವರನನೀನರ ಲೋಕದಲಿ ತಾ ಕಾಣೆನರ್ಜುನ | ನೀಕುಮಾರಿಯರಮಣನೆಂದೇ ಮನದ ಸಂಕಲ್ಪ || ಈಕೆಯಪದೆಸೆಯು ದಯದಲಿ ಕುಂ | ತೀಕುಮಾರಕರನಲವುಖದಲಿ | ನಾಕದಲಿ ನೆಲೆಗೊಂಡರೆಂದುಮ್ಮಳಿಸುವನು ದ್ರುಪದ

॥೧೦॥ ಜ್ವಲನ ನೆರೆ ನುಂಗಿದನೊ ಮೋಕ್ಷಂ । ಜಲಿಸಿಬಿಟ್ಟನೊ ಬಲ್ಲನಾವನು । ಕಲುಹೃದಯನೈ ಕಮಲಭ
ವನೀಪಾಂಡುನಂದನರ ॥ ಸುಳಿವನೈರಿಸನಕಟ ಹಾಹೆಗ । ಳಳಿವಹರೆಯವೆ ಶಿವಶಿವಾಯೆಂ । ದಳಲುದೊ
ರೆಯಲಿ ಮುಳುಗಿ ಮೂಡುವದ್ರುಪದಪತಿಯೆಂದ ॥೧೧॥ ಅರಸ ಕೇಳ್ವನು ಸಕಲದೈವ । ಜ್ಞರಲುಪ
ಶ್ರುತಿಗಳಲಿ ಋಷಿಗಳ । ಪರಮಸಿದ್ಧಾಂತದಲಿ ಮಂತ್ರಾವೇಶವಚನದಲಿ ॥ ಧರೆಯೊಳೀಗಳು ಪಾಂ
ಡುಸುತಸಂ । ಚರಣೆಯುಂಟಿದು ಸತ್ಯವೆಂದುಪ । ಚರಿಸಿ ನುಡಿದು ಪುರೋಹಿತನು ಸಂತವಿಸುವನು ನೃಪ
ನ ॥೧೨॥ ಸರಸಿಜಾನನೆ ನೋಡಿ ನೃಪರಲಿ । ವರಿಸುವಳು ವಿಶ್ಲಾಘನನೆಂದುಪ । ಚರಿಸುವನು ಸವಿವಾತು
ಗಳಸಾರಾಯಷೋನೆಯಲಿ ॥ ಬರಿಸುವುದ ಬಹುದೇಶಭೂಮಿಪ । ಶ್ವರರನವರೊಳು ಪುಣ್ಯದಲಿಗೋ ।
ಚರಿಸರೇ ಗರುವೆಯರ ದೇವಿಗೆ ಪಾಂಡುಸುತರೆಂದ ॥೧೩॥ ಅದೊಡೀಮಗುವಿನ ಮಹಾಪು । ಣ್ಯೋ
ದಯದ ಫಲವೈಸಲೇಬರೆ । ಮೇದಿನೀಶ್ವರರೆಲ್ಲರಿಗೆ ಲೇಖಾರ್ಥಸಂತತಿಯ ॥ ಸೋದರರುಸಹಿತಾಸು
ಯೋಧನ । ನಾದಿಯಾದಸಮಸ್ತನೃಪರು ವಿ । ವಾದವಿಲ್ಲದೆ ಬರಲಿ ಕಟ್ಟಿಸು ಪಾವುಡವನೆಂದ ॥೧೪॥
ಬರೆದವೋಲೆಗಳಖಿಳಭೂಮಿಪ । ಶ್ವರರಿಗುಮಗೋಸಹಿತ ದೂತರು । ಹರಿದರುತ್ತರಪೂರ್ವದಕ್ಷಿಣಪ
ಶ್ಚಿಮಂಗಳಿಗೆ ॥ ಧರೆಯ ಕನ್ಯಾಜನಶಿರೋಮಣಿ । ವರದ್ರುಪದತನುಜಾಸ್ವಯಂವರ । ಕರಸುಗಳು ಬ
ಹುದೆಂದು ವಾಚಿಸಿತಖಿಳಲೇಖಾರ್ಥ ॥೧೫॥ ಮಾಡಿದೊಡೆ ಶತಯಾಗವನು ಕೈ । ಗೂಡುವಳು ಶಚಿ ಮುಖ
ಸಹಸ್ರವ । ಮಾಡಿ ಮೇಣ್ ಜನಿಸಿದೊಡೆ ಬಹಳೀ ದ್ರೌಪದೀದೇವಿ ॥ ನೋಡುವೆವು ನಡೆ ಜನ್ಮಶತದಲಿ।
ಕೂಡಿ ಕೊಬ್ಬಿದಪುಣ್ಯಫಲ ಕೈ।ಗೂಡುವುದೊ ತಪ್ಪೇನೆನುತ ನೆರೆದುದು ನೃಪಸ್ತೋಮ॥೧೬॥ಪುರೋ
ಹಿತವಚನದಲಿ ನಿ । ವಾರ್ಯಪಿತಾಂತರ್ವ್ಯಥೆಯಲವನಿಪ । ನಾಪುರಪ್ರಾಂತದಲಿ ಸುತ್ತಲು ಮೂರು
ಯೋಜನದ ॥ ತೋಪಿನಲಿ ಕಟ್ಟಿಸಿದನಗ್ಗದ । ಭೂಪರಿಗೆ ಭವನವನು ಕೇಳೈ । ದ್ರೌಪದಿಯ ವೈವಾ
ಹರಚನಾರಾಮಣೀಯಕವ ॥೧೭॥ ನೆರವುತಿದೆ ನಾನಾದಿಗಂತದ । ಧರಣಿಪರು ಕನ್ಯಾರ್ಥಿಗಳು ಭೂ ।
ಸುರಸಮೂಹದ ಸಾಲು ನೆರೆದುದು ದಕ್ಷಿಣಾರ್ಥದಲಿ ॥ ಎರಡರೊಳು ನಿಮಗೇನು ಕನ್ಯಾ । ವರಣವೋ
ಮೇಣ್ದಕ್ಷಿಣಾರ್ಥವೊ । ಬರವು ನಿಮಗುಂಟೇ ಯೆನುತ ದ್ವಿಜನಿವರಬೆಸಗೊಂಡ ೧೮॥ ಈಸುಪರಿಯಲಿ
ನಮ್ಮನೀವಪ । ಹಾಸಮಾಡುವಿರಾವು ಭಿಕ್ಷುಕ । ರೈಸಲೇಕನ್ಯಾರ್ಥದಲಿ ನಾವೆತ್ತ ನೃಪರೆತ್ತ ॥ ಐಸನಿ
ಮ್ಮೊಡನಾವು ಬಹೆವೀ । ಭೂಸುರರ ನೆರವುಂಟಲಾ ಶುಭ । ವಾಸರವ ಬೆಸೆಗೊಂಬೆನೆಂದನು ಧರ್ಮಸುತ
ನಗುತ ॥೧೯॥ ಅವನು ಬಳಿಕ ನಿಜಪ್ರಯೋಜನ । ಭವನಕೈದಿದನಖಿಳವಾರ್ತಾ । ವಿವರಣವ್ಯಾಖ್ಯಾನ
ಸಮನಂತರದಸಮಯದಲಿ ॥ ಇವರು ತಮ್ಮೊಳಗೆಂದರವನೀ । ದಿವಿಜಪುರದಲಿ ದೈನ್ಯವೃತ್ತಿಯ । ನಿವ
ಹ ನಿಲಲಿ ನಿರೀಕ್ಷಿಸುವೆವಾದ್ರುಪದಪಟ್ಟಣವ ॥೨೦॥ ಅಲತಾಂಗಿಯ ಮದುವೆಗವನೀ । ಪಾಲವರ್ಗದ
ಬರವುಗಡ ಹರ । ನೂಳಿಗವ ಪೆಚ್ಚಾಳು ಮಕರಧ್ವಜನ ವಾಳಿಗಡ ॥ ಮೇಳವಮಕಿವಿಗಳಿಗೆ ಅಂಗಹ।
ವಾಲಿಗಳು ಪರಿವಿಡಿಯವೇಧೆಗೆ । ಸೋಲುವವೆಯೆಂದೈವರಾಳೋಚಿಸಿದರೊಳಗೊಳಗೆ ॥೨೧॥ ಅರಸ ಚಿ
ತ್ತೈಸಮಳಲಗ್ನಾಂ । ತರದಲಿವರು ದಯದಲಿಹೊರವಂ । ಟರು ಸುವಿದ್ಯಾಪರಿಣತರ ಪಂಡಿತರ ಗಡ
ಣದಲಿ ॥ ಬರುತ ಕಂಡರು ಕಳಸಕನ್ನಡಿ । ವರಯುವತಿಖಗಮೃಗದಬಲುಸು । ಸ್ವರಸುಗಂಧಾನಿಲಸು
**ಸಂಗತಶಕುನಸೂಚಕವ॥೨೨॥ ಚಾರುಶಕುನವಿದುತ್ತರೋತ್ತರ । ವಾರಿಗಿದು ಫಲಿಸುವುದೊ ನಮ್ಮೊಳು।**

ಹಾರುವರ ಹುಲುಮೊತ್ತ ಕನ್ಯಾಲಾಭಫಲವಿದಕೆ ॥ ಭೂರಿಭಾಗ್ಯನು ನಮ್ಮ ವಿಪ್ರರೊ । ಳಾರೆನುತ ತಚ್ಛಕುನಫಲವಿ । ಸ್ತಾರವನು ನೆರೆ ವಿವರಿಸುತ ನಡೆದುದು ಬುಧಸ್ತೋಮ ॥೨೩॥ ಧರಣಿಯಮರರ ಗಡಣದಲಿ ನಾ । ಲ್ಕೆರಡುಪಯಣಾಂತರದಲವನೀ । ಸುರರನುಳಿದಾಶ್ರಮದೊಳಗೆ ಪಾರಾಶರವ್ರತಿಯ ॥ ದರುಶನವಮಾಡಿದರು ಬಕಸಂ । ಹರಣವೃತ್ತಾಂತವನು ನೆರೆ ವಿ । ಸ್ತರಿಸಿದರು ವಿನಯದಲಿ ಬೀಳ್ಕೊಂಡರು ಮುನೀಶ್ವರನ ॥೨೪॥ ಗಮನಭರದಲಿ ಭಾರಿಯಧ್ವ । ಶ್ರಮವ ನೋಡದೆ ಭೂಮಿನಭದಲಿ । ತಮದ ಚಾವಡಿಯಿಕ್ಕಿದೊಡೆ ಗತಿಚಾಪಳವ ಬಿಡದೆ ॥ ದ್ಯುಮಣಿ ಕೈಸೆರೆಯಾಗಲಟವೀ । ಭ್ರಮಣದಲಿ ಬೆಳಗಡಗೆ ಭೂಪ್ರೋ । ತ್ತಮರು ಬಂದರು ಬಹಳಗಮನದೊಳರ್ಧರಾತ್ರಿಯಲಿ ॥೨೫॥ ಮುಂದೆ ಪಾರ್ಥನ ಬೀಸುಗೊಳ್ಳಿಗ । ಳಿಂದ ತಮದಾವಳಿ ಮುರಿಯೆ ಬಳಿ । ಸಂದು ಕುಂತೀದೇವಿ ಧರ್ಮಜನಕುಲಸಹದೇವ ॥ ಹಿಂದೆ ಭೀಮನ ಕೈಯ ಕೊಳ್ಳಿಯ । ಬಿಂದುಬೆಳಗಿನಲನಿಬರಟವೀ । ವೃಂದದಲಿ ಬರುತಿರ್ದರಿರುಳವನೀಶಕೇಳೆಂದ ॥೨೬॥ ಬರುತ ಕಂಡರು ಮುಂದೆ ಗಂಧ । ರ್ವರ ವಧೂನಿಕುರಂಬವನು ನೇ । ಪುರಪ ಝಣಝಣರವದ ಕಂಕಣಝಂಕೃತಿಧ್ವನಿಯ ॥ ಅರಳುಗಂಗಳ ಬೆಳಗಿನಲಿ ತಮ । ದಿರುಳು ಬೀತುದು ಬೆಸವುದಾಗಲೆ । ಕುರುಳ ಕಾಳಿಕೆಯಿಂದ ತತ್ಕಾಂತಾಕದಂಬದಲಿ ॥೨೭॥ ಲಲಿತತನುಕಾಂತಿಗಳ ಮೊಗೆದರು । ತಿಳಿಗೊಳನ ಜಲವೆಂದು ಕಂಗಳು । ಹೊಳೆಯೆ ಮರಿಮೀನೆಂದು ಹೆಕ್ಕಳಿಸಿದರು ಹಿಡುಹಿನಲಿ ॥ ಅಲರಿದಂಬುಜವೆಂದು ವದನಕೆ । ನಿಲುಕಿ ತುಂಬಿಗಳೆಂದು ಕುರುಳಿಂ । ಗಳುಕಿ ಕೈಗಳ ತೆರೆದರತಿಮುಗುದೆಯರು ಖಚರಿಯರು ॥೨೮॥ ಅವರ ಮುಖಕಾಂತಿಗಳ ಲಂಗ । ಚ್ಛವಿಗಳಲಿ ಕಂಕಣದ ಹಾರದ । ವಿವಿಧ ರತ್ನಾಭರಣಕಿರಣದ ಲಲಿತಲಹರಿಯಲಿ ॥ ಸನೆದುದಗ್ಗದತಿಮಿರವವದಿರ । ನಿವರು ಕಂಡ ಜಲವಿಹಾರದ । ದಿವಿಜಸತಿಯರಲಾ ಯೆನುತ ಬರುತಿರ್ದರಡವಿಯಲಿ ॥೨೯॥ ನಾರಿಯರು ಕಂಡರು ಸುಲಜ್ಜಾ । ಭಾರದಲಿ ತಡಿಗಡಿಗೆ ಹಾಯ್ದುದು । ಸೀರೆಗಳ ತೆರೆವಿಡಿದವರಂಗೋಪಾಂಗಲತೆಗಳಿಗೆ ॥ ಆರಿವರು ನಡುವಿರುಳು ದರ್ಪವಿ । ಕಾರದಲಿ ಕೈಕೊಳ್ಳರೆನುತಂ । ಗಾರವರ್ಮನು ಧನುವ ಕೊಂಡನು ನುಡಿಸಿದನು ನರನ ॥೩೦॥ ಈಸುಭರದಲಿ ಗಮನವೆಲ್ಲಿಗೆ । ದೇಶಕಾಲವನೋಡದೀಸ । ವಾರ್ಸುರದ ಸೌರಂಭವೇನೆನೆ ಪಾರ್ಥ ನಸುನಗುತ ॥ ದೇಶವಿದು ವನ ಕಾಲನಡುವಿರು । ಳೈಸಲೇ ನಿಜಕಾರ್ಯಸಂಗತಿ । ಗೋಸುಗವೆ ಗತಿಯೆಂಬವನಾಗಂಧರ್ವರಾಜಂಗೆ ॥೩೧॥ ಸುರರು ಸುಳಿವುದು ಪೂರ್ವಭಾಗದ । ಲಿರುಳಿನುತ್ತರಭಾಗದಲಿ ಖೇ । ಚರರು ಸುಳಿವುದು ಸೀಮೆ ಚತುರಾನನನಸೃಷ್ಟಿಯಲಿ ॥ ಇರುಳಿನುತ್ತರಭಾಗವಿದು ನೀ । ವ್ನರರುಬಹುದುದ್ದಂಡದರ್ಪ । ಜ್ವರಿತವಿದಕೌಷಧಿಯನೆರೆವೆನೆನುತ್ತ ತೆಗೆದೆಚ್ಚ ॥೩೨॥ ಕನಲಿ ಫಲುಗುಣನಾದೊಡಿದಕೊ । ಳ್ಳೆನುತ ಕೊಳ್ಳಿಯೊಳಿಟ್ಟನಗ್ನಿಯ । ನೆನೆದು ಮಂತ್ರಿಸಲುರಿಮುಖದ ಕಾರ್ಬೊಗೆಯಮೊಬ್ಬಿನಲಿ ॥ ಹೊನಲುಗಿಡಿಗಳ ತಗಡುರಿಯ ತೊಂ । ಡಿನಲಿ ಮುತ್ತಿತು ರಥವನಾತನ । ಧನುವನಾತನ ತನುವನಾತನ ಸರಳ ಸಾರಥಿಯ ॥೩೩॥ ಉರಿದುದಾರಥವವನಮೈಯಲಿ । ಕರಿಕುವರಿತರಲೋಡಿ ಹೊಕ್ಕನು । ಸರಸಿಯನು ಶಿಖಿಯೊಡನೆ ಹೊಕ್ಕುದು ನೀರನುರೆಸುರಿದು ॥ ತರುಣಿ ಹಾಹಾಕೆಟ್ಟೆನೆಂದ । ಬ್ಬರಿಸಲಾಗಂಧರ್ವನಂಗನೆ । ಹರಿದಳೆಡೆಗೈಯಿಂದ ಸಂವರಿಸುತ್ತ ಬಿಡುಮುಡಿಯ ॥೩೪॥ ಬಂದುಯಮನಂದನನ ಚರಣ । ದ್ವಂದ್ವದಲಿ ಚಾಚಿದಳು ನೊಸಲನು । ತಂದೆ ಕರುಣಿಸು ಕಾಂತ ಭಿಕ್ಷವ ಕರುಣಿಸೆನಗೆ

ಕಲು ॥ ಮುಂದುವರಿಯದಿರೆಲೆಧನಂಜಯ । ಕೊಂದರೆನ್ನಾಣೇಕೆಯರಸನ । ತಂದು ಕೊಡು ಬೇಗದಲಿ
ಉಪಸಂಹರಿಸು ತ್ರಿಶಿರವ ॥೩೫॥ ಎನೆ ಹಸಾದವೆನುತ್ತ ನಿಮಿಷದೊ । ಳನಲನನು ನಂದಿಸಿದನಿತ್ತಲು।
ಮನದದುಮ್ಮಾನದಲಿ ಲಜ್ಜಾವನತಮುಖನಾಗಿ ॥ ಮನುಜರಲ್ಲಿವರಾರೊ ನೋಡುವೆ । ನೆನುತ ಹತ್ತಿರೆ
ಬಂದು ನೀವಾ । ರಿನಿತುಸಾಹಸಮಲ್ಲರೆಂದರ್ಜುನನ ಬೆಸಗೊಂಡ ॥೩೬॥ ನರರು ವೈದೇಶಿಕರು ಕಾರ್ಯಾ
ತುರರು ನಾವೆನಲರ್ಜುನನುಪ । ಚರಿಸಿ ವಿವಿಧಗುಣಾನುಮುಖದಲ್ಲಿವರನಂಡಲೆಯೆ ॥ ಧರೆಯೊಳುಂಟೇ
ಪಾಂಡುಸುತರೆಂ । ಬರಸುಗಳು ನೀಕೇಳಿಬಲ್ಲೆ । ನಿರುತವಾವವರೆಂದು ನುಡಿದನು ನಗುತ ಕಲಿಪಾರ್ಥ
॥೩೭॥ ಶಿವಶಿವಾದೊಡೆ ಯಮಪುರಂದರ । ಪವನನಶ್ವಿನಿಯರಿಗೆ ನೀವ್ಸಂ । ಭವಿಸಿದವರೇ ನೀವೆಮಗೆ
ಸಂಭಾವನೀಯರಲಾ ॥ ಇವೆ ಸಹಸ್ರತುರಂಗದಿವ್ಯೋ । ದ್ಭವವವನರ್ಘ್ಯಾಭರಣರತ್ನ । ಪ್ರವರವಿವೆ ಕಾ
ರುಣ್ಯದಲಿ ಕೈಕೊಂಬುದಿವನೆಂದ ॥೩೮॥ ಬಂದವೆಮಗಿವು ನಿನ್ನ ಸಾಪ್ಯೇ । ರೆಂದು ಕಾಣ್ಕೆವು ಪರಮಬಾಂ
ಧವ । ರಿಂದುಮೊದಲಾಗೆಮಗೆ ನೀನೇ ಮೌಲ್ಯಧನವೆಂದ ॥ ಇಂದು ನಿಜರೂಪಡಗಿ ರಾಯರ । ವೃಂ
ದವನು ನೋಡುವೆವು ದ್ರುಪದನ ।ನಂದನೆಯ ವೈವಾಹರಚನೆಯೊಳೆಂದನಾಪಾರ್ಥ ॥೩೯॥ ಇವು ಮ
ದೀಯಸುವಸ್ತು ನಿನ್ನಯ । ಭವನದೊಳಗಿರಲೊಂದುಸಮಯದೊ । ಳಿವನು ತರಿಸುವೆವೆಂದು ಬಳಿಕಂ
ಗಾರವರ್ಮಂಗೆ ॥ ಇವರುವಿನಯವ ಮಾಡಿಗಮನೋ । ತ್ಸವದಲಿರೆ ಗಂಧರ್ವ ನಸುನಗು । ತಿವರಿಗೆಂ
ದನು ಧರ್ಮಶಾಸ್ತ್ರದ ಸಾರಸಂಗತಿಯ ॥೪೦॥ ಮುನಿಯದಿರು ಕಲಿಪಾರ್ಥ ನಿನ್ನಯ । ಘನತರದ ವಿಕ್ರ
ಮಕೆ ದಿವಿಜರು । ದನುಜಭುಜಗರು ನೆರೆಯರುಳಿದೀನರರ ಪಾಡೇನು ॥ ಅನುಪಮಾನಕ್ಷತ್ರವಹ್ನಿಗೆ । ಪಿ
ನುತವಿಮಲಬ್ರಹ್ಮತೇಜೋ । ಘನಸವಿರಾರ ಸಹಾಯನಾಗಲಸಾಧ್ಯವೇನೆಂದ ॥೪೧॥ ಅರಸ ನಿಮ್ಮೊಳು
ಪೂರ್ವದಲಿ ಸಂ । ವರಣನೆಂಬನು ಸೂರ್ಯತನುಜೆಗೆ । ಮರುಳುಗೊಂಡನು ಮರೆದು ಕಳೆದನು ರಾ
ಜವೈಭವವ ॥ ಬರಿಯಪಾರ್ಥಿವತೇಜದಲಿ ಗೋ । ಚರಿಸದಿರೆ ತತ್ಸತಿವಿವಾಹೋ । ತ್ಕರುಷವಾಯ್ತು
ವಸಿಷ್ಠನಮಲಬ್ರಹ್ಮತೇಜದಲಿ ॥೪೨॥ ಆವಸಿಷ್ಠನ ಕೌಶಿಕನ ಯು । ದ್ಧಾವಲಂಬನವೇನನೆಂಬೆನು। ದೇ
ವಕುಲವಂಜುವುದು ವಿಶ್ವಾಮಿತ್ರನುಬ್ಬಟೆಗೆ ॥ ಅವಿವಿಧಮಂತ್ರಾಸ್ತ್ರವನು ಶತ । ಸಾವಿರವನಾಬ್ರಹ್ಮ
ದಂಡದ । ಪಾವರದಲೇ ಗೆಲಿದನೊಬ್ಬವಸಿಷ್ಠಮುನಿಯೆಂದ ॥೪೩॥ ಒದಗಲಾರದೆ ತನ್ನ ಸುಕ್ಷ, ತ್ರದ
ಮಹತ್ವವ ಬಿಸುಟುಸುಬ್ರಾ । ಹ್ಮದಲಿ ಹೊಕ್ಕನು ವಿಗಡವಿಶ್ವಾಮಿತ್ರಮುನಿಯೆಂದು ॥ ಅದರಿನಿಂದೀ
ಕ್ಷತ್ರತೇಜದೊ । ಳುದಿತವಿಮಲಬ್ರಹ್ಮವನು ಕೂ । ಡಿದೊಡೆ ಕೌತುಕವೆಂದನಾಗಂಧರ್ವನರ್ಜುನಗೆ॥೪೪॥
ಇಲ್ಲಿಗಿದೆ ಸಾಲ್ಕೈದುಯೋಜನ । ದಲ್ಲಿ ಧೌಮ್ಯಾಶ್ರಮ ವಸಿಷ್ಠಂ । ಗಲ್ಲಿ ಸನ್ನಿಧಿಯಾವಸಿಷ್ಠಂಗಾತನ
ನಜಾತ ॥ ಅಲ್ಲಿ ಪೌರೋಹಿತ್ಯವನು ನಿಮ । ಗೊಲ್ಲೆನೆನ್ನದೆ ಮುನಿಪಮಾಡಿದೊ। ಡೆಲ್ಲಲೇಸಹುದೆಂದು
ಕಳುಹಿದನಿವರನಾಖಚರ ॥೪೫॥ ಗಮಿಸಿದರು ಬಳಿಕವರು ಧೌಮ್ಯಾ । ಶ್ರಮಕೆ ಬಂದರು ಮುನಿಪನ
ಘಾರ್ಘ್ಯ । ಪ್ಯಮಲಸತ್ಕಾರೋಚಿತವ ಕೈಕೊಂಡ ವಿನಯದಲಿ ॥ ಎಮಗೆ ಪೌರೋಹಿತ್ಯದಲಿ ಸಂ । ಕ್ರ
ಮಿಸಬೇಕೆಂದೊಡಬಡಿಸಿ ಭೂ । ರಮಣರಲ್ಲಿಂದೈದಿದರು ಪಾಂಚಾಲಪಟ್ಟಣವ ... ॥೪೬॥

ಅಂತು ಸಂಧಿ ೧೧ ಕ್ಕೆ ಪದ ೫೯೦ ಕ್ಕಂ ಮಂಗಳಮಸ್ತು.

# ಹನ್ನೆರಡನೆಯ ಸಂಧಿ.

**ಸೂಚನೆ|| ಧರಣಿಪತಿ ನಿಜಸುತೆಯುರೂಪೋ | ತ್ಕರದ ಸೌಭಾಗ್ಯದ ನಿರಂತರ | ಪರಮಶೋಭಾರಚನೆಯಲಿ ರಚಿಸಿದರು ಪಟ್ಟಣವ ||**

ಭೂಮಿಪತಿ ಕೇಳ್ವಿಪ್ರಪಿತನಪಿ | ತಾಮಹರು ಧೌಮ್ಯಾಶ್ರಮಕೆ ಬಂ | ದಾಮುನೀಂದ್ರನ ಕೂಡಿಕೊಂಡರು ಖಚರವಚನದಲಿ || ರಾಮಣೀಯಕವಹಸುಶಕುನ | ಸ್ತೋಮವನು ವಿವರಿಸುತ ಹೊಕ್ಕರು | ಭೂಮಿಲಂಬದ ನೃಪರ ನೆರವಿಯ ದ್ರುಪದಪಟ್ಟಣವ ||೧|| ಭರದಿನೈತಂದಖಿಳಭೂಮೀ | ಶ್ವರರ ಘನಚತುರಂಗಪದಹತ | ಧರಣಿನಿರ್ಗತರೇಣುಪಟಲಪರಾಗಸಂಗದಲಿ || ಅರುಣಮಯವಾಯ್ತಖಿಳ ಜಗದಲಿ | ಸರಸಿಜಾಕ್ಷಿಯ ನೆನೆದು ಸಚರಾ | ಚರದ ಮುಖದಲಿ ರಾಗರಸವುಬ್ಬರಿಸಿದಂದದಲಿ ||೨|| ತರಣಿಗುಂಟೇ ಸಮಯವನಿಲಗೆ | ತೆರಹುಗೊಡುವವರಾರು ಗಗನೇ | ಚರರ ಗಮನಸ್ತಂಭನೆತ್ತಣವಾತು ಖಗಕುಲಕೆ || ನೆರೆದಪಲ್ಲವಸತ್ತಿಗೆಯ ಝ | ಲ್ಲರಿಯ ಸಿಂದದ ಸೆಳೆಯಘನಸೀ | ಗುರಿಯ ಸಬಳದ ಸಾಲ ಚಮರಂಗಳ ವಿತಾಯಿಯಲಿ ||೩|| ಚತುರುದಧಿಪರ್ಯಂತದವನೀ | ಪತಿಗಳೇಕಾವಿಷ್ಟವಿರೋಧ | ಸ್ಥಿತಿಯ ನೋಡದೆ ನೂಕಿ ನಡೆದರು ದ್ರುಪದಪುರಗಾಗಿ || ಅತಿಬಲರು ಬಹುರಾಜಬಲಪದ್ಧತಿಗಳನು ನೋಡುತ್ತ ಬಂದರು | ಕೃತಕವಿಪ್ರೋತ್ತಮರು ಭಿಕ್ಷಾವಿಹಿತವೃತ್ತಿಯಲಿ ||೪|| ತಿರುಗಿತಿದು ಪಾಂಚಾಲನಗರಿಯ | ಹೊರವಳೆಯದಲಿ ಜಲಧಿಮಧ್ಯದ | ಕುರುಹವೋ ಪಟ್ಟಣವೊ ಮೇಣಿದು ದೈವಗತಿಗಳಲಿ || ಉರುಬಿದೊಡೆ ಪಾಂಚಾಲಭೂಪತಿ ತರುಬಲಾಸನೆ ಮಾವತನವಿದು | ಬರಿದೆ ಹೋಗದೆನುತ್ತ ಬಂದನು ಧರ್ಮಸುತ ನಗುತ ||೫|| ಪುರದೊಳಗೆ ಹೇರಾಳಹಬ್ಬದ | ಹರಹಿನಲಿ ಬೀಡಾರ ಭಿಕ್ಷಾ | ಚರಿತರಿಗೆ ದೊರಕುವುದೆ ಗುಡಿಗೂಡಾರಸಂತತಿಗೆ || ಅರಸುಗಳುಸಾವಲ್ಲ ಭವನಾಂ | ತರವದೇ ನಮಗೆಂದು ಘಟಬಂ | ಧುರದಶಾಲೆಯ ಹೊಕ್ಕರಿವರು ಕುಲಾಲಭವನದಲಿ ||೬|| ಕೊಡೆ ಹೊಸಭಾಂಡದಲಿ ಭಿಕ್ಷವ | ಬೇಡಿ ತೊಳಲಿದರಿವರುರಾಯರ | ಬೀಡು ಬಿಡುತಿರ್ದುದು ಬಹಳನಿಸ್ಸಾಳರಭಸದಲಿ || ಬೀಡಿವರಿಗಿದು ನೆಲನಿವರಿಗಿದು | ಮಾಡಿದರಮನೆಯಿವರಿಗಿದು ಕರು | ವಾಡವಿವರಿಗಿದೆಂದು ಪರುಠವಿಸಿದನು ಪಾಂಚಾಲ ||೭|| ಕೇರಿಕೇರಿಯ ಬೀದಿಗಳ ಪ | ನ್ನೀರ ಚಳೆಯದ ಕಳಸಕನ್ನಡಿ | ತೋರಣದ ಸೂಸಕದ ಮುತ್ತಿನ ಮಕರತೋರಣದ ||ಓರಣದ ಹೊಂಗೆಲಸದಖಿಳಾ | ಗಾರಪಙ್ಕ್ತಿಯ ಸೋಮವೀಥಿಯ ಸೂರವೀಥಿಯ ರಚನೆಯಲಿ ರಚಿಸಿದರು ಪಟ್ಟಣವ ||೮|| ತೀವಿದುವು ಹೊಂಗೆಲಸಗತಿಯಲಿ | ಲೋವೆಗಳು ಚೈತನ್ಯಮಯಚಿ | ತ್ರಾವಳಿಯ ಬೆಸುಗೆಗಳಲೆಸೆದುವು ಭವನಭಿತ್ತಿಗಳು || ಹೂವಿನರಳಸ ಹರಹಿನಲಿ ರಥ್ಯಾವಳಿಗಳೊಪ್ಪಿದವಗರುಧೂ | ಮಾವಳಿಯ ಕಂಪಿನಲಿ ಮಘಮಘಿಸಿದುವು ಮೇಘಚಯ ||೯|| ಕಾರಣಿಯಕುಂಕುಮದ ಸಾದಿನ | ಸಾರಣೆಯ ನೆಲೆಗಟ್ಟುಗಳ ಕರ್ಪೂರಧೂಳಿಯ ಹೊಳಹುಗಳ ಪನ್ನೀರ ಪಕ್ಕಲೆಯ || ಚಾರುಚಳೆಯದ ಕೆಸರಿಡುವ ಕ | ಸ್ತೂರಿಗಳ ಪೂರಾಯಪರಿಮಳ | ಭಾರದಲಿ ಬಿರುಗಾಳಿ

ಕುಸಿದುದು ಹೇಳಲೇನೆಂದ ॥೧೦॥ ಮೇಲುಕಟ್ಟಿನಚಿತ್ರದ । ಕೂಲನಿಬಿಡಯದ ಲಾವುಚದ ಬ । ಲ್ಲಾಳದಡ್ಡಿಗಳೆಡೆಗೆಡೆಗೆ ರಂಜಿಸುವಪಟ್ಟೆಗಳ ॥ ಮೇಲುವೊದಕೆಯಕರ್ಪುರದ ಹೊಂ । ಬಾಳೆಗಳ ಮಲಯಜದಕಂಬದ । ಸಾಲುಗಳಲೊಪ್ಪಿದುದು ಚಪ್ಪರವೆರಡುಯೋಜನದ ॥೧೧॥ ಬಿಗಿವವೆಡೆಮಂಟ ಪದ ಬಿಂಗಾ । ರಿಗಳ ಬಿಡೆಯದ ಚಮರಹೊಂಗೆ । ಜ್ಜೆಗಳ ಮುಕುರದ ಘಂಟೆಗಳ ಬಂಧುರದ ಬಾಸಿ ಗದ ॥ ಸುಗಮಬಂಧದ ಬಣ್ಣಸರದೋ । ಳಿಗಳ ಕಂಬದ ವಜ್ರಮಯಧಾ । ರೆಗಳಲೆಸೆದುದು ಭದ್ರ ಮಂಟಪವಮಲಮಣಿಮಯದ ॥೧೨॥ ಕೀಲಿಸಿದಪಟ್ಟೆಗಳ ದಿವ್ಯದು । ಕೂಲದಲಿ ಹೊಂಬರಹದೆಲೆ ಗಳ । ಚೂಳಿಕೆಯ ಕನ್ನಡಿಯ ತೋರಣವೆರಡುಪಕ್ಕದಲಿ ॥ ಮೇಲುಮುತ್ತಿನ ಸೂಸಕದನೇ । ಪಾಳಚ ಮರಿಯ ದಾಳಿಗಳ ಸಂ । ಮೇಳದಲಿ ಸಮೆತಳಿಸಿದರು ವೈವಾಹಮಂಟಪವ ॥೧೩॥ ಹೊಳೆವಭಿತ್ತಿಯ ಸಾಲಭಂಜಿಕೆಗಳಲಿ ಮೌಕ್ತಿಕವಜ್ರಮಣಿಮಂ । ಗಳಮಹಾರತ್ನಿಯಲಿ ರಚನೆಯ ಚಿತ್ರಪತ್ರದಲಿ ॥ ಇಳೆಗಿಳಿದಪುಷ್ಪಕವೊ ನೂತನ । ನಳಿನಮಿತ್ರನ ರಥವೊ ಮೇಣಿದು । ಜಲಧಿಶಯನನ ಸೆಜ್ಜೆ ಯೋ ನಾವರಿಯೆವಿದನೆಂದ ॥೧೪॥ ಝಳವ ಝೋಂಪಿಸಿ ಬೀಸಿದವು ತಂ । ಬೆಲರ ಬೀಸಣಿಗೆಗಳ ಪರಿ ಮಳ । ಕಲಿತಮಕರಂದದ ತುಷಾರದತುಹಿನರೇಣುಗಳಾ ॥ ಸುಳಿವಸುತ್ತಣಸಾಲಭಜಿಕೆ । ಗಳಲಿ ಸೂತ್ರಿಸಿ ರಚಿಸಿದರು ಮಂ । ಗಳದರಿಂಗಣ ಜಾಡಿಸಿತು ವೈವಾಹಮಂಟಪವ ॥೧೫॥ ವರಜವಾಜಿಯ ಶೃಂಗಗಳ ಕರ್ಪುರದ ತವೆಲಾಯಿಗಳ ಸಾದಿನ । ಭರಣಿಗಳ ಮೃಗನಾಭಿಗಳ ನಡಕಿದರು ಬಂಡಿಯಲಿ ॥ ಸುರಿಸುರಿದು ಹಂತಿಗಳ ಹೊಂಗೊ । ಪ್ಪರಿಗೆಗಳ ತುಂಬಿದರು ಗಂಧದ । ಹಿರಿಯರಂಜಣಿಗೆಗಳ ಹಿಡಿ ದರು ಸುತ್ತುವಳಯದಲಿ ॥೧೬॥ ಬಳಿಕ ಸ್ತೂದೆಗಳ ಭಾವಿಗಳು ಪ । ಕ್ಕಲೆಯ ಪನ್ನೀರುಗಳು ಲಿಡಿ ದವು । ಹೊಳೆವಕ್ಕೆರಾಟಣದ ಕಾಂಚವಮಯದ ಡೋಣಿಗಳ ॥ ತುಳುಕಿ ಬಿಗಿದರು ಕೊಪ್ಪರಿಗೆಗಳ । ವಳಯದಲಿ ನವಯಂತ್ರಮಯವು । ತ್ಥಳಿಗಳೇ ನೀಡುವವು ಬೇಡಿದರಿಗೆ ಸುವಸ್ತುಗಳಾ ॥೧೭॥ ಏಕ ವಿಧದ ನವಾಯಿಯೇ ಮೂ । ಲೋಕದತಿಶಯವಸ್ತುರಚನಾ । ಸೌಕುಮಾರಿಯ ಸೇವೆಗಿದು ಸಾಕಾರ ವಾದುದಲಾ ॥ ಏಕಮಯಮತವಿಶ್ವಕರ್ಮ । ವ್ಯಾಕರಣಲಕ್ಷಣದಲಕ್ಷ್ಯಾ । ನೀಕವಿದರೊಂದೊರೆಗೆಬ ಹುದೇ ಭದ್ರಮಂಟಪವಾ ॥೧೮॥ ವಿವಿಧವೀಣಾವಾದ್ಯಕೋಮಲ । ರವದ ಮಧುರಮೃದಂಗತತಿಗಳ । ರವಣಿಗಳ ನಟ್ಟುವಿಗರುಗ್ಗಡಣೆಯಗಡಾವಣೆಯ ॥ ನವವಿಧದ ವೈತಾಳಿಕರ ವರ । ಯುವತಿಯರ ಭಾರಣೆಯ ಭೂಷಣ । ರವದ ಮೇಳವು ಮುತ್ತಿ ಮುಸುಕಿತು ಚಾರುಚಪ್ಪರವ ॥೧೯॥ ಸಾಳಗದ ಸನ್ಮೋಹದದ ಮಳೆ । ಗಾಲವೋ ಗೀತವೊ ರಸಾಳಿಯ । ಕಾಲುವೆಯೊ ನವಕಾವ್ಯಬಂಧದ ಸಾರಸಂ ಗತಿಯೋ ॥ ಆಲಿಗಳಿಗಾಯುಷ್ಯಫಲಜೀ । ವಾಳುವೋ ನರ್ತನವೊ ಸೊಗಸಿನ । ಮೇಳವಣಿಗಳಪಾಟಿ ಯಾದುದು ಜನದಕಣ್ಮನಕೆ ॥೨೦॥ ತೀವಿದರು ಹೊರವಳಯದಲಿ ನಾ । ನಾವಿಧದ ನಾಟಕದ ನರ್ತನ । ಭಾವಕದ್ರಾವಕಸುಗಾಯಕಮಲ್ಲಚಿತ್ರಕರು ॥ ಕೋವಿದರು ಕರುಷಕರು ಪಣ್ಯಾ । ಜೀವಿವಾಮನಮೂ ಕಬಧಿರಾಂ । ಧಾವಳಿಗಳೊಪ್ಪಿದರ ಸಕಲ ದಿಶಾಸಮಾಗತರು ॥೨೧॥ ಕವಿಗಮಕಿವಾದಿಗಳು ವಾಗ್ಮಿ । ಪ್ರವರಯಾಜ್ಞಿಕಮಾಂತ್ರಿಕರು ವೈ । ಷ್ಣವಮಹೇಶ್ವರಜೈನಭೈರವಬುದ್ಧಲಿಂಗಿಗಳು ॥ ವಿವಿಧ ವರ್ಣಾಶ್ರಮಸುಧರ್ಮ । ವ್ಯಹರಣನಿಷ್ಠರು ವಿವಾಹೋ । ತ್ಸವಪ ಲೋಕನಕೌತುಕಿಗಳೊದಗಿದರಸಂ

ಖ್ಯಾತ ॥೨೨॥ ಗಣಿತವಂತರನೆರಪಿ ಸುಬ್ರಾ । ಹ್ಮಣರು ಸುಶ್ರೋತ್ರಿಯರು ವೈದಿಕ। ಗುಣದ ವಾಚಾಲಕರು ವಿಪುಲಸ್ಮೃತಿಜ್ಞನಿಪುಣರು ॥ ಪ್ರಸ್ತುತಋಷಿಗಳ್ ಮುನಿವರರು ಸಂ । ದಣಿಸಿತಖಿಳದಿಗಂತರವಘಾಶಿ । ಬಣಿಯವೇದವಾಕ್ಯ ನೆರೆದುದು ದ್ರುಪದನಗರಿಯಲಿ ॥೨೩॥ ಅರಸ ಕೇಳ್ಕೈ ಮೇಲೆ ವಿದ್ಯಾ । ಧರಮಹೋರಗಯಕ್ಷರಾಕ್ಷಸ । ಗರುಡಕಿನ್ನರಸಿದ್ಧವಸುಗಂಧರ್ವಭೂತಗಣ ॥ ವರಮರುದ್ಗಣ ರುದ್ರಮನುಭಾ । ಸ್ಕರಸುಧಾಕರತಾರಕಾಗ್ರಹ । ಸುರಪಮುನಿಪದಿಕ್ಪಾಲತತಿ ನೆರೆದುದು ವಿಮಾನದಲಿ ॥೨೪॥ ಚಾರಣರ ಕೈವಾರತುಂಬುರ । ನಾರದರ ಸಂಗೀತ ರಂಭೆಯ । ಚಾರುನರ್ತನ ಚಿತ್ರರಥನ ಮೃದಂಗಮೃದುಶಬ್ದ ॥ ಆರು ಭಟಕಿವಿಗಳಲ್ಲಿ ಬಿವ್ವಂ । ಭಾರಿಯೋಲಗದಲಿ ತಡೆಯವು । ಹಾರಭಸವಿತರೇತರಪ್ರತಿಬಿಂಬವಾಯ್ತೆಂದ ॥೨೫॥ ರಚಿಸಿದರು ಮಂಟಪವನವರವ । ರುಚಿತವೃತ್ತಿಯೊಳವನಿಪಾಲ । ಪ್ರಚಯವನು ಮನ್ನಿಸಿದನಿವರನು ವಿಪ್ರಸಭೆಯೊಳಗೆ ॥ ಪ್ರಚುರಮಣಿಯಿದೆ ಪದ್ಮರಾಗದ ರುಚಿರರತ್ನವು ಜಾತರೂಪದ । ಖಚಿತವಾದೊಡ ವೃಣ್ಯಾಮೆನುತಾ ದ್ರುಪದ ಚಿಂತಿಸಿದ ... ॥೨೬॥

ಅಂತು ಸಂ ೧೨ ಕ್ಕೆ ಪದ ೫೩೫ ಕ್ಕೆ ಮಂಗಳಮಸ್ತು.

## ಹದಿಮೂರನೆಯ ಸಂಧಿ.

॥ಸೂಚನೆ ಕಮಲಮುಖಿ ನಡೆತಂದಳಂದಿನ । ಕಮಲೆಯೆನೆ ಪಾಂಚಾಲಸುತೆ ನಿಜ ।
ರಮಣರನು ನೋಡಿದಳು ಪೃಥ್ವೀಪಾಲಪಙ್ತಿಯಲಿ ॥

ಅರಸ ಕೇಳ್ಕಾಂಪಿಲ್ಯಪುರದ ಪಿ । ಸ್ತರಣಭಾಗದ ಪೂರ್ವವೇದಿಯ । ವರನಿಗಮನಿರ್ಘೋಷಘಾಳಿಸಿತಖಿಳಕಲ್ಮಷನ ॥ ಪುರದ ಮಹಿಳಾಶಿರೋಮಣಿ । ಪರಮಸೌಭಾಗ್ಯದ ಸಮುದ್ರದ । ಸಿರಿಯ ಪಟ್ಟಣಮಪಿಂದು ಸಾಲತು ಪಾಳೆಯಂಗಳಲಿ ॥೧॥ ತಿಗುರ ಗೆಲುವುದು ವಶ್ಯತಿಲಕಾದಿಗಳ ನಿಡುವುದು ಮೋಹನದ ಮ । ದ್ದುಗಳ ಮಾಯೆಯ ಬೀಸುವುದು ಸೂಸುವುದು ಸೊಗಸುಗಳ ॥ ಹಗಲುಹಾಹೆಯ ರೂಪುಗಳ ಗಾ । ಹುಗರ ಹುದಿವುದು ಮನ್ಮಥನ ಕಾ । ಳೆಗದ ಬಾಡಾಬಾಡಿಯೆಂದರು ಹೊಯ್ದು ಡಂಗುರವ ॥೨॥ ಹರಸಿಕೊಂಡರು ನಿಖಿಳಪೃಥ್ವೀ । ಶ್ವರರು ಮಾಯಾಪುರದ ಕಾಂಚೀ । ಪುರದ ಜಾಳಾಂಧರದ ವಿವಿಳಸ್ಥಾನದೇವಂಗೆ ॥ ಕಮಲಮುಖಿನ ಕಜ್ಜಾಯದಲಿ ಸ । ತ್ಕರಿಸಿ ಸಂಶಯಭೇದವರ್ಗದ । ಹರುಷದಲಿ ಹೊರವಂಟರೊಬ್ಬರನೊಬ್ಬರುರವಣಿಸಿ ॥೩॥ ಉಬ್ಬು ಮುಬ್ಬುದು ರಾಯರೊಬ್ಬರ । ನೊಬ್ಬರೀಕ್ಷಿಸಿ ಛಲುವಿನಲಿ ಸಿರಿ । ಗೊಬ್ಬಿನಲಿ ಸಾಹಸಿಕೆಯಲಿ ಸೇನಾಸಮುದ್ರದಲಿ ॥ ಒಬ್ಬರೊಬ್ಬರಸೂಯೆಯೊಬ್ಬರ । ನೊಬ್ಬರಳುಕಿಸುವವಟುಗಂಗಳ । ಹಬ್ಬದಲಿ ಮನಸಂಚುತಪ್ಪಿತಸಾಧ್ಯಚಿಂತೆಯಲಿ ॥೪॥ ಹೋರೆಗರ ಹೊಳ್ಳಿರಿತ ಜೋಯಿಸ । ರಾಮಭಟಿಗಳ ಬಿಂಕ ಮಾಂತ್ರಿಕ । ರೋರೆಮುಸುಕಿನ ಜಾಳು

ದೆಯರನತಿಘಾ । ತಾಳಿಯರ ಕಡೆಗಣ್ಣ ಹಾಳಿದ । ಬಾಲೆಯರ ಚಮರಿಯರ ನಸ್ಲಿದೆ ಕಾಣೆನಾನೆಂದ ॥ ನಿರಿದಲೆಯ ಚೊಲ್ಲೆಯದ ತುಂಬಿಯ । ಮುಂಗುರುಳ ಬೈತಲೆಯ ಮುತ್ತಿನ । ಹೆರೆನೊಸಲ ನಿಡುಹುಬ್ಬುಗಳ ಡಾಳಿಸುವಕದಪುಗಳ ॥ ತುರುಗೆವೆಯ ನಿಟ್ಟೆಸಳುಗಂಗಳ । ಮೆರೆವಸುಲಿಪಲ್ಲುಗಳೆಸೆವನು । ಣ್ಗೊರಳ ನಳಿತೋಳುಗಳ ನೀರೆಯರೈದಿತೊಗ್ಗಿನಲಿ ॥೧೦॥ ತೋರಮೊಲೆಗಳ ನಲಿವಸಡುಪ್ಪೊರ । ವಾರಗಳ ನುಣ್ದೊಡೆಯ ಕಿರುದೊಡೆ । ಯೋರಣದ ಹಾಪ್ರಗೆಯ ಪಜ್ಜೆಯ ಹಂಸೆಗಳ ಗತಿಯ ॥ ನೀರೆಯರ ವೈಗಂಪುಗಳ ತನಿ । ಸೂರೆಗೆಳಸುವ ತುಂಬಿಗಳ ಝೇಂಕಾರಗಳ ಕಡುಗರುವೆಯರು ನೆರೆದರು ಸಖೀನಿವಹ ॥೧೧॥ ಕೀಲಕಡಗದ ವಜ್ರಲಹರಿಯ । ಜೋಲೆಯುದ [illegible]ಪ ರವೆಯದ । ತೋಳಬಂದಿಯ ಕೊರಳ ತಿಸರದ ಬೆರಳ ಮುದ್ರಿಕೆಯ ॥ ನೀಲರತುನದ ಪದಕಮಾಣಿಕ । ದೋಲೆಗಳ ಮೂಗುತಿಯ ಮುತ್ತಿನ । ಮೇಲುಶೃಂಗಾರದ ಸಖೀಜನ ಸಂದಣಿಸಿತಲ್ಲಿ ॥೧೨॥ ಪಿಲಕದೇಕಾವಳಿಯ ಮುತ್ತಿನ । ತಿಲಕಸೂಡಗಪಾಯವಟ್ಟದ । ಲಲಿತಬಂಧದ ವಜ್ರಲಹರಿಯ ತಾರಕಾಪಾಳಿ ॥ ಹೊಳೆವ ಕಾಂಚಿಯ ಕಿಂಕಿಣಿಯ ಸಂ । ಕುಲದ ನೇವುರವೀರಮುದ್ರಾ । ಪಳಿಯ ಚರಣಾಭರಣದಬಲೆಯರೈದಿತೊಗ್ಗಿನಲಿ ॥೧೩॥ ಭ್ರೂಲತೆಯ ಬಿಲುಗಳ ಕಟಾಕ್ಷದ । ಕೋಲಸೂಡಿಗಳ ಬಾಹುಗಳ ಕರ । ವಾಳಿಗಳ ಕಸ್ತುರಿಯತಿಲಕದ ಹರಿಗೆಹಲಗೆಗಳ ॥ ತೋಳುಗಳಲೌಡಿಗಳ ಸೆಳ್ಳುಗು । ರೋಳಿಗಳಸುರಗಿಗಳ ಸನ್ನಾಹ । ನಾಳು ನಡೆದುದು ದ್ರೌಪದಿಯ ದಂಡಿಗೆಯ ಬಳಿಸಿವಲಿ ॥೧೪॥ ತೋರಪೊಲೆಗಳ ದಂತಿಕುಟಿಗಳ । ಚಾರುಜಘನದ ಜೋಡಿಸಿದಹೊಂ । ದೇರುಗಳ ಸುಳಿಗುರುಳುಗಳ ಪಲ್ಲರಿಯರುಝಾಡಿಗಳ ॥ ಚಾರುನಯನಾಚಪಲಗತಿಗಳ । ವಾರುವಂಗಳ ಮೇಲುವಸನದ । ಸಾರಸಿಂಧದ ಸೇನೆ ನಡೆದುದು ಸತಿಯಬಳಸಿವಲಿ ॥೧೫॥ ಯತಿಗಳಿಗೆ ಮೊನೆದೋರು ತಣಸನು । ವ್ರತಿಗಳಿಗೆಪೇರುತ ಸವಹಾಫ । ಸ್ಥಿತರಮೂಗನಪೀಲಹಾಯುಘಧಾರೆಗಳನೆಳೆದು ॥ ಶ್ರುತಿವಿಹಿತಸತ್ಕರ್ಮಿಗಳ ಟೀ । ಕ್ಷಿತರಮತಿಯಲಿ ತಪಮುದ್ರಾಂ । ಕಿತವಸೂತ್ರತ್ರವಿಹಾರಿ ನಡೆದುದು ಯುವತಿಜನಕಟಕ ॥೧೬॥ ಆರು ನಿಲುವರು ಸಮ್ಮುಖಕೆ ಮದ । ನಾರಿಯದರ್ಪದನಾರಿಹರಿತಾ । ಹೇರುರದಹೆಂಗುಸುರೆ ಬೊಮ್ಮನು ಮಗಳ ಮೊರೆಗೇಡಿ ॥ ಘೋರವದು ಸುರಪತಿಯ ಕಥೆ ವೈಯಾರೆ ಹೊತ್ತನು ಮದನಮುದ್ರಾ । ಧಾರಿಯೆಂಬವ್ರೊಲೊದರದುವು ಮುಂಗುಡಿಯ ಕಹಳೆಗಳು ॥೧೭॥ ಪಸರಿಸಿತು ತಂಬೆಲರು ಬೀತುದು । ಬಿಸಿಲ ಬಿಂಕ ಸರೋಜಸಂತತಿ । ಮಸುಳಿದುವು ಮದವೇರಿ ಮೆರೆದುವು ತಾರಕಾನಿವಹ ॥ ಒಸರುದವು ಶಶಿಕಾಂತ ನೃಥಲ । ಹಸರ ಹಂದುದು ಚಕ್ರವಾಕದ । ಬೆಸುಗೆ ಸಡಿಲಿತು ಚಾರುಚಂದ್ರಾನನೆಯ ಬರವಿನಲಿ ॥೧೮॥ ಹೊಳೆವಕಂಗಳ ಬೆಳಗಿನಲಿ ಕ । ತ್ತಲಿಸಿದವು ಕಾಮುಕರ ಮುಖ ತನು । ವಳಯಕಾಂತಿಯ ತಂಪಿನಲಿ ಬಾಡಿದವು ಬುದ್ಧಿಗಳು ॥ ಉಲಿದವಿಭ್ರಮದಿಂದಹಂಕೃತಿ । ತಿಲೆಗಳೊಡೆದುವು ಮೋಹನದ ಹೊ । ಯ್ಲೊಳಗಹೋಳವಡಗಿದುವು ಚಿತ್ತ ಮಹಾಮಹೀಶ್ವರರ ॥ ತರುಣಿಯರ ನವನೀಲಮಣಿಗಳ । ಕುರುಳ ಕಬರಿಯ ಭರದವರಕ । ಸ್ತೂರಿಯತಿಲಕವಪಾಳಿಕೆಯಘನಕಾಂತಿಲಹರಿಗಳ ॥ ಕೊರಳಹಾರದ ಕರ್ಣಪೂರದ । ಸರದ ಮೌಕ್ತಿಕರುಚಿಯ ಯಮುನಾ । ಸುರನದಿಯ ಸಂಗದಲಿ ಮುಳುಗಿತು ಸಕಲನೃಪನಿಕರ ॥೨೦॥ ಪರಿಮಳಕೆ ಮಿಗೆ ಕವಿವತುಂಬಿಗೆ । ಕರಳುವರು ಹುಬ್ಬಿನಲಿ ಪದನೇ । ವುರದನುಣ್ದನಿಗೆಳಸಿ ಮುತ್ತುವರಾಜಹಂಸೆಗಳ ॥ ಹೊರೆಯ ಕೆಳದಿಗೆ ದೂರುವ

ರುಕ್ಮಿ । ಯರಿಗಳಿಗೆ ತಮ್ಮ ಧರೆಬೆಂಬಡ । ಮುರಿವರಿದು ಮುಖದಿರುಹುವರು ಮುಗ್ಧಾಂಗನಾನಿವಹ ॥೪೧॥ ಕಂಗಳೋರೆಯ ತಾಳಿಸುವ ಹಾ । ಸಂಗಿಗಳ ಬಿಗುಹಿನ ದುಹಾರದ । ಭಂಗಿಗಳ ಬಲುವಿಟರ ಕರಣಾಪಸಾರಗಳ ಸರೆಯ ॥ ಮುಂಗುಡಿಯ ನಿಜಸಾರಿಯರ ಕಪ್ಪಿ । ವಂಗವಣೆಗಳ ಜೂಜುಗಾತಿಯ । ರಂಗನೆಯ ಪಂಡಿಗೆಯ ಬಳಿಹಿಡಿದರು ವಿದಗ್ಧೆಯರು ॥೪೨॥ ಹಾವುಗೆಯ ಸೀಗುರಿಯ ವರಚಮರ । ದಾವಳಿಯ ಕರ್ಪೂರದ ರಗಂಧಪ । ಹೂವುಗಳ ಕಸ್ತೂರಿಯ ಕಾಪುಚವಾಚಕುಂಕುಮದ ॥ ಶ್ರೀವಿಪಸುಪವುಭಾಜನಸ್ಯಾಜ । ನಾವಳಿಯ ಕನ್ನಡಿಯ ಹಿಹಿಥನ । ಶ್ರೀವಿಳಾಸಿನಿಯರ ಕದಂಬಕಪ್ಪೈಟಿತೊಗ್ಗಿಸಲಿ ॥೪೩॥ ಧರಣಿಪತಿ ಕೇಳಖಿಳಪೃಥ್ವೀ । ಶ್ವರರ ಬಹುಳಾಸ್ಥಾನವಲಿ ಮೋ । ಹುಸಿವರು ನೋಪಸದ ಮೋಡಾಮೋಡಿಯುಬಲೆಯರು ॥ ಅರಸುಗಳ ನಿಜಸೋಟದಲ್ಲಿಯ । ಗರುವೆಯರ ನಸುನೋಟ ತಮ್ಮೊಳು । ಬೆರಸಿಕೊಳ್ಳುದ್ದಿದವು ಪಾಡಾಪಾಡಿಯಂದದಲಿ ॥ ದಾಯ ತಪ್ಪಿತು ಗರುವರಾಟ ಪಿ । ಡಾಯಗೆಟ್ಟಿತು ಖಿಟರ ನೋಟ ನೆವಾಯಿಕಾರರ ಕೂಟ ಕುಸಿದುದು ಮದನ ಶರಹತಿಗೆ । ಗಾಯವಡೆದುದು ಷ್ಠತಿಯ ಘಾಟ ನವಾಯಿ ಹೆಚ್ಚಿತು ಪತ್ತು ಬೆಟ ವಾಯತಾಕ್ಷಿಯ ಕೂಟಕೆಳಸುವ ಬದರ ಭೂಮಿಪರ ॥೪೫॥ ಕೆಲಕಡೆಯ ಕೆಳದಿಯರ ಕಂಗಳು ಹೊಳಹ ದುಪ್ಪಾಳಿಯಲಿ ಸುಮುಕ್ತಿಸ್ಥಲಿತಕಂಥೂಳಿಯಲಿ ಪಾಸಿತು ಪಸದ ಮಧಿವರ್ಗ ॥ ಬಳಗೆಹೊತ್ತು ವಡಗೆಯ ಹೊರಗಣ । ತಳಿತ ಬಿಮ್ಮಿನ ನಗೆಯ ನೃಪ ಮಂ । ಡಲದ ಮಾಳಿಯ ನೇನನೆಂಬೆನು ರಾಯ ಕೇಳೆಂದ ॥೪೬॥ ಚೆಲುವಿಕೆಯ ಕೈಕೃತ್ಯವೋ ಪರಿ । ಮಳದ ಪುತ್ಥಳಿಯೋ ಲತಾಂಗಿಯ । ಸುಳಿವೊ ಲಾವಣ್ಯೈಕರಸಸಾಕಾರವಿಭ್ರಮವೋ ॥ ಲಲಿತಶೃಂಗಾರಾಬ್ಧಿವಧುವೋ । ಚಲ್ಲಲಿತಸುಧೆಯೋ ಸಾಧಕರಿಗಿದು । ಫಲಿಸಿದೊಡೆ ಕೃತಕೃತ್ಯರವರೆಂದರು ಮಹೀಶ್ವರರು ॥ ಈಕೆಯಿಂದೊಲಿಸಿದೊಡೆ ಮದನಂ । ಗೇಕೆ ದೇಹತ್ಯಾಗವಹುದು ಪಿ । ನಾಕಿ ತಾ ವೈರಾಗ್ಯದಲಿ ಹೊಗುವನೆ ತಪೋವನವ ॥ ಸಾಕು ಗೌತಮಮುನಿಯ ಮುಳಿಸಿನ । ಶಾಕಿನುಡಿ ಫಲಿಸುವುದೆ ಯೆನುತಾ । ನಾಕಪತಿ ರಂಭಾದಿಸತಿಯರ ನೋಡಿದನು ನಗುತ ॥೪೭॥ ತಂದರಾಪಾಂಚಾಲೆಯನು ಹೊ । ಸ್ನಂದಣದಲಾಸ್ಥಾನಸೀಮೆಗೆ । ಮುಂದೆ ಸಿಂಹಾಸನದ ನಾಲವು ಹಾಮಹೀಶ್ವರರ ॥ ಸಂದಣಿಯಲವರವರನಿಮಿಷ । ರೆಂದು ಹಿಮರಸಬೇಕೆನುತ ನೃಪ । ನಂದನನು ಮೊದ್ದಿದನು ಕಮಲಾನನೆಯು ಪಂಡಿಗೆಯ ॥೪೮॥ ತಂಗಿ ನೋಡಾ ತಾಯೆ ನಿಸ್ನಯ । ಕಂಗಳೊಲಿದವರ ಚಿತ್ತವಾರ್ಥಿ ತ । ರಂಗದಲಿ ತೂಗುವರ ತೋರುವೆನವನಿಪಾಲಕರ ॥ ಇಂಗಿತದ ಲವರಂತರಂಗವ । ನಂಗವಟ್ಟದ ಒಳಕೆಯನು ಬಿಹಿ । ರಂಗದಲಿ ನಿರವಯಿಸುತ ನುಡಿದನು ನಿಜಾನ ಜೀಗೆ ॥೫೦॥ ಈತ ದುರ್ಯೋಧನಮಹೀಶ್ವರ । ನೀತ ಮಶ್ಯಾಸನನು ಪುರ್ಜಯ । ನೀತ ದುಶ್ಶಳನೀತ ವಸ್ಸಹನೀತ ಚಿತ್ರರಥ ॥ ಈತ ದುರ್ಮದನೀತ ಚಿತ್ರಕ । ನೀತಗಳು ಕುರುವಂಶದಲಿ ವಿ । ಖ್ಯಾತರಬಲ ನಿರೀಕ್ಷಿಸು ಧೃತರಾಷ್ಟ್ರನಂದನರ ॥೫೧॥ ನೋಡಳವರನು ಸುಡುಸಳೀತನ । ಕೂಡೆ ಭಾವದೊಳಿವರ ಕೊಡಯೇ । ಹಾಡಿದಳಲಾ ಯೆನುತ ಧೃಷ್ಟದ್ಯುಮ್ನ ನಸುನಗುತ ॥ ನೋಡು ತಂಗಿ ವಿರಾಟನುತ್ತರ । ಗೂಡಿ ಕೀಚಕರನು ಶ್ರುತಾಯುಧ । ಮೂಡಣರಸುಗಳನು ರವಿಧ್ವಜ ರೋಚಮಾನಕರ ॥೫೨॥ ನೀಲಚಿತ್ರಾಯುಧನು ದಕ್ಷಿಣ । ಚೋಳಕೇರಳಪಾಂಡ್ಯಧರಣೀ । ಪಾಲಕರೊಳೀ ಚಂದ್ರಸೇನಸಮುದ್ರಸೇನಕರು ॥ ಲೋಲನಯನೆ ಕಳಿಂಗಧರಣೀ । ಪಾಲನೀತನು ಚೇಕಿತಾನನ್ನ ' ಪಾಲನೀತನು ಭಾನು

ದತ್ತವಸುಶ್ರೀಶನೋಡೆಂದ ||. ಇತ್ತಲೀಕ್ಷಿಸು ಪೌಂಡ್ರಕನ ಭಗದತ್ತನನು ಕಾಂಭೋಜನನು ಪರದತ್ತನನು
ವರಹಂಸಡಿಬಿಕರ ಮಾದ್ರಭೂಪತಿಯ || ಇತ್ತಲು ಜರಾಸಂಧಮಣಿಮಾನಿತ್ತ ಸಹದೇವನು ಬೃಹದ್ರಥ।
ನಿತ್ತಲೀತನು ದಂಡಧಾರಕನೃಪನು ನೋಡೆಂದ || ಭೂರಿಭೂರಿಶ್ರವನು ದಕ್ಷಿಣ। ವೀರಬಾಹ್ಲಿಕ ವಿಂದ
ಚಿತ್ರರಥ। ಗೀರಥನು ನೃಪವರಪೌರವ ರಥ ಶಿಬಿಶ್ರುತಾಯುಧರು || ವೀರವೃದ್ಧಕ್ಷತ್ರಸೃಂಜಯ। ಚಾರು
ಭುಜಬಲಸೋಮದತ್ತವು। ವೀರಮಣಿಮತ್ತಲಿದೆ ತರಳಾಕ್ಷಿ ನೋಡೆಂದ ||೩೫|| ಈತ ರುಕ್ಮಾಂಗ
ದ ಜಯದ್ಬಲ। ನೀತ ಶ್ರುತಸೇನಚ್ಯುತಾಯುಧ। ಈತಗಳು ನಿಯತಾಯು ದುರ್ಮರ್ಷಣದರಮಹೋದ
ರರು || ಈತವಮುಸೋಮಾತ್ಮಜನು ವಿಖ್ಯಾತಶಿಶುಪಾಲನು ಮಹಾಬಲ। ನೀತನಶ್ವತ್ಥಾಮನಾಬಲ
ನೀತ ನೋಡೆಂದ ||೩೬|| ಭೂತಳದ ರವಿಯಂತೆ ಹೊಳೆಹೊಳೆ। ವಾತ ಕರ್ಣನು ತನುಜರೀತನು। ಗೀ
ತಗಳು ವೃಷಸೇನನಗ್ಗದ ಚಿತ್ರಸೇನಕರು || ಈತನಾಹನೆ ನೋಡೆನಲು ಭಾ। ವಾತಿಶಯಸಂಬಂಧಭಾ
ವದೊ। ಳೀತನನು ನೋಡುವಳು ತಿರುಹಿದಳಬಲೆ ಲೋಚನವ ||೩೭|| ಉಕ್ಕಿದಾಕಿವಿವೇಕಂ ಬೇ। ಟ
ಕ್ಕೆ ತಂದುದು ಕಂಗಳೀಕೆಯ। ಮುಕ್ಕುಳಿಸಿ ಮೈಸೋಂಕಿನಲಿ ಲಟಕಟಿಸಿದುದು ಹೃದಯ || ಸಿಕ್ಕಿತಳಲಿಗೆ
ಸೋತು ಸೊಕ್ಕಿನ। ಚುಕ್ಕಿಯೋ ಚಾಪಳವೊ ಸಿದ್ಧಿಯೊ। ಅಕ್ಕಜವು ತಾನೆನುತ ಚಿಂತಿಸಿತಾನೃಪವ್ರಾ
ತ ||೩೮|| ಇತ್ತ ನೋಡ್ ತಂಗ ಯದುಭೂ। ಪೋತ್ತಮನನಮರಾರಿಕವಳೀ। ಮತ್ತದಂತಿಯ ನಿ
ಖಿಳನಿಗಮಾವಳಿಶಿರೋಮಣಿಯ || ಉತ್ತರೋತ್ತರರಮ್ಯಮೂರ್ತಿಯ। ನುತ್ತಮಾಮಲಕೀರ್ತಿಯನು
ಮನ। ದತ್ತನೊಡೆ ಸುಳಿವಿಲ್ಲ ಕೃಷ್ಣನ ಪದಸನ್ನಿವೆಂದ ||೩೯|| ಮದನನಯ್ಯನು ಮೂಜಗವಮಾ। ಡಿದ
ನ ತಾತನು ರೂಪಪಿಭವವ। ನಿದರೊಳಗೆ ನೀ ನೋಡುತೋ ಯಾದವಶಿರೋಮಣಿಯ || ಸುಗತಿಯರ
ಸ್ತ್ರೀರುಪೆಗಳನು ನೋಡಿದೊಡೆ ಧಾರಿಣೀಲಕ್ಷ್ಮಿಕೃಷ್ಣನ। ಪದಯುಗವ ನೋಲೈಸುತಿಹರಬುಜಾಕ್ಷಿ ಕೇಳೆಂದ
||೪೦|| ಎನಲು ಬಕುತಿಯ ಭಾವರಸದಲಿ ನೆನೆದು ಹೊಂಪುಳಿವೋಗಿ ರೋಮಾಂ। ಚನದ ಮೈಯಬ್ಧಿ
ನಲಿ ತನುಪುಳಕಾಂಬುಪೂರದಲಿ || ಮನದೊಳಗೆ ವಂದಿಸಿದಳೆನಗೀ। ತನಲಿ ಗುರುಭಾವನೆಯ ಮತಿ
ಸಂ। ಜನಿಸಿತೇನೆಂದರಿಯೆನೆಂದಳು ಕಮಲಮುಖಿ ನಗುತ ||೪೧|| ಒಲಿಯನೀ ಕೃಷ್ಣಂಗೆ ನೀಲಾಂ। ಬರ
ನು ನೋಡಾದೊಡೆ ಮುರಾರಿಯ। ಹಿರಿಯಮಗನನು ಲೋಕಮೂರರ ಬಂಡಿಕಾರನನು || ಹರನ ಕಣ್ಣಿ
ಗೆ ಬಗೆಯನೆಂಬೀ। ಬಿರುದು ಮನುಮಥನೀತನೀತನ। ವರತನುಜನನಿರುದ್ಧನಿದು ಯದುರಾಜಕುಲಪೆಂ
ದ ||೪೨|| ಸಾರಣನು ಕಲಿಸಾಂಬನೀತನು। ಚಾರುದೀಪಕನೀತ ಸಮರಾ। ಕ್ರೂರಸತ್ಯಕನೀತ ಸಾತ್ಯಕಿ
ಯಿಾತ ಕೃತವರ್ಮ || ಸಾರವೆಂಜಸನೀತನೀತವಿ। ಮಾರಣಾಟಿಸಮಸ್ತಯಾದವ। ವೀರರಿದಸಂಖ್ಯಾ
ತ ಕೃಷ್ಣಕುಮಾರರಿವರೆಂದ || ಜಗವನಿಂದ್ರಿಯಕರ್ಣವಿಷಯಾ। ದಿಗಳನೆಲ್ಲವನೆತ್ತಿ ಮುಖದಲಿ। ತೆಗೆ
ದು ಶ್ರುತಿಶಿರದಮಲತತ್ವವನರಸುವಂದದಲಿ || ಬಗೆಯ ಬಯಕೆಯ ಸೊಗಸುಗರವಾ। ಯಿಗನನರಸು
ತ ಕುಡಿತ್ರೆಗಣ್ಣಲಿ। ಮೊಗೆದು ಸೂಸಿದಳಂಬುಜಾನನೆಯಖಿಲನೃಪಜನವ ||೪೩|| ಕೆಲರು ಮಧುರಾಪಾಂ
ಗದಲಿ ಕಂ। ಗಳಮರೀಚಿಯ ಬೆಳಗಿನಲಿ ಕೆಲ। ರೆಳನಗೆಯ ಮಿಂಚಿನಲಿ ಸಖಿಯರ ಮೇಳವಾತಿನಲಿ ||
ಲಲನೆ ನೋಡಿದಳಂದು ಸೊಗಸಿನ। ಲೊಲಿವ ಸಖಿಯರಿಗೆಂದಳೆಂದೊಳ। ಗೊಳಗೆ ಬೆರೆತರು ಬಯಲ
**ಮಧುವಿನ ಬಾಯ ಸವಿಗಳಲಿ ||೪೪|| ಗರುವೆಯಿಂಗಿತವರಿದು ದಂಡಿಗೆ। ಮುರಿದೊಡನೆಯ್ತಂದುದೀ**

ಕೆಯ । ನೆರವಿ ಕಳುಹುತ ಕಂಗಳಲಿ ಕರಣೇಂದ್ರಿಯಂಗಳಲಿ ॥ ಬರಿಯ ಡಿಂಬದ ಪ್ರೊಂಬಿನಲಿ ಕೇ । ಸರಿಯ ಸೀತವನಿಳಿಯದಿರ್ದರು । ಧರಣಿಪರು ಮುರವೈರಿಗಂಗಾಸೂನುವೊರತಾಗಿ ॥೬೬॥ ಮಡಿಸಿದಲೆ ಬೆರಳೊಳಗೆ ಬಾಯೊಳಗಡಸಿದೆಲೆ ಬಾಯೊಳಗೆ ಸಚಿವರ । ನುಡಿಯ ಕೇಳರು ಸುಳಿಯ ಕಾಣರು ಲೋಚನಾಗ್ರದಲಿ ॥ ಕಡುಮುಳಿದಕಂದರ್ಪಶರವವ । ಗಡಿಸಿ ಕೈಗಳನೊಡ್ಡಿ ನೃಪರಿವೆ । ಮಿಡುಕದಿರ್ದರು ಬೆರಳ ಮೂಗಿನ ಹೊತ್ತುದುಗುಡದಲಿ ॥೬೭॥ ರಾಯನೆಂದನು ಸಕಲಧರಣೀ । ರಾಯರನು ಮನ್ನಿಸದೆ ಮರಳಿದ । ಳಾಯತಾಕ್ಷಿ ಮಹಾಸ್ವಯಂವರದಲಿ ಮಹಾದೇವಾ ॥ ಬೋಯಿಸರ ಪೋರಗರ ಪೇಳಿಕೆ । ಹೋಯಿತೇ ಹೊಳ್ಳಾಗಿ ಪಾಂಡವ । ರಾಯರನು ತೋರಿಸನೆ ಗದುಗಿನವೀರನಾರಯಣ ॥೬೮॥

ಅಂತು ಸಂಧಿ ೧೩ ಕ್ಕೆ ಪದ ೬೦೩ ಕ್ಕಂ ಮಂಗಳಮಸ್ತು.

## ಹದಿನಾಲ್ಕನೆಯ ಸಂಧಿ.

ಸೂಚನೆ॥ ತಮತಮಗೆ ತವಕದಲಿ ಭೂಪೋ । ತ್ತಮರು ಹೋದರು ಬಳಲಿ ಜಾತ । ಶ್ರಮರು ಹಿಮ್ಮೆಟ್ಟಿದರು ಗೆಲಿದನು ಧನುಮಹಾರಥರ ॥

ಕೇಳು ಜನಮೇಜಯನೃಪತಿ ಪಾಂ । ಚಾಲೆ ಪೊಕ್ಕಳು ಭದ್ರಮಂಟಪ । ಶಾಲೆಯನು ಮರಳಿದುದು ಮನ್ಮಥನೊಡ್ಡು ಸತಿಯೊಡನೆ ॥ ಬಾಲೆಯನು ನಿಜರೂಪದರ್ಪದೊ । ಳಾಳಲರಿಯರೆ ಬಾಹುಬಲದಲಿ । ಸೋಲಿಸುವೊಡನುವಾಗಿಯೆಂದರು ಹೊಯ್ದು ಡಂಗುರವ ॥೧॥ ಇದೆ ಮಹಾಧನು ಬಾಣಪಂಚಕ । ವಿದೆ ನಭೋಗ್ರದ ಯಂತ್ರ ಹೊಳವು । ತ್ತಿದೆ ವಿಭಾಡಿಸಿ ಮೆರೆವನಾವನು ಬಾಹುವಿಕ್ರಮವ ॥ ಇದುವೆ ಕಬ್ಬಿನಬಿಲು ಶರಾವಳಿ । ಇದು ಕುಸುಮಮಯ ಯಂತ್ರವೆ ಬಲೆಯ । ಹೃದಯವಾತನೆ ರಮಣನಾತನೆ ಕುಸುಮಶರನೆಂದ ॥೨॥ ಎಂದು ಸಾರಿದು ಧಾರಿಧನುವನು । ತಂದು ಧರೆಗಿಳುಹಿದರು ಯಂತ್ರವ । ನಂದವಿಟ್ಟರು ಗಗನದಲಿ ಗವಸಣಿಗೆಗಳನುಗಿದು ॥ ಮುಂದೆ ಕೂರಂಬುಗಳ ಥರಥರ । ದಿಂದ ನಿಲಿಸಿ ಸುಗಂಧದಕ್ಷತೆ । ಯಿಂದ ಪೂಜೆಯ ರಚಿಸಿದರು ವೈದಿಕವಿಧಾನದಲಿ ॥೩॥ ಮಸಗಿದುದು ಬಹುವಾದ್ಯರವನಿ । ಪ್ಪಸರದಲಿ ನಿಸ್ಸಾಳತತಿ ಗರ್ಜಿಸಿದುವಾವರ್ಜಿಸುವ ಪೋಲ್ಪನಯಂತ್ರಭೇಟಿಗಳ ॥ ಬಸಗೆಯಾಟವೊ ಬಿಲ್ಲ ಹೊಯ್ಲಿನ ಹುಸುಗೆಯಾಟವೊ ಗಂಡವರಿಗೆ ಗಂ । ಗಸೆಯ ಮಾಡಿತು ಚಾಪವಿತ್ತಲು ಭೂಪ ಕೇಳೆಂದ ॥೪॥ ನೆರವಿಯಲಿ ನಾನಾದಿಗಂತದ । ಧರಣಿಪತಿಗಳ ಹಮ್ಮಿಕೆಯಲು । ಬ್ಬರಿಸಿ ಪೊಕ್ಕರು ಬೇರೆಬೇರೊಬ್ಬೊಬ್ಬರು ರವಣಿಸಿ ॥ ಹರಗಿರಿಗೆ ಹುಲುರಕ್ಕಸರು ಮು । ತ್ಸರಿಸುವಂತಾಯ್ತೀನನೆಂಬೆನು । ಧರೆಯ ಬಿಡದೀಧನು ವಿಭಾಡಿಸಿ ಕೆಡಹಿತವನೀಪರ ॥೫॥ ಹಾರ ಹರಿದುದು ಕರ್ಣಪೂರದ । ಚಾರುಮಣಿಗಳು ಸಡಿಲಿದವು ಪದ । ವೀರನೇವುರ ನೆಗ್ಗಿದವು ಕಗ್ಗಿದವು ನೆನಹುಗಳು ॥ ನಾರಿಯರ ಕೈ ಹೊ

ಯ್ಲ ನಗೆಯ ನಿ । ಹಾರ ಜಡಿವುದು ಮುಸುಕುದಲೆಯ ಮ । ಹೀರಮಣರೋಲೈಸಿ ಸಿಂಹಾಸ
ನವ ಸಾರಿದರು ॥೬॥ ಮಿಡುಕಬಲ್ಧನು ನಮ್ಮ ಜೋಡಿಸಿ । ಕೆಡಹುತಿದನಿನ್ನಾರು ಕೊರಳಲಿ । ತೊ
ಡಿಸಿ ತಿರುವನು ಸೆಳೆದು ಬಿಡುವರೊ ಯಂತ್ರದಲಿ ಶರವ ॥ ಕಡುಪಿನಣ್ಣನ ಕಾಬೆವೈಸಲೆ । ನುಡಿದು
ಮಾಡುವುದೇನೆನುತ ಸಿರಿ । ಮುಡಿಯ ಮುಸುಕಿನ ರಾಯರಿದ್ದರು ಬಯಲಬಿಂಕದಲಿ ॥೭॥ ಐಸಲೇ
ಸೌಭಾಗ್ಯವೆಮಗೆ ಶ । ರಾಸನಾಕರುಷಣದೊಳತಿಶ್ರೊ । ಳ್ಯಾಸದಲಿ ಡಾವರಿಸಿ ಗೆಲಿದಳು ದ್ರುಪದ
ಸುತೆ ನೃಪರ ॥ ಲೇಸು ತಪ್ಪೇನಿದಕೆ ನುತ ಭ । ದ್ರಾಸನವನಿಳಿದುಲಿವತೊಡರಿನ । ಗೋಸಣೆಯ
ಘುಳಿಲುಗಳ ಮಗಧನೃಪಾಲನೈತಂದ ॥೮॥ ಬಿಲ್ಲಹೊರೆಗೈದಿದನು ಚೌಪಟ । ಮಲ್ಲ ನೋಡಿದನೈಸಲೇ ತ
ಪ್ಪಲ್ಲೆನುತ ಮೇಲ್ದಿರುಹಿದನು ಮುಂಗೈಯ ಸರಪಣಿಯ ॥ ಬಿಲ್ಲನೆತ್ತಿದೊಡವನನಂಗನೆ । ಯೊಲ್ಲಳೋ
ಮೇಣೊಲಿವಳೋ ಮಿಗೆಬಲ್ಲಿದನು ತಾನೀತನೆನುತಿರ್ದುದು ಸಖೀನಿವಹ ॥೯॥ ಈತ ಕುಸಿದೆತ್ತಿದೊಡೆ
ಧನು ಮಾ । ರಾತುಬವಸೌಕಿದೊತೆ ಕಾರ್ಮುಕ । ವೀತಸಾರೆಂಪರಿಯಬಿವ ನ್ಯೌಪೂತ್ತಿ ಮೈಬಲಿದ ॥
ಘಾತಿಯಲಿ ಘುಲ್ಲಿಸಿದೊ ಡಾಧನು । ಸೋತುದೆವೆಯಂತರಕೆ ತೊಲಗದು । ಧಾತುಗುಂಡಬಡಸಿಕ್ಕಿದವಪ
ಳ್ಳೆಗಳುಮಾಗಧನ ॥೧೦॥ ಬೆಮರನಾರಿಸಿಕೊಂಡು ವಿಗತ । ಶ್ರಮನು ಪೊಳಕಾಲಿಕ್ಕಿ ದಂಡೆಯೊ । ಘ
ಮರಿ ದೇಹವ ಬಲಿದು ವಕ್ಷದೊಳೌಂಕಿ ಗಾಢದಲಿ ॥ ಕುಮತಿಯಲ್ಲಾಪಿದೊಡೆ ಬಿಟ್ಟುದು।ಅಮಮ ಒ
ಮಾತ್ರಕ್ಕೆಘುನಪಿ । ಕ್ರಮವನೊಡೆದುದು ಸವೆದುದಾತನಗರ್ವವಿಭ್ರಮವ ॥೧೧॥ ಕೇಳಿದನು ಕಾಂತಾಕ
ದಂಬದ । ಗೋಳುಗಳ ಘೊಳ್ಳೆಂಬನಗೆಗಳ । ಕಾಳುಮಾಡಿದನೇಕೆ ಧನು ತಾನೇಕೆ ಸುಡುಯೆನುತ ॥ಬೀ
ಳುವೆಯಲುಡಿದಂಕದವೊಲು । ಬ್ಬಾಳುತನ ಹೈಸರಿಸೆ ಮುಸುಕಿನ । ಮೌಳಿ ಪಿಮ್ಮೆಟ್ಟಿದನು ಕಡೆಯವತಿ
ರುಹಿ ಕಿರುದೊಡೆಗೆ ॥೧೨॥ ಕೆರಳಿದನು ದಮಘೋಷನಂದನ । ನರರೆ ಬಿಟ್ಟನ ಧನು ಪಿಭಾಡಿಸಿ । ತೆರ
ಳಿಚಿತಲಾ ವಿಗಡಚಕ್ರಾಯುಧನ ಮಾಗಧನ ॥ ಹರಿಬವೆನ್ನದು ಹೊಳ್ಳುಗಳೆಪೆನು । ದುರುಳಿಘನುಪನ
ನಗುವಕೈನೆಯು । ತುರುಬಕೊಯ್ಸುವೆನೆನುತ ಕಲಿಶಿಶುಪಾಲನೈತಂದ ॥೧೪॥ ಇವನಲೇ ರಾವಣನು ಮು
ನ್ನಿನ । ಭವದೊಳಗೆ ತಪ್ಪಿಲ್ಲೆನುತ ಜನ । ನಿವಹ ನಡುಗಿತು ಕೋಮಲಾಂಗಿಯ ಪುಣ್ಯಪೆಂದೆನುತ ॥
ಅವನಿಪತಿ ಕೇಳೆಣೆವನಿವಚಾಪವನು ಬೋಳೈಸಿದನು ಬಲುಹೋ।ತ್ರಿವಯೆನುತ ಸಿವರಿಸಿದನು ಡಾವರಿಸಿದ
ನುಧನುವ ॥ ಏನನೆಂಬೆನು ಧನುಸಘಾಡದವಮಾನಭಂಗದ ಮೊದಲಮನೆಯೆನೆ । ಮಾನಿನಿಯರಪಹಾಸ್ಯ
ವೀಜನರೀನೃಪಾಲಕರ ॥ ಹೀನನುಡಿಗಳ ಕಂಡು ದೈತ್ಯಸ । ಮಾನ ಮನದಲಿ ನೊಂದು ತಿರುಗಿದ । ನೇನ
ನೆಂಬೆನು ಸವೆದುದಾತನ ಗರ್ವವಿಭ್ರಮವ ॥೧೫॥ ಕಂಡುಮಾಗಧ ಕರೆವನೀಧನ । ಚಂಡಿಯಿದು ನಮ
ಗಲ್ಲ ನಾಮ್ಮಂ । ಕೊಂಡು ತಪ್ಪಿತು ನೊಪ್ಪಿತಾದುದು ಭಾರಿಯಗ್ಗಳಿಕೆ ॥ ಭಂಡರೀಭೂಮಿಪರು ದ್ರುಪದ
ನ । ಗುಂಡುದೊತ್ತಿರನಗೆಯಪಾನಲಿ । ಮಂಡೆಗಳಲಿವರೆನುತ ಹಾಯ್ದರು ತಮ್ಮಪಟ್ಟಣಕೆ ॥೧೬॥ ಗ
ರುವರಲ್ಲಾ ಚೈದ್ಯಮಾಗಧ । ರರಿದೆ ತಮ್ಮಯ ಪುರಕೆ ಗಮಿಸಿದ । ರರಸುಗಳ ಮಿಕ್ಕವರ ವಿಧಿಯನು
ಕೇಳು ನರನಾಥ ॥ ಧರಧುರದೊಳಭಿಮಾನಹಾನಿಯೆ । ಹುರುಳಹುದು ಬಿಲುಹೋರಟೆಗೆ ನಿಲ । ಲರಿ
ದೆನುತ್ತಂಗವಣೆಗುಂದಿತುನೆರೆದನೃಪನಿಕರ ॥೧೭॥ ದುರುಳ ಪಾಂಚಾಲನ ಕುಮಾರಿಯ । ವರಕಟಾಕ್ಷದ
ಬೀಸುವಲೆಯಲಿ । ಶರಮಹಾಧನುವೆಂಬಬಲುದಡಿವಲೆಯನಳವಡಿಸಿ ॥ ಧರಣಿಪಾಲಮೃಗಂಗಳನು ಸಲೆ।

ಬರಿಸಿ ಸದೆದನು ಹೊಲ್ಲೆಹೇನಂ । ತಿರಲಿ ನೋಡುವೆನೆನುತ ಶಲ್ಯನೃಪಾಲನೈತಂದ ॥ ಅಗ್ಗಳೆಯನಾ ಮಗಧ ಮೂರ್ತಿನ । ಲಗ್ಗಿಗನು ಶಿಶುಪಾಲ ಸೋಲದ । ಸುಗ್ಗಿಯುಬ್ಬರಿಗಾಯ್ತು ಹಲಬರಿಗಾಯ್ತು ರಣಧೂಳಿ ॥ ತೆಗ್ಗುವದೊ ಧನು ಧನುವಿಘಾತಿಗೆ । ಮುಗ್ಗುವನೊ ಮಾದ್ರೇಶನಿವರೊಳ । ಗಗ್ಗಳೆಯನ ಹನೆಂದು ನೋಡಿದರಂದು ಸಾಲಿಯರು ॥೧೯॥ ಬಂದನೀತನು ಧನುವ ಸಾರಿದು । ನಿಂದು ಸಂವರಿಸಿ ವನು ಕಾಂತಾ । ವೃಂದವನು ನೋಡಿವನು ಮನದಲಿ ಧಿಕ್ಕುಧಿಗಿಲೆನುತ ॥ ಸಂದಣಿಯಸಭಕೊತ್ತಿ ಫಣಿಯಲಿ । ಮಂದರವ ಬಿಗಿವಂತೆ ಭುಜದಲಿ । ಮುಂಪುವರವವಚಿವನು ದಂಡೆಯನಿಕ್ಕಿ ಕೋಪದಲಿ ॥೨೦॥ ಕೊಳ್ಳದೀಧನುವೀತನುಬ್ಬಿನೊ । ಳಳ್ಳೆಗೊಬ್ಬಿನೊಳಾಕಿ ತೊಡರಿನ । ಘುಲ್ಲಣೆಯ ಘನಕುಲಿಯೆ ಪಂಟಿಸಿ ನಿಮಿಷಮಾತ್ರವಲಿ ॥ ಬಿಲ್ಲು ಬಿಡದವನಿಯಲಿ ಬಿದ್ದನು । ಡೊಳ್ಳುಮೇಲಾಗಿತ್ತು ಸತಿಯರು । ಘೊಳ್ಳೆನಲು ಸೃಡು ಘೋರಧನುವೆನೆನುತ್ತ ಹೊರದೆಗೆದ ॥೨೧॥ ಹಿಂಗವನು ಮಾದ್ರೇಶನೀಧನು । ಭಂಗಿಸಿತು ಮಾನ್ಯರನು ಜಡವಿದು । ಐಂಗವುತ್ವವದಲೇನುದೊ ಜೋಂಬಿಸಿತಲೈ ಜಗವ ॥ ಅಂಗನಾಪಾಣಿಗ್ರಹಣ ರಾ । ಯಂಗೆ ತಾನೀದುಷ್ಟಧನುವನು । ಭಂಗಬಡಿಸದೆ ಬಿಡೆನೆನುತ ಕಲಿಕರ್ಣನೈತಂದ ॥೨೨॥ ಈತನರ್ಜುನನಲ್ಲಲೇ ರೂ । ಪಾತಿಶಯವೃಥ್ವಾತ ಯಂತ್ರವ । ನೀತಗೆಲಿದೊ ತೆಪುಣ್ಯವೈಸಲೆ ತಂಗಿಗನುಸಾರ ॥ ಈತವರರನಮದೆನುತ ಲಲನಾ । ಜಾತವಾತನನೀಕ್ಷಿಸುತ ಸಂ । ಪ್ರೀತಿಯಲಿ ಕೊಂಡಾಡುತಿರ್ದುದು ರಾಯ ಕೇಳೆಂದ ॥೨೩॥ ತುಡುಕಿದನು ಚಾಪವನು ಮಹಿಯಿಂ । ಮಿಡುಕದಿರೆ ಮಂಡಳಿಸಿ ಜಾಡಿಸಿ । ಜಡಿದು ಜರೆದೌಂಕಿದನು ದಂಡೆಯನಿಕ್ಕಿ ಕೋಪದಲಿ ॥ ಹೊಡಕಲಿಸಿ ಸತ್ವಾತಿಶಯವಿಂ । ಮಡಿಸೆ ಸರ್ಷಪಮಾತ್ರ ತಿರುವನು । ತೊಡಿಸಲರಿಯದೆ ಹಿಂಗಿ ಮಾನದೊಳಿರ್ದನಾಕರ್ಣ ॥೨೪॥ ಇವರು ಸಾಲ್ವರಿಗೊಂದೆಪಥ ಹಲ । ರವೆಗಡಿಸಿ ಮುನ್ನಳುಕಿದರು ಬಹು । ಭುವನಪತಿಗಳು ಭಾರಿಧನುವಿದೆ ಭಾಮಿನಿಯ ಮುಂದೆ ॥ ಎವಗೆ ರವೆಗಮವಶವೆ ಬಾವನ್ನುವನು ವೇಷ್ಟಿಸಿ ಭುಜಗವಿದೆಯೆಂ। ದವನಿಪರು ಹೊರೆಗುಂಟಿದರು ಭಯಮುಖದಮಗುಡದಲಿ ॥೨೫॥ ಕ್ಷಿತಿಪ ಕೇಳ್ಳೆ ವಿಗಡಚಾಪ । ವ್ಯತಿಕರಕೆ ದುರ್ಯೋಧನಾದಿ । ಕ್ಷಿತಿಪತಿಗಳಂಜಿದುದ ಕಂಡನು ನಗುತ ಬಲರಾಮ ॥ ಕೃತಕಧನುವನು ಮುರಿದು ದ್ರುಪದನ । ಸುತೆಯ ಮುಂದಲೆವಿಡಿದು ತಹೆನು । ದ್ಧತನಲಾ ಪಾಂಚಾಲನೆನುತಿಳಿದನು ವರಾಸನವ ॥೨೬॥ ಹಲಧರನ ಮುಸಕವನು ಕಂಡನು । ನಳಿನನಾಭನಿದೇನಿಪೀತವ । ನಿಳಿದಿರೆಲ್ಲಿಗೆ ಗಮನವಾವುದು ಕಾರ್ಯಗತಿ ನಿಮಗೆ ॥ ತಿಳುಹಿಯೆನೆ ಬೇರೇನು ಯಂತ್ರವ । ಕಳಚಿ ಬಿಸುಟು ಲತಾಂಗಿಯನು ಹಿಡಿ । ದೆಳೆದು ತಹೆನೆನಲೈಸಲೇ ಕೇಳೆಂದನಸುರಾರಿ॥೨೭॥ ವನಹರು ನಿಮಗಿಂದು ಕುಂತೀ। ಮಾನಿನಿಯರತ್ತೆಯರಲೇ ತ । ತ್ಸೂನುಗಳು ಮೈದುನರು ತತ್ಪತ್ನಿಯರು ತಂಗಿಯರು ॥ ಸಾನುರಾಗವೆ ಮನಕೆ ಸಂಶಯ । ವೇನಿದಕೆ ತಪ್ಪಿಲ್ಲ ಕುಂತೀ । ಸೂನುಗಳು ದ್ರೌಪದಿಗೆ ರಮಣರು ನೋಡಿ ನೀವೆಂದ ॥೨೮॥ ಮೂಗನಲಿ ಬೆರಳಿಟ್ಟು ಮುಕುಟವ । ತೂಗಿದನು ಬಲರಾಮನವನಿಯ । ನೀಗಿ ಹೋದರ ಮಾತು ಪಾಂಡವರೆತ್ತಲಿವರೆತ್ತ॥ ಬೇಗುದಿಯೊಳುರಿಯದಮುಸೆಯೊಳೊಂ। ದಾಗ ಬಂದವರು ಲೋಕವರಿಯೆ ಶ । ತಾಗವಿಕ ನಿನಗಂಬುವೆನು ತಾನೆನುತ ಕೈಮುಗಿದ ॥೨೯॥ ಕ್ಷಿತಿಯೊಳವರಿಲ್ಲೆಂದು ದ್ರುಪದನ । ಸುತೆಗೆ ಪತಿ ಪರರೆಂದು ಯಂತ್ರ । ಚ್ಯುತಿಗೆ ನೀವುಂಟೆಂದು ತೋರಿತೆ ನಿಮ್ಮ ಚಿತ್ತವಲಿ ॥ ಕ್ಷಿತಿಗೆ ಪಾಂಡವ

ರ‍್ಲ್ಲದಿಲ್ಲೀ । ಸತಿಗೆ ಪತಿ ಪೆರೆರಿಲ್ಲ ಕುಂತೀ । ಸುತರನೀಗಳೆ ತ್ತೋರುವೆನು ವಸುದೇವಸಾಣ್ಣೆಂದ ॥೩೦॥ ಇದು ವಿಚಿತ್ರವಲಾ ಗತಾಸುಗ । ಳುದಿಸಿದರೆ ಲೇಸ್ಸೈಸಲೇ ದ್ರೌ । ಪದಿಯನವರನುರಾಗಿಸಲಿ ಭೋಗಿಸಲಿ ಭೂತಳವ ॥ ಇದುವೆ ನಿಶ್ಚಯವಾದರವರ । ಭ್ಯುದಯವೆಮ್ಮಭ್ಯುದಯವೆಂದಾ । ಪದುಮನಾಭನ ಹೊಗಳಿ ಕುಳ್ಳಿರ್ದನು ಸರಾಗದಲಿ ॥೩೧॥ ಈಕೆಯನು ಮೆಚ್ಚಿಸುದು ರಾಜಾ । ನೀಕ ಸೌಂದರ್ಯದಲಿ ಚಾಪ । ವ್ಯಾಕರಣಪಾಂಡಿತ್ಯವೆಂಬೊಡೆಕಾಣೆನಾನೀಗ ॥ ಈಕೆಗಿನ್ನಾರೊಡೆಯರೋ ಕುಂ । ತೀಕುಮಾರಕರಿಲ್ಲಲೇ ಸುಡ । ಲೇಕೆ ನೆರಹಿದೆನಿವರನೆನುತಾದ್ರುಪದಚಿಂತಿಸಿದ ॥೩೨॥ ಹರಹರಾ ಯಿನ್ನಾರೊ ತಂಗಿಗೆ । ವರನು ವಾರಧಿವಲಯದವನೀ । ಶ್ವರರು ನೆರೆದಿದೆ ರೂಪುವಿಕ್ರಮವೆರಡುಹೊರಗಾಗಿ ॥ ನರಪತಿಗಳಿವರ‍್ಯೆಸಲೇ ಯಿ । ನ್ನರಸಿಗಾವುದು ಹದನೆನುತವಿ । ಸ್ತರದಗುಜುಗುಜು ಮಸಗಿದುದು ಕಾಂತಾಕದಂಬದಲಿ ॥೩೩॥ ಅವನಿಪತಿಗಳು ಹೊಳ್ಳುವಾಲದ । ಲವರೊಳಿಲ್ಲಲೆ ದಕ್ಷಿಣೆಯ ಹಾ । ರುವಮಹಾಜನವಿದೆ ಸಮುದ್ರಕೆ ಪಡಿ ಸಮುದ್ರವೆನೆ ॥ ಇವರೊಳಗೆ ಮುಂಗ್ಯೆಯ ಬಲುಹು । ಳ್ಳವರು ನೆಗಹಲಿ ಧನುವನೀಯಂ । ತ್ರವನು ಜಯಿಸಲಿಯೆಂದು ಧೃಷ್ಟದ್ಯುಮ್ನ ಸಾರಿಸಿದ ... ॥೩೪॥

ಅಂತು ಸಂಧಿ ೧೦ ಕ್ಕೆ ಪದ ೬೩೭ ಕ್ಕ ಮಂಗಳಮಸ್ತು.



## ಹದಿನ್ನೈದನೆಯ ಸಂಧಿ.



ಸೂಚನೆ॥ ರಾಯಸಭೆ ನಗಲ್ಯೆದಿ ಯಂತ್ರದ । ದಾಯವನು ನೆರೆ ಗೆಲಿದು ನಿರ್ಜರ ।
ರಾಯನಂದನ ಕಾದಿ ಗೆಲಿದನು ಸಕಲರಿಪುನೃಪರ ॥

ಕೇಳು ಜನಮೇಜಯಧರಿತ್ರೀ । ಪಾಲ ಪಾಂಚಾಲೆಯ ಮನೋರಥ । ಶಾಲೆಯಲಿ ಸಾರಿದರಲ್ಲೈ ಸಭೆಯಲಿ ಮಹೀಸುರರ ॥ ಏಳಿ ಭುಜಬಲವುಳ್ಳವರು ವಿ । ಸಾಳಿಯಲಿ ಬಿಲುವಿಡಿದು ಯಂತ್ರದ । ಕೋಲುಗಳ ಕೇವಣಿಪುದೆಂದರು ಹೊಯ್ದು ಡಂಗುರವ ॥೧॥ ಬೆರಸುವರು ಪಾರ್ಥಿವರು ಪಾರ್ಥಿವ । ವರರೊಡನೆ ತದಲಾಭಪಕ್ಷಾಂತರಕೆ ಪಾರ್ಥಿವಸುತೆಯನೀವುದು ವಿಪ್ರಜಾತಿಯಲಿ ॥ ಪುರುಷರನುಲೋಮದಲಿ ಕನ್ಯಾ । ವರಣವಹುದು ವಿಲೋಮದಲಿ ವಿ। ಸ್ಮರಿಸಲೇಕಿದ ನೀವು ಬಲ್ಲಿರಿ ಶಾಸ್ತ್ರನಿರ್ಣಯವ ॥೨॥ ಎಂದು ಸಾರಿದದನಿಯಸಾದ್ವಿಜ । ವೃಂದವಾಲಿಸಿ ನಮಗಿದೇಕರ । ವಿಂದವದನೆಯ ತೊಡಕು ತೆಗೆ ನಾವಾರು ಧನುವಾರು ॥ ಬಂದದಕ್ಷಿಣೆ ಮೃಷ್ಟಭೋಜನ। ದಿಂದ ತುಷ್ಟರು ನಾವು ನಮಗಿದ । ರಿಂದ ಬಹದುಷ್ಕೀರ್ತಿ ಬರಲೆಂದುದು ಬುಧವ್ರಾತ ॥೩॥ ವಚನಶೂರರರು ನಾವು ಪಾರ್ಥಿವ । ನಿಚಯವೇ ಭುಜಶೂರರರನಿಬರ । ನಚಲಧನು ಭಂಗಿಸಿತು ನಮಗೀವಿದ್ಯೆ ವೈದಿಕವೇ ॥ ಉಚಿತವಲ್ಲಿದು ನಮ್ಮ ಸಾಹಸ । ರಚನೆಯನು ನೋಡುವೊಡೆಪಂಡಿತ । ನಿಚಯವಿದಿರಿಲಿ ನಿಲಲಿ ತೋರುವೆವಲ್ಲಿ ವಿಸ್ಮಯವ ॥೪॥ ಸಾಂಗವೇದಪದಕ್ರಮದ ಸ।ರ್ವಾಂಗವಿಷಯದಲಖಿಳಪೌರಾ । ಣಂಗಳಲಿ ಮೀಮಾಂಸೆಯೊಳ್ ಸ್ಮೃತಿತರ್ಕ

ಶಾಸ್ತ್ರದಲಿ ॥ ಭಂಗಿಸುವೆವೀದ್ಪ್ರಸದಿಯನಾ । ವಂಗದಲಿ ವಾತ್ಸ್ಯಾಯನಾದಿಯುಃಪಾಂಗವಿದ್ಯೆಯಲೆಮ್ಮ ನೋಡೆಂದುದು ಬುಧಸ್ತೋಮ ॥೫॥ ಭರತದಲಿ ವೈದ್ಯದಲಿ ಕಾವ್ಯಸು । ವಿರಚಿತಾಲಂಕಾರದಲಿ ಗಜ। ತುರಗಲಕ್ಷಣದಲಿ ಸಮಾಹಿತಮಂತ್ರತಂತ್ರದಲಿ ॥ ಸರಸಕವಿತಾರಚನೆಯಲಿ ವಿ । ಸ್ತರದುಪನ್ಯಾಸದಲಿ ಭೂಪತಿ । ಕರೆಸಿ ನೋಡಲಿ ನಮ್ಮನೆಂದರು ದ್ವಿಜರು ತಮತಮಗೆ ॥೬॥ ಅಲ್ಲದಿದ್ದೊಡೆ ಶೋಧಿಸಿದ ತನಿ । ಬೆಲ್ಲವಿಕ್ಕಿದಹೂರಿಗೆಯ ಮೆದೆ । ಯಲ್ಲಿ ಪರಡಿಯ ಸೇವಿಗೆಯ ಪರಿಪರಿಯಪಾಯಸದ ॥ ಪುಲ್ಲಿಗೆಯ ತತ್ಸವಿಯ ಮಂಡಿಗೆ । ಯಲ್ಲಿ ಸವಘೃತಸೂಪವಂಶಕ । ದಲ್ಲಿ ನೋಡಲಿ ನಮ್ಮನೆಂದುದು ಧೂರ್ತವಟುನಿಕರ ॥೭॥ ರಸದ ಹೊರಲೇಪದಲಿ ಹುದುಗಿದ । ವಿಸುನಿಯಂತಿರೆ ಜೀವಭಾವ । ಪ್ರಸರದೊಳಗವಲಂಬಿಸಿಪಪರಮಾತ್ಮನಂದದಲಿ ॥ ಎಸೆವವಿಪ್ರಾಕಾರದಲಿ ರಂ । ಜಿಸುವಭೂಪತಿ ತತ್ಸಭಾಸ । ದ್ವಿಸರಮಧ್ಯದೊಳಿರ್ದ ಕೇಳಿದನೀಮಹಾಧ್ವನಿಯ ॥೮॥ ನೋಡಿದನು ತಮ್ಮನನು ಸನ್ನೆಯ । ಮಾಡಿದೊತ್ತೆಕ್ಕೆಕೊಂಡನವನಿಪ । ಗೂಡಿ ಕುಂತಿಗೆ ಭೀಮಸೇನಂಗೆರಗಿ ಮನದೊಳಗೆ ॥ ಕೂಡೆ ಕುಳ್ಳಿರ್ದಖಿಳವಿಪ್ರರ । ನೋಡಿ ಮೆಲ್ಲನೆ ಧೋತ್ರದರ್ಭೆಯ । ಗೂಡ ಸಂವರಿಸುತ್ತ ಸಭೆಯಿಂದೆದ್ದನಾಪಾರ್ಥ ॥೯॥ ಏನಿಸಿದ್ಧಿಯುಪಾಧ್ಯರೆದ್ದಿರ । ದೇನು ಧನುವಿಂಗಲ್ಲಲೇ ತಾ । ನೇನುಮನದಂಗವಣೆ ಬಯಸಿದಿರೇ ನಿತಂಬಿನಿಯ ॥ ವೈನತೇಯನ ವಿಗಡಿಸಿಪವಿಷ । ವೇನು ಸದರವೊ ಹಾವಡಿಗರಿಗಿ । ದೇನು ನಿಮ್ಮುತ್ಸಾಹವೆಂದುದು ಧೂರ್ತವಟುನಿಕರ ॥೧೦॥ ಮದುವೆ ಬೇಕೇ ಶ್ರೋತ್ರಿಯಸ್ತೋ । ಮದಲಿ ಕನ್ಯಾರ್ಥಿಗಳು ನಾವೆಂ । ಬುದು ನಿಜಾನ್ವಯವಿದ್ಯೆಯಲಿ ಕೊಡುವುದು ಪರೀಕ್ಷೆಗಳ ॥ ಮದುವೆಯಹುದಿದು ಸೌಖ್ಯಪುಣ್ಯಾ । ಸ್ಪದವು ಭೂದೇವರಿಗೆ ನೀ ನೆನೆ । ಮದು ಭಗೀರಥಯತ್ನವೆಂದುದು ಭೂಸುರವ್ರಾತ ॥೧೧॥ ನೀವು ಸ್ಮರಿಸಿ ನಿಮ್ಮ ಕಾರುಣ್ಯಾ । ವಲೋಕನವುಂಟಲೇ ಸ। ದ್ಭಾವದಲಿ ನೀವ್ರಚಿಸಿದಾಶೀರ್ವಾದಶಕ್ತಿಯಲಿ ॥ ನಾವು ವಿಜಯರು ಚಾಪಯಂತ್ರವಿ । ದಾವಘುನವೆಂಬರ್ಜುನನ ಸಂ । ಭಾವನೋಕ್ತಿಗೆ ನಿಲ್ಲದವರೊದರಿದರು ತಮತಮಗೆ ॥೧೨॥ ಕ್ರಮಿತರವಧರಿಸಿಟಿರೆ ಶುದ್ಧ । ಭ್ರಮಿತಮೂಲನಹಿರಿಯವಿಷ್ಣು । ಕ್ರಮಿತರೇಟೀಕ್ಷಿತರೆ ಧನುವಿಗೆಯತ್ನ ಮಾಡಿದರೆ ॥ ಕ್ರಮವೆ ತಾನಿದು ಕ್ಷತ್ರಿಯರನಾ । ಕ್ರಮಿಸುವದು ಸದ್ಧರ್ಮವೇ ಯು । ದ್ಧ್ರಮಿತನಿವ ನೆರೆಹಳಿವತಹನೀಶ್ರೋತ್ರಿಯರಸಭೆಗೆ ॥೧೩॥ ಕೆಲರು ಹೋಗದಿರೆಂದು ಜರೆದರು । ಕೆಲರು ತಾನೇ ಬಲ್ಲನೆಂದರು । ಕೆಲರು ನುಡಿದರು ವಿಪ್ರಸಭೆಗಪಹಾಸ್ಯವಹುದೆಂದು ॥ ಕೆಲರು ತಪ್ಪೇನೆಂದು ಕಳೆದರು । ಕೆಲರು ಭದ್ರಾಕಾರನೀತಂ । ಗಳುಕುವುದು ಧನು ಭಾಗ್ಯಮುಖವೆಂನುದು ಬುಧಸ್ತೋಮ ॥೧೪॥ ತೊಟ್ಟಹೊಸಯಜ್ಞೋಪವೀತದ । ಮೆಟ್ಟನೊಸಲಲಿ ಕುಶೆಯ ಕರಡಿಗೆ । ಕಟ್ಟಿಯಿರಿಕಿದಕಕ್ಷೆ ಬೆರಳಲಿ ಮುರಿದದರ್ಭೆಗಳ ॥ ಉಟ್ಟಬಾಸರಬಳಲುಗಚ್ಚೆಯ । ನಟ್ಟಹಾಸದ ಜನದ ನಗೆಗಳ । ನಟ್ಟುವಿಗನೋಸರಿಸಿ ಸಭೆಯಲಿ ಮೆಲ್ಲನೈತಂದ ॥೧೫॥ ತಿರುಗಿ ಕಂಡರು ಸಕಲಪೃಥ್ವೀ । ಶ್ವರರು ಗಹಹಿಸಿದರಿದೇನರೆ । ಮರುಳೊ ಜಡನೋ ವಿಪ್ರವೇಷಚ್ಛನ್ನಸುರಪತಿಯೋ ॥ ಮರುಳುಗಳು ತಾವಕಟ ಮದನನ । ಸರಳ ಮರುಮೊನೆಗಾವನಂತಃ । ಕರಣ ನೆರೆ ಕಳವಳಿಸದೆಂದರು ನೆರೆದಸಭೆಯೊಳಗೆ ॥೧೬॥ ಧನು ತನಗೆ ನೆಗಹಲ್ಕೆ ಕೃಷ್ಣಾ । ಜಿನವೊ ಸಾಲಗ್ರಾಮದೇವರೊ । ವಿನುತತುಳಸಿಯೊ ಕುಶವೊ ದರ್ಭೆಯೊ ಸಮಿಧೆಗಳ ಹೊರೆಯೋ॥ ನೆನೆದತಿಲವೋ ಮೇಣಿದಾಪಾ । ಸನದ ಕೊಳವಿಯೊ

ಬಣಗುವಿಪ್ರನ । ನೆನಹ ನೋಡಿರೆ ಘನವಲಾ ದ್ರೌಪದಿಯಸೌಭಾಗ್ಯ ॥೧೭॥ ಅಂಗವಿದು ಗಜತುರಗ
ಶಸ್ತ್ರಾ । ಸ್ತ್ರಂಗಳರಿತವು ನಮಗೆ ವಿಪ್ರಂ। ಗಂಗ ವೇದಪುರಾಣತರ್ಕಸ್ಮೃತಿಸುವಿದ್ಯೆಗಳು ॥ ಅಂಗವಂ
ಗಿಗಸಾಧ್ಯವಾದುದ । ನಂಗಿಗೊಡಬಡುವುದೆ ದ್ವಿಜಾತಿಗೆ । ಸಂಗತಾನುಷ್ಠಾನ ವರವೆಂದುದು ನೃಪ
ಸ್ತೋಮ ॥೧೮॥ ಲಹರಿ ಮಸಗಿದುದತ್ತ ಕಾಂತಾ । ನಿಕರ ಪಾರಾವಾರ ಹುಬ್ಬಿನ । ವಿಕೃತಿಗಳ ತೆರೆ
ಮಾಲೆಗಳ ಬೆಳುನಗೆಯ ಬುದುಬುದದ ॥ ಗಹಗಹಿಕೆ ಮಿಗೆ ಅಟ್ಟಹಾಸದ । ರಹಣಿಗಳ ರಭಸದ ವಿಡಂ
ಬದ । ವಿಹರಣದ ಚಲದೃಷ್ಟಿಗಳ ಮರುಮೀನಹೊಳಹುಗಳ ॥೧೯॥ ಇತ್ತ ನೋಡಾ ತಾಯೆ ಹಾರುವ ।
ರತ್ತ ಗಡ್ಡದುಪಾಧ್ಯರನು ತಾವೆತ್ತುವರು ಗಡ ಧನುವನೆಸುವರುಗಡ ತಿಮಿಂಗಿಲನ ॥ ಹೊತ್ತುಗಳೆವರೆ
ಲೇಸು ಬಳಿಕಿನ್ನುತ್ತಮರಲಾ ವಿಪ್ರರೆನೆ ತಲೆ। ಗುತ್ತಿ ನಾಚಿದಳುಂಗುಟದೊಳಾಕುತ ಮಹೀತಳವ ॥೨೦॥
ಎಲವೊ ಮಟ್ಟಿಯ ಮದನದರ್ಭೆಯ । ತಿಲಕ ಮನ್ಮಥವಿಮಲಧೋತ್ರದ । ತಳಿರುಗಾಸೆಯ ಕಾಮ
ಕೃಷ್ಣಾಜಿನದ ಕಂದರ್ಪ ॥ ನಳಿನಮುಖಿಯನು ಮರುಸು ಬಾ ನಿನ । ಗಳವಡುವನೆಲೆಯಕ್ಕ ಕೇಳಾ । ತಲೆ
ವಿಡಿವೆವಾವ್ನೋಡು ಯೆಂದರು ನಗುತ ಚಪಲೆಯರು ॥೨೧॥ ಅದೆ ಹಲಾಯುಧ ನೋಡು ವಿಪ್ರ ।
ಘುದಲಿ ಪಾರ್ಥನ ಬರವು ಮೇಘದ । ಹೊದರುಗಳ ಹರಿದಶ್ವನಂತಿರೆ ವಿಪ್ರವೇಷದಲಿ ॥ ವಿದಿತವೇ
ವಸುದೇವನಾಣೆಂ । ದುದಕೆ ತಪ್ಪದಲೈ ಸಭಾಮ । ಧ್ಯದಲಿ ಬರುತಿರ್ಪಾತನರ್ಜುನನೆಂದನಸುರಾರಿ ॥೨೨॥
ಜನಪನೋ ಭೀಮಾದಿಗಳೊ ತ । ಜ್ಜನನಿಯೋ ತಾವೆಲ್ಲ ಭೂಸುರ । ಜನದಸಾಮೀಪ್ಯದಲಿ ಸಭೆಯೊ
ಳಗಿರ್ದರನೆ ಕೇಳ್ದು ॥ ನಿನಗಿದೆಂತವರರಿತವರಗಿನ । ಮನೆಗೆ ತಪ್ಪಿದರೆಂತು ಶಿವ ನೀ। ನೆನಿತುಮಾಯಾಸಿದ್ಧನೆಂ
ದನು ನಗುತ ಬಲರಾಮ ॥೨೩॥ ಅವನಿಪತಿ ಕೇಳಿತ್ತಲೀಪಾ । ರ್ಥಿವರ ಪರಿಹಾಸವನು ಕಾಂತಾ । ನಿವ
ಹದಲ್ಲಿ ನಿಬ್ಬರದನುಡಿಗಳನಾಮಹೀಸುರರ ॥ ವಿವಿಧಕಟುಮಧುರೋಕ್ತಿವಿಸ್ಮಯ । ಸವನು ಕೇಳುತ ಮುಗು
ಳುನಗೆಯಲಿ । ನವಮದದ್ವಿಪಗತಿಯ ಗರುವಾಯಿಯಲಿ ನಡೆತಂದ ॥೨೪॥ ಇವನ ಗತಿಮುಖಚೇಷ್ಟೆ
ಭಾವೋ । ತ್ಸವವಿಲಾಸವುಪೇಕ್ಷೆಭರವಂ । ಗವಣೆಗರುವಿಗ ಗಮಕಭಾವವಭೀತಿಭಾಪ್ಲವಣೆ ॥ ಇವನವಿ
ಮಲಕ್ಷತ್ರವಿಕ್ರಮ । ವಿವನಕೊಂಡೆಯತನವಿವೇಕಾ । ಶಿವನುಘಾಟದವೀರನೆಂದರುವೀರರರ್ಜುನನ
॥೨೫॥ ಬರುತ ಭೀಷ್ಮದ್ರೋಣಕೃಪರಿಂ । ಗೆರಗಿದನು ಮನದೊಳಗೆ ಯಾದವ । ರರಸನಂತಿಯ ಹರಿ
ಯನಭಿವಂದಿಸಿದನಕ್ಷಿಯಲಿ ॥ ಸುರಪತಿಗೆ ಗುಹಗಣಪದಿಕ್ಪಾ । ಲರಿಗೆ ರುದ್ರಾದಿತ್ಯವಸುಮ । ಖ್ಯರಿಗೆ
ಮಣಿದನು ಬಂದನಗ್ರದಚಾಪವಿದ್ದೆಡೆಗೆ ॥೨೬॥ ಮೊದಲಲಂಬುಜಭವನಸಾಮ । ಧ್ಯದಲಿ ಮಧುಸೂದನ
ನನಾಬಿಲು । ದುಟಿಯಲಾಹ್ವಾನಿಸಿದನಗ್ರದನೀಲಲೋಹಿತನ ॥ ಇದು ಮಹಾಭೂಮಿಪರ ಬಿಂಕವ ।
ನೊದೆದಧನುವೇ ಪೂತುರೆನುತ್ತೆ । ತ್ತಿದನು ಬಾಗೊತ್ತಿದನು ಕೊರಳಿಗೆ ತೊಡಿಸಿದನು ತಿರುವ ॥೨೭॥
ಹೊಯ್ದು ತಿರುವನು ಸೆಳೆದು ಕಿವಿವರೆ । ಗೊಯ್ದನಿದು ಹವವಿಲ್ಲಲಾ ಬಲು । ಹೆಯ್ದದಕಟಾ ಬರಿದೆ
ಹೆದರಿತು ಮಾಗಧಾದಿಗಳು ॥ ಕಯ್ದುಗದಬಿದರೊಳಗೆ ಹೆಸರೆನ । ಗೆಯ್ದಬೇಕೆಂದ್ಯೆಸಲೇ ಯೆನು ।
ತಯ್ದು ಬಾಣವಕೊಂಡು ಯಂತ್ರದಹೊಳಹನೀಕ್ಷಿಸಿದ ॥೨೮॥ ತೂಗಿ ಕಿವಿವರೆಗುಗಿದು ಯಂತ್ರವ ।
ತಾಗಿಸಿದನಂಬಿನಲಿ ಪಾರ್ಥನ । ಲಾಗುವೇಗವನಾರುಬಲ್ಲರು ಯಂತ್ರಭೇದದಲಿ ॥ ಜಾಗುಧಣುಧಣುಪ್ರೊ
ತುಕಾರ್ಮುಕ । ಯೋಗಸಿದ್ಧನೆ ಮಝರೆ ಕೋದಂ । ಡಾಗಮತ್ರಿಪುರಾರಿಯೆಂದುದು ವಂದಿಸಂ

(1) ವನಲನ | ಮೊನೆಗೆ

ದ್ರೋಹ ||೨೯|| ಆಯೆನುತ ಬೊಬ್ಬಿರಿದು ವಿಪ್ರನಿ | ಕಾಯ ಕುಣಿದುದು ಕಮಲಮುಖಿ ನಿ | ರ್ದಾಯದಲಿ ಸೇರಿದಳು ಹಾರುವಗೆನುತ ಹರುಷದಲಿ || ಆಯುವತಿಜನಜಲಧಿ ಮಸಗಿತು | ಬಾಯ ಮೌನದ ಬೆರಳಮೂಗಿನ | ರಾಯರಿದ್ದರು ಬಿಗಿದಬೆರಗಿನ ಹೊತ್ತುದುಗುಡದಲಿ ||೩೦|| ಮೊಳಗಿದವು ನಿಸ್ಸಾಳತತಿಹೆ | ಕ್ಕಳದ ಹರ್ಷಿನೊಳಲ್ಲಿ ದಿವಿಜಾ | ವಳಿಯದುಂದುಭಿರವದಲುಬ್ಬಿದಸಾಧುವಾದಗಳ || ಕಳಕಳದ ಕೊಲ್ಲಣಿಗೆಯಲಿ ಪೂ | ವಳೆಯ ಪೂರದ ಹರಹಿನಲಿ ಜನ | ಮುಳುಗಿತದ್ಭುತರಭಸವಳ್ಳಿರಿದುದು ಜಗತ್ರಯವ ||೩೧|| ಕಿತ್ತುಸುರಗಿಯ ವೀರಭಟರರು | ಪತ್ತುಸಾವಿರವ್ಮೆ ಪಾರ್ಥನ | ಸುತ್ತುಮುತ್ತಿದರಂಗರಕ್ಷಣೆಗರಸಸಾಚ್ಚಿಣ್ಣಯಲಿ || ಇತ್ತ ಮಹಿಳಾಜನದ ಮೌಳಿಯ | ಮುತ್ತು ಕುಸುಮಾಯುಧನಘಟ್ಟನ | ಮತ್ತಗಜಪೈತಂದಳಲ್ಲಿಗೆ ದ್ರೌಪದೀದೇವಿ ||೩೨|| ತೊಲತೊಗು ಮನ್ಮಥನ ಹೊಗಲು | ಟ್ಟಲಗು ಬರುತಿದೆ ಸಾರುಸಾರೆಂ | ದುಲಿದು ಕಂಚುಕಿನಿಕರ ಹೊಯ್ದುದು ಮುಂದೆ ಸಂದಣಿಯ || ನಳಿನಮುಖಿ ದಂಡಿಗೆಯೊಳ್ಳೆತಂ | ದಿಳಿದಳೀತನ ಹೊರೆಯೊಳಾಗಳೆ | ಕಳಕಳದಲೊಳತೋಟಿ ಮಸಗಿತು ಹರುಷಲಜ್ಜೆಯಲಿ ||೩೩|| ಲಲಿತಮಧುರಾಪಾಂಗದಲಿ ಮು | ಕ್ಕಳಿಸಿ ತಣಿಯವು ಕಂಗಳುಬ್ಬಿದ | ಪುಳಕಜಲದಲಿ ಮುಳುಗೆ ಮೂಡಿತು ಮೈ ನಿತಂಬಿನಿಯಾ || ತಳಿತಲಜ್ಜಾಭರಕೆ ಕುಸಿದ | ವ್ವಳಿಸಿತಂತಃಕರಣವಾಂಗಿಕ | ಲುಳಿತಸಾತ್ವಿಕಭಾವವಗಡಿಸಿತ್ತು ಮಾನಿನಿಯ ||೩೪|| ಧರಣಿಪತಿ ಕೇಳ್ಬಹುಳಲಜ್ಜಾ | ಭರದ ಭ್ರಮದಲಿ ಬೆಮರಿಡುತ ಕುಚ | ಭರದಿ ಮೇಲುದು ಜಾರೆ ಜೋಡಿಸಿ ನಿಮಿರೆ ನಡನಡುಗಿ || ತರುಣಿ ನಿಜತನುಪುಲವಮೊಳದಲುರೆ | ಹೊರವಹೂವಿನವಂಡೆಯನು ನಿಜ | ವರನ ಕೊರಳಲಿ ಹಾಯ್ಕುವಳು ಜಯವೆನೆ ಸುರಸ್ತೋಮ ||೩೫|| ಕೊರಳ ಹೂವಿನಪಂಡೆಯಲಿ ನಿಜ | ಕರದ ಧಾರಿಯ ಧನುವಿನಲಿ ತನು | ಪುಮಳದ ನಿಟ್ಟಿಸಳುಗಂಗಳ ಕೆಲದಯುವತಿಯಲಿ || ವರನ ಪುಳಹೊಸತಾಯ್ತು ಹೊತ್ತನು | ಹರನ ಹಗೆ ಹಾರುವಿಕೆಯನು ನ | ಮ್ಮರಸಿ ನೆರೆ ಹಾರುವತಿಯೆಂದರು ನಗುತ ಚಪಲೆಯರು ||೩೬|| ಜನಪ ಕೇಳ್ಕೆ ಯುವತಿಯೊಡನ | ರ್ಜುನನ ತಂದರು ರಾಜಮಂದಿರ | ಕನಿಮಿಷಾವಳಿ ಹರೆದುದಭ್ರದೊಳಮರಪತಿಸಹಿತ || ಮನದಸೂಯದ ಮುಖದವಗುಡದ | ನುತಮಕುಟದ ಕೈಯಗಲ್ಲದ | ಕನಲಿಕೆಯ ಕೊನರುಗಳ ಕೌರವರಾಯಖತಿಗೊಂಡ ||೩೭|| ಮನುಮವ ಪಾಂಚಾಲಮಾಡಿದ | ಮಾನಭಂಗವ ಕಂಡಿರೇ ಕಾ | ನೀನಶಕುನಿಜಯದ್ರಥಾಶ್ವತ್ಥಾಮಮೊದಲಾದ || ಮಾನನಿಧಿಗಳು ಕಂಡಿರೇ ಮದ | ದಾನಗಳು ನೀವ್ಕಂಡಿರೇ ಹದ | ನೇನೆನುತ ಕುರುರಾಯ ಮೂದಲಿಸಿದನು ತನ್ನವರಾ ||೩೮|| ಹಳೆಯಹುಲುಧನುವಿದನು ಹಾರುವ | ಸೆಳೆದಗಡ ಕೌಶಿಕದ ಯಂತ್ರವ | ಗೆಲಿದಗಡ ಗರುವಾಯಿಗೆಡಿಸಿದಗಡ ಮಹೀಶ್ವರರಾ || ನಳಿನಮುಖಿ ಹಾಯ್ಕಿದಳುಗಡ ತಿರು | ಕುಳಿಯ ಕೊರಳಲಿ ದಂಡೆಯನು ನೀ | ವೊಲಿದು ಮದುವೆಯ ಮಾಡಿ ರೆಂದನು ಬೈದು ಭೂಮಿಪರ ||೩೯|| ಭಂಡರೋ ನೀವ್ಪೈರವಧರಣೀ | ಮಂಡಲೇಶ್ವರರಕಟ ನಿಮ್ಮಯ | ಹೆಂಡಿರನು ಬಳುವಳಿಯ ಕೊಡಿ ಹಾರುವನ ಹೆಂಡತಿಗೆ || ಗಂಡುಗಲಿಗಳ ನಿಮ್ಮನನಿಬರ | ಕಂಡುದೇಕ್ಷಿಸಿ ಯಾಚಕನ ಕೈ | ಕೊಂಡಳಿದಕೇನುಂಟು ಮನದಲಿ ವಾಸಿ ನಿಮಗೆಂದ ||೪೦|| ವಾಸಿಗಳನರಸುವೊಡೆದ್ರುಪದನ | ಮೀಸಲಡಗನು ಹದ್ದುಕಾಗೆಗೆ | ಸೂಸಿ ವಿಪ್ರನ ಬಡಿದು ಬಿಡುವುದು ಮತ್ತೆ ತಿರಿದುಣಲಿ || ಆಸರೋಜಾನನೆಯ ನಮ್ಮವಿ | ಲಾಸಿನಿಯ ವೀಥಿಯಲಿ ಕೂಡುವು |

ದೈಸಲೇ ಯೆನುತೊಡನೊಡನೆ ಗರ್ಜಿಸಿತು ನೃಪನಿಕರ ॥೪೧॥ ದಾಳಿ ಹತ್ತಲಿ ಲಗ್ಗೆ ಪದಹತ। ಧೂಳಿಯಲಿ ಹಿರಿಯಗಳನಗಲವ । ಹೂಳಿ ಕಳೆಯಲಿ ಹರಿದು ಹತ್ತಲಿ ತೆನೆಯ ಸರಿಸದಲಿ ॥ ಕೋಲುಗುಂಡಿನಹತಿಗೆ ಹುರಿಯೊಡೆ । ದಾಳಹೊಯ್ಲೊಯ್ಯೆನುತ ಸಕಲನೃ । ಪಾಳಿ ಗರ್ಜಿಸಿ ಮುತ್ತಿದುದು ಪಾಂಚಾಲಪಟ್ಟಣವ ॥೪೨॥ ಕೂಡೆ ಗಜಬಜವಾಯ್ತು ಹರೆದುದು । ನಾಡ ಗಾವಳಿ ವಿಪ್ರಸಭೆ ತೆಗೆ । ದೋಡಿತೀಪಾಂಡವರು ಬಂದು ಕುಲಾಲಭವನದಲಿ ॥ ನೋಡುತಿರ್ದರು ಲಗ್ಗೆಯಬ್ಬರ । ವೀಡಿರಿದುದು ದಿಗಂತವನು ಕೈ । ಮಾಡಿಕೋಟೆಯನಿಳಿದು ಬೆರಸಿದರಾಳುವೇರಿಯಲಿ ॥೪೩॥ ಹಲ್ಲಣಿಸಿದರು ಹೊಗುವಚೂಣಿಯ । ಚೆಲ್ಲಬಡಿದರು ಸುಸಕಡರುವ । ಬಿಲ್ಲಬಿರುದರ ವಿಘಾಟನೆತ್ತಿತು ಸಾಲಸಬಳಿಗರು ॥ ಝಲ್ಲರಿಯ ಝಾಡಿಗಳ ವಾದ್ಯದ ಘುಲ್ಲಣೆಯ ದಳ ನೆರೆದುದಲ್ಲಿಯ। ದಲ್ಲಿ ಮುತ್ತಿಗೆ ದೆಗೆಸಿದರು ಪಾಂಚಾಲನಾಯಕರು ॥೪೪॥ ಚೂಣಿ ಮುರಿದೈತರಲು ಬಹಳ । ಕ್ಷೋಣಿಗಿಳಿಲಿ ಕುರುಪತಿಯು ಥಟ್ಟನ । ಹೂಣಿಗರು ಹುರಿಗೊಂಡು ಕವಿವರು ಕರ್ಣಮೊದಲಾಗಿ ॥ ಸಾಣೆಯಲಗಿನ ಸರಿಗೆ ಪರಬಲ । ವಾಣೆಯಿಟ್ಟವೊಲಡಿಮಿಡುಕದ । ಕ್ಷೀಣಬಲವೊಸರಿಸಿ ತೆಗೆದುದು ದ್ರುಪದಪರಿವಾರ ॥೪೫॥ ಪೊಪಲಲಗ್ಗೆಯ ಧೂಳಿಯೇದ್ರೌ । ಪದಿಯ ಬೈತಲೆಗಮರಿಸಿಂದೂ । ರದ ಸುವಿಸ್ತರವಾಗದಿರ್ದೊಡೆ ರಾಯಸಾಣೆನುತ ॥ ಮದಮುಖರು ಮುಂಕೊಂಡು ದುರ್ಗವ । ಬೆದರಿಸಿತು ಬೇರೇನು ದ್ರುಪದನ । ಸದನಸೀಮೆಯ ಬೆರಸಿಹೊಯ್ದರು ರಾಜಬೀದಿಯಲಿ ॥೪೬॥ ಏಳು ಮನ್ನೆಯಗಂಡನಾಗು ನೃ । ಪಾಲ ಮದುವೆಯಮನೆಗೆ ರಾಯರ । ಧಾಳಿ ಬಿದ್ದಿನವಾಯ್ತು ನಡೆ ಸಂತೈಸು ಬೀಯಗರೆ ॥ ಏಳೆನಲು ಕಳಕಳವನರ್ಜುನ । ಕೇಳಿದನು ಹೊದೆಯಂಬುಗಳ ತರ । ಹೇಳೆನುತ ಕವಿದೆಚ್ಚು ಮುರಿದನು ಭಟರ ಮುಂಗುಡಿಯ ॥೪೭॥ ಅದು ಬಳಿಕ ಕಲ್ಪಾಂತಮೇಘದ । ಮೊದಲಮಳೆಯೆನೆ ಕವಿದುದಂಬಿನ । ಹೊಪರು ಹುದುಗಿತು ರಾಯದಳ ಝೌಕುಳದರಕ್ತದಲಿ ॥ ಕೆದರಿದರು ಕರ್ಣಾಟಿಗಳು ನೆರೆ । ಬೆದರಿದರು ಮತ್ತೊಂದುದೆಸೆಯಲಿ । ಸದೆದು ಹೊಕ್ಕನು ಭೀಮ ಭಾರಿಯಮರನ ಕೊಂಬಿನಲಿ ॥೪೮॥ ತರುಬಿದನು ಮಾದ್ರೇಶ ಪವನಜ । ನುರುಬೆಯನು ಫಲುಗುಣನ ಬಾಣವ । ಮುರಿಯೆನುತ ರಾಧೇಯನಿರಿದನು ಸಿಂಹನಾದದಲಿ ॥ ಕುರುಬರೋ ಘನಯಂತ್ರಭೇದಿಗೆ । ಕರುಬರೋ ಕಾಮುಕರೊಡನೆನೀ । ವಿರಿತಕಂಫೈಸಿದಿರೆನುತ ಕೈಕೊಂಡ ನಾಭೀಮ ॥೪೯॥ ತುರಗರಥಸಾರಥಿಗಳನು ಹೊ । ಯ್ದೊರಸಿದನು ಪವಮಾನಸುತನುಬ್ಬರದಭಯದಲಿ ಶಲ್ಯ ಹಿಮ್ಮೆಟ್ಟಿದನು ಹಿನ್ನೆಲೆಗೆ ॥ ನರನ ಶರಹತಿಗಳುಕಿ ಮೋರೆಯ । ಮುರುಹಿದನು ಕಲಿಕರ್ಣನವದಿರು । ಸರಿಯೆ ವಿಪ್ರರು ನಮ್ಮವಿಗ್ರಹಕೆಂದು ಖಾತಿಯಲಿ ॥೫೦॥ ಅರಸ ನಡೆ ದ್ರುಪದನ ಕಪಾಲದ । ಲಿರಲಿ ಮಾನಚ್ಯುತಿ ಮಹೀಸುತ । ವರರೊಡನೆ ಖತ್ತಿಯೇಕೆ ತೆಗವುದು ಹಸ್ತಿನಾಪುರಕೆ ॥ ನೆರಹುವುದು ನೃಪವರ್ಗವನು ಬಂ । ದೊರಸುವುದು ದ್ರುಪದನ ಲಲಾಟದ । ಬರಹವನು ಕೇಳೆಂದು ನುಡಿವನು ಕರ್ಣ ಕುರುಪತಿಗೆ ॥೫೧॥ ಅಹುದು ಕರ್ಣನ ಮಾತು ತೆಗೆಯಲಿ । ಬಹಳಬಲವೀಹೊತ್ತಿನಲಿ ರಣ । ವಿಹಿತವಲ್ಲಾಕಿದೊಡೆ ತಪ್ಪದು ವಿಪ್ರವಧೆ ತಮಗೆ ॥ ಮಹಿಮೆ ಮೀಸಲು ಹೋಗದೀಸರ । ಲಹಿತದರ್ಪವ ಮುಂದೆ ನೋಡಲು । ಬಹುದೆನುತ ತಿರುಗಿದನು ಕುರುಪತಿ ಹಸ್ತಿನಾಪುರಿಗೆ ... ॥೫೨॥

**ಅಂತು ಸಂಧಿ ೧೪ ಕ್ಕೆ ಪದ ೬೪೯ ಕ್ಕಂ ಮಂಗಳಮಸ್ತು.**



## ಹದಿನಾರನೆಯ ಸಂಧಿ.

**ಸೂಚನೆ॥ ವಿಮಳಮತಿಪಾಂಚಾಲಚಿತ್ತ । ಭ್ರಮೆಯನಪಹರಿಸಿದನು ದ್ರೌಪದಿ । ರಮಣಿಯಾದಳು ಹರನ ವರದಲಿ ಪಾಂಡುತನಯರಿಗೆ ॥**

ಕೇಳು ಜನಮೇಜಯಧರಿತ್ರೀ । ಪಾಲ ಕೌರವನೃಪತಿ ಪಯಣದ । ಮೇಲೆ ಪಯಣದಲೈದಿ ಹೊಕ್ಕನು ಹಸ್ತಿನಾಪುರವ ॥ ಹೇಳಲೇನುಳಿದಖಿಳಧರಣೀ । ಪಾಲಕರ ದುಮ್ಮಾನವನು ಪಾಂ । ಚಾಲದೇಶವ ಕಳೆದು ಹೊಕ್ಕರು ತಮ್ಮ ನಗರಿಗಳ ॥೧॥ ಭೀತಿ ಹರಿದುದು ರಾಯದಳಸಂ । ಘಾತ ಸರಿದುದು ಮಿತ್ರಸುಜನ । ವ್ರಾತ ನೆರೆವುದು ಮೆರೆದುದವನೀದೇವರುಗ್ಗಳಿಕೆ ॥ ವಾತಜನು ಮುರಿಗೊಂಡಿಸಲಿ ಮಾ । ರಾತರನು ಮನ್ನಿಸಿ ಕುಲಾಲನಿ । ಕೇತನಕೆ ಬಂದೆರಗಿದನು ಧರ್ಮಜನ ಚರಣದಲಿ ॥೨॥ ಇತ್ತಲರ್ಜುನನಿನಸುತನ ಬೆಂ । ಬತ್ತಿ ಮುರಿದಿದರವನಿಪಾಲಕ । ಮುತ್ತಿಗೆಯ ತೆಗೆಸಿದನು ಜಯಲಕ್ಷ್ಮಿಯ ಸಮೀಪದಲಿ ॥ ಮತ್ತೆ ರಾಯರ ಬೆನ್ನ ಕಪ್ಪವ । ತೆತ್ತಿದುತ್ಸಹವದನದಲಿ ಕೊಂಗ । ರೆತ್ತಿದಕ್ಷಯ ಕೋಳಹಿನಲಿ ಹೊಕ್ಕನು ನೃಪಾಲಯವ ॥೩॥ ಈತನುದಯದೊಳಿಂದು ಭೂಸುರ । ಜಾತಿಗಾಯ್ತುಗ್ಗಳಿಕೆ ಪಾರ್ಥವ । ರಾತರಿಂದುಬ್ಬಟೆಯ ಧನುವಿಂದವನವಶವಾಯ್ತು ॥ ಸೋತು ತೆಗೆದವು ಮಹೀಶ್ವರರವಾ । ತೇತಕದು ಮುಷ್ಟಿಪ್ರೂತೆಸುತ ಜನ । ವೀತಸನು ಕೊಂಡಾಡುತಿರ್ದುದು ನೆರವಿನೆರವಿಯಲಿ ॥೪॥ ಬಂದನೀತನು ಗಹಿಯಗರುವಿಕೆಯಿಂದ ತೆರುಣಿಯ ಹೊರಗೆ ಬಾನೀ । ನೆಂದು ಕರೆದನು ಸತಿಸಹಿತ ತಿರುಗಿದನು ಪಡುಲದಲಿ ॥ ಬಂದುಮುಖಿಯನುಕುಂಭಕಾರನ । ಮಂದಿರದ ಹೊರಗಿರಿಸಿ ಫಲುಗುಣ । ಬಂದು ಪೊಡೆಯಿಕ್ಕಿದನು ಕುಂತಿಯ ಚರಣಕಮಲದಲಿ ॥೫॥ ತಾಯೆ ಬಿನ್ನಹವಿಂದುಧರಣೀ । ರಾಯರೆಲ್ಲರ ಗೆಲಿದು ತಂದೆನು । ನಾಯಕವಸನುಸಪೀತವಸ್ತುವನವಲೋಕಿಸುವ ॥ ತಾಯೆ ಚಿತ್ತೈಸಿದಿರೆಯೆನೆ ಕಡೆ । ವಾಯುಪಶ್ಯತನಿಹರುಷದಲಿ ಲೇ । ಸಾಯಿತೈವರು ಕೂಡಿ ಭೋಗಿಪುದೆಲಾ ಕುಂತಿ ॥೬॥ ಎನೆ ಹಸಾದವೆನುತ್ತ ಕಮಲಾನನೆಯ ಹೊಡವೆಂಡಿಸಿದನವ್ವೆಗೆ । ತನುಜ ತಂದವಮಲವಸ್ತಿಕಪಿದೆಯೊ ಶಿವಯೆನುತ ॥ ತನಗೆ ನುಡಿ ತೊಡಲಿಸಿತಲಾ ನೀ । ವಿನಿಬರುಪಭೋಗಿಸುವುದೆಂದೆನು । ವನಿತೆಯೈವರಿಗರಸಿಯೇ ಲೇಸೆಂದಳಾ ಕುಂತಿ ॥೭॥ ಜನನಿ ತಪ್ಪದು ನಿಮ್ಮನುಡಿ ಯಿದಾ । ವನಜಮುಖಿಯೆಮ್ಮೈವರಿಗೆ ಸತಿ । ಪಿನುತಗುರುವಚನಾಂಬುನಿಧಿ ಮಕ್ಕಳಿಗಲಂಘ್ಯವಲೇ ॥ ಎನೆ ಯುಧಿಷ್ಠಿರನೃಪತಿ ಪಾರ್ಥನ । ಕನಲಿಪನು ಕಲಿಭೀಮನಲ್ಲೆಂ । ದನು ನಕುಲಸಹದೇವರನುಚಿತವೆಂದರರ್ಜುನಗೆ ॥೮॥ ಎಲ್ಲಧರ್ಮದಸಾರವನು ನೀ । ವ್ಬಲ್ಲಿರೈ ಸಲೆ ಹೇಳ್ವುದಾವುದುನಿಲ್ಲಿ ನೀವ್ಸಹಜೀವನಕುಲರು ನಿಮಗೆ ಮಾತೇಕೆ ॥ ಬಲ್ಲರುಖಿಳಾಮ್ನಾಯಭಾಷಿತ । ದಲ್ಲಿ ನೋಡಲು ಧರ್ಮಶಾಸ್ತ್ರದೊ । ಳಿಲ್ಲತಾಯಿಂದಧಿಕಗುರುಪಿಲ್ಲೆಂದನಾಪಾರ್ಥ ॥೯॥ ಮಾತೃವಚನವಲಂಘ್ಯಪದು ಪಿ । ಖ್ಯಾತಪದ್ಧತಿ ಲೋಕಯಾತ್ರಾ । ಭೀತಿಯಲಿ ಭಯವೇಕೆ ಧರ್ಮರಹಸ್ಯನಿಷ್ಠರಿಗೆ ॥ ಏತಕೀಲೋಕಾನುಸರಣೆ ಪಿ । ಧೂತಕಿಲ್ಬಿಷವಾವುದದು ಧ । ರ್ಮಾತಿಶಯವಿಹಪರಕೆ ಕಡುಹಿತವೆಂದನಾ ಪಾರ್ಥ ॥೧೦॥ ರಾಗಲೋಭವ್ಯಾಪ್ತಿಯಲಿ ನೀ । ವೀಗುರುಪಿಗಳುಪ್ಪುವರೆ ಸಲೆ ಧ । ರ್ಮಾಗಮವನಾಚರಿಸುವದಲೇ ನಮ್ಮನುಷ್ಠಾನ ॥ ಈಗಳೀಗುರುವಚನಧರ್ಮ । ತ್ಯಾಗವೇನಿದ್ದುಧರ್ಮವೇ ಯುಪ । ಭೋಗ

ನೈವೆರಿಗೆಂದು ತಿಳುಹಿದನವರಸಾಪಾರ್ಥ ॥೧೧॥ ಪೊಡದಿರಿ ಸಂದೇಹಗಳ ಖಯ । ಬೋಡಿಯಿದರೊ ಳಗಿಲ್ಲ ಧರ್ಮದ । ಮೂಡಿಗೆಯೊಳಂಬಿರಲು ಬಹಿರಂಗದಲಿ ಬಳಸಧಿರಿ ॥ ಗೂಡುಹಲವಿಹಪಕ್ಷಿಯೊಂ ದಿದ । ಸಾಡಬಾರದು ಸಾಕು ಚಿಂತಿಸ । ಬೇಡಿ ನೀವೆಂದನಿಬರನು ತಿಳುಹಿದನು ಕಲಿಪಾರ್ಥ ॥೧೨॥ ಆದುದನುಮತ ತವೊಳಗೆ ತ । ತ್ಸೋದರರು ಸೌಹಾರ್ದದಿಂದ ತ । ಳೋದರಿಯನೊಲಿದೈವರಂಗೀಕ ರಿಸಿದರು ಬಳಿಕ ॥ ಆದರಣೆಯಲಿ ಕುಂತಿ ಸೊಸೆಗೆ ವೃ । ಕೋದರನ ಭೀಕ್ಷಾನ್ನಭಾಗದ । ಭೇದವನು ತಿಳುಹಿದಳು ತೊಡೆಯಲಿ ತೆಗೆನು ಕುಳ್ಳಿರಿಸಿ ॥೧೩॥ ಇಳಿದನಸ್ತಾಚಲಕೆ ರವಿನೃಪ । ತಿಲಕರೈವರು ವಿಹಿತಕೃತ್ಯಾ । ವಳಿಗಳನು ವಿಸ್ತರಿಸಿ ಕುಂತಿಯ ಚರಣಕಭಿನಮಿಸಿ ॥ ಜಲರುಹಾಕ್ಷನ ನಾಮಕೀರ್ತನ । ಲುಳಿತಪರಮಾನಂದರಸದಲಿ । ಮುಳುಗಿ ಮೂಡುತ್ತಿರ್ದರಂದು ಕುಲಾಲಭವನದಲಿ ॥೧೪॥ ಸಿಲುಕಿ ದುದು ಜನದೃಷ್ಟಿ ಬಲುಗ । ತ್ತಲೆಯ ಬಂಧದೊಳಂಧಕಾರದ । ಜಲಧಿಯಲಿ ಜಗವದ್ದುದೇನೆಂಬೆನು ಮಹಾದ್ಭುತವ ॥ ನಳಿನಮಿತ್ರನ ಬೇಹುಕಾರರ । ಸುಳಿವೊ ತಿಮಿರದ ಪಾಳೆಯದೊಳೆಸೆ । ನಿಳಯನಿಳ ಯದಸೊಡರು ತಳಿತುದು ಕೂಡೆ ನಗರಿಯಲಿ ॥೧೫॥ ಇವರಿಗುಂಟೇ ದೀಪತೈಲ। ದ್ರವಿಣವಿಲ್ಲ ಕುಲಾ ಲಭವನಕೆ। ಕಪಿವಕಗ್ಗತ್ತಲೆಯ ನುಗ್ಗೊತ್ತಿದುದು ಬೇರೊಂದು ॥ ನವಯುವತಿಯಾಭರಣಮಣಿರುಚಿ। ನಿವಹವಾಕೆಯ ನಯನಕಾಂತಿಗ । ಳವನಿಪತಿ ಕೇಳ್ಸಿನ್ನ ಪಿತನ ಪಿತಾಮಹರ ಪರಿಯ॥೧೬॥ಜನಪನಂ ದನೆಗೊಂಡುಕೃಷ್ಣಾ। ಜನವನಿತ್ತರು ಶಯನಭಾಗಕೆ। ಜನನಿಯಂಘ್ರಿಯ ಬಳಿಯಲೊರಗಿದರೈವರೊಂ ದಾಗಿ ॥ ವನಿತೆಯವರಂಘ್ರಿಗಳ ತಲೆಗಿಂ । ಬಿನಲಿ ಮಲಗಿದಳಂದಿಸಾಹವ । ಜನಿತಕೃತಿಯನು ನುಡಿವು ತಿರ್ದನು ಪಾರ್ಥನರಸಂಗೆ ॥೧೭॥ ಗೆಲಿದಪರಿಯನು ಕೌರವೇಂದ್ರನ। ದಳವ ಮುರಿದಂದವನು ಕರ್ಣನ। ನಳುಕದೆಚ್ಚ ಶರಪ್ರಯೋಗದ ಚಾಪಕೌಶಲವ ॥ ಬಲಜಲಧಿ ಮುಕ್ಕಿರಿಕಿದೊಡೆ ಮಂ । ಡಲಿಸಿ ಮೊಗೆ ದಂದವನು ಶಸ್ತ್ರಾ । ವಳಿಯ ಸಂಹರಣವನು ವಿವರಿಸಿದನು ಮಹೀಪತಿಗೆ ॥೧೮॥ ಕುದುರೆಯೇರಾ ಟವನು ಮಾತಂ । ಗದಸುಶಿಕ್ಷಾಭೇಧವನು ರಥ । ಚದಿತಕೌಶಲವನು ಶರಾಸನವೇದಸಂಗತಿಯ ॥ ಮದ ವದರಿಭಂಜನವ ದಿವ್ಯಾ । ಸ್ತ್ರದಲಿ ಮುಕ್ತಾಮುಕ್ತಸಮರಂ । ಗದ ಸುಸಂಗತಿಯಿಂದ ನೂಕಿದರವರು ಯಾಮಿನಿಯ ॥೧೯॥ ಆಯುಧದ ಲಕ್ಷಣವನಾದಿ। ವ್ಯಾಯುಧದ ಮಂತ್ರಪ್ರಭಾವವ । ಸಾಯುಧದ ವಿವಿಧಪ್ರಯೋಗವನವರಪರಿವಿಡಿಯ ॥ ರಾಯರಂಗದ ಶಕ್ತಿವರ್ಗವು । ಪಾಯಗುಣವಿಕ್ರಮ ಪರಾ ಕ್ರಮ । ನಾಯಕರ ಗುಣಕಥನದಲಿ ನೂಕಿದರು ಯಾಮಿನಿಯ ॥೨೦॥ ಮುನಿವಳೀಸತಿಯೆಂದಜ ನಿಪ್ರಾಂ । ಗನೆಯು ನೂಕಿದರವನಿಪರು ಭಾ । ಮಿನಿಸಹಿತಲಿರಲಿತ್ತಲೀಪಾಂಚಾಲಭೂಪತಿಯ ॥ ತನುಜ ನಿವರಪರೀಕ್ಷೆಗೋಸುಗ । ಮುನಿಪಕಾಶ್ಯಪಗೂಡಿ ಕೇಳಿದ । ನನಿತುಮಾತೆಲ್ಲವನು ಮರೆಯಲಿ ನಿಂದು ರಜ ನಿಯಲಿ ॥೨೧॥ ಬಂದು ಧೃಷ್ಟದ್ಯುಮ್ನನಯ್ಯಂಗೆಂದವನಿನನಸ್ತಮಯಸಂಧ್ಯಾ । ವಂದನೆಯ ತರು ವಾಯ ಶಸ್ತ್ರಾಸ್ತ್ರಪ್ರಸಂಗದಲಿ॥ಸಂದಗಜಹಯರಥದ ಪರಿವಿಡಿ।ಯಿಂದವರು ನೃಪನೀತಿಸಂಗತಿ। ಯಿಂದ ರಾತ್ರಿಯ ಕಳಿದರಾರೆಂವರಿಯೆನಾನೆಂದ ॥೨೨॥ ಧರಣಿಪತಿ ಕೇಳ್ವಿಪ್ರರಾದೊಡೆ। ಸರಸನವಭೋಜನದ ಕಥೆ ವೇ । ಣ್ಣಿರತಿಶಯವೇದಾಂಗವೇಪತೆದರ್ಥತರ್ಕಗಳ ॥ ಅರಸುಗಳಿಗಾಯುಧದ ಗಜರಥ । ತುರಗ ದೇರಾಟದ ಮಹಾಸ್ತ್ರದ । ವಿರಚನೆಗಳಿವುಜಾತಿವಿದ್ಯೆಗಳೆಂದನಾಮುನಿಪ ॥೨೩॥ ಭೂರಿಧನವರ್ಧನಸ

ದಾವ್ಯವಹಾರಲಾಭಾಲಾಭಚಿಂತೆಗ । ಳೀರುಜನಿತರಿಗಂತ್ಯವರ್ಣಕೆಕೃಷಿಯಮಾತುಗಳು ॥ ಆರನಾದರು ಜಾತಿಧರ್ಮದ । ಸೇರುವೆಗಳೇ ಹೇಳುವುವು ನ । ಮ್ಮಾರೆಯಕೆಗವರಂದುಕ್ಷತ್ರಿಯರೆಂದು ಮುನಿನುಡಿದ ॥೨೪॥ ಇವರು ಪಾರ್ಥವರೊಗೆ ಕೇಳ್ವಾಂ । ಡವರು ನಿಸ್ಸಂದೇಹವೆಂದೇ । ನಿವಗೆ ಸಾವೆನ್ನೆವೆ ವಿವಾಹವ ಪೂರ್ವಕಾಲದಲಿ ॥ ಅವರನುಪಚರಿಸೇಳು ರಚಿಸು । ತ್ಸವವಹಾಯ್ತಿದೆ ಪೂರ್ವಗಿರಿಯುಲಿ । ರವಿಯುದಯವೆಂದಾಪುರೋಹಿತ ತಿಳುಹಿದನು ನೃಪನ ॥೨೫॥ ಬಳಗೆಯುಂಯಿತು ಮತ್ತೆ ಗುಡಿಯೆ । ತ್ತಿಸಿತು ನಗರಿಯೊಳಧಿಕಹರುಷ । ವ್ರಸರದಲಿ ದೋವಾಳಿ ಪಲ್ಲವಿಸಿದುದು ನರಪತಿಯ ॥ ಬಿಸಜಬಂಧುವಿನುದಯದಲಿ ನೃಪ । ವಿಸರಸಹಿತ ಕುಲಾಲಭವನದ । ವಸುಮತೀವಲ್ಲಭರ ಕಂಡನು ಬಂದುಪಾಂಚಾಲ॥ ಏಳಿ ಬಿಜಯಂಗೈವುದೆಂದು ನೃ । ಪಾಲಕರನುಚಿತದಲಿ ನಿಜಗಾ । ಜಾಲಯಕೆ ತಂದನು ನಿರೀಕ್ಷಿಸುತನಿಬರಿಂಗಿತವ ॥ ಮೇಲುಮೊಗದ ಗರ್ಭಿರಗತಿಯ ಭ್ರೂ । ಡಾಳವನು ಕಂಡವರು ರಾಯರ । ಪೀಳಿಗೆಗಳಹುದೆಂದು ನಿಶ್ಚೈಸಿದನು ಮನದೊಳಗೆ ॥೨೭॥ ಮಧುರ ಮಂಗಳಮಜ್ಜನವ ಮಾ । ಡಿದರು ದಿವ್ಯಾಂಬರವನುಟ್ಟರು । ಸುದತಿಯರ ಪರಿವಾಣದಾರತಿಗಳನು ಕೈಕೊಳುತ ॥ ಪದಕಕರ್ಣಾಭರಣಹಾರಾಂ । ಗದವಿನೊಪ್ಪಂಬಡೆದಿವನು ಪೂ । ಸಿದರು ಸಾಮಜವಾಜಕಸ್ತೂರಿಯಕ್ಷಕರ್ದಮವ ॥೨೮॥ ಬಾಸಿಗದ ನೊಸಲಿನಲಿ ಮೆರೆವಮ । ಹೀಶರ್ರವರು ಮಂಟಪದ ನೆಲ । ವಾಸಿನಲಿ ಕುಳ್ಳಿರ್ದರನುಪಮರಾಜತೇಜದಲಿ ॥ ಆಸೊಹೆಯ ಸಂಗಾತ ಕುಂತಿಪಿ । ಲಾಸದಲಿ ಕುಳ್ಳಿರ್ದಳಾವಿ । ಸ್ವ್ಯಾಸವನು ಜನ ನೋಡುತಿರ್ದುದು ಬಿಗಿದುಬೆರಗಿನಲಿ ॥೨೯॥ ಜಲವನಂಬಲಿಯಿಂದ ದ್ರುಪದನು । ತಳಿದುಮೆರೆದವ ಬರೆಲಿ ಯಂತ್ರವ । ಗೆಲಿಪಗರುವನು ನಿಮ್ಮಪಂಚಕರೊಳಗೆಯೆನೆನಗುತ ॥ ಇಳಿದನವನಿಪ ಭೀಮನೊಯ್ಯನೆ । ಸುಳಿದನರ್ಜುನ ಹಿಂದೆ ಯಮಳರು । ನಳಿನವದನೆಯ ಹೊರಗೆ ಬಂದರು ಭೂಪಕೇಳೆಂದ ॥೩೦॥ ಬಿಸುಟನಂಜಳಿಯುದಕವನುನಿ । ಪ್ರಸರದಲಿ ಬೆರಗಾಗಿ ಭೂಪರ । ಮುಸುಡನೆವೆಯಿಕ್ಕದೆ ನಿರೀಕ್ಷಿಸುತೆಂದನಾದ್ರುಪದ ॥ ಅಸುರರೋ ಸುರರೋ ಭುಜಂಗರೊ । ವಸುಮತೀಶರೊ ನೀವು ಛಲವಾ । ನಿಸರ ಪರುಠವವಲ್ಲ ನೀವಾರೆಂದು ಬೆಸಗೊಂಡ ॥೩೧॥ ಈತನಗ್ರದಭೀಮನರ್ಜುನ । ನೀತನಿವರ್ಗೆ ಯಮಳರೆಂಬವೆ । ರೀತಗಳು ನಮ್ಮಿಂದ ಕಿರಿಯರು ನಾವು ಪಾಂಡವರು ॥ ಮಾತೆಯೆಮ್ಮೈವರಿಗೆ ಜಗವಿ । ಖ್ಯಾತೆ ಕುಂತೀದೇವಿ ತಾನಿಂ । ದೀತಳೋದರಿಯಾವಳೆಮ್ಮೈವರಿಗೆವಧುವೆಂದ ॥೩೨॥ ಕೊಂಡುಹರಿದುದು ಹರುಷವಾಬ್ಧಿ । ಹಮ್ಮಂಚದಗ್ರಕೆ ಮುಗಿಳಿಗೈವರು । ಗಂಡರೆನೆ ಮಗುಳದ್ದುದಾತನ ಮನ ರಸಾತಳಕೆ ॥ ಕಂಡುಬಲ್ಲರೆ ಕಂಗಳಲಿ ಕಿವಿ । ಗೊಂಡು ಕೇಳ್ದರೆ ಮುನ್ನ ನಮಗೀ । ಭಂಡತನವನು ಮಾಡುವರೆ ನೀವೆಂದನಾದ್ರುಪದ ॥೩೩॥ ಲೋಕಸಂಮತವಲ್ಲ ಶಾಸ್ತ್ರಾ । ನೀಕದಭಿಮತವಲ್ಲ ಕಾಪಥ । ವೇಕೆ ನಿಮಗಿದು ಪಾಂಡುಪುತ್ರರು ನೀವು. ಧಾರ್ಮಿಕರು ॥ ಪ್ರಾಕೃತರೆ ನೀವಕಟ ನಿಮ್ಮ ವಿ । ವೇಕವೇನಾಯ್ತಿಲ್ಲಿಯಿಹಪರ । ಲೋಕಕಿದು ಸಾಧನವೆಯೆಂದನು ದ್ರುಪದಭೂಪಾಲ ॥೩೪॥ ಕಾಮಮೋಹಿತರಲ್ಲ ವಿಷಯಸ್ತೋಮಭಂಗಿತರಲ್ಲ ಧರ್ಮದ । ಸೀಮೆಯೊಳಗೆಲ್ಲನಿತನವಮಾನಿಸುವರಾವಲ್ಲ ॥ ಈಮಹಾಸತಿಯೆಮಗೆ ಜನನಿಯ । ನೇಮದಲಿ ವಧುವಾದಳಿಂದು ವಿ । ರಾಮವೇಕೆ ವಿವೇಕಕೆಂದನು ಧರ್ಮಸುತನಗುತ॥ ಏಕಪತಿಬಹುಸತಿಯರೆಂಬುದು । ಲೋಕಪದ್ಧತಿ ಕಂಡೆವಾವಿಂ । ದೇಕೆ ಪತ್ನಿಗೆ ಪುರುಷಪಂಚಕ

ವೆನು ಮಹಾದೇವಾ ॥ ಲೋಕಶಾಸ್ತ್ರವಿರುದ್ಧವೆನು ಕಿವಿ । ಯೋಕರಿಸುತಿದೆ ಕಣ್ಮನಕೆ ಸು । ವ್ಯಾಕುಲತೆ ಹಿರಿದಾದುದೆಂದನು ದ್ರುಪದಭೂಪಾಲ ॥೩೬॥ ಆಸಮಯದಲಿ ದೇವವೇದ । ವ್ಯಾಸಮುನಿಯೈತಂದನಲ್ಲಿ ಮ । ಹೀಶಸಭೆಯಿದಿರೆದ್ದು ಕಂಡುದು ಕಾಣಿಕೆಯ ನೀಡಿ ॥ ದೋಷಗರ್ಭಿತಧರ್ಮವನು ನಿ । ರ್ಣೈಸಲರಿಯದಮೂಢಮತಿಗೆ ಮು । ನೀಶ ಕೃಪೆಮಾಡೆಂದು ಪ್ರಿಯೋಕ್ತಿದನು ಪಾಂಚಾಲ ॥೩೭॥ ನಗಹಿದನು ದ್ರುಪದನನು ಯಮಜಾ । ದಿಗಳನೆತ್ತಿದನೊಬ್ಬರೊಬ್ಬರ । ತೆಗೆದು ತಕ್ಕೈಸಿದನು ಮುದದಲಿ ಪಾಂಡುನಂದನರ ॥ ದುಗುಡವೇಕೈ ದ್ರುಪದನಿನ್ನಯ । ಮಗಳ ಸೌಭಾಗ್ಯದಲರುಂಧತಿ । ಸೊಗಸಿ ರಂಜಿಸಲರಿಯಳೆಂದನು ಕೃಷ್ಣಮುನಿ ನಗುತ ॥೩೮॥ ಅಹುದಲೇ ಬಳಿಕೇನು ತಂಗಿಯ । ಬಹಳಸುಕೃತೋದಯದಲರಗಿನ । ಗೃಹದ ಗಂಟಲನೊದೆದು ಸುಳಿದರು ಪಾಂಡುನಂದನರು ॥ ಗಹನಯಂತ್ರವನೆಚ್ಚ ಪಾರ್ಥನ । ಮಹಿಳೆಗೆನ್ನ ಕುಮಾರಿಗೀಗಲು । ಬಹುಪತಿಗಳಾಯ್ತಿದನು ನೀವ್ನಿರ್ಣೈಸಬೇಕೆಂದ ॥೩೯॥ ದ್ರುಪದಧೃಷ್ಟದ್ಯುಮ್ನಪಾಂಡವ । ನೃಪರು ಕಾಶ್ಯಪಗೂಡಿ ಹೊಕ್ಕರು । ವಿಪುಳತರಕಾರುಣ್ಯದಿಂದೇಕಾಂತಮಂದಿರವ ॥ ನೃಪತಿಸಂಶಯವೇಕೆ ಸಾವಿದ । ನಪಹರಿಸುವೆವು ಪಾಂಡುಪುತ್ರರ । ನುಪಚರಿಸು ವೈವಾಹವನು ವಿಸ್ತರಿಸು ಸಾಕೆಂದ ॥೪೦॥ ವಿಧಿವಿಹಿತಲೋಕಾಪವಾದವ । ನಧಿಕರಿಸಿ ವರ್ಣಾಶ್ರಮಕೆ ಸು । ವ್ಯಧಿಕರಣ ಹುಗದಂತೆ ಸದ್ವ್ಯವಹಾರಮಾರ್ಗದಲಿ ॥ ವಿಧಿಸಿದೊಡೆನಿಮ್ಮಂಘ್ರಿಗಳಸಂ । ನಿಧಿಯಲೇ ಪಾಣಿಗ್ರಹಣವನು । ವಿಧುಮುಖಿಗೆ ಮುದದಿಂದ ಮಾಡುವೆನೆಂದನಾದ್ರುಪದ ॥೪೧॥ ಧರಣಿಪತಿ ಕೇಳಿವರ ತಾಯ್ಮುಂ । ದರಿಯದಾಡಿದಳಾನುಡಿಯನು । ತ್ವರಿಸಬಾರದು ಧರ್ಮವಿದು ಪರಮಾತೃಭಕ್ತರಿಗೆ ॥ ಗುರುವಚನದ ನಿಮಿತ್ತವರಪತಿ । ಕರಿಸಿ ಚರಿಸಿದಪೂರ್ವಜನ್ಮದ । ಸರಸಿಜಾಕ್ಷಿಯ ಕಥೆಯನರುಪುವೆನಿನ್ನು ಕೇಳೆಂದ ॥೪೨॥ ಮುನ್ನ ನಾರಾಯಣಿಯೆನಿಪುದೀ । ಕನ್ನಿಕೆಯ ಹೆಸರೊಬ್ಬಗುಣಸಂ । ಪನ್ನಮುನಿಪನ ವಧು ಪತಿವ್ರತೆಯರಿಗೆ ಗುರುವೆನಿಸಿ ॥ ಉನ್ನತೋನ್ನತಭಕ್ತಿಭಯದಲಿ । ತನ್ನ ಪತಿ ಪರದೈವವೆಂದು ವಿ । ಪನ್ನನನು ಕೊಂಡಾಡುತಿರ್ದಳು ರಾಯ ಕೇಳೆಂದ ॥೪೩॥ ಆತಪೋನಿಧಿ ಕುಷ್ಠರೋಗಪ । ರೀತಭೀಭತ್ಸೆಯಲಿ ಹುದುಗಿರ । ಲೀತಳೋದರಿ ಭಜಿಸುತಿರ್ದಳು ಭಾವಶುದ್ಧಿಯಲಿ ॥ ಆತನೀಕೆಯ ಕೃತ್ಯದಲಿ ಭಾ । ವಾತಿಶಯದಲಿ ಖೋಡಿಯನು ಹಿಡಿ । ವಾತನಾಗಿರಲೊಂದು ದಿನವಿಂತಾಯ್ತು ಕೇಳೆಂದ ॥೪೪॥ ಕೊಳೆತಬೆರಳನು ಭುಕ್ತಶೇಷದೊ । ಳಿಳುಹಿದೊಡೆಕಂಡೀಕೆ ಚಿತ್ತದೊ । ಳಳುಕದುಪಭೋಗಿಸೆ ಮುನೀಶ್ವರನದಕೆ ಹರುಷದಲಿ ॥ ಎಲೆಗೆ ಮೆಚ್ಚಿದೆನಿನ್ನು ನೀಮನ । ವೊಲಿದುದನು ಬೇಡೆನಲು ಬಳಿಕಾ । ಲಲನೆ ನುಡಿದಳು ದಿವ್ಯರೂಪಿನೊಳೆನ್ನ ನೆರೆಯೆಂದು ॥೪೫॥ ದ್ರುಪದ ಕೇಳಾಕುಷ್ಠದೇಹವ । ನಪಹರಿಸಿ ಕಂದರ್ಪರೂಪಿನೊ । ಳುಪಚರಿಸಿ ಕಾಮಿನಿಯನವನತಿಕಾಮಕೇಳಿಯಲಿ ॥ ತಪಸಿ ತಣಿದನು ತನ್ನ ಮುನ್ನಿನ । ತಪವ ನೆನೆದನು ತಣಿಯದಿರೆ ಯೀ । ಚಪಲಲೋಚನೆ ಸೆರಗ ಹಿಡಿದಳು ಹೋಗದಿರಿಯೆನುತ ॥೪೬॥ ದಿಟ್ಟೆಹೆಂಗುಸೆ ನೃಪರ ಬಸುರಲಿ । ಹುಟ್ಟು ನೀ ಹೋಗೆಂದು ಶಾಪವ । ಕೊಟ್ಟನೀಕೆಗೆ ಹಾಯ್ದನಾಮುನಿಪತಿ ತಪೋವನಕೆ ॥ ನಟ್ಟಡವಿಯಲಿ ನಳಿನಮುಖಿ ಕಂ । ಗೆಟ್ಟು ಭಜಿಸಿದಳಖಿಳದುರಿತಘ । ರಟ್ಟನನು ದಿವಿಜೇಂದ್ರವಂದ್ಯನನಿಂದುಶೇಖರನ ॥೪೭॥ ಹಲವುಕಾಲದಿ ತಪದೊಳಕಟಾ । ಬಳಲಿದಳಲಾ ಮುನಿಯುವಧುವೆಂ । ದಿಳಿದನೀಶ್ವರನಾತಪೋವನಕಾಕೆ

ಯಿದಿರಿನಲಿ ॥ ಸುಳಿಯೆ ಕಂಡೆರೆದಬಲೆ ಕಂಡಳು । ಸುಲಭನನು ಭಕ್ತರಿಗೆ ತರ್ಕ । ವಳಿಗೆ ದುರ್ಲಭ
ನನು ದುರಾಸದಮಹಿಮಧೂರ್ಜಟಿಯ ॥ ತರುಣಿ ಮೈಯಿಕ್ಕಿದಳು ಕರದಲಿ । ಶಿರವನೆಗಹಿದನಬುಜಲೋ
ಚನೆ । ವರವ ಕೊಟ್ಟೆನು ಬೇಡಿಕೊಳ್ಳೆನೆ ತರುಣಿ ತಲೆವಾಗಿ ॥ ಹರಪತಿಂದೇಹಿಪ್ರಭೋಶ್ರಂ । ಕರಪತಿಂ
ದೇಹಿಪ್ರಭೋಯಂ । ಪರಸಿಬೇಡಿದಳೈದುಬಾರಿ ಮಹೇಶನಲಿ ವರವ ॥೪೯॥ ಆದೊಡೈವರುಪತಿಗಳ
ಹರು ತ । ಳೋದರಿಯೆ ನಿನಗೆನಲು ಬೆಚ್ಚಿದ । ಳೀದುರಿತ ತನಗೇಕೆನುತ ಸತಿ ಮುಚ್ಚಿದಳು ಕಿವಿಯ ॥
ಆದೊಡಂಜದಿರಂಜದಿರು ವರ । ವೇದಬಾಹಿರವಲ್ಲ ಸತಿಯರೊ । ಳಾದಿಪಾತಿವ್ರತ್ಯ ನಿನಗೆಂದನುಮುಖ
ಧ್ವಂಸಿ ॥೫೦॥ ಶ್ರುತಿಗಳೆಂಬುದೆ ಯೆಮ್ಮನುಡಿ ಸಂ । ಸ್ಮೃತಿಗಳೆಮ್ಮಯಚೇಷ್ಟೆ ಧರ್ಮದ । ಗತಿವಿಚಾ
ರಿಸಲೆಮ್ಮನೇಮವು ವಿಹಿತವಿಧಿಯೆಂದು ॥ ಕ್ರತುಗಳೀಮನ್ವಾದಿಗಳು ಸುರ । ತತಿಗಳಬುಜಭವಾದಿದೇವ ।
ಪ್ರತತಿಯೆಮ್ಮಾಜ್ಞೆಯೊಳಗೆಂದಾಸತಿಗೆ ಶಿವನುಡಿದ ॥೫೧॥ ನಿನ್ನ ಕಥನವೆ ಪುಣ್ಯಕಥನವು । ನಿನ್ನ
ಚರಿತವೆ ಪುಣ್ಯಚರಿತವು । ನಿನ್ನ ನೆನೆದಂಗನೆಗೆ ಬಹುದು ಪತಿವ್ರತಾಭಾವ ॥ ಎನ್ನನುಜ್ಞೆಗೆ ಧರ್ಮ
ಚಿಂತಾ । ಪನ್ನೆಯಾಗದಿರೆಂದು ಕೃಪೆಯಲಿ । ತನ್ನ ಸಿರಿಕರತಳವನಿರಿಸಿದನುತ್ತಮಾಂಗದಲಿ ॥ ಹರನ
ನುಡಿಯೇ ವೇದ ಹರನಾ । ಚರಣೆಯೇ ಸನ್ಮಾರ್ಗ ಹರ ಪತಿ । ಕರಸಿ ನುಡಿದುದೆ ಪರಮಪಾವನಧರ್ಮತ
ತ್ವವದು ॥ ಬರಹನರುಹಾವಿಧಿಯನೊರೆಸಲು । ಹರ ಸಮರ್ಥನು ಹರನ ಬರಹವ । ನೊರೆಸಲಾಪರ
ತ್ರೋರಿಸಾಬ್ರಹ್ಮಾದಿದೇವರಲಿ ॥೫೨॥ ಅದರಿನೈವರಿಗೇಕೆ ವಧುವೆಂ । ಬುದು ಮಹೇಶ್ವರನಾಜ್ಞೆ
ನೀನಿ । ನ್ನಿದಕೆ ಚಿಂತಿಸಬೇಡ ಬಳಿಕಾಪಾಂಡುನಂದನರ ॥ ಹದನನರುಹುವೆ ಕೇಳು ನೃಪ ಪೂ ।
ರ್ವದಲಿ ಸುರಪತಿ ಶಂಕರನ ಶಾ । ಪದಲಿ ನವೆದನು ಹಲವುಯುಗ ಕೈಲಾಸಕುಹರದಲಿ ॥೫೩॥ ಬಳಿಕ
ಲಿಂದ್ರನು ಮರವೆಯಲಿ ಕಳೆ । ವಳಿಸಲಾತಂಗೀತನಂದದಿ । ಹಲವುಯುಗಸೆರೆಯಾಯ್ತು ರಜತಾಚಲದ
ಕುಹರದಲಿ ॥ ಬಿಲವಲೀಪರಿಯೈವರಿಂದ್ರರು । ಸಿಲುಕಿದರು ಶಂಕರನ ಖತಿಯಲಿ । ಬಳಿಕ ಬಿಡುಗಡೆ
ಯಾಯ್ತು ಕಾತ್ಯಾಯನಿಯದೆಸೆಯಿಂದ ॥೫೪॥ ಜನಿಸುವುದು ನೀವೈವರಿಂದ್ರರು । ಮನುಜಲೋಕ
ದೊಳರಸುಕುಲದಲಿ । ವನಿತೆ ನಿಮ್ಮೈವರಿಗೆಯಹಳೊಬ್ಬಳೆ ನಿಧಾನವಿದು ॥ ಎನಲು ನಡುಗಿದರಕಟ
ಮೊದಲಲಿ । ಮನುಜಜನ್ಮವೆ ಕಷ್ಟವದರೊಳು । ವನಿತೆಯೊಡಹುಟ್ಟಿದವರಿಗೊಬ್ಬಳೆ ಶಿವಶಿವಾ
ಯೆಂದು ॥೫೫॥ ಹರಹರ ತ್ರಾಯಸ್ವ ಕರುಣಾ । ಕರ ಮಹಾದೇವೀದುರಂತದ । ನರಕಭಾಜನಮುಚಿ
ತವೇ ಸಮ್ಮಂಘ್ರಿದರ್ಶನಕೆ ॥ ಕರುಣಿಸೈ ಮತ್ತೊಂದುಪರಿಯಲಿ । ವರವನೆನೆ ನಸುನಗುತ ಗೌರೀ ।
ವರನು ತಿಳುಹಿದನೈವರಿಂದ್ರರಿಗರಸ ಕೇಳೆಂದ ॥೫೬॥ ಖೇಡತನವೇಕೆಳ್ಳನಿತು ಖಯ । ಖೋಡಿಯಿ
ದರೊಳಗಿಲ್ಲ ಮುನಿವಧು । ಬೇಡಿದಳು ಪೂರ್ವದಲಿ ವರವನು ಪಂಚವಾಕ್ಯದಲಿ ॥ ಜೋಡೆನಿಸಿದಳು
ನಾರಿ ಧರ್ಮಕೆ । ಕೇಡು ಬಾರದು ನಿಮ್ಮನೆರಕೆ । ಟ್ಟಾಡಿದರ ಬಾಯ್ಹುಳಿವುದೆಂದನುಬಾಲಶಶಿಮೌಳಿ ॥
॥೫೭॥ ಎನೆ ಪಸಾದದಲಿಂದುಶೇಖರ । ನನು ಸುರೇಂದ್ರರು ಬೀಳುಕೊಂಡರು । ಜನಿಸಿದರು ಬಳಿಕವರು
ಮಹಿಯಲಿ ಮರ್ತ್ಯರೂಪಾಗಿ ॥ ನಿನಗೆ ಮಗಳೀವನಿತೆ ಕುಂತಿಯ । ತನುಜರಿವರಳಿಯಂದಿರೇ ನೀ । ನೆನಿ
ತುಧನ್ಯನೊ ಶಿವಯೆನುತ ತಲೆದೂಗಿದನು ಮುನಿಪ ॥೫೮॥ ಎಲೆಮರುಳೆ ಪೂರ್ವದಲಿ ತಾವ್ತ । ಮ್ಮೊಳಗೆ
ಗೈದುದಿಸಿದರೆನಿನ್ನನು । ಕಳಿವರಿದು ಬೋಳೈಸಿತಾಹಂಕಾರಮಮಕಾರ ॥ ತಿಳಿಯದಿರೆ ನೋಡಾದೊ

ಡೆನುತ । ಗೃಹಿಣಿಯಮುನಿಪತಿ ದಿವ್ಯದೃಷ್ಟಿಯ । ಸಲಿಸಿದೊಡೆ ನೋಡಿದನು ದ್ರುಪದನು ಪಾಂಡುನಂದನರ ||೬೦|| ಮೆರೆವದೇಹಪ್ರಭೆಗಳಲಿ ಮಿರು । ಮಿರುಪದಿವ್ಯಾಭರಣಕಿರಣದ । ತುರುಗಿನಲಿ ತನಿಹೊಳೆವದಿವ್ಯಾಂಬರದಕಾಂತಿಯಲಿ ॥ ಅಲವೊಡಾಯ್ತೆಲ್ಲವಯವಪಕಂ । ಪರೆವತೇಜಃಪುಂಜರಸಮಯ । ದೆರಕವೆನಲಿವರ್ಕೈವೆರೊಪ್ಪಿದರಿಂದ್ರತೇಜದಲಿ ||೬೧|| ಮನದ ಕಳೋಪ್ಮನ ಬಿಡಿವರೋವೊಾಂ । ಚನದ ಹುದುಗುವಹೊದರುಗಂಗಳ । ಜಿನುಗುವಾತಿನ ಪೂತಪರುಷದ ಹೊಂಗಿದ್ರತ್ಸನದ ॥ ಕೊಸರ್ವ ಬೆವರಿನ ಕಳಿದಚಿಂತೆಯ । ಮನದಧಾವದ ರಾಗರಸದು । ಬ್ಬಿನಲಿ ಹೊಂಪುಳಿಹೋದನವರನು ಕಂಡು ಪಾಂಚಾಲ ||೬೨|| ಅರಸ ಕಂಡ್ರೆ ನರಪತಿಗಳೋ । ಸುರಪತಿಗಳೋ ಮನದಸಂಶಯ । ಪರಿದುದೇ ಪಳಿವಿಲ್ಲಲಾ ಲೇಸಾಗಿ ನೋಡೆನಲು ॥ ಪರಮಋಷಿ ನೀ ಪುಣ್ಯದಲಿಗೋ । ಚರಿಸಿದ್ದೆ ನಿಮ್ಮಡಿಯ ನೇಮವ । ತಿರದೊಳಾಂತೆನು ಧನ್ಯ ತಾನೆಂದರಸ ಕೈಮುಗಿದ ||೬೩|| ನಂಬಿದ್ದೆಲೇಸಾಗಿ ಲಗ್ನವಿ । ಲಂಬವಾಗದೆಧಾರೆಯೆರೆ ಕಲ । ಶಾಂಬುವಿದೆ ನೀ ಹೋಗು ಕಾಶ್ಯಪ ಹೋಮಸಾಧನವ ॥ ತುಂಬಿ ವಹಿಲದೊಲವನಿಯಮರಕ । ದಂಬ ನೆರೆಯಲಿ ಯೆನಲು ದ್ರುಪದನ । ಹೆಂಬೆಳೆಯ ತನಿಪರುಷ ಹೊಡೆದೋರಿದುದು ಪುಳಕದಲಿ ||೬೪|| ಸಾರಿದರು ಮೊಟ್ಟಕ್ಕಿಗಳ ಗುಪ್ತ । ಜೀರಿಗೆಗಳೊದಗಿದವು । ಲಗ್ನವಿ ಹಾರದಾತೀರ್ವಾದದಾಯತರವದ ರಭಸದಲಿ ॥ ಧಾರೆಯೆರೆದನು ದ್ರುಪದ ಪಾಂಡುಕು । ಮಾರರಿಗೆ ನಿಜಸುತೆಯನಶಿವಿ । ಸ್ತಾರಸಿತು ವೈವಾಹರಚನೆ ವಿಶಾಲವಿಭವದಲಿ ||೬೫|| ಹೋಮಸಮನಂತರದಲಖಿಳಧ । ರಾಮರರ ಪೂಜೆಯಲಿ ಭೂತ । ಸ್ತೋಮತುಪ್ಪಿಯ ಮಾಡಿದರು ಸನ್ಮಾನದಾನದಲಿ ॥ ಆಮುನೀಂದ್ರಂಗೆರಗಿದರು ನೃಪ । ರೀಮಹಾಸತಿಸಹಿತ ನಿಮಿಷ । ಪ್ರೇಮದಲಿ ಪ್ರಮುಖಗಿ ತೆಗೆದಪ್ಪಿದನು ಪಾಂಡವರು ||೬೬|| ಪರಮವೈಭವದಲಿ ಚತುರ್ಥಿಯ । ಮರುದಿವಸದೋಕುಳಿಯ ಪುರಜನ । ಪರಿಜನದ ಸುಮ್ಮಾನತ್ರರಭಿಯ ಸಾರಸಂಪದವ ॥ ವರಮುನಿಪನೀಕ್ಷಿಸಿದನನಿಬರ । ಹರಸಿ ನಯನೀತಿಗಳ ಹೇಳಿದ । ಮರಳಿ ಬಿಲಯಂಗೈದು ಹೊಕ್ಕನು ಬದರಿಕಾಶ್ರಮವ ॥

ಅಂತು ಸಂಧಿ ೧೬ ಕ್ಕೆ ಪದ ೭೫೬ ಕಂ ಮಂಗಳಮಸ್ತು.

---

## ಹದಿನೇಳನೆಯ ಸಂಧಿ.

---

ಸೂಚನೆ॥ ಧಾಳಿಯಲಿ ಬಂದರಿಬಲದ ಪೆ । ಟ್ಟಾಳುತನವನು ಮುರಿದು ಸಂಧಿಯ ।
ಮೇಲೆ ಧರ್ಮಜ ಬಂದು ಹೊಕ್ಕನು ಹಸ್ತಿನಾಪುರವ ॥

---

ಕೇಳು ಜನಮೇಜಯನೃಪತಿ ಪಾಂ । ಚಾಲಸುತೆಯ ವಿವಾಹವಾರ್ತೆಯ । ಕೇಳಿದೆಯಲ್ಲೆ ಕೌರವರು ಮರುಗಿದರು ಮರುಕಳಿಸಿ ॥ ಆಳನೆರಹಿದನಖಿಳದಳ ದೆ । ಖ್ಖಾಳವನು ನೋಡಿದರು ಭೂಪಿಪಾ । ಪಾಲಸಂಕುಲಸಹಿತ ಬಂದರು ದ್ರುಪದಪುರಿಗಾಗಿ ||೧|| ಏನ ಹೇಳುವೆ ನಿನ್ನವರ ಜಯ । ಮಾನವ:

ವೃತ್ತಾಂತವುಪೈಕದ । ಮೊನಭಂಗಸ್ಥಿತಿಯನೆಲೆಜನಮೇಜಯಕ್ಷಿತಿಪಾ ॥ ಭಾನುವಿನ ಮುಂಬಿನ ತ್ರಿಲೋಚ್ಚಾಯ । ಸಾನುವಿನ ವಜ್ರದ ತರಕ್ಷುವ । ಧೇನುವಿನ ಹೋರಟೆಯ ಹವಣಾದು ಭೂಪಕೇಳೆಂದ ॥೨॥ ಮುರಿದುದಾಹೆಬ್ಬಲ ವಿಘಾತಿಯ । ಲೊರಗಿದರು ಭಟಭಟರು ಗಜಹಯ । ದೊರತೆ ಬತ್ತಿತು ಭೀಮಪಾರ್ಥರ ಶರನಿದಾಘದಲಿ ॥ ಉರುಕುಗೊಂಡರು ನಿಜ್ಜಟರು ಕೈ । ಮರೆದುದಾಜೆಯ ದೊರೆಗಳಿವದಿರು । ನೆರೆ ವಿಭಾಡಿಸ ತೆಗೆದು ಹಾಯ್ದರು ಹಸ್ತಿನಾಪುರಕೆ ॥೩॥ ಬಳಿಕ ಪಾಂಚಾಲಕನ ಭೀತ್ರಿಯ । ಮೊಳಕೆಯುಂಡುದು ಹರುದುವುತ್ಸವ ಜಲಧಿವಳಯದ ಭೂತಳಾಗ್ರದ ಭೂತಳೇಂದ್ರರಲಿ ॥ ಹೊಳೆಹೊಳೆವರವಿರಶ್ಮಿಗಳಲ್ಪ । ಜ್ವಲಿಸುವಂತಿರೆ ಪಾಂಡುನಂದನ । ರಳಪಿಸುಬ್ಬಿಟಿ ಬಿಸಿಲು ನೆರೆ ಪಸರಿಸಿತ್ತು ದೆಸೆದೆಸೆಗೆ ॥೪॥ ಬಂದನಲ್ಲಿಗೆ ಸಕಲಯಾದವ । ವೃಂದಸಹಿತ ಮುರಾರಿ ಕುಂತೀ । ನಂದನರು ಒರಲಿದಿರುಗಾಣಿಸಿಕೊಂಡನುಚಿತದಲಿ ॥ ತಂದಬಹುವಿಧವಸ್ತುಕಾರವ । ನಂದು ಕೊಟ್ಟನು ಗಜರಥಾಶ್ವವ । ನಿಂದುವದನೆಯರಿಗೆ ವಿಚಿತ್ರಾಂಬರವಿಭೂಷಣವ ॥೫॥ ಮಗನೆ ಧರ್ಮಜ ಕೇಳು ಭೀಮಾ । ಬಗಳೆಹಲಿಯಮ್ಮಣ್ಣದೇವನ । ಮಗನು ಸೋದರಮಾವನೀತನು ನಿಮಗೆ ವಸುದೇವ ॥ ವಿಗಡರಿಯಾದವನ್ನಹರು ಬರಿ । ಘಗಳು ನಿಮಗೆಂದೈವರನು ಕೈ । ನೆಗಹಿ ಕಮಲೋದರನ ಕೈಯಲಿ ಕೊಟ್ಟಳಾಕುಂತಿ ॥೬॥ ವನದೊಳಪಗತನಾದನಿವರ । ಯ್ಯನು ಕುಮಾರರ ಬಾಲ್ಯಕಾಲದೊ । ಳೆನಗೆ ರಕ್ಷಾಭಾರ ಬಿದ್ದುದು ಪತಿಪರೋಕ್ಷದಲಿ ॥ ಇನಿಬರನು ಗಜಪುರಿಗೆ ಕೊಂಡೊ । ಯ್ದನು ಸುಯೋಧನನಿಂದ ವೈರವು ಜನಿತವಾಯಿತು ಬಳಿಕ ಲಾಕ್ಷಾಭವನದಹನದಲಿ ॥೭॥ ಉರಿಯೊಳುಳಿದೆವು ನಿಮ್ಮ ಚರಣ । ಸ್ಮರಣಬಲದಲಿ ಬಹಳವಿಪಿನಾಂ । ತರದೊಳಗೆ ತೊಳಲಿದೆವು ಹೊರೆದೆವು ಸಾಯದೊಡಲುಗಳ ॥ ಬರಬರಲು ತತ್ಸರ್ವದುಃಖೋ । ತ್ತರನಿವಾರಣ ದ್ರುಪದಕನ್ಯಾ । ವರಣ ನಿನ್ನನುಕಂಪದರುಶನವೆಂದಳಾಕುಂತಿ ॥೮॥ ದೇವಿ ಚಿತ್ತೈಸಿಸೌಪಚಾರಿಕ । ಭಾವವೇ ಧರ್ಮಜನು ಭೀಮನು । ಭಾವನವರು ಧನಂಜಯಾದಿಗಳೆಮಗೆ ಮೈದುನರು ॥ ಈಯುಪಾಧಿಸ್ಥಳದೊಳಂತ । ರ್ಜೀವನಪ್ರಾಣಾದಿವಾಯುಗ । ಳಾವು ನಿಮ್ಮವರಿಗೆ ಕಾರಣಾಪಂದವನಸುರಾರಿ ॥೯॥ ದ್ರುಪದ ಗುಡಿಗಟ್ಟಿದನು ಕುಂತಿಯ । ವಿಪುಳಹರುಷವನೇನನೆಂಬೆನು । ದ್ರುಪದಯದುಪರಿವಾರವುಲಿದುದು ಜಲಧಿಘೋಷದಲಿ ॥ ಅಪದೆಸೆಯ ಮುಗಿಲೊಡೆದು ಹೊಳೆಹೊಳೆ । ದುಪರಿಚರರವಿಯಂತೆ ತತ್ಕ್ಷಣ । ವಿಪುಳತೇಜಃಪುಂಜರೆಸೆದರು ಪಾಂಡುನಂದನರು ॥೧೦॥ ಇದಿರೊಳವನಿಪ ಭೀಮನೆಡವಂ । ಕದಲಿ ಮಾದ್ರೀಸುತರು ಬಲವಂ । ಕದಲಿ ದೇವಕಿಕುಂತಿವಸುದೇವಾದಿಯದುನಿಕರ ॥ ಮುದದಿಯೈವರ ರಮಣಿ ಬಲವಂ । ಕದಲಿ ಕರುಣಾಳುವಿನ ವಾಮಾಂ । ಕದಲಿಫಲುಗುಣನೊಪ್ಪೆ ಮೆರೆದನು ದಾನವಧ್ವಂಸಿ ॥೧೧॥ ಆವುದೋ ಧರ್ಮಜನ ಭೀಮನ । ಭಾವಶುದ್ಧಿ ಧನಂಜಯನ ಸುಕೃ । ತಾವಲಂಬನಸಾರವೆಂತುಟೊ ಶಿವಮಹಾದೇವಾ ॥ ತಾವುಗಾಣವು ವೇದವುಪನಿಷ । ದಾವಳಿಗಳೋಲೈಸಿ ಕೃಷ್ಣ ಕೈ । ಪಾವಿಲಾಸವನೊಡಿಯೆಂದುದು ಸಕಲಸುರನಿಕರ ॥೧೨॥ ಅರಸ ಚಿತ್ತೈಸಂದಿನೋಲಗ । ಹರೆದುದಾಹರಿಸನೆ ಬಿಟ್ಟುದು । ಪುರದ ಬಹಿರುದ್ಯಾನವೀಧಿಗಳೊಳಗೆಹರಿಹಿನಲಿ ॥ ಕುರುನೃಪಾಲನ ಗುಪ್ತಚಾರರು । ಅರಿದರೀವಾರ್ತೆಯನು ಪುರದಲಿ । ಹರಹಿದರು ನೆರೆ ಕೇಳಿದನು ಧೃತರಾಷ್ಟ್ರನೀಹದನ ॥೧೩॥ ಕರೆಸಿದನು ಗಾಂಗೇಯಗೌತಮ । ಗುರುಸುಯೋಧನಶಲ್ಯಸೈಂಧವ । ಗುರು

ತನುಜರಾಧೇಯವಿದುರಕಳಿಂಗಸೌಬಲರ ॥ ಚರಮುಖಪ್ರತಿಪನ್ನ ಬಂಧುರ । ತರವಚೋವಿನ್ಯಾಸಕರ್ಣಾ । ಜ್ವರವೊ ಕರ್ಣಾಮೃತವೊ ಕೇಳಿರೆಯೆಂದನಂಧನೃಪ ॥೧೪॥ ಕೇಳಿರೈ ಹೇಳುವೆನು ಯಾದವ । ರಾಳು ಬಂದುದುಗಡ ಜನಾರ್ದನ । ಕೋಳುವೋದನುಗಡ ಯುಧಿಷ್ಠಿರಭೀಮಪಾರ್ಥರಿಗೆ ॥ ಗಾಳಿ ಬೆಂಬಲವಾಗಲುರಿಯಚ । ಡಾಳವನು ನಿರ್ವೈಸಬಹುದೆ ವಿ । ಕಾಳಿಸಿತಲೈ ನಿಮ್ಮ ಗಾರುಡವೆಂದನಾನೃಪತಿ ॥೧೫॥ ಎನಲು ಗರ್ಜಿಸುತರಸ ಮುರರಿಪು । ಜನುಗಿದೊಡೆ ಗಿರಿ ಜರಿವುದೇ ಯಮ । ತನುಜಭೀಮಾರ್ಜುನರು ಹಿಡಿದಿರೆ ಗಗನವಡಗುವುದೇ ॥ ದನುಜರಿಪುವಿನೊಳೇನಹುದು ಬರ । ಲನಿಮಿಷರು ನೆರವಾಗಿ ರಣದಲಿ । ಜನಪ ನೋಡೆಂದರು ಜಯದ್ರಥಸೌಬಲಾದಿಗಳು ॥೧೬॥ ಕೊರತೆಯಲ್ಲಿದು ನಿನ್ನ ಸಾವ್ಕಂ । ಡರದೆವಿ ವರತಿಬಲರು ಕೃಷ್ಣನ । ಬರಿಸಹಾಯದಲೇನು ಭೀಮಾರ್ಜುನರ ಬಲುಹೇನು ॥ ನೆರವಣಿಗೆಯುಳ್ಳವರಲೈ ಹೊ । ಕ್ಕಿರಿದರಣಹಸಿಯುಂಟೇ ನೀ । ವಂಯಿರೇ ಭೂಪಾಲಯೆಂದನು ನಗುತ ಗಾಂಗೇಯ ॥೧೭॥ ಇವರ ಬಲುಹಂತಿರಲಿ ಸಾಕಿ । ನ್ನವರ ಕರೆಸು ವಿರೋಧಬಂಧ । ವ್ಯವಹೃತಿಗೆ ಫಲವಿಲ್ಲ ಮೂಲಚ್ಛೇದಕರ್ಮವಿದು ॥ ಅವರು ಮುನ್ನತಿಬಲರು ಕೃಷ್ಣನ । ಹವಣ ನೀನೇ ಬಲ್ಲೆಯಿನ್ನೀ । ಸವಡಿಪಾಳಿಯ ಸೋಕು ಲೇಸಲ್ಲೆಂದನಾಭೀಷ್ಮ ॥೧೮॥ ಕರೆಸು ವಿದುರನ ಕಳುಹಿ ವಾರಣ । ಪುರದ ರಾಜ್ಯವಿಭಾಗವನು ವಿ । ಸ್ತರಿಸಿ ಕೊಡು ಭಂಡಾರವನು ದಾಯಾದಮಾರ್ಗದಲಿ ॥ ನರಯುಧಿಷ್ಠಿರಭೀಮರನು ನೀ । ಬರಿಸು ನಿಮ್ಮವಗುಣವ ನೋಡದೆ । ಬೆರಸಿ ಕೊಡುವೆವು ಕೂಡಿ ಬದುಕುವುದೆಂದನಾಭೀಷ್ಮ ॥೧೯॥ ಕರೆಸಿಕೊಡಿರೈ ನಿಮ್ಮ ಚಿತ್ತಕೆ । ಬರಿಸಿ ನಡಸುವೆನೆನ್ನ ಮಕ್ಕಳ । ದುರುಳತನದಿಂದಾದಹಂದಣ ಮಕ್ಕಳಾಟಿಕೆಯ ॥ ಮರೆದು ಕಳೆಯಲಿ ಪಾಂಡುನಂದನ । ರೆರವಿಗರ ಬಾವಿದುರ ಭೀಷ್ಮನ । ಪರಮಮತವೇ ನನ್ನ ಮತ ಹೋಗೆಂದ ಧೃತರಾಷ್ಟ್ರ ॥೨೦॥ ಕಳುಹಿದರು ವಿದುರನನು ಬುದ್ಧಿಯ । ಕಲಿಸಿ ಭೀಷ್ಮಾದಿಗಳು ಪಯಣದ । ಲಲಿತಸನ್ನಾಹದೊಳು ಪರುಠವಿಸಿದನು ಪಾವುಡವ ॥ ಬಳಿಕ ಸುಮುಹೂರ್ತದಲಿ ವಿಪ್ರಾ । ವಳಿಗಳಾಶೀರ್ವಾದದಲಿ ಮಂ । ಗಳತೆ ಮಿಗಿಲೊಲವಿಂದ ಹಸ್ತಿನಪುರದ ಹೊರವಂಟ ॥೨೧॥ ಕೇಳು ಭೂಪತಿ ಹಲವುಪಯಣದ । ಮೇಲೆ ಪಯಣದಲೈದಿದನು ಪಾಂ । ಚಾಲಪುರವನು ಬಂದನರಮನೆಗಧಿಕಹರ್ಷದಲಿ ॥ ಕೇಳಿದರು ಕೌಂತೇಯರೀತನ । ಲಾಲಿಸಿದರಿದಿರೈದಿ ತನುಪುಳ । ಕಾಳಿಯಲಿ ಮೈ ಮುಳುಗೆ ತೆಗೆದಪ್ಪಿದರು ತಮುತಮಗೆ ॥೨೨॥ ಕ್ಷೇಮವನು ಕುಶಲವನು ಬಂಧು । ಸ್ತೋಮದಲಿ ಕೇಳಿದರು ತಮ್ಮ । ಕ್ಷೇಮಕುಶಲವ ಹೇಳಿದರು ಪೂರ್ವಾಪರಸ್ಥಿತಿಯ ॥ ಭೂಮಿಪತಿ ಚಿತ್ತೈಸು ಬಳಿಕನ । ರಾಮಣೀಯಕಯಾದವೇಂದ್ರಶಿ । ರೋಮಣಿಯ ಸಂಮೇಳವನು ಹೇಳಿದನು ವಿದುರಂಗೆ ॥೨೩॥ ತಂದಪಾವುಡವನಿತುವನು ಯಮ । ನಂದನಂಗೊಪ್ಪಿಸಿದ ದ್ರುಪದಮು । ಕುಂದಧೃಷ್ಟದ್ಯುಮ್ನಕಂದರ್ಪಾನಿರುದ್ಧರಿಗೆ ॥ ತಂದವಸ್ತುವನಿತ್ತವನು ಸಾ । ನಂದದಲಿ ನೀಡಿದನು ನಗುತರ । ವಿಂದನಾಭನ ಪದಕೆ ಮೈಯಿಕ್ಕಿದನು ಭಕ್ತಿಯಲಿ ॥೨೪॥ ತೆಗೆದು ತಕ್ಕೈಸಿದನು ಭೀಷ್ಮಾ । ದಿಗಳ ಕುಶಲವ ಕೇಳಿದನು ನಸು । ನಗುತ ಮೈದಡವಿದನು ವಿದುರನನಾಕೃಪಾಜಲಧಿ ॥ ವಿಗಡನಾಧೃತರಾಷ್ಟ್ರನೀ ಬಂ । ಧುಗಳ ನೆನೆವನೆ ಪಾಂಡುಸುತರಿಗೆ । ಸೊಗಸುವನೆ ನೀ ಬಂದಲೇಸಾಯ್ತೆಂದನಸುರಾರಿ ॥೨೫॥ ಕಳುಹಿದನು ಬೀಡಾರಕಾತನ । ಬಳಿಯ ಪರಿವಾರವನು ಮನ್ನಿಸಿ । ಬಳಿಕ ಮರುದಿನ ಮೇಳವಿಸಿದರು ಮಂತ್ರಶಾಲೆಯಲಿ ॥ ತಿಳುಹಿದನು ಧೃತರಾ

ಷ್ಟ್ರಭೀಷ್ಮರ । ಲಲಿತಮತವನುಬಂಧುವರ್ಗ । ಸ್ಖಲಿತವನು ಸೈರಿಸುವುದೆಂದನು ವಿನಯದಲಿ ವಿದುರ॥ ಕರೆಸಿದನು ಧೃತರಾಷ್ಟ್ರಸಾತನ । ಚರಣವನು ಕಾಬುದು ನದೀಸುತ । ಗುರುಕೃಪರು ನಿಮಗೊಳ್ಳಿದರು ನೀವಖಿಳರಾಜ್ಯದಲಿ ॥೨೭॥ ಮುರಹರನನ ಹುದೆನಿಸಿ ಭೂಮೀ । ಶ್ವರರ ಮೆಚ್ಚಿಸಿ ಭೀಮನನು ಮನ । ಬರಿಸಿ ಪಾರ್ಥನನೊಲಿಸಿ ಮಾದ್ರೀಸುತರನೊಡಬಡಿಸಿ ॥ ಅರಸಿಗಭಿಮತವೆನಿಸಿ ಪಾಂಚಾ । ಲರಿಗೆ ಕಾರ್ಯವಿದೆನಿಸಿ ಕುಂತಿಗೆ । ಪರಮಹರುಷವ ರಚಿಸಿ ನುಡಿದನು ಸಂಧಿಯನುವಿದುರ ॥೨೮॥ ಕದಡು ತಿಳಿದುದು ಕಾರ್ಯಗತಿಗಾ । ಸ್ಪದವಕೊಟ್ಟರು ಬಳಿಕ ಸುಮುಹೂ । ರ್ತದಲಿ ಪಯಣವ ಮಾಡಿದರು ಪಾಂಚಾಲದಳಸಹಿತ ॥ ಯದುಶಿರೋಮಣಿವೆರಸಿ ಬಹುಪಯ । ಣದಲಿ ಬಂದರು ಮೇಲೆ ಕೌರವ । ರಿದಿರುಗೊಂಡರು ಕೂಡೆಹೊಕ್ಕರು ಹಸ್ತಿನಾಪುರವ ॥೨೯॥ ಬಂದು ಕಾಣಿಕೆಗೊಟ್ಟು ಗಂಗಾ । ನಂದನ ಧೃತರಾಷ್ಟ್ರನನುಸಾ । ನಂದದಲಿ ಗಾಂಧಾರಿಯನು ಗುರುಗೌತಮಾದಿಗಳ ॥ ವಂದಿಸಿದರಿವರೈವರವರಾ । ನಂದಜಲಪರಿಲುಳಿತನಯನಾ । ಸ್ಪಂದ ಪರಿತೋಷದಲಿ ತೆಗೆದಪ್ಪಿದರು ಪಾಂಡವರ ॥೩೦॥ ಕರೆಸಿ ತನ್ನ ಕುಮಾರಕರನೂ । ರ್ವರನು ಕಾಣಿಸಿದನು ಪರಸ್ಪರ । ಪರಮಸಂಪ್ರೀತಿಗಳ ನಿಬಿಡಾಲಿಂಗನೋತ್ಸವದ ॥ ದರುಶನೋಚಿತಮಾನ್ಯಮಾನ । ಸ್ಫುರಣದಲಿ ವಿಸ್ತರಿಸಿ ಸೈಂಧವ । ಗುರುತನುಜರಾಧೇಯಸೌಬಲರಪ್ಪಿದರು ನೃಪನ ॥೩೧॥ ಯಾದವರು ಪಾಂಚಾಲರಲಿ ಸಂ । ಪಾದಿಸಿದುದನ್ಯೋನ್ಯಘನಸಂ । ವಾದಸುಖಸಂಪ್ರೀತಿಮಿರೆಯಲ್ಕಿಪ್ಪಸತ್ಕಾರ ॥ ಆದುದುತ್ಸವ ಜನಜನಿತ ಹರು । ಷೋದಧಿಯ ಹೊನಲಿನಲಿ ಹಿಂದಣ । ಭೇದಕರ್ದಮವಡಗಿಪೋಯ್ತವನೀಶಕೇಳೆಂದ ॥೩೨॥ ವೀತಭಯರನ್ಯೋನ್ಯಪರಮ । ಪ್ರೀತಿಗಳ ಬೆಳವಿಗೆಯಲಿದ್ದರು । ಭೂತಳಾಧಿಪರೈದುಸಂವತ್ಸರಗಳೊಂಪಾಗಿ ॥ ಖ್ಯಾತವಿದುಪಾಂಚಾಲಪುರದೊಳ । ತೀತವಾಯಿತ್ತೊಂದುವರುಷವ । ಧೀತ್ರಧರ್ಮಸುತಂಗೆಮೂವತ್ತಾರುಸಮನಾಯ್ತು ... ... ... ... ॥೩೩॥

ಅಂತು ಸಂಧಿ ೧೭ ಕ್ಕೆ ಪದ ೭೮೯ ಕ್ಕಂ ಮಂಗಳಮಸ್ತು.

## ಹದಿನೆಂಟನೆಯ ಸಂಧಿ.

ಸೂಚನೆ॥ ದಾಯಭಾಗದೊಳಖಿಳರಾಜ್ಯ । ಶ್ರೀಯ ಹಸುಗೆಯ ಕೊಂಡು ಪಾಂಡವ ।
ರಾಯರೊಪ್ಪಿದರಿಂದ್ರನಿರ್ಮಿತರಾಜಧಾನಿಯಲಿ ॥

ಕೇಳು ಜನಮೇಜಯಧರಿತ್ರೀ । ಪಾಲ ನಿಮ್ಮಯ ಪೂರ್ವಜರು ಸಮ । ಪಾಳಿಗಳ ಸೇರುವೆಯೊಳಿದ್ದರು ಸಾನುರಾಗದಲಿ ॥ ಬೇಳವೇಳದ ಬೇಟೆಗಳ ವೈ । ಹಾಳಿಗಳ ಜೂಜಿನ ಸಮಂಜಸ । ಲೀಲೆಗಳ ಕೇಳಿಯಲಿ ಕಳಿದರು ವರುಷಪಂಚಕವ ॥೧॥ ಕರೆಸಿದನು ಧೃತರಾಷ್ಟ್ರಭೂಪತಿ । ಮುರಹ

ರನ ದ್ರುಪದನ ಯುಧಿಷ್ಠಿರ । ನರವೃಕೋದರಭೀಷ್ಮಗುರುಕೃಪಕರ್ಣಶಕುನಿಗಳ ॥ ಎರಡುಭಾಗವ ಮಾಡಿ ವಿಶ್ವಂ । ಭರೆಯ ರಾಜ್ಯವನುಭಯರಾಯರು । ಹೊರೆಹೊಗದೆ ಪಾಲಿಸಲಿ ಪಂತದೊಳೆಂದ ನಂಧನೃಪ ॥೨॥ ಅಹುದು ಪೊಲ್ಲೆಪವಲ್ಲ ಬುಲ್ಲರ । ಕುಹಕ ಕೊಳ್ಳದು ಬೇರೆರಾಜ್ಯದೊ । ಳಿಹರೆ ಸೇರುವೆ ದೃಢವಹುದು ದಾಯಾದಮಾರ್ಗದಲಿ ॥ ಗಹನವೇಕಾಮಿಷಸಮುದ್ಭವ । ದಹಿತತನಮುತ್ತರ ಣವತಿದ. । ಸ್ನಹವಲೇ ನೀ ನೆನೆದಪದ ಲೇಸೆಂದನಾಭೀಷ್ಮ ॥೩॥ ಅರಸ ಕೇಳ್ಳೆ ಸಕಲರಾಜ್ಯವ । ನೆರಡು ಭಾಗವ ಮಾಡಿ ಪೂರ್ವೋ । ತ್ತರದ ದಕ್ಷಿಣಪಶ್ಚಿಮಂಗಳ ಹೆಚ್ಚುಕುಂದುಗಳ ॥ ಸ್ಫುರಿನಗರಬುರ್ವೃತ ಮುಷಂಬ । ಸ್ಫುರಿತಪೀಠಗ್ರಾಮವೆಂಬವ । ನೆರಡುಭಾಗವ ಮಾಡಿದರು ಕೂಡಿದರು ಸಮವಾಗಿ ॥೪॥ ಪುರೆಸುರೇಂದ್ರಪ್ರಸ್ಥ ವರಸಂ । ಗಿರವು ಧರ್ಮಸುತಂಗೆ ಹಸ್ತಿನ । ಪುರಸುಯೋಧನಗುಭಯರಾಯ ರ ರಾಜಧಾನಿಗಳು ॥ ಚರಮದಕ್ಷಿಣವಾಗಿ ಪೂರ್ವೋ । ತ್ತರವಿಲಂಬಿತವಾಗಿ ಓಮುಸಾ । ಗರಮಧ್ಯದ ಭೂಮಿಯನು ಸೇರಿಸಿದರೆರಡಾಗಿ ॥೫॥ ವಾರಣಪ್ರತತಿಯಸಘಾಟದ । ವಾರುವಂಗಳ ಮಣಿಮಯ ದಹೊಂ । ದೇರುಗಳನಾಭರಣವನು ತೆಗೆಸಿದರು ಸಮನಾಗಿ ॥ ಕೌರವರುಪಾಂಡವರುಗಳ ಮನ । ದೋರೆಪೋರೆಯ ತಿಳುಹಿ ವೈರವಿ । ಕಾರವನು ಬಿಡಿಸಿದರು ಭೀಷ್ಮಾದಿಗಳು ಹರುಷದಲಿ ॥೬॥ ಬಳಿಕ ಸುಮುಹೂರ್ತದಲಿ ಪೊರಗುಡಿ । ಬಳೆಸಿ ಹೊಯ್ದುವು ರಾಣಿವಾಸವ । ನಿಳೆಯನಿಳೆಯವ ತಳಿಗೆದಂಬು ಲಮಂಗಳಾರತಿಯ ॥ ಫಲಸಮೂಹದ ಕಾಣಿಕೆಯ ಕೆ, । ಕೊಳುತ ಗಾಂಧಾರಿಗೆ ಮಹೀಶನ । ಲಲನೆ ಯರಗಭಿನಮಿಸಿ ಕಳುಹಿಸಿಕೊಂಡರುಚಿತದಲಿ ॥ ಕಳುಹಲ್ಕೆತಂದಂಧನೃಪತಿಯ । ನಿಲಿಸಿದರು ನಿಳಯು ದಲಿ ಕೌರವ । ಕುಲದ ನೂರ್ವರ ಕರ್ಣಶಕುನಿಜಯದ್ರಥಾದಿಗಳ ॥ ನಿಲಿಸಿದರು ಗಜಪುರದ ಯೋಜನ । ದಳತೆಯಲಿ ಗುರುಭೀಷ್ಮವಿದುರರು । ಕೆಲವುಪಯಣವ ಬಂದು ಕಳುಹಿಸಿಕೊಂಡರುಚಿತದಲಿ ॥೮॥ ಭೂಮಿಲಂಬದ ನೃಪರ ಬಲದು । ಪ್ಪಾಮವಿಭವದೊಳಸುರರಿಪುಸಹಿ । ತೀಮಹೀಪಾಲಕರು ಬಂದರು ಹಲವುಪಯಣದಲಿ ॥ ರಾಮಣೀಯಕರಚನೆಯಲಿ ಸು । ತ್ರಾಮನಸಗರಿಯ ಸೂತ್ರಧಾರೆಯ । ಲಾಮ ನೋಹರವಿಶ್ವಕರ್ಮವಿನಿರ್ಮಿತದಪುರಕೆ ॥೯॥ ಧರಣಿಪತಿ ಚಿತ್ರ್ರಸಿಳಾವೃತ । ವರುಷಮಧ್ಯದ ಹೇಮ ಗಿರಿಯವೊ । ಲರಮನೆಯ ಸಿರಿ ಸೋಲಿಸಿತು ಸುರರಾಜವೈಭವವ ॥ ಹರಿಯ ವೀಥಿಯ ಸೋಮವೀ ಥಿಯ । ಮುರಿವುಗಳ ಕೇರಿಗಳ ನೆಲೆಯು । ಪ್ಪರಿಗೆಗಳ ಹೊಂಗಲಸದಲಿ ಹೊಳಹೊಳೆದುದಾನಗರ ॥೧೦॥ ಹೇಮನಿರ್ಮಿತದೇವಸದನ । ಸ್ತೋಮದಲಿ ಮಣಿಮಯದ ಫಣಿಪನ । ಹೇಮವೇದಿಯ ವಿವಿಧರತ್ನಾ ವಳಿಯ ಹಸರವಲಿ ॥ ಕಾಮರಿಪುವಿಂಗೊರೆಯಕಟ್ಟವ । ಸಾಮಲೋಚನೆಯರ ವಿಲಾಸದ । ಲಾಮಹಾ ಪುರವೆಸೆದುದಿಂದ್ರಪ್ರಸ್ಥನಾಮದಲಿ ॥ ನಿತತವಿಭವದಲಿಂದ್ರನಮರಾ । ವತಿಯ ಹೊಗುವಂದದಲಿ ದ್ರುಪದದಾ । ಚ್ಯುತರು ಸಹಿತವನೀಶಹೊಕ್ಕನು ರಾಜಮಂದಿರವ ॥ ಕೃತಯುಗದೊಳಾತ್ರೇತೆಯಲಿ ಭೂ । ಗತಿಗಳಾದರನಂತಕುಂತೀ । ಸುತರ ಸಿರಿಗೆಣೆಯಾದುದಿಲ್ಲವನೀಶ ಕೇಳೆಂದ ॥೧೨॥ ಬಂದು ಕಂಡುದು ಸಕಲಪುರಜನ । ವಂದು ಕಾಣಿಕೆಯಿತ್ತು ಸುಭಟರ । ಸಂದಣಿಯ ಗಜಹಯರಥದ ಪದಧೂ ತಧೂಳಿಯಲಿ ॥ ಮಂದಿರದ ಬಾಗಿಲಗತಾಗತ । ವೃಂದದೊತ್ತೊತ್ತೆಯಲಿ ಪುರಜನ । ನಿಂದುದಲ್ಲಿಯ ದಲ್ಲಿ ಪಡೆಯದೆ ರಾಜದರ್ಶನವ ॥೧೩॥ ಅತಿಶಯವನೇನೆಂಬೆನಮರಾ । ವತಿಯ ಭೇಗೇಗಾವತಿಯ

ಮುಖ್ಯ । ಸ್ಥಿತದ ನಾಯಕರತುನದಂತಿರೆ ಮೆರೆದುದಾನಗರ ॥ ಸತತವೀಪರಿವಿಭವವೀಜನ । ವಿತತಿಗಳ ಸನ್ಮಾರ್ಗದಲಿ ಸಂ । ಗತಿಗಳೀವಿಸ್ತಾರವೀಪರಿಭೂಪಕೇಳೆಂದ ॥೧೪॥ ದ್ರುಪದಧೃಷ್ಟದ್ಯುಮ್ನಮೊದಲಾ । ದಪರಿಮಿತಬಾಂಧವನಿಕಾಯವ । ನೃಪಚರಿಸಿ ಕಳುಹಿದನು ಭೂಪತಿ ಪಂಚಕೈಕಯರ ॥ ಪ್ರಿಯರುಳಕಾರುಣ್ಯದಲಿ ಪಾಂಡವ । ನೃಪಜನವ ಸಂತೈಸಿ ದಾನವ । ರಿಪು ನಿಜಾವಾಸಕ್ಕೆ ಬಿಜಯಂಗೈಯಲನುವಾದ ॥೧೫॥ ಕರೆಸಿ ಕುಂತೀ ದ್ರೌಪದಿಯರನು । ಕರುಣವಚನಾಮೃತದ ರಸದಲಿ । ಹೊರೆದು ಕೃತ್ರದಾಯಾದವಿಷಮವಿರೋಧವರ್ತನವ ॥ ಅರುಹಿ ಸುಯ್ಯಾನದ ಸಮಾಹಿತ । ತರದ ಬುದ್ಧಿಯಗಲಿಸಿ ಯಾದವ । ರರಸ ಬಿಜಯಂಗೈದನಾದ್ವಾರಕೆಗೆ ಹರುಷದಲಿ ॥೧೬॥ ಕಳುಹಿದನು ಪಾಂಚಾಲರನು ಯಮು । ತಿಲಕನೊದಲಾದಖಿಳಬಾಂಧವ । ಕುಲವನುತ್ಸಾಹದಲಿ ಹೊರೆದನು ನಾಡಬೀಡುಗಳ ॥ ಬೆಳುಗವತೆಯನ್ಯಾಯವಾರೆಡೆ । ಕಳವುದಳವುಳಬಾತ್ರಿಡಾವರ । ಕೊಲೆಹುಸಿಗಳಿಲ್ಲಿವರ ರಾಜ್ಯದೊಳರಸ ಕೇಳೆಂದ ॥೧೭॥ ಯಾಗವಹ್ನಿಯ ಧೂಮದಲಿ ದಿಗ । ಭಾಗವಿವರಣವಡಗಿತು ಹವಿ । ರ್ಭಾಗಭೋಜನದಿಂದಲಾಮರಪರ್ಜನ್ಯವರುಣರಿಗೆ॥ಯಾಗದಕ್ಷಿಣೆಗಳಲಿ ಬಹಳ । ತ್ಯಾಗದಾನಕೆ ಲಕ್ಷಕಟಿಸಿ ತಾ । ವಾಗಕೈಯಾನರು ಯುಧಿಷ್ಠಿರನೃಪನ ರಾಜ್ಯದಲಿ ॥೧೮॥ ಬಲಿಯ ನಹುಷನ ದುಂದುಮಾರನ । ನಳನ ಸಗರನ ನೃಗನ ಶಾಕುಂ । ತಳನ ಪುರುಕುತ್ಸನ ಹರಿಶ್ಚಂದ್ರನ ಪುರೂರವನ ॥ ಇಳೆಯವಲ್ಲಭರೆನಿಪರಾಜಾ । ವಳಿಯ ಮನವುಚ್ಚಗಳನುರ್ವೀ । ಲಲನೆ ಮರೆದಳು ಮೆರೆದಳಾಧರ್ಮಜನರಾಜ್ಯದಲಿ ॥೧೯॥ ಆದಿಯುಗದೊಳು ಧರ್ಮವಿದ್ದುದು । ಪಾದನಾಲ್ಕರ ಗಾಢಗತಿಯಲಿ । ಪಾದಪೂರ್ಣೆಯವಾದುದಾತ್ರೇತಾಪ್ರಭಾವದಲಿ ॥ ಪಾದವೆರಡತಗಿದವುದ್ವಾಪರ । ದಾದಿಯಲ್ಲಿ ಯುಧಿಷ್ಠಿರನ ರಾ । ಜ್ಯೋದಯದಲಂಕುರಿಸಿ ಸುಳಿವುದು ನಾಲ್ಕುಪಾದದಲಿ ॥೨೦॥ ಅರಸ ಚಿತ್ತೈಸಾಯುಧಿಷ್ಠಿರ । ನರಪತಿಯ ರಾಜ್ಯಪ್ರಭಾವೋ । ತ್ಕರುಷವಿಸ್ತರವೇನನೆಂಬೆನು ಸಾಕದಂತಿರಲಿ ॥ ಪರಮವಿಭವದೊಳೊಂದುದಿನವೈ । ವರು ನಿಜಾಸ್ಥಾನದಲಿ ಹರಿವಿಷ್ಟರದೊಳಿರ್ದರು ಕಂಡರತಿದೂರದಲಿ ನಾರದನ ॥೨೧॥ ಬಂದನಿವರೋಲಗಕೆ ಗಗನದಿ । ನಿಂದುಮಂಡಲವಿಳಿವವೊಲ್ನೃಪ । ವೃಂದವೆದ್ದಭಿನಮಿಸಿದುದು ಪದಯುಗಕೆ ಮುನಿಪತಿಯಾ ॥ ಇಂದು ಧನ್ಯರು ನಾವಲಾ ಮುನಿ । ವಂದ್ಯದರ್ಶನವಾಯ್ತು ಪೂರ್ವವಿ । ದೆಂದು ಕುಂತೀತನುಜರುದಿರೆದ್ದಂಘ್ರಿಗೆರಗಿದರು ॥೨೨॥ ಹರಸಿದನು ಮುನಿಯರ್ಘ್ಯಪಾದ್ಯೋ । ತ್ಕರವ ಮಧುಪರ್ಕಾಸನಾದಿಯ । ನರಸಮಾಡಿದನವರಮುನಿ ಕೈಕೊಂಡ ಹರುಷದಲಿ ॥ ಪರಿಮಿತದಸಮಯದ ವಚೋವಿ । ಸ್ತರಣವುಂಟೆನೆ ರಾಯನೋಲಗ । ಹರದ್ರುದವನೀಪಾಲ ಬಿನ್ನಹಮಾಡಿದನು ಮುನಿಗೆ ॥ ಏನಿ ಬಿಜಯಂಗೈದಹದನೆನ । ಗೇನನುಗ್ರಹವಚನ ನಿಮ್ಮಡಿ । ಗೇನಪಾಬೆಸಗೈವುದೆನಗಾಜ್ಞಾಪಿಸುವುದೆಂದು ॥ ನೀನಘಾಟದ ರಾಜಋಷಿ ನೀ । ಮಾನವನೆ ಧರ್ಮಸ್ವರೂಪನು । ನೀನು ಭವಪಾಲೋಕಸಾರ್ಥವ ನಮ್ಮಬರವೆಂದ ॥೨೪॥ ಅನುಜರೆನು ಹೇಳುವೊಡೆ ಭೀಮಾ । ರ್ಜುನರು ವಧುವಾರೆಂಬೊಡಮರಾಂಗನೆಯರಿಗೆ ನೂರೆಂಟುಮಡಿಯಾದ್ರೌಪದೀದೇವಿ ॥ ಘನಸಹಾಯನು ಹವಣಿನವನೆಂ । ಬೆನೆ ಚತುರ್ದಶಭುವನಪತಿ ನೃಪ । ನಿನಗೆ ಪಾಡೇಪನ್ನಗೇಂದ್ರಸುರೇಂದ್ರರಿಂದಿನಲಿ ॥೨೫॥ ಅದರೊಡ್ಡೊಂದುದೈವರಿಗೆ ವಧು । ವಾವಶ್ಚೌತ್ರಿಸು ಮಹೇಶ್ವರ । ನಾಪಿಯಲಿ ಕರುಣಿಸಿದವರದಲಿ ಪುಣ್ಯಕಥನಪಿದು ॥

ಮೇದಿನಿಯೊಳೇಕಾವಿಷಸ್ಥಿತಿ । ಯಾದಿಯಿಂದು ವಿಗ್ರಹಕೆ ತಮ್ಮೊಳು । ಕಾದಿವರು ಸುಂದೋಪಸುಂದರು ಭೂಪ ಕೇಳೆಂದ ॥೨೭॥ ಅರಸುಗಳು ತಾವಿಬ್ಬರೇಕೋ । ದರರು ಬಲುಗೈಗಳು ಸುರಾಸುರ । ನರರೊಳಡು ಪಾಯದಲಿ ವೆಂಟಣಿಸಿದರು ಭೂತಳವ ॥ ನೆರೆದು ಸುರರು ಸರೋಜಪೀಠಂ । ಗರುಹಿದರು ಬಳಿಕಾತ ನಿವರನು । ಪರಿಹರಿಸುವುದಕೇನುಪಾಯವೆನುತ್ತ ಚಿಂತಿಸಿದ ॥೨೮॥ ಬಳಿಕಸಂಖ್ಯಾತದ ಸುರೋರಗ । ಲಲನೆಯರಲಿ ತಿಲಾಂಶಮಾತ್ರದ । ಚಲುವಿಕೆಯನೇ ತೆಗೆದು ನಿರ್ಮಿಸಿದನು ವರಾಂಗನೆಯ ॥ ಬೆಳಗಿನಾ ಕೆಯ ಹೆಸರು ದಿವಿಜಾ । ವಳಿಯೊಳ್ಕೆದೆ ತಿಲೋತ್ತಮಾಹ್ವಯ । ದಳಿಕುಲಾಳಕಿಗಬುಜಭವ ನೇಮಿಸಿ ದನೀಹದನ ॥ ಅವರ ಕೆಡಿಸುವಹದನ ಕೈಕೊಂ । ಡವನಿಗೈತಂದಳು ವಿನೋದದೊ । ಳಿವದಿರಿದ್ದರು ಬನದೊಳಗೆ ಮದಿರಾಮದೋದ್ಧತರು ॥ ಯುವತಿಯನು ಕಂಡರು ಕಟಾಕ್ಷದ । ಸವಡಿಗೋಲಿಂದೊಡೆ ದುದೆದೆ ಹರಿ । ದವರು ಹಿಡಿದರು ವಾಮದಕ್ಷಿಣಕರಗಳಂಗನೆಯಾ ॥೨೯॥ ಎನಗೆ ವಧು ತಾ ಮುನ್ನ ಕಂಡೆನು । ತನಗೆ ಸತಿ ತಾ ಮುನ್ನ ಹಿಡಿದೆನು । ತನಗೆನಗೆ ನೀ ನಿಲ್ಲು ನೀ ನಿಲ್ಲೆನುತ ಹೊಯ್ದಾಡಿ ॥ ಜನಪರಿಬ್ಬರು ಮಡಿಯಲಮರಾಂ । ಗನೆ ಮುಗುಳ್ನಗೆನಗುತಲಬುಜಾ । ಸನನ ಹೊರೆಗೈದಿದಳು ಕುಂತೀತನುಜ ಕೇಳೆಂದ ॥೩೦॥ ಅದರಿನೀಜೀವರಿಗೆ ದುಸ್ಥಿತಿ । ಸುದತಿಯರದೆಸೆಯಿಂದ ರಾಜ್ಯಪ । ಹುದುವಿನಲಿ ಮೋಹಾರ್ಥಗತಿಯಲನರ್ಥತಪ್ಪದಲೇ ॥ ಸುದತಿ ನಿಮ್ಮೈವರಿಗೆಯಿಹಾದ್ರೌ । ಪದಿ ಮಹಾಸತಿ ರಾಗಲೋಭದ । ಕದನದಲಿ ಕಾಳಗದಿದ್ದೊಡೆ ತುಟಿಗೆ ಲೇಸೆಂದ ॥೩೧॥ ಅರಸ ಚಿತ್ತೈಸೊಂದುವತ್ಸರ । ವಿರಲಿ ನಿಮ್ಮೊಬ್ಬರಲಿ ಸತಿ ಮರು । ವರುಷಕೊಬ್ಬನೊಳಿಂತುಪಂಚ ಕಕೈದುವರುಷದಲಿ ॥ ಅರಸಿಯನು ಪತಿಸಹಿತೆ ಮಂಚದೊ । ಳಿರಲು ಕಾಬುದು ಸಲ್ಲದದು ಗೋ । ಚರಿಸಿದೊಡೆ ಬಳಿಕದಕೆ ಪ್ರಾಯಶ್ಚಿತ್ತವಿಧಿಯುಂಟು ॥೩೨॥ ಆರು ಕಂಡರು ಆತನೊಬ್ಬನೆ । ಧಾರುಣಿಯಲಿ ಸುತೀರ್ಥಯಾತ್ರಾ । ಭಾರದಲಿ ತಿರುಗುವದು ಸುತ್ತಲು ವರುಷವೊಂದರಲಿ ॥ ಚಾರುನಿಷ್ಕೃತಿಯೆನಲು ಮುದದಲಿ । ನಾರದನ ದಿವ್ಯೋಪದೇಶಕೆ । ಸಾರಹೃದಯ ಹಸಾದವೆಂದನು ತಮ್ಮದಿರುಸಹಿತ ॥೩೩॥ ಮಂಗಳವು ನಿಮಗೆಂದು ಹಂಸೆಯ । ಬೆಂಗೆ ಹಾಯ್ದನು ಬಳಿಕ ನಭದೊಳು । ಭಂಗಮುನಿಯಡಗಿದನು ತಮ್ಮೊಳಗೆಂದರೀನೃಪರು ॥ ಅಂಗನಾವಿಷಯದಲಿ ಸೀಮಾ । ಸಂಗತಿಯ ನೇರಿಸಿದನೈ ಮುನಿ । ಪುಂಗವನ ಕರುಣದಲಿ ಗದುಗಿನವೀರನಾರಯಣ ॥೩೪॥

ಅಂತು ಸಂಧಿ ೧೮ ಕ್ಕೆ ಪದ ೮೩೪ ಕ್ಕಂ ಮಂಗಳಮಸ್ತು.

# ಹತ್ತೊಂಭತ್ತನೆಯ ಸಂಧಿ.

ಸೂಚನೆ. ಅಸುರಾರಿವಿರೋಧಿಪುರದಲಿ ವಾಸವಾತ್ಮಜ ಮದುವೆಯಾಗಿ ವಿ
ಲಾಸದಲಿ ಹೊಕ್ಕನು ಸುಭದ್ರಾಸಹಿತಸಿಹಪುರವ ॥

ಪದ॥ ಕೇಳು ಜನಮೇಜಯಧರಿತ್ರೀ । ಪಾಲ ನಾರದಮುನಿ ನರೇಂದ್ರನ । ಬೀಳುಕೊಂಡನು ಚಣಿಯಾತಿಯಲಿ ಚಿಗಿದನಂಬರಕೆ ॥ ಮೇಲೆ ಬಳಿಕೊಂದಪವಗಡವನೇ । ಕೇಳುವೆನು ಪಾರ್ಥಂಗೆ ಬಂದುದ। ನಾಲಿಯ್ಯೆಸಲಿ ವಿದೇಶಭ್ರಮಣವಾಯ್ತೆಂದ ॥೧॥ ನರನ ವಳಿತದೊಳೊಂದುಸಮಯದೊ । ಳಿರುಳು ಘೋರದಲಿ ಭೂ । ಸುರರು ಬಾಯ್ಬಿಡುತ್ತೈದೆಯಿಂದ್ರಪ್ರಸ್ಥಪುರವರವ ॥ ಮೊರೆಯ ಬಾಯ್ಗಳ ಹುಯ್ಲುಗಳ । ಹುದವ್ಯೆಗಳ ಸೆಕೆಯ ಸುಯ್ಲುಗಳ । ತರವಬ್ಬೆಗಳ ಕಳಕಳವ ಕೇಳಿದನು ಕಲಿಪಾರ್ಥ ॥೨॥ ಕೇಳಿ ರ ಬಾಧೆಗಳನಾ । ದಣಿ ಕೇಳಿದು ಸಂತವಿಸಿ ಪರಿ । ಹರಿಸಿಕೊಡುವೆನು ದುಷ್ಟಪಾಟಚ್ಚರ ॥ ಮರಳಿನೀವೆಂದವರ ಬೀಳ್ಕೊಂ । ಡುನಿವಾರಣ ಬಂದನಗ್ರದ । ಶರಧನುವ ಕೊಳ ಯನ ಸೆಜ್ಜೆಯರವನೆಗೆ ॥೩॥ ಸಮಯವೇನೆನೆ ಜೀಯ ರಾಯನು । ರಮಣಿಯೊಡನೇಕಾಂ ತ ಪ್ರಮಿತಹರುಷನು ನಿಂದು ನೆನೆದನು ತನ್ನ ಮನದೊಳಗೆ ॥ ಅಮರಮುನಿಮತವೊಂದು ವ ರಮಣಿರಮಣರದರುಶನವಿದ । ಕ್ರಮವೆನಿಪ್ರದೀವಚನ ಸಂಘಟಿಸಿತ್ತು ತನಗೆಂದ ॥೪॥ ಕ ರಲಿ ಖಳರಭಿ । ಯೋಗವಾರ್ತಾಶ್ರವಣ ಬಹುದುರಿ । ತಾಗಮವು ತನಗಾವುದೋ ಕರ್ತವ್ಯ ॥ ಈಗಲೀಸಂದಿಗ್ಧಸಮಯ । ತ್ಯಾಗಧರ್ಮವಿರೋಧಕೃತ್ಯವಿ । ಭಾಗವಾವುದೊ ಶಾಸ್ತ್ರದೃಷ್ಟಿಯೊಳೆಂದು ಚಿಂತಿಸಿದ ॥೫॥ ಎರಡುಪಾತ್ರಕವಿವೆ ಬಲಾಬಲ । ವೆರಡರೊಳು ಸಾಮಾನ್ಯಪಕ್ಷಾಂ । ತರವಿಶೇಷವದಾವುದವರೊಳಗೆಂದು ಚಿತ್ತದಲಿ ॥ ಒರೆದೊರೆದು ನೋಡಿದನು ತೂಕವ । ಬರೆಸಿ ಕಾಹಿನ ಕಂದುಕಂದನು । ಪಾಕಿಸುತ ನಿಶ್ಚೈಸಿ ತಿಳಿದನು ತನ್ನ ಮನದೊಳಗೆ ॥೬॥ ಅರಸನರಸಿಯರೊಂದು ಮಂಚದೊಳಿರಲು ಕಂಡೊಡೆ ಭೂಪ್ರದಕ್ಷಿಣ । ವರುಷವೊಂದರೊಳಿದಕೆ ಪ್ರಾಯಶ್ಚಿತ್ತವಿಧಿಯುಂಟು॥ ಧರಣಿಯಮರರುಪಪ್ಲವವ ಪರಿ । ಹರಿಸದಿರಲಾಪಾತಕಕೆ ಸಂ । ಹರಣವುಂಟೇ ಶಾಸ್ತ್ರದೃಷ್ಟಿಯೊಳೆಂದು ಚಿಂತಿಸಿದ ॥೭॥ ಎನುತ ನರನೊಳಹೊಕ್ಕು ತನ್ನಯ । ಧನುಶರಂಗಳ ಕೊಂಡು ನುಡಿದನು । ಮುನಿವಚನಸಂಘಟಿತನೃಪದಂಪತಿವಿಲೋಕನದ ॥ ಘನದುರಿತನಿಷ್ಕೃತಿಗೆ ವರುಷದೊ । ಳೆನಗೆ ದೇಶಭ್ರಮಣವಾಯ್ತಿಲಿ । ಜನಪ ಚಿಂತಿಸಬೇಡೆನುತ ಹೊರವಂಟನಾಪಾರ್ಥ ॥೮॥ ಇರಿದು ಕಳ್ಳರ ಪಳ್ಳಿಗಳ ಕುರಿ । ದರಿದು ಭೂಸುರರೂರುಗಳ ಸೆರೆ । ತುರುಳಗಳನು ತಂದಿತ್ತನರ್ಜುನನಾಮಹೀಸುರರ ॥ ತುರುಗಿವಾರ್ತೀವಾದಮಳೆಗಳು । ಕರೆಯೆ ಹೆಚ್ಚಿದವೀರಕೀರ್ತಿಯ । ತೊರೆಗಳೊಳು ತೇಕಾಡುತಿರ್ದುದು ಸಕಲಭುವನನಿಕರ ॥೯॥ ಧಾರುಣೀಪತಿ ಕೇಳು ಗಂಗಾ । ತೀರಕೈದಿದನರ್ಜುನನು ಭಾ । ಗೀರಥೀಸ್ನಾನಾವಗಾಹವಿಶುದ್ಧವಿಗ್ರಹನ ॥ ದೂರದಲಿ ಕಂಡುರಗರಾಜಕುಮಾರಿ ವರಿಸಿದಳೊಲವಿನಲಿ ಜಂ । ಭಾರಿತನಯನನಿಳುಹಿದಳು ಪಾತಾಳಮಂದಿರಕೆ ॥ ವಿಭವದಲಿ ವಾಸುಕಿಯ ತಂಗಿಯ । ನುಭಯವಂಶವಿಶುದ್ಧೆ

ಯನು ಹರಿ । ನಿಭನು ಪಾಣಿಗ್ರಹಣವನು ಮಾಡಿದನು ವೊಲವಿನಲಿ ॥ ಅಭಿಮತಕ್ರೀಡಾವಿನೋದದ ।
ರಭಸದಲಿದಿನಸವೆಯೆ ಗರ್ಭ । ಪ್ರಭವವಾಯ್ತು ಕುಮಾರ ಜನಿಸಿದನುರಗನಾರಿಯಲಿ ॥೧೧॥ ಸುತನಿ
ರಾವಾನೆನಿಸಿಸಿ ತೊಳಗಿದ । ನತಿಬಹಳಬಲನಾತನನು ನಿಜ । ಸತಿಯನಲ್ಲಿಯೆ ನಿಲಿಸಿ ಕಳುಹಿಸಿಕೊಂಡ
ನುಚಿತದಲಿ ॥ ಕ್ಷಿತಿಗೆ ಬಂದನು ಜಾಹ್ನವೀಸಂ । ಗತಸಮುದ್ರವತೀರದಲಿ ಸೇ । ವಿತಸಕಲತೀರ್ಥೌಘನುತ್ಕಟ
ದನಿಂಪ್ರಟಬಜ್ಮುಖವ ॥೧೨॥ ಅರಸ ಕೇಳುತ್ತರದಪೂರ್ವದ । ಪರಮತೀರ್ಥವ್ರಾತವನು ವಿ । ಸ್ತರಿಸಿ
ಸಾಗರತೀರದಲಿ ದಕ್ಷಿಣದಿಶಾವರಕೆ ॥ ತಿರುಗಿದನು ತತ್ಪಂಚಗೋದಾ । ವರಿಯ ತೀರಕೆ ತುಂಗಭದ್ರಾ ।
ವರನದಿಯನುತ್ತರಿಸಿ ಕಾಂಚೀನಗರಕೈತಂದ ॥೧೩॥ ಆನಗರದಧಿದೈವನಿಕರಕೆ । ತಾ ನಮಿಸಿ ತತ್ಸಕಲ
ತೀರ್ಥ । ಸ್ನಾನಕರ್ಮವ ರಚಿಸಿ ಬಂದನು ಜಲಧಿತೀರದಲಿ ॥ ವಾನರರ ಭುಜಬಲಸಮಾಖ್ಯಾ । ನೃಪ
ಶಾಸನವನು ಸುರಾರಿವಿ । ಶಾಸನರಪಿರಾಹವನು ಕಂಡನು ಸೇತುಬಂಧನವ ॥೧೪॥ ವರಧನುಷ್ಕೋಟಿ
ಯಲಿ ಮಿಂದು । ಸ್ವರಸದಾಂಬುಜಕೆರಗಿ ತತ್ಪರಿ । ಸರದ ಪಂಚತಟಾಕದಲಿ ಘನಮಕರರೂಪದಲಿ ॥
ಸುರವಧುಗಳಿರಲವರ ಶಾಪವ । ಪರಿಹರಿಸಿ ತತ್ತೀರ್ಥಸೇವಾ । ಪರಮಪಾವನಕರಣನಾದನು ಭೂಪ
ಕೇಳೆಂದ ॥೧೫॥ ಈತನನು ಕಂಡರಿದು ಪಾಂಡ್ಯಮ । ಹೀತಳಾಧಿಪ ನಿಜಕುಮಾರಿಯ । ನೀತಗಿತ್ತನು
ಬಭ್ರುವಾಹನನಾದನಾಕೆಯಲಿ ॥ ಪ್ರೀತ ಕಳುಹಿಸಿಕೊಂಡು ದೈತ್ಯಾ । ರಾತಿಗೆರಗಿಯನಂತಶಯನ । ಖ್ಯಾತಿ
ವಿಭವವನೀಕ್ಷಿಸುತ ಹರುಷದಲಿ ನಡೆತಂದ ॥೧೬॥ ನದಿನದವನುತ್ತರಿಸಿ ಹರಿಹರ । ಪದಯುಗಳಕಭಿನ
ಮಿಸಿ ತದ್ದೇ । ಶದ ಸುತೀರ್ಥಕ್ಷೇತ್ರವೆನಿತಕ್ಕೆನಿತನಾದರಿಸಿ ॥ ಮುದದಮುಳಿವಿನಹಂಸೆಗಳ ತನಿ । ಮ
ದದ ಚಾದಗೆವಕ್ಕಿಗಳ ಮೇ । ಘದ ಸನಾದದ ಮೇಳವವ ನೋಡುತ್ತ ನಡೆತಂದ ॥೧೭॥ ಒಡ್ಡ
ವೆರೆದುದು ಮೇಘಘಟೆ ಜಿಸಿ । ಲೊಡ್ಡು ಮುರಿದುದು ಚಂದ್ರಸೂರ್ಯರ । ನಡ್ಡವಿಸಿ ಹಿಡಿಯುವಾಳ
ಹಿಡಿದವು ಮುಗಿಲ ಚೂಣಿಗಳು ॥ ಕಡ್ಡಿ ತಡೆವುದೆ ಕಡಲನುಡುಗಣ । ದೊಡ್ಡ ಕಾಣ್ಕನು ಮುಗಿಲ ಜನ
ಕಗೆ । ಲಡ್ಡಗಗಳಾದವು ಸಮಸ್ತಗ್ರಹನುತಾರೆಗಳು ॥೧೮॥ ಆಳ ಕರ ಕಟಕವನು ಸೂರ್ಯನ । ಮೇಲೆ
ಬರಹೇಳೆಂಬ ಮೇಘ ನೃ । ಪಾಲಕನಡಂಗುರವೊ ಮೊಳಗುವಪಸಿಡಿಲಿನಬ್ಬರವೊ ॥ ಆಲಿಕಲ್ಲುಗಳೊ
ಮುಗಿಲ ಮುಂಗುಡಿ ॥ ಯಾಳಹೊಯ್ಲಲಿ ಬೀಳ್ವತಾರಾ । ಮಾಲೆಗಳೊ ಜೀಮೂತಲತೆ ಲಂಬಿಸಿದು
ದಂಬರವ ॥೧೯॥ ಮಿಂಚಿದವು ದೆಸೆಗಳಲಿ ಗಮನಕೆ । ಮುಂಚಿದವು ಹಂಸೆಗಳು ನಭದಲಿ । ಹೊಂಚಿ
ದುದು ಜೀವನಕೆ ಜೀವನವಿರಹಿನಿಕುರಂಬ ॥ ಪಂಚಮಿತಿಯರೊ ಮೋಣಿವರು ಪತಿ । ವಂಚಿಸಿಯರೋ
ಗ್ರೀಷ್ಮಕಾಲದ । ಪಂಚತೆಯೊಳಾಲಿಂಗಿಸಿತು ದಿಗ್ವಧುಗಳೆಂಬುದವ ॥೨೦॥ ಜನಪ ಕೇಳ್ಕೈ ಕಾರ್ಮುಗಿಲ
ಮುಂ । ಬನಿಗಳೊಳು ಮಹಿಳದಲಿ ಕೇರಳ । ಜನಪದದ ತೌಳವದ ಕೊಂಕಣ ವಿಷಮವೀಥಿಯಲಿ ॥
ಜಿನುಗಿನಲಿ ಬಹುಮಳೆಗಳಲಿ ನೆನೆ । ನೆನೆದು ಸಾಗರತೀರದಲಿ ಬಂ । ದನು ಕಿರೀಟಿ ವಿಚಾರಿಸುತ್ತ ಮುರ
ಹರನ ಪಟ್ಟಣವ ॥೨೧॥ ಪುರವ ಹೊರವಂಟೆಂಟುತಿಂಗಳು । ಪರಿಹರಿಸಿ ಶ್ರೀಕೃಷ್ಣರಾಯನ । ಪುರದೊ
ಳಗೆ ನೂಕುವೆನು ವರ್ಷಾಕಾಲವಿಭ್ರಮವ ॥ ವರುಷವೊಂದು ಸಮಾಪ್ತಿ ಬಳಿಕಿನೊ । ಳರಸನಂಘ್ರಿವಿ
ಲೋಕನಾವಿ । ಸ್ಮರಣವಹುದೆಂದಾತ ನಿಶ್ಚೈಸಿದನು ಮನದೊಳಗೆ ॥೨೨॥ ಅರಸ ಕೇಳ್ಸನ್ಯಾಸಿವೇಶದ
ಪರಿಕರವನಳವಡಿಸಿ ಶೌರಿಯ । ಪುರದ ಹೊರಬಾಹೆಯಲಿ ಹೆಚ್ಚಿದಬನದ ಮಧ್ಯದಲಿ ॥ ಇರುಳು ಕಗ್ಗ

ತ್ತ್ರಲೆಯೊಳಾಕುವ । ಸಿಂಹಳಿಗೆ ಸಲೆ ಸೇಡುಗೊಳುತು । ಬ್ಬರಿಸಿ ಕೃಷ್ಣನ ನೆನೆವುತಿದ್ದನು ಮರನ ಹೊಳ್ಳಿ
ನಲಿ ॥೧೩॥ ದೇವನತ್ತಲು ಸತ್ಯಭಾಮಾ । ದೇವಿಯರ ಮೇಳದಲಿ ಯಿರುತಿ । ರ್ದೀವಿಲಾಸವ ನೆನೆದು
ನಕ್ಕನು ಶಕ್ರನಂದನನ ॥ ಆವಳೋ ನೆನಹಿನಲಿ ಸುಳಿದಳು । ಭಾವದಲಿ ಸುಮ್ಮಾನವೇನೆನೆ । ದೇವಿ
ಬೇರೊಂದಿಲ್ಲ ಮನ ನಿನ್ನಾಣೆ ಕೇಳೆಂದ ॥೧೪॥ ನರನ ನೀ ಕೇಳ್ದರಿಯಲಾ ಸೋ । ದರದಮೈದುನನೆ
ನಗೆ ಕುಂತಿಯ । ವರಕುಮಾರಕನಾತನೀ ದ್ವಾರಾವತಿಯ ಹೊರಗೆ ॥ ಮರದ ಪೊಳ್ಳೊಳು ಹೊಕ್ಕು
ಸಿಕ್ಕಿದ । ನರಿಯವ್ರೋಲ್ಲೈಥಾನೆ ಸಾನುಪ । ಚರಿಸಿ ಬಹೆನೆಂದೆನುತ ಮಂಚವನಿಳಿದನಸುರಾರಿ ॥೧೫॥
ಅರಸಿ ಕೇಳೀ ಬಂದ ಪಾರ್ಥನ । ಕರೆದು ಪಾಯಾಂತರದೊಳೀವೆನು । ಸರಸಿಜಾನನೆಯನು ಸುಭದ್ರೆಯ
ನಿಂದು ತಪ್ಪಿದೊಡೆ ॥ ಕರೆಸಿ ದುರ್ಯೋಧನಗೆ ಕೊಡಿಸುವ । ಭರವು ಬಲಭದ್ರನದು ಪಾರ್ಥನ । ಬರವು
ಲೇಸಾಯ್ತೆನುತ ಹೊರವಂಟನು ನಿಜಾಲಯವ ॥೧೬॥ ಬಂದನಲ್ಲಿಗೆ ಫಲುಗುಣನ ಕಂ । ಡೆಂದನೀ
ಶೈಲದ ಸಮೀಪದೊ । ಳಿಂದು ನಿಲು ಬಲಭದ್ರನೈತಹನುಚಿತವಚನದಲಿ ॥ ಮಂದಿರಕೆ ಬರಹೇ
ಳಿದೊಡೆ ಬಾ । ಹೊಂದಿ ನಿನ್ನಿಷ್ಟಾರ್ಥ ಸಿದ್ಧಿಪ್ಪು'ದೆಂದು ಪಾರ್ಥನ ಸಂತವಿಸಿ ಮರಳಿದನು ಮುರ
ವೈರಿ ॥೧೭॥ ಪರಮಹಂಸನ ಸುಳಿವು ಸಾಕ್ಷಾ । ತ್ಸರಸಿಜಾಕ್ಷನ ಲೀಲೆಗಡ ನ । ಮ್ಮರಸಭ್ಯುದಯಪ್ರಪಂ
ಚವಿದೆಂದು ನಗರದಲಿ ॥ ಪಸರಿಸಿದನು ಹರಿವಾರ್ತೆಯನು ತಾ । ನರಿಯದಂತಿರೆ ಬಳಿಕ ನೀಲಾಂ । ಬರನು
ಬಹಳೋತ್ಸವದೊಳೈತಂದನಾತನಿದ್ದೆಡೆಗೆ ॥೧೮॥ ವಂದಿಸಿದೆ ನಾ ಮುನಿಪತಿಯನಘ । ವಂದಿತಾಶೀರ್ವಾದ
ಸಂಗತಿ । ಯಿಂದ ಪಿವಾಸಿಸಿದನು ಚತುರ್ದಶವಿದ್ಯೆಗಳಗತಿಯ ॥ ನಿಂದು ಮೂಗನ ಬೆರಳಿನಲಿ ನಾವು
ನಂದ ಮಿಗೆ ಬೆರಗಾಗ ನಮ್ಮಯ । ಮಂದಿರಕೆ ನೀವ್ಬಿಜಯಮಾಡುವುದೆನುತ ಕೈಮುಗಿದ ॥೧೯॥ ನಾವು
ಭಿಕ್ಷುಕರೆಮಗೆ ರಾಜಗೃ । ಹಾವಲಂಬನವೇಕೆ ಶೈಲದ । ನಾವಳಿಗಳಲಿ ವರನದೀತೀರದಲಿ ವಾಸಿಹೆವು ।
ಭಾವಿತಪ್ರಾರಬ್ಧಕರ್ಮಫ । ಲಾವಳಿಯನುಪಭೋಗಿಸುತ ದೇ । ಹಾವಸಾನವ ವೀಕ್ಷಿಸುತ್ತಿಹೆವೆಂದನಾ
ಪಾರ್ಥ ॥೨೦॥ ಅಹುದು ನೀವೇಕಾಂತಭವನದೊ । ಳಿಹುದು ಚಾತುರ್ಮಾಸವಿದು ಸಂ । ನ್ನಿಹಿತವಾ
ಯ್ತೆದನೊಕೆ ಬಿಜಯಂಗೈವುದೆಮ್ಮಿಚ್ಛೆಯಲಿ ॥ ವಿಹಿತಚತುರರು ನೀವಲಾ ನಿ । ರ್ವಹಿಸುವೆನು ತಿಶುಶ್ರೂಷೆ
ಯನು ಕಿಂ । ಗಹನವಾಡುವೆಂದು ತಂದನು ಯತಿಯ ನರವರನೆಗೆ ॥೨೧॥ ಇವರ ನರಮನೆಯೊಳಗೆ ಕನ್ಯಾ
ಭವನಮಧ್ಯದೊಳಿರಿಸಿ ಬಳಿಕಿನೊ । ಳಿವರ ತಿಶುಶ್ರೂಷೆಗೆ ಸುಭದ್ರಾದೇವಿಯನು ಕರೆಸಿ ॥ ಇವರಪೂರ್ವ
ಮಹಾತ್ಮಕರು ನೀ । ನಿವರದೇವಾರ್ಚನಸಮಾಧಿ । ಪ್ರವರದಲಿ ಬೆಸಸಿದುದ ಮಾಡುವುದೆಂದು ನೇಮಿ
ಸಿದ ॥೨೨॥ ಹೊರಗೆ ಕೃಷ್ಣನ ಕರೆದಿವೆಲ್ಲವ । ನರುಹಿದೊಡೆ ಮರುಳಾಡಿದನು ಮೈ । ಮರೆದು ತಂಗಿಯ
ನೊಯ್ದು ಬೆಸಕಿರಬಿಟ್ಟ ಗತಿ ಠಕನಲಿ ॥ ಅರಸುಮಗಳನು ತೊತ್ತುಗೆಲಸಕೆ । ಹರುಷವಿಸಿದಿರೆ ಶಿವಶಿವಾ
ನಾ । ವರಿಯೆವಲ್ಲಿಯಲೇಸ ಹೊಲ್ಲೆಹವೆಮ್ಮದಲ್ಲೆಂದ ॥೨೩॥ ಮರುಳೆ ನೀ ಹೋಗಾರನೇನೆಂ । ದರಿಯೆ
ಯತಿ ಸರ್ವಜ್ಞನೀತನು । ತಿರುಕನೇ ಸಾಕ್ಷಾತುಲಕ್ಷ್ಮೀಕಾಂತಸನ್ನಿಭನು ॥ ಬರಲಿ ಮಾಣಲಿ ಹಾನಿವೃ
ದ್ಧಿಯ । ಹರಿಬವೆನ್ನದು ಯತಿಮಹಾತ್ಮರ । ನರಿಯದವರೇ ನಾವೆನುತ ಗಜರಿದನು ಬಲರಾಮ ॥೨೪॥
ಆದೊಡೊಳ್ಳಿತು ತಂಗಿ ಬೆಸಗೈ । ದಾದರಿಸಲೀ ಯತಿಪತಿಯ ನಿಮ । ಗೀದುರಾಗ್ರಹವೇಕೆ ಕಾಂಬಿರಿ ಫಲ
ವನಗ್ರದಲಿ ॥ ಹೋದೆವಿದವೌನದೊಳೆನುತ್ತ ಬು । ಜೋದರನು ಹಿಂಗಿದನು ಹರಿಯವಿ । ನೋದರ

ಚನೆಯನೇನನೆಂಬೆನು ಭೂಪ ಕೇಳೆಂದ ||೩೫|| ಬಾಲಕಿಗೆ ಸನ್ಯಾಸಿದೇವರ | ಮೇಲೆ ಮನವಾಯ್ತವರಿಗೀ ಕೆಯ | ಮೇಲೆ ನೆಲಸಿತು ಚಿತ್ತ ಕಾಣೆನು ಜಪಸಮಾಧಿಗಳ || ಮೇಳವಿಸಿತನ್ಯೋನ್ಯರಾಗ ಚ | ಡಾಳಿಸಿದುದಭಿಲಾಷೆ ಕಾಮನ | ಬೇಳುವೆಗೆ ಬೆಂಡಾದುದಿಬ್ಬರ ಧೈರ್ಯವಡಿಗಡಿಗೆ ||೩೬|| ಮಿಡುಕುವುದು ಬಾಯ್ಬಿತ್ತವವಳಲಿ | ತೊಡಕಿದುದು ಜಪಮಾಲೆ ಬೆರಳಲಿ | ನಡೆಯುತಿಹುದಕ್ಷಿಗಳು ಮುಕ್ಕುಳಿಸಿಹವು ಮಾನಿನಿಯ || ಮೃಡನ ಪೂಜೆಗೆ ಕೈ ಸುಭದ್ರೆಯ | ಹಿಡಿಹಿನಲಿ ಮನ ಪರಸಮಾಧಿಯ | ತೊಡಹು ಹೊರಗೊಳಗಿಂದುಮುಖಿ ನರನಾಥ ಕೇಳೆಂದ ||೩೭|| ಜಾರಿದುದು ಮಳೆಗಾಲವತಿಜಿಳು | ಹೇರಿದುವು ಮುಗಿಲುಗಳು ಕತ್ತಲೆ | ಸೂರೆವೋದುದು ಹಗಲಿರುಳು ರವಿಶಶಿಗಳುಪಟಳಕೆ || ತಾರಿದುವು ನದಿನದಗಳ ಭ್ರಕೆ | ಹಾರಿದುವು ಕಳಹಂಸೆಗಳು ತಲೆ | ದೋರಿದುವು ತಾವರೆಗಳೆನೆ ಬಂದುದು ಶರತ್ಸಮಯ||೩೮|| ಸುದತಿಯನು ಶುಭದಿವಸ ಸುಮುಹೂ | ರ್ತದೊಳಿರುಳು ವೈವಾಹವನು ಮಾ | ಡಿದರು ಹರಿವಸುದೇವ ದೇವಕಿಯುಗ್ರಸೇನನೃಪ || ಮುದ್ರೆವೆಯಾಯಿತು ಬಲನರಿಯದಂ | ದದಲಿ ಹೂಡಿದರಥವನೇರಿಸಿ | ಮುದ ವಳಿಗೆ ಸಹಿತರ್ಜುನನ ಕಳುಹಿದನು ಮುರವೈರಿ ||೩೯|| ಪುರವ ಹೊರವಂಟವರು ಬರಲ | ಬ್ಬರಣೆಯಾಯ್ತರಮನೆಯೊಳಗೆ ಸಂ | ಕರುಷಣಾಗ್ರಜರುಹಿದರು ಸನ್ಯಾಸಿಯ ಸಮಾಧಿಗಳ || ಅರಸುಮಗಳನು ಕೊಂಡು ಹಾಯ್ದನೆ | ತಿರುಕಮುನಿ ಮಝು ಭಾಪುರೆ ಭಟ್ಟರೆ | ಕರೆ ಮುರಾರಿಯ ಮಾತು ತಾಗಿತೆನುತ್ತ ಗರ್ಜಿಸಿದ ||೪೦|| ಹೇಳಿವೇ ನಾವ ಮನ್ನಿ ನೀವ್ ನೀ | ಲಾಳಕಿಯ ಕೆಡಿಸಿದಿರಲಾ ನೀ | ವಾಳ ನೆರಹಿದೊಡಿನ್ನು ಮಾಡುವುದೇನು ಕಡುಮುಳಿದು || ಚಾಳಿಸಿದನಪಕೀರ್ತಿಯಕಟ ವಿ | ಕಾಳಿಸಿತು ಯದುವಂಶವೆನೆ ಕರವಾಳ ಜಡಿದೈದಿದನು ಹಲಧರನರ್ಜುನನ ರಥವ ||೪೧|| ಮುಸುಕಿದನು ನಾರಾಚದಲಿ ನಿ | ಪ್ಪಸರದಲಿ ಹಲಧರನ ಸೇನೆಯ | ಕುಸುರಿದರಿದನು ಕೊಂದನಗಣಿತಬಲವನಾಪಾರ್ಥ || ಎಸೆವನೇ ಸನ್ಯಾಸಿ ಮಾಡಿದ | ಹುಸಿಯು ಸನ್ಯಾಸಕ್ಕೆ ಕೊಯ್ವೆನು | ರಸನೆಯನು ದೇವಕಿಯ ಮೇಲಾಣೆನುತ ಗರ್ಜಿಸಿದ ||೪೨|| ಬಳಿಕ ಹರಿ ಬಂದನು ಕೃಷ್ಣನೀಶನ | ಕೆಲಕೆ ಕರೆದನು ಬಹಳಕೋಪವ | ನಿಲಿಸಿರೇ ಸಾಕಿನ್ನು ವಸುದೇವಂಗೆ ದೇವಕಿಗೆ || ಮುಳಿವುದೀತನ ದೋಷವಲ್ಲಿದ | ತಿಳಿದವಾವರ್ಜುನನು ಗಡ ನಾ | ವೆಳಸಲಿನ್ನೇಕೆನುತ ಬೋಧಿಸಿದನು ಹಲಾಯುಧನ ||೪೩|| ಅಕಟ ದುರ್ಯೋಧನಗೆ ತಪ್ಪಿಸಿ | ಸಕಲಯಾದವರಿಲ್ಲಿಗೈದರೆ | ವಿಕಳಮತಿ ನಾನೈಸಲೇ ಕೃಷ್ಣನ ಕುಮಂತ್ರವಿದು || ಅಕುಟಿಲಾಂತಃಕರಣ ತನ ಬಾ | ಧಕವಲೇ ಗುರುವರಿಗೆನುತ ಸ | ಭ್ರುಕುಟಿರೌದ್ರಾನನನು ಮರಳಿದನು ಪುರಕೆ ಬಲರಾಮ ||೪೪|| ಹರಿಸಹಿತ ಬಲರಾಮನತ್ತಲು | ತಿರುಗಿದನು ಪವಮಾನಜವದಲಿ | ಪುರಕೆ ಬಂದನು ಪಾರ್ಥ ಪಯಣದಮೇಲೆ ಪಯಣದಲಿ|| ಪುರದ ಬಹಿರೋದ್ಯಾನದಲಿ ಸಂ | ವರಿಸಿ ರಥವನು ನಿಲಿಸಿ ನೆಳಲಲಿ | ಪರಿಗತಶ್ರಮನಾಗಿ ನಗುತ ಸುಭದ್ರೆಗಿಂತೆಂದ ||೪೫|| ಅರಮನೆಗೆ ನಡೆ ದ್ರುಪದನಂದನೆ | ಕರೆಸಿದೊಡೆ ನೀ ಹೋಗು ನಿರುತವ | ನರುಹದಿರು ತುರುಗಾಹಿಗಳ ಮಗಳೆಂದ ನುಡಿ ಸಾಕು || ಅರಸಿ ಮಿಗೆ ಮನ್ನಿಸುವಳಲ್ಲಿರು | ಕರಸಿಕೊಂಬೆನು ಬಳಿಕಲೆಂದೀ | ಸರಸಿಜಾಕ್ಷಿಯ ಕಳುಹಿದನು ನಿಜರಾಜಮಂದಿರಕೆ ||೪೬|| ಬಂದಳಬಲೆ ಸಮಸ್ತಪುರಜನ | ವಿಂದುವದನೆಯ ನೋಡುತಿದ್ದುದು | ವಂದಿ ಕವಿದುದು ಮನುಜಯೇ ಸುರಲೋಕವಧುವೆನುತ|| ಮಂದಿರಕೆ ಬರೆ ಬಾಗಿಲವಿದರು | ನಿಂದರಲ್ಲಿಯದಲ್ಲಿ ಬಳಿಕರೆ | ವಿಂದವಮುಖಿಯರು ಕಂಡು ದ್ರೌಪದಿಗ

ರುಹಿದರು ಹವನ ॥೪೭॥ ಕರೆಸಿ ಕಾಣಿಸಿಕೊಂಡು ಪಾಂಡವ । ರರಸಿ ಬೆಸಗೊಳಲೀಕೆ ಪಾರ್ಥನ । ಪರುತವವನಮಾತುಗಳನೆಂದಳುನಗೆಯಮೊಳೆ ಮಿನುಗೆ ॥ ಸುರಭುಜಂಗಮುಪಘ್ರೊ ನೀವೇ । ನಾರಸುಮುಗಳೋ ತಂಗಿ ನೀಗೊ । ಲ್ಲರೆ ಮಗಳೆ ಪ್ರಸಿಯೆನುತ ತಲೆದೂಗಿದಳುಪಾಂಚಾಲಿ ॥೪೮॥ ಮಸಗಿದವ್ರುನಿಸ್ಸಾಳತತಿ ಗರ್ಜಿಸಿದವರ್ಜುನ ಬಂದನಿದೆಯೆಂ । ದೊಸಗೆವಾತಿನೊಳೂರ ಸಖಿದರು ದೂತರಲ್ಲಲ್ಲಿ ॥ ಶಶಿಮುಖಿಯರುಪ್ಪಾರತಿಯ ಮಿಗೆ । ಲೆಸೆವರತ್ನಾವಳಿಯ ಕಾಂತಾ । ಪಿಸರ ನೂಕಿತು ಪಾರ್ಥ ಹೊಕ್ಕನು ರಾಜಮಂದಿರವ ॥೪೯॥ ಅರಸಘೀಮರುಗೆರಗಿ ಸಕಲಾ । ದ್ಯರನು ಕಾಣಿಸಿಕೊಂಡು ದೇಶಾಂ । ತರದ ತೀರ್ಥೋನ್ನತಿಯಸಾವೃತ್ತಾಂತಸಂಗತಿಯ ॥ ಪುರಹರನ ಸೌಹೃದವಸಾತನ । ಕರಣಾಕನ್ಯಾಲಾಭವನು ವಿ । ಸ್ತರಿಸಿಹರುಷಾಂಬುಧಿಯೊಳದ್ದಿದನಗ್ರಜಾನುಜರ ॥೫೦॥ ಅರಸ ಕೇಳ್ಕೆ ದ್ರೌಪದಿಯ ಮನ । ಬಿಸಿ ಬೇರರಮನೆಯೊಳೀಕೆಯ । ನಿರಿಸಿದನು ಹರುಷದಲಿ ಕಳಿದರು ಕಾಲವಿಭ್ರಮದ ॥ ಇರಲಿರಲು ಪಾರ್ಥಗೆ ಸುಭದ್ರೆಗೆ । ವರಕುಮಾರಕನುದಿಸಿದನು ವಿ । ಸ್ತರಣವಾಯ್ತಭಿಮನ್ಯುವಿನ ಜನನೋತ್ಸವಾಭ್ಯುದಯ ... ... ... ... ... ॥೫೧॥

ಅಂತು ಸಂಧಿ ೧೯ ಕ್ಕೆ ಪದ ೮೭೭ ಕ್ಕಂ ಮಂಗಳಮಸ್ತು.

---

## ಇಪ್ಪತ್ತನೆಯ ಸಂಧಿ.

ಸೂಚನೆ. ಖಾಂಡವದ ವನದಹನದಾವ್ರೋ । ಚ್ಚಂಡಗಂಡರಗಂಡ ದಿವಿಜರ ।
ಹಿಂಡುಗೋಳಿಡೆ ಥಾಳಯಿಟ್ಟನು ಚಂಡಗಾಂಡೀವಿ ॥

---

ಕೇಳು ಜನಮೇಜಯಧರಿತ್ರೀ । ಪಾಲ ಪಾರ್ಥಸುಭದ್ರೆಯಲಿ ಭೂ । ಪಾಲತಿಲಕನು ಜನಿಸಿದ ನಲ್ಕೆ ಜಾತಮಾತ್ರದಲಿ ॥ ಮೇಲುಮೊಳಗಿನ ದುಂದುಭಿಯ ದಿವಿ । ಜಾಳಿಗಳ ಹೂಮಳೆಯ ಹರುಷದ । ಮೇಳವದ ವೈಸಿರಿಯನೇನೆಂಬೆನು ಧನಂಜಯನ ॥೧॥ ಕಲಿತನಕೆ ನೆಲೆಯಾಯ್ತು ಭುಜಬದಾಗ್ಗಳಿಕೆಗಾಸ್ಪದವಾಯ್ತು ನಿಜಚಾಪಳವ ಬಿಸುಟಳು ವೀರಸಿರಿ ವಿಕ್ರಮದ ಸಿರಿಸಹಿತ॥ ಹಳಿವು ಕಳವಳ ಭೀತಿ ಭಂಗ। ಸ್ಖಲನ ಕಂಪನವೆಂಬಿವಾತನ । ನೆಳಲಸೀಮೆಯ ಸೋಂಕಲಮ್ಮವು ಭೂಪಕೇಳೆಂದ ॥೨॥ ಜಾತಕರ್ಮದನಂತರದ ವಿಖ್ಯಾತನಾಮವಿಧಾನವನು ಸಂ । ಪ್ರೀತಿಯಲಿ ಮಾಡಿದನು ಋಷಿಭೂಪತಿಯನುಜ್ಞೆಯಲಿ ॥ ವೀತಭಯನಭಿಮನ್ಯುವೆನೆ ಬೆಳೆ । ವುತ ನಡುಗಿತು ಲೋಕಮೂರರೊ । ಳೀತನುದಯದಕೀರ್ತಿ ಪಸರಿಸಿತರಸಕೇಳೆಂದ ॥೩॥ ಯಮಸುತಗೆ ಭೀಮಗೆ ಕಿರೀಟಿಗೆ । ಯಮಳರಿಗೆ ಸುಕುಮಾರಕರು ನಿಜ। ರಮಣಿಯಲಿ ಜನಿಸಿದರು ಸುತಸೋಮಕನು ಪತಿವಿಂಧ್ಯ ॥ ವಿಮಲಶ್ರುತಕೀರ್ತಿಪ್ರತಾಪೋ । ತ್ತಮನು ಶ್ರುತಸೇನಾಖ್ಯನುರುವಿ । ಕ್ರಮಶತಾನೀಕಾಭಿಧಾನರು ದ್ರುಪದತನುಜೆಯಲಿ ॥೪॥ ಇವರು ಕಳುಹಿದಹರುಷವಾರ್ತಾ । ಶ್ರವಣರಸದಲಿ ಮನ ಮುಳುಗಿಯಾ । ದವಶಿರೋಮಣಿ ರಾಮವಸುದೇವಾದಿಗಳ

ಸಹಿತ । ಇವರ ಪುರಸ್ಕೃತಂದುಬವರು । ತ್ರಿವಿದಿಗ್ಗೋಂಡೊಸಗೆಯಲಿ ಬಾಂ । ಧವರೆ ಸಂಭಾವಿಸಿದ ರೈ ಯಮುನಂದನಾದಿಗಳು ॥೫॥ ಅರಸಿ ಕಾಣವು ವೇದತತಿ ತಾ । ನರಸಿ ಬಂದನು ಭಕ್ತರನು ತನ । ಗೆರಗಿ ಮೆಚ್ಚಿಸಲರಿಯರೆಜರುದಾ ಮರೇಶ್ವರರು ॥ ಎರಗುವನು ಯಮಜಂಗೆ ತನ್ನನು । ಕುರುಹುಗಾಣವು ವೇದಶಿರವಿದು । ಮರವೆಯೋ ಹರಿ ಬಂದು ಕಂಡನು ಧರ್ಮನಂದನನ ॥೬॥ ಲೀಲೆಯೋ ಇದು ಮೇಣು ಕೃಷ್ಣನ । ಬಾಲಕೇಳಿಯ ನೆನಹೊ ಬೊಮ್ಮದ । ಕೌಳಿಕದ ಕಣ್ಣಾಮಾಯೆಯೋ ಶಿವಶಿವ ಮಹಾದೇವ॥ ಕಾಲಿಗೆರಗಿದ ಕೃಷ್ಣನನು ಭೂ । ಪಾಲ ತೆಗೆದಪ್ಪಿದನು ನಿಗಮದ । ಮೌಳಿ ತಲೆವಾಗಿದುವು ಲಜ್ಜಾಭೂರಿಭಾವದಲಿ ॥೭॥ ಅರಸನಸಹಿತ ಸಮಸ್ತಯಾದವ । ಪರಿಕರದ ಮೇಳದಲಿ ಯಾದವ । ರರಸುಬಿಜಯಂಗೆದು ಕುಂತಿಯಪುತ್ರರ ಭವನದಲಿ ॥ ಅರಸಿಯರ ಸುಕುಮಾರವರ್ಗವ । ಕರೆಸಿ ಕಾಣಿಸಿ ಕೊಂಡು ದಿವ್ಯಾ । ಭರಣವಸನಾದಿಯಲಿ ಮನ್ನಿಸಿದನು ಮಹೀಶ್ವರರ ॥೮॥ ಜಲಧಿಮಧ್ಯದೊಳಿರ್ಪ್ರೊ ಗಗನ । ಸ್ಥಳವೊ ಮೇಣು ಮಹಾಂಧಕಾರದ । ಕಳಿವುಗಳವೃಕಂತವೋ ಮುನಿಜನದ ಹೃದ್ಗುಹೆಯೋ॥ ತಿಳಿಯೆ ಸಚರಾಚರದ ಚೇತನ । ದೊಳಗೆಯೇ ನೆಲೆಯಾವುದೆಂಬ । ಗ್ಗಳೆಯದೈವದ ನಿಲವ ಕಂಡೆನು ಪಾರ್ಥಭವನದಲಿ ॥೯॥ ಈತನರ್ಜುನನರಮನೆಯೊಳಧಿ । ಜಾತನೆನಿಪಭಿಮನ್ಯುವನು ಸಂ । ಪ್ರೀತಿಯಿಂದಪ್ಪಿದನು ಕೊಟ್ಟನು ಬಾಲದೊಡಿಗೆಗಳ ॥ ಖ್ಯಾತಪಂಚಪ್ರಮುಖ ಸಂ । ಜಾತರನು ಮನ್ನಿಸಿ ಮಹಾವಿಭ । ವಾತಿಶಯದಲಿ ಪತಿಕರಿಸಿದನು ಪಾಂಡುನಂದನರ ॥೧೦॥ ಅರಸ ಕೇಳೈ ಹಲವುದಿನ ಸಂಚರಿಸಿ ಸೌಖ್ಯದೊಳಿರ್ದ ತಮ್ಮಯ । ಪುರಿಗೆ ಬಲಭದ್ರನನು ಯಾದವರಾಯವಳಸಹಿತ ॥ ಹರ ಸಮಾಧಾನದಲಿ ಕಳುಹಿಸಿ । ನರನೊಡನೆ ವೃಹಾಳಿಮೃಗಯಾ । ವರವಿಹಾರದೊಳಿದ್ದನಿಂದ್ರಪ್ರಸ್ಥನಗರಿಯಲಿ॥ ಹರಿಧನಂಜಯರೊಂದುಮೃಗ । ಹರಣಕೇಳಿಕಳಾಪದಲಿ ಸಂ । ಚರಿಸಿ ಬನದಲಿ ಬಳಿಕಮಾರ್ಗಶ್ರಮದ ಭಾರದಲಿ ॥ ಬರುತ ನೀರಡಸಿದರು ಕಂಡರು । ಸರಸಿಯನು ರಥವಿಳಿದು ನೆಳಲಲಿ । ಪರಿಹೃತಶ್ರಮರಾಗೆಹು ಹೊಕ್ಕನು ಸರೋವರವ ॥೧೧॥ ಆಸಮಯದಲಿ ಬಂದನೊಬ್ಬನು । ಭೂಸುರನು ಕಡಿಗಳ ತೃಷಾರದ ।ವಿಲಾಸಗಡ್ಡದ ಸುಳಿದಲೆಯ ಕಬ್ಬೊಗೆಯ ಜುಂಜುಗಳ ॥ ಬಾಸರದಬಿಳಲುಡಿಗೆ ಮುಟ್ಟಿಯ । ಧೂಸರದ ಮೈದೊಡಿಗೆ ಮೆರೆಯೆ ವಿ । ಲಾಸದಲಿ ನಡೆತಂದನರ್ಜುನದೇವನಿದ್ದೆಡೆಗೆ ॥೧೨॥ ಹರಸಿ ವೇದಾರ್ಥವನು ವಿಗೆ ವಿ । ಸ್ತರಿಸಿ ಕೊಂಡಾಡಿದನು ವಿಪ್ರನ । ಪರಮಯೋಗ್ಯತಗಾರಿಸು ಪರಮೇಷ್ಠಿ ಹೊರತಾಗಿ ॥ ಬರವಿದೇನೆನಗೇನನುಗ್ರಹ । ವರಿಸಿದೊಡೆಸಮ್ಮಿಷ್ಟವನು ಗಾ । ಚರಿಸುವೆನು ತಾನೆನುತ ನುಡಿದನು ಪಾರ್ಥ ಭೂಸುರಗೆ ॥೧೩॥ ಪಾರ್ಥ ಕೇಳತಿಗಿಯನಿತ್ಯ । ಸಿದ್ಧಿಗಳು ಸಾವಿರದ್ದವೆಮ್ಮ । ಸ್ವಾರ್ಥಸಿದ್ಧಿಯ ಘಟಿಸು ಸಾಕು ಸಮಗ್ರಫಲವಹುದು ॥ ಅರ್ಥವೆಂಕನ್ನತಿಧಿಯಿರಲು ಪ । ರಾರ್ಥಸಾಧನತನವೆ ಪರಮ । ಸ್ವಾರ್ಥವೆಂಬರು ಸುಜನರೆಂದನು ಕಪಟವಿಪ್ರನಗಾತ ॥೧೪॥ ಕೊಟ್ಟೆನೆಂದನು ಪಾರ್ಥನಿವರೊಡ । ಬಟ್ಟರೇನುಡಿಗೇಳಿದನುಜಪು । ರಟ್ಟ ಬಂದನು ಹವನನಂದನು ಹವ್ಯವಾಹನನ ॥ ಕೊಟ್ಟುದೇನು ಕಿರೀಟಿಯಿವರೇ । ಮುಟ್ಟಿದೊಡೆ ಮುನಿವವರಲ್ಲೆ ನೀ । ಕೊಟ್ಟುದಾಣಬಡಿಸುವುದು ಭಾರವಿದೆಂದನಸುರಾರಿ ॥೧೬॥ ಮುಖರನಾದ್ಯ ಪಾರ್ಥ ಬರ್ದ । ಪ್ರಖರ ಬಾಣಸಮಾತನೀತನು। ಸುಖಿವೆ ಹೇಳೈ ತಂದೆ ಖಾಂಡವವನದ ನಿರ್ದಹನ ॥ ನಿಖಿಳನಿರ್ಜರಬಲಸಹಿತ ಶತ । ಮಖನೊ

ಡನೆ ವಿಗ್ರಹವಲಾ ಸಂ । ಮುಖಕೆ ಬಂದುದು ಭಂಗವೆಂದನು ನಗುತ ಮುರವೈರಿ ॥೧೭॥ ಭಂಗವೇಕೈ ಕೃಷ್ಣ! ನಿರ್ಜರ । ಪುಂಗವನ ಗೆಲಿದವನ ಬಾಣಸಿ । ಗಂಗೆ ಬಾಣಸವಮಾಡುವೆನು ಖಾಂಡವವುಹಾವ ನವ ॥ ಅಂಗವಣೆಯನು ನೋಡು ನೀನೇ । ಕಾಂಗದಲಿ ನಿರ್ವಹಿಸುವೆನು ಭಯ । ಭಂಗವುಂಟೇ ನಿನ್ನ ಕೃಪೆಯಿರಲೆಂದನಾಪಾರ್ಥ ॥೧೮॥ ಮೆಚ್ಚಿದನು ಘೃತಯೋನಿ ಪೂತುರೆ । ನಿಚ್ಚಟನು ನೀನೆನುತ ಕಿಡಿಗಳ । ಬಿಚ್ಚಲುದಿರಿತು ಚಾಪವಾರ್ಗಣರಥತುರಂಗಚಯ ॥ ಅಚ್ಚರಿಯನೇನೆಂಬೆನೈಸ । ಪ್ರಾರ್ಚಿ ಯಿತ್ತನು ವನವನಿಂದ್ರನ । ಮುಚ್ಚುಮರೆಯೇಕಿನ್ನು ನಮಗುಣಬಡಿಸು ಸಾಕೆಂದ ॥೧೯॥ ಧರಣಿಪತಿ ಕೇಳಗ್ನಿಯಿತ್ತನು । ಹಂಥನಂಜಯಂಗೆ ರಥಂಗಳ । ನುರುಶರಾವಳಿದಿವ್ಯಧನುಕೌಮೋದಕೀಗದೆಯ ॥ ವರತನುತ್ರಸಿತಾಸ್ತ್ರವಕ್ಷಯ । ಶರನಿಷಂಗಾದಿಗಳನಿವರು । ಬ್ಬರಿಸಿದರು ಹರುಷದಲಿ ನೆನೆದರು ನಯನ ವಾರಿಯಲಿ ॥೨೦॥ ಹೂಡಿದರು ರಥವೆರಡನಿವರು ಸ । ಘಾಡವಲಿ ಕಪಿಗರುಡಸಿಂಧವ । ಜೋಡಿಸಿದ ರೇರಿದರು ನಗುತ ಧನಂಜಯಾಚ್ಯುತರು ॥ ಮೂಡಿಗೆಯ ಮೊನೆಗಣೆಗಳಿಗೆ ಕೈ । ನೀಡಿ ಬೊಬ್ಬಿರಿದರು ದಿಗಂತವ । ನೀಡಿರಿದುದುಬ್ಬರಣೆ ಬಿರಿದುದು ಧರಣಿ ಧಾಳಿಯಲಿ ॥೨೧॥ ಬೊಬ್ಬಿರಿದು ಹರಿ ಪಾಂಚಜ ನ್ಯನ । ನುಬ್ಬಿ ದನಿಮಾಡಿದನು ಪಾರ್ಥನ । ತೆಬ್ಬಿನಬ್ಬರ ತೀವಿತಾಬ್ರಹ್ಮಾಂಡಮಂಡಲವ ॥ ಗಬ್ಬರಿಸಿ ದುವು ಗಗನವನು ಶರ । ದುಬ್ಬರದ ಬಲುಗಿಡಿಯು ಗಡಣವು ಹಬ್ಬಿ ಹಂದವು ದೆಸೆದೆಸೆಗೆ ನರನಾಥ ಕೇಳೆಂದ ॥೨೨॥ ಧಾಳಿಯಿಟ್ಟರು ಸುರವನಕೆ ಸುರ । ಜಾಲ ಸಂಯಿತು ಬೊಬ್ಬೆಯಲಿ ದೆ । ಸ್ಫಾಳಿಸಿ ದುದುತ್ಪಾತಶತ ಖಾಂಡವದ ಮಧ್ಯವಲಿ ॥ ಕೂಳಿಗಳ ಕುಡಿಮೀನವ್ಯೋಲ್ವಿಹ । ಗಾಳಿ ಹುದುಗಿತು ನಡುಗಿದರು ವನ । ಪಾಲಕರು ನಿಂದೊಣಗಿದವು ಹರಿಚಂದನಾದಿಗಳು ॥೨೩॥ ತೂಗಿ ಬಾಣವ ಹೂಡಿ ಕಿವಿವರೆ । ಗಾಗಿ ಬರಸೆಳವಾರಿ ಬೊಬ್ಬಿರಿ । ದಾಗಲಿಂತೆಂದನು ಧನಂಜಯನುಸಾಧನಂಜಯಗೆ ॥ ಈಗಲೀ ವನದೊಳಗೆ ಖಗಮೃಗ । ನಾಗಸುರದನುಜಾದಿಜೀವರ । ಹೋಗಲೀಯದೆ ತರುಬಿ ಶರದಲಿ ಕಾಯಬೇ ಕೆಂದ ॥೨೪॥ ಹೈ ಸಮಗ್ರಾತಿಥ್ಯದಲಿ ನಿಮ । ಗೀಸವಸ್ತುಪ್ರಾಣಿಸಹಿತ ಸು । ರೇಶನುದ್ಯಾನವನು ಕೊಟ್ಟೆನು ಬಾಣಧಾರೆಯಲಿ ॥ ನೀ ಸಮಾಧಾನದಲಿ ಸಂಪುರ್ಣ । ಡಾಶವಿದೆ ಸಮಿದಾಜ್ಯಸಹಿತ ಮ ಹಾಸುವಿಸ್ತಾರದಲಿ ಕೊಂಬುದು ಭೀತಿ ಬೇಡೆಂದ ॥೨೫॥ ಎನುತ ಬಿಡೆ ತಿರುವಾಯನೊದೆದು । ಬ್ಬಿನ ಲಿಬೊಬ್ಬಿರಿದಂಬು ಸುರಪನ । ವನವ ಮುತ್ತಿತು ಕೂಡೆ ಹೊತ್ತಿತು ಹೊಗೆಯ ಹೊರಳಿಯಲಿ ॥ ತನಿ ಗಿಡಿಯು ವಳ್ಳಿಯ ಸಾಲಿಗೆ। ಗೊನೆಗಳಲ್ಲಾಡಿದವು ಕದುಲಾ । ಗಿನಲಿ ಲಂಬಿಸಿ ಚುಂಬಿಸಿದುವುರಿ ಲಲಿ ತನಂದನವ ॥೨೬॥ ಹೊದರಿನಲಿ ಭುಗುಭುಗಿಲುಭುಗಿಲೆಂ । ದೊದೆದುರಿಯಂಬರವನೊಣಗಿದ । ಬಿದಿರಮೆಳೆಯಲಿ ಧಗಧಗಿಸಿ ಛಟಛಟನೆಛಟಛಟಿಸಿ ॥ ಕದಳಿಖರ್ಜೂರಾದಿತರುಜಾ । ಲದಲಿ ಸಿಮಿಸಿಮಿ ಸಿಮಿಸಿಮಾಯತ । ವೊದಗೆ ಗಹನೋದರದೊಳಗೆ ಘಾಡಿಸಿತು ಘನವಹ್ನಿ ॥೨೭॥ ಏನನೆಂಬೆನು ಟಪಿ ಜರಾಜೋ । ದ್ಯಾನಹಾನಿಯನಾತನಾಳು ಕೃ । ಶಾನುವಿನ ತನಿಗೊಬ್ಬನೀಕೃಷ್ಣಾರ್ಜುನರ ಬಲುಹ ॥ ಆನಿಖಿಳನಿರ್ಜರರು ತಾಗಿ ವಿ । ಮಾನಗತಿಯಲಿ ಹಾಯ್ದರಂದವ । ಮಾನಗತಿಯಲಿ ಗಗನದಲಿ ಗೀರ್ವಾ ಣಪತಿಪುರಕೆ ॥೨೮॥ ಹೊಗೆಯ ಬಳಿಯಲಿ ತಳಿತಹಮ್ಯಲ । ಬೆಗಡಿದೇನೋ ಕೇಳೆನುತ ಸಿರಿ । ಮೊಗ ದದುಗುಡದ ಸಾವಿರಾಲಿಯೊಳುಗುವಕಿಡಿಗಳಲಿ ॥ ಹಗೆಗಳಾರು ನಿವಾತಕವಚಾ । ದಿಗಳೊ ತಾನಾರೆಂ

ಬಿಶಕ್ರನ । ದುಗುಡವನು ದೇವಾಳಿ ಕಂಡುದು ದೂರಿದರು ನರನ ॥೨೯॥ ನಿನಗೆ ಮಗನೇ ಪಾರ್ಥ ನಿನ್ನರ । ಮನೆಯ ಬಾಣಸದಾತನೇ ಶಿಖಿ । ಯನುಜನೇ ಮುರವೈರಿ ನಿನಗನುಕೂಲರಾದರಲೇ ॥ ಬನದಬೇಗೆಯೊ ಪರಿಭವಾಲಂ । ಬನದ ವೊಸಗೆಯೊ ಬಂದುದಿದೆ ಬಿಡು। ಮನೆಯಮನ್ನೆಯಗಂಡನಾಗೆಂದುದು ಸುರಸ್ತೋಮ ॥೩೦॥ ಐಸಲೇ ನಮ್ಮವರಲಾ ಹೋ । ಹೋ ಸುರರು ಕಳವಳಿಸುವಿರಿಯಾ । ಹೈಸನಾಹುತಿಗೊಳಲಿ ಪಾವಕನೆಮ್ಮ ಖಾಂಡವವ ॥ ಈಸುರರಿಗಾನರರಿಗಂತ್ರರ । ವೇಸು ಪೂತುರೆ ಕಾಲಗತಿಯೆನು। ತಾಸುರೇಶ್ವರಖಾತಿಗೊಂಡನು ಕೃಷ್ಣಪಾರ್ಥರಿಗೆ ॥೩೧॥ ಕಾಹು ತೆಗೆಯಲಿ ಕಲ್ಪಮೇಘ । ವ್ಯೂಹಗಳ ಬರಹೇಳು ಕಾಂಬೆನು। ಸಾಹಸವನಿದರೊಳಗೆ ಕೃಷ್ಣಧನಂಜಯದ್ವಯದ ॥ ಈಹದಕೆ ಪಡಿಪಚ್ಛವಿಲ್ಲವ । ಗಾಹಿಸಲಿ ಖಾಂಡವವ ಹುಲ್ಲೆಯ । ಊಹೆಗಳ ಹೆಬ್ಬುಲಿಗೆ ಹಾಯ್ವವೆನುತ್ತ ಗರ್ಜಿಸಿದ ॥೩೨॥ ಅರಸಕೇಳ್ಕಲ್ಪಾಂತಮೇಘೋ । ತ್ಕರದ ಪಾಳೆಯವೆತ್ತಿ ಬಿಟ್ಟುದು । ಧರಣಿಯಗಲಕೆ ಧಾಳಿಯಿಟ್ಟುವು ಸಿಡಿಲ ಮಿಂಚುಗಳು ॥ ಕರಿಯಭರಿಕ್ಕೈಗೆಣೆಯೆನಿಪನಿ । ಷ್ಠುರದಧಾರಾಸಾರ ತೆರಳಿಚಿ । ಸುರಿದುದಾಖಾಂಡವದಸೀಮಾಸನ್ನಿವೇಶದಲಿ ॥೩೩॥ ಆಸಕಲಸಾಗರವನೊಂದೇ । ಶ್ವಾಸದಲಿ ತೆಗೆದೆತ್ತಿ ಮುಗುಚಿದು । ವೀಸಮಸ್ತಬಲಾಹಕಾವಳಿ ಬನದ ಮಧ್ಯದಲಿ ॥ ಏಸುಸಾಹಸಸತ್ವ ತನಗುಂ । ಟೈಸರಲಿ ತಲೆಯೆತ್ತಿ ಜಲದಲಿ ।ಗಾಸಿಯಾದನು ವಹ್ನಿ ನುಡಿದನು ಕೃಷ್ಣಪಾರ್ಥರಿಗೆ ॥೩೪॥ ಕಳಹವಿಂದ್ರನಕೂಡೆ ಕಲ್ಪದ । ಮಳೆಗಳಿವು ಮೊಣೆಸಿದುವೂಟವ । ನೆಳೆದುಮಣಲಿನ ತುತ್ತನರ್ಜುನ ಕಾಯ್ದುಕೊಳ್ಳೆನಲು ॥ ಮಳೆಗೆ ಶರಪಂಜರವ ವಿರಚಿಸಿ । ಬಳಿಕ ವಾಯವ್ಯಾಸ್ತ್ರದಲಿ ನಿ । ಸ್ಖಲಿತಮೇಘವ್ರಜವನೆಚ್ಚನು ಪಾರ್ಥ ವಹಿಲದಲಿ ॥ ಏನ ಹೇಳುವೆನರಸ ಪಾರ್ಥನ । ಸೂನಶಕ್ತಿಯನುರುಬಿದನು ಪವ । ಮಾನಶರದಲಿ ಪುಷ್ಕಳಾವರ್ತಾದಿಘನಸುಟಿಯಾ ॥ ಭಾನುತಿಮಿರಂಗಳಿಗೆ ಮೇಘವು । ಹಾನಿಲಂಗಳಿಗಾವುದಂತರ । ಸೋನೆ ತೆಗೆದುದು ಹೊಗೆದುದಾಖಾಂಡವಮಹೋದ್ಯಾನ ॥೩೫॥ ಹಾರಲೂಟತು ಮೇಘವನು ಕಿಡಿ । ತೂರಲುಬ್ಬರಿಸಿದುದು ವಹ್ನಿಯ । ನೇರಿಸಿತು ಖಾಂಡವದೊಳಗೆ ಬಿರುಗಾಳಿ ಸುಳಿಸುಳಿದು ॥ ಮೋರೆಯೊಣಗಿದುದಮರರಿಗೆ ಮೈ । ಮಾರಿಗಳ ಸುಡು ಮೂಲೆಯುವದಿರು । ಮಿಾಂಡರಲಾಯೆನುತ ಸುರಪತಿ ತರಿಸಿದನು ಗಜವ ॥೩೬॥ ನೆರೆದುದಮರರು ಸಿದ್ಧವಿದ್ಯಾ । ಧರಮಹೋರಗಯಕ್ಷರಾಕ್ಷಸ । ಗರುಡಕಿನ್ನರಸಾಧ್ಯಗುಹ್ಯಕಭೂತಗಂಧರ್ವ ॥ ತರಣಿವಸುರುದ್ರಾದಿಗಳುಮೋ । ಹರಿಸಿದರು ಮುಂಗುಡಿಯಲಿಂದ್ರನ । ಸಿರಿಯ ರಭಸವನೇನನೆಂಬೆನು ಭೂಪ ಕೇಳೆಂದ ॥೩೭॥ ಮಸಗಿತಮರವ್ರಾತವಭ್ರವ । ಮುಸುಕಿದವು ಝಲ್ಲರಿಗಳಿಂದ್ರನ । ವಿಶಸನಕೆ ವೆಚ್ಚಿಸುವೆ ವಸುಗಳನೆನುತ ತಮತಮಗೆ ॥ ಮುಸುಕಿದವು ಮೃಗರಾಜಸಿಂಹದ । ಮುಸುಕನುಗಿವಂದದಲಿ ಬಾಣ । ಪ್ರಸರವನು ಹರಹಿದರು ಮುಂದೆ ಧನಂಜಯಾಚ್ಯುತರ ॥೩೮॥ ಹೂಣೆ ಮಿಗೆ ಹೊಕ್ಕೆಚ್ಚರೋ ಬಹು । ಬಾಣವನು ದೃಢಬಾಣರೋ ಗೀ । ರ್ವಾಣರೋ ನೀವಾರು ನುಡಿಯಿರಲೈ ಮಹಾದೇವಾ ॥ ಸಾಣೆಯಲಗಿಗೆ ಸಾರರೀತನಿ । ಶ್ಶೋಣಿತವ ನೀವ್ಕೊಡದೆ ಸುರಪತಿ। ಯಾಣೆ ಹಿಂಮೆಟ್ಟಿದೊಡೆನುತ ಬೊಬ್ಬಿರಿದು ನರನೆಚ್ಚ ॥ ತುರುಗಿ ಕೂರಂಬುಗಳು ಮೈಯುಲಿ । ಮುರಿದುವರ್ಜುನನೆಸುಗೆಯಲಿ ಕೈ । ಮರೆದುದಮರನಿಕಾಯ ಕೆದರಿತು ದೊರೆಯ ಮನ್ನಿಸದೆ ॥ ಮುರಿದುದೀಕೃಷ್ಣಾರ್ಜುನರ ಬೊ । ಬ್ಬಿರಿತಕವರೆದೆಯೊಡೆಯಲಿಂದ್ರನ । ಮರೆಯ ಹೊಕ್ಕು

ದ್ರುದೇವಸಂತತಿ ಭೂಪ ಕೇಳೆಂದ ॥೪೧॥ ನರರು ರಚಿಸಿದಹವ್ಯಕವ್ಯೋ । ತ್ತರಹವಿರ್ಭಾಗವನು ತಿಂದು
ಬ್ಬರಿಸಿ ದೇವಸ್ತ್ರೀಕದಂಬದ ಮೇಳಮೇಳದಲಿ ॥ ಇರವು ನಿಮಗೀರೌದ್ರಬಾಣ । ಸ್ಫುರಿತಕರ್ಕಶವಿಸ್ಫು
ಲಿಂಗೋ । ತ್ಕರದ ಝಳ ನಿಮಗೇಕೆಯೆಂದನು ಪಾರ್ಥ ನಸುನಗುತ ॥೪೨॥ ಮುರಿದುನಿರ್ಜರಸೇನೆಗಭ
ಯದ । ಕರವ ನೆಗಹಿ ಕರೀಂದ್ರನನು ತಿರ । ಬಿರಿಯಲಂಕುಶಮೊನೆಯೊಳೊತ್ತಿ ಮಹೋಗ್ರಕೋಪ
ದಲಿ ॥ ನರಮುರಾಂತಕರಿದಿರಿನಲಿ ಮದ । ಕರಿಯ ಬಿಟ್ಟನು ಶಕ್ರನಾತನ । ಬಿರುದ ಸಂಭಾವಿಸಿದರ
ಭ್ರದ ಸೂತ್ರಮಾಗಧರು ॥೪೩॥ ನಮುಚಿಮಸ್ತಕಶೂಲ ಬಲಸಂ । ತಮಸಭಾಸ್ಕರ ಜಂಭಭುಜವಿ ।
ಕ್ರಮಮಹಾಂಬುಧಿಕುಂಭಸಂಭವ ವೃತ್ರಗಿರಿವಜ್ರ ॥ ಕಮಲಭವಹರವಿಷ್ಣುಹೊರಗಾ । ದಮಿತಸು
ರಗಣಮೌಳಿಮಣಿಸಂ। ಕ್ರಮಣಚತುರಪದಾಬ್ಜಯೆಂದುದುವಂದಿಸಂದೋಹ ॥೪೪॥ ನೂಕಿದನು ಸುರ
ಪತಿ ಗಜವನ । ವ್ಯಾಕುಲರಲೇ ಕೃಷ್ಣಪಾರ್ಥರಿ । ದೇಕೆ ನಿಮಗೀವಾಸಿ ವಾಸವ ಲೇಸು ಮರಳುವುದು ॥
ನಾಕನಿಳಯರು ತಂದಗೆಲವೇ । ಸಾಕು ಸೋಲುವರಲ್ಲ ನಿಮಗೆ ವಿ । ವೇಕವುಳ್ಳೊಡೆ ತಿರುಗಿಯೆಂದನು
ಹರಿಗೆ ಕಲಿಪಾರ್ಥ ॥೪೫॥ ಜನಪ ಕೇಳಾಸಮಯದೊಳು ವಾ । ಗ್ವನಿತೆಯರಸನು ಗಗನಮಾರ್ಗದೊ ।
ಳನಿಮಿಷಾಧಿಪನಲ್ಲಿಗೈತರೆ ಕಂಡು ಸುರನಿಕರ ॥ ತನತನಗೆ ಭಾಳದಲಿ ನಿಜಕರ । ವನರುಹವ ಮುಗಿಯಿ
ಸಿದುಂದ್ರಂ । ಗನುವರವ ಮಾಣಿಸಲುಬೇಕೆಂದಿಳಿದನಬ್ಜಭವ ॥ ಮರುಳನೈ ನೀನಿವರನಾರೆಂ । ದರಿ
ಯಲಾ ನಾರಾಯಣನು ಮುರ । ಹರನು ನರನಲ್ಲಾ ಧನಂಜಯನಿವರು ಕಿರುಕುಳರೇ ॥ ಮರುಳು
ನೀನೆಂದಿಂದ್ರನಾನೆಯ । ತಿರುಹಿದನು ಪರಮೇಷ್ಠಿಯಿತ್ತಲು । ಧರಣಿಪತಿ ಕೇಳನಲಕೇಳಿಯನಾವನಾಂ
ತದಲಿ ॥೪೭॥ ಜಂಬುಚೂತಪಲಾಶವಟಡಾ । ಳಿಂಬಬಿಲ್ವತಮಾಲಚಂಪಕ । ನಿಂಬಬಕುಳಕಪಿತ್ಥಕುಟ
ಜವಶೋಕಪುನ್ನಾಗ । ತುಂಬುರರಳಿಲವಂಗಪೂಗಕ । ದಂಬಗುಗ್ಗುಳಸಾಲತಿಲಕೌ । ದುಂಬರಾದಿದ್ರು
ಮಕುಲವನಾಲಿಂಗಿಸಿತು ವಹ್ನಿ ॥೪೮॥ ಸುಳಿಸುಳಿದು ಶಶಿಕಾಂತಮಯದ । ಗ್ಗಳದ ವೇದಿಕೆಗಳಲಿ
ನೀಲದ । ನೆಲೆಯಚೌಕಿಗೆಗಳಲಿ ಮಂಟಪದಲಿ ಲತಾವಳಿಯ ॥ ಲಲಿತಸೌಧದ ಚಾರುಚಿತ್ರಾ । ವಳಿಯ
ಮೇಲ್ಕಟ್ಟುಗಳ ಭವನಂ । ಗಳಲಿ ಬಿಟ್ಟುದು ಕೂಡೆ ಪಾಳೆಯ ವಹ್ನಿಭೂಪತಿಯ ॥೪೯॥ ಕುರುಳತುಂ
ಬಿಯ ತನಿಗೆದರಿ ಮುಖ। ಸರಸಿಜವ ಚುಂಬಿಸಿ ತಮಾಲದ । ತುರುಬ ಹಿಡಿದಧರಪ್ರವಾಳದ ರಸವ ನೆರೆ
ಸವಿದು ॥ ಉರುಪಯೋಧರಬಿಲ್ವವನು ಹೊ । ಯ್ದೊರಸಿ ಕದಳಿಯನುಣ್ದೊಡೆಯನಿ । ಟ್ಟೊರಸಿ ರವಿ
ಸಿತು ವನಸಿರಿಯ ಪಿಪ್ಪಲದಳಾಂಗದಲಿ ॥೫೦॥ ಧರಣಿಪತಿ ಕೇಳ್ಶರಭಮೃಗಪತಿ । ಕರಿಕಳಭಶಾರ್ದೂಲ
ಸೂಕರ । ಕರಡಿಕಾಸರಶಲಭಮೃಗಾವಳಿಖಡ್ಗಗೋಮಾಯು । ಎರಳೆಮೊಲಸಾರಂಗವಾನರ । ನುರುಕು
ರಂಗಪ್ರಮುಖಮೃಗಕುಲ । ಮುರುಜಿಬಿದ್ದುದು ಧಳ್ಳುರಿಯ ಬೆಳ್ಳಾರವಲೆಗಳಲಿ ॥೫೧॥ ಶುಕಮರಾಳಮ
ಯೂರಟಿಟ್ಟಿಭ । ಪಿಕಚಕೋರಕಪೋತವಾಯಸ । ಬಕಪದಾಯುಧಚಕ್ರವಾಕಕಳಿಂಗಕಲವಿಂಕ ॥ ಕುಕಿ
ಲಸಾರಸಕಾಕಪುಟಾ । ತಕಭರದ್ವಾಜಾಟಪಕ್ಷಿ । ಪ್ರಕರ ಬಿದ್ದುದು ಬಿಗಿದಕೇಸುರಿಕಣ್ಣಿವಲೆಗಳಲಿ
॥೫೨॥ ಹರಡೆಗೀಜಗಮರಗೊಡಲೆಕಾ । ಬುರುಲೆಲಾವುಗೆಗೌಜುಪಾರಿವ । ನಿರಿಲೆಸಾಳುವಚಿಲಿಪಿಲಿಗ
ಚಂಬೋತಮೀನ್ಬುಲಿಗ॥ಮರಕುಟಿಗ ಕಬ್ಬಕ್ಕಿಕೊಟ್ಟುಗ । ವರಲೆ ಕೊಂಚೆ ಕಪಿಂಜ ಗಿಂಚಬುಗರಿಗಮೊ
ದಲಾದಖಿಳಖಗಕುಲ ಬಿದ್ದುದುರಿಯೊಳಗೆ ॥೫೩॥ ಜಳಕೆ ತಿಳಿಗೊಳದುದಕ ಕಾದು । ಚ್ಚಳಿಸಿದುವುತನಿ

ಗುದಿದುವೆತ್ತಾಸ್ಯ । ವಳಿಗಳಂಬುಜದೆಸಳು ಸೀದುವು ತುಂಬಿಗಳ ಸಹಿತ ॥ ಹಿಳಿದು ಸಿಡಿದುವು ಚಾರುಚಂದ್ರೋ । ಪಳರಚಿತಸೋಪಾನರತ್ನಾ । ವಳಿಯರಾಶಿಗಳಿದ್ದಲಾದುವು ಬಿದ್ದಕಿಡಿಗಳಲಿ ॥೩೪॥ ಇಟ್ಟಣಿಸಿ ಛಿಟಿಛಿಟಿಸಿ ಶಿಖಿ ಪುಟ । ವಿಟ್ಟುದೊಣಗಿಲ ಹೊದರಿನಲಿ ಮಿಗೆ । ತೊಟ್ಟ ಕಬ್ಬೊಗೆಜಗೆಯ ಹೊರಳಿಯ ಕಿಡಿಯ ಗಡಣದಲಿ ॥ ಹುಟ್ಟಿದುರಿ ಹೆಮ್ಮರನ ಸುತ್ತಲು । ಕಟ್ಟಿತಲ್ಲಿಯ ತೊಡಕಿನಲಿ ಭುಗಿ । ಲಿಟ್ಟ ಕವಿದುದು ತುದಿಗೆ ಬಹುಶಾಖೋಪಶಾಖೆಗಳ ॥೩೫॥ ಹೊಗೆಯ ಹಬ್ಬುಗೆ ಸತ್ಯಲೋಕವ । ನುಗಿದುದುರಿನಾಲಿಗೆಯ ಗರವೊ । ಟ್ಟುಗೆಯ ತೊಳಲಿಕೆ ತೆರಳಿಚಿತು ತೆತ್ತೀಸಕೋಟಿಗಳ ॥ ಹಗಲಗಡಿತು ಹೊಕ್ಕುದೋ ಕಡೆ! ಮುಗಿಲು ಕಾಣೆನು ದಿವವನೆತ್ತಣ । ಗಗನಮಣಿನಕ್ಷತ್ರಚಂದ್ರಮರರಸ ಕೇಳೆಂದ ॥ ಛಿಳಿಛಿಳಿಲು ಛಿಳಿರವದ ಘುಳುಘುಳುಘುಳುಘುಳುಧ್ವನಿಮಯದಿ ಕಪಿಗಳ । ಕಿಳಿಕಿಳಾಯತರವದ ಮೃಗಸಂಕುಳದ ಕಳಕಳದಿ ॥ ಹಿಳಿದುರಿವ ಹೆಬ್ಬಿದಿರ ಗಂಟಿನ । ಠಳಠಳತ್ಕಾರದಿ ದಿಶಾಮಂಡಳದ ಮೂಲೆಗಳೊಡೆದುದದ್ಭುತವಾಯ್ತು ವನದಹನ ॥೩೬॥ ಅರಸ ಕೇಳೈಮುನ್ನ ವಿತಳಕೆ । ಗರುಡಭಯವಾಯ್ತೆಂದು ತಕ್ಷನ । ನಿರಿಸಿದನು ನಿಜಸುತನನಮರೇಶ್ವರನನುಜ್ಞೆಯಲಿ ॥ ಇರಲಿರಲು ಸುತರಾದರಾತಂ । ಗುರಗ ವಂಶದೊಳಶ್ವಸೇನಗೆ । ಹಿರಿದು ಹೆಚ್ಚಿತು ತಕ್ಷಕನ ಸಂತತಿ ವನಾಂತದಲಿ ॥೩೭॥ ಆವ ಹಾವನವಹ್ನಿಭೂತ । ಸ್ತೋಮಸಂಹೃತಿಕರ್ಮಶೌರ್ಯೋ ॥ ದ್ದಾಮವವಗಾಹಿಸುತೆ ಬರುತಿರೆ ಮುಂದೆ ಚೋಣಿಯಲಿ ॥ ಧೂಮವಿಳಿದುದು ಹುತ್ತಿನಲಿ ನಿ । ಸ್ಸೀಮಜನಿತಜ್ವಾಲೆಗಳ ಜಳ । ವಾಮಹೋರಗಚಯವ ಚುಂಬಿಸಿತರಸ ಕೇಳೆಂದ ॥೩೮॥ ಹೂಸಿ ಹುತ್ತಿನ ಮಣ್ಣ ರಂಧ್ರಿಸಿ । ಕಾಸಿದವು ಫಣಿಕುಲವ ಮೇಣೊದ್ದಿ । ಳ್ಳಾಸದಲಿ ಡಾವರಿಸಿದವು ಕಿಡಿ ಧೂತಧೂಮದಲಿ ॥ ಅಸುರದ ಕಬ್ಬೊಗೆಯ ಕವಚದ । ಕೇಸುರಿಗಳೊಳಬಿದ್ದುದುರಿ ಹೊರ । ಸೂಸಿ ಹಿಡಿದುವು ಹಾವುಗಳ ಬಲುಹೊದರಹೊರಳಿಗಳ ॥೩೯॥ ಹೆಡೆಯಮಣಿಗಳ ಕಂಡು ಸೂಸಿದ । ಕಿಡಿಗಳ ಹಹಾಯೆನುತ ಶಿರಗಳ । ಕೊಡಹಿ ಮರುಗಿದರುರಗಿಯರು ಮರಿಗಳಿಗೆ ಮೈಚಾಚಿ ॥ ಕಡುಹೊಗೆಯ ಕೇಸುರಿಯ ಕಿಡಿಗಳ । ಗಡಣದಲಿ ಕೌರಿದ್ದು ಮೈಗಳ । ಕೊಡಹಿ ಬಿಸುಸುಯ್ಯುತ್ತ ಮುಗ್ಗಿದವಹಿಗಳುರಿಯೊಳಗೆ ॥೪೦॥ ಹುದಿದುರಿವ ಹುತ್ತಿನಲಿ ಕೂಳ್ಗುದಿ । ಗುದಿದು ಸರ್ಪಸ್ತೋಮಮಧ್ಯದೊ । ಳೊದೆದು ಹಾಯಿದನಶ್ವಸೇನನು ಗಗನಮಂಡಲಕೆ ॥ ಕೆದರಿದವು ಕೆಂಗಿಡಿಗಳುರಿಯುಬ್ಬಿದುದು ಘುಳುಘುಳುರಭಸ ಮಿಗೆ ಹೆ । ಚ್ಚಿದುದು ತಬ್ಬಿದುದೀತನನು ತಡವರಿಸಿ ಗಗನದಲಿ ॥೪೧॥ ಉರಿಯ ಗಂಟಲನೊದೆದು ಫಣಿ ಮಿ । ಕ್ಕುರವಣಿಸೆ ಹಾಹಾ! ಧನಂಜಯ । ಹರಿವುತಿದೆ ಹಾವೊಂದು ಹೋದುದು ಬಾಯ ತುತ್ತೆನಗೆ ॥ ತರಿಸಿ ಕೊಡು ಶರವೇಡೆಯನು ವಿ । ಸ್ತರಿಸು ವಹಿಲದೊಳೆನಲು ವೈಶ್ವಾ । ನರನ ಮಾತಿಗೆ ನಗುತ ಕೊಂಡನು ವಿಜಯ ಗಾಂಡಿವವ ॥೪೨॥ ಆವ ಶರಸಂಧಾನವೋ ಗಗ । ನಾವಲಂಬಿಯ ಕೊರಳನೆಚ್ಚನು । ಪಾವಕನ ಮಧ್ಯದಲಿ ಬಿದ್ದುದು ಮುಂಡವಹಿಪತಿಯಾ ॥ ಜೀವವುಳಿದುದು ಶಿರದೊಳಾತಂ । ಗಾವಿಗಡ ಫಣಿ ನುಡಿದುದೆಲೆ ಗಾಂ । ಡೀವಿ ಮರೆಯದಿರೆನ್ನ ಹಗೆಯಲಿ ಮರಣ ನಿನಗೆನುತ ॥೪೩॥ ಎಂದು ಗಗನದೊಳುಲಿದು ಫಣಿಶಿರ । ವಂದು ಪಾಯ್ದುದು ಧರೆಗೆ ರಾಧಾ । ನಂದನನ ಬತ್ತಳಿಕೆಯಲಿ ಶರವಾಗಿ ಜಗವರಿಯೆ ॥ ಸಂದುದದು ಬಳಿಕಿತ್ತಲಿಂದ್ರನ ನಂದನದ ಬೇಗೆಯಲಿ ಬದುಕಿತು । ವಂಧಪಾಳನ ಸುತಚತುಷ್ಟಯವರಸ ಕೇಳೆಂದ ॥೪೪॥ ಮೆಚ್ಚಿಸಿದುದವು ವಹ್ನಿ ಸೂ

ಕ್ತವ । ನುಚ್ಚರಿಸಿ ತಜ್ಜ್ವಲನಮುಖವನು । ಬಿಟ್ಟಿ ಬದುಕಿದುವಾಮುನಿಯ ಸಂತಾನಪಕ್ಷಿಗಳು ॥ ಹೆಚ್ಚಿದುರಿಹಬ್ಬುಗೆಯ ಹೊಯ್ಲಲಿ । ಬೆಚ್ಚಿ ಮಾಯನರ್ಜುನನ ಹೊಗಳಿದು । ಕಿಚ್ಚಿನಲಿ ಬದುಕಿದನು ಧರಣೀಪಾಲ ಕೇಳೆಂದ ॥೬೬॥ ಖಗಚತುಷ್ಟಯಮಯಸಹಿತಮುರಿ । ಲುಗುಳಿತುಳಿದಸಮಸ್ತಭೂತಾ । ಳಿಗಳನಾಹುತಿಗೊಂಡನಗ್ನಿ ಧನಂಜಯಾಜ್ಞೆಯಲಿ ॥ ಗಗನದಿಂದಿಳಿದಂದು ಸುರಪತಿ । ಮಗನ ಮನ್ನಿಸಿಕೊಟ್ಟನಗ್ಗದ । ಗಗನಮಣಿಗೆಣೆಯೆನಿಪಮಕುಟವನೊಲಿದು ಪಾರ್ಥಂಗೆ ॥೬೭॥ ಹರಿಗೆ ವಂದಿಸಿ ಮಗನನೊಲಿದಾದರಿಸಿ ಮರಳಿದನಿಂದ್ರನಿತ್ತಲು । ಭರದಿನಿವರೈತಂದರಿಂದ್ರಪ್ರಸ್ಥಪುರವರಕೆ ॥ ಧರಣಿಪತಿಗಾಖಾಂಡವದ ಧಳ್ಳುರಿಯ ಹೋಮದ ಹೊಸಕಥೆಯ ವಿಸ್ತರಿಸಿ ಹೇಳಿದನಸುರರಿಪು ಭೀಮಾದಿಗಳು ನಲಿಯೆ ॥೬೮॥ ಧಾರಿಣೀಶ್ವರರೈವರನು ಸುಕು । ಮಾರವರ್ಗವನಾಸುಭದ್ರಾ ನಾರಿಯನು ಪಾಂಚಾಲೆಯನು ತತ್ಸಕಲಬಾಂಧವರ ಸೂರಿಗಳ ಸಚಿವಾದಿನೃಪರ । ವಾರವನು ಪತಿಕರಿಸಿ ಬಂದನು । ದ್ವಾರಕಿಗೆ ಹರುಷದಲಿ ಗದುಗಿನವೀರನಾರಯಣ ... ... ... ॥೬೯॥

ಅಂತು ಸಂಧಿ ೨೦ ಕ್ಕೆ ಪದ ೯೪೩ ಕ್ಕಂ ಮಂಗಳಮಸ್ತು.



ಇತಿ ಶ್ರೀಮದ್ವೆಂಕಟಮಹಿಮ ಗದುಗು ವೀರನಾರಾಯಣಚರಣಾರವಿಂದ ಮಕರಂದ ಮಧುಪಾನಪುಷ್ಟವಚಃ
ಷಟ್ಪದೀ ನಿಕಾಯ ಶ್ರೀಮತ್ಕುಮಾರವ್ಯಾಸ ಯೋಗೀಂದ್ರ ವಿರಚಿತಮಪ್ಪ ಕರ್ಣಾಟ
ಭಾರತ ಮಹಾಪ್ರಬಂಧದೊಳ್ ಆದಿಪರ್ವಂ ಸಮಾಪ್ತಮಾದುದು.





॥ ಶ್ರೀರಸ್ತು ॥

ಶ್ರೀ ವೇದವ್ಯಾಸಾಯ ನಮಃ.

# ಕರ್ಣಾಟಭಾರತ — ಸಭಾಪರ್ವವು.

ಸೂಚನೆ । ಸಭೆಯೊಳೋಲಗದೊಳು ವಿರಿಂಚಿ ಪ್ರಭವನನುವ್ರತದಿಂದ ಧರಣೀ । ವಿಭು ಮಹಾಕ್ರತುರಾಜಸೂಯವನೊಲಿದು ಕೈಕೊಂಡ ॥

ಕೇಳು ಜನಮೇಜಯಧರಿತ್ರೀ । ಪಾಲ ಖಾಂಡವವನದ ವಹ್ನಿ । ಜ್ವಾಲೆ ತೆಗೆದುದು ಕೂಡೆ ಹೊಗೆದುದು ಹೊದರ ಹೊಸಮೆಳೆಯ ॥ ಮೇಲುಗಾಳಗದಬ್ಬರದಲಿ ಸಿರಿ । ಲೋಲಸಹಿತರ್ಜುನನು ವಿಕ್ರಮ ದೇಳಿಗೆಯ ಪರಿತೋಷದಲಿ ತಿರುಗಿದನು ಪಟ್ಟಣಕೆ ॥೧॥ ದೂತರೈದಿದರವರ ಸೂರೆಯ । ಕೈತವಕಿಗರು ಕೃತಕವಾರ್ತರ । ಭೀತಪುರಜನಮುಖದ ದುಗುಡದ ದಡ್ಡಿಗಳನುಗಿದು ॥ ಬೀತುದಿಂದ್ರನ ಬಲುಹ ವಿಗಡನ । ವೀತಿಹೋತ್ರನ ವಿಲಗ ತಿದ್ದಿ ವಿ । ಧೂತಪುರಬಲ ಬಂದನಿದೆಯೆಂದರು ಮಹೀಪತಿಗೆ ॥೨॥ ಹೂತುದರಸನ ಹರುಷಲತೆ ಫಲು । ಹೂತವಿಜಯದ ವಿಜಯವಾರ್ತೆಯ । ಶ್ರೋತ್ರಸುಖಸಂಪ್ರೀತಿನಯನಜಲಾಭಿಷೇಕದಲಿ ॥ ಮಾತು ಕುಂಚಿತ ಮುಂಚಿದುದು ಸಾಯ । ಸಾತಿಥಿವ್ರಜಮುಕುಳಿತಸುರವಿ। ಘಾತಿಪಾರ್ಥನನಿಲಸುತನಕುಲಾಟಬಾಂಧವರ ॥೩॥ ತಳಿತಗುಡಿಗಳ ಸಾಲಕಲಶದ । ನಿಳಯನಿಳಯದ ಬೀದಿಬೀದಿಯ । ತಳಿತತೋರಣದೋರಣದನವಮಕರತೋರಣದ ॥ ತಳಿಗೆದಂಬುಲದಾರತಿಯ ಮಾಂ। ಗಳಿಕರಭಸದೊಳಖಿಳರಾಜಾ । ವಳಿಗಳೊಸಗೆಯೊಳಿವರು ಹೊಕ್ಕರು ರಾಜಮಂದಿರವ ॥೪॥ ಹಿರಿಯ ರಂಘ್ರಿದ್ವಯಕೆ ಮಣಿದರು । ಕಿರಿಯರುಚಿತಕ್ಷೇಮಕುಶಲದಿ । ಪುರರಚಿತಪುರರಂಭಮಧುರವಚೋವಿಳಾಸದಲಿ॥ ಅರಸನಿವರನು ಮನ್ನಿಸಿದನಾ । ದರಿಸಿತನ್ಯೋನ್ಯಾನುರಾಗ। ಸ್ಫುರಿತತೇಜೋಭಾವವಿಭ್ರಮ ಭೂಪತಿವ್ರಾತ ॥೫॥ ಅರಸ ಕೇಳ್ ಬಳಿಕ ಹರಿ ನಿಜ । ಪುರಕೆ ಬಿಜಯಂಗೈವವಾರ್ತೆಯ । ನೊರೆದನವನೀಪತಿಗೆ ಭೀಮಧನಂಜಯಾದ್ಯರಿಗೆ ॥ ಅರಸಿಯರುಗಭಿಮನ್ಯುಧರ್ಮಜ । ನರವೃಕೋದರಸೂನುಮೊದಲಾ । ಗಿರೆ ಸಮಸ್ತಜನಂಗಳನು ಮನ್ನಿಸಿದನುಚಿತದಲಿ ॥೬॥ ವರಮುಹೂರ್ತದೊಳಮೃತಯೋಗೋ । ತ್ಕರಶುಭಗ್ರಹದೃಷ್ಟಿಯಲಿ ಹಿಮ । ಕರಶುಭಾವಸ್ಥೆಯಲಿ ಕೇಂದ್ರಸ್ಥಾನಗುರುವಿನಲಿ ॥ ಧರಣಿಸುರರಾಶೀರ್ವಚನವಿ । ಸ್ತರಣದಧಿದೂರ್ವಾಕ್ಷತೆಗಳ । ಬ್ಬರದವಾದ್ಯಗಡಾವಣೆಯಲಸುರಾರಿಹೊರವಂಟ ॥೭॥ ಕರಯುಗದ ಚಮ್ಮಟಿಕೆ ವಾಘೆಯ । ಲರಸರಥವೇರಿದನು ಮುಕ್ತಾ । ಭರದ ಭಾರದ ಸತ್ತಿಗೆಯ ಪಲ್ಲವಿಸಿದನು ಭೀಮ ॥ ಹರಿಯ ಭುಜಪಾರ್ಶ್ವದಲಿ ಸಿತಚಾ । ಮರವ ಚಿಮ್ಮಿದನರ್ಜುನನು ಬಂ । ಧುರದ ಹಡಪದ ಹೆಗಲ್ಕೈದಿದರರ್ಜುನಾನುಜರು ॥೮॥ ಪೌರಜನಪುರಜನನೃಪಾಲಕು

ಮಾರಸಚಿವಪಸಾಯ್ತಭಟಪರಿ । ವಾರ ಧೌಮ್ಯಪ್ರಮುಖಸೂರಿಸಮಾಜರೊಗ್ಗಿನಲಿ ॥ ತೇರಬಳಿವಿಡಿದೈ
ದಿದರು ಮುರರಿ । ವೈರಿ ವಿರಹವಿಧೂತವದನಾಂ । ಭೋರುಹರ ಸಂತೈಸಿ ಬೀಳ್ಕೊಟ್ಟನು ಕೃಪಾಜಲಧಿ
॥೯॥ ಅನಿನ್ನೃಪರು ಕುಹಕಿಗಳು ನೀವೇ । ಸರಸಹೃದಯರಧರ್ಮಶೀಲರು । ಪರರು ನೀವತಿಧರ್ಮನಿ
ಷ್ಠರು ಹಾನಿಯುಂಟದಕೆ ॥ ಅರಸನಾರೋಗಿಸೆ ವಿಹಾರದೊಳಿರುಳುಹಗಲು ಮೃಗವ್ಯಸನನೆ । ಚ್ಚರಿ
ನೊಳಿಹುದೆಂದನಿಬರನು ಬೀಳ್ಕೊಟ್ಟನಸುರಾರಿ ॥೧೦॥ ಸಾಲಗಗಳಸುರಾರಿಗುಣಸಾ । ಮಾಳಿಯಲಿ
ತುರುಗಿದವು ಕಂಗಳು । ನೀಲಮೇಘಶ್ಯಾಮನಲಿ ಬೆಚ್ಚವು ನಿಹಾರದಲಿ ॥ ಬಾಲಕೇಳೀಕಥನ ಸುಧೆ
ಯೊಳ । ಗಾಳಿ ಮುಳುಗುತ ಕಳುಹುತನಿಬರು । ಸಾಲಭಂಜಿಕೆಯಂದದಾದರು ಕೃಷ್ಣವಿರಹದಲಿ
॥೧೧॥ ಕಳುಹಿ ಕಂಗಳು ಮರಳಿದವುಮನ । ಕಳುಹದಾದ್ವಾರಾವತಿಗೆ ಮಂ । ಗಳಮಹೋತ್ಸವದೊ
ಸಗೆನುಡಿಯಲಿ ಹೊಕ್ಕನಸುರಾರಿ ॥ ಬಳಿಕವರು ನಿಜರಾಜಭವನ । ಸ್ಥಳಕೆ ಬಂದರು ಸೌಮನಸ್ಯದ ।
ಲಿಳೆಯ ಪಾಲಿಸುತಿರ್ದರವ ನೀಪಾಲ ಕೇಳೆಂದ ॥೧೨॥ ಮುರಹರನ ನೇಮದಲಿ ಮಯ ವಿ । ಸ್ತರಿ
ಸಿದನು ಪುನರಾಲ್ಕೃತಿಗಳು । ವರಸಭಾಮಂಟಪವನನಿಬರಿಗವಕೃತಜ್ಞನಲೆ ॥ ಕಿರಣಲಹರಿಯ ವಿವಿ
ಧರತ್ನೋ । ತ್ಕರದ ರಚನಾಶಿಲ್ಪವಿದು ದೇ । ವರಿಗಸಾಧ್ಯವು ಶಿವಶಿವಾ ಯೆನೆ ಮೆರೆದುದಾಸ್ಥಾನ ॥೧೩॥
ಹತ್ತುಸಾವಿರಕೈಪ್ರಮಾಣದ । ಸುತ್ತುವಳಯದ ಮಣಿಯಶಿಲೆಗಳ । ತತ್ತವಣೆಗಳ ತಕ್ಕವೆಳಗಿನ
ಬಳಿಯ ಲಮಗಳಾ ॥ ಸುತ್ತುವಳಯದ ಪದ್ಮರಾಗದ । ಭಿತ್ತಿಗಳ ವೈಡೂರ್ಯಶಿಲೆಗಳ । ಮತ್ತವಾ
ರಣವೆರಪಿಧಾನವಲೆಸೆವ ದಾಸ್ಥಾನ ॥೧೪॥ ಕರೆಸಿದನು ಮಯನೆಂಟುಸಾವಿರ । ಸುಗರಕ್ಕಸಕಿಂಕರ
ರ ನಿಜ ಶಿರದೊಳಾಂತರು ತಂದರಿಂದ್ರಪ್ರಸ್ಥಪುರವರಕೆ ॥ ಅರಸಗಾಣಿಸಿಕೊಂಡನದನಾ । ದರಿಸಿದನು
ಭೀಮಂಗೆ ಭಾರಿಯ । ವರಗದಾದಂಡವನು ಕಿಂಕರರಿತ್ತುಪೂಜಿಸಿದನು ॥೧೫॥ ಇದು ಪುರಾತನಸಗರ
ವಂಶಾ । ಭ್ಯುದಯಯುವಜನಿಯ ಯುವನಾಶ್ವನ । ಗದೆ ಕೃತಾಂತನ ಕರದ ದಂಡವನಂದಲೆವಬಲದಾ॥ ಮು
ದದಲೊಪ್ಪುವುದೆನುತ ಮಯನತಿ । ಮುದದಿ ಬಳಿಕಾದೇವದತ್ತಾ । ಖ್ಯದಮಹಾಶಂಖವನು ಪಾರ್ಥಗೆಕೊ
ಟ್ಟಕೈಮುಗಿದ ॥೧೬॥ ಬಸಗೆ ಮೆರೆದಮಯನ ಮಗೆ ಮನ್ನಿಸುವನವನಿಪನಂಗಚಿತ್ತದೊ । ಳಸು
ರಕಿಂಕರರನಿಬರನು ಸನ್ಮಾನದಾನದಲಿ ॥ ಬಸಿದ ಕಳುಹಿದನಾತನನು ದೆಸೆ । ದೆಸೆಯ ಯಾಚಕನಿಕರ
ನೂಕಿತು । ವಸುಕೆತ್ತು ಧರ್ಮಜನ ಕೀರ್ತಿಯ ಝಳಾಡಿ ಮಾಡಿಗದ ॥೧೭॥ ದಿವಸದಿವಸದೊಳುಂಡುದ
ವನೀ । ದಿವಿಜಸಂತತಿ ಹತ್ತುಸಾವಿರ । ವವರನೇನೆಂದೆಣಿಸುವೆನು ಮಾರ್ಗಣಮಹೋದಧಿಯ ॥
ವಿವಿಧರತ್ನಾಭರಣಕಾಂಚನ । ನವದುಕೂಲದ ದಿಂಡಿನಲಿ ಬುಧ । ನಿವಹ ತಣಿದುದನಂತಕೃಪಣಾ
ನಾಥಜನಸಹಿತ ॥೧೮॥ ಆಮಹೋತ್ಸವವೇಳುದಿನವಭಿ । ರಾಮರಂಜಿತವಾಯ್ತು ಶುಭದಿನ ।
ರಾಮಣೀಯಕಲಗ್ನದಲಿ ಹೊಕ್ಕನು ಮಹಾಸಭೆಯ ॥ ಭೂಮಿಪಾಲರನಂತಸುಜನ । ಸ್ತೋಮವವನು
ಜರಮರ್ತ್ಯರನಿಪಸ ॥ ಸಾಮಂತದ್ವರು ರಾಯನೆಡವಲವಂಕದಿಂದಲಿ ॥೧೯॥ ಹೊಳೆಹೊಳೆದುದಾ
ಸ್ಥಾನಕಾಂತಾ । ವಳಿಯ ಕಂಗಳ ದೆಳಗಿನಲಿ ತನಿ । ಮುಳುಗಿತೋಲಗ ಲಲಿತರಸಲಾವಣ್ಯಲಹರಿಯಲಿ ॥
ವಿಲಸವಖಿಳಾಭರಣರತ್ನಾ । ವಳಿಯ ರಶ್ಮಿಯಲದ್ದಿಗಡಗ ಪ । ಜ್ವಳಿಸಿತಾಸಭೆ ದೀಪ್ತಿಮಯವಿವಿಧಾ
ನುಭಾವದಲಿ ॥೨೦॥ ಮೇಳವದಲಿ ಗಂಧರ್ವರಪ್ಪ । ತ್ತೇಳುತುಂಬುರಸಹಿತಶುದ್ಧದ । ಸಾಳಗದಸಂಕೀ

ರ್ಣದೇಶಿಯವಿವಿಧರಚನೆಗಳ ॥ ಬಾಳೆಯರ ಸುರಗಣಿಕೆಯರ ಮುಖ । ಚಾಳೆಯರ ಸಂಗೀತತಾಳದ । ತೊಳುವರೆ ತುಂಬಿದುದು ಕುಸುಮಾಯುಧನ ಕಳಕಳವ ॥೨೧॥ ಆ ಮಹಾಸಭೆಯಲಿ ಯುಧಿಷ್ಠಿರ । ಭೂಮಿಪತಿ ದೂರದಲಿ ಕಂಡನು । ತಾಮರಸದಳನಯನಸಂನಿಭ ಭಾವಭಾವಿತನಾ ॥ ಹಾ ಮಹಾದೇವೆತ್ತಣದ್ಭುತ । ಧಾಮವಿದು ದಿನಮಣಿಯ ತೇಜ । ಸ್ತೋಮವೆರಡರ ಧಾತುವೆನುತೀಕ್ಷಿಸಿದರಾಡೆಸೆಯ ॥ ಲಲಿತತೇಜಃಪುಂಜ ಮಿಗೆ ಥಳ । ಥಳಿಸಿತತಿದೂರದಲಿ ಬೆಳಗಿನ । ಗೊಳಸನುಡಿದಂತಾದುದಾಗಳೆ ತೋರಿತಾಕಾರ ॥ ತಳಿತುದವಯವ ಶುದ್ಧವರ್ಣ । ಸ್ಥಳವು ನಿಮಿಷಕೆ ಮುನಿವರಾಕೃತಿ । ಹೊಳೆದುದಾಕ್ಷಣವೀತನಾರದನೆಂದುದಖಿಳಜನ ॥೨೩॥ ದಣಿಯದಾತನ ಬೆರಳು ನಾರಾ । ಯಣರವದ ವೀಣೆಯಲಿ ಹೃದಯಾಂ । ಗಣದ ಸೀಮೆಗೆ ಬಿಡಯವಾಗದು ಕೃಷ್ಣಪದಕೇಳಿ ॥ ಪ್ರಣವರೂಪದ ಭಾವಶುದ್ಧಿಯ। ಕಣಿ ಮುರಾರಿಯ ತನ್ಮಯದನಿ । ಗರ್ಣಮುನೀಶ್ವರನಿಳಿದನಿಂದ್ರಪ್ರಸ್ಥಪುರವರಕೆ ॥೨೪॥ ಬಂದನರಮನೆಗಾ ಮುನಿಯನಭಿ । ವಂದಿಸಿದುದಾಸ್ಥಾನವಿದಿರಲಿ । ನಿಂದು ಬಿಜಯಂಗೈಸಿ ತಂದರು ಸಿಂಹವಿಷ್ಟರಕೆ ॥ ಸಂದ ಮಧುಪರ್ಕಾದಿಸತ್ಕೃತಿ । ಯಿಂದ ಪೂಜಿಸಿ ವಿನಯ ಮಿಗೆ ನಗು । ತೆಂದನವನೀಪಾಲನುಚಿತೋಕ್ತಿಯಲಿ ನಾರದನ ॥೨೫॥ ಕುಸಲವೇ ನಿಮ್ಮಂಘ್ರಿಗಳಿಗಂ । ದೊಸಗೆ ಯಾಯಿತ್ತು ನಮಗೆ ದರುಶನ । ವಸಮಸಂಸ್ಕೃತಿಪಙ್ಕದಗ್ಧರಿಗಮೃತವರ್ಜವಲೇ ॥ ಪಶುಪತಿಯ ಪರಮೇಷ್ಠಿಯ ಮುರ । ದ್ವಿಷನ ಸಾಮರ್ಥ್ಯದ ಸಗಾಢದ। ದೆಸಕ ನಿಮಗಂಟೆಂದು ಕೊಂಡಾಡಿದನು ನಾರದನ ॥೨೬॥ ಕುಶಲವೆಮಗಿಂದೈದೆ ನೀನೀ । ವಸುಮತೀಮಧುಗೊಳ್ಳಿದನೆ ಶ್ರೋ । ಭಿಸುವುದೇ ಭವದಾಜ್ಞೆಯಲಿ ವರ್ಣಾಶ್ರಮಾಚಾರ ॥ ದೆಸೆದೆಸೆಗಳಮಳಾಗ್ನಿಹೋತ್ರ । ಪ್ರಸರಧೂಮಧ್ವಜಗಳೇ ನಿಂ । ದಿಸರಲೇ ದುರ್ಜನರು ಸುಜನರನೆಂದನಾ ಮುನಿಪ ॥೨೭॥ ಅರ್ಥದಿಂ ಧರ್ಮವನು ಧರ್ಮದಿ। ನರ್ಥವನು ಧರ್ಮಾರ್ಥವೆರಡನು । ವ್ಯರ್ಥಕಾಮದ ಲಳಿಯಲೇ ರಾಜ್ಯಾಭಿಲಾಷೆಯಲಿ ॥ ಅರ್ಥಸಾಧನಧರ್ಮಸಾಧನ । ವರ್ಥಧರ್ಮದಲುಭಯಲೋಕಕ। ನರ್ಥಸಾಧನ ಕಾಮವೆಂದನು ಮುನಿ ನೃಪಾಲಂಗೆ ॥೨೮॥ ಮಾನ್ಯರನು ಧಿಕ್ಕರಿಸಮೇಣವ । ಮಾನ್ಯರನು ಮನ್ನಿಸೆಯಲೇಸು । ಮಾನ್ಯರನುಸತ್ಕರಿಸುವಾಹಳಿವಾಧಿಕಾರಿಗಳ ॥ ಅನ್ಯರನು ನಿನ್ನವರ ಮಾಡಿಯ । ನನ್ಯರನು ಬಾಹಿರರ ಮಾಡಿವ । ದಾನ್ಯರನು ನಿಗ್ರಹಿಸೆಯೆಲೆಭೂಪಾಲ ಕೇಳೆಂದ ॥೨೯॥ ಖಳರ ಖಂಡಿಸುವಾಮದವ್ಯಾ । ಕುಲರ ದಂಡಿಸುವಾದರಿದ್ರರ । ನೊಲಿದು ರಕ್ಷಿಸುವಾಸುಮಾಯಾವಿಗಳ ಶಿಕ್ಷಿಸುವಾ ॥ ಕುಲಯುತರ ಕೊಂಡಾಡುವಾರಿಪು। ಬಲದತಲೆಚಂಡಾಡುವಾದು । ಬರ್ಲರನತಿಬಾಧಿಸೆಯೆಲೇ ಭೂಪಾಲಕೇಳೆಂದ ॥೩೦॥ ಜಾತಿಸಂಕರವಿಲ್ಲಲೇ ಜನ । ಜಾತದಲಿ ಹೀನೋತ್ತಮರು ನಿ । ರ್ನೀತರೇ ನಿಜಮಾರ್ಗದಲಿ ಕುಲವಿಹಿತಧರ್ಮದಲಿ ॥ ಖ್ಯಾತರೇ ಸತ್ಪುರುಷರಧಿಕ । ದ್ಯೂತಕೇಳಿಗಳಿಲ್ಲಲೇ ಮೃಗ । ಯಾತಿರೇಕವ್ಯಸನಕಿರಿದೇ ರಾಯನಿನಗೆಂದ ॥೩೧॥ ಘುಸಣಿಯಿಲ್ಲಲೆನಿನಗೆ ಸಪ್ತ । ವ್ಯಸನದಲಿ ನಿನ್ನನುಜತನುಜರ । ಮುಸುಡಧರ್ಮದಲಿರದಲೇ ವೈದಿಕವಿಧಾನದಲಿ ॥ ಸಸಿನವೇ ನಿನ್ನರತಖಳರಿಗೆ । ಹುಸಿಕರಿಗೆ ಡಂಬಕರಿಪಜ್ಞರಿ । ಗುಸುರುವಾ ನಿನ್ನಂತರಂಗವನೆಂದನಾ ಮುನಿಪ ॥೩೨॥ ಹುರುಡಿಗೆರ ನೇಕಾಂತದೊಳಗಾ । ದರಿಸುವರು ಭೇಡಕರ ಬುದ್ಧಿಗೆ। ತೆರಹುಗೊಡುವರು ಕುಟಿಲರಿಗೆ ವಿಶ್ವಾಸಹೀನರಿಗೆ ॥ ಮರುಳುಗೊಂಬರು ಖೂಳರಿಗೆ ಭಂ । ಡರಗೆ

ತೆರುವರು ಧನವನೀಧರೆ । ಯರಸುಗಳಿಗಿದು ಸಹಜ ನಿನ್ನಂತಸ್ಥವೇನೆಂದ ||೩೩|| ಒಳಗೆ ಕುಜನರು ಹೊರಗೆ ಧರಣೀ । ವಳೆಯವಮಾನ್ಯರು ಛತ್ರಚಮರದ । ನೆಳಲು ಖೂಳರಿಗಾತಪದ ಬಲುಬೇಗೆ ಬುಧ ಜನಕೆ || ಒಳಗೆ ರಾಜದ್ರೋಹಿಗಳು ಹೊರ । ವಳೆಯದಲಿ ಪತಿಕಾರ್ಯನಿಷ್ಠರು । ಬಳಸಿಹುದು ನೃಪ ಚರಿತ್ರನಿನ್ನಂತಸ್ಥವೇನೆಂದ ||೩೪|| ಖೂಳರೊಡನೆ ವಿನೋದ ಭಂಡರೊ । ಳಾಳಿ ಸ್ವಾಮಿದ್ರೋಹರೊಡನೆ ಸ । ಮ್ಮೇಳ ನಂಬುಗೆ ಡಂಭರೊಡನೆ ವಿಕಾರಿಯೊಡನಾಟ || ಸೂಳೆಯರು ಸಮಜೀವಿಗಳು ಕುಲ । ಬಾಲಕಿಯ ರೋಗಡಿಕೆಯವರು ನೃ । ಪಾಲಜನಕಿದು ಸಹಜ ನಿನ್ನಂತಸ್ಥವೇನೆಂದ ||೩೫|| ಅರುಗುಣದೊಳುಪಾಯನಾಲ್ಕರೊ । ಳೇರಿಹುದೆ ಮನ ರಾಜಧರ್ಮದ । ಮೂರುವರ್ಗದೊಳಿಚ್ಛೆರುಂಟೇ ನಯವಿಧಾನದಲಿ || ಮೂರುಶಕ್ತಿಗಳೊಳಗೆ ಮನ ಬೇ । ರೂರಿಹುದೆ ಸಪ್ತಾಂಗವಲಿ ವ್ಯ । ದೋರಿಹ್ಯ ಬೇಸರೆಯಲೇ ಭೂಪಾಲ ನೀನೆಂದ ||೩೬|| ಪ್ರಜೆಗಳನುರಾಗಗಳೆ ಸುಭಟ । ವ್ರಜಕೆ ಜೀವಿತ ಸಂದಿಹುದೆ ವರ । ಸುಜನರಿಗೆ ಸಂತೋಷವೇ ಮಧುರೋಕ್ತಿರಚನೆಯಲಿ || ವಿಜಯಭೀಮರು ಯಮಳರಿವರ । ಗ್ರಜರೊಳನುಜರಭಿನ್ನರೇ ಗಜ । ಬಜಕೆಯಂತಃಪುರದೊಳಿಲ್ಲಲೆ ರಾಯ ಕೇಳೆಂದ ||೩೭|| ವಿಹಿತಕಾಲದಮೇಲೆ ಸಂಧಿಯ । ಸಹಿತರೊಳು ವಿರಚಿಸುವವೋಣ್ವ । ಗ್ರಹದ ಕಾಲಕೆ ವಿಗಡಿಸುವುದೆಂಬರಸುನೀತಿಯಲಿ || ವಿಹಿತವೇ ಮತಿ ವೈರಿರಾಯರ । ವಿಹರಣವನವರಾಳ್ಕುಕುಮ್ಮರೆಯ । ಬಹಳತೆಯನಲ್ಪತೆಯನರಿವೈ ರಾಯನೀನೆಂದ ||೩೮|| ಬಂಪರಾಯಕೆ ಬೀಯ ಸಂ ಮ । ತ್ತೊಂದುಕಡೆಯಲಿ ಹೀನಫಲವಿ । ನ್ನೊಂದುಕಾರ್ಯದುಪೇಕ್ಷೆತೆಗೆ ಮೊದಲಿಲ್ಲಕಡೆಯಿಲ್ಲ || ಒಂದುದುರ್ಘಟದೈವನಾಘಾತ । ವೊಂದುಶಂಕಿತ್ರಪಲವೆನಿಪ್ಪವ । ಹಿಂದುಗಳವೈ ಮಂತ್ರದಲಿ ಭೂಪಾಲಕೇಳೆಂದ ||೩೯|| ನೆನೆದಮಂತ್ರವನಿನ್ನೊಳಾಲೋ । ಚನೆಯ ನಿಶ್ಚಯವಿಲ್ಲದಿರಲೊ । ಬ್ಬನಲಿ ಮೇಣ್ಣಾಲಬರಲಿ ಜಡರಲಿ ಮತಿವಿಹೀನರಲಿ || ಮನಬರಡರಲಿ ಸಲೆ ವಿಧಾವಂ । ತನಲಿ ಮಂತ್ರಾಲೋಚನೆಯ ಸಂ । ಜನಿಸಿ ಪರಹಿನೊಳಳಿಯಲೇ ಭೂಪಾಲ ಕೇಳೆಂದ ||೪೦|| ಕಿರಿದುಪೇಕ್ಷೆಯ ಬಹಳಫಲವನು । ಹೊರೆವುದಿದು ಮೇಣಲ್ಪಭೇದಕೆ । ಮುರಿವುದಿದು ವಿಕ್ರಮಕೆ ವಶವಿದು ನೀತಿಸಾಧ್ಯವಿದು || ಹರಿವುದಿದು ನಯಶಕ್ತಿಗೆಂಬುದ । ನರಿಮ ನಡೆವೈ ರಾಜಧರ್ಮದ । ಹೊರಗೆಯನು ಮರೆದಿರೆಯಲೇ ಭೂಪಾಲ ಕೇಳೆಂದ ||೪೧|| ಪರರು ಮಾಡಿದಸದ್ಗುಣಂಗಳ । ಮರೆಯಲೇ ಪರರವಗುಣಂಗಳ । ಮರೆದು ಕಳೆವಾವಮಾನ್ಯರಿಗೆ ನೀಮಾಡಿದವಗುಣವ || ಮರೆಯಲೇ ನೀಮಾಡುವುಚಿತವ । ಮರೆದು ಕಳೆವಾ ಸಾರವಿದು ಸ । ತ್ಪುರುಷರಭಿಮತವಿದು ಕಣಾ ಭೂಪಾಲ ಕೇಳೆಂದ ||೪೨|| ಭಜಿಸುವಾಭಕ್ತಿಯಲಿ ದೈವ । ದ್ವಿಜಗುರುಸ್ಥಾನವನು ದೇಶ । ಪ್ರಜೆಯನರ್ಥಾಗಮದ ಗಡಣಗೆ ಗಾಸಿಮಾಡೆಯಲೆ || ಕುಜನರಭಿಮತದುಗ್ರದಂಡ । ವ್ಯಜನದಲಿ ಜನಜತರವಹ್ನಿಯ । ಸೃಜಿಸೆಯಲೆ ಭವದೀಯರಾಜ್ಯಸ್ಥಿತಿಯಹೇಳೆಂದ ||೪೩|| ಆಣೆಗಪಜಯವಿಲ್ಲಲೇ ಕೇ । ಳಾಣೆಟಂಕದೊಳಿಲ್ಲಲೇ ನಿ । ತ್ರಾಣದಲಿ ಸಂಗರವ ಹೊಗೆಯಲೆ ಶೌರ್ಯಗರ್ವದಲಿ||ವಾಣಿಯ ವಸುಚಿತವಲಿ ಧರ್ಮದ । ಲೂಣೆಯವ ನಹಿತರಲುಪೇಕ್ಷೆಯ । ಕೇಣವನು ದಾನದಲಿ ಮಾಡೆಲೆರಾಯಕೇಳೆಂದ ||೪೪|| ಕಳವು ಪುಸಿ ಹಾದರ ವಿರೋಧ । ಸ್ಖಲಿತವಾರಡಿ ಬಂದಿ ದಳವುಳ । ಬೆಳುಗವತೆಯನ್ಯಾಯ ಪ್ರಭವ ತಕ್ಕುಡೊಳ್ಳಾಸ ||ಪಳಿವುವಂಚನೆ ಜಾತಿಸಂಕರ । ಕೊಲೆವಿರೋಧವುವಿಕೃತಮಾಯಾ । ವಳಿಗಳೆಂಬಿವು ನಿನ್ನೊ

ಳಿಲ್ಲೆಲೆರಾಯ ಕೇಳೆಂದ ॥೪೬॥ ರಣಮುಖದೊಳಂಗನೆಯಲಾರೋ ೯ಗಣೆಯಲರಿಗಳ ಕೂಟದಲಿ ವಾ| ರಣತುರಗದೇರಾಟದಲಿ ವಿವಿಧಾಯುಧಂಗಳಲಿ ॥ ಎಣೆನೃಪರ ಸೋಂಕಿನಲಿ ಸಜ್ಜೆಯ । ಲಣೆಯುಮ ಜ್ಜನದಲಿ ಮಹಾಮೃಗ। ಗಣನೆಯೊಳಗೆಚ್ಚರಿಕೆಯುಂಟೇ ರಾಯ ನಿನಗೆಂದ ॥೪೬॥ ನುಡಿದೆರಡನಾಡ ದಿರು ಕಾರ್ಯವಿಬಿಡದಿರಾವನೊಳಾದೊಡೆಯು ನಗೆ । ನುಡಿಯ ಕುಂದದಿರೊಡೆಯದಿರು ಹೃದಯವನು ಕಪಟಿಯಲಿ ॥ ಬಡಮನವಮಾಡದಿರು ಮಾರ್ಗದೊ । ಳಡಿಯಿಡದಿರನುಜಾತ್ಮಜರೊಳೊ । ಗ್ಗೊಡೆ ಯದಿರು ನೃಪನೀತಿ ಯಿದು ಭೂಪಾಲಕೇಳೆಂದ ॥೪೭॥ ನೀತಿವಿಡಿದರಸಂಗೆ ಬಹಳ । ಖ್ಯಾತವಿದು ಜನರಾಗ ರಾಗ । ವ್ರಾತದಿಂ ಧನ ಧನದಿ ಪರಿಕರ ಪರಿಕರದಿ ಜಯವು ॥ ಆತಜಯದಿಂ ಧರ್ಮ ಧರ್ಮಸ । ಮೇತದಿಂ ಸುರತುಷ್ಟಿತುಷ್ಟಿಯ । ನೀತಿಯಿಂದಿಹಪರವ ಗೆಲುವೈರಾಯನೀನೆಂದ ॥೪೮॥ ಮಂತ್ರವುಳ್ಳವನವನೆ ಹಿರಿಯನು । ಮಂತ್ರವುಳ್ಳವನವನೆ ರಾಯನು । ಮಂತ್ರವುಳ್ಳವನವನೆ ಸಚಿವನಿ ಯೋಗಿಯೆನಿಸುವನು । ಮಂತ್ರವಿಲ್ಲದ ಬರಿಯುಬಲುತಳ । ತಂತ್ರದಲಿ ಫಲವಿಲ್ಲವೈ ಸ್ವಾ । ತಂ ತ್ರ್ಯವೆನಿಸಲ್ಕರಿವುದೇ ಭೂಪಾಲ ಕೇಳೆಂದ ॥೪೯॥ ಸತ್ಯವುಳ್ಳೊಡೆ ಧರಣಿ ಸಾರುಗು । ಸತ್ಯವುಳ್ಳೊಡೆ ಪದವಿಸಾರುಗು। ಸತ್ಯವುಳ್ಳೊಡೆ ಸಕಲರಾಜ್ಯದ ವೀರಸಿರಿ ಸಾರ್ಗು ॥ ಸತ್ಯವೇ ಬೇಹುದು ನೃಪರಿಗಾ । ಸತ್ಯ ಭುಜಬಲಗೂಡಿ ಮಂತ್ರದ । ಸತ್ಯವೇ ಸತ್ವಾಧಿಕವು ಭೂಪಾಲ ಕೇಳೆಂದ ॥೫೦॥ ಮೇಲನರಿಯದ ನೃಪನ ಬಾಳಿಕೆ । ಗಾಳಿಗೊಡ್ಡಿದಸೊಡರು ನೀರದ । ಜಾಲದೊಡ್ಡಣೆ ಸುರಧನುವಿನಾಕಾರ ಶವದುಡಿಗೆ॥ ಬಾಳಿಗೌಕಿದಕೊರಳು ಭುಜಗನ । ಹೇಳಿಗೆಯಲಿಕ್ಕಿದಕರವು ಬೆ । ಳ್ಳಾರಹಬ್ಬಗೆಯವನ ಸಿರಿ ಭೂಪಾಲ ಕೇಳೆಂದ ॥೫೧॥ ಆಯವಿಲ್ಲದ ಬೀಯವನು ಪೂ । ರಾಯವಿಲ್ಲದಗಾಯವನು ನಿ । ದಾಯವಿಲ್ಲದ ಮಂತ್ರವನು ಲೇಸಾಗಿ ವಿಗೆ ರಚಿಸಿ-॥ ನ್ಯಾಯವಿಲ್ಲದನಡವಳಿಯನ । ನ್ಯಾಯಹೊದ್ದುವಪಾತಕವೆ ನಿಜ । ಕಾಯದಲಿ ನೀ ಧರಿಸೆಯೆಲೆಭೂಪಾಲಕೇಳೆಂದ ॥೫೨॥ ಫಲವೆಹುದ ಕೆಡಲೀಯದಳಿ ಪರಿ । ಮಳವಕೊಂಬಂದದಲಿ ನೀನಾ । ಳ್ವಿಳೆಯ ಕರದರ್ಥವನು ತೆಗೆಪ್ಪೆ ಪ್ರಜೆಯ ನೋಯಿಸದೆ ॥ ಹಲವು ಸನ್ಮಾನದಲಿ ನಯದಲಿ । ಚಲಿಸದಿಪ್ಪಂದದಲಿ ರಾಜ್ಯವ । ನಿಲಿಸುವಭಿಮತಮಂತ್ರಿಯುಂಟೇ ರಾಯ ನಿನಗೆಂದ ॥೫೩॥ ಸೂಕರನ ತುಂಬಿಯ ಮರಾಳನ । ಭೇಕವೈರಿಯ ಕಾರುರಗಕಪಿ । ಕೋಕಿಲನ ಬರ್ಹಿ ಯ ಸುಧಾಕಿರಣನ ದಿನಾಧಿಪನ ॥ ಆಕಸದ ದರ್ಪಣದ ಬಕರ । ತ್ನಾಕರನಲೊಂದೊಂದುಗುಣವಿರ । ಬೇಕು ನೃಪರಿಗೆ ನಿನ್ನೊಳುಂಟೇ ರಾಯ ಹೇಳೆಂದ ॥೫೪॥ ನೆಚ್ಚದಿರು ಸಿರಿಯನುವೃಥಾಮದ। ಗಿಚ್ಚಿ ನುರಿಯಲಿ ಬೇಯದಿರು ವಿಗೆ । ಬೆಚ್ಚಿ ಬೆದರಬರೆಡಂನಲಿ ಸತ್ಯವನು ಚಲಿಸದಿರು ॥ ಮೆಚ್ಚದಿರಸತ್ಯ ವನು ಗುಣವನು । ಮುಚ್ಚದಿರು ದುಷ್ಕೀರ್ತಿಸಾರಿಯ । ಮುಚ್ಚದಿರು ಮರುಳಾಗದಿರು ಭೂಪಾಲ ಕೇ ಳೆಂದ ॥೫೫॥ ಹಲವುವಿನಿಯೋಗದಲಿ ಸುದತಿಯ । ರೊಲುಮೆಯಲಿ ಸಕಲಾಂಗದಲಿ ನಿ । ಸ್ಖಲಿತ ನಿಜವನೆ ಧುಸುವಾಶ್ರಮವರ್ಣಭೇದದಲಿ ॥ ಹಳಿವು ನಿನಗಾವಂಗದಲಿ ಬಳಿ । ಸಲಿಸದಲೆ ಪರತತ್ವದಲಿ ವೆ । ಗ್ಗಳಿಸವಲೆ ವೈರಾಗ್ಯಮತ ಭೂಪಾಲ ನಿನಗೆಂದ ॥೫೬॥ ಪರಿಜನಕೆ ದಯೆಯನು ಪರಸ್ತ್ರೀ । ಯರಲಿ ಭೀತಿಯ ಹಗೆಗಳಲಿ ನಿ । ಷ್ಕರುಣತೆಯ ಬಡವರಲಿದಾನವ ದೈವಗುರುದ್ವಿಜರಾ ॥ ಚರಣ ಸೇವೆಯುಲಾರ್ತತೆಯ ಪಿಸು । ಣರ ನುಡಿಗಳಲಿ ಮೂರ್ಖತೆಯ ನೀ । ವಿರಚಿಪೆಯೊ ಬೇಸರುವೆಯೊ

ಭೂಪಾಲ ಕೇಳೆಂದ ॥೩೭॥ ಮೋಹದವಳಲಿ ವೈದ್ಯರಲಿ ಮ । ಗಾಹಿನವರಲಿ ಬಾಣಸಿಗರಲಿ । ಬೇಹ
ಮಂತ್ರಿಗಳಲಿ ವಿಧಾವಂತರಲಿ ಹಿರಿಯರಲಿ ॥ ದೇಹರಕ್ಷಕರಲಿ ಸದೋದಕ । ವಾಹಿಯಲಿ ಹಡವಾಳಿ
ಯಲಿ ಪ್ರ । ತ್ಯೂಹವನುವಿರಚಿಸೆಯೆಲೇ ಭೂಪಾಲಕೇಳೆಂದ ॥೩೮॥ ತರುಣಿಯಲಿ ಹಗೆಗಳಲಿ ಬಹಳೈ
ಶ್ವರಿಯದಲಿ ಶಸ್ತ್ರಾಂಗಿಯಲಿ ಸಂ । ಸ್ತರಣದಲಿ ಮದ್ಯಪಿಯಲಬಲಾರ್ಥಿಯಲಿ ಶೃಂಗಿಯಲಿ ॥ ಉರ
ಗನಲಿ ನದಿಯಲಿ ಸಖಿಯರಾ । ತುರಿಯದಲಿ ದುರ್ಮಂತ್ರಿಯಲಿ ದು । ಶ್ಚರಿತನಲಿ ವಿಶ್ವಾಸಿಸೆಯೆಲೇ
ಭೂಪಕೇಳೆಂದ ॥೩೯॥ ಢಾಳರನು ಧವಳರನು ಠಕ್ಕನ । ಠೌಳಿಕಾರನ ಕೃತಕಮಾಯಾ । ಜಾಲರನು
ಕಾಹುರರನಂತರ್ದಾಹಕರ ಶಠರ ॥ ಖೂಳರನು ಖಳರನು ವಿಕಾರಿಯ । ಜಾಳ್ನುಡಿಗಳ ಜಡಮತಿಯ
ನೀ । ನಾಳಿಗೊಂಬೆಯೊ ಲಾಲಿಸುವೆಯೋ ರಾಯ ಹೇಳೆಂದ ॥೪೦॥ ಆವಕಾಲದೊಳಾವಕಾರ್ಯವ
ದಾವನಿಂದಹುದವನ ಮನ್ನಿಪ । ಠಾವಿದೆಂಬುದನರಿದಿಹೈ ಮೃಗಜೀವಿಯಂದದಲಿ ॥ ಲಾವಕರ ನುಡಿ
ಗೇಳಿ ನಡೆದರೆ । ಭೂವಳಯದೇಕಾಧಿಪತ್ಯದ । ಠಾವು ಕೆಡುವುದನರಿದಿಹೈ ಭೂಪಾಲ ಕೇಳೆಂದ ॥೪೧॥
ಅರಸು ರಾಕ್ಷಸ ಮಂತ್ರಿಯೆಂಬವ । ಮೊರೆವಹುಲಿ ಪರಿವಾರ ಹದ್ದಿನ । ನೆರವಿ ಬಡವರ ಬಿನ್ನಪವ
ನಿನ್ನಾರು ಕೇಳುವರು ॥ ಉರಿಯುರಿವುತಿದೆ ದೇಶನಾವಿ । ನ್ನಿರಲುಬಾರದೆನುತ್ತ ಜನಬೇ । ಸರಿನ ಬೇ
ಗೆಯಲಿರದಲೇ ಭೂಪಾಲಕೇಳೆಂದ ॥೪೨॥ ಧನದಲುರುಧಾನ್ಯದಲಿ ನೆರೆದಿಂ । ಧನದಲುದಕದ ಹೆಚ್ಚು
ಗೆಯುಲಂ । ಬಿನಲಿ ಶಸ್ತ್ರೌಘದಲಿ ಶಿಲ್ಪಿಗಳಲಿ ಶಿಲಾಳಿಯಲಿ ॥ ವನವಳಯ ಕೋಟಾವಳಯಜೀ ।
ವನವಳಯಗಿರಿವಳಯದುರ್ಗಮ । ವೆನಿಪದುರ್ಗಾವಳಿ ಸಮಗ್ರವೆ ಭೂಪ ಕೇಳೆಂದ ॥೪೩॥ ಕೃಷಿ
ಮೊದಲು ಸರ್ವಕ್ಕೆ ಕೃಷಿಯಿಂ । ಪಸರಿಸುವುದಾಕೃಷಿಯನುದ್ಯೋ । ಗಿಸುವ ಜನವನು ಪಾಲಿಸುವುದಾ
ಜನಪದದಜನದಿ ॥ ವಸುತೆರಳುವುದು ವಸುವಿನಿಂ ಸಾ । ಧಿಸುವೊಡಾವುದಸಾಧ್ಯವದರಿಂ । ಕೃಷಿವಿಹೀ
ನನ ದೇಶವದು ನಿರ್ದೇಶಕೇಳೆಂದ ॥೪೪॥ ಸತಿಯರೊಲುಮೆಯ ವಿಟರುಗಳಸಾ । ಸತಿಯರ ಸ್ಥಿತಿಗತಿಗೆ
ತಾನೆಂ । ದತಿಶಯೋಕ್ತಿಯ ನುಡಿವವರನರಮನೆಯ ಕಾಹಿಂಗೆ ॥ ಪತಿಕರಿಸಿದರೆ ಜಗವರಿಯಲಾ । ಕ್ಷಿತಿ
ಪರಭಿಮಾನವು ಮುಹೂರ್ತಕೆ । ಗತವಹುದು ನೀನರಿದಿಹೈ ಭೂಪಾಲಕೇಳೆಂದ ॥೪೫॥ ಕಡುಗಧಾರೆಯ
ಮಧು ಮಹಾಹಿಯ । ಹೆಡೆಯ ಮಾಣಿಕ ವಜ್ರದಿಂ ಬಿಗಿ । ದೊಡಲಿಗೊಡ್ಡಿದಸುರಗಿ ಕಡುಗೆರಳಿವ
ಮೃಗಾಧಿಪನ ॥ ನಡುಗುಹೆಯೊಳಿಹವಸುಧೆಯಘುಟಿವೀ । ಪೊಡವಿಯೊಡೆತನ ಸದರವೇ ಕಡು । ಬಡ
ವರಿಗೆ ದೊರಕೊಂಬುದೇ ಭೂಪಾಲ ಕೇಳೆಂದ ॥೪೬॥ ಮಗಗೆ ಮುನಿವನು ತಂದೆ ತಂದೆಗೆ । ಮಗ
ಮುನಿವನೊಡಹುಟ್ಟಿದರು ಬಲು । ಪಗೆ ಕಣಾ ತಮ್ಮೊಳಗೆ ಭೂಪರ ಕುಲದ ವಿದ್ಯೆ ಯಿದು ॥ ಒಗೆಯೆ
ನಿನ್ನೊಡಹುಟ್ಟಿದರು ಮಂ । ತ್ರಿಗಳೊಳಾಪ್ತರಬಿನ್ನರೇ ದಾ । ಯಿಗರೊಳಂತರ್ಬದ್ಧವುಂಟೇ ರಾಯ
ನಿನಗೆಂದ ॥೪೭॥ ಮಲೆವರಾಯರ ಬೆನ್ನ ಕಪ್ಪವ । ನಲಗಿನಲಿ ಕೊಂಡಾಂತಮನ್ನೆಯ । ಕುಲದ ತಲೆ
ಚೆಂಡಾಡಿ ಗಡಿಗಳ ದುರ್ಗದಲಿ ತನ್ನ ॥ ಬಲುಸಚಿವರನು ನಿಲಿಸಿ ತಾ ಪುರ । ದಲಿ ವಿನೋದದಲಿರುತ
ಹರುಷದ । ಲಿಳೆಯಪಾಲಿಸುವವನರಸು ಭೂಪಾಲ ಕೇಳೆಂದ ॥೪೮॥ ಮನ್ನಣೆಯೊಳಲ್ಪತೆಯ ನುಡಿ
ಯೊಳ । ಗುನ್ನತಿಯನೆಸಗುವುದು ಪರರಿಗೆ । ತನ್ನವರಿಗುಗ್ಗಡದ ಪರಿಕರಣೆಯನು ಮಾತಿನಲಿ ॥ ಭಿನ್ನ
ವನು ತೋರುವುದು ರಾಯರ । ಗನ್ನಗತಕಕಣಾ ವಿಪುಳಸಂ । ಪನ್ನಮತಿ ನಿನಗುಂಟೆ ಭೂಮೀಪಾಲ

ಕೇಳೆಂದ ॥೧೯॥ ಧನದಿ ಪಂಡಿತರಶ್ವತ್ರತಿಯಾ । ಧನದಿ ಕಾಂತೆಯುರಖಿಳವಸ್ತುಗಳೈದೆ ಸೇರುವುದು ॥ ನೆನಹು ತೃಪ್ತಿಯೊಳೈದದದರಿಂ । ಧನವೆ ಸಾಧನವರಸಿಗಾಧನ । ವನಿತು ದೊರಕೊಳಲಿದಿರದಾರೈ ಧಾತ್ರಿಪತಿಗಳಲಿ ॥೨೦॥ ಶೂರ ಧೀರನುದಾರಧರ್ಮ್ಮೋ । ದ್ಧಾರ ವಿವಿಧವಿಚಾರ ಸುಜನಾ । ಧಾರ ರಿಪುಸಂಹಾರ ಚತುರೋಪಾಯಸಾಕಾರ ॥ ಸಾರಮಂತ್ರವಿಚಾರ ಭುವನಾ । ಧಾರ ಸುಜನ ಸ್ವಾಮಿ ಕಾರ್ಯಾ । ಗಾರನೆನಿಸುವಮಂತ್ರಿಯುಂಟೇ ರಾಯ ನಿನಗೆಂದ ॥೨೧॥ ತಿಳಿದವನ ಮತಿವಿದನ ಭಾಷಾ ವಳಿಲಿಪಿಜ್ಞಾನ ಸಾಕ್ಷರಿಕವಂ । ಡಲಿಕಸಾವಂತರನಶೇಷರನಿಂಗಿತವನರಿತು ॥ ಸಲೆ ಕರೆವಕಳುಹಿಸುವ ನಿಲಿಸುವ । ಬಲುಹನುಳ್ಳನ ಸುಕೃದದುಷ್ಕೃತ । ಫಲಿತಕಾರ್ಯಕೆ ಮಂತ್ರಿಯುಂಟೇ ರಾಯ ನಿನಗೆಂದ ॥ ಜರೆನರೆಯ ವ್ಯಸಿರಿಯ ಕುಲವೃ । ದ್ಧರನು ಹೀನಾಂಗರನು ಹಿಂಸಾ ; ಚರಿತರನು ಜಾತ್ಯಂಧರನು ಧನದಾಸೆಯಳಿದವರ ॥ ಅರಮನೆಯ ಸಂರಕ್ಷಣಾರ್ಥದೊ । ಳಿರಿಸಿದೊಡೆಮಾನೋನ್ನತಿಕವಿ । ಸ್ತರಣವಹುದಿದನರಿದಿಹೆ ಭೂಪಾಲಕೇಳೆಂದ ॥ ಗುಳಿತವರನೀಕ್ಷಿಸುತ ಬಟ್ಟೆಯ । ಮೇಳೆ ಮರಂಗಳ ಹೊಯ್ಲು ತಪ್ಪಿಸಿ । ನೆಳಲನರಸುತ ವೇಗಗತಿಸಾಮಾನ್ಯಗತಿಗಳಲಿ ॥ ಬಳಿವಿಡಿದು ಭೂಭುಜರ ಯಾನಂ। ಗಳೊಳಗಳುಕದೆ ಛಗೆಯ ಸ್ಮರಿಸಿ । ಬಳಸುವವನೇ ಛತ್ರಧಾರಕನರಸಕೇಳೆಂದ ॥೨೪॥ ಬೇಸರದೆ ಕಾಳೋರಗನನ । ಡ್ಯೈಸಿಕಟ್ಟಿರುವೆಗಳು ಮಿಗೆ ವೇ । ಡ್ಯೈಸಿಕಡಿವರೆಯಟ್ಟುವಂದದಲಹಿತಬಲದೊಳಗೆ ॥ ಓಸರಿಸದೊಳಹೊಕ್ಕು ಸಮರವಿ । ಳಾಸವನು ನೆರೆ ಮೆರೆದು ಕೇಶಾ। ಕೇಶಿಯಲಿ ಹಿಡಿದಿರಿವವನ ಕಾಲಾಳು ಕೇಳೆಂದ ॥೨೫॥ ಬಿಟ್ಟಸೂಟಿಯಲರಿನೃಪರ ನರೆ । ಯಟ್ಟಿ ಮೂದಲಿಸುತ್ತ ಮುಂದಣ । ಥಟ್ಟನೊಡೆಹಾಯ್ದಹಿತಬಲದೊಳಗಾನೆ ಮರಿಮರಿದು ॥ ಹಿಟ್ಟುಗುಟ್ಟುತ ಹೆಣನ ಸಾಲುಗ । ಳೊಟ್ಟು ಮೇರೆಯಲು ಕಳನ ಚೌಕದೊ । ಳಟ್ಟಿಯಾಡಿಸಬಲ್ಲವನೆ ರಾವುತನು ಕೇಳೆಂದ ॥೨೬॥ ಹೆಬ್ಬುಲಿವನೊಡೆತುಳಿದು ಧರಣಿಯ । ನಿಬ್ಬಗಿಯ ಮಾಡಿಸುತ ಪಾಯ್ದಳ । ದೊಬ್ಬುಳಿಯ ಹರೆಗಡಿದು ಕಾದಿಸುತಾನೆಗಳ ಮೇಲೆ ॥ ಬೊಬ್ಬಿರಿದು ಸರಮಳೆಯ ಕರೆವುತ । ಉಬ್ಬರಿಸಿ ಬವರದಲಿ ರಿಪುಗಳಿ । ಗುಬ್ಬಸವನೆಸಗುವನೆ ಜೋದನು ರಾಯ ಕೇಳೆಂದ ॥೨೭॥ ಒಂದುಕಡೆಯಲಿ ದಳ ಮುರಿದು ಮು । ತ್ತೊಂದುದಿಕ್ಕಿಲಿ ಮುನ್ನಿಯರು ಕವಿ । ದೊಂದುದೆಸೆಯಲಿ ಬಲದೊಳೊಂದನೆಯಧಿಕಬಲವೆನಿಸಿ ॥ ಬಂದು ಸಂತಾಪದಲಿ ಕಾಳಗ । ದಿಂದ ಪುರದಲಿ ನಿಂದು ಕರಿಕರಿ । ಗುಂದುವಕ್ಷಿತಿಪಾಲನೇ ಭೂಪಾಲಕೇಳೆಂದ ॥೨೮॥ ಕ್ರುದುರೆಗಳಸಾರ್ಥದು ರಥವನು । ಹದುಳಿಸುತ ಸಾರಥಿಯನೋವುತ । ಲಿದಿರಮುರಿವುತ ತನ್ನ ಕಾಯ್ದಿದ್ದು ಕೊಳುತ ಕೆಲಬಲನ ॥ ಸದೆದು ಮರಳುವಲಾಗುವೇಗದ । ಕದನಕಾಲಾನಲಸವನು ತಾ । ಮೊದಲಿಗನಲೈ ರಥಿಕರಿಗೆ ಭೂಪಾಲ ಕೇಳೆಂದ ॥೨೯॥ ದೊರೆಯ ಕಾಣುತ ವಂದಿಸುತ್ತಂ । ಕರಿಸುತಂತರಿಸುತ್ತ ಮುಗೆ ಹ । ತ್ತಿರನೆನಿಸದತಿದೂರನೆನಿಸದೆ ಮಧ್ಯಗತನೆನಿಸಿ ॥ ಪರಿವಿಡಿಯಲೋಲೈಸುತರಸನ । ಸಿರಿಮೊಗವನೀಕ್ಷಿಸುತ ಬೆಸಸಲು । ಕರಯುಗವನಾನುವನೆ ಸೇವಕನರಸ ಕೇಳೆಂದ ॥೩೦॥ ನರಕಕರ್ಮವ ಮಾಡಿಯಿಹದೊಳು । ದುರಿತಭಾಜನರಾಗಿ ಕಡೆಯಲಿ । ಪರಕೆ ಬಾಹಿರರಾಗಿ ನಾನಾಯೋನಿಯಲಿ ಸುಳಿದು॥ ಹೊರಳುವರು ಕೆಲಕೆಲರು ಭೂಪರು । ಧರಿಸುವರಲೈ ರಾಜಧರ್ಮದ । ಹೊರಿಗೆಯನು ' ಮರೆದಿರೆಯಲಾ ಭೂಪಾಲ ಕೇಳೆಂದ ॥೩೧॥ ನೃಗನ ಭರತನ ದುಂದುಮಾರನ। ಸಗರನ ಪುರೂರನ ಯಯಾತಿಯ

ಮಗನನಹುಷನ ಕಾರ್ತವೀರ್ಯನ ನಳನ ದಶರಥನ ॥ ಹಗಲಿರುಳು ವಲ್ಲಭರ ವಂಶದ । ವಿಗಡರಲಿ ಯಮಸುತನು ಸರಿಯೋ । ಮಿಗಿಲೊ ಯೆನಿಸುವ ನೀತಿಯುಂಟೇ ರಾಯನಿಸಗೆಂದ ॥೮೨॥ ಆಮುನೀಂದ್ರನ ವಚನರಚನಾ । ತಾಮರಸಮಕರಂದಕೇಳಿಯ । ಲೀಮಹೀಶಮನೋಮಧುವ್ರತವುಬ್ಬಿತೊಲವಿನಲಿ ॥ ರೋಮಪುಳಕದ ರುಚಿರಭಾವ । ಪ್ರೇಮಪೂರಿತಹರುಷರಸದು । ದ್ದಾಮನದಿಯಲಿ ಮುಳುಗಿ ಮೂಡಿದನರಸಕೇಳೆಂದ ॥೮೩॥ ಎಲೆಮುನಿಯೆ ನೀವ್ರಚಿಸಿದೆನಿ । ವರ್ಗಳನ್ನೃಪಾಲನಯಪ್ರಪಂಚವ । ಬಳಸಿದೆನು ಕೆಲಕೆಲವನಿನ್ನುರೆ ಬಳಸುವೆನು ಕೆಲವ ॥ ಇಳಿದು ಧರಣಿಗೆ ಸುಳಿದು ನೀತಿ । ಸ್ಖಲಿತಜಡರನು ತಿದ್ದಿ ತಿಳುಹುವ । ಸುಲಭತನದಲಿ ದೇವಮುನಿ ನಿನಗಾರು ಸರಿಯೆಂದ ॥೮೪॥ ಮುನಿಯೆ ಬಿನ್ನಹವಿಂದು ನೀವಿಂ । ದ್ರನ ವಿರಿಂಚಿಯ ಯಮನ ವರುಣನ । ಧನಪತಿಯ ಶೇಷನ ಸಭಾಮಧ್ಯದಲಿ ಸುಳಿವಿರಲೆ ॥ ಇನಿತುರಚನೆಗೆ ಸರಿಯೊ ಮಿಗಿಲೋ । ಮನುಜಯೋಗ್ಯಸ್ಥಾನವೋ ಮೇ । ಣೆನಲು ನಗುತೆಂದನು ಮುನೀಶ್ವರನಾಯುಧಿಷ್ಠಿರಗೆ ॥೮೫॥ ಜನಪಕೇಳುತ್ತೇದಶತಯೋ । ಜನತದರ್ಧದೊಳಗಲದಳತೆಯಿ । ದೆನಿಪುದಿಂದ್ರಸ್ಥಾನವಲ್ಲಿಹುದಖಿಳಸುರನಿಕರ ॥ ಜನಪರಲ್ಲಿ ಯಯಾತಿಯಾತನ । ಜನಕನೃಗನಳ ಭರತಪೌರವ । ರೆನಿಪರಖಿಳಕ್ರತುಗಳಲಿ ಸಾಧಿಸಿದರಾಸಭೆಯ ॥೮೬॥ ವೈದಿಕೋಕ್ತಿಗಳಲಿ ಹರಿಶ್ಚಂ । ದ್ರಾದಿರಾಯರು ರಾಜಸೂಯದೊ । ಳಾದರನಿಬರೊಳಗ್ಗಳೆಯರಿಂದ್ರಂಗೆ ಸರಿಮಿಗಿಲು ॥ ಆದೊಡಾಪುರುಹೂತಸಭೆಯೋ । ಪಾದಿ ಯಮನಸ್ಥಾನವಲ್ಲಿವಿ । ಷಾದದಲಿ ನಿಮ್ಮಯ್ಯನಿಹನಾತನ ಸಮೀಪದಲಿ ॥೮೭॥ ವರುಣಸಭೆಯೊಳಗಿಹವು ಭುಜಗೇ । ಶ ರಸಮುದ್ರನದೀನದಾವಳಿ । ಗಿರಿತರುವ್ರಜವೆನಿಪಸಂಖ್ಯಾರಹಿತವಸ್ತುಗಳು ॥ ಅರಸ ಕೇಳು ಕುಬೇರಸಭೆಯಾ । ಪರಿಯಗಲವೆಂಭತ್ತುಯೋಜನ । ಹರಸಖನ ಸಿರಿ ಸದರವೇ ಭೂಪಾಲ ಕೇಳೆಂದ ॥೮೮॥ ಬಗೆಯೊಳಗೆ ಮೊಳೆವುದು ಚತುರ್ದಶ । ಜಗವೆನಲು ಜಾವಳವೆ ತಸ್ಯೋ । ಲಗದಸಿರಿಪರಮೇಷ್ಠಿಗೇನರಿದೈ ಮಹೀಪತಿಯೆ ॥ ಸುಗಮಗಾನಿಯರುಪನಿಷದವಿ । ದ್ಯೆಗಳು ವೇದಕ್ರತುಪುರಾಣಾ । ದಿಗಳು ಬಿರುದಾವಳಿಯ ಪಾಠಕರಾತನಿದಿರಿನಲಿ ॥೮೯॥ ಮುನಿಗಳೇ ಮಾಣಿಯರು ಮಂತ್ರಾಂ । ಗನೆಯರೋಲೆಯಕಾತಿಯರು ಸುರ । ಜನವೆ ಕಿಂಕರಜನವು ಸೂರ್ಯಾದಿಗಳೆ ಸಹಚರರು ॥ ಘನಚತುರ್ದಶವಿದ್ಯೆಪಾಠಕ । ಜನವೆಲೈ ಪಾಡೇನು ಪದುಮಾ । ಸನನಪರುಠವವಾಸಭೆಗೆ ಸರಿಯಾವುದೈ ನೃಪತಿ ॥೯೦॥ ಇನಿಬರಾಸ್ಥಾನದಲಿ ಸುಕೃತಿಗಳೆನಿಪತೇಜಸಿ ಗಳುಗಡ ಸುರ । ಮುನಿಹರಿಶ್ಚಂದ್ರಂಗೆ ಸೇರಿದಸುಕೃತಫಲವೇನು ॥ ಜನಪನಪದೆಸೆಗೇನು ದುಷ್ಕೃತ । ವೆನಲು ನಕ್ಕನು ರಾಜಸೂಯದ ಘನವನರಿಯಾ ಧರ್ಮನಂದನಯೆಂದನಾಮುನಿಪ ॥ ಈಮಹಾಕ್ರತುಪರಮನೀಮಾ । ಡಾ ಮಹೀಶ್ವರಪಂಕ್ತಿಯಲ್ಲಿ ನಿ । ರಾಮಯನು ನಿಮ್ಮಯ್ಯನಿಹನು ಸತೇಜದಲಿ ಬಳಿಕ । ಸೋಮವಂಶದ ರಾಯರೊಳಗು । ದ್ದಾಮರಹಬಲುಗ್ಗೆಕುಮಾರ । ಸ್ತೋಮ ನೀವಿರಲಯ್ಯಗೇನರಿದೆಂದನಾಮುನಿಪ ॥೯೨॥ ಮುನಿಯಮಾತಿನ ಬಲೆಗೆ ಸಿಲುಕಿತು । ಜನಪತಿಯ ಚೈತನ್ಯಮೃಗವೀ । ತನವಚೋವರುಷದಲಿ ನನೆದವು ಕರಣವೃತ್ತಿಗಳು ॥ ಮನದಲಂಕುರವಾಯ್ತು ಸಾಲಿಗೆಗೊನೆಯಲಿರಡೆಲೆಯಾಯ್ತು ಯಜ್ಞಾದ । ನೆನಹು ಭಾರವಣೆಯಲಿ ಬಿದ್ದುದು ಧರ್ಮನಂದನನ ॥೯೩॥ ಕಳುಹಿದನು ಸುರಮುನಿಯನುದರದೊ । ಳಿಳಿದುದಂತಸ್ತಾಪಯಜ್ಞಾದ । ಬಲುಹನೆನೆವಡಿಗಡಿಗೆ ಕಂಪಿಸಿ

ಕೈಯಗಲ್ಲದಲಿ ॥ ಬಲಿದೊಲಿದು ಭಾವದಲಿ ಮಿಗೆ ಕಳ । ವಳಿಸಿ ಪದುಳಿಸಿಕೊಳುತ ಭೂಪತಿ । ತಿಲಕ ಚಿಂತಿಸಿ ನೆನೆವುತಿದ್ದನು ವೀರನರಯಣನಾ ॥ ... ... ... ॥೯೪॥

ಅಂತು ಸಧಿ ೧ಕ್ಕೆ ಪದ ೯೪ಕ್ಕಂ ಮಂಗಳಮಸ್ತು.

---

## ಎರಡನೆಯ ಸಂಧಿ.

ಸೂಚನೆ॥ ಬಲಿಮಥನಫಲುಗುಣರು ಸಹಿತ । ಗ್ಗಳೆಯನೇಕಾಂಗದಲಿರಣದಲಿ
ಕಲಿಜರಾಸಂಧನನ ಸೀಳಿದು ಬಿಸುಟನಾಭೀಮ ॥

ಕೇಳು ಜನಮೇಜಯಧರಿತ್ರೀ । ಪಾಲ ಮಂತ್ರಾಲೋಚನೆಗೆ ಭೂ । ಪಾಲಕರೆಸಿದನನುಜರನು ಧೌಮ್ಯಾದಿಮಂತ್ರಿಗಳ ॥ ಮೇಳವದ ತನಿವೆಳಗುಗಳ ಮಣಿ। ಮೌಳಿಮಂಡಿತರುಪ್ಪರದ ಪಡಿ । ಸೂಳು ಪಾಯವಧಾರಿಸಲಿ ಹೊಕ್ಕರು ಸಭಾಸ್ಥಳವ ॥೧॥ ದ್ರುಪದಧೃಷ್ಟದ್ಯುಮ್ನಮತ್ಸ್ಯಾ । ಧಿಪತಿಕೇಕಯ ಪಾಂಡವಾತ್ಮಜ । ರು ಪತಿಕಾರ್ಯವಿಚಾರನಿಷ್ಠರುಬಂದರೋಲಗಕೆ ॥ ನೃಪತಿಹದನೇನಮರಮುನಿವರ । ನುಪಚರಿತಮಂತ್ರಾರ್ಥಸಿದ್ಧಿಗೆ । ರಪಣ ನಮಗುಂಟೇಗ ಬೆಸಸೆಂದರು ಯುಧಿಷ್ಠಿರಗೆ ॥೨॥ ಧರೆ ನಮಗೆ ವಶವರ್ತಿಖಂಡೆಯ । ಸಿರಿ ನಮಗೆ ಮೈಯವಳಿ ಯುಧಿಷ್ಠಿರ । ನರಸುತನ ನಳನಹುಷನೃಪಭರತಾದಿಭೂಮಿಪರ ॥ ಮರೆಸಿತೆಂಬುದು ಲೋಕವಿನ್ನಿ । ನ್ನರದ ಹೆಸರೆಮಗಿಂದು ಬೊಪ್ಪನ । ಸಿರಿಯನೇವಣ್ಣಿಸುವೆನೆಂದನು ಸುಯ್ದು ಯಮಸೂನು ॥೩॥ ಅಲ್ಲಿ ಸುರರಲಿ ಸುಪ್ರತಿಷ್ಠಿತ । ನಲ್ಲಗಡ ಪಾಂಡುಕ್ಷಿತೀಶ್ವರ । ನಿಲ್ಲಿ ವೈಭವಕೇನುಫಲನಾವವರ ಸದ್ಗತಿಗೆ ॥ ಇಲ್ಲಿ ರಚಿಸಿದರಾಜಸೂಯದಿ । ನೆಲ್ಲವಹುದಯ್ಯಂಗೆ ಮುಖವಿದು । ದುರ್ಲಭವು ಕೈಕೊಂಡೆವಾವುದು ಮಂತ್ರವಿದಕೆಂದ ॥೪॥ ಆಗಲಿದಕೇನರಸ ದೀಕ್ಷಿತ । ನಾಗು ನಿರುಪಮರಾಜಸೂಯಕೆ। ಭಾಗಧನವನು ಭೂಮಿಪರ ಸದೆದೆಳೆದು ತಹೆವೆಂದು ॥ ಆಗರುವರುಬ್ಬೇಳೆ ತಪ್ಪೇ । ನಾಗಲೀಗೋವಿಂದಮತದಲಿ । ತೂಗಿ ನೋಡುವೆವಿದರತೂಕವನೆಂದನಾಭೂಪ ॥೫॥ ಕಳುಹಿದನು ಸಾರಥಿಯ ಸಾರಥ । ಕೆಲವು ದಿವಸಕೆ ಕೃಷ್ಣಭವನ । ಸ್ಥಳದೆ ಹೊರಬಾಹೆಯಲಿ ಚಾಚಿತು ಚಪಳಗಮನದಲಿ॥ಒಳಗೆ ಬಂದನು ಪಾವುಡವ ಮುಂ । ದಿಳುಹಿದನು ಕೃಷ್ಣಂಗೆ ಪಾಂಡವ । ತಿಲಕನಟ್ಟಿದಹದನ ಬಿನ್ನಹಮಾಡಿದನು ಬಳಿಕ ॥೬॥ ತಿಳಿದನಲ್ಲಿಯ ರಾಜಕಾರ್ಯದ । ನೆಲೆಯನಕ್ರೂರಾದಿಸಚಿವರ । ತಿಳುಹಿದನು ಶಿಶುಪಾಲಕಂಸನಮಾವನಿಂತಿವರ॥ಕೊಲುವೊಡಿದುಹದ ನಮ್ಮ ಭಾವನ। ನಿಳಯದುತ್ಸಹಸೌಮನ

ಸ್ಯವೆ । ಬಳಸುವರ ಹೊತ್ತಿದು ಮನೋರಥಸಿದ್ಧಿನಮಗೆಂದ ॥೭॥ ಎಂದು ವಸುದೇವಾದಿಯಾದವ । ವೃಂದವನು ಬಲಭದ್ರರಾಮನ । ಹಿಂದಿರಿಸಿ ಬಳಿಕಿಂದ್ರಸೇನನ ಕೂಡೆ ಯೋಲವಿನಲಿ॥ಬಂದನಿಂದ್ರಪ್ರಸ್ಥಪಟ್ಟಣ । ಕಂದುಪೊಸಗೆಯ ಗುಡಿಯತೋರಣ । ದಿಂದ ಕನ್ನಡಿಕಳಸವಲಿ ಕೊಂಡಾಡಿದರು ಹರಿಯ ॥೮॥ ಪುರಕೆ ಬಿಜಯಂಗೈಸಿ ತಂದರು । ಹರಿಯನರಮನೆಗನಿಬರಂತಃ । ಪುರದ ಕಾಣಿಕೆಗೊಂಡು ಬಾಂಧವಜನವನುಚಿತದಲಿ ॥ ಹರಸಿ ಮಧುರಪ್ರೀತಿಯಿಂದಾ । ದರಿಸಿ ಮಂತ್ರಾಲೋಚನೆಯಮಂ । ದಿರದೊಳೇಕಾಂತದಲಿ ಭೂಪತಿಗೆಂದನಸುರಾರಿ ॥೯॥ ಏನುಕರೆಸಿದರ್ಕೆ ಪ್ರಯೋಜನ । ವೇನು ನಿಮ್ಮುತ್ಸಾಹಶಕ್ತಿಯೊ । ಳೇನು ದುರ್ಘಟವೇನು ಶಂಕಿತವೇನು ಸಂಸ್ಖಲಿತ ॥ ದಾನವರ ಕೌರವರ ವೈರದೊ । ಳೇನುವಿಗ್ರಹವಿಲ್ಲಲೇ ಹದ । ನೇನೆನಲು ಕೃಷ್ಣಂಗೆ ಬಿನ್ನಹಮಾಡಿದನು ನೃಪತಿ ॥೧೦॥ ದನುಜರಲಿ ಕುರುಸೇನೆಯಲಿ ಭಯ । ವೆನಗೆ ಭಾರಿಯೆ ನಿಮ್ಮ ಘನಪದ । ವನಜವಿದು ಸೀಸಕವಲೇ ತನ್ನುತ್ತಮಾಂಗದಲಿ ॥ ಮುನಿಯ ಹೇಳಿಕೆ ಬೊಪ್ಪಗಮರೇಂ । ದ್ರನಲಿ ಸಮರಸವಿಲ್ಲಗಡ ನ । ಮ್ಮಿನಿಬರಲಿ ಸಾಮರ್ಥ್ಯವಿದ್ದದಕೇನುಫಲವೆಂದ ॥೧೧॥ ಪಿತನ ಪರಮಪ್ರೀತಿಗುನ್ನತ । ಗತಿಗೆ ನಿರ್ಮಳರಾಜಸೂಯ । ಕ್ರತುವೆ ಸಾಧನವೆಂದು ಮುನಿಯುಪದೇಶಿಸಿದತನಗೆ ॥ ಕ್ರತುಮಹಾಕ್ರತುಸಕಲಧರಣೀ । ಪತಿಗಳರ್ಥವ ಗುಣಾವಲೀಯ । ವ್ರತವೆನಗೆ ಸಂಕಲ್ಪವಾಯಿತ್ತದಕೇನು ಹದನೆಂದ ॥೧೨॥ ತಿರುಗಿದೊಡೆಸಂಕಲ್ಪಹಾನಿಯ । ಪರಮಪಾತಕವಿದು ವ.ಹಾನಿ । ಷ್ಠುರವಮುಖವಿನ್ನುವರಮುನಿಪತಿ ದೇವಲೋಕದಲಿ ॥ ಹರಹುವನು ಪುಹಾಸ್ಯಮಯಸಾ । ಗರವ ದಾಟಿಸು ಜೀಯ ಭವಸಾ । ಗರದನಿದುವಿಗಿಲೇ ಮುರಾಂತಕಯೆಂದನಾಭೂಪ ॥೧೩॥ ನಕ್ಕನಸುರವಿರೋಧಿ ಮುನಿಹಾ । ಯಿಕ್ಕಿದನಲಾ ಬಲೆಯನಕಟಾ । ಸಿಕ್ಕಿದಿರಲಾ ಸ್ವಾಮಿದ್ರೋಹರು ಸವರವೇ ನೃಪರು ॥ ಅಕ್ಕಜವ ಮುಖವಿದರಚೂಣಿಗೆ । ಚುಕ್ಕಿಯಾಯಿತು ಮನ ಮಹೀಶನ । ಮಕ್ಕಳಾಟಿಕೆಯಾಯ್ತೆನುತ ತೂಗಿದನು ಸಿರಿಮುಡಿಯ ॥೧೪॥ ಕದರಿ ಸಪ್ತದ್ವೀಪಪತಿಗಳ । ಸದೆದು ರಚಿಸುವರಾಜಸೂಯದ । ಹದನನಂಘೈಸುವನದಾರೀವರ್ತಮಾನದಲಿ॥ ಸುದತಿಯರ ಸೂಳೆಯರ ಮುಂದು । ಬ್ಬಿದೆಯಲಾ ಸಾರದನ ಘುಲ್ಲಣೆ । ಗಿದು ಸುದುರ್ಘಟವಿಂದು ಬಿದ್ದವಿಘಾತಿ ಬಲುಹೆಂದ ॥೧೫॥ ಮೊದಲಲೇ ನಿಮ್ಮವರು ನಿಮ್ಮ । ಭ್ಯುದಯವನು ಸೇರುವರೆ ಕೌರವ । ರದರೊಳಗ್ಗದಕರ್ಣಶಕುನಿಜಯದ್ರಥಾದಿಗಳು ॥ ಕುದುಕುಳಿಗಳೀಚೆಯಲಿ ಕಂಸನ । ಮದಮುಖನ ಪರಿವಾರವಿದೆ ದೂ । ರದಲಿ ಮಗಧನ ಹೊರೆಯಲದನೇಬಣ್ಣಿಸುವೆನೆಂದ ॥೧೬॥ ಕಾಲಯವನಾದಂತವಕ್ರನ್ಯ । ಪಾಲರಲಿ ದುರುದುಂಬಿಯೈ ಶಿಶು । ಪಾಲಪೌಂಡ್ರಕರೆಂಬರಿಗೆ ಸಮದಂಡಿಯೆಮ್ಮೊಡನೆ ॥ ಖೂಳರಿರ್ವರು ಹಂಸಡಿಬಿಕರು । ಸಾಲುವನ ಮುರನರಕರಾಳಿನ । ಮೇಳವವನೇನೆಂಬೆನೈಭೂಪಾಲಕೇಳೆಂದ ॥೧೭॥ ಕೆಲವರಿದರೊಳು ನಮ್ಮ ಕೈಯಲಿ । ಕೊಲೆಗೆ ಭಂಗಕೆ ಬಂದುಬಿಟ್ಟರು । ಕೆಲಕೆ ಸರಿವವನಲ್ಲ ಮಲೆವರಮಾರಿ ಮಾಗಧನು ॥ ಬಳಿಕೆಮಗೆ ಬಲವದ್ವಿರೋಧದ । ತೊಳಸುಬಿದ್ದುದು ತೋಟಿಗಾರದೆ । ಜಲಧಿಮಧ್ಯದಲೂರಕಟ್ಟಿದೆವರಸಕೇಳೆಂದ ॥೧೮॥ ವಸ್ತವದೇವನ ಮುರಿದೊಡಾತನ । ದೇವಿಯರುಬಳಿಕೆಮ್ಮದೂರಿದ । ರಾವಿಗಡಮಗಧಂಗೆ ಮಧುರೆಯಮೇಲೆ ದಂಡಾಯ್ತು ॥ ನಾವು ನಾನಾದುರ್ಗದಲಿ ಸಂಭಾ । ನಿಸಿದೆವಾತನನು ನಿಮ್ಮೊಡ । ನಾವು ಕೂಡಿದೊಡಾತಮುನಿಯನೆ ಭೂಪಕೇಳೆಂದ ॥೧೯॥ ಅರಸಕೇಳ್ಳೊ

ರೊಂದುವಂಶದ । ಧರಣಿಪರು ಮಾಗಧನ ಮನೆಯಲಿ । ಸೆರೆಯಲೈದರೆ ಬಿಡಿಸಬೇಕು ನಿರಂತರಾಯದಲಿ॥ ದುರುಳನವ ಭಗದತ್ತಬಾಹ್ಲಿಕ । ನರಕವೃದ್ಧಕ್ಷತ್ರಮೊದಲಾ। ದರಸುಗಳು ಬಲಗರ್ವಿತರಸಂಖ್ಯಾತರಹರೆಂದ ॥೨೦॥ ಅವುಗಲಿ ಮತ್ತಿತ್ತಲುತ್ತರ । ದವನಿಪರು ಧಕ್ಕಡರು ಧರಣೀ । ಧವರೊಳಧಿಕಕುಠಾರರಗ್ಗದ ಚೀನಬೋಟಕರು ॥ ರವಿಯುದಯಗಿರಿಶಿಖರದಲಿ ಪಾ । ರ್ಥಿವರು ದಕ್ಷಿಣಚೋಳಪಾಂಡ್ಯ। ಪ್ರವರರರದೆ ವಿಕ್ರಮಹಿರಣ್ಯಮದಾಂಧರವರೆಂದ ॥೨೧॥ ಶೌಕಿ ಚತುರಂಗದನೃಪಾಲರ । ನೂಕಬಹುದಿದಕೇನು ಯಾಗ । ವ್ಯಾಕರಣಕಿವರುಬ್ಬರೇ ದೂಷಕರು ಧರಣಿಯಲಿ ॥ ಈಕುಠಾರರು ಕದನಮುಖದವಿ । ವೇಕಿಗಳು ಶಿಶುಪಾಲಮಾಗಧ । ರಾಕೆವಾಳರು ವೈರಿರಾಯರೊಳರಸ ಕೇಳೆಂದ ॥೨೨॥ ಅಧಿಕರಿವರಿಬ್ಬರೊಳಗಾ ಮಾ । ಗಧನೆ ಬಲುಗೈ ರಾಜಸೂಯಕೆ । ಸಬರವನು ಸಾಕಾಣೆ ಸಾತನ ಖಂಡೆಯದ ಮೊನೆಗೆ ॥ ನಿಧನವಲ್ಲದೆ ಧನವ ನೆರಹುವ। ಹವನ ನೀನೇಕಾಂಬೆಯಾತನ । ವಧೆಯು ಹರಿಯದು ನಮ್ಮ ಕೈಯಲಿ ರಾಯ ಕೇಳೆಂದ ॥೨೩॥ ಕಂಸನನು ಕೆಡಹಿದೆವು ಮುರಿದೆವು । ಹಂಸಡಿಬಿಕರ ಪೌಂಡ್ರಕರ ನಿ । ರ್ವಂಶವೆನೆ ಸವರಿದೆವು ಮುರನರಕಾದಿದಾನವರ ॥ ಹಿಂಸೆಯಿವನಲಿ ಹರಿಯದಿವನಿ । ಸ್ಸಂಶಯನು ವಿಜಯದಲಿ ಯಾಗ । ಧ್ವಂಸಕನ ನೆರೆ ಮುರಿವುಪಾಯವ ಕಾಣೆನಾನೆಂದ ॥೨೪॥ ಈಸುಘನವೇ ಕೃಷ್ಣ ಯಾಗ। ದ್ವೇಷಿಗಳು ಪಿರಿದಾಗಲೆಮಗೆ । ನ್ನೈಸಲೇ ವರರಾಜಸೂಯಾಧ್ವರಕೆ ಸನ್ಯಾಸ॥ ಈಸುಭೃತ್ಯರು ನಿನ್ನ ಕೈಯಲಿ । ಗಾಸಿಯಾದರು ಮಗಧನೊಬ್ಬನು । ಮೀಸಲಳಿಯನುಗಡ ಮಹಾದೇವೆಂದನಾಭೂಪ ॥೨೫॥ ಅಹಹ ಯಾಗವ್ರತಕೆ ಭಂಗವ। ತಹುದೆ ಜೀಯ ಮುರಾರಿಕೃಪೆಸ । ನ್ನಿಹಿತನಾಗಲಿ ಸಾಕು ನೋಡಾ ತನ್ನ ಕೈಗುಣವ ॥ ಬಹಳಬಲನೇ ಮಾಗಧನು ನಿನ । ಗಹಿತನೇ ತಾಪೀಳೆಯವ ಸ್ಮರ । ಮಹಿಳೆಯರ ತೋಳಿನಲಿ ತೋರುವೆನೆಂದನಾಭೀಮ ॥೨೬॥ ಮುರುಕಿಸುವ ಮ । ನ್ನೆಯರತನಗಳವ । ಮುರಿವೆನಖಿಳದ್ವೀಪಪತಿಗಳ । ತೆರಿಸುವೆನು ಹೊರಿಸುವೆನು ನೆತ್ತಿಯಲವರ ವಸ್ತುಗಳ ॥ ಕರುಬನೇ ಮಾಗಧನು ರಣದಲಿ । ತರುವೆನಾತನ ನಿಮ್ಮಯಾಗದ । ಹೊರಗೆ ತನ್ನದು ಕರೆಸು ರುಷಿಗಳನೆಂದನಾಭೀಮ ॥೨೭॥ ಅಹುದಲೇ ಬಳಿಕೇನು ಯಾಗೋ । ಪಹರಣಕೆ ಸನ್ಯಾಸಗಡ ವಿ । ಗ್ರಹದಲಧಿಕರು ಗಡ ಜರಾಸಂಧಾದಿನಾಯಕರು ॥ ಮಹಿಮಮನ್ನೆಯರಧ್ವರವ ನಿ । ರ್ವಹಿಸಲೀಯರುಗಡ ಶಿವಶಿವಾ। ರಹವ ಮಾಡಿದನರಸನೆಂದನು ನಗುತ ಕಲಿಪಾರ್ಥ ॥೨೮॥ ಏಕೆ ಗಾಂಡಿವವಿದು ಶರಾವಳಿ ।ಯೇಕೆ ಯೈಂದ್ರಾಗ್ನೇಯವಾರುಣ। ವೇಕೆ ರಥವಿದು ರಾಮಭೃತ್ಯಧ್ವಜವಿಳಾಸವಿದು। ಲೋಕರಕ್ಷಾಶಿಕ್ಷೆಗಿಂತಿವು । ಸಾಕು ಹುಲುಮಂಡಲಿಕರಿವಟರ । ನೂಕಲರಿಯದೆ ಜೀಯ ಜಂಜಡವೇಕೆ ಬೆಸಸೆಂದ ॥೨೯॥ ನೆರಹು ಹಾರುವರನು ದಿಗಂತಕೆ । ಹರಹು ನಮ್ಮನು ಬಂಧುವರ್ಗವ । ಕರೆಸು ರಚಿಸಲಿ ಕಾಣಬೇಹುದು ಕದನಕಾಮುಕರ ॥ ಸೊರಹಲರಿಯನು ಸಾಧುಗಳನಾ । ದರಿಸುವೆನು ಚಾವಟಿಯರನು ಚಿ। ಮ್ಮುರಿಯಬಿಗಿಸುವೆನಮರಿಯರ ಕಡೆಗಣ್ಣಕಣ್ಣಿಯಲಿ ॥೩೦॥ ಅಹುದು ಭೀಮಾರ್ಜುನರ ನುಡಿ ನಿ । ರ್ವಹಿಸದೇ ಬಳಿಕೇನು ನಿಜಕುಲ। ವಿಹಿತವಲ್ಲಾ ವಿನಯವಿಕ್ರಮವಿದ್ಯೆ ನೃಪನೀತಿ ॥ ಗಹನವೇ ಗಂಡುಗರಿಗಿದಿರಾ । ರಹಿತಬಲವಿನ್ನರಸ ಚಿಂತಾ। ಮಹಿಳೆಗವಸರವಲ್ಲ ಮನವಮಾಡೆಂದನಸುರಾರಿ ॥೩೧॥ ಎಮಗೆ ಭೀಮಾರ್ಜುನರ ಕೊಡು ರಿಪು । ರಮಣಿಯರ ಸೀಮಂತಮಣಿಗಳ । ನಿಮಿಷದಲಿ ತರಿಸುವೆನು

ಹರಸುವೆನಹಿತಭೂಮಿಪರ ॥ ಸಮರಜಯವಿನ್ನಾಯ್ತು ಯಜ್ಞೋ । ದ್ಯಮ ಕೆನಿಷ್ಪ್ರತ್ಯೂಹವಿನ್ನು । ಭ್ರಮೆಯ ಮಾಡದಿರೆಂದು ನೃಪತಿಗೆ ನುಡಿದನಸುರಾರಿ ॥೩೨॥ ಕಂಗಳನು ಮರುಚಿತ್ತನೀವೆ । ನ್ನಂಸು ವಣೆಗಿನ್ನೇನು ಭಯವಾ । ವಂಗವಲಿ ನಂಬಿಹೆವಲೇ ನಿಮ್ಮಂಘ್ರಿಸಾಂಕಜವ ॥ ಸಂಗರದ ಜಯವಿನ್ನದಲ್ಲಿಯ । ಭಂಗ ನಿನ್ನದು ಭಕ್ತಜನದನು । ಸಂಗಿ ನೀನಿರಲೇನು ನಮಗರಿದೆಂದನಾಭೂಪ ॥೩೩॥ ವಿಗಡಯಾಗಕೆ ಸಕಲರಾಯರು । ಹಗೆ ಮರುತ್ತನು ಕಾರ್ತವೀರ್ಯ್ಯಾ । ದಿಗಳು ಕೆಲವರಶಕ್ತರಾದರು ರಾಜಸೂಯದಲಿ ॥ ಬಗೆಯುಳಿಪು ದುಷ್ಕಾಲವಸುರರೊ । ಳಗಡ ಮಾಗಧನವನ ಮುಂದೊಡೆ । ಸುಗಮ ನಿಮ್ಮಯ್ಯಂಗೆ ಸುರಪದವೆಂದನಸುರಾರಿ ॥೩೪॥ ಆರವನು ಹಿರಿದಾಗಿ ನೀಕ್ಕೆ । ವಾರಿಸುವೆ ಕಮಲಾಕ್ಷ ಮಾಗಧ । ನಾರಭಟೆ ತಾನೇನು ಮರೆಹೊಗು ಸಹಜವಿಕ್ರಮವು ॥ ಧೀರನವೆ ಸಿಡಿಲಂತೆ ಸಕಲವು । ಹೀರನುರದರಸೆ ನೃಪರನು । ನೈಂಗಡ ನೆರಹಿದವೊಡೆಂದವನು ನಗುತ ಮುರವೈರಿ ॥೩೫॥ ಧರಣಿಪತಿ ಕೇಳ್ಬೃಹದ್ರಥ । ನರಸು ಮಾಗಧಮಂಡಲಕೆ ತ । ತ್ಪುರಿ ಗಿರಿವ್ರಜನೆಂಬುವದಲ್ಲಿ ಸಮಸ್ತವಿಭವದಲಿ ॥ ಧರೆಯ ಪಾಲಿಸುತಿದ್ದ ಸಾತ್ತ । ಗರುಯುವರ ಸೇರುವರು ಕಾಶೀ । ಶ್ವರನ ತನುಜೆಯರುಬ್ಬರದ ಭುತ್ತರೂಪಗುಣಯುತೆಯರು ॥೩೬॥ ಅವರೊಡನೆ ಸುಖಸತ್ಕಥಾಸಂ । ಭವವಿನೋದದಲಿದ್ದನೀವೈ । ಭವಫಲದ ಪುತ್ರಂಗೆ ಬಹು ದುಃಖೋಪಚಯನೆಂದು ॥ ಅವನಿಪತಿ ವೈರಾಗ್ಯದಲಿ ರಾ । ಜ್ಯವನು ಬಿಸುಟು ತಪಃಪ್ರಭಾವ । ವ್ಯವಹರಣೆಯಲಿ ತನುವ ನೂಕುವೆನೆನುತ ಹೊರವಂಟ ॥೩೭॥ ಊರಹೊರವಡುವತ್ತ ಕಂಡನು । ಪಾಂಕಾಂಕ್ಷೆಯರೊಬ್ಬನನು ಮುನಿವೀರಕಾಂಕ್ಷೆಯರಾಂಗಿರಾತ್ಮಜಚಂಡಕೌಶಿಕನ ॥ ಸಾಯರು ಸಂತನವ ಚರಣಾಂ । ಭೋರುಹಕ್ಕೆಳೆದನು ಸಲಕಿ । ಸ್ತ್ರಾಂಸಿದ ರಾಜೀವನವನು ಮುನಿ ನೃಪಾಲಂಗೆ ॥ ಏಳಿವರಸಕೆ ಪವನದಲಿ ವ । ಮಹಾನಸಿರಲರಸತ್ಯಕಾಂಚಿ । ತಾನರೂಪನ ದುಗಡಪವು ನಿಮ್ಮಂಘ್ರಿಸೇವೆಯಲಿ ॥ ಹಾನಿವಸ್ಕೃತಕಹುದಲೇ ಸುತ । ಹೀನರಾಜ್ಯವ ಬಿಸುಟೆ ನೆನಗೆ । ಕಾನನದ ಸಿರಿ ಸಾಕೆನುತ ಬಿಸುಸುಯ್ದನಾಭೂಪ ॥೩೯॥ ಐಸಲೇ ಸುತಹೀನರಾಜ್ಯವಿ । ಳಾಸನಿಷ್ಫಲವಹುದಲೇ ಸು । ತೋಷವೇ ಸುತಲಾಭವಾದೊಡೆ ಹೊಲ್ಲೆಯೆನಿಸದಕೆ ॥ ಆಸಮಯ ಮುನಿನಿಂದನುನುತ । ಧ್ಯಾನಸಿತಾತ್ಮಧ್ಯಾನಸುಖದಿ । ನ್ಯಾಸಪರಲಂಕದಲಿ ಬಿದ್ದುದು ಮಧುರಚೂತಫಲ ॥೪೦॥ ಕಂಡೆರಮ ಮುನಿ ಬಳಿಕ ಭೂಪತಿ । ಗೆಂದನಿದಕೋ ಪುತ್ರಸಂತತಿ । ಗಿಂದು ಸಾಧನವಿದನು ಕೊಡು ನೀನೊಲಿದು ವಧುಗೆನಲು ॥ ಕಂದಿದಾನನವುಜ್ಜ್ವಲಪ್ರಭೆ । ಯಿಂದ ಬೆಳಗಿತು ರಾಣಿಯರ ಸಹ । ತಂದು ಮುನಿಪದಕೆರಗಿ ಪರಿತೋಷದಲಿ ನಿಂದಿರ್ದ ॥೪೧॥ ವರವನೊಂದನು ಹೆಸರುಗೊಂಡೀ । ಧರಣಿಪತಿಗಾಮುನಿಪ ಕೊಟ್ಟನು । ಪುರಕೆ ಮರಳಿದನರಸನಾಮುನಿ ತೀರ್ಥಯಾತ್ರೆಯಲಿ ॥ ಸುಂದನತ್ತಲು ಚೂತಫಲವಿದ । ನೆರಡು ಮಾಡಿ ಬೃಹದ್ರಥನು ತ । ನ್ನರಸಿಯರಿಗಿತ್ತನು ಯುಧಿಷ್ಠಿರ ಕೇಳು ಕೌತುಕವ ॥೪೨॥ ಬಲಿದುದವರಿಗೆ ಗರ್ಭಜನನದ । ನೆಲೆಯ ಕಾಲಕೆ ಸತಿಯರುದರದೊ । ಳೊಳಿದುದೊಂದೊಂದವಯವದ ಸೀಳೆರಡು ಸಮವಾಗಿ ॥ ಬಳಿಕ ಕಂಡವರಕಟ ದುಷ್ಕೃತ । ಫಲವೆ ಸುಡಲಿವನೆನುತ ಬಿಸುಟರು । ಹೊಳಲ ಹೊರಬಾಹೆಯಲಿ ನಡುವಿರುಳರಸ ಕೇಳೆಂದ ॥೪೩॥ ನಡುವಿರುಳು ಜರೆಯೆಂಬರಕ್ಕಸಿ । ಯಡಗನರಸುತ ಬಂದು ಕಂಡಳು । ವಿಡುಕುವೀಸೀಳೆರಡುವನು ಹೊರಹೊಳಲ ಬಾಹೆಯಲಿ ॥ ತುಡುಕಿದಳು ಸೀಳ್ದೇಕೆ ತಿನ್ನದೆ । ಮಡಗ

ದರೊ ಕೌತುಕವದೇನೀ । ಯಡಬಲವನಂದಸುರೆ ದಿಟ್ಟಿಸಿ ನೋಡಿದಳು ಶಿಶುವ ॥೧೪॥ ಶಿಶುವನಾರೋ ಸೆಳೆದು ತಿನ್ನದೆ । ಬಿಸುಟು ಹೋದರೆನುತ್ತ ಜರೆ ಸಂ । ಧಿಸಿದಳಾಕಸ್ಮಿಕದ ಸೀಳೆರಡನುಪಿನೋದದಲಿ ॥ ಪಸರಿಸಿದುದಸು ಮೇಘರವ ಘೂ । ರ್ಮಿಸುವವೊಲ್ಚೀರಿದನು ಗಿರಿಗಳ । ಬೆಸುಗೆ ಬಿಡೆ ನಡುವಿರುಳು ಕೋಳಾಹಳಿಸಿತಾರಭಸ ॥೧೫॥ ಊರಹೊರವಳಯದಲಿದೇನು ಮ । ಹಾರಭಸವಿರುಳೆನುತ ಹರಿದು ದು । ಪೌರಜನ ಝೊಂಪಿಸುವಕೈದೀವಿಗೆಯ ಬೆಳಗಿನಲಿ ॥ ಆರಿವಳು ತಾನೆನುತ ಕಂಡುದು । ದೂರದಲಿ ದಾನವಿಯನವಳಘು । ನೋರುಗಳಸೋಗಿಲಲಿ ಕೈದೊಟ್ಟಿಲ ಕುಮಾರಕನ ॥೧೬॥ ನಿಂದುದಲ್ಲಿ ಯದಲ್ಲಿ ರಕ್ಕಸಿ । ಯೆಂದುಭಯದಲಿ ಬಳಿಕ ಕರುಣದ । ಲೆಂದಳವಳಂಜದಿರಿ ಹೋಹೋ ಯೆನುತ ಕೈನೆಗಹಿ ॥ ಇಂದಿವನು ಮಗನೆನಗೆ ಭೂಪತಿ । ಬಂದನಾದೊಡೆಕೊಡುವೆನೀತನ । ನೆಂದೊಡಾಕ್ಷಣ ಕೇಳಿ ಹರಿತಂದನು ಮಹೀಪಾಲ ॥೧೭॥ ಅರಸ ಕೇಳ್ ನಿನ್ನವನೆ ನೀ ಮುನಿ । ವರಕುಮಾರನನೆನ್ನ ಹೆಸರಲಿ । ಕರೆವುದೀತನ ಸೀಳಬೆಚ್ಚವಳಾನು ಬೆದರದಿರು ॥ ಜರೆಯೆನಿಪ್ಪುದಭಿಧಾನವೆನ್ನದು । ವರಜರಾಸಂಧಕನಿವನು ಸುರ । ನರರೊಳಗೆ ಬಲುಗೈಯಸಹನೆಂದಿತ್ತಳರ್ಭಕನ ॥೧೮॥ ಅಸುರೆಯನು ಮನ್ನಿಸಿದನಾಕೆಯ । ಪೆಸರವಗನಿವನೆಂದು ಲೋಕ । ಪ್ರಸರವರಿಯಲು ನಲವಿನಲಿ ಸಾಕಿದನು ಮಾಗಧನು ॥ ಅಸುರರಲಿ ಮರ್ತ್ಯರಲಿ ಸುರರಲಿ । ಯೆಸಕವುಳ್ಳವನೆನಿಸಿದನು ಸಾ । ಹಸದ ಜೋಡಿಸ್ಲೆ ಜಡಿದುದವನಲಿ ರಾಯ ಕೇಳೆಂದ ॥೧೯॥ ಅದರಿನಾಮಾಗಧನ ಮುರಿದ । ಲ್ಲದೆ ನೃಪಾಲಕರಂಜಿ ಕಪ್ಪದೊ । ಳೊದಗಲರಿಯರು ಮೆರೆಯಲೀಯರು । ಯಾಗಮಂಟಪವ ॥ ಇದುನಿಧಾನವು ಭೀಮಪಾರ್ಥರಿ । ಗಿದು ಮುಹೂರ್ತವು ನೀಳೆಯವ ತಾ । ಕದನವಿಜಯದ ವೀರಸೇಸೆಯನಿಕ್ಕಿ ಕಳುಹೆಂದ ॥೨೦॥ ಮರೆಯದೇತಕೆ ರಾಜಸೂಯದ । ಹೊರಿಗೆ ನಿನ್ನದು ರಾಣಿಕವನಾ । ನರಿಯೆನೆಮ್ಮ ಧರ್ಮಭಿಮಾನಪ್ರಾಣದೊಡೆಯನಲೆ ॥ ಕಿರಿಯರಿವದಿರು ರಾಜಸೂಯದ । ಕರುಬರತಿಬಲ್ಲಿದರು ಕೃಪೆಯನು । ಮೆರೆವುದೆಂದಸುರಾರಿ ಮುಂಘ್ರಿಗೆ ಚಾಚಿದನು ಶಿರವ ॥೨೧॥ ಎತ್ತಿದನು ಮುರವೈರಿ ರಾಯನ । ಮಸ್ತಕವ ನಸುನಗುತ ಕರೆಸು ಮು । ಹೂರ್ತಿಕರನಕ್ಷೋಹಿಣಿಯ ಬರಹೇಳು ದಳಪತಿಯ ॥ ಸುತ್ತಣರಸುಗೊಳಿಯುಡುಗೊರೆ । ಯಿತ್ತು ದೂತರ ಕಳುಹು ಬಳಿಕಿನೊ । ಳುತ್ತರೋತ್ತರಸಿದ್ಧಿ ನಿನಗಹುದೆಂದನಸುರಾರಿ ॥೨೨॥ ರೂಷಿಸಿದಸುಮುಹೂರ್ತದಲಿ ಹೊರಬೀಡು ಬಿಟ್ಟುದು ದಧಿಯ ದೂರ್ವೆಯ । ಕೂಡಿದಕ್ಷತೆಗಳ ಸುಲಾಜಾವಳಿಯ ಮಂಗಳದಾ ॥ ಜೋಡಿಗಳ ಜಯರವದ ದೈತ್ಯವಿ । ಭಾಡಸೂಕ್ತದ ವಿಗಡಬಿರುದುಪಾಡಗಳ ಪಾಠಕರ ಗಡಬಡೆ ಗಾಡಿಸಿತು ನಭವ ॥೨೩॥ ಆಳು ನಡೆಯಲಿ ಮಗಧರಾಯನ । ಮೇಲೆ ದಳಪತಿ ಮುಕುಂದದಳಪತಿ । ಹೇಳಿಕೆಗೆ ಭೀಮಾರ್ಜುನರ ಬರಹೇಳು ಹೇಳೆನುತ ॥ ಆಳುಸಾರಿದರವನಿಪತಿಗಳು । ಮೇಳದಲಿ ಹೊರಹೊಂಟು ಬರೆದೆ । ಖ್ಯಾಳವನು ನೋಡಿದರು ನಡೆದರು ಪಯಣಗತಿಗಳಲಿ ॥೨೪॥ ಜನಪ ಕೇಳ್ಕೈ ಕೃಷ್ಣಭೀಮಾ । ರ್ಜುನರು ವಿಮಳಸ್ನಾತಕವ್ರತ । ಮುನಿಗಳಾದರು ನಡೆದು ಪಯಣದಮೇಲೆ ಪಯಣದಲಿ ॥ ಜನದ ಕಾಣಿಕೆಗೊಳುತ ನಾನಾ । ಜನಪದಂಗಳ ಕಳಿದು ಗಂಗಾ । ವಿನುತನದಿಯನು ಹಾಯ್ದು ಬಂದರು ಪೂರ್ವಮುಖವಾಗಿ ॥೨೫॥ ಬರುತ ಕಂಡರು ಕೂಡೆಕೊಬ್ಬಿದ । ಸಿರಿಯ ನೂರೂರುಗಳ ಸೊಂಪಿನ । ಭರತವನು ಗೋಧನಸಮೃದ್ಧಿಯ ಧಾನ್ಯರಾಶಿಗಳ ॥ ವರನದಿಯ

ಕಾಲುವೆಯ ತೋಟದ । ತೆರಳಿಕೆಯ ಪನಸಾಮ್ರಪೂಗೋ । ತ್ಕರದ ರಮ್ಯಾರಾಮಮಂಡಿತಮಗಧಮಂ
ಡಲವ ॥೫೬॥ ಮೆಳೆಗಳೇ ದ್ರಾಕ್ಷೆಗಳು ವೃಕ್ಷಾ । ವಳಿಗಳೇ ಸಹಕಾರದಾಡಿಮ । ಫಳಿತಪನಸಕ್ರಮುಕ
ಜಂಬೂಮಾತುಳಂಗಮಯ ॥ ಕಳವೆಶಾಲಿಯಮಯವು ಹೊಲ । ಸ್ಖಲಿತಲಕ್ಷ್ಮೀಮಯವು ನಗರಾ ।
ವಳಿಗಳೆನೆ ಶೋಭಿಸಿತು ಜನಪದವಿವರ ಕಣ್ಣುಮನಕೆ ॥೫೭॥ ದೇಶ ಹಗೆವನದೆಂಬು ಕಡ್ಡಿಯ । ಗಾಸಿ
ಮಾಡಿದುದೇ ವಿನೋದದ । ಲೈಸುಪಡೆ ನಡೆತಂದು ಬಿಟ್ಟುದು ಗಿರಿಯತಪ್ಪಲಲಿ ॥ ಆಸರೋಜದ ಬಂಧು
ಚರಮಾ । ಶಾಸತಿಯ ಚುಂಬಿಸೆ ಗಿರಿವ್ರಜ । ಪಾತಿಖರವನು ಹತ್ತಿದರು ಹರಿಭೀಮಫಲುಗು
ಣರು ॥೫೮॥ ವೃಷಭಚರ್ಮನಿಬದ್ಧಭೇರಿಗ । ಳೆಸೆದವಕ್ಷತೆಗಂಧಮಾಲ್ಯ । ಪ್ರಸರದಲಿ ಶೈಲಾಗ್ರದಲಿ
ಸಂಪನ್ನಪೂಜೆಯಲಿ ॥ ಅಸುರರಿಪುಭೀಮಾರ್ಜುನರು ತ । ದ್ವಿಷಮಭೇರೀತ್ರಯವ ಹೊಯ್ದೆ ।
ಬ್ಬಿಸಿವರದಭುತ್ತರವ ಮಿಗಿಲು ಕೆಡೆದುದು ಧರಿತ್ರಿಯಲಿ ॥೫೯॥ ಏನಿದದುಭುತವೆಂದು ನಡುವಿರು ।
ಳಾನರೇಶ್ವರನಮಳವೇದವಿ । ಧಾನದಲಿತಚ್ಛಾಂತಿಗೋಸುಗಕದಸಿಭೂಸುರರ ॥ ದಾನದಲಿ ವಿವಿಧಾಗ್ನಿ
ಕಾರ್ಯವಿ । ಧಾನದಲಿ ವಿಪ್ರಾಸುವಚನಸ । ಗಾನದಲಿಮಗಧೇಶನಿದ್ದನು ರಾಯ ಕೇಳೆಂದ ॥೬೦॥
ಇವರು ಗಿರಿಯಿಂದಿಳಿದು ರಾತ್ರಿಯೊ । ಳವನ ನಗರಿಯ ರಾಜಬೀದಿಯ । ವಿವಿಧವಸ್ತುವ ಸೂರೆ
ಗೊಂಡರು ಹಾಯ್ದು ದಳದುಳವ ॥ ತಿವಿದರಡ್ಡೈಸಿದರನುಬ್ಬಿದ । ತವಕಿಗರು ಮಗಧೇಂದ್ರರಾಯನ ।
ಭವನವನು ಹೊಕ್ಕರು ವಿಡಂಬದ ವಿಪ್ರವೇಷದಲಿ ॥೬೧॥ ಉರವಣಿಸಿದರು ಮೂರುಕೋಟೆಯ ।
ಮುರುದರಾದ್ವಾರದಲಿ ರಾಯನ । ಹೊರೆಗೆ ಬಂದರು ಕಂಡರಿದಿರೆದ್ದನು ಜರಾಸಂಧಾ ॥ ಧರಣಿಯ
ಮರರಪೂರ್ವಿಗರು ಭಾ । ಸುರವು ಭವಾಕಾರರೆಂದಾ । ದರಿಸಿ ಮಧುಪರ್ಕಾದಿಗಳ ಮಾಡಿದನು
ಭಕ್ತಿಯಲಿ ॥೬೨॥ ಕೇಳಿದನು ಕುಶಲವನು ಕುಶಲವೆ । ಹೇಳಿದರು ಕುಳ್ಳಿರಿಯೆನಲು ಭೂ । ಪಾಲಕರು
ಕುಳ್ಳಿರ್ದರೆವೆಯಿಕ್ಕದೆನಿರೀಕ್ಷಿಸುತ ॥ ಹೇಳಿರೈ ನಿಮಗಾವದೇಶ ವಿ । ಶಾಲಗೋತ್ರವದಾವುದೆನುತವಿ ।
ಲೋಲಮತಿ ಚಿಂತಿಸಿದನಿವದಿರು ವಿಪ್ರರಲ್ಲೆಂದು ॥೬೩॥ ಸ್ನಾತಕವ್ರತವೇಷದಲಿ ಬಂ । ದಾತಗಳು
ತಾಪಿವರು ಶಸ್ತ್ರ । ವ್ರಾತದಲಿ ಶಿಕ್ಷಿತರು ಕರ್ಕಶಬಾಹುಪಾಣಿಗಳು ॥ ಕೈತವದಿನೈತಂದರರ್ಥವ ।
ನೀತಿಗಳ ಬಯಸರು ವಿರೋಧ । ಪ್ರೀತಿಮುಖರಿವರಾರು ಶಿವಶಿವಯೆನುತ ಚಿಂತಿಸಿದ ॥೬೪॥ ಆರಿ
ವರು ದೇವತ್ರಯವೊ ಬಂ । ಧಾರಿಯಮವಸಾರುತರೊ ರವಿರಜ । ನೀರಮಣಪಾವಕರೊ ಕಪಟಸ್ನಾ
ತಕವ್ರತದ ॥ ಧಾರಿಣೀಶ್ವರರೊಳಗೆ ಧಿಟ್ಟರ । ದಾರುತನ್ನೊಳು ತೊಡಕಿ ನಿಲುವವಿ । ರಾರಿಗಳಸಾ
ಕಾಶನೆಂದವನು ತನ್ನ ಮನದೊಳಗೆ ॥೬೫॥ ಈಗ ಮಿಡುಕುಳ್ಳವರು ಮಹಿಯಲಿ । ನಾಗಪುರದವರಸುಗಳು
ನಮ್ಮವ । ರಾಗಿಪರು ಪಾಂಡುವಿನ ಮಕ್ಕಳು ಪಿರಿಯ ಖಳರಲ್ಲ ॥ ನಾಗರೋಪಾಂತ್ಯದ ನರೇಂದ್ರರ ।
ಭೋಗಿಸಿದಮುತ್ತುಗಳು ಭಾವಿಸ । ಲೀಗಯಾಳರ ಗರ್ವವೇನುನಿಮಿತ್ತವಾಯ್ತೆಂದ ॥೬೬॥ ಯಾದ
ವರು ಹಿಂದೆಮ್ಮೊಡನೆಹಗೆ । ಯಾದವರು ಬಳಿಕವರೊಳಗೆ ತುರು । ಗಾದವನ ಕರುಗಾದವನ ಮಾಧ
ವನ ಮಾತೇನು ॥ ಮೇದಿನಿಯ ಮಂಡಳಿಕಮನ್ನೆಯ । ರಾದವರು ನಮ್ಮೊಡನೆ ಸೆಣಸುವ । ರಾದೊ
ಡಿದುದು ಷಾಕ್ಕಲವಸನಿದುಚಿತ್ರವಾಯ್ತೆಂದ ॥೬೭॥ ಬವರಿಗರು ನೀವ್ ವಿಪ್ರವೇಷದ । ಜವನಿಕೆಯ
ಜಾಣಾಯ್ಲುತನದಿಂ । ದವೆಗಡಿಸಿ ಹೊಕ್ಕಿರಿಯಪದ್ವಾರದಲಿನ್ನಪಸಬೆಯ ॥ ನಿಮಗಿದೇನೀವಸನಕಪಟ ।

ವ್ಯವಹರಣೆ ಕೃತ್ರಿಮವೊ ಸಹಜವೊ । ರವಣ ಮತ್ತೇನುಂಟು ಹೇಳಿನ್ನಂಜಬೇಡೆಂದ ॥೧೮॥ ಸ್ನಾತಕವ್ರತನೇನು ಪಾರ್ಥಿವ । ಜಾತಿಗಿಲ್ಲಾ ವೈಶ್ಯಕುಲಕಿದು । ಪಾತಕವು ಸಾವಿಂದು ಪಾರ್ಥಿವಜಾತಿಸಂಭವರು ॥ ಸ್ನಾತಕರು ನಾವ್ ವೈರಿಗೃಹದಲಿ । ಭೀತರದ್ವಾರಪ್ರವೇಶವ । ನೀತಿಯಲ್ಲ ಪುರಾಣಸಿದ್ಧವಿದೆಂದನಸುರಾರಿ ॥೧೯॥ ವೈರಭವನವಿದೆ ನಮ್ಮದಿದು ನಾವ್ ವೈರಿಗಳು ನಿಮಗೆಮಗೆ ಜನಿಸಿದ । ವೈರಬಂಧನಿಮಿತ್ತವಾವುದು ನಿಮ್ಮ ಪಕ್ಷದಲಿ ॥ ಆರು ನೀವ್ ಈ ಬ್ರಾಹ್ಮಣರು ನಿಮ । ಗಾರು ಪಾಧ್ಯರು ಹೇಳಿ ನಿಮ್ಮವಿಕಾರಬರಿದೇ ಹೋಗದೆಂದನು ಮಗಧಪತಿ ನಗುತ ॥೨೦॥ ಮುರಿದು ಹಲಬರಿಳಾಧಿನಾಥರ । ಸೆರೆಯಲಿಕ್ಕಿದೆ ರಾಜ್ಯಮದದಲಿ । ಮೆರೆವ ಮಾನ್ಯರನಿರಿದು ಹೆಚ್ಚಿಸಿಕೊಂಡೆ ಭುಜಬಲವ ॥ ಅರಿಯದಳುಪಿದ ಪಾತಕಕೆ ಬಿಡು । ಸೆರೆಯ ಪ್ರಾಯಶ್ಚಿತ್ತವಿದು ಸಾ । ವುರುವವೇಷದುಪಾಧ್ಯರೆಂದನು ನಗುತ ಮುರಹರನು ॥೨೧॥ ಆನೃಪಾಲರ ಮಗನೊ ಮೊಮ್ಮನೊ । ನೀನವರ ಬಾಂಧವನೊ ಭೃತ್ಯನೊ । ಊನವಕ್ಷನೊ ಬೆರಳಬಡಗನೊ ಕುರುಳಕೋಮಳನೋ ॥ ಏನು ನಿನ್ನಂಘವಣೆ ನೀನಾ । ರಾನರೇಂದ್ರರ ಸೆರೆಯ ಬಿಡುಗಡೆ । ಗೇನನೆಂಬೆನು ರಹವನೆಂದನು ತೂಗಿ ಮಣಿಶಿರವ ॥೨೨॥ ಎಲವೊ ಧರ್ಮಯಲಧರ್ಮಶೀಲರ । ತಲೆಯ ಚೆಂಡಾಡುವೆವು ಧರ್ಮವ । ನೊಲಿದು ಕೊಂಡಾಡುವೆವು ಶಿಕ್ಷಾರಕ್ಷಣವ್ಯಸನ ॥ ನೆಲೆ ನಮಗೆ ನೀನರಿಯೆ ರಾಜಾ । ವಳಿಯ ಬಿಡ ಫಡ ಬಂಡವಿದ್ಯೆಯ । ಬಳಸುವಾ ನಮ್ಮೊಡನೆಯೆಂದನು ದಾನವಧ್ವಂಸಿ ॥೨೩॥ ಇವರುಗಡ ಜಗದವನತಿಕ್ರಾ । ಸವನದಲಿ ದೀಕ್ಷಿತರುಗಡ ಕೈತವದ ಭಂಡರು ನೀವೊ ನಾವೋ ಸಾಕದಂತಿರಲಿ ॥ ಕವಡತನದಲಿ ಧಿಟ್ಟರಹಿರಂ । ಘವಣೆಯೊಳ್ಳಿತು ನಿಮ್ಮ ನಿಜವನು । ವಿವರಿಸಿರೆ ನೀವಾರು ಹೇಳೆಂದನು ಜರಾಸಂಧ ॥೨೪॥ ಕೇಳಿ ಮಾಡುವುದೇನು ತಾನಸು । ರಾಳಿಧೂಳೀಪಟಲ ವೈರನೃ । ಪಾಲಚೌಪಟಮಲ್ಲನೀತನು ಭೀಮಸೇನಕಣಾ ॥ ಭಾಳನೇತ್ರನ ಭುಜಬಲದ ಸಮ । ವಾಳಿಯರ್ಜುನನೀತನೀತಾ । ಕಾಳಗವ ಕೊಡು ನಮ್ಮೊಳೊಬ್ಬರಿಗೆಂದನಸುರಾರಿ ॥೨೫॥ ಕೇಳಿ ಕೆದರಿದ ಕಡುನಗೆಯಲುತ । ಏಳುತೇಳುತ ಬಿರುವನಿಯ ಕ । ಣ್ಣಾಲಿಗಳ ಜುಮ್ಮಿಗ್ದರೋಮದ ಜಡಿವಬಿಡುದಲೆಯ ॥ ಸೂಳುನಗೆ ಬಿಳಿನಗೆಯಲುಡಿಗಡಿ । ಗಾಳಿಮುಸುಗುಬ್ಬಸದಲಿದ್ದ ಕ । ರಾಳಮತಿ ಸಂತೈಸಿ ನೆರೆತನ್ನವರಿಗಿಂತೆಂದ ॥೨೬॥ ಈತನಾರೆಂದರಿವಿರೈ ನಂ । ದಾತನೀತನು ನಮ್ಮ ಕಂಸಂ । ಗೀತನಳಿಯನು ನಮಗೆ ಮೊಮ್ಮನು ಮಗನು ದೇವಕಿಗೆ ॥ ಈತ ಕಾಣಿರೆ ಹಿಂದೆ ಚೌರಾ । ಶೀತಿದುರ್ಗದೊಳೋಡಿ ಬದುಕಿದ । ನೀತ ಬಲುಗೈಬಂಟನೆಂದನು ಮಗಧಪತಿ ನಗುತ ॥೨೭॥ ಕೊಳಲರಾಗದರಹಿಯೊ ಕಲ್ಲಿಯ । ಕಲಸುಗೋಳೋ ಹಳ್ಳಿಕಾತಿಯ । ನೊಳಗುಡಿಯ ಹಾದರವೊ ತುರುಗಾಹಿಗಳ ತೋಹುಗಳೋ ॥ ಬಲುಸರಳಸರಿವಳೆಯ ಮಿದುಳೊಡೆ । ಗಲಸುಗಳಡಾಯುಧದ ತಳುಕಿನ । ಕೊಳುಗುಳದ ಜಯಸಿರಿಯ ಕಾಹಿನೊಳಾರು ನೀನೆಂದ ॥೨೮॥ ಹೋರಿ ಹೆಂಗುಸು ಬಂಡಿ ಪಕ್ಷಿ ಸ । ಮೀರಣಾಶ್ವಾಜಗರಗಾರ್ದಭ । ವೀರರೀತನ ಘಾತಿಗಳುಕಿತು ಕಂಸಪರಿವಾರ ॥ ಆರುಭಟೆಯುಳ್ಳವನು ಕಂಸನ । ತೋರಹತ್ತನ ತೊಡಕಿವನು ಗಡ । ಭಾರಿಯಾಳಹನುಂಟು ಶಿವಶಿವಯೆಂದನಾ ಮಗಧ ॥೨೯॥ ಎಲವೊ ಗೋವಳ ನಿನ್ನ ಕಂಸನ । ನಿಳಿಯವೋ ಪೌಂಡ್ರಕನ ಕದನದ । ಖಳನೊ ಹಂಸನ ಹೋರಟೆಯೊ ಮೇಣ್ಡಿಭಿಕನಡಾಪಾಮೋ ॥ ಹುಲಿಗೆ ಮೊಲನಭ್ಯಾಗತನೆ ಕರಿ । ಕಳಭ ಸಿಂಹಕೆ ಸರಿಯೆ ನೀನಿ । ನ್ನಳವನರಿಯದೆ ಹೊ

ಕ್ಕ ಕೆಣಕಿದೆ ಕೆಟ್ಟೆ ಹೋಗೆಂದ ॥೮೦॥ ಇದುವೆ ಪಿತ್ತದ ವಿಕಳವೋ ಮ । ದ್ಯದ ವಿಕಾರವೊ ಭಂಗಿತ ಲೆಗೇ । ರಿದುದೊ ಭಟನಾದೊಡೆವಿಘಾತದಲೇಳುಕಾಳಗಕೆ ॥ ಸದನ ನಿನ್ನದು ಸೂಳೆಯರ ಮುಂ । ದೊದರು ಫಲವೇನೆದ್ದು ಬಾ ಬಾ । ಳದಲಿ ಬರಿದುವ ತೊಡವೆನೆಂದನು ದಾನವಧ್ವಂಸಿ ॥೮೧॥ ಎಲವೊ ಗೋಪಕುಮಾರ ಕಂಸನ ಲಲನೆಯರ । ವೈಧವ್ಯದುಃಖಾ । ನಲನ ನಂದಿಸಲಾಯ್ತು ನಿನ್ನಯ ರುಧಿರಜಲಧಾರೆ ॥ ಆಳಿದಕಂಸನ ಕಾಲಯವನನ । ಕಳನ ಹುಬವ ಗೆಲಿದು ದೈತ್ಯಾ । ವಳಿಯ ಬಂಧುತ್ವವನು ಬಳಸುವೆನೆಂದನಾಮಗಧ ॥೮೩॥ ಗೋವಳರು ನಿರ್ಲಜ್ಜರದರೊಳು । ನೀವುಗರುವರು ರಾಜಪುತ್ರರು । ಸಾವ ಬಯಸುವನೊಡನೆ ಬಂದಿರಿ ತಪ್ಪಮಾಡಿದಿರಿ ॥ ನೀವು ಮಕ್ಕಳು ನಿಮ್ಮ ಪಿರಿಯರ । ಠಾವಿನಲಿ ಬಧವಿಲ್ಲಲಾ ನಿಮ । ಗಾವಹದನಹುದೆನುತ ನುಡಿದನು ಭೀಮಫಲುಗುಣರ ॥ ಸಾಕಿದೇತಕೆ ಹೊಳ್ಳುನುಡಿಗೆ ವಿ । ವೇಕಿಗಳು ಮೆಚ್ಚುವರೆ ಯುದ್ಧ । ವ್ಯಾಕರಣಪಾಂಡಿತ್ಯವುಳ್ಳೊಡೆ ತೋರಿಸುವುದೆಮಗೆ ॥ ಈಕಮಲನೇತ್ರಂಗೆ ಫಡ ನೀ । ನಾಕವಾಳನೆ ತಿವಿಶಿಶಾ ಜಗ । ದೇಕದೈವದಕೂಡೆ ದಂಡಿಯೆಯೆಂದನಾಭೀಮ ॥೮೪॥ ದಿಟ್ಟರಹಿರೋ ಸಾವನರಿಯದೆ । ಕೆಟ್ಟರಕಟಾ ಕಾಳಗೋವನ । ಗೊಟ್ಟೆಯಾಟಕೆ ಗುರಿಗಳಾದಿರಿ ನಿಮ್ಮ ಗುರುಸಹಿತ ॥ ಚಟ್ಟಳೆಯ ಚತುರಾಸ್ಯನಿವರೊಡ । ಹುಟ್ಟಿದರಸಮಜೋಳಿಗಡ ಜಗ । ಜಟ್ಟಿಗಳು ತಾವಿವರೆನುತ ತಲೆದೂಗಿದನು ಮಗಧ ॥೮೫॥ ಬೈದು ಫಲವೇನೆಮಗೆ ಮೇಳದ । ಮೈದುನರು ನೀವಲ್ಲಲೇ ದಳ । ವೈದೆ ನೂಕಲಿ ನಿಮ್ಮಮೂವರುಸಹಿತ ನಮ್ಮೊಡನೆ ॥ ಕೈದುವುಂಟೇ ತರಿಸಿ ಆಡಿಸುವೆ । ನೈದಿ ನೀವಾಳಾಗಿ ನಿಮ್ಮೊಡ । ನೈದುವೆನು ಬಲರಾಮನುಳಿವಾನೆಂದನಾಮಗಧ ॥೮೬॥ ಎಲವೊ ಬಾಹಿರ ಮಗಧ ಜಲಧರ । ನುಳಿಯೆ ಪಾಂಡವನೃಪರು ಸಂಯಮ । ತಳವು ನಿನಗೊಬ್ಬಂಗೆ ಸೇರುವುದೇ ಮಹಾದೇವಾ ॥ ಅಳಿವು ತಪ್ಪದು ನುಡಿಯೊಳಲ್ಪವ । ಬಳಸಲೇತಕೆ ವೀರನಹೆ ನ । ಮ್ಮೊಳಗೆ ಮೂವರೊಳೊಬ್ಬನನು ವರಿಸೆಂದನಸುರಾರಿ ॥೮೭॥ ಅಕಟ ನಿಮಗೀಸಮರವಾವ । ಶ್ಯಕವೆ ನಮಗಾಖ್ಯಾತಿಯಲ್ಲಿದು । ಸಕಲಜನವರಿದಿರೆಯೆನುತ ನೋಡಿದನು ತನ್ನವರ ॥ ಪ್ರಕಟವೈ ನಿನ್ನಾಳುತನ ಯಮು । ನಿಕರಕಾವಂಜುವೆವು ರಣಸಾ । ಹಕಪಲಾಯನಪಂಡಿತರು ನೀವೆಂದನಾಮಗಧ ॥೮೮॥ ಪಾರ್ಥ ನೀ ಮಗುವೆಮ್ಮೊಡನೆ ರಣ । ದರ್ಥಿಯಾದರೆ ಭೀಮಸೇನ ಸ । ಮರ್ಥನಹನಾತಂಗೆ ಕೊಟ್ಟೆನು ಕಳನ ಕಾಳಗವ ॥ ವ್ಯರ್ಥವಿದು ತಾ ಹೋಗಲಿನ್ನು ಪ । ರಾರ್ಥಕಂಟಕವಾಗಲೇತಕೆ । ತೀರ್ಥವೈಸಲೆ ಶಸ್ತ್ರಧಾರೆಯಿದೆಂದನಾಮಗಧ ॥೮೯॥ ತರಿಸಿದನು ಚಂದನದ ಸಾದಿನ । ಭರಣಿಗಳ ಕರ್ಪೂರರವರಕ । ಸ್ತೂರಿಜವಾಜಿಪ್ರಮುಖಬಹುವಿಧಯಕ್ಷಕರ್ದಮವ ॥ ಹರಿವೃಕೋದರಪಾರ್ಥರಿದಿರಲಿ ಭರಣಿಗಳ ನೂಕಿದನು ಮಾಲ್ಯಾಂ । ಬರವಿಲೇಪನದಿಂದಲಂಕರಿಸಿದರು ನಿಜತನುವ ॥೯೦॥ ಅಂಕಕಿಬ್ಬರು ಭಟರು ತಿಲಕಾ । ಲಂಕರಣಶೋಭೆಯಲಿ ರಣನಿಶ್ಶಂಕರನುವಾದರು ಸುಕರ್ಪೂರವೀಳೆಯಂಗೊಂಡು ॥ ಬಿಂಕದುಬ್ಬಿನ ರೋಮಪುಳಕದ । ಮುಂಕುಡಿಯ ಸುಮ್ಮಾನದಂಕೆಯ । ಝುಂಕೆಗಳ ಭರಭುಲ್ಲವಿಸಿದುದು ಭೀಮಮಾಗಧರ ॥೯೧॥ ರಣದೊಳಾವುದು ಕೈದು ಹಿರಿಯು । ಬ್ಬಣವೊ ಪರಿಘವೊ ಸುರಗಿಯೋ ಡೊಂ । ಕಣಿಯೊ ಗದೆಯೋ ಭಿಂಡಿವಾಳವೊ ಪರಶುತೋಮರವೋ ॥ ಕಣೆ ಧನುವೊ ಕಕ್ಕಡೆಯೊ ಮುಷ್ಟಿಯೊ । ಹಣಿದಕಾವುದು ಸದರವದರಲಿ । ಕೆಣಕಿ ನೋಡಾ ತನ್ನನೆಂದನು ಭೀಮ

ಗಾಯದ ಲುಳಿಯ ಘೋಳಾ । ಘೋಳಿಗಳನಾರೋಹಿಸುವರು ಕಲಿಭೀಮ ಮಾಗಧರ ॥೧೦೪॥ ಕುಸಿದು ಗಾಯವ ಕಳೆದು ವಕ್ಷದ ।। ಬೆಸುಗೆ ಬಿಡೆ ಸಿಡಿದೆದ್ದು ಹೊಯ್ಲಿಗೆ । ವ್ಯಸನದತಿರ‍್ಭಾವವೃಯನೊಡ್ಡಿದೊಡೌಕಿ ಘಟ್ಟಿಸುವ ॥ ಅಸಮಸೆಗೆ ವೃಯಳುಕದೆರಗುವ । ಹುಸಿವಜಾರುವಹೊಳೆವ ಹಣುಗುವ ಬೆಸುವಬಿಡಿಸುವದಿಟ್ಟಿವಾಳರು ಪೊಕ್ಕು ಹೊಣಗಿದರು ॥೧೦೫॥ ಪವನಜನ ರಾವಣನ ಝಾಡಿಯ । ತಿವಿತಗಳು ಚಾಣೂರಕೃಷ್ಣರ । ಜವಳಿಹೊಯ್ಲಿವರೊಳಗೆ ಜೋಡಿಸಬೇಸರ್ಪೇಳುವೆನು ॥ ಭವನ ಡಮರುಗದಾಟವೋ ಭೈರವನ ಪಣೆಗಣ್ಣಾಟವೋ ಬಿರು । ದಿಪಿಗು ಳಿಸದೆಕ್ಕಾಳ ಮಸಗಿತು ಭೀಮಮಾಗಧರ ॥೧೦೬॥ ಕುಣಿದವಿಬ್ಬರ ಮುಷ್ಟಿ ಯಿಬ್ಬರ । ಹಣೆಯಲೆದೆಯಲಿಡ ಮೋರೆಯಲಿ ಭುಜ । ಪಣಸಿನಲಿ ಕಂದದಲಿ ಶಿರದಲಿ ಬದಿಯಲುದರದಲಿ ॥ ಝಣಾವಿರೋಧಿವಿಭಾರ ಝಣಾಝಣಾ । ಝಣಾಜಗತ್ರಯಜಟ್ಟಿ ಝಣಾಝಣಾ । ಝಣಾಝಣೆಂಬಬ್ಬರಣೆ ಮಸಗಿದುದೆರಡು ಬಾಹೆಯಲಿ ॥೧೦೭॥ ಹೊಯ್ಲು ಹೊಡೆದ್ದವು ವಿಘಾತದ । ಕಯ್ಲಳಿಯ ಕಡುಗಾಯಗಾಯಕೆ ಮಯ್ಲವಣೆ ಲಂಬಿಸಿತು ಕಡುಹಿನ ಖತಿಯ ಕೈಮಸಕ ॥ ಹೊಯ್ಲು ಹೊಗೆಗಳ ಹೋರಟೆಯ ಮೇ । ಗಾಯ್ಲು ಮುಷ್ಟಾಮುಷ್ಟಿಗತಿಯ ದೃ । ಘಾಯ್ಲರಪ್ಪಳಿಸಿದರು ಪದಘಟ್ಟಣೆಗೆ ನೆಲ ಕುಸಿಯೆ ॥೧೦೮॥ ಆವಸಾಧನೆಯೊ ಏಘಾತಿಯ । ಲಾವಣಿಗೆಗಡಿಗಳು ಬಿರಿದವು । ವ್ಯಾವಳಿಯಲುಕ್ಕಿದುದು ಕಡುಹಿನಖತಿಯನ್ಯಾವಸಕ ॥ ತಾವರೆಯ ತೆತ್ತಿಗನ ಕುಮುದದ । ಜೀವಿಗನ ಮಿಗೆನೀಲ ನೋಟವೊ । ಳಾವಿಗಡರುಗಳಡಸಿ ತಿವಿದಾಡಿದರುಬೇಸರದೆ ॥೧೦೯॥ ತೆಗೆಯದರ್ಜುನಕೃಷ್ಣರೀತನ । ನಗಿಯುರವನವರವನನಿರುಳಿನ । ಹಗಲ ವಿವರಣೆಯಿಲ್ಲ ಮಜ್ಜನಭೋಜನಾದಿಗಳ ॥ ಒಗೆಗೆ ತಾರರು ಬಾಹುಸತ್ವದ । ಹೊಗರು ಹೋಗದು ಮನದ ಖಾತಿಯ । ತೆಗಹುತಗ್ಗದು ಹೊಕ್ಕು ತಿವಿದಾಡಿದರು ಬೇಸರದೆ ॥೧೧೦॥ ಸತ್ವ ಸವೆಯದು ಮನವ ಮುಳಿಸಿನ । ಬಿತ್ತುಬೀಯದು ಜಯದ ಬಳಕೆ ಯ । ಸುತ್ತು ಸಡಿಲದು ಬಿಂಕ ಬೀಯದು ನೋಯದಾಟೋಪ ॥ ತೆತ್ತುಕೈಕಂಪಿಸದು ಮುಷ್ಟಿಯ । ಹತ್ತುಗೆಗೆ ಮನ ಝೋಂಪಿಸದುದು । ವೆತ್ತಿ ಮೆಟ್ಟಿದರೊಬ್ಬರೊಬ್ಬರ ಮರ್ಮ ಘಾತದಲಿ ॥೧೧೧॥ ಅಲಸ ಕೇಳ್ಕೆದನೆಯುಟವಸದೊ । ಳುರುಭಯಂಕರವಾಯ್ತು ಕದನದ । ಭರದೊಳೆಡೆವೆರಹಿಲ್ಲ ವಿಶ್ರಮವಿಲ್ಲ ನಿಮಿಷದಲಿ ॥ ಎರಡುದೆಸೆಯಲಿ ವೀಳೆಯವಕರ್ಪೂರದ ಕವಳದ ಕೈಚಳಕದಲಿ ತೆರಹನಲ್ಲದೆ ಮತ್ತೆ ಕಾಣೆನು ಯುದ್ಧರಂಗದಲಿ ॥೧೧೨॥ ಭರದಭಾರಣೆಯಲಿ ಚತುರ್ದಶಿಯಿರುಳು ಮಾಗಧನ ಬಾಹುಸತ್ವದ । ಮುರಿವು ಮೊಳೆತುದು ಶೌರ್ಯ ಸೆಡೆದುದು ಭಯದ ಬಿಗುಹಿನಲಿ ॥ ಉರುಪರಾಕ್ರಮತೇಜ ಪಡುವಣ । ತರಣಿಯಾದುದು ಘಟ್ಟಣೆಯ ಭರ । ಧುರಕೆ ನಿರ್ದ್ರವಜಹ್ವೆಯಾದುದು ನಿಮಿಷನಿಮಿಷದಲಿ ॥೧೧೩॥ ಬೇಸುಕೆ ಬೇರೂರಿದುದು ಜಯ । ದಾಸೆ ಜಾರಿತು ದಿಟ್ಟತನದವಿ । ಳಾಸ ಹಾರಿತು ಸುಪ್ರತಾಪದ ಕೆಂಪು ಕಂದಾಯ್ತು ॥ ವಿಲಾಸಲಳಿದುದು ಮುಳಿಸು ಶೌರ್ಯದ । ವಾಸಿ ಪೈಸರವಾಯ್ತು ರಣದಾ । ವೇಶವಿಳಿದುದು ಮಗಧಪತಿಗಿದನರಿದನಸುರಾರಿ ॥೧೧೪॥ ಹೊರಗೆ ಬಲಿದೊಳಡಿಳ್ಳವನು ಪರ । ರರಿಯದಂತಿರೆ ತಿವಿವಮಾಗಧನ । ಪರಿಯನರಿದನು ದನುಜರಿಪು ಪರರಿಂಗಿತಜ್ಞನಲೆ ॥ ಅರಿವುದರಿದೆ ಚರಾಚರಂಗಳ । ಹೊರಗೊಳಗು ತಾನಲ್ಲದಿಲ್ಲದ । ನರಿಯನೇ ಶಿವಯೆಂದನಾಜನಮೇಜಯನುನಗುತ ॥ ಎಲೆವೆಪವನಜ ಮಾಗಧೇಶ್ವರ । ನಳವನರಿದಾ ನಿನ್ನ ತಂದೆಯ

ಬಲುಹು ಕೊಂಡಿರ್ದಪುವ ಮುರಿ ನೆನೆನೆನೆ ಸಮೀರಣನ ॥ ಬಲುಮುಗಿಲು ಬಿರುಗಾಳಿಯೊಡ್ಡಿನೊ । ಳೆಳಕದೇ ಘಡ ಬೇಗವಮಾತನೆ । ಕಲಿವೃಕೋದರನನಿಲರೂಪಧ್ಯಾನಪರನಾದ ॥೧೧೬॥ ಧ್ಯಾನದಲಿ ತನ್ನಮಾತೆಯಾಗಲು । ನೂನಸಾಹಸಂಗವುಗಧವು । ಹಾನರೇಂದ್ರನ ತುಡುಕಿ ಹಿಡಿದನು ಮಲ್ಲಗಂಟನಲಿ ॥ ಆನಗೆಯನೇವೃಷ್ಣಿಸುವೆನನು । ಮಾನಿಸದೆ ಬೀಸಿದನು ಭವಣೆಯ । ಭಾನುಮಂಡಲದಂತೆ ತಿರುಗಿದನಾಜರಾಸಂಧ ॥೧೧೭॥ ಬರಸೆಳೆದು ಕರದಿಂದ ಮಾಗಧ । ನೆರಡುಕಾಲನು ಹಿಡಿದು ಸೀಳಿದು । ಧರೆಗೆ ಬಿಸುಟನು ಸಂಧಿಸಿದವಾಸೀಳ್ತ್ತತ್ಕ್ಷಣಕೆ ॥ ಮರಳಿ ಪವನಜ ಹಿಡಿದು ಸೀಳುವ । ನಿರದೆ ಮಗುಳವು ಸಂಧಿಸುವವೀ । ಪರಿ ಹಲವು ಸೂಳಿನಲಿ ಭೀಮನೊಳೊದಗಿದನು ಮಗಧ ॥೧೧೮॥ ಮುರಮಥನನವನರಿತ ನಿಜಕರ । ವಿರಡ ಪಲ್ಲಟವಾಗಿ ಸಂಘಿಸ । ಲರಿವಿದಾರಣಭೀಮ ನೋಡುತ ಮರಳಿ ಮಾಗಧನಾ ॥ ಎರಡುಸೀಳನು ಮಾಡಿ ಹೊಮ್ದು । ಬ್ಬರಿಸಿ ಪಲ್ಲಟವಾಗಿಸೇರಿಸಿ । ತಿರುಗಿಸಿದನೇನೆಂಬೆನುನ್ನತಬಾಹುಸತ್ವದಲಿ ॥ ತಿರುಹಿದನು ನೂರೆಂಟುಸೂಳನು । ಧರೆಯೊಳಪ್ಪಳಿಸಿದನು ಬಳಿಕಾ । ಪುರಜನದ ಪರಿಜನದ ಹಾಹಾರವದ ರಿಂ ಮಸಗೆ ॥ ತೆರಳಿತಲ್ಲಿಯದಲ್ಲಿ ಮಾಗಧ । ನರಸಿಯರು ಬಿಡುಮುಡಿಯ ಜಠರದ । ಕರೆವ ಬಿರುಹೊಯ್ಲಿನಲಿ ಹೊರವಂಟರು ನಿಜಾಲಯವ ॥೧೨೦॥ ಮನೆಮನೆಯ ಕದವಿಕ್ಕಿದವು ನೃಪ । ವನಿತೆಯರು ಹೊರವಂಟರಲ್ಲಿಯ । ಮನುಜರಡಗಿದರದ್ರಿಗುಹೆಯಲಿ ಬೇಹಬೇಹವರು ॥ ಜನದ ಕೋಲಾಹಲವನಾತನ । ತನುಜರೋಟವನವನಸತಿಯರ । ನನದವನು ಕಂಡಸುರಹರ ನಾಂದವನು ಕೈನೆಗಹಿ ॥೧೨೧॥ ಅಂಜದಿರ ಪುರದವರು ವನಿತೆಯ ರಂಜದಿರ ಮಾಗಧನ ಪರಿಜನ । ವಂಜದಿರಿ ಮಂತ್ರಿಪ್ರಧಾನಪಸಾಯ್ತರಾದವರು ॥ ಅಂಜದಿರಿ ಕರೆಯಿವನ ಮಗನು । ಭಂಜಿಸುವಡಿಲ್ಲಕಟ ಭೀಮ ಧ । ನಂಜಯರು ಕೊಟ್ಟಭಯವೆಂದನು ನಗುತ ಮುರವೈರಿ ॥ ಮುರಿದು ಕೆಡಹಿದರದಯನಲ್ಲಿಯ । ಸೆರೆಯಮನೆಗಳ ಹೊಕ್ಕು ರಾಯರ । ಸೆರೆಗಳನು ಬಿಡಿಸಿದನು ನಾನಾದ್ವೀಪಪಾಲಕರಾ ॥ ವರರ ಮಣಿಮಯರತ್ನವಳೆಯದ । ಮಿರುಪರಥವನು ಕೊಂಡು ನಗರದ । ಹೊರವಳೆಯದಲಿ ಬಂದು ಹೊಕ್ಕರು ತಮ್ಮಪಾಳೆಯವ ॥೧೨೨॥ ಪೌರಜನಕಾಣಿಕೆಗಳಲಿ ಕಂ । ಸಾರಿ ಭೀಮಾರ್ಜುನರ ಕಂಡರು । ಧರಣೀಪಾಲಕರು ಬಂದರು ಬೆನ್ನಲಿವರುಗಳ ॥ ಘೋರವಡಗಿದುದೆಮ್ಮಕಾರಾ । ಗಾರಬಂಧ ವಿಮುಕ್ತವಾಯ್ತುಪ । ಕಾರವೆಮ್ಮಿಂದಾವುದೆಂದರು ನೃಪರುಕೈಮುಗಿದು ॥೧೨೩॥ ನವದಿರತಿದುಃಖದಲಿ ಬಿಡುಗಡೆ । ಪವನಸುತನಿಂದಾಯ್ತು ನಿಜರಾ । ಜ್ಯವನು ಹೋಗುವುದು ಪೌರಜನಪರಿಜನವ ಸಲಹುವದು ॥ ಎವಗೆಮಾಳ್ಪಪಕಾರ ಬೇರಿ । ಲ್ಲವನಿಪವ ವರರಾಜಸೂಯಕೆ । ನಿವನಿವಗೆ ಮುಂಕೊಂಡು ಬಹುದೆಂದನು ಮುರಾಂತಕನು ॥೧೨೪॥ ನಗರಜನಮಂತ್ರಿಪ್ರಧಾನಾ । ದಿಗಳು ಸಹಿತಕುಮಾರನೈತಂ । ದಗಧರನ ಪದಕೆರಗಿದನು ಭೀಮಾರ್ಜುನಾಂಘ್ರಿಯಲಿ ॥ ಮಗಗೆ ತಂದೆಯ ಮಾರ್ಗದಲಿ ನಂ । ಬುಗೆಯೊ ಕರುಣಾರಕ್ಷಣದ ನಂ । ಬುಗೆಯೊ ಚಿತ್ತವಿಸೆಂದರಾಮಂತ್ರಿಗಳು ಕೈಮುಗಿದು ॥೧೨೫॥ ಶವವ ಸಂಸ್ಕರಿಸುವುದು ಮಾಗಧ । ನವನಿಯಲಿ ಸಹದೇವಗಭಿಷೇ । ಕವನು ಮಾಡಿಸದಲ್ಲದೆತ್ತಲು ಮುರಿವುದಿಲ್ಲೆಂದು ॥ ಅವರಿಗಭಯವನಿತ್ತು ಪರಿವಾ । ರವನು ಕಳುಹಿದರಿತ್ತಲಾತನ । ಯುವತಿಯರು ಬೇಡಿದರು ವಹ್ನಿಯ ಪಡೆದುಮರಳಿದರು ॥೧೨೬॥ ಆವನ ಸಂಸ್ಕಾರದಲಿ ನಾರೀ । ನಿವಹ ಸಹಗತವಾಯ್ತು ವೈದಿಕ ।

ನಿವಿಧವಿಧಿಯಲಿ ಮಾಡಿದರು ಶ್ರೇಷ್ಠಕ್ರಿಯ್ಯಾದಿಗಳ ॥ ಅವನ ಮಗಸಹದೇನಾತಂ । ಗವನಿಯಲಿ ಪಟ್ಟಾಭಿಷೇಕೋ । ತ್ಸವವ ಮಾಡಿಸಿ ಕೊಟ್ಟನಭಯವನಾಪರಿಗ್ರಹಕೆ ॥೧೨॥ ತೇರುಗಳ ತೇಜಿಗಳ ನಾಭಂ । ಡಾರವನು ಗಜಘಟಿಸಂತವಿ । ಸ್ತಾರವಿಭವವನೊಪ್ಪುಗೊಂಡರು ಮಗಧನಂದನನಾ॥ಧಾರು ಣಿಯನವಗಿತ್ತು ಸಕಳವ । ಹೀರಮಣರನು ಕಳುಹಿ ಬಂದನು । ವೀರನಾರಾಯಣನು ಶಕ್ರಪ್ರಸ್ಥಪುರವರಕೆ ... ... ... ... ॥೧೯॥

ಅಂತು ಸಂಥಿ ೨ ಕ್ಕೆ ಪದ ೨೨೩ ಕ್ಕಂ ಮಂಗಳಮಸ್ತು.

## ಮೂರನೆಯ ಸಂಧಿ.

ಸೂಚನೆ॥ ಭೂಪತಿಯ ನೇಮದಲಿ ಜಂಬೂದ್ವೀಪನವಖಂಡದಲಿ ಸಕಳವ
ಹೀಪತಿಗಳನು ಗೆಲಿದು ಕಪ್ಪವತಂದನಾಪಾರ್ಥ ॥

ಕೇಳು ಜನಮೇಜಯಧರಿತ್ರೀ । ಪಾಲ ಪಾಂಡವಪುರಿಗೆ ಲಕ್ಷ್ಮೀ । ಲೋಲ ಬಿಜಯಂಗೈದ ಭೀಮಾರ್ಜುನರ ಗಡಣದಲಿ ॥ ಬಾಲೆಯರ ಕಡೆಗಣ್ಣ ಮಿಂಚಿನ । ಮಾಲೆಗಳ ಲಾಜಾಭಿವರುಷದ । ಲಾಲನೆಯ ರಚನೆಯಲಿ ಹೊಕ್ಕನು ರಾಜಮಂದಿರವ ॥೧॥ ಕಂಡು ಕೃಷ್ಣನ ನಿವರಕಾಣಿಸಿ । ಕೊಂಡನ ರಸುಕ್ಷೇಮಕುಶಲವ । ಕಂಡುಬೆಸಗೊಳಲೇಕೆಬಹುಮಾತಿನಲಿಫಲವೇನೂ ॥ ಕಂಡೆವೈನಿನ್ನ ಮಳಕರುಣಾ। ಖಂಡಜಲಧಿಯ ಭಕ್ತಜನಕಾ । ಖಂಡಲದ್ರುಮವೆಂದು ತಕ್ಕೈಸಿದನು ಹರಿಪದವ ॥೨॥ ನಡೆದಪರಿಯನು ರಿಪುಪುರವನವ । ಗಡಿಸಿ ಹೊಕ್ಕಂದವನು ಮಗಧನ । ತೊಡಕಿ ತ್ರೋಟಿಯ ಮಾಡಿ ಭೀಮನ ಕಾದಿಸಿದಪರಿಯ ॥ ಬಿಡದೆ ಹಗಲಿರುಳೊದಗಿ ವೈರಿಯ । ಕಡೆಯ ಕಾಣಿಸಿ ನೃಪರ ಸೆರೆಗಳ । ಬಿಡಿಸಿ ಬಂದಂದವನು ನಿಸ್ತರಿಸಿದನು ಮುರವೈರಿ ॥೩॥ ಎಲೆಮಹೀಪ ನಿನ್ನಯಜ್ಞಾ । ಸ್ಥಲಕೆ ಬಾಧಕರಿಲ್ಲ ವನದಲಿ । ಪುಲಿಯಿರಲು ಗೋಧನಕುಲಕೆ ಯವಸಾಂಬುಗೋಚರವೇ ॥ ನೆಲನ ಗರುವರ ಗೊಂದಣಾವನಂ । ದಲಿವನಖಿಳದ್ವೀಪಪತಿಗಳ । ನೆಳಲ ಸೈರಿಸನಳಿದನವನಿನ್ನೇನು ನಿನಗೆಂದ ॥೪॥ ರಚಿಸು ಯಜ್ಞಾರಂಭವನು ನೃಪ । ನಿಚಯವನು ದಾಯಾದ್ಯರನು ಬರಿ । ಸುಚಿತವಚನದಲೆಮ್ಮ ಕರಸಿದರಾಕ್ಷಣಕೆ ಬಹೆವು ॥ ಸಚಿವಪಡೆ ಕಳುಹು ಬದರಿಯ । ರುಚಿರಋಷಿಗಳ ಕರೆಸು ನಿನ್ನಭಿ । ರುಚಿಗೆ ನಿಪ್ಪ್ರತ್ಯೂಹವೆಂದನು ದಾನವಧ್ವಂಸಿ ॥೫॥ ಎಂದು ಕಳುಹಿಸಿಕೊಂಡು ದೋರಕಿ । ಗಿಂದಿರಾಪತಿ ಮಾಗಧನ ರಥ । ದಿಂದ ಬಿಜಯಂಗೈದನನಿಬರು ಕಳುಹಿ ಮರಳಿದರು ॥ ಬಂದವೇದವ್ಯಾಸಧೌಮ್ಯರ । ನಂದು ಕರೆಸಿ ಯುಧಿಷ್ಠಿರನು ನಿಜ । ಮಂದಿರದೊಳೊಪ್ಪಿದನು ಪರಿಮಿತಜನಸಮೂಹದಲಿ ॥೬॥ ಅಕಟ ನಾರ

ತನಲಿ ಭಗವತ್ತನೆಂಬವನು ॥ ಈನರನ ಶರಜಾಲವನು ಕ । ಲ್ಪಾನಲನ ಕಾಲಾಟವಿದರೊಪ್ಪ । ಸ್ವಾನ ಲಿಂಪಾಗ್ರ್ಯಗೆ ಸವರನೆ ರಾಯ ಕೇಳೆಂದ ॥೧೯॥ ಮುರಿಯದಾಬಲನೀತನುರುಬೆಗೆ । ಹರಿಯದೀಬಲ ವುಭಯವಲಿ । ಕುಂದರಿಯ ಕನ್ಯಮ್ಮರಿಯ ಕಡಿತಕೆ ಕಾಣೆನವಧಿಗಳ ॥ ಅಂಬುಧಿಯೀತನ ದುರ್ಗವೀಬಲ । ದಿನವುಗಳ ಬೇಳಂಬವನು ಬೇ । ಸರದೆ ಕಾದಿದನೆಂಟುದಿನ ಭಗವತ್ತನೀತನಲಿ ॥೨೦॥ ಆವನೈ ನೀನ ಭಕತರಸಂ । ಭಾವಿತನು ಹೇಳೆನೆ ಯುಧಿಷ್ಠಿರ । ದೇವನನುಜಕಣಾಘನಂಜಯನೆನಲು ಮಿಗೆ ಮೆಚ್ಚಿ ॥ ನಾವು ನಿಮ್ಮಯ್ಯಂಗೆ ಸಖರಿಂ । ದಾವು ನಿನ್ನವರೇನು ಬೇಹುದು । ನೀವೆಮಗೆ ಕಡುಮಾನ್ಯರೆಂದನು ಕಂಡಿನರ್ಜುನನ ॥೨೧॥ ಆದರೆಮಗೆಯು ದಿವಿಜಪತಿಯೋ । ಪಾಡ ನೀವೆಮ್ಮಂಣದೇವನ । ಮೋದಿ ನಿ ಸಾಮ್ರಾಜ್ಯಪದವಿಯ ರಾಜಸೂಯವನು ॥ ಆದರಿಸಿ ಸಾಕೆನಲು ಗಜಹಯ । ವಾದಿಯಾದಸ ಮಸ್ತವಸ್ತುವ । ನೈದೆ ಕೊಟ್ಟನು ಫಲುಗುಣಂಗೆ ಸುಮಿತ್ರಭಾವದಲಿ ॥೨೨॥ ಬಂದುಮತ್ರಿಂಗಳು ಪಲ ವುಮನ್ನಣೆ । ಯಿಂದ ಮನ್ನಿಸಿ ತನ್ನಸೇನಾ । ವೃಂದವನು ಹೇಳಿದನು ಬಳಿಯಲಿ ಕಳುಹಿದನು ನರಸಾ॥ ಮುಂದೆ ನಡೆದನು ರಾಮಗಿರಿಯಲಿ । ನಿಂದು ಕಪ್ಪವ ಕೊಂಡು ನಡೆದನು । ಮುಂದಣಿ ಶಾಸ್ಯೆದಲಿ ಹೊಕ್ಕನು ಭವನಪರ್ವತವ ॥೨೩॥ ಆಗಿರಿಂದ್ರನಿವಾಸಿಗಳ ಸಂ । ಭಾಗಧನವನು ಕೊಂಡು ಬಳಿಕ ಮು । ಹಾಗತಾಶ್ವನವಸೂರೆಗೊಂಡನು ಮುಂದೆ ದಂಡೆತ್ತಿ ॥ ಆಗಯಾಳರ ಗಾವಿಲರ ನಿ । ರ್ಭಾಗಧೇಯರ ಮಾಡಿಯುತ್ತರ । ಭಾಗದಲಿ ತಿರುಗಿತ್ತು ಪಾಳಯವರಸ ಕೇಳೆಂದ ॥೨೪॥ ಗಿರಿಯ ತಪ್ಪಲ ವನಚರರ ಸಂ । ಹರಿಸಿ ಮುಂದೆ ಬೃಹಂತಕನ ಕಾ । ತರಿಸಿ ಕಾಣಿಸಿಕೊಂಡು ಸೇನಾಪಿಂದುಸಗರಿ ಯಲಿ ॥ ಇರವ ಮಾಡಿ ಸುಧಾಮದೈತ್ಯರ । ನುರೆ ವಿಭಾಡಿಸಿ ಪಾರ್ವತೇಯರ । ಪುರವ ಕೊಂಡು ವುಲೂಕರನು ಪೌರವತಭಂಗಿಸಿದ ॥೨೫॥ ಮುಂದೆ ದಸ್ಯುಗಳೇಳುವನು ಕ್ಷಣ । ದಿಂದ ಕಾಶ್ಮೀರಕರ ಸಾಧಿಸಿ । ಬಂದು ದಶಮಂಡಲವ ಲೋಹಿತರನು ವಿಭಾಡಿಸಿದ ॥ ತಂದಕಪ್ಪವಲಾತ್ರಿಗರ್ತರ । ನಂದು ಹುಡುಕಿಸಿ ಗರುವಿತರನಾ । ನಂದುಟೆಂಕಣದಾಭಿಚಾರಕರೊಪ್ಪಕರ ಗೆಲಿದ ॥೨೬॥ ಧಾಳಿಯಿಟ್ಟನು ರೋಚಮಾನನ । ಮೇಲೆ ಕಪ್ಪವ ಕೊಂಡು ಬಿಟ್ಟನು । ಪಾಳಯವನು ಚಿತ್ರಾಯುಧನ ನರಸಿಂಹನಗರಿ ಯಲಿ ॥ ಮೇಲೆ ವಂಗರ ಮುರಿದು ವರನೀ । ಪಾಳಕಪರ್ಪರಮೊಣಿಯರನು ವಿ । ಶಾಲಕಾಂಭೋಜಾದಿ ಗಳನಪ್ಪಳಿಸಿದನು ತಿರುಗಿ ॥೨೭॥ ಪಾರತ್ರೀಕಕಿರಾತಬರ್ಬರ । ಪಾರಿಯಾತ್ರರ ಮುಖ್ಯ ಸರ್ವವಿ । ಹಾರವನು ಮಾಡಿದನು ಮ್ಲೇಚ್ಛಸಹಸ್ರಕೋಟಿಗಳ ॥ ಕ್ಷಾರಕರ ಪುಷ್ಕರ ಪುಷ್ಕರ । ಪಾರಕರ ಬರಸಾಣಭೂಪರೆ । ಳಾರುಭಟೆಯಲಿ ಕಾಡಿಕೊಂಡನು ಸಕಲವಸ್ತುಗಳ ॥೨೮॥ ಬಿದುರಿಸಿ ನನಾಹಿ ಮಗಿರಿಯ ಪಾ । ಶ್ವರ್ದ ಕಿರಾತರ ಮುಂದೆ ವಾಯ । ವ್ಯದಲಿ ಶೋಧಿಸಿ ಮುರಿದನು ಹಿಮಗಿರಿಯ ಕುಕ್ಷಿಯಲಿ ॥ ಪುದಿದನಾನಾದ್ರೋಣಿಗಳಮ । ಧ್ಯದಕಿರಾತಪುಳಿಂದನಿಚಯವ । ಸದೆದು ಹತ್ತಿದನಗ್ರ ಶಿಖರಕೆ ಪಾರ್ವತೀಪಿತನ ॥೨೯॥ ಎರಡುಸಾವಿರಯೋಜನವು ಹಿಮ । ಗಿರಿಯ ಬಹಳೋತ್ಸೇದಶಿಖರಕೆ । ಸರಸದಲಿ ಹತ್ತಿದುದು ಪಾಳಯವೇನು ಹೇಳುವೆನು ॥ ಕರಿತುರಗವರರಥಪದಾತಿಗೆ । ಪರಿಗಣನೆಯೆಲ್ಲಿಯದು ಹಿಮಗಿರಿ । ಯೆರಡಶಾವಿರದಗಲತಿರ್ರಗಿತು ರಾಯಕೇಳೆಂದ ॥೩೦॥ ಗಿರಿಯ ಕೋಣೆಯ ಕುಹರಗುಹೆಗಳ । ಗರುವರುಂಟೆಂದಾಪುಳಿಂದರ ನೊರಸಿ ಕಾಣಿಸಿಕೊಂಡು ಕೊಂಡನು ಸಕಲವಸ್ತುಗಳಾ ॥

ಗಿರಿಯನಿಳಿವುದು ನಡೆದು ಬಳಿಕಾ । ಪುರುಷಖಂಡದ ಬಹಳನದಿಗಳ । ಲೆರಡುತಡಿಯಲಿ ತೀವಿ ಬಿಟ್ಟು
ದುವನವನಂಗಳಲಿ ॥೩೧॥ ಅದು ಗಣನೆಗೊಂಭತ್ತುಸಾವಿರ । ವದರೊಳಿದ್ದುದು ಯಕ್ಷಕಿನ್ನರ । ಸುದ
ತಿಯರು ಕಿಂಪುರುಷರತಿರಾಗಿಗಳು ಸುಖಮಯರು ॥ ಇದರ ಘುಲ್ಲಣೆಗಾನಲೇನ । ಪ್ಪುದು ತದೀಯಜ
ನಂಗಳಿತ್ತುದು । ಸುದತಿಯರನಾಮಂಡಲಕೆ ಮೀಟಾದವಸ್ತುಗಳ ॥೩೨॥ ಅಲ್ಲಿ ಕೆಲಕಡೆಯಲ್ಲಿ ಗಿರಿ
ಗುಹೆ । ಯಲ್ಲಿ ನೆರೆದಕಿರಾತವರ್ಗವ । ಚೆಲ್ಲಬಡಿದಪಹರಿಸಿದನು ಬಹುವಿಧಮಹಾಧನವ ॥ ಮೆಲ್ಲಮೆಲ್ಲನೆ
ಹೇಮಕೂಟದ । ಕಲ್ಲನಡರಿದನಾಮಹಾದ್ರಿಗ । ಳೆಲ್ಲಹಿಮಶೈಲದ ಮಹೋನ್ನತಿಬಹಳವಿಸ್ತಾರ ॥೩೩॥
ಅಡಬಿತೀಬಲವಿದರಬೊಬ್ಬೆಯ । ಗಡಬಡೆಗೆ ಪದಘಟ್ಟಣೆಗೆ ಹುಡಿ । ಹುಡಿಯಲಾ ಗಿರಿಕೋಟಿಕೋಳಾ
ಹಳದ ಕೊಬ್ಬಿನಲಿ ॥ ನಡೆದು ಬಿಟ್ಟುದು ಗಿರಿಯ ತುದಿಯಲಿ । ತುಡುಕಿದುದು ನಾನಾದಿಗಂತವ । ತಡೆ
ಯುವದ ಭೂತವಾದ್ಯಗಜಹಯರಥದ ನಿರ್ಘೋಷ ॥ ಹೇಮಕೂಟದ ಗಿರಿಯಗಂಧ । ರ್ವಾಮರರ
ಝೋಂಪಿಸಿದನವರು । ಪ್ದಾವವಸ್ತುವ ಕೊಂಡನಿಳಿದನು ಬಳಿಕ ಪರ್ವತವ ॥ ಆಮಹಾಹರಿವರುಷ
ದಲ್ಲಿಯು । ಸೀಮೆಯೋಜನನವಸಹಸ್ರವಿ । ರಾಮವದರೊಳಗೆಲ್ಲ ವಿವರಿಸಲರಿಯೆ ದಾನೆಂದ ॥೩೪॥
ಉತ್ತರೋತ್ತರದೇವಭೂಮಿಗ । ಳೆತ್ತಣವರೀದಳನಿಚಯತಾ । ನೆತ್ತ ಭೂರಿಧ್ವನಿಯನೀಗಜಬಜವ
ನೀಜನವಾ ॥ ಎತ್ತಲೆಂದರಿಯರು ವಿನೋದಕೆ । ತೆತ್ತರಲ್ಲಿಯ ಪಕ್ಷಿಮೃಗಹಯ । ವುತ್ತಮಾಂಗನೆಯ
ರೆನು ಮನ್ನಿಸಿ ಕಂಚುಫಲುಗುಣಗೆ ॥೩೫॥ ಎರಡುಕಡೆಯಂಬುಧಿಯ ಪಾರ್ಶ್ವದ । ದುರುಳರನು
ಘಟ್ಟಿಸಿ ತದೀಯರು । ವೆರಸಿಬಡಗಳು ನಡೆದುದಲ್ಲಿಯ ನಿಷಧಪರ್ವತಕೆ ॥ ಎರಡುಸಾವಿರಯೋಜನದ
ತುದಿ । ವರೆಗೆ ಹತ್ತಿತು ಜಿಟ್ಟಿತಾಗಿರಿ । ಬಿರಿಯೆ ಬಿರುಸೂಳ್ಕೈಸಿದವು ನಿಸ್ಸಾಳಕೋಟಿಗಳ ॥೩೬॥ ಮೇಲೆ
ನಿಷಧಾಚಲದ ಸುತ್ತಲು । ಧಾಳಿಹರಿದುದು ದೆಸೆದೆಸೆಯ ದೈ । ತ್ಯಾಳಿ ಹೆಚ್ಚಿದದುಷ್ಟದಾನವಮಂಡ
ಲೇಶ್ವರರಾ ॥ ಶೈಲಶಿಖರದೊಳಳ್ಳಿಘೊರೆಗಳ । ತಾಳುಬಾಗಿಲ ಕುತ್ತರಲಿ ಕಾ । ಲಾಳುಹೊಕ್ಕುದು
ಹೊಯ್ದು ಕಟ್ಟಿತು ಕೂಡೆ ಸೂರೆಗಳಾ ॥೩೭॥ ಗಿರಿಯ ಶಿಖರದ ಮೇಲ್ಕಡೆಯನಾ । ಚರಿಸಿನಿಷಧಾಚ
ಲವನಿಳಿವುದು । ನರನ ಪಾಳಯ ಬಿಟ್ಟುದಾಗಲಿಳಾವೃತದಮೇಲೆ ॥ ಅರಸಕೇಳೊಂಭತ್ತುಸಾವಿರ ।
ಪರಿಗಣಿತಯೋಜನದ ನೆಲಸುರ । ಗಿರಿಯಸುತ್ತಣ ದೇಶವತಿರಮಣೀಯತರವೆಂದ ॥೩೮॥ ಚೋಣಿಗಾ
ನುಮೆಲ್ಲ ಪಾರ್ಥನ । ಬಾಣಕೆದಿರಾರುಂಟುವಾದ್ಯ । ಶ್ರೇಣಿ ಚಾತುರ್ಬಲದ ಘುಲ್ಲಣೆಗೆಲ್ಲಗರ್ವಿತರು ॥
ಮೇಣೆಹೊಕ್ಕನು ಕನಕಶೈಲ । ದ್ರೋಣಿಗಳದುರ್ಬಲಸುರೌಘವ । ನಾಣೆಗಂಜಿಸಿ ಕಳೆದು ಕೊಂಡನು
ಸಕಲವಸ್ತುಗಳಾ ॥೩೯॥ ಹರಿದು ಹತ್ತಿತು ಗಂಧಮಾದನ । ಗಿರಿಯ ಸುತ್ತಣಯಕ್ಷವಿದ್ಯಾ । ಧರರ
ನಂಜಿಸಿಕೊಂಡನಲ್ಲಿಯಸಾರವಸ್ತುಗಳಾ ॥ ಗಿರಿಯನಿಳಿದರು ಜಂಬುನೇರಿಲ । ಮರನ ಕಂಡರು ಗಗನ
ಚುಂಬಿತ । ಮೆರಡುಸಾವಿರಯೋಜನಾಂತದೊಳತಿವಿಳಾಸದಲಿ ॥೪೦॥ ಅದರ ಫಲಹೇರಾನೆಗಳ ತೋ ।
ರವಲಿಪವುಗಿರಿಸಾರತಿಲೆಗಳ । ಹೊದರಿನಲಿ ಬಿದ್ದೊಡೆದು ಹೊಳೆಯಾದುದು ಮಹಾರಸದಾ ॥ ಅದು
ಸುಧಾಮಯವಾಯ್ತು ಜಂಬೂ । ನದಿಜಲಸ್ಪರ್ಶದಲಿ ಜಾಂಬೂ । ನದಸುವರ್ಣವೆಯಾದುದಾನದಿಯೆ
ರಡುತಡಿವಿಡಿದು ॥೪೧॥ ಆರಸೋದಕಪಾನವೆ ಸಂಸಾರಸೌಖ್ಯದ ಸಿದ್ಧಿಯಿತರರಾ । ಹಾವವಿಂಧನಸತಂ
ಡುಲಾಗ್ನಿಕ್ರಮವಿಧಾನವದು ॥ ನಾರಿಯರುಸಹಿತಲ್ಲಿ ಸಿದ್ಧರು । ಚಾರಣರು ರಮಣೀಯತೀರವಿ ।

ಹಾರಂಗಳು ಬಹುರತ್ನದಿಂ ಮನ್ನಿಸಿದರರ್ಜುನನ ॥೪೩॥ ಕೆಲ್ಲಿ ನೋಗನದಷಸ್ಕಂಧಿಗೆ ನಂ । ಣಾಲಿ ಬಿದ್ದಣಿವಾಯ್ತು ಲಾಸುರ । ಪಾಲಸದಪ್ಪದರೊಳಗೆ ಒಹುದೇಶಿರವಾಸಿಗಳಾ ॥ ಧಾಳಿಘಟ್ಟಕೆ ಸನು ವರ್ಣಿಸಿ । ಪಾಳೆಯದನುಪವನಸರೋವದ । ನೀಲೆಯಲಿ ನಿಲಿಸಿದರು ಬಹುಸಮಯುಕ್ತಿಯಿಂದಲಿ ॥೪೪॥ ಲಲಿತದಿವ್ಯಾಭರಣರತ್ನಾ । ವಳಿಯನನ್ನೊಕಲಿಸಿದನು ಪಾಳೆಯ । ಸಹಿತುಪವನಾಚಲದ ಕೇಸರಶಿಖರಿ ಗಳ ಕಳಿದು ॥ ಹೊಳೆಹೊಳೆವವೈರಪಿನ ಸುತ್ತಣ । ವಳಯದರ್ಥವನಾಕಲಿಸಿ ಕೈ । ವಳಸಿ ಬಿಟ್ಟನು ಹೊಕ್ಕಿಳಾವ್ರತವರುಷಸೀಮೆಯಲಿ ॥೪೫॥ ಸೇನೆ ಪಡುವಲು ತಿರುಗಿ ಸುತ್ತಣ । ಪಾನುಪೂರ್ವಿಯ ಗಂಧಮಾದನ । ಸಾನುವನು ಪೆಂಠಣೆಸಿಯಡರಿತು ಚೂಣಿಶೃಂಗದಲಿ ॥ ಆನರೇಂದ್ರನನಿಳಿದು ಪಡು ವಣ । ಕಾನನಂಗಳ ಕೇತುಮಾಲದ । ಕಾನನಂಗಳ ಕಳಿದು ಬಿಟ್ಟುದು ಸೇನೆ ಒಳಸೀಮೆಲಿ ॥೪೬॥ ಅಲ್ಲಿ ಸಾಗರತೀರಪುರಿಯಂ । ತೆಲ್ಲಿ ಗುಹೆಯುವೆಲ್ಲಿ ಸುಪತಿಯು । ಬೆಲ್ಲ ಮಣಿಗಣವೆಲ್ಲಿ ಬಹುಧನವೆಲ್ಲಿ ರಮ ಣೀಯ ॥ ಅಲ್ಲಿಗಲ್ಲಿಗೆ ನಡೆದು ಸ್ಥಾಪಿಸಿ । ಬೆಲ್ಲಿಕುಮರದಕೋಶಭಾಗಗ । ಳೆಲ್ಲವನು ಹೊಕ್ಕಳಿಸಿ ತೆರಳಿಚಿದನು ಮಹಾಧನವ ॥೪೭॥ ಎಡಕಡೆಯಲೊಂಭತ್ತು ಸಾವಿರ । ನಡುನೆಲನನಾಕಳಿಸಿ ಮೂಡಣ । ಕಡೆಗೆ ತಿರುಗಿತು ಗಂಧಮಾದನಗಿರಿಯನೇರಿಳಿದು ॥ ನಡೆದಿಳಾವ್ರತದೊಳಗೆ ಬಿಟ್ಟುದು । ಪಡೆಸುರಾ ದ್ರಿಯನುಳುಹಿ ಬಲದಲಿ । ನಡೆಯಲತಿದೂರದಲಿ ಕಂಡರು ಮಂದರಾಚಲವ ॥೪೮॥ ಇದುವೆ ಕಡೆ ಗೋಲಾಯ್ತುಗಡೆ ಪೊಂ ದುದಧಿಯನು ತಾನಿದು ಮಹಾಗಿರಿ । ಯದರ ಬಿಂಕವ ನೋಡಬೇಕೆಂದರ್ಜು ನನ ಸೇನೆ ॥ ಒದರಿ ಹತ್ತಿತು ನಡುವಣರೆದು । ಗ್ಗದಲಿ ಬೆಟ್ಟಂಗಳಲಿ ನೃಪರು । ದ್ದುದ ಮಹಾಹವ ವಾಯ್ತು ಪಾರ್ಥನ ಚೂಣಿಯವರೊಡನೆ ॥೪೯॥ ಇಳುಹಿದರು ಚೂಣಿಯನು ಮುಂದರೆ । ನೆಲೆಯ ಭಟರೌಕಿದರು ಭಾರಿಯ । ತಲೆವರಿಗೆಗಳಲೊತ್ತಿದರು ಹೊಗಿಸಿದರು ದುರ್ಗವನು ॥ ಕಲುವಳೆಯ ಕೋ ಲಾಹಲಕ್ಕಿವ । ರಳುಕದಿರಿದರು ಸುರಗಿಯಲಿ ತೆನೆ । ವಳಿಯ ಹಿಡಿದರು ಹೊಯ್ದು ಕೇಶಾಕೇಶಿಯುದ್ಧ ದಲಿ ॥೫೦॥ ಶಕರು ಖದ್ಯೋತಪ್ರತಾಪರು । ವಿಕಳಿಬಿಂಸುರು ದೀರ್ಘವಿಯಮೇ । ಣಿಕರು ಪಶುಪಾ ಲಕಪುಳಿಂದರು ಕಂಕಣಾಹ್ವಯರು ॥ ಸಕಲದಸ್ಯುಗಳೈದೆ ಸೋತರುದು । ವಿಕಳಬಲವೊಪ್ಪಿಸಿತು ಸರ್ವ ಸ್ವಕವ ಸಂಧಾನದಲಿ ನೆಲೆಯಾಯ್ತಲ್ಲಿಯರ್ಜುನಗೆ ॥೫೧॥ ಶೋಧಿಸಿದನಾಗಿರಿಯಸಾಧ್ಯಯ । ಹಾದಿ ಯಲಿ ಹೊರವಂಟು ಬರಮುರಿ । ಯಾದೆಗಿಕ್ಕಿದಬೆಟ್ಟವಿದ್ದುದು ಮಾಲ್ಯವಂತಗಿರಿ ॥ ಭೇದಿಸಿದನದರೊ ಳಗುಹೊರಗಿನ । ಲಾದವಸ್ತುವ ಕೊಂಡು ತತ್ಕ್ಷಿತ । ಭೋದರವನೇರಿಳಿದು ಭದ್ರಾಶ್ವಕ್ಕೆನಡೆತಂದ ॥೫೨॥ ಅದು ಮಹಾರವಣೀಯತರವಂ । ತದರೊಳಿದ್ದುದು ಶುದ್ಧಭೋಗಾ । ಸ್ಪದರುಯಕ್ಷೋರಕ್ಷ ಗಂಧರ್ವಾಪ್ಸರೋನಿಕರ ॥ ಕುದುರೆರಥಗಜಪತ್ತಿನಿರ್ಘೋಷ । ಷದಲಿ ಬೆಬ್ಬಳೆಯಾಯ್ತು ಬೇಳಂ । ಬದ ವಿಘಾತಿಗೆಸಿಲುಕಿತ್ತುದು ಸಕಲವಸ್ತುಗಳ ॥೫೩॥ ದೊರಕಿತಲ್ಲಿಯಪೂರ್ವವಸ್ತ್ವುತ್ಕರ ಸಮು ದ್ರದ್ವೀಪಪರಿಯಂ । ತರ ನಡೆದನೊಂಭತ್ತುಸಾವಿರಯೋಜನಾಂತರವಾ ॥ ತಿರುಗಿದನು ಭದ್ರಾಶ್ವ ವನಾ । ಕರಿಸಿ ಬಡಗಲು ನಡೆದರಲ್ಲಿಯ । ಗಿರಿಯಕಂಡರು ಹತ್ತಿದರು ಹರುಷದಲಿ ಬೊಬ್ಬಿಡುತ ॥೫೪॥ ನೀಲಗಿರಿಯಗ್ರದಲಿ ಬಿಟ್ಟುದು । ಪಾಳೆಯವು ಬೊಬ್ಬೆಯಲಿ ದಿಕ್ಕಿನ । ಮೂಲೆ ಬಿರಿದುದು ಜರಿದ ವದ್ರಿ ಗಳೇ ನನುಸುರುವೆನು । ಮೇಲುದುರ್ಗದ ಸಂಧಿಗೊಂದಿಯೊ । ಳಾಳು ಹರಿದುದು ಸೂರೆಗೊಂಡು

ಹಾಂಗಳ ಬರಿಗೈದು ತುಂಬಿಸಿದನು ಸುವಸ್ತುಗಳ ॥ ಧಾಳಿ ಹರಿದುದು ಪಂಚಗೌಳವ । ರಾಳವೊಡ್ಡಿ
ಯರಾಂಧ್ರಜಾಳಾಂ । ಪಾಳಿಗಳನಪ್ಪಳಿಸಿ ಹೂಡಿಸಿದನು ಮಹಾಧನವ ॥ ಮೇಲುದುರ್ಗದ ಪಾರ್ವತೀ
ಯರಿ । ಗಾಳು ಹರಿದುದು ಸಂದುಗೊಂದಿಯ । ಸ್ಥಲಗುಹೆಗಳೊಳಗಿರ ಸಿಹಿದ್ದನು ಬಹಳಧನಯು
ತರ ॥೧೧॥ ಅರಸಿದನು ಸಾವೆಗಳಲಬ್ಧಿಯ । ಕುರುವದಲಿ ಕೊಬ್ಬಿದಧನಾಢ್ಯರ । ಮುರಿದು ಮುರಳಿದು
ಕೆಲಬಲದಲಾದ್ವೀಪಪಾಲಕರ ॥ ಸೆರೆವಿಡಿದು ತನಿಸೂರೆಯಲಿ ಪಡೆ । ನೆರೆದಣಿಯಲಾಮ್ಲೇಚ್ಛವರ್ಗವ ।
ತರಿದು ಶೋಧಿಸಿ ತೆಗೆದನಲ್ಲಿಯ ಸಾರವಸ್ತುಗಳ ॥೧೨॥ ಆಮಹಾಖೋಟಕಮಹಾಹ್ವಯ । ಧಾಮ
ದಲಿ ದಸ್ಯುಗಳನಟ್ಟಿ । ಸ್ತ್ರೀಮಯವನಕರೂಷಕರ ತ್ರಾಗಿದನು ಪಟಲದಲಿ ॥ ಹೇಮಮುಕ್ತಾರಜತಚಂ
ದನ । ರಾಮಣೀಯಕವಸ್ತುವಿಚಯದ । ಸೀಮೆಗಳ ಸಾವರಿಯೆ ನಳವಡಿಸಿದನು ಕಲಿಭೀಮ ॥೧೩॥
ಮರಳೆಯನಿಲಜಸಾಮಹಾದ್ಭುತ । ತರದ ವಸ್ತುವಸಾನಲ್ಪಪ್ರದೆ । ಧರಣಿಯನೆ ಸಂದಣಿಸಿದವಸಂಖ್ಯಾ
ತರಥಯೂಥ ॥ ಅರಸುಗಳಸಹಿತೀಮಹಾಬಲ । ಮೆರಸಿ ಬಂದನು ಭೀಮನಂಣನ । ಚರಣಕೆರಗಿದನರ್ಜು
ನನ ತಕ್ಕೈಸಿದನು ನಗುತ ... ... ... ... ... ॥೧೪॥

ಅಂತು ಸಂಧಿ ೪ ಕ್ಕೆ ಪದ ೩೦೪ ಕ್ಕಂ ಮಂಗಳಮಸ್ತು.

---

## ಐದನೆಯ ಸಂಧಿ.



ಸೂಚನೆ॥ ಪಡೆದು ವಿವಿಧದ್ವೀಪಪತಿಗಳ । ಜಡಿದು ಕಪ್ಪವ ಕೊಂಡು ತೆಂಕಣ ।
ಕಡಲವಳಯದ ನೃಪರ ಗೆಲಿದನು ವೀರಸಹದೇವ ।

---

ಕೇಳು ಜನಮೇಜಯಧರಿತ್ರೀ । ಪಾಲ ಸಹದೇವನ ಸಗಾಢಿಕೆ । ಯಾಳುತನವಿವರಾರಹವಣಲ್ಲಿಂ
ಬಿತ್ತರಿಸಾಯ್ತು । ಆಳು ನಡೆದುದು ತೆಂಕಣಾವನೀ । ಪಾಲಕರ ಬಿರುಗಿತನ । ಬಾಳಿಗೀತನ ದೆಸೆಗೆ
ದೆಸೆಗೆಟ್ಟುದು ದಿಗಂತದಲಿ ॥೧॥ ಶೂರಸೇನನ ಸದೆದು ನೆರೆ ಭಂ । ಡಾರವೆಲ್ಲವ ಕೊಂಡು ತೆಂಕಣ ।
ವೀರಮತ್ಸ್ಯನ ಗೆಲಿದು ಸರ್ವಸ್ವಾಪಹಾರದಲಿ ॥ ಭೂರಿಬಲನಹದಂತವಕ್ತ್ರನ । ವಾರಣಾಶ್ವರಥಂಗ
ಳನು ಕೊಂ । ಡಾರ ಭಟೆಯಲಿ ಮುಂದೆ ನಡೆದನು ತೆಂಕಮುಖವಾಗಿ ॥೨॥ ಖಳನಿಶಾಚರಕೋಟಿಗಳ
ನಡೆ । ಗಳಿಗೆಯೊಳಗಾಕ್ರಮಿಸಿದನು ಮಂ । ಡಳಿಕವನ್ನೆಯರಾಪರೇ ಚತುರಂಗಪದಹತಿಗೆ ॥ ಹೊಳೆ
ಪತ್ತುಯುಗಳದುರ್ಗವಿಪಿನ । ಸ್ಥಳದ ಧರಣಿಪರಿದಿರುವಂದು । ಗ್ಗಳೆಯಗಜರಥಹಯಸಹಿತ ತೆತ್ತರು ಸುವ
ಸ್ತುಗಳ ॥೩॥ ಬಂದು ಕಂಡನು ಭೋಜಮೊಮ್ಮನ । ಮುಂದಿರದ ಸುಕ್ಷೇಮಕುಶಲವ । ನಂದು ಕೇಳಿದು
ಕೊಟ್ಟನತಿಸಯಸಾರವಸ್ತುಗಳ ॥ ಮುಂದೆ ಚರ್ಮಣ್ವತಿಯ ಬಳಿಕ । ನಂದನವನಪ್ಪಳಿಸಿ ಗಜಹಯ
ವೃಂದವನು ಕೊಂಡೆತ್ತಿ ಬಿಟ್ಟನವಂತಿದೇಶದಲಿ ॥೪॥ ತರುಬಿದೊಡೆವಿಂದಾನುವಿಂದರ । ಮುರಿದು

ಕಪ್ಪವಕೊಂಡು ಭೀಷ್ಮಕ । ನರಪತಿಯ ಗೆಲಿದಲ್ಲಿ ವಸ್ತುಸಿಕೊಂಡನುಚಿತ್ರವಲಿ ॥ ಬರಬರಲು ಕುಂತಲನೃಪನನಾ । ಕರಸಿ ಕಪ್ಪವ ಕೊಂಡು ಖಳತಿ । ತ್ರಿರಕಿಳ್ಳೀಂಧ್ರಕರೆಂಬಬೇಡರ ಪುರದೊಳೋಡಿಸಿದ ॥೫॥ ಉರವಣಿಸಿ ದಳ ತುಂಗಭದ್ರಾ । ವರನದಿಯನುತ್ತರಿಸಿ ಪಂಪಾ । ಸರದ ತಡಿಯಲಿ ಬಿಟ್ಟನಾವಿರುಪಾಕ್ಷಸೀಮೆಯಲಿ ॥ ಗಿರಿಚರರ ವನಚರರ ಬಿಂಕವ । ನೊರಸಿ ಕಿಷ್ಕಿಂಧಾದ್ರಿಯಲಿ ಸಂ । ಚರಿಸಿ ಬಿಟ್ಟುದು ಕಟಕ ಬಹುವಿಧವಾದ್ಯರಭಸದಲಿ ॥೬॥ ಕೇಳಿದನು ಕಿಷ್ಕಿಂಧಗಿರಿಯವಿ । ಶಾಲಶೃಂಗವನೇರೆ ಘನನಿ । ಸ್ಸಾಳವೊಳಗಿದೊಡೊಡನೆ ಮೊಳಗಿತು ಗಿರಿಗುಹಾನಿಕರ ॥ ಆಳಿದೆತ್ತಣದೆನುತ ಕಪಿಬಲ । ಜಾಲ ನೆರೆದುದು ಮುರಿದುತರುಶಾ । ಖಾಳಿಗಳ ಕೈದುಗಳ ಕೈಯಲಿ ತರುಬಿದರು ಬಲವ ॥೭॥ ಕವಿದುದೀ ಚತುರಂಗಬಲ ಸಂ । ತವಿಸಿ ಲಗ್ಗೆಯ ಮಾಡಿ ವಾನರ । ನಿವಹದಲಿ ಕರೆದುದು ಶರಾಳಿಯ ಸುಭಟಮೇಘಚಯ ॥ ತಿವಿವರಂಬಿನಸೋನೆಗಳುಕದೆ । ಸವಡಿಮರನಲಿ ಸದೆದು ಹೊಕ್ಕುದು । ರವಿಸುತನ ಸಂತತಿ ಸುಷೇಣನು ವೀರವೃಷಸೇನ ॥೮॥ ದೊರೆಗೆದೊರೆಯಿರಿಬರಾಗಿ ಕಾದಿತು । ತೆರಳಬಿದ ದಿನವೇಳು ಪಂಚಯ । ಶರ ವಿಘಾತಿಯೊಳೊದಗೆ ಮೆಚ್ಚಿದರು ಭಯವಾನರರು ॥ ಅರಸನೀನಾರೆನೆ ಯುಧಿಷ್ಠಿರನರಪತಿಯ ಕಥೆಯೇಳೆ ಕೊಟ್ಟರು । ಪರಮವಸ್ತು ಪ್ರಚಯವನು ಮಾದ್ರೀಕುಮಾರಂಗೆ ॥೯॥ ತೆರಳಿತಲ್ಲಿಂ ಬಳಿಕ ತೆಂಕಣ । ನರಪತಿಗಳಾನುಪರೆ ಸೇನೆಯ । ಪುರಪುಳಕೆನಗ್ಗಾಗಿ ತೆತ್ತರು ಸಕಲವಸ್ತುಗಳ ॥ ಉರವಣಿಸಿ ಬಲ ನಡೆದು ನದಿಗಳ । ನರಸಿ ಕಾವೇರಿಯಲಿ ಬಿಟ್ಟುದು ಹರಿದುದಲ್ಲಿಂ ಮಾಳಿ ಘನವಾಹಿಷ್ಮತೀಪುರಕ ॥೧೦॥ ದಾಳಿಯೆನಲಿಬರಾಗಿ ಹೊರವಂ । ಟಾಳು ತಾಗಿದುದಲ್ಲಿ ಗಘಪತಿ । ನೀಲನೆಂಬಾತನು ಮಹಾಹವವಾಯ್ತು ಚೂಣಿಯಲಿ ॥ ಹೇಳಲದ್ಭುತವುರಿವುದಧಿಕ । ಜ್ವಾಲೆಯಲಿ ಚತುರಂಗಬಲ ಹರ । ಭಾಳನಯನಕವಾಟ ತೆರೆದಂತಾಯ್ತು ನಿವಿಷದಲಿ ॥೧೧॥ ಉರಿಸಮುದ್ರದೊಳದ್ದದೋ ಮೋ । ಹರವು ತೆಗೆತೆಗೆ ಕನ್ನಿಗಳ ಕಾ । ತುಸಲೀಯಬರಾನೆ ಮುಂದಯಲಿ ಹೊಕ್ಕ ಕುದುರೆಗಳು ॥ ಮುರಳಿಚಲಿ ತೇರುಗಳ ಸೂತರು । ಕರದವಾಘೆಯು ಸೆಳೆ ಪದಾತಿಯು । ತಿರುಗೆ ಹೊಯ'ಹೊಯ್ಯೆನುತ ಪಿಗೆ ಗುರಿದನು ಸಹದೇವ ॥೧೨॥ ರಾಯದಳವೇಕುರಿದುದೇನಿದ । ರಾಯತವು ಹೊಸತಾಯ್ತು ವೈಶಂ । ಪಾಯಮುನಿ ಹೇಳೆನಲು ನಗುತಿಂತೆಂದನಾಮುನಿಪ ॥ ರಾಯಕೇಳ್ಪೂರ್ವದಲಿ ಕಮು । ಲಾಯತಾಕ್ಷಿಯರುಂಟು ಹಲಬರು । ವಾಯುಸಖ ಪರದಾರಗಮನವ ಮೆಚ್ಚಿದನು ಬಳಿಕ ॥೧೩॥ ಪಾವಕ ದ್ವಿಜವೇಷದಲಿ ಬಂದಾವಧುಗಳೊಡನಿರಲು ನಗರವ । ಕಾವವರು ಹಾದರವ ಹಿಡಿದರು ಹವ್ಯವಾಹನನಾ ॥ ಕೋವಿದರ ಮುಂದಿಕ್ಕಿದೊಡೆ ಧರ್ಮಾವಲಂಬನಶಾಸ್ತ್ರಗಳನು । ದ್ಭಾವಿಸಲು ಭುಗಿಲೆಂದು ತೋರಿದನಗ್ನಿ ನಿಜತನುವ ॥೧೪॥ ಧರಣಿಸುರರಲಿ ಸುಪ್ರಧಾನರು । ವೆರಸಿ ಬಂದಗ್ನಿಯ ಪದತ್ರಯ । ಕೆರಗಿ ಕೋಪಸ್ತಂಭವನುಮಾಡಿದರು ದೈನ್ಯದಲಿ ॥ ಪುರದಲದುಮೊದಲಾಗಿ ಕಾಮಿನಿ । ಯರಿಗೆ ಹಾದರ ಸಲುವುದೀಪಿ । ಸ್ತರಣವೆಂದು ಕೃಶಾನು ನಂಬುಗೆಗೊಂಡನಾನೃಪನ ॥೧೫॥ ಅದುವೆ ಮೊದಲಾಗೀಗಳಲ್ಲಿಯ । ಸುದತಿಯರು ಸ್ವಾಚ್ಛಂದಚಾರಿಯ । ರದರಿನಾನೃಪತಿಗೆ ಸಹಾಯವನಗ್ನಿ ಮಾಡುವನು ॥ ಇದನರಿತು ಸಹದೇವನುಪವಾ । ಸದಲಿ ಮಿಂದು ಕುಶಾಗ್ರಸಂಸ್ತರ । ಣದಲಿ ಪವಡಿಸಿ ಬೇಡಿಕೊಂಡನು ವಹ್ನಿಸೂಕ್ತದಲಿ ॥೧೬॥ ಯಾಗವಿದು ನಿನಗೋಸುಗವೆ ನೃಪಸುಯಾಗಬುದ್ಧಿಗೆ ಬಂದೆವಲ್ಲದೆ । ಮೇಗೆ ತಾನುದುದೆ ಧನಾಶ್ರಿಯಲಿವನ ಮುರಿಯವಲೆ ॥ ಈಗನೀನಡ್ಡೈಸಲೆಮ್ಮಯ । ಯಾಗ ವೃಥೆಯಲಿ ನಿನಗೆ ಮಾಣಲಿ । ಯಾಗಪೌರೋಹಿತ್ಯವೆಂದನು

ನಗುತ ಸಹದೇವ ॥೧೭॥ ಎಂದು ನಾನಾವಿಧವರಸ್ತುತಿ । ಯಿಂದ ಹೊಗಳಿದರಗ್ನಿ ಮೆಚ್ಚಿದ । ರಿಂದು ಬಿಡಿಯೆನೆ ಬಿಟ್ಟನೀತನ ಮಾರಿದೆನು ನಿನಗೆ ॥ ಎಂದು ಶಿಖಿ ಹಿಮ್ಮೆಟ್ಟಲಾದಳ । ಮುಂದೆ ನಡೆದುದು ನೀಲಪುರದಲಿ ಸಂದಣಿಸಿ ಬಳಿಕಾತನೀತನ ಕಂಡು ಪೊಡವಂಟ ॥೧೮॥ ತೆತ್ತನವ ಸರ್ವಸ್ವವನು ತಾ । ನೆತ್ತಿ ಬಂದನು ಕೂಡೆ ಬಳಿಕಿನೊ । ಳುತ್ತರೋತ್ತರವಾಯ್ತು ಸಹದೇವನಿಗೆ ದಿಗ್ವಿಜಯ ॥ ಮತ್ತೆ ಸಹ್ಯಾಚಲದ ಕೊಳ್ಳದ । ಕುತ್ತಲನ ಭೂಪರ ವಿಭಾಡಿಸಿ । ಸುತ್ತಿಬಂದಾಕರಿಸಿದನು ತದ್ದಿಲನಿವಾಸಿಗಳ ॥೧೯॥ ಇಳಿದು ಕೊಂಕಣಗೌಳವರ ಕೇ । ರಳರ ಸದೆದು ಮಹಾರ್ಘರತ್ನಾ । ವಳಿಯ ಹೇರಿಸಿದನು ಸುಚಿತ್ರಾಂಬರವಿಲೇಪನವ ॥ ಜಲಧಿಯಂತದ್ವೀಪಪತಿಗಳ । ಕುಲವ ಶೋಧಿಸಿ ಚೋಳಪಾಂಡ್ಯರ । ದಳವ ಘಟ್ಟಿಸಿ ಕೊಂಡನನುಪಮಸಾರವಸ್ತುಗಳ ॥೨೦॥ ಕಳುಹಿದನು ಮಿಗೆಯಾಪ್ತಪತ್ರಾ । ವಳಿಯ ತನುಜನ ಬಳಿಗೆ ತತ್ಕ್ಷಣ । ದೊಳಗೆ ಹೇಳಿಕೆಯಾಯ್ತು ಮವಾರಕೆ ಘಟೋತ್ಕಚನಾ ॥ ತಿಳಿದಕಾರ್ಯಕೆಳೆರಕವ್ರೋ ವೇ । ಣ್ಖಳಜನದಹೃದಯಾಂಧಕಾರದ । ಹೊಳಕೆಯೊ ತಾನೆನುತಿರಲು ನಡೆತಂದನಾ ದನುಜ ॥೨೧॥ ಪಾಳೆಯವ ಹೊಕ್ಕನು ಘಟೋತ್ಕಚ । ನಾಳು ಸಹಿತಯ್ಯಂಗೆ ನಮಿಸಿದ । ನೂಳಿಗವ ಹೇಳೆನಗೆ ಬೆಸಸಾ ರಾಜಕಾರಿಯವಾ ॥ ವೀಳೆಯವ ತಾಯೆನಲು ನಗುತವೆ । ಶಾಲವಿನಯಕೆ ಮೆಚ್ಚಿ ಪವನಜ ಬಲು । ದೋಳಿನಲಿ ಸೆಳೆದಪ್ಪಿ ಮುಂಡಾಡಿದನು ನಂದನನ ॥೨೨॥ ಮಗನೆ ಲಂಕೆಗೆ ಪೋಗುವ ಮಾನವ । ರಿಗೆ ಮಹೋದಧಿ ಗಮ್ಯವಲ್ಲತಿ । ವಿಗಡತನ ಬೇಡಲ್ಲಿ ವಿನಯದಲೆನ್ನ ಕಾರಿಯವ ॥ ಸೊಗಸಿತೇಸಾಮದಲಿ ಕಪ್ಪವ । ತೆಗೆವುದವಗಡಿಸಿದೊಡೆ ಬಳಿಕಲ್ಲಿಗೆ ಸರಳಿಗಳವೆ ವಿಘಾತಿಗೆ ದೋಷವಿಲ್ಲೆಂದ ॥೨೩॥ ಎನೆ ಹಸಾದವ ಹಾಯ್ಕಿ ಭೀಮನ । ತನಯ ಕಳುಹಿಸಿಕೊಂಡು ತೆಂಕಲು । ಮನಟಮುನ್ನಮೆ ಬಂದರಾಮೇಶ್ವರದಶಿವಗೃಹಕೆ ॥ ವಿನಯದಿಂಗೆ ಪೊಡವಂಟು ರಘುನಂ । ದನನ ಕೀರ್ತಿಸ್ತಂಭಡಂಬರ । ವೆನಿಪ ಸೇತುವ ಕಂಡು ನಡೆದನು ತೆಂಕಮೊಗವಾಗಿ ॥೨೪॥ ತೋರಿತತ್ತಿದೂರದಲಿ ಲಂಕೆಯ । ಮೂರುಶಿಖರದ ದುರ್ಗವುದಧಿಗೆ । ಮಾರುದಧಿಯೆನೆ ಮೆರೆದುದಂದು ಮಣಿಪ್ರಭಾವದಲಿ ॥ ನೂರುಯೋಜನ ಸೇತುಮೂಲವ । ಮೀರಿ ನಡೆದನು ಬಡಗವಾಗಿಲ । ಸೇವಗಳಿನ ಪಡುಮೊಗವ ದಾಟಿದನು ಮೂಲದಲಿ ॥೨೫॥ ಕೇರಿಕೇರಿಗಳೊಳಗೆ ನಿಜಪರಿ । ವಾರಸಹಿತ ವೃಕೋದರಾತ್ಮಜ । ನಾರವನು ತಾನಾರೆನಲು ನಡೆತಂದ ನೋಲವಿನಲಿ ॥ ವೀರದಾನವವರ್ಗದಲಿ ಬಹ । ತೋರಹತ್ತನಕಂಡಪೂರ್ವವಿ । ಕಾರವಾನಿಸನಲ್ಲೆನುತ ಮುತ್ತಿದುದು ಪೌರಜನ ॥೨೬॥ ಬಂದನರಮನೆಗಾಗಿ ಬಾಗಿಲ । ಮುಂದಣೊಡಬಲಹೇಮವೇದಿಯ । ಸಂದಣಿಯ ಜನ ನೋಡಲೆಂದನು ದೋರಪಾಲರಿಗೆ ॥ ಇಂದುಸಾವುತ್ತರದ ಭೂಮಿಪ । ರಿಂದ ಬಂದೆವು ಹೇಳು ನಿಜಪತಿ । ಗೆಂದೊಡವ ಬಂದನು ವಿಭೀಷಣದೇವನೋಲಗಕೆ ॥ ಜೀಯ ಬಿನ್ನಹ ಬಂದನುತ್ತರೆ । ರಾಯನಟ್ಟಿದ ದೂತನೆನೆ ತ । ಪ್ಪಾಯಿತೇ ಹೊಗಿಸೆನಲು ಕರೆದನು ಕಲಿಘಟೋತ್ಕಚನ ॥ ವಾಯು ತನುಜನ ಸುತನು ತನ್ನ ಪ । ಸ್ವಾಯಿತರು ಸಹಿತೊಳಗೆ ಹೊಕ್ಕನು । ಪಾಯಿಯಲಿ ನಡೆತಂದು ಕಾಣಿಕೆಗೊಟ್ಟು ಪೊಡವಂಟು ॥೨೮॥ ಬಿಗಿದಮರಕತಮಣಿಯ ನೆಲಗ । ಟ್ಟುಗಳ ಹವಳದ ಹಲಗೆಗಳ ಮಾ । ಳಿಗೆಯ ವೈಡೂರ್ಯದ ಕವಾಟದವಜ್ರಭಿತ್ತಿಗಳಾ ॥ ಹೊಗರಿಡುವ ಹರಿನೀಲಮಣಿವೇ । ದಿಗಳ ಮುತ್ತಿನಲಂಬಳದ ಲ್ಲೋ । ವೆಗಳ ಕಾಂತಿಯ ಲಳಿಯಲಹರಿಯೊಳಿದ್ದನಸುರಾರಿ ॥೨೯॥ ಇತ್ತಬಾರ್ಯ ಕುಳ್ಳಿ

ರೆತ್ತಣ । ದೆತ್ತ ಬರವಾರಟ್ಟಿದರು ನೀ । ವೆತ್ತಣವರೇನೆಂದು ನಿಮ್ಮಭಿಧಾನವೇನುಸದ ॥ ಬಿತ್ತರಿಸಿ ಹೇಳೆನಲು ಕೈಮುಗಿ । ಯುತ್ತ ನುಡಿದನು ರಾವಣಾನುಜ । ಚಿತ್ತವಿಪುದೆಮ್ಮಖಿಳ ಪೂರ್ವೋತ್ತರದ ಸಂಗತಿಯ ॥೩೦॥ ಸೋಮವಂಶದಲರಸುಗಳು ನಿ । ಸ್ಸೀಮರುದ್ಧರು ಪಲಬರದರೊಳು । ಭೂಮಿಗಧಿಪತಿಪಾಂಡುವಾತಂಗೈವರಾತ್ಮಜರು ॥ ಆಮಹೀಪತಿ ಧರ್ಮನಂದನ । ಭೀಮಫಲುಗುಣನಕುಲನಲ್ಲಿ ಸ । ನಾಮಸಹದೇವಾಖ್ಯನಿನಿಬರು ಚಿತ್ತವಿಸಿ ಯೆಂದ ॥೩೧॥ ಅರಸನೆಂದೊಡೆ ಸಕಲಧರ್ಮಕೆ । ಕರಚರಣವಾದಂತೆ ಯಾತನ । ಕಿರಿಯರಿಹರು ಚತುರ್ವಿಧೋಪಾಯ ಸ್ವರೂಪದಲಿ ॥ ಸುರಮುನಿಯ ಮತದಿಂದ ಯಾಗೋ । ತ್ಕರುಷಕಾದುದು ಬುದ್ಧಿಜನಪಾ । ಥ್ವರದ ದಿಗ್ವಿಜಯಾಭಿಸಂಧಿಗೆ ಮಾಡಿದನು ಮನವ ॥೩೨॥ ಬಡಗಲರ್ಜುನ ನುತ್ತರಾಬ್ಧಿಯ । ತಡಿಯನೆಲಪರಿಗಂತ ವಸ್ತುವ । ಜಡಿದು ತಂದನು ಮೂಡಲಾಕರಿಸಿದನು ಕಲಿಭೀಮ ॥ ಪಡುವಲರ್ಜುನನನುಜತೆಂಕಣ । ಕಡೆಗೆ ಸಹದೇವಾಖ್ಯನೀಪದ । ನಡೆಯುತಿದ್ದನು ತಾ ಘಟೋತ್ಕಚಭೀಮಸುತನೆಂದ ॥೩೩॥ ಅರಸನೊಂದು ನಿಮಿತ್ತದೇಶಾಂ । ತರಪರಿಭ್ರಮಣದಲಿ ವಿಪಿನಾಂ । ತರದೊಳಿರೆ ಬಂದುದ ಹಿಡಿಂಬಕನೆಂಬಸುರಪತಿ ॥ ಕೆರಳಿಚಿದೊಡಾ ಭೀಮನಾತನ । ನೊರಸಿದನು ಖಳನನುಜೆಯಾತಂ । ಗರಸಿಯಾದಳು ಸತಿಹಿಡಿಂಬಿಕೆ ಮಾತೆ ತನಗೆಂದ ॥ ಇನಿಬರಿಗೆ ಪತಿ ದೇವಕೀನಂ । ದನನಘಾಸುರಮಥನ ಮಧುಸೂ । ದನಮುರಾಂತಕ ದೈತ್ಯಮರ್ದನ ಭಕ್ತಸುರಧೇನು ॥ ಮುನಿಹೃದಯಪರ್ಯಂಕ ಕರು । ಣಾವನಧಿ ರಾವಣಕಂಠಕಾನನ । ಘನಪರಶುವೀಕೃಷ್ಣನೈವರಜೀವಸಖನೆಂದ ॥೩೪॥ ಕ್ರತುವಿದಸುರಾರಾತಿಗೀಕ್ರತು । ಪತಿ ಯುಧಿಷ್ಠಿರಭೂತನಾನಿದ । ರತಿಶಯವ ನೀಬಲ್ಲೆಯೆನೆ ನೋಡಿದನು ತನ್ನವರಾ ॥ ಇತರವಿದಧಿಂದಧಿಕ ಪುಣ್ಯಾ । ಪ್ರತತಿಯುಂಟೇ ರಾಮಚಂದ್ರನ । ವಿತತಕೀರ್ತಿ ತ್ರೇತೆ ಯೊಡ್ವಾಪರದಲಾಯ್ತೆಂದ ॥೩೬॥ ತಾವು ಮರ್ತ್ಯರುಪೂರ್ವಯುಗದವ । ರಾವು ತಮ್ಮಂತರವ ನೋಡದೆ । ದೇವರೆದೆದಲ್ಲಣದ ಲಂಕೆಯ ತಾವನೀಕ್ಷಿಸದೆ ॥ ಆವುದುಚಿತಾನುಚಿತವೆಂಬುದ । ಭಾವಿಸದ ಗರ್ವಿತರನೋಡಿ । ನ್ನಾವಸುದರವೊ ನಾವೆನುತ ಗರ್ಜಿಸಿತು ಖಳನಿಕರ ॥೩೭॥ ನೊಸಲಿನಲಿ ಕಣ್ಣುಳ್ಳದೇವನು ॥ ವೊಸೆದುಲಂಕಾಧಿಪಹೀಪತಿಗೆ । ವಿಸುಕಲನ್ಮನು ಬಂದು ಕಂಡವನಿಲ್ಲ ಸಟ್ಟಣವ ॥ ಬಿಸುಜಸಂಭವನಾದಿತೇಯ । ಪ್ರಸರವಿಗೆ ನಡುಗುತ್ತಲಿಪ್ಪವ । ನುಸಿಗಳಹಮಾನವರ ಪಾಡೇನೆನುತ ಗರ್ಜಿಸಿತು ॥೩೮॥ ಕಾಳಗದೊಳಿಂದೆಮಗೆ ದಿವಿಜೇಂ । ದ್ರಾಳಿಯಲಿ ಸುಭಟರ ಕಾಣೆವು । ಪೇಳವೇ ಮರುಳು ಪೊಕು ಮರ್ತ್ಯರ ಸಹಸವೆಮ್ಮೊಡನೆ ॥ ತೋಳಸಳವಿಗೆ ಮಲೆತ ಮೃಗತತಿಕು । ಜಾಲದಂತಿಹುದೆಂದು ಮಂದಕ । ರಾಳಮತಿಗಳು ನಗಲು ಕಂಡನು ಕಲಿಘಟೋತ್ಕಚನು ॥೩೯॥ ನಾಲಗೆಯ ನೆಣಗೊಬ್ಬುಗಳಲಿ ಧ । ರಾಚಳಿಸಿದರೇನಹುದು ಸಭೆಯಲಿ । ಕಾಳಗದೊಳೆದಿರಾರು ಭೀಮಾರ್ಜುನರ ಭಾರಣೆಗೆ ॥ ಆಳುತನವಂತಿರಲಿ ಕೃಷ್ಣನ । ಮೌಳಿ ಬೆಸಸಲಿ ಕೇಳ್ವೆನೆನಿಕ । ಟ್ಟಾಳುಗಳ ದೇವಸು ವಿಭೀಷಣನಗುತಲಿಂತೆಂದ ॥೪೦॥ ಕಾಲವಾವುದು ತನ್ನ ಶಕ್ತಿಯ । ಕೀಲುಸೋಲಾವುದು ಸಹಾಯದ । ಮೇಲುಸರಿಗೆ ನೇರ ನೋಡದೆ ಬಯಲಗರ್ವದಲಿ ॥ ಸೋಲುವುದು ಜಗವಿದವಾದ ಗತಿ । ಕಾಳಹುದು ಖಳರರಿಯಬರದನುಬ್ಬಾಳುವರು ಬರದೆಂದು ಜರೆದನು ತನ್ನಮಂತ್ರಿಗಳ ॥೪೧॥ ಅದರನೀಪುವ್ವ

ಪರದಲೀಹರಿ । ಯುದಯಿಸಿದನಾಕಾಲದಲಿ ಸಲ । ಹಿದನು ನಮ್ಮನು ಹಿಡಿವನಿವರನು ವರ್ತಮಾನ
ದಲಿ ॥ ಮದದ ದರ್ಪದಲಂಬುಜಾಕ್ಷನ । ಪದವ ಮರೆದೊಡೆ ಪಾತಕದದು । ರ್ಗದಲಿ ಕೆಡಹನೆ ನಮ್ಮನೆಂ
ದು ವಿಭೀಷಣನು ನುಡಿದ ॥೪೨॥ ತರಿಸಿದನು ಭಂಡಾರದಲಿ ಪರಿ । ಪರಿಯ ಪೆಟ್ಟಿಗೆಗಳನು ಕಂಠಾ ।
ಭರಣಕಂಕಣ ವಜ್ರಮಾಣಿಕಮರಕತಾವಳಿಯ ॥ ಚರಣನೂಪುರಝುಳಪಟಿಗೆಯುಂ । ಗುರುಕಿರೀ
ಟಾಂಗದ ಸುಕರ್ಣಾ । ಭರಣವನು ತೆಗೆಸಿದನು ಭೀಮಕುಮಾರನೊಡನೆನುತ ॥೪೩॥ ನೀಲಮಣಿ
ಕಾಂತಿಗಳ ಹೊಯ್ಲಲಿ । ಕಾಳರಜನಿಯೊಳಾಯ್ತು ಮುತ್ತಿನ । ಢಾಳ ಧವಳಿಸಲಾಯ್ತು ಚಂದ್ರಿಕೆ
ತಮವ ಡೊಕ್ಕರಿಸಿ ॥ ಮೇಲೆ ಝೊಂಪಿಸಿಲಾಯ್ತು ಮಾಣಿಕ । ದೇಳಿಗೆಯಲಹರಿಯಲಿ ವರರ । ತ್ನಾಳಿ
ರುಚಿಯಲಿ ಚಂಡಿಯಾಯಿತು ದಿವಸವಂದಿನಲಿ ॥೪೪॥ ತೆಗೆಸಿದನು ಗಜದಂತಮಯಪೆ । ಟ್ಟಿಗೆಗಳನು
ಕರ್ಪುರದ ತವಲಾ । ಯಿಗಳ ಹವಳದಮಂಚವನು ಮಣಿಖಚಿತರಚನೆಗಳ ॥ ಬಿಗಿದವಜ್ರಪ್ರಭೆಯ
ಹೊನ್ನಾ । ಯುಗದಖಡ್ಗಕಟಾರಿಗಳ ಝುಗ । ಝುಗಿಪಹೊಂಗೆಲಸದ ವಿಚಿತ್ರದ ಜೋಡುಸೀಸಕವ
॥೪೫॥ ಗುಳವ ರೆಂಚೆಯ ಹಕ್ಕರಿಕೆಹ । ಲ್ಲಳವ ಮಣಿಕಾಂಚನಮಯಂಗಳ । ಕೆಲಸಗತಿಗಳ ಹೇಮರೇಖೆ
ಯವಿವಿಧಚಿತ್ರಗಳ ॥ ಬಿಳಿಯಚಾಮರಯಹೊರೆಗಳರುಹ । ತ್ತಳದ ಕಟ್ಟಿಗೆಬೇಂಟೆಗಳ ಹದ । ಪಿಲು
ತದೀಯಶರಾಳಿಗಳ ತಂದಿಳುಹಿದರು ಚರರು ॥೪೬॥ ಬಲಮುರಿಯ ಶಂಖಗಳ ಗಂಧದ । ಬಲುಹೊರೆಯ
ಕೃಷ್ಣಾಗರುವಿನೊಟ್ಟಿನ ಸುರಂಗಿನಪಟ್ಟುಪಟ್ಟಾವಳಿಯ ದಿಂಡುಗಳ ॥ ಪುಲಿದೊಗಲ ಕೃಷ್ಣಾಜಿನಂಗಳ ।
ಹೊಳೆವಹೊಂಗೊಪ್ಪರಿಗೆಚಿತ್ರಾ । ವಳಿಯ ಸತ್ತಿಗೆ ಹೇಮಘಟಸಂತತಿಯನೊಟ್ಟಿದರು ॥೪೭॥ ಕೇಳಿ
ಸಿದನರಮನೆಯ ಹೇಮದ । ತಾಳಮರಹದಿನಾಲ್ಕನಧ್ವರ । ಶಾಲೆಯಿದಿರಲಿ ತೋರಣಸ್ತಂಭಗಳಹ
ವೆಂದು ॥ ಮೇಲೆ ರಾಕ್ಷಸಟಂಕದಚ್ಚಿನ । ಜಾಳಿಗೆಗಳನು ತರಿಸಿ ಕಟ್ಟಿಸಿ । ಮೇಲುಮುದ್ರೆಗಳಿಕ್ಕಿ
ದವು ಕರೆಸಿದನು ಹೊರೆಯವರ ॥೪೮॥ ಕುಲಗಿರಿಯನೊಡೆಮೀಟಿ ತಮ್ಮಯ । ತಲೆಯೊಳಾನುವಕ
ರ್ಕಶಾಂಗದ । ಕಲುಬಲೆಯ ಹೇರೊಡಲ ಮಿಡುಕಿನ ಕಾಳರಕ್ಕಸರ ॥ ಸೆಳೆದು ಹೊತ್ತರು ಹೊರೆ
ಯನಿವರಿ । ಟ್ಟಳಿಸಿ ಹೊರವಂಟರು ವಿಭೀಷಣ । ಕಳುಹಿದನು ಪವಮಾನಸುತನಂದನನ ಸತ್ಕರಿಸಿ
॥೪೯॥ ದನುಜನಬ್ಧಿಯ ದಾಟಿ ಸಹದೇ । ವನ ಸಮೀಪಕೆ ಬಂದು ರಾವಣ । ನನುಜಮಾಡಿದಬಹು
ಳಸತ್ಕಾರವನು ಬಿನ್ನವಿಸಿ ॥ ಅನಿಬರನು ಕಾಣಿಸಿದನಾಕಾಂ । ಚನಮಯದ ಹೊರೆ ಲಕ್ಕಸಂಖ್ಯೆಗ ।
ಳನು ಪಮಿ ತರಕ್ಕಸರ ಕಂಡಂಜಿದುದು ನೃಪಕಟಕ ॥೫೦॥ ಲಾಲಿಸಿದನಾಖಿಳರನೆತ್ತಿತು ಪಾಳೆಯವು
ನಡೆತಂದು ಪಯಣದ । ಮೇಲೆ ಪಯಣವನೈದಿ ಬಂದನು ತಮ್ಮ ಪಟ್ಟಣಕೆ ॥ ಪೆಳಲೊಗುವಸುಮ್ಮಾ
ನಸಿರಿಯ ಚ । ಢಾಳದಲಿ ತಂದಖಿಳವಸ್ತುವ । ನಾಲಯದೊಳೊಪ್ಪಿಸಿದನವನೀಪತಿಗೆ ಸಹದೇವ ॥೫೧॥

ಅಂತು ಸಂಧಿ ೫ ಕ್ಕೆ ಪದ ೩೫೩ ಕ್ಕಂ ಮಂಗಳಮಸ್ತು.

# ಆರನೆಯ ಸಂಧಿ.

ಸೂಚನೆ। ನಕುಲ ಪಶ್ಚಿಮದೆಸೆಯಭೂಪಾ। ಲಕರ ಗೆಲಿದನು ನೆರೆದರತ್ನ
ಪ್ರಕರದಿಂದಳಕಾಪುರಿಗೆ ಮಿಗಿಲಾಯ್ತು ನೃಪನಗರ ॥

ಕೇಳು ಜನಮೇಜಯಧರಿತ್ರೀ । ಪಾಲ ಪಶ್ಚಿಮದೆಸೆಯ ಭೂಮೀ । ಪಾಲಕರಮೇಲೆತ್ತಿ ನಡೆದನು ನಕುಲನೊಲವಿನಲಿ ॥ ಧಾಳಿ ಹರಿದುದು ಮರುಯವನರೇ । ಪಾಳರೋಹಿತ್ರರೆಂದೆನಿಪಭೂ । ಪಾಲಕರ ಮುರಿದವರ ಸಪ್ತಾಂಗವ ವಿಭಾಡಿಸಿದ ॥೧॥ ಹೇಮಕನ ಸ್ತಂಭಕನೆಂಬಸ । ನಾಮರನು ಮುರಿದನು ಕಳಿಂಗದ । ಭೂಮಿಪರ ಸದೆದನು ತ್ರಿಗರ್ತರ ಶಿಬಿಯಸಂತತಿಯ ॥ ಹೇಮಮಾತ್ರವನುಳುಹದವಟಿಗ । ಭೂಮಿಗಳನವರ್ಗಿತ್ತುವಸ್ತು । ಸ್ತೋಮವನು ನೆರಹಿದನು ನಡೆದನು ಮುಂದೆ ಪಶ್ಚಿಮಕೆ ॥೨॥ ಮುರಿದನಗ್ರದಚೇಕಿತಾನರ । ನೆರಗಿದನು ಬರ್ಬರತುರುಷ್ಕರ । ನೊರಗಿಸಿದನಾಹವದೊಳಾಭೀರಕರ ಬಾಹ್ಲಿಕರ ॥ ಸೆರೆಯಹಿಡಿದನು ಪಾರ್ವತೇಯರ । ನುರುಕುಗೊಳಿಸಿದಚೀನರಂಬ । ಷ್ಠರನು ಸಿಂಧುಸರಸ್ವತೀತೀರದಮಹೀಶ್ವರರ ॥೩॥ ರಣದಸಂಕೇತಗಳೊಳುತ್ಸವ । ರಣಸಮರ್ಥರ ಹಿಡಿದನು ಚಾ । ರಣರ ಖುರಸಾಣರನು ಪುಷ್ಕರವರನಿವಾಸಿಗಳ ॥ ಹಣಿದನಲ್ಲಿಂದತ್ತ ಮಿಗೆ ಪಹ್ನು । ವಣಟಗಂತದಲದ್ಛಸರಪಟ್ಟಣದವರ ಪಂಚನದಭೂಮಿಯಭೂಮಿಪರ ಗೆಲಿದ ॥೪॥ ಖ್ಯಾತಿಕರವರ್ಣ್ಣಾಕಟಕರಕೃತ । ಯಾತಿಕರಯೌಧೇಯಸೌವೀ । ರಾತಿಶ್ರಯಬಡಹಾರರವಳಿದ್ವಾರಪಾಲಕರ ॥ ಘಾತಿಸಿದನವರುಗಳ ಪಿತ್ತ । ವ್ರಾತವನು ಹೇರಿಸಿದನೆಡಬಲ । ದಾತಗಳನಪ್ಪಳಿಸಿ ತೆಗೆದನು ಸಕಲವಸ್ತುಗಳ ॥೫॥ ಮಾವನಲ್ಲಿಗೆ ಬಂದೊಡಾವಮಾ । ದ್ರಾವನೀಪತಿಶಲ್ಯಮಿಗೆಸಂ । ಭಾವಿಸಿದನೊಲಿದಿತ್ತನಿತಂಗಳಿಳವಸ್ತುಗಳ ॥ ತೀವಿದರು ಭಂಡಿಯಲಿ ಮುಂದಣ । ಚಾವಟೆಯಚಪಳಿಗೆ ಹರಿಯೆ ನೃ । ಪಾವಳಿಗಳಲ್ಲಲ್ಲಿ ತೆತ್ತರು ಕಂಡುವಸ್ತುಗಳ ॥೬॥ ತಳಿತು ಬಿಟ್ಟುದು ಸೇನೆ ಪಡುವಣ । ಜಲಧಿಯ ಕರವಳಿಗಳಲಿ ಕೇವಳಿಸಿದರು ಕೊಲ್ಲಣಿಗೆಯಲಿ ಕೊಂಡರು ಸುವಸ್ತುಗಳ ॥ ಕಳಿಸರದ ಹುಮಗಿರಿಯ ಮಾಲೆಗೆ । ನಿಲುಕಿ ಸಕಲಮ್ಲೇಚ್ಛಭೂಪಾ । ವಳಿಯ ಭಂಗಿಸಿ ಹೇರಿಸಿದನೊಂಟೆಗಳಲಾಘನವ ॥೭॥ ಹೇರಿದವು ಬಹುಧನವನೊಂಟೆಗ । ಳಾರುಸಾವಿರ ಮಿಕ್ಕವಸ್ತುವ । ಹೇರಿದವು ಯೆತ್ತುಗಳ ಹೂಡಿದಭಂಡಿಸಾವಿರವು ॥ ಆರುಲಕ್ಷತುರಂಗಗಳುಷ್ಟ್ರಗ । ಳಾರುಕೋಟಿಗಳಾನೆಗಣನೆಯ । ಮೀರಿದವು ಮೃಗಪಕ್ಷಿಕೋಣನ ಕುರಿಯ ಹಿಂಡುಗಳು ॥೮॥ ಮರಳಿತೀಚನಸೇನೆ ಬಂದನು । ಪುರಕೆ ಕಂಡನು ಧರ್ಮಪುತ್ರನ । ಚರಣಕೆರಗಿದನಖಿಳವಸ್ತುವ ಬೇರೆ ತೋರಿಸಿದ ॥ ಅರಸನುತ್ಸವವನು ವೃಕೋದರ । ನರನಕುಲಸಹದೇವನಂತ್ಯ । ಪುರದ ಹರುಷದ ಸಿರಿಯನದನೇವಣ್ಣಿಸುವೆನೆಂದ ॥೯॥ ಕಳವು ಹುಸಿ ಹಾದರ ವಿರೋಧ । ಸ್ಖಲಿತವಾರಡಿ ಬಂದಿ ದಳವುಳ । ಬೆಳುಗವತೆಯನ್ಯಾಯ ಪರಿಭವತಕ್ಕುಡೊಳ್ಳಾಸ ॥ ಹಳಿವು ವಂಚನೆ ಜಾತಿಸಂಕರ । ಕೊಲೆಯುಡಾವರವಿ

ಕೃತಿವಮಾಯಾ । ವಳಿಗಡಗಿದಪೆಯುಧಿಷ್ಠಿರನೃಪನರಾಜ್ಯದಲಿ ॥೧೦॥ ನೃಗನ ಭರತನ ದುಂದುಮಾರನ । ಸಗರಪೂರೂರವನನಾತನ । ಮಗನ ನಹುಷನ ಕಾರ್ತವೀರ್ಯನ ನಳನ ದಶರಥನ ॥ ಹಗಲಿರುಳು ವಲ್ಲಭರವಂಶದ । ವಿಗಡರಲಿ ಯವನೂನು ಸರಿಯೋ । ಮಿಗಿಲೊ ಬಲ್ಲವನಾರೆನಲು ಸಲಹಿದನು ಭೂತಳವ ॥೧೧॥ ದ್ವಾಪರದ ಮರೆಜವನಿಕೆಯಲಿ । ದ್ವಾಪರವೊ ಕೃತಯುಗವೊ ಧರ್ಮದ । ರೂಪು ನಾನಾವಿಧದಲವತರಿಸಿತೊ ದಿಗಂತದಲಿ ॥ ಸ್ಥಾಪಿಸಿತು ಪರ್ಣಾಶ್ರಮದ ಧ । ರ್ಮೋಪಚಯವೆರಡಂಘ್ರಿಮುರಿದು ಪಿ । ರೂಪವಾದುದಧರ್ಮವೀ ಧರ್ಮಜನರಾಜ್ಯದಲಿ ॥೧೨॥ ಬಡಗಲುತ್ತರಕುರುಗಳಿತ್ತಲು । ಪಡುವಲುದಧಿ ವಿಭೀಷಣನಪುರ । ಗಡಿಕೃತಾಂತನದೆಸೆಗೆ ಮೂಡಲುದಿನಪನುದಯಾದ್ರಿ ॥ ಪೊಡವಿಯಿದರಲಿ ಯಮಜನಾಜ್ಞೆಗೆ । ನಡನಡುವುದು ರಾಯಂಗೆ ತೆತ್ತುದು । ಗಡ ಸುವಸ್ತುವನೇನಸಾಧ್ಯವು ಕೃಷ್ಣನೊಲಿದರೆಗೆ ॥೧೩॥ ಕಳನ ಸವೆದರು ಮೂರುಯೋಜನ । ವಳಯದಲಿ ಪಡಿಯಗಳು ಕೋಟಾ । ವಳಯ ಸುಯ್ಯಾನದಲಿ ಹೊಯ್ದರು ರತ್ನಕಾಂಚನವ ॥ ಕೆಲದೊಳೈಗಾವುದದೊಳಿಕ್ಕಿದ । ತಳಿಯ ಮಧ್ಯದೊಳಖಿಳವಸ್ತ್ರ । ವಳಿಯನೊಟ್ಟಿದರದರ ಕೆಲದಲಿ ರಾಯಕೇಳೆಂದ ॥೧೪॥ ಹತ್ತುಯೋಜನವಳಯದಲಿ ಮಿಗೆ । ಸುತ್ತುವೇಲಿಯ ಮಧ್ಯದಲಿ ಹಯ । ಮತ್ತಗಜರಥಗೋಮಹಿಷಿವರಸೈಭದ ಚಯಕೆ ॥ ಉತ್ತಮಾಂಗನೆಯರಿಗೆ ಭವನಗ । ಳಿತ್ತ ಬೇರೆ ರಮಾಯತ್ತ ನೃಪಯಾ । ಗೋತ್ತಮಕೆ ಪರುಠವಿಸಿದರು ಭೂಪಾಲಕೇಳೆಂದ ॥೧೫॥ ಬಳಿವಸೋದೆಯ ಭಾವಿ ನೂರರ । ವಳಯ ತುಂಬಿತು ತೈಲಸೃತಮಧು । ಗಳಲಿ ವರಗುಡಶರ್ಕರಾದಿಯ ಕಣಜಕೋಟಿಗಳು ॥ ಕಳವೆಯಕ್ಕಿಯ ಗೋಧಿಕಡಲೆಯ । ಹಿಳಿಕರಾಶಿಯದೇಸುಯೋಜನ । ದಳತೆ ಯೆಂದಾರುಬವರೆಂದನು ಮುನಿನೃಪಾಲಂಗೆ ॥೧೬॥ ನೆರೆದುದರ್ಘವನಂತವವನೀ । ಶ್ವರರು ಮಾಮಾದರು ಚತುಸ್ಸಾ । ಗರದ ಮಧ್ಯದಲಾಣೆ ಸಂದುದು ಧರ್ಮನಂದನನ ॥ ಕರೆಸು ಬೇರೆ ಮರನು ಮಹೀಶಾ । ಧ್ವರಕೆ ಸಮಯವಿದೆಂದು ಪಾರಾ । ಶರಿಯ ಧೌಮ್ಯರು ಮಂತ್ರಶಾಲೆಯೊಳೆಂದರವನಿಪಗೆ ॥೧೭॥ ಹೋಗು ಫಲುಗುಣ ಕಂಸಮಥನನ । ಬೇಗ ಬಿಜಯಂಗೈಸಿ ತಾ ನೃಪ । ಯಾಗವಾತನ ಹೊರೆ ಮದೀಯಜಯಾಭಿವೃದ್ಧಿಗಳು ॥ ಆಗಲೆನುತಾಕ್ಷಣದಲಾತನು । ನೇಗೆ ಮಲ್ಲಿಕ್ಷಣವೆನಲು ಮುನಿವನು । ಬಾಗದಲಿ ಕಲಿಪಾರ್ಥ ಬಂದನು ಕಂದರಾಚ್ಯುತನ ॥೧೮॥ ಬಿನ್ನಹಿಸಿದನು ಬಗೆಜನುಸಂ । ಪನ್ನವಸ್ತುನಿಧಾನವನುಮೇ । ಲಿನ್ನು ದೇವರು ಬಲ್ಲಿರುತ್ತರಕಾರ್ಯಸಂಗತಿಯ ॥ ನಿನ್ನ ಕೃಪೆಯಲಿ ರಾಜಮುಖನಿ । ಷ್ಪನ್ನವಾದರೆ ಬೊಪ್ಪನಿಂದ್ರನ । ಮನ್ನಣೆಯ ವೈಕುಂಠನೋಲಗ ಸುಲಭವಹುದೆಂದ ॥೧೯॥ ಕರೆಸಿಯಾದವನಾಯಕರ ನಂ । ದರೆಯನು ನಿಜಪುರದ ರಾಣಿಂ । ಗರಸಿ ಬಲದೇವಂಗೆ ನೇಮಿಸಿ ಸಕಲರಕ್ಷಣವ ॥ ತರಿಸಿ ಭಂಡಾರದಲಿ ವಿವಿಧಾ । ಭರಣವಸನಾದಿಗಳ ಹೇರಿಸಿ । ಹರಿ ಧನಂಜಯನೊಡನೆ ಬಂದನು ಬಂಧುಜನಸಹಿತ ॥೨೦॥ ಇದಿರುವಂದನು ಧರ್ಮಸುತಹರಿ । ಪದಪಯೋಜವಲೆರಗಿದನು ನಿನಗಿದು ಪಿನೋದವಲೇ ವಿಮುಕ್ತಗೆ ಭಕ್ತಸಂಸ್ಮರಣ ॥ ಕುದಿದು ಮರುಗಿದವರಸಿ ನಿನ್ನಯ । ಪದವ ಕಾಣದೆ ಸುತಿಗಳೆನ್ನೆಯ । ಸದನವಖಿಳಾಮ್ನಾಯನಿಕರವನೆಡಿಸುವುದೆಂದ ॥೨೧॥ ನಗುತ ಸಾಕೇಳೆಂದು ರಾಯನ । ತೆಗೆದು ತಕ್ಕಿಸಿ ಕೈಯತಳುಕಿನೊ । ಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ ॥

ವುುಗಿದಕರದಲಿ ವ್ಯಾಸಧೌಮ್ಯಾ । ದಿಗಳು ವೈಯಿಕ್ಕಿದರಖಿಳವುಂ । ತ್ರಿಗಳ ಸಚಿವರು ನೆರೆದ ದಾ ಳೋಚನೆಯಭವನದಲಿ ॥ ಕಳುಹಿದನು ನಾನಾನ್ನಪರ ವ್ರಂ । ಡಲಕೆ ದೂತರನಖಿಳ ಋಷಿಸಂ । ಕುಳಕೆ ಶಿಷ್ಯರ ಪರುಠವಿಸಿದನು ಹಸ್ತಿನಾಪುರಿಗೆ ॥ ಕಳುಹಿದನು ನಕುಲನನು ಬಳಿಕ । ತ್ತಲು ನೃಪಾಧ್ವ[illegible]ಲೆ ಗಲ್ಲಿಯ । ನೆಲನ ಶೋಧಿಸಿ ಕರೆಸಿದರು ಬಹುವಿಧದ ಶಿಲ್ಪಿಗರ ॥೨೩॥ ವುಯನ ಮತ್ರದಲಿ ವಿಶ್ವಕರ್ಮನ । ನಯವಿವೇಕದಲವುಲವುಖಶಾ । ಲೆಯನು ನಿರ್ಮಿಸಿದರು ಸುಲಕ್ಷಣಶಾಸ್ತ್ರಸೂತ್ರದಲಿ ॥ ನಿಯತಪತ್ನೀ ಶಾಲೆ ಜನವೇ । ದಿಯವರಾಂತರವೇದಿ ವುಖವೇ । ದಿಯ ಬಹಿರ್ವೇದಿಗಳನಳವಡಿಸಿದರು ವಹಿಲದಲಿ ॥೨೪॥ ಬಿಗಿದಬಿಂಗಾರಿಗಳ ಮೇಲ್ಕ । ಟ್ಟುಗಳ ಮಣಿಮಯಸೂಸಕದ ಲೋ । ವೆಗಳ ವುಖಮಂಟಪದ ಚೌರಿಯ ನವಫಲಾವಳಿಯ ॥ ಹೊಗರನೀಲದ ವಳಿಯ ನೆಲಗ । ಟ್ಟುಗಳ ಚಪ್ಪರದಡೆಯ ಶ್ರೇಯ ಚಾ । ಕಿಗೆಯ ಚತುರಂಗದ ವಿಚಿತ್ರದರಚನೆ ಚೆಲುವಾಯ್ತು ॥೨೫॥ ಪುರದ ಹೊರವಳಯದಲಿ ಯಮುನಾ । ವರನದಿಯ ತೀರದಲಿ ಧರಣೀ । ಶ್ವರರುಗರವನೆ ಮಾಡಿದರು ನವರತ್ನಮಯವಾಗಿ ॥ ಸುರಪುರದ ಮಾರಾಂಕಭುಜಗೇ । ಶ್ವರನ ಭೋಗಾವತಿಯ ಶಿಲ್ಪದ । ಗುರುವೆನಿಸಿತೀನಗರ ನಾರಾಯಣನ ಕರುಣದಲಿ ... ... ... ... ... ॥೨೬॥

ಅಂತು ಸಂಧಿ ೬ ಕ್ಕೆ ಪದ ೩೮೧ ಕ್ಕಂ ಮಂಗಳಮಸ್ತು

## ಏಳನೆಯ ಸಂಧಿ.

ಸೂಚನೆ| ಸಕಲಋಷಿಮುಖ್ಯರು ಮಹೀಪಾ ಲಕರು ನೆರೆದರು ವಿಶ್ವಭೂತ
ಪ್ರಕರ ತಣಿದುದು ಧರ್ಮಪುತ್ರನ ರಾಜಸೂಯದಲಿ ||

ಕೇಳು ಜನಮೇಜಯಧರಿತ್ರೀ । ಪಾಲ ದೂತರು ಹೂದರವನೀ । ಪಾಲರಿಗೆ ಋಷಿಗಳಿಗೆ ಭೂಸುರವೈಶ್ಯಶೂದ್ರರಿಗೆ ॥ ಹೇಳಲೇನದ್ಭುತವನಂಬುಧಿ । ವೇಲೆಯುದ ಮಧ್ಯದ ಸಮಸ್ತ್ರಜ । ನಾಳಿ ನೆರೆದುದು ವಿಲಸದಿಂದ್ರಪ್ರಸ್ಥನಗರಿಯಲಿ ॥೧॥ ಚೋಳಸಿಂಹಳಪಾಂಡ್ಯಕೇರಳ । ಮಾಳವಾಂಧ್ರಕರೂಷ ಬರ್ಬರ । ಗೌಳಕೋಸಲಮಗಧಕೇಕಯಹೂಣಸೌವೀರ ॥ ಲಾಳಭೋನೆಗಚೀನಕುರುನೇ । ಪಾಳಶಿಬಿ ಕಾಶ್ಮೀರಭೋಟವ । ರಾಳವರದೇಶಾಧಿಪತಿಗಳು ಬಂದರೊಗ್ಗಿನಲಿ ॥೨॥ ಭೂರಿಭೂರಿಶ್ರವನು ಬಾಹ್ಲಿಕ । ಶೂರಸೇನ ಕಳಿಂಗ ಸಲೆ ಗಾಂ । ಧಾರ ಸೌಬಲ ಸೋಮದತ್ತ ಸುಷೇಣ ಭಗದತ್ತ ॥ ವೀರಪೌಂಡ್ರಕನೇಕಲವ್ಯನು । ರಾಯಗಳು ಶಿಶುಪಾಲಯುವನಕು । ಮಾರವೌರವದಂತವಕ್ರರು ಬಂದರೊಗ್ಗಿನಲಿ ॥೩॥ ಸಕಳದಳಮೇಳಾಪದಲಿ ಭೀ । ಷ್ಮಕನು ರುಗ್ಮನು ಚಿತ್ರರಥಸಾ । ಲ್ವಕನು ರೋಹಿತರೋ

ಚನಮಾನಸಮುದ್ರಸೇನಕರು ॥ ಪ್ರಕಟಬಲರುತ್ತರದಿಶಾಪಾ । ಲಕರು ಕುರುಪರಿಯಂತ ರಾಜ । ಪ್ರಕರ ನೆರೆದುದು ವಿಳಸದಿಂದ್ರಪ್ರಸ್ಥನಗರಿಯಲಿ ॥೪॥ ದ್ರುಪದಧೃಷ್ಟದ್ಯುಮ್ನರಣಲೋ । ಲುಪಯುಧಾಮನ್ಯುತ್ತಮೌಂಜಸ । ರುಪಚಿತರು ಬಂದರು ಸಗಾಢದಲಿವರಬಾಂಧವರು ॥ ಕೃಪಜಯದ್ರಥಭೀಷ್ಮಮಾವಾ । ಧಿಪತಿಕರ್ಣದ್ರೋಣಮೊದಲಾ । ದಪರಿಮಿತಬಲಸಹಿತ ಕೌರವರಾಯ ನಡೆತಂದ ॥ ಗುರುತನೂಜಸುಶರ್ಮವಂಗೇ । ಶ್ವರಬೃಹದ್ರಥಭೀಮರಥದ । ರ್ಮರುಷಣರು ವರಭಾನುದತ್ತವಿಕರ್ಣದುಸ್ಸಹರು ॥ ವರವಿವಿಂಶತಿದೀರ್ಘಭುಜರು । ದುಶ್ಶರುದುರ್ಜಯಶಂಕುಕರ್ಣಾ । ದ್ಯರುಸಹಿತದುಶ್ಶಾಸನನು ಹೊರವಂಟನರಮನೆಯ ॥೬॥ ಬಂದುದೆ ಚತುರಂಗವವನಿಪ । ವೃಂದವವರವರುಚಿತವಿಗಿಲಿಪ । ರಿಂದುಭೀಷ್ಮದ್ರೋಣಕೃಪಧೃತರಾಷ್ಟ್ರರಿಗೆ ನಮಿಸಿ ॥ ವಂದನೀಯರಿಗೆರಗಿ ಸಮರಿಗೆ । ನಿಂದು ಕುಶಲಕ್ಷೇಮಸಂಗತಿ । ಯಿಂದ ಸತ್ಕರಿಸಿದನು ನೃಪ ವಿದುರಾದಿಬಾಂಧವರ ॥೭॥ ಜನಪ ಕೇಳೀಚೆಯಲಿ ಬಂದುದು । ಮುನಿಗಳಾಂಗಿರ ಕಣ್ವ ಭೃಗು ಜೈ । ಮಿನಿಸುಮಂತ ವಸಿಷ್ಠ ಶೌನಕ ಗಾರ್ಗ್ಯ ಬೃಹದಶ್ವ ॥ ಸನಕ ಶುಕ ಜಾಬಾಲಿ ತಿತ್ತಿರಿ । ವಿನುತಮಾರ್ಕಂಡೇಯ ಮುದ್ಗಲ । ತನಯ ರೋಮಶಕುತ್ಸವತ್ಸರು ರೈಭ್ಯನಾರದರು ॥೮॥ ಚ್ಯವನ ಗೌತಮವೇಣುಜಂಘು । ಪ್ರವರ ಕೌಶಿಕ ಸತ್ಯತಪ ಭಾ । ರ್ಗವ ಸುಮಾಲಿ ಸುಮಿತ್ರ ಕಾಶ್ಯಪ ಯಾಜ್ಞವಲ್ಕ್ಯಋಷಿ ॥ ಪವನಭಕ್ಷಕ ದೀರ್ಘತಪಗಾ । ಲವನು ತಿತಶಾಂಡಿಲ್ಯಮಾಂಡ । ವ್ಯವರರೆಂಬಮಹಾಮುನೀಂದ್ರರು ಬಂದರೊಗ್ಗಿನಲಿ ॥೯॥ ದೇಶದೇಶಾಂತರದ ವಿದ್ಯಾಭ್ಯಾಸಿಗಳು ಮೊದಲಾಗಿವರ್ಣನಿ । ವಾಸಿಗಳು ಫಲಮೂಲದಧಿಘೃತದುಗ್ಧಭಾರದಲಿ ॥ ಆಸಮಸ್ತಮಹೀತಳದ ಧನ । ರಾಶಿ ಜನಸಂತತಿಯನೇಕನಿ । ವಾಸದಲಿ ನೆರೆ ಕಾಣಲಾಯಿತು ನೃಪತಿ ಕೇಳೆಂದ ॥೧೦॥ ವಿಕಳವಾಮನಮೂಕಬಧಿರಾಂ । ಧಕರು ಮಾಗಧಸೂತವಂದಿ । ಪ್ರಕರಮಲ್ಲಮಹೇಂದ್ರಜಾಲಿಮಹಾಹಿತುಂಡಿಕರು ॥ ಸುಕವಿತಾರ್ಕಿಕವಾಗ್ಮಿವೈತಾ । ಳಿಕಸುಗಾಯಕಕಥಕಮಾರ್ದಂ । ಗಿಕರು ನೆರೆದುದು ನಿಖಿಳಯಾಚಕನಿಕರ ಸಂದಣಿಸಿ ॥೧೧॥ ಕರೆಸಿ ಭೀಷ್ಮಂಗೆರಗಿ ನುಡಿದನು । ಧರಣಿಪತಿಬಾಲಕರು ನಾವ । ಧ್ವರವಿದಗ್ಧದರಾಜಸೂಯ ಮಹಾಮಹೀಶ್ವರರು ॥ ನೆರೆದುದಖಿಳದ್ವಿಜಜನವಾ । ದರಿಸಲರಿಯೆನು ಹೆಚ್ಚುಕುಂದಿನ । ಕುರುಹನೀಕ್ಷಿಸಲಾಗದೆಂದನು ಮುಗಿದು ಕರಯುಗವ ॥೧೨॥ ಚಿಂತೆಯೇಕೈ ಕೃಷ್ಣನಾರೆಂ । ದೆಂತು ಕಂಡೆ ಚತುರ್ದಶಾಂತ್ರದ । ತಂತುರೂಪನು ತಾನೆ ಯೆನ್ನದೆ ನಿನಗೆ ಶ್ರುತಿವಚನ ॥ ತಂತುವಿನ ಪಟುವೃತ್ತಿಕೆಯಘಟ । ದಂತೆ ಜಗವೀತನಲಿ ತೋರ್ಕುಮು । ರಾಂತಕನ ಸುಮ್ಮಾನ ನಿನಗಿರಲಂಜಲೇಕೆಂದ ॥೧೩॥ ಕರೆಸು ಧೌಮ್ಯಾದಿಗಳನಿಲ್ಲಿಯ । ಪರುಠವವ ಮಾಡೆಂದು ಭೀಷ್ಮನು । ಗುರುಸುತ ಕೈಕೊಂಡನೆಲ್ಲರ ಮೇಲುನೋಟವನು ॥ ಅರಸ ಕೇಳ್ ಧೃತರಾಷ್ಟ್ರಬಾಹ್ಲಿಕ । ವರಬೃಹದ್ರಥಸೋಮದತ್ತರು । ಪರಮಪೂಜ್ಯರು ಮಾನನೀಯರು ಯಜ್ಞವಾಟದಲಿ ॥೧೪॥ ಸವನಸಾಧನಸರ್ವಸಂಭಾ । ರವನು ಧೌಮ್ಯನು ತರಿಸಿಕೊಡಿಸುವ । ನವನಿಪತಿಗಳ ಪಾರುಪತ್ಯದ ನೋಟ ಸಂಜಯಗೆ ॥ ವಿವಿಧರುಷಿಯಾಜ್ಞಿಕರು ಮಾಂತ್ರಿಕ । ನಿವಹ ಸಹದೇವಂಗೆ ಭೋಜ್ಯ । ಪ್ರವರದಧಿಕಾರದ ನಿಯೋಗ ಯುಯುತ್ಸುವಿನಮೇಲೆ ॥೧೫॥ ನೆರೆದಭೂಸುರತತಿಯ ನೋಟಕೆ । ಕರೆಸಿ ಕುಳ್ಳಿರಿಸುವನು ಸಾತ್ಯಕಿ । ಭರದಿನೆಂಜಲ ತೆಗೆಸಿ ಸಾರಿಸುವದು ಪಿಕ

ರ್ಣಂಗೆ ॥ ಅರಸ ಕೇಳ್ಭೋಜನದ ಸಮ್ಮಾನಂ । ತರದ ವೀಳೆಯಗಂಧಮಾಲ್ಯಾಂ । ಬರವನೀವಧಿಕಾರ ದುಶ್ಶಾಸನನ ವಶವಾಯ್ತು ॥೧೬॥ ವಿತತಭೂಸುರದಕ್ಷಿಣೆಗೆ ಗುರು । ಸುತ ನಿಯೋಗಿ ಸಮಸ್ತರತ್ನ । ಪ್ರತತಿಗಳನಾರೈದು ತಲೆಸುವನಾಕೃಪಾಚಾರ್ಯ ॥ ಘೃತವು ದಧಿ ಮಧು ತೈಲ ಕಸ್ತೂರಿ । ಸಿತಲವಣ ಸಂಭಾರಶಾಕೋ । ಚಿತಸುವಸ್ತುವ ಕೊಡುವ ಕೊಂಬಾರೈಕೆ ವಿದುರಂಗೆ ॥೧೭॥ ಅರಸ ಕೇಳ್ಪಾಕ ಶಾಲೆಯ । ಹಿರಿಯಪಂತಿಗಳಲಿ ಚತುರ್ದಶ । ಕರಿಘಟೆಗೆ ಪ್ರಿಯಾದುವುವು ಸಂಭಾರವನು ಹೇಳಿ ॥ ಹವರಚಿತದ್ರೋಣಿಯಲಿ ಸುರಿ । ಸುರಿದು ಸೇದುವರಾಟಳಿಂಗಳೊ । ಳಿರೆ ಘೃತಮಧುತೈಲಧಾರಾ ರಚನೆ ಚಲುವಾಯ್ತು ॥೧೮॥ ಧರಣಿಪತಿಕೇಳ್ದ್ರೋಣ ಮೊದಲಾ । ಗಿರೆ ಸಮಸ್ತಪ್ರಜೆ ಪಿಥಾವಂ । ತರಿಗೆ ಭೋಜನಗಂಧಮಾಲ್ಯಾಂಬರವಿಲೇಪನದ ॥ ಉರುನಿಯೋಗಿಗಳಿಂದ್ರಸೇನನು । ವರವಿಶೋಕನು ರುಗ್ಮನತಿಬಲ । ಧುರಸವಿಶಾಕಪತಾಕಸೇನರು ಸೂತ್ರವಂಗೆ ॥೧೯॥ ಅರಸ ಕೇಳ್ ಬಳಿಕ ಪೃಥ್ವೀ । ಶ್ವರರಿಗಭಿನವ ಗಜರಥಾವಳಿ । ತುರಗಶಸ್ತ್ರಾಸ್ತ್ರಗಳನೀವನಿಯೋಗ ಕರ್ಣನದು ॥ ಕರಕರೆದು ಯೋಗ್ಯಾತಿಶಯವರಿ । ವರಿದು ಯೋಗ್ಯಪ್ರಶ್ನಕೆ ಮಾದ್ರೇ । ಶ್ವರನು ಕೊಡುವವನಾದನಶ್ವಕೋತ್ಸವದ ಸಿರಿ ವಿಗಲು ॥ ಸಕಲಮಣಿಕಾಂಚನದ ಕೋಶ । ಪ್ರಕರಪಿದುಯೋಧನನ ವಶ । ನಕುಲನವರವರುಚಿತ ವೃತ್ತಿಯ ಮಧುರವಚನದಲಿ ॥ ಪ್ರಕಟಿಸುವನವನಿಪರ ಸೇನಾ । ನಿಕರದಾರೈಕೆಗಳು ಪಾಂಚಾ । ಲಕನಿಗಾದುದು ರಂಜಿಸಿತು ಪರಿದಾಟಿಯೊಪ್ಪವಣೆ ॥೨೦॥ ಅಪದದನುಪಮ ಮಂಡಪವಂತ । ಪೇಟಿಯ ಸವಿಸಾಪದಲಿ ಹೊಂಗಳ । ಕೋಭಿ ಧ್ವಜಶೃಂಗಳಾಸ್ಥಲದಲವ ಸೀಮೆಯಲಿ ॥ ಅವನಿಪ ಪರಿಚಾರಕರು ಸಲ । ಪಾಲಿಸಿದ ಸ್ಫುತಚರಪ್ರರೋಹಾ । ಶಾಟಿಸಂಭಾರಘುವನುವಾಯಿತ್ತು ನಿಪುಣದಲಿ ॥೨೧॥ ಕಲಸಿದರು ಋತ್ವಿಕ್ಕುಗಳನ । ಧ್ವರ್ಯುಪಾದನು ಯಾಜ್ಞವಲ್ಕ್ಯನು । ವರಸುಪುತ್ರಾಂಗಿರಸರುಗಳುದ್ಗಾತೃಹೋತೃಗಳು ॥ ಪರಮಸೈಮಿನಿಕಣ್ವವರತಿ । ತ್ತಿರಿಗಳಾಗ್ನೀಧ್ರಾದಿರಾಟಾ । ಧ್ವರನಿಯೋಗಿಗಳಾಯ್ತು ವೇದವ್ಯಾಸನಾಜ್ಞೆಯಲಿ ॥೨೨॥ ಆಸದಸ್ಯತ್ವವನು ವೇದ । ವ್ಯಾಸ ಕೈಕೊಂಡನು ಮುನೀಂದ್ರನು । ಹಾಸವಾದವ ಬಯಕೆಗಾಶಾಂಡಿಲ್ಯನಾರದರು ॥ ಭೂಸುರರು ಸಾಮಾಜಿಕರು ಧರ । ಣೀಶಯಜ್ಞ ಪಕ್ರಮದ ವಿ । ನ್ಯಾಸವಲಿ ಬಂದನು ಯುಧಿಷ್ಠಿರನಚ್ಯುತನ ಹೊರಗೆ ॥೨೩॥ ದೇವ ನಿನ್ನಯ ಕರುಣದಲಿ ಸಕ । ಳಾವನೀಪತಿವಿಜಯಬಹಳಾ । ಧಾರ್ವಲುಮಿಸುವುದುಪಾರಂಭಪಿಸತ್ತಾರ ॥ ಈ ಪ್ರಭವ ವೈಭವವೆಸಗೆ ಸಂ । ಭಾವಿತವೆ ವರರಾಜಸೂಯಕೆ । ದೇವ ದೀಕ್ಷಿತನಾಗು ನೀನೆಂದೆರಗಿದನು ಪದಕೆ ॥೨೪॥ ಮಣಿದು ಹಿಡಿದೆತ್ತಿದನು ರಾಯನ । ಪಣೆಯನನುಪಮಕರುಣಾನಿಧಿ ಕಮ । ಲಾಣಿಯ ಬಾಯೆಸ್ನಾನೆ ಬಾಯೆಂದಪ್ಪಿ ನೈದಿದವಿ ॥ ಗುಣವದು ನಿನಗೆಂದು ಕುಲಟನ । ಮಣಿಯ ದೀಕ್ಷಿತನಾಗು ಮದವಾ । ರಣನೆ ದೀಕ್ಷಿತನಾಗೆನುತ ಬೋಳೈಸಿದನು ಹರಸಿ ॥೨೫॥ ಬಳಿಕ ಪಸಾಪನೆಸುತ್ತ ಯಮನಂ । ದನನು ವೈಶಾಖದ ಚತುರ್ದಶಿ । ದಿನದಲುತ್ತರಪೂರ್ವವೇದಿವರಾಭ್ಯುದಯೈಕ್ಯದಲಿ ॥ ವಿನುತಪುಣ್ಯಾಹದ ಮಹಾವಾ । ಚನೆಯ ನಿಗಮಪವಿತ್ರಜಲಪಾ । ವನನು ಮರುದಿನ ಯಜ್ಞದೀಕ್ಷಿತನಾದನೊಲವಿನಲಿ ॥೨೬॥ ಹದಿವನನವನೀತಾನುಲೇಪದ । ಹೊದೆದ ಕೃಷ್ಣಾಜಿನದ ಹಸ್ತಾ । ಗ್ರದಲೆಸೆವಸಾರಂಗಶೃಂಗದ ಯಾಜಮಾನ್ಯದಲಿ ॥ ಉದಧಿಗೊರೆಗಟ್ಟುವ ಚತುರ್ವೇ । ದದ ಮಹಾಘೋಷದಲಿ ಮಹಿಮಾಂ । ಪದ

ದ ನೆನಹಿನ । ಸಾಣೆಯಲಿ ಸವೆಯಿತ್ತು ಕೌರವನೃಪನ ನಿರ್ದೇಶ ॥೭॥ ಅಕಟ ಕೌರವರಾಯ ರಾಜ । ನ್ಯಕಶಿರೋಮಣಿಯಿರಲು ಧರೆ ರಾಜ । ಕವಿಹೀನವಿಡಂಬವಾಯ್ತೇ ಶಿವಶಿವಾಯೆನುತ ॥ ಸಕಲದಳ ನಾಯಕರು ಮಂತ್ರಿ । ಪ್ರಕರ ಚಿಂತಾಂಬುಧಿಯೊಳದ್ದಿರೆ । ಶಕುನಿ ಬಂದನು ಕೌರವೇಂದ್ರನ ರಾಜ ಮಂದಿರಕೆ ॥೮॥ ಕರೆದು ಬಾಗಿಲವರಿಗೆ ತನ್ನಾಯ । ಬರವನರುಹಿದೊಡವರು ರಾಯನ । ಹೊರೆಗೆ ಬಂದರು ನುಡಿದರಂಗೈತಳದ ಬಾಯ್ಗಳಲಿ॥ ಅರಸ ಬಿನ್ನಹ ಮಾವದೇವರು । ದರುಶನಾರ್ಥಿಗಳೆನಲು ಮನದಲಿ । ಕುರುನೃಪತಿ ಚಿಂತಿಸುತ ಬರಹೇಳೆಂದು ನೇಮಿಸಿದ ॥೯॥ ಹೊಕ್ಕನೀತನು ಕೌರವೇಂದ್ರನ। ನೆಕ್ಕಟಿಯೊಳಿರೆ ಕಂಡು ನುಡಿಸಿದ । ನಕ್ಕಜದ ರುಜೆಯೇನು ಮಾನಸವೋ ಶರೀರಜವೋ ॥ ಮುಕ್ಕುಳಿಸಿ ಕೊಂಡಿರದಿರಾವಿಗೆ । ಸಿಕ್ಕಿದೆಯೊ ಸೀಮಂತಿನಿಯರಿಗೆ । ಮಕ್ಕಳಾಟಿಕೆ ಬೇಡ ನುಡಿ ಧೃತರಾಷ್ಟ್ರನಾಣೆಂದ ॥೧೦॥ ಮಾವ ನೀವ್ಮರುಳಾದಿರೇ ನನ । ಗಾವರುಜೆ ಯಿಲ್ಲಂಗನೆಯರುಪ । ಜೀವಿಯೇ ನೀವರಿಯರೇ ಹಿಂದೀಸುಕಾಲದಲಿ ॥ ನೋವು ಬೇರಿಲ್ಲೆನಗೆ ನಿಳಯಕೆ । ನೀವು ಬಿಜಯಂಗೈವುದಂತ । ರ್ಭಾವವಪ್ಪುಯನೇಕೆ ಬೆದಕುವಿರೆಂದನಾಭೂಪ ॥೧೧॥ ಏನು ನಿನ್ನಂತಸ್ಥ ಹೃದಯಕ್ಕ । ಶಾನುಸಂಭವವೇಕೆ ನುಡಿ ದು । ಮ್ಮಾನಬೇಡೆನ್ನಾಣೆನುತ ಸಂತೈಸಿದನು ನೃಪನ ॥ ಏನುಭಯಬೇಡೆಂದೆನಲು ಯಮ । ಸೂನುವೈಭವವನ್ನುದಗ್ಧವ । ನೋನುಭಾವವನೇಕೆ ನುಡಿಸುವಿರೆಂದನಾಭೂಪ ॥೧೨॥ ಹೇಳುಹೇಳೇನೇನು ಪಾಂಡುಸ್ವ । ಬಾಲಪುತ್ರರ ವಿಭವವನ್ನು । ಜ್ವಾಲೆಯಲಿ ಮನ ಬೆಂದುದೇ ಹರ ಹರ ವಿಚಿತ್ರವಲಾ ॥ ಪಾಲಕನು ಧರ್ಮಜನು ಸಲೆ ಕಾ । ಟ್ಯಾಳುಗಳು ಭೀಮಾರ್ಜುನರು ಬ । ಳ್ಳಾಳ ಹಬ್ಬುಗೆಯೈಸಲೇ ಪಾಂಡವರ ಸಿರಿಯೆಂದ ॥೧೩॥ ಅವರು ಪಿತ್ರಾರ್ಜಿತದ ರಾಜ್ಯ । ಪ್ರವರಪಾತ್ರರು ನಿನ್ನಸೂಯೆಯ । ಕವಲುಮನದ ಕುಠಾರಬುದ್ಧಿಯ ಕಲುಷಭಾವನೆಯ ॥ ಎವರಣೆಯನವರೆತ್ತ ಬಲ್ಲರು । ಶಿವಶಿವಾ ಭುವನೈಕಮಾನ್ಯರ । ನವಗಡಿಸಲಂಗೈಸಿದೈ ಮಾಣೆಂದನಾಶಕುನಿ ॥೧೪॥ ಲೇಸು ಬಿಜಯಂಗೈಯು ನೀವೆ । ನ್ನಾಸರಾಗ್ನಿಯನೇಕೆ ಕಣಕುವಿ । ರಾಸುರಪದೇಕನ್ನೊಡನೆ ಸೈರಿಸುವುಮಹತಿಯಾ ॥ ಈಸುನುಡಿವರೆ ಮಾವಯೆನುತಮ । ಹೀಶಕಂಬನಿದುಂಬಿದೆನಲುನ । ಬಿಸರಕ ಬಿಸುಸುಯ್ದು ಧೊಪ್ಪನೆ ಕೆಡದನವನಿಯಲಿ ॥೧೫॥ ಎತ್ತಿದನು ಕಂಬನಿಯ ತಿರುವನಿ । ಮುತ್ತುಗಳ ಕೇವಣಿಯ ಶಕುನಿನೃ । ಪೋತ್ತಮನ ಬಾ ಕಂದ ಬಾ ಯೆಂದಪ್ಪಿ ಕೌರವನಾ ॥ ಕತ್ತು ಬಿಸುಡುವೆನುಹಿತರನು ನಿನ । ಗತ್ತೆನಿಂದ್ರಪ್ರಸ್ಥಪುರವನು । ಹೆತ್ತತಾಯ್ಗಾಂಧಾರಿ ಸಂತೋಷಿಸಲಿ ಬಳಿಕೆಂದ ॥೧೬॥ ಮಾವ ಕೇಳತಿಬಲರು ಫಲುಗುಣ । ಪಾವಮಾನಿಗಳೈವರಂಗ ತಾ । ದೇವಸಖುಗೋಪಂವನನಿಬರಗೆಲವು ಗೋಚರವೇ ॥ ಸಾವುದಲ್ಲದ ತನಗೆ ಬೇರಿ । ನ್ನಾವುಪಾಯಲಿಸಮತ ಸೇರದು । ಜೀವಿತವ್ಯವನಮರ ನಿಕರದೊಳರಸಿ ಕೊಳ್ಳೆಂದ ॥೧೭॥ ಗೆಲುವೆ ನಾನಂಜದಿರು ಪಾಂಡವ । ರೊಳವಳವನಾನರಿವೆ ನೃಪನ । ಗ್ಗಳದಧರ್ಮಜ್ಞನು ವಿಶೇಷದ್ಯೂತಲೋಲುಪನೂ ॥ ಗೆಲುವ ಮೋಡಿಯನರಿಯನಾತನ ನಲಿಯ ಬಲ್ಲೆನು ಜೂಜುಗಾರರ । ಕುಲಶಿರೋಮಣಿತಾನೆಯೆಂದನು ಶಕುನಿ ಕೌರವಗೇ ॥೧೮॥ ಕಪಟವನು ನೆರೆಮಾಡಿ ಜೂಜಿನೊ । ಳುಪರಿಕಾರ್ಯವ ಜೈಸಿಕೊಡುವೆನು । ನಿಪುಣರೆನ್ನಂದದಲಿ ಲೋಕದೊಳಿಲ್ಲ ಕೈತವದ ॥ ಅಪದೆಸಗೆ ಭಯಗೊಳ್ಳದಿರು ನೀ । ಷ್ಕೃಪೆಯಲಿರು ಗುರುಭೀಷ್ಮವಿದುರಾ । ದ್ಯುಪಸರರ

ಕೈಕೊಳ್ಳದರುನೀನೆಂದನಾಶಕುನಿ ॥೧೯॥ ಎನ್ನ ಬಹುಮಾನಾವಮಾನವು ನಿನ್ನದೈಸಲೆ ಮಾವ ನೀಸಂ
ಪನ್ನ ಕೃತಿ ವಿದ್ಯನಾದೊಡೆ ತೊಡಚು ಸಾಕದನು ॥ ಅನ್ನಿಗರಿಗರುಹದಿರು ನಮ್ಮವ । ರನ್ನ ದಿರು
ವಿದುರಾದಿಗಳನುಪ । ಸನ್ನ ಮಂತ್ರವನರುಹು ಬೊಪ್ಪಂಗೆಂದನವನೀಶ ॥೨೦॥ ನೀನರುಹು ನಿಮ್ಮಯ್ಯ
ಮನಗೊ । ಬ್ಬಾಸರೇಂದ್ರರ ಕರಸಿಕೊಟ್ಟೊಡೆ ಮಾನನಿಧಿಯೇ ಸಕಲಧರೆಯನು ಸೇರಿಸುವೆ ನಿನಗೆ॥
ನೀನೆ ಹೋಗೀಯೆನ್ನ ಕಡುದು । ವ್ಯಾಸನವನು ಬೊಪ್ಪಂಗೆ ನುಡಿವರೆ । ತಾನೆ ಕರೆಸುವ ನರುಹುವೆನು
ಜನಕಂಗೆನಿಜಮತವ ॥೨೧॥ ಅಹುದು ಬಳಿಕೇನೆನುತಬಂದನು । ಕುಹಕಮತಿ ಧೃತರಾಷ್ಟ್ರನರಮನೆ ।
ಗುಹಸಮಯದಲಿ ಹೊಕ್ಕನಂದೇಕಾಂತಮಂದಿರವ ॥ ಬಹಳತೀವ್ರವ್ಯಸನದಲಿದು । ಸ್ನುಷಮನೋವ್ಯ
ಥೆಯಲ್ಲಿ ಕುಮಾರಕ । ನಿಹುದನರಿಯರೆ ನೀವೆನುತ ಬಿಸುಸುಯ್ದನಾಶಕುನಿ ॥೨೨॥ ಏನು ಶಕುನಿ ಮಗಂಗೆ
ದುಗುಡವ । ದೇನು ಕಾರಣವಾರದೆಸೆಯಿಂ । ದೇನು ಸಾಧ್ಯವದೇನು ಭಯ ಮೇಣಾವುದಭಿಲಾಷೆ ॥ ಏನು
ವನು ವಂಚಿಸದೆ ಹೇಳೆ । ನ್ನಾಣೆಗೇಕೈ ಮರುಕನೆನೆನಿಜ । ಸೂನುವನು ನೀ ಕರೆಸಿ ಬೆಸಗೊಳ್ಳೆಂದನಾ
ಶಕುನಿ ॥೨೩॥ ಕರೆಸಿದನು ದುರಿಯೋಧನನನಾ । ದರಿಸಿ ಕಟ್ಟೇಕಾಂತದಲಿ ಮಗ । ವರು ವಿಚಾರಿಸಿ
ದರು ನಿಜಾನ್ವಯಮೂಲನಾಶನವ ॥ ಭರತಕುಲನಿರ್ವಾಹಕನೆ ಬಾ । ಕುರುಕುಲಾನ್ವಯದೀಪ
ಬಾ ಯೆನ್ನುರಸಬಾ ಯೆನ್ನಾಣೆ ಬಾಯೆಂದಪ್ಪಿದನು ಮಗನ ॥೨೪॥ ಮಗುಳಿದವೇಕೈ ಮಗನೆ ಹಿರಿಯೋ
ಲಗವನೀಯೆಗಡೇಕೆ ವೈರಾ । ಳಿಗಳ ಬೇಟೆಗಳವನಿಪಾಲರ ವಿನೋದಕೇಳಿಗಳ ॥ ಬಗೆಯೆಗಡ ಬಾಂಧವರ
ಸಚಿವರ । ಹೊಗಸಗಡ ನಿನ್ನರಮನೆಯನೀ । ಹಗಲು ನಿನಗೇಕಾಯ್ತು ಕತ್ತಲೆಯೆಂದನಂಧ
ನೃಪ ॥೨೫॥ ಹೇಳಲಮ್ಮೆನು ನೀವು ಧರ್ಮದ । ಕೂಳಿಯಲಿ ಸಿಲುಕಿದವರೆನ್ನನು । ಖೂಳನೆಂದು
ಕಷ್ಟನೆಂಬಿರನೂಯನೆಂಬಿರಲೇ ॥ ಕಾಲಭಂಜಕಯಾಯ್ತು ತನ್ನಯ । ಬಾಳಿಕೆಯ ಬೆಳ್ಳಂಬವೇತಕೆ ।
ಕೇಳುವಿರ ನೀವೆಂದು ಸುಯ್ದನು ತುಂಬಿ ಕಂಬನಿಯ ॥೨೬॥ ಮುನಿಚರಿತ್ರರು ನೀವು ರಾಜಸ । ತನದ
ಮದದಲಿ ಲೋಕಯಾತ್ರೆಯ । ನನುಸರಿಸುವವರಾವು ನೀವೇ ಭೋಗನಿಸ್ಪೃಹರು ॥ ಅನುದಿವಸರಾ
ಗಿಗಳು ನಾವೆ । ವ್ವನುಮತವ ಪಾಲಿಸುವರಾರೆಂ । ದನುತಿಸುಯ್ದನು ಮರುಗಿ ಬೈದನು ತನ್ನ ದು
ಷ್ಕೃತವ ॥೨೭॥ ಈಸುಕಳವಳವೇನು ಚಿತ್ತದ । ಘಾಸಿಕೆಗೆ ಘೂಳ್ಳಾಸವೇಕೆ ವಿ । ಳಾಸಕೂಸೇಯ
ವೇನು ಹೇಳಾ ನೆನಹಿನಧಿರುಚಿಯ ॥ ವಾಸಿಗಳ ಘೈಸರವನೆನ್ನಲಿ । ಸೂಸಬಾರದೆ ನಿನ್ನ ಪರುಷಕೆ ।
ಪೈಸರವದೇನೆಂದು ಬೆಸಗೊಂಡನು ಸುಯೋಧನನ ॥೨೮॥ ಏನನೆಂಬೆನು ಬೊಪ್ಪ ಕುಂತೀ । ಸೂನು
ಗಳ ಸಾಮ್ರಾಜ್ಯಾರ್ಪಣವನು । ದಾನವಾರಿಯ ಹಾಸುಹೊಕ್ಕಿನ ಸೌಖ್ಯಸಂಗತಿಯ ॥ ತಾನಪುಂಸಕನಾ
ದಪರಿಯನ ದೇನವಿಸ್ತರಿಸುವೆನು ಲಜ್ಜಾ । ಹಾನಿನಿಗೆ ತನ್ನೊಕ್ಕತನವಿಂದಳಿದುಹೋಯ್ತೆಂದ ॥೨೯॥
ನಗೆದುಬುಗುಟಿದೆ ಹಣೆಯಲವರೋ । ಲಗದ ಸಭೆಯಲಿ ನನೆಪಸೀರೆಯ । ತೆಗೆಸಿಕೊಟ್ಟರು ತಂದು
ಮಟುವರ್ಗದ ನವಾಂಬರವ ॥ ಬಗೆದುಗೊಳಿಸುವರೆನ್ನನವರೋ । ಲಗದ ಸೂಳೆಯರವನ ಸೂಳಿನ ।
ನಗೆಯ ನೆನೆನೆನೆದೆನ್ನ ಮನ ಜರ್ಝರಿತವಾಯ್ತೆಂದ ॥೩೦॥ ಇದಕೆ ಕಾರಣವೇನು ಹಣೆನೊಂ । ದುದಕ
ದೇನು ನಿಮಿತ್ತವೆನಲರಿ । ಸದನದಲಿ ಮಯನಿತ್ತಸಭೆಯನು ದೇವರರಿಯಿರಲೇ ॥ ಮುದದಿ ನಾಧರ್ಮ
ಜನು ಘನಸಂ । ಪದದಲೋಲಗವಿತ್ತ ನಾದ್ರೌಪದಿ । ನಿಜಾನುಜಮಂತ್ರಿಸಚಿವಪಸಾಯಿತರುಸ

ಮೌನದೊಳಿದ್ದನೊಂದುವಿಗಳಿಗೆಮಾತ್ರದಲಿ ||೫೫|| ಮಾತು ಸೊಗಸದಲಾ ಮೃಧಾನಿ | ಪೇತ್ರಕನ್ನನು ಕರೆಸಿದಿರಿ ನಿ | ಮ್ಮಾತಗಳು ಭೀಮಾರ್ಜುನರುಸಹಿತೀಮಹೀತಳವ || ತಾತ ನೀವಾಳುವುದು ರಾಯಸು | ನೀತಸಾಧರ್ಮಜನು ಧರ್ಮವಿ | ಘಾತಕರು ನಾವೆಮ್ಮ ಕಳುಹುವುದೆನುತಹೊರವಂಟ ||೫೬|| ಎಲೆಗೆ ಕರೆಯಾಪಾಪಿಕೌರವ | ಕುಲಕುಠಾರನ ನಿನ್ನ ಮಗನೊಡ | ನಳಿವೆನೆನ್ನಸಲೆ ಪಾಂಡು ಪುತ್ರರ ವೈರ ಬಂಧದಲಿ || ತಿಳುಹಿ ತಾಯೆನಲಾಕೆ ಶಕುನಿಯ | ಕಳುಹಿ ಕರೆಸಿದೊಡಾತ ಮರಳಿದ | ನಳಲುದೊರೆಯಲಿ ಮೂಡ ಮುಳುಗಿದನೆಂದು ಧೃತರಾಷ್ಟ್ರ ||೫೭|| ಏನನೆಂದ್ಯೆ ಮಗನೆ ಕುಂತೀ | ಸೂನುಗಳ ರಾಜ್ಯಾಪಹಾರದೊ | ಳೇನುಬುದ್ಧಿವಿಳಾಸವಾವುದು ಕಾರ್ಯಗತಿ ನಿನಗೆ || ದಾನದಲಿ ಮೇಣ್ಸಾಮದಲಿ ಭೇ | ದಾನುಮತದಲಿ ದಂಡದಲಿ ನೀ | ವೇನನಿಶ್ಚೈಸಿದಿರಿ ಹೇಳಿನ್ನಂಜಬೇಡೆಂದ ||೫೮|| ತಿಂದವಿಷವಳ್ಕಿದವು ಮಡುವಿನೊ | ಳಂದು ಬಿಸುಟರೆ ಮುಳುಗಿ ಸುಖದಲಿ | ಮಿಂದು ಹೊರವಂಟರು ಮಹಾಗ್ನಿಯ ಭವನಭಂಗದಲಿ || ಬಂದುಕೊಂದಲು ಸೀಯದನಿಬರು | ಬಂದುವು ಮೊದಲಾದಕೃತ್ರಿಮ | ದಿಂದ ಪಾಂಡವರಳಿದುದಿಲ್ಲಿದಕೇನು ಹದನೆಂದ ||೫೯|| ನೀವು ಚಿತ್ತವಿಸಿದೊಡೆ ನೆತ್ತದೊ | ಳಾವು ಸೋಲಿಸಿ ಕೊಡುವೆವವರನು | ನೀವು ಕರೆಸುವುದಿಲ್ಲಿಗೆನುತ ಪ್ರತಿವಚನದಲಿ || ನಾವು ಜಾಣರು ಜೀಯ ಜೂಜಿನ | ಜೀವಕಳೆಯಲಿ ಧರ್ಮಸುತನಿದ | ನಾವಹವಣೆಂದರಿಯನಾತನ ಬೆಸಸಬಹುದೆಂದ ||೬೦|| ಅಹುದು ತಪ್ಪೇನಿದುವೆ ಸಾಧನ | ವಹುದು ವಿದುರನ ಬುದ್ಧಿಗಳಿಮತ | ವಹಡೆಕಾಸುವೆನ್ನೆನಲೇ ಬೆಸಸುವೆನು ವಿದುರಂಗೆ || ಕುಹಕಮಾತನಲಿಲ್ಲ ನೋಡುವನಿಹಪರತ್ರದ ಹಿತವನಿವನಿ | ರ್ವಹಿಸಿಕೊಡುವೊಡೆ ಮಂತ್ರವೆಂದನು ಮಗಗೆ ಧೃತರಾಷ್ಟ್ರ ||೬೧|| ಖೂಳರಲಿ ಸತ್ಕಳೆಗಳನು ನೆರೆ | ಕೇಳದವರಲಿ ಮಂತ್ರಬೀಜವ | ನಾಲಿಯಿಲ್ಲದವಂಗೆ ರೂಪವಿಳಾಸವಿಭ್ರಮವ || ಹೇಳುವಂತಿರೆ ನಿಮ್ಮ ವಿದುರನ | ಕೇಳಿಸಿದರಾಕಾರ್ಯಗತಿಗೆ ವಿ | ತಾಳವಾಗದೆ ಬೊಪ್ಪಯೆಂದನು ನಗುತ ಕುರುರಾಯ ||೬೨|| ಅರುಹಿದೊಡೆ ವಿದುರಂಗೆ ಕಾರ್ಯವ | ಮುರಿವನಾತನು ಬಳಿಕ ನಿಮ್ಮಯ | ಕಿರಿಯತಮ್ಮನ ಮಕ್ಕಳಿಗೆ ಕೊಡಿ ಹಸ್ತಿನಾಪುರವ || ಹರಕುಗಳು ನಾವ್ನೂರುಮಕ್ಕಳು | ಹೊರಗೆ ಬದುಕುವೆವೆನಲೇ ನಿ | ಮ್ಮರುಮಮಕ್ಕಳುಗೂಡಿ ಸುಖದಲಿ ರಾಜ್ಯವಾಳೆಂದ || ಪಾರಲೌಕಿಕದುಳಿವನೈಹಿಕ | ದೋರೆಪೋರೆಯನಿಂದು ಬಲ್ಲವ | ರಾರು ಹೇಳಾ ವಿದುರನಲ್ಲದೆ ನಮ್ಮಕೈಕದಲಿ ||೬೩|| ಸಾರವಾತನ ಮಾತು ನಯವಿ | ಸ್ತಾರಸಹಿತಿಹುದಲ್ಲಿ ನಂಬುಗೆ | ದೂರವಿಲ್ಲೆನಗರಿಯ ನೀನಿಲ್ಲೆಂದನಂಧನೃಪ ||೬೪|| ತಿಳುಹಿ ವಿದುರನನನವರ ಕರೆಯಲು | ಕಳುಹುವೆನು ಯಮಸೂನು ನಿಮ್ಮಯ | ಬಲುಹಿನಲಿ ಒಳಕುವನೆ ಭೀಮಾರ್ಜುನರು ಕಿರುಕುಳರೇ || ತಿಳಿವೊಡೀತನಬುದ್ಧಿಯೇ ನಿ | ರ್ಮಲಿನವಹುದು ನಿಧಾನವಿದು ನೀ | ಕಳವಳಿಸದಿದ್ದೊಡೆ ಮನೋರಥಸಿದ್ಧಿಯಹುದೆಂದ ||೬೫|| ನೀ ಕರುಣದಲಿ ನಮ್ಮ ಸಲಹುವೊಡಾಕುಮಾರರ ಕರೆಸಿಕೊಟ್ಟೊಡೆ ಸಾಕು ಮತ್ತೊಂದಿಹುದಲೇ ಪಾಂಚಾಲನಂದನೆಯ || ನೂಕ ಮುಂದಲೆವಿಡಿದು ತೊತ್ತಿರೊಳಾಕೆಯನುಕುಳ್ಳಿರಿಸಿದುದು ವಿ | ಶೋಕನಹೆನಾಬಿವಸದಲಿ ಕೃತಕೃತ್ಯನಾನೆಂದ ||೬೬|| ಪೋಗು ನೀನೆಂದವನ ಕಳುಹಿದ | ನಾಗಮನದೊಳಗಧಿಕಚಿಂತಾ | ಸಾಗರದೊಳೋರಂತೆ ಮುಳುಗಿದನಂದು ಧೃತರಾಷ್ಟ್ರ || ಈಗಳಿನಸವಿಗಳುಪಿ ಮೇಲಣ | ತಾಗನರಿಯನು ಕಂದನಿವಕಿ | ನ್ನೇಗುವೆನು

ಕರೆಸಿ ನಿಮ್ಮಯ ಮಂತ್ರಿಜನವು । ಸ್ಥಿರ ಪಸಾಯ್ತರ ಕೇಳುವುದು ಮನ । ದೊರೆಗೆ ತೂಕಕೆ ಬಹರೆ
ಭೀಷ್ಮಾದಿಗಳ ಮತವಿಹಿದು ॥ ಅರಸ ನಿಶ್ಚೈಸುವುದೆನಲು ನೀ । ಮರುಳೆ ವಿದುರ ಭವದ್ವಚೋವಿ ।
ಸ್ತರಕೆ ಪಡಿಸ್ಥಳವುಂಟೆ ಶಿವಶಿವಯೆಂದನಾಭೂಪ ॥೯೨॥ ಹೋಹುದೇನಭಿಮತವೆ ಧೂರ್ತರ । ವ್ಯೂಹ
ವದು ಭೀಷ್ಮಾದ್ಯುಭಯರು । ಸಾಹಸಿಗರಲ್ಲದೆ ರಹಸ್ಯಕೆ ಸಲ್ಲರವರುಗಳು । ಕಾಹುರರು ಕೌರವರು
ಸಮರೋ । ತ್ಸಾಹಶಕ್ತಿಗೆ ತಾವದಲ್ಲ । ವ್ಯಾಹತವೆ ಮತವೆಂದು ಭೀಷ್ಮಾದಿಗಳ ಬೆಸಗೊಂಡ ॥೯೩॥
ಜೀಯ ಬಿನ್ನಹವಿಂದು ದೇಹ । ಚ್ಛಾಯೆಗುಂಟೇ ಬೇರೆಚೇಷ್ಟನ । ವಾಯಿಯೇ ನಮ್ಮನಿಬರಿಗೆ ರಾಜಾ
ಭಿಮಾನದಲಿ ॥ ನೋಯೆನೊವುದು ನಿಮ್ಮದೇಹದ । ಘಾಯದಲಿ ಸಾವ್ಬೀಯವಹುದೆ । ನಮ್ಮಾಯತಂ
ಸ್ವಾತಂತ್ರ್ಯವೆಮಗಿಲ್ಲೆಂದನಾಭೀಷ್ಮ ॥೯೪॥ ಕರೆಸುವನು ಧೃತರಾಷ್ಟ್ರ ನಿಮ್ಮನು । ಕರೆವಮಣಿಹಸು
ಯೇಧಸಾಸ್ಯರ । ಮರುಳುಗಳ ಮಾತೇನು ಹಿತವರು ನೀವಲಾ ನನಗೆ ॥ ಧರಣಿಯಿದು ಶಾಶ್ವತವೆ
ತಂದೆಗೆ । ಹಿರಿಯನಾಧೃತರಾಷ್ಟ್ರನಾಜ್ಞೆಯ । ಶಿರದೊಳಾಂತೆನು ಬಹೆನೆನುತ ನಿಶ್ಚೈಸಿದನು
ನೃಪತಿ ॥೯೫॥ ಇರುಳ ನೂಕಿದರುದಯದಲಿ ಭೂ । ಸುರರ ಕರೆಸಿದರವರುಳಸಾಂವ । ತ್ಸರಿಕಸುಮು
ಹೂರ್ತದಲಿ ಹೊಯಿಸುವರಾವ ಹೊರಗುಡಿಯು ॥ ಪುರದ ಕಾಹನು ಸಚಿವಸಾವಂ । ತರಿಗೆ ನೇಮಿಸಿ
ಸಕಲದಳವೋ । ಹರದ ದೆಬ್ಬಾಳವನು ಕಂಡನು ಪುರವಹೊರವಂಟಾ ॥೯೬॥ ಬಿಗಿವರೆಂಚೆಯ
ಹೊಮ್ಮಿಣಿಯ ಹೊರ । ಜಗಳ ಜೋಡಿಯ ಪಕ್ಕಘಂಟೆಯ । ಝಗೆಯ ಮೊಗರಂಬದ ನವಾಯಿಯ
ಮಣಿಯುಪಲವಟೆಯ ॥ ಬಿಗಿದಕೂರಂಕುಶದ ಮಾವಂ । ತಿಗನಸನ್ನೆಗೆ ಕುಸಿದದಂತಿಯ । ಹೆಗಲ
ಹೊಂಗವ್ವುಗೆಗ ಚಿಪಯುಂಗ್ರೈದನಾಭೂಪ ॥೯೭॥ ತಿಳಿತವಿನನುದಯದಲಿ ತಾರಾ । ವಳಿಗಳದ್ಭುತವೆ
ನಲು ಮುಕ್ತಾ । ವಳಿಯ ಧವಳಛತ್ರದೆಸಬಲುಕೊಲೆವಟ್ಟಿಗಳ ॥ ಕೆಲಬಲದ ಭೀಮಾರ್ಜುನರ ಗಜ ।
ದಳದ ಮುಂದೆ ಕುಮಾರವರ್ಗದ । ಸುಳಿವುಗಳ ಸೌರಂಭದಲಿ ಹೊರವಂಟನಾಭೂಪ ॥೯೮॥ ಮುಂದೆ
ಮೋಹರ ತೆಗೆದು ನಡೆವುದು । ಸಂದಣಿಸಿ ನಕುಲಾದಿಭೂಪರು । ಹಿಂದೆ ಮಾಣಿಕ್ಯವಣಿದದಡ್ಡಿಯ ಬಿಗಿ
ವಬೀಯಗವ ॥ ಗೊಂದಣದ ಹಮ್ಮಿಕ್ಕಳಿದ್ಧಸೆ । ಯಂವಣದ ಸಂದಣಿಗಳಲಿ ಸತಿ । ತಂಡವನಿಬರರಾಣಿ
ವಾಸವದಂಡಿಗೆಗಳಂದು ॥೯೯॥ ಉಡಿಗೆಗಳ ದೇಸಿಯುವಿಳಾಸದ । ತೊಡಿಗೆಗಳ ಮೌಳಿಯ ನವಾ
ಯಿಯ ಮುಡಿಗಳೆಪಬಲದೋರೆನೋಟದ ಬಳ್ಳಿವೆಳಗುಗಳ ॥ ಕಡುಬೆಮರತನುಪಮುಳದೊಳೆಪ ।
ವಿಡವಗಗನೋದರದ ಗರುವೆಯ । ರಡಸಿದರು ದ್ರುಪದಾತ್ಮಜೆಯ ದಂಡಿಗೆಯ ಬಳಸಿನಲಿ ॥೧೦೦॥
ಭೂರಿಭೇರಿವಾದ್ಯರವಕ್ಕೆ । ತಾರಗಳ ಕಳಕಳದೊಳಡಗಿತು । ನಾರಿಯರ ನೇವುರದ ಮೊಳಗಿನೊಳದ್ದು
ದಾರಭಸ ॥ ಆರು ಹೊಗಳುವರಾವಿಭವವಿ । ಸ್ತಾರಪಣಾವನು ಪಯಣಗತಿಯಲಿ । ಭೂರಮಣನೈತಂದು
ಹೊಕ್ಕನು ಹಸ್ತಿನಾಪುರವ ... ... ... ... ... ॥೧೦೧॥

**ಅಂತು ಸಂಧಿ ೧೨ ಕ್ಕೆ ಪದ ೩೬೪ ಕ್ಕಂ ಮಂಗಳಮಸ್ತು.**

ವರು ತನ್ನ ಕೆಳದಿಯ ರಿಂದ ತರಿಸಿದಳಾರತಿಯನುಪ್ಪಾರತಿಯನೊಲಿದು ॥ ಚಂದ ವಿಗೆ ಸಾವಿರದ ಸಂಖ್ಯೆಯ । ಬಂದುಮುಖಿಯರ ತಳಿಗೆಯಾರತಿ । ಸಂದಣಿಸಿದವು ಜಯಸಬುದ ಘೋಳೆಂಪಿಸಿದುದಂ ಬರವ ॥೧೧॥ ಅರಸಿ ಕಾಣಿಸಿಕೊಂಡಳೀನೃಪ । ರರಸಿಯನು ಸುಕುಮಾರಕರನವ । ರರಸಿಯರ ಸಖಿಯರ ವಿಳಾಸಿನಿಯರ ಪಸಾಯ್ತೆಯರ ॥ ತರಿಸಿ ಕೊಟ್ಟನು ಬೇರೆಬೇರೆನಿ । ಬರಿಗೆ ಯುಡುಗೊರೆಗಂಧಮಾಲ್ಯಾ । ಭರಣವನು ರಾಜೋಪಚಾರವಿಳಾಸವಿಭವದಲಿ ॥೧೨॥ ಬೀಳುಕೊಟ್ಟಳು ಬಳಿಕ ಕುರುನೃಪ । ನಾಲಯಕೆ ಕರೆದೊಯ್ದು ಕುಂತಿಯ । ಕಾಲಿಗೆರಗಿದನಿವರನುಚಿತೋಕ್ತಿಯಲಿ ಮನ್ನಿಸಿದ ॥ ಬಾಲಮೃಗವೊಳಗಾಯ್ತಲಾ ತೊಡು । ಕೋಲನೆಂದರು ನಗುತ ಮನದಲಿ ಖಳಿಕವಕುಹಕಿಗಳು ಕೌರವರಾಯಶಕುನಿಗಳು ॥೧೩॥ ಖಳರ ಹೃದಯದ ಕಾಳಕೂಟದ । ಹಳಕು ಬಲ್ಲರೆ ಮಾನ್ಯರವದಿರ । ಲಲಿತಮೃಷ್ಟರವಟ್ಟೋವಿಳಾಸಕೆ ಮರುಳುಗೊಂಡರಲೆ ॥ ಅಳುಪಿದೊಡೆ ಮಧುಕರನಮರಿ ಜೊ । ಬ್ಬಲಿಯವನದೊಳಗೇನಹುದು ನೃಪ । ತಿಲಕರಿದ್ದರು ಬೇರೆ ರಚಿಸಿದರಾಜಭವನದಲಿ ॥೧೪॥ ಬಂದು ಕಂಡುದು ನಿಖಿಳಪುರಜನ । ವಂದು ಕಾಣಿಕೆಯಿತ್ತು ಕೌರವ । ನಂದನರು ಸಚಿವರು ಪಸಾಯ್ತರು ಯೋಗಿಮಂತ್ರಿಗಳು ॥ ಸಂದಣಿಸಿದುದು ಕವಿಗಮಕಿಸಟು । ವಂದಿಮಾಗಧಮಲ್ಲಗಾಯಕ । ವೃಂದದೀನಾನಾಥರೋಲಗಿಸಿದರು ಧರ್ಮಜನ ॥೧೫॥ ಆದಿವಸವನು ಮಧುರಗೇಯವಿ । ನಾದದಲಿ ಕವಿವಾದಿವಾಗ್ಮಿವಿನೋದದಲಿ ನೂಕಿದರು ಮಜ್ಜನಭೋಜನಾದಿಯಲಿ ॥ ಆದುದುತ್ಸವವಂದಿನಿರುಳಾದಿ । ನಾದಿಯಲಿ ಕಂಡನು ಕನಸ ಪಾ । ಸಾದಶಿಖರವು ಮುರಿದು ಬಿದ್ದುದನಡವಿಮಧ್ಯದಲಿ ॥೧೬॥ ಅರಸನುಪ್ಪವಡಿಸಿದನವನೀಶ್ವರವಿಚಿತ್ರಸತ್ಕ್ರಿಯಗಳನು ವಿಸ್ತರಿಸಿದನು ದುಸ್ವಪ್ನ ಕುಂತವಿಭಿನ್ನ ಚೇತನನು ॥ ಕರೆಸಿ ಧೌಮ್ಯನಿಗರುಹಲತಿಪು । ಸ್ತರದ ಕನಸಿದು ಶಾಂತಿಕರ್ಮವ । ಪುರದೊಳಗೆ ವಿರಚಿಸುವೆನೆಂಬದಿರೆಂದನಾಮುನಿಪ ॥೧೭॥ ಪುರದೊಳೆಲ್ಲಿಯ ಶಾಂತಿ ನಾರದ । ನೊರೆದನುತ್ಪಾತಪ್ರಬಂಧದ । ಹೊರಗೆಯನು ನಿಮ್ಮಿರಿಸಿರಿಯವಿಧ್ವಂಸಕರನೆಂದು ॥ ಇರುಳು ನಾನಾಸ್ವಪ್ನ ಕಾನನ । ಗಿರಿಪರಿಭ್ರಮಣೈಕಚಿಂತಾ । ಭರಿತನಾದೆನು ದೈವಕೃತಪ್ರಭಾಗ್ಯವಿದೆನಗೆಂದ ॥೧೮॥ ಜನಪ ಕಳುಹಿದದೂತರಿವರರ । ಮನೆಗೆ ಬಂದರು ಜೀಯ ಧೃತರಾ । ಷ್ಟ್ರನಸಮಯಪಾಯಿತ್ತು ನಿಮ್ಮಡಿ ಪಜಯಮಾಡುವದು ॥ ಎನಲು ತನ್ನ ಕುಮಾರರನುತ । ನ್ನನುಜರನು ಸಚಿವಪ್ರಧಾನರ । ನನಿಬರನು ಕರೆಸಿದನು ನೃಪ ಹೊರವಂಟನರಮನೆಯ ॥೧೯॥ ಬಂದು ಧೃತರಾಷ್ಟ್ರನ ಪದಾಬ್ಜಕೆ । ವಂದಿಸಲೊಡನಪ್ಪಿ ನೆಬಾರ್ರೆ । ತಂದೆಬಾರೆಂದೆಳೆದು ಕುಳ್ಳಿರಿಸಿದನು ಮಂಚದಲಿ ॥ ನಂದನರು ಭೀಮಾರ್ಜುನಾದಿಗ । ಳಂದು ಪರಿವೇಷ್ಟಿಸಿದರಿತ್ತಲು । ಕಂದುಹೃದಯದ ಕೌರವೇಂದ್ರನಪದನ ಕೇಳೆಂದ ॥೨೦॥ ಕರೆಸಿದನು ಶಕುನಿಯನು ಕರ್ಣನ । ಗರುಹಿದನು ಸ್ತಂಭವನನೆಕ್ಕಟಿ । ಗರೆದು ಹೇಳಿದ ಕೃತ್ರಿಮದ ಹಾಸಂಗಿಗಳ ರಚಿಸಿ ॥ ಹರಸಿ ಕೊಂಡರು ಗಣಪಯಕ್ಷಿ । ಸ್ಥಲ ಕಳಾವತಿ ದುರ್ಗಭುವನೇ । ಶ್ವರಿಗಳಿಗೆ ವಿವಿಧೋಪಚಾರದ ಬಲಿವಿಧಾನದಲಿ ॥೨೧॥ ಮ್ಯಾತಸಿದ್ಧಿಯ ಮಂತ್ರವರವಿ । ದ್ಯಾತಿಶಯವಿಚ್ಛೇದರಕ್ಷವಿ । ಘಾತರಿಪುಮತಿಯಂತ್ರಪರಸನ್ಮೋಹನೌಷಧಿಯ ॥ ಈತಗಳು ಮೇಳವಿಸಿದರು ನಿ । ರ್ಭೀತರಿವರಿದನೆತ್ತ ಬಲ್ಲರು । ಕೈತವದ ಕಣಿ ಕೌರವೇಶ್ವರ ಬಂದನರಮನೆಗೆ ॥೨೨॥ ಚಿತ್ತವಿಸಿದಿರೆ ಬೊಪ್ಪ ಮಾಯನಿವ । ಗಿತ್ತಸಭೆಯದು ದೇವನಿರ್ಮಿತ ।

ವೆತ್ತಮಾನವಕರ್ಮವೆತ್ತಲು ಸರಸವಲ್ಲದಕೆ ॥ ಇತ್ತನಿಮ್ಮಡಿ ಮಾಡಿಸಿದಸಭೆ । ಯೆತ್ತ ಬಿಜಯಂಗೈದು ನೋಡಿದೊ । ಡುತ್ತಮವಲಾಯೆಂದನಾದುರ್ಯೋಧನನು ನಗುತ ॥೨೩॥ ಆಸಭೆಯ ನೋಡುವೆವು ಶಿಲ್ಪದ । ದೇಸಿಗಾರರ ಕೈಮೆಗಳು ಲೇ । ಸೈಸಲೇ ಬೇರೇನು ಮಾನುಷದೈವಕೃತಿಯೆಂದು ॥ ಈಸುಸಂಪ್ರಯನಮ್ಮಲುಂಟೇ । ಲೇಸೆನುತ ನೃಪನೆದ್ದು ಕೈಗೊಡ । ಲಾಸಭೆಗೆ ಧೃತರಾಷ್ಟ್ರ ಬಂದನು ರಾಜಗಣಸಹಿತ ॥೨೪॥ ಬಗಿದನೀಲದಸರಿಯನೆಲಗ । ಟ್ಟುಗಳವೈಡೂರಿಯದ ಮಣಿಭಿ । ತ್ತಿಗಳ ವಜ್ರವವೇದಿಗಳ ವಿದ್ರುಮದಲೋವೆಗಳ ॥ ಜಗೆಯಲಹರಿಯ ಜಾಳಿಗೆಯ ಪ । ಚ್ಚೆಗಳಪಾಗಾರದ ಸುರತ್ನಾ । ಳಿಗಳಲೆಸೆದುದು ರಾಜಸಭೆ ತತ್ಕ್ರೋಶಮಾತ್ರದಲಿ ॥೨೫॥ ಕವಿದುವರುಣಾಂಶುಗಳ ಲಹರಿಯ ಲವಣಿ ಲಾವಣಿಗೆಯಲಿ ನೀಲ । ಚ್ಛವಿಯ ದೀಧಿತಿ ಝಳಪಿಸಿತು ದೆಸೆದೆಸೆಯ ಭಿತ್ತಿಗಳ ॥ ತಿವಿದುವೆಳಮುತ್ತುಗಳ ಚಂದ್ರಿಕೆ । ಜವಳಿಸಿದವೊಂದೊಂದನೌಕಿದ । ವಿವಗಳಿತಮಣಿಕಿರಣವೇಣೀಬಂಧಬಂಧುರವು ॥೨೬॥ ಅಲ್ಲಿ ವಿಮಳೋದ್ಯಾನವೀಧಿಗ । ಳಿಲ್ಲಿ ತಾವರೆಗೊಳದ ರಚನೆಗ । ಳಿಲ್ಲಿ ಹಂಸಮಯೂರಮಧುಕರ ಶುಕಪಿಕಾನೀಕ ॥ ಅಲ್ಲಿ ಕೇಳೀಶೈಲ ಹಿಮಗೃಹ । ವಲ್ಲಿ ವಿವಿಧವಿಳಾಸರಚನೆಗ । ಳಿಲ್ಲಿ ಹೊಯ್ಕಯ್ಯೆನಿಸಿ ಮೆರೆದುದು ಪಾಂಡವರ ಸಭೆಯ ॥೨೭॥ ಸ್ಥಳವನೇ ಜಲವೆಂದು ನಿರ್ಮಳ । ಜಲವನೇ ಸ್ಥಳವೆಂದು ಬಾಗಿಲ । ನೆಳಲ ಭಿತ್ತಿಯ ಹಾಯ್ದು ಬಾಗಿಲ ಭಿತ್ತಿಯೆಂಬಳೆದು ॥ ಕಳವಳಿಸುವನೆ ಧರ್ಮಸುತನಾ । ಕೊಳನನೇ ಕೊಳನೆಂದು ಬಾಗಿಲ । ನೆಳಲ ಹೊಗಳುತ ಬಂದು ಹೊಕ್ಕನು ಬಹಳಚೌಕಿಗೆಯ ॥೨೮॥ ಕೆಲಸದಲಿ ಶಿಲ್ಪದಲಿ ರತ್ನಾ । ವಳಿಯ ಘಾಟನವಾಯದಲಿ ಸಭೆ । ಯೊಳಗಪೂರ್ವವಲಾ ಮಹಾದೇವೆಂತು ರಚಿಸಿದರೋ ॥ ವಿಳಸದಾಯವ್ಯಯದ ವಿಶ್ರುತ । ವಳಯದುನ್ನತವಾಸ್ತುಲಕ್ಷಣ । ದೊಳಗೆ ಸೇರಿದುದೆಂದು ನೃಪ ಕೊಂಡಾಡಿದನು ಸಭೆಯಾ ॥೨೯॥ ಸೂಸಕದಮುತ್ತುಗಳ ತಾರಾ । ರಾಶಿಗಳ ಹಬ್ಬುಗೆಯ ನೀಲದ । ಹಾಸರಗಳೇ ಹೋಲುತಿದ್ದುವು ಗಗನಮಂಡಲವ ॥ ಸೂಸಕಂಗಳ ಮುಂದ ಮುತ್ತಿನ । ದೇಸಿಕಾತಿಯರಾನನೇಂದುಗ । ಳಾಸುಧಾಕರವನಲು ಗೆಲಿದುದು ಸಭೆ ನಭಸ್ಥಳವ ॥೩೦॥ ಗುರುನದೀಸುತಕರ್ಣಸೈಂಧವ । ಗುರುತನುಜಭಗದತ್ತ ಬಾಹ್ಲಿಕನುರುಯವನಸೌವೀರಕ ಸಲಚ್ಛೈದ್ಯಮಾಗಧರು ॥ ಅರಸುಗಳು ನಾನಾದಿಗಂತದ । ಧರಣಿಪರು ಸಚಿವರು ಪಸಾಯ್ತರು । ನೆರೆದು ದಂಟನಬಿಟವಸದೋಲಗದೊಡ್ಡು ಚೆಲುವಾಯ್ತು ॥೩೧॥ ಧರಣಿಪತಿ ಕೇಳೊಂದುಹರಿಯಂತರ ವಿಶಾಲಮಹಾಸಭಾವಿ । ಸ್ತರಣವದರಲಿ ತೆರಹ ಕಾಣೆನು ತೀವಿತವನಿಪರು ॥ ಹೊರಗೆ ರಾವುತರು ರಥದವರು ಜೋ । ದರು ಪದಾತಿಗಳಿದ್ದುದಂದಿನ । ಸಿರಿ ಸುರೇಂದ್ರನ ಪಾಡಿಗೈವಡಿ ಹತ್ತುಮಡಿಯೆಂದ ॥೩೨॥ ಒಂದುಕಡೆಯಲಿ ಕವಿಕೆಯ ಜಾ । ಣೊಂದುಕಡೆಯಲಿ ಗದ್ಯಪದ್ಯವ । ದೊಂದುಕಡೆಯಲಿ ವಾರವಧುಗಳ ಸಾರಸಂಗೀತ ॥ ಒಂದುಕಡೆಯಲಿ ತರ್ಕಗೋಷ್ಠಿಯ । ದೊಂದುಕಡೆಯಲಿ ಕೌರವೇಂದ್ರನ । ಮುಂದೆ ಜಡಿದುದು ರಭಸಹಾಸಂಗಿಗಳ ಸಾರಿಗಳ ॥೩೩॥ ಅಡಲರಿಯನುಗಡ ಯುಧಿಷ್ಠಿರ । ನಾಡುವೊಡೆ ಬರಹೇಳು ಮೇಣಾ । ನೋಡುತಿರಲಾವಾಡುವೆವು ಸಭೆಯಲಿ ವಿನೋದದಲಿ ॥ ಖೋಡಿಯಿಲ್ಲದಸರಸನೆತ್ತವ । ನಾಡಲರಿಯದನೃಪತಿ ಮೃಗವೆಂ । ದಾಡುತಿಹರರಿವವರು ತಾವಲ್ಲೆಂದನಾಶಕುನಿ ॥೩೪॥ ಅಹುದು ಹೊಲ್ಲೆಹವಾವುದಾಡಲು । ಬಹುದು ಸುಜನರಕೂಡೆ ನೀವೇ । ಕುಹಕವಿದ್ಯಾ

ಸಾರ್ವಭೌಮರು ಶಕುನಿ ಕೌರವರು ॥ ಸುಹೃದಯರಿಂಗತಿಕುಟಿಲರಲಿ ನಿ । ಸ್ಪೃಹರಿಂಗಿತಿರಾಗಿಗಳೊಡನೆದು । ಸ್ಪೃಹಕರಾ ಸಂವ್ಯೋಳವೆಂದನು ಧರ್ಮಸುತ ನಗುತ ॥೩೫॥ ನೀವು ಸುಹೃದಯರಿಂದು ದುರ್ಜನ । ರಾವು ನೀವ್ನಿರಾಗಿಗಳು ರಾ । ಗಾವಲಂಬರು ನಾವಲೇ ನೀವಲಿಯರೇ ನಿಜವ ॥ ನೀವು ನಾವೆಂಬೀಪೃಥಗ್ಭಾ । ವಾವಲಂಬನವೇಕೆ ನಿಮ್ಮಲಿ । ನಾವು ನಮ್ಮಲಿ ನೀವೆಯೆಂದನು ನಗುತ ಕುರುರಾಯ ॥೩೬॥ ಇರಲಿ ಬಾಂಧವರಿದರೊಳಿರದಿ । ಟ್ಟರದೆ ನಿಲಲದು ಲೇಸಲಾ ವಿ । ಸ್ತರಿಸಲೇಕೈ ದ್ಯೂತದುರ್ವ್ಯಸನಪ್ರಪಂಚವಿದು ॥ ತರುಣಿವಿಟಚಾರಣಕುಶೀಲಕ । ಭರತಗಣಿಕಾಯೋಗ್ಯವಿಷಯಕೆ । ಗರುವರೊಲಿವರೆ ಯೆಂದನಾಕುರುಪತಿಗೆ ಯಮಸೂನು ॥೩೭॥ ದ್ಯೂತವಿದು ದುರ್ವ್ಯಸನವೆಂಬವ । ನೀತಿವಿದನೇ ಶ್ರೋತ್ರಿಯರಿಗ । ಖ್ಯಾತಿಯದು ಯತಿಗಳಿಗೆ ಮೋಕ್ಷಾರ್ಥಿತಭೂಪರಿಗೆ ॥ ದ್ಯೂತವ್ಯಗಯಾಸ್ತ್ರೀವ್ಯಸನ ನೃಪ । ಜಾತಿಗೋಸುಗವಾದುವಿದರ ರ । ಸಾತಿಶಯವರಿಯದನ ನರಪ್ಶುಗವೆಂದನಾಶಕುನಿ ॥೩೮॥ ಅರಸ ಕೇಳ್ಪಾಳಗಕೆ ಜೂಜಿಗೆ । ಕರದೊಡಮ್ಮೊಸರಿಸಿದೊಡ ಬಳಿಕವ । ಗರುವನೇ ಕ್ಷತ್ರಿಯರೊಳಗೆ ನೃಪಧರ್ಮ ನೀನರಿಯ ॥ ಕರೆದವಾವ್ ಜೂಜಿಂಗೆ ಬೇಕೇ । ಧರಣಿಪತಿ ಬಾ ರಾಜಧರ್ಮವ । ನೊರೆಸುವೊಡಿನಿಲ್ಲೆಂದು ಹೇಸ್ತಿಸಿ ನುಡಿದನಾಶಕುನಿ ॥೩೯॥ ರಾಜಧರ್ಮವಿದಹುದು ಕಳವಿನ । ಜೂಜು ಧರ್ಮದವಗನೊ ಮೊಮ್ಮನೊ । ಬೀಜವಾವುದು ನಿಮ್ಮ ಕಪಟದ್ಯೂತನಿರ್ಣಯಕೆ ॥ ರಾಜಪರಿಪಾಟಿಗಳ ಪಂಥದ । ಜೂಜಬಲ್ಲೊಡ ಕರೆಯ ಬಾರದೆ । ಪಾಟಿಸಾರ್ದನನಾಣೆ ಯೆಂದನು ಧರ್ಮನಂದನನು ॥೪೦॥ ಭೂರಮಣ ಕೇಳುಳನೃಪಸಂ । ಹಾರಬೀಜದ ಕರ್ಮಫಲಸಂ । ಸ್ಕಾರವಳ್ಳೆಯನಿರದು ನೂಕಿತು ಧರ್ಮನಂದನನ ॥ ಧೀರನಲ್ಲಾ ಧರ್ಮಶಾಸ್ತ್ರವಿ । ಚಾರಸಾರಜ್ಞಾನನಿಷ್ಠೆಯೊ । ಛೋರೆಯುಂಟೇ ದ್ಯೂತಕೇಳಿಗೆ ಮಾಡಿದನು ಮನವ ॥೪೧॥ ಇಂದುವದನೆಗೆ ದಕ್ಷಿಣಾಕ್ಷಿ । ಸ್ಪಂದವಾಯಿತು ಭೀಮಪಾರ್ಥರ । ಗಂದು ಕತ್ತಿತು ಹೃದಯ ವಾಮಭುಜಾಕ್ಷಿಗಳಸಹಿತ ॥ ಕಂಟದವು ಮೋರೆಗಳು ಗಂಗಾ । ನಂದನದ್ರೋಣಾದಿಸುಜನರ । ಗಂದವೇರಿತು ಮುಸುಡು ಶಕುನಿಸುಯೋಧನಾದಿಗಳ ॥೪೨॥ ಕುರುಪತಿಯ ಕೃತಪುಣ್ಯಬೀಜಾಂ ॥ ಕುರದ ಕಾಲದಿಗಂತದವನೀ । ಶ್ವರಸಮೂಹಚಮೂನಿಬರ್ಹಣಸೂಚನಾಸಮಯ ॥ ಅರಸಕೇಳ್ಕುಂತೀಕುಮಾರರ । ಸಿರಿಯ ಮಗುಡದ ಹೊತ್ತು ಪಿಗೆ ಗಬ್ಬರಿಸಿತ್ತೈ ಧರ್ಮಜನ ಗಾಢದ ಬುದ್ಧಿಪರ್ವತವ ॥೪೩॥ ವ್ಯಸನತೃಷ್ಣೆಯು ಕೇಳು ಚಿತ್ತದ । ಪಿಸುನಿಯೊಳು ಬೆರಸಿತು ಸುಬುದ್ಧಿಯ । ರಸವು ಹಾರಿತು ಹುದಿದರಾಗದ್ವೇಷವಹ್ನಿಯಲಿ ॥ ಮುಸುಡ ತಿರುಹಿತು ತಿಳಿವ ಲಜ್ಜೆಯ । ದೆಸೆಗೆ ದುರ್ಘಟವಾಯ್ತು ಪರಿಭವ । ದೊಸಗೆಯನು ಸೂಚಿಸಿತು ಲಕ್ಷ್ಮಿಗೆ ಧರ್ಮಜನ ಹೃದಯ ॥೪೪॥ ಹಲವುಮಾತಿನಲೇನು ಭೂಪತಿ । ತಿಲಕನಿಲುಕಿದನವದಿರೊಡ್ಡಿದ । ಬಲೆಗೆ ಬಂದನು ಸತ್ಯಸಾರಿಯ ಗುರಿಯ ಗದ್ದುಗೆಗೆ ॥ ಕೆಲದಲನುಜರು ವಾಮದಲಿ ಮಣಿ । ವಳಯಮಂಚದಲಂಧನೃಪನಿದಿ । ರಲಿ ಸುಯೋಧನಕರ್ಣಶಕುನಿಜಯದ್ರಥಾದಿಗಳು ॥೪೫॥ ಹಲಗೆಯಿಕ್ಕಿತು ಹೊನ್ನಸಾರಿಗ । ಳಿಳುಹಿದವು ಹೇಳೊಡ್ಡವನು ಕಳ । ಕಳವ ನಿಲಹೇಳೆನುತ ಪಿಗೆ ಗರ್ಜಿಸಿದನಾಶಕುನಿ ॥ ನೆಲಕೆ ಹಾಯ್ಕಿದನಡಿಗಡಿಗೆ ಮುಂ । ಡಳಿಸಿ ಸಾರಿಯ ಹೂಡಿ ಕುರುಪತಿ । ಗೆಲಿದ ಹೋಗೆಂದುಪದರುಂಜಿನ್ಪನು ತೊಡೆಯನಪ್ಪಳಿಸಿ ॥೪೬॥ ಆಟವಾರಂಭಿಸದು ಏರಿಬೊ । ಬ್ಬಾಟವೇತಕೆ

ವಿಜಯಸಿರಿವಾ । ಚಾಟರಿಗೆ ಮೆಚ್ಚುವಳೆ ತೋರಾ ದ್ಯೂತಕೌಶಲವ ॥ ತೋಟಿ ಬೇಕೇ ಕೈಯಹೊಯ್ಲ್ವಾ ತಾಟಿವೇತಕೆ ಧರ್ಮನಂದನ । ನಾಟಿವೊಳ್ಳಿತು ಬಲ್ಲೆನೆಂದನು ಶಕುನಿ ನಸುನಗುತ ॥೪೭॥ ಏನ್ನ ಲೆಕ್ಕಕೆ ಶಕುನಿ ಭೂಪತಿ । ನಿನ್ನೊಡನೆ ಕೈಹೊಯ್ದು ನೊಡ್ಡುವ । ನೆನ್ನೊಡನೆ ಹೇಳೆಂದು ನುಡಿದನು ಕೌರವರರಾಯ ॥ ನಿನ್ನೊಳಾಗಲಿ ನಿನ್ನ ಮಾವನೆ । ಮುನ್ನ ಬರಲಿದಕೇನೆನುತ ಸಂ । ಪನ್ನ ಶಕುನಿಯೊಡನೆಳವಿಗೊಟ್ಟವನೀಶನಿಂತೆಂದ ॥೪೮॥ ಹೇಮಭಾರದ ವಿಮಲರತ್ನದ । ಸ್ತೋಮವಿದೆ ಪಣವೆನಲು ಕೌರವ । ಭೂಮಿಪತಿಯೊಡ್ಡಿದನು ಧರ್ಮಜಹೆಸರಿಸಿದಧನವ ॥ ಅಮಹಿಪಶಕುನಿಗಳು ಸಾರಿ । ಗಾ್ರಮವನು ಕೆದರಿದರು ತಿವಿದಾಡು । ದಾಮಸಗಳುಬ್ಬಿದ್ದುಬ್ಬರ ಕರಣವೃತ್ತಿಗಳು ॥೪೯॥ ರಂಗನ ಹಾಯ್ಕು ತನಗೆ ಹಾಯ್ಕು । ಶೃಂಗನವೆಂಟುಬ್ಬರದ ಹಾಸಂ । ಗಗಳ ಬೊಬ್ಬೆಯ ಸಾರಿಗಳ ಮುಖನಿಸ್ವನವ ॥ ಉರಿಗಿವನೆಗಳ ಬಳಿದು ಹಾರಿದ । ಬಿಗುಹುಗಳ ಬೀಟಗಳ ತಳಿಸಾ । ರಿಗಳ ಧಾಳಾಧೂಳಿ ಮಸಗಿತ್ತು ಭೂಪಕೇಳೆಂದ ॥೫೦॥ ರಾಯ ಸೋತನು ಶಕುನಿಬೇಡಿದ । ದಾಯ ತಪ್ಪುಗೆಯಲೊದಗಿದ । ವಾಯತದ ಕೃತ್ರಿಮವಲೇ ಕೌರವರ ಸಂಕೇತ ॥ ಆಯಿತೀ ಹಲಗೆಯನು ಕೌರವ । ರಾಯ ಗೆಲಿದನು ಮತ್ತೆ ಪಣವೇ । ನಾಯಿತೆಂದನು ಶಕುನಿ ಯಮನಂದನನನೀಕ್ಷಿಸುತ ॥೫೧॥ ಕನಕಮಯರಥವೆರಡುಸಾವಿರ । ವೆಸಗೆ ಹೂಡಿದವೆಂಟುಸಾವಿರ । ವಿನುತವಾಜಿಗಳೊಡ್ಡವೆಂದನು ಧರ್ಮನಂದನನು ॥ ಜನಪತಿಗೆ ತಾನ್ಯೆಸಲೇ ಹಾ । ಯ್ಕನುತ ಸಾರಿಯ ಕೆದರಿದನು ದು । ರ್ಜನರಿಗೊಲಿದುದು ದೈವಗಲಿ ಬೊಬ್ಬಿರಿದನಾಶಕುನಿ ॥ ಸೋತೆಯರಸಾ ನಿನಗೆ ಜೂಜಿನ । ಭೀತಿಯುಂಟೇ ಮಾಣು ಮೇಲಣ । ಧಿರ್ರತನ ನುಡಿ ಮೇಲಣೊಡ್ಡವ ಹಲವುಮಾತೇನು ॥ ಕಾತರಿಸಬೇಡೆನಲು ಧಡ ಪಣ । ಭೀತನೇ ನಾನಕಟನುತ ಕುಂ । ತೀತನುಜ ನೊಡ್ಡಿದನು ಸಾವಿರಮತ್ತಗಜಘಟೆಯ ॥೫೩॥ ಮದುವಮಗವು ಗಜಘಟೆಗಳೆಂ । ದಾದುರಾತ್ಮಕನಾಡಿದನು । ದುರ್ಭೇದಪವಿದರ ಕಪಟಮಂತ್ರವನಾವನರಿವವನು ॥ ಆದುದರಸರ ಸೋಲವಿನ್ನೇ । ನಾದುದೈ ಭೂಪತಿಯ ಗಜಘಟೆ । ಹೋದವೇ ಮೇಲೇನು ಪಣವುಂಟೆಂದನಾಶಕುನಿ ॥೫೪॥ ಧಡ ದರಿದ್ರನೆ ತಾನು ತನ್ನಯ । ಮಡದಿಯರ ಕೆಳದಿಯರು ಸಾವಿರ । ಮಡಿ ಸುಯೋಧನರಾಜಭವನದ ದಾರನಾರಿಯರ ॥ ನುಡಿಯಬೇಕೇ ಧರ್ಮಸುತ ನಿಂ । ಮಡಿಗಳೊಡ್ಡಿದಬಳಿಕ ಗೆಲಿದವ । ರೊಡವೆಯೈಸಲೆ ಹಾಯ್ಕುಹಾಯ್ಕೆಂದೊದರಿದನು ಶಕುನಿ ॥೫೫॥ ಏನನಾಡಿದೊಡೇನುಫಲ ದೈ । ವಾನುಕೂಲ್ಯದ ಕಣಿಕೆ ಬೇರಹು ದಾನರೇಂದ್ರನ ಸಾರಿ ಸೋತುದು ನಿಮಿಷಮಾತ್ರದಲಿ ॥ ಆನಿರೂಥಿಯ ಹತ್ತುಸಾವಿರ । ಮಾನಿನಿಯರಸು ಮತ್ತೆ ಸೋತನು । ಮಾನನಿಧಿಯೇ ಮತ್ತೆ ಪಣವೇನೆಂದನಾಶಕುನಿ ॥೫೬॥ ಅರಮಿಯರ ಮೈಗಾಹುಗಳ ಕಿಂ । ಕರರು ಸಾವಿರವಿದೆ ರಮಣನಿ । ಮ್ಮರಸನಲಿ ಪಣವೇನೆನಲು ನೀವೇನನೊಡ್ಡುಟರಿ ॥ ಮರಳಿ ಬೆಸಗೊಳಬೇಡ ನಮ್ಮಲಿ ಬರಹವದುಹಾಯ್ಕೆನುತ ಸಾರಿಯ । ಬರಸಿ ತಿವಿದಾಡಿದನು ಹೆಕ್ಕಳಪಿಕ್ಕಿದನು ಶಕುನಿ ॥೫೭॥ ಅರಸ ಸೋತೈ ಸಾರಿಯರ ಜಯ । ಮರಳಿತಿತ್ತಲು ಮನಕೆ ಭೀತಿಯ । ಬೆರಕೆಯುಳ್ಳೊಡೆ ಬಿಟ್ಟುಕಳೆ ಧೈಸರಕೆ ಸಮಯವಿದು ॥ ಅರಸುಪಂಥದವಾಸಿ ಮನಕೆ । ಬ್ಬರಿಸುವೊಡೆ ಪಣವೇನು ಹೇಳೈ । ಧರಣಿಪಾಲ ಯೆನುತ್ತ ರಂಗಣಗುಣಿದನಾಶಕುನಿ ॥೫೮॥ ಎಲವೊ ಸೌಬಲ ಪಾಂಡುವಿನವು । ಕ್ಕಳುಕಣಾ ಚತುರಂಗನಿಧಿಮೇ । ಖಳೆಯವೃತ್ತಿರೆ ಕಾರುಸರೇಂದ್ರರ ಸೇವೆಪರಿಯಂತ ॥ ನೆ

ಲವಿದೆಮ್ಮದು ನೃಪರೊಳಗೆ ನಾ । ವುಳಿಯೆ ಧರಣಿಪರಾರು ರಥಸಂ । ಕುಳವನೊಡ್ಡುವೆನೊಂದು ಭಾರಗೆ ಹತ್ತುಸಾವಿರವ ॥೫೯॥ ಈರಥಕೆ ಸಾಲ್ವತ್ತುಸಾವಿರ । ವಾರುವಂಗಳ ಕೂಟವಾಪರಿ । ವಾರವಿದೆಲಾ ರಪಣವೆಂದನು ಸುಬಲತನಯಂಗೆ ॥ ವೀರನಹೆಯ್ಯೆ ಧರಣಿಪತಿ ತೆಗೆ । ಸಾರಿಗಳ ಬಿಡುಸೆರೆಯ ಬಿಗಿದುದು । ಹಾರದಲಿ ನೀಸೋತೆ ಹೋಗೆಂದೊದರಿದನು ಶಕುನಿ ॥೬೦॥ ಆವಕಾಳಿಕಮಂತ್ರತಂತ್ರದ ಡಾವರದಡೆತೊಳ್ಳ್ಯಾಸವಿಕ್ಕಿದ । ದೀವಸದ ಬೇಳುವೆಯನೇನೆಂಬೆನು ಮಹೀಪತಿಯ ॥ ಆವವಸ್ತುವನರಸನೊಡ್ಡುವ । ಸಾವವಹಲದಲಾತ ಸೋಲಿಸಿ । ಕೈವಳಿಸಿದನೊ ಬಲ್ಲನಾವವನೆಂದನಾಮುನಿಪ ॥೬೧॥ ಅರಸ ನೀಗಿದೆ ಹತ್ತುಸಾವಿರ । ವರರಥವನಿನ್ನೇನು ಸಾಕೀ । ಸರಲಿ ನಿಲುವುದು ವಿತ್ತವುಂಟೇ ಮತ್ತೆ ಹೇಳೆನಲು ॥ ಮರುಳೆ ಸಬಲ ಚಿತ್ರಗಥನೀ । ನರಗೆ ಕೊಟ್ಟನು ತೇಜಿಗಳ ತಿತ್ತಿರಿಯಬಣ್ಣದ ಹತ್ತುಸಾಸಿರತುರಗವವೆಯಂದ ॥೬೨॥ ಆಡಿದನು ನೃಪಸಾಕ್ಷಣಕ ಹೋ । ಗಾಡಿದನು ಖೇಚರರ ಘಾಡಾ । ಖಾಡಿಯಲಿ ಘಡಿಸಿದ ಹಯವನು ಹತ್ತುಸಾವಿರವ ॥ ಹೂಡಿದನು ಸಾಲಗಳ ಮರಳಿ । ನ್ನಾಡುವೊಡೆ ಪಣವಾವುದೈ ವಾ । ತಾಡಿಯೆನೆ ಮನದಲಿ ಮಹೀಪತಿ ಧನವ ಚಿಂತಿಸಿದ ॥೬೩॥ ಅಗಣಿತದಧನವುಂಟು ಹಾಸಂಗಿಗಳ ಹಾಯಿಕು ಸೋತವಸ್ತುವ । ತಗೆವೆನೀಗಳೆ ಶಕುನಿ ನೋಡಾ ತನ್ನ ಕೌಶಲವ ॥ ದುರ್ಗೂಹಲಗೆಗೆ ಹತ್ತುಮಡಿರೇ । ಬಗೆ ಗಜಾಶ್ವನಿಕಾಯರಥವಾ । ಜಗಳುಸಹಿತಿದೆ ಸಕಲಸೈನಿಕವೆಂದನಾಭೂಪ ॥೬೪॥ ಆಯಿತಿದು ಪಣವಹುದಲೇ ನೃಪ । ಹಾಯಿಕಾಹಾಸಂಗಿಗಳ ಸಾ । ಹಾಯಕರು ಪತಿಗಿಲ್ಲ ಕೃಷ್ಣಾದಿಗಳು ನಿನ್ನವರು ॥ ದಾಯಕಂದರೆವೊಡೆ ಸುಯೋಧನ । ರಾಯನುಪಚಿತಪುಣ್ಯವಕಟಾ । ದಾಯವೇ ಬಾಯೆಂದು ಮಿಗೆ ಬೊಬ್ಬಿರಿದನಾಶಕುನಿ ॥೬೫॥ ಮತ್ತೆ ಹೇಳುವುದೇನು ಸೋಲವ । ಬಿತ್ತಿಬೆಳೆದನು ಭೂಪನವರಿಗೆ । ತೆತ್ತನೈ ಸರ್ವಸ್ವಧನವನು ಸಕಲಸೈನಿಕವ ॥ ಮತ್ತೆ ಪಣವೇನೆನಲು ಬಳಿಕರು । ವತ್ತುಸಾವಿರಕಲಕಳಭವಂ । ಭತ್ತುಸಾವಿರ ತುರಗ ಶಿಶುಗಳ ನೊಡ್ಡಿದನು ಭೂಪ ॥೬೬॥ ಅರಸ ಕೇಳೀತುರಗಪೇರಥ । ಕರಿನಿಕರಪೇಸ್ಸೈನ್ಯಹಸ್ತಿನ । ಪುರಗೆ ಬಂದುದು ತಮ್ಮ ಕೂಡೆ ವಿನೋದಕೇಳಿಯಲಿ ॥ ಕುರುಪತಿಯವಶವಾಯ್ತು ಬಳಿಕಿನ । ಮರಿಗುದುರೆಮರಿಯಾನೆಗಳನು । ಚ್ಚರಿಸಿ ಸಾರಿಯ ಸೋಕಿದಾಗಲೆ ಸೋತನಾಭೂಪ ॥೬೭॥ ಅಕಟ ಸಾಲದೆ ಜೂಜುನಿರ್ಬಂ । ಧಕವೆ ತಿವತಿವ ತಾನಿದೆತ್ತಣ । ಶಕುನಿಯೆತ್ತಣಭರತಕುಲದಮಹಾಮಹೀಶ್ವರರು ॥ ವಿಕಳಚೇಷ್ಟೆಯದೇನು ವೃದ್ಧಪ್ರಕರಕಿದು ವಿಳಸವೆ ವಿಘಾತಿಗೆ । ಸಕಲಜನಸಮ್ಮತವೆಯೆಂದನು ಖಾತಿಯಲಿ ವಿದುರ॥೬೮॥ ವರಪುರೂರವನಹುಷನವನೀ । ಶ್ವರತಿಲಕದುಷ್ಷಂತಕುರುಸಂ । ವರಣನಮಲಯಯಾತಿಯಾದಿಪರಂಪರಾಗತದೇ॥ ಭರತಕುಲವಿದರೊಳಗೆ ವಂಶೋದ್ಧರರಿಳೆಯಬೆಳಗಿದರು ನೀನವತಂಸಿ ತಂದೈ ತೊಡಕನೆಂದನು ಖಾತಿಯಲಿ ವಿದುರ ॥೬೯॥ ಸೋಲಮುಚ್ಚಿದುಬವರನೊಡ್ಡದ । ಮೇಲೆ ಹೇಳುದುದೊಡ್ಡವೀಗಳು । ಮೇಲುಗೈ ನೀನಾದೆ ಕುಸಿದರು ಪಾಂಡುನಂದನರು ॥ ಸೋಲವಿದು ಕಾಲಾಂತಕನ ವೈ । ಸಾಲ ಸಾಲದೆನಕಟಸಾಕಿ ನ್ನೇಳು ಕೌರವನೃಪತಿಯೆಂದನು ಖಾತಿಯಲಿ ವಿದುರ ॥೭೦॥ ಗೆಲಿದಧನವಕ್ಕುವುದೆ ಸೋತವ । ರಳುಕಿದವರೇ ಪಾಂಡುಪುತ್ರರ ಬಲುಹ ಬೆಸಗೊಳ್ಳ ತದೀಯಶ್ರವಣದೃಷ್ಟಿಗಳ ॥ ಎಲೆಸುಯೋಧನ ವಿಷದಮಧುರವು । ಕೊಲುವುದೋ ಮನ್ನಿಸುವುದೋ ಕ । ಕ್ಕಲಿತೆಗಿದು ಕಥೆಹಾರವಾಗಲಿ ಸಾಕು

ತೆಗೆಯೆಂದ ‖೭೧‖ ಗೆಲಿದದರ್ಪದದಡ್ಡಿ ತೆಗೆ ಸೌ । ಬಲನ ಬೀಳ್ಕೊಡು ನಿಖಿಲಬಾಂಧವ । ಕುಲಸಹಿತ ನೀ ಮಧುರವಚನದಲಿವರ ಸಂತೈಸು ‖ ನೆಲನನೀಕಚ್ಛತ್ರವಲಿ ಪದ । ಗೊಳಿಸು ಬಿಡುಕುವೊಡಿದು ನಿಜಾನ್ವಯ । ದುಳಿವು ಬೆಸಗೊಳು ಬೀಷ್ಮಹಿರಿಯರನೆಂದನಾವಿದುರ ‖೭೨‖ ಖೂಳನೆಂಬೆನೆ ಸಕಲಕಲೆ ಗಳ । ಬಾಳಮನೆಗಡ ನಿನ್ನ ಬುದ್ಧಿ ವಿ । ಶಾಲಮತಿ ನೀನೆಂಬೆನೇ ಜಗದಜ್ಞರಧಿದೈವ ‖ ಕೇಳಿದೊಡೆ ನೀಣಹಿತಹಿತವನು । ಹೇಳುವುದು ಪಾಂಡಿತ್ಯ ನಿನ್ನನು । ಕೇಳಿದವರಾರೆಂಬು ಜರೆದನು ಕೌರವರ ರಾಯ ‖೭೩‖ ಹಿತವ ನೀನವರಿಗೆ ಕುಟುಂಬ । ಸ್ಥಿತಿ ವಿಡಂಬಕೆ ಸಾವು ಕುಂತೀ । ಸುತರೊಡನೆ ಸಮ್ಮೇಳವೆಮ್ಮೊಳು ವೈಮನಸ್ಯಗತಿ ‖ ಕೃತಕಮಾರ್ಗದ ಮೋಡಿಯಲಿ ಪರಿ । ಚಿತನು ನೀನಲ್ಲಕ್ಷವಿ ಮಲ । ಕ್ರತುವಿಧಾನವನಕ್ಷದೀಕ್ಷಿತರರಿವರಿಪನೆಂದ ‖೭೪‖ ನೀ ಹಿತವನೆ, ಶಕುನಿ ರಾಜ । ದ್ರೋಹಿಯೆ, ಹುಸಿಯಲ್ಲ ನೀನೇ । ಹೋಹುದೈ ನಿನಗಾವುದಭಿಮತವಾದಿಗಂತರಕೆ ‖ ಐಹಿಕಾಮುಷ್ಮಿಕದ ವಿಭವೋ । ತ್ಸಾಹನಿಸ್ಪೃಹರಾವಲೇ ಸಂ । ದೇಹವೇ ನೀವರಿವಿರೆಂದನು ತೂಗಿ ತುದಿವೆರಳ ‖೭೫‖ ಗುರುಗಳುಸಿರ ರುಭೀಷ್ಮನೆಮ್ಮನು । ಕೆರಳನೀಕೃಪ ನುಡಿಯನಯ್ಯನ । ಕೊರಳು ಕೊಂಕದು ಬಾಹ್ಲಿಕನ ಮನ ನೋಯ ದಿನ್ನಬರ ‖ ಹಿರಿಯರಿವರೇನಜ್ಞರೇ ನೀ । ಪರಮತತ್ವಜ್ಞಾನಿಯೇ ಕಾ । ತರಿಸದಿರು ನೀನೆಂದು ಟಿಕ್ಕರಿಗಳೆದನಾಭೂಪ ‖೭೬‖ ಇವರ ಜನಪಾಧ್ವರವನಪಹಾ । ಯ್ದುವನಸಾಗಳೆ ದೇವಕೀಸುತ । ಸವ ರಿದನು ನವಿಮ್ಮಾವಿನೋದದ್ಯೂತಸಂಪದದ ‖ ಸವನವಿಘ್ನವಿಕಾರಿಯನು ಕರಿ । ಭವಿಸುವವರನು ಕಾಣೆ ಶಿವಯೆಂ । ದವನಿಪತಿ ನಿಜಹುಬ್ಬಿನಲಿ ಹೂಳಿದನು ಪರಿಚರರ ‖೭೭‖ ಮಣಿಯೆ ನೀನಿಲ್ಲೀಯನರ್ಘವ । ಕುಣಿಕೆಗೊಳಿಸಿದನೀಸಹಿತ ನಿ । ಸ್ಕೃಣಗಳಪಸ್ಕಂಧವನನೀರಾಘೇಯಶಕುನಿಗಳ ‖ ರಣದೊಳಗೆ ಭೀಮಾರ್ಜುನರ ಮಾ । ರ್ಗಣವಧಾರೆಗೆ ವೀರನಾರಾ । ಯಣನೆ ಸೇರಿಸಿ ಕೊಡುವನರಿದಿರು ಯೆಂದ ನಾವಿದುರ ‖೭೮‖

ಅಂತು ಸಂಧಿ ೧೪ಕ್ಕೆ ಪದ ೮೪೩ಕ್ಕಂ ಮಂಗಳಮಸ್ತು

---

## ಹದಿನಾಲ್ಕನೆಯ ಸಂಧಿ.

---

ಸೂಚನೆ: ರಾಯಪಾಂಡವರರಸಿಕಮಲಗ । ಳಾಯತಾಕ್ಷಿಯ ಪರಿಭವವ ನೆರೆ
• ಕಾಯಿದುದೆಲಾ ವೀರನಾರಾಯಣನ ಸಿರಿನಾಮ ‖

ಕೇಳು ಜನಮೇಜಯಧರಿತ್ರೀ । ಪಾಲ ವಿದುರನ ಮಾತ ಮುರಿದು ನೃ । ಪಾಲನೆಚ್ಚರಿಸಿದನು ಕಣುಸನ್ನೆಯಲಿ ಸೌಬಲನ ‖ ಏಳು ಧರ್ಮಜ ಸೋತೆಲಾ ನಿ । ನ್ನಾಳುಕುದುರೆಯನಿನ್ನು ಸಾಕು ದ । ಯಾಳುವಲ್ಲ ಸುಯೋಧನನು ಧನವಿಲ್ಲ ನಿನಗೆಂದ ‖೧‖ ತೆಗೆವೆನೇ ಸಾರಿಗಳ ನಿನ್ನೀ । ನಗೆವೊಗ

ವೇನು ನೋಡುವ । ವೈಸಲೇ ನೃಪ ಹಾಯ್ಕು ಹಾಸಂಗಿಗಳ ಹಾಯ್ಕೆನುತ ॥ ಆಶಕುನಿ ಪೂರ್ವಾರ್ಜಿ
ತದ ತೊ । ಳ್ಳಿಸವಲಿ ದಾವಂಸಿ ಧರ್ಮಜ । ಸಾಲಿನಕುಲನ ಗೆಲಿದು ಬೊಬ್ಬಿರಿದವನಿಪನ
ಜರೆದ ॥೧೪॥ ಅರಸ ಸೋತ್ರೆ ನಕುಲನನು ಹೇ । ಪಂಸುಬರು ಹೇಳೊದ್ದವನು ಪಿ । ಸ್ತ್ರಂಸಲೊಂದೇ
ಹಲಗೆ ಸೋಲ್ವುದು ಹೇಳ್ಬ್ನೆನಲು ॥ ಪಂಸಿದೆನ ಸಹದೇವನನು ನೆರೆ । ವರಳಿಚುವೆನೆನ್ನಖಿಳ
ವಸ್ತ್ರ । ತ್ಕರವನಂಪನು ಧರ್ಮನಂಪನನರೆನಕೇಳೆಂದ ॥೧೫॥ ಹಂಬಪಲಿ ತನ್ನಖಿಳವಸ್ತ್ರಾ । ತ್ಕರವ
ಮರಳಿಕುವನು ಮಹೀಪತಿ । ಕಿರಿಯತಮ್ಮನನೊಡ್ಡಿದನು ಮಾಟ್ರೀಕುಮಾರಕನ ॥ ಅರಸದಾಯವೆ
ಬಾ ಬಯಾಂಗದ । ಸಿರಿಯೆ ಬಾ ಕುರುರಾಯರಾಜ್ಯೋ । ತ್ಕರುಷಸಿದ್ಧಿಯೆ ಬಾಯೆನುತ ಗರ್ಜಿಸಿದ
ನಾಶಕುನಿ ॥೧೬॥ ಪನ ಬಣ್ಣಿಸುವೆನು ವಿಕಾರಿಗ । ಳೇನ ನೆನೆಯರು ಕಪಟವಿಧದಲಿ । ಮಾನನಿಧಿ ತಾ
ಸೋತನನುಜದ್ವಯವ ಮಹಾಧನವ ॥ ಗ್ಲಾನಿ ಚಿತ್ತದೊಳಿಲ್ಲ ಲೇಸು ಮ । ನೋನುರಾಗವೆ ಭೀಮ
ಪಾರ್ಥರು । ತಾನಿದೊಮ್ಮೆಗೆ ಬದುಕಿದರು ನಿವಗೆಂದನಾಶಕುನಿ ॥೧೭॥ ಭೇದಮಂತ್ರವ ಮಾಡಿ
ನಮ್ಮನು । ಛೇದಿಸುವಗಡ ಸುಬಲಸುತನೆ । ಟ್ಟೇದುರಾತ್ಮನ ನೋಡಿದ್ರ ಸಭ್ಯರು ಶಿವಾಯೆನುತ ॥ ಆದು
ರಾಗ್ರಹ ಲೋಕಿಸನು । ಸಾದನಪನಿಧಿರ್ನನಕ್ಷಪಿ । ಸೋದಕರ್ಮನುಪಗ್ನನೊಡ್ಡಿದನಾಧನಂಜ
ಯನ ॥೧೮॥ ಬಲಿಧನಂಜಯ ನಿನ್ನನೊಡ್ಡಿದ । ಛಲಿಯುಧಿಷ್ಠಿರನಿಲ್ಲಿ ಸೋತೊದ । ಬಳಿಕ ನಿನ್ನನು
ಮಾರಿದನಲಾ ಕೌರವೇಶ್ವರಗೆ ॥ ತಿಳಿದು ಭೀಮಾರ್ಜುನರು ನೀವ್ನಿ । ಮ್ಮೊಳಗೆ ಬಲಿಬಹುದೆನಲು ಖತಿ
ಯಲಿ । ಮುಳಿದು ನುಡಿದರು ಭೀಮಪಾರ್ಥರು ಸುಬಲನಂದನನ ॥೧೯॥ ದೇಹಿಗೆರಡೇ ದೇಹವೆಲವೋ ।
ದೇಹಭೂಪತಿ ಧರ್ಮಪುತ್ರನ । ದೇಹನಾವಿದರೊಳಗೆ ನಿನ್ನ ಕುಮಂತ್ರಭಾವಿತದ ॥ ಊಹೆಗೊಂಬುದೆ
ಕಪಟಬಂದವ । ಗಾಹಿಸುವೆ ಸಾಕಿನ್ನು ಮೇಲಣ । ಗಾಹುಗತಕಗಳೆಮ್ಮೊಳೆಂದರು ಜರೆದು ಸೌಬಲನ ॥೨೦॥
ಮೇಲೆ ಹೇಳುವುದೇನು ರಾಯನ । ನಾಲು ಮುಂದುದು ಸರೆಯ ಕಳಪಿನ । ಕಾಲುಕೇಲ್ಲ ಳಸಾರು ಬಲ್ಲ
ರು ಕುಟಿಲಕೋವಿದರ ॥ ಹೇಳುವದುಂಮುನ್ನ ಶಕುನಿಗೆ । ಬೀಳುವುದು ಬೇಕಾದದಾಯವು । ಕಾಳಿಕದ
ಪಿಥಪಾತ್ರ ದೊಮಂತು ನೀಗಿತಜುರ್ನನನ ॥೨೧॥ ಸೋಲರರಸರ ಮತ್ತೆ ಹೇಳೇ । ದ್ಯೂತಶಿಖಿಗಾಹುತಿಯ
ನನೆ ಕುರಿ । ಪಿತನನುಜನೊಡ್ಡಿದನು ಪಿಗದಯಶಾಸುರಾಂತಕನ ॥ ಅತುಳದೊಂದರಗಳಿಗೆ ಸೌಬಲಿ । ಸೋತ
ಧರ್ಮಜ ಗೆಲಿದ ಧರ್ಮಜ । ಸೋತ್ರ ಸೌಬಲ ಗೆಲಿದನೆಂಬವ್ರೊಲಾಯ್ತು ಘನರಥನ ॥೨೨॥ ಆವಲಗೆ
ಸೋತುದು ಯುಧಿಷ್ಠಿರ । ನೊಳಿ ಮುಲಿದುದು ಮುಂದುಗೆಟ್ಟನು । ರಾಹು ಹಿಡಿದಹಿಮಾಂಶುಮಂಡ
ಲಮಳಿದಕಳಯೆಂತೆ ॥ ತೋಯುನಲಿ ತೊಟ್ಟಸಿದಮೃಗದವೊ । ಊಹೆಯಳಿದುದು ಯಂತ್ರಸೂತ್ರದ ।
ಹಾಮೆಯಂತಿರ ನೃಪತಿ ಚಿತ್ತನು ಹಗೆಗೆ ತನುಧನವ ॥೨೩॥ ಜನಪ ಮಾಂದೆ ಭೀಮಸೇನಾ । ಜರ್ನನರು
ಸುತೊಡಮುಕ್ಕಿದರ ನಿ । ರ್ಧನಿಕನಾಗಿಯು ಮತ್ತೆ ಬಿಡದೇ ದ್ಯೂತದುರ್ವ್ಯಸನ ॥ ಎನಲು ಶಕುನಿಯ
ಜರೆದು ತಾನೇ । ಧನವಲಾ ಸಾಕೆಂದು ಹಲಗೆಯೊ । ಳೆನಗೆ ಜಯವೇದಾಯವೆಂದೊಡ್ಡಿದನು ಜನ
ನಾಥ ॥೨೪॥ ಹೇಳಲೇನದನವರು ರಚಿಸಿದ । ಬೀಳುವೆಯ ನಾಶಕುನಿಯೊಡ್ಡಿದ । ಕಾಲುಕುಣಿಕೆಯೊ
ಳಾರು ಬೀಳರು ನೃಪತಿ ನಿಮಿಷದಲಿ ॥ ಬೀಳುಗೊಟ್ಟನು ತನ್ನನಾಜನ । ಪಾಲವಿದ್ದುದು ಬಿಗಿದಬೆರ
ಗಿನೊ । ಳಾಲಿಸುವಿರೇ ಜೀಯ ಪಣಾವೇನೆಂದನಾಶಕುನಿ ॥೨೫॥ ಎಲವೊ ಸೌಬಲ ಸಾಕಿದೊಂದೇ ।

ಜೂಜಿನಲಿ ಕುರು । ರಾಯ ಗೆಲಿದನು ಕೋಶವನು ಗಜತುರಗರಥಸಹಿತ ॥ ನೋಯಲಾಗದು ಹಲವು ಮಾತೇ । ನಾಯುಧಿಷ್ಠಿರನೃಪತಿ ಸೋತನು । ತಾಯೆ ಭೀಮಾರ್ಜುನನಕುಲಸಹದೇವನೀವ್ಸಹಿತ ॥೫೦॥ ಅರಳಿದಂಬುಜವನಕೆ ಮಂಜಿನ । ಸರಿಯು ಸುರಿವಂದದಲಿ ಸುಗ್ಗಿಯ । ಸಿರಿಯ ಹೊಸಬೆಳುದಿಂಗಳನು ಬಲುಮುಗಿಲು ಕವಿವಂತೆ ॥ ಚರನ ಬಿನ್ನಹಕಿವಿಯೊಳಡಗಿರೆ ಸಮಸ್ತಸಖೀಜನದ ಮುಖ । ಸರಸಿರುಹ ಬಾಡಿದವು ಮುಸುಕಿತು ಮೌನಮಯಜಲಧಿ ॥೫೧॥ ದೂತ ಹೇಳೈ ತಂದೆ ಜೂಜಿನ । ಜಾತರೂ ಪವಾಡಿದನೆ ಸೋತನೆ । ಕೈತವದಬಗೆಗಾರರವದಿರು ಶಕುನಿಕೌರವರು ॥ ದ್ಯೂತದಲಿ ಮುನ್ನೇನನೊಡ್ಡಿದ । ಸೋತನೇನನು ಶಿವಶಿವಾ । ನಿ । ರ್ಧೂತಕಿಲ್ಬಿಷನರಸನೆಂದಳ್ದ್ರೌಪದಿದೇವಿ ॥೫೨॥ ತಾಗಿದುದಲಾ ಸಾರದಾಧ್ವರ । ಸಾಗತವನರುಹಿದರು ಹಿಂದೆ ಪಿ । ಯೋಗನಾಯಿತೆ ಲಕ್ಷ್ಮಿಗಿಂದ್ರಪ್ರಸ್ಥಪುರವರದ ॥ ಹೋಗಲದು ಮುನ್ನೇನನೊಡ್ಡಿದ । ನೀಗಿದನುಗಡ ತನ್ನನೆಂತಿದ । ರಾಗುಹೋಗೇನೆಂದು ನುಡಿದಳ್ಪ್ರಾತಿಕಾಮಿಕನ ॥೫೩॥ ಮೊದಲಲರ್ಘ್ಯವ ಹೆಸರುಗೊಂಡೊ । ಡ್ಡಿದನು ಸೋತನು ಮರಳೆಮುಗುಳೊ । ಡ್ಡಿದನು ಹೇರಾಳದಲೆ ಧನವನು ಕರಿಘಟಾವಳಿಯ ॥ ಕುದುರೆರಥನಿಮ್ಮಡಿಯಮೇಳದ । ಸುದತಿಯರನೊಡ್ಡಿದನು ಸೋತನು । ತುದಿಯಲನುಜರನೊಡ್ಡಿ ಸೋತನು ತಾಯೆ ಕೇಳೆಂದ ॥೫೪॥ ಬಳಿಕ ತನ್ನನೆ ಸೋತ ನಿಲ್ಲಿಂ । ಬಳಿಕ ನಿಮ್ಮಡಿಗಳಿಗೆ ಬಂದುದು । ಖಳರು ಶಕುನಿಸುಯೋಧನರು ನೀವಾಗಳೆಂದಿರಲೆ ॥ ಅಳುಕಬೇಡಿನ್ನೇನು ಭೂಪತಿ । ತಿಲಕ ತನ್ನನು ಮುನ್ನಸೋಲಿದು । ಬಳಿಕ ತನ್ನನು ಸೋತನೇ ಹೇಳೆಂದಳಿಂದುಮುಖಿ ॥೫೫॥ ಆಹುದು ತನ್ನನು ಮುನ್ನಸೋತನು । ಮಹಿಳೆಗೊಡ್ಡಿದನೆಂದು ನಿಮ್ಮನು । ಮಹಿಪ ಸೋತನು ನೀವು ಬಿಜಯಂಗೈಯ್ಯಬೇಹುದೆನೆ ॥ ವಿಹಿತವಿದು ಮಾನುಷವೆ ದೈವದ । ಕುಹಕವೈಸಲೆ ಮಗನೆ ತಾನೇ । ಬಹೆನು ನೀ ಹೋಗೊಮ್ಮೆ ಹೇಳೀಮಾತನಾಸಭೆಗೆ ॥ ಮುನ್ನ ತನ್ನನು ಸೋತಬಳಿಕಿನೊ । ಳೆನ್ನ ಸೋತರೆ ಸಲುವುದೇ ಸಂ । ಪನ್ನವಿಮಲಜ್ಞಾನರರಿದೀಪ್ರಶ್ನೆಗುತ್ತರವ ॥ ಎನ್ನ ಮೆಚ್ಚಿಸಿಕೊಂಡಲಿ ತಾ ಬಹೆ । ನೆನ್ನು ಹೋಗೆನಲವನು ಭಯದಲಿ । ತನ್ನೊಳಗೆ ನಡುಗುತ್ತ ಬಂದನು ಕೌರವನ ಸಭೆಗೆ ॥೫೬॥ ಜೀಯ ದೇವಿಯರೆಂದ ಮಾತಿದು । ರಾಯ ಮುನ್ನವೆ ತನ್ನ ಸೋತಬ । ಳಾಯತಾಕ್ಷಿಯ ಬಳಿಕ ಸೋತರೆ ಧರ್ಮಸೂಕ್ಷ್ಮದಲಿ ॥ ರಾಯಸಭೆಯಲಿ ಹಿರಿಯರಿದರ । ರಾಯತವನರುಹಿದೊಡೆ ಬಹೆನೆಂ । ದಾಯುವತಿ ಬಿನ್ನಹವ ಮಾಡಿದಳೆಂದು ಕೈಮುಗಿದ ॥೫೭॥ ರಾಯ ಸೋತನು ತನ್ನ ನಾವ । ನ್ಯಾಯದಲಿ ತಪ್ಪುದಿಲ್ಲ ತೊತ್ತಿರಲಾಯದಲಿ ಕೂಡುವೆವು ಕರೆಯೆನಲಿವನು ಗರಹೊಡೆದು ॥ ವಾಯುಸುತನಂಜುಸುವನೆಂದೀ । ನಾಯಿ ಬೆದರಿದನಕಟ ದೂತನ । ಬಾಯ ನೋಡಾ ಯೆನುತ ಮಿಗೆ ಗರ್ಜಿಸಿದ ಕುರುರಾಯ ॥೫೮॥ ತಮ್ಮ ಬಾರೈ ಹೋಗು ದಿಟನೀ । ನಮ್ಮವರೆ ಹಿಡಿದೆಳೆದು ತಾ ನೃಪ । ರೆಮ್ಮ ಕಿಂಕರರೈವರಿವರಿದ್ದೇನಮಾಡುವರು ॥ ತಮ್ಮ ಕರ್ಮವಿಪಾಕಗತಿ ನೆರೆ । ತಮ್ಮನೇ ಕೆಡಿಸುವುದು ಧರ್ಮವಿ । ದೆಮ್ಮ ಕಾರಣವಲ್ಲ ನೀ ಹೋಗೆಂದನಾಭೂಪ ॥೫೯॥ ಗಾಳಿಯಳ್ಕೆಯನಿರಿಯಲಗ್ನಿ । ಜ್ವಾಲೆಯಲಿತಟ್ಟಿಯವೆಕಡುಹಿನ । ಕಾಳಕೂಟದನದಿಗೆ ನಂಜಿನಹೊನಲು ಬೆರಸಿದೊಡೆ ॥ ವಾಳೆಯವೆ ದುಶ್ಶಾಸನನು ಜಗ । ದೂಳಿಗದದುರುದುಂಬಿಕುರುಪತಿ । ಮೇಲೆನೇವಿಸಲುಚಿತಗೈವನೆಭೂಪಕೇಳೆಂದ ॥೬೧॥ ಹರಿದನವಬೀದಿಯಲಿ ಬೆಡುದಲೆ । ವೆರಸಿ ಸತಿಯ

ರಮನೆಯಬಾಗಿಲ । ಚರರು ತಡೆದೊಡೆ ಮೆಟ್ಟಿದನು ತಿವಿದನು ಕಠಾರಿಯಲಿ ॥ ತರುಣಿಯರು ಕಂಡಂಜಿ
ಹೊಕ್ಕರು । ಸರಸಿಜಾಕ್ಷಿಯ ಮಠಿಯನೀಖಳ । ನುರವಣಿಸಿದನು ರಾಹು ತಾರಾಗಣವ ತಗುಳ್ವಂತೆ ॥೧೨॥
ಬಂದನಿವನಬುಜಾಕ್ಷಿಯಿದಿರಲಿ । ನಿಂದನೆಲೆಗೇ ಗರುವತನವಿದು । ಹಿಂದೆ ಸಲುವದು ಸಲ್ಲದೆದು ಕುರು
ರಾಜಭವನದಲಿ ॥ ಇಂದು ಮರೆ ನಡೆ ನಮ್ಮ ತೊತ್ತಿರ । ಮುಂದೆ ಮೆರೆ ಸತ್ತೆ ಪ್ರಪಂಚದಿಂದಿಳಿ ।
ಯೆಂದು ಜರೆದನು ಕೌರವಾನುಜನಾ ಮಹಾಸತಿಯ ॥೧೩॥ ಜನಪನನುಜನು ನೀನೆಸಗೆ ಮ್ಮ । ದುನ
ನಲೇ ತಪ್ಪೇನು ಯಮನಂ । ದನನು ಸೋಲಲಿ ನಿನ್ನ ಪ್ರಸ್ತಿಗೆ ಕೊಡಲಿ ಮರುವಾತ್ರ ॥ ಅನುಜ
ಕೇಳ್ಳೆ ಪುಷ್ಪವತಿ ತಾ । ನೆನಗೆ ರಾಜಸಭಾಪ್ರವೇಶವ । ದನುಚಿತವಲೇ ಹೇಳೆನಲು ಖಳರಾಯ ಖತಿ
ಗೊಂಡ ॥೧೪॥ ಎಲ್ಲಿಯದು ದುಷ್ಪ್ರಜ್ಞೆ ಮರುಳೆ । ತೆಲಯದು ನೀ ಪುಷ್ಪವತಿಯಾ । ಗಲ್ಲಿ ಫಲವತಿ
ಯಾಗು ನಡೆ ಕುರುರಾಯಭವನದಲಿ ॥ ಖುಲ್ಲರೈವರು ತಮ್ಮ ಸೋತರು । ಬಲ್ಲವಿಕೆಯುಚಿತವನು
ಮೌಳಿಯ । ನಲ್ಲಿ ತೋರಾಯೆನುತ ತಪ್ಪಿದನುಹಸಿರಮುಡಿಗೆ ॥೧೫॥ ಆಮಹೀಸ್ರಕ್ರತುವರದೊಳು ।
ವ್ಯಾಸಮುನಿಜನರಚಿತಮಂತ್ರ । ಸ್ತೋಮಪುಷ್ಕಳಪೂತಪುಣ್ಯಜಲಾಭಿಷೇಚನದ ॥ ಶ್ರೀಮುಡಿಗೆ
ಕೈಯಿಕ್ಕಿದನು ವರ । ಕಾಮಿನೀನಿಕುರುಂಬವಕಟಕಟಾ ಮಹಾಸತಿ ಶಿವಶಿವಾಯೆಂದೊರಲಿತಲ್ಲಲ್ಲಿ ॥೧೬॥
ಕೆದರಿದುವು ಸೂಸಕದ ಮುತ್ತುಗ । ಳುದುರಿದುವು ಸೀಮಂತಮಣಿಗಳ । ಹೊವರು ಮುರಿದುವು ಕರ್ಣ
ಪೂರದರತ್ನದೋಲೆಗಳು ॥ ಸುದತಿಯರು ಗೋಳಿಡುತ ಬರೆ ಮು । ಟ್ಟಿದನು ತಿವಿದನು ಕಾಲಲಡಬಿ ।
ದ್ದುದು ಸಖೀಜನವೆಳೆದು ಝಾಡಿಸಿ ಜರೆದು ಝೋಂಪಿಸಿದ ॥೧೭॥ ಮಣಿದ ತನುವಿನ ವೇಗಗತಿಯಲಿ ।
ಝಣಝಣಿಪ ನೂಪುರದ ವರರವ । ಕಂಕಣದ ದನಿ ನೇವುರದ ಹೊಂಗಿರುಗೆಜ್ಜೆಗಳ ರಭಸ ॥ ಗಣಿಕೆ
ಯರ ಕೆಳದಿಯರ ಹಾಹಾ । ರಣಿತ ಕವಿವ ಸೆರವಾದವಾಪಾ । ಸ್ಥಣವ ತುಂಬಿತು ಶೋಕವವನೇನೆಂಬೆನ
ದ್ಭುತವ ॥೧೮॥ ಹದನಗಿತ್ತಿಯರು ಸೀಗುರಿಯಕ । ನ್ನಡಿಯವರು ಮೇಳದ ವಿನೋದದ । ನುಡಿನಗೆಯ
ಸಖಿಯರು ಪತಾಯ್ತೆಯರಾಪ್ತದಾಸಿಯರು ॥ ಒಡನೆ ಬಂದರು ಕಂಬನಿಯ ಜಿಡು । ಮುಡಿಯ
ಹಾಹಾರವದ ರಭಸದ । ನಡೆಯಲಖಿಳವಿಲಾಸಿನಿಯರು ಸಹಸ್ರಸಂಖ್ಯೆಯಲಿ ॥೧೯॥ ನಗೆಮೊಗವ
ನೊಮ್ಮೆಯು ಪಯೋಧರ । ಯುಗಳ ನೋಡುವ ಸಖ್ಯದಲಿ ದೃಗು । ಯುಗಳಜಲಬಿಂದುಗಳಿಗಾಜಲ
ಬಿಂದುಸುರಿವಂತೆ ॥ ಒಗುವಖಂಡಿತಹಾರಮುಕ್ತಾ । ಳಿಗಳು ಮೆರೆದವು ಮಾನಿನಿಯರು । ಬ್ಬೆಗದರೋ
ದನರ ರೌರವದೊಳ್ಳತಂದಳಿಂದುಮುಖಿ ॥೨೦॥ ಚೆದರುಗಂಗಳ ಬಿಟ್ಟಮಂಡೆಯ । ಪುದಿದಹಾಹಾರ
ವದ ತೊಡಕಿದ । ಪದಯುಗದ ಮೇಲುದಿನ ಜೀದಿಯ ಧೂಳಿಧೂಸರದ ॥ ವದನಕಮಲದ ಖಳನ
ವಾಮಾಂ । ಗದಲಿ ಬಾಗಿದ ತನುಲತೆಯ ವರ । ಸುದತಿ ಬಂದಳು ರಾಜಸಭೆಗೆ ನೃಪಾಲಕೇಳೆಂದ ॥೨೧॥
ಅಹಹ ಪಾಂಡವರಾಯ ಪಟ್ಟದ । ಮಹಿಳೆಗೀ ವಿಧಿಯೇ ಮಹಾಕ್ರತು । ವಿಹಿತಮಂತ್ರಜಲಾಭಿಷಿಕ್ತ
ಕಚಾಗ್ರಕಿದು ವಿಧಿಯೇ ॥ ಮಿಹಿರಬಿಂಬವ ಕಾಣದೀ ನೃಪ । ಮಹಿಳೆಗಿದು ವಿಧಿಯೇ ವಿಧಾತ್ರನ ।
ಕುಹಕವೈಸಲೆ ಶಿವಶಿವಾಯೆಂದರು ಸಭಾಜನರು ॥೨೨॥ ತುಳುಕಿದವು ಪುಳಕಾಂಬು ವಾಸಭೆ । ಯೊಳಗೆ
ದುಶ್ಶಾಸನಸುಯೋಧನ । ಖಳಶಿರೋಮಣಿಶಕುನಿಕರ್ಣಜಯದ್ರಥಾದ್ಯರಿಗೆ ॥ ತಳಿತ ಮದದ್ಭುತಖೇದ
ಮುಖ । ಮಂಡಲಕೆ ಸೀರೆಯನವುಚಿ ನಯನೋ । ದ್ಗಳಿತಜಲಧಾರೆಯಲಿ ನನೆದುದು ಸಭೆ ವಿಷಾದ

ದಲಿ ||೨೩|| ವ್ಯಾಕುಲವನಿದ ಕಾಂಬಕಂಗಳು ಗ | ಳೇಕೆ ರಾಜಕುಮಾರಿಯಾಕೆಯ | ಶೋಕರಸವನು
ಕುಡಿವಕರ್ಣದ್ವಯವಿದೇಕೆಮಗೆ || ಏಕೆ ವಿಧಿನಿರ್ಮಿಸಿದನೋ ನಾ | ವೇಕೆ ಸಪ್ರಾಣರೊ ಶಿವಾಯೆಂ |
ದಾಕುಠಾರರ ಬೈದುದಾಸಭೆಯಲಿ ಬುಧವ್ರಾತ ||೨೪|| ವನಜಮುಖಿಯಳ್ಕಿಯನು ದುಶ್ಶಾ | ಸನನದು
ರ್ನೀತಿಯನು ದುರ್ಯೋ | ಧನನ ದುಶ್ಚೇಷ್ಟೆಯನು ಕಂಡೀಭೀಮಫಲುಗುಣರು || ಮನದೊಳಗೆ ಕೌರ
ವನ ಕರುಳನು | ತನಿರಕುತದಲಿ ಕುದಿಸಿದರು ವಾ | ಚನಿತಕರ್ಮಕ್ರಿಯೆಗೆನೆನೆವುದನರಿದಸಾಭೂಪ ||೨೫||
ಹುಬ್ಬಿನಲಿ ನಿಲಿಸಿದನು ಪವನಜ | ನುಬ್ಬಟೆಯನರ್ಜುನನ ವಿಕೃತಿಯ | ನಿಬ್ಬರಾಲಾಪವನು ಧರ್ಮರ
ಹಸ್ಯನಿಷ್ಠೆಯಲಿ || ಹಬ್ಬಿದುದು ಭೀಷ್ಮಂಗೆ ಶೋಕದ | ಮಬ್ಬು ಗುರು ಗೌತಮರು ವಿದುರನು | ಸರ್ಬ
ಖೇದಾಂಬುಧಿಯೊಳದ್ದರು ಭೂಪಕೇಳೆಂದ ||೨೬|| ಅರಸ ಕೇಳೈ ಬಳಿಕ ಹಸ್ತಿನ | ಪುರದೊಳಾಯಿತ್ತು
ವಾರ್ತೆ ಬಳಿಕೀ ಪುರದ ಬಹಿರೋದ್ಯಾನವೀಥಿಗಳೊಳಗೆ ಹರಹಿನಲಿ || ಅರಸಿಯರು ಸೌಭದ್ರನವರ್ಕೆ |
ವರು ಕುಮಾರರರು ಮಂತ್ರಿಗಳು ಮುಖ್ಯರು ಪಸಾಯ್ತರು ಕೇಳಿದಸು ಪಾಂಡವಪರಾಜಯವ ||೨೭||
ಬಂದರಿದಿರೊಳು ಕೌರವರ ಕಡಿ | ನಂದನರ ಕಡಿಯಾವುದೆನೆ ಸಾ | ವಂದದಲಿ ಹೊಯ್ದಾಡಿ ಹಿಡಿವೆವು
ಸುರರಸೂಳೆಯರ || ಎಂದು ತಮ್ಮೊಳು ನೆರೆದು ಸೇನಾ | ವೃಂದಸಜ್ಜೋಡಿನಲಿ ಕಾಳಗ | ಕಂದು
ಮೋಹರಿಸಿದರು ಹಸ್ತಿನಪುರದ ಬಾಹೆಯಲಿ ||೨೮|| ಇತ್ತಲಬಲೆಯ ವಿಧಿಯಕೇಳತಿ | ಮತ್ತನೈ
ಧೃತರಾಷ್ಟ್ರಸುತನೀ | ಮತ್ತಗಜಗಾಮಿನಿಯ ಬಿಡಿಸಿದ ನವನಕ್ರೆಯಿಂದ || ನೆತ್ತ ಸೋತುದು ನಿನ್ನ
ನೊಡ್ಡಿನ್ನ | ಪೋತ್ತಮನ ಸಲೆ ಮಾರಮಾರಿದ | ನತ್ತೊಡ್ಡೇನಹುದೆಲೆಗೆ ತೊತ್ತಿರಹಿಂಡ ಹೋಗು
ಯೆಂದ ||೨೯|| ಲಲಿತಬುದ್ಧಿಗಳೇಕೆ ಸಾವೇ | ಲಲನೆಯರು ಸತಿ ಧಿಟ್ಟೆಯೆನ್ನದಿ | ರೆಲೆಸುಯೋಧನ
ರಾಜಸಭೆಯಿದು ದೋಷರಹಿತವಲೆ || ಗೆಲವಿದೆಂತುಟೊ ತನ್ನ ಸೋಲಿದು | ಬಳಿಕ ಸೋತೊಡೆಧರ್ಮಗ
ತಿಯನು | ತಿಳಿದು ಹೇಳಲಿ ತತ್ಸಭಾಸದರೆಂದಳಿಂದುಮುಖಿ ||೩೦|| ಹಿರಿಯರಿಲ್ಲದಸಭೆ ಮನುಷ್ಯರ |
ನೆರವಿಯದು ಸಭೆಯಲ್ಲ ಮೂರ್ಖರು | ಹಿರಿಯರಲ್ಲ ಯದಾರ್ಥಭಾಷಣಭೀತಚೇತನರು || ಹಿರಿಯರಿದೆ
ಸಾಮಾಜಿಕರು ಸ | ಚ್ಚರಿತರಿದೆಲಾ ಸ್ತ್ರೀಮತವನು | ತ್ತರಿಸಲಾಗದೆ ಧರ್ಮಶಾಸ್ತ್ರದೊಳೆಂದಳಿಂದು
ಮುಖಿ ||೩೧|| ಚಪಳೆ ಘಡ ಹೋಗಿವಳು ಹಲಬರ | ನುಪಚರಿಸುವುದನರಿಯಲಾದುದು | ದ್ರುಪದ
ನಂದನೆ ನಡೆ ವಿಳಾಸಿನಿಯರವಿಧಾನದಲಿ || ಕೃಪಣನೇ ಕುರುರಾಯ ನಿನಗಿ | ನ್ನಪದೆಸೆಯ ಹೊಲೆ
ಹೋಯ್ತು ರಾಯನ | ವಿಪುಳವಿಭವವನನುಭವಿಸು ನಡೆಯೆಂದನಾಕರ್ಣ ||೩೨|| ಅಹುದಲೇ ಬಳಿ
ಕೇನು ದಾಸ್ಯಕೆ | ವಿಹಿತವಾಯಿತ್ತು ನಿನ್ನ ತನುವಿನ | ಲಹಮನೋವ್ಯಥೆಯೇಕೆ ರಾಣೀವಾಸವೀಧಿಯಲಿ ||
ಮಹಿಳೆಯರ ಸಖ್ಯದಲಿ ಸೌಖ್ಯದ | ರಹಣಿಗೊಡಬಡುವಾರಕದಲತಿ | ಬಹಳಭೂಷಣಭಾರದಲಿ ಮೆರೆ
ಯೆಂದನಾಶಕುನಿ ||೩೩|| ವಾರಕದವಿವಿಧಾಭರಣಶೃಂ | ಗಾರದಂತಿರಲೀಕೆಯಾಡಿದ | ಸಾರಭಾಷೆಗೆ ನೆನೆ
ಯರೇ ನಿರ್ವಾತಸಂಗತಿಯ || ಓರೆಪೋರೆಯೊಳಾಡಿ ಧರ್ಮದ | ಧಾರಣೆಯ ಧಟ್ಟಿಸುವುದಿದು ಗಂರಿ
ಭೀರರಿಗೆ ಗರುವಾಯಿಯೇ ಸುಡಲೆಂದನಾಭೀಷ್ಮ ||೩೪|| ತುಟ್ಟಿಸಲಿ ಧನಮಾನಗರ್ವದ | ಬೆಟ್ಟ ಮು |
ಯಲಿ ಜೀವವೊಡಲನು | ಬಿಟ್ಟು ಹಿಂಗಲಿ ಬಿಡೆನು ಸತ್ಯವನೆಂದು ಯಮಸೂನು || ನೆಟ್ಟನೇ ನಿಶ್ಚೈಸಿ
ದುದನೊಡಹುಟ್ಟಿದರು ಮನ್ನಿಸಿದರಲ್ಲದೆ | ಹುಟ್ಟಿ ಹೊಂದಲುಗತಿಯಹುದೆ ನಿನಗೆಂದನಾಭೀಷ್ಮ ||೩೫||

ಆಳಿಯದಂತಿರೆ ಸತ್ಯಧರ್ಮದ । ನೆಳಲು ನೆಗ್ಗದೆ ಕೀರ್ತಿವಧುವಿನ । ಸುಳಿವು ನೋಯದೆ ತಳಿರು ಬಾಡದೆ ಧೈರ್ಯಸುರಕುಜದಾ ॥ ಹಳಿವಿಗಳು ಪದವೈರಿವರ್ಗದ । ಕಳಕಳಕೆ ವ್ಯಗೊಡದೆ ನೃಪನಿ । ಮರ್ಗಳ ದಲಿದ್ದೊಡೆ ನಿನಗೆ ಸದರವೆ ಯೆಂದನಾಭೀಷ್ಮ ॥೮೬॥ ಸೋತಬಳಿಕಿವರೆಮ್ಮವಶವ। ಖ್ಯಾತಿಯಲಿ ನಾವ್ನ ಡೆವರಲ್ಲ ವ್ಯಥಾತಿರೇಕದಿ ನೀವು ಘೂರ್ಮಿಸಲಂಜುವವೆ ನಿಮಗೆ ॥ ಈತಳೋದರಿ ತೊತ್ತಿರಲಿ ಸಂ । ಘಾತವಾಗಲಿ ಸಾಕು ನಿಮ್ಮಗು । ಮಾತೆನುತ ಕುರುರಾಯ ಜರೆದನು ಭೀಷ್ಮಗುರುಕೃಪರ ॥೮೭॥ ನೊಂದನೀಮಾತಿನಲಿ ಮಾರುತ । ನಂದನನು ಸಹದೇವನನು ಕರೆ । ದೆಂದನಗ್ನಿಯ ತಾ ಯುಧಿಷ್ಠಿರ ನೃಪನ ತೋಳುಗಳ । ಮಂದಿನೋಡಲು ಸುಡುವೆನೇಳೇ । ಳೆಂದು ಜರೆದೊಡೆಹಿಡಿದು ಮಾದ್ರೀ । ನಂದನನ ನಿಲಿಸಿದನು ಫಲುಗುಣ ನುಡಿದನನಿಲಜನ ॥೮೮॥ ಏನಿದೇನೈ ಭೀಮ ನಿಲು ಯಮ । ಸೂನು ಶಿವಶಿವ ಗುರುವಲಾ ನಮ । ಗೇನಿತಂಬನಿಯಾದಿಯಾದಸಮಸ್ತವಸ್ತುಗಳು ॥ ಈನರೇಂದ್ರಗೆ ಸರಿಯೆ ಕುಂತೀ । ಸೂನುವೇ ಪ್ರಾಣಾರ್ಥದಿಂದಸ । ಘಾನನ್ನೈ ನಮಗೀತನೇಗತಿಯೆಂದನಾಪಾರ್ಥ ॥೮೯॥ ಹಿಂಗಿಹೋಗಲಿ ತನುವನಸು ಸ । ಪ್ತಾಂಗ ಬೇಯಲಿ ಖೋಡಿ ಮನದಲಿ । ಹಿಂಗುವುದೆ ಹರಹರ ಧನಂಜಯ ಕಾಕ ಬಳಸಿದೆಲಾ ॥ ಅಂಗನೆಯಮೇಲೊಡ್ಡವೇ ಲಲಿ । ತಾಂಗಿಗೀವಿಧಿಯೇಕೆ ನಮಗೀ । ಭಂಗ ಸಾಲದೆ ಸುಡುವೆನಾದೊಡೆ ತನ್ನ ತೋಳುಗಳ ॥೯೦॥ ಈಯವಸ್ಥೆಗೆ ತಂದಕೌರವನಾಯಿಗಳ ನಿಟ್ಟೆಲುವ ಮುರಿದು ನಾಯಿಯಲಿ ಘಟ್ಟಿಸದೆ ಕೊಬ್ಬಿದತನ್ನತೋಳುಗಳಾ ॥ ವಾಯುಸಖನಲಿ ಸುಡುವೆನೀಗಳೆ । ಬೀಯವಾಗಲಿ ದೇಹವಾಚಂದ್ರಾಯತವೆಯೆಂದೊಡನೊಡನೆ ಮಿಡುಕಿದನು ಕಲಿಭೀಮ ॥೯೧॥ ಅಕಟ ಧರ್ಮಜಭೀಮಘಫಲುಗುಣ । ನಕುಲಸಹದೇವಾದ್ಯರಿರ ಬಾ । ಲಕಿಯನೊಪ್ಪಿಸಿಕೊಟ್ಟಿರೇ ಮೃತ್ಯುವಿನತಾಳಿಗೆಗೆ ॥ ವಿಕಳರಾದಿರೆ ನಿಲ್ಲಿ ನೀವೀ । ಗಕುಟಿಲರಲಾ ಭೀಷ್ಮಗುರುಬಾ । ಹ್ಲಿಕಕೃಪಾದಿಗಳುತ್ತರವ ಕೊಡಿಯೆಂದಳಬುಜಾಕ್ಷಿ ॥೯೨॥ ಕಂಗಳಿಂದನುಯೋಗ ನಿಜಹ । ಸ್ತಾಂಗುಲಿಯೊಳುತ್ತರ ಲಸದ್ಭ್ರೂ । ಭಂಗದಲಿಸಂದೇಹ ಮುಖವಿಕೃತಿಯಲಿದುರ್ನೀತಿ ॥ ಇಂಗಿತದಲಾಂಗಿಕದಭಾವಾ। ಭಂಗಪರಿಯನುಯೋಗಯುಕ್ತನ । ಯಂಗಳಲಿ ತಿಳಿದುಸುರದಿರ್ದುದು ಸಭೆ ಸುಭೀತಿಯಲಿ ॥೯೩॥ ಅರಿದು ಮೌನವೊ ಮೇಣು ಮಾನಿನಿ । ಯೊರಲುತಿರಲೆಂದಾದುಪೇಕ್ಷೆಯೊ । ಮುರಿದು ನುಡಿವುದ ಸಾಧ್ಯವೋ ಮೇಣಾವುದಿದರೊಳಗೆ ॥ ಅರಿಯಿರೇ ಸಮವರ್ತಿದೂತನ । ಮುರುಕವನು ನೀವೇಕೆ ನಿಮ್ಮನು । ಮರೆದಿರೆಂದು ವಿಕರ್ಣ ಜರೆದನು ತತ್ಸಭಾಸದರ ॥೯೪॥ ಹುಸಿವಚನಪಾರುಷ್ಯಲಲನಾ । ವಿಷಯಮೃಗತೃಷ್ಣಾಪಿಪಾಸಾ । ವ್ಯಸನಿ ಬಲ್ಲನೆ ಧರ್ಮತತ್ವರಹಸ್ಯನಿಶ್ಚಯವ॥ ಉಸುರಲಮ್ಮಿರೆ ವೈದಿಕದ ತನಿ । ರಸದ ಸವಿ ನಿಮಗಲ್ಲದಾರಿಂಗೆ । ಬಸಿದುಬೀಳ್ವುದು ಭೀಷ್ಮಯೆಂದುವಿಕರ್ಣಗರ್ಜಿಸಿದ ॥೯೫॥ ತನ್ನ ಸೋತಾಗಲೆ ಮಹೀಪತಿ । ಯನ್ಯನಾದನು ಸತಿಗೆ ತನ್ನಂ । ಮುನ್ನ ಸೋತೊಡೆ ತನ್ನಧನವೈಸಲೆ ವಿಚಾರಿಸಲು॥ ಅನ್ಯನನ್ಯಳಸೋತಗಡತಾ । ತನ್ನಧನವೆಂದರಸ ಶಕುನಿಯ । ಚಿನ್ನಣಕೆ ಬೆಳ್ಳಾದನೆಂದು ವಿಕರ್ಣಖತಿಗೊಂಡ ॥೯೬॥ ಘಡ ವಿಕಾರವೆ ನಂಮೊಡನೆ ಬಾ । ಯ್ಗಾಡಿಕತನವೇ ಕುರುಮಹೀಪತಿ । ಯೊಡನೆ ಹುಟ್ಟಿದೆಯಾದಕಾರಣ ಬಿಟ್ಟೆವೀಸರಲಿ ॥ ನುಡಿದರೇ ಭೀಷ್ಮಾದಿಗಳು ನೀ । ನೊಡಬಡಿಸ ಲೆಂತರಿವೆ ಧರ್ಮದ । ಕಡೆಮೊದಲ ಕೈವಾರ ನಿನಗೇಕೆಂದನಾಕರ್ಣ ॥೯೭॥ ವಿಕಪತಿ ಬಹುಸತಿಯರೆಂ

ಬುದು । ಲೋಕಪದ್ಧತಿಯಾದುದದ್ಭುತ । ನೇಕಸತಿ ಬಹುಪತಿಗಳಿದು ವೈದಿಕವಿರುದ್ಧವಲೇ ॥ ಲೌಕಿಕ ವ್ಯವಹಿತದಕರ್ಮವ । ನೀ ಕುಮಾರ್ಗಗಳಲ್ಲಿ ಕಂಡೆವು, ನೀ ಕುರುವ್ರಜದೊಳಗೆ ಜನಿಸೆ ವಿಕರ್ಣಹೋಗೆಂದ ॥೯೮॥ ಅಹುದು ಕರ್ಣನ ನುಡಿ ವಿಕರ್ಣನು । ಬಹುವಚನಪಂಡಿತನು ಬಾಹಿರ । ನಹುದಲೇ ಕುರುರಾಜವಂಶದೊಳುದಿಸಿ ಫಲವೇನು ॥ ಅಹಿತಹಿತವಿಜ್ಞಾನಿಯಲ್ಲದ । ಬೃಹದುದರಕಿಂಕರನ ನುಡಿ ಕಿಂ । ಗಹನವೇ ಕಲಿಕರ್ಣಯೆಂದನು ನಗುತ ಕುರುರಾಯ ॥೯೯॥ ಹಾರಪದಕಕಿರೀಟಮಣಿಕೇ । ಯೂರಕರ್ಣಾಭರಣವೆಂಬಿವು । ಭಾರವೆಲ್ಲಾ ತೆಗೆಯಹೇಳಾದಾಕ್ಷಿಣ್ಯವೇನಿದಕೆ ॥ ನಾರಿಗೀವಸ್ತ್ರಾಭರಣಶೃಂ । ಗಾರವೇಕಿನ್ನಿವನು ತೆಗೆ ಕೈ । ವಾರವಿದಕೇಕೆಂದು ದುಶ್ಶಾಸನಗೆ ನೇಮಿಸಿದ ॥೧೦೦॥ ತೆಗೆದು ಬಿಸುಟರು ಹಾರಪದಕಾ । ಟಗಳನಿವರೈವರು ದುಕೂಲವ । ನುಗಿದು ಹಾಯ್ಕಿದರುದ್ಧರಿವರೊಂದೊಂದು ವಸ್ತ್ರದಲಿ ॥ ಹೊಗೆವೊಗದ ಕಿಡಿಗಣ್ಣಕೆಮ್ಮಿಮೆ । ಸೆಗಳ ಗುಜುರಿನ ಜುಂಜುಗೇಶದ । ವಿಗಡನೆದ್ದನು ಬಂದು ಹಿಡಿದೆನು ದ್ರೌಪದಿಯಸೆರಗ ॥೧೦೧॥ ಮುರುಹಿದರು ಮುಸುಡುಗಳ ಮಿಗೆನೀ । ರೊರೆವಕಂಗಳಲಕಟಕಟ ನಿ । ಷ್ಠುರವಿದೇಕಪಕೀರ್ತಿಯೇಕನುಚಿತವಿದೇಕೆನುತ ॥ ಕರಗಿದರು ಕಂದಿದರು ಮಮ್ಮಲ । ಮರುಗಿದರು ಭೀಷ್ಮಾದಿಗಳು ಜ । ರ್ಝರಿತರಾದರು ತಡೆಯಲಾರದೆ ಖಳನ ದುಷ್ಕೃತವ ॥೧೦೨॥ ಅಳುಕಿದನೆ ಸುಡಲವನ ಮೇಲುದ । ಸೆಳೆದನುನ್ನತಕುಚವ ನಳಿತೋ । ಳ್ಗಳಲಿ ಮುಚ್ಚಿದಳಬಲೆ ಬಿಚ್ಚಿದಳವನನಿಷ್ಠುರಕೆ ॥ ಕಳವಳಿಸಿದಳು ಬೆರಳಿನಲಿದ್ದಗು । ಜಲವಬಿಟರುತ ನೋಡಿದಳು ನೃಪ । ತಿಲಕನನುಭೀಮಾರ್ಜುನರಮಾದ್ರೀಕುಮಾರಕರ ॥೧೦೩॥ ಮುಂದವನಿಬರ ಮೋರೆ ಮಹಿಪನ । ಕೊರಲಕೊಂಕಿನಲಿದ್ದರಾಸೋ । ದರರು ಸಾರವನಲ್ಲಿ ಕಾಣದೆ ಭೀಷ್ಮಗುರುಕೃಪರಾ ॥ ಮರಳಿ ನೋಡಿದಳಕಟ ಗಂಗಾ । ವರಕುಮಾರದ್ರೋಣಕೃಪರೇ । ಸೆರಗ ಬಿಡಿಸಿರೆ ತಂದೆಗಳಿರಂದೊರಲಿದಳು ತರಳೆ ॥೧೦೪॥ ಕ್ರೂರನಿವ ದುಶ್ಶಾಸನನು ಗಾಂ । ಧಾರಿ ಬಿಡಿಸೌ ಸೆರಗ ಸೊಸೆಯ । ಲ್ಲಾರು ಹೇಳೌ ತಂಗಿಯಲ್ಲಾ ನಿಮಗೆ ಭಾನುಮತಿ ॥ ವೀರಸೈಂಧವನರಸಿ ರಾಜಕು । ಮಾರಿ ನೀ ನಾದುನಿಯಲಾ ಖಳ । ರೌರವದೊಳದ್ದುವನು ಬಿಡಿಸೆಂದೊರಲಿದಳು ತರಳೆ ॥೧೦೫॥ ಎಲೆವಿಳಾಸಿನಿಯರಿರ ಭೂಪನ । ತಿಳುಹಿರೌ ತಾಯ್ಗಳಿರ ನೀವಿಂ । ದೆಲೆಪಸಾಯ್ತಿಯರಿರ ಸಹೋದರಿಯೆಂದು ಕೌರವನ ॥ ತಿಳುಹಿರಾ ಶರಣಾಗತರ ತಾ । ನುಳುಹಿಕೊಂಬುದು ಧರ್ಮವಕಟಾ । ಕಲುಹೃದಯರೌ ನೀವೆನುತ ಹಲುಬಿದಳು ತರಳಾಕ್ಷಿ ॥೧೦೬॥ ಧಾರುಣೀಪತಿಗಳಿರ ರಾಜಕು । ಮಾರರಿರ ಮಂತ್ರಿಗಳಿರಾ ಪರಿ । ವಾರಕಿದು ಪಂತವೆ ವಿಚಾರಿಸಿನಿರಪರಾಧಿಯನು ॥ ನಾರಿಯೊಬ್ಬಳನಕಟ ಸಭೆಯಲಿ । ಸೀರೆಯೊರೆಯುಚ್ಚರ್ವರು ಕೆಟ್ಟೆನು । ಕಾರಣಿಕರಿಲ್ಲಾ ಶಿವಾ ಎಂದೊರಲಿದಳು ತರಳೆ ॥೧೦೭॥ ಪತಿಗಳೆನ್ನನು ಮಾರಿ ಧರ್ಮ । ಸ್ಥಿತಿಯ ಕೊಂಡರು ಭೀಷ್ಮಮೊದಲಾ । ದತಿರಥರು ಪರಹಿತವ ಬಿಸುಟರು ವಧ್ಯಭೀತಿಯಲಿ ॥ ಸುತನ ಸಿರಿ ಕಡುಸೊಗಸಲಾ ಭೂ । ಪತಿಗೆ ಗಾಂಧಾರಿಗೆ ಯನಾಥೆಗೆ । ಗತಿಯ ಕಾಣೆನು ಶಿವಶಿವಾ ಯೆಂದೊರಲಿದಳು ತರಳೆ ॥೧೦೮॥ ಮೈದೆಗೆದುಮಿಪ್ರಾಣವಾಯುಗ । ಳೈದು ಬಳಿಕೆನಗಾರುಮುರುಗುವ । ರೈದೆತನವೊಂದುಳಿಯಲುಳಿವುದು ಮಿಕ್ಕಮಹಿಮೆಗಳು ॥ ಬೈದು ಫಲವೇನಿನ್ನು ನಿನ್ನಯ । ಮೈದುನರ ಮರುಳಾಟಕೆನ್ನನು । ಕಾಯ್ದುಕೊಳ್ಳೈ ಕೃಷ್ಣಯೆಂದೊರಲಿದಳು ಲಲಿತಾಂಗಿ ॥೧೦೯॥ ನುಲಿವರೂರೊಳಗುಟ್ಟಸೀರೆಯು । ನೆಲೆ

ಮುರಾಂತಕ ರಕ್ಷಿಸೈ ಶತಿ । ಕಳೆಗೆ ಸದರವೆ ರಾಹು ರಚಿಸಿದತುಟಿಯತೋಟಿಯದು ॥ ಸೆಳವೆರಸುವೆನು ಖಳರು ಸೀರೆಯ । ಸುಲಿದರುಳಿಯೆನು ಕೃಷ್ಣ ಕರುಣಾ । ಜಲಧಿಯೇ ಕೈಗಾಯಬೇಕೆಂದೊರಲಿದಳು ತರಳೆ ॥೧೧೦॥ ಗತಿವಿಹೀನರಿಗಕಟ ನೀನೇ । ಗತಿಯಲೈ ಗೋವಿಂದ ರಿಪುಬಾ । ಧಿತರಿಗಬಲರಿಗಾರ್ತರಿಗೆ ನೀ ಪರಮಬಂಧುವಲಾ ॥ ಸತಿಪಶುದ್ವಿಜಬಾಧೆಯಲಿ ಜೀ । ವಿತವ ತೊರೆವರು ಗರುವರದುಹಿಂ । ಗಿತೆ ಸುಯೋಧನಸಭೆಯೊಳೆಂದೊರಲಿದಳು ಲಲಿತಾಂಗಿ ॥೧೧೧॥ ಕಾಯಿದೈ ಕರುಣದಲಿ ದಿವಿಜರ । ತಾಯಪರಿಭವವನು ಪಯೋಧಿಯ । ಹಾಯಿದಮುರಾರಿಗಳ ಖಂಡಿಸಿ ತಲೆಯಚೆಂಡಾಡಿ ॥ ಕಾಯಿದೈ ಜಾನಕಿಯನೆನ್ನನು । ಕಾಯಬೇಹುದು ಹೆಣ್ಣುಹರಿಬಕೆ । ನೋಯಬಲ್ಲರೆ ಕೆಲಬರೆಂದೊರಲಿದಳು ತರಳಾಕ್ಷಿ ॥೧೧೨॥ ವೇದವಧುಗಳ ಕಾಯ್ದಲಾ ತಮ । ಬಾಧೆಯಲಿ ಖಳನಿಂದ ಧರಣಿಮ । ಹೋದಧಿಯಲಕ್ಕಾಡಿದೊಡೆ ದಾಡೆಯಲಿದಾನವನ॥ ಕೋದು ಹಾಕೀಭೂತಧಾತ್ರಿಯ । ಕಾದಲಾ ಕಾರುಣ್ಯಸಿಂಧುವೆ! ಮೇದಿನೀಪತಿ ಮನ್ನಿಸೆಂದೊರಲಿದಳು ತರಳಾಕ್ಷಿ ॥ ರಕ್ಷಿಸಿದೆ ಯೋಗಿನಿಗೆ ಬೆದರುವ । ದಕ್ಷಸುತೆಯನು ಕೋಪಶಿಖಿಮುಖ ರಾಕ್ಷಸಾಜಮದಗ್ನಿಮುನಿಪನ ನುಡಿಯನನುಕರಿಸಿ ॥ ರಕ್ಷಿಸಿದೆ ರೇಣುಕೆಯನೆನ್ನನು । ಪೇಕ್ಷಿಸಿದಿರೈ ಕರುಣದಲಿ ಕಮ । ಲಾಕ್ಷ ಬಿಡಿಸಾ ಸೆರಗನೆಂದೊರಲಿದಳು ಹರಿಣಾಕ್ಷಿ ॥೧೧೪॥ ದೇವಕೀದೇವಿಯರ ಸೆರೆಯನು । ದೇವಕೃಪೆಯಲಿ ಬಿಡಿಸಿದೈ ಕರು । ಣಾವಲಂಬನಕಳಚಿದೈ ಹದಿನಾರುಸಾವಿರದಾ ॥ ದೇವಕನ್ಯಾಬಂಧನವನಭಿ । ಭಾವಕರ ಕೌರವರ ಭಂಗಿಸಿ । ದೇವ ಬಿಡಿಸೈ ಸೆರಗನೆಂದೊದರಿದಳು ಪಾಂಚಾಲೆ ॥೧೧೫॥ ಶಿಶುವಧೆಗೆ ಸೀವರಿಸಿದಸುರನ । ಬಸುರಹೂಮಾಲೆಯನು ನೀ ತುರು । ಬಿಸಿದೆಲಾ ನಖರಾಜಿಗಬಲನಕಾಯ್ದ ಕರುಣದಲಿ ॥ ಶಿಶುವನಯ್ಯಂಗಿತ್ತುಜಲಧಿಯ । ಮುಸುಕನುಗಿದತಿಕರುಣಿಯೇ ಹಿಂ । ಗುಸಿನ ಹರಿಬಕೆ ಕೃಪೆಯಮಾಡೆಂದೊದರಿದಳು ತರಳೆ ॥೧೧೬॥ ತುರುವನುಂಗಿದ ಫಣಿಯ ಗಂಟಲ । ಮುರಿದು ಕಾಯ್ದೈ ಗೋವುಗಳ ಗಿರಿ । ಮರೆಯಲಿಂದ್ರನ ಖಾತಿಗಳುಕದೆ ಕಾಯ್ದೆ ಗೋಕುಲವ ॥ ಮೆರೆದೆಲಾ ಕೃಪೆಯಲಿ ಗಜೇಂದ್ರನ । ಮುರಿಯಲೀಯದೆ ಖಳನು ಸೋಕಿದ । ಸೆರಗ ಬಿಡಿಸೈ ಕೃಷ್ಣ ಯೆಂದಳು ಪಾಂಡವರ ರಾಣಿ ॥೧೧೭॥ ಬದೆದೊಡೆತೊಲಿದವರುಂಟೆ ಬೈದೊಡೆ । ಪದವನಿತ್ತವರುಂಟೆ ಕರುಣಾ । ಸ್ಪದರಸಾಕೇಳ್ದರಿಯೆನೇ ಕಮಲಾಸನಾದ್ಯರಲಿ ॥ ಪದವ ಸೋಂಕಿದಮೂಹೊರಡುತಿ । ದ್ದಿದುದುಗಡ ಹೆಂಗುಸಿನ ಹೇರಾ । ಳದ ಕೃಪಾಳುವೆ ಕೃಷ್ಣ ಸಲಹೆಂದೊದರಿದಳು ತರಳೆ ॥೧೧೮॥ ಸೊಕ್ಕಿದಂತಕದೂತರನು ಸದೆ । ದೊಕ್ಕಲಿಕ್ಕಿಯಜಾಮಿಳನ ಹಿಂ । ದಿಕ್ಕಿಕೊಂಡೆಯಲೈ ದುರಾತ್ಮಕ್ಷತ್ರಬಂಧದಲಿ ॥ ಸೊಕ್ಕಿದರು ಕೌರವರು ಖಳರಿಗೆ । ಸಿಕ್ಕಿದೆನು ನಿನಗಲ್ಲದಾರಿಗೆ। ಕಕ್ಕುಲಿತೆ ಬಡುವೆನು ಮುರಾಂತಕಎಂದಳಿಂದುಮುಖಿ ॥೧೧೯॥ ಚರಣಭಜಕರ ಮಾನಹಾನಿಯ।ಹರಿಬವಾರದು ಕೃಷ್ಣನಾಮ । ಸ್ಮರಣ ಧನಿಕರಿಗುಂಟೆ ಘಲ್ಲಣೆ ಘೋರಪಾತಕದ ॥ ಪರಮಭಕ್ತಕುಟುಂಬಕನು ನೀ । ಕರುಣಿಯಲ್ಲದೊಡೀ ಕುಟುಂಬಕೆ । ಶರಣರದಾರೈ ಕೃಷ್ಣ ಸಲಹೆಂದೊರಲಿದಳು ತರಳೆ ॥೧೨೦॥ ನಾಥರಿಲ್ಲದ ಶಿಶುಗಳಿಗೆ ನೀ । ನಾಥನೈ ಗೋವಿಂದ ಸಲಹೈ । ಯೂಥಪತಿಗಳು ಬಿಸುಟ ತರುಣಿಗೆ ಕೃಪೆಯ ನೀ ಮಾಡೈ ॥ ನಾಥರಿಲ್ಲೆನಗಿಂದು ದೀನಾ । ನಾಥ ಬಾಂಧವ ನೀನಲೈ ವರ । ಮೈಥಿಳೀಪತಿ ಮನ್ನಿಸೆಂದೊದರಿದಳು ಮೃಗನಯನೆ ॥೧೨೧॥ ಹೊಲಬುದ

ಪ್ಪಿದ ಹುಲ್ಲೆ ಬೇಡನ । ಬಲೆಗೆ ಬಿದ್ದಂತಾದೆನೈ ಬಲು । ಹಳುವದಲಿ ತಾಯ್ಬಿಟ್ಟ ಶಿಶು ತಾನಾದೆನೆಲೆಹರಿಯೆ ॥ ಕೊಲುವನೈ ಕಾಗೆಗಳ ಕಟ್ಟ ಕೋ । ಗಿಲೆಯಮರಿಯನು ಕೃಷ್ಣ ಕರುಣಾ । ಜಲಧಿಯೇ ಕೈಗಾಯಬೇಕೆಂದೊರಲಿದಳು ತರಳೆ ॥೧೨೨॥ ಅಕಟ ಹಂಸೆಯ ಮರಿಯ ಮೋದುವ । ಬಕನ ತೆಗೆಸೈ ಗಿಡಗನೆರಗುವ । ಶುಕನ ಶೋಕವ ಮಾಣಿಸೈ ವಾಣಿಯವೆ ಭಕುತರಲಿ ॥ ಪ್ರಕಟಭೂತಗ್ರಹದಬಾಧೆಗೆ । ವಿಕಳೆ ನಿನ್ನಯಬಿರುದ ತಡೆದೆನು । ಭಕುತವತ್ಸಲನಹರೆ ಸಲಹೆಂದೊದರಿದಳು ತರಳೆ ॥೧೨೩॥ ಅರಿಗೊರಲುವೆನೈ ಖಳಾಪ । ಸ್ಕಾರವಿದೆ ಸೆರೆವಿಡಿದು ತನ್ನನು । ವಾರಿಗೆಯು ವೈರಾಗ್ಯಗಡ ಮತ್ಪ್ರಾಣವಿಭುಗಳಿಗೆ ॥ ಘೋರತರಭವದುರಿತತರುವಿನ । ಬೇರಸುಡುವೀನಿನ್ನ ನಾಮಕೆ । ನಾರಿಯಳ್ಕೆಯನಿಲಿಸಲೇನರಿದೆಂದಳಿಂದುಮುಖಿ ॥೧೨೪॥ ಕರುಣಿ ನೀ ಕಾರುಣ್ಯಪಾತ್ರದ । ತರಳೆ ತಾ ದೀನಾರ್ತೆ ದುಃಖೋ । ತ್ತರಣ ನೀ ದೀನಾರ್ತದುಃಖಿತೆಯಾನು ಜಗವರಿಯೆ ॥ ಪರಮಪಾಲಕ ನೀನೆ ಗತ್ಯಂ । ತರದವಿಹ್ವಲೆ ತಾನಲಾ ನಿ । ಷ್ಠುರವಿದೇನೈ ಕೃಷ್ಣಯೆಂದೊರಲಿದಳು ತರಳಾಕ್ಷಿ ॥೧೨೫॥ ಮರೆದೆನಭ್ಯುದಯದಲಿ ನೀನಂ । ದರವೆನಾಪತ್ತಿನಲಿ ಮೊದಲಿ । ಮುರುಕಿಸುವೆನುಬ್ಬಿನಲಿ ಕಳವಳಿಸುವೆನು ಖೋಡಿಯಲಿ ॥ ಅರಿಯದಜ್ಞರ ಗುಣವ ದೋಷವ । ನರಸುವರೆ ನಿನ್ನಡಿಯ ಕೃಪೆಯನು । ಮರೆಯಲಾಗದೆ ಕೃಷ್ಣಯೆಂದೊರಲಿದಳು ನಳಿನಾಕ್ಷಿ ॥೧೨೬॥ ಋಷಿಗಳತಿತಾರ್ಕಿಕರು ಕವಿಗ । ವ್ಯಾಸನಿಗಳು ಕೋವಿದರು ಮಿಕ್ಕಿನ । ವಿಷಯದೆರೆಮೀನುಗಳು ಮೋಘಮನುಷ್ಯರೆಂಬವರು ॥ ಒಸೆದು ನಿನ್ನವರೆಂದು ಬಗೆವರೆ । ಬಸಿದುಬೀಳುವಕೃಪೆಯ ನೀತೋ । ರಿಸೆಯದೇನೈ ಕೃಷ್ಣಯೆಂದೊರಲಿದಳು ನಳಿನಾಕ್ಷಿ ॥೧೨೭॥ ತುಸವೊಡಲು ಚತುರಾಸ್ಯಪರಿಯಂ । ತೆನಿಪ್ಪವೇ ಭುವನದಲಿ ಜೀವ । ಪ್ರಸರವಿಪ್ಪುದು ಪುಣ್ಯಾಖ್ಯದ ತಾರತಮ್ಯದಲಿ ॥ ಉಸುರುವಸರಣವಿಲ್ಲದೆನ್ನು । ಬ್ಬಸದ ಭೀತಿಯಬೇಗೆ ಮಿಗೆ ದಾ । ಹಿಸುವುದೈ ಕಾರುಣ್ಯನಿಧಿ ಯೆಂದೊರಲಿದಳು ತರಳೆ ॥೧೨೮॥ ನಂದಗೋಪಕುಮಾರ ಗೋಪೀ । ವೃಂದವಲ್ಲಭ ದೈತ್ಯಮಥನ ಮು । ಕುಂದ ಮುರಹರ ಭಕ್ತವತ್ಸಲ ಘನಕೃಪಾಜಲಧಿ ॥ ನೊಂದೆನೈ ನುಗ್ಗಾದೆನೈ ಗೋ । ವಿಂದಕೃಪೆಮಾಡಕಟೆನುತ ಪೂ । ರ್ಣೇಂದುಮುಖಿ ಹಲುಬಿದಳು ಬಲುತೆರತೆರದಿಂದಲಚ್ಯುತನ ॥೧೨೯॥ ಇತ್ತ ದ್ವಾರಾವತಿಯೊಳಗೆ ದೇ । ವೋತ್ತಮನು ಭಕುತರಿಗೆ ತನ್ನನು ॥ ತೆತ್ತು ಬದುಕುವನೆಂಬಪರಮವ್ರತದನಿಷ್ಠೆಯನು ॥ ಚಿತ್ತದಲಿ ನೆಲೆಗೊಳಿಸಿ ರುಕ್ಮಿಣಿ । ಸತ್ಯಭಾಮೆಯರೊಳು ಸಮೇಳದ । ನೆತ್ತಸಾರಿಯ ಹರಹಿ ಹಾಸಂಗಿಯನು ದಾಳಿಸುತ ॥೧೩೦॥ ಕೇಳಿದನು ಮುರವೈರಿ ತನ್ನಯ । ಮೇಳದೈವರಸತಿಯ ಹುಯ್ಯಲ । ನಾಳಿನೊಂದಪಮಾನವಾಳ್ದಂಗೆಂಬ ನುಡಿಯಿಂದ ॥ ಕೋಳುಹೋದುವೆ ಪಾಂಡುಪುತ್ರರ । ಬಾಳುವೆಗಳಕಟೆನುತ ಲಕ್ಷ್ಮೀ । ಲೋಲ ಚಿಂತಿಸಿ ನುಡಿದ ರುಕ್ಮಿಣಿದೇವಿಗೀಹದನ ॥೧೩೧॥ ಕ್ರೂರದುರಿಯೋಧನನು ದ್ರುಪದಕು । ಮಾರಿ ಪಾಂಚಾಲೆಯನು ಸಭೆಯಲಿ । ಸೀರೆಯನು ಸುಲಿಯಲ್ಕೆ ಕಾಯ್ಕೆ ಕೃಷ್ಣಯೆಂದೆನುತ ॥ ನಾರಿಯೊರಲುತ್ತಿಹಳು ವುಟ್ಟಾ । ಸೀರೆಸೆಳೆಯಲು ಬಳಿಕ ಲಕ್ಷಯ । ಸೀರೆಯಾಗಲಿ ಯೆಂದ ಗದುಗಿನವೀರ ನಾರಯಣ ॥ ... ... ... ... ॥೧೩೨॥

ಅಂತು ಸಂಧಿ ೧೪ ಕ್ಕೆ ಪದ ೯೩೪ ಕ್ಕಂ ಮಂಗಳಮಸ್ತು.

# ಹದಿನೈದನೆಯ ಸಂಧಿ.

ಸೂಚನೆ| ಸೋಲದಲಿ ಮನನೊಂದಧರಣೀ | ಪಾಲರನು ಸಂತೈಸಿಯಂಥನ್ಯ |
ಪಾಲ ಕಳುಹಿದರಿವರು ಹೊರವಂಟರು ಪುರಾಂತರವ ||

---

ನಿಯತವಮತಿ ಚಿತ್ತವಿಸು ಜನಮೇ | ಜಯಮಹೀಪತಿ ದೇವತಾಭ | ಕ್ತಿಯಲದೇನಾಶ್ಚರ್ಯವೋ ಶಿವಶಿವಮಹಾದೇವಾ|| ಜಯಜಯೆಂದುದು ನಿಖಿಳಜನ ಘೂ | ಡಿಯಲಿ ಘೋಂಪಿಸಿ ಸೆಳೆವಸೀರೆಗೆ | ಲಯವ ಕಾಣೆನು ಕರುಣವೆಂತುಟೊ ದೇವಕೀಸುತನಾ ||೧|| ಉಗಿದು ಹಾಯ್ಕುವಖಳನ ನಿಡುದೋ | ಳುಗಳು ಬಳಲಿದವಳ್ಳೆ ಹೊಯ್ದವು | ಘಗೆಯ ಡಾವರವಾಯ್ತು ಬಹಳಸ್ವೇದಜಲಜಡಿಯೆ || ತೆಗೆದು ನಿಂದನು ಸೀರೆಯೊಟ್ಟಿಲ | ಗಗನವನು ಗಾಹಿಸಿತು ಗರುವೆಯ | ಬಗೆಗೆ ಬೀಸರವಿಲ್ಲ ಬೆರಗಾಯ್ತುಮಹಾಸ್ಥಾನ||೨||ಆಮಹಾಸತಿ ಶಿವಶಿವಾ ಲಜ್ಜಾ ಮಹೋದಧಿ ಬತ್ತುಷದೆನಿರ್ಣಾಮರೇಕುಂತೀಸುತರು ಪಥ್ಯರ ಪರಾಭವಕೆ|| ಆಮುಕುಂದನ ದಿವ್ಯನಾಮ | ಪ್ರೇಮರಸಕಿದು ಸಿದ್ಧಿಯೆಂದೆನ| ಲಾ ಮಹಾಸ್ಥಾನವಲಿ ಬೆಳೆದುದು ಬೆರಗುಬಿಂಕದಲಿ ||೩|| ಅಕ್ಷಯ ದೈವಪ್ರೇಮಪಿಡಲಾ | ಮಹಿಳೆಯಲಿ ಮಾನವರಕೃತಿಗಳ | ಬಹುದೆ ಗರು ಯಗಾಹಿಸಿತು ಗೋವಿಂದನಭಿಧಾನ || ಅಹಿತವಹಕುರುರಾಜಕುಲಘನ | ಗಹನಭೀಮಧನಂಜಯಾದ್ಯರ | ವಿಹರಣದಲಿ ಪಿಸಾಶವಹುದೆಂದುದು ಬುಧಸ್ತೋಮ ||೪|| ಬೆಗಡಿನಲಿ ಮುದಖೇದನಯನಾಂ | ಬುಗಳೊಳಾನಂದಾಶ್ರುಶೋಕದ | ಬಗೆಯೊಳುಬ್ಬಿದನಗೆಯಲಾಸ್ವೇದದಲಿ ರೋಮಾಂಚ || ದುಗುಡದಲಿ ಪರಿತೋಷ ಕಂದಿದ | ಮೊಗದಲುಜ್ಜ್ವಲವೃತ್ತಿ ಭೀಷ್ಮಾ | ದಿಗಳೊಳಗೆ ಪಲ್ಲಟಿಸುತಿರ್ದುದು ಪಡಿಮುಹೂರ್ತದಲಿ ||೫|| ನೆನೆದೆ ನೀನನುಚಿತವನೀಹೊ| ತ್ತಿನಲಿ ದ್ರುಪದಾತ್ಮಜೆಯ ದೈವದ | ನೆನಹಿನಲಿ ದೂರಡಗಿತರೆ ಬೆಳಸಾದುದಪಕೀರ್ತಿ || ವನಿತೆಯನು ಬಿಡು ಪಾಂಡುನೃಪನಂ| ದನರ ನೀನೊಲಿದಂತೆ ಮಾಡುವು| ದನುನಯವು ನಿನಗೆಂದು ನುಡಿದನು ವಿದುರ ಕುರುಪತಿಗೆ ||೬|| ದೈವವೀದ್ರೌಪದಿಗೆ ಸೀರೆಯ | ನೈವುದಲ್ಲದೆ ಬಿಡಿಸಲಾಪುಡೆ | ದೈವ ತೊತ್ತಿರ ಹುರುಡುಗೆಲಸವ ಹಿಂದುಗೂಡದಲಿ || ದೈವವಿವಳಿಗೆ ತಾನಲೇ ತ| ನ್ನೈವರಕ್ಕಿದವಾತು ರಿಪುಗಳ | ವ್ಯೆವಳಿಯ ನುಡಿಗಾರೆ ನೀ ಸಾರೆಂದನಾಭೂಪ ||೭|| ನೀತಿಮರುಳನು ವಿದುರನೀತನ | ಮಾತಿನಲಿ ಫಲವೇನು ತೊತ್ತಿರೊ| ಳೀತಳೋದರಿ ಬೆರಸಿ ಬದುಕಲಿ ಕರ್ಣ ಕಳುಹಿವಳ || ಈತತುಕ್ಷಣಾದೃಷ್ಟಬಂಧನ| ವೇತರಲಿ ಮಾಡಿದಳೊ ಲಜ್ಜಾ | ಜಾತವುಳಿದುಮ ಬೆಳದಸೀರೆಯ ಕಟ್ಟಿ ಹೊರಸೆಂದೆ ||೮|| ಇವಳಲೇ ನಮ್ಮಿನಿಬರಭಿಮಾ| ನವನು ಸೆಳೆದಳಲಾ ಸ್ವಯಂವರ| ಭವನದಲಿ ಭಂಗಿಸಿದಳೆಮ್ಮನು ಸಭೆಯೊಳೆಡಹಿದರೆ || ಇವಳು ಬಹುವಿಧಪುಣ್ಯಶಕ್ತಿಯೊ| ಳಿವಗೆ ಸಿಲುಕಿದಳಿಂದು ತೊತ್ತಿರ | ಸವಡಿವೇಟದ ಸವಿಯ ಸುರಿಯಲಿ ಭಂಡವಿಂಡರಲಿ || ಬೂತುಗೆಡೆವನೊಳೆಂಬೆನೇ ಮರು| ಮಾತನೆಲೆಗಾಂಗೇಯ ತಮ್ಮದು| ನೀತಿಯೇ ತಾನಿವರಧನವೇ ಧರ್ಮಮಾರ್ಗದಲಿ || ಸೋತನರಸನು ತನ್ನನೆನ್ನನು | ಸೋತುದನುಚಿತವೆಂಬ ಬೆಡಗಿನ | ಮಾತನರಿಯದಮೂಢರನು ಸುಡಲೆಂದಳಿಂ

ದುರ್ಮುಖಿ ॥೧೦॥ ಸೋತುದಿಲ್ಲಾ ನಿನ್ನ ಸೋತುದ । ನೀತಿಯೆಂಬುದ ವಿಹಿತವೇ ತಾ । ನೀತನುಡಿಯಲಿ ಧರ್ಮಪುತ್ರನು ಸತ್ಯಸಂಧನಲೇ ॥ ನೀ ತಳೋದರಿ ತರಿಚುಗೆಡದಿ । ಮಾತಿನಲಿ ತಾ ಬಿಡುವನೇ ನಿ । ನ್ನೃತಗಳ ನುಡಿಸೆಂದು ಖಳ ಧಟ್ಟಿಸಿದನಂಗನೆಯ ॥೧೧॥ ಜೀಯ ಮಾತೇನಿವಳೊಡನೆ ರಿಪು । ರಾಯರಿಗೆ ದಾಸತ್ವವಾಗಲು । ಬಾಯಬಡಿಕೆಯದಾರೊಡನೆ ತದ್ವಾಸಧನವಲ್ಲಾ ॥ ಆಯತಾಕ್ಷಿಯನಿನ್ನು ನಿಮ್ಮಪ । ಸಾಯಿತೆಯರಲಿ ಕೂಡು ತೊತ್ತಿರ । ಲಾಯಬೇಡುಪಕಾರವೆಂದೆರಗಿದನು ಕಲಿಕರ್ಣ ॥೧೨॥ ಎಲೆಗೆಭಜಿಸಾ ಕೌರವಾನ್ವಯ । ತಿಲಕನನು ನಿನ್ನವರ ಪುರೆ ನಿ । ನ್ನಳಿವನೆನೆ ಯೀಸಮಯದಲಿ ಕಾಲೋಚಿತಕ್ರಮವ ॥ ಬಳಸು ನೀನೆನೆ ಗಜರಿದಳು ಕುರು । ತಿಲಕನನು ತರಿದೊಟ್ಟ ರಣದಲಿ । ತಿಳಿರಕುತದಲಿ ತಣಿವನನಿಲಜನೆಂದಳಿಂದುಮುಖಿ ॥೧೩॥ ಏಕೆ ಕೆಣಕಿದೆ ಕರ್ಣಬೂತಿನ । ಬೀಕರಿನ ಬದಗಿಯನು ಸಮರದೊ । ಳೀಕೆಯನಿಲಜ ಮುರಿವನೆನುತವೆ ತನ್ನ ಮುಂಜೆರಗ ॥ ನೂಕಿ ತೊಡೆಗಳ ತೋರಿಸುತ್ತಲೋ । ಕೈಕವೀರನನೇಡಿಸಿದರ । ವ್ಯಾಕುಲನ ಮನಖಂಡಿಯೋದುದು ಖತಿಯ ಹೊಯ್ಲಿನಲಿ ॥ ನೋಡಿದನು ಪರಿಘವನು ಕಡೆಗ । ಣ್ಣಾಡಿತಿವದಿರಮೇಲೆ ಮೈಯಲಿ । ಝಾಡಿಗೆದರಿತು ರೋಮ ಝಳಪಿಸಿತರುಣಾಮಯನಯನ ॥ ಮೂಡಿತುರಿ ಸುಯ್ಲಿನಲಿ ರೋಷದ । ಬೀಡು ಭೀಮನ ಕಂಡು ಧರ್ಮಜ । ಬೇಡಿಕೊಂಡನು ತನ್ನ ಕೊರಳಿನ ಬೆರಳಸನ್ನೆಯಲಿ ॥೧೪॥ ಸೈರಿಸಕಟಾ ಭೀಮರೋಷವಿ । ಕಾರಕಿದು ಹೊತ್ತಲ್ಲ ಸರ್ವವಿ । ಕಾರದಲಿ ಕೌರವರು ಮೆರೆಯಲಿ ಕಾಲವವರದಲಾ ॥ ಧಾರುಣೀಶನ ಧರ್ಮತತ್ವದ । ಸಾರವುಳಿದರೆ ಸಾಕು ಮಿಕ್ಕಿನ । ನಾರಿಧನವಭಿಮಾನ ಬೇಯಲಿಯೆಂದನಾ ಪಾರ್ಥ ॥೧೫॥ ಕ್ಷಮೆಯೆ ಧನವೆಂದಿದ್ದವಿವಳಲಿ । ಮಮತೆಯನು ಮಾಡಿದೆವೆ ನಾವು । ಭ್ರಮಿಸುವರೆ ದೇವೇಂದ್ರತೃಣವಿವಸಾವಪಾಡೆವಗೆ ॥ ರಮಣಿಯಾಡಿದಧರ್ಮಪದವಿದು । ಕುಮತಿಗಳ ಮತವಲ್ಲದಿದ್ದೊಡೆ । ತಮಗೆದಾಸಿಯೆ ದ್ರುಪದನಂದನೆಯೆಂದನಾ ಪಾರ್ಥ ॥೧೬॥ ಶ್ರುತಿತದರ್ಥಸ್ಮೃತಿಗಳಲಿ ಪಂ । ಡಿತರು ಪುಣತರುಂಟು ಪಾರ್ಥ । ಸ್ಮೃತಿಯ ಬಳಿಕಾದರಿಸುವೆವು ನಿಮಗಾದದಾಸ್ಯದಲಿ ॥ ಕೃತಕವಿಲ್ಲದೆ ನಡೆದು ತೋರಾ । ಸತಿಯ ಸೆರೆಯನು ಬಿಡಿಸಲೆಮ್ಮಾ । ಕ್ಷಿತಿಯೊಳಾರುಂಟೆಂದು ಕೌರವರಾಯ ಗರ್ಜಿಸಿದ ॥ ಭಾಷೆಯೇಕಿವನೊಡನೆ ದುರುಪದಿ । ದಾಸಿಯಲ್ಲೆಂಬವನದಿವಸವ । ದೇಸುಬಲಹೋಫ್ರೋತುಮರು ತಾನಿಂದ್ರಸುತನೆಂಬ ॥ ಐಸರಲಿ ದೇವೇಂದ್ರ ತೃಣಗಡ । ವೈಸಲೇ ನೀಮುನಿದೊಡೀನುಡಿ । ದಾಸಭಾವದ ಬಣಗುಗಳಿಗೇಕೆಂದನಾಕರ್ಣ ॥೧೯॥ ನೂಕಿಸಾ ತೊತ್ತಿರಮನೆಗೆ ತಡವೇಕೆ ತರುಣಿಯನಿನ್ನು ನೀನು ವಿ । ವೇಕದಲಿ ನನ್ನಂತೆ ತೆಗೆ ಸಾಕಿವರ ಮಾತೇನು ॥ ಈ ಕುಠಾರರ ಕಳುಹಿ ಕಳೆ ತಾ । ವೇಕೆ ನೃಪಸಭೆಯಲಿ ವರಾಸನ । ವೇಕೆನುತ ಕುರುಪತಿಗೆ ನುಡಿದನು ಕರ್ಣ ಖಾತಿಯಲಿ ॥೨೦॥ ಅಹುದಲೇ ಬಳಿಕೇನು ನೀನತಿ । ಬಹಳಮತಿಯೈ ಕರ್ಣ ನೀನೀ । ಕುಹಕಕೋಟಿಯನೆತ್ತ ಬಲ್ಲೆ ವೃಥಾಭಿಮಾನಿಗಳ ॥ ರಹಣಿ ಸಾಕಂತಿರಲಿ ತೊತ್ತಿರ । ಸಹಚರರ ಸೂಳಾಯಿತರ ಕರೆ । ಮಹಿಳೆಯನು ನೂಕೆಂದು ದುಶ್ಶಾಸನಗೆ ನೇಮಿಸಿದ ॥೨೧॥ ಸುಳಿವಹುಲ್ಲೆಯ ಸೋಹಿನಲಿ ಕುಕ್ಕುಳಿಸಿದರೆ ಕುಕ್ಕುರನ ಕೈಯಲಿ । ತಳುವಹುದೆ ಜನಮೇಜಯಕ್ಷಿತಿಪಾಲ ನಿನ್ನವರಾ ॥ ಬಳಲಿಕೆಯನೇನೆಂಬೆನೈ ಹಿಡಿ । ದೆಳೆಯೆ ಹಲುಬಿದಳಕಟ ರಾಯನ । ಲಲನೆಗೀವಿಧಿಯೇ ಮಹಾದೇವೆಂದು

ದಖಿಳಜನ ॥೨೨॥ ಮೋಣಿಸೈ ಗಾಂಗೇಯ ಗುರು ನಿ। ಮ್ಮಾಣೆಯಡಿ ಕೃಪ ಕೃಪೆಯಮಾಡೈ । ರಾಣಿವಾಸಂಗಳಿರ ನಿಲಿಸಿರೆ ನಿಮ್ಮಮೈದುನನ ॥ ಪ್ರಾಣವಿದಕೊಳಹೇಳಿರೌ ಸಾ। ಕೂಣೆಯವ ಹೊರಲಾರೆನೆನುತಾ। ರಾಣಿ ಹಲುಬಿದಳೊಡೆಮುರುಚಿ ಹೆಣಗಿದಳು ಖಳನೊಡನೆ ॥೨೩॥ ಮಾವ ನಿಮ್ಮಯ ನೇತ್ರವಂತ। ಭರ್ವದಲಿ ಬೆರೆಸಿದೊಡೆ ವಿಜ್ಞಾ । ನಾವಲಂಬನದಿಟ್ಟಿ ಬೆಂದುದೆ ನಿಮ್ಮಹೃದಂಬುದಲಿ॥ ದೇವಿಯರಿಗಿದು ಸೊಗಸಲಾ ಸ। ಖ್ಯಾವಳಿಗೆ ಸೇರುವುದಲಾ ನಿ । ರ್ಜೀವರಾದಿರೆ ನೀವೆನುತ ಹಲುಬಿದಳು ಲಲಿತಾಂಗಿ ॥೨೪॥ ಕ್ಷಿತಿಯೆ ಬಿಡಿಸಾ ಸೆರಗನೆಲೆಪಾ। ರ್ವತಿಯೆ ತನ್ನದು ಧರ್ಮವಾದೊಡೆ । ಗತಿ ತನಗೆ ನೀವಾಗಿರೌ ಕಮಲಾದಿಶಕ್ತಿಗಳು ॥ ಸತಿಯಹಲ್ಯಾದಿತಿವರಾರುಂ। ಧತಿಮಹಾಮಾಯಾದಿದೇವ । ಪ್ರತತಿ ಬಿಡಿಸಿರೆ ಸೆರಗನೆಂದೊರಲಿದಳು ಪಾಂಚಾಲೆ ॥೨೫॥ ಅಂಧನೊಬ್ಬನೆ ಮಾವ ನೀವೇ। ನಂಧರಾದಿರೆ ಪಾಂಡು ಕರುಣಾ । ಸಿಂಧು ನೀಸೈರಿಸುವುದೇ ತನ್ನೀವಿಪತ್ತಿನಲಿ ॥ ಅಂಧಕಾಸುರಮಥನ ನೀನೇ । ಬಂಧಿಸಿದೆಲಾ ಪೂರ್ವವರಸಂ। ಬಂಧವನು ನೀ ಸೆರಗ ಬಿಡಿಸೆಂದೊದರಿದಳು ತರಳೆ ॥೨೬॥ ಸೊಸೆಯಲಾ ದೇವೇಂದ್ರಯೆನ್ನಯ । ಗಸಣಿಯಾರದು ಹಿರಿಯಮಾವನ। ವಶವಲಾ ತ್ರೈಜಗದ ಜೀವರ ಜೀವವಿಭ್ರಮಣ ॥ ಉಸುರು ನಿನ್ನಾಧೀನವೀದು । ವ್ಯಸನಿಗಳ ಕೊಂಡಾಡುವರೆ ಕರು । ಣಿಸು ಸಮೀರಣಯೆಂದು ಹಲುಬಿದಳಾಶ್ವಿನೇಯರಿಗೆ ॥೨೭॥ ಮಾವದಿರು ಮೊದಲಾದ ದಿಕ್ಪಾ। ಲಾವಳಿಗೆ ನಮಿಸಿದೆನು ನೈದಿಲ। ತಾವರೆಯಮಿತ್ರರಿಗೆ ಮಂಡೆಯೊಳಿಟ್ಟೆನಂಜುಳಿಯ ॥ ಕಾವುದೆನ್ನನು ಹೆಂಗುಸಲ್ಲಾ । ಹಾವು ಹಲಬರ ನಡುವೆ ಸಾಯದು । ದೇವರಿಗೆ ದೂರೈದಲೆಂದೊರಲಿದಳು ಲಲಿತಾಂಗಿ ॥೨೮॥ ಬಾಯ ಬಿಡಲೇಕಕಟ ಬಳಲಿದೆ । ತಾಯೆ ಕೈದೋರಸರು ನಿನ್ನಯ । ರಾಯರೈವರು ಕೆಲಬಲದ ಜನರೇನಮಾಡುವರು ॥ ನ್ಯಾಯ ನಿನ್ನದು ದೈವದೊಲುಮೆಯ। ದಾಯ ತಪ್ಪಿತು ಬರಿದೆ ಧೈರ್ಯದ । ಬೀಯಮಾಡದಿರೆಂದು ನುಡಿದನು ವಿದುರನಂಗನೆಗೆ ॥೨೯॥ ಎಲೆಗೆ ನಿನ್ನವರೇನಮಾಡುವ। ರೊಲೆಯೊಳಡಗಿದಕೆಂಡವಿವರ । ಗ್ಗಳಿಕೆ ನಂದಿದುವೆನುತ ಮುಂಚೆರಗೆತ್ತಿಮಾನಿನಿಗೆ ॥ ಖಳನು ತೊಡೆಗಳ ತೋರಿಸಿದೊಡತಿ । ಮುಳಿದು ಕೊಟ್ಟಳು ಶಾಪವನು ನಿ। ನ್ನಳಿವು ತೊಡೆಯಲಿ ಮುಗಿವುದೆಂದಳು ಮುಗುದೆ ಖಾತಿಯಲಿ ॥೩೦॥ ಕಡಲ ತೆರೆಗಳ ತರುಬಿ ತುಡುಕುವ। ವಡಬನಂದದಿ ಮೇಘಪಟಲವ । ನೊಡೆದು ಸೂಸುವಸಿಡಿಲಿನಂದದಿ ಸಭೆಯೊಳಡಹಾಯ್ದು ॥ ಕುಡಿ ಕುಠಾರನ ರಕುತ್ತವನು ತಡೆ। ಗಡಿ ಸುಯೋಧನನೂರುಗಳ ನಿ। ಮ್ಮಡಿಸಿಮುನಿಯಲಿ ಧರ್ಮಸುತನೆನುತಿದ್ದನಾಭೀಮ ॥೩೧॥ ಹೆದರುಹೊಕ್ಕರು ಸಭೆಗೆ ಕೌರವ।ನೆದೆಬಿರಿದುದಾಸ್ಥಾನಜಲನಿಧಿ।ಕದಡಿತುಕ್ಕಿದಬೆರಗಿನಲಿ ಬೆಳ್ಳಾದನವನೀಶ॥ ಹದನಹುದು ಹಾಯೆನುತಲಿದ್ದರು।ವಿದುರಭೀಷ್ಮದ್ರೋಣರಿತ್ತಲು।ಕೆದರುಗೇಶದಕಾಂತೆಹುಬ್ಬಿದಳುಹರುಷಪುಳಕದಲಿ ॥೩೨॥ ಒಡೆಯನೈತರಲಿಕ್ಷುದೋಟದ। ಬಡನರಿಗಳೋಡುವವೊಲೀಕೆಯ । ಹಿಡಿದೆಳೆವಖಳಹಾಯ್ದನಾ ಕೌರವನ ಹೊರೆಗಾಗಿ ॥ ನುಡಿ ತರುಣಿ ತನ್ನಾಣೆ ಭೀತಿಯ।ಬಿಡಿಸಿದೆನಲಾ ರಾಯನಾಜ್ಞೆಯ । ತಡಿಕೆವಲೆ ನುಗ್ಗಾಯ್ತು ಹೋಗಿನ್ನೆಂದನಾ ಭೀಮ ॥೩೩॥ ಉರವಕೋಪಾಗ್ನಿಯಲಿ ಕರ್ಣನ । ಶಿರದಭಾಂಡದಲಿವನ ನೊರೆನೆ। ತ್ತರಿನಲಿವನಗ್ರಜನ ಕೊಬ್ಬಿದನೆಣನ ಕೊಯ್ಕೊಯ್ದು॥ ದುರುಳಶಕುನಿಯ ಕಾಳಿಜದೊಳೊಡ । ವೆರಸಿ ಕುಡಿಸಿ ಮಹೋಗ್ರಭೂತದ । ನೆರವಿಗುಣಲಿಕ್ಕುವೆನು

ಸತಿ ಕೇಳೆಂದನಾ ಭೀಮ ||೩೪|| ಕೊಂಬೆನೇ ಧರ್ಮಜನ ಧರ್ಮದ । ಡೊಂಬನೀ ಮುದಿಗುರುಡನಿಕ್ಕಿದ ನಂಬುಗೆಯ ವಿಷವ್ಯಸಲೇ ತಲೆಗೇರಿತ್ತಗ್ರಜನ ॥ ಡೊಂಬಿಗರ ಹಾವರಿಗರಿವದಿರ । ತಿಂಬೆನೀಗಳೆ ತರುಣಿ ಕೇಳೆನು । ತಂಬುಜಾಕ್ಷಿಯ ಸಂತವಿಟ್ಟನು ಕರುಳನೇರಿಸುತ ||೩೫|| ಇಳಿದನರ್ಜುನನಾಸಭಾ ಮಂ। ಡಲವ ವೇದಿಯನಹಹ ಧರ್ಮಜ । ನುಳಿವನೇ ನುಡಿಯಡಹಿದರೆ ಸಿಗುರೇಳ್ಗ ಸದ್ಗುಣಕೆ ॥ ಕಳವಳದ ಹಾಪುರದ ಕಾಲುವೆ । ಗೊಳಗುಕೊಡಬರು ಭೀಮರಿಪುಗಳ । ಓಳಿವೊಡಿದು ಹೊತ್ತಲ್ಲೆನುತ ಹಿಡಿವನು ವೃಕೋದರನ ||೩೬|| ಮಾಣಲದು ಕೌರವರ ಸೂರ್ವರ । ಗೋಣಬನ ಕಾಳೆಗದೊಳೆನ್ನಯ। ಕೇಣಿ ತನ್ನಯ ಗದೆಗೆ ದುರಿಯೋಧನನ ತೊಡೆಗಳಿಗೆ ॥ ವಾಣಿಯವು ದುಶ್ಶಾಸನನ ತನಿ । ಶ್ರೋಣಿತವ ತಾ ಕುಡಿಯದಿರೆ ನಿ । ರ್ವ್ವಾಣ ಸ್ವರಣೆಗಿದುವೆ ಫಲವೆಂದೊದರಿದನು ಭೀಮ ||೩೭|| ಧರಣಿಜಲ ಪಾವಕ ಸಮೀರಾ । ದ್ಯರುಗಳಲಿ ಶಕ್ರನಿರುಋತಿ । ವರುಣ ವಾಯು ಕುಬೇರ ಯಮರೆಂಬಖಿಳ ದಿಗಧಿಪರು ॥ ಬರೆದುಕೊಂಡಿರಿ ಭಾಷೆಯನು ಸುರ । ನರಫಣಿವ್ರಜವೆಂಬ ಭೀಮನ । ಧರೆಧುರದ ಧಟ್ಟಣೆಗೆ ಧೃತಿಗೆಟ್ಟುದು ಕುರುಸ್ತೋಮ ||೩೮|| ಬಲಿಸಿದ್ರೆ ಭಾಷೆಯನು ದೇವಾಸುರರ ಸಾಕ್ಷಿಯಲಾಯ್ತು ಕರ್ಣನ । ಕೊರಳಿಗೆನ್ನಯ ಬಾಣಕುಂಗುರವುಡಿಕೆಯಿಂದಿನಲಿ ॥ ಸುರನರೋರಗರುದಿರೆಂದ । ಬ್ಬರಿಸಿದನು ಕಲಿಪಾರ್ಥ ಶಕುನಿಯ । ಶಿರಕೆ ಕೊಟ್ಟೆನು ಸಂಚಕಾರವನೆಂದ ಸಹದೇವ ||೩೯|| ಅರಸ ಕೇಳಾಶ್ಚರ್ಯವನು। ಗಜ ಪುರದೊಳಗೆ ನೆಲ ಬಾಯ್ಬಿಟ್ಟುದು । ಸುರಿದುದರುಣಾಂಬುಪಿನ ಮಳೆ ತತ್ಪುರದ ಮಧ್ಯದಲಿ ॥ ನರಿಗಳವನಿಪನಗ್ನಿಹೋತ್ರದೊ । ಳೊರಲಿದವು ಸುಸ್ವೇಪದಲಿ ಹೂಂ । ಕರಿಸುತಿರ್ದವು ದೇವತಾಪ್ರತಿಮೆಗಳು ನಗರಿಯಲಿ ||೪೦|| ಉಗುಳಿದವು ಕುಳುಗಿಡಗಳನು ಕೈ । ದುಗಳು ವಾರುವಪಟ್ಟದಾನೆಗ । ಳೊಗುವಿಗೆಯ ಕಂಬನಿಗಳಭ್ರದಿ ಧೂಮಕೇತುಗಳು ॥ ನೆಗಳಿದವು ಬಿರುದಾಳಿಗಳಗಳೆ । ಮುಗುಚಿ ಮುರಿದವು ದೇವತಾ ಭವನಗಳ ಶಿಖರವನಂತವದ್ಭುತವಾಯ್ತು ನಿಮಿಷದಲಿ ||೪೧|| ಭಾರಿಸಿತು ದೆಸೆದೆಸೆಗಳಲಿ ಹಾ । ಹಾರವಾವಿರ್ಭಾವತೊಳಗಿರೆ । ತಾರಕೆಗಳಿನಬಿಂಬವನು ಝೋಂಪಿಸಿದನಾ ರಾಹು ॥ ತೋರಣದಲುರಿ ತಳಿತು ರಾಜ । ದ್ವಾರ ಹೊಗೆದುದು ದೆಸೆಗಳಂಬರ । ಧಾರುಣಿಯೊಳುತ್ಪಾತ ಬಿಗಿದುದು ಮೊಗೆದುದದ್ಭುತವ ||೪೨|| ನಡುಗಿತಿಳೆ ನಡುಹಗಲು ಕತ್ತಲೆ । ಯಡಸಿತಾಕಾಶದಲಿ ಹೆಮ್ಮರ । ನುಡಿದು ಬಿದ್ದವು ಸಲಿಲವುಕ್ಕಿತು ಕೂಡೆ ಕೆರೆತೊರೆಯಾ ॥ ಉಡಿದವವದಿರ ಕೆಯ್ಯಕೈದುಗ । ಳೊಡನೊಡನೆ ಸಿಡಿಲೆರಗಿತಾಸಭೆ । ಸೆಡೆಮುದಲ್ಲಿಯದಲ್ಲ ಹುದುಗಿತು ಭೀತಿಗರ ಹೊಡೆದು ||೪೩|| ಅಹಹ ಭೂತಕ್ಷೋಭಮಿದು ನಿ । ರ್ವಹಿಸುವುದು ಕುರುಕುಲವನಕಟೀ । ಮಹಿಳೆ ಯೊರಲಿದಳಮರನಿಕರಕೆ ದೈವಕೃತವಿದಲೇ ॥ ಕುಹಕಿ ಮಕ್ಕಳನಿಕ್ಕಿ ಮೌನದೊ । ಳಿಹರೆ ಬಾ ಧೃತರಾಷ್ಟ್ರ ಪಾಂಡವ । ಮಹಿಳೆಯನು ಸಂತೈಸು ನಡನಡೆ ಯೆಂದನಾಭೀಷ್ಮ ||೪೪|| ಇದಕೆ ನಿಸ್ಸಂದೇಹವೇ ವರ । ಸುದತಿಯನುನೀಬೇಡಿಕೊಳ್ಳು ಯ । ಜ್ಞದಲಿ ಪಾವಕಗುದಿಸಿದಳು ಪಾಂಚಾಲೆ ಮಾನಿನಿಯೇ ॥ ಇದು ಭವತ್ಸಂತಾನವಿಲಯಾ । ಸ್ಪದಕಣಾ ನಡೆ ಪಾಪಿಯೆಂದಾ । ವಿದುರಗುರುಕೃಪರೌಕಿವರು ಧೃತರಾಷ್ಟ್ರಭೂಪತಿಯ ||೪೫|| ಭೇದಮಿಗೆ ನಡೆತಂದು ನೃಪತಿ ತ್ರ । ಳೋದರಿಯ ನುಡಿಸಿದನು ಮಗಳೆ ವಿ । ಷಾದವನು ಬಿಡು ಮಾತಮನ್ನಿಸು ಮಾವ ನಾ

ನಿನಗೆ ॥ ಈದುರಾತ್ಮರ ಮಾತು ಬೇಡವಿಭೇದವೇ ದುಶ್ಶಳೆಗೆ ನಿನಗೆಂದಾದರಿಸಿ ನುಡಿದನು ವಿಪತ್ತಿನಲಾ
ಮಹಾಸತಿಯಾ ॥೪೬॥ ಮಗಳಹೆನು ಸೊಸೆಯಹೆನು ನಿಮ್ಮಯ । ಮಗನ ಕಣ್ಣಿಗೆ ಕಾಳಕೂಟದ ।
ಮಗಳೊ ಸೊಸೆಯೊ ನಾದಿನಿಯೊ ಬೆಸಗೊಳ್ಳಿ ನಿಮ್ಮವನ ॥ ಅಗಡುಮಾಡಿದು ನಿಮ್ಮ ಮಕ್ಕಳ ।
ವಿಗಡತನಕಂಜಿದರೊ ದುರಿತಕ । ಸೊಗಡಿಗಂಜಿದರೋ ಪೃಥಾಸುತರೆಂದಳಿಂದುಮುಖಿ ॥೪೭॥ ಧರ್ಮ
ನಿಮ್ಮದು ತಾಯೆ ಕಿಲ್ಬಿಷ । ಕರ್ಮವೆಂಬುದು ಲೋಕವರಿಯಲು । ನಿರ್ಮಲರು ನೀವ್ಪಾಪಪಂಕಿಲಪ್ರ
ಮಯರಾವ್ ಜಗಕೆ ॥ ದುರ್ಮತಿಗಳಿವದಿರ ಕುಚೇಷ್ಟೆಯ । ನೆಮ್ಮ ನೀಕ್ಷಿಸಿ ಪಾರೆ ಮಗಳೆ ಸ । ದ್ಧರ್ಮ
ಮತಿಗಳು ನೀವೆನುತ ತಿಳುಹಿದನು ದ್ರೌಪದಿಯ ॥ ದುರುಳರೆನ್ನವರು ದುರಂತ । ಕರಣರಾವ್
ದುಶ್ಚೇಷ್ಟೆಯೆಮ್ಮದು । ದುರಭಿಮತದುಷ್ಪೂರ್ವರೆನ್ನ ಕುಮಾರರಭಿಧಾನ ॥ ಕರುಣಿಗಳು ಕಮನೀಯ
ಗುಣಬು । ಧುರರು ಶೌರ್ಯಬಲಪ್ರಭಾವರೋ । ತ್ತರರು ನಿನ್ನವರೆಂದು ನಯದಲಿ ತಿಳುಹಿದನು
ಸತಿಯು ॥೪೯॥ ತಾಯೆ ಬೇಡ್ ವರವ ತಾನ । ನ್ಯಾಯದಲಿ ನಿಮ್ಮನು ನಿರರ್ಥಕೆ । ನೋಯಿಸಿದೆನದ
ನೆನೆಯದಿರಿ ಸರ್ವಾಪರಾಧವನು ॥ ದಾಯಗೆಡೆ ನಿನ್ನವರು ಕೊಲುವೊಡೆ । ಕಾಯಲಾಪನೆರುಂಟೆ
ವರವ । ತ್ಯಾಯುಧರಲೇ ನೀವೆನುತ ತಿಳುಹಿದನು ಧೃತರಾಷ್ಟ್ರ ॥೫೦॥ ವರನ ನಿತ್ತರೆ ಮಾವ
ಭೂಮೀ । ಶ್ವರರ ದಾಸ್ಯವ ಬಿಟ್ಟುಕಳೆ ಮು । ತ್ತೈರಡನೆಯ ವರವೇನು ವಚನಿಸು ಕೊಟ್ಟೆ ನಾನಿ
ನಗೆ ॥ ನರವೃಕೋದರನಕುಲಸಹದೇ । ವರಿಗೆ ಕೊಡು ಶಸ್ತ್ರಾಸ್ತ್ರಗಜರಥ । ತುರಗನಿಕರವನೆಂದೊ
ಡೊಂಬನುಮತ್ತೆ ಧೃತರಾಷ್ಟ್ರ ॥೫೧॥ ವರವೆರಡು ಸಂದವು ಮನೋರಥ । ಭರಿತವಾಗಲಿ ಮತ್ತೆ
ಹೇಳೆನೆ । ತರುಣಿಯೆಂದಳು ಧರ್ಮಶಾಸ್ತ್ರಪ್ರಕಟಪದ್ಧತಿಯು ॥ ವರವು ವೈಶ್ಯರಿಗೊಂದು ನೃಪಸತಿ ।
ಗೆರಡು ನೃಪರಿಗೆ ಮೂರು ಭೂದೇ । ವರಿಗೆ ನೂರಧಿಕಾರವೆಂದಳು ನಗುತ ಪಾಂಚಾಲೆ ॥೫೨॥ ಹಾರ
ಲತಿಶಯತೃಷ್ಣೆ ನಾಶಕೆ । ಕಾರಣವಲೇ ಮಾವ ವರವಿದು । ಭಾರಿಯಾದೊಡೆ ಬೇಡಲಘುವನು ಕರುಣಿಸು
ವುದೆನಲು ॥ ಧಾರವಾವುದು ಮಗಳೆ ಕೊಟ್ಟೆನು । ಧಾರುಣೀಪತಿ ಬಿಜಯಮಾಡಲಿ । ವೈರಬಂಧದ
ಕಂದುಕಲೆಯನು ಮರೆದು ಕಳೆಯೆಂದ ॥೫೩॥ ಪೂತುರೇ ಪಾಂಚಾಲೆ ಭುವನ । ಖ್ಯಾತೆಯಾದೆಗೆ ಜಾಗು
ನಿನ್ನಯ । ಬೈತಲೆಯಮಣಿ ನಾರುವೋದುದ ಮತ್ತೆ ಬಿಡಿಸಿದಲೇ ॥ ಪೀತವುರ ಫಲವಾಯ್ತಲಾ ನಿ ।
ನ್ನಾತಗಳ ಬಹುಖೇದಜಲಧಿಗೆ । ಸೇತುವಾದೆಗೆ ನೀನೆನುತ ತಲೆದೂಗಿದನು ಕರ್ಣ ॥೫೪॥ ಹೊಕ್ಕಗೂಡಿನ
ಹುಲಿಗಳನು ಹೊರ । ಗಿಕ್ಕಿದೆಯಲಾ ಯಿರುಬಿನಲಿ ಬಿ । ದ್ದಕ್ಕಲಂಗಳ ನೋಯಲೀಯದೆ ಕಲಕತ್ತೆಗೆ
ದೆಯಲಾ ॥ ಸೊಕ್ಕಿದುರುವಿಗಾನುಗಳೆಗಂಟಲೊ । ಳಿಕ್ಕಿದವಲಾ ಗಾಣ ಗಂಟಲ । ಸಿಕ್ಕಿಬಿಡಿಸಿದ ಗರುವೆ
ನೀನೆಂದುಲಿದನಾಕರ್ಣ ॥೫೫॥ ಘುಡುಘುಡಿಸಿದನು ರೋಷವಹ್ನಿಯ ತಡಿಯ ಹೊಕ್ಕನು ಬಿಗಿದ
ಹುಬ್ಬಿನ । ಬಿಡೆಯಬವರಿಯಲಳಿಯಲವಣೆಯ ಲೋಚನದ್ವಯದ ॥ ಕಡುಮುಳಿಸಿನುಬ್ಬಟೆಯ ಮಾ
ರುತಿ । ಕಡುಹಿನಲಿ ಭುಗಿಭುಗಿಸಭಾರಿಯ । ಕಿಡಿಗೆದರಿ ನೋಡಿದನು ಬಾಗಿಲ ಲಾಳವುಂಡಿಗೆಯ ॥
ಹಗೆಗಳೇ ಕೌರವರು ತೆಗೆ ಬಲು । ವಗೆಕಣಾ ಕಾಮಾದಿರಿಪುಗಳು । ಸಗಳಿಕೆಯ ಸಸಿಯಾಗವೇ ನಿಜಸತ್ಯ
ಭಾಷೆಗಳು ॥ ಉಗುಳುಗುಳು ರೋಷವನು ರಾಧೆಯ । ಮಗ ವಿಕಾರಿಕಣಾ ವೃಕೋದರ । ಬೆಗಡುಗೊ
ಳಿಸದಿರಮ್ಮನೆಂದನು ಧರ್ಮನಂದನನು ॥೫೬॥ ಬಾ ವೃಕೋದರ ನಕುಲ ಬಾ ಸಹ । ದೇವ ಬಾರ್ಥ

ತಮ್ಮ ಫಲುಗುಣ । ದೇವಿಯರು ನೀವ್ಬನ್ನಿಯೆನಲವನೀಶನೈತಂದು ॥ ಆವುದೈ ಕರ್ತವ್ಯ ನೀವೇ । ದೈವಗುರುಪಿತರೆಂದು ಮಿಗೆ ಸಂ । ಭಾವನೋಕ್ತಿಯಸಾಡಿದನು ಧೃತರಾಷ್ಟ್ರಭೂಪತಿಗೆ ॥೫೮॥ ಮಕ್ಕಳೆನಗಲ್ಲವರು ನೀವೇ । ಮಕ್ಕಳೈವರು ಮಗನೆ ನಮ್ಮದು । ಮಕ್ಕಳಾಟಿಕೆಯಾಯ್ತಲಾ ಸೌಬಲನ ದೆಸೆಯಿಂದ ॥ ಮಿಕ್ಕು ನೀ ಸ್ವೈರಿಸುವುದೆಮ್ಮದು । ಬಕ್ಕುಡಿಯಬೇಳಂಬ ನಿಮ್ಮಲಿ । ಕಕ್ಕುಲಿತೆಯಿಲ್ಲೆಂದು ತೆಗೆದಪ್ಪಿದನು ಧರ್ಮಜನ ॥೫೯॥ ಎನ್ನನೀಕ್ಷಿಸಿ ಮಗನೆ ಮರೆ ನಿನ । ಗನ್ಯಳೇ ಗಾಂಧಾರಿ ಪಿತನೆಂ। ದೆನ್ನ ಕಾಬಿರಿ ವೃದ್ಧನೆಂದು ಗತಾಕ್ಷತಾನೆಂದು ॥ ಮನ್ನಿಸುವಿರೆಲೆ ಮಕ್ಕಳಿರ ಸಂ । ಪನ್ನಸತ್ಯರು ನೀವು ಕರ್ಮಿಗ । ಳೆನ್ನವರು ದೋಷಾಭಿಸಂಧಿಯ ಮರೆದುಕಳೆಯೆಂದ ॥೬೦॥ ರೂಢಿಗಗ್ಗದ ರಾಜಸೂಯದ । ಲೂಡಿ ನಿರ್ಜರಕಟಕವೆನು ಖಿಯ । ಖೋಡಿಯಿಲ್ಲದೆ ಸಲಿಸಿದ್ಕೆ ತ್ರಿದಿವದಲಿ ಪಾಂಡುವನು ಮಾಡುವೆಯಲಾ ಮಗನೆ ಯೆನ್ನೀ । ಗೂಡ ಬಿಸುಟರೆ ಸುರರಸಂಗಡ । ಪಾಡುವಂತಿರೆ ತನಗೆ ಗತಿ ನೀನಲ್ಲದಾರೆಂದ ॥೬೧॥ ಪಾಲಿಸವೆನಿಯ ನೆನ್ನಮಕ್ಕಳ । ಖೂಳತನವನು ಮನಕೆ ತಾರದಿ । ರಾಲಿಸದಿರ ಪರಾಧಿ ವಾಚಾಳರ ವಚೋತ್ತರವ ॥ ಕಾಲದೇಶಾಗಮದ ನಿಗಮದ। ಡಾಳವರಿದೈಹಿಕಪರತ್ರವಿ । ಟಾಳಿಸದೆ ನಡೆ ಕಂದ ಯೆಂದನು ಮರಳಿ ತೆಗೆದಪ್ಪಿ ॥೬೨॥ ತರಿಸಿದನು ಮಣಿವರ್ಗದಮಲಾಂ । ಬರವ ಸಂಬುಜಮುಖಿಗೆ ರತ್ನಾ । ಭರಣವನು ವಿವಿಧಾನುಲೇಪನಚಿತ್ರಸಂಪುಟವ ॥ ಅರಸನಿತ್ತನು ಪೀಳೆಯವ ಕ । ರ್ಪುರದ ವತಲಾಯಿಗಳ ನಭ್ಯಂ । ತರಕಿವರ ಕಳುಹಿದನು ಗಾಂಧಾರಿಯನು ಕಾಣಿಸಿದ ॥ ನೋಡಲಾಗದು ಮಕ್ಕಳಿರ ಕುಲ । ಗೇಡಿಗರ ಕಪಟವನು ನಮ್ಮನು । ನೋಡಿ ಮರೆವುದು ಪಾಂಡುವೆಂದಿಪುದಂಧಭೂಪತಿಯ ॥ ಸಾಡೆ ತಾಯೇ ನೊಂದೆ ಬಾ ಮಗ । ಮಾಡಿದನುಚಿತಕರ್ಮವೆಲ್ಲವ ಮಾಡಿದೆನು ತಾನೆಂದಳಾ ದ್ರೌಪದಿಗೆ ಗಾಂಧಾರಿ ॥೬೩॥ ಮರೆದೆನಾಗಳೆ ವಿಗಡವಿಧಿಯೆ । ಚ್ಚರಿಸಿದೊಡೆ ಹರಿಭಕ್ತಿ ಮುಖದಲಿ । ಮುರಿದುದೆಮ್ಮಯ ಪೂರ್ವದುಷ್ಪ್ರಾರಬ್ಧಕರ್ಮಫಲ ॥ ಹೆರರನೆಂಬುದು ಖೂಳತನವೇ । ನರಿಯದವರೇ ಪಾಂಡುಸುತರೆಂ । ದುರುಬೆಯಲಿ ಬಿನ್ನವಿಸಿದಳು ಗಾಂಧಾರಿ ಗಬುಜಾಕ್ಷಿ ॥೬೪॥ ಸಾಕು ನೇಮವ ಕೊಡಿ ಯೆನುತ ಕುಂ । ತೀಕುಮಾರರು ಬೀಳುಕೊಂಡರು । ನೂಕಿ ಹೊಕ್ಕುದುದಾರವಟ್ಟದಲಿವರ ಪರಿವಾರ ॥ ತೋಕಿದವು ಸೀಗುರಿಗಳೆಡಬಲ । ದಾಕೆಯಲಿ ಪಾಂಡವಕುಮಾರಾ । ನೀಕ ಬೆರಸಿತು ಗಜತುರಗರಥಪಾಯದಳಸಹಿತ ॥೬೫॥ ಕಳಿದೆವೇ ಖಳರೊಡ್ಡಿದಿರುಬಿನ । ಕುಳಿಗಳನು ಕೃತಪ್ಪುವಾಡದೆ । ಸಲಹಿದೆವೆ ಸತ್ಯವನು ಸುಜನರ ಕಲೆಗೆ ಸಂದೆವಲೇ ॥ ಕಳವಳದ ಕಡುಗಡಲೊಳಾಳದೆ । ಸುಳಿದೆವಿತ್ತಲು ತಿವತಿವಾ ಯದುತಿಲಕ ಗದುಗಿನ ವೀರನಾರಾಯಣನ ಕರುಣದಲಿ ॥೬೬॥

ಅಂತು ಸಂಧಿ ೧೫೪ಕ್ಕೆ ಪದ ೧೦೬೧ಕ್ಕಂ ಮಂಗಳಮಸ್ತು

# ಹದಿನಾರನೆಯ ಸಂಧಿ.

ಸೂಚನೆ॥ ದ್ಯೂತಮುಖದಲಿ ನಿಖಿಳರಾಜ್ಯವ । ಸೋತು ತನ್ನನುಜಾತಮುನಿಸಂ ।
ಘಾತಸಹಿತವನೀಶ ವನವಾಸಕ್ಕೆ ಹೊರವಂಟ ॥

---

ಕೇಳು ಜನಮೇಜಯಧರಿತ್ರೀ । ಪಾಲ ಕುಂತಿಯನಂದನರು ತ । ಮ್ಮಾಳೊಡನೆ ಹೇಳಿದರು ಸೌಭದ್ರಾದಿತನಯರಿಗೆ ॥ ಬಾಲಕಿಯ ಬೇಳಂಬವನು ಜೂ । ಜಾಳಿಗಳ ಜಜ್ಝುರತನವನು । ಕೇಳಿ ಬೈದುದು ಸೇನೆ ಖತಿಯಲಿ ಖಳಚತುಷ್ಟಯವ ॥೧॥ ಎತ್ತಿತೀಪಾಳೆಯವು ನಿಜಪುರ । ದತ್ತ ತಿರುಗಿತು ಜನಜನಿತರಾ । ಜೋತ್ತಮನ ತಡೆಯಾಯ್ತು ಸತ್ಯಕ್ಷಮೆಪರಾಕ್ರಮಕೆ ॥ ಇತ್ತಲಡುಪಾಯ್ಬೇಗೆ ಬಿಸುಗುದಿ । ಕಿತ್ತಡವು ಕಾರ್ಪಣ್ಯ ಕಪಟ ಖ । ಳೋತ್ತಮರ ಹೃದಯದಲಿ ಹುದುಗಿತ್ತು ನೃಪತಿ ಕೇಳೆಂದ ॥೨॥ ರವಿಯುದಯದಲಿ ಕೌರವೇಂದ್ರನ । ಭವನಕೈತಂದನು ಕುಠಾರರ । ಜವಳಿಯನು ಕರೆಸಿದನು ರಾಧಾಸುತನಸೌಬಲನ ॥ ಅವನಿಪತಿಗಾಂಧಾರಿಯರು ಪಾಂ । ಡವರ ಮನ್ನಿಸಿ ಕಳುಹಿದರು ತ । ಮ್ಮವನಿಗೈದಿದರೆಂದನಾದುಶ್ಶಾಸನನುನಗುತ ॥೩॥ ಮುರಿಮುರಿದು ಪಟ್ಟಣವ ನೋಡುತ । ನರವೃಕೋದರರೌಡುಗಚ್ಚುತ । ತಿರುಗಿದರುಗಡ ಗಾಢಬದ್ಧಭ್ರುಕುಟಿಭೀಷಣರು ॥ ಕರಿಯಸೊಗಡಿನಮೃಗಪತಿಗೆ ಮೈ । ಹರಿದಹಂಟಿಗೆ ನೊಂದಹಾವಿಂ । ಗರಸ ಮೈಚಾಚಿದೆನುಲಾ ನೀನೆಂದನಾಶಕುನಿ ॥೪॥ ಅವರ ಹೆಂಡಿರ ಮುಂದಲೆಯ ಹಿಡಿ । ದವಗಡವ ಮಾಡಿಸಿದೆ ಪಟ್ಟದ । ಯುವತಿಯಾಕೆಯಭಂಗಬಡಿಸಿದೆ ನಿನ್ನಲಾಪನಿತ ॥ ಅವಳದೈವೋದಯವದೈಸಲೆ । ಸವಡಿಸೀರೆಯ ಸುತ್ತು ಸಡಿಲದು । ನಿಮಗದಾಗಳೆ ಮರೆದು ಹಿಂಗಿದುವೆಂದನಾಕರ್ಣ ॥೫॥ ಬೊಪ್ಪನಿತ್ತನು ವರವನೆಮಗದು । ತಪ್ಪಿಸಲಿ ತೀರುವುದೆ ಭೀಮನ । ದರ್ಪಕರ್ಜುನನುಬ್ಬಟೆಗೆ ಮಾಡಿದೆವು ಮುದ್ದುಗಳ ॥ ತಪ್ಪಿಸಿತಲೇ ದೈವಗತಿನ । ಮ್ಮಪ್ಪನೇ ಕೆಡಿಸಿದನು ನಮಗಿ । ನ್ನಪ್ಪುದಾಗಲಿಯೆಂದು ಸುಯ್ದನು ಕೌರವರರಾಯ ॥೬॥ ಜಯವಹುದೆ ನಿರ್ವೇದದಲಿ ನಿ । ರ್ಭಯವಹುದೆ ಬಿಸುಸುಯ್ಲಿನಲಿ ನಿ । ರ್ಣಯವಹುದೆ ರಿಪುನೃಪರಿಗಿದು ತಾನೀತಿಮಾರ್ಗದಲಿ ॥ ನಿಯತವಿದು ನಿಶ್ಶೇಷ ನಿಮ್ಮ । ನ್ವಯಕೆ ನಿರ್ವಾಹವನು ಗಾಂಧಾ । ರಿಯಲಿ ನಿಮ್ಮಯ್ಯನಲಿ ಬಿಸಗೊಳ್ಳೆಂದನಾಶಕುನಿ ॥೭॥ ಅರಸ ಕೇಳ್ ಧೃತರಾಷ್ಟ್ರಭೂಪತಿ । ಯರಮನೆಗೆ ನಡೆತಂದರೀನಾ । ಲ್ವರು ವಿಷಾದವಿಡಂಬವಿಹ್ವಲಕರಣವೃತ್ತಿಯಲಿ ॥ ಪರಿಮಿತದಿ ಕುಳ್ಳಿರಿಸಿದರು ಸಹ । ಚರನ ಶೋಧಿಸಿ ಕಡುರಹಸ್ಯದೊ । ಳರಸಿಯನು ಬರಹೇಳಿದರು ಗಾಂಧಾರಿದೇವಿಯನು ॥೮॥ ಅವರ ದಾಸ್ಯವ ಬಿಡಿಸಿ ನೀ । ರಾಜ್ಯವನು ಕರುಣಿಸಿನೀತಿಯಲಿ ನಿ । ಮ್ಮವರ ಕಳುಹಿದಿರೆಂದು ಕೇಳಿದೆವಾಯ್ತು ಪರಿತೋಷ ॥ ಅವರು ನಿಮಗತಿಭಕ್ತರೈ ಬಾಂ । ಧವರಲೇ ತಪ್ಪೇನು ಧರ್ಮ । ಪ್ರವರರಿಗೆ ನೀವೊಲಿದಿರೆಂದನು ಕೌರವರರಾಯ ॥೯॥ ನಾವಲೇ ಹೊರಗವರ ಹೆಂಡಿರ । ಹೇವಗೆಡಿಸಿದೆವವರ ಸೋಲಿಸಿ । ಜೀವಮಾತ್ರವನುಳುಹಿ ಸೆಳೆದೆವು ಸಕಲವಸ್ತುಗಳ ॥ ನೀವು ಕರುಣಿಸಿದಿರಿ ಕೃಪಾರಸ । ಭಾವ ಹಿರಿಯ

ರಲುಂಟೆಲೇ ತ। ಪ್ಪಾವುದೈ ತಪ್ಪಾವುದೆನುತಲ್ಲಾಡಿದನು ಶಿರವ ॥೧೦॥ ತಾಯೆ ನೇಮವೆ ಹಗೆಯ ಕೈಯಲಿ। ಸಾಯಲಾರೆವು ಸಾಗರಾಂತದ। ರಾಯರಿಲ್ಲಾ ಹೊರೆಯಲಾಪೆವು ಬೆಂದಬಸಿರುಗಳ ॥ ಕಾಯಿದನು ಕರುಣದಲಿ ತಂದೆ ಸ। ಹಾಯವಹಪಾಂಡವರ ಕೂಡಿಯೆ। ರಾಯ ಬದುಕಿರಲೆಮ್ಮ ಕಳುಹೆಂಡೆರಗಿದನು ಪದಕೆ ॥೧೧॥ ಏಕೆ ಬೆಸಗೊಳ್ಳಬಲೆ ಸುತನವಿ। ವೇಕವಿಷಮಗ್ರಹವಿಕಾರ। ವ್ಯಾಕರಣದುರ್ಲಲಿತದುಷ್ಕೃತವಿಪ್ರಳಾಪವಿದು ॥ ಈಕುಲವನೀಪುರವನೀಲ। ಕ್ಷ್ಮೀಕರವನೀಜಗವನೀವಿಭ। ವಾಕೃತಿಯನಂಬುಭಯೊಳದ್ದುವ ನಿನ್ನವ ಗನೆಂದ ॥೧೨॥ ಸರಿಹಸುಗೆಯಿಂದರ್ಧರಾಜ್ಯದ। ಸಿರಿಗೆ ಯೋಗ್ಯರು ಬಾಹುಸತ್ವಕೆ। ಸುರರುಸರಿಯಿಲ್ಲಿವರಪಾಡೇ ಮನುಜಜಂತುಗಳು ॥ ಚರಿತವೆಂಬರೆ ಋಷಿಗಳಿಗೆ ಗೋ। ಚರಿಸದವರಾಚರಣೆ ನಿನಗೆಂ। ತರಿವಿನಾಶನಸಿದ್ಧಿಯೆಂದನು ಮಗಗೆ ಧೃತರಾಷ್ಟ್ರ ॥೧೩॥ ಬೇಹವರು ಸರರಾಜ್ಯಕದು ಸಂ। ದೇಹವೇ ಮೇಲವರಸತ್ವದ। ಸಾಹಸದ ಸತ್ಯದ ಸದಾಚಾರದ ನಿವಾಸರಲೇ ॥ ಸ್ನೇಹಿತರು ನಿನಗವರವೋಲವ। ಗಾಹಿಸದೆವನ್ಯಾಯದಲಿ ಸ। ದ್ರೋಹರಾವಿನ್ನೆಮಗೆ ನೇಮವೆಯೆನುತ ಹೊರವಂಟ ॥೧೪॥ ಕಲಕಿತರಸನ ಕರಣ ಕಂಗಳ। ಕುಳಿಗಳಲಿ ನೀರೊರೆತವಕಟಕ। ಟೆಲೆಗೆ ಕರೆಯಾಪಾಪಿಮಗನನು ಕುರುಲಾಂತಕನ ॥ ಸೆಳೆವ ತಂದರು ಕರ್ಣಶಕುನಿಗ। ಳಳಲಿಗನ ತೆಗೆದಪ್ಪಿದನು ಕುರು। ತಿಲಕ ನೀನುಳಿದೊಡಲುಹಿಡಿವೆನೆ ಯೆಂದನಂಧನೃಪ ॥೧೫॥ ಏನ ಮಾಡುವೆವವರ ಕಿಡಿಸುವೊ। ಡೇನುಹವನನು ಕಂಡೆ ದೈವಾ। ಧೀನನಿಷ್ಠುರ ಮುರಿವುದರಿದನ್ಯಾಯತಂತ್ರದಲಿ ॥ ಏನು ನಿನ್ನಭಿಮತವು ನಿನ್ನೊಳ। ಗಾನು ಹೊರಗೇ ಕಂದ ನುಡಿ ದು। ಮ್ಮಾನ ಬೇಡೆನ್ನಾಣೆನುತ ಸಂತೈಸಿದನು ಮಗನ ॥೧೬॥ ನೊಂಬರವರಗ್ಗಳಿಸಿ ಹೃದಯದೋ। ಳೊಂದಿ ಬೆರಸರು ಮಾರಹುತೆರಹಿನೊ। ಳಂದಗೆಡಿಸುವರಲ್ಲದುಳುಹರು ನಿನ್ನಸಂತತಿಯ ॥ ಒಂದುಸತ್ತಿಗೆ ನಮ್ಮದಿಲ್ಲಿಗೆ। ನಿಂದ ದನಿಸಲಿ ನಾವು ನಿಲಲವೆ। ರೊಂದುಸತ್ತಿಗೆಯಾಗಿ ಸಲಹಲಿ ಸಕಳಭೂತಳವ ॥೧೭॥ ಹುದುವ ಸೈರಿಸಿ ಬಳಸಿದರು ದುರು। ಪದಿಯನವರೈವರು ಧರಿತ್ರಿಯ। ಹುದುವ ಸೈರಿಸಲಾರೆನವರೊಡನಿಂದುವೊದಲಾಗಿ ॥ ಒದೆದು ಕಳೆ ನಮ್ಮನಿಬರನು ನೇ। ಹದಲಿ ಸಲಹೈವರನು ನೀನಿಂ। ದೊದೆವುದೈವರ ನಮ್ಮ ಹಿಡಿ ಬೇರಿಲ್ಲವೆ ತವೆಂದ ॥೧೮॥ ಅನಿಲಜನ ಬಾಯ್ಬಡಿಕತನವ। ರ್ಜುನನ ಬರಿಬೊಬ್ಬಾಟ ಸಹದೇ। ವನ ಸಗರ್ವದಮಾತು ಮೈಯಿಕ್ಕುವುವು ಬಳಿಕಿನಲಿ ॥ ಮನೆವೊಗವಕಾಣಿಸದೆ ಘನಕಾ। ನನದೊಳಗೆ ಸುಳಿವಂತೆ ಮಂತ್ರವ। ನೆನೆದೆನಿದು ನಿಮ್ಮಡಿಯ ಚಿತ್ತಕೆ ಬಹರೆ ಬೆಸಸೆಂದ ॥ ಮರುಳುಮಗನೇ ಶಿವಶಿವಾ ಮನ। ಬರಡನೇ ತಾನಕಟ ನಿಮ್ಮೈ। ಸಿರಿಯ ಹಗೆ ದಾಯಾದ್ಯರುಗಳಭ್ಯುದಯದಲಿ ಸೊಗಸೆ ॥ ದುರುಳರವದಿರು ದೈವಮುಖದೆ। ಚ್ಚರಿಕೆ ಘನಕೆಡರೆಂದು ಮೇಗರೆ। ಹೊರೆಮನದ ಸೂಸಕದನೇಹವನರಸುತಿಹೆನೆಂದ ॥೨೦॥ ಕರಸಿಕೊಡಿ ನೀವಿಲ್ಲಿಗವರೈ। ವರನು ಜೂಜಿನಲೊಂದುಹಲಗೆಯ। ಲರಸನೀ ಚಿತ್ತವಿಸು ಹನ್ನೆರಡುಬುದವಿಪಿನದಲಿ ॥ ವರುಷವೊಂದಜ್ಞಾತವದರೊಳ। ಗರಿದವಾದೊಡೆ ಮರಳಿ ವಿಪಿನಕೆ। ವರುಷಹನ್ನೆರಡಕ್ಕೆ ಕೊಡುವೆವು ಮತ್ತೆ ಮೀಳಯವ ॥ ಅಹುದು ಮಂತ್ರವಿದೆಂದು ಚಿತ್ತಕೆ। ಬಹರೆ ಕಳುಹಿ ಮನುಷ್ಯರನು ಕರ। ಸಹಿತರನು ವಿದುರಾದಿಗಳ ಕೊಂಡೆಯಕೆ ಕಿವಿಗೊಡದೆ ॥ ಕುಹಕವುಂಟೇ ನಮ್ಮ ಕಳುಹುವು ॥ ದಹಮತವ ಬೆಸಸೆನಲು ನಿಮ್ಮೊಳು। ಕುಹಕವುಂಟೇ ಮಗನೆ

ಕರೆಸುವೆನೀಗ ಪಾಂಡವರ ॥೨೨॥ ಪ್ರಾತಿಕಾಮಿಕ ಬಾ ಯುಧಿಷ್ಠಿರ । ಭೂತಳೇಶನ ಕರೆದು ತಾರೈ । ತಾತ ಕಳುಹಿದನೆಂಬುದಿಂದ್ರಪ್ರಸ್ಥದಲ್ಲಿರಲಿ ॥ ಪ್ರೀತಿಪೂರ್ವಕವಲ್ಲದಲ್ಲಿ ವಿ । ಘಾತಿಯಿಲ್ಲೆಂದುಚಿತವಚನದೊ । ಳಾತಗಳನೊಡಗೊಂಡು ಬಾ ಹೋಗೆಂದನಂಧನೃಪ ॥೨೩॥ ಕೇಳಿಪರು ಭೀಷ್ಮಾದಿಗಳು ಬರ । ಹೇಳಿದರೆ ಪಾಂಡವರನಕಟಾ । ಹೇಳಿವರೇಕೌರವರನೂರ್ವರನಂತ್ರಕಾಲಯಕೆ ॥ ಹೇಳಿಪರೆ ಹೇಳಿಗೆಯಹಾವಿನ । ಮೇಲುಮುಚ್ಚಳ ಮುರಿಯಲೆಂದಿದ । ಕೇಳಿದೆವೆ ಕೌತುಕವನೆಂದರು ಕುದಿದು ತಮ್ಮೊಳಗೆ ॥೨೪॥ ಉರುವಮಕ್ಕಳನಿಕ್ಕಿ ಸಾಧಿಸು । ವಂಕೆಯಾವುದು ಹೇಳಲಾಗದೆ । ಕುಂಗಳೇ ನಿನ್ನವರು ಬಲ್ಲರೆ ಮೇಲಣಪಜಯುವ ॥ ಮರುಗುವಳು ಗಾಂಧಾರಿ ಮಕ್ಕಳ । ಹರುವಕಂಡರೆ ಮೇಲೆ ನಿನಗೇ । ನರಿಯಬಾರದಲಾ ಮರುಳೆಯೆಂದಳಲಿದನು ಭೀಷ್ಮ ॥೨೫॥ ಕೊಂಬುದೇ ಖಳಜನಕೆ ಸಾಧುಗ । ಳೆಂಬಮಾತು ವಿಧಾತೃಕಲ್ಪಿತ॥ ವೆಂಬ ವಿಷದುಗ್ಗಡಕೆ ಗಾರುಡವೇನಮಾಡುವುದು ॥ ತುಂಬುವುದು ಬತ್ತುವುದು ಕಾಲನ । ಡೊಂಬಿದಾರಿಗೆ ಸಾಧ್ಯ ಸಾವೇ । ನೆಂಬುದಿದಕೆಂದಳಲಿದರು ಭೀಷ್ಮಾದಿ ಸಜ್ಜನರು ॥೨೬॥ ಇವರ ವಂಚಿಸಿ ರಜನಿಮಧ್ಯದೊ । ಳವನ ಕಳುಹಿದೊಷಾತನೈತಂ । ದಿವರಪಾಳಯದೊಳಗೆ ಹೊಕ್ಕನು ಹಲವುಪಯಣದಲಿ ॥ ಅವನಿಪತಿ ಮರುದಿವಸ ಬೀಡೆ । ತ್ತುವನಿಧಾನವನರಿದು ರಾಯನ । ಭವನಿಕೆಯ ಹೊರಬಾಹೆಯಲಿ ದಂಡಿಗೆಯನವನಿಳಿದ ॥೨೭॥ ಕರೆದು ಹೇಳಿದನಾತ ಪಡಿಹಾ । ರರಿಗೆ ತಾನೈ ಪ್ರಾತಿಕಾಮಿಕ । ನರಸ ಕಳುಹಲು ಬಂದೆನಗ್ಗದರಾಜಕಾರಿಯಕೆ ॥ ಧರಣಿಪಾಲಂಗರುಹಿಯೆನೆ ನೃಪ । ವರಗೆ ಬಿನ್ನಹಮಾಡೆ ಕರಸಿದೊ । ಡಿರದೆಹೊಕ್ಕನು ದೂತನಂದಾರಾಯನೋಲಗವ ॥೨೮॥ ದರುಶನವನಿತ್ತವನಿಪಾಲನ । ಚರಣದಲಿ ಮೈಯಿಕ್ಕಿ ನಿಂದನು । ನರವೃಕೋದರನಕುಲಸಹದೇವರಿಗೆ ಕೈಮುಗಿದು ॥ ಧರಣಿಪನ ಮೊಗಸನ್ನೆಯಲಿ ಕು । ಳ್ಳಿರಲಿದೇನೈ ಪ್ರಾತಿಕಾಮಿಕ । ಬರವು ಬೇಗದೊಳಾಯೆನುತ ಬೆಸಗೊಂಡನಾಭೀಮ ॥೨೯॥ ಬರವು ಬೇರೇನೊಡೆಯರಟ್ಟಿದ । ರರಸನಲ್ಲಿಗೆ ಹಿಂದೆ ಜೂಜಿನೊ । ಳೊರಸೊರಸು ಮಿಗೆ ಮಸೆದುದಿತ್ತಂಡಕ್ಕೆ ಮನಮುನಿಸು ॥ ಹರೆದುಹೋಯ್ತದು ಹೃದಯಶುದ್ಧಿಯೊ । ಳೆರಡರಸುಗಳು ಜೂಜನಾಡಲಿ । ಮರಳಿಬಿಜಯಂಗೈವುದೆಂದಟ್ಟಿದನು ಧೃತರಾಷ್ಟ್ರ ॥೩೦॥ ಮರಳಿ ಕರೆಸುವುದೆಂದು ಕಂಬನಿ। ವೆರಸಿ ಕುರುಪತಿ ಪಿತನ ಚಿತ್ತವ । ಕರಗಿಸಿದನೋ ಮೇಣು ತಾ ಕರಸಿದಳೊ ಗಾಂಧಾರಿ ॥ ಕರಸುವದಿರು ಭಂಡರೋ ಮೇ । ಣ್ಮರಳಿ ಹೋದರು ಭಂಡರೋ ನೀ । ನರಿವುದೇನೈ ಪ್ರಾತಿಕಾಮಿಕನೆಂದನಾಭೀಮ ॥೩೧॥ ಬೊಪ್ಪನವರಟ್ಟಿದರೆ ಶಿವಶಿವ । ತಪ್ಪನೆನೆವರೆ ಭೀಮ ಸೈರಿಸು । ತಪ್ಪನಾಡಿದೆನೆವಗೆ ಮುನಿವಳೆ ತಾಯಿ ಗಾಂಧಾರಿ ॥ ತಪ್ಪಲೊಮ್ಮೆಗೆ ಪಾಂಡು ಕುಂತಿಗೆ । ಮುಪ್ಪಿನಲಿ ಮರುಳಾಟವಾಗಲಿ । ತಪ್ಪುವನೆ ಧೃತರಾಷ್ಟ್ರನೆಂದನು ನಗುತ ಯಮಸೂನು ॥೩೨॥ ಖಳರು ಮೊದಲಲಿ ಕೌರವರು ಕಲಿ । ಮೊಳೆಯನಂಕುರಿಸುವಕುವಿದ್ಯಾ । ಕಲಿತಮಾಯರು ಕರ್ಣಶಕುನಿಗಳವರಸಂಗದಲಿ ॥ ತಿಳಿದು ನಡೆವವನಲ್ಲವಿದು ನಿ । ಮ್ಮಲದನೀತಿಗೆ ಸಲ್ಲ ನಿಜಪಿತ । ನೊಳಗು ನಿರ್ಮಳವಿಲ್ಲವೆಂದನು ನಗುತ ಕಲಿಭೀಮ ॥೩೩॥ ನೆನಹಿನಭಿಮತವಲ್ಲ ದುರ್ಯೋಧನನ ಸೌಬಲಕರ್ಣರಭಿಮತ । ಜನಪ ಧೃತರಾಷ್ಟ್ರನಿಗೆ ಗಾಂಧಾರಿಗೆ ಯಲಂಘ್ಯವಿದು ॥ ಅನುನಯದ ಹೊತ್ತಲ್ಲ ನೀವ್ಹ । ಸ್ತಿನಪುರಿಯ ಹೊ

ಕ್ಕಾಗ ಘನಕಾ । ನನಕೆ ಗಮಿಸುವಿರೆಂದರಾಧೌಮ್ಯಾದಿಮಂತ್ರಿಗಳು ॥೩೫॥ ಕರೆಯೆಕಾದ್ಯುಮ್ರದಾಡು ವದು ಸಂ । ಗರಕೆ ಜೂಜಿಂಗಿದು ಮಹೀಶ್ವರ । ಪರಮಧರ್ಮವಲೇ ನಿದಾನಿಸೆ ವೈದಿಕಾಂಗದಲಿ ॥ ಗುರು ವಲಾ ಧೃತರಾಷ್ಟ್ರನಾತನು । ಕರಸಿದಲ್ಲಿ ವಿಘಾತಿ ಬಂದರೆ । ಬರಲಿ ಸೈರಿಸಬಲ್ಲೆನೆಂದನು ಧರ್ಮನಂದನನ ॥೩೬॥ ಜನಪನಾಜ್ಞೆಯ ಮೀರ್ಕೆ ಬಳಸವು । ದನುಚಿತವು ನಮಗಿನ್ನು ಭೀಮಾರ್ಜುನನಕುಲಸಹದೇವರಭಿಮತವೆಮ್ಮ ಮತವೆನಲು ॥ ಮನವೊದಲು ಕರಣಂಗಳಾತ್ಮಂ । ಗನುಚರರೊ ಬಾಧಕರೊ ನಿಮ್ಮಯ ಮನಕೆ ಚೆಮ್ಮಾವುಗೆಗಳೆಂದರು ಸವನಜಾದಿಗಳು ॥ ಮರಳಿ ಪಾಳೆಯ ಬಿಡಲಿ ಕಿಪ್ಪರ । ಕರೆಸಿ ಹೇಳೆನುತವನಿಪತಿಗಜ । ಪುರಿಗೆ ತಿರುಗಿದನರಿಯನೇ ಕೌರವನಕೃತ್ರಿಮವ ॥ ಕೊರಳಲಿಕ್ಕಿದ ಪಧಿಯ ಕಣ್ಣಿಯ । ಹುರಿಬಲುಹಲೇ ಧರ್ಮಸುತನೊಡೆ । ಮರಿಚಲಾಪನೆ ಕೇಳು ಜನಮೇಜಯಮಹೀಪಾಲಾ ॥೩೭॥ ಸುತರು ಸಚಿವರು ಮಂತ್ರಿಗಳು ನಿಜ । ಸತಿಯರಾಪ್ತರು ಬಂಧುಗಳು ಭೂ । ಪತಿಗಳನುಜರು ಬುಧರು ಚಾತುರ್ಬಲದನಾಯಕರು ॥ ಮತವು ಮರಳುವದಲ್ಲ ಧರಣೀ । ಪತಿಯನುತ್ಸಾಹಿಸುವಗತಿ ಸಂ । ಗತವಲೇ ನಮಗೆನುತ ನಡೆದುದು ಬುಧಜನಸ್ತೋಮ ॥೩೮॥ ಭರದಪಯಣದಲಿವರು ಹಸ್ತಿನ । ಪುರದ ಹೊರಬಾಹೆಯಲಿ ಬಿಟ್ಟರು । ಪರಿರಚಿತಗಜತುರಗಶಾಲೆಯ ವಿಪುಳವೀಧಿಯಲಿ ॥ ಬಿರಿಯೆ ನೆಲನಳ್ಳಿರಿವವಾದ್ಯದ । ಮೊರೆವಭೇರಿಯ ಬಹಳಕಹಳಾ । ಸ್ವರದ ಕಳಕಳ ತೀವಿತಬುಜವಾಂಡಖರ್ಪರವ ॥೩೯॥ ವನಿದದ್ಭುತರಭಸವಿದೆಲಾ । ಮಾನನಿಧಿಗಳು ಮರಳಿ ಕುಂತೀ । ಸೂನುಗಳ ಬಲ ಬಂದು ಬಿಟ್ಟುದು ಪುರದಬಾಹೆಯಲಿ ॥ ವಿನ ಕೌರವರೊಡನೆ ಶ್ರದಸಂ । ಧಾನವೋ ವಿನಯಾನುಗುಣಸಂ । ಧಾನವೋ ತಾನೆನುತ ಗಜಬಜಿಸಿದುದು ಗಜನಗರ ॥೪೦॥ ಪುರವ ಹೊಕ್ಕನು ನೃಪತಿ ಪರಮಿತ । ಪರಿಜನದಲಾರಾಜಬೀದಿಯ । ನೆರವಿನೆರವಿಯ ಜನದ ಪುನರಾಗಮನವಿಸ್ಮಯವ ॥ ಪರಿಣತಸ್ತ್ರೀಬಾಲವೃದ್ಧರ । ವಿರಸವಚನವನಾಲಿಸುತ ನೃಪ । ನರಮನೆಗೆ ಬಂದೆರಗಿದನು ಧೃತರಾಷ್ಟ್ರನಂಘ್ರಿಯಲಿ ॥೪೧॥ ಸೋಲದಲಿ ಮನನೊಂದು ಹೋಹುದು । ಹೋಲದೆಮ್ಮಭಿಮತಕೆ ನಿಮ್ಮೊಳು । ಮೇಳದಿಂದೊಂದಾಗಿ ಮಜ್ಜನಭೋಜನಾದಿಗಳ ॥ ಲೀಲೆಯಲಿ ಮಾಡುವದು ಸದ್ಯೂ । ತಾಳಿಯಲಿ ರಮಿಸುವದು ಮನದವಿ । ಟಾಲವಿಲ್ಲದೆ ಬದುಕಿ ನಿಮ್ಮೊಳಗೆಂದನಂಧನೃಪ ॥೪೨॥ ಕೃತಕವಿಲ್ಲದೆ ಬಂದೆ ನೀವೀ । ವ್ಯತಿಕರಕೆ ಮನ ಬಹರೆ ಸುಖಸಂ । ಗತಸುಹೃದ್ದ್ಯೂತದಲಿ ರಮಿಸೈ ಕಂದ ಹೋಗೆಂದು ॥ ಸುತತನದ ಸೌಹಾರ್ದಸಂಭ್ರಮ । ವಿತತದ ಹೊರಬಾಹೆಯಲಿ ಧರಣೀ । ಪತಿಯನುಪಚರಿಸಿದನು ಚದುರಿಗತನದಿ ಧೃತರಾಷ್ಟ್ರ ॥೪೩॥ ಸರ್ವಲೋಕವಿನಾಶಕರವೀ । ಗುರ್ವಣೆಯದೈವಾಭಿವಾಕಕೆ । ದರ್ವಿಯಾಯಿತು ಧರ್ಮಪುತ್ರನಬುದ್ಧಿ ವಿಸ್ತಾರ ॥ ಸರ್ವಜನವೊಂದೆಸೆ ಯುಧಿಷ್ಠಿರ । ನೊರ್ವನೊಂದೆಸೆ ಶಕುನಿಕೌರವರಿರ್ವರೊಂದೆಸೆ ಜೂಜನಭಿಮತವರಸಕೇಳೆಂದ ॥೪೪॥ ಕಂದುಕಳ್ಳಿರ್ದುದು ಸಭಾಸದ । ವೃಂದ ನೆರೆದುದು ಮತ್ತೆ ಜೂಜಿನ । ದಂದುಗದ ದುರ್ವ್ಯಸನ ಮುಸುಕಿತು ಧರ್ಮನಂದನನ ॥ ತಂದು ಮಣಿಮಯಸಾರಿವಲಗೆಯ । ನಂದು ಮೋಹರಿಸಿದರು ಜೂಜಿಂ । ಗಿಂದುಕುಲದ ಮಹೀಶನನುವಾದನು ಸರಾಗದಲಿ ॥೪೫॥ ಎಳ್ಳನಿತುಖಯಖೋಡಿಚಿತ್ತದೊ । ಳಿಲ್ಲನಿಜಪಾಂಡಿತ್ಯಪರಿಣತೆ । ಬಿಲ್ಲಬಿಸುಟುದು ಬೆದರಿಹೋಯ್ತು ವಿವೇಕವಿಸ್ತಾರ ॥ ಎಲ್ಲರೊಡನೆಯೆ ಕೇಳಮೇಳಕೆ । ಚೆಲ್ಲಣಿವ ವೆಂಟಣಿಸಲಾಜನ ।

ವೆಲ್ಲ ಮುರುಗಿತು ಧರ್ಮಜನ ಮರುಜೂಜಿನುಬ್ಬಟೆಗೆ ॥೪೬॥ ತೆಗೆದು ಸಾರಿಯ ಹೂಡಿ ಹಾಸಂ । ಗಿಗಳ
ಹೊಸೆದನು ಶಕುನಿ ಧರ್ಮಜ । ಹೊಗಳು ಹೊಕ್ಕೆಯನು ವಚನಿಸೊಡ್ಡವನಿದು ವಿನೋದವಲೇ ॥
ಬಗೆವವೊಂದೇಹಲಗೆ ಪೇಳಣ । ದುಗ್ಗಣಸಲ್ಲದು ಜೂಜುಗಾರರ । ವಿಗಡತನವಲ್ಲೆಂದು ನೃಪತಿಗೆ
ಸೂಸಿದನು ನಗೆಯ ॥೪೭॥ ಲಲಿತರಾಗದ ರಸದಗೋರಿಯ ಬಿಲುಸವಿಯ ಮೃಗದಂತೆ ವಿಷಯದ ।
ಕಾಳಿಯೊಳಗೆ ಕಾಲ್ದೊಡಕಿ ಬಿದ್ದಸುಯೋಗಿಯಂದದಲಿ । ಕಲಿತವಿಕಳಾವೇಶದಲಿ ವಿ । ಸ್ಖಲಿತವಿವಿಧ
ಶ್ರೋತ್ರನಯಸಂ । ಚಲಿತನೆಂದನು ಶಕುನಿ ನೀನಡಿಯೊಡ್ಡವೇನೆಂದು ॥೪೮॥ ಧರಣಿಪತಿ ಕೇಳ್ನಿನ್ನ
ಧಾರುಣಿ । ಕುರುಪತಿಯ ನೆಲನೊಡ್ಡನಿಮ್ಮೀ । ಯೆರಡರಸುಗಳೊಳಾರು ಸೋತರು ಸೋತಭೂ
ಪತಿಗೆ ॥ ವರುಷಹನ್ನೆರಡರಲಿ ವನದೊಳ । ಗಿರವು ಮೇಣಜ್ಞಾತವೊಂದೇ । ವರುಷ ಹದಿನಾಲ್ಕರಲಿ
ಹೊಗುವುದು ತಮ್ಮಪಟ್ಟಣವ ॥೪೯॥ ಮರೆಯಲಿಹುದಜ್ಞಾತವಾಸದೊ । ಳರಿದಾದೊಡೆ ಮತ್ತೆ
ವನದಲಿ । ಚರಿಸುವುದು ಹನ್ನೆರಡುವರುಷವು ಸತ್ಯಭಾಷೆಯಲಿ ॥ ಮುರಿದು ತಪ್ಪಿದನೃಪನನೀಶ್ವರ ।
ನರಿವನೈಸಲೆ ರಾಜಧರ್ಮವ । ಮೆರೆವರಾಡುವುದೊಡ್ಡವೀಪರಿಯೆಂದನಾಶಕುನಿ ॥೫೦॥ ಅಂಜುವರೆ
ನಿಲು ಜೂಜುಗಾರರ ಭಂಜವಣೆಗೊಳಗಹರೆ ಬಾ ನೃಪ । ರಂಜಲಿಸಿ ಬಿಡಬಹುದೆ ಪರಮದ್ಯೂತರ
ಸಸುಧೆಯ ॥ ರಂಜಕರು ನಾವಲ್ಲ ಜೂಜಿಗೆ । ಕಂಜಭವ ತಾನೆನ್ನೊಡನೆ ಕೆಲ । ರಂಜದಿಹರಾರೆಂದು
ಗರುವವ ಸೂಸಿದನು ಶಕುನಿ ॥೫೧॥ ಉಗ್ರಭಾಷೆಯದೇಕೆ ಶಿವಶಿವ । ವಿಗ್ರಹಪ್ರತಿಮುಖದ ವಿಷಮಾ ।
ವಗ್ರಹದಲಿದು ಬೆಂಡುಹೋಗದೆ ಭರತಸಂತಾನ ॥ ನಿಗ್ರಹಿಸಲೇಕಕಟ ಕುರುಕುಲ । ದಗ್ರಿಯನನೆಂದ
ಖಿಳಸಚಿವರು । ದಗ್ರಚಿಂತರು ಮುರಿದು ನುಡಿದರು ನೀತಿವಚನದಲಿ ॥೫೨॥ ವಿದುರ ಗುರು ಗುರು
ಸೂನು ಬಾಹ್ಲಿಕ । ನದಿಯಮಗ ಗಾಂಧಾರಿ ಕುಂತೀ । ಸುದತಿ ಭೂರಿಶ್ರವಯುಯುತ್ಸುವಿಕರ್ಣಸೈಂ
ಜಯರು ॥ ಇದು ವಿಷಮವೆಂದಾಕೃಪದ್ರೌ । ಪದಿವೃಕೋದರಪಾರ್ಥಯಮಳರು । ಕುದಿದರೊಳಗೊ
ಳಗಾಡಲಮ್ಮದೆ ರಾಯರಿದಿರಿನಲಿ ॥೫೩॥ ಕ್ಷಿತಿಪಕೇಳೀ ದುರ್ವ್ಯಸನವಿಷಮ । ವ್ಯತಿಕರದ ಭಾಷೆಯನು
ನೃಪ ಮಿಗೆ । ಪತಿಕರಿಸಿದನು ಹೊಸೆದು ಹಾಸಂಗಿಗಳ ಹಾಯ್ಕಿದನು ॥ ಸತಿಯ ದಕ್ಷಿಣನಯನವೀಭೂ ।
ಪತಿಯ ವಾಮಭುಜಾಕ್ಷಿಗಳು ದು । ರ್ಗತಿಯ ಸೂಚಿಸಿ ತೋರುತಿರ್ದವು ಧರ್ಮನಂದನನ ॥೫೪॥
ದಾಯವೇ ಮುಝುಪ್ರೊತು ದುಗತಿಗ । ಸಾಯಸವಲೇ ಚೌಕವೊಂದೇ । ಕಾಯಲಾಗದೆ ಹಾಯ್ಕುಹಾ
ಯ್ಕೆಂದೊದರಿ ಗರ್ಜಿಸಿದ ॥ ರಾಯ ಸೋತನು ಧರ್ಮಸುತ ಕುರು । ರಾಯ ಗೆಲಿದನು ಕಟ್ಟುಗುಡಿ
ಯನು । ರಾಯನೂರೊಳಗೆಂದು ಮಿಗೆ ಬೊಬ್ಬಿರಿದನಾಶಕುನಿ ॥೫೫॥ ಹಣುಗಿತರಸನ ವದನ ತಾಳಿಗೆ ।
ಯೊಣಗಿತವನಿಗೆ ನಟ್ಟದಿಟ್ಟಿಯ । ಮಣಿದನೆನಹಿನ ಮುರಿದಮುಹಿಮೆಯ ತಾಗದಪದೆಸೆಯ ॥ ಜುಣು
ಗಿದುಬ್ಬಿನ ಸತ್ಯದಲಿಕೇ । ವಣಿಸಿದರಿವಿನ ವಿಕೃತಿಕರ್ಮದ । ಕುಣಿಕೆಗೊಲೆದೊಲೆದರಸನಿದ್ದನು ಹೊತ್ತು
ದುಗುಡದಲಿ ॥೫೬॥ ಉಬ್ಬು ಮುರಿದುದು ತಮ್ಮೊಳೊಬ್ಬರ । ನೊಬ್ಬರೀಕ್ಷಿಸಿ ಕೈಯಗಲ್ಲದೆ । ನಿಬ್ಬ
ರಬೆ ನಿಡುಸುಯ್ಲ ಖೋಡಿಯಮನದ ಕಳ್ಗುದಿಯ ॥ ಜಬ್ಬುರಿಯ ಜಾಣಿಕೆಯ ಚಿಂತೆಯ । ಹಬ್ಬಗೆಯ
ಹರವಸದ ಖೇದದ । ಮುಬ್ಬಿನಲಿ ಹಣುಗಿದರು ಪವನಜಫಲುಗುಣಾದಿಗಳು ॥೫೭॥ ಕಂಡನೇ ಧೃತರಾ
ಷ್ಟ್ರನನು ಕೈ । ಕೊಂಡನೇ ವನದೀಕ್ಷೆಯನು ಪಿತ । ನಂಡಲೆದು ಕೃಷ್ಣಾಜಿನವನುಡುಗೊರೆಯನಿತ್ತನ

ಲೇ ॥ ಚಂಡಿಗೊಂಡರೆ ನಿನಗೆ ನಿನ್ನಿನ । ಭಂಡತನ ಬಾರದಲೆ ವನವಾ । ಖಂಡಲಪ್ರಸ್ಥವಲೆ ನಿನಗಿನ್ನೆಂದಳಿಂದುಮುಖಿ ॥೫೮॥ ಕಳೆದು ಬಿಸುಟರು ಮತ್ತೆ ರತ್ನಾ । ವಳಿಯ ವಿವಿಧಾಭರಣವನು ಪರಿ । ಲಲಿತಕೃಷ್ಣಾಜಿನವ ಹೊದೆದರು ಹಾಯ್ಕಿ ಹಚ್ಚಡವ ॥ ನಳಿನಮುಖಿ ನಳನಳಿಪಮುಕ್ತಾ । ವಳಿಯಲಂಕಾರವನುಗಿದು ಸಭೆ । ಯೊಳಗೆ ಬಿಸುಟಳು ನಿಂದಳಬಲೆ ನಿಜಾಭಿರೂಪದಲಿ ॥೫೯॥ ಸಾಲದೇ ನಿಮಗಿನ್ನು ಕೌರವ । ರೋಲಗದ ಫಲವಾಯ್ತಲಾ ವನ । ಮಾಲೆ ಕೊರಳಿಂಗಲ್ಲ ಚರಣಾಭರಣವಾಯಿತಲೇ ॥ ಬೀಳು ಕೊಳಿರೇ ಬೊಪ್ಪನವರನು । ಮೇಲೆ ಮೋಹದತಾಯಲಾ ನಡೆ । ಯೇಳಿಕಳುಹಿಸಿಕೊಂಬೆವೆಂದನು ಭೂಪತಿಗೆ ಭೀಮ ॥೬೦॥ ಬಂದರಿವರೆರರಮನೆಗೆ ನೇಮವೆ । ಯೆಂದು ಪದಕೆರಗಿದೊಡೆ ಕಣ್ಣೀ । ರಿಂದನನೆದನು ತಂದೆ ಮಕ್ಕಳ ಬಿಟ್ಟು ಬದುಕುವನೇ ॥ ಇಂದುಮುಖಿ ಮರುಗಿದಳು ಸಾವಿನ್ನೆಂದು ಕಾಬೆವು ನಿಮ್ಮ ನಕಟಕ । ಟೆಂದಳತಿಮೋಹಿತ್ರಯಲಾಕುಂತೀಕುಮಾರರಿಗೆ ॥೬೧॥ ವನದೊಳತ್ಯಾಯಾಸನೀವೆಂ । ತನುಭವಿಸುವಿರಿ ಪಾಪಿದುರ್ಯೋ । ಧನನ ದುರ್ಜನಸಂಗ ನಿಮಗಿದು ಸಿಂಗಿಯಾದುದಲೇ ॥ ವನಿತೆ ನಿಮ್ಮೊಡನೆಂತು ತೊಳಲುವ । ಳನವರತ ಗಿರಿಗುಹೆಯ ಘಟ್ಟವ । ನೆನುತ ನುಡಿದಳು ಕುಟಿಲಗರ್ಭದಗುಣದಬೆಳವಿಗೆಯ ॥೬೨॥ ಬೀಳುಕೊಡಿರೇ ಸಾಕು ಬಹಳಕ್ಕೆ । ಪಾಳುಗಳಲಾ ವಿಧಿಯ ಚಿತ್ತವಿ । ಟಾಳಗತಿಗೇಸಾಯ್ತು ಹದಿಮೂರಬುದವವಧಿಯಲೇ ॥ ಮೇಲೆ ನಿಮ್ಮಾತ್ಮಜರಿಗವನೀ । ಪಾಲನೆಯ ಪರುಠವದಪಟ್ಟವ । ಪಾಲಿಸುವಿರಿದಕೇನುಹೊಲ್ಲೆಹವೆಂದನಾಧೌಮ್ಯ ॥೬೩॥ ಫಲಕುಜದ ಪಲ್ಲವದ ಪದಕರ । ತಳದ ವಿಪುಲತಮಾಲಪತ್ರದ । ಲಲಿತಕೇಶಕಿನಖದ ದಾಡಿಮದಂತಪಂಗ್ತಿಗಳ ॥ ನಳಿನನಂದನದ ಮಧುಪಕುಲಕುಂ । ತಳದ ವನಸಿರಿ ಸವತಿಯಾದಳು । ಜಲಜಮುಖಿಪಾಂಚಾಲೆಗೆಂದನು ಧೌಮ್ಯಮುನಿನಗುತ ॥೬೪॥ ಇವರು ಕಳುಹಿಸಿಕೊಂಡರಾನೃಪ । ಭವನವನು ಹೊರವಂಟರೊಡನುತ್ಸವವಿಹೀನರು ವಿದುರಭೀಷ್ಮದ್ರೋಣಗೌತಮರು ॥ ಅವನಿಪತಿದುರ್ಯೋಧನಾದಿಗ । ಳವನಸಹಭವರುಳಿಯೆ ಬಂದುದು । ವಿವಿಧಜನದೊತ್ತೊತ್ತೆ ಮಸಗಿತು ರಾಜಬೀದಿಯಲಿ ॥೬೫॥ ಸಂದಣಿಸಿದುದು ಕೇರಿಕೇರಿಯ । ಮಂದಿ ಮನೆಮನೆಮೇಲೆ ಘನತರ । ವೃಂದದಲಿ ಪುರಸದನಶಿಖರೌಘದಲಿ ಶೋಕಿಸುತ ॥ ನಿಂದುದಲ್ಲಿಯದಲ್ಲಿ ನೋಟಕ । ರಂದ ಕೆತ್ತುದು ಬೀದಿ ಪುರಜನ । ಬಂದಿಯಲಿ ಸಿಲುಕಿದನೃಪಾಲರು ನಡೆದರೊಗ್ಗಿನಲಿ ॥೬೬॥ ಕುತ್ತುದಲೆಗಳ ಮೃಗದತೊಗಲಿನ । ಸುತ್ತುಹೊದಕೆಗಳೆಡದಕೈಗಳೊ । ಳೆತ್ತಿದಾಯುಧತತಿಯ ಭಂಗದಭೂರಿತಾಪದಲಿ ॥ ಹೊತ್ತುವೆದೆಗಳ ಹೊಗೆವಮೋರೆಯ । ಕಿತ್ತಡದಕಡುಗೋಪಸಮತೆಗ । ಳೆತ್ತಡಿಯತಡವಾಯ್ವನೃಪರೈತಂದರೊಗ್ಗಿನಲಿ ॥೬೭॥ ಮುಂದಣಾತನುಪಾರ್ಥಸಾತ್ರನ । ಹಿಂದೆ ಭೂಪತಿ ಧರ್ಮಪುತ್ರನ । ಹಿಂದೆ ಮಾದ್ರೀತನಯರಿಬ್ಬರಹಿಂದೆಪಾಂಚಾಲೆ ॥ ಹಿಂದೆ ಕುಂತೀದೇವಿಯಾಕೆಯ । ಹಿಂದಣಾತನು ಭೀಮನೆಂದಾ । ಮಂದಿತೋರಿದುದೊಬ್ಬರೊಬ್ಬರಿಗವರನೀಕ್ಷಿಸುತ ॥೬೮॥ ಪರಮಜೇಡು ಮುರಾಂತಕನಸಮ । ದೊರೆ ವಿರಿಂಚನಪಾಡು ಶಕ್ರನ । ಸರಿಸದವರಿಗೆ ಭಂಗವೀವಿಧಿಯಿಮಾವಿಪತ್ತುಗಳೇ ॥ ನರರನೀಕೌರವರಮಿಕ್ಕಿನ । ನೊರಜುಗಳ ಪಾಡೇನು ಶಿವಶಿವ । ಕರುಣಿಯಲ್ಲವಿಧಾತ್ರನೆಂದುದು ನೆರೆದಜನನಿಕರ ॥೬೯॥ ಕೇಳಿದಭಿಮನ್ಯುಪ್ರಮುಖಭೂ । ಪಾಲತನುಜರು ಸಚಿವರಾಪ್ತರು । ಪಾಳೆಯದತಲ್ಲಣದಕಯಖೋಡಿಯಮನೋವ್ಯ

ಥೆಯಾ ॥ ಹೇಳಲರಿಯೆನು ಬಂದುಕಂಡರು । ಗೋಳಿಡುತ ಪದಕೆರಗಿದರು ನೃಪ । ನಾಲಿನೀರೇರಿದವು ನನೆದರು ನಯನವಾರಿಯಲಿ ॥೨೦॥ ಕರೆಸಿದನು ಪರಿವಾರವನು ನಿಮ । ಗರಸು ಕೌರವನೆಮ್ಮಗಜರಥ । ತುರಗಕೊಟ್ಟಿಗೆಯೆತ್ತುಭಂಡಿಕೊಟಾರಕೊಪ್ಪರಿಗೆ ॥ ಸರಕುಸರ್ವಸ್ವಗಳು ಕೌರವ । ನರಮನೆಗೆ ನಡೆಯಲಿ ವನಾಂತದೊ । ಳಿರವು ನಮಗೆಂದರುಹಿದನು ಸಚಿವರಿಗೆ ಸಹದೇವ ॥೨೧॥ ಕರಿಗಳನು ಕೌರವನಮಾವಂ । ತರ್‍ಗೆ ಕೈಗೊಳಿಸಿದರು ರಥಹಯ । ತುರುಗಳುಂ ಕೈವರ್ತಿಸಿತು ಸೂತರಿಗೆ ಗೋವರಿಗೆ ॥ ಸರಕನವನಿಪನನುಚರರಿಗು । ತ್ತರಿಸಿದರು ಪಾರಕವನೊಪ್ಪಿಸಿ । ವರಸುಭಟರಳವಡಿಸಿಕೊಂಡರು ಕಾನನೋಚಿತವ ॥೨೨॥ ಹರಿದನಿಂದ್ರಪ್ರಸ್ಥಕಾತನ । ಚರರು ಸಚಿವರು ಹೊಕ್ಕು ಪಾಂಡವ । ರರಮನೆಯ ಮುದ್ರಿಸಿದರಲ್ಲಿಯ ನಾಡುಬೀಡುಗಳ ॥ ಕರೆಸಿ ಕಾಣಿಕೆಗೊಂಡು ಠಾಣಾಂ । ತರದನಾಯಕವಾಡಿಗಳ ಸಂ । ವರಣೆಗಳ ಸಂತವಿಸಿದರು ಕುರುರಾಜಮುದ್ರೆಯಲಿ ॥೨೩॥ ಅರಸ ಕೇಳ್ವಾದ್ಶ್ಚರ್ಯವನು ಗಜ । ಪುರದ ಬೀದಿಯೊಳಿವರು ಬರುತಿರೆ । ದುರುಳದುಶ್ಯಾಸನನು ಮಿಗೆ ಹರಿತಂದನೇಡಿಸುತ ॥ ಬೆರಳನಾಡಿಸಿ ಹೋದರೀಹೋ । ದರಸುಕಾನನದೆತ್ತು ಪುನರಪಿ । ಸರಿದವೆತ್ತುಗಳೆನುತ ಬಂದನು ಹಿಂದೆ ಪವನಜನ ॥೨೪॥ ತಿರುಗಿ ಕಂಡನು ಭೀಮನುಬ್ಬಿದ । ಪರುಷಹೃದಯನ ಮನದರೋಷದೊ । ಳರಸನನು ನೋಡಿದನು ಭೂಪತಿ ಮೊಗದಸನ್ನೆಯಲಿ ॥ ತಿರುಹಿದನು ತಮ್ಮನನು ಗದೆಯನು । ತಿರುಗಿ ಹಾಯಿಕಿ ಹಿಡಿದು ಮಾರುತಿ । ಯರಿಸನಾಜ್ಞೆಯೊಳಂಜಿ ನಡೆದನು ನೃಪತಿ ಕೇಳೆಂದ ॥೨೫॥ ಪುರವ ಹೊರವಂಟವರು ಗಂಗಾ । ವರನದಿಯ ತೀರದಲಿ ನಿಂದರು । ಪುರಜನವ ಕಳುಹಿದರು ಧೃತರಾಷ್ಟ್ರನ ಪಸಾಯಿತರ ॥ ಗುರುಜನಕೆ ಪೊಡಮಟ್ಟು ಬೀಳ್ಕೊಂ । ಡರು ನದೀಜದ್ರೋಣಕೃಪರನು । ಕರೆದು ಕುಂತಿಯ ನಿಲಿಸಿದರು ವಿದುರನ ನಿವಾಸದಲಿ ॥೨೬॥ ಕಳುಹಿ ಮರಳಿದು ವಿದುರನರಸನ । ನಿಲಯಕೈತಂದನು ಕುಮಾರರ । ಕಳುಹಿ ಬಂದ್ಯೆ ತಮ್ಮ ಮತ್ತೇನಾಯುಧಿಷ್ಠಿರನ ॥ ಉಳಿದವರ ಹದನೇನು ದುರುಪದ । ಲಲನೆಯೇನೆಂದಳು ನಿದಾನವ । ತಿಳಿದು ಬಂದ್ಯೆ ಹೇಳೆನುತ ಧೃತರಾಷ್ಟ್ರ ಬೆಸಗೊಂಡ ॥೨೭॥ ಮುನಿಪ ಜಪಿಸುತ ಹೋದನಗ್ನಿಯ । ವಿನುತಸೂಕ್ತವನೆತ್ತುಗೈದುವಿ । ನನಿಲಜನು ದುಗುಡದಲಿ ಫಲುಗುಣಯಮಳರೊಂದಾಗಿ ॥ ವನಿತೆಯನು ನಡುವಿಟ್ಟು ಹೊರವಂ । ಟನು ಯುಧಿಷ್ಠಿರನೃಪತಿ ನಿಯತದಿ । ನೆನೆವುತಿದ್ದನು ವೀರನಾರಾಯಣನಪದಯುಗವ ॥ ॥೨೮॥

**ಅಂತು ಸಂಧಿ ೧೬ ಕ್ಕೆ ಪದ ೧೧೧೯ ಕ್ಕಂ ಮಂಗಳಮಸ್ತು.**

---

**ಇತಿ ಶ್ರೀಮದಚಿಂತ್ಯಮಹಿಮ ಗದುಗು ವೀರನಾರಾಯಣಚರಣಾರವಿಂದ ಮಕರಂದ ಮಧುಪಾನ ಪುಷ್ಟವಚಷಟ್ಪದೀ ನಿಕಾಯ ಶ್ರೀಮದ್ಯೋಗೀಂದ್ರ ಕುಮಾರ ವ್ಯಾಸ ವಿರಚಿತ ಮಹಾ ಕರ್ನಾಟಭಾರತ ಕಥಾಮಂಜರಿಯೊಳ್ ಸಭಾಪರ್ವಂ ಸಮಾಪ್ತಮಾದುದು.**



॥ ಶ್ರೀರಸ್ತು. ॥

ಶ್ರೀವೇದವ್ಯಾಸಾಯನಮಃ.

# ಕನ್ನಡಮಹಾಭಾರತ—ಅರಣ್ಯಪರ್ವ.

## ಮೊದಲನೆಯ ಸಂಧಿ.

**ಸೂಚನೆ॥ ಸಕಲರಾಜ್ಯವನುಳಿದಿವರು ಕಾ । ಮ್ಯಕಮಹಾಕಾನನದೊಳಗೆ ಕೀ ।**
**ಚಕಕುಲಾಂತಕ ಕೆಡಹಿದನು ಕಿಮ್ಮೀರದಾನವನ ॥**

ಕೇಳು ಜನಮೇಜಯಧರಿತ್ರೀ । ಪಾಲ ಗಂಗಾತೀರದಲಿ ಭೂ । ಪಾಲಕರು ಗುರುಭೀಷ್ಮವಿದುರಾದ್ಯಖಿಳಬಾಂಧವರ ॥ ಬೀಳುಗೊಟ್ಟರು ಗಜಪುರದ ಜನ । ಜಾಲವನು ಕಳುಹಿದರು ಗಂಗಾ । ಕೂಲದುತ್ತರಭಾಗದಲಿ ಮಾಡಿದರು ವಿಶ್ರಮವ ॥೧॥ ನಿಲಿಸೆ ನಿಲ್ಲದೆ ಬಂದರರಸನ । ಬಳಿಯಲಗ್ಗದ ಮಂಡಲೇಶ್ವರ । ರೊಲಿದು ಸೋದರರಾಜಪುತ್ರರು ಹಲವುಮನ್ನಣೆಯ ॥ ಬಲುಭಟರು ಬಾಹತ್ತರದನಿ । ಶ್ಚಲನಿಯೋಗಿಗಳಾಶ್ರಮಿಗಳ । ಗ್ಗಳೆಯವಿಪ್ರಸ್ತೋಮ ಬಂದುದು ಕೋಟಿಸಂಖ್ಯೆಯಲಿ ॥೨॥ ತಿರುಗಿ ಕಂಡನು ಭೂಮಿಭಾರದ । ನೆರವಿಯನು ಗಲ್ಲದಲಿ ಕರವಿ । ಟ್ಟರಸ ತಲೆದೂಗಿದನು ಸುಯ್ದನು ಬೈದು ದುಷ್ಕೃತವ ॥ ಧರಣಿ ಸೇರದುದಹಿತರಿಗೆ ಕರಿ । ತುರಗರಥಮೆಮಗಿಲ್ಲ ವಿಪಿನದ । ಪರಿಬವಣೆಗಿವರೇಕೆ ಬೆಸಗೊಳು ಭೀಮ ನೀನೆಂದ ॥೩॥ ನಿಲ್ಲಿರೈ ದ್ವಿಜನಿಕರ ಕಳುಹಿಸಿ । ಕೊಳ್ಳಿರೈ ಪುರವರ್ಗನೇಮವ । ಕೊಳ್ಳಿರೈ ಪರಿವಾರ ಮಕ್ಕಳುತಂದೆಮೊದಲಾಗಿ ॥ ಎಲ್ಲಿ ಮೆಳೆಮರಗಾಡುಪಲ್ಲವ । ಫುಲ್ಲಫಲಪಾನೀಯಪೂರಿತ । ವಲ್ಲಿರಾಯನ ಸೆಜ್ಜೆಯರಮನೆಯೆಂದನಾಭೀಮ ॥೪॥ ಅವನಿಪತಿ ಚಿತ್ತವಿಸು ಬಹುಳಾ । ರ್ಣವವ ಹೊಗು ಹಿಮಗಿರಿಯಲಿರು ಭೂ । ವಿವರಗತಿಯಲಿ ಗವಿಸು ಗಾಹಿಸು ಗಹನಗಹ್ವರವ ॥ ಎನಗೆ ನೀನೇ ಜೀವ ನೀನೇ । ವಿವಿಧಧನಗತಿ ನೀನೆಮತಿ ನೀ । ನವಗಡಿಸಬೇಡಕಟ ಕೃಪೆಮಾಡೆಂದುದಖಿಳಜನ ॥೫॥ ತುಂಬಿದುದು ಕಂಬನಿಯನಕಟ ವಿ । ಡಂಬಿಸಿತೆ ವಿಧಿಯೆನ್ನನಿನಿಬರ । ನಂಬಿಸುವಪರಿಯಂತುವಸನಗ್ರಾಸವಾಸದಲಿ ॥ ತುಂಬಿಸಿರಿಗೆಡಹಿಯೊಳಲಕ್ಷ್ಮಿಯ । ಮುಂಬಿಗನೊಳಪದೆಸೆಯ ಕುಂತದ । ಚುಂಬಿಗನೊಳೇನುಂಟುಫಲವೆಂದರಸ ಬಿಸುಸುಯ್ದ ॥೬॥ ಖೇದವೇಕೆಲೆ ನೃಪತಿ ಹರುಷವಿ । ಷಾದದಲಿ ಸುಖದುಃಖದಲಿ ನುತಿ । ವಾದಪರಿವಾದದಲಿ ಸಮಬುದ್ಧಿಗಳಲಾದ್ವಿಜರು ॥ ಈದುರಂತದಚಿಂತೆ ಬೇಡೆಲೆ । ದ್ವಾದಶಾತ್ಮನ ಭಜಿಸಿದೊಡೆಭ । ಕ್ಷ್ಯಾದಿಬಹುವಿಧದನ್ನಸಿದ್ಧಿಪುದೆಂದನಾಧೌಮ್ಯ ॥೭॥ ಧರಣಿಪತಿ ಕೇಳ್ಧೌಮ್ಯವಚನಾಂ । ತರದೊಳಮರನದೀವಿಗಾಹನ । ಪರಮಪಾವನಕರಣನೀಕ್ಷಿಸಿ ತರಣಿಮಂಡಲವ ॥ ಮುರುಹಿ ಮೂಲಾಧಾರಪವನನ । ನುರುಸುಷುಮ್ನೆಗೆ

ನೆಗಹಿ ನಿಚ್ಚಟ । ವರಸಮಾಧಿಯಲಿವನ ಮೆಚ್ಚಿಸಿದನು ಮಹೀಪಾಲ ॥೮॥ ವರವ ಕೊಟ್ಟೆನು ನಿನಗೆ ಹೇಮದ । ಚರುಕವಿದೆ ವಿವಿಧಾನ್ನಪಾನೋ । ತ್ಕರದ ತವನಿಧಿ ನಿನ್ನವಧು ಬಾಣಸನಕರಣದಲಿ ॥ ವಿರಚಿಸಲಿ ಬಳಿಕುಣಲಿ ಶತಸಾ । ವಿರವನಂತವು ನೀವು ಬಳಿಕಂ । ಬುರುಹಮುಖಿ ಮರುದಿವಸವೀಪರಿ ಯೆಂದನಾದ್ಯುಮಣಿ ॥೯॥ ಭೂಮಿಪತಿ ಭುಲ್ಲವಿಸಿದನು ನಿಸ್ಸೀಮಸಂತೋಷದಲಿ ಸುಜನ । ಸ್ತೋಮ ರಕ್ಷಣಕಾದನಿವಾರ್ಹದನಿರೋಧಿಯಲಿ ॥ ಆಮುನೀಂದ್ರಂಗೆರಗಿ ಬಳಿಕೀ । ಭಾಮಿನಿಯ ಕರೆದೀಹ ದನ ಸು । ಪ್ರೇಮದಿಂದರುಹಿದನು ತನ್ನ ಸಹೋದರವ್ರಜಕೆ ॥ ಇವರು ತಿರುಗಿದರುತ್ತಲಡವಿಯ । ಭವಣಿಗೆಯ ಭಾರಾಂಕಭಾಷೆಯ । ಲವಿರಳಿತಜನಜಾಲಸಹಿತಾರಣ್ಯಮಾರ್ಗದಲಿ ॥ ಅವನಿಪತಿ ಕೇಳ ತ್ತಲಾಕೌ । ರವನ ನಗರಿಗೆ ಪಾರಿಕಾಂಕ್ಷಿ । ಪ್ರವರನೊಬ್ಬನು ಬಂದು ಹೊಕ್ಕನು ರಾಜಮಂದಿ ರವ ॥೧೧॥ ಮುನಿಯ ಸತ್ಕರಿಸಿದನು ಕೌರವ । ಜನಪಸಾಋಷಿಮುಖ್ಯನೀತನ । ವಿನಯರಚನೆಗೆ ಮೆಚ್ಚಿ ನುಡಿದನು ರಾಜಕಾರಿಯವ ॥ ನಿನಗಿದೊಂಟೇಕೊರತೆ ಪಾಂಡವ । ಜನಪರನು ಜೂಜಿನಲಿ ಸೋಲಿಸಿ । ಕನಲಿಸಿದೆಯದರಿಂದ ಬಲುಗೇಡಹುದು ನಿನಗೆಂದ ॥೧೨॥ ಹೋದಕೃತಿಯಂತಿರಲಿ ಸಾಕಿ । ನ್ನಾದರೆಯು ಕೌಂತೇಯರನು ಕರೆ । ದಾದರಿಸಿಕೊಡು ಧರೆಯ ನೆನೆ ಖೊಪ್ಪರಿಸಿ ಖಾತ್ರಿಯಲಿ ॥ ಹೊ ಯ್ದತೊಡೆಯನು ಹಗೆಗೆ ಕೊಡುವೆನೆ । ಮೇಟನಿಯ ನೆನೆ ರೋಷಶಿಖಿಯಲಿ । ಕಾದ-ದೀತನಹೃದಯ । ಶಪಿಸಿದನಂದು ಮೈತ್ರೇಯ ॥೧೩॥ ತೊಡೆಗಳನು ಕಲಿಭೀಮ ಬವರದೊ । ಳುಡಿದು ಕೆಡಹಲಿಯೆಂದು ಶಾಪವ । ಕೊಡಲು ಮುನಿಪನ ಸಂತವಿಟ್ಟನು ಬಂದು ಧೃತರಾಷ್ಟ್ರ ॥ ತೊಡೆಗೆ ಬಂದುದು ತೋಟಿ ಸಾಕಿ । ನ್ನೊಡಬಡಿಸಿ ಫಲವಿಲ್ಲ ನಮ್ಮಯ । ನುಡಿಗೆ ಮರುಮಾತಿಲ್ಲೆನುತ ಮುನಿ ಸರಿದನಾಶ್ರಮಕೆ ॥ ಆಮಹಾಮುನಿಶಾಪಭಯವನು । ಭೀಮಸೇನನ ಬಲುಹ ನೆನೆನೆನೆ । ದಾಮನಸ್ಸಿನ ಬೇಗೆಯಲಿ ಬೆದೆ ಬೆಂದು ಬೇಸರಲಿ ॥ ಭೂಮಿಪತಿ ಕರೆಸಿದನು ವಿದುರನ । ಸಾಮಹಾಜ್ಞಾನಿಯನು ಮುನಿಪನ । ತಾ ಮಸವನರುಹಿದೊಡೆ ಬಳಿಕಿಂತೆಂದನಾವಿದುರ ॥೧೫॥ ತಪ್ಪದಿದು ನಿಸ್ಸಾತ್ರಗಳ ಭುಜ । ದರ್ಪತೀವ್ರ ಜ್ವರದ ವಿಕಳರ । ನೊಪ್ಪಿತಾದೆ ಸುಯೋಧನಾದ್ಯರು ಜನಿಸಲೀಧರೆಗೆ ॥ ತಪ್ಪುವುದೆ ಋಷಿವಾಕ್ಯಸಂ ಧಿಯೊ । ಳೆಪ್ಪಿಗೊಳು ಪಾಂಡವರನಲ್ಲದೊ । ಡಪ್ಪಿಕೊಂಬಳು ಮೃತ್ಯು ನಿನ್ನ ಕುಮಾರಕರನೆಂದ ॥ ಎನಲು ಕಿಡಿಕಿಡಿಯಾಗಿ ಕೌರವ । ಜನಪನೀತನ ಬೈದು ಕುಂತೀ । ತನುಜರಲಿ ಬಾಂಧವನಲಾ ಹೋಗ ವರ ಹೊರಗೆಂದು ॥ ಮುನಿದು ಗರ್ಜಿಸೆ ಜೀಯ ಕರಲೇ । ಸೆನುತ ಮನದುಬ್ಬಿನಲಿ ಪಾಂಡವ । ಜನಪರಿ ಹಕಾಮ್ಯಕವನಾಂತರಕ್ಕೆದಿದನು ವಿದುರ ॥೧೭॥ ಇಟರುಗೊಂಡರು ಹಿರಿದುಮನ್ನಿಸಿ । ವಿದುರನನು ಕೊಂಡಾಡಿ ಗುರುನೃಪ । ನದಿಜಧೃತರಾಷ್ಟ್ರಾದಿಗಳ ಸುಕ್ಷೇಮಕುಶಲಗಳ ॥ ವಿದುರಸಾಗಮನಪ್ರ ಪಂಚವ । ಹವನನೆಲ್ಲವ ಕೇಳಿದರು ಹೇ । ಳಿದನು ನಿಜವೃತ್ತಾಂತವನು ವಿದುರಂಗೆ ಯಮಸೂನು ॥೧೮॥ ಇತ್ತಲೀವಿದುರನ ವಿಯೋಗದ । ಚಿತ್ತದಂತಸ್ತಾಪದಲಿ ನೃಪ । ಮತ್ತೆ ದೂತರ ಕಳುಹಿ ಕರೆಸಿದ ನಾತನನು ಪುರಕೆ ॥ ಹೆತ್ತಮಕ್ಕಳ ಬಿಡು ಪೃಥಾಸುತ । ರತ್ತ ತಿರುಗೆನೆ ಖಾತಿಗೊಂಡನು । ಮತ್ತೆ ಮುನಿಯದಿರೆಂದು ವಿದುರನನಪ್ಪಿದನು ನೃಪತಿ ॥೧೯॥ ಆವವನದಲಿ ಪಾಂಡುಸುತರಿಗೆ । ತಾವು ನಿನ ಗೇನೆಂದರನಿಬರ । ನಾವವನದಲಿ ಕಂಡೆ ಕೂಡೆನಿತುಂಟು ಪರಿವಾರ ॥ ಆವುದಭಿಮತ ಭೀಮಸೇನನ ।

ಭಾವವೇನು ಯುಧಿಷ್ಠಿರಾರ್ಜುನ । ರಾವಭಂಗಿಯಲಿದ್ದರೆಂದನು ನಗುತಧೃತರಾಷ್ಟ್ರ ॥೨೦॥ ಅರಸ ಕೇಳ್ಗಂಗಾನದಿಯನು । ತ್ತರಿಸಿದವರಿಗೆ ಕಮಲಮಿತ್ರನ । ಕರುಣವಾಯಿತು ಕನಕಪಾತ್ರೆಯೊಳಕ್ಷಯಾನ್ನದಲಿ ॥ ಪರಿಕರದ ಪರುಠವಣೆಯಲಿ ಸಾ । ವಿರದಶತಸಂಖ್ಯಾತಧರಣೀ । ಸುರನಿಯೋಗಿಗಳಾಪ್ತಜನಸಹಿತೈದಿದರು ವನವ ॥೨೧॥ ಜನಪ ಕೇಳ್ಕಿರ್ಮೀರನೆಂಬವ । ನನಿಮಿಷರಿಗುಬ್ಬಸದ ಖಳನಾತನ ವಿಭಾಡಿಸಿ ಹೊಕ್ಕರವರಾರಣ್ಯಮಂದಿರವ ॥ ದನುಜನೇ ಕಿರ್ಮೀರನಾತನ । ನನಿಲಜನೊ ಫಲುಗುಣನೊ ಕೊಂ । ದಾತನು ಯುಧಿಷ್ಠಿರನೋ ಸವಿಸ್ತರವಾಗಿ ಹೇಳೆಂದ ॥೨೨॥ ಅರಸ ಕೇಳೆಂದೇಕಚಕ್ರದೊ । ಳೊರಸಿದನಲಾ ಭೀಮನಾತಗೆ । ಹಿರಿಯನೇ ಕಿರ್ಮೀರಬಾಂಧವನಾಹಿಡಿಂಬಕಗೆ । ಧರಣಿಪಾಲನ ಸಪರಿವಾರದ । ಬರವ ಕಂಡನು ತನ್ನ ತಮ್ಮನ । ಹರಿಬವನು ಮರಳಿಚುವೆನೆನುತಿದಿರಾದನಮರಾರಿ ॥೨೩॥ ಇವರು ಮೂರೇದಿನಕೆ ಕಾಮ್ಯಕ । ನವಮಹಾಶ್ರಮಕಾಗಿ ಬರೆ ದಾ । ನವನು ದಾರಿಯ ಕಟ್ಟಿ ನಿಂದನು ಕೈಯಮುಷ್ಟಿಯಲಿ ॥ ಅವನ ಕಂಗಳ ಕೆಂಪಿನಲಿ ಮೇ । ಣವನ ದಾಡೆಯ ಬೆಳಗಿನಲಿ ಖಳ । ನವಯವವ ಕಂಡಳುಕಿ ನಿಂದರು ಮುಂಗುಡಿಯಭಟರು ॥೨೪॥ ಮುಂದೆ ಘೋರಾರಣ್ಯವಿದೆ ಸುರ । ಬಂದಿಕಾರನ ಕಾಹಿನಲಿ ಕಾ । ಳಿಂದಿಯುದರದ ಮೊಬ್ಬಿನಂತಿದೆ ತಿಮಿರತರತಿಮಿರ ॥ ಇಂದಿನಿರುಳಲಿ ಬದುಕಿದೊಡೆ ಸಾ । ವೆಂದಗೆಮಗಿಲ್ಲೆನುತ ಭಯದಲಿ । ನಿಂದುದಲ್ಲಿಯದಲ್ಲಿ ಪಾಂಡುಕುಮಾರಪರಿವಾರ ॥೨೫॥ ಅಡಿಗಡಿಗೆ ಮಾನಿಸರ ಸೊಗಡವ । ಗಡಿಸುತಿದೆ ಬರಹೇಳು ನೆತ್ತರ । ಗುಡಿಹಿಗ್ಗೈನೆಯರಲ್ಲಿ ಶಾಕಿನಿಡಾಕಿನೀನಿಕರ ॥ ತಡೆಯಬೇಡೋ ತಿನ್ನೆನುತ ಬೊ । ಬ್ಬಿಡುತ ಖಳನುರುಬಿದನು ರಾಯನ । ನೊಡಬ ಹೊಕ್ಕಳು ಮರೆಯನರ್ಜುನಭೀಮಧರ್ಮಜರ ॥೨೭॥ ಎಲೆಲೆರಾಕ್ಷಸ ಭೀತಿಹೋಗದೆ । ನಿಲುನಿಲೆಲವೋ ನಿಮಿಷಮಾತ್ರಕೆ । ಗೆಲುವೆರರಸುಗಳೆನುತ ಮುನಿರಕ್ಷೋಘ್ನಸೂಕ್ತವನು ॥ ಪಲವುವಿಧದಲಿ ಜಪಿಸಿ ದಿಗುಮಂ । ಡಲದ ಬಂಧವ ರಚಿಸಿ ಜನಸಂ । ಕುಲವ ಸಂತೈಸಿದನು ಧೌಮ್ಯನು ಮುಂಚೆ ಭೂಪತಿಯ ॥ ಆರುನೀವ್ನಡುವಿರುಳು ಪಾಂಡುಕು । ಮಾರರಾವೆನಲಿತ್ತಲೇನು ವಿ । ಚಾರ ಬಂದಿರಿ ಹೇಳಿ ನೀವಾಬಕಹಿಡಿಂಬಕರ ॥ ವೈರಿಗಳಲಾ ಹೊಲ್ಲಹೇನುವಿ । ಕಾರಿಗಳನೊಡಹೊಯ್ದು ಶೋಣಿತ । ವಾರಿಯೋಕುಳಿಯಾಡಬೇಹುದೆನುತ್ತ ಖಳ ಜರೆದ ॥೨೮॥ ಮಿಡಿದನರ್ಜುನನಧನುವನಾತನ । ಜಡಿದು ನಿಂದನು ಭೀಮನಸುರನ । ಕೆಡಹಿ ಕಾಮ್ಯಕವನದ ಭೂಮಿಯ ಭೂತಸಂತತಿಗೆ ॥ ಬಡಿಸುವೆನು ನೀಸ್ಥೈರಿಸೆನುತವ । ಗಡಿಸಿದನು ಕಲಿಭೀಮನಂತ್ಯದ । ಸಿಡಿಲು ಸೆರೆಬಿಟ್ಟಂತೆ ಬೊಬ್ಬಿಡುತೆದ್ದನಮರಾರಿ ॥೨೯॥ ಎಂಬೆನೇನನು ಪವನಜನ ಕೈ । ಕೊಂಬದೈತ್ಯನೆ ಹೆಮ್ಮರನ ಹೆ । ಗ್ಗೊಂಬ ಮುರಿದನು ಸವರಿದನು ಶಾಖೋಪಶಾಖೆಗಳ ॥ ತಿಂಬೆನಿವನನು ತಂದು ತನ್ನಹಿ । ಡಿಂಬಕನ ಹಗೆ ಸಿಲುಕಿತೇ ತಾ । ನಂಬಿದುದು ನೆರೆದೈವವೆನುತಿದಿರಾದನಮರಾರಿ ॥೩೦॥ ಹೊಯ್ದನವನುರವಣಿಸಿ ಮುರಿದೊಳ । ಹೊಯ್ದು ಹೊಕ್ಕನು ಭೀಮನೆಲವೋ । ಕಯಿದುಮರನೇಸೆಳೆಗೆಸೆಡೆವುದೆಭದ್ರಮೆದದಂತಿ ॥ ಕಯಿದುವಿಲ್ಲಾ ತರಿಸಿಕೊಡುವೆನ । ಡಾಯುಧವ ಬಿಡುಸರಳನೆನುತವ । ಹೊಯಿದು ಹುರಿಯೋಹುರಿಯೆನುತ ಗಹಗಹಿಸಿದನು ಭೀಮ ॥೩೧॥ ಮುರುಕಿಸುವಪವನಜನನೆತ್ತಿಯ । ನೆರಗಿದನು ಬಳಿಕವನ ಹೊಯ್ಲಿನ । ಬಿರುಸಿನೈಯ್ಯನೊ ಸಿಡಿಲಶಿಷ್ಯನೊ ವಜ್ರಕರಹತಿಯೋ ॥ ಕರಗಿದಾಮಯಣಾಮದಿಗಳಿಂ ।

ದೆರೆದಕಾಹಿನಕರುವೆನಲು ಕು । ಕ್ಕುರಿಸಲಸುರನನಿಕ್ಕಿದನು ಚಾಪಲಚಪೇಟದಲಿ ॥೩೨॥ ಡೆಂಡಣಿಸಿ ಸುರವೈರಿ ದೊಪ್ಪನೆ । ದಿಂಡುಗೆಡೆದನು ನೀಲಶೈಲದ। ದಂಡಿಗಾರನ ದೇಹಗರ್ತದ ರಕ್ತನಿರ್ಝರದಾ ॥ ದೊಂಡೆಗರುಳಿನ ಬಾಯಜೋಲಿನ । ಕುಂಡಲಿತಕರಜಂಘೆಗಳ ಬಿಡು । ಮುಂಡೆಗೆದರಿದಖಳನ ಕಂಡುದು ಭೂಸುರವ್ರಾತ ॥೩೩॥ ಅರಸ ಹೇಳುವುದೇನು ಹೋರಿದ । ನರೆಗಳಿಗೆ ಕೊಂಡಾಡಿ ಬಳಿಕಿಟ್ಟೊರಸಿ ಹುಡಿಯಲಿ ಹೂಳಿದನು ಕಿಮ್ಮೀರದಾನವನಾ ॥ ಬೆರಸಿ ತೀವಿಪ್ರೌಘವೀಮುನಿ । ವರಯರೀಕಾಮಿನಿಯರೀನೃಪ । ವರನ ಪರಿಕರವಾಮಹಾಕಾಮ್ಯಕವನಾಂತರವ ॥೩೪॥ ತಳಿತು ಬಿಟ್ಟುದು ಕೂತ್ತೆ ಪರಹಿನ ಹಳುವದೊಳ್ದ್ವಿಜವರ್ಗ ರಚಿಸಿದ । ತಳಿರಗುಡಿಗಳ ಪರ್ಣಶಾಲೆಯ ಭದ್ರಭವನಿಕೆಯ ॥ ಮೆಳೆಯ ಮಂಟಪ ಹೊದರುಮರುಗಲು । ನೆಳಲಚೌಕಿಗೆ ವಿಪುಳವಟಸಂ । ಕುಲದೊಳೋಲಗಶಾಲೆ ಮೆರೆದುದು ಧರ್ಮನಂದನನಾ ॥೩೫॥ ಆಸಕಲಸಾಮ್ರಾಜ್ಯಲಕ್ಷ್ಮಿವಿ । ಳಾಸವರಮನೆಗಳನು ಮರೆಸಿದು । ದೀಶರಭಶಾರ್ದೂಲಸೇವಿತಘೋರಕಾಂತಾರ ॥ ಆಸುಧಾಕಲಿತಾನ್ನವೇ ಫಲ । ರಾಶಿಯಾದುದು ಗೇಯರಸವಿ। ನ್ಯಾಸವೇ ಮಧುಮಕ್ಷಿಕವ್ರಜಜಂಬುಕಧ್ವಾನ ॥೩೬॥ ದಿನಪ ಕೃಪೆಮಾಡಿದನಲೇ ಕಾಂ । ಚನಮಯದ ಭಾಂಡವನು ಬಳಿಕಾ । ವನಜಮುಖಿ ಮಾಡಿದಸುಪಾಕದ ಷಡುರಸಾನ್ನದಲಿ ॥ ಮುನಿಜನಕೆ ಪರಿಜನಕೆ ಭೂಸುರ । ಜನಕೆ ತುಷ್ಟಿಯಮಾಡಿ ಭೂಪತಿ । ವನದೊಳಿದ್ದನು ವೀರನಾರಾಯಣನಕರುಣದಲಿ ॥೩೭॥

ಅಂತು ಸಂಧಿ ೧ ಕ್ಕೆ ಪದ ೩೭ ಕ್ಕಂ ಮಂಗಳಮಸ್ತು.

---

## ಎರಡನೆಯ ಸಂಧಿ.

ಸೂಚನೆ॥ ಸಕಲಯಮಬಲಸಹಿತ ಭಕ್ತ । ಪ್ರಕರಪಾಲಕನೊಲವಿನಲಿ ಕಾ ।
ಮ್ಯಕಮಹಾಕಾನನಕೆ ಬಿಜಯಂಗೈದನಸುರಾರಿ ॥

ಅರಸ ಕೇಳೈ ದ್ವಾರಕಾಪುರ । ವರಕೆ ಬಂದುದು ವಾರ್ತೆ ಪೀತಾಂ । ಬರನ ಬಹಳಾಸ್ಥಾನದಲಿ ವರ್ತಿಸಿದುದಡಿಗಡಿಗೆ ॥ ಧರೆಸಹಿತ ನಿಜವಸ್ತುವಾಹನ । ಪರಮವಿಭವವ ಬಿಸುಟು ಭಾರಿಯ । ಪರಿಭವದಿ ನಟ್ಟಡವಿವೊಕ್ಕರು ಪಾಂಡುಸುತರೆಂದು ॥೧॥ ಕೇಳಿ ತಲೆದೂಗಿದನ. ಮೂಗಿನ । ಮೇಲುವೆರಳಿನ ಹೊತ್ತದುಗುಡದ । ತೂಳಿದುಬ್ಬೆಯ ನಟ್ಟನೋಟದ ನೆಗ್ಗಿದುತ್ಸವದಾ ॥ ಹೂಳಿದೂಹೆಯ ಹಿಳಿದನೆಗಹಿನ । ಹೇಳಲರಿದೆನೆ ಹುದಿದಭಾವದ । ಲಾಲಿಸಿದನಸುರಾರಿ ದೂತವ್ರಜದ ಬಿನ್ನಪವ ॥೨॥ ಅಕಟ ಕಪಟದ್ಯೂತದಲಿ ನೃಪ । ಮುಕುರನುನ್ನತಿ ಮುರಿದುದೇಕಾ । ಳಿಕಬಲೀಕೌರವರು ಕೊಂಡರೆ ಧರ್ಮಜನನೆಲನ ॥ ಅಕುಟಿಲರಿಗೇಕಿದು ನಿರಾಬಾ । ಧಕರಿಗೇಕಿದು ಸಕಲಸುಜನ ।ಪ್ರಕರವಂದ್ಯರಿಗೇಕೆನುತ್ತಸುರಾರಿ ಚಿಂತಿಸಿದ ॥೩॥ ಹಿರಿದು ಹರ ಚಿಂತಿಸಿದನೀವ್ಯತಿ । ಕರವನರಿಯದಮುಗುದರಿದನಾ। ರರಿವರ್ತ್ಯೆ ವಿಶ್ವಂಭರಾಭಾರಾಪನೋದನಕೆ ॥ ಧರಣಿಯಲಿ ಮೈಗೊಂಡು ದೈತ್ಯರ ನೊರಸಿದನು ಬಳಿ

ಕೊಳಿದಪಾಂಡವ । ಕುರುನೃಪರ ಕದಡಿರಿದನೆಲೆಭೂಪಾಲಕೇಳೆಂದ ॥೪॥ ಏನನೆಂಬೆನು ಜೀಯ ಕಡು
ದುಂ । ಮಾನದಲಿ ಹೊರವಂಟು ಬಂದನು । ದಾನವಾಂತಕನೈದಿದವು ದಂಡಿಗೆಗಳರಸಿಯರ ॥ ಅನಿ
ಖಿಳನೃಪವರ್ಗಯಾದವ । ಸೇನೆ ಕವಿದುದು ಪಾಂಡುಪುತ್ರರ । ಕಾನನವ ಕರುಣಾಳು ಹೊಕ್ಕನೃ
ಹಲವುಪಯಣದಲಿ ॥೫॥ ಕೇಳಿದಾಗಳೆ ಬಂದರಾಪಾಂ । ಚಾಲಕೇಕಯದೃಷ್ಟಕೇತುನೃ । ಪಾಲ ಕುಂತೀ
ಭೋಜ ಸೃಂಜಯಸೋಮಕಾದಿಗಳು ॥ ಮೇಲೆಮೇಲೀನಾಲ್ಕುದಿಕ್ಕಿನ । ಮೂಲೆಯರಸುಗಳಿವರ ಕಂ
ಡುಪ । ಲಾಲಿಸಲು ಬರುತಿರ್ದರಾಕಾವ್ಯಕವನಾಂತರಕೆ ॥೬॥ ಇವರು ಬಂದರು ನಿಖಿಳಭೂಸುರ ।
ನಿವಹಸಹಿತಿದಿರಾಗಿ ವರಬಾಂ । ಧವರೊಳಗಿವಂದ್ಯರಿಗೆ ತತ್ಸಮರಿಗೆ ಕನಿಷ್ಠರಿಗೆ ॥ ಅವರಿಗವರವರು
ಚಿತಸತ್ಕಾ । ರವನು ಮಾಡಿ ಮುರಾರಿಯಂಘ್ರಿಯ । ಸವಿರಳಾಶ್ರುಗಳಿಂದ ನಾದಿದರರಸಕೇಳೆಂದ ॥೭॥
ಬೇರೆಬೇರೈವರನು ತೆಗೆದು ಮು । ರಾರಿಯಪ್ಪಿದನಡಿಗಡಿಗೆ ದೃಗು । ವಾರಿಗಳನೊರಸಿದನು ಪೀತಾಂಬ
ರದ ಸೆರಗಿನಲಿ ॥ ಸಾರುಸಾರೆನಲುಗ್ರಪಕ್ಷಿಯ ವಿ । ಕಾರವಿನ್ನೇಕೆನುತ ರಾಯನ । ನಾರಿ ಬಂದಳು
ಕವಿದು ಬಿದ್ದಳು ಹರಿಯಚರಣದಲಿ ॥೮॥ ಒರಲಿದಳು ದೆಸೆಯೊಡನೊದರೆ ಮಿಗೆ । ಹೊರಳಿದಳು
ಹರಿಪಾದದಲಿ ಮೈ । ಮರೆದಳಂಗನೆ ತನುವ ಮುಸುಕಿದಕೇಶಪಾಶದಲಿ ॥ ಕರಗಿದಳು ಕಂದಿದಳು ಮ
ಮ್ಮಲ । ಮರುಗಿದಳು ಕುಂದಿದಳು ದೃಗುಜಲ । ದೊರತೆಯುಕ್ಕಿತು ಮೇಲೆಮೇಲೆ ಮಹೀಶನಂಗನೆಗೆ ॥
ಹಿಂದೆ ಸೆಳೆಸೀರೆಯಲಕಟ ಗೋ । ವಿಂದ ರಕ್ಷಿಸನಾಥನಾಥ ಮು । ಕುಂದ ಕಾಯ್ದೆ ಕೃಷ್ಣ ರಕ್ಷಿಸು
ಕರುಣಿಸಸುರಾರಿ ॥ ಇಂದಿರಾಪತಿಯೇ ಯಶೋದಾ । ನಂದನನೆ ಕಾರುಣ್ಯನಿಧಿ ಸಲ । ಹೆಂದರುಳುಹಿ
ದದೈವ ನೀ ಮೈದೋರಿದೈ ತನಗೆ ॥೧೦॥ ಶ್ರುತಿಗಳಿಗೆ ಮೈದೋರೆ ಸುಪತಿ । ವ್ರತೆಯರಿಗೆ ಗೋಚ
ರಿಸೆ ಯತಿಸಂ । ತತಿಯ ನಿರ್ಮಳಸಾರಸಮ್ಯಗ್ಜ್ಞಾನದೀಧಿತಿಗೆ ॥ ಮತಿಗೊಡದವಾಹಿಮಾಂಬುನಿಧಿ
ಯೆನೆ । ಗತಿಶಯವನೇ ಮಾಡಿ ಲಜ್ಜಾ । ಸ್ಥಿತಿಯನುಳುಹಿದದೈವ ನೀ ಮೈದೋರಿದೈ ತನಗೆ ॥೧೧॥
ಹೆಸರುಗೊಂಡೊಡೆ ಹಿಂದೆ ಬಂದು । ಬ್ಬಸದಭಾರವ್ಯಸನವನು ಹಿಂ । ಗಿಸಿದೆ ಸಾಕ್ಷಾದ್ದೃಷ್ಟದರುಶನ
ವೇನನಿತ್ತಪುದೋ ॥ ಹೆಸರುಗೊಳಲರಿಯದೆ ಮನೋವಾ । ಗ್ವಿಸರ ಮರಳಿದತರ್ಕನಿಗಮ । ಪ್ರಸರ
ಣದ ಪರದೈವ ನೀ ಮೈದೋರಿದೈ ತನಗೆ ॥೧೨॥ ಪತಿಗಳಿವರಂಜದರು ಧರ್ಮ । ಸ್ಥಿತಿಯನರಿದವರ
ಳುಕಿದರು ತ । ಪ್ಪಿವೃತತಾಮಹಗುರುಗಳಡಗಿದರವನಿಯಲಿ ಬಗಿದು ॥ ಗತಿವಿಹೀನೆಗೆ ಕೃಷ್ಣ ನೀನೇ । ಗತಿ
ಯೆನುತ ಬಾಯ್ಬಿಡಲು ಲಜ್ಜಾ । ಸ್ಥಿತಿಯನುಳುಹಿದದೈವ ನೀ ಮೈದೋರಿದೈ ತನಗೆ ॥೧೩॥ ದಾನಯ
ಜ್ಞತಪೋವ್ರತಾನು । ಷ್ಠಾನನಿಷ್ಠರು ಕಾಣರಷ್ಟವಿ । ಧಾನಯೋಗದ ಸಿದ್ಧರರಿಯರು ನಿನ್ನ ನುಳಿವು
ಗಳ ॥ ಜ್ಞಾನಮಧ್ಯತ್ರಿಪುಟಿಯನು ಸಂ । ಧಾನರಹಿತಜ್ಞಪ್ತಿರೂಪನು । ತಾನೆನಿಪ ಪರಬೊಮ್ಮ
ನೀ ಮೈದೋರಿದೈ ತನಗೆ ॥೧೪॥ ಕಾಯಿದೈ ಪ್ರಹ್ಲಾದಮಾರ್ಕಂ । ಡೇಯವನಗಜವಂಬರೀಷನ ।
ಕಾಯಿದೈ ಕಾರುಣ್ಯದಲಿ ಪಾತಕಿಯ ಜಾಮಿಳನ । ಕಾಯಿದೈಗೋವಿಂದಯೆನೆ ತ । ನ್ನಾಯತಿಕೆಯ
ಭಿಮಾನವನು ನೀ । ಕಾಯಿದೈ ಹರಿಯೆನುತ ಪದದಲಿ ಹೊರಳಿದಳು ತರಳೆ ॥೧೫॥ ಏಳು ತಾಯೆ
ಸರೋಜಮುಖಿ ಪಾಂ । ಚಾಲೆ ನೊಂದೆ ತಂಗಿಯೆನುತ ಕೃ । ಪಾಳು ಕಂಬನಿದೊಡೆದು ಕೊಡಹಿದ
ನವಯವದರಜವ ॥ ಮೇಲುಮುಚ್ಚುಳತೆರೆದತನುವಿನ । ಹೇಳಿಗೆಯ ಶೋಕಾಹಿಯಂತಿರೆ । ಲೋಲ

ಲೋಚನೆಯುಳಲು ಮಿಗೆ ಹೆಕ್ಕಳಿಸಿತಡಿಗಡಿಗೆ ॥೧೬॥ ಆಸಕಲಪಟವಾರವಾಧರ । ಋಷೀಶರಾಮುನಿನಿಕರ ರಾಜನ । ರಾಸತೀನಿಕುರುಂಬವಾಗಜಘೋಟಕವ್ರಾತ॥ ಆಸರೋಜಾನನೆಯ ಬಹಳ । ಕ್ಲೇಶಗಳ ಕಂಡ ಕ್ಷಿಜಲವಾ । ರಾತಿಯಲಿ ತೇಕಾಡುತಿರ್ದುದು ರಾಯ ಕೇಳೆಂದ ॥೧೭॥ ಮುಡಿಯ ಸಂವರಿಸಬಲೆ ಸೀರೆಯ । ನುಡು ನವಾಂಬರವಿದೆ ವಿರೋಧವ । ಬಿಡು ಸುಯೋಧನರಾಜಸಂತತಿಯುರಿದುದಿನ್ನೇನು॥ ಕೆಡಿಸಿಕೊಂಡರು ಸಾಯ್ಗಳಿನ್ನದ । ನುಡಿದು ಫಲವೇನಕಟ ಕೈಕೊಂ । ಡಡವಿಯನು ಭವಸವೆಯ ಸ್ವೈರಿ ಪುದೆಂದನಸುರಾರಿ ॥೧೮॥ ತುರುಬ ಕಟ್ಟುವಪದನ ನಿಮ್ಮಡಿ । ಯರಿಯದೆಂಬೆನೆ ಸಕಲಸಚರಾ । ಚರದ ಚೇತನರೂಪ ದೇಹಿನಿಕಾಯಕೃತಸಾಕ್ಷಿ ॥ ತರಿದು ದುಶ್ಶಾಸನನ ವಕ್ಷದೊ । ಳೊರೆವರಕ್ತದೊಳದ್ದಿ ಕಟ್ಟುವ । ಕುರುಬನರಿಯಾ ಕೃಷ್ಣಯೆಂದಳು ಕಮಲಮುಖಿ ಸೆಗುತ ॥೧೯॥ ಐಸಲೇ ದುರ್ಯೋಧ ನಾದಿಗ । ಳೀಶರನೆವಿರು ಭೀಮಪಾರ್ಥರ । ಬೀಸರಕೆ ಬಲುಗೈಯೆ ಬರ್ಹಿಮುರ್ಖರ ಭಾರವಣೆ ॥ ದೂ ಸಕನ ರಕ್ತದಲಿ ನಿನ್ನಯ । ಕೇಶವನು ಕಟ್ಟಿಸುವೆ ನಿನ್ನಯ । ಭಾಷೆ ತನ್ನದು ತಾಯೆ ತವಕಿಸಬೇಡ ನೀನೆಂದ ॥೨೦॥ ವರತಪಸ್ವಿನಿ ನೀನು ನಿನ್ನನು । ಕೆರಳಿಚಿದರೇ ಕುನ್ನಿಗಳು ಮಿಗೆ । ಭರತಸಂತತಿ ಫಲಿ ತಕದಳಿಯತೆರದೊಳಾಯಿತಲಾ ॥ ಕುರುಡನರಿಯದೆ ಹೋದರೆಯು ಕರ । ಗುರುಡರಾದರೆ ಭೀಷ್ಮವಿ ದುರಾ । ದ್ಯರು ಮಹಾದೇವೆನುತ ಮುರರಿಪು ತೂಗಿದನು ಶಿರವ ॥೨೧॥ ಶಕುನಿಕಲಿಸಿದಕಪಟವೇಕೌ । ಳಿಕಡಜೂಜಿದು ನಿಮ್ಮನೀಕಾ । ವ್ಯಕಕೆ ತಂದುದು ಜೂಜಿನಲಿ ತಾನಿಲ್ಲಲೇ ಯನಲು ॥ ಸಕಲಜೀವರ ಕರ್ಮಸಾಕ್ಷಿ । ಪ್ರಕರಚೈತನ್ಯಸ್ವರೂಪಾ । ತ್ಮಕನು ನೀನಲ್ಲಿಲ್ಲ ಹುಸಿಯಲ್ಲೆಂದಳಿಂದುಮುಖಿ ॥೨೨॥ ದೇವಿ ತಾನಿದನರಿದೊಡಾವಸು । ದೇವನಾಣೆ ಮಹಾದ್ಭುತವನದ । ನೇವೊಗಳ್ವೆನು ಯದುನೃಪಾಲವಿ ತ್ಪರಂಪರೆಯಾ ॥ ನೀವು ಮಾಡಿವಯಜ್ಞಮುಖದವ । ಳಾವಳಿಯೊಳಾವಿರಲು ಮುತ್ತಿತು । ದೇವರಿ ಪುಬಲನಿಕರವಸ್ಮದ್ದ್ವಾರಕಾಪುರಿಯಾ ॥೨೩॥ ಲಗ್ಗೆಗಳುಕುವುದಲ್ಲಲೇ ಬಲು । ದುರ್ಗವದು ದುರ್ಭೇದ್ಯ ದರೊಳ । ಗಗ್ಗಳೆಯರಿದ್ದುದು ಹಲಾಯುಧಮುನ್ಮಥಾದಿಗಳು ॥ ಒಗ್ಗಿ ಕವಿವೆಕರೋದೈತ್ಯರ ॥ ನು ಗ್ಗುನುಸಿಮಾಡಿದರು ಹರಣದ । ಸುಗ್ಗಿ ಮೆರೆದುದುಮಾರ್ಬಲದೊಳಬುಜಾಕ್ಷಿ ಕೇಳೆಂದ ॥೨೪॥ ಅಳುರೆ ಮುತ್ತಿಗೆದೆಗೆದು ಸಾಲ್ವನ । ದಳ ಮುರಿದು ನಿಜಪುರಕೆ ಹಾಯ್ದುದು । ಗೆಲವು ಸಾತ್ಯಕಿರಾಮಕಾ ಮಾದಿಗಳ ವಶವಾಯ್ತು ॥ ಒಳಿಕ ನಿಮ್ಮಯ ರಾಜಸೂಯಕೆ । ಕಳಶವಿಟ್ಟು ಮದೀಯನಗರಿಯ । ಕಳಕಳವ ಸಂತೈಸಿ ನಡೆದವು ಸಾಲ್ವಪಟ್ಟಣಕೆ ॥೨೫॥ ಏನನೆಂಬೆನು ಸಾಲ್ವಪುರದ ನ । ವೀನಮಾ ಯಾರಚನೆಯನು ನಮ । ಗಾನಲಸದಳವುಳಿದಗೀರ್ವಾಣರಿಗೆ ಗೋಚರವೆ ॥ ದಾನವನ ಮಾಯಾಪು ರದ ಸಂ । ಸ್ಥಾನವರ್ಮವನರಿದು ಶರಸಂ । ಧಾನದಲಿ ಸಂಹರಿಸಿದೆವು ಸಾಲ್ವಾದಿರಿಪುಭಟರ ॥೨೬॥ ಅತ್ತಲಾಕೋಳಾಹಳದಲಿರ । ಲಿತ್ತಲಾದುದು ಜೂಜು ನಿಮ್ಮನಿ । ಪತ್ತು ಕಂಡುದು ತೆರಹ ತಪ್ಪಿಸಿ ನಮ್ಮಸುಳಿವುಗಳ ॥ ಇತ್ತಲಾವಿರೆ ಮೇಣು ದೋರಕಿ । ಯತ್ತಲಿರೆ ನೀವಡವಿವೊಕ್ಕರೆ । ಹೆತ್ತಳೋ ದೇವಕಿ ಮಗನನೆಂದನು ಮುರಧ್ವಂಸಿ ॥೨೭॥ ದ್ವಾರಕಾತತ್ಪುರದಲಿರುವತಿ । ದೂರದಲ್ಲಿರು ಮೇಣು ನಮ್ಮಯ । ಸಾರೆ ನಿಮ್ಮಡಿಯಿರಲಿ ನಿಮ್ಮಾಪಾಂಡುನಂದನರ ॥ ಭಾರ ನಿಮ್ಮದು ಭಕ್ತಜನದಾ । ಧಾರ ನಿಮ್ಮದನಾಥರಾವತಿ। ಕಾರುಣಿಕನೀನೆಂದು ಬಿದ್ದಳು ಮತ್ತೆ ಚರಣದಲಿ॥೨೮॥ಮಗನ ಕರೆದೊಡೆಯ

ಮನದೂತರ । ತಗುಳುವಂದು ಸಮೀಪವರ್ತಿನಿಯೆ । ನಗಧರ ಶ್ರೀಕಾಂತ ಸಲಹೆನೆ ಮುನಿಕುಮಾರಕನ ॥
ಉಗುಳಿಚಿದೆಲಾ ಮೃತ್ಯುವಿನ ತಾ । ಳಿಗೆಯೊಳಂದು ಸಮೀಪವರ್ತಿಯೆ । ಜಗದುದರ ನೀ ಜಾಣನಹೆ
ಯೆಂದಳು ಸರೋಜಮುಖಿ ॥೨೯॥ ಅಯಿತೇಳೌ ತಂಗಿ ನೀ ಪಿರಿ । ದಾಯಸವನನುಭವಿಸಲುದಿಸಿದೆ ।
ರಾಯನಾಡಿದಭಾಷೆಸಲಲಿ ವನಪ್ರವಾಸದಲಿ ॥ ವಾಯುತನುಜನ ಕೈಯಲೇ ನಿ । ನ್ನಾಯತಿಕೆಯಹು
ದಾಪ್ರತಿಜ್ಞೆಗೆ । ತಾಯೆ ತಾ ಹೊಣೆಯೆಂದು ಕೊಟ್ಟನು ಸತಿಗೆ ನಂಬುಗೆಯ ॥೩೦॥ ಸಂತವಿಟ್ಟನು
ಬೇರೆಬೇರೆ ಕೃ । ತಾಂತಸುತಭೀಮಾದಿಗಳ ಮುನಿ । ಸಂತತಿಯ ಮನ್ನಿಸಿದನವರವರುಚಿತವೃತ್ತಿ
ಗಳಲಿ ॥ ಎಂತು ಹದಿಮೂರಬುದವೀನೃಪ । ಸಂತತಿಗೆ ಸೌಹಾರ್ದವಕಟ ವ । ಸಾಂತರದೊಳೆಂದಸು
ರರಿಪು ನುಡಿದನು ಯುಧಿಷ್ಠಿರಗೆ ॥೩೧॥ ಕಳುಹುವುದು ಸುಭದ್ರೆಯನು ನಿಜ । ಲಲನೆಯರ ಲವರವರ
ತಾಯ್ಮನೆ । ಗಳಿಗೆ ಬೀಳ್ಕೊಡು ನಿಮ್ಮ ಪಂಚದ್ರೌಪದೀಸುತರ ॥ ಹಳುವದಾಟಲಿ ದ್ರುಪದನಂದನೆ।
ಯಳಲುತ್ತಿಭಿಗಂಧನವಲೇ ಕುರು । ಕುಲದಕರಡವಬಣಬೆ ಕಾದುತಿರುವವು ಕೇಳೆಂದ ॥೩೨॥ ಎಂದು
ಕಳುಹಿ ಸುಭದ್ರೆಯನು ನಂ । ನಂದನನ ಬೀಳ್ಕೊಳಿಸಿದೆನು ನೃಪ । ನಂದನರ ಕಳುಹಿಸಿದನಾಪಾಂಚಾ
ಲನೃಪನೊಡನೆ ॥ ಇಂದುವದನೆಯ ಸಂತವಿಟ್ಟ ಮು । ಕುಂದ ರಥವೇರಿದನು ಕುಂತೀ ॥ ನಂದನರು
ಕಳುಹುತ್ತ ಬಂದರು ಕಮಲಲೋಚನನ ॥೩೩॥ ಬೀಳುಕೊಂಡರು ಕೃಷ್ಣನನು ಪಾಂ । ಚಾಲಪತಿ
ಯನು ಪಂಚಕೇಕಯ । ಚೋಳಕೇರಳಪಾಂಡ್ಯಕುಂತೀಭೋಜನಂದನರ ॥ ಬೀಳುಕೊಟ್ಟರು ದೃಷ್ಟಕೇ
ತುನೃ । ಪಾಲಮೊದಲಾದಖಿಳಧರಣೀ । ಪಾಲಕರು ದುಗುಡದಲಿ ಹೊಕ್ಕರು ತಮ್ಮ ನಗರಿಗಳ ॥೩೪॥
ಸಂತವಿಸಿ ಪಾಂಡವರನಾಮುನಿ । ಸಂತತಿಯ ಮನ್ನಿಸಿ ಮಹೀಭಾ । ರಾಂತರವ ನಿಶ್ಚಯಿಸಿ ಭಾರತ
ಪಾರಿಶೇಷಕವ ॥ ಅಂತಕಾಂತಕ ನಲವು ಮಿಗೆ ಜಗ । ದಂತರಂಗಸಾನ್ಧಯಿ ಲಕ್ಷ್ಮೀ । ಕಾಂತ ಬಿಜಯಂ
ಗೈದು ಹೊಕ್ಕನು ದ್ವಾರಕಾಪುರಿಯ ... ... ... ॥೩೫॥

ಅಂತು ಸಂಧಿ ೨ ಕ್ಕೆ ಪದ ೭೦ ಕ್ಕಂ ಮಂಗಳಮಸ್ತು.

## ಮೂರನೆಯ ಸಂಧಿ.

ಸೂಚನೆ॥ ಬರುತ ಕಂಡನು ಕಣ್ವನಾಶ್ರಮ । ವರದ ಜಂಬೂಫಲವ ಮಾರುತಿ ।
ತರಲು ಯಮಸುತ ಹಲುಬೆ ಮುರರಿಪು ಶಾಖೆಗಡರಿಸಿದ ॥

ಕೇಳು ಜನಮೇಜಯಧರಿತ್ರೀ । ಪಾಲ ಯಮಸುತ ಮುನಿಜನಂಗಳ । ಮೇಳದಲಿ ಹೊರವಂಟು
ತನ್ನನು ಜಾತರೊಡಗೂಡಿ ॥ ತಾಳಿಗೆಯ ತಲ್ಲಣದ ಗಿರಿಗಳ । ಮೇಲೆ ಚರಿಸುತ ಬಂದು ವಿಪಿನ ।
ವ್ಯಾಳಗಜಶಾರ್ದೂಲಸಿಂಹಾದಿಗಳನೀಕ್ಷಿಸುತ ॥೧॥ ಬರಬರಲು ಮುಂದೊಂದುವನದೊಳು । ಚರಿಪ
ಪಕ್ಷಿಮೃಗಾಳಿ ತಳಿತಿಹ । ಬಿರಿಮುಗುಳನೀಕ್ಷಿಸುವಮರಿದುಂಬಿಗಳ ಮೇಳವದ ॥ ಪರಿಪರಿಯ ಮರಪೂ

ಫಲಂಗಳನಿರದೆ ಕೊಡುತಿರೆ ಪಕ್ಷಿಮೃಗಕುಲ। ವೆರಸಿ ಮೆರೆದವು ಬನದಸುತ್ತಲು ರಾಯ ಕೇಳೆಂದ ॥೨॥
ತುಂಬುರರಳಿ ಲವಂಗ ಪಾದರಿ । ನಿಂಬೆ ಚೂತ ಪಲಾಶ ಪನಸ ಸು । ಜಂಬುವಕುಳಾಶೋಕ ವಟ
ಪುನ್ನಾಗ ಚಂಪಕದ ॥ ಕುಂಭಿನಿಯೊಳುಳ್ಳಖಿಳವೃಕ್ಷಕದಂಬದಲಿ ವನ ಮೆರೆದುದದನೇ । ಸಂಬೆನೀ
ಪರಿವಾರ ತುಂಬಿತು ಲಲಿತನಂದನವ ॥೩॥ ತಿಳಿಗೊಳನ ಮಧ್ಯದಲಿ ನೆರೆದಿಹ ' ನಳಿನ ನೃಪನಿದಿರಿನಲಿ
ಮಧುಪಾ । ವಳಿರವದ ನಾಯಕರ ಪಿಕಪಾಠಕರನೃತ್ಯಗಳ ॥ ಲಲಿತನವಿಲಿನ ವಾದ್ಯಗಳ ಘುಳು
ಘುಳಿಪಕೊಳರ್ವಕ್ಕಿಗಳ ಲಕ್ಷ್ಮೀ । ಲಲನೆಯರ ಮನೆಯೆನಲು ಮೆರೆದುದು ಭೂಪ ಕೇಳೆಂದ ॥೪॥ ಬಂದು
ಭೂಪತಿ ಕೊಳನತೀರದಿ । ನಿಂದು ತಮಗಾಶ್ರಮದ ತಾವಹು । ದೆಂನು ಭೀಮಂಗರುಹಲಾಕ್ಷಣವಾತ ।
ನೈತಂದು ॥ ತಂದು ತಳಿರನು ಪರ್ಣಶಾಲೆಗ । ಳಂದದಲಿ ರಚಿಸಿದನು ಭೂಸುರ । ವೃಂದ ಬಿಟ್ಟುದು
ಧರ್ಮಪುತ್ರನ ಸುತ್ತುವಳಯದಲಿ ॥೫॥ ದಿನಪನಪರಾಂಬುಧಿಯನೈದಿಲು । ವನಜ ಮುಗಿದವು
ಚಕ್ರವಾಕದ। ಮನಕೆ ಖತಿ ಕುಮುದಿನಿಗೆ ಮುದ ಯಾಮಿನಿಗೆ ಸುಮ್ಮಾನ ॥ ಕನಕಮಯವರರಥವನಡ
ರಿದುದನುಜರನು ಸಂಹರಿಸೆ ಕಮಲಿನಿ । ಮನದೊಳುತ್ಸಾಹಿಸಲು ರವಿಯುದಯಾಚಲಕೆ ಬಂದ ॥೬॥
ಋಷಿಗಳೊಳು ಮೇಳವು ವರಾಸನ । ವೆಸನಬನದೊಳು ಬಳಿಕ ಗಂಗಾ । ಪ್ರಸರದಲ್ಲಿ ಸ್ನಾನಭೋಜ
ನಕಾಲದಲಿ ಪಾನ ॥ ಮಿಸುಪಸ್ಮೃತಿಯುವಿಲಾಸಗಳ ಸಂ । ತಸದಿ ಕೇಳ್ವ ಸವಾಸಪೂರಿತ । ವಸುಮತೀ
ಧರಯಮಜನೆಸೆದನು ಭೂಪ ಕೇಳೆಂದ ॥೭॥ ಇರುತಿರಲು ಕಲಿಭೀಮ ಮೃಗಯಾ । ತುರದಲಖಿಳಕಿ
ರಾತರುಗಳೊಡ । ವೆರಸಿ ಹೊಕ್ಕನು ಗಿರುತರುವ್ರಜಬಹಳಕಾನನವ ॥ ವರಹ ಮರೆ ಸಾರಂಗ ಪೆರ್ಬು
ಲಿ । ಕರಡಿ ವೃಕ ಶಾರ್ದೂಲ ಕೇಸರಿ । ಕರಿಕಳಭವೋಡಿದವು ದೆಸೆದೆಸೆಗೈದಿತಲ್ಲಣಿಸಿ ॥೮॥ ಹಾಸಗಳ
ಬಡಿದೆಳೆವನಾಯ್ಗಳ । ಬೀಸುವಲೆಗಳ ಕಾಲಕಣ್ಣಿಯ । ಸೂಸುವಲೆಗಳ ಧನುಸರಳಭಾಸುರದಕುಪ್ಪ
ಸದ ॥ ಕೇಶದಲಿ ತಳಿರುಗಳ ಬಿಗಿದು ವಿ। ಳಾಸದಲಿ ಹೊರವಂಟು ಹೆಬ್ಬುಲಿ । ಬೀಸಿದರು ಬೇಂಟೆಗರು
ಬಹಳಮೃಗಂಗಳನು ಕೆಡಹಿ ॥೯॥ ಕೊಡಹಿ ಬಿಸುಟನು ಕೇಸರಿಯ ಕಾ । ಲ್ವಿಡಿದು ಸೀಳಿದಕರಿಗಳನು
ಬೆಂಬಿಡದೆ ಹಿಡಿದಪ್ಪಳಿಸಿದನು ಶಾರ್ದೂಲಹೆಬ್ಬುಲಿಯ ॥ ಅಡಗೆಡಹಿ ಪೋರ್ಮರಿವರಾಹನ । ಮಡದ
ಲುರೆ ಘಟ್ಟಿಸಿ ವಿನೋದದಿ । ನಡೆಯೆ ಧರೆ ಕಂಪಿಸಿತು ಭೀಮನ ಪದದಘಲ್ಲಣೆಗೆ ॥೧೦॥ ಬಂದನತಿ
ಬೇಂಟೆಯಲಿ ಚರಿಸುತ । ನಿಂದು ಹತವಾದಖಿಳಮೃಗಗಳ । ನಂದು ವ್ಯಾಧರ ನಿಕರಕಿತ್ತನು ಪವನಜಾ
ತ್ಮಜನು ॥ ತಂದರವದಿರು ತವತವಗೆ ಪರಿ । ತಂದು ತರುಶಿಖಿಯಿಂದ ದಹಿಸಿದ । ರಂದು ಮಾಂಸವನೊ
ಲಿದು ಭಕ್ಷಿಸಿವರು ವಿನೋದದಲಿ ॥೧೧॥ ಮುಂದೆ ಕಂಡನು ದೂರದಲ್ಲಿಹ । ನಂದನದ ಮೆಳೆ ತರುನಿ
ಕಾಯದ । ಸಂದಣಿಯ ಪೂಗೊಂಚಲಿನ ಪಲ್ಲವನಿಕಾಯದಲಿ ॥ ಗೊಂಚಣಾದ ತರುಮಧ್ಯದಲ್ಲಿಹು ।
ದೊಂದುಜಂಬೂವೃಕ್ಷ ಮೆರೆದಿರೆ । ನಿಂದು ನೋಡಿದು ಭೀಮ ವಿಸ್ಮಯಗೊಂಡನಾಕ್ಷಣಕೆ ॥೧೨॥
ಇದು ವಿಚಿತ್ರದ ಫಲವು ತಾನೊಂ । ದಿದೆ ಮತಂಗಜಗಾತ್ರದಲಿ ತಾ । ನಿದನು ಕೊಂಡೊಯ್ವೆನು
ಮಹೀಪಾಲಕನ ದರುಶನಕೆ ॥ ಗದೆಯ ಕಕ್ಷದಲೌಕಿ ಮಾರುತಿ । ಮಧುರಿಪು ವನೆನೆಯುತ್ತಲಾನಂ ।
ದದಲಿ ವೃಕ್ಷವನಡರಿ ಕೊಯ್ದಿಳುಹಿದನು ನಿಮಿಷದಲಿ ॥೧೩॥ ಫಲವ ಕೊಂಡಾಭೀಮಬೇಗದಿ । ನಲವಿ
ನಲಿ ನಡೆತಂದು ಭೂಪನ । ನಿಳಯದಲಿ ತಂದಿಳುಹಿದೊಡೆಯಮಸೂನು ಬೆರಗಾಗಿ ॥ ಕೆಲದಲಿದ್ದನು

ಚರಿರ ಋಷಿಜನ । ಗಳಿರ ನೋಡಿರೆ ಯೆನಲು ಶಿವಶಿವ । ನಳಿನನಾಭನೆ ಬಲ್ಲನೆಂದರು ಸಕಲಋಷಿವರರು ॥೧೪॥ ಎನಲು ಸಹದೇವನ ಯುಧಿಷ್ಠಿರ । ಜನಪ ಬೆಸಗೊಳುತಿರಲು ಬಿನ್ನಹ । ದನುಜರಿಪು ಹರಕಮಲಭವರಿಗೆ ಕೊಡುವಶಾಪವನು॥ಅನುವಕಾಣೆನು ಕಣ್ವಮುನಿತಾ ಮುನಿದಸಾದೊಡೆಶಪಿಸುವನುಯೆಂ । ದನು ತ್ರಿಕಾಲಜ್ಞಾನಿ ಮಾದ್ರೀಸುತನು ಭೂಪತಿಗೆ ॥೧೫॥ ವರುಷಕೊಂದೇಫಲವಹುದದಅದ । ನುತು ಯೋಗಧ್ಯಾನದಲಿ ಕಂ । ದೆರೆದು ಕರಸಂಪುಟವನರಳಿಚಲಾಗಲಾಫಲವು ॥ ಇರದೆ ಹಸ್ತದೊಳಿಳಿಯಲಾ ಮುನಿ । ಹರುಷದಿಂದದಕಳೆದು ಕೊಂಬನು । ಪರಶಿವಧ್ಯಾನೈಕದೃಷ್ಟಿಯೊಳಿಪ್ಪನಾಮುನಿಪ॥೧೬॥ಕಂದೆರೆದು ಮುನಿ ನೋಡಿದೊಡೆತಮಗಿಂದುಹರಿವಹುದೆನುತಧರ್ಮಜನೊಂದು ಫಲ್ಗುಣಭೀಮಸಹದೇವಾದಿಗಳುಸಹಿತ ॥ ಬಂದನತಿವೇಗದಲಿಪವನಜನ । ನಿಂದವೃಕ್ಷವತೋರಿಸಿದನೇ । ನೆಂದುಬಣ್ಣಿಪೆಬಹಳಕೊನೆಗಳ ಗಗನಚುಂಬಿತವ ॥೧೭॥ ಕಂಡು ಯಮಸುತನತಿ ಯದಿನಿದ್ರ ಖಂಡಪರಶುವೆ ಬಲ್ಲ ಸಾಮ್ಯಂ । ಕೊಂಡು ಮಾಡಿದದುಷ್ಕೃತದ ಫಲವೆನುತ ಬಿಸುಸುಯ್ದ ॥ ಚಂಡವಿಕ್ರಮಭೀಮನದ ಕೈಕೊಂಡು ತಾನವಿವೇಕದಲಿ ಯುದ್ದಂಡತನದಿಂ ತಂದ ಹತ್ತಿಸಲರಿದು ನಮಗೆಂದ॥ ಹೇಳಿರೈ ಭೂಸುರರು ಋಷಿಗಳು । ಮೇಲೆ ಹತ್ತುವುಪಾಯವನು । ಋಷಿಜಾಲದೊಳಗೆಂದೆನಲು ನುಡಿದನು ಧೌಮ್ಯ ನಸುನಗುತ ॥ ಹೇಳಲರಿದಿದ ನಿಮ್ಮ ಸಲಹುವ । ಬಾಲಕೇಳಿಯ ಕೃಷ್ಣ ಬಲ್ಲನು । ಕಾಲವನು ನೂಕದೆ ಮಹಾತ್ಮನ ಭಜಿಸು ನೀನೆಂದ ॥೧೮॥ ಎನಲು ಭೂಪತಿ ಕೃಷ್ಣ ರಕ್ಷಿಸು । ದನುಜರಿಪು ಗೋವಿಂದ ರಕ್ಷಿಸು । ವನಜನಾಭ ಮುಕುಂದ ರಕ್ಷಿಸು ರಾವಣಾಂತಕನೇ ॥ ಮನಸಿಜನಪಿತ ರಾಮ ರಕ್ಷಿಸು । ಘನಮಹಿಮ ಕೇಶವನೆ ರಕ್ಷಿಸು । ನೆನೆವಭಕ್ತರು ಭಾಗ್ಯನಿಧಿ ಮಾಧವನೆ ರಕ್ಷಿಪುದು ॥ ಎಂದು ಭಜಿಸುತ್ತಿರಲು ನೃಪಗೋ । ವಿಂದನಮಳಜ್ಞಾನದಲಿ ಸಾ । ನಂದದಿಂದಲೆ ಸತ್ಯಭಾಮಾದೇವಿಯರಕೂಡೆ ॥ ಮಂದಮತಿಪವಮಾನಜನ ಕತ । ದಿಂದ ಪಾಂಡುಕುಮಾರರಿಗೆ ಕೇ । ಡಿಂದು ಬಹುದಾಋಷಿಯ ಶಾಪದಿ ಶಿವಶಿವಾಯೆಂದ ॥೨೧॥ ಎನುತ ಸಿಂಹಾಸನವನಿಳಿದಾ । ದನುಜರಿಪು ಕಮಲಾಕ್ಷಿ ನೀನಿ । ಲ್ಲೆನುತ ಮನವೇಗದಲಿ ಬಂದನು ಧರ್ಮಜನ ಹೊರೆಗೆ ॥ ನೆನೆಯೆ ಲಕ್ಷ್ಮೀಕಾಂತಬಂದನು । ಘನದುರಿತದಾವಾಗ್ನಿ ಬಂದನು । ಯೆನುತ ಮೈಯಿಕ್ಕಿದನು ಮುನಿಜನಸಹಿತ ಯಮಸೂನು ॥೨೨॥ ತೆಗೆದು ತಕ್ಕೈಸಿದನು ಭೂಪನ । ಮಿಗೆ ಹರುಷದಲಿ ಭೀಮಪಾರ್ಥರ । ನೆಗಹಿ ಮೈದಡವಿದನು ಮಾದ್ರೀಸುತರ ದ್ರೌಪದಿಯ ॥ ನಗುತ ಋಷಿಜನ ವಿಪ್ರಧೌಮ್ಯಾ । ದಿಗಳನುಚಿತೋಕ್ತಿಯಲಿ ಮನ್ನಿಸು । ತಗಧರನು ನೋಡಿದನು ಜಂಬೂಫಲದ ಘನತರವ ॥೨೩॥ ಕಾಳುಮಾಡಿದಿರಕಟಕಟ ನೀ । ವ್ಮೇಲನರಿಯದೆ ಋಷಿಯಶಾಪವ । ಸಾಲಿಸದ ವರಮೂರ್ಖತನದಲಿ ನೆನೆದಿರನುಚಿತವ ॥ ಏಳಿ ಫಲವನು ತೊಟ್ಟಸಿಸಕೆ । ಕಾಲವಲಿ ತಂದಿರಿಸಿ ನಿಮ್ಮನು । ಕೂಲಧರ್ಮಂಗಳನು ಬೇಗದಿ ಹೇಳಿ ನೀವೆಂದ ॥೨೪॥ ಎನಲು ತಂದಿರಿಸಿದರು ಫಲವನು ವನಜನಾಭನ ಹೇಳಿಕೆಯಲಾ । ಕ್ಷಣಕೆ ಕುಂತೀತನುಜ ಹೇಳೆನೆ ಕೈಗಳನು ಮುಗಿದು ॥ ಇನಶಶಿಗಳಿಂದಾನಲಾಂತಕ । ದನುಜವರುಣಸಮೀರಹರಸಖ । ಮನುಮಹಾರಿಯೆ ನೀವು ಚಿತ್ತವಿಸೆನುತಲಿಂತೆಂದ ॥೨೫॥ ಶ್ಲೋಕ॥ ಮಾತೃವತ್ಪರದಾರಾಂಶ್ಚ।ಪರದ್ರವ್ಯಾಣಿಲೋಷ್ಟವತ್ ॥ ಆತ್ಮವತ್ಸರ್ವಭೂತಾನಿ । ಯಃಪಶ್ಯತಿಸಪಶ್ಯತಿ ॥೧॥ ಪದ॥ ಪರಸತಿಯೆ ನಿಜಜನನಿ ಪರ

ಧನ । ವಿರದೆಲ್ಲೋಪ್ಪುವು ಜೀವರಾಶಿಯ । ಪರರ ನೋವನು ತನ್ನನೋವೆಂದನುತ ಭಾವಿಸುವೆ ॥ ನಿರುತವೆನೆ ಫಲಧರೆಯ ಬಿಟ್ಟಂ । ತೆರದೊಳೊಮ್ಮೆಳನೆಗೆಯೆ ಮುರಹರ । ಮರುತಸುತ ಬಾರೆನಲು ನುಡಿದನು ಮುಗಿದು ಕರಯುಗವ ॥೨೬॥ ಶ್ಲೋಕ॥ ಪ್ರಾಣಂವಾಪಿಪರಿತ್ಯಜ್ಯ । ಮಾನಮೇವಾಭಿರಕ್ಷಯೇತ್ ॥ ಅನಿತ್ಯಮಧ್ರುವಂಪ್ರಾಣಂ । ಮಾನಮಾಚಂದ್ರತಾರಕಂ ॥೨॥ ॥ಪದ॥ ಜೀವವೀಕ್ಷಣವಳಿದು ಹೋಗಲಿ । ಕಾವುದಭಿಮಾನವನು ನಿತ್ಯದ । ಭಾವವಾಗಿಹುದಾತ್ಮಮಾಚಂದ್ರಾರ್ಕವಭಿಮಾನ ॥ ನಾವುಬೇರೊಂದರಿಯೆವಿದ್ದುದ । ದೇವರಿಗೆ ಬಿನ್ನವಿಸಿದೆವು ಯೆನ । ಲಾವಬೇಗದಲಡರಿದುದೊ ಫಲವರಸ ಕೇಳೆಂದ ॥೨೭॥ ಏನು ನಿನ್ನಭಿಮತವು ಪಾರ್ಥ ನಿ । ಧಾನವನು ನುಡಿಯೆನಲು ಹೇಳುವೆ । ಮಾನನಿಧಿ ನಿಮಗರುಹುವೆನು ಚಿತ್ತವಿಸಿ ನೀವೆನುತ ॥ ಧ್ಯಾನದಲಿ ಕೈಮುಗಿದು ಶಂಕರ । ನೀನೆ ಗತಿಯೆಂದೆನುತಲಾಶ್ರಿತ । ಭಾನುದಿಗುಪಾಲರಿಗೆ ನಮಿಸುತ ಕೇಳಿನೀವೆಂದ ॥೨೮॥ ಶ್ಲೋಕ॥ ನಿಮಂತ್ರಣೋತ್ಸವಾವಿಪ್ರಾ । ಗಾವೋನವತೃಣೋತ್ಸವಾಃ ॥ ಭರ್ತಾರ್ಗವೋತ್ಸವಾನಾರ್ಯಃ । ಅಹಂಕೃಷ್ಣರಣೋತ್ಸವಃ ॥೩॥ ಪದ॥ ಪರಗೃಹದಭೋಜನಕೆ ವಿಪ್ರರು । ಪರಿಣಮಿಸುವೊಲ್ಪಶುಸಮೂಹವು । ಇರದೆ ನವತೃಣದಿಂದ ತುಷ್ಟಿಯನೈದುವಂದದಲಿ ॥ ವರಸತಿಯು ನಿಜಪತಿಯ ಕಂಡಾ । ಹರುಷವಹುದೆನಗಾಹವದಲೆಲೆ । ಹರಿಯೆ ಯೆನೆ, ಬೇಗದಲಿ ಫಲವಡರಿತ್ತು ನಿಮಿಷದಲಿ ॥೨೯॥ ಶ್ಲೋಕ ॥ ಧರ್ಮೋಜಯತುನಾಧರ್ಮಃ । ಸತ್ಯಂಜಯತುನಾನೃತಂ ॥ ಕ್ಷಮಾಜಯತುನಕ್ರೋಧೋ । ವಿಷ್ಣುರ್ಜಯತುನಾಸುರಃ ॥೪॥ ಪದ॥ ಧರ್ಮವನು ನೆರೆ ಜಯಿಸಲರಿಯದ । ಧರ್ಮ ಸತ್ಯವ ಮೀರಲರಿವುದೆ । ನಿರ್ಮಳದ ಸ್ಥೈರಣೆಯ ಗೆಲುವುದೆ ಕ್ರೋಧ ಭಾವಿಸಲು ॥ ಕರ್ಮಹರಕೃಷ್ಣನನು ಗೆಲುವೊಡೆ । ದುರ್ಮತಿಗಳಹ ಅಸುರರೆನಲಾ । ಧರ್ಮತತ್ತ್ವವ ನಕುಲ ವಿರಚಿಸಲೈದಿತಾಫಲವು ॥೩೦॥ ಶ್ಲೋಕ॥ ಸತ್ಯಂಮಾತಾಪಿತಾಜ್ಞಾನಂ । ಧರ್ಮೋಭ್ರಾತಾದಯಾಸಖಾ ॥ ಶಾಂತಿಃಪತ್ನೀಕ್ಷಮಾಸೂನುಷ್ಷಡೇತೇಮಮಬಾಂಧವಾಃ ॥೫॥ ಪದ॥ ಸತ್ಯವೇ ನಿಜಮಾತೆ ಜಾನವೆ । ನಿತ್ಯವಹಪಿತ ಧರ್ಮವನುಜನು । ಮತ್ತೆ ದಯೆಯೇಮಿತ್ರಶಾಂತಿಯೆ ಪತ್ನಿಕ್ಷಮೆಸೂನು ॥ ಸತ್ಯವನು ಸಹದೇವನುಡಿಯಲ್ಕತ್ಯಧಿಕಫಲಮೇಲೆ ಚಿಗಿಯಲು । ಮತ್ತೆ ಮುರರಿಪು ದ್ರುಪದಸುತೆ ಬಾಯೆಂದನುಚಿತ್ರದಲಿ ॥೩೧॥ ಶ್ಲೋಕ॥ ಸುಂದರಂಪುರುಷಂದೃಷ್ಟ್ವಾ । ಭ್ರಾತರಂಪಿತರಂಸುತಂ ॥ ಯೋನಿದ್ರವತಿನಾರೀಣಾಂ । ಸತ್ಯಂಬ್ರೂಹಿಮಾಹಕೇಶವ ॥೬॥ ಪದ॥ ಭಾವವಹಪುರುಷರನು ಕಾಣುತ । ಭಾವಿಸಲು ಪಿತಸುತರ ಅನುಜರ । ತಾವಿನಲಿಯಾದರೆಯು ಯೋನಿದ್ರವಣ ಸತಿಯರಿಗೆ ॥ ಭಾವದಲಿ ಮರೆಪಿಡಿದು ನುಡಿಯ । ಲ್ಕಾವಿಗಡಫಲವಡರದಿರುತಿರೆ । ದೇವ ನುಡಿದನು ವಂಚಿಸದೆ ನಿಶ್ಚಯವ ಹೇಳೆಂದು ॥೩೨॥ ಶ್ಲೋಕ॥ ಪಂಚಮೇಪತಯಸ್ಸಂತಿ । ಷಷ್ಠಸ್ತುಮಮರೋಚತೇ ॥ ಪುರುಷಾಣಾಮಭಾವೇನ ಸರ್ವಾನಾರ್ಯಃ ಪತಿವ್ರತಾಃ ॥೭॥ ಪದ॥ ಪತಿಗಳೀಶ್ವರನಾಜ್ಞೆಯಿಂದವೆ । ಯತಿಶಯದಲೈವರು ಮನಸ್ಸಿನ । ಮತದಲಾರಾಗಿಹುದು ಬೇರೊಂದಿಲ್ಲ ಚಿತ್ತದಲಿ ॥ ಪೃಥುವಿಯಲಿ ಪರಪುರುಷರನು ದು । ರ್ಮತಿಯೊಳೊಡಬಡುವವಳು ಸತಿಯೇ । ಸತತ ಕರುಣಾಕರ ಯೆನಲು ಫಲ ತಾವನಡರದುದು ॥೩೩॥ ಹರುಷ ಮಿಗೆಋಷಿಜನಕೆಧೌಮ್ಯನು । ಕರಗಳನು ನೆಗಹುತ ಯುಧಿಷ್ಠಿರ । ಧರಣಿಪತಿ. ಕೇಳ್ಕೃಷ್ಣನಿರೆ ನಿನಗಾವುದರಿ

ದೆಂದು ॥ ಇರದೆ ದೇವನ ಪಾದಪಂಕಜ । ಕೆರಗಿದುದು ಮುನಿನಿಕರಬುಧಜನ । ನಿರತಪರಮಾನಂದ ದಿಂದೈದಿದರು ತದ್ವನವ ॥೩೪॥ ಮುನಿಪಕಣ್ವನು ಕಣ್ದೆರೆದು ಪರ । ಮನನು ಜಾನಿಸಿ ಕರವನ ರಳಿಚ । ಲೊನೆದು ಬಿದ್ದುದು ಪಣ್ಣು ಕಂಡನು ನಗುತ ಮನದೊಳಗೆ ॥ ವನಜನಾಭನ ತಂತ್ರವಿದು ಪಾ । ವನಸುರೂಪನ ನೋಳ್ಪೆನೆಂದಾ । ಮುನಿಪ ಫಲಸಹಬಂದು ಕಂಡನು ಕೃಷ್ಣ ಪಾಂಡವರ ॥೩೫॥ ಇದರೊಳಿರಿಸಿದನಾಫಲವ ಸಂ । ಮುದದಿ ಹೊಂಪುಳಿವೋಗಿ ಮುನಿಯಾ । ಪದುಮನಾಭಂಗೆರಗಿ ತೆಗೆ ನೀ ಫಲವನೆಂದೆನಲು ॥ ಮದನಪಿತ ನಸುನಗುತ ಮುನಿಪನ । ಹದುಳ ಮಿಗೆ ಸೈಪಿಟ್ಟು ನೆಗಹಿದ ! ಮುದಿತಫಲವನು ಹಂಚೆಹೇಳಿದನಾನೃಪಾಲಂಗೆ ॥೩೬॥ ಬರಿಸಿ ಋಷಿಗಳನವರವರ ತರ । ವರಿದು ಕೊಡಿಸಿದನುಳಿದುದನು ಭೂ । ಸುರಸಹೋದರರಿಂಗೆ ಮುನಿಸತಿಯರಿಗೆ ದ್ರೌಪದಿಗೆ ॥ ಮುರಹರಗೆ ತನ್ಮುನಿಪ ಕಣ್ವಂ । ಗಿರಿಸಿಕೈಮೀಸಿದೊಡೆ ಫಲವನು । ಹರುಷಮಿಗೆ ಭುಂಜಿಸಿತು ಭೂಪತಿ ಕೇಳು ಕೌತುಕವ ॥೩೭॥ ಪಾರಣೆಗನುರೆ ಮಾಡಿ ಮುನಿಪ ಮ । ಹೀರಮಣನನು ಬೀಳುಕೊಟ್ಟನು । ದಾರಲಕ್ಷ್ಮೀಕಾಂತನನು ಬೀಳ್ಕೊಂಡು ಮತ್ತೊಂದು ॥ ಸಾರವಹಸುಸ್ಥಾನಕೈದಿದ । ನಾರು ಭಾವಿಸಬಲ್ಲರಾಮುರ । ವೈರಿಯ ನುಪಮಮಹಿಮೆಗಳ ಭೂಪಾಲ ಕೇಳೆಂದ ॥೩೮॥ ದೇವ ನಿಮ್ಮ ಮಹಾಂಘ್ರಿಕಮಲವ । ನಾವನೆನೆವವ ನಂಗೆ ಜಪತಪ । ಸಾವುಹುಟ್ಟಿಲ್ಲೆಂಬುದೈ ವರವೇದಶಾಸ್ತ್ರಗಳು ॥ ನಾವಲೇ ಕೃತಕೃತ್ಯರಿಂದೀ । ದೇವಸಾಕ್ಷಾತ್ಕಾರದರ್ಶನ । ಭಾವವೋ ಯಿದು ನಮಗೆನುತ ಹೊಗಳಿದನು ಸಹದೇವ ॥೩೯॥ ಹರಿಯೊಲಿದು ಮೈದಡವಿ ಯೈವರ । ತರುಣಿಯನು ಸಂತೈಸಿಯಾಮುನಿ । ವರರನುಪಚರಿಸಿದನು ಬುದ್ಧಿಯ ನೊರೆದು ಧರ್ಮಜಗೆ ॥ ಉರುತರೋತ್ತರಸಿದ್ಧಿ ನಿಮಗಿ । ನ್ನಿರದೆ ಫಲಿಸುವುದೆಂದು ಸೂಚಿಸಿ । ಮರಳಿ ತನ್ನಯಪುರಿಗೆ ಗಮನೋದ್ಯೋಗಮನಸಾದ ॥೪೦॥ ಬಂದನಾಭೂಪತಿ ಮುರಾಂತಕ । ನಂದಣದ ಬಲದೆಸೆಯಲನಿಲಜ । ಮುಂದೆ ವಾಮದಿ ಪಾರ್ಥಯಮಳ ದ್ರೌಪದೀದೇವಿ ॥ ಹಿಂದೆ ಬರೆ ಕಿರಿದೆಡೆಯಲಲ್ಲಿಯೆ । ನಿಂದು ಕಳುಹಿದನೆಲ್ಲರನು ಗೋ । ವಿಂದನೇರಿದ ರಥವ ಗದುಗಿನವೀರನಾರಯಣ ॥೪೧॥

ಅಂತು ಸಂಧಿ ೩ ಕ್ಕಂ ಪದ ೧೧೩ ಕ್ಕಂ ಮಂಗಳಮಸ್ತು.

## ನಾಲ್ಕನೆಯ ಸಂಧಿ.

ಸೂಚನೆ॥ ಭಜಿಸಿದನು ನರನಿಂದ್ರಕೀಲದೊ । ಳಜಸುರಾರ್ಚಿತಚರಣಕಮಲನ ।
ತ್ರಿಜಗದಧಿಪತಿಯನು ಮಹಾನಟರಾಯಧೂರ್ಜಟಿಯ ॥

ಕೇಳು ಜನಮೇಜಯಧರಿತ್ರೀ । ಪಾಲ ಪಾಂಡುಕುಮಾರರಟವಿಯ । ಪಾಳಿಯಲಿ ಪರುಠವಿಸಿದರು ಪದಯುಗಪರಿಭ್ರಮವ ॥ ಲೋಲಲೋಚನೆಸಹಿತ ತತ್ಕುಲ । ಶೈಲದಲಿ ತದ್ವಿಪಿನದಲಿ ತ । ತ್ಕೂಲವತಿಗಳತೀರದಲಿ ತೊಳಲಿದರು ಬೇಸರದೆ ॥೧॥ ಘಳಮೃಗಾವಳಿ ಸವೆದುದಿನ್ನೀ । ಹಳುವು ಸಾಕಿನ್ನೊಂ

ದರಣ್ಯ। ಸ್ಥಳವ ನೋಡಲಿ ಕಟಕ ನಡೆಯಲಿ ವಿಪ್ರಸಂಕುಲದ ॥ ಸುಲಭವೀವನವೆಂದು ತಮ್ಮೊಳು।
ತಿಳಿದು ಪಾರ್ಥಯುಧಿಷ್ಠಿರರು ಮುನಿ। ಕುಲಸಹಿತ ನಲವಿಂದ ಹೊಕ್ಕರು ದ್ವೈತಕಾನನವ ॥೨॥ ಅರಸ
ಕಳುಹಿದ ದೂತನಾಗಜ। ಪುರವ ಹೊಕ್ಕು ತದೀಯವಾರ್ತೆಯ। ಭರದ ವಿವರವನರುಹಿ ಬಂದನು ಕಂಡ
ನವನಿಪನ ॥ ಕುರುನೃಪಾಲನ ಮದವನಾತನ। ಸಿರಿಯನಾತನ ಒಲುಹನಾತನ। ಪರಿಯನರುಹಿದೊಡ
ಬುಜಮುಖಿಪವನಜರೂ ಕಳವಳಿಸೆ ॥೩॥ ಮೂದಲಿಸಿದಳು ದ್ರುಪದತನುಜೆ ವೃ। ಕೋದರನರ್ಜುನನವ
ನಿಪ। ಸಾದಿಯಾದೈವರನು ಕೌರವನೃಪನ ಪತ್ರಿಕಸಿ ॥ ಆದೊಡಿದೆ ಕುರುರಾಜವಂಶ। ಚ್ಛೇದಘೋರ
ಕುಠಾರವೆನುತ ವೃ। ಕೋದರನು ತೂಗಿದನು ಗದೆಯನು ಗಾಢಕೋಪದಲಿ ॥೪॥ ಪಳಿದೇಕೆ ವೃಥಾನಿ
ಶಾಟ। ವ್ಯಾಕರಣಪಾಂಡಿತ್ಯವಕಟವ ವಿ। ವೇಕರಹಿತನೆ ನೀ ವೃಕೋದರ ದ್ರುಪದಸುತೆಯಂತೆ ॥ ಸಾಕು
ಸಾಕೈ ತಮ್ಮ ಸತ್ಯವೆ। ಸಾಕು ನಮಗೆ ಮದೀಯಪುಣ್ಯ। ಶ್ಲೋಕತೆಯನುಳುಹೆಂದು ಗಲ್ಲವ ಹಿಡಿದ
ನನಿಲಜನ ॥೫॥ ಅರಸಿ ನಿನ್ನಯ ಶೋಕವಹ್ನಿಯೊ। ಳುರುವುದರಿನೃಪಜಲಧಿ ಕೇಳಂ। ಬುರುಹ
ಲೋಚನೆ ನಿನ್ನ ಲೋಚನವಾರಿಪೂರದಲಿ ॥ ಕುರುನೃಪಾಲನ ಸಿರಿಯ ಶೋಕ ಸ್ಫುರದನಲನುಜ್ವಲಿ
ಸುವುದು ರಿಪು। ವಿರಚಿತದವಿಪರೀತಕಿದು ವಿಪರೀತವಹುದೆಂದ ॥೬॥ ಆಸಮಯದಲಿ ಬಂದನಗ್ಗದ।
ಭೂಸುರ ಶ್ರೀಕಂಠನೋ ಪ। ದ್ಮಾಸನನ ಪಲ್ಲಟವೊ ಕಮಲಾಂಬಕನ ಚುಂಬಕವೋ ॥ ಭಾಸುರಕ್ರ
ತುಶತದ ರೂಪವಿಳಾಸವೋ ಶ್ರುತಿಕೋಟಿಕನ್ಯಾವಾಸಭವನವೊ ದೇವದೇವವ್ಯಾಸಮುನಿರಾಯ ॥೭॥
ಹಾ ಮಹಾದೇವಾ ಇದಾರು ಮ। ಹಾಮುನೀಶ್ವರರೆನುತ ಮುನಿಪ। ಸ್ತೋಮವೆದ್ದುದು ಧರ್ಮ
ನಂದನನವರಿಗಿದಿರಾಗಿ ॥ ಪ್ರೇಮಪುಳಕದ ನಯನಸಲಿಲದ। ರೋಮಹರ್ಷದ ಸತ್ಯಭಾವದ। ಭೂಮಿ
ಪತಿ ಮೈಯಿಕ್ಕಿದನು ಮುನಿವರನ ಚರಣದಲಿ ॥೮॥ ವಿವಿಧಮುನಿಗಳ ಗೋತ್ರನಾಮ। ಪ್ರವರಸಹಿತರ
ಭಿವಾದಕವರ್ಗೋ। ತ್ಸವವ ಕೈಕೊಳುತನಿಬರನು ಮನ್ನಿಸಿದನುಚಿತದಲಿ ॥ ಯುವತಿ ಪದಕೆರಗಿದೊಡೆ
ಭೂಯಾ। ತ್ತ್ವವಮನೋರಥವೆನುತ ನಸುನಗು। ತವನಿಪಾಲನ ಪರ್ಣಶಾಲೆಗೆ ಮುನಿಪನೈತಂದ ॥೯॥
ಇದೆ ಪವಿತ್ರಪಲಾಶಪತ್ರದ। ಲುದಕವರ್ಘ್ಯಾಚಮನಪಾದ್ಯ। ಕ್ಕಿದೆ ವಿಮಳದರ್ಭೋಪರಚಿತಾಸನ
ವಿಳಾಸದಲಿ ॥ ಇದನು ಕಾಂಚನಪಾತ್ರಜಲವೆಂ। ದಿದು ವರಾಸನವೆಂದು ಕೈಕೊಂ। ಬುದು ಯಥಾ
ಸಂಭವದಲೆಂದನು ಧರ್ಮನಂದನನು ॥೧೦॥ ಈಪವಿತ್ರೋದಕವಲೇ ದೋ। ಷಾಪಹರದರ್ಭಾಸನದಲಿಂ।
ದೀಪೃಥವಿ ಸರ್ವಾಧಿಪತ್ಯವು ಸೇರುವುದು ನಿನಗೆ ॥ ಭೂಪ ಕೇಳೈ ಜೇನನೊಣದ ಮ। ಧೂಪಚಯವ
ವಕಿಲ್ಲಲೇ ಸ। ರ್ವಾಪಹಾರವು ಪರರಿಗಾಕೌರವನ ಸಿರಿಯೆಂದ ॥೧೧॥ ಒಡಲು ಬೀಳಲಿ ಮೇಣು
ತಮ್ಮದಿ। ರಡವಿಯಲಿ ಹಾಯಿಕ್ಕಿ ಹೋಗಲಿ। ಮಡದಿ ಮುನಿಯಲಿ ಬಸಿದು ಬೀಳಲಿ ಧರಣಿ ಕುರು
ಪತಿಗೆ ॥ ಎಡೆಯಲುಳಿವಿವರಾಗುಹೋಗಿನ। ಗೊಡವೆಯೆನಗಿಲ್ಲೆನ್ನ ಸತ್ಯದ। ನುಡಿಗೆ ಹಾದರವಿಲ್ಲದಂ
ತಿರೆ ಕರುಣಿಸುವುದೆಂದ ॥೧೨॥ ಬಾಧೆಯುಂಟೇ ನಿನ್ನ ಸತ್ಯಕೆ। ಸಾಧಿಸುವುದವಧಿಯನು ನಿನ್ನವಿ।
ರೋಧಿಗಳಿಗೆ ನಿವಾಸವಹುದು ಕೃತಾಂತಲೋಕದಲಿ ॥ ಆಧಿಪತ್ಯಭ್ರಮಿತರಲಿ ರಾಜ್ಯಾಧಿಯಲಿ ಕಡೆ
ಗೊಂಡಿರಖಿಲನಿ। ರೋಧವನು ಕಡನನು ಸವೃದ್ಧಿಕವಾಗಿ ಕೊಡಿಯೆಂದ ॥೧೩॥ ಆವುದರಿದಿವರಿಗೆ
ಭವತ್ಕರು। ಣಾವಲೋಕನವುಂಟು ಪುನರಪಿ। ದೇವಕೀನಂದನನಲೊದಗುವಮೋಲುನೋಟದಲಿ ॥ ಈ

ವಿಪತ್ತ್ರೀಸರದು ಪಾಂಡವ । ಜೀವಿಗಳು ನೀವಿಬ್ಬರಿರಲೆಂ । ದಾವಿಭಾಂಡಕಶೌನಕಾದಿಗಳೆಂದರಾ ಮುನಿಗೆ ॥೧೪॥ ಕರೆಸಿದು ದ್ರುಪದಾತ್ಮಜೆಯ ಕಂಬನಿ । ಯೊರತೆಯಾರಲು ನುಡಿದನಾಕೆಯ । ಕರುಣದಲಿ ಕಿವಿಗೊಂಡ ಕಳಕಳವನು ವಿಭಾಡಿಸಿದ ॥ ಧರಣಿಪತಿಗೇಕಾಂತಭವನದೊ । ಳೊರೆದನೀಶ್ವರವಿಷಯ ಮಂತ್ರಾ । ಕ್ಷರವನಂಗೋಪಾಂಗಮುದ್ರಾಶಕ್ತಿಗಳುಸಹಿತ ॥೧೫॥ ಇದು ಮಹೇಶ್ವರ ಶೋಕಹರವಿಂ । ತಿದು ವಿರೋಧಿಬಲಪ್ರಭಂಜನ । ವಿದು ಸಕಲಪುರುಷಾರ್ಥಸಾಧನವಖಿಳದುರಿತಹರ ॥ ಇದು ಮಹಾ ಧಿವ್ಯಾಧಿಹರವಿಂ । ತಿದನು ನೀ ಕೊಳ್ಳರ್ಜುನಂಗೊರೆ । ವುದು ರಹಸ್ಯದೊಳೆಂದು ಮುನಿ ಕರುಣಿಸಿದನ ರಸಂಗೆ ॥೧೬॥ ಪಾರ್ಥನೈದುವುದಿಂದ್ರಕೀಲದೊ । ಳರ್ಥಿಸಲಿ ಶಂಕರನನಖಿಳ । ಸ್ವಾರ್ಥಸಿದ್ಧಿಗೆ ಬೀಜವಿದು ಬೇರೊಂದ ಬಯಸದಿರು ॥ ವ್ಯರ್ಥರವದಿರು ನಿನ್ನ ಹಗೆಯು ಕ । ದರ್ಥನದೊಳಿನ್ನೇನು ಜಗಕೆ ಸ । ಮರ್ಥನೊಬ್ಬನೆ ಶಂಭು ಕೃಪೆಮಾಡುವನು ನಿನಗೆಂದ ॥೧೭॥ ಇಂದುಮುಖಿಯನು ಭೀಮ ನನು ಯಮ । ನಂದನನನರ್ಜುನನ ಯಮಳರ । ನಂದು ಕೊಂಡಾಡಿದನು ವ್ಯಾಸಮುನಿ ಮೋದ ದಲಿ ॥ ಬಂದು ಸಂದಣಿಸಿದ ಮುನಿವ್ರಜ । ವೃಂದವನು ಮನ್ನಿಸಿ ನಿಜಾಶ್ರಮ । ಮಂದಿರಕೆ ಮುದ ದಿಂದ ಬಿಜಯಂಗೈದನಾ ಮುನಿಪ ॥೧೮॥ ಅರಸ ಕೇಳೈ ಮುನಿಪನತ್ತಲು । ಸರಿದನಿತ್ತಲು ಪಾರ್ಥನ ನು ನೃಪ । ಕರೆದು ವೇದವ್ಯಾಸನಿತ್ತುಪದೇಶವಿಸ್ತರವ ॥ ಅರುಹಿದನು ಕೈಲಾಸಸೀಮಾ । ವರಪಥದಲ್ಲಿ ಹುದಿಂದ್ರಕೀಲದ । ಗಿರಿ ಮಹೇಶಕ್ಷೇತ್ರವಲ್ಲಿಗೆ ಹೋಗು ನೀನೆಂದ ॥೧೯॥ ಅಲ್ಲಿ ಘಟಿಸುವುದಮಳಗಿ ರಿಜಾ । ವಲ್ಲಭನಸಾಪ್ತಾಯಬೆಜ್ಜೆಗೆ । ದುರ್ಲಭನನ್ಯದೈವವನು ಬ್ರಹ್ಮೇಂದ್ರಭಾಸ್ಕರರ ॥ ಬಲ್ಲೆನೆಂ ಬರ ಬಹಳಗರ್ವವ । ಘಲ್ಲಿಸುವ ಗಡ ತನ್ನ ಭಕ್ತರು । ಬಲ್ಲಿದರು ತನಗೆಂಬಬೋಳೆಯರರಸನಿಹ ನೆಂದ ॥೨೦॥ ಮಳೆ ನಿಪ್ಪತ್ತ್ಯೂಷದಲಿ ಸತಿ । ಮಾಳಿ ಮೈದೋರಲಿ ತಡೀಯತ । ರಾಳಿಗಳು ಸಿದ್ಧಿಸಲಿ ಸೇರಲಿ ಶಿವನ ಕೃಪೆ ನಿನಗೆ ॥ ಸೋಲದಿರು ಸುರಸತಿಯರಿಗೆ ಸಂಮೇಳವಾಗದಿರವರೊಡನೆ ಕೈ । ಮೇಳವಿಸುವುದು ಕಾಮವೈರಿಯ ಚರಣಕಮಲದಲಿ ॥೨೧॥ ಮುಗ್ಗದಿರು ಮಾಯೆಯಲಿ ಮದದಲಿ । ನೆಗ್ಗದಿರು ರೋಷವವಿಡಂಬದ । ಲಗ್ಗಿಯೊತನದಿಂದ ಹಂಕೃತಿಭರದಿ ಮೆರೆಯದಿರು ॥ ಅಗ್ಗಸದಿದಾ ತ್ಮನನು ಲೋಭದೊ । ಳೊಗ್ಗದಿರು ಲಘುವಾಗದಿರು ವಿಗ್ಗೆ । ಹಿಗ್ಗದಿರು ಹೊಗಳಿಕೆಗೆ ಮನದಲಿ ಪಾರ್ಥ ಕೇಳೆಂದ ॥೨೨॥ ಆಡದಿರಸತ್ಯವನು ಕಪಟವ । ಮಾಡದಿರು ನಾಸ್ತಿಕರೊಡನೆ ಮಾ । ತಾಡದಿರು ಕೆಳೆಗೊಳ್ಳದಿರು ವಿಶ್ವಾಸಘಾತಕರ ॥ ಬೇಡಿಗಳೆಯದಿರಾರುವನು ಮೈ । ಗೂಡದಿರು ಪರವಧುವಿ ನಲಿ ರಣ । ಖೇಡನಾಗದಿರೆಂದು ನುಡಿದನು ನೃಪತಿಯರ್ಜುನಗೆ ॥೨೩॥ ಕ್ರೂರರಿಗೆ ಶಠರಿಗೆ ವೃಥಾ ಹಂ । ಕಾರಿಗಳಿಗತಿಕುಟಿಲರಿಗೆಯುಪ । ಕಾರಿಯುಪಘಾತರಿಗೆ ಭೂತದ್ರೋಹಿಜೀವರಿಗೆ ॥ ಜಾರರಿಗೆ ಜಡರಿಗೆ ನಿಕೃಷ್ಟ । ಚೋರರಿಗೆ ಪಿಸುಣರಿಗೆ ಧರ್ಮವಿ । ದೂರರಿಗೆ ಕಲಿಪಾರ್ಥ ಕೇಳ್ಪರಲೋಕವಿ ಲ್ಲೆಂದ ॥೨೪॥ ಭ್ರಾತೃಮಿತ್ರವಿರೋಧಕಗೆ ಪಿತೃ । ಮಾತೃಘಾತಿಗೆ ಖಳನಿಗುತ್ತಮ । ಜಾತಿನಾಶಕ ನಿಂಗೆ ವರ್ಣಾಶ್ರಮವಿದೂಷಕಗೆ ॥ ಜಾತಿಸಂಕರಕಾರಿಗಾಕ್ರೋ । ಧಾತಿರೇಕಗೆ ಗಾಢಗರ್ವಿಗೆ । ಭೂ ತವೈರಿಗೆ ಪಾರ್ಥ ಕೇಳ್ಪರಲೋಕವಿಲ್ಲೆಂದ ॥೨೫॥ ಸ್ವಾಮಿಕಾರ್ಯವಿಘಾತಕಂಗತಿ । ಕಾಮುಕಗೆ ಮಿಥ್ಯಾಪವಾದಿಗೆ । ಭೂಮಿದೇವದ್ವೇಷಿಗತ್ಯಾಗಿಗೆ ಬಕವ್ರತಿಗೆ ॥ ಗ್ರಾಮಣಿಗೆ ಪಾಷಂಡಗಾತ್ಮವಿ ।

ರಾಮುಕಾರಿಗೆ ಕೂಟಸಾಕ್ಷಿಗೆ । ನಾಮಧಾರಿಗೆ ಪಾರ್ಥ ಕೇಳ್ಪರಲೋಕವಿಲ್ಲೆಂದ ॥೨೬॥ ಆದರಿಸಾವಂ ಗುಪಹತಿಯ ಮಾ । ಡದಿರು ಸಚರಾಚರದ ಚೈತ । ನ್ಯದಲಿ ನಿನ್ನನೆ ಬೆರಸಿ ಕಾಬುದು ನಿನ್ನ ತನುವೆಂದು ॥ ಬೆದರದಿರು ಬಲುತಪಕೆ ಶೂಲಿಯ । ಪದಯುಗವ ಮರೆಯದಿರು ಹರಿಯನು । ಹೃದಯದಲಿ ಪಲ್ಲಟಿಸದಿರು ಸುಖಿಯಾಗು ಹೋಗೆಂದ ॥೨೭॥ ಕರುಣಿಸಲಿ ಕಾಮಾರಿ ಕೃಪೆಯಿಂ । ವರಮಹಾಸ್ತ್ರವನಿಂದ್ರಯಮಪ್ರಭು । ಸ್ಮರಹುತಾಶನನಿಋತಿವರುಣಕುಬೇರಮಾರುತರು ॥ ಸುರರುವಸುಗಳುಸಿದ್ಧವಿದ್ಯಾ । ಧರಮಹೋರಗಯಕ್ಷಮನುಕಿಂ । ಪುರುಷರೀಯಲಿ ನಿನಗೆ ವಿಮಳಸ್ವಸ್ತಿವಾಚನವ ॥೨೮॥ ಎನೆ ಪ್ರಸಾದವೆನುತ್ತ ಯಮನಂ । ದನಗೆ ಭೀಮಂಗೆರಗಿದನು ಮುನಿ । ಜನಕೆ ಮೈಯಿಕ್ಕಿದನು ಮುಳುಗಿದನಕ್ಷತೌಘದಲಿ ॥ ವನಜಮುಖಿಮುನಿವಧುಗಳಾಶೀ । ರ್ವಿನುತದಧಿದೂರ್ವಾಕ್ಷತೆಯನು । ಬ್ಬಿನಲಿ ಕೈಕೊಳುತ್ತನಿಬರನು ಮನ್ನಿಸಿದನುಚಿತದಲಿ ॥೨೯॥ ನೆನೆಯದಿರು ತನುಸುಖವ ಮನದಲಿ । ನೆನೆ ವಿರೋಧಿಯ ಸಿರಿಯನನ್ನಯ । ಘನತರಪರಾಭವವ ನೆನೆ ನಿಮ್ಮಗ್ರಜರ ನುಡಿಯ ॥ ಮುನಿವರನ ಮಂತ್ರೋಪದೇಶವ । ನೆನೆವುದಭವನ ಚರಣಕಮಲವ । ನೆನುತದುರುಪದಿಯೆರಗಿದಳು ಪಾರ್ಥನ ಪದಾಬ್ಜದಲಿ ॥ ಹರನ ಚರಣವ ಭಜಿಸುವೆನು ದು । ರ್ಧರತಪೋನಿಷ್ಠೆಯಲಿ ಕೇಳೆಲೆ । ತರುಣಿ ಪಾಶುಪತಾಸ್ತ್ರವಾದಿಯದಿವ್ಯಮಾರ್ಗಣವ ॥ ಪುರಹರನ ಕೃಪೆಯಿಂದ ಪಡೆದಾ । ನರಿಗಳನು ಸಂಹರಿಸಿ ನಿನ್ನಯ । ಪರಿಭವಾಗ್ನಿಯ ನಂದಿಸುವೆನಿಲ್ಲೆಂದನಾಪಾರ್ಥ ॥೩೦॥ ಬಿಗಿದಬತ್ತಳಿಕೆಯನು ಹೊನ್ನಾ । ಯುಗದ ಕಡುಗಕಠಾರಿಚಾಪವ । ತೆಗೆದನಳವಡೆಕಟ್ಟಿಬದ್ದುಗೆದಾರಗೊಂಡೆಯವ ॥ ದುಗುಡಹರುಷದ ಮುಗಿಲ ತಲೆಯೊ । ತ್ತುಗಳಿಗಿಟ್ಟೆಡೆಯಾಗಿ ಗುಣಮಾ । ಳಿಗಳಮಣಿ ಕಲಿಪಾರ್ಥ ಬೀಳ್ಕೊಂಡನು ನಿಜಾಗ್ರಜನ ॥ ಹರಡೆವಾಮದಲುಲಿವಯೆ ಮಧುರ । ಸ್ವರದಲುಪಸವ್ಯದಲಿ ಹಸುಬನ । ಸರಸಮಾಹಿತವಾಗೆ ಸೂರ್ಯೋದಯದಸಮಯದಲಿ ॥ ಹರಿಣಭಾರದ್ವಾಜನುಡಿಕೆಯ । ಸರ್ಗುನಕುಲನ ತಿದ್ದುಗಳ ಕುಕ್ಕುರನ ತಾಳಿನ ಶಕುನವನು ಕೈಕೊಳುತ ನಡೆತಂದ ॥೩೧॥ ನೀಲಕಂಠನ ಮನದಬಯಕೆಗೆ । ನೀಲಕಂಠನೆ ಬಲಕೆ ಬಂದುದು । ಮೇಲುಪೋಗನಸಿದ್ಧಿ ದೈತ್ಯಾಂತಕನ ಬುದ್ಧಿಯಲಿ ॥ ಕಾಲಗತಿಯಲಿ ಮೇಲೆ ಪರರಿಗೆ । ಕಾಲಗತಿಯನು ಕಾಬೆನೈ ಸಲೆ । ಶೂಲಧರನೇ ಬಲ್ಲನೆನುತೈತಂದನಾಪಾರ್ಥ ॥೩೨॥ ಅರಸ ಕೇಳೈ ಬರುತ ಭಾರತ । ವರುಷವನು ದಾಂಟಿದನು ತಪ್ಪಿನ । ಗಿರಿಯ ತಪ್ಪಲನಿಳಿದನಾಹರಿವರುಷಸೀಮೆಯಲಿ ॥ ಬೆರಸಿದನು ಬಳಿಕುತ್ತರೋತ್ತರ । ಸರಣಿಯಲಿ ಸೈನಡೆದು ಹೊಕ್ಕನು । ಸುರರಸೇವ್ಯವನಿಂದ್ರಕೀಲವಹಾವನಾಂತರವ ॥೩೩॥ ಗಿಳಿಯ ಮಿದುಮಾತುಗಳ ಮರಿಗೋ । ಗಿಲೆಯ ಮಧುರಧ್ವನಿಯ ಹಂಸೆಯ । ಕಳರವದ ಮರಿನವಿಲ ಕೇಕಾರವದ ನಯರಸದ ॥ ಮೊಲುದನಿಯ ಪಾರಿವದ ತುಂಬಿಯ । ಲಲಿತಗೀತದ ವನದ ಸಿರಿ ಬಗೆ । ಗೊಳಿಸಿತೈಪೂರ್ವಾಭಿಭಾಷಣದಲಿ ಧನಂಜಯನ ॥೩೪॥ ಸೊಂಪೆಸೆವಕೋಗಿಲೆಯ ಸರ ದೆಸೆ । ತಂಪಸೆವತಂಬೆಲರ ಹೊವಿನ । ಜೊಂಪವನು ಝೊಂಪಿಸುವಮರಿದುಂಬಿಗಳ ಮೇಳವದ ॥ ಪೆಂಪುಗುವತಾವರೆಗೊಳಂಗಳ । ತಂಪಿನೊದಗಿನವನದ ಸೊಗಸಿನ । ಸೊಂಪು ಸೆಳೆದುದು ಮನವನೀಕ್ಷನನರಸಕೇಳೆಂದ ॥೩೫॥ ಚಾರುತರಪರಿಪಕ್ವನವಖ । ರ್ಜೂರರಸಧಾರಾಪ್ರಪಾಸು ಮ । ನೋರಮೇಕ್ಷುವಿಖೇದವಿಶ್ರುತರಸನಿಪಾನೇಷು ॥ ಭೂರಿಜಂಬುಮಧೂಕಪನಸ । ಸ್ಫಾರರಸಪೂರೇಷಕ

ಲಿತವಿ । ಹಾರಸುರಮಹಿಳಾಭಿರಂಜನವಚಳವನಭೂಮಿ ॥೩೮॥ ವಿಲಸದಭ್ರಂಲಿಹಮಹಾತರು । ಕುಲದಿನಮರನದೀಸ್ತನಂಧಯ । ಫಲರಸದನದಿಗಳಲಿ ದಿಕ್ಕೂಲಂಕಷೋನ್ನತಿಯ ॥ ಸುಳಿವಪರಿಮಳಪವನನಿಂಕರ । ಗೊಳಿಸಿತರ್ಜುನಕಾವ್ಯಸಿದ್ಧಿ । ಸ್ಥಳದೊಳಂತರ್ವಿಘ್ನಕಾನನವರಸಕೇಳೆಂದ ॥೩೯॥ ಇಲ್ಲಿ ನಿಲ್ಲರ್ಜುನ ತಪೋವನ । ಕಿಲ್ಲಿನೆಲೆ ಸ್ರುತಿಯುವತಿಸೂಸುವ । ಚೆಲ್ಲೆಗಂಗಳವೊನೆಗೆವಿಮಾಸಲುಗೆಡದವಕ್ಕಿ ಸಿರಿಯಾ ॥ ದುರ್ಲಲಿತದಷ್ಟಾಂಗಯೋಗದ । ಕೊಲ್ಲಣಿಗೆಯಲಿಕೂಡದಪ್ರತಿ । ಮಲ್ಲತಿವನಕ್ಷೇತ್ರವಿದೆಯೆಂದುಮ ನಭೋನಿನದ ॥೪೦॥ ಪರಕಿಸನ ಬೀಳ್ಕೊಂಡು ಮಾರ್ಗಾಂ , ತರದೊಳಾರಡೆಗೈದು ಹೊಕ್ಕನು । ಪರನ ಕರುಣಾಸಿದ್ಧಿಸಾಧನವೆನಿಪಗಿರಿವನವ ॥ ಮುರುಟಿವಸದುದಯದಲಿ ಮಿಂದನು । ಸರಸಿಯಲಿ ಸಂಧ್ಯಾಭಿಮುಖದಲಿ । ತರಣಿಗರ್ಘ್ಯವನಿತ್ತು ದೇವಪೂಜಕೆ ಕೈಮುಗಿದ ॥೪೧॥ ವಿನುತ ಶಾಂಭವಮಂತ್ರಜಪಸಂ । ಜನಿತನಿರ್ಮಳಭಾವಶುದ್ಧಿಯ । ಮನದೊಳರ್ಜುನನೆತ್ತಿ ನಿಂದನು ದೀರ್ಘಬಾಹುಗಳ ॥ ನೆನಹು ನೆಮ್ಮಿತು ಶಿವನನಿತರದ । ನನೆಕೊನೆಯ ತೆರಳಿಕೆಯ ತೊಡಚೆಯ । ಮನದ ಸಂಚಲನೀಚಿಪ್ರೋದುದು ಕಲಿಧನಂಜಯನ ॥೪೨॥ ಮುಗುಳುಗಂಗಳ ಮೇಲುಗುಡಿದೋ । ಳುಗಳ ಮಿಡುಕುವತುಟಿಯ ತುಟಿಗಾ । ಲುಗಳ ಹೊರಗೆಯ ತಪವನಿರಗೆಯ ನಿಷ್ಪ್ರಕಂಪನದ ॥ ಬಿಗಿದಬಿಲ್ಲಿನ ಬೆನ್ನಬತ್ತಳಿ । ಕೆಗಳ ಕಿಗ್ಗಟ್ಟಿನಕಠಾರಿಯು । ಹೆಗಲಕಡುಗದಹೊಸತಪಸಿ ತೊಡಗಿದನು ಬಲುತಪವ ॥ ಅರಸ ಕೇಳ್ಕೆ ವಿಪ್ರವೇಷವ । ಧರಿಸಿ ಧರೆಗಿಳಿದನು ಸುರೇಶ್ವರ । ತರಹರಿಸದೀಮಾತನೆಂದನು ನಿಜಕುಮಾರಂಗೆ ॥ ಮುಂಚ ಮೌಕ್ತಿಕ ಲೇಪ ಹೇಮಾ । ಚರಣ ಚರ್ಮ ಮೃಕೂಲ ಮಿಳಿಹ । ಪಡಿಯ ಹೂವಿನಪಂಡೆಗೇಕನಿಮಾಸನೇಕೆಂದ ॥೪೪॥ ಆವನೇಳಿಕೆ ಬಿಸಕೆ ಚಾಪಶ । ರಾವಳಿಗೆ ಶಮೆದಮೆಗೆ ಕಡುಗಕ । ದಾವಸಮ್ಮೇಳನವಿಭೂತಿಗೆ ಕವಚಸೀಸಕಕೆ ॥ ಆವುದಿವರಭಿಧಾನ ತಪವೋ । ಡಾವರಿಗಪಿದ್ಯಾಸಮಾಧಿಯೊ । ನೀವಿದೆಂತಫಲಭುಕ್ತಿಗಳೆಂಬುದನರಿಯೆ ನಾನೆಂದ ॥೪೫॥ ಕಂದೆರೆದು ನೋಡಿದನು ನೀವೆ । ನೆಂದರೆಯು ಹೃದಯಾಬ್ಜಪೀಠದ । ಲಿಂದುಮೌಳಿಯ ನಿರಿಸಿ ಮುಚ್ಚಿಸುವೆನು ಸಮಾಧಿಯಲಿ ॥ ಇಂದಿನೀಬಹಿರಂಗಚಿನ್ಹೆಯ । ಕುಂದುಹೊಚ್ಚಿನಲೇನುಫಲವೆನ । ಲಂದು ತಲೆದೂಗಿದನು ಸುರಪತಿ ತೋರಿದನು ನಿಜವ ॥೪೬॥ ಮಗನೆ ನಿನ್ನಯ ಮನದನಿಷ್ಠೆಗೆ । ಸೊಗಸಿದೆನು ಪಿರಿದಾಗಿ ಹರನಿ । ಲ್ಲಿಗೆ ಬರಲಿಕರುಣಿಸಲಿ ನಿನ್ನಮನೋಭಿವಾಂಛಿತವ ॥ ಹಗೆಗೆ ಹರವಹುದೆಂದು ಸುರಮು । ಳಿಗಳ ಮಣಿ ಸರಿದನು ಪಿಮಾನದ । ಲಗಧರನ ಮೈದುನನ ಮಹಿಮೆಯನಿನ್ನು ಕೇಳೆಂದ ... ... ... ॥೪೭॥

ಅಂತು ಸಂಧಿ ೮ ಕ್ಕೆ ಪದ ೧೬೦,ಕ್ಕಂ ಮಂಗಳಮಸ್ತು.

# ಐದನೆಯ ಸಂಧಿ.

ಸೂಚನೆ॥ ಮುನಿನಿಕರ ಬಿನ್ನವಿಸೆ ಕರುಣಾ । ವನಧಿ ಶಂಭು ಕಿರಾತಮಯರೂ ।
ಪಿನಲಿ ಹೊಕ್ಕನು ವನದಲೆಚ್ಚನು ಮೂಕದಾನವನ ॥

ಮರಳಿದನು ದೇವೇಂದ್ರನತ್ತಲು । ಹಲೆನೊಡನೆ ಹೊರೆಯೇರಿದಂತ: । ಕರಣ ಓಗ್ಗಿತ್ತು ಹುದುಗಿದನು ಬಹಿರಂಗಭಾವನೆಯ ॥ ಧರಣಿಮೊದಲೆನೆಭೂತಪಂಚಕ । ಮರುತಪಂಚಕವಿಷಯ ವಿಂದ್ರಿಯ । ಕರಣವಿಪ್ಪತ್ತೈದುತತ್ವಾತ್ಮಕನ ಚಿಂತಿಸಿದ ॥೧॥ ಮೇಲೆವಿದ್ಯಾರಾಗನಿಯತಿಯ । ಕಾಲ ಕಲೆಯಾತ್ಮಕನಮಾಯೆಯ । ಮೇಲುಮೋಗಿನಶುದ್ಧವಿದ್ಯಾರೂಪನೀಶ್ವರನಾ ॥ ಕೇಳು ನೃಪತಿ ಸದಾ ಶಿವನನು । ತ್ರಾಳಶಕ್ತಿಯ ನಖಿಲತತ್ವದ । ಮೌಳಿಮಣಿಯನಖಂಡಚಿನ ಮಯಶಿವನ ಚಿಂತಿಸಿದ ॥೨॥ ಮೂರುದಿನಕೊಮ್ಮೆಮ್ಮೆ ಜಲದಾ । ಹಾರದಲಿ ನೂಕಿದನು ತಿಂಗಳ । ನಾರುದಿವಸಕೆಜಲವಕೊಂಡನು ತಿಂಗಳೆರಡರಲಿ ॥ ಮೂರುತಿಂಗಳ ಕಳಿದನಿಂತೀ । ರಾರುದಿವಸಕೆ ಕಂದಮೂಲಾ । ಹಾರದಲಿ ತರಗೆಲೆ ಯಲಿರ್ದನು ನಾಲ್ಕುಮಾಸದಲಿ ॥೩॥ ಬಳಿಕ ಪವನಾಹಾರದಲಿ ನಿ । ಸ್ಖಲಿತಶಿವಪದಭಕ್ತಿಸುಧೆಯಲಿ । ತಳಿತರೋಮಾಂಚನದಕಂದದದಳುಂದದವಯವದ ॥ ಥಳಥಳಿಸುವಾನನದ ಸತ್ತ್ವೋ । ಚ್ಛಲಿತಚಿತ್ತದ ಸುಪ್ರಭಾಸದ । ಬೆಳವಿಗೆಯಲುತ್ಕೋಶವಾಯಿತು ತಪಧನಂಜಯನಾ ॥೪॥ ಯಮದಲುತ್ಸಾಹಿಸಿದನಿಯ ಮ । ಶ್ರಮವ ಗೆಲಿದನು ಶಂಭುವಿನ ಪದ । ಕಮಳಬಯಸಿಕೆಯಾದುದೆತ್ತಿದಜೀವಪರಮನಲಿ ॥ ಭ್ರಮಿ ಸುವಿಂದ್ರಿಯಗುಣವನುಗಿದಾ । ಕ್ರಮಿಸಿ ಶಂಕರಭಾವದಲಿಸಂ । ಕ್ರಮಿಸಿ ಧರಿಸಿ ಸಮಾಧಿಯನುತ್ತ ಳೆದಾತ್ಮಪರಸಾದ ॥೫॥ ಪಿಮಳಮತಿ ಕೇಳಿಂದ್ರಿಯಾರ್ಥ । ಭ್ರಮೆಯಜಾಗ್ರದವಸ್ಥೆಯಂತ: । ಸ್ತಿಮಿ ರಕರಣಭ್ರಮೆಯಲುದಿತಸ್ವಪ್ನವೀಥಿಯಲಿ ॥ ಗಮಿತತದ್ವಾಸನೆಯಬೀಜ । ಕ್ರಮಸುಷುಪ್ತ್ಯಾವಸ್ಥೆ ಯಲಿ ಸಂ । ಕ್ರಮಿಸದಗ್ಗದತುರ್ಯಶಿವನನು ಪಾರ್ಥಚಿಂತಿಸಿದ ॥೬॥ ತಾನೆ ಶಿವನೆಂ ಮೌನಿ ಶಿವನ ॥ ಧ್ಯಾನತನವದ್ವೈತವನುಸಂ । ಧಾನವಿದು ಜವನಿಕೆಯೊ ಜೀವಶಿತುಮನಜಂಜಡಕೆ ॥ ಧ್ಯಾನವೋಮೇಣ್ಧೈ ರ್ಯವೋ ತಾಧ್ಯಾನಕರ್ತೃವೊ ತ್ರಿಪುಟಿರಹಿತನೊ । ತಾನು ಮೇಣೆನಲಾಯ್ತು ಚಿತ್ತದಶುದ್ಧಿಯರ್ಜುನನಾ ॥೭॥ ಮುನಿ ಯದೇನ್ಕೆ ಚಿತ್ರವಾಯ್ತು । ರ್ಜುನನಚಿತ್ತದೊಳೇನುತಾಮನ । ಜನಿತಕರ್ಮವೊ ಶುದ್ಧತತ್ವ ಜ್ಞಾನಜಲಧಿಯಲಿ ॥ ಮನಮುಳುಗಿಮುಗುಳೆದ್ದು ಶಿತಿಕಂ । ಠನಲಿ ಶಸ್ತ್ರಾಸ್ತ್ರವನು ಬೇಡಿದ । ನೆನಲು ಜನಮೇಜಯಗೆ ಮುನಿಯಿಂತೆಂದ ನಸುನಗುತ ॥೮॥ ಅರಸ ಕೇಳ್ಕೆ ರಾಜಸಾಂತ: । ಕರಣ ವನು ಕಾಮ್ಯೈಕಸಿದ್ಧಿ । ಸ್ಫುರಣೆಗೋಸುಗ ತಪವಲೇ ರಾಜ್ಯಾಭಿಲಾಷೆಯಲಿ ॥ ಹರಚರಣನಿಕ್ಷಿಪ್ತ ಚೇತ: । ಸ್ಫುರಣೆ ತತ್ಪರಿಯಂತಲುಕ್ಕಿತು । ಪರಮವಸ್ತುನಿಜಸ್ವಭಾವಕೆಚಿತ್ರವೇನೆಂದ ॥೯॥ ಮೇಲೆ ಮೇಲೀತನ ತಪೋಗ್ನಿ । ಜ್ವಾಲೆ ಜಡಿದುದು ತಡೆದುದಭ್ರ । ಸ್ಥಾಳಿಯಲಿ ಸೈವರವಸೂರ್ಯಾಚಂ ದ್ರಮಃ ಪ್ರಭೆಯು ॥ ಥಾಳಿಸುವಪರಿಧೌತಮಾನಕ । ರಾಳತೇಜೋಗರ್ಭತಪಧೂ । ಮಾಳಿಯಲಿ ಮೇಘಾಳಿ ಮಸಗಿದುದರಸ ಕೇಳೆಂದ ॥೧೦॥ ಆತನುಗ್ರತಪಪ್ರಭಾವಿ । ಖ್ಯಾತಿ ವಿಗಡಿಸಿತಖಿಳಲೋಕ

ವಾತ್ರವನು ಸ್ತೋತ್ರವನು ಕೌರವನೋ ಯುಧಿಷ್ಠಿರನೋ ॥ ಈತನೀಶ್ವರಶಸ್ತ್ರವನು ಕೈ | ಯಾತು ಕೊಂಡೊಡೆ ಬಳಿಕ ರಿಪುನೃಪಜಾತವಿದಿರೇ ಕೇಳು ಜನಮೇಜಯಮಹೀಪಾಲಾ ॥೧೧॥ ಏನನೆಂಬೆನು ಪಾರ್ಥನುಗ್ರತ | ಪೋನಿಧಾನಜ್ವಾಲೆಯನು ಸಂ | ಧಾನವನು ತತ್ಪರಿಸರದ ಪಾವನತಪೋಧನರಾ ॥ ಮೌನವುರೆ ಸೇದುದು ಜಪಾನುಷ್ಠಾನ ಬಿಡೆ ಬೆವರಿತು ಸಮಾಧಿ | ಧ್ಯಾನ ಸೀಕರಿಯಾಯ್ತು ಸಾರವಿಚಾರಶಮೆಸಹಿತ ॥೧೨॥ ಶ್ರುತಿಯ ಲುಳಿ ತಗ್ಗಿತು ವಿವೇಕ | ಸ್ಥಿತಿಗೆ ಪಲ್ಲಟವಾಯ್ತು ಮತ್ಸರ | ಮತಿಯ ಮೈಲಿಗೆ ಬಿದ್ದುದಾತ್ಮಜ್ಞಾನಸದ್ದೃಷ್ಟಿಯಲಿ | ಧೃತಿಯ ಹೊರಬಾಹೆಯಲಸೂಯಾ | ಸತಿಯ ಕಾಹಿನಮನೆಯಲಿದ್ದರು | ಯತಿಗಳೀತನ ತಪದ ತೇಜದ ಹೊದರುಹೊಯ್ಲಿನಲಿ ॥೧೩॥ ಕೋಪ ಪಸರಿಸಿತಾಧಿಭೌತಿಕ | ತಾಪ ತಳಿತುದು ಹೃದಯಮೀಶ್ವರ | ರೂಪವನು ಮುಚ್ಚಿದುದು ಮಾಯಾಮೋಹಮುದ್ರೆಯಲಿ | ಶಾಪಭೀತರಹಂಮಮತ್ವಕ | ತಾಪರಾಧರು ವಿಕೃತಗುಣಯ | ಜ್ಞೋಪವೀತರು ಮಸಗಿದರು ಮುನಿಗಳು ತಪೋವನದ ॥೧೪॥ ಹಳಿದು ಹಾವಸೆ ಮನದೊಳಿದ್ದರು | ಕೆಲರು ಕೆಲರೆಡೆಯಾಡತಿರ್ದರು | ತಿಳಿವುಮರವೆಗಳಲ್ಲಿ ಕೆಲರುಪಶಾಂತಿಭಾವದಲಿ ॥ ಕೆಲರರಿದೇನಿವಗಿಲ್ಲಿ ತೊಲಗಿಸಿ | ಕಳೆವುದೀತನನೆಂದು ತಮ್ಮೊಳು | ಕಳವಳಿಸುತೊಮ್ಮೊತ್ತವಾದುದು ಸಕಲಮುನಿನಿಕರ ॥೧೫॥ ಕೆದರಿದವು ಜಡೆಯಕ್ಷಮಾಲೆಗ | ಳುದುರಿದವು ಕರದಲಿ ಕಮಂಡಲ | ವದುರಿದವು ಹಳುವಾಯ್ತು ಹರಿಣಾಜಿನ ಮುನೀಶ್ವರರ ॥ ಕದಡಿತಂಗವಿಭೂತಿ ಕಡುಗೋಪದಲಿ ಹುದರು ಹರಗಿರಿಯ ಹ | ತ್ತಿದರು ಕಂಡರು ರಾಜಮೌಳಿಯ ರಾಜಮಂದಿರವ ॥೧೬॥ ಶಿವನ ಭವನವ ದೂರದಲಿ ಕಂ | ಡಿವರು ಮೈಯಿಕ್ಕಿದರು ವರಮುನಿ | ನಿವಹ ಬಂದುದು ಬಾಗಿಲವದಿರು ಬಿನ್ನಹದ ಹದನ ॥ ವಿವರಿಸಲು ಕರಸಿದನು ಕರುಣಾ | ರ್ಣವನ ಕಂಡರು ಮೈಯ ಚಾಚಿದ | ರವನಿಯಲಿ ಜಯಜಯ ಮಹೇಶನಮಃಶಿವಾಯೆನುತ ॥೧೭॥ ಏಳಿರೈ ಸಾಕೇಳಿರೈ ಸಾ | ಕೇಳಿ ಕುಳ್ಳಿರಿ ಬಂದಕಾರ್ಯವ | ಹೇಳಿಯೆನೆ ಮುನಿನಿಕರವೆದ್ದುದು ನೊಸಲ ಕೈಗಳಲಿ ॥ ಹೇಳಿ ನೀವ್ಹೇಳಿನ್ನು ಹಿರಿಯರು | ಹೇಳಿಯೆನುತೊಳಗೊಳಗೆ ಘೋಳಾ | ಘೋಳಿಮಸಗಿದುದೊಬ್ಬಮುನಿ ನಿಲಿಸಿದನು ಕಳಕಳವ ॥೧೮॥ ನೀಲಲೋಹಿತ ಚಿತ್ತವಿಸು ಶಶಿ | ಮೌಳಿ ಬಿನ್ನಹ ನಿಗಮಮಹಿಳಾ | ಮೌಳಿಮಣಿನೀರಾಜಿತಾಂಘ್ರಿಸರೋಜನವಧಾನ ॥ ಪಾಲಿಸುವುದಾರ್ತರನು ಪರಮಕೃ | ಪಾಳುನೀನತಿದೀನರಾವು ವಿ | ಟಾಳಸಂಗತಿಯಾದುದೆಮ್ಮಯ ಜಪತಪಸ್ಥಿತಿಗೆ ॥೧೯॥ ಶಾಂತಿಯೇ ಮನೆ ನಿಮ್ಮ ಚರಣದ ಚಿಂತೆಯೇ ಮನೆವಾರ್ತೆ ವರವೇ | ದಾಂತತತ್ವರಹಸ್ಯಮನನಾದಿಗಳು ಸರ್ವಸ್ವ ॥ ದಾಂತಿಯೇ ಸುಖಭೋಗ ಮಾಯಾ | ಶ್ರಾಂತಿಯೇ ಮಾಹಾತ್ಮ್ಯವಿವು ಋಷಿ | ಸಂತತಿಗೆ ವರ್ತನವಲೇ ವೈದಿಕವಿಧಾನದಲಿ ॥೨೦॥ ಹೋದಹೊಲಬಿಲ್ಲಿವರೊಳಗೆ ದು | ರ್ಭೇದತಪವೇ ಹೊಗವುತದೆ ಹೊ | ಳ್ಳಾದವೆಮ್ಮ ಸಮಾಧಿ ಸ್ಮರಣೆಶಮದಮಾದಿಗಳು ॥ ಕಾದುದಾವನಭೂಮಿ ತರಗು | ಲ್ಮಾದಿಗಳು ಕಟ್ಟೊಣಗಲಾದವು | ತೀದುದೆಮ್ಮಯ ನಿತ್ಯವಿಧಿಯೊಬ್ಬನದೆಸೆಯೊಳಿಂದು ॥೨೧॥ ರಾಯನೋ ಮೇಣವನು ರಾವುತ | ಪಾಯಕನೊ ಋಷಿಯಲ್ಲ ಋಷಿಗೇ | ಕಾಯುಧಂಗಳ ಗೊಡವೆ ನಮಗೇಕದರಬೂತಾಟ ॥ ಸಾಯಕದ ಬತ್ತಳಿಕೆ ಚಾಪದ | ಡಾಯುಧದ ಕುಶವೆರಳ ಜಡೆಗಳ | ನಾಯತದಲನುಚಿತದನಂಗದ ತಪಸಿ ಯಿಹನೆಂದ ॥೨೨॥ ಆಡಿಬೊಡೆ ನಾವ್ಮುನಿಗಸೂಯವ ಮಾಡಿದವರು

ಗಳಿಂದುನಿಮ್ಮಡಿ । ಗೊಡದಿದ್ದರೆ ಬಿಸಲರಾಶಿಯನುರಿಯಸೂತಕವ ॥ ಕೂಡಿತೆಮ್ಮಯ ನಿತ್ಯವಿಧಿ ತ್ರಪ । ಗೇಡಿಯನು ಬಿಡದೆಬ್ಬಿಸೆವೆಗೆಡೆ । ಮಾಡಿಕೊಡಬೇಕೆಂದು ಮತ್ತೆರಗಿದರು ಶಿವಪದಕೆ ॥ ಮತ್ತೆ ನಮ್ಮನು ಪಿಸುಣರೆಂದೇ । ಚಿತ್ತವಿಸಲಾಗದು ತಪೋವನ । ಹೊತ್ತುತದೆ ವಿಪರೀತತಪಸಿಯ ತೀವ್ರತೇಜದಲಿ ॥ ಇತ್ತಲೊಂದುತಪೋವನವನೆಮ । ಗಿತ್ತು ಕರುಣಿಸು ಮೋಕ್ಷಕಾರಿಯ । ನೆತ್ತಿ ಕಳೆ ಕಾರುಣ್ಯನಿಧಿ ಯೆಂದುದು ಮುನಿಸ್ತೋಮ ॥೨೪॥ ಕೇಳುತವೆಸಾರೋ ಯೆನುತಶಶಿ । ಮೌಳಿವಿಮಲ ಜ್ಞಾನದೃಷ್ಟಿಯೊ । ಳಾಳನರಿದನು ಮನದೊಳಗೆನಮ್ಮವನಲಾಯೆನುತ ॥ ಬಾಲಹಿಮಕರಕಿರಣನೊಡನೆ ಸ । ಮೇಳವಹನಗೆ ಮಿಸುಗೆ ಮುನಿಜನ । ಜಾಲವನು ನೋಡದನು ಕರೆದನು ಕೃಪೆಯ ತನಿಮಳೆಯ ॥೨೫॥ ಅರಿದೆವಾವಂಜದಿರಿ ಹುಯ್ಯಲ । ಬರಿದೆ ತಂದಿರಿ ನಿಮ್ಮಗೆಲವಿಂ । ಗೆರಗುವವನವನಲ್ಲ ಬೇರಿಹುದಾತನಂಘವಣೆ ॥ ಅರುಹಲೇಕೆ ಭವತ್ತಪೋವನ । ವೆರೆ ನಿಮಗೆ ಸಾವವನನೆಬ್ಬಿಸಿ । ತೆರಹ ಮಾಡಿಸಿಕೊಡುವೆನೆಂದನು ನಗುತಶಶಿಮೌಳಿ ॥೨೬॥ ಏಳಿನೀವಾಶ್ರಮಕೆವೋಗಿಚ । ಡಾಳಿಸದು ಮುನಿವರನ ತಪವಿ । ನ್ನೇಳಿದಿಭಯವಿಲ್ಲವೆಂದು ಕರಾಂಬುಜವನೆಗಹಿ ॥ ಬೀಳುಕೊಟ್ಟನು ಸಕಲಮುನಿಜನ । ಜಾಲವನು ಕರೆ ಭೂತನಿಕರವ । ಮೇಳವಿಸಹೇಳೆಂದು ನಂದೀಶ್ವರಗೆನೇಮಿಸಿದ ॥ ಅರಸ ಕೇಳೈ ಬೇಂಟೆಯೆಂದೀ ।ಶ್ವರನ ಕಟಕದೊಳೊದರಿದುದು ಡಂ। ಗುರುದ ದನಿ ಡಾವರದೊಳೈದಿತು ನಿಖಿಳಭುವನವನು ॥ ಪರಮಕರುಣಾಸಿಂಧು ಭಕ್ತನ । ಹೊರೆವಭರದಲಿ ಭೂರಿಮೃಗಯಾ । ಚರಣೋಸುಗ ಶಬರವರರೂಪದಲಿ ರಂಜಿಸಿದ ॥೨೮॥ ತೆಗೆದು ತಲೆಮಾಲೆಯನು ಹಸುರಂ । ಗಿಗಳ ತೊಟ್ಟನು ಸುತ್ತುಬರೆಹೀ । ಲಿಗಳಹರಹಿನಪಾರಿವದಚಲ್ಲಣವನಳವಡಿಸಿ ॥ ಬಿಗಿಜಡೆಯ ಶಶಿಮುಖಕೆ ಪತಾ । ಳಿಗಳ ಕಟ್ಟಿಕಿರಾತವೇಷದ ವಿಗಡಬೇವರದೇವ ಕೊಂಡನು ಚಾಪಮಾರ್ಗಣವ ॥೨೯॥ ದೇವನನುರೂಪದಲಿ ನಿಂದರು, ದೇವಿಯರು ಗುಹಗಣಪತಿಗಳೆ । ಲ್ಲಾವಿನೋದವ ನೋಡಿ ಧರಿಸಿದರೊಲಿದು ಶಾಬರವ ॥ ಆವಿಗಡನಂದೀಶವೀ । ರಕದೇವಲಕ। ರೇಣುಕಮಹೋದರ । ದಾವಶಿಖಿಮುಖವೀರಭದ್ರಾದ್ಯಖಿಲಭೂತಗಣ ॥೩೦॥ ಅರಸಕೇಳೈ ಸಪ್ತಮಾತೃಕೆ । ಯರು ಮಹೋಪನಿಷನ್ನಿತಂಬಿನಿ । ಯರು ದಿಶಾದೇವಿಯರು ಶ್ರುತಿವಿದ್ಯಾದಿಶಕ್ತಿಯರು ॥ ಉರಗಿಯರು ವಿದ್ಯಾಧರಿಯರ । ಪ್ಸರಿಯರೌಷಧಮಂತ್ರದೇವತೆ । ಯರು ಪುಳಿಂದಿಯರಾಯ್ತು ಪರಮೇಶ್ವರಿಯಬಳಸಿನಲಿ ॥೩೧॥ ಧೃತಿ ಮಹೋನ್ನತಿ ತುಷ್ಟಿ ಪುಷ್ಟಿ । ಸ್ಮೃತಿ ಸರಸ್ವತಿ ಸಂವಿದಾಯಕಿ । ಮತಿ ಮನಸ್ವಿನಿ ಸಿದ್ಧಿ ಕೀರ್ತಿ ಖ್ಯಾತಿ ನಿಯತಮತಿ ॥ ಗತಿ ಕಳಾವಾನಿನಿ ಕಳಾವತಿ । ರತಿ ರಸಾವತಿ ಚಂಡಿ ಜಯೆ ಮಧು । ಮತಿಯೆನಿಪದೇವಿಯರು ಶಬರಿಯರಾಯ್ತು ನಿಮಿಷದಲಿ ॥೩೨॥ ಮಾರಿ ಚಾಮುಂಡಿಶ್ಮಶಾನಾ । ಕಾಳವತಿ ವರಕಾಳರಾತ್ರಿಮ । ಹೀರಮಣಿ ಜಯಲಕ್ಷ್ಮಿ ಯೋಗಿನಿ ಯಜ್ಞದೇವಿಯರು ॥ ವೀರಸಿರಿ ವನಲಕ್ಷ್ಮಿಶಾಕಿನಿ । ನಾರದೇವತೆಡಾಕಿನೀಮುಖ । ಭೂಪಶಕ್ತಿಯರೈದೆ ಶಬರಿಯರಾಯ್ತು ನಿಮಿಷದಲಿ ॥೩೩॥ ಚಾಳಿಸಿದಹದವಿಲ್ಲುಗಳ ಬಡಿ ।ಕೋಲುಗಳ ಸಂಕಲೆಯನಾಯ್ಗಳ । ಕೋಲುವಲೆಗಳಸಿಡಿವಲೆಯ ಮಿಡಿವಲೆಯ ದಡಿವಲೆಯ ॥ ಕಾಲುಗಣ್ಣಿಯ ಹೆಬ್ಬಲೆಯ ಬೆ । ಳ್ಳಾರವಲೆಗಳ ಮಯಣದಂಟಿನ । ಮೇಲುಕೊಂಬಿನ ಬೇಟೆಗಾರರು ಬಳಸಿದರು ಶಿವನ ॥೩೪॥ ಶ್ರುತಿಗಳೂಳಿಗತರ್ಕಶಾಸ್ತ್ರದ । ಗತಿಯ ಸೋಹಿನ ಮಂತ್ರಮಯಸಂ । ತತಿಯ ಸೊಂಪಿನ ವಿವಿಧಜಪಯಜ್ಞಾದಿಗಳ

ಬಲೆಯ ॥ ವ್ರತದ ಜಂತ್ರದಕಣ್ಣಿಗಳ ಸ । ತ್ಕೃತಿಯಕಲ್ಗುಂಡುಗಳ ಯೋಗ । ಸ್ಥಿತಿಯಸರಳಿನ ಶಬರರೈದಿತು ಶಿವನ ಬಳಸಿನಲಿ ॥೩೫॥ ಶ್ರವಣಮನನದಬೀಸುವಲೆ ಶಾಂ ಭವಸುವೇಧಾದೀಕ್ಷೆಗಳ್ಬಲು । ಗವಣೆಗಳ ಪಶುಪಾಶಬಂಧದಬೋಳೆಯೆಂಬುಗಳ ॥ ನವವಿಧಾಮಲಭಕ್ತಿಗಳ ರಣ । ತವಕದೀಹದಹುಲ್ಲೆಗಳ ಮೃಗ । ಭವವಿದಾರಣಸುಭಟರೈದಿತು ಶಿವನನೇಮದಲಿ ॥೩೬॥ ಸೋಹಿದೊಡೆ ದೆಸೆದೆಸೆಗೆ ಹಾಯ್ದುದು । ಮೋಹತಮ ಡಂಭಾದಿಮೃಗತತಿ । ತೋಹಿನಲಿ ಬಿದ್ದುದು ಮಹಾಪಾತಕಮದೇಭಚಯ ದ್ರೋಹದೀಹಾಮೃಗವಸೂಯವ । ರಾಹಸಂಕೀರ್ಣೋಪಪಾತಕ । ದೇಹವಳಿದವನಂತವದರೊಳು ಶಿವ ಬೇಂಟೆಯಲಿ ॥೩೭॥ ಜಯಜಯೆಂದುದು ನಿಖಿಳಜಗ ಸುತಿ । ಚಯಭಡಾಳಿಸಿ ಹೊಗಳುತಿರ್ದುದು । ನಯನಗೋಚರವಾಯ್ತು ಸಾಕ್ಷಾತ್ಪರಮಶಿವತತ್ವ ॥ ಲಯದಜನನದ ಸುಳಿಯಸಂಸೃತಿ । ಮಯಸಮುದ್ರವ ಸುರಿದು ಸಲೆ ನಿ । ರ್ಭಯವು ಭಕುತರಿಗೆಂಬವೊಲುಮಸಗಿತು ಮಹಾಸಬುದ ॥೩೮॥ ಹೇಳ್ವೆತೊಡೆ ರೋಮಾಂಚನವಲೇ । ಕೇಳು ನೃಪಕೈಲಾಸವಾಸಿಯ । ಲೀಲೆಯನು ನಿಜಭಕ್ತಜನಸಂ ದರ್ಶನಾರ್ಥವಲೇ ॥ ಅಳುನಡೆತಂದಿಂದ್ರಕೀಲದ । ಶೈಲವನು ಬೆರಸಿತು ಮಹಾದ್ಭುತ । ದೇಳಿಗೆಯನೇನೆಂಬೆನೈ ಕೈರಾತವಿಭ್ರಮವ ॥೩೯॥ ಇಂಬಿನಲ್ಲಿಹಮೂಕದಾನವ । ನೆಂಬನೊಬ್ಬನು ತನ್ಮಹಾದ್ರಿನಿ । ತಂಬವನದ ನಿಕುಂಜನಲಿ ನಿರ್ಭಯವಿಹಾರದಲಿ ॥ ಚುಂಬಿಸಿತು ಬಲುರಭಸವೆನೆ ವಿಲ । ಯಾಂಬುಧಿಯು ಕಳಕಳವನಮರರ । ತಿಂಬೆನೀಕ್ಷಣವೆನುತ ಖಳನಾಲಿಸಿದನಾಧ್ವನಿಯ ॥೪೦॥ ಹಂದಿಯಾದನು ದನುಜನಾಗಿರಿ । ಕಂದರವಹೊರವಂಟು ಬೇಂಟೆಯ । ಮಂದಿಯೊಳಗಡಹಾಯ್ದನೆತ್ತಿದನಡ್ಡಬಿದ್ದವರಾ । ಹಂದಿಯೋ ತಡೆ ನಾಯಗಳ ಬಿಡಿ । ಹಿಂದೆ ಹಿಡಿ ಕೆಡೆಕುತ್ತು ಕೈಕೊ । ಳ್ಳೆಂದು ಗಜಬಜಿಸಿತ್ತು ಗಾವಳಿ ಗಹನಮಧ್ಯದಲಿ ॥೪೧॥ ಎಳೆವರೆಯ ನಡುವಿದ್ದ ರಾಹುವೊ । ಲಳವಡುವದಾಡೆಗಳಲೊಗಮಿಗೆ । ಬೆಳೆದ ನೀಲಾಚಲಕೆ ಸರಿಯೆಂದೆನಿಪಹೇರೊಡಲ ॥ ಮುಳಿದು ಗರ್ಜಿಸಿ ಕಿಡಿಸುರಿವಕಂ । ಗಳಲಿ ರೌದ್ರಾಟೋಪದಲಿ ಕೆ । ಕ್ಕಳಸಿದಿಕ್ಕಲನೋಡುತಿರ್ದುದು ದೇವಸಂತತಿಯ ॥೪೨॥ ಕೂಡೆ ಕಟ್ಟಿತು ಭೂತಗಣ ದನಿಮಾಡಿ ಜಡಿದುಬ್ಬರಿಸಿಮೋರೆಯ । ನೀಡಿ ನಾಯ್ಗಳು ತುಡುಕಿದವು ತಿರುಗಿದೊಡೆಹಿಮ್ಮಡಿಯ ॥ರೂಢಿಸುತ ಕವಿದೆತ್ತಲೊಂದೇ । ದಾಡೆ ಬರೆತುದು ನೂರುಗಾಯವ । ನೋಡುತಿರ್ದುದು ಸೇನೆ ಕಂಡನು ಶೂಲಿ ಸೂಕರನ ॥೪೩॥ ಇಡುವಸಲ್ಲೆಹಬಲ್ಲೆಹದ ಹೆ । ಗ್ಗಡಿಯನುಗುಳುವಬಾಯಧಾರೆಯ । ನುಡಿದು ಹರನಮಹೋಗ್ರತರಜಾಯಿಲನಜಂಗುಳಿಯಾ ॥ ಕಡಿದು ಕೆಡಹಿ ಪುಳಿಂದಶಬರಿಂಯು । ರಡಗೆಡೆಹಲೊಡಹಾಯ್ದು ಮಿಗೆ ಘುಡಿ ಘುಡಿಸಿ ಕವಿದೈತರಲು ಧೃತಿಗೆಟ್ಟುದು ಗಣಸ್ತೋಮ ॥೪೪॥ ಇದುವೆ ಸಮಯವೆಲಾ ಯೆನುತ ಹೂ । ಡಿದನು ಬಾಣವನುಗಿದು ಪೂರಾ । ಯದಲಿ ತೂಗಿ ಪಿನಾಕಿ ಯೆಚ್ಚನು ಮೂಕದಾನವನ ॥ ಒದೆದು ಹಾಯ್ದುದು ಬಾಣ ಗರಿದೋ । ರಿದುದು ಬದಿಯಲಿ ಕೊಡಹಿ ಗೋಳಿಡು । ತದು ಧನಂಜಯನತ್ತ ಹೋದುದು ಹೊತ್ತಕಣೆಸಹಿತ ॥೪೫॥ ಬಂದು ಗಿರಿಕಂದರದೊಳಿಹಮುನಿ । ವೃಂದದೊಳಗಡಹಾಯ್ದು ಕೆಡಹುತ । ಹಂದಿ ಮೋರೆಯ ನೆಗಹಿ ಮುಲಿವುತ ಗಜರಿ ಗರ್ಜಿಸಿತು ॥ ಮಂದಿ ಬೆದರುತ ಗೋಳಿಡುತಲಾ । ಇಂದುಧರನೇ ಬಲ್ಲ ಶಿವಶಿವ । ಯೆಂದು ಮೊರೆಯಿಡೆ ಕೇಳಿ ಕಂದೆರೆದೆದ್ದನಾಪಾರ್ಥ ॥೪೬॥ ಕಂಡನರ್ಜುನನೀವರಾಹನ । ದಂಡಿ ಲೇಸಲ್ಲೆನುತ ಬಾಣವ । ಗಾಂಡಿ

ವೆಧೊಳಳವಡಿಸಿ ಬೊಬ್ಬಿರಿದೆಚ್ಚ ನಾಖಳನ ॥ ದಿಂಡುಗೆಡೆದುದು ಕಾಲ ಕೊಡಹುತ । ಗಂಡಶೈಲದ ವೋಲು ಭೂತವೆ । ದಿಂಡುದರಿಯುವಹಂದಿ ಬಿದ್ದುದು ಪಾರ್ಥನಿದಿರಿನಲಿ ॥೪೭॥ ಬಂದನೀಶ್ವರನಾವು ಕೆಡಹಿದ । ಹಂದಿ ನಮ್ಮದು ತೆಗೆಯಿ ಯೆನೆ ನರ । ನೆಂದನೆಮ್ಮಂಬಿನಲಿ ಬಿದ್ದುದು ಸಾರು ನೀನೆನಲು ॥ ಬಂದುದೇಕಾಮಿಷವಿರೋಧರ । ಕುಂದು ಪಾರ್ಥನ ಚಿತ್ತದಲಿ ಬಾ । ಲೇಂದುಧರನೆಂದೆತ್ತಬಲ್ಲನು ಕಣಕಿದನು ಶಿವನ ... ... ... ... ॥೪೮॥

ಅಂತು ಸಂಧಿ ೫ ಕ್ಕಂ ಪದ ೨೮೮ ಕ್ಕಂ ಮಂಗಳಮಸ್ತು.

---

## ಆರನೆಯ ಸಂಧಿ.

ಸೂಚನೆ॥ ಕದನಮುಖದಲಿ ಶಿರೋಡಿಯಿಲ್ಲದೆ । ಬೆದರದೊದಗಿದನರಗೆ ಕಾರು ।
ಣ್ಯದಲಿ ಕಾಮವಿರೋಧಿ ಕೊಟ್ಟನು ಪಾಶುಪತಶರವ ॥

ಎಲೆಕಿರಾತ ಮದೀಯಬಾಣದ । ಬಲೆಗೆ ನೀವ್ಮೃಗವಾಗದಿರು ನ್ನಿ । ನ್ನಳವ ಮರೆಯಾ ಬನದ ನರಿಮೊಲಹುಲ್ಲೆ ಹರಿಣನಲಿ ॥ ಗೆಲಿದಗರುವನು ನೀನು ನಿನ್ನ । ಗ್ಗಳಿಕೆಗಾವೆಂಜುವೆವು ನಿನ್ನೀ । ದಳಕೆ ಪತಿಯುಂಟಾದೊಡಾತನ ಕೊಂಡುಬಾ ಯೆಂದ ॥೧॥ ಎನಲು ನಕ್ಕನು ಶಂಭು ಭಕ್ತನ । ಮನದಧೃತಿಯನು ಭುಜಬಲವನಾ । ತನಪರಾಕ್ರಮಲಕ್ಷ್ಮಿಯನು ಪಾರ್ವತಿಗೆ ತೋರಿಸುತ ॥ ನೆನೆದು ನುಡಿದನಿದೇನು ತಮ್ಮಡಿ । ನಿನಗೆ ತಪದಲಿ ಖಡ್ಗವೇಕೀ । ಧನುಶರಾವಳಿಯೇಕೆ ನಿನ್ನಂಘುವಣೆಯೇನೆಂದ ॥೨॥ ಏಕೆ ನಿನಗೀತಪದ ಚಿಂತೆ ವಿ । ವೇಕಶಾಸ್ತ್ರವಿಚಾರವಿದು ವಿಪಿ । ನೌಕಸದ ಸಂಹಾರವಿದ್ಯಾವೃತ್ತಿ ನಿನ್ನದಲೇ ॥ ಆಕೆವಾಳರ ಕರೆಸು ನೀನೇ । ಕಾಕಿ ನಿನ್ನಲಿ ಹರಿಯದಾಹವ । ವೇಕೆ ನಿನಗೀಗೆಂದು ಕಪಟಕಿರಾತನನು ಜರೆದ ॥ ನೀವು ಬಲ್ಲರಿ ಶಾಸ್ತ್ರದಲಿ ಶ । ಸ್ತ್ರಾವಳಿಯಲಾವಿಂದು ಪಕ್ಷಿಮೃ । ಗಾವಳಿಯ ಬೇಂಟೆಯಲಿ ಬಲ್ಲೆವು ಜಾತಿಧರ್ಮವಿದು ॥ ನೀವು ಬಲುಹುಳ್ಳವರು ನಿಮ್ಮೊಡ । ನಾವು ಸೆಣಸುವರಲ್ಲ ನಿಮ್ಮವೊ । ಲಾವಋಷಿಶಸ್ತ್ರಜ್ಞನಾತನ ಬಿರುದ ತಡೆಯೆಂದ ॥೪॥ ಕಟಕಿಯೇಕೆ ಪುಳಿಂದ ನಾವು । ಬಟ್ಟೆಯ ತಪಸಿಗಳೆಂಬುದಿದು ವಿ । ಸ್ಫುಟವಲೇ ತಪ್ಪೇನು ನಿನ್ನೊಡನೆಂದು ಫಲವೇನು ॥ ಜಟೆವೃಗಾಜಿನಭಸ್ಮದೊಡಲು । ತ್ಕಟದಧನುಶರಖಡ್ಗದಲಿ ಧೂ । ರ್ಜಟಿಯಿಹನು ನಾವವರ ಶಿಷ್ಯರು ಶಬರ ಕೇಳೆಂದ ॥೫॥ ಲೋಕಶಿಕ್ಷಕರಲ್ಲಲೇ ನಮಗೇಕೆ ನಿಮ್ಮಯ ತಪದಚಿಂತೆ ಪಿ । ನಾಕಧರನಡಹಾಯ್ದೊಡೆಯು ಬಿಡೆವೆಮ್ಮವಾಸಿಗಳ ॥ ಈಕಳೆಂಬವಿದೆಮ್ಮದೆನುತ ವ । ನೌಕಹದ ನೆಳಲಿನಲಿ ನಿಂದು ಪಿ । ನಾಕಿ ನುಡಿದನು ಕಡಿದನೀತನ ಸ್ಥಿರಣೆಯಮನವ ॥೬॥ ಮುಸುಗಿದನು ನಿಮ್ಮಾತನಾಗಿದೆ । ಬ್ಬಿಸಿದಹುಲಿಯೋ ನೊಂದಹಂದಿಯೊ । ಹಸಿದಭುಜಗನೊ ಕಾದಕಟ್ಟುಕ್ಕಿನಭಡಾಳಿಕೆಯೋ ॥ ಉಸುರುಗಳ ಕರ್ಬೊಗೆಗಳಾಲಿಯ । ಬಿಸಿಗುದಿಯ ಬಲುಕೆಂಡವಂಬಿನ । ಹೊಸಮಸೆಗಳುರಿ ಝಾಡಿ ಝಳಿಪಿಸೆಪಾರ್ಥ ಖತಿ

ಗೊಂಡ ॥೭॥ ಆದೆ ಹಿಡಿದಕೊಳ್ಳೆನುತ ಕೆನ್ನೆಗೆ । ಸೇದಿ ಬಿಟ್ಟನು ಸರಳನದು ಹಿಂ । ದಾದುದಾ ಬಳಿಸ
ರಳನದ ಹಿಂದಿಕ್ಕಿ ಮತ್ತೊಂದು ॥ ಹೋದುದದ ಹಿಂದಿಕ್ಕಿ ಮತ್ತೊಂ । ದೈದಿತತಿವೇಗಾಯ್ಲತನದನು ।
ಮಾದಸಾಧ್ಯದಸರಳು ಕವಿದವು ಬಿಟ್ಟಸೂಟಿಯಲಿ ॥೮॥ ಏನಹೇಳುವೆನರಸ ಶರದಭಿ । ಮಾನದೇವತೆ
ಯುಂಟಲಾ ಹರಿ । ಸೂನುವರಿಯದೊಡಂಬೆಯರಿಯಳೆ ಚಂಡಿಕಾದೇವಿ ॥ ಭಾನುಮಂಡಳದಂಧಕಾ
ರದ । ವೈನತೇಯನ ಭುಜಗತತಿಯಸ । ಮಾನಧರ್ಮವ ಕಂಡೆನೀಶನೊಳರ್ಜುನಾಸ್ತ್ರದಲಿ ॥೯॥
ಮತ್ತೆ ಸುರಿದನು ಸರಳಮಳೆ ಯನ । ದೆತ್ತ ನಭ ದೆಸೆಯತ್ತ ಧಾರುಣಿ । ಯೆತ್ತಲರ್ಜುನನೆತ್ತ ಕಪಟ
ಕಿರಾತ ತಾನೆತ್ತ ॥ ಹೊತ್ತಹೊಗರಿನ ಮೊರೆವಗರಿಗಳ । ತತ್ತುಗಿಡಗಳ ಹೊಳೆವಧಾರೆಯ । ಮೊತ್ತ
ದಂಬೌಕಿದವು ಮೃತ್ಯುಂಜಯನ ಸಮ್ಮುಖಕೆ ॥೧೦॥ ಮಂಜು ಮುಸುಕಿದೊಡೇನು ಪರ್ವತ । ಮಂಜುವುದೆ
ಹಾಲಾಹಲವನೊಣ । ನೆಂಜಲಿಸುವುದೆ ವಡಬಶಿಖಿ ನನೆವುದೆ ತುಷಾರದಲಿ ॥ ಕಂಜನಾಳದಿ ಕಟ್ಟುವಡೆ
ವುದೆ । ಕುಂಜರನು ನರಶರದ ಜೋಡಿನ । ಜುಂಜುಮಳೆಯಲಿ ಜಾನವೀಧರ ಜಾರುವನೆ ಯೆಂದ ॥೧೧॥
ಕೆರಳಿದನು ಹೇರಂಬ ಗುಹನ । ಬ್ಬರಿಸಿದನು ರೋಷದಲಿ ಮಸಗಿತು । ಥರಥರದ ವರವೀರಭದ್ರಾದ್ಯಖಿ
ಳಭೂತಗಣಾ ॥ ಹರನು ಕಂಡನಿದೇನಿದೇನ । ಚ್ಚರಿ ಧನಂಜಯನೆಮಗೆ ನೂರ್ಮಡಿ । ಕರಹಿತವ ನಿ
ಮ್ಮಿಂದ ನೀವ್ ಗಜಬಜಿಸಬೇಡೆಂದ ॥೧೨॥ ಎನುತ ಕೊಂಡನು ಧನುವನಾಪಾ । ರ್ಥನ ಶರೌಘವನೆ
ಚ್ಚೊಡೀಶನ । ಮೊನೆಗಣೆಯಲಕ್ಕಾಡಿದವು ಬಾಡಿದವು ಬಳಿಸರಳು ॥ ಕನಲಿ ಕಿವಿವರೆಗುಗಿದು ಘಡ
ಹೋ । ಗೆನುತ ಮಗುಳೆಚ್ಚನು ಧನಂಜಯ । ನನಿತುಶರವನು ಕಡಿದು ಮದನವಿರೋಧಿ ಮಗು
ಳೆಚ್ಚ ॥೧೩॥ ಎಸುಗೆಯೊಳ್ಳಿತು ಶಬರನತ್ತಿಸಾ । ಹಸಿಕನ್ಯೆ ಬಿಲ್ಲಾಳಲಾ ಸರ । ಬೆಸನನೆಚ್ಚನು ನಮ್ಮೊ
ಡನೆ ಮಝುಪೂತು ಪಾಯ್ಕನುತ ॥ ಹೊಸಮಸೆಯ ಹೊಗರಲಗುಗಳ ದ । ಳ್ಳಿಸುವಧಾರೆಯ ಕೆಂಗರಿ
ಯಧೌ । ಳಿಸುವಕಣೆಗಳ ಶರನಿಧಿಯ ಕವಿಸಿದನು ಕಲಿಪಾರ್ಥ ॥೧೪॥ ಈಡಿರಿದವೊಂದೊಂದರಲಿ
ಹೊಗೆ । ಝಾಡಿ ಝಳಿಪಿಸೆ ಉರಿಗಳಲಿ ಸರ । ಳೋಡಿದವು ಗಾಂಡಿವವನೊದೆದು ಮಹೇಶನಿದಿರಿನಲಿ ॥
ಕಾಡಿದೊಡೆ ಕಾರುಣ್ಯನಿಧಿ ಕೆಂ । ಡಾಡುತಿರ್ದನು ಪಾರ್ಥನಂಬಿನ । ಮೂಡಿಗೆಯ ಸಂವರಣೆ ಸವೆ
ದುದು ಸವೆಯದಾಟೋಪ ॥೧೫॥ ಎಲೆ ಕಿರಾತ ಕಿರಾತರೊಳಗ । ಗ್ಗಳೆಯನಹೆಯೋ ದೇವದಾನವ ।
ರೊಳಗೆ ಸೈರಿಸಿ ನಿಲುವನಾವನು ನಮ್ಮ ವಿಲಗದಲಿ ॥ ಅಳುಕದಿರು ಕಲಿಯಾಗೆನುತ ತುದಿ । ಹಿಳುಕ
ಮಂತ್ರಿಸಿ ದಿವ್ಯಬಾಣಾ । ವಳಿಗಳಲಿ ಬಾಲೇಂದುಮೌಳಿಯನೆಚ್ಚನಾ ಪಾರ್ಥ ॥೧೬॥ ಏಸುಮಂತ್ರಾ
ಸ್ತ್ರದಲಿ ಮುಸುಕಿದೊ । ಡೈಸುವನು ಹರನುಂಗಿದನು ಮಗು । ಳೇಸು ಕೂರಂಬುಗಳನೆಚ್ಚೊಡೆ ಕಡಿದನಂ
ಬಿನಲಿ ॥ ಈಸುವೆಗ್ಗಳರಾರೆನಿಪಭೀ । ಜ್ಞಾಣ್ಣಿಶೆ ಬೆಡಾಕ್ಷಾತ್ರತಾಮಸ । ವೇಸುಬಲುಹೋ ನಿಮ್ಮಜಾ
ತಿಗೆ ರಾಯ ಕೇಳೆಂದ ॥೧೭॥ ಅಂದು ಕಾಂಡವವನದ ದಹನದಿ । ಬಂದುದಕ್ಷಯಬಾಣವಿದು ತಾ ।
ಇಂದುಬರೆತುದು ಬಹಳಜಲನಿಧಿ ಬತ್ತುವಂದದಲಿ ॥ ಇಂದುಮೌಳಿಯ ಸೇವೆಗಂದ್ರಪು । ಳಿಂದಕಂಟ
ಕನಾದನೇ ಹಾ । ಯೆಂದುಗರ್ಜಿಸಿ ಚಾಪದಿಂದಪ್ಪಳಿಸಿದನು ಶಿವನ ॥೧೮॥ ಕಳಚಿದನು ದಂಡೆಯನು
ಗಾಯದ । ಲಳುಕಿದನಲಾಯೆನುತ ಮಗುಳ । ಪ್ಪಳಿಸಿದನು ಮೇಲ್ವಾಯ್ದು ಹೊಯ್ದನು ಜರೆದು
ಝೊಂಪಿಸುತ ॥ ಮೆಲುನಗೆಯಲರ್ಜುನನ ಚಾಪವ । ಸೆಳೆದುಕೊಂಡನು ತನ್ನ ಭಕ್ತನ । ಬೆಳವಿಗೆ

ಯವಮಾಡಿದನು ಘೋಯೆಂದುದು ಸುರಸ್ತೋಮ ॥೧೯॥ ತಿಳಿವನ.ಗಿದಡಿಗಿಕ್ಕಿ ಮರವೆಯ । ಕಳಕಳವೆ ಮೇಲಾಯ್ತು ತಾಮಸ । ಜಲನಿಧಿಯ ತಾಯ್ಮಳಲ ಮುಟ್ಟಿತು ಮನ ಧನಂಜಯನಾ ॥ ಸೆಳೆದ ನೊರೆಯಲಡಾಯುಧವ ಬೀ । ಳಲವೊ ಶಬರಯೆನುತ್ತ ಹೊಯ್ದನು । ತಳಿರೆಲೆಯ ತಳಿವೆಳವರೆಯ ನೆಲೆವನೆಯಪಶುಪತಿಯ ॥೨೦॥ ಆಯುಧದ ಬರಿಮುಷ್ಟಿಯುಳಿಯಲ । ಡಾಯುಧವ ಶಿವಕೊಂಡನೀತನ । ಬಾಯಹವಣಿನ ತುತ್ತಹುದೆ ತ್ರಿಪುರಾರಿಯೊಡ್ಡವಣೆ ॥ ರಾಯಕೇಳ್ಕೆ ಪಾರ್ಥನುಬ್ಬಟಿ । ಬೀಯದೀಸರವುತ್ತಮತ್ತೆ ವಿ । ಡಾಯಿಯಾಯ್ತಿಚಪಲತನದವಿವೇಕಮುಡ ಮ್ಮರಿಯೆ ॥೨೧॥ ಮರನಪೆಗ್ಗೊಂಬುಗಳಲಿಟ್ಟನು । ತಿರುಹಿ ಕಲ್ಗುಂಡುಗಳ ಮಳೆಯಲಿ । ಹರನಸಾದಿದನೇನನೆಂಬೆನು ಪಾರ್ಥನುರವಣೆಯ ॥ ಸರಳ ಸಾರದಲಿನಿತ್ತುವನು ಕ । ತ್ತರಿಸಿ ಕರುಣಾವನಧಿ ನುಡಿದನು । ಮರುಳೆ ತಮ್ಮಡಿ ಕೈದುವುಳ್ಳೊಡೆ ಕೊಂಡುಬಾಯೆಂದ ॥೨೨॥ ಕೈದುವೇಕೆ ಪುಳಿಂದನವ್ಮೊಡ । ನೈದಿಸಾ ಭುಜಯುದ್ಧದಲಿ ಬಲು । ಗೈದುವಿದೆಲಾ ಮುಷ್ಟಿ ನಿನಗಡುಪಾಯ ಚೋಕ್ಕೆಯವ ॥ ಕಾಯ್ದುಕೊಳ್ಳ ನುವಾಗು ನಿನ್ನವ । ರೈದಿ ನೋಡಲಿ ಯೆನುತ ಭುಜವನು । ಹೊಯ್ದು ನಿಂದನು ಪಾರ್ಥನುರೆ ಬೆರಗಾಗೆ ಭೂತಗಣ ॥೨೩॥ ಕಂಡಿರೇ ದೇವಿಯರು ನರನು । ದ್ದಂಡತನವನು ತರಗೆಲೆಯ ಕೈ । ಕೊಂಡು ತಿಂಗಳುನಾಲ್ಕು ಪವನಗ್ರಾಸದಿಂ ಬಳಿಕ ॥ ದಂಡಿಸಿದನೀದೇಹವನು ನಾ । ವಂಡಲೆಯಲೊದಗಿದನಲೇಸವು । ದಂಡಿಯಲಿ ನವ್ಮೊಡನೆ ಯೆಂದನು ನಗುತ ಶಶಿಮೌಳಿ ॥೨೪॥ ಹಾರಿತಾಯುಧವೆಂದು ಭೀತಿಗೆ । ಮಾರುವೋದನೆ ವೀರರಸ ನೊರೆ । ಯಾರಿತೇ ನಿಜಬಾಹುಶಕ್ತಿಯೊಳುಂಟೆ ಖಯಖೋಡಿ ॥ ವಿಾರಿ ಹತಕಂತುಕದವೊಲು ಪುಟ । ವೇರುತದೆ ವಿಕ್ರಮ ಚಡಾಳಿಸಿ । ಬೀರುತದೆ ಭುಜಭಾರಿಯಂಕವ ದೇ ನೋಡೆಂದ ॥೨೫॥ ಈತನರನೆಂಬವಕಣಾ ಸಂ । ಗಾತಿ ನಾರಾಯಣಋಷಿಗೆ ತಾ । ವೀತಗಳು ಹವಿಯಂಶಭೂತರು ಭಕ್ತರಿವರೆಮಗೆ ॥ ಈತನೆಮ್ಮಯ ಪಾಶುಪತವಿ । ಖ್ಯಾತಬಾಣವ ಬೇಡಿ ತಪದಲಿ ವೀತರಾಗದ್ವೇಷಿಯಾದನು ಕಾಂತೆ ಕೇಳೆಂದ ॥೨೬॥ ಕೊಡುವೆನೀತಂಗೆಮ್ಮ ಶರವನು । ಮುಡದಿ ಮತ್ತೆಯು ನೋಡು ಪಾರ್ಥನ । ಕಡುಹನೆನುತಿದಿರಾತು ಬಾಹುಪ್ಪಳಿಸಿ ಬೊಬ್ಬಿಡುತ ॥ ಹಿಡಿದರಿಬ್ಬರು ಕೈಗಳನು ಹೊ । ಕ್ಕೊಡನೆ ಹತ್ತಾಹತ್ತಿಯಲಿ ಖಗೆ । ಜಡಿತೆಯಲಿ ಚಾಳೈಸಿದರು ಬಹುವಿಧದಬಿನ್ನಣವ ॥ಬಿಗಿವ ಬಿಡಿಸುವ ಬಿಡಿಸಿದಾಕ್ಷಣ । ತೆಗೆವ ಕಳಚುವ ಕೊಂಬ ಲಳಿಯಲಿ । ಹೊಗುವ ಹತ್ತುವ ಲವಣಿಯಲಿ ಲಾಲಿಸುವ ಹೊರವಡುವ ॥ ಚಿಗಿವ ತೊಡಚುವ ಬಿಗಿವ ಬಿಡಿಸುವ । ಬಗಿವ ಬಳಸುವ ಬಂಧಗತಿಯಲಿ । ಲಗಡಿಸುವ ಲೋಕೈಕವೀರರು ಹೊಕ್ಕುಹೆಣಗಿದರು ॥೨೮॥ ಕರವಳೆಯತಳಹತ್ತ ಡೊಕ್ಕರ । ಶಿರವಧಣುವಟ್ಟತಳಖೊ । ಪ್ಪರದುವಂಗುಲಕಂದಡೊಕ್ಕರತೋರಹತ್ತದಲಿ ॥ ಸರಿಸವಂ ಕಡಬಂಧಪಟ್ಟಿಸ । ಉರಗಬಂಧನಬಾಹುದಣುವಂ । ತರಲಗಡಿಯೆಂಬಿನಿತರಲಿ ತೋರಿದರು ಕೌಶಲವ ॥ ಮುರಿವ ಬಿಡಿಸುವಥಗೆಯಸ್ಥೈರಿಸಿ । ತೆರಳಿಚುವ ತಳಮೇಲುಗಳಲು । ತ್ತರಿಸುವೇಳುವ ಬೀಳ್ವ ಹತ್ತುವ ಸುಳಿಪವಂಚಿಸುವ ॥ ಹೊರಳ್ವ ತನುಹೋರಟೆಯ ಸತ್ತ್ವೋ । ತ್ಕರುಷ ಸರಿಯೆನೆ ಶಂಭು ಶಿಷ್ಯಗೆ । ಪರಿವಿಡಿಯ[illegible]ಸುವೊಲಿದ್ದನು ಭೂಪ ಕೇಳೆಂದ ॥೩೦॥ ಗಾಯವುಂಟೇ ತೋರು ನಿನಗಡು । ಪಾಯೊ ಬಿಡ ಜ[illegible]ನೆನೆನುತಲಿ । ಜೇಯನೊಡನಿದಿರೆದ್ದು ತಿವಿದನು ಹರನ್ನ ಪೇರುರವ ॥ ಗಾಯಘಾತಿಗೆ ನಿಮು

ಮೆತ್ತವೆಮು । ಗಾಯಿತೆನುತ ಪುರಾರಿ ಕಡುಪ್ರೌರಾಯದಲಿ ಕರವೆತ್ತಿನಸುತ್ತಿವಿದನು ಧನಂಜಯನ॥೩೧॥ ತರೆಹರಿಸಿ ನರನಿಕ್ಕಿದನು ಶೂ । ಕರನ ವಕ್ಷಸ್ಥಳವನೆಡ್ತೆಯಲಿ । ಮುರಿದು ಕಳಚಿ ಗಿರೀಶನೆರಗಿದನಿಂದ್ರನಂದನನ ॥ ಮರಳಿತಿವಿದನು ಪಾರ್ಥನಾತನ । ಶಿರಕೆ ಕೊಟ್ಟನು ಶಂಭುವಿಂತಿ । ಬ್ಬರ ವಿಷಮಗಯದ ಹಾವಣೆ ಘಲ್ಲಿಸಿತುಜಗವ ॥೩೨॥ ಸುಯ್ಲಹೊಗೆಗಳಹೊದರು ದಿವಿಗುಳ । ಮಯ್ಲ್ಲಳಿಯ ಮುರಿವುಗಳ ದೃಢವೇ । ಗಾಯ್ಲರಿಕ್ಕಿದ ಗಾಯಗಾಯಕೆ ಮುಷ್ಟಿಕಿಡಿಯೇಳೆ ॥ ಶಯ್ಲಹತಿಗಳಭಾರಣೆಯಬಲು । ವೊಯ್ಲ ಬೆಳೆಸಿರಿವಂತರಿವರೆನ । ಲಯ್ಲಹೈಲದಜರಡುಗಳೆ ನರಸಾಥಕೇಳೆಂದ ॥೩೩॥ ತ್ರಾಣವೆಂತುಟೊ ಶಿವಶಿವಾಸ । ತ್ರಾಣನಹೆ ಬಹುದಿವಸಭುವನ । ಪ್ರಾಣವೇಪೋಷಣವಲಾ ಮಝುಫೂತು ಜಗಜಟ್ಟಿ ॥ ಕಾಣೆನಿವಗೆ ಸಮಾನರನು ಶಿವ । ನಾಣೆಗುಣದಲಸೂಯಮೇತ । ನ್ನಾಣೆ ನೋಡಾ ಶಬರಿ ಯೆಂದನು ನಗುತ ಮದನಾರಿ ॥೩೪॥ ನಿನಗೆ ನಾ ಬೆರಗಾದೆ ನೀಸಿಂ । ದೆನಗೆ ಮೆಚ್ಚಿದೆ ದೇವದಾನವ । ಜನರಿನಗೆ ಪಾಡಲ್ಲ ನೀಹಲ್ಲಣಿಸಿದ್ಯೆ ನಮ್ಮ ॥ ಇನನೊ ಮೇಣ್ದೇವೇಂದ್ರನೋ ಹರ । ತನುಜನೋ ಹರಿಯೋ ಮಹಾದೇ । ವನೊ ಕಿರಾತನೊ ನೀನೆನುತ ಮತ್ತೆರಗಿದನು ಶಿವನ ॥೩೫॥ ಗಾಯವನು ಮುನ್ನಿಸುತ ಶಿವ ಪೂ । ರಾಯದಲಿ ಮುಟ್ಟಿದನು ಪಾರ್ಥನ । ಬಾಯೊಳೊಕ್ಕುದು ರುಧಿರ ನಾಸಿಕದೆರಡುಬಾಹೆಯಲಿ ॥ ನೋಯನೊಂದನು ವಿಗಾರಿ ಮುನಿಯಲ । ಪಾಯವಾನುದೆ ಕಟಕಟಾತ । ಪ್ಪಾಯಿತೇ ತಪ್ಪಾಯ್ತೆನುತ ಮರುಗಿದನು ಮದನಾರಿ ॥೩೬॥ ಬಿರಿದುದೀತನ ಗರ್ವಗಿರಿ ಮಡಮುರಿದುದೀತನ ಶಕ್ತಿ ಸಲೆ ಟಿ । ಬ್ಬರಿಸಿತಿಂದ್ರಿಯವರ್ಗ ನೆಗ್ಗಿತು ನೆನಹಿನೊಡ್ಡವಣೆ ॥ ಹರಿದುದಂತಃ ಸ್ವೇದಜಲ ಕಾ । ಹುರತೆ ಕಾಲ್ವೊಳೆಯಾಯ್ತು ಮತಿನಿ । ಬ್ಬರದಬೆರಗಿನ ಬೇಟದಲಿ ಬೆಂಡಾದನಾ ಪಾರ್ಥ ॥೩೭॥ ಆವಸುವ್ರತಭಂಗವೋ ಮೇಣಾವದ್ಯೆವದ್ರೋಹವೋ ತಾ । ನಾವಶಿವಭಕ್ತಾಪರಾಧಿಯೊ ಪೂರ್ವಜನ್ಮದಲಿ ॥ ಆವಹಿರಿ ಯರಹಳಿದೆನೋ ಮೇ । ಣಾವಧರ್ಮವನಳಿದೆನೋ ತನ । ಗಾವಪರಿಪರಿಭವಮಹೀರುಹ ಫಲಿತವಾಯ್ತೆಂದ ॥೩೮॥ ಈತ ಧಿಟಕೆ ಪುಳಿಂದನೇ ವಿ । ಖ್ಯಾತನರತಾನಲ್ಲಲೇ ಧಿಟ । ಜಾತಪಾರ್ಥನೆ ತಾನಿಧಾನಿಸೆ ಶಬರನಿವನಲ್ಲ ॥ ಈತ ಪಲ್ಲಟವಾದನೋ ಮೇ । ಣ್ಶ್ವೇತತುರಗನಪಲ್ಲಟವೊಕುಂ । ತೀತನುಜ ತಾನಲ್ಲ ನಿಶ್ಚಯವೆನುತ ಚಿಂತಿಸಿದ ॥೩೯॥ ಅರಿದನೇ ಶಿವನೆಂದು ದೈವದ ಸರಿಯಬಲುಹನು ಕಂಡೊಡೆಯುಧಿಟ । ವರಿಯಬಹುದೆ ರಹಸ್ಯಮಾಯಾಗೋಪಿತಾತ್ಮಕನ ॥ ಅರುಹಿಕೊಡಮೇ ವೇದಶಿರವೆ । ಚ್ಚರಿಸಿ ತನ್ನನಖಂಡಚಿನ್ಮಯ । ದರಿವು ತಾನೆಂಧಾವನರಿವನು ರಾಯ ಕೇಳೆಂದ ॥೪೦॥ ಹಂದಿಯೇತಕೆ ತನಗೆ ಬನದ ಪು । ಳಿಂದನಲಿ ಸೆಣಸಾಗಲೇಕೆ ಪು । ಳಿಂದನೇಮಾನ್ಯಕನು ನಾವವಮಾನ್ಯರಾದೆವಲೇ ॥ ಇಂದುಮೌಳಿಯುಪೇಕ್ಷೆಯೋ ತಾ । ನಿಂದು ಶಿವಪದಭಕ್ತಿಶೂನ್ಯನೊ । ಮಂದಭಾಗ್ಯನು ತಾನಲಾ ಹಾಯೆನುತ ಚಿಂತಿಸಿದ ॥೪೧॥ ಏಕೆ ಚಿಂತೆವ್ಯಥಾಮನೋವ್ಯಥೆ । ಕಾಕಲಾ ನಾನಜ್ಞನಾಗೆ ಪಿ । ನಾಕಿ ಮಾಡುವುದೇನು ಮರೆವೊಗುವೆನು ಮಹೇಶ್ವರನ ॥ 'ಈಕಿರಾತನಪರಿಬವನು ಬಳಿ । ಕೇಕನಿಮಿಷಕೆ ಗೆಲುವೆನೆನೆನುತ ವಿ । ವೇಕಸಿರಿಯ ಕಟಾಕ್ಷವಿತ್ತಕೆ ಮಾರಿವನು ಮನವ ॥೪೨॥ ಮಣಲಲಿಂಗವ ಮಾಡಿದನು ನಿ ॥ ಗರ್ಣನ ಸಗುಣಾರಾಧನೆಯ ಮ ॥ ನ್ನಣೆಗಳಲಿ ವಿಸ್ತರಿಸಿದನು ವಿವಿಧಾಗಮೋಕ್ತದಲಿ ॥ ಕಣಗಿಲೆಯ ಬಂದುಗೆಯ ಕಕ್ಕೆಯ । ಸಣಬಸರಿ

ಸದಕುಸುಮದಲಿ ರಿಪು । ಗಣಭಯಂಕರನರ್ಚಿಸಿದನಂಧಾಸುರಾಂತಕನ ॥೪೩॥ ಅಮಲಶೈವಸ್ತವವ ಹೇಳಿದು । ನಮಿಸಿದನು ಬಲವಂದು ಪುನರಪಿ । ವಿಮಲಮತಿ ಮೈಯಿಕ್ಕಿದನು ನಿಜಭಾವಶುದ್ಧಿಯಲಿ ॥ ಕಮಲಭವಸುರವಂದ್ಯ ಗಿರಿಜಾ । ರಮಣ ಭಕ್ತಕುಟುಂಬಿ ದೇವೋ । ತ್ತಮ ತ್ರಿಯಂಬಕ ಪುಷ್ಟಿವರ್ಧನ ಕರುಣಿಸುವುದೆಂದ ॥೪೪॥ ಗೆಲಿದನೆನ್ನನು ಶಬರನೀತನ । ಗೆಲುವಶಕ್ತಿಯ ಕೊಡು ಕಿರಾತನ । ಬಲುಹು ಭಂಗಿಸಿತೆನ್ನ ಬಿಂಕವನೊಡೆಯನೀನಿರಲು ॥ ಹಲವು ಮಾತೇನಿವನ ಮುರಿವ । ಗ್ಗಳಿಕೆಯನೆ ಕೃಪೆಮಾಡೆನುತ ಪರ । ಬಲಭಯಂಕರ ಭುಜವನೊದರಿಸುತಿತ್ತ ಮುಂದಾದ ॥೪೫॥ ಕಾಣಬಹುದೋ ಶಬರ ನಿನ್ನೀ ಪ್ರಾಣವೆನ್ನಾಧೀನವರಿಯಾ । ಸ್ಥಾಣುವಿನ ಬಲುಹುಂಟು ಹಿಂಡುವೆನಿನ್ನು ನಿನ್ನಸುವ ॥ ಗೋಣ ಮುರಿವೆನು ಮಿಡುಕಿದೊಡೆ ಶಿವ । ನಾಣೆ ಬಾ ಸಂಮುಖಕೆ ಹಾಣಾ । ಹಾಣಿಗಿನ್ನನುವಾಗೆನು ತಲೆವೆಯಿಕ್ಕದೀಕ್ಷಿಸಿದ ॥೪೬॥ ಕಂಡನರ್ಜುನನೀಕಿರಾತನ । ಮಂಡೆಯಲಿ ತಾಮಳಲಲಿಂಗದ । ಮಂಡೆಯಲಿ ಪೂಜಿಸಿದಬಹುವಿಧಕುಸುಮಮಂಜರಿಯ ॥ ಕಂಡನಿತ್ತಲು ಮುರಿದು ಪುನರಪಿ । ಕಂಡನೀಶಬರಂಗಿದೆತ್ತಣ । ದಂಡಿಯೋ ಹಾಯೆನುತ ಸೈವೆರಗಾದನಾಪಾರ್ಥ ॥೪೭॥ ಆಗಲಿದನಾರೈಪೆನೆನುತವೆ । ಯಾಗಮೋಕ್ತದಿ ಮತ್ತೆ ಲಿಂಗದ । ಮೇಗಡೆಯನಿರ್ಮಾಲ್ಯವನು ಬೇರಿರಿಸಿಭಕ್ತಿಯಲಿ ॥ ಹೂಗಳನು ತಿರಿದೊಟ್ಟಿ ಕರುಣಾ । ಸಾಗರನ ಬಲವಂದು ದಕ್ಷನ । ಯಾಗಹರನೆ ನಮಶ್ಶಿವಾಯೆನುತಿತ್ತ ಮುಂದಾದ ॥೪೮॥ ಮತ್ತೆ ಕಂಡನು ಖಂಡಪರಶುವಿ । ನುತ್ತಮಾಂಗದಲೀಚೆಯಲಿ ಲಿಂ । ಗೋತ್ತಮಾಂಗದಮೇಲೆಕಾಣನು ಕುಸುಮಮಂಜರಿಯ ॥ ತುತ್ತಿದವು ಕೌತುಕವ ರಂಜಿಸಿ । ಹೊತ್ತವದುಭುತವನು ಭಯಾನಕ । ವೆತ್ತರಸದಲಿ ಮುಳುಗಿದವು ಕಂಗಳು ಧನಂಜಯನಾ ॥೪೯॥ ಶಿವನಲಾ ಸಾಕ್ಷಾಚ್ಚತುರ್ದಶ । ಭುವನಕರ್ತೃವಲಾ ಕಿರಾತ । ವ್ಯವಹರಣೆಯಲಿ ಸುಳಿದುದಸ್ಮದನುಗ್ರಹಾರ್ಥವಲಾ ॥ ಏವೆಗಿದನಶನತಪದ ಪಿತ್ತದ । ಬವಣೆ ತಲೆಗೇರಿದುದಲಾ ಶಿವಶಿವ । ಮಹಾದೇವೆನುತ ಮರುಗಿದನಂದು ಕಲಿಪಾರ್ಥ ॥೫೦॥ ಹೃದಯವಿಬ್ಬಗಿಯಾಯ್ತು ಕಂಗಳು । ಬೆದರಿದವು ವೈವರ್ಣವದಲಿ ತನು । ಗದಗದಿಸಿತಡಿಗಡಿಗೆ ಜಡಿದುದು ರೋಮಹರುಷದಲಿ ॥ ಉದುರಿದವು ನೇತ್ರಾಂಬು ಬಿಂಕದ । ಬೆದರಿಕೆಯ ಮೂಢತೆಯ ತಿಳಿವಿನ । ಮುದದ ಭೇದದ ಗಾಯಘಾತಿಗೆ ಪಾರ್ಥನೊಳಗಾದ ॥೫೧॥ ಸ್ವೇದಜಲದಲಿ ಮಿಂದು ಪುನರಪಿ । ಖೇದಪಂಕದೊಳದ್ದು ಬಹಳವಿ । ಷಾದರಜಲದಲಿ ಹೊರಳಿ ಭಯರಸನದಿಯೊಳೀಸಾಡಿ ॥ ವೈದೆಗೆದು ಮರನಾಗಿ ದೆಸೆಯಲಿ । ಬೀದಿವರಿವುತ ವಿವಿಧಭಾವದ । ಭೇದದಲಿ ಮನ ಮುಂದುಗೆಡುತಿರ್ದುದು ಧನಂಜಯನಾ ॥೫೨॥ ಏಸುಬಾಣದಲೆಚ್ಚೊಡೆಯುಹೊರ । ಸೂಸಿದವು ನಾನರಿದುದಿಲ್ಲ ಮ । ಹಾಶರೌಘವ ಕಳುಹೆ ನುಂಗಿದೊಡರಿದೆನೇ ಬಳಿಕ ॥ ಆಶರಾಸನಖಡ್ಗವನು ಕೊಳ । ಲೈಸರೊಳಗೆಚ್ಚತ್ತೆನೇ ಹಿಂ । ದೇಸುಜನ್ಮದ ಜಾಡ್ಯಜವನಿಕೆಯಾಯ್ತು ತನಗೆಂದ ॥೫೩॥ ಆವನನು ಜಪಯಜ್ಞದಲಿ ಸಂ । ಭಾವಿಸುವರಾವನ ಪದಾಂಬುಜ । ಸೇವೆಯಲಿ ಸನಕಾದಿಗಳು ಧನ್ಯಾಭಿಮಾನಿಗಳು ॥ ಆವನೊಬ್ಬನು ನಾದಬಿಂದುಕ । ಳಾವಿಶೇಷಾತೀತನೀತನೊ । ಳಾವು ಸಮರಕೆ ಸೆಣಸಿದೆವಲಾ ಶಿವಶಿವಾಯೆಂದ ॥೫೪॥ ಆವನನುಯಜ್ಞಾದಿಕರ್ಮದೊ । ಳಾವನನು ನಿಯಮಾದಿಯೋಗದೊ । ಳಾವನನುವಿವಿಧಾರ್ಚನಾಂಕಿತಭಕ್ತಿಮಾರ್ಗದಲಿ ॥ ಆವನನು ಜೀವಾತ್ಮಚೈತ । ನ್ಯಾವಲಂಬನನೆಂದು

ಭಜಿಸುವ । ರಾವು ರಣದಲಿ ಸೆಣಸಿದೆವಲಾ ಶಿವಶಿವಾಯೆಂದ ॥೫೫॥ ಲೋಕವಾವನ ಮಾಯೆಯಿಂ ಜಗ । ಕಾಕೆವಾಳರಿದಾರುಚಂದ್ರಾದಿ । ವಾಕರೆಗ್ರಹ ತಾರೆಗಳ್ವರತೇಜದಲಿ ॥ ಲೋಕರಚನಾರಕ್ಷೆ ಸಂಹೃತಿ । ಯಾಕರಣೆ ತಾನಾರದಾಜಗ । ದೇಕದೈವದಕೂಡೆ ತೊಡೆಯಿ ಶಿವಶಿವಾಯೆಂದ ॥೫೬॥ ಜೀವರೂಪನು ಸಾಕ್ಷಿ ಕೂಟ । ಸ್ಥಾವಲಂಬನ ಕರ್ತೃ ಚೇತನ । ನಾವನೀಕ್ಷೇತ್ರಜ್ಞನಂತರ್ಯಾಮಿ ಸಂಜ್ಞೆಯಲಿ ॥ ಆವನಮಲ ಪ್ರತ್ಯಗಾತುಪು । ನಾವನುರುಪರಮಾತ್ಮನೀಶ್ವರ । ನಾವಸಾತನಕೂಡೆ ಕದನವ ಶಿವಶಿವಾಯೆಂದ ॥೫೭॥ ಸ್ಫುರದಲಿಂಗನುಲಿಂಗಮೂಲೋತ್ಕರನು ದಾರವ್ಯಕ್ತಸದಸ। ತ್ಪರದ ಪರಶಿವನಾರುಶ್ಯೆವ್ರೋತ್ಕರುಷಲಿಂಗದಲಿ ॥ ಪರಮಪರರೂಪಾತ್ಪರಾತ್ಪರ । ತರ ನಿರೂಪನದಾವನಾತನೊ । ಳರರೆ ನಾವೆಚ್ಚಾಡಿದೆವಲಾ ಶಿವಶಿವಾಯೆಂದ॥ಅರಕಾರವುಕಾರವಿಮಲಮ।ಕಾರಯುಕ್ತೋ ಕಾಕ್ಷರದವಿ । ಸ್ತರಿಯಾವನು ಮಾತೃಕಾಕ್ಷರರೂಪನಕ್ಷಯನ ॥ ಆರುವಾಙ್ಮಯನಾರು ವಾಚೋ । ದೂರನಾರು ವಚೋನಿಯಾಮಕ । ನಾರವನಕೂಡೆವಗೆ ಕಲಹವೆ ಶಿವಶಿವಾಯೆಂದ ॥೫೯॥ ಗಾಹುಹತ್ತಾಹತ್ತಿಗಡ ನಿ । ರ್ದೇಹನೊಡನೆ ಮಹಾಶರೌಘಕೆ । ಮೋಹುಗಡ ಜೀವನವು ಮೃತ್ಯುಂಜಯನ ಸೀಮೆಯಲಿ ॥ ಆಹ ಮೊದಲೆಗಡ ಸುನಿಗಮ । ವ್ಯೂಹದೂರನಕೂಡೆ ಹರನೊಡ । ನಾಹವಕೆ ಸಮಜೋಳಿ ನಾವ್ಗಡ ಶಿವಶಿವಾಯೆಂದ ॥೬೦॥ ಎವೆಗೆರಡುಕಣ್ಣು ವಿಶ್ವತೋಚ । ಕ್ಷುವಿನೊಡನೆ ಸಕ್ರೋಧದರುಶನ। ವೆವೆಗೆರಡುಭುಜವಿಶ್ವತೋಭುಜನೊಡನೆಸಂಗ್ರಾಮ ॥ ಭುವನಚರಣನ ವಿಶ್ವತೋಮುಖ । ಶಿವನ ನವಿಷ್ಟಾಕಾಲುನಾಲಿಗೆ । ಯವೆಗಡಿಸಿ ಗೆಲಲಾವ್ಸಮರ್ಥರೆ ಶಿವಶಿವಾಯೆಂದ ॥೬೧॥ ಹೂಡಿ ಜಗವನು ಜಗದಜೀವರ । ಕೂಡೆ ಬೆರಸಿ ಸಮಸ್ತವಿಷಯದೊಳಾಡಿ ಸೊಗಸುವಸಾತನುಪಭೋಗಪ್ರಪಂಚದಲಿ । ಹೂಡದಳಿಯದಗಮಿಸಿವಳಿದ । ಕೂಡದಗಲದನಿತ್ಯತೃಪ್ತನಿ । ರೂಢನೊಡನೆಚ್ಚಾಡಿದೆವಲಾ ಶಿವಶಿವಾಯೆಂದ ॥ ಆವನೊಬ್ಬನಣೋರಣೀಯನ। ದಾವನುರು ಮಹತೋಮಹೀಯನ । ದಾವ ನಿರುತಂ ದೃಷ್ಟಿಸಂಗತವಿಶ್ವಸಮಯದಲಿ ॥ ಆವನೊಬ್ಬನ ನಾಮರೂಪುಗು । ಣಾವಲಂಬನನಲ್ಲದೀಶ್ವರ । ನಾವನಾತನೊಳೆಮಗೆ ತೋಟಿಯೆ ಶಿವಶಿವಾಯೆಂದ ॥೬೩॥ ಸೇವ್ಯನನು ಸತ್ಕೃತಿಗಳಲಿ ದ್ರ । ಷ್ಟವ್ಯನನು ದೃಢಚಿತ್ತದಲಿ ಮಂ । ತವ್ಯನನಶ್ರೋತವ್ಯನನು ಸಂಕೀರ್ತಿತವ್ಯನನು ॥ ಅವ್ಯಯನನಕ್ಷಯನನಭವನ । ನವ್ಯಥನನ ಜ್ಞಾನದಲಿ ಚೇ । ತವ್ಯಂದೇಸೆಣಸಿದೆವಲಾ ಶಿವಶಿವಾಯೆಂದ ॥೬೪॥ ಸ್ಫುರದಕಾರಾದಿಯ ಹಕಾರೋ । ತ್ತರದಶಬ್ದಬ್ರಹ್ಮಮಯವಿ । ಸ್ತರದಹಂತತ್ವದ ಮಹತ್ತತ್ವಾತಿಶಯಪದದ ॥ ಪುರುಷ ಮೂಲಪ್ರಕೃತಿಗಳನು । ತ್ತರಿಸಿ ತೊಳತೊಳತೊಳಗಿಬೆಳಗುವ । ಪರಮಶಿವನಲಿ ಸೆಣಸಿದೆದವಲಾ ಶಿವಶಿವಯೆಂದ ॥೬೫॥ ಸರಸಿಜಾಸನವಿಷ್ಣುರುದ್ರೇ । ಶ್ವರಸದಾಶಿವರಾವಳೊಬ್ಬಳ । ಚರಣಸೇವಾಸಂಗದಲ್ಲಿಯೆ ಸುಪ್ರಸಿದ್ಧರು ॥ ಪರಮಶಕ್ತಿಯದಾವನಂಘ್ರಿಗೆ । ಶಿರವನೊಡ್ಡಿಹಳಾಮಹೋತ್ತಮ । ಪರಮಶಿವನಲಿ ಸೆಣಸಿದೆವಲಾ ಶಿವಶಿವಾಯೆಂದ ॥೬೬॥ ಈಪರಿಯಲರ್ಜುನನ ಮನದನು । ತಾಪವನು ಕಾಣುತ್ತಶಾಬರ । ರೂಪರಚನೆಯ ತೆರೆಯಮರೆಯಲಿ ಮೆರೆವಚಿನ್ಮಯದ ॥ ರೂಪನವ್ಯಾಹತನಿಜೋನ್ನತ ರೂಪರಸದಲಿ ನರನಚಿತ್ತದ । ತಾಪವಡಗಲು ತಂಪನೆರೆದನು ತರುಣಶಶಿಮೌಳಿ ॥೬೭॥ ಅರಸ ಕೇಳ್ವೈ ನಿಮ್ಮಪಾರ್ಥನ । ಪರಮಪುಣ್ಯೋದಯವನೀಶನ । ಕರುಣವನು ಶುಕಸನಕಸಿದ್ಧಾದ್ಯರಿಗಗೋಚರದ ॥

ನಿರುಪಮಿತನಿಜ ರೂಪವನು ವಿ । ಸ್ತರಿಸಿದನು ವಿವಿಧಪ್ರಭಾವೋ । ತ್ಕರದ ನಿರುಗೆಯ ತೋರಿದನು ಸುತಿಕೋಟಿ ಕೈಮುಗಿಯೆ ॥೬೮॥ ಬಲಿದಚಂದ್ರಿಕೆಯೆರಕವೆನೆ ಥಳ । ಥಳಿಸಿ ಬೆಳಗುವಕಾಯಕಾಂತಿಯ । ಪುಲಿದೊಗಲ ಕೆಂಜೆಡೆಯ ಕೇವಣದಿಂದುಫಣಿಪತಿಯಾ ॥ ಹೊಳೆವಮಣಿಗಣನಅಕ್ಷಮಾಲಾ । ವಲಯದ ಭಯದ ವರದಕರಪರಿ । ಕಲಿತನೆಸೆದನು ಶಂಭು ಸದ್ಯೋಜಾತವಕ್ತ್ರದಲಿ ॥೬೯॥ ಹೊಳೆವಕುಂಕುಮ ಕಾಂತಿಯಲಿ ಥಳ । ಥಳಿಪತನುಗಜಚರ್ಮದುಡಿಗೆಯ । ಲಲಿತದಂತಪ್ರಭೆಯ ದರಹಸಿತಾನನಾಂಬುಜದಾ ॥ ವಿಲಸಿತಾಭಯವರದಕರಪರಿ। ಲುಳಿತಪರಶು ದೃಢಾಕ್ಷಮಾಲಾ । ವಳಿಗಳೊಪ್ಪಿರೆ ವಾಮದೇವಾನನದಿ ರಂಜಿಸಿದ ॥೭೦॥ ಕಾಳಮೇಘಸುವರ್ಣದುರುದಂ । ಷ್ಟ್ರಾಳಿಭೀಷಣನಮಳಜಪಮಣಿ । ಮಾಲಿಕೆಯ ಸುತಿಮೃಗದಪಾಶಾಂಕುಶದ ಡಮರುಗದ ॥ ಶೂಲಘನಖಟ್ವಾಂಗದ್ರುಹಿಣಕ । ಪಾಲಫಣಿವಲಯದ ಕರೋಟೀ । ಮಾಲೆಯಿಂದ ಮಹೋಗ್ರನೆಸೆದನಘೋರವಕ್ತ್ರದಲಿ ॥೭೧॥ ಪರಶು ಡಮರುಗ ಖಡ್ಗಖೇಟಕ । ಶರಧನುಶ್ಶೂಲದ ಕಪಾಲದ।ಕರದ ರಕ್ತಾಂಬರದ ಫಣಿಪನ ಭೋಗಭೂಷಣದಾ॥ ಸ್ಫುರದಘೋರದಭೇದದಭಯದ । ಕರದ ಪರಶುಮೃಗಂಗಳಲಿ ತ। ತ್ಪುರುಷಮುಖದಲಿ ಮೆರೆದನೆರಕದಮಿಂಚಿನಂದದಲಿ ॥೭೨॥ ಎಳೆಯಮುತ್ತಿನಧಾಳವನು ಮು । ಕ್ಕುಳಿಸಿದಂಗಚ್ಛವಿಯ ಭಯವರ। ಲುಳಿತಜಪಮಣಿವೇದಪಾಶಾಂಕುಶದ ಡಮರುಗದಾ॥ಲಲಿತಖಟ್ವಾಂಗದ ಕಪಾಲದ। ಹೊಳೆವಶೂಲದಕರದ ನಿಗಮಾವಳಿಶಿರೋಮಣಿ ಮೆರೆದನಂದೀಶಾನವಕ್ತ್ರದಲಿ ॥೭೩॥ ಬೇರೆಬೇರುರಿಗಣ್ಣುಗಳ ಪೂ । ತ್ಕಾರದಹಿಬಂಧದ ಜಟಾಕೋ । ಟೀರಭಾರದ ಮುಖಚತುಷ್ಟಯಭುಜಚತುಷ್ಟಯದಾ ॥ ವಾರಿಜಾಸನವಿಷ್ಣುರುದ್ರಾ । ಧಾರನೀಶ್ವರಪಂಚವಕ್ತ್ರಾ । ಕಾರದಲಿ ಶಿವ ಮೆರೆದ ಪಂಚಬ್ರಹ್ಮರೂಪದಲಿ ॥೭೪॥ ಶ್ರುತಿಗಳುಪನಿಷದಾದ್ಯಖಿಳದೇವತೆಯರಾಕಲ್ಪಿತಕಿರಾತಾ ಕೃತಿಯನುಳಿದರು ಸುಳಿದರೀಶನ ಸುತ್ತುವಳಯದಲಿ ॥ ಸ್ಮಿತಮಧುರಮುಖಕಾಂತಿಕಲ್ಲೋ । ಲಿತಕಟಾಕ್ಷಚ್ಛವಿಯಲೀಶನ । ಧೃತಿಯಲೀಡಿರಿದೆಡದಲೆಸೆದರು ಗೌರಿದೇವಿಯರು ॥೭೫॥ ಸನಕನಾರದ ಭೃಗುಪರಾಶರ। ತನುಜ ಭಾರದ್ವಾಜಗೌತಮ । ಮುನಿವಸಿಷ್ಠಸನತ್ಕುಮಾರನುಕಂಕನುಪಮನ್ಯು ॥ ವನಕೆ ಬಂದರು ಪಾರ್ಥಕೇಳಿದು । ನಿನಗೆ ಸಿದ್ಧಿಗಳೆಮಗೆ ಲೇಸಾ। ಯ್ತೆನುತ ಮೈಯಿಕ್ಕಿದುದು ಹರನಂಘ್ರಿಯಲಿ ಮುನಿನಿಕರ ॥೭೬॥ ಜಯಜಯೆಂದುದು ನಿಖಿಳಜಗವ । ಕ್ಷಯನ ದರುಶನಕೆಂದು ಸುತಿಕೋ। ಟಿಯ ಗಡಾವಣೆ ಗಾಸಿಯಾದುದು ಹರನ ಫುಲ್ಲಣೆಗೆ ॥ ನಿಯತವೇನೋ ಜನ್ಮಶತಸಂ । ಚಯದೊಳರರೆ ಕೃತಾರ್ಥನರ್ಜುನ। ಜಯವೆನಲು ಮೊಳಗಿದವು ಭೇರಿಗಳಮರಕಟಕದಲಿ ॥೭೭॥ಬಿಟ್ಟಸೂಟಿಯೊಳೆದ್ದುಹರುಷಕೆ। ಕೊಟ್ಟು ಮನವನು ನೋಡುತಿರ್ದನು।ನಟ್ಟದೃಷ್ಟಿಯೊಳುಗುವಜಲದಲಿ ರೋಮಪುಳಕದಲಿ॥ ಬಿಟ್ಟು ಹಿಡಿದನು ಹರನ ಕಾಣದೆ । ತೊಟ್ಟುರುಗೆಗಳ ರೋಮಹರುಷದ । ಲಿಟ್ಟೆಡೆಯ ಮೈದವಕದರ್ಜುನ ನಿಂದು ಬೆರಗಾದ ॥೭೮॥ ಹರಹಿನಲಿ ಹೊದರೆದ್ದ ಹರುಷದ। ಹೊರೆಳಿಯಲಿ ತೊಡಕರಿಸಿ ಚಿತ್ತವ। ತಿರುಹಿ ಹಿಡಿದನು ಮನಕೆ ಬುದ್ಧಿಯ ಹಮ್ಮುಹಮ್ಮುಗೆಯ ॥ ಕೊರಳುಗೊಳಿಸಿ ಕುಲಾಲಚಕ್ರದ । ಪರಿಭವಣಿಗೆಯ ಪಾಡಿನಲಿ ಕಾ । ತರಿಸುತವನಿಗೆ ಮೈಯನಿತ್ತನು ನೀಡಿ ಭುಜಯುಗವ ॥೭೯॥ ಕ್ಷಮಿಸುವುದು ಸರ್ವೇಶ ಸರ್ವೋ । ತ್ತಮ ವೃಥಾಸುಭಟಾಭಿಮಾನ । ಭ್ರಮಿತನನು ಮೋಹಾಂಧಕೂಪಜಲಾವಗಾಹದಲಿ ॥ ಸ್ತಿಮಿತನನು ದುರ್ಬೋಧವೇದ

ಭ್ರಮಿತನನು ಕಲ್ಯಾಣಪದನಿ । ರ್ಗಮಿತನನು ಕಾರುಣ್ಯನಿಧಿ ಕೈಗಾಯಬೇಕೆಂದ ॥೮೦॥ ಅರಿದರಿದು ಮತಿಗೆಟ್ಟಮಾನವ । ಕುರಿಯಲಾ ನೆರೆ ಕಂಡುಕಂಡೆಚ್ಚತ್ತರದ ಖೂಳನಲಾವಿವೇಕದಮೂಗುಮಾರಿಯಲಾ ॥ ಬರಿಮನದ ಬಾಹಿರನೊಳೆನ್ನಲಿ । ಮರೆವುದಪರಾಧವನು ನಿನ್ನನೆ । ಮೆರೆವುದೈ ಕಾರುಣ್ಯನಿಧಿ ಕೈಗಾಯ ಬೇಕೆಂದ ॥೮೧॥ ದೇವದೇವ ಕೃಪಾಂಬುನಿಧಿ ಭ । ಕ್ತಾವಲಂಬನ ಭಕ್ತದೇಹಿಕ । ಸೇವಕಪ್ರಿಯ ಭೂತಭಾವನ ಭಾವನಾತೀತಾ ॥ ದೇವವಂದಿತ ಕಾಲರೂಪ ಮಹಾವಿಭವ ಭವರಹಿತ ಪಾವನ । ಪಾವ ಕಾಂಬಕ ಸುತಿಕುಟುಂಬಕ ಕರುಣಿಸುವುದೆಂದ ॥೮೨॥ ಜಯ ಜಗತ್ತ್ರಯನಾಥ ಭಕ್ತಾ । ಶ್ರಯ ಸದಾ ಶಿವ ಭಕ್ತವತ್ಸಲ । ಲಯವಿಹೀನ ಮಹೇಶ ಮನ್ಮಥಹರ ಮಹಾದೇವಾ ॥ ಭಯರಹಿತ ಭಾಳಾಕ್ಷ ಲೋಕ । ವ್ಯಯಭವನ ದುರ್ಲಕ್ಷ ದೇವ । ತ್ರಯನಮಸ್ಕೃತ ನಿಗಮಸತ್ಕೃತ ಕರುಣಿಸುವುದೆಂದ ॥೮೩॥ ಸರ್ವಗತ ಸರ್ವಜ್ಞ ಸರ್ವದ । ಸರ್ವಭಾವನ ಸರ್ವತೋಮುಖ । ಸರ್ವಪೂಜಿತ ಸರ್ವಸಾಧಕ ಸರ್ವಗುಣನಿ ಲಯ ॥ ಸರ್ವಸರ್ವಾಶ್ರಯಸಮಾಹಿತ । ಸರ್ವಮಯ ಸರ್ವೇಶ್ವರೇಶ್ವರ । ಸರ್ವದುಃಖಾಪಹ ಮಹೇ ಶ್ವರ ಕರುಣಿಸುವುದೆಂದ ॥೮೪॥ ರೂಪರಹಿತ ಸರೂಪ ನಿರ್ಮಲ । ರೂಪ ವಿಶ್ವಾಧಾರ ಸದಸ । ದ್ರೂಪ ರೂಪ ವ್ಯೋಮರೂಪಕ ಸರ್ವತೋರೂಪಾ ॥ ರೂಪರಸಗಂಧಾದಿವಿಷಯವಿ । ರೂಪ ರೂಪಾತೀತ ಸಂವಿ । ದ್ರೂಪ ವಿಮಲವಿರೂಪಲೋಚನ ಕರುಣಿಸುವುದೆಂದ ॥೮೫॥ ರಚಿತಮಾಯ ವಿಮಾಯ ಮಾಯಾ । ನಿಚಿತ ಮಾಯಾಧಾರ ಮಾಯಾ । ರುಚಿರ ಮಾಯಾರೂಪ ಮಾಯಾಮಯ ಜಗನ್ಮಾಯಾ ॥ ಶುಚಿ ಸತೇಜೋಬಲ ಹಿರಣ್ಯ । ಪ್ರಚಯತೇಜ ಸುತೇಜ ಗೌರೀ । ಕುಚಯುಗಾಂಕಿತವಕ್ಷನೀಕ್ಷಿಸಿ ಕರುಣಿ ಸುವುದೆಂದ ॥೮೬॥ ಪರಮಹಂಸ ಪರಾತ್ಮ ಪರಮೇ । ಶ್ವರ ಪರಬ್ರಹ್ಮೈಕವಿಗ್ರಹ । ಪರಮಶಿವ ಪರ ತತ್ತ್ವರೂಪ ಪರಾತ್ಪರಾನಂದಾ ॥ ಪರಮಗುಣ ಪರಶಕ್ತಿವಾಗೀ । ಶ್ವರ ಪರಾರ್ತಿಹರೇಶ ಪರಶಂ । ಕರ ಪರಂಜ್ಯೋತಿಯೆ ಪರೋತ್ತಮ ಕರುಣಿಸುವುದೆಂದ ॥೮೭॥ ಲಿಂಗಮಯ ನಿರ್ಲಿಂಗ ತೇಜೋ । ಲಿಂಗ ಲಿಂಗಾತ್ಮಕ ಸದಾಶಿವ । ಲಿಂಗನಿರ್ಮಳಲಿಂಗ ಲಿಂಗಸ್ಥಿತಮಹಾಲಿಂಗಾ ॥ ಲಿಂಗ ವಿಲಸಿತ ಲಿಂಗಚಿನ್ಮಯ । ಲಿಂಗ ಚೇತನ ಲಿಂಗದುರ್ಗ । ಲಿಂಗಿತಾಂಗವಿಲಾಸ ಶಂಕರ ಕರುಣಿಸುವುದೆಂದ ॥೮೮॥ ನಿರ ವಧಿಕ ನಿರ್ಮಾಯ ನಿಸ್ಪೃಹ । ನಿರುಪಮಿತ ನಿರ್ದ್ವಂದ್ವ ನಿರ್ಗುಣ ॥ ನಿರವಯವ ನಿರ್ಲೇಪ ನಿರವಗ್ರ ಹನಿರಾಧಾರ ॥ ನಿರುಪಮ ನಿರಾಮಯನಿರಂತರ । ನಿರವಶೇಷ ನಿರಂಗ ನಿರ್ಮಲ । ನಿರತಿಶಯ ನಿಷ್ಕಳ ಮಹೇಶ್ವರ ಕರುಣಿಸುವುದೆಂದ ॥೮೯॥ ವಾಮದೇವ ದುರಂತ ವಿಮಲ । ವ್ಯೋಮಕೇಶ ಕೃತಾಂತಪರ ನಿ । ಸ್ಸೀಮ ಮೃತ್ಯುಂಜಯ ಸಮಂಜಸ ಸರ್ವತೋಭದ್ರಾ ॥ ಭೀಮ ಭರ್ಗ ಕಪರ್ದಿ ಕಲ್ಪಿತ । ನಾಮ ರೂಪತ್ರಯ ವೃಷಧ್ವಜ । ಕಾಮಹರ ಕರುಣಾಮಹಾರ್ಣವ ಕರುಣಿಸುವುದೆಂದ ॥೯೦॥ ಹರಹರಾ ತ್ರೈಮೂರ್ತಿರೂಪನು । ಧರಿಸಿಯತುಳಮಹಾಷ್ಟಮೂರ್ತಿಯ । ಧರಿಸಿಯನುಪಮವಿಶ್ವಮೂರ್ತಿಯ ಧರಿಸಿ ರಂಜಿಸುವ ॥ ಪರಿಯನರಿವವರಾರು ದೇವಾ । ಸುರಮುನೀಶರಿಗರಿದು ಕೃಪೆಯಿಂ । ಕರುಣಿಸ ಲು ಬಂದೈ ಮಹಾದೇವೆಂದನಾಪಾರ್ಥ ॥೯೧॥ ದೇವಸುರದನುಜೇಶವಂದಿತ । ದೇವಮನುಮುನಿನಿಕರ ಪೂಜಿತ । ದೇವ ತತ್ತ್ವಾಕಾರ ಭಾವಿಪೊಡತಿನಿರಾಕಾರಾ ॥ ದೇವ ಸಾಕಾರದಲಿ ನಿಜಭ । ಕ್ತಾವಳಿಯನುದ್ಧ ರಿಪಶಿವ ಮಹಾದೇವ ಕರುಣಿಸಿದೈಯನಾಥಂಗೆಂದನಾಪಾರ್ಥ ॥೯೨॥ ಹರನೆ ಗಂಗಾಧರನೆ ಗಿರಿಜಾ । ವರ

ನೆ ಶಶಿಶೇಖರನೆ ದಕ್ಷಾಧ್ವರಹರನೆ ಶಂಕರನೆ ನಿಜಭಕ್ತರಮನೋಹರನೇ॥ಕರುಣಿಸುವುದುದ್ಧರಿಸುವುದು
ಸಂ । ಹರಿಸು ಮತ್ಪರಿಭವವನೆಂದುರು। ತರದಭಕ್ತಿಯಲಂದು ಸೈಗೆಡೆದಿರ್ದನಾಪಾರ್ಥ ॥೯೩॥ ಧರಣಿ
ಪತಿ ಕೇಳೀಶನೀತನ। ಹೊರೆಗೆ ಬಿಜಯಂಗೈದು ಪಾರ್ಥನ । ಶಿರವ ಹಿಡಿದೆತ್ತಿದನು ಬಿಗಿಯಪ್ಪಿದನು ಬರ
ಸೆಳೆದು ॥ ಮರುಳುಮಗನೆ ಮಹಾತಪಸ್ಸಂ । ಚರಣೆಯಲಿ ನೊಂದೆಯೆನುತ ಕಡು । ಗರುಣಿ ಕರುಣಾ
ಮೃತಸಮುದ್ರದೊಳದ್ದಿದನು ನರನ ॥೯೪॥ ಕೂಡೆ ಮೈದಡವಿದನು ಚೈಮುಂ । ಪಾಡಿದನು ಮನನೋ
ಯದಿರು ನೀ । ಮಾಡಿದುಪಹತಿಯೆಂಬುದೆಮಗರ್ಚನೆನಮಸ್ಕಾರ ॥ ಕೋಪದಿರು ಕೊಂಕದಿರು ಭಕ್ತಿಗೆ ।
ನಾಡೆ ಮೆಚ್ಚಿದೆನೆನ್ನ ಚಿತ್ತಕೆ । ಖೋಡಿಯಿಲ್ಲೆಲೆಮಗನೆ ಗುಹಗಣಪತಿಗಳಾಣೆಂದ ॥೯೫॥ ನರನು ನೀ
ಪೂರ್ವದಲಿ ಪೀತಾಂ । ಬರನ ವಿಮಲಾಂಶಪ್ರಸೂತನು। ಪರಮಋಷಿ ನೀನೆನ್ನ ಭಕ್ತನು ಚಿಂತೆಬೇ
ಡಿನ್ನು ॥ ವರದನಾದೆನು ಮಗನೆ ಶಸ್ತ್ರೋ । ತ್ಕರವನಿದನೀ ಮುನ್ನ ಕೊಳ್ಳೆಂ । ದುರುತರಪ್ರೇಮ
ದಲಿ ಕೊಟ್ಟನು ಖಡ್ಗಶರಧನುವ ॥೯೬॥ ಸಲಿಸುವೆನು ನೀ ಬೇಡಿದುದನಿ । ಸ್ಖಲಿತವಂಜದಿರಿನ್ನು ಸಾಕೆನೆ ।
ಸುಲಭನೀಭಕ್ತರಿಗೆ ಭಯವಿನ್ನೇಕೆ ನಮಗೆನುತ ॥ ಸಲಿಸು ಪಾಶುಪತಾಸ್ತ್ರವನು ವೆ । ಗ್ಗಳದಬೊಮ್ಮ
ಶಿರೋಸ್ತ್ರವನು ಕೈ । ಗೊಳಿಸುವುದು ಕೃಪೆಯುಳ್ಳೊಡೆಂದನು ನಗುತ ಕಲಿಪಾರ್ಥ ॥೯೭॥ ಸವೆಡಿನುಡಿ
ಯುಂಟೇ ಚತುರ್ದಶ । ಭುವನಪಾಹವದಕ್ಷವೀಬಾ । ಣವನು ಕೊಟ್ಟೆನು ಮಗನೆ ಬೊಮ್ಮಶಿರೋಮಹಾ
ಶರವ ॥ ದಿವಿಜದನುಜಭುಜಂಗಮಾದಿಗ । ಳವಗಡಿಸಲುರೆ ಹೆಚ್ಚುವುದು ಸಂ । ಭವಿಸದಾಹುತಿಯೆಂದು
ಶರವುದ್ದಂಡಬಲವೆಂದ ॥೯೮॥ ಸರಸಿಯಲಿ ಮಿಂದಾಚಮನವಿ । ಸ್ತರಣೆಯೆಲ್ಲವ ಮಾಡಿ ಶೂಲಿಯ ।
ಚರಣದಲಿ ಮೈಯಿಕ್ಕಿ ನಿಂದನು ಭಾವಶುದ್ಧಿಯಲಿ ॥ ಸರಳಸಾಂಗೋಪಾಂಗಮಂತ್ರೋ । ಚ್ಚಾರಣಸಂ
ಹೃತಿಮೋಕ್ಷವನು ವಿ । ಸ್ತರಿಸುತ ರಹಸ್ಯದಲಿ ಕೊಟ್ಟನು ಪಾಶುಪತಶರವ ॥೯೯॥ ಜಗವುಘೇಯೆಂದು
ದು ಜಯಧ್ವನಿ । ಗಗನದಲಿ ಗಾಡಿಸಿತು ಹೂವಿನ । ಮುಗುಳಸರಿಮಳೆ ಸುರಿದುದೀಶ್ವರನಂಘ್ರಿಕಮಲ
ದಲಿ ॥ ಥಗೆಯತಳಿ ಮುರಿದುದು ಮನೋರಥ । ದಗಳು ತುಂಬಿತು ನರನ ಮನಬು । ದ್ಧಿಗಳು ನೆರೆಸಿಲು
ಕಿತ್ತು ಹರಷೋತ್ಸವದ ದಾಳಿಯಲಿ ॥೧೦೦॥ ಹರನ ಕೋಮಲಪಾಣಿಕಮಲ । ಸ್ಪರುಶಪೀಯೂಷದಲಿ
ಮುಳುಗಿದ । ನರನ ತನು ನಿರ್ಮೋಕಮುಕ್ತಭುಜಂಗನಂದದಲಿ ॥ ಕಿರಣಲಹರಿಯ ಲಳಿಯ ದಿವ್ಯೋ ।
ತ್ಕರದ ಚಪಲಚ್ಛವಿಯ ಚಾರು। ಸ್ಫುರಣದಲಿ ಬೋಳೈಸಿದುದು ಸುರನರರ ಕಣ್ಮನವ ॥೧೦೧॥ ಸುರ
ಮುನೀಶರ ವೇದಮಂತ್ರೋ।ಚ್ಚಾರಣನಾದದ ಗರುಡಗಂಧ । ರ್ವರ ಮಹಾಸ್ತುತಿರವದ ತುಂಬುರನಾರ
ದಾದಿಗಳ ॥ ವರರಸಾನ್ವಿತಗೀತದೂರ್ವಶಿ । ಯರ ಸುನೃತ್ಯದ ದಿವ್ಯವಾದ್ಯದ । ಹರನ ಕರುಣಾಂಬು
ಧಿಯಲೋಲಾಡಿದನು ಕಲಿಪಾರ್ಥ ॥೧೦೨॥ ಧರೆಗೆಸೆವಧರ್ಮಾರ್ಥಕಾಮೋ । ತ್ಕರವನನುಪಮಮೋಕ್ಷ
ಪದವನು। ಧುರದೊಳಹಿತರ ಗೆಲುವಶೌರ್ಯೋನ್ನತಿಯ ಸಾಹಸವ ॥ ಕರುಣಿಸಿದನಪ್ಪಿದನು ಕರೆದನು ।
ಗಿರಿತನುಜೆ ನೀನುದ್ಧರಿಪುದೀ । ಪರಮಭಕ್ತನನೆನಲು ಕರುಣದೊಳೀಕ್ಷಿಸಿದಳಗಜೆ ॥೧೦೩॥ ಗಿರಿಜೆ ತ್ರಿಜ
ಗನ್ಮಾತೆ ರಕ್ಷಿಸು । ಪರಮಕರುಣಾಮೂರ್ತಿ ಜಗದೊಳು । ಸಿರಿ ಸರಸ್ವತಿ ಚಂಡಿ ದುರ್ಗಿಯರೆಂಬ
ನಾಮದಲಿ ॥ ಚರಿಸುತಿಹನಿನ್ನೇಕಮೂರ್ತಿಯ । ಪರಿಯನರಿವವರಾರೆನುತ ತ । ಚ್ಚರಣಯುಗಳಕ್ಕೆ
ರಗಿ ಪುಳಕಿತನಾದನಾಪಾರ್ಥ ॥೧೦೪॥ ಕಂಜನಾಭನಮೈದುನನೆ ಬಾ । ಅಂಜದಿರುನಿನಗಾಂತರಿಪುಗಳ ।

ಭಂಜಿಸುವಸಾಮರ್ಥ್ಯದನುವನು ತಿಳಿದು ರಂಜಿಸುವ ॥ ಅಂಜನಾಸ್ತ್ರವನಿತ್ತ ಮಗನೆ ಧ। ನಂಜಯನೆ ನಿನಗೆನುತ ಕರುಣದಿ। ಮಂಜುಳಾರವದಿಂದ ತಚ್ಛಸ್ತ್ರವನು ಬೆಸಸಿದಳು ॥೧೦೫॥ ಒಂದುದಶಶತಸಾವಿರದಹೆಸ । ರಿಂದ ಲಕ್ಷವುಕೋಟಿಯರ್ಗಣಿತ । ದಿಂದ ನಿನಗಾಂತದಟರಿಪುಗಳ ತಿಂದು ತೇಗುವುದು ॥ ಬಂದು ಬೆಸನನು ಬೇಡುವುದು ತಾ। ನೊಂದುಶರರೂಪಾಗೆನುತಮುದ। ದಿಂದವರಮಂತ್ರೋಪದೇಶವನಿತ್ತಳರ್ಜುನಗೆ ॥ ಕರಿಮುಖನ ಷಣ್ಮುಖನ ಚರಣ । ಕ್ಕೆರಗಿ ನುತಿಸ್ತುತಿರಲು ಪಾರ್ಥನ , ಪರಮಭಕ್ತಿಗೆ ಮೆಚ್ಚಿ ತೆಗೆದಪ್ಪಿದರು ಕರುಣದಲಿ ॥ ವರಮಹಾಸ್ತ್ರಂಗಳನು ಮಂತ್ರೋ । ತ್ಕರವನವರೊಲಿದಿತ್ತಗೆಲು ನೀ । ಧುರದೊಳಹಿತರನೆಂದು ಹರಸಿದರಾಧನಂಜಯನ ॥೧೦೭॥ ಸರಳ ಸಾಂಗೋಪಾಂಗವನು ನಿನ । ಗರುಹಿದೆನು ನೀನಿನ್ನು ಶಕ್ರನ । ಪುರಕೆ ನಡೆ ನಿಮ್ಮುತ್ತರೋತ್ತರಕಾರ್ಯಗತಿಗಳಿಗೆ ॥ ಪರಿಸಹಾಯನು ನಮ್ಮಸತ್ವದ । ಪರಮರೂಪಾತ್ತನುಕಣಾ ನೀ । ನರದಿರೆಂದು ಮಹೇಶ ಬೀಳ್ಕೊಟ್ಟನು ಧನಂಜಯನ ॥ ನಿಮ್ಮ ಕಥೆ ವೇದೋಕ್ತವಾಗಲಿ । ನಿಮ್ಮ ಚರಿತ ಸುಚರಿತವಾಗಲಿ । ನಿಮ್ಮ ಕಥನಾಮೃತವನಾಲಿಸಿ ಕೇಳ್ದರಘ ಕೆಡಲಿ ॥ ನಿಮ್ಮ ನಿಂದಿಸುವವರುಗಳು ದು । ಷ್ಕರ್ಮಿಗಳು ಪಾತಕರು ತಾನಿದು ನಮ್ಮ ಮತವೆಂದಭವ ಹರಸಿದನಾಧನಂಜಯನ ॥ ದೇವಿಯರು ಗುಹಗಣಪಮುಖ್ಯಗ । ಣಾವಳಿಗೆ ಪೊಡಮಟ್ಟನವರ ಕೃ । ಪಾವಲೋಕನದಿಂದ ಹೊಂಪುಳಿವೋದನಡಿಗಡಿಗೆ ॥ ದೇವ ಬಿಜಯಂಗೈದ ರಜತ । ಗ್ರಾವಶಿಖರಕೆ ಮನದೊಳಗೆ ಸಂ । ಭಾವಿಸಿದನೀವೀರನಾರಾಯಣನಮೈದುನನ ॥೧೧೦॥

ಅಂತು ಸಂಧಿ ೬ ಕ್ಕೆ ಪದ ೩೧೮ ಕ್ಕಂ ಮಂಗಳಮಸ್ತು.

---

## ಏಳನೆಯ ಸಂಧಿ.

ಸೂ॥ ಹರನ ಪಾಶುಪತಾಸ್ತ್ರಲಾಭೋ । ತ್ಕರುಷಹರ್ಷೋತ್ಸವದಲಿಂದ್ರನ ।
ಪುರವ ಹೊಕ್ಕನು ಪಾರ್ಥನೆಸೆದನು ಶಕ್ರತೇಜದಲಿ ॥

ಕೇಳು ಜನಮೇಜಯಧರಿತ್ರೀ । ಪಾಲ ವರಕೈಲಾಸವಾಸಿಯ । ಬೀಳುಗೊಂಡನು ತದ್ವಿಯೋಗದಲಿಂದ್ರಕೀಲದಲಿ ॥ ಮೇಲುದುಗುಡದಲಸ್ತ್ರಲಾಭವ । ನಾಲಿಸದೆ ಶಂಕರಪದಾಂಬುಜ । ದೋಲಗದ ಸಿರಿ ತಪ್ಪಿತೆನುತುಮ್ಮಳಿಸಿದನು ಪಾರ್ಥ ॥೧॥ ಮರುಳ ದೇವಾರ್ಚನೆಯೊ ಕನಸಿನಸಿರಿಯೊ ಶಿಶುವಿನ ಕೈಯರತ್ನವೊ । ಪರಿಯಹೂವಾಲೆಯೊ ಮದೀಯವಿವೇಕವಿಭ್ರಮವೋ ॥ ಹರನನೀಚರ್ಮಾಕ್ಷಿಯಲಿ ಗೋ । ಚರಿಸೆ ಬೇಡಿದುದಂಬು ಮರ್ತ್ಯದೊ । ಳಿರವು ಮಝುಭಾಪೆನ್ನ ಪುಣ್ಯಾವೆನುತ್ತ ಬಿಸುಸುಯ್ದ ॥೨॥ ಅರಸ ಕೇಳದ್ಭುತವನಿತ್ತಲು। ಚರಮದಿಗ್ಭಾಗದಲಖಿಳಜಲ। ಚರನಿಕಾಯದ ಮುಂಗುಡಿಯಲಿಕ್ಕಿಲದ ಫಣಿಕುಲದಾ ॥ ವರನದೀನದಕೋಟಿಗಳ ಸಾ। ಗರದ ಪರಿವಾರದಲಿ ಬಂದನು । ವರುಣನಮರೇಂದ್ರನ ಕುಮಾರನ ಕ್ರಾಂತವಕದಲಿ ॥೩॥ ವಿಕಟರಾಕ್ಷಸಯಕ್ಷಜನಗು।ಹ್ಯಕರು ಕಿನ್ನರಗಣಸಹಿತಪುಷ್ಪಕದಲೈತಂದನು ಧನೇಶ್ವರನಾತಪೋವನಕೆ ॥ ಸಕಲಪಿತೃಗಣಸಹಿತದೂತ । ಪ್ರಕರಧರ್ಮಾಧ್ಯಕ್ಷರೊಡನಂ। ತಕ

ನು ಬೆರಸಿದನಿಂದ್ರಕೀಲಮಹಾವನಾಂತರವ ॥೪॥ ಹಿಡಿದಸಾಲಿನ ಸತ್ತಿಗೆಯ ಬಲ । ನೆಡಕೆ ಕೆದರುವ
ಸೀಗುರಿಯ ಮುಂ । ಗುಡಿಯ ವಿದ್ಯಾಧರಮಹೋರಗಯಕ್ಷರಾಕ್ಷಸರ ॥ ಜಡಿವಕಹಳಾರವದ ನೆಲನು । ಗ್ಗ
ಡಣೆಗಳ ಕೈವಾರಿಗಳ ಗಡ । ಬಡೆಯ ಗರುವಾಯಿಯಲಿ ಗಗನದಿನಿಳಿದನಮರೇಂದ್ರ ॥೫॥ ಕಂಡನನಿಬ
ರ ಬರವನೊಲಿದಿದಿ । ಗೊಂಡನವರವರುಚಿತದಲಿ ಮುಂ । ಕೊಂಡು ಮನ್ನಿಸಿ ಮನವ ಪಡೆದನು
ಲೋಕಪಾಲಕರ ॥ ಖಂಡಪರಶುವಿನಸ್ತ್ರವನು ಕೈ । ಕೊಂಡೆನಿನಗೇನರಿದು ನೀನು । ದ್ದಂಡಬಲನೆಂದನಿಬ
ರುಪಚರಿಸಿದರು ಫಲುಗುಣನ ॥೬॥ ಆಮಹಾಸ್ತ್ರಕೆ ಬಳುವಳಿಯ ಕೊ । ಳ್ಳೀಮದೀಯಾಸ್ತ್ರವನೆ
ನುತ ಸು । ತ್ರಾಮನಿತ್ತನು ದಿವ್ಯಬಾಣವನಿಂದ್ರಸಂಜ್ಞಕವ ॥ ಸಾಮವರ್ತಿಕದಂಡವಾರುಣ ।
ತಾಮಸದ ಸಮ್ಮೋಹನನಿವೆಂ । ದಾಮಹಾಂತಕವರುಣಧನದರು ಕೊಟ್ಟರಂಬುಗಳ ॥೭॥ ಎಲೆಧ
ನಂಜಯ ನಿನಗಿದೇನ । ಗ್ಗಳದ ಶರವೇ ನಿನ್ನ ಭಕ್ತಿಗೆ । ಸಿಲುಕಿದನು ಶಿವನಾತನಂಬಿದೆ ನಿನ್ನ ಸೀಮೆ
ಯಲಿ ॥ ಸುಲಭ ನಿನಗಿಂದಮಳಲಕ್ಷ್ಮೀ । ನಿಲಯ ನೀನೇಪೂರ್ವದಲಿ ನಿ । ರ್ಮಲಿನನರಋಷಿ
ಯೆಂಬ ಹಳಿ ತೆಗೆದಪ್ಪಿದನು ಮಗನ ॥೮॥ ಕೃತತಪಸ್ಸಿಂ ಭಿನ್ನಭೇದ । ಕ್ಷತಶರೀರವ್ಯಥೆಯನಮರಾ
ವತಿಯೊಳಗೆ ಕಳೆ ರಥಸಹಿತ ಕಳುಹುವೆನು ಮಾತಲಿಯ ॥ ಕ್ರತುಶತದ ಕೈಗಾಣಿಕೆಯ ದೀ । ಕ್ಷಿತರ
ಗರಿಯಂತರವ ಮನವಾ । ರತೆಯವೆಂತುಟೊ ಕಾಣಬೇಹುದು ಪಾರ್ಥನೀನೆಂದ ॥೯॥ ಹೈಪಸಾದವು ನೊ
ರುಯಜ್ಞದ । ಮ್ಮೋಹನಾಡನು ಮೆಟ್ಟಲೆಮ್ಮೊ । ಊಹೆಗಳಿಗಳವಡುವದೊಲ್ಲೆವೆ ನಿಮ್ಮ ಕರುಣದಲಿ ॥
ಐಹಿಕದಲಾಮುಷ್ಮಿಕದ ಸಂ । ಸಾಹಸ ಸಂಭವಿಸುವುದೆ ನಿಷ್ಪ್ರ । ತ್ಯೂಹಪೆಂದೆರಗಿದನು ಫಲುಗುಣನಿಂದ್ರ
ನಂಘ್ರಿಯಲಿ ॥೧೦॥ ಬೀಳುಕೊಟ್ಟನು ನರನನೀದಿ । ಕ್ಪಾಲರಂತರ್ಧಾನದೊಡನೆ ಸ । ಮೇಳರಾದರು
ಶಕ್ರಸಾರಥಿ ಸುಳಿದನಭ್ರದಲಿ ॥ ಜಾಳಿಗೆಯ ಮಣಿವೆಳಗುಗಳ ವ್ಯಾ । ಹಾಳಿಗಳ ವೈಡೂರ್ಯದೀಪ್ತಿನಿ ।
ವಾಳಿಗಳ ಸುಪತಾಕೆ ಬೆಳಗುವಹೇಮರಥಸಹಿತ ॥೧೧॥ ಅರಸ ಕೇಳ್ಕೈ ಹತ್ತುಸಾವಿರ । ತುರಗನಿಕರದ
ಲಳಿಯದಿವ್ಯಾಂ । ಬರದ ಸಿಂಧದ ಸಾಲಸತ್ತಿಗೆಗಳ ಪತಾಕೆಗಳ ॥ ಖರರುಚಿಯ ಮಾರಾಂಕವೋ ಸು
ರ । ಗಿರಿಯ ಸೋದರವೋ ಮೃಗಾಂಕನ । ಮರುದಲೆಯೊ ಮೋಣೆನಲು ರಥ ಹೊಳೆದಿಳಿದುದಂಬರದಿ
॥೧೨॥ ಏನಿದಚ್ಚರಿ ಮೇಲೆಮೇಲೆ ನ । ವೀನದರ್ಶನವೆನ್ನ ಪುಣ್ಯಾ । ಸ್ಥಾನವೈಸಲೆಯೆನುತ ನರನಿದಿರಾದ
ನಾರಥಕೆ ॥ ನೀನಹೈ ಕಲಿಪಾರ್ಥನೆಂಬಮ । ಹಾನರೇಶ್ವರನೆನುತ ಮಿಗೆ ಸುಸ್ಮಾನಿಸುತ ಸುರಪತಿಯ ಸಾ
ರಥಿ ನಿಲಿಸಿದನು ರಥವ ॥೧೩॥ ಲಲಿತಹೇಷಾಧ್ವನಿಯ ಹಯಮಂ । ಡಲದ ಮೌಳಿಯ ಮೇಲುದಾಯದ ।
ಲುಳಿಯ ಚೀತ್ಕೃತಿರವದ ಪಲಪಲತೆರದ ಫಳಹರದಾ ॥ ಚಲತುರಗಖುರಹತಿಯ ರಭಸೋ । ಚ್ಚಲಿತ
ಧೂಳೀಧೂಸರದ ರಥ । ದೊಳಗೆ ನಿಂದಾಶಕ್ರಸಾರಥಿ ನುಡಿಸಿದನು ನರನ ॥೧೪॥ ಏಳು ಫಲುಗುಣಹರಿ
ವರೂಥದ । ಮೇಲೆ ಬಿಜಯಂಗೈವಬಹಳಫ । ಲಾಳಿಯಿದೆಲಾ ನಿನ್ನ ಪುಣ್ಯಾದ್ರುಮದ ಬೇರೊಡೆದು ॥
ಸಾಲಕುರಿದರಿಹಿಗಳಕರ್ಮದ । ಕೂಲಿಗರ ಜಡಜಂಝುಪೂಗರ । ಜಾಲದವರನಿಮಿಷರ ಪುರಿ ವಶವಾ
ಯ್ತು ನಿನಗೆಂದ ॥೧೫॥ ಬಲ್ಲರಾರದನಶ್ವಮೇಧದ । ಮಲ್ಲರನು ಕೃತರಾಜಸೂಯರು । ಬಲ್ಲರೇ ಕಡೆ
ಬೀಡ ಕೋಟೆಯ ಗುಡಿಯ ಬೊಡ್ಡಿಯರಾ ॥ ಎಲ್ಲಿಯಮರಾವತಿ ನರಾಧಮ । ರೆಲ್ಲಿ ನಾವೀಶ್ವರನಕರು
ಣದ । ಭುಲ್ಲವಣೆಯಲಿ ಭಾಗ್ಯನೆಂದನು ನಗುತ ಕಲಿಪಾರ್ಥ ॥ ಎನುತ ತೇರಿನೊಳೊಂದುಕಾಲಿ । ಟ್ಟ

ನು ಧನಂಜಯನಿಂದ್ರಕೀಲದ । ವನಕೆ ಕೈಮುಗಿದೆರಗಿ ನುಡಿದನು ಮಧುರವಚನದಲಿ ॥ ಮುನಿಜನವೆ ಪರ್ವತವೆ ಪಂಕಜ । ವನವೆ ತರುಲತೆಗುಲ್ಮಖಗಮೃಗ । ವನಚರವೆ ನಾ ಹೋಗಿ ಬಹೆನೇ ನಿಮ್ಮನುಜ್ಞೆಯಲಿ ॥೧೭॥ ಎಂದು ರಥವೇರಿದನು ಪಾರ್ಥಪು । ರಂದರನ ಸಾರಥಿಗುಣೌಘವ । ನೊಂದುಸಾಲಗೆಯಿಂದ ಹೊಗಳಿದನಾಧನಂಜಯನಾ॥ಗೊಂದಣಾ ದವಾಘೆಗಳನೆಲ್ಲವ। ನೊಂದುಗೂಡಿ ಕಿರೀಟಿ ದೃಢವಾಗೆಂದು ಮೊತ್ತಲಿ ಚಪ್ಪರಿಸಿದನು ಚಪಲವಾಜಿಗಳ॥೧೮॥ಆವಜವವೇನೆಂಬಗತಿ ಮೇ । ಣಾವಧೃಢವೇಗಾಯ್ಲತನ ತಾ । ನಾವಸೂಟಿಯದಾರುಬಲ್ಲರು ವಹಿಲವಿವರಣವ ॥ ತೀವಿತಾಕಾಶವನು ಹೇಷಾ । ರಾವಸೂತ್ರನ ಹುಂಕೃತಿಧ್ವನಿ।ಯಿಾವಿಗಡರಥಚಕ್ರಚೀತ್ಕೃತಿ ಚಪಲನಿರ್ಘೋಷ॥೧೯॥ತೇರು ಮೇಲಕ್ಕಡರೆ ನುಡಿದನು । ಸಾರಥಿಗೆ ಕಲಿಪಾರ್ಥ ವಿವರಿಸು । ಧಾರಿಣಿಯಪರ್ವತಸಮುದ್ರದ್ವೀಪನದನದಿಯ ॥ ತೋರುವೀಲೋಕಂಗಳಳತೆಯ । ಸೂರಿಯನ ರಥಗತಿಯನೆಸೆವಾ । ಮೇರುವನು ಪಸರಿಸಿದಗಿರಿಗಳ ತಿಳಿಯ ಹೇಳೆಂದ ॥ ಧರೆಯಸಾಂತವರಾರು ಧಾರಿಣಿ । ಯಿರವದೇತರಮೇಲೆ ದಿಗ್ದೇ। ವರಪುರಂಗಳವೆಲ್ಲಿಹವು ಬೊಮ್ಮಾಂಡವೆನಿತಗಲ ॥ ಉರುತರಗ್ರಹರಾತಿಯಾಧ್ರುವ । ನಿರವು ಮೇಲೆನಿತೆನಿತುಯೋಜನ । ವರುಹೆನಲು ಪಾರ್ಥಂಗೆ ಮೊತ್ತಲಿ ನಗುತ ವಿವರಿಸಿದ ॥ ಕೇಳು ನೀನೆಲೆಪಾರ್ಥ ತಾರಾ । ವಳಿಗಳ ವಿವರವನು ರವಿರಥ।ಕಾಲಚಕ್ರವನೈದಿ ಗಗನಾಂಗಣದಿ ಚರಿಯಿಪುದು ॥ಲೀಲೆಯಿಂದಬುಜೋದರನು ಸಲೆ। ಪಾಲಿಸುವಲೋಕಗಳನೆಂದವ।ಶೂಲಿಯಂಘ್ರಿಯ ನೆನೆದು ಹೇಳಿದ ಭುವನಕೋಶವನು॥೨೨॥ಕೆಳಗಣಾಂಡಕಟಾಹ ತೊಡಗಿಯೆ।ಜಲವು ತುಂಬಿಹುದದರ ಘಾತವು। ತಿಳಿಯಲಿಪ್ಪತ್ತೈದುಕೋಟಿಯುಪವಣ ಪಡೆದಿಹುದು ॥ ಇಳೆಯದರಮೇಲೊಂದುಕೋಟಿಯ । ದಳದಲಿಹುದಲ್ಲಿಂದಮೇಲಣ। ದಳತೆಯದು ಚಪ್ಪನ್ನ ಕೋಟಿಯಜಾಂಡಪರಿಯಂತ ॥೨೩॥ ಹತ್ತಿರೆಯಲಿಹುದತಳವಲ್ಲಿಂ । ದತ್ತ ವಿತಳಸುತ್ರಳತಳಾತ್ರಳ । ದೊತ್ತಿನಮಹಾತ್ರಳ ರಸಾತಳ ಕೆಳಗೆಪಾತಾಳ॥ಚಿತ್ತರದ ಲೋಕಂಗಳೇಳು ಧ। ರಿತ್ರಿಯೊಳಗೊಂದೊಂದದರಂತರ । ಹತ್ತುಹತ್ತುಸಹಸ್ರಯೋಜನ ಪಾರ್ಥ ಕೇಳೆಂದ ॥೨೪॥ ಉತ್ತಮವು ಭೂಲೋಕವಲ್ಲಿಂ ದತ್ತಭುವಸುವಲೋಕವಲ್ಲಿಂ । ದತ್ತ ಮಹಜನಲೋಕವಲ್ಲಿಂದತ್ತ ತಪಲೋಕ ॥ ಉತ್ತಮೋತ್ತಮವಿವಕೆ ಮೇಲಣ । ಸತ್ಯಲೋಕಾದಿಗಳ ನೋಡಿ ಧ । ರಿತ್ರಿಯಲಿ ಬಲುಗಾಹ ಕೊಟ್ಟನು ಲೋಕಪಾಲಕರ ॥೨೫॥ ತರವಿಡಿದಮೇಲಣಜಗಂಗಳು । ತರಣಿಮಂಡಲತೊಡಗಿಯತಿವಿ । ಸ್ತರವೆನಿಸಿ ಬೊಮ್ಮಾಂಡಪರಿಯಂತಡಕಿಲಾಗಿಹವು ॥ ಮರುತನಾಧಾರದಲಿ ಲಕ್ಷ್ಮೀ । ಕರವೆನಿಸಿ ದೇವರುಗಳಿಂದವೆ । ಭರಿತವಾಗಿಹವವರ ಮಹಿಮೆಯ ಹೇಳಲರಿದೆಂದ ॥೨೬॥ ಧಾರುಣಿಯನಹಿತಾಳ್ದನಾತನ । ವೀರಕಮಠನು ಹೊತ್ತನನಿತರ। ಭಾರವನು ನಿಜಶಕ್ತಿ ಧರಿಸಿಹಳೊಂದುಲೀಲೆಯಲಿ ॥ ತೋರಗಿರಿಗಳುಮೆರೆಸಿದಿಳೆತಾ । ನೀರೊಳದ್ದುವುದೆಂದು ಸಲೆ ಮದ । ವಾರಣಂಗಳು ಧರಿಸಿಕೊಂಡಿಹವೆಂಟುದಿಕ್ಕಿನಲಿ ॥೨೭॥ ಧರಣಿ ತಾನೈವತ್ತುಕೋಟಿಯ । ಹರಹು ಸಪ್ತಸಮುದ್ರಹೊರಗಾ । ವರಿಸಿ ಜಂಬೂದ್ವೀಪ ನಡುವಿಹುದಲ್ಲಿ ಭದ್ರಾಶ್ವ ॥ ವರುಷಭಾರತಕೇತುಮಾಲವು । ಕುರುವರುಷವಿವು ಪತ್ರವಾಸುರ । ಗಿರಿಯ ಹೊರಗಾಗಿಹವು ಕರ್ಣಿಕೆಯಂತೆಕನಕಾದ್ರಿ ॥೨೮॥ ಲೆಕ್ಕದೊಳು ಹದಿನಾರುಸಾವಿರ। ಮಿಕ್ಕವಸುಧೆಯೊಳಾಳುಗೋಲದು । ಮಿಕ್ಕಚೌರಾಶೀತಿಸಾಸಿರಯೋಜನದ ನಿಲವು ॥ ಲೆಕ್ಕಿಸಲು ಗಿರಿಶಿಖರದಗಲವ । ದಕ್ಕು

ಮೂವತ್ತೆರಡುಸಾವಿರ । ದಿಕ್ಕಿನೊಡೆಯರಿಗೆಂಟುಪಟ್ಟಣವದರವೋಲಿಹವು ॥೨೯॥ ನಡುವೆ ಚತುರಾ ನನನ ಪಟ್ಟಣ । ದೆಡೆದೆರವು ಹದಿನಾರುಸಾವಿರ । ಕಡುಚಲುವಿನಿಂದೆಸೆವಮಿಸುನಿಯಕೋಟೆ ನವರತ್ನ॥ ಎಡೆಗೆಡೆಗೆಕೇವಣಿಸಿದಂಗಡಿ । ಗಡಣೆಯಿಲ್ಲದಹರ್ಮ್ಯನಿಚಯಕೆ । ಪಡಿ ಚತುರ್ದಶಭುವನದೊಳಗಿಲ್ಲೆ ನಿಸಿ ಮೆರೆದಿಹುದು ॥೩೦॥ ಹರಳುಗಳ ಕೇವಣದ ಮಂಗಳ । ಕರವೆನಿಪ ತೊಡಿಗೆಗಳ ದಿವ್ಯಾಂ। ಬರದಿ ಬೆಳಗುವತನುಲತೆಯ ನವಮಣಿಯ ಮೌಳಿಗಳಾ ॥ ತರಳಲೋಚನೆಬಿಂದುವದನದ । ಪರಮಸೌ ಭಾಗ್ಯದ ವಿಲಾಸದ । ಪರಿಜನಂಗಳು ಕಮಲಭವಪುರದಲ್ಲಿ ನೆಲಸಿಹರು ॥೩೧॥ ಹಲವುನೆಲೆಚ ಲುವಿಕೆಗೆ ಸಲೆ ಹೊಂ । ಗಲಸ ಲೋಕಕೆ ವಿಲಸಹೇಮದ । ಕೆಲಸಗತಿಯಲಿ ಚಲುವೆನಿಸಿದು ಪ್ಪರಿಗೆ ನೋಳ್ಪರಿಗೆ ॥ ಹೊಳಹಿನಲಿ ಥಳಥಳಸುತಿಹುದಾ । ನಳಿನಪೀಠನ ಭವನ ಸಭದಿಂ । ದಿಳಿ ವಗಂಗೆಯ ಧಾರೆ ಮೆರೆವುದು ಪುರದ ಬಾಹೆಯಲಿ ॥೩೨॥ ಮೇರೆಯಿಲ್ಲದದೇವತತಿಗಳ । ಭಾ ರದಿಂ ಜಗ ಜರಿವುದೆಂದಾ । ಮೇರುವಿಂಗಾನಿಸಿದರಜತಸ್ತಂಭವೋ ಮೇಣು ॥ ಸಾರತರಸುಕೃತ ವನು ಸಂಚಿಸಿ । ಧೀರರೈದುವಸತ್ಯಲೋಕದ। ದಾರಿಯೆಂಬಂದದಲಿ ಗಂಗೆಯಧಾರೆಮೆರೆ ದಿಹುದು ॥೩೩॥ ನರಸುರರುಮೊದಲಾದಸಚರಾ । ಚರಬ ಜೀವರಘಂಗಳನು ಸಂ । ಹರಿಸಲೋಸುಗ ಸತ್ಯಲೋಕಟನಿಳಿ ದು ಬಹಗಂಗೆ॥ ಧರೆ ಧರಿಸಲರಿದೆಂಮು ಕನಕದ। ಗಿರಿಯಶಿಖರದನಡುವೆ ಬರುತಿಹ। ಪರಮಪಾವನೆ ತಿರುಗಿ ಹರಿದಳು ನಾಲ್ಕುಮುಖವಾಗಿ॥೩೪॥ ಅಳಕನಂದೆ ಸುಚಕ್ಷುನಿರ್ಮಲ। ಜಲಜಭದ್ರೆಯು ಸತ್ಯೆಯೆಂಬಿವು। ತಿಳಿಯೆ ದಕ್ಷಿಣವಾದಿಯಾಗಿ ಪ್ರದಕ್ಷಿಣಾರ್ಥದಲಿ ॥ ಸುಳಿದು ಮೇರುವಿನಿಂದ ಕುಲಗಿರಿ । ಗಿಳಿದು ಜಾಹ್ನವಿ ನಾಲ್ಕುದಿಕ್ಕಿನ । ಜಲನಿಧಿಯ ಬೆರಸಿದಳು ಕೇಳ್ಜಗದಘವನಪಹರಿಸಿ ॥೩೫॥ ಸುರಗಿರಿಯ ಮೊದಲಲ್ಲಿ ಕೀಲಕ । ಗಿರಿಯ ನಾಲ್ಕವರಲ್ಲಿ ಕೇಸರ । ಸರಸಿನಾಲ್ಕರುಣೋದೆ ಭದ್ರೆ ಸಿತೋದೆ ಮಾನ ಸದಾ॥ ಹೊರಗೆ ನಾಲ್ಕುದ್ಯಾನಕೀಲಕ। ಗಿರಿಯುದಯವೈವತ್ತುಯೋಜನ।ಹರಹು ತಾನು ಸಹಸ್ರಯೋ ಜನವದರಶಿಖರದಲಿ ॥೩೬॥ ಸುರಪತಿಯ ದಿಕ್ಕಿನಲಿ ಬೆಳೆದಿಹ । ದರಳಿಜಂಬೂವೃಕ್ಷ ತೆಂಕಲು । ಹಿರಿದೆ ನಿಪತನಿವಣ್ಣರಸ ನದಿಯಾಗಿ ಹರಿದಿಹುದು ॥ ವರುಣನಿಹದೆಸೆಯಲಿ ಕದಂಬವು । ಹರಸಖನ ದಿಕ್ಕಿನಲಿ ವಟಕುಜ । ಸುರರಿಗಾಶ್ರಯವೆನಿಸಿ ಕೀಲಕಗಿರಿಯವೋಲಿಹುದು ॥೩೭॥ ಮಂದರಾಚಲ ಮೂಡ ತೆಂ ಕಲು । ಗಂಧಮಾದನ ವಿಮಳಪಶ್ಚಿಮ । ದಿಂದ ಬಡಗ ಸುಪಾರ್ಶ್ವವೆಂಬಿವು ಕೀಲಕಾದ್ರಿಗಳು ॥ ನಂ ದನವು ಬಡಗಣದು ಪಡುವಣ । ಚಂದವಹವೈಭ್ರಾಜ ತೆಂಕಲು । ಗಂಧಮಾದನ ಚೈತ್ರರಥ ಮೂಡ ಣದು ಕೇಳೆಂದ ॥೩೮॥ ಶೀತಳಾಂತಕಕುಂಡ ಮಳಯ ಕು । ರಾತ್ರಿವೈರಂತಕವು ಮೂಡಲು । ನೀತಿವಿ ದನೆ ತ್ರಿಕೂಟ ಶಿಶಿರಪತಂಗರುಚಿ ನಿಷಧ ॥ ಖ್ಯಾತವಿವು ತೆಂಕಣದ ಕಪಿಲನ । ಜಾತಿವಾರಿಧಿಗಂಧಮಾ ದನ । ತಾತವಿವು ಸುಖವಾಸಮಿಗೆ ವೈಡೂರ್ಯಪಶ್ಚಿಮದಿ ॥೩೯॥ ನಾಗಕಾಲಾಂಜನವು ಹಂಸನು । ಮೇಗೆ ವೃಷಭನು ಶಂಖಕೂಟವ । ನೀಗಳೀಕ್ಷಿಸು ಬಡಗಲೆಕ್ಕಕೆನಾಲ್ಕುವನು ಬಳಿಕ ॥ ಮೇಗೆ ಕೇಳೀರ್ಕ್ಕೈ ದುದೆಸೆಗಳ। ಲಾಗಿರಿಯ ಹೊರಗಿಹರು ಸುರಜನ। ಯೋಗಿಸಿದ್ಧನಿಷೇವಿತರು ತಾವಾಗಿ ವಿಭವದಲಿ ॥೪೦॥ ಧಾರಿಣಿಯ ನಡುವಳಸಿ ಬೆಳೆದಿಹ । ಮೇರುಗಿರಿಯನು ಬಳಸಿ ವೃತ್ತಾ । ಕಾರವಾಗೆಸೆದಿಹುದು ಜಂ ಬೂದ್ವೀಪನವಖಂಡ ॥ ಮೇರೆಯಾಗಿಹಗಿರಿಕುಲಂಗಳ । ತೋರದಗಲವದುನ್ನತಂಗಳ । ಸಾರಹೃದ ಯನೆ ನಿನಗೆ ಕಲಿಮಲದೂರ ತಿಳುಹುವೆನು ॥೪೧॥ ಕುರುಹಿರಣ್ಮಯರಮ್ಯಕವು ಸುರ । ಗಿರಿಯನೊಳ

ಕೊಂಡಿಪ್ಪಿಳಾವೃತ । ಹರಿವರುಷಕಿಂಪುರುಷಭಾರತವೃತ್ತರಾದಿಗಳು ॥ ಪಿರಿಯಶೃಂಗಶ್ವೇತನೀಲದ
ಗಿರಿನಿಷಧವಾಹೇಮಕೂಟದ । ಗಿರಿ ಹಿಮಾಲಯವಾಗಪರಜಲಧಿಯನು ಮುಟ್ಟಿಹವು ॥೪೨॥ ಸುರಗಿ
ರಿಯಬಳಸಿಪ್ಪಿಳಾವೃತ । ವರುಷದಿಂದವೆ ಮೂಡಲೊಪ್ಪುವ । ಪಿರಿಯಗಿರಿಮಾಲ್ಯವತ ಜಲನಿಧಿತನಕ
ಭದ್ರಾಶ್ವ ॥ ವರುಷ ಪಡುವಣ ಗಂಧಮಾದನ । ಗಿರಿತೊಡಗಿಯಾಪಶ್ಚಿಮಾಶಾ । ಶರಧಿಪರಿಯಂತಿ
ಪ್ಪವರುಷವು ಕೇತುಮಾಲವದು ॥೪೩॥ ವರುಷಮಧ್ಯದ ಪರ್ವತಂಗಳ। ಹರಹು ತಾನೆರಡೆರಡುಸಾವಿ
ರ । ವರುಷನವನವನವಸಹಸ್ರವದಾರುಮಧ್ಯದಲಿ ॥ ವರುಷವದು ಮೂವತ್ತನಾಲ್ಕರ । ಪರಿಗಣಿತ ಮೂ
ಡಣದು ಪಡುವಣ । ದೆರಡು ತಾನದರಂತೆ ಮೆರೆವುದು ಹೊರಗೆ ಲವಣಾಬ್ಧಿ ॥೪೪॥ ದೇವಕೂಟದ ಜ
ಠರವೆಂಬಿವು । ಭಾವಿಸಲು ಮಾಲ್ಯವತದಿಕ್ಕೆಲ । ನಾವಿಧದಿ ಕೈಲಾಸಪರ್ವತ ಗಂಧಮಾದನವು ॥ ಕೋ
ವಿದನೆ ಕೇಳ್ಭೂಮಿವಲಯದೊ । ಳಾವಿಶಾಲದ ಪಾರಿಯಾತ್ರದ । ದೇವಯೋಗ್ಯದ ಗಿರಿಗಳಿಕ್ಕೆಲನಿಷಧ
ಪರ್ವತಕೆ ॥೪೫॥ ನೀಲಗಿರಿಯಿಕ್ಕೆಲಕೆ ವಾರಿಧಿ । ವೇಲೆ ನಿಷ್ಪ್ರತಿಶೃಂಗವಿವು ವ್ಯ। ನೀಳದಲಿ ಪೂರ್ವಾ
ಪರದ ಜಲನಿಧಿಯ ಮುಟ್ಟಿಹವು ॥ ಹೇಳಿದೆಂಟುಪಪರ್ವತಾಗ್ರವಿ । ಶಾಲ ತಾನೆಂಭತ್ತುಯೋಜನ।
ಕೇಳಿಳಾವೃತವೇಲೆಯಾಗಿಹಗಿರಿಯಲೆಕ್ಕವನು ॥೪೬॥ ವರುಷದೊಡೆಯನಿಳಾವೃತಕೆ ಸಂ । ಕರುಷಣ
ನು ಭದ್ರಾಶ್ವದೊಳು ಹಯ । ಶಿರನು ಹರಿವರುಷಕ್ಕೆ ನರಹರಿ ಕೇತುಮಾಲದಲಿ ॥ ಸಿರಿಯರಸ
ರಮ್ಯಕಕೆ ಮತ್ಸ್ಯನು । ಪಿರಿಯಕಮಠ ಹಿರಣ್ಮಯಕೆ ಕುರು। ವರುಷದಲ್ಲಿ ಮಹಾವರಾಹನು ಪಾರ್ಥ ಕೇ
ಳೆಂದ ॥೪೭॥ ರಾಮ ಕಿಂಪುರುಷಕ್ಕೆ ಭಾರತ । ಭೂಮಿ ನರನಾರಾಯಣನು ತಿಳಿ । ನಾಮಧಾರಕಹನು
ಮ ವಸುಧಾದೇವಿ ನಾರದನು ॥ ಆಮನು ಜಗಚ್ಚಕ್ಷು ಲಕ್ಷ್ಮೀ । ಪ್ರೇಮದಿಂ ಪ್ರಹ್ಲಾದ ನಿಜನಿ। ಸ್ಸೀ
ಮಭದ್ರಶ್ರವ ಸದಾಶಿವನಿವರು ಪಾಲಕರು ॥೪೮॥ ವರುಷವನು ಗಿರಿಗಳನು ಬಳಸಿಹ । ಪಿರಿಯಲವಣ
ಸಮುದ್ರ ತದನಂ । ತರದಿ ದ್ವೀಪಪ್ಲಕ್ಷವಿಕ್ಷುಸಮುದ್ರವಲ್ಲಿಂದ ॥ ಇರಲು ಶಾಲ್ಮಲವದರಹೊರಗಣ।
ಸುರೆಯಶರಧಿಯನೊಂದನೊಂದಾ । ವರಿಸಿ ಪರಿಭಾವಿಸಲು ತದ್ವಿಗುಣಂಗಳಾಗಿಹವು ॥೪೯॥ ತಿಳಿವೊ
ಡಾಸುರೆಯಿಂದ ಕುಶಘೃತ । ಜಲಧಿ ಕ್ರೌಂಚದ್ವೀಪವೆಂಬಿವ । ರಳತೆ ಗಿಮ್ಮಡಿಯಾಗಿ ದಧಿಯಸಮು
ದ್ರವಲ್ಲಿಂದ ॥ ಇಳೆಯಮೇಲೆಸೆದಿಪ್ಪಶಾಕದ।ಬಳಿಯ ದುಗ್ಧವಿದೊಂದನೊಂದನು।ಬಳಸಿಕೊಂಡಿಹವಬ್
ಜನಾಭನ ನಿಳಯವದನೋಡಾ ॥೫೦॥ ಚಲುವಿಕೆಗೆ ನೆಲೆಯೆನಿಸಿ ಮೆರೆವುದು। ಪಳಯವೆಂದೂಯಿಲ್ಲ ಲಕ್ಷ್ಮೀ।
ನಿಳಯನಿಹನನವರತ ಸುಳಿಯವು ಮೃತ್ಯುಮಾಯೆಗಳು ॥ ಬಳಕೆ ಸಲ್ಲದು ಕಲಿಯಕಾಲದ । ಹೊಲಬು
ಹೊದ್ದದು ಹರಿಯ ರೂಪನು । ತಳೆದಪುರವನು ಕ್ಷೀರವಾರಿಧಿ ಬಳಸಿಕೊಂಡಿಹುದು ॥೫೧॥ ಯೋಗಿಗ
ಳ ನೆಲೆವೀಡು ಬೊಮ್ಮದ ।ಸಾಗರವು ಸನಕಾದಿಮುನಿಗಳ । ಭೋಗಭೂಮಿಯನಂತವೆನಿಸಿದುಪನಿಷತ್ತು
ಗಳಾ ॥ ಆಗರವು ಮೂಲೋಕದರ್ಪಣ।ವಾಗಿದುಗ್ಧೋದಧಿಯೊಳೆಸೆವುದು। ಶ್ರೀಗಧೀಶನನಗರ ನೋಡಲೆ
ಪಾರ್ಥನೀನೆಂದ ॥೫೨॥ ನಳಿನನಾಭನ ದುಗ್ಧಶರಧಿಯ । ಬಳಸಿಕೊಂಡಿಹಪುಷ್ಕರದ ಹೊರ । ವಳೆಯ
ದಲಿ ಮೆರೆದಿಪ್ಪುದಾಸ್ವಾದೂದವಾರಾಶಿ ॥ ಇಳೆಗೆ ಕೋಟೆಯನಿಕ್ಕಿದಂತಿರೆ । ಬೆಳೆದಲೋಕಾಲೋಕಪ
ರ್ವತ । ತಿಳಿವೊಡಲ್ಲಿಂದತ್ತ ತಿಮಿರವಜಾಂಡಪರಿಯಂತ ॥೫೩॥ ಲಕ್ಕಜಂಬೂದ್ವೀಪವಾಪರಿ । ಲಕ್ಕ
ಲವಣಸಮುದ್ರನಾಲುಕು । ಲಕ್ಕದ್ವೀಪಪ್ಲಕ್ಷವಿಕ್ಷುಸಮುದ್ರವೊಂದಾಗಿ ॥ ಲಕ್ಕವೆಂಟುಸುಶಾಲ್ಮಲಿಯು

ಸುರೆ । ಲಕ್ಕಷೋಡಶಕುಶಪ್ಲುತಂಗಳು । ಲಕ್ಕಮೂವತ್ತೆರಡು ಕ್ರೌಂಚದ್ವೀಪ ದಧಿಗೂಡಿ ॥೫೪॥
ಲಕ್ಕತಾ ನರವತ್ತು ನಾಲ್ಕು । ಗಿಕ್ಕುಶಾಕ ಕ್ಷೀರಕೋಟಿಯ । ಲಕ್ಕವಿಪ್ಪತ್ತೆಂಟು ಪುಷ್ಕರಸುಜಲವೊಂ
ದಾಗಿ ॥ ಮಿಕ್ಕಕೋಟಿದ್ವಯದ ಮೇಲಣ । ಲಕ್ಕವೈವತ್ತಾರುಯೋಜನ । ವಕ್ಕು ಹೇಮದಭೂಮಿ
ಲೋಕಾಲೋಕಗಿರಿಸಹಿತ ॥೫೫॥ ಹತ್ತುಲಕ್ಕವು ಹೀನವಾಗಿ । ಪ್ಪತ್ತುಕೋಟಿತಮಂಧದೂರ್ವರೆ ।
ಸುತ್ತುವರೆ ಬಳೆದಿಹುದು ಗರ್ಭೋದಕದಪರಿಯಂತ ॥ ಇತ್ತಸುರಗಿರಿಯಿಂದ ಹಿಂದೆ । ಪ್ಪತ್ತುಕೋ
ಟಿಯ ಕೂಡಿ ನೋಡೆ ಧ । ರಿತ್ರಿತಾನೈವತ್ತುಕೋಟಿಯ ಲೆಕ್ಕನೋಡೆಂದ ॥೫೬॥ ವರುಷವೊಂಭತ್ತಾ
ಗಿಹುದು ವಿ । ಸ್ತರದಜಂಬೂದ್ವೀಪವೊಂದೇ । ವರುಷವೇಳಾಗಿಹವು ತಾಶರಸಂಖ್ಯೆಯದ್ವೀಪ ॥ ನಿರುತ
ಕಡೆಯದ್ವೀಪವೆಂಬುದು । ವರುಷವೆರಡಾಗಿರಲು ಮಾನಸ । ಗಿರಿಯದರಮೇಲಿಹುದು ಚಕ್ರದಕಂಬಿಯಂ
ದದಲಿ ॥೫೭॥ ವರುಷವೆರಡಾಗೊಪ್ಪುತಿಹವು । ಷ್ಕರದನಡುವಣಮಾನಸೋತ್ತರ । ಗಿರಿಯುದಯ
ವೈವತ್ತುಸಾವಿರ ಹರಹುತದ್ವಿಗುಣ ॥ ಪಿರಿದು ಪುಣ್ಯಶ್ಲೋಕ ಕೇಳಾ । ಗಿರಿಯುಶಿಖರದಮೇಲೆ
ದಿಗ್ದೇ । ವರಪುರಂಗಳು ಸಿರಿಗೆ ನೆಲೆವನೆಯೆನಿಸಿ ಮೆರೆದಿಹವು ॥೫೮॥ ಸುರಪನದುವೇ ಸ್ವರ್ಗಸಾರವು ।
ನಿರುತದಲಿ ಸಂಯಮಿನಿಯೆಂಬಾ । ಪುರವು ಕಾಲನ ನಗರಿ ತೆಂಕಲು ಪಶ್ಚಿಮಾದ್ರಿಯಲಿ ॥ ವರುಣ
ನದು ಶುದ್ಧವತಿ ಯಕ್ಷೇ । ಶ್ವರಗೆ ಸೇವಾಕಾಂತಿಮತಿ ಶಿಖಿ । ನಿರುತಿಮರುದೀಶಾನ್ಯರಿಗೆಯವರವರನಾ
ಮದಲಿ ॥೫೯॥ ಉರಗನಾಳಾಂಬುಜಕುಸುಮವೀ । ಧರಣಿ ಕರ್ಣಿಕೆ ಮೇರುಗಿರಿ ಕೇ । ಸರನಗಂಗಳು
ಬಳಸಿ ಕೇಸರದಂತೆ ಸೊಗಯಿಪವು ॥ ಸರಸಿರುಹಸಂಭವನು ಮಧ್ಯದೊ । ಳಿರಲು ಭೂತಲವೈದೆ ಮೆರೆ
ವುದು । ಸಿರಿ ಮಹಾವಿಷ್ಣುವಿನ ನಾಭೀಕಮಲದಂದದಲಿ ॥೬೦॥ ಧರೆಯ ವರ್ಷದ್ವೀಪಗಿರಿಗಳ । ಶರಧಿ
ಗಳ ಸುರಶೈಲದಗ್ರದ । ಹರಹಚತುರಾನನನಪಟ್ಟಣದಿರುವ ತಿಳುಹಿದೆನು ॥ ಸರಸಿರುಹಬಂಧುವಿನ ರಥ
ವಿಹ । ಪರಿಯ ಚರಿಸುವಪಥವ ತಾರೆಗ । ಳಿರವ ನೀಕೇಳೆಂದುಮಾತಲಿ ನುಡಿದನರ್ಜುನಗೆ ॥೬೧॥
ಗಾಲಿಮಾನಸಗಿರಿಯ ಶಿಖರದ । ಮೇಲೆ ತಿರುಗುವುವೊಂದುಕಡೆ ಸುರ । ಶೈಲದಲಿ ಬಿಗಿದಚ್ಚು ಕೋಟಿ
ಯಮೇಲೆ ಯೈವತ್ತು ॥ ಏಳುಲಕ್ಕದ ನೀಳರಥದ ವಿ । ಶಾಲವದು ಮೂವತ್ತುಸಾವಿರ । ಮೇಲೆ ಧ್ರುವ
ಮಂಡಲಕೆ ಬಿಗಿದಿಹುದನಿಲಪಾಶದಲಿ ॥೬೨॥ ಹರಿಯ ಗಾಲಿಯ ನಾಭಿಮೂರ । ಚ್ಚರಿಯಚಾತು
ರ್ಮಾಸಗಳು ಘನ । ತರದ ಷಡುಋತು ಬಳೆ ಷಡಂಗವೆ ನೇಮಿ ಚತುರೆಯುಗ ॥ ತರವಿಡಿದ ಸಂವತ್ಸ
ರವು ಘನ।ತರದ ಪರಿವತ್ಸರವಿಧಾವ । ತ್ಸರವುವಿದ್ವತ್ಸರವು ವತ್ಸರವೆನಿಪವೊಳೆಯಾಯ್ತು ॥೬೩॥ ಉರ
ಗನಾಳದ ಹೊರಜಿ ನವಸಾ । ವಿರದಕುರಿಗುಣ್ಯಿಯಿಾಸುಗಳುತಾ । ವೆರಡುಮುಡಿ ತೊಂಭತ್ತುವೊಂದುಸ
ಹಸ್ರದರ್ಧವದು ॥ ಪರಿಯನೊಗನದರನಿತುಸಂಖ್ಯೆಗೆ । ಸರಿಯೆನಿಪಮೇಲಚ್ಚು ಮಂಗಳ । ತರವೆನಿಪ
ನವರತ್ನರಚನೆಯ ಚಿತ್ರತರವೆಂದ ॥೬೪॥ ಕರಸಹಸ್ರನ ರಥಕೆ ಹೂಡಿದ । ತುರಗ ಛಂದೋಮಯವು
ಸಾರಥಿ । ಯರುಣಕಾಲವೆ ಗಾಲಿನವಕೋಟಿಯನು ಚರಿಯಿಸುಗು ॥ ವರವರೂಥದ ಮಧ್ಯದಲಿ ವಿ ।
ಸ್ತರದ ಮಣಿಪೀಠದಲಿ ಮಿಗೆ ದಿವ । ಕರನು ಗ್ರಹಭವನಕ್ಕೆ ಸಲೆಯಾಧಾರವಾಗಿಹನು ॥೬೫॥ ಹರಿ
ತರಣಿಗಿಂದುವಿಗೆ ಕರ್ಕಟ । ಧರಣಿಜಂಗಜವೃಶ್ಚಿಕವು ಹಿಮ । ಕರನತನಯಗೆಮಿಥುನಕನ್ಯೆ ಬೃಹಸ್ಪ
ತಿಗೆ ಚಾಪ ॥ ಪಿರಿಯಋಷಿ ತುಲೆ ವೃಷಭದಾನವ । ಗುರುವಿನವು ಮೃಗ ಕುಂಭ ಮಂದಂ । ಗಿರವು

ನಿಜಗೃಹ ರಾಹುಕೇತುಗಳವರ ಕೂಡಿಹರು ॥೬೬॥ ಲಕ್ಕ ಉರ್ವಿಗೆ ರವಿಯೆ ಪಥ ಶಶಿ । ಲಕ್ಕವೆರಡು ತ್ರಿಲಕ್ಕಯೋಜನ । ಲೆಕ್ಕಿಸಲು ನಕ್ಷತ್ರಬುಧನಿಹ ನೈದುಲಕ್ಕದಲಿ ॥ ಲಕ್ಕವೇಳಾಶುಕ್ರಕುಜನವ । ಲಕ್ಕ ಗುರು ಹನ್ನೊಂದುಲಕ್ಕವು । ಮಿಕ್ಕವಸುಧಾತಳಕೆ ಶನಿ ಹದಿಮೂರುವರೆಲೆಕ್ಕ ॥೬೭॥ ವಿದಿತವಿಂತಿದು ಸಪ್ತಋಷಿಗಳ । ಸದನವದು ಹದಿನಾಲ್ಕುಲಕ್ಕವು । ಮದಡಿನೆಲಸಿಹ ಧ್ರುವನು ತಾ ಹದಿನೈದುಲಕ್ಷದಲಿ ॥ ಅದರಮೇಲಿಹವಿಷ್ಣುಪದದಲಿ । ಸದಮಳಾತ್ಮಕ ಶಿಂಶುಮಾರನು । ಪದುಳದಲಿ ಸಕಲಕ್ಕೆ ಸಲೆಯಾಧಾರವಾಗಿಹನು ॥೬೮॥ ವರಕುಮಾರಕ ನೀನು ಕೇಳೈ । ಪಿರಿಯಲೋಕಾಲೋಕವೆಂಬಾ । ಗಿರಿಯ ಬಳಸಿದ ಕಾಳಗತ್ತಲೆಯೊಳಗೆ ಮೆರೆದಿಪ್ಪಾ ॥ ಧರೆಯೊಳರುಣದ್ವೀಪವದರೊಳು । ನೆರೆದಮಂದೇಹರುಗಳೆಂದ । ಚ್ಚರಿಯದಲಿ ಸರಸಿರುಹಾಸನನಿಂದ ಜನಿಸಿದರು ॥೬೯॥ ಹರಿಹರವಿರಿಂಚಿಗಳುಮೊದಲಾದುರುವದೇವರುಗಳೊಳು ಮತ್ತಾ । ಧರವಿಡಿದಹದಿನಾಲ್ಕುಜಗದೊಳಗುಳ್ಳದೇವರಲಿ ॥ ತರಣಿಯತಿಬಲವಂತನೆಂಬುದ । ನರಿದು ಮಂದೇಹಾಸುರರು ಸಾ । ಸಿರಕರದದಿನನಾಥನೊಳು ಕಾಳಗವ ಬಯಸಿಹರು ॥೭೦॥ ಪರಿಕಿಸಲು ಪರಮಾತ್ಮದಿನಕರ । ಹರಿಹರವಿರಿಂಚಿಗಳು ಸೂರ್ಯನ । ನೆರೆದು ಸುತಿ ಕೈವಾರಿಸುತ್ತಿರೆ ಘನಮಹಾಮಹಿಮ ॥ ಕಿರಣದುರಿಯ ಮಹಾಪ್ರತಾಪನು । ತರಣಿಯೆಂದಾತನೊಳು ಕಾದಲು । ಸರಸಿರುಹಸಂಭವನ ಮೆಚ್ಚಿಸಿ ವರವಪಡೆದಿಹರು ॥೭೧॥ ಕಾಲವೆಂಬುದು ರವಿಯ ಗಾಲಿಯ । ಕಾಲಗತಿಯೈಸಲೆ ಕೃತಾಂತಗೆ । ಲೀಲೆ ಸೃಷ್ಟಿಗೆ ಲಯವು ಸಚರಾಚರಗಳೆಂಬಿವನು ॥ ಕಾಲಚಕ್ರದ ಖಚರಗತಿಯಲಿ । ಕಾಳಗತ್ತಲೆಯನು ನಿವಾರಿಸಿ । ಪಾಲಿಸುವಲೋಕಂಗಳನಿತುವ ಪಾರ್ಥ ನೋಡೆಂದ ॥೭೨॥ ಅವನಿಪತಿ ಕೇಳಿಂದ್ರಸಾರಥಿ । ವಿವರಿಸಿದನರ್ಜುನಗೆ ಭೂಮಿಯ । ಭುವನಕೋಶವ ಸನ್ನಿವೇಶವನದಿ ಜಲಧಿಗಳ ॥ ಇವು ಕುಲಾದ್ರಿಗಳಿವು ಪಯೋಧಿಗ । ಳಿವು ಮಹಾದ್ವೀಪಂಗಳಿವು ಮಾ । ನವರಧರಣೀಸ್ವರ್ಗ ಮೇಲಿನ್ನಿತ್ತ ನೋಡೆಂದ ॥೭೩॥ ಈ ವಿಮಾನದ ಸಾಲಸಂದಣಿ । ತೀವಿಕೊಂಡಿದೆ ಗಗನತಳದಲಿ । ದೇವಕನ್ಯಾಶತಸಹಸ್ರದ ಕೇಳಮೇಳದಲಿ ॥ ಭೂವಳಯದಲಿ ಸುಕೃತಿಗಳು ನಾ । ನಾವಿಧದ ಜಪಯಜ್ಞದಾನತ । ಪೋವಿಧಾನದಲೊದಗಿದವರನು ಪಾರ್ಥ ನೋಡೆಂದ ॥೭೪॥ ಭೂತದಯೆಯಲಿ ನಡೆವನೀತನೋ । ಪಾತ ನಿರ್ಮಳಸತ್ಯಭಾಷಿತ । ನೀತ ತೀರ್ಥವಿಹಾರಿ ಸಜ್ಜನನೀತ ಗುಣಿಯೀತ ॥ ಈತನಿರ್ಮತ್ಸರನಸೂಯಾ । ತೀತನಿವನತಿವಿಪ್ರಪೂಜಕ । ನೀತಮಾತಾಪಿತರಭಕ್ತನು ಪಾರ್ಥನೋಡೆಂದ ॥ ಈತನಿಂದ್ರಿಯವಿಜಯಸತ್ಕೃತ । ನೀತನಿವವೇದಾಧ್ಯಯನಪರ । ನೀತಪರಹಿತನಿವ ಯಥಾಲಾಭೈಕಸಂತೋಷಿ ॥ ಈತಶುಚಿ ಋಜುವೀತ ನಿಸ್ಪೃಹ । ನೀತನಿರ್ಭಯನೀತ ನಿರ್ಮಳ । ನೀತ ರಾಗದ್ವೇಷರಹಿತನು ಪಾರ್ಥನೋಡೆಂದ ॥೭೬॥ ಇತ್ತ ನೋಡೈಸ್ವಾಮಿಕಾರ್ಯಕೆ । ತೆತ್ತನೊಡಲನು ವರರಣಾಗ್ರದೊ । ಳಿತ್ತಲೈದನೆ ಭೂಮಿಕನ್ಯಾಗೋಧನಾವಳಿಯ ॥ ಇತ್ತವನು ಸತ್ಪಾತ್ರನನು ತಾ । ಹೆತ್ತವನು ಗೋವಿಪ್ರಬಾಧೆಗೆ । ಸತ್ತವನನೆಲೆಪಾರ್ಥ ನೋಡುತ್ತಮವಿಮಾನದಲಿ ॥೭೭॥ ಮೇಲೆ ಮೇಲೈದರೆಸುತರಾ । ಮಾಲೆಗಳವೊಲು ರಾಜಸೂಯದ ಮೇಲುಯಜ್ಞದ ವಾಜಿಮೇಧದ ಭೂರಿಸುಕೃತಿಗಳು ॥ ಕಾಳಗದೊಳರಿಸುಭಟಶಿತಕರ । ವಾಳಧಾರಾತೀರ್ಥಸೇವಿನ್ನ । ಪಾಲರೈದರೆ ದೀಪ್ಯಮಾನವಿಮಾನಮಧ್ಯದಲಿ ॥೭೮॥ ಈತಭರತನು ದೂರದಲಿತೋ । ಪಾರ್ತನುಹರಿಶ್ಚಂದ್ರನಳನೃಗ । ರೀತಗಳುಪುರು

ಕುತ್ಸನೀತಮರುತ್ತನೃಪನೀತ ॥ ಈತ ಹೈಹಯ ದುಂದುಮಾರಕ । ನೀತನಹುಷದಿಳೀಪದಶರಥ । ನೀತರ
ಘು ತಾನೀತ ಶಂತನುಪಾರ್ಥನೋಡೆಂದ ॥೨೯॥ ಇದೆಯಸಂಖ್ಯಾತಕ್ಷಿತೀಶ್ವರ । ರುದಿತಕೃತಪುಣ್ಯೋಪ
ಚಯಭೋ । ಗದಲಿಭಾರತವರುಷ ನಿಮ್ಮದು ಪುಣ್ಯಭೂಮಿಕಣಾ ॥ ಇದರೊಳಗೆ ಜಪಯಜ್ಞದಾನಾ ।
ಭ್ಯುದಯವೈದಿಕಕರ್ಮನಿಷ್ಠರ । ಪದವಿಗಳ ಪರುತವಣಿಯನು ಕಲಿಪಾರ್ಥ ನೋಡೆಂದ ॥೩೦॥ ಹೊಳ
ವುತದೆ ದೂರದಲಿ ರಜತಾ । ಚಲವ ಕಂಡಂದದಲಿ ಕೆಲದಲಿ । ಬಲವಿರೋಧಿಯ ಪಟ್ಟದಾನೆ ಸುರೇಂ
ದ್ರನಂದನನೆ ॥ ನಿಳಯವದೆ ನಸುದೂರದಲಿ ಥಳ । ಥಳಿಸುವಮಲಮಣಿಪ್ರಭಾಪರಿ । ವಳಯರತ್ನನಿ
ಬದ್ಧವಮರಾವತಿಯ ನೋಡೆಂದ ॥೩೧॥ ಹೊಕ್ಕನಮರಾವತಿಯನರ್ಜುನ । ನೆಕ್ಕಸರದಲುಪಾರ್ಜಿಸಿ
ದವು । ಣ್ಯಕ್ಕೆ ಸರಿಯೇ ನಳನಹುಷಭರತಾದಿಭೂಮಿಪರು ॥ ಉಕ್ಕಿದವು ಪರಿಮಳದ ತೇಜದ । ತೆಕ್ಕೆ
ಗಳು ಲಾವಣ್ಯಲಹರಿಯ । ಸೊಕ್ಕುಗಳ ಸುರಸೂಳೆಗೇರಿಗಳೊಳಗೆ ನಡೆತಂದ ॥೩೨॥ ಇಳಿದು ರಥವನು
ದಿವಿಜರಾಯನ । ನಿಳಯವನು ಹೊಕ್ಕನು ಕಿರೀಟಿಯೆ । ನಳವಿಯಲಿ ಕಂಡಿದಿರುಬಂದನು ನಗುತ ಶತ
ಮನ್ಯು ॥ ಸೆಳೆದು ಬಿಗಿಯಪ್ಪಿದನು ಕರದಲಿ । ತಳುಕಿ ಕರವನು ತಂದು ತನ್ನಯ । ಕೆಲದೊಳಗೆ ಕುಳ್ಳಿರಿ
ಸಿದನು ಸಿಂಹಾಸನಾರ್ಧದಲಿ ॥೩೩॥ ನೂರುಪಶುಗೆಡಹಿಗೆ ಸುರೇಂದ್ರನು । ಮಾರುವನು ಗದ್ದುಗೆಯ
ಬರದೇ । ಸೂರೆಗೊಂಡನು ಸುರಪತಿಯ ಸಿಂಹಾಸನದ ಸಿರಿಯ ॥ ಮೂರುಯುಗದರಸುಗಳೊಳೀತಗೆ ।
ತೋರಲೆಣೆಯಿಲ್ಲೆನಲು ಶಕ್ರನ । ನೂರುಮಡಿತೇಜದಲಿ ತೊಳತೊಳಗಿದನು ಕಲಿಪಾರ್ಥ ॥೩೪॥ ನುಸಿ
ಗಳಿವಟರು ಮರ್ತ್ಯರೆಂಬುವ । ರೊಸಗೆಯಮರಾವತಿಯೊಳೇನಿದು । ಹೊಸತಲಾ ಬಂದಾತನಾರೋ
ಪೂತುರೇಯೆನುತ ॥ ವಸುಗಳಾದಿತ್ಯರು ಭುಜಂಗಮ । ವಿಸರ ಗಂಧರ್ವಾದಿದೇವ । ಪ್ರಸರಬಂದುದು
ಕಾಣಿಕೆಗೆ ಪುರುಹೂತನಂದನನ ॥೩೫॥ ಅಂದಿನುತ್ಸವದಮರನಿಕರದ । ಸಂದಣಿಯನೇನೆಂಬೆನಿಂ
ದ್ರನ । ಮಂದಿರದೊಳೊತ್ತೊತ್ತೆಯಾದುದು ಜನದ ದೊಂಬಿಯಲಿ ॥ ಮಂದಿ ತೊಲಗಲಿ ತೆರಹು
ಗೊಡು ಹೊ । ಯ್ಯಮ್ಮಂದಣವರನು ಗಜಬಜವಮಾ । ಣೆಂದುಗರ್ಜಿಸಿತಿಂದ್ರನಾಸ್ಥಾನದಲಿ ಸುರನಿ
ಕರ ॥೩೬॥ ನೂಕು ಬಾಗಿಲ ಚಾಚು ಬಣಗುಡಿ । ವೌಕೆಸರ ನಿಲಿಸಲ್ಪಪುಣ್ಯರ । ನೇಕೆ ಹೊಗಿಸಿದೆ
ಬಹಳದಾನತಪೋವಿವರ್ಜಿತರ ॥ ಓಕುಳಿಯನೆವದಿಂದ ತೆಕ್ಕೆಯ । ಬಾಕುಳಿಗಳುರವಣಿಸಿತೇ ತಮ ।
ಗೇಕೆ ರಂಭಾದಿಗಳ ಸೋಕೆಂದುದು ಸುರಸ್ತೋಮ ॥೩೭॥ ತೊಲಗಿ ಸೋಮಂದಿಯನು ತೆಗೆ ಬಾ ।
ಗಿಲನೆನಲು ಕವಿದುದು ಸುರೇಂದ್ರನ । ಲಲನೆಯರು ಲಾವಣ್ಯಲಹರಿಯಲಲಿತವಿಭ್ರಮದಾ ॥ ಸುಳಿಗು
ರುಳ ನಿಟ್ಟೆಸಳುಗಂಗಳ । ಹೊಳೆವಕದಪಿನ ನುಣ್ಗೊರಳ ಬಲು । ಮೊಲೆಯ ಮೋಹರ ನೂಕಿತಮರೀ
ವಾರನಾರಿಯರು ॥೩೮॥ ಉಗಿದರೋ ಕಸ್ತುರಿಯ ತವಲಾ । ಯಿಗಳ ಮುಚ್ಚಳವನೆ ಕವಾಟವ ।
ತೆಗೆಯೆ ಕವಿದರು ದಿವ್ಯಪರಿಮಳಸಾರ ಪೂರವಿಸೆ ॥ ಹೊಗರಲಗುಹೊಳಪುಗಳ ಕಡೆಗ । ಣ್ಣುಗಳ
ಬಲುಗರುವಾಯಿ ಮುಸುಕಿನ । ಬಿಗುಹುಗಳ ಬಿರುದಂಕಕಾತಿಯರಿಂದ್ರನೋಲಗವ ॥೩೯॥ ನೇವುರದ
ನುಣ್ದನಿಯ ಕಾಂಚಿಯ । ಕೇವಣದ ಕಿಂಕಿಣಿಯ ರಭಸದ । ನೇವಣಗಳೊಲಹುಗಳ ಮೌಳಿಯ ಮುರಿದ
ಮುಸುಕುಗಳ ॥ ಭಾವದುಬ್ಬಿನ ಚೆಲ್ಲೆಗಂಗಳ । ಡಾವರದಡೊಳ್ಳಾಸಕಾತಿಯ । ರಾವಿಬುಧಪತಿಯೋ
ಲಗವ ಹೊಕ್ಕರು ನವಾಯಿಯಲಿ ॥೪೦॥ ವರತಿಲೋತ್ತಮೆ ರಂಭೆ ಮಧುರ । ಸ್ವರೆ ಘೃತಾಚಿ ಸುಕೇಶಿ

ಗೌರೀ। ಶ್ವರಿ ವರೂಥಿನಿ ಪೂರ್ವಚಿತ್ತಿ ಸುಲೇಖಿ ಚಿತ್ರರಥಿ ॥ ಸುರಭಿಗಂಧಿನಿ ಚಾರುಮುಖಿ ಸೌಂ । ದರಿಯನಿಧಿಯೂರ್ವಶಿ ಸುಲೋಚನೆ । ಸುರಸೆಯೆನಿಪಂಗನೆಯರೈದಿತು ಕೋಟಿಸಂಖ್ಯೆಯಲಿ ॥೯೧॥ ಏನನೆಂಬೆನು ಜೀಯಶಕ್ರಾ । ಸ್ಥಾನವಲ್ಲಾ ದಿವ್ಯವಾದ್ಯಸು । ಗಾನನರ್ತನವಿಮಳತೂರ್ಯತ್ರಯದ ಮೇಳವದಾ ॥ ಆನಿತಂಬಿನಿಯರ ಸುರೇಖಾ । ಸ್ಥಾನಕದ ನಿರುಗೆಯ ಸುಧಾಳದ । ನೂನಸಮ್ಮೋಹನದ ತೂಕದ ಭಾವಭಂಗಿಗಳ ॥೯೨॥ ರಸದಸಂಸ್ಥಾಪನೆಯ ಭಾವದ । ಬೆಸುಗೆಗಳ ಹಸ್ತಾಭಿನಯದೃ । ಕ್ಪ್ರಸರಣದ ವರಸಾತ್ವಿಕಾಂಗಿಕಸುಗತಿವಿಭ್ರಮದ ॥ ವಿಷಮಸಮಕರಣದ ಕಳಾಪದ । ಕುಸುರಿಗಳ ವರಲಾಸ್ಯತಾಂಡವ । ಮೆಸೆದುದೈ ರಂಭಾದಿನರ್ತಕಿಯರಲಿ ಹೊಸತೆನಿಸಿ ॥೯೩॥ ಗಾನರಸದಲಿ ಮುಳುಗಿತಮರಾ । ಸ್ಥಾನವೆತ್ತಣವಾದ್ಯನರ್ತನ । ಗಾನನರ್ತನವೆನಲು ಸಮ್ಮೋಹಿಸಿತು ಘನವಾದ್ಯ ॥ ಗಾನವಾದ್ಯವಿದೆತ್ತ ನೃತ್ಯರ । ಸಾನುಭವ ಭಾರವಿಸಿತನ್ಯೋ । ನ್ಯಾನುರಂಜಕವಾಯ್ತು ತೂರ್ಯತ್ರಯದ ಮೇಳಾಪ ॥೯೪॥ ಈಯಮಾನುಷನೃತ್ಯವಾದ್ಯಸು । ಗೇಯರಸದಲಿ ಮುಳುಗಿಕರಣದ । ಲಾಯತೊಡಕದೆ ಪಾರ್ಥನಿದ್ದನು ಧೈರ್ಯಶಿಖರದಲಿ ॥ ಈಯುವತಿ ತನ್ನಾವಳೋ ಕುಸು । ಮಾಯುಧನ ಖಂಡೆಯವಲಾ ಮಝು । ಮಾಯೆಯೆನುತೂರ್ವಶಿಯನೆವೆಯಿಕ್ಕದೆ ನಿರೀಕ್ಷಿಸಿದ ॥೯೫॥ ಪಾರುಖಾಣ್ಯೆಯ ವಿತ್ತಸಾಜಂ । ಭಾರಿಯೂರ್ವಶಿರಂಭೆಮೇನಕೆ । ಗೌರಿಮೊದಲಾದಖಿಳಪಾತ್ರಕೆ ಪರಮಹರುಷದಲಿ ॥ ನಾರಿಯರು ನಿಖಿಳಾಮರರು ಬೀ । ಡಾರಕೈದಿತು ಹರಿದುದೋಲಗ । ವಾರತಿಯಹರಿವಾಣ ಸುಳಿದುದು ಸಾಲಸೊಡರುಗಳ ॥೯೬॥ ಅರಸ ಕೇಳಾರೋಗಿಸಿದರಿ । ಬ್ಬರು ಸಮೇಳದಲಿದ್ದು ಬೇರೊಂ । ದರಮನೆಗೆ ಕಳುಹಿದನು ಪವಡಿಸುವರೆ ನಿಜಾತ್ಮಜನ ॥ ಸುರಪನಿತ್ತಲು ಚಿತ್ರಸೇನನ । ಕರೆಸಿದನು ಫಲುಗುಣನ ಭಾವವ । ನರುಹಿದನು ನಮ್ಮೂರ್ವಶಿಯ ಕಳುಹೆಂದು ನೇಮಿಸಿದ ॥೯೭॥ ಇನಿಬರಿರೆ ರಂಭಾದಿಸೀಮಂ । ತಿನಿಯರೊಳಗೂರ್ವಶಿಯೊಳಾದುದು । ಮನ ಧನಂಜಯನೀಕ್ಷಿಸಿದನನಿಮೇಷದೃಷ್ಟಿಯಲಿ ॥ ವನಿತೆಯನು ಕಳುಹೇಳು ನೀನೆಂ । ದೆನೆ ಹಸಾದವೆನುತ್ತ ದೇವಾಂ । ಗನೆಯ ಭವನಕೆ ಬಂದನೀತನು ಹರಿಯನೇಮದಲಿ ॥೯೮॥ ತಾಯೆ ಚಿತ್ತೈಸರಮನೆಯ ಸ್ವಾ । ಳಾಯಿತನು ಬಂದೈದನೆನೆ ಕಮ । ಲಾಯತಾಂಬಕಿ ಚಿತ್ರಸೇನನ ಕರೆಸಿದಳು ನಗುತ ॥ ತಾಯೆನುತ ವಸ್ತ್ರಾಭರಣದ ಪ । ಸಾಯವಿತ್ತಳು ಪರಿಮಳದ ತವ । ಲಾಯಿಗಳ ನೂಕಿದಳು ವರಕಸ್ತೂರಿಯ ಕಪ್ಪುರದ ॥೯೯॥ ಆಣಕವಲ್ಲಿದು ರಾಯನಟ್ಟಿದ । ಮಾಣಿಹವ್ಯೋ ನಿಜಕಾರ್ಯಗತಿಗಳ । ಕಾಣಿಕೆಯೊ ಕರ್ತವ್ಯವಾವುದು ನಿಮಗೆ ನಮ್ಮಲ್ಲಿ ॥ ಗುಣಭರಿತ ಹೇಳೆನಲು ನಸುನಗೆ । ಕುಣಿಯೆ ಮುಖದಲಿ ಮಾನಿನಿಗೆ ಮೆಂ । ಟಣಿಸಿ ಲಜ್ಜಾ । ಭರದಿ ನುಡಿದನು ದೂತನೀಮಾತ ॥೧೦೦॥ ಎಮಗೆ ಮಗನರ್ಜುನನು ನೀನಿಂ । ದೆಮಗೆ ಸೊಸೆಯಹುದಾತನಂತ । ಸ್ತಮಿರವನು ಕಳೆ ನಿನ್ನ ಕುಚಯುಗಕಾಂತಿಲಹರಿಯಲಿ ॥ ಕಮಲಮುಖಿ ನೀ ಕಮಲವಾತನು । ಭ್ರಮರ ನೀಸುರವನದಸಿರಿ ಮಧು । ಸಮಯಪರ್ಜನನೆಂದು ಬೆಸಸಿದನಮರಪತಿಯೆಂದ ॥೧೦೧॥ ಕೇಳುತವೆ ರೋಮಾಂಚ ಲಜ್ಜೆಯ । ಜೋಳಿ ಯೆದ್ದುದು ಝೊಂಪಿಸಿತು ಪುಳ । ಕಾಳಿ ಭಯವನು ಪಂಟಿಸಿದುದನುರಾಗದಭಿಮಾನ ॥ ಮೇಲೆಮೇಲಭಿಲಾಷೆ ಧೈರ್ಯವ । ಚಾಳವಿಸೆ ಪರಿತೋಷಪೂರಣ । ದೇಳುಮುಳುಗಾಯ್ತುತ್ತರಕೆ ನಸುಬಾಗಿದಳು ಶಿರವ ॥೧೦೨॥ ಆತನುತ್ತಮನಾಯಕನು ವಿ ।

ಖ್ಯಾತೆ ನೀ ಸುರಲೋಕದಲಿ ಲ । ಜ್ಞಾತಿಶಯವೇಕಿಲ್ಲಿ ನಾವೇ ನಿಮ್ಮ ಪರಿವಾರ ॥ ಸೋತೊಡೆಯು ದಿಟ ಭಂಗವಲ್ಲ ಪು । ರಾತನದ ನಳನಹುಷಭರತಯ । ಯಾತಿನೃಪರೊಳಗೀತನಗ್ಗಳನೆಬಲೆ ಕೇಳೆಂದ ॥೧೫॥ ರಾಯನಟ್ಟಿದನೇವುಗಡ ಕವ । ನೀಯವಲ್ಲಾ ನಿನ್ನ ನುಡಿರವ । ಶ್ರೇಯತರವಿದು ನಿನ್ನ ರಚನೆ ಮಹಾನುಭಾವವಲೆ ॥ ಆಯಿತಿದು ನೀ ಹೋಗೆನುತಲಬು । ಜಾಯತಾಕ್ಷಿ ಮಹೋತ್ಸವದಿ ನಾ । ರಾಯಣನ ಮೈದುನನ ಬರೆದಳು ಚಿತ್ತಭಿತ್ತಿಯಲಿ ॥ ... ... ॥೧೬॥

ಅಂತು ಸಂಧಿ ೭ ಕ್ಕೆ ಪದ ೪೨೦ ಕ್ಕಂ ಮಂಗಳವಸ್ತು.

---

## ಎಂಟನೆಯ ಸಂಧಿ.

ಸೂ॥ ಭಯಭರಿತಭಕ್ತಿಯಲಿ ಕಾಮಾ । ರಿಯನು ಗೆಲಿದರ್ಜುನನು ಹರಮೈ । ರಿಯನು ಗೆಲಿದನು ಧೈರ್ಯದಿಂದೂರ್ವಶಿಯಶಾಪದಲಿ ॥

॥ಪದ॥ ಕೇಳುಜನಮೇಜಯಧರಿತ್ರೀ । ಪಾಲ ಪಾರ್ಥನ ಮೈಯ ಹುಲುರೋ । ಮಾಳಿ ಹರಿದುದು ಮನುಮಥನ ಖಂಡೆಯದ ಗಾಯದಲಿ ॥ ಬೀಳುಕೊಟ್ಟಳು ಚಿತ್ರಸೇನನ । ನಾಲತಾಂಗಿಸಹಸ್ರಸಂಖ್ಯೆಯ । ಕೇಳಮೇಳದ ಸತಿಯರನು ಕರೆಸಿದಳು ಹರುಷದಲಿ ॥೧॥ ವನಜಲೋಚನೆ ಮಾಡಿದಳು ಮಂ । ಜನವನ ಮಳದುಕೂಲಪರಿಮಳ । ಡನದಲೆಸೆದಳು ವಿವಿಧರತ್ನಾಭರಣಶೋಭೆಯಲಿ ॥ ತನತನಗೆ ಭರಣಿಗಳಲನುಲೇ । ಪನವ ತಂದರು ವಿಳಸದಧಿವಾ । ಸನೆಯ ಕುಸುಮದ ಮೊಗ್ಗೆಯಲಿ ರಚಿಸಿದರು ಸಿರಿಮುಡಿಯ ॥೨॥ ತಿಗುರಗೆಲಿದಳು ತಿಲಕವನು ತೆ । ತ್ತಿಗರಲಂಕರಿಸಿದರು ಹೊಳಹಿನ । ಹೊಗರ ಹೊಸಜವ್ವನದ ಜೋಡಿಯರ್ಮಾಡಿಯಿಮ್ಮಡಿಸೆ ॥ ಉಗಿದೊರೆಯ ಕೂರಲಗೊ ಧಾರೆಯ । ಮಿಗೆ ಹಿಡಿದ ಖಂಡೆಯವೊ ಕಾಮನ । ಹಗೆಗೆ ಹುಟ್ಟಿದಧೂಮಕೇತುವೊ ರೂಪೊ ಸುರಸತಿಯಾ ॥೩॥ ಪರಿಮಳದ ಪುತ್ಥಳಿಯೊ ಚೆಲುವಿನ । ಕರುವಿನೆರಕವೊ ವಿಟರ ಪುಣ್ಯದ । ಪರಿಣತೆಯೊ ಕಾಮುಕರ ಭಾಗ್ಯದ ಕಲ್ಪತರುಫಲವೋ ॥ ಸ್ಮರನ ವಿಜಯಧ್ವಜವೊ ಮನ್ಮಥ । ಪರಮಶಾಸ್ತ್ರದಮೂಲಮಂತ್ರವೊ । ಸುರಸತಿಯ ರಧಿದೇವತೆಯೊ ವರ್ಣಿಸುವೊಡರಿದೆಂದ ॥೪॥ ಲೋಕವಶ್ಯದತಿಲಕವೋ ಜಗ । ದೇಕರತ್ನವೊ ವಿಗಡಮುನಿಚಿ । ತ್ತಾಕರುಷಣದ ಮಂತ್ರವಾದವೊ ರುಷಿತಪಃಫಲವೋ ॥ ಲೋಕಸೌಂದರ್ಯೈಕಸರ್ಗವೊ । ನಾಕಸುಖಸಾಕಾರವೋ ರೂ । ಪೈಕತಾಣವೊ ಚಿತ್ರವಾಯ್ತೂರ್ವಶಿಯ ಬರವಿನಲಿ ॥೫॥ ನೆರೆದರಬುಲೆಯರಂಗವಟ್ಟದ । ಪರಿಮಳದ ಮುತ್ತಿಗೆಯ ತುಂಬಿಯ।ತೆರಳಿಕೆಯ ಕತ್ತಲೆಯ ಕೆದರುವಕಣ್ಣ ಬೆಳಗುಗಳ ॥ ಪರಿಪರಿಯಹೊಂದೊಡಿಗೆಗಳ ಪರಿ । ಪರಿಗಳುಡಿಗೆಯದೇಸಿ ಮಿಗೆ ಪರಿ । ಪರಿಯಮುಡಿಗಳ ಬಳಸಿದರು ಮುಗುದೆಯರು ಬಾಲಕಿಯ ॥೬॥ ಹೆಗಲುಹಡಪದ ಹಿಡಿದಮುಕರಾ । ಳಿಗಳ ಚಿಮ್ಮುಮಸೀಗುರಿಯ ಹಾ।ವುಗೆಯ ಹೇಮನಿಬಂಧಕಳಶದ ತಾಳವೃಂತಕದ॥ಮುಗುಲಯರು ಮನುಮಥನ ಮೊನೆಯಾ । ಳುಗಳು ಮುಸುಕಿತು ಮಾನಿನಿಯ ದಂ। ಡಿಗೆಯ ಮೈಕಾಂತಿಗಳ ದೂವಾಳಿಗಳ ಲಹರಿಯಲಿ ॥೭॥ ತುರುಗಮೇಧದ ರಾಜಸೂಯದ।ವರಮಹಾಕ್ರತುಕಾರರೀಕೆಯ।ಚರಣದುಂಗುಟತುದಿಯ ಕಾಬರೆ ಪುಂತುಫಲುಗುಣನ ॥ ಪರಮಪುಣ್ಯವದೇನು ತಾನಿ । ದ್ದರಮನೆಗೆ ಸತಿಬಂದಳೇನ । ಚ್ಚರಿಯೆನುತ ಹೊಗಳಿ

ದರು ಮಹಾಗಜೇಂದ್ರನಂದನನ ॥೮॥ ಧರಣಿಪತಿ ಕೇಳವಳ ತೊತ್ತಿರ । ಹೊರಗೆಲಸದವದಿರ ಪಸಾಯಿತೆ । ಯರಿಗೆ ಪಡಿಗವನೀಡಸಲ್ಲರು ಸೋಮಯಾಜಿಗಳು ॥ ವರುಣಸೂನು ಜಯಂತನಳಕೂಬರರು ಸಮಯವನೊಮ್ಮೆ ಕಾಣದೆ । ಪರುಷವೋಲೈಸುವರು ಸೌಧದದಾರವಟ್ಟದಲಿ ॥೯॥ ಜನಮನದ ಸಂಕಲೆವನೆಯೊ ಲೋ । ಚನಮೃಗದತಡೆವೇಟಕಾತಿಯೊ, ಮನುಮಥನ ಸಂಜೀವನೌಷಧಿಯೋ ಮಹಾದೇವಾ ॥ ಮನಸಿಜನ ಮಾರಾಂಕಕಾಮುಕ । ಜನದ ಜೀವಾರ್ಥಕ್ಕೆ ವಿಭುವೆಂ । ದೆನಿಸಿದೂರ್ವಶಿಬಂದಳರ್ಜುನದೇವನರಮನೆಗೆ ॥ ಮೆಲುನುಡಿಗೆ ಗಿಳಿಹೊದ್ದಿದವು ಸರ । ದುಳಿಗೆ ಕೋಗಿಲೆಯೌಕಿದವು ಪರಿ । ಮಳದಪಸರಕೆ ತೂಳಿದವು ತುಂಬಿಗಳು ಡೊಂಬಿಯಲಿ ॥ ಹೊಳೆವಮುಖಕೆ ಚಕೋರಚಯವಿಟ್ಟಳಿಸಿದವು ನೇವುರದ ಬೊಬ್ಬೆಗೆ । ಸಿಲುಕಿದವು ಹಂಸೆಗಳು ಕಮಲಾನನೆಯ ಕೆಳದಿಯರ ॥೧೧॥

ಅಲರ್ದಪೊಂದಾವರೆಯಹಂತಿಯೊ । ತಳಿತಮಾವಿನಬನವೊ ಮಿಗೆ ಕತ್ತಲಿಪಬಹಳತಮಾಲಕಾನನವ್ರೋ ದಿಗಂತದಲಿ ॥೧೨॥ ಹೊಳೆವವಿದ್ರುಮವನವೊ ಕುಸುಮೋಚ್ಚಲಿತಕೇತಕಿದಳವೊ ರಂಭಾ । ವಳಿಯೊ ಕಾಂತಾಜನವೊ ಕಮಲಾನನೆಯಮುಂಗಡಿಯೋ ॥ ಬಂದಳೂರ್ವಶಿಬಳ್ಳಿಮಿಂಚಿನ । ಮಂದಿಯಲಿ ಮುರಿದಿಳಿವಮರಿಮುಗಿ । ಲಂದದಲಿ ದಂಡಿಗೆಯನಿಳಿದಳು ರಾಜಭವನದಲಿ ॥ ಮುಂದೆಪಾಯವಧಾರು ಸತಿಯರ । ಸಂದಣಿಯ ಸಿಂಜಾರವದ ಸೊಗ । ಸಿಂದಶಬ್ದಬ್ರಹ್ಮ ಸೋತುದು ಸೊರಹಲೇನೆಂದ ॥೧೩॥

ಬಾಗಿಲಲಿಬಾಗಿಲಲಿ ನಿಂದರು । ಸೋಗೆಗಣ್ಣಬಲೆಯರು ಸಜ್ಜೆಯ । ಬಾಗಿಲಲಿ ಚಾಮರದ ಹಡಪದ ಚಪಲೆಯರುಸಹಿತ ॥ ಆಗ್ರುರುವೆ ಹೊಕ್ಕಳು ಮಹಾಹಿಯ । ಭೋಗತಲ್ಪದ ಹರಿಯೊಲಿಹಶತ । ಯಾಗಸುತನನು ಕಂಡಳಂಗನೆ ಮಣಿಯಮಂಚದಲಿ ॥೧೪॥ ಹೊಳೆವಮಣಿದೀಪಾಂಶುಗಳ ಮು । ಕ್ಕುಳಿಸಿದವು ಕಡೆಗಂಗಳಿಂದೂ । ಪಳದ ಭಿತ್ತಿಯ ಬೆಳಗನಣೆದುದು ಬಹಳತನುಕಾಂತಿ ॥ ಕೆಳದಿಯರ ಕಂಠದಲಿ ಕೈಗಳ । ನಿಳುಹಿ ನಿಂದಳು ತರುಣಿ ನೃಪಕುಲ । ತಿಲಕನಂಗೋಪಾಂಗದಲಿ ಹರಹಿದಳು ಕಣ್ಮನವ ॥೧೫॥

ಎಳೆಯಬೆಳುದಿಂಗಳವೊಲೀಕೆಯ । ಥಳಥಳಿಪಮುಖಚಂದ್ರಮನ ತಂ । ಬೆಳಗು ಸುಳಿದುದು ಸಾರತರ ಪರಿಮಳದ ಪೂರದಲಿ ॥ ತಿಳಿದುದೀತನ ನಿದ್ರೆ ಕರಣಾ । ವಳಿಯ ಪರಮಪ್ರೀತಿರಸದಲಿ । ಮುಳುಗಿ ಸುಖಭಾರದಲಿ ಭುಲ್ಲವಿಸಿದನು ಕಲಿಪಾರ್ಥ ॥೧೬॥ ಹರಮಹಾದೇವೀಯಘಾಟದ । ಪರಿಮಳವಿದೆತ್ತಣದೆನುತ ಮೈ । ಮುರಿದು ಕಂಡನಪೂರ್ವಪರಿಮಳಸಾರ್ಥದಲಿ ಪಾರ್ಥ ॥ ಕಿರಣಲಹರಿಯ ದಿವ್ಯರತ್ನಾ । ಭರಣರುಚಿರತರಪ್ರಭಾಪಂ । ಜರದೊಳಗೆ ಹೊಳೆಹೊಳೆವಮದನಾಲಸೆಯನೂರ್ವಶಿಯ ॥೧೭॥

ಹಾಮಹಾದೇವಿಯರಲಾ ಸು । ತ್ರಾಮನೋಲಗದೊಳಗೆ ನರ್ತನ । ರಾಮಣೀಯಕರಚನೆಯಲಿ ರಂಜಿಸಿದಳಾಸಭೆಯ ॥ ಈಮಹಿಳೆಯಭಿವಂದನೀಯೆ ನಿ । ರಾಮಯದ ಶಶಿವಂಶಜನನಿ ಸ । ನಾಮೆಯಲ್ಲಾ ಶಿವಯೆನುತ ಮಣಿಮಂಚದಿಂದಿಳಿದ ॥೧೮॥ ಏನಿಬಿಜಯಂಗೈದಿರಿತ್ತಲು । ಮಾನಿಧಿ ಕುಳ್ಳಿರಿ ಸುರೇಂದ್ರನ । ಮಾನಿನಿಯರಭಿವಂದನೀಯರು ನಾವು ಕೃತಾರ್ಥರಲಾ ॥ ಏನುಬೆಸನೆನಗೇನುಹದ ನಿಮ । ಗಾನು ಮಗನುಪಚಾರವೇಕೆ ಮ । ನೋನುರಾಗದಲರುಹಿಯೆಂದನು ಪಾರ್ಥನೂರ್ವಶಿಗೆ ॥೧೯॥ ನುಡಿಗೆ ಮರೆವುಗು ಹರನ ನೀನನು । ಸರಿಸ ನಿಮ್ಮಯ್ಯಂಗೆಹೇಳಿದು । ನಿರುತ ತಪ್ಪದು ಹೋಗೆನುತ ಮೊಗದಿರುಹಿದಳ ಚಪಳೆ ॥೪೩॥ ಮೂಗಸಾದನು ಬಹಳಧೈರ್ಯದ । ಬೇಗಡೆಯ ಬಿಡೆ ಬಿಗಿದಬೆರಗಿನ । ಮೂಗಿ

ಬೆರಗಾದಳು ಮನೋಜನ । ಸಡಗರಕೆ ತೆಕ್ಕಿದಳು ಪಾರ್ಥನ । ನಡವಳಿಗೆ ಮೆಚ್ಚಿದಳು ಬೆಚ್ಚಿದಳಂಗಸು
ಸ್ತ್ರದಲಿ ॥ ಕಡುಗಿದಳು ಖಾತಿಯಲಿ ಲಜ್ಜೆಯ । ಬಿಡಯದಲಿ ಭಯಗೊಂಡಳಂಗನೆ । ಮಿಡುಕಿದಳು
ವಿವಿಧಾನುಭಾವದರಸದಭಂಗಿಯಲಿ ॥೨೦॥ ಏಕೆ ನುಡಿದನೊ ಚಿತ್ರಸೇನನ । ದೇಕೆ ನಾ ಕೈಕೊಂಡೆನೆ
ತ್ತಣ । ಕಾಕುಮೂಳಗೆ ಕೋಳುಹೋದೆನೊ ಕಾಮನೆಂಬುವಗೆ ॥ ಲೋಕವರ್ತಕವಲ್ಲದಿವನನ । ದೇಕೆ
ವಿಧಿ ನಿರ್ಮಿಸಿದನೋ ನಾ । ನೇಕೆ ನರನೇಕೆನುತ ಸುಯ್ದಳು ಬೈದು ಕಮಲಜನ ॥೨೧॥ ವಿಕಳಮ
ತಿಯೋ ಮೋಹಿಸ ನಪುಂ । ಸಕನೊ ಜಡನೋ ಶ್ರೋತ್ರಿಯನೊ ಬಾಧಕನೊ ಖಳನೋ ಖೂಳನೋ
ಮಾನವವಿಕಾರವಿದೋ ॥ ವಿಕಟತಪಸಿನ ದೇವದೈತ್ಯರ । ಮುಕುಟಮಾಂತುದು ಮಾಮಪಾದವ । ನಕಟ ಕೆಟ್ಟೆ
ನಲಾ ಯೆನುತ ಕರಗಿದಳು ನಳಿನಾಕ್ಷಿ ॥೨೨॥ ಎಲವೊ ರಾಯನ ಹೇಳಿಕೆಯಲಂ । ಡಲದನೆನ್ನನು
ಚಿತ್ರಸೇನಕ । ನಲುಗಿ ನಟ್ಟವು ಕಾಮಶರವೆನ್ನಂತರಂಗದಲಿ ॥ ಒಲಿದು ಬಂದಬಲೆಯರ ಟಿಕ್ಕರಿ ।
ಗಳವುದೇ ವಿಟಧರ್ಮವಕಟಾ । ತಿಳಿಯಲಾ ತಾನಾವಳೆಂಬುದನೆಂದಳಿಂದುಮುಖಿ ॥೨೩॥ ತಿವತಿವೀ
ಮಾತೇಕೆ ಕಾಮನ । ಬವಣಿಯಲಿ ನೀವರಿಯದಿರೆ ಮಾ । ಸವನ ನೇಮವು ಚಿತ್ರಸೇನನ ನುಡಿಗಳಂ
ತಿರಲಿ ॥ ಎಮಗೆ ಕರ್ತವ್ಯದಲಿ ಮನಸಂ । ಭವಿಸುವುದೆ ನೀವೆಮ್ಮ ವಂಶೋ । ದ್ಭವಕೆ ಜನನಿಯಲಾಯೆ
ನುತ ವಿನಯದಲಿ ನರ ನುಡಿದ ॥೨೪॥ ಸಾರಿನೀಪೂರ್ವದಲಿ ನಿಮ್ಮಪು । ರೂರವನಸತಿ ನಿನಗೆ ಬಳಿಕ ಕು ।
ಮಾರಜನಿಸಿದ ಸಾಯುವಾತನೊಳುದಿಸಿದನಹುಷ ॥ ವೀರರಾಜಪರಂಪರೆಯು ಬರಲಾರಿಗಾವುದಿಸಿದೆವು
ನಮ್ಮ ವಿಚಾರಿಸಿದುದಿಲ್ಲಾ ಎನುತ ನಯದಲಿ ನರನುಡಿದ ॥೨೫॥ ಪ್ರಣವದರ್ಥವಿಚಾರವೆತ್ತಲು । ಗಣಿಕೆ
ಯರ ಮನೆಯ ಸ್ವರಾಕ್ಷರ । ಗಣಿತಲಕ್ಷಣವೆತ್ತ ರತಿಕೇಳೀವಿಧಾ ದಲಿ । ಉಣಗುಭಾರತವರ್ಷದವದಿರ ।
ಭಣಿತೆಯೆಮ್ಮೀ ದೇವಲೋಕಕೆ । ಸಣಬಿನಾರವೆ ಚೈತ್ರರಥದೊಳಗೆಂದಮುಖಿ ॥೨೬॥ ಅಯ್ಯನಯ್ಯನ
ನಿಮ್ಮವರ ಮುತ್ತಯ್ಯನಾತನ ಭಾವ ಮೈದುನ । ನಯ್ಯನಗ್ರಜರನುಜರೆಂಬೀ ಜ್ಞಾತಿಬಾಂಧವರ ॥ ಕೈಯ
ಲಬಗಳಿ ಹೊಯ್ದು ತಿರಸರ । ದುಯ್ಯಲಾಡಿದವರ್ಗೆ ಮೋಹ್ಮುಖಿ । ದಯ್ಯಗಳಿಗಾನೊಬ್ಬಳೆಂದಳು ನಗುತ ನಳಿ
ನಾಕ್ಷಿ ॥೨೬॥ ಮರೆಯಮಾತಂತಿರಲಿ ನಾಕದ । ಮುಂದುಕಳೆ ಮಾನಿನಿಯರಿಚ್ಛೆಯನರಿಯದವನೂಸುರೇಂ
ದ್ರನಾಗಲಿ ಚಂದ್ರನಾಗಿರಲಿ ॥ ಕುರಿಕಣಾ ಷಡಖೂಳನೀನೆಂ । ದರಿವೆಯೆನೆ ನಡನಡುಗಿ ಕೈಮುಗಿ ।
ದೆರಗಿ ಮಗುಳೀಮಾತನೆಂದನು ಪಾರ್ಥನೂರ್ವಶಿಗೆ ॥೨೭॥ ಇದು ಮನುಷ್ಯಶರೀರತದ್ಧ । ರ್ಮದಲಿ
ತನ್ನವಸಾನಪರಿಯಂ । ತಿದರೊಳವ್ಯಭಿಚಾರದಲಿ ವರ್ತಿಸಿದಬಳಿಕಿನಲಿ ॥ ತ್ರಿದಶರಲ್ಲಗೆ ಬಂದರಾಮಾ ।
ರ್ಗದಲಿ ನಡೆವುದು ದೇವತಾದೇ । ಹದಲಿ ಬಲವತ್ತರವು ದೇಹವಿಶೇಷವಿಧಿಯೆಂದ ॥೨೮॥ ಅಹುದಹು
ದಲೇಶ್ರೌತಪಥದಲಿ । ಬಹಿರ ನೀವೇ ಸ್ಮಾರ್ತವಿಧಿಸಂ । ನಿಹಿತರೆಂಬುದನರಿಯದೇ ಮೂಜಗದ ಜನ
ವೆಲ್ಲಾ ॥ ಮಹಿಳೆಯೊಬ್ಬಳೊಳೈವರೊಡಗೂ । ಶಹರು ನೀವೇನಲ್ಲಲೇ ನಿ । ಸ್ಪೃಹರು ನೀವ್ನಮ್ಮಲ್ಲಿ
ಹರಹರಯೆಂದಳಿಂದುಮುಖಿ ॥೨೯॥ ತಾಯ ನೇಮದಲಂದು ಕಮಲದ । ಳಾಯತಾಕ್ಷಿಯ ಕೂಟವೈ
ವರಿ । ಗಾಯಿತದು ತಪ್ಪೇನು ಜನನಿಯ ನುಡಿಯಲಿಪ್ಪವೆಲೇ ॥ ಕಾಯಸೌಖ್ಯಕೆ ಕಾಮಸುಖದ ವಿ ।
ಡಾಯತತ್ತ್ವಕೆ ವೇಡೆಗೊಂಡು ಸ । ಮಾಯಿಯಲಿ ದುರ್ಗತಿಗೆ ದುಮ್ಮಾಳಿಸುವನಲ್ಲೆಂದ ॥೩೦॥ ತಾಯ
ನೇಮದಲೈವರಿಗೆ ಕಮ । ಲಾಯತಾಕ್ಷಿಯ ಕೂಟವೇ ಸುರ । ರಾಯ ನಿಮ್ಮಯ್ಯನು ವಿಲಂಘ್ಯವೆ ನಿಗೆ

ಪಿತೃವಚನ ॥ ರಾಯನಟ್ಟಲು ಬಂದೆನೀಕ್ಷಿಸು । ಮಾಯುಧನ ಕಗ್ಗೊಲೆಯ ಕೆದರುವ । ಪಾಯವನು ನೀ ಬಲ್ಲೆಯೆಂದಳ ವನಿತೆ ವಿನಯದಲಿ ॥೩೨॥ ಸರಸಿಜದ ಮಧುಮಧುಕರನನು । ಕರಸಿದೊಡೆ ಚಂದ್ರಿಕೆ ಚಕೋರನ । ವರಿಸಿದೊಡೆ ನಿಧಿ ಲಕ್ಷ್ಮಿ ಸಲಿದೊಡೆ ನಯನವೀಧಿಯಲಿ ॥ ಗರುವೆಯರು ಮೇಲಿಕ್ಕಿ ಪುರುಷನ । ವರಿಸಿದೊಡೆ ಜಾರುವರೆ ಸುಡಲಾ । ಸರಸಿಜವನಾ ಚಂದ್ರಿಕೆಯ ನಾನಿಧಿಯ ನಾವಧುವ ॥೩೩॥ ತಿಳುಹಿದೊಡೆ ಸುರಲೋಕದ ವರತಿ । ಗಳಹೆಯರಲಾ ಯೆಂಬೆ ಮನ್ಮಥ । ಖಳ ಕಣಾ ನಿಷ್ಕರುಣಿ ನೀ ಸೌಭಾಗ್ಯ ಗರ್ವದಲಿ ॥ ಲುವು ಬಿದ್ದುದು ವಾಸಿಯಲಿ ಕಂ । ದೊಳಸುಗೊಂಡುದು ಕಾಮಶರಮನ । ವಳುಕೆ ಕೆಡಹಿತು ವಿರಹತಾಪದಲೆಂದಳಿಂದುಮುಖಿ ॥೩೪॥ ಕಾಡಲಾಗದು ನಿಮ್ಮೊಡನೆ ಮುರಿ । ದಾಡಲಮ್ಮೆನು ಮನಕೆ ಧೈರ್ಯವ । ಜೋಡ ತೊಟ್ಟಿದಿರಾಗಿ ನಿಲೆ ನನೆಯಂಬು ನಾಟುವವೇ ॥ ಖೋಡಿಯೇಕಿದಕವ್ವೆ ಮಕ್ಕಳ । ನೋಡಬಂದೊಡೆ ಬೇರೆ ಕಷ್ಟವ । ನಾಡುವರೆ ಬಲ್ಲವರು ಬಿಜಯಂಗೈಯಿ ನೀವೆಂದ ॥ ರೋಷ ಪೆರಡಲೆಯಾಯ್ತು ಲಜ್ಜೆಯ । ಮೀಸಲಳಿದುದು ಬಲುವಿಧದ ಬಹು । ವಾಸಿಗಳು ಪಲ್ಲವಿಸಿದವು ತೆಲ್ಲೈಸಿ ತನುತಾಪ ॥ ಆಸೆಯೈಸರವೋಯ್ತು ಕಡುರುಝಳ । ಸೂಸಿದುದು ಸಯ್ಲಿನಲಿ ಕಂಗಳು । ಕೇಸುರಿಯ ಮುಕ್ಕುಳಿಸಿ ಕಾಮಿನಿಯಾ ॥೩೬॥ ಸೊಂಪಡಗಿತು ಮುಖೇಂದು ತನುಲತೆ । ಕಂಪಿಸಿದುದಡಿಗಡಿಗೆ ಮೈ ತನಿ । ಗಂಪಿನಲಿ ಮಘಮಘಿಸಿತ ಮಲಸ್ವೇದಸಲಿಲದಲಿ ॥ ತಂಪಿನಲಿ ಶಿಖಿ ಮಧುರದಲಿ ಕಟು । ನುಂಪಿನಲಿ ಬಿರಿಸ ಮೃತದಲಿ ವಿಷ । ಗುಂಪಿನಲಿ ನೆಲೆಯಾದವೋಲ್ಸತಿಗಾಯ್ತು ಘನರೋಷ । ಕೆತ್ತಿದವು ತುಟಿ ಕದಪಿನಲಿ ಕೈ । ಪತ್ತಿಸುತ ತೂಗಿದಳು ಶಿರವನು । ತತ್ತರೋಷಾಯುಧವಮಸೆದಳು ಧಾರೆಗಂಗಳಲಿ ॥ ಎತ್ತಿದುಬ್ಬೇಗದ ವಿಕಾರದ । ಚಿತ್ತಬುದ್ಧಿಮನಂಗಳಾತ್ಮನ । ಜೊತ್ತಿಸಿದವದ್ಭುತದಹಂಕಾರದಲಿ ಕಾಮಿನಿಯಾ ॥೩೭॥ ಎಲವೊ ಭಂಡ ರಭಾವ ಖೂಳರ । ನಿಳಯ ಖಳರಧಿನಾಥ ವಂಚಕ । ತಿಲಕ ಗಾವಿಲರೊಡೆಯ ಬಂಧುವೆ ದುಷ್ಟನಾಯಕರಾ ॥ ಎಲೆ ಮರುಳೆ ತಾನಾವಳೆಂಬುದ । ತಿಳಿಯಲಾ ನೀನಾವನೆಂಬುದ । ನಿಳೆಯರಿಯದೇ ಭಂಡ ಫಡ ಹೋಗೆಂದಳಿಂದುಮುಖಿ ॥೩೯॥ ಒಲಿದು ಬಂದವರಾವು ಸೊಬಗಿನೊ । ಳೊಲಿಸಿ ಮರುಗಿಪಮಿಂಡ ನೀನತಿ । ಸುಲಭರಾವ್ ದುರ್ಲಭನು ನೀ ದೇವೇಂದ್ರಕಟಕದಲಿ । ಎಲೆ ನಪುಂಸಕ ಗಂಡುವೇಷದ । ಸುಳಿವು ನಿನಗೇಕೆನುತ ರತಿಕಳ । ವಳಿಸಿ ಕರವೆತ್ತಿದಳ ಹಿಡಿಹಿಡಿ ಶಾಪವಿದೆಯೆನುತ ॥೪೦॥ ತಳುಕಿತದ್ಭುತರೋಷ ಸುಯ್ಲಿನ । ಝಳವೊಡೆದು ಮೂಕುತಿಯ ಮುತ್ತಿನ ॥ ಬೆಳಕು ಕುಂದಿತು ಕುಂದಿತ ಮಳಲ್ಛವಿ ಮುಖಾಂಬುಜದಾ ॥ ಹೊಳೆಹೊಳೆವ ಕೆಂದಳದ ಸೆಳ್ಳುಗುರೊಳ ಮಯೂಖದ ಮಣಿಯ ಮುದ್ರಿಕೆ । ಗಳ ಮರೀಚಿಯಲೆಸೆದುದೆತ್ತಿದ ಹಸ್ತವೂರ್ವಶಿಯಾ ॥೪೧॥ ರಾಹು ತುಡುಕಿದ ಶಶಿಯೊ ಮೇಣೌ । ದಾರ್ಯ ಹಿಮಸ್ತಕ ಮಾಣಿಕವೊ ಕಡು । ಗಾಹಿನ ಮೃತವೊ ಕುಪಿತ ಸಿಂಹದ ಗುಹೆಯ ಮೃಗವದವೋ ॥ ಲೋಹಧಾರೆಯ ಮಧುವೊ ಕಳಿತಹ । ಳಾಹಳದ ಕಜ್ಜಾಯವೆನಿಸಿತು । ರೂಹು ಸುಮನೋಹರ ಭಯಂಕರ ವಾಯ್ತು ಸುರಸತಿಯಾ ॥೪೨॥ ನರ ಮೃಗಾಧಮ ನಿಮ್ಮ ಭಾರತ । ವರುಷ ಭೂಮಿಯೊಳೊಂದು ವರುಷಾಂ । ತರ ನಪುಂಸಕನಾಗಿ ಚರಿಸು ನಿರಂತರಾಯದಲಿ ॥ ಹರಿಯ ನಂಗುಲಿಗಳ ಧನಂಜಯನೊಲೆದು ನಿಜಶಿರವ ॥ ಆಗಲಿದು ಸುರಭವನವಧುಗಳು । ಸಾಗರಿಗರಿವರೆತ್ತ । ಭಾರತ । ಭೂಗತರು ತಾವೆತ್ತಲಿದು ಘಟಿಸಿದುದು ವಿಧಿಯೆಂದ ॥೪೪॥ ಸುರಪತಿಗೆ ಸೂಚಿಸಿದೆನೇಮೋ

ನಂಗುಲಿಗಳ ಧನಂಜಯನೊಲಿದು ನಿಜತಿರವ ॥ ಆಗಲಿದು ಸುರಭವನವಧುಗಳು । ನಾಗರಿಗರಿವರೆತ್ತ
ಭಾರತ । ಭೂಗತರು ತಾವೆತ್ತಲಿದು ಘಟಿಸಿದುದು ವಿಧಿಯೆಂದ ॥೪೪॥ ಸುರಪತಿಗೆ ಸಂಚಿಸಿದೆನೇ
ನೋ । ಣ್ಕರಸಿದೆನೆ ಕಮಳಾನನೆಯ ನಿ । ಷ್ಠುರದನುಡಿಗಪರಾಧವುಂಟೇ ತಾನು ಮಾಡಿದುದು ॥ ವರು
ಷತನಕ ನಪುಂಸಕದಲಾ । ಚಂಸಬಲ್ಲೆನೆ ಸಾಕು ದೇಹಾಂ । ತರವನಂಗೀಕರಿಸುವೆನಲಾ ತನ್ನ ನುಡ
ಲೆಂದ ॥೪೫॥ ಎಲೆವಿಧಾತ್ರ ಕೃತಾಪರಾಧ । ಸ್ಥಳಕೆ ದಂಡಪ್ರಾಪ್ತಿಯಲ್ಲದೆ । ವಿಲಸಿತದವೇದಾರ್ಥದಲಿ
ಮನ್ವಾದ್ಯುಕ್ತಮಾರ್ಗದಲಿ ॥ ಚಲಿಸದಾಚರಿಸಿದೊಡೆ ಧರ್ಮ । ಸ್ಥಳದೊಳೇನುನಿಮಿತ್ತವಕಟಾ । ಗಳಿತ
ಪೌರುಷನಾಗಿ ಬದುಕುವನಲ್ಲ ತಾನೆಂದ ॥೪೬॥ ತಪವನಾಚರಿಸಿದೊಡೆವರಪಾ । ಶುಪತಶರವೆನಗಾಯ್ತು
ಧರ್ಮವೆ । ತಪವಲಾಯೆಂದರಿದು ನಡೆದೊಡೆ ಷಂಡತ್ವನವಾಯ್ತು ॥ ತಪವೆರಡು ಸರಿಫಲದೊಳಾ
ದುದು । ವಿಪರೀತದಗತಿ ಗಹನತರವೇ । ವಿಪುಳಕರ್ಮಸ್ಥಿತಿಯೆನುತ ತೂಗಿದನು ನಿಜತಿರವ ॥೪೭॥
ತಿವನ ಶರವೆನಗಾಯ್ತು ರಿಪುಕೌ । ರವರ ರಕುತದ ರಾಟಳವನೆ । ತ್ತುವೆನು ಕಟ್ಟಾಮುಡಿಯನೆಂಬೆನು
ದುರುಪದೀಸತಿಗೆ ॥ ಇವಳು ಭಂಗಿಸಿ ಬೂತುಗೆಡಹಿದ । ಹವಣನಾರಿಗೆ ಹೇಳುವೆನು ವರ । ಯುವ
ತಿಗೀನುಡಿಯೊಸಗೆಯೇ ಹಾಯೆನುತ ಬಿಸುಸುಯ್ದ ॥೪೮॥ ಅರಸ ಕೇಳೈ ಚಿತ್ರಸೇನನ । ಕರೆಸಿ
ಯೂರ್ವಶಿ ಪಾರ್ಥ ಮಾಡಿದ । ದುರುಳತನವನು ದೂರಿದೊಡೆಸುರಸತಿಯ ಸಂತೈಸಿ ॥ ಸುರಪತಿಗೆ
ಗಂಧರ್ವನಿವರಿ । ಬ್ಬರನಿರೋಧನಿಬಂಧನವನೆ । ಚ್ಚರಿಸಲರ್ಜುನನರಮನೆಗೆ ಬಂದನು ಬಲಧ್ವಂಸಿ ॥
ಮಗನನಪ್ಪಿದನೆನ್ನ ತಂದೆಗೆ । ದುಗುಡವೇಕೆನ್ನಾನೆಗೆತ್ತಣ । ಬೆಗಡಿದೆನ್ನರಸಂಗಿದೆತ್ತಣದೆಸೆಯದು
ಮಮ್ಮನ ॥ ಮೊಗದ ತನಿಹಳಹಳಿಕೆ ನೇತ್ರಾಂ । ಬುಗಳೊಳದ್ದುದು ನಿಜಮನೋವ್ಯ । ತ್ತಿಗಳೊಳಗೆ
ನುಡಿ ಮುಳುಗಿತೇನಿದು ಚಿತ್ರವಾಯ್ತೆಂದ ॥೫೦॥ ನುಡಿಸೆ ತಲೆವಾಗಿದನು ಲಜ್ಜೆಯ । ಝಡಿತೆಯಲಿ
ಝೊಂಮೇರಿದಂದದಿ । ಮಿಡುಕದಿರೆ ಮಗುಳಪ್ಪಿ ಹರಿ ಮೊಗನೆಗಹಿ ಮುಂಡಾಡಿ ॥ ಬಿಡು ಮನೋ
ಗ್ಲಾನಿಯನು ಸತಿ ಕೆಡೆ । ನುಡಿದುದೆಲ್ಲವನೆನಗೆ ಸ್ಫುರಿಸು । ಮಡದಿಯರಲೇನುಂಟು ಗುಣವೆನ್ನಾಣೆ
ಹೇಳೆಂದ ॥೫೧॥ ಎಲೆಕಿರೀಟಿ ವೃಥಾಮನೋವ್ಯಥೆ । ತಳಿತುದೇಕೂರ್ವಶಿಯ ಶಾಪದ । ಲಳುಕಿದೈ
ತತ್ಕ್ರೋಧ ನಿನಗುಪಕಾರವಾಯ್ತು ಕಣಾ ॥ ಹಳುವದಲಿ ಹನ್ನೆರಡುವರುಷದ । ತಲಹಿನಜ್ಞಾತದಲಿ
ವರುಷವ । ಕಳಿವೊಡಿದುಸಾಧನವೆಯಾಯ್ತು ಶಿಖಂಡಿತನವೆಂದ ॥೫೨॥ ಖೋಡಿಯಿಲ್ಲೆಲೆಮಗನೆ
ಚಿಂತಿಸ । ಬೇಡ ನಿಮ್ಮಜ್ಞಾತದಲಿ ನೆರೆ । ಜೋಡಲಾ ಜಾಣಾಯ್ಲರಿಪುಜನದೃಷ್ಟಿಶರಹತಿಗೆ ॥ ಕೂಡಿ
ತಿದು ಪುಣ್ಯದಲಿ ಸುರಸತಿ । ಮಾಡಿದಪಕೃತಿ ನಿನ್ನ ಭಾಷೆಯ । ಬೀಡ ಸಲಹಿದುದರಿಯೆ ನೀ ಸಾಹಿತ್ಯ
ನಲ್ಲೆಂದ ॥೫೩॥ ಎಂದು ಪಾರ್ಥನ ಸಂತವಿಟ್ಟು ಪುರಂದರನು ತನ್ನರಮನೆಗೆ ನಡೆ । ತಂದನರ್ಜುನಸ
ಹಿತ ವಿವಿಧವಿನೋದವಿಭವದಲಿ ॥ ಅಂದು ಶಿಖಿಪವನಾದಿಗಳು ನಲ । ವಿಂದ ಕೊಟ್ಟರು ಶರವನಮರೀ ।
ವೃಂದ ಸೂಸಿತು ಸೇಸೆಯನು ಜಯರವದ ರಭಸದಲಿ ॥೫೪॥ ಸುರಪನರುಹಿದನಸ್ತ್ರಶಸ್ತ್ರೋ । ತ್ಕರರ
ಹಸ್ಯವನಮರಭುವನದ । ಭರತವಿದ್ಯೆಯನರುಹಿಸಿದನಾಶಸ್ತ್ರವಿಧಿಯಿಂದ ॥ ಸುರರಿಗಲಗಣಸಾದ
ದೈತ್ಯರ । ನೊರಸಿದನು ತತ್ಕೀರ್ತಿಲತೆ ಕುಡಿ । ವರಿದು ಬೆಳೆದುದು ವೀರನಾರಾಯಣನಮೈದುನನಾ ॥೫೫॥

ಅಂತು ಸಂಧಿ ೮ ಕ್ಕೆ ಪದ ೪೨೭ ಕ್ಕಂ ಮಂಗಳಮಸ್ತು.

# ಒಂಭತ್ತನೆಯ ಸಂಧಿ.

**ಸೂಚನೆ.** **ಸಕಲಮುನಿಜನಸಹಿತಗಿರಿವನ । ನಿಕರದಲಿ ತೊಳಲಿದನು ರಾಜ । ನ್ಯಕಶಿರೋಮಣಿ ಧರ್ಮನಂದನ ತೀರ್ಥಯಾತ್ರೆಯಲಿ ॥**

ಅರಸ ಕೇಳೈ ಪಾರ್ಥನಿದ್ದನು । ವರುಷವೈದರೊಳಿಂದ್ರಭವನದ । ಸಿರಿಯ ಸಮ್ಮೇಳದ ಸಗಾಢದ ಸೌಮನಸ್ಯದಲಿ ॥ ನರನ ಹದನೇನೋ ಧನಂಜಯ । ನಿರವದೆಲ್ಲಿ ಕಿರೀಟಿ ನಮ್ಮನು । ಮರೆದು ಕಳೆದನಲಾಯೆನುತ ಯಮಸೂನು ಚಿಂತಿಸಿದ ॥೧॥ ಕಳುಹಿದನು ಲೋಮಶನನವನೀ । ತಳಕೆ ಸುರಪತಿ ಸಿತಹಯನ ಕೌ । ಶಲವನೊಡಹುಟ್ಟಿದರಿಗರುಹಲಿಕಭ್ರಮಾರ್ಗದಲಿ ॥ ಇಳಿದನಾಮುನಿಪತಿ ಧರಿತ್ರೀ । ತಳಕೆ ಕಾಮ್ಯಕನಾಮವನದಲಿ । ತಳಿರ ಗೂಡಾರದಲಿ ಕಂಡನು ಧರ್ಮನಂದನನ ॥೨॥ ಈತನಿದಿರೆದ್ದರ್ಘ್ಯಪಾದ್ಯವ । ನಾತಪೋನಿಧಿಗಿತ್ತು ಬಹಳ । ಪ್ರೀತಿಯಲಿ ಬೆಸಗೊಂಡನವರಾಗಮನಸಂಗತಿಯ ॥ ಆತನಮಲಸ್ವರ್ಗಸದನಸು । ಖಾತಿಶಯವನು ತಿಳುಹಿದನು ಪುರುಹೂತಭವನದಲರ್ಜುನನವಾರ್ತೆಯ ವಿವರಿಸಿದ ॥೩॥ ನುಡಿನುಡಿಗೆ ಸುಕ್ಷೇಮಕುಶಲವ । ನಡಿಗಡಿಗೆ ಬೆಸಗೊಂಡು ಪುಳಕದ । ಗುಡಿಯ ಬೀಡಿನ ರೋಮಪುಳಕದ ಪೂರ್ಣಹರುಷದಲಿ ॥ ಪೊಡವಿಯಧಿಪತಿ ಬಳಿಕ ತೊಳಲಿದ । ನಡವಿಯಡವಿಯತೀರ್ಥಯಾತ್ರೆಗೆ । ಮಡದಿ ನಿಜಪರಿವಾರವವನೀದೇವಕುಲಸಹಿತ ॥೪॥ ವರಪುಲಸ್ತ್ಯಮುನೀಂದ್ರ ಭೀಷ್ಮಂ । ಗರುಹಿದುತ್ತಮತೀರ್ಥವನು ವಿ । ಸ್ತರಿಸಿದನು ಲೋಮಶಮುನೀಶ್ವರನವನಿಪಾಲಂಗೆ ॥ ಧರಣಿಪತಿ ಬೃಹದಶ್ವನನು ಪತಿ । ಕರಿಸಿ ನಿಜರಾಜ್ಯಾಪಹಾರದ । ಪರಮದುಃಖಪರಂಪರೆಯನರುಹಿದನು ಖೇದದಲಿ ॥೫॥ ಆತನೀತನ ಸಂತವಿಟ್ಟು । ದ್ಯೂತದಲಿ ನಳಚಕ್ರವರ್ತಿಮ । ಹೀತಳವ ಸೋತನು ಕಣಾ ಕಲಿಯಿಂದ ಪುಷ್ಕರಗೆ ॥ ಭೂತಳವ ಬಿಸುಟಡವಿಗೈದಿದ । ನಾತನಿಜವಧುಸಹಿತ ವನದಲಿ । ಕಾತರಿಸಿ ನಿಜಸತಿಯ ಬಿಸುಟನು ಹಾಯ್ದನಡವಿಯಲಿ ॥೬॥ ಬಳಿಕ ಕರ್ಕೋಟಕನದೆಸೆಯಿಂ । ದಳಿಯೆ ನಿಜ ಋತುಪರ್ಣಭೂಪನ । ನಿಳಯಕೋಲೈಸಿದನು ಬಾಹುಕನೆಂಬನಾಮದಲಿ ॥ ಲಲನೆ ತೊಳಲಿದು ಬರುತ ತಂದೆಯ । ನಿಳಯವನು ಸಾರಿದಳು ಬಳಿಕಾ । ನಳಿನಮುಖಿಯಿಂದಾಯ್ತು ನಳಭೂಪತಿಗೆ ನಿಜರಾಜ್ಯ ॥೭॥ ಆತನಾಪತ್ತದು ಮಹೀಪತಿ । ನೀತಳೋದರಿಸಹಿತ ನಿನ್ನೀ । ಭ್ರಾತೃಜನಸಹಿತೀಮಹಾಮುನಿಮುಖ್ಯಜನಸಹಿತ ॥ ಕಾತರಿಸುತಿಹೆ ನಿನ್ನವೊಲು ವಿ । ಖ್ಯಾತರಾರೈ ಪುಣ್ಯತರರೆಂ । ದಾತಪೋನಿಧಿ ಸಂತವಿಟ್ಟನು ಧರ್ಮನಂದನನ ॥೮॥ ನಳಮಹೀಪತಿಯಕ್ಷಹೃದಯವ । ತಿಳಿದು ಋತುಪರ್ಣನಲಿ ಕಾಲವ । ಕಳಿವು ಗೆಲಿದನು ಪುಷ್ಕರನ ವಿದ್ಯಾತಿಮಹಿಮೆಯಲಿ ॥ ಗೆಲಿದು ಕೌರವಶಕುನಿಗಳು ನಿ । ನ್ನಿಳೆಯ ಕೊಂಡರು ಮರಳಿ ಜೂಜಿಂ । ಗಳುಕಬೇಡೆಂದಕ್ಷಹೃದಯವ ಮುನಿಪ ಕರುಣಿಸಿದ ॥೯॥ ಬಳಿಕ ಲೋಮಶಸಹಿತ ನೃಪಕುಲತಿಲಕ ಬಂದನಗಸ್ತ್ಯನಾಶ್ರಮ । ದೊಳಗೆ ಬಿಟ್ಟನು ಪಾಳೆಯವನಾಮುನಿಯ ಚರಿತವನು ॥ ತಿಳುಹಿದನು ಲೋಮಶನು ವೃತ್ರನ । ಕಲಹಕೆಂದು ದಧೀಚಿಮುನಿಪತಿ । ಯೆಲುವನಮರರು ಬೇಡಿದುದನರುಹಿದನು ಜನಪತಿಗೆ ॥೧೦॥ ಆಮುನಿಯ ಕಂಕಾಳದಲಿ ಸು । ತ್ರಾಮ ಕೊಂದನು ವೃತ್ರನನು ಬಳಿ । ಕಾಮಹಾದಾನವರ ರಕ್ಕಸಕೋಟಿಜಲಧಿಯಲಿ ॥ ಭೀಮಬಲರಡಗಿದರು ಬಂದೀ । ಭೂಮಿ

ಯಲ್ಲಿ ವಸಿಷ್ಠನಾಶ್ರಮ । ದಾಮುನೀಂದ್ರರ ತಿಂದರವರು ಸಹಸ್ರಸಂಖ್ಯೆಯಲಿ ॥೧೧॥ ಚ್ಯವನನಾ ಶ್ರಮದೊಳಗೆ ಮೂರನು । ತಿವಿದು ಭಾರದ್ವಾಜನಾಶ್ರಮ । ಕವರ ಮುನಿದೆಪ್ಪತ್ತ ನುಂಗಿದರೇನನು ಸುರುವೆನು ॥ ದಿವಿಜರಿತ್ತಲಗಸ್ತ್ಯನನು ಪರು। ತವಿಸಿದರು ಸಾಗರವನಾಮುನಿ । ಹವಣಿಸಿದ ಜಠರದಲಿ ಕೊಂದನು ದೈತ್ಯದಾನವರ ॥೧೨॥ ಸಗರಸುತಚರಿತವನು ಕಪಿಲನ । ದೃಗುಶಿಖಿಯಲುರಿದುದನು ಬಳಿ ಕವ । ರಿಗೆ ಭಗೀರಥನಿಳುಹಿದಮರನದೀಕಥಾಂತರವ ॥ ವಿಗಡಮುನಿಯಿಲ್ವಲನವಾತಾ । ಪಿಗಳ ಮರ್ದಿಸಿ ವಿಂಧ್ಯಗಿರಿಹ । ಬ್ಬುಗೆಯ ನಿಲಿಸಿದಗಸ್ತ್ಯಚರಿತವ ಮುನಿಪ ವರ್ಣಿಸಿದ ॥೧೩॥ ಕೇಳಿದನು ನೃಪಋಶ್ಯಶೃಂಗವಿ । ಶಾಲಕಥೆಯ ಕಳಿಂಗದೇಶದ । ಕೂಲವತಿಗಳ ಮಿಂದು ಗಂಗಾಜಲಧಿಸಂಗಮದ ॥ ಮೇಲೆ ವೈತರಣಿಯ ವರೋತ್ತರ । ಕೂಲವನು ದಾಂಟಿದನು ನೃಪಕುಲ । ಕಾಲಯಮನಾಶ್ರಮಕೆ ಬಂದರು ರೇಣುಕಾಸುತನ ॥೧೪॥ ಪರಶುಧಾಮನ ಕಾರ್ತವೀರ್ಯನ । ಧುರದೊಳಿಪ್ಪತ್ತೊಂದುಸೂಳಿ ನೊ । ಳರಿದರಾಯರ ಕಂಠನಾಳದ ನೆತ್ತರಿನನದಿಯ ॥ ಪರಮಪಿತೃತರ್ಪಣವನಾತನ । ಪರಶುವಿನ ನೆಣವಸೆಯ ತೊಳಹದ । ವರನದಿಯ ವಿಸ್ತರಣವನು ಕೇಳಿದನು ಯಮಸೂನು ॥೧೫॥ ಬಂಪನವನಿಪ ನಾಪ್ರಭಾಸದ । ವಂದನೆಗೆ ಬಳಿಕಲ್ಲಿ ಯಾದವ । ವೃಂದದರ್ಶನವಾಯ್ತು ಬಹುವಿಧತೀರ್ಥತೀರದಲಿ॥ ಮಿಂದನಾತಗೆ ಗಯನಚರಿತವ । ನಂದು ಲೋಮಶ ಹೇಳಿದನು ನಲ । ವಿಂದ ಸಂಯಾತಿಚ್ಯವನಸಂವಾ ದಸಂಗತಿಯ ॥೧೬॥ ಚ್ಯವನಮುನಿಯ ವಿವಾಹವನು ರೂ । ಪವನು ಮುನಿಗಶ್ವಿನಿಗಳಿತ್ತುದ । ನವರಿಗಾಮುನಿಮುಖಹವಿರ್ಭಾಗಪ್ರಸಂಗತಿಯ ॥ ಅವರಿಗಿಂದ್ರನ ಮತ್ಸರವ ದಾ । ನವನ ನಿರ್ಮಾ ಣವನು ಬಳಿಕಿನೊ । ಳವನಿಪಗೆ ಮಾಂಧಾತಚರಿತವನೊರೆದನಾಮುನಿಪ ॥೧೭॥ ಸೋಮಕನ ಚರಿತವ ಮರುತ್ತಮ । ಹಾಮಹಿಮನಾಚಾರಧರ್ಮ । ಸ್ತೋಮವನು ವಿರಚಿಸಿ ಯಯಾತಿಯ ಸತ್ಕಥಾಂತ ರವ ॥ ಭೂಮಿಪತಿ ಕೇಳಿದನು ಶಿಖಿಯು । ದ್ದಾಮತನವನು ತನ್ನ ಮಾಂಸವ । ನಾಮಹೇಂದ್ರಾಗ್ನಿಗ ಳಿಗಿತ್ತವಿಚಿತ್ರವಿಸ್ತರವ ॥೧೮॥ ಕೇಳಲಷ್ಟಾವಕ್ರಚರಿತವ । ಹೇಳಿದನು ಲೋಮಶಮುನೀಂದ್ರ ನೃ । ಪಾಲಕಂಗರುಹಿದನು ಯಾವದ್ರುಪಿಯ ಸತ್ಕಥೆಯ ॥ ಬಾಳಡವಿ ಬಯಲಾಯ್ತು ಫಲಮೃಗ । ಜಾಲ ಸವೆದುದು ಗಂಧಮಾದನ । ಶೈಲವನದಲಿ ವಾಸವೆಂದವನೀಶಹೊರವಂಟ ॥೧೯॥ ಅರಸ ಬಂದನು ಗಂಧಮಾದನ । ಗಿರಿಯ ತಪ್ಪಲಿಗಗ್ನಿಹೋತ್ರದ । ಪರಮಋಷಿಗಳು ಮಡದಿಸಕಲನಿಯೋಗಿಜನಸ ಹಿತ ॥ ಸರಸಿ ನೆರೆಯವು ಸ್ನಾನಪಾನಕೆ । ತರುಲತಾವಳಿಗಳು ಯುಧಿಷ್ಠಿರ । ನರಮನೆಯ ಸೀವಟಕೆ ಸಾಲವು ನೃಪತಿ ಕೇಳೆಂದ ॥೨೦॥ ಮರುದಿವಸವಲ್ಲಿಂದ ಬೆಟ್ಟದ । ಹೊರಗೆ ನಡೆತರಲಭ್ರದಲಿ ಗುಡು । ಯಿರಿದು ಮೆರೆದುದು ಮೇಘ ಮಿಂಚಿದವಖಿಳದೆಸೆಗಳಲಿ ॥ ಬರಸಿಡಿಲ ಬೊಬ್ಬೆಯಲಿ ಪರ್ವತ । ಬಿರಿಯೆ ಬಲುಗತ್ತಲೆಯ ಬಿಂಕಕೆ । ನರರ ಕಣುಮನ ಹೂಳೆ ತೂಳಿತು ಮಳೆ ಮಹೀತಳವ ॥೨೧॥ ಮರನ ಮರ ತಕ್ಕೈಸಿದವು ಕುಲ । ಗಿರಿಯ ಗಿರಿ ಮುಂಡಾಡಿದವು ತೆರೆ । ತೆರೆಗಳಲಿ ಗಂಟಿಕ್ಕಿದವು ಸಾಗ ರದಸಾಗರದಾ ॥ ಧರಣಿಗಿಕ್ಕಿದಿಳಿಂಪನಡಕಿಲು । ಜರಿಯದಿಹುದೇ ಜಗದ ಬೋನಕೆ । ಹರಿಗೆ ಹೇಳೆನೆ ಬೀಸಿದುದು ಬಿರುಗಾಳಿ ಬಿರುಸಿನಲಿ॥೨೨॥ಕೆದರಿತಲ್ಲಿಯದಲ್ಲಿ ಮಳೆಯಲಿ।ಹುದುಗಿತಲ್ಲಿಯದಲ್ಲಿ ಕಣಿಗಿಲು। ಕದಳಿಗಳ ಮುರಿಗೊಂಡುದಲ್ಲಿಯದಲ್ಲಿ ಹರಿಹರಿದು ॥ ಬೆದರಿತಲ್ಲಿಯದಲ್ಲಿ ಕರೆಕರೆ । ದೊದರಿತಲ್ಲಿಯದಲ್ಲಿ

ಬಲುವಳೆ । ಸದೆದುದಿವರನು ಸೇಡುಗೊಂಡುದು ಜನದ ಸುಮ್ಮಾನ ॥೨೩॥ ಬಗಿದು ಹೊಕ್ಕರು ಮೆಳೆಗ
ಳನು ಮಿಂ । ಚುಗಳ ಕಂಬೆಳಗಿನಲಿ ದಾರಿಯ । ತೆಗೆತೆಗೆದು ಸಾರಿದರು ಸಂದಣಿ ಮರನ ಹೆಮ್ಮರನ ॥
ಬಿಗಿದರೋಮದ ಹುದಿದಕೈಗೊ । ಪ್ಪುಗಳ ನಡುಕದ ಮೈಯ ಕಡುಸೇ । ದುಗಳ ಶೀತದ ಸಕಲಜನ
ಹುದುಗಿದುದರಣ್ಯದಲಿ ॥೨೪॥ ಹೊಳೆವಕಂಗಳ ಕಾಂತಿ ಬಲುಗ । ತ್ತಲೆಯ ಝಳಪಿಸೆ ಘೋರವಿಪಿ
ನದೊಳಳ್ಳಿಕುಲುಕಿ ಬಂದಳೊಬ್ಬಳೆ ಮೆಳೆಗೆ ಕೈಯೊಡ್ಡಿ ॥ ಬಲಿದು ಮೈ ನಡನಡುಗಿ ಹಲುಹಲು ।
ಹಳಚಿ ನನೆದಳು ವಾರಿಯಲಿ ತನು । ಹಳಹಳಿಸೆ ಬಳಲಿದಳು ಚರಣದ ಹೊಸಲ ಹೋರಟೆಗೆ ॥೨೫॥
ಎಡಹುಬೆರಳಿನ ಕಾಲಮುಳುಗಳ । ಕಡುಮಳೆಯ ಘಾಟಳಿಪಗಾಳಿಯ । ಸಿಡಿಲುಮಿಂಚಿನ ಘುಲ್ಲಣೆಯ
ಘೋರಾಂಧಕಾರದಲಿ ॥ ಒಡನೆ ಮಾನಿಸರಿಲ್ಲ ಕರೆದರೆ । ನುಡಿವರಿಲ್ಲ ಕರದ್ವಯದಿ ತಡ । ವಿಡುತ
ಪೈಸರದೊಳಗೆ ಸೂಸಿತು ಮೈ ಮಹಾಸತಿಯ ॥೨೬॥ ಗಾಳಿಗೊರಗಿದಕದಳಿಯಂತಿರೆ । ಲೋಲಲೋಚನೆ
ಘಟ್ಟುಗೆಡೆದಳು । ಮೇಲುಸುರ ಬಲುಮೂರ್ಛೆಯಲಿ ಮುದ್ರಿಸಿದಚೇತನದ ॥ ಬಾಲೆಯಿರೆ ಬೆಳಗಾ
ಯ್ತು ತೆಗೆದುದು ಗಾಳಿಬಿರುವಳೆ ಭೀಮನಕುಲನೃ । ಪಾಲರರಸಿದರೀಕೆಯನು ಕಂಡವರ ಬೆಸಗೊ
ಳುತ ॥೨೭॥ ಬರುತ ಕಂಡರು ಬಟ್ಟೆಯಲಿ ನಿ । ರ್ಭರದ ಮೂರ್ಛಾಮೋಹಿತಾಂತಃ । ಕರಣೆಯನು
ಹಾಯೆನುತ ಬಿದ್ದರು ಪವನಜಾದಿಗಳು ॥ ಧರಣಿಪತಿ ತೆಗೆದೀಕೆಯನು ಕು । ಳ್ಳಿರಿಸಿ ತನ್ನಯ ತೊಡೆ
ಯಮೇಲಾ । ದರಿಸಿ ಮಂತ್ರಿಸಿ ನೀರತಳಿದನು ರಕ್ಷೆಗಳ ರಚಿಸಿ ॥೨೮॥ ಉಪಚರಿಸಿ ರಕ್ಷೋಘ್ನಸೂ
ಕ್ತದ । ಜಪವಮಾಡಿಸಿ ವಚನಮಾತ್ರದ । ರಪಣದಲಿ ರಚಿಸಿದನು ಗೋಧನಭೂಮಿದಾನವನು ॥ ನೃಪತಿ
ಕೇಳೊಂದೆರಡುಗಳಿಗೆಯೊ । ಳಪಹರಿಸಿದುದು ಮೂರ್ಛೆ ಸತ್ಯ । ವ್ಯಪಗತೈಶ್ವರ್ಯರನು ಕಂಡಳು
ಕಾಂತೆ ಕಣ್ದೆರೆದು ॥೨೯॥ ನೆಲೆವನೆಯ ಮಾಡದಲಿ ರತ್ನಾ । ವಳಿಯ ನುಣ್ಬೆಳಗಿನಲಿ ಹಂಸೆಯ । ತುಳಿ
ಯಮೆಲ್ವಾಸಿನಲಿ ಪವಡಿಸುವೀಕೆಗಿಂದೀಗ ॥ ಹಳುವದಲಿ ಘೋರಾಂಧಕಾರದ । ಮಳೆಯೊಳೊಬ್ಬಳೆ
ನಡೆದು ನೆನೆದೀ । ಕಲುನೆಲದೊಳೊರಗಿದಳೆನುತ ಮರುಗಿದನು ಧರಣೀಶ ॥೩೦॥ ಹರೆದುದುಬ್ಬಿದಮೂರ್ಛೆ
ಕರಣೋ । ತ್ಕರದ ಕಳವಳವಡಗಿತರಸನ । ನರಸಿ ಸಂತೈಸಿದಳು ತಪ್ಪೇನಿದು ಪುರಾಕೃತದ ॥ ಪರುಠವ
ಣೆಗೇಕಳಲು ಮುಂದಣ । ಗಿರಿಯ ಗಮನೋಪಾಯವನು ಗೋಚರಿಸಿರೇ ಸಾಕೆಂದಳಂಬುಜಮುಖಿ
ಮಹೀಪತಿಗೆ ॥೩೧॥ ಇದೆ ಮುನಿವ್ರಜವಗ್ನಿಹೋತ್ರಿಗ । ಳಿದೆ ಕುಟುಂಬಿಗಳಾಪ್ತಪರಿಜನ । ವಿದೆವರ
ಸ್ತ್ರೀಬಾಲವೃದ್ಧನಿಯೋಗಿಜನಸಹಿತ ॥ ಇದೆ ಮಹಾಕಾಂತಾರವಿನಿಬರ । ಪದಕೆ ವನಮಾರ್ಗದಲಿ
ಸೇರುವ । ಹದನ ಕಾಣೆನು ಶಿವಶಿವೆಂದಳು ಕಾಂತೆ ಭೂಪತಿಗೆ ॥೩೨॥ ಆಯತಾಕ್ಷಿಯ ನುಡಿಗೆ ಪಾಂಡವ ।
ರಾಯ ಮೆಚ್ಚಿದನಿನ್ನು ಗಮನೋ । ಪಾಯವೆಂತೆಂದೆನುತ ಚಿಂತಿಸಿದನು ಘಟೋತ್ಕಚನ ॥ ರಾಯ
ಕೇಳೈ ಕಮಲನಾಭನ । ಮಾಯೆಯೋ ನಾವರಿಯೆವಾಕ್ಷಣ । ವಾಯುಜು ವೇಗದಲಭ್ರದಿಂದಿಳಿತಂದನಸು
ರಾರಿ ॥೩೩॥ ವೀರದೈತ್ಯನ ಬಹಳದುಪ್ಪರಿ । ವಾರವದಸಾರೆಣಿಸುವರು ಮುಂ । ಗಾರಿರುಳ ತನಿಯೆರಕ
ನೀಲಾಚಲದ ಖಂಡರಣೆ ॥ ಘೋರರಾಹುವ್ಯೂಹವೆನೆ ಸುರ । ವೈರಿಗಳೆ ಮೈಗಾಂತಿಲಹರಿಯ । ಪೂರ
ದಲಿ ಜಗ ಮುಳುಗೆ ಬಂದುದು ಲಕ್ಷಸಂಖ್ಯೆಯಲಿ ॥೩೪॥ ದೇವ ಬೆಸಸಾ ನಮ್ಮ ಬರಿಸಿದು । ದಾವಹ
ದನು ನವೀನಭಟರಿದೆ । ದೇವರಿಪುಗಳು ಹೇಳು ನೆನಹಿನರಾಜಕಾರಿಯವ ॥ ಆವುದೆನಗುದ್ಯೋಗವೆನೆ

ಸಂಭಾವಿಸಿದನಸುರನನು ಜಾರುವ । ಜೀವವುರುತನ ಮರಳಿ ನಿಲಿಸಿತು ನಿಸ್ಸನುಡಿಯೆಂದ ॥೩೫॥ ದುರ್ಗವಿದೆ ನಮ್ಮಂಘ್ರಿಶಕ್ತಿಯ । ನುಗ್ಗಬೀತುದು ಸಾಹಸಿಗ ನೀ । ನಗ್ಗಳೆಯರಿದೆ ನಿನ್ನವರು ಪಡಿಗಿರಿಗಳಾಗಿರಿಗೆ ॥ ಹುಗ್ಗಗರ ಹೆಗಲೇರಿಸೊಂದೇ । ಲಗ್ಗೆಯಲಿ ನಡೆಸೆನೆ ಹಸಾದದ । ವೊಗ್ಗೆಗೈಗಳ ದನುಜತಗ್ಗಿದನರಸನಿದಿರಿನಲಿ ॥೩೬॥ ಹೊತ್ತನರಸನನರಸನನುಜರ । ನೆತ್ತಿದನು ನೃಪನರಸಿಯನು ಬಳಿ । ಕೆತ್ತಿಕೈವೀಸಿದನು ಭಟರಿಗೆ ತೋರಿಪರಿಜನವ ॥ ಹೊತ್ತರನಿಬರನಸುರಭಟರೊ । ತ್ತೊತ್ತೆಯಾದುದು ಬೆನ್ನಿನಲಿ ಬಿಗಿ । ದೆತ್ತಿ ಹಾಯ್ದರು ಮುಗಿಲ ತಟ್ಟಿನ ಪರಿಯಜೋಡಿನಲಿ ॥೩೭॥ ಅಸುರದೇಹಸ್ಪರ್ಶವಸವುಂ । ಜಸವಲಾ ತನಗೆನುತ ಮುನಿಲೋ । ಮಶನು ಗಗನೇಚರರ ಗತಿಯಲಿ ಬಂದನಿವರೊಡನೆ ॥ ವಿಷಮಗಿರಿಕಾನನಕದಥ್ವ । ಪ್ರಸರವನು ಹಿಂದಿಕ್ಕಿ ಹೊದ್ದಿದ । ರೆಸೆವನರನಾರಾಯಣಾಶ್ರಮವರತಪೋವನವ ॥೩೮॥ ಅಲ್ಲಿಯಖಿಳಋಷಿವ್ರಜವು ಭೂ । ವಲ್ಲಭನ ನಾತಿಥ್ಯಪೂಜಾ । ಸಲ್ಲಲಿತಸಂಭಾವನಾಮಧುರೋಕ್ತಿರಚನೆಯಲಿ ॥ ಅಲ್ಲಿಗಲ್ಲಿಗೆ ಸಕಲಮುನಿಜನ । ವಲ್ಲಭನು ಮನ್ನಿಸಿದನಾವನ । ದಲ್ಲಿ ನೂಕಿದನೆಂಟುದಿನವನು ನೃಪತಿ ಕೇಳೆಂದ ... ... ... ॥೩೯॥

ಅಂತು ಸಂಧಿ ೯ ಕ್ಕೆ ಪದ ೫೧೬ ಕ್ಕಂ ಮಂಗಳಮಸ್ತು

## ಹತ್ತನೆಯ ಸಂಧಿ.

ಸೂ॥ ಕಂಡನಡವಿಯೊಳನಿಲಜನನಾ । ಖಂಡಲನ ತನುಜನ ಪತಾಕಾ ।
ದಂಡದಲಿ ನಿಲುವಂತೆ ವರವನು ಪಡೆದನಾಭೀಮ॥

॥ಪದ॥ ಕೇಳು ಜನಮೇಜಯಧರಿತ್ರೀ । ಪಾಲ ನರನಾರಾಯಣಾಶ್ರಮ । ಕೂಲವತಿಗಳನಂದನದ ನಿರ್ಮಳಸರೋವರದ ॥ ಕೇಳಿಕೆಯನವಿಲುಗಳ ತುಂಬಿಯ । ಮೇಳವದ ಗೀತದ ವಿನೋದದ । ಲಾಳಿದರು ವನವಾಸಸಾಮ್ರಾಜ್ಯವನು ಸೊಗಸಿನಲಿ ॥೧॥ ಪರಮಧರ್ಮಶ್ರವಣಸೌಖ್ಯದೊ । ಳರಸನಿರೆ ಬದರಿಯಲಿ ಪೂರ್ವೋ । ತ್ತರದದೆಸೆವಿಡಿದೆಸಗಿತತಿಶಯಗಂಧಬಂಧುರದ ॥ ಭರಣಿ ಮನ್ಮಥಪೋತವಣಿಜನ । ತರಣಿ ತರುಣಭ್ರಮರಸೇವಾ । ಸರಣಿಯೆನೆ ಸುಳಿದುದು ಸಮೀರಣನಾಮಹಾದ್ರಿಯಲಿ ॥೨॥ ಸರಸಸೌಗಂಧಿಕದ ಪರಿಮಳ । ಭರದ ಭಾರವಣೆಯಲಿ ತಿಳಿಗೊಳ । ನುರುಬುದೆರೆಗಳ ತಿವಿಗಳಿನ ತುಂತುರುತುಷಾರದಲಿ ॥ ವೊರೆದೊಗುವಮರಿದುಂಬಿಗಳ ಮೋ । ಹರದ ಮೋಹಾಮೋಡಿಯಲಿ ಡಾ । ವರಿಸಿತೈದಿಂದ್ರಿಯದಲೊಂದಿರೆ ಸಕಲಮುನಿಜನವ ॥೩॥ ಮೇಲುರೆತದಲಿ ಪರಿಮಳದ ವೈ । ಹಾಳಿಯಲಿ ಸಲೆ ಬೀದಿವರಿದು ಛ । ಡಾಳಿಸುವಸೊಗಸಿನಲಿ ಸೊಂಪಾದಳು ಸರೋಜಮುಖಿ ॥ ಸೋಲಿಸಿತಲಾ ಚೂಣಿಯಲಿ ಸಂ । ಪಾಳಿಸಿದಸೌ ಗಂಧವಿನ್ನು ವಿ । ಶಾಲಪದುಮವದೆಂತುಟೆನುತವೆ ತೂಗಿದಳು ತಿರವ ॥೪॥ ಅರಸನಲಿ ಮೇಣ್ಣು ಕುಲಸಹದೇ । ವರಲಿ ತನ್ನ ಮನೋರಥಕೆ ವಿ । ಸ್ತರಣವಾಗದು ನುಡಿವೊಡಿಲ್ಲ ಜರ್ನನಸಮೀಪದಲಿ ॥ ಅರಿಭಯಂಕರಭೀಮನೇ ಗೋ । ಚರಿಸುವನಲಾಯೆನುತಲಾತನ । ಹೊರೆಗೆ ಬಂದಳು ನಗುತ ನುಡಿದಳು ಮಧುರವಚನದಲಿ ॥೫॥ ಹಿರಿದು ಸೊಗಸಾಯ್ತೆನಗೆ ಪೂರ್ವದ । ಪರಿ

ಮೊಳದ ಕೇಳಿಯಲಿ ನೀನಾ । ಸರಸಿಜವ ತಂದಿತ್ತು ತನ್ನ ಮನೋರಥವ್ಯಥೆಯ ॥ ಪರಿಹರಿಪುದೆನಲಬು ಜವದನೆಯ । ಕುರುಳನುಗುರಲಿ ತಿದ್ದಿದನು ತ । ತ್ಸರಸಿಜವ ತಹೆನೆನುತ ಕೊಂಡನು ನಿಜಗದಾಯುಧವ ॥೬॥ ಬಿಗಿದು ಬತ್ತಳಿಕೆಯನು ಹೊಸ್ನಾ । ಯುಗದ ಖಡ್ಗ ಶರಾಸನವ ಕೊಂ । ಡಗಧರನ ನೆನೆದನಿಲಸುತ ಹೊರವಂಟನಾಶ್ರಮವ ॥ ಬಗಿದು ಹೊಕ್ಕನರಣ್ಯವನು ಬೊ । ಬ್ಬೆಗಳ ಬಿರುಬಿನ ಬಾಹುಸತ್ವದ । ವಿಗಡಭೀಮನ ಕಾಲುದುಳಿ ಕಂಪಿಸಿತು ಕಾನನವ ॥೭॥ ಒದರಿದೊಡೆಪರ್ವತದಶಿಖರದ । ಉದುರಿದವು ಹೆಗ್ಗುಂಡುಗಳು ಮುರಿ । ದೊದೆಯೆ ಬಿದ್ದವು ಬೇರುಸಹಿತ ಮಹಾದ್ರುಮಾದಿಗಳು ॥ ಗದೆಯಹೊಯ್ಲಲಿ ಗಂಡಶೈಲವೊ । ಕದಳಿಗಳೊ ಸಾವರಿಯೆವುಬ್ಬಿದ । ಮದಮುಖನ ಪರಿಮಸಕ ಮುರಿದುದು ಗಿರಿತರುವ್ರಜವ ॥೮॥ ಮುಡುಹುಸೋಂಕಿದೊಡಾಮಹಾದ್ರಿಗ । ಳೊಡನೆ ತೋರಹತರು ಕೆಡೆದವಡಿಯಿಡಲು ಹಜ್ಜೆಗೆ ತಗ್ಗುದುದು ನೆಲಸಹಿತ ಹೆದ್ದವರು ॥ ಒಡೆದುದಿಳೆ ಬೊಬ್ಬಿರಿತಕೀತನ । ತೊಡೆಯ ಗಾಳಿಗೆ ಹಾರಿದವು ಕಿರು । ಗಿಡಮರಂಗಳು ಮೀರಿ ನಡೆದನು ಭೀಮನಡವಿಯಲಿ ॥೯॥ ಹುಲಿಕರಡಿಕಾಡಾನೆಸಿಂಹಾ । ವಳಿಗಳೀತನ ದನಿಗೆ ಯೋಜನ । ವಳಯದಲಿ ಹಾಯ್ದೋಡಿದವು ನೋಡುತ್ತ ಮುರಿಮುರಿದು ॥ ಹಳುವ ತಳಪಟವಾಯ್ತು ದಿಗ್ಗಜ । ತುಳಿದಬಾಳೆಯವನದವೊಲು ವೆ । ಗ್ಗಳೆಯನೈ ಕಲಿಭೀಮ ಬಂದನು ವನದಮಧ್ಯದಲಿ ॥೧೦॥ ಬಿರಿದವದ್ರಿಗಳನಿಲಸುತನು । ಬ್ಬರದಬೊಬ್ಬೆಗೆ ಮಿಕ್ಕಮೃಗತತಿ । ಶರಭಶಾರ್ದೂಲಂಗಳಿಲ್ಲ ವಿಲೋಚನಾಂತದಲಿ ॥ ಮುರಗಿರ್ದವ್ವುಗಗಿಗದವಾತೇ । ನರಸ ಭೀಮನ ದನಿಗೆ ಬೆಚ್ಚದೆ । ಗಿರಿಗುಹೆಗಳೇ ಮಲೆತು ನಿಂದವು ದನಿಗೆದನಿಗೊಡುತ ॥೧೧॥ ಆಮಹಾದ್ರಿಯ ತಪ್ಪಲಲಿ ನಿ । ಸ್ಸೀಮಕದಳೀಷಂಡದಲಿ ರಘು । ರಾಮನಾಮಸುಧಾಭಿಷೇಕಸಮಗ್ರಸೌಖ್ಯದಲಿ ॥ ಭೀಮವಿಕ್ರಮನಿದ್ದನೀಯು । ದ್ದಾಮಸಿಂಹಧ್ವನಿಗೆ ನಿದ್ರಾ । ತಾಮಸದ ತನಿವದವಡಗೆ ಕಂದೆರೆದನಾಹನುಮ ॥೧೨॥ ಏನಿದೆತ್ತಣರಭಸವೀಗಿರಿ । ಸಾನುವಿದಮಾನುಷವಿಹಾರ । ಸ್ಥಾನವಿವನಾರೋ ಮಹದೇವಾ ಪ್ರಚಂಡನಲಾ ॥ ಈನಿನದವೆಮ್ಮಂದಿನಗ್ಗದ । ವಾನರನ ಗರ್ಜನೆಗೆ ಗುರುವಾ । ಯ್ತೇನನೆಂಬೆನೆನುತ್ತಮೆಲ್ಲನೆ ಮಿಡುಕಿದನು ಹನುಮ ॥೧೩॥ ಮುರಿಯದಂತಿರೆ ಲಘುವಿನಲಿ ಹೆ । ಮ್ಮರನನೊಯ್ಯನೆ ನೆಮ್ಮಿ ಕುಳ್ಳಿ । ರ್ದರಿದಿಶಾಪಟ ನುಡಿಸಿದನು ಪವಮಾನನಂದನನ ॥ ಭರವಿದೆಲ್ಲಿಗೆ ಮರ್ತ್ಯನೋಖೇ । ಚರನೊ ದೈತ್ಯನೊ ದಿವಿಜನೋ ಕಿಂ । ನರನೊ ನೀನಾರೆಂದು ಭೀಮನ ನುಡಿಸಿದನು ಹನುಮ ॥೧೪॥ ನಾವು ಮರ್ತ್ಯರು ದೂರದಲಿ ರಾ । ಜೀವಗಂಧಸಮೀರಣನ ಸಂ । ಭಾವನೆಗೆ ಸೊಗಸಿದಳು ಸತಿಯಾಕೆಯ ವಚಸ್ಸಿನಲಿ ॥ ತಾವರೆಯ ತಹೆನೆನುತ ಸಿಂಹವಿ । ರಾವದಲಿ ವಿಕ್ರಮಿಸೆ ವಿಗಡನ । ದಾವರಿಸಿ ಬಲುಬಾಲ ತಡೆದುದು ಪವನಜನ ಪಥವ ॥೧೫॥ ಗದೆಯ ಮೊನೆಯಲಿ ನೂಕಿದನು ರೋ । ಮದಲಿ ಚರಿಸದು ಬಾಲನೋಡಿದ । ನಿದು ವಿಚಿತ್ರವಲಾಯೆನುತ ನುಡಿಸಿದನು ಕಪಿವರನ ॥ ಒದೆದೊಡದ್ರಿಗಳಳಿವವೆನ್ನಂ । ಗದಲಿನಾ ಬಲ್ಲಿದನು ಬಾಲದ । ಕದವ ತೆಗೆ ಬಟ್ಟೆಯಲೆನುತ ಗರ್ಜಿಸಿದನಾಭೀಮ ॥೧೬॥ ನೀವು ಬಲ್ಲಿದರಿದಕೆ ಸಂಶಯ । ವಾವುದಲ್ಲದೊಡೀಮದದ್ವಿಪ । ವೀವಿಹಗಕುಲವೀಮೃಗವ್ರಜವಂಜುವವೆನಿಮಗೆ ॥ ನಾವು ವೃದ್ಧರು ನಮ್ಮ ಬಾಲವ । ನಾವು ಹದುಗಿಸಲಾರೆವೀಗಳು । ನೀವು ತೊಲಗಿಸಿ ಬಿಜಯಮಾಡುವುದೆಂದನಾಹನುಮ ॥೧೭॥ ಐಸಲೇ ತಪ್ಪೇನೆನುತ ತನ । ಗೇಸುಬಲುಹುಂ

ಟ್ಟಿಸರಲಿ ಕ । ಟ್ಟಾಸುರದಲೌಂಕಿದನು ಬಾಲವನೊದರಿ ಬೊಬ್ಬಿಡುತ ॥ ಗಾಸಿಯಾದನು ಪವನಸು
ತನೆ । ಳ್ಳೈಸು ಮಿಡುಕದು ಬಾಲವೂರ್ಧ್ವ । ಶ್ವಾಸಲಹರಿಯಲಡಿಗಡಿಗೆ ಲಟಕಟಿಸಿದನು ಭೀಮ ॥೧೮॥
ತೆಗೆದು ಸೈರಿಸಿ ನಿಂದು ಹೊಯ್ದು । ಳ್ಳೈಗಳು ತಾವರೆವಡಗಲೊಳತಾ । ಳಿಗೆಗೆಕಳವಳ ನೋಕಿದನು ಕಪ್ಪು
ರದ ಹುಳುಕುಗಳ ॥ ಢಗೆಯಡಗೆ ಮರುವಲಗೆಗೌಡೊ । ತ್ತುಗಳ ಬಲಿದವಯವದ ಸತ್ರಾ । ಣಿಗಳ
ಓವನು ತಾಮುರಿಯಲೊದಗಿದನು ಬಾಲದಲಿ ॥೧೯॥ ಮಿಡುಕದದು ಮಹಿಯಿಂದ ಭೀಮನ । ಕಡುಹು
ನಿಂದುದು ಬಾಲದಲಿ ತುದಿ । ನಡುಕದನಿಲಜನಂಗವಟ್ಟದ ಕಡುಹು ಕಂಪಿಸದು ॥ ತೊಡಕಿ ಕೆಟ್ಟುದು
ಕಾರ್ಯ ದುರ್ಬಲ । ನೊಡನೆ ಭಂಗವ್ಯಾಪ್ತಿ ತನ್ನನು । ಸುಡಲೆನುತ ಹಿಮ್ಮೆಟ್ಟಿ ಮುಮ್ಮುಲಮರುಗಿ
ದನು ಭೀಮ ॥೨೦॥ ಈತ ಕಪಿರೂಪದಸುರೇಂದ್ರನೊ । ಭೂತನಾಥನೊ ಮೇಣು ವಿಮಳ ।
ತ್ರೇತೆಯಲಿ ದಶಮುಖನ ಹಾಣಾಹಾಣಿಗಳ ಕಪಿಯೋ ॥ ಏತರವು ನಮ್ಮುಬ್ಬಟೆಗಳಿಂ । ದೀತ ಗೆಲಿ
ದನು ಬಾಲದಲಿ ಸ । ತ್ವಾತಿಶಯವಿನ್ನಿವನೊಳೆಂತುಟೊ ಶಿವಶಿವಾಯೆಂದ ॥೨೧॥ ಭೀಮಗಡ ತಾನೌ
ಕಿ ನಿಲಲು । ದ್ದಾಮಬಾಲದನಿದ್ರೆ ತಿಳಿಯದು । ರೋಮತತಿ ಮುಸೆಗಾಣಿಸಿದವೆನುತುತ್ತಮಾಂಗದಲಿ ॥
ಈಮನುಷ್ಯಶರೀರವಪಜಯ । ಧಾಮವಲ್ಲಾ ಶಿವಶಿವಾ ನಿ । ಸ್ಸೀಮಕಪಿ ನೀನಾರೆನುತ ಪವನಜನ ಬೆಸ
ಗೊಂಡ ॥೨೨॥ ನಾವು ವಾನರರಡವಿಯಲಿ ಫಲ । ಜೀವಿಗಳು ನಿಸ್ಸತ್ವರಿಲ್ಲಿಯ । ತಾವಪಿಡಲನ್ಯತ್ರ ಗಮ
ನತ್ರಾಣವಿಲ್ಲೆಮಗೆ ॥ ನೀವು ದಿಟವಾರ್ಯ ಮಹಾಸಂ । ಭಾವಿತರು ಸುರನರಭುಜಂಗರೊ । ಳಾವ
ಕುಲ ನಿಮಗೆಂದು ಭೀಮನನುಡಿಸಿದನು ಹನುಮ ॥೨೩॥ ಮನುಜರಾ ವ್ಯೋಮಾಭಿಕುಲದಲಿ । ಜನಿಸಿದನು
ವರಪಾಂಡುವಾತನ । ತನುಜರಾವು ಯುಧಿಷ್ಠಿರಾರ್ಜುನಭೀಮಯಮಳರೆನೆ ॥ ವನಕೆ ಬಂದೆವು ನಮ್ಮ
ದಾಯಾ । ದ್ಯನ ವಿಕಾರದ್ಯೂತಕೇಳೀ । ಜನಿತಕಲ್ಮಷದಿಂದ ರಾಜ್ಯಭ್ರಂಶವಾಯ್ತೆಂದ ॥೨೪॥
ಬಳಿಕ ಸೌಗಂಧಿಕದ ಪವನನ । ಬಳಿವಿಡಿದು ನಾಬಂದೆನೆಮ್ಮಯ । ಲಲನೆ ಕಾಮಿಸಿದಳು ಸಹಸ್ರದಳಾಬ್ಜ
ದರುಶನವ ॥ ತಿಳಿಯಲಿದು ವೃತ್ತಾಂತ ನೀನ । ಸ್ಖಲಿತಬಲ ನೀನಾರು ತನ್ನನು । ತಿಳುಹಹೇಳು ಮಹಾ
ತ್ಮಕಪಿ ನೀನೆನುತ ಕೈಮುಗಿದ ॥೨೫॥ ನಾವು ಹಿಂದಣಯುಗದ ರಾಘವ । ದೇವನೋಲೆಯಕಾರರಾ
ಸು । ಗ್ರೀವಸಖ್ಯರು ಪವನನಿಂದಂಜನೆಗೆ ಜನಿಸಿದೆವು ॥ ನಾವು ನಿಮ್ಮೊಡಹುಟ್ಟಿದರು ಸಂ । ಭಾವಿಸಿತು
ನಿಮ್ಮಿಷ್ಟವೆನೆ ನಗು । ತಾವೃಕೋದರನೆರಗಿದನು ಕಲಿಹನುಮನಂಘ್ರಿಯಲಿ ॥೨೬॥ ಜರುಗನಲಿ ಜಾಂ
ಬೂನದದ ಸಂ । ವರಣೆಕಾರಂಗೆಡೆಯಲಿದ್ದುದು । ಪರಮನಿಧಿ ಮಝು ಪೂತುಪುಣ್ಯೋದಯದಫಲ
ವೆನುತ ॥ ಸರಸಿಯೆತ್ತಲು ಗಂಧವೆತ್ತಲು । ಬರವಿದೆತ್ತಣಿದೆತ್ತ ಘಟಿಸಿದು । ದರರೆ ಮಾರುತಿ ತಂದೆ
ನೀನೆಂದೆನುತ ಬಣ್ಣಿಸಿದ ॥೨೭॥ ತೀದುದೆಮಗೆ ವನಪ್ರವಾಸದ । ಭೇದವರ್ಜುನನಗಲಿಕೆಯದು । ಭೇರ್
ದವಿಷವಿಂದಿಳಿದುದೈ ಶಿವಶಿವಮಹಾದೇವಾ ॥ ಹೋದರಾಜ್ಯಭ್ರಂಶ ಬಹಳವಿ । ಷಾದ ಬೀತುದು
ನಿಮ್ಮಕಾರು । ಣ್ಯೋದಯವು ನಮಗಾಯ್ತಲಾ ಚರಿತಾರ್ಥರಾವೆಂದ ॥೨೮॥ ಹಿರಿಯರೆನಗಿಬ್ಬರು
ಯುಧಿಷ್ಠಿರ । ಧರಣಿಪತಿ ನೀನೊಬ್ಬನಯ್ಯಂ । ದಿರುಗಳಿಬ್ಬರು ಮಾರುತನು ನೀನೊಬ್ಬನಿಂದೆನಗೆ ॥
ಗುರುಗಳಿಬ್ಬರು ಬಾದರಾಯಣ । ಪರಮಋಷಿ ನೀನೊಬ್ಬನೆಂದುಪ । ಚರಿಸಿದನು ಪವಮಾನನಂದನನಂ
ಜನಾಸುತನ ॥೨೯॥ ಲಲಿತವಚನಕೆ ನಿನ್ನ ಭುಜದ । ಗ್ಗಳಿಕೆಗಾಮೆಚ್ಚಿದನು ಹಿಮಕರ । ಕುಲಪವಿತ್ರರು

ಜನಿಸಿದಿರಲಾ ಪಾಂಡುಜಠರದಲಿ ॥ ಗೆಲವು ನಿಮಗಹಿತರಲಿ ಪಾರ್ಥನ । ಕೆಲವುದಿವಸಕೆ ಕಾಬಿರೆಮಗೆಯು । ಫಲಿಸಿತೀದಿನವೆಂದು ಕೊಂಡಾಡಿದನು ಹನುಮಂತ ॥೩೦॥ ಅಂಜುವೆನು ಬಿನ್ನಹಕೆ ಬಾಂಧವ । ವಂಜಿಕೆಯನಭಿಕೊತ್ತುತಿದೆ ಕೇ । ಳಂಜನಾಸುತ ತನ್ನ ಸಲುಗೆಯ ಮಾತ ಸಲಿಸುವೊಡೆ॥ ಅಂಜದೆಂಬೆನು ದನುಜಪುರಕೆ ಧ । ನಂಜಯನ ಹೊತ್ತಿಸಿದಖಳರನು । ಭಂಜಿಸಿದಸಾಗರವದಾಂಟಿದರೂಪತೋರೆಂದ॥೩೧॥ ಈಯುಗದ ಗುಣಧರ್ಮಮಾತ್ರೆ । ತಾಯುಗದ ಪರಿಗೈದದಾತ್ರೇತಾಯುಗವು ಸರಿಯಲ್ಲ ಕೃತಯುಗದೇಕದೇಶದಲಿ ॥ ಆಯುಗದಲಾಮನುಜರಾಸ । ತ್ತ್ವಾಯುತದ ಸಾಮರ್ಥ್ಯಮಾತ್ರರು । ವಾಯಯುಗದಲಿ ಸಲ್ಲದೆಂದನು ನಗುತ ಹನುಮಂತ॥೩೨॥ ಕೃತಯುಗದವರು ತ್ರೇತೆಯವರಿಂ । ದತಿಪರಾಕ್ರಮಯುಕ್ತರವರದು । ಧೃತಬಲವಿತ್ರೇತೆಯವರಲಿ ದ್ವಾಪರಸ್ಥಿತಿಗೆ ॥ ವಿತತಸತ್ವರು ಕಲಿಯುಗದ ದು । ರ್ಮತಿಮನುಷ್ಯಮಾತ್ರ ಹೀನಾ। ಕೃತಿಕಣಾ ಯುಗಧರ್ಮ ಕೃತಮೊದಲಾಗಿ ಕಲಿಯುಗಕೆ ॥೩೩॥ ಹೀನಸತ್ವರು ಸತ್ಯಧರ್ಮವಿ । ಹೀನರರ್ಥಪರಾಯಣರು ಕುಜ । ನಾನುರಕ್ತರು ವರ್ಣಧರ್ಮಾಶ್ರಮವಿದೂಷಕರು ॥ ದಾನಿಗಳು ದುಷ್ಪಾತ್ರದಲಿ ಗುಣ । ಮಾನಿಗಳು ಗರ್ವಿತರು ವಿದ್ಯಾ । ಜ್ಞಾನಿಗಳು ಕಲಿಯುಗದಮನುಜರು ಭೀಮಕೇಳೆಂದ ॥೩೪॥ ಅದರಿನೀದ್ವಾಪರದಕಡೆಯಲಿ । ಯುದಿತಮಾನುಷಕರ್ಮಸಂಶಯ । ವಿದರೊಳೆಮ್ಮಯ ರೂಪು ಗೋಚರವಲ್ಲ ಮರ್ತ್ಯರಿಗೆ ॥ ಇದು ನಿಧಾನವು ಭೀಮಯೆನೆ ತ । ತ್ಪದಯುಗಕೆ ಮಗುಳೆರಗಿನಿರ್ಬಂ । ಧದಲಿ ಬಿನ್ನಹಮಾಡಲೆಮ್ಮನು ರೂಪತೋರೆಂದ॥೩೫॥ ಆದೊಡಿನ್ನು ನಿರೀಕ್ಷಿಸೆನುತನಿ । ನಾದದಲಿ ನೆಲ ಬಿರಿಯೆ ಬಾಲದ । ಬೀದಿವರಿ ಬಾಸಣಿಸೆ ಘನನಕ್ಷತ್ರಮಂಡಲವ ॥ ಮೇದಿನಿಯ ಹೊರೆಗಾರರಳ್ಳದೆ । ಯಾದವಳುಕಿದವದ್ರಿಗಳು ಸ । ಪ್ತೋದಧಿಗಳಂಜಿದವೆನಲು ಹೆಚ್ಚಿದನು ಕಲಿಹನುಮ ॥೩೬॥ ಮೇರುವಿನ ತಪ್ಪಲಲಿ ಬೆಳೆದಬ । ಲಾರಿಚಾಪವೊ ಮೇಣ್ತ್ರಿವಿಕ್ರಮ । ನಾರುಭಟೆಯಲಿ ಜಡಿವಜ್ಯೋತಿರ್ಗಣದ ಬಲುಮಿಳಿಯೋ ॥ ಚೂರಿಸುವಬಲುಬಾಲವೋ ಜಂ । ಭಾರಿಭವನವನಳ್ಳಿರಿಯೆ ತ್ರಿಪು । ರಾರಿಯೊಡ್ಡಿನ ಹೊಳಹಿನಲಿ ಹೊಳೆಹೊಳೆದನಾಹನುಮ ॥೩೭॥ ನೋಡಿದನು ನಡುಗಿದನು ಕಂಗಳ । ಕೋಡಿಯಲಿ ನೀರೊರೆಯೆ ಹರುಷದ । ರೂಢಿಯಲಿ ಘೂರ್ಮಿದ್ದಮನ ಡೆಂಡಣಿಸಿ ಭೀತಿಯಲಿ ॥ ಬಾಡುಮೋರೆಯನೆತ್ತಿ ಕೈಗಳ । ನೀಡಿ ಕಂಗಳ ಮುಚ್ಚಿ ಮರಳಿದು । ನೋಡಿ ಶಿವಶಿವಯೆನುತ ಬೆಚ್ಚಿದನಡಿಗಡಿಗೆಭೀಮ ॥೩೮॥ ಸಾಕುಸಾಕಂಜಿದೆನು ಮನುಜರು । ಕಾಕಬಲರು ನಿಜಸ್ವಭಾವವ । ನೇಕೆ ಬಿಡುವೆವು ತಿಳಿದುತಿಳಿಯೆವು ಕಂಡೊಡಂಜುವೆವು ॥ ಸಾಕು ಪೂರ್ವದ ರೂಪಿನಲಿ ನಿ । ರ್ವ್ಯಾಕುಲನ ಮಾಡೆನಲು ಪವನಜ । ನಾಕಪೀಶ್ವರ ನಗುತ ಮುನ್ನಿನ ರೂಪಕೈಕೊಂಡ ॥೩೯॥ ಅಂಜದಿರು ನೀನಿನ್ನು ಮೆಚ್ಚಿದೆ । ನೆಂಜಲಿಸು ನಾ ಸಲಿಸುವೆನು ನ । ಮ್ಮಂಜನಾದೇವಿಯರು ಕುಂತೀದೇವಿಯರೊದರಲೆ ॥ ರಂಜಕರು ನಾವಲ್ಲ ಹೇಳು ಸ । ಮಂಜಸದಲೆನೆ ಭೀಮ ನಗುತ ಧ । ನಂಜಯನ ಟಕ್ಕೆಯಕೆ ಬಿಜಯಂಗೈಯಬೇಕೆಂದ ॥೪೦॥ ಐಸೆ ಸಲಿಸಿದೆನೆನುತಲಾಕಪಿ । ಯಾಸಮಯದಲದೃಶ್ಯವಾಗೆ ವಿ । ಕಾಸವಾದುದು ವಿಸ್ಮಯಕೆ ಪವಮಾನನಂದನನ ॥ ಆಸುಗಂಧಿಕಕಮಲ ತಾನಿ । ನ್ನೇಸುದೂರವೊ ದ್ರುಪದಸುತೆ ತನಗೇಸುಮುನಿವಳೊ ಹಾಯೆನುತ ಹರಿದನು ವನಾಂತರವ ॥೪೧॥ ಧರಣಿಪತಿ ಕೇಳ್ಬಹಳವಿಪಿನಾಂ । ತರವನಂತವ ಕಳಿದು ಬರೆಬರೆ । ಸರಸಿಜದ ಮೋಹರದ ಮುಂದೈತಪ್ಪಪರಿಮಳದ ॥ ಮೊರೆವತುಂಬಿಯ

ತಟ್ಟುಗಳ ತನಿ । ವರಿವತಂಪಿನ ತುರುಗಲಿನ ತ। ತ್ಸರಸಿಯನು ದೂರದಲಿ ಕಂಡುಬ್ಬಿದನು ಕಲಿಭೀಮ ॥ ಒಗುಮಿಗೆಯ ಪರಿಮಳದ ಕಂಪಿನ। ತಗಡತೆಕ್ಕೆಯ ಬೀದಿವರಿಗಳ । ಮುಗುಳವೊಗ್ಗೆಯ ತೆಗೆವತುಂಬಿಯ ಲಳಿಯಲಗ್ಗಗಳ॥ ಹೊಗರಹೊರಳಿಯ ಕಿರಿದೆರೆಯನೂ । ಕುಗಳ ತಳಿತತುಷಾರಭಾರದ । ಸೊಗಸ ಸೇರಿಸಿ ಮಂದಮಾರುತನಪ್ಪಿದನು ಮಗನ ॥೪೩॥ ಝಳದಲಳಿ ಲಟಕಟಿಸೆ ಮಾರ್ಗ । ಸ್ಖಲಿತಖೇದಸ್ವೇದಬಿಂದುಗ। ಳೊಳಸರಿಯೆ ರೋಮಾಳಿ ಚಾಳಿಸೆ ತೃಷೆಯದೆಸೆ,ಮುರಿಯೆ॥ ತಳಿತುದಾಪ್ಯಾಯನ ಮನೋರಥ । ಫಲಿಸಿತರಸಿಯ ಹರುಷದರ್ಪಣ । ಬೆಳಗುವದು ಮಝು ಭಾಪೆನುತ ಘುಲ್ಲವಿಸಿದನು ಭೀಮ॥೪೪॥ ಸಾರೆ ಬರೆವರೆ ಕಂಡನಲ್ಲಿ ಕು । ಬೇರನಾಳಿದ್ದುದು ತದೀಯಸ । ರೋರುಹದ ಕಾಹಿನಲಿ ಯಕ್ಷರು ಲಕ್ಷಸಂಖ್ಯೆಯಲಿ ॥ ಸಾರೆ ಚಾಚಿದಹರಿಗೆಗಳ ತರ । ವಾರಿಗಳ ಹೊದೆಯಂಬುಚಾಪಕ । ತಾರಿಶಲ್ಲೆಹಸಬಳಗಳ ಸೋಪಾನಮಾರ್ಗದಲಿ ॥೪೫॥ ಎದ್ದರವರಿದಿರಾಗಿ ಭೀಮನ । ಹೊದ್ದಿದರು ನೀಸಾರು ಹದ್ದಿಗೆ । ಬಿದ್ದಿನನೊ ಮೇಣ್ಮಿತ್ರಭಾವದ ಲೆವಗೆಬಿದ್ದಿನನೋ ॥ ಉದ್ಧರುಟುತನ ನಿನ್ನ ಮೋರೆಯ । ಲಿದ್ದುದೈ ನೀಸಾರು ನಿನಗೇ । ನಿದ್ದುದಿಲ್ಲಿಯೆನುತ್ತ ಜರೆದರು ಯಕ್ಷರನಿಲಜನ ॥೪೬॥ ನಾವಲೇ ಕುಂತೀಕುಮಾರರು । ಭೂವಧೂವಲ್ಲಭರು ನಮ್ಮಯ । ದೇವಿಗಾದುದು ಬಯಕೆ ಸೌಗಂಧಿಕಸರೋರುಹದ ॥ ತಾವು ಕಾಣಿಸಿ ಕೊಂಡುಬಹುದಾ । ತಾವರೆಯನೆನೆ ಬಂದೆವಿಲ್ಲಿಗೆ । ನೀವು ಕಾಹಿನಬಂಟರೆಂಬುದನರಿಯೆವಾವೆಂದ ॥೪೭॥ ಐಸಲೇ ತಪ್ಪೇನು ನೀ ಯ । ಕ್ಷೇಶನಲ್ಲಿಗೆ ಹೋಗಿ ಬೇಡುವು। ದೀಸರೋರುಹವಾವಘನಧನಪತಿಯುದಾರನಲೆ ॥ ಮೀಸಲಿನ ಸರಸಿಯಲಿ ದೃಷ್ಟಿಯ । ಸೂಸಬಹುದೇ ರಾಯನಾಜ್ಞಾ । ಭಾಷೆಯಲ್ಲದೆ ಬಗೆಯಲರಿದೆಂದುದು ಭಟಸ್ತೋಮ ॥೪೮॥ ಬೇಡಲರಿಯೆವು ಬೇಡುವರಕೂ । ಡಾಡುವರು ನಾವಲ್ಲ ಕದನವ । ಬೇಡಬಲ್ಲೆವು ಕರೆಯಿ ಕೊಡಲಾಪರೆ ಧನೇಶ್ವರನ ॥ ಬೇಡುವುದು ಗದೆ ನಿಮ್ಮವಕ್ಷವ । ತೋಡಿ ನೆತ್ತರುಗೊಳದಲೋಕುಳಿ । ಯಾಡುವುದನೆಂದನಿಲಸುತಬೀಸಿದನು ನಿಜಗದೆಯ ॥೪೯॥ ಎಲಲೆ ಕವಿಕವಿ ಯಕ್ಷರಾಕ್ಷಸ । ದಳವನರನೊಟ್ಟೈಸುವನೆ ಹೆ । ಬ್ಬುಲಿಯ ಹಿಂಡಿಗೆ ಹೋತ ಹೊಡಕರಿಸಿತು ಮಹಾದೇವ ॥ ತಲೆಯ ಹೊಯ್ಸೆಂಡಾಡು ತಿನ್ನವ। ನೆಲುವನೆನುತೀಟಿಯಲಿ ಸಬಳದ। ಲಲಗಿನಲಿ ಖಡುಗದಲಿ ಹೊಯ್ದರು ಪವನನಂದನನ ॥೫೦॥ ತಾಗಿದೆಳೆಮುಳ್ಳಿನಲಿ ಮದಗಜ । ಸೀಗುರಿಸುವುದೆ ಭಟರ ಕೈದುಗ । ಳೇಗುವವು ಪವಮಾನಸುತ ಕೈದೋರೆ ಖಾತಿಯಲಿ ॥ ತಾಗಿದವಟರನಿಕ್ಕಿದನು ರಣ । ದಾಗಡಿಗರನು ಯೆಕ್ಕಿದನು ಕೈ । ದಾಗಿಸಿದನನಿಬರಲಿ ಗಂಡುಗತನದಘಾಡಿಕೆಯ ॥೫೧॥ ಘಾಡಿಸಿತು ಗಜಬಜ ಕುಬೇರನ । ಬೀಡಿನಗ್ಗದಬಂಟರೇ ಕೈ । ಮಾಡಿರೈ ಕೊಳಗಾಹಿಗಳು ಫಡ ಹಿಂಗಬೇಡೆನುತ ॥ ಝಾಡಿಸುವಮಣಿಮಯದ ಗದೆಯಲಿ । ತೋಡುವೊಯ್ಲಿನ ತುಡುಕುಗಾಯದ । ನೀಡುಮೊನೆಗಳ ವಿಗಡನಿಕ್ಕಿದನದಟರಕ್ಕಸರ ॥೫೨॥ ಹಾರಿದವು ಹಂಸೆಗಳು ತುದಿಮರ । ನೇರಿದವು ನವಿಲುಗಳು ತಂಡವ । ನೂರಿ ನೀರೊಳು ಮುಳುಗಿ ಮರಳವು ಜಕ್ಕವಕ್ಕಿಗಳು ॥ ಚೀರಿದವು ಕೊಳರ್ವಕ್ಕಿ ಜಲದಲಿ । ಜಾರಿ ತಾವರೆಯೆಲೆಯಮರೆಗಳ । ಲೊರಡಿಗಳಡಗಿದವು ಕೋಳಾಹಳಕೆ ಪವನಜನ ॥೫೩॥ ಚೆಲ್ಲಿದರು ರಕ್ಕಸರು ಯಕ್ಷರು । ಬಿಲ್ಲ ಬಿಸುಟರು ಗುಹ್ಯಕರು ನಿಂ । ದಲ್ಲಿ ನಿಲ್ಲರು ಕಿನ್ನರರನಿನ್ನೇನನುಸುರುವೆನು ॥ ಗೆಲ್ಲವಿದು ಲೇಸಾಯ್ತು ಮಾನವ । ನಲ್ಲಿ ಸಮಗೀಭಂಗ ಭಯರಸ । ವೆಲ್ಲಿ ಭಾಪುರೆ ವಿಧಿಯೆನುತ ಬೆಚ್ಚಿತು

ಭಟಸ್ತೋಮ ॥೩೪॥ ಗಾಯವಡೆದರು ಕೆಲರು ಕೆಲರಸು । ಬೀಯವಾದುದು ಬಿಡುದಲೆಯ ಬಲು । ನಾಯಕರು ಸಂತೈಸಿದರು ಕೌಬೇರ ಭವನದಲಿ ॥ ವಾಯುಸುತನೀವಿಜಯಸಿರಿಯಪ । ಸಾಯಿತಂಗಭಿ ಷೇಕವೆಂದು ಗ । ದಾಯುಧವನೆಲುಬಿದನು ಕೊಳನಲಿ ಚಾಚಿದನು ತಡಿಗೆ ॥೩೫॥ ತೊಳೆದು ಚರಣಾನ ನವ ನಡುಗೊಳ । ದೊಳಗೆ ಹೊಕ್ಕಡಿಗಡಿಗೆ ಮಿಗೆ ಮು । ಕ್ಕುಳಿಸಿ ತೀರದಲುಗುಳಿ ದಿವ್ಯಾಂಭೋಜಪ ರಿಮಳವ ॥ ವಿಲಸದಲಿ ತನಿಹೊರೆದಶೀತಳ । ಜಲವ ಕುಡಿದಾಪ್ಯಾಯನಾಂತರ । ಲಲಿತ ಹೃದಯ ನಿಮಿರ್ದು ಹಿಡಿದನು ಕಮಳಪಂಙ್ಕ್ತಿಗಳ॥೩೬॥ಚಾಚಿದನು ಬರಿಕೈಯನಬುಜಕೆ । ಚಾಚುವಿಭಪತಿಯಂ ತೆ ತುಂಬಿಗ । ಳಾಚೆಘಾಳಧ್ವನಿಯ ಥಟ್ಟಣೆ ಮಿಗಿಲು ಚದರಿದವು ॥ ವೀಚಿ ಮಸಗುವಕೊಳನು ಜನರು ಷಿ । ಯಾಚರಣೆಯೆ ೞಳು ಕಮಳವನವನು । ಲೋಚಿನಲಿ ಲಾವಣಿಗೆಕೊಂಡನು ಭೀಮ ನಿಮಿಷದಲಿ ॥೩೭॥ ತಿರಿದು ತಾವರೆವನವ ಕಕ್ಷದೊ । ಳಿರುಕಿ ಗದೆಯನು ಕೊಂಡು ಸರಸಿಯ । ಹೊರವಳಯದಲಿ ನಿಂದು ಕಾಹಿನ ಯಕ್ಷರಾಕ್ಷಸರ ॥ ಒರಲಿ ಕರೆದನುನಿಮ್ಮ ಕೊಳನಿದೆ । ಬರಿದೆ ದೂರಿದಿರೆಮ್ಮನೆನುತಾ । ಸರಿನ ಮಾತಿನ ನಲವಿನಲಿ ಮರಳಿದನು ಕಲಿಭೀಮ ॥೩೮॥

ಅಂತು ಸಂಧಿ ೧೦ ಕ್ಕಂ ಪದ ೩೪೭ ಕ್ಕಂ ಮಂಗಳಮಸ್ತು.

## ಹನ್ನೊಂದನೆಯ ಸಂಧಿ.

ಸೂಚನೆ॥ ಭೀಮ ಕೊಂದನು ಕಲಿಜಟಾಸುರ, ನಾಮಹಾಮಣಿಮಾನನನುಬಳಿ ।
ಕೀಮಹೀತಳಕೆಳದು ಕಂಡನು ಪಾರ್ಥನಗ್ರಜನ ॥

॥ಪದ॥ ಕೇಳು ಜನಮೇಜಯಯುಧಿಷ್ಠಿರ । ನೋಲಗದೊಳುತ್ಪಾತಶತವಿವ । ರಾಲಿಗಳನಂಜಿಸಿದವತಿ ರಂಜಿಸಿದವದುಭುತವ ॥ ಕೇಳಿದನಿದೇನೆಂದು ವರವಿ । ಪಾಳಿಯನು ಧೌಮ್ಯಾದಿಋಷಿಗಳು । ಹೇಳಿ ದರು ತಚ್ಛಕುನಸಂಗತಿಗಳ ಫಲೋತ್ತರವ ॥೧॥ ಸರಸಸೌಗಂಧಿಕದ ಪುಷ್ಪೋ । ತ್ತರಕೆ ಪವನಜ ಹೋ ದನೆಂಬುದ । ನರಸಿಯಿಂದರಿದವನಿಪತಿ ಘೂರಾಯದುಗುಡದಲಿ ॥ ನರನ ಹದನೇನೋವೃಕೋದರ । ನಿರವು ತಾನೆಂತೆನುತ ಚಿಂತಾ । ಭರಿತನಿದ್ದನು ಭೀಮಸೇನನ ಕ್ಷಾಂಬತವಕದಲಿ ॥೨॥ ಆಸಕಲಪರಿವಾ ರರಾಣೀ । ವಾಸಸಹಿತಾರಣ್ಯಭವನಾ । ಭ್ಯಾಸಿ ಬಂದನು ಭೀಮಸೇನನ ಗಮನಪಥವಿಡಿದು ॥ ಅಸು ಗಂಧಕಪದ್ಮಪರಿಮಳ । ಬಾಸಣಿಸಿತೀಜನವಮನೋವಿ । ನ್ಯಾಸವನು ಯಿದೆಬಂದಪವನಜನೆಂದುದೀ ಕಟಕ ॥೩॥ ಎನಲು ಬಂದನು ಭೀಮನಂಬುಜ । ವನವಿದಿರುಬಂದಂತೆ ಕಂಪಿನ । ತನಿರಸದ ತಾವರೆಯ ತೆಕ್ಕೆಯ ತೋಳತೋರಿಕೆಯ ॥ ಜನುಗುದುಂಬಿಯ ಜಾಳಿಗೆಯ ತನಿ । ಮಿನುಪನೋರೆಯ ಕಣ್ಣಕೆಂಪಿನ। ಘನಭಯಂಕರರೂಪಭೀಮನ ಕಂಡನವನೀಶ ॥೪॥ ಸೆಳೆದು ತಕ್ಕೈಸಿದನು ತಾವರೆ । ಗೊಳದ ತೋ ಟಿಯ ಹದಕೆ ಕಂಪಿಸಿ । ಬಳಿಕ ಕಪಿದರ್ಶನದ ಕೌತೂಹಲಕೆ ಭುಲ್ಲವಿಸಿ ॥ ನಳಿನಗಂಧದ ಗಾಢತರಸುಖ । ದೊಳಗೆ ಹೊಂಪುಳಿವೋಗಿಭೂಪತಿ । ತಿಲಕನಿದ್ದನು ಗಂಧಮಾದನಗಿರಿಯ ತಪ್ಪಲಲಿ ॥೫॥ ಗಿರಿಯ ತುದಿಗೇರುವವಮಹೀಶನ । ಭರವಸವನಶರೀರದನಿ ಪರಿ । ಹರಿಸಲಿಳಿದನು ಮರಳಿ ಬಂದನು ಬದರಿಕಾಶ್ರ

ವಾಕೆ ॥ ಅರಸ ಕೇಳ್ಳೆ ವಾತ್ತ್ತೆ ವಾರಿಯ । ಪರುಷವವೆನನಿಲಜನು ಬೇಟೆಗೆ। ಹರಿದನಿತ್ತಲು ಬಂದು ಮು ತ್ತಿತು ದಾನವರ ಧಾಳಿ ॥೬॥ ಖಳಜಟಾಸುರನೆಂಬನಾದ್ವಿಜ । ಕುಲವನಂಜಿಸಿ ಯಮಳರೊಡ । ನಿಟ್ಟ ಳಿಸಿ ಕಾದಿ ಕಠೋರದಲಿ ಪಿಡಿದನು ಮಹಾಸತಿಯ ॥ ಬಲುಗಡಿಯನಿವನೊಡನೆ ಹೋರಿದು । ಬಳಲಿದ ರು ಬೆಂಬತ್ತಿದರು ಗಾ । ವಳಿಯ ಗಜಬಜ ತಿರುಗಿತಿತ್ತಲು ಪವನಜನ ಹೊರೆಗೆ ॥೭॥ ತಳಿರಕೈಗಳ ಮೊರೆಯಬಾಯ್ಗಳ । ಜಲದಕಂಗಳ ತಾಪದಿಂದೊಳ । ಝಳದಿಯುಗಿವಳ್ಳೆಗಳ ಬಲುಭಯವಾಂತ ಕೊರಳುಗಳ ॥ ಕಳಕಳದ ಕಾಲುವೆಯ ಭಂಗದ । ಹೊಳಹುಗಳ ಪೆರ್ಲುವೆಯ ಸವ್ಯಾ । ಕುಲರ ಕಂಡ ನು ಭೀಮನೇನೇನೆಂದು ಬೆಸಗೊಂಡ ॥೮॥ ಹಿಡಿದರರಸಿಯನವನಿಪತಿ ಹಿಡಿ । ವಡೆದನನುಜರುಸಹಿತ ಹಾ ರುವ । ರಡವಿಯಲಿಹಾಯ್ದರು ಚೆಲ್ಲಿತು ನಿಮ್ಮ ಪರಿವಾರ ॥ ಕಡುಹು ಘನವಿದೆ ದಾನವರ ವಂ । ಗ ಡವೆಸಲು ಘನಸಿಂಹನಾದನ । ಸಿಡಿಲಶಿಕ್ಷಾಗುರುವೆನಲು ಮೊಳಗಿದನು ಕಲಿಭೀಮ ॥೯॥ ಧಾಳಿಯಿಟ್ಟ ನು ದಾನವರ ದೆ । ಕ್ಕಾಳದಲ್ಲಿಗೆ ಘಲ್ಲಿಸಿದನು । ಬ್ಯಾಳುಗಳನಿಟ್ಟರಿಸಿ ಜಿಡಿಸಿದ ತನ್ನವರ ಸೆರೆಯ ॥ ಸೀಳಿ ಸಾಯ್ಗಳನೆತ್ತರಿನ ತನಿ । ಗಾಲುವೆಯಲೇ ಬೆಳಸುವೆನು ದಿವಿ । ಜಾಳಿಗಳ ಸಂತೋಷಸಿಯನೆನು ತ್ತ ಗರ್ಜಿಸಿದ ॥೧೦॥ ಮಸಗಿತಿಬ್ಬರಗದುಭುತಾಹವ । ಪುಸುರಧಾಳಾಧೂಳಿ ಮಿಗೆ ಘು । ಟ್ಟಿಸಿದನವ ನನು ದಂಡೆಯಲಿ ತಡೆಗಾಲಲೊಡೆಕೊಯ್ದು ॥ ಬಿಸುಗುದಿಯ ನವರುಧಿರಜಲ ಜಾ । ಳಿಸೆ ನವದ್ವಾರ ದಲಿ ದೈತ್ಯನ । ಕುಸುಕಿರಿದು ತಿವಿತಿವಿದು ಕೊಂದನು ಕಲಿಜಟಾಸುರನ ॥೧೧॥ ಅರಸ ಕೇಳಾದಾನ ವನ ತನು । ಬಿರಿದು ಬಿದ್ದುದು ಬಾತಹೆಣನು । ಬ್ಬರದ ಹೊಲಸಿನ ಗವಲು ಕವಿದುದು ಕೂಡೆ ವನದೊ ಳಗೆ ॥ ಧರಣಿಪತಿ ತದ್ಬದರಿಕಾಶ್ರಮು । ವರತಪೋವನದಿಂದ ತೆಂಕಲು । ತಿರುಗಿ ಬಂದನು ಸಾರಿದನು ವೃಷಪರ್ವತಾಶ್ರಮವ ॥೧೨॥ ಆತಪೋವನವಿವರ ಘಲ್ಲಣೆ । ಗಾತುದಿಲ್ಲವಿನೋದದಲಿ ವಿ । ಖ್ಯಾತ ಶೈಲದ ಮೇಖಲೆಯ ತುದಿಗೇರಿದನು ಭೀಮ ॥ ಈತನನು ಹಳಚಿದನು ದೈತ್ಯನ । ಭೀತಮಣಿಮಾನೆಂಬು ವನು ಪದ । ಘಾತಿಯಲಿ ಲಟಕಟಿಸೆ ಗಿರಿ ಕಾದಿದರು ಪಟುಭಟರು ॥೧೩॥ ಕೊಂದನವನನು ವಿಗತಶಾ ಪನು । ನಿಂದನಿದಿರಲಿ ಯಕ್ಷರೂಪಿನ । ಲಂದಗಸ್ತ್ಯನ ಶಾಪವೃತ್ತಾಂತವನು ವಿವರಿಸಿದ ॥ ಬಂದನ ಲ್ಲಿಗೆ ಯಕ್ಷಪತಿ ನಲ । ವಿಂದಲಿವರನು ವಿವಿಧವಸ್ತು । ಗಳಿಂದ ಸತ್ಕರಿಸಿದನು ಕೊಂಡಾಡಿದನು ಪಾಂಡ ವರ ॥೧೪॥ ಅರಸನತಿಸಂತೋಷಮಯಸಾ । ಗರದಿ ಮುಳುಗುವನೊಮ್ಮೆ ನಿಮಿಷಕೆ । ನರನ ವಿರಹದ ದುಃಖಸಾಗರದೊಳಗೆ ಸೈಗೆಡೆವ ॥ ಪರಮಋಷಿಗಳ ಮಧುರವಚನೋ । ತ್ಕರಕೆ ತಿಳಿವನದೊಮ್ಮೆ ಪುನ ರಪಿ । ಮರುಳಹನು ಫಲುಗುಣನ ನೆನೆನೆನೆದರಸ ಕೇಳೆಂದ॥೧೫॥ ಅರಸನಲಿ ಬೇರೂರಿ ಮಾಗುಳಂ । ಕುರಿ ಸಿದುದು ಭೀಮನಲಿ ನಕುಲನ । ಲೆರಡುಮೊರೆಲೆಯಾಯ್ತು ಸಹದೇವನಲಿ ಕವಲೊಡೆದು ॥ ಅರಸಿ ಯಲಿ ಸಲೆ ಹೂತು ಕಾತು । ಬ್ಬರಿಸುತಿದ್ದುದು ಶೋಕಲತೆ ತ । ತ್ಪರಿಕರದ ಕರಣಾವಳಿಯ ಹಬ್ಬು ಗೆಯ ಹರಹಿನಲಿ ॥೧೬॥ ಮರೆದನೋ ನಮ್ಮನಿಬರನು ಬಿಟ । ಮರೆಯಲುಚಿತವಲೇ ಸುರೇಂದ್ರನ । ಸೆರಗು ಸೋಂಕುವಸಲುಗೆಯುಂಟೇ ಮರ್ತ್ಯಜಾತಿಯಲಿ ॥ ಉರುವಸುರಪದಸಾರಸಾಖ್ಯದೊ । ಳರಿಯ ನೋ ನವಿಮ್ಮಾ ಪ್ರವಾಸದುಸರೆಗೆ ನರನಂಘ್ರೈಸನೆಂದವನೀಶ ಚಿಂತಿಸಿದ ॥೧೭॥ ವಾಮನಯನಸ್ಪು ರಣಪರಿಗತ । ವಾಮಬಾಹುಸ್ಪಂದವಾದುದು । ಭಾಮಿನಿಗೆ ಭೂಪತಿಗೆ ಚಲಿಸಿತು ದಕ್ಷಿಣಾಂಗದಲಿ ॥

ವೈಮನಸ್ಯವ್ಯಸನನಿರಸನ । ಕ್ಷೇಮಹಾಶಕುನಂಗಳಿವೆ ಯೆಂ । ದಾಮಹೀಪತಿ ನೆನೆಯುತಿರ್ದನು ಫಲುಗುಣನ ಬರವ ॥೧೮॥ ಅರಸ ಕೇಳೈ ಹಿಮದ ಹೊಯ್ಲಿನ । ಸರಸಿಜಕೆ ರವಿಯಂತೆ ಶಿಶಿರದ । ಸರಿದೆಲೆಯ ವನದಲಿ ವಸಂತನ ಬರವಿನಂದದಲಿ ॥ ಸುರವಿಮಾನಶ್ರೇಣಿಗಳ ನವ । ಪರಿಮಳದ ಪೂರದಲಿ ಭಾರತ, ವರುಷಕಿಳಿದನು ಪಾರ್ಥ ಬಂದನು ಧರ್ಮಜನ ಹೊರೆಗೆ ॥೧೯॥ ಏನನೆಂಬೆನು ಜೀಯ ಕುಂತೀ । ಸೂನು ಕಂಡನು ದೂರದಲಿ ಸುರ । ಮಾನಿನೀಜನದಂಗವಟ್ಟದ ಪೂರ್ವಪರಿಮಳದ ॥ ಆನನೇಂದುಗಳಾಭರಣಮಯೂ । ಕಾನುಕೃತತಾರಾಮಯೂಖವಿ । ತಾನದಲಿ ಹೊಳೆಹೊಳೆದು ಮೆರೆವಮಹೇಂದ್ರಮಣಿರಥವ ॥೨೦॥ ಆರದೀರಥವೆನುತ ತಿರುಗಿ ಮ । ಹೀರಮಣಸಾಲಿಗಳು ಹರಿದವು । ಭಾರಣೆಯ ಜನನಯನಕೋಟಿಯ ಕೊಲ್ಲಣಿಗೆ ಮಿಗಿಲು ॥ ಭೂರಿಮಣಿರಶ್ಮಿಗಳ ಚಿಮ್ಮುವ । ಚಾರುಚಮರಿಯ ತುರಗನಿಕರಗ । ಭೀರಹೇಷಾರವದಲಿಳಿದುದು ರಥ ಸುರೇಶ್ವರನ ॥೨೧॥ ರಥಮಹೇಂದ್ರನದೀತನೆಮ್ಮತಿ । ರಥನೆಲಾ ಸೆರೆ ನೋಂತು ಪಡೆದಳೊ । ಪೃಥೆಯೆನುತ ಕವಿದುದು ಮುನಿವ್ರಜ ಮಿಕ್ಕವರ ನಗುತ ॥ ಮಥಿತರಿಪುವೆವದಾನಲೋಕ । ಪ್ರಥಿತದಿರುಪಯವೆಂಬಸುರಸಾ । ರಥಿಯ ನೆಲನುಗ್ಗಡಣೆಯಲಿ ನಗುತಿಳಿದನಾರಥವ ॥೨೨॥ ಅರಸಕೇಳುಬ್ಬಿನಲಿ ಧೌಮ್ಯನ । ಧರಣಿಪನ ರೋಮಶನ ಭೀಮನ । ಚರಣದಲಿ ಮೈಯಿಕ್ಕಿ ಕೈಮುಗಿದೆರಗಿಮುನಿಜನಕೆ ॥ ಹರಸಿದನು ಹೊರವಂಟನಕುಲಾ । ದ್ಯರನು ಮಧುರಪ್ರೀತಿವಚನ । ಸ್ಫುರದಮಂದಸ್ನೇಹದಲಿ ನೋಡಿದನು ಪರಿಜನವ ॥೨೩॥ ಬಿಗಿದಗವಸಣಿಗೆಯಲಿ ಸೂರ್ಯನ । ನುಗಿವವೋಮಾಣಿಕ್ಯಮಣಿರ । ಶ್ಮಿಗಳ ರಹಿ ರಂಜಿಸೆ ಸುರೇಶ್ವರನಿತ್ತಭೂಷಣವ ॥ ತೆಗೆತೆಗೆದು ಯಮನಂದನಂಗೋ । ಲಗಿಸಿ ಭೀಮಂಗಿತ್ತು ನಕುಲಾ । ದಿಗಳ ಮೈಯಲಿ ತೊಡಿಸಿದನು ಕೈಯಾರ ಕಲಿಪಾರ್ಥ ॥೨೪॥ ಕರಸಿ ಕಾಣಿಸಿದನು ಧನಂಜಯ । ಸುರಪತಿಯ ಸಾರಥಿಯನಮರೇ । ಶ್ವರವರೂಥದ ಸನ್ನಿವೇಶದ ಸಕಲಶೋಭೆಗಳ ॥ ಅರಸಮೊದಲಾದಖಿಳಜನಭೂ । ಸುರರು ಕಂಡರು ಮಾತಲಿಯ ಸ । ತ್ಕರಿಸಿ ಸಂಭಾವಿಸಿದನವನೀಪತಿ ಸರಾಗದಲಿ ॥೨೫॥ ಕುಶಲವೇ ದೇವೇಂದ್ರನಾತನ । ಶಶಿವದನೆಯರು ಸುಖಿಗಳೇ ರಾಕ್ಷಸರು ವಶವರ್ತಿಗಳೆ ನಿರ್ಜರನಗರಿ ನಿರ್ಭಯವೇ ॥ ದೆಸೆಯವರು ಮೂಲೆಗೇವರು ಮ । ನ್ನಿಸುವರೇ ಸುರಲೋಕಸುಖವನು । ವ್ಯಸನಭರ ಭಂಗಿಸದಲೇ ಹೇಳೆಂದನಾಭೂಪ ॥೨೬॥ಭಜಿಸಿದೈ ಭರ್ಗನನು ಶಾಂಭವ । ಯಜನಸಾರಸಮಾಧಿ ಶಿವಪದ । ರಜವ ಬೆರಸಿತೆ ಬಗೆಯ ಕುಣಿ ತೆವರಾಯ್ತೆ ತಡಿದೆಗೆದು ॥ವಿಜಯಶಬ್ದವು ಪಾರ್ಥಕೃತಿಯಲಿ । ಯಜಡವಲ್ಲಲೆ ವೈರಿರಾಯರ । ಕುಜನತಾವಿಚ್ಛೇದಸಾಧ್ಯವೆ ಯೆಂದನಾಭೂಪ ॥೨೭॥ ಜೀಯಚಿತ್ತೈಸಿಂದ್ರನಲ್ಲಿ ಸಹಾಯವಾದನು ಶಿವನಕಾರು । ಣ್ಯಾಯುಧವೆ ಮಾಸೆದುದು ಸುರೇಂದ್ರಸ್ನೇಹಸಾಣೆಯಲಿ ॥ ಆಯಿತೇ ಧೂರ್ಜಟಿಯ ಶರ ಲೋ । ಕಾಯತರಿಗೇನೆಂಬೆನದು ನಿ । ದಾ೯ಯದಲಿ ವಶವರ್ತಿಯಾಯ್ತೆನಗೆಂದನಾಪಾರ್ಥ । ೨೮ [illegible]ರನ ಕರುಣಾಲಾಭ ಲೋಕೋ । ತ್ತರದ ಪರಿತೋಷದಲಿ ಸಾನಿರೆ । ಸುರಪ ಕಳುಹಿದನೀರಥವನೀವಿಮಳಮಾತಲಿಯ॥ ಕರೆಸಿದನು ನಿಜನಗರಿಗಾನಿ । ರ್ಜರನಿಕರವಾಸತಿಯ ರಾದಿ । ಕ್ಷರಿವೃಥರು ಕೊಂಡಾ[illegible]ತೆನ್ನನು ರಾಯ್ಕಕೇಳೆಂದ ॥೨೯॥ ಪಾಶುಪತಶರಭುವನದೂರ್ಧ್ವ । ಶ್ವಾಸಕೃತಿಕೋವಿದನಲೇ ಚಿತ್ತೈಸಿ ಬಲ್ಲಿರಿ ನಿಮ್ಮಡಿಗಳಾವ್ಮಾ ಯದೇವೀಥಿಯಲಿ॥ಆಶರವಲೇ ಸೇರಿತೆನಗೆಮ। ಹೇಶನಿಂದಲ್ಲಿಂದ ಬಳಿಕಸು। ರೇಶನತಿಮನ್ನಿಸಿದನಮರಾವತಿಯೊಳೊಲವಿನಲಿ ॥೩೦॥ ಖ್ಯಾತಿವಡೆದೆನುತಿ

ವನ ಕಾರು । ಣ್ಯಾತಿಶಯಕಿದು ಫಲವೆ ಸಾಕಿ । ನ್ನೇತಕಿದು ರಾಜಸವಿಡಂಬವಿಕಾರಕುಚಿತವಲೇ ॥ ವೀತಿಹೋತ್ರ ಪರೇತಪತಿಪುರು । ಹೂತವರುಣಾದಿಗಳು ಕಂಡ । ವಾ ತ್ರದಲಿ ತೋಳಿದರು ಮನೋರಥಕಲಿತಕರ್ದಮವ ॥೩೧॥ ಕೇಳಿ ಮಿಗೆ ಹಿಗ್ಗಿದನು ತನುಪುಳ । ಕಾಳಿ ತಳಿತುದು ಹರುಷವಾರಿಗ । ಳಾಲಿಗಳ ಹೂಳಿದವು ತೂಳಿದವಾಂತರವ್ಯಥೆಯ ॥ ತೋಳ ಹಿಡಿದೆಳೆದಪ್ಪಿ ಪಾರ್ಥನ । ಬೋಳವಿಸಿದನು ಪೌರವಾನ್ವಯ । ಪಾಲಕನೆ ಯೆಂದರಸ ಮುಂಡಾಡಿದನು ಫಲುಗುಣನ ॥೩೨॥ ಮುರಿದುದಿನ್ನೇನಹಿತ ಬಲ ಹಗೆ । ಹರಿದುದೀದ್ರೌಪದಿಯ ಮೌಳಿಗೆ । ಕರುಬಿದವರಿಗೆ ಕಾಣಲಾಯ್ತು ಕೃತಾಂತನೋಲಗವ ॥ಕರೆದನೇ ಕರುಣವನು ಹರಹರ । ಹೆರೆನೊಸಲ ಬಲುದೈವವಿನಿತರ । ಹೊರಿಗೆ ಗದುಗಿನ ವೀರನಾರಾಯಣನ ಕರುಣದಲಿ ... ... ... ॥೩೩॥

## ಹನ್ನೆರಡನೆಯ ಸಂಧಿ.

ಸೂಚನೆ॥ ಲೀಲೆ ಮಿಗೆ ನರನಮರಲೋಕದ । ಕಾಲಕೇಯನಿವಾತಕವಚರ
ಸೀಳ ಬಿಸುಟಂದವನು ಬಣ್ಣಿಸಿದನು ಮಹೀಪತಿಗೆ ॥

ಕೇಳು ಜನಮೇಜಯಧರಿತ್ರೀ । ಪಾಲ ಧರ್ಮಜನರ್ಜುನನನುಪ । ಲಾಲಿಸಿದನುರೆ ಮುಳುಗಿದನು ಪುಳಕಾಶ್ರುಪೂರದಲಿ ॥ ಹೇಳು ಪಾರ್ಥ ಕಪರ್ದಿಯಸ್ತ್ರ । ವ್ಯಾಳಸಂಗ ಗುಣಪ್ರಪಂಚವ । ನಾಲಿಸುವೆನೆನೆ ನೃಪತಿಗಭಿವರ್ಣಿಸಿದನಾಕಥೆಯ ॥೧॥ ಹರನ ಶರಲಾಭಾರ್ಥಸಿದ್ಧಿಗೆ । ಕರೆಸಿದನು ಸುರನಾಥ ರಾಗದ । ಲರುಹಲಾಸುರರಿಪುಗಳೊಳಿಗವನು ಸುರಾಚಾರ್ಯ ॥ ಅರಿಗಳೆವಗೆ ನಿವಾತಕವಚರು ಸುರಪದವಿ ಸೋಪದ್ರವದನಿ । ಷ್ಠುರವಿದೆಂದು ರಹಸ್ಯದಲಿ ನನಗೆಂದನಮರೇಂದ್ರ ॥೨॥ ಶಿವನ ಶರನಿನಗಾಯ್ತು ನಿರ್ಜರ । ನಿವಹವಿದೆ ನಾಕವಲಿ ಬಲುದಾ । ನವರು ವಿಲಗದ ವೀಚಿವೋದುದು ಸಗ್ಗ ಸೌಖ್ಯಫಲ ॥ ಜವನಭಯ ಜೀವರಿಗೆ ದುರ್ಜನ । ರವಗಡವು ಸುಜನರಿಗೆ ತಮ ಶಶಿ । ರವಿಗಳಿಗೆ ಮುನಿವಂತೆ ಖಳರಿದೆ ಯೆಂದನಮರೇಂದ್ರ ॥೩॥ ಮುದದ ನೆಲೆ ಶುಭದಿಕ್ಕ ಸೊಗಸಿನ । ಸದನ ಸೌಖ್ಯದ ಗರುಡಿ ಸೊಂಪಿನ । ಪದವಿ ಲೀಲೆಯ ತಾಣ ತಾಯ್ವನೆ ಕೇಳವೋಳವದ ॥ ಮದದ ಮಡು ಭೋಗೈಕನಿಧಿ ಸಂ । ಪದದ ಜನ್ಮಸ್ಥಳ ಮನೋರಥ । ದುದಯಗಿರಿ ಹಿಂದೀಸುದಿನವಮರಾವತೀನಗರ ।೪॥ ಕಳವಳದನೆಲೆ ಭಯದ ಜನ್ಮ । ಸ್ಥಳ ವಿಷಾದದ ಹೇಟೆ ಖಾತಿಯ । ನಿಳಯ ಖೋಡಿಯ ಕಟಕ ಭಂಗದ ಸಂಭವಾಸ್ಥಾನ ॥ ಅಳುಕಿನಂಗಡಿ ಹಳುವಿನಾಡುಂ । ಬೊಲ ನಿರೋಧದಶಾಲೆ ದುಗುಡದ । ಕಳನೆನಿಸಿತೀನಗರಿಯಾಗಲು ಪಾರ್ಥ ಕೇಳೆಂದ ॥೫॥ ಸಿಡಿಲಕಾಲದೊಳೆರಗುವಂತಿರೆ । ಕಡಲಕಲ್ಪದೊಳುಕ್ಕುವಂತಿರೆ । ಪೊಡವಿಯಾಕಸ್ಮಿಕದೊಳಿಳಿವಂತಿರೆ ರಸಾತಳಕೆ ॥ ತುಡುಕುವುದು ರಕ್ಕಸರ ಭಯ ಹುಡಿಹುಡಿಯಹುದು ಸುರವಿಭವವೆಮಗೆ । ಮ್ಮಡಿಯುವವರು ನಿವಾತಕವಚರು ಪಾರ್ಥ ಕೇಳೆಂದ ॥೬॥ ಕೆತ್ತಕದ ತೆಗೆಯದು ಸುರಾಘುದ । ಹೊತ್ತಸರಕಿಳಿಯದು ಸುಕಲ್ಪಿತ । ಮತ್ತಗಜರಥವಾಜಿ ತೆಗೆಯವು

ಪುರದ ಬಾಹೆಯಲಿ ॥ ತೆತ್ತು ಹರಿಯದು ಕಾದಿ ರಣದಲಿ । ಸತ್ತು ಹಿಂಗದು ಸುರರ ಸತಿಯರು । ತೊತ್ತಿರಾದರು ಖಳರ ಮನೆಗಳಿಗೆಂದನಮರೇಂದ್ರ ॥೭॥ ಭಯದ ಬಾಹೆಯಲಪಸರದ ನಿ । ಶ್ಚಯದ ದುಮ್ಮಾನದ ವಿಘಾತಿಯ । ಲಯದಲಾವಣಿಗೆಯ ವಿರಾಗದ ತಡಿಯ ಸಂಕಟದ ॥ ಪಯದಪಾಡಿನ ಹೃದಯಕಂಪದ । ನಯನದೊರತೆಯ ಬಗೆಯ ಕೊರತೆಯ । ಜಯದ ಜೋಡಿನ ದೇವರಿದೆ ನೋಡೆಂದನಮರೇಂದ್ರ ॥೮॥ ಅವರುಪೇಕ್ಷೆಯ ಉಳಿವಿನಲಿ ನ । ಮ್ಮವರ ಬೇಹಿನ ಸುಳಿವಿನಲಿ ಮೇ । ಣವರನೆಳೆಕಿಸುವಾಧಿದೈವಿಕಕರ್ಮಗತಿಗಳಲಿ ॥ ದಿವಿಜರಿಂದವರುಳಿದರಾದಾ । ನವರ ಮರ್ದಿಸಿ ದೇವಲೋಕವ । ನೆವಗೆ ನಿರುಪದ್ರವದಲಿತೆವಮಾಡೆಂದನಮರೇಂದ್ರ ॥೯॥ ಹೈಹಸಾದವು ನಿಮ್ಮ ಕೃಪೆಯವ । ಗಾಹಿಸುವೊಡರಿದೇನು ದೈತ್ಯರು । ಸಾಹಸಿಗರೇ ಸದೆವೆನೀ ಸುರಜನಕೆ ಹಿತವೆಹರೇ ॥ ಆಹರಾಸ್ತ್ರದೊಳಮರವೈರಿ । ವ್ಯೂಹಭಂಜನವಹುದು ನಿಪ್ಪ್ರ । ತ್ಯೂಹನಿಶ್ಚಯವೆಂದು ಬಿನ್ನವಿಸಿದನು ಸುರಪತಿಗೆ ॥೧೦॥ ಈರಥವನೇ ಹೂಡಿಸಿದೆನೀ । ಸಾರಥಿಯ ಬೆಸಸಿದನು ಸುರಪರಿ । ವಾರ ನೇದುಡನೆಣಿಸಲಳವೇ ಕೋಟಿಜಿಹ್ವೆಯಲಿ ॥ ವಾರಣದ ಹಯರಥಪದಾತಿಯ । ಭಾರಣೆಗೆ ದೆಸೆ ನೆರೆಯದಿಂದ್ರನ । ವೀರಭಟರೆನ್ನೊಡನೆ ನೆರೆದುದು ರಾಯ ಕೇಳೆಂದ ॥೧೧॥ ಹೊಳಬಿಗರು ಹರಿದರು ಸುರೇಂದ್ರನ । ದಳದ ಮೊನ್ನರ ಸನ್ನೆಯಲಿ ದಿಗು । ವಳಯದಗಲದಲೊಲೆವಲಲಿತಚ್ಛತ್ರಚಮರಗಳ ॥ ಜಲಧಿ ಜಲಧಿಯ ಹಳಚಲಗಿದ । ವ್ವಳಿಪವಾದ್ಯಧ್ವನಿಯ ಪಾವರ । ಕಳೆದುದಸುರರ ಧುರದ ಧೈರ್ಯವನರಸ ಕೇಳೆಂದ ॥೧೨॥ ಆಳು ನಡೆದುದು ಮುಂಗುಡಿಯ ಹರಿ । ಧಾಳಿ ನೂಕಿ ಹಿರಣ್ಯನಗರಿಯ । ಮೂಲೆಗೈದಿತು ಹೊಯ್ದುರಲ್ಲಿಯ ಬಿನುಗುಬೀಕ್ಕಟೆಯ ॥ ಸೂಳವಿಸಿದವು ಸನ್ನೆಯಲಿ ನಿ । ಸ್ಸಾಳ ದನುಜಪುರೋಪಕಂಠದ । ಕೂಲವತಿಗಳ ತೀರದಲಿ ಬಿಡಿಸಿದೆನು ಪಾಳೆಯವ ॥೧೩॥ ಅರಿಯದಾಪಟ್ಟಣವಿದೇನೋ । ಹೊರಗೆ ಗಜಬಜವೆನೆ ಸುಪರ್ವರ । ಕುರುಹುಗಳನರಿದಮರರಿಪುಗಳು ಹರಿದರರಮನೆಗೆ ॥ ಬಿರುಗೆಯ ಸುಮ್ಮಾನದುಬ್ಬಿನ । ನೆರೆನಗೆಯ ನಯನಾಂಬುಗಳ ಖಳ । ನೆರಗಲತಿಸುಮ್ಮಾನವೇನೆಂದಸುರ ಬೆಸಗೊಂಡ ॥೧೪॥ ಜೀಯ ಬಲೆಗಳ ತೆಗೆಸು ನಡೆ ನಿ । ರ್ದಾಯದಲಿ ನಿಮ್ಮಡಿಯ ಬೇಟೆಗೆ । ರಾಯಮೃಗವೈತಂದವಿವೆ ನಗರೋಪಕಂಠದಲಿ ॥ ಹೋಯಿತಸುರರ ಕೈಯಹೊಸೆದಿರು । ಪಾಯಪಾಯವಧಾರೆನಲು ಖಳ । ರಾಯ ಕೇಳುತ ಮೃಗವದಾವುದೆನುತ್ತ ಬೆಸಗೊಂಡ ॥೧೫॥ ಜೋಡಿಸಿದನಮರೇಂದ್ರನಮರರ । ವೇಡೆಯಾಯ್ತು ಹಿರಣ್ಯನಗರಿಗೆ । ಗಾಢಬಲರದೆ ಬಂದು ವರುಣಯಮಾಗ್ನಿವಾಯುಗಳು ॥ ರೂಢಿಗಚ್ಚರಿಯಾಯ್ತಲಾ ಪರಿ । ಗೂಢಮೃಗಗಣವಿಲ್ಲವಿದೆ ನಿ । ರ್ಮೂಢರನು ಹಿಡಿತರಿಸುಯೆಂದನು ದೂತನೊಡೆಯಂಗೆ ॥೧೬॥ ಇವನ ಹೊಯ್ಕುಟವಾಯಕೊಯ್ತು । ಪ್ಪವನೆ ಸುರಪತಿ ಶಿವಶಿವಾ ಸುರ । ರವಗಡಿಸುವರೆ ವೇಡೆಗಡ ಹೈರಣ್ಯನಗರಿಯಲಿ ॥ ಇವನ ಸೀಳೆನೆ ಹೊರಗೆ ಸುರಸೈ । ನ್ಯವನು ಸೀಳಿದು ಬಳಿಕ ನೀನಿ । ನ್ನವನ ಮನವೊಲಿವಂತೆ ಮಾಡೆನೆ ಖಳನು ಖತಿಗೊಂಡ॥ ಬಂದನೇ ಸುರರಾಯನಕಟಕ । ಟಿಂದು ಮುತ್ತಿತೆ ದಿವಿಜಗಣ ತರು । ಣೇಂದುಧರನೇ ತರಿಸಿದನೊ ಶಿವಶಿವ ವಿಶೇಷವಲಾ ॥ ಇಂದಿನಲಿ ಕಡೆ ತನಗೆ ಮೋಣಪು । ರಂದರನು ನಿರ್ನಾಮನೈಸಲೆ । ಯೆಂದು ಬಿಟ್ಟನು ಚೂಣಿಯನು ಪಟುಭಟರ ಬೊಬ್ಬೆಯಲಿ ॥೧೮॥ ಧರಣಿಪತಿ ಚಿತ್ತೈಸು ವೇಳೆಯ । ತಿರವನೊ

ಡೆದುಬ್ಬೇಳ್ವಘನಸಾ । ಗರದವೊಲು ಪಿಡಿದೊದರಿ ಕವಿದುದು ಕೂಡೆ ವಂಕದಲಿ ॥ ಕರಿತುರಗರಥವಾ
ಜಿಕಾಲಾ । ಳ್ರವಣಿಸಿತೇನೆಂಬೆನಸುರರ । ದೊರೆಯ ಸನ್ನೆಗೆ ಸೂಳವಿಪನಿಸ್ಸಾಳರಭಸದಲಿ ॥೧೯॥
ಕವಿದುದಸುರರ ಚೂಣಿ ಬೊಬ್ಬೆಯ । ವಿವಿಧವಾದ್ಯಧ್ವನಿಯ ಕಹಳಾ । ರವದ ಕೋಳಾಹಳಕೆ ತುಂಬಿ
ತು ಬಹಳಭೇರಿಗಳು ॥ ರವಿಯನಾಕಾಶವ ದಿಗಂತವ । ತಿವಿದು ಕೆದರುವಧೂಳಿ ತಿಮಿರಾ । ರ್ಣವ
ವಲ್ಲೈ ತ್ರೈಜಗವೆನಲು ಝೂಂಪಿಸಿದುದರಿಸೇನೆ ॥೨೦॥ ದಾನವರ ಧಕ್ಕಡತನವಮನದ । ನೇನನೆಂಬೆನು
ಜೀಯ ತೂಳಿದ । ವಾನೆಗಳು ತರುಬಿದವು ತೇಜಿಗಳುರುಬಿದವು ತೇರು ॥ ಆನಲಳವೇ ಭಟರ ಶರಸಂ ।
ಧಾನವನು ಬಲುಸರಳಸೂಟಿಯ । ಸೋನೆಯಲಿ ಜಗ ನನೆಯಿತೆನೆ ಜೋಡಿಸಿತು ಖಳಸೇನೆ ॥೨೧॥
ಮುರಿದುದಮರರ ಚೂಣಿ ದಾನವ । ರುರುಬೆಗಳುಕಿತು ಸಿದ್ಧವಿದ್ಯಾ । ಧರಮಹೋರಗಯಕ್ಷರಾಕ್ಷಸ
ಗುಹ್ಯಕಾದಿಗಳು ॥ ಹೊರಗೆ ವನವೀಥಿಯಲಿ ಕಾಹಿನ । ಕುರುವದಲಿ ಗೋಪುರದೊಳೌಕಿತು ।
ಸುರರು ಮುರಿದರು ಮೇಲುಗಾಳಗವಾದುದಸುರರಿಗೆ ॥೨೨॥ ಕೆಣಕಿದಸುರರ ಕೋಲುಗಟ್ಟಿತು । ಬಣ
ಗುಸುರರೋಸರಿಸಿ ಭಾರಾಂ । ಕಣವನೆನ್ನಿದಿರಿನಲಿ ಸುಭಟರು ಸೂಸಿ ದೆಸೆದೆಸೆಗೆ ॥ ರಣವನದನೇನೆಂ
ಬೆನೈ ಧಾ । ರಿಣಿಪತಿಯೆ ವಿಗ್ರಹದ ವಿಸ್ತಾ । ರಣನಿಗುರ್ಗಣೆ ವಿಗಡಿಸಿತ್ತು ವಿಬುಧರ ವಿಡಾಯಿ
ಗಳ ॥೨೩॥ ಬಳಿಕ ಬಿಟ್ಟನು ರಥವನೀಮಾ । ತಳಿವಿಭಾಡಿಸಿ ಹೊಕ್ಕು ಚೂಣಿಯ । ಬಲಸಮುದ್ರದ
ಮಧ್ಯದಲಿ ಮುಳುಗಿತು ವರೂಥವಿದು ॥ ಬಲದಲೆಚ್ಚನು ಹಿಂದುಮುಂದೆ । ಟ್ಟಳಿಸಿದೊಡೆನಿಟ್ಟೊರಸಿ
ದೆನು ಮುಂ । ಕೊಳಿಸಿ ಮೇಲ್ವಾಯ್ದವರ ಮುರಿದನು ವಾಮಭಾಗದಲಿ ॥೨೪॥ ಕೆಟ್ಟುದಹಿತರ ಚೂಣಿ
ರಿಪುಜಗ । ಜಟ್ಟಿಗಳು ನುಗ್ಗಾಯ್ತು ದಿವಿಜರ । ಥಟ್ಟಿನಲಿ ಬೊಬ್ಬಾಟವಾಯ್ತು ಗಭೀರಭೇರಿಗಳು ॥
ಬಿಟ್ಟಮಂಡೆಯಲಸುರಸುಭಟರು । ಬಿಟ್ಟುಕೊಂಡರು ಕೂಡೆ ಹೆಣ ಸಾ । ಲಿಟ್ಟುದುರೆಯೆನಲರುಣಜಲ
ನಗರೋಪಕಂಠದಲಿ ॥೨೫॥ ನೂಕಿ ದೈತ್ಯರ ಚೂಣಿಯನು ಮುರಿ । ದೌಕಿ ದುರ್ಗವ ಹೊಗಿಸಿದನು ಸ ।
ವ್ಯಾಕುಲರು ಸೂಸಿದರು ಭಯವ ನಿವಾತಕವಚರಿಗೆ ॥ ಆಕೆವಾಳರು ಜೀಯ ನಮ್ಮ ದಿ । ವೌಕಸರ ಪರಿ
ಯಲ್ಲ ಯುದ್ಧ । ವ್ಯಾಕರಣಪಾಂಡಿತ್ಯವುಂಟೆಂದೆನ್ನದೂರಿದರು ॥೨೬॥ ಕೇಳಿದನು ಕಡುಗೋಪದಲಿ
ಸಿಡಿ । ಲೇಳಿಗೆಯಲೆದ್ದನು ಸುರೇಂದ್ರಗೆ । ಮೇಲುಗಾಳಗವೇ ಸುಪರ್ವರು ನಮ್ಮಸದೆವರಲೇ ॥ ಕಾಲ
ಗತಿಯೋ ಮೇಣ್ಕಪರ್ದಿಯ । ಕೀಲಕವೊ ರವಿಯೊಡನೆ ತಮ ಕೈ । ಮೇಳವಿಸಿತೇ ಶಿವಶಿವಾಯೆನುತ
ಸುರಹಲುಮೊರೆದ ॥೨೭॥ ಭಟರ ಬರಹೇಳೋ ಸುರೇಂದ್ರನ । ಕಟಕವಿಕ್ಕಿದವೇಡೆಯಲಿ ಲಟ । ಕಟಿ
ಸುತಿದೆ ದಾನವರು ಮಾನಚ್ಯುತಿಯ ಮನ್ನಿಸದೆ ॥ ನಿಟಿಲನಯನನನೇಳಿಸುವಚಾ । ಮಟೆಯರಾವೆಡೆ
ಚದುರರಣಾಲಂ । ಭಟರ ಬರಹೇಳೆನುತ ಮಿಗೆ ಗರ್ಜಿಸಿದನಮರಾರಿ ॥೨೮॥ ನೆರೆದುದಸುರರ ಕಾಲಕೂ
ಟದ । ಕರುವಿನೆರಕವೊ ಸಿಡಿಲ ದಳ್ಳುರ । ತಿರುಳದಡ್ಡಿಯೊ ವಿಲಯಭೈರವನುಬ್ಬಟೆಯ ಪಡೆಯೋ
ಹರನ ನಯನಜ್ವಾಲೆಯವದಿರ । ಗರುಡಿಯೋ ಗಾಢಾಯ್ಲತೇಜದ । ದುರುಳದಾನವಭಟರು ಬಂದು
ದು ಕೋಟಿಸಂಖ್ಯೆಯಲಿ ॥೨೯॥ ನೆರೆದಿರೈ ಪರಿಭವದ ನೆಲೆಯಲಿ । ನೆರೆದಿರೈ ದುಷ್ಕೀರ್ತಿಸತಿಯಲಿ ।
ನೆರೆದಿರೈ ಸಲೆ ಹೊರೆವಿರೈ ದುಷ್ಕೃತಿಯಲೊಡಲುಗಳ ॥ ಸುರರಲೇ ನೀವ್ನಿಮ್ಮ ಹೆಂಡಿರ । ಕುರುಳ
ಕೈದೊಳಸಿಂಗೆ ಮಿಗೆ ಕಾ । ತರಿಸುತಿದೆ ವಾಸವನೊಡನೆ ವಾಸಿಗಳ ಬಿಡಿಯೆಂದ ॥೩೦॥ ಜೀಯ ಖಾತಿಯಿ

ದೇಕೆ ದಿವಿಜರ | ರಾಯನರಸಿಯ ನಿನ್ನ ತೊತ್ತಿರ | ಲಾಯದಲಿ ತೋರುವೆವು ತಾತಾ ವೀಳಯವನೆ ನುತ್ತ || ಹಾಯಿದರು ತವತವಗೆ ಮುಂಗುಡಿ | ದಾಯದಲಿ ಘಟ್ಟಿಸುವನಿಸ್ಸಾ | ಳಾಯತದ ಬಹುವಿಧ ದವಾದ್ಯದ ಲಳಿಯ| ಲಗ್ಗೆಯಲಿ||೩೧|| ಒಡೆದುವಿಳೆಯೆನೆ ಸಮವಿಷಮದುರಿ|ಗಡಲು ಶಿವಶಿವಯೆನೆ ನಿಹಾ ರದ | ದಡಿಗದಾನವರೈದಿ ಕವಿದುದು ಕೆದರಿ ಸುರಬಲವ || ಧಡಧಡಿದಿರಾಗಲಿ ಸುರೇಂದ್ರನ | ತುಡುಕ ಹೇಳಾ ಕಾಲವಿದಲಾ | ತೊಡರೆನುತ ಹೊಯ್ದರುಬಿತಸುರರು ಸುರರ ಸಂದಣಿಯ ||೩೨|| ಮುರಿದುದ ಮರರು ಮತ್ತೆ ಬೊಬ್ಬಿರಿ | ದುರುಬಿದೆನು ಹೆಸರೆನಿಸಿದಸುರರ | ತರಿದೆನದರೊಳು ಕೋಟಿಸಂಖ್ಯೆಯ ನೈಂದ್ರಬಾಣದಲಿ ||ಹರಿದುದಮರಾರಿಗಳು ಕೋಟಿಯು | ಹೊರಗೆ ಸುರಬಲವೌಕಿಬಿಟ್ಟುದು | ತುರುಗಿ ತಮರರು ಖಳನ ದುರ್ಗದತುದಿಯ ತೆನೆಗಳಲಿ ||೩೩|| ಎಲೆಲೆ ಸುರಪತಿಯಾಳು ಕೋಟಿಯು | ನಿಳಿಯು ತದೆ ನಡೆಯೆನುತ ದಾನವ | ರುಲಿದು ಕವಿದುದು ಖಾತಿಯಲಿ ಮಿಗೆ ಭಾಷೆಗಳ ಕೊಡುತ || ತಲೆಯ ಹೊಯ್ದಡಗೆಡಹು ಸುರಪನ | ಲಲನೆಯರ ಮುಂದಣವಿಕಾರಿಗ | ಳೆಲವೊ ಸರಿಯೋ ಘೂತು ಮೊಝು ಯೆನುತೈದಿದರು ಭಟರು ||೩೪|| ಏನನೆಂಬೆನು ಜೀಯ ಬಳಿಕಾ| ದಾನವಾಧಿಪರುಬ್ಬೆಯನು ಸು | ಮ್ಮಾನ ವನು ತರಹರಿಸಲಳವೇ ಖಳರ ಘುಲ್ಲಣೆಯ || ವೈನತೇಯನ ಪಕ್ಷಗತಪವ | ಮಾನನಂತಿರೆ ಭಟರ ಸುಯ್ಲಿನ ಲಾನಿರೂಢಿಯಸುರರು ಹಾರಿತು ಸೂಸಿ ದೆಸೆದೆಸೆಗೆ||೩೫||ತೋರುತೋರಮರೇಂದ್ರಸಾವೆಡೆ| ತೋರಿಸೈರಾವತವದೆತ್ತಲು | ತೋರಿಸುಚ್ಚೈಶ್ರವವನೆಲ್ಲಿಹರಗ್ನಿಯಮಗಿವರು || ತೋರಿರೈಕೈಗುಣ ವನಸುರರ | ಗಾರುಗೆದರರದಗರ್ವಿತರ ಮೈ | ದೋರಹೇಳಾ ಕಾಣಬಹುದೆನುತುರುಬಿದರ ಭಟರು ||೩೬|| ಕರೆದರವದಿರು ಕಲ್ಪಮೇಘದ | ಬಿರುಮಳೆಯವೊಲು ಸರಳನನಿತುವ | ತರಿದು ತೆತ್ತಿಸಿದೆನು ತದಂಗೋ ಪಾಂಗದಲಿ ಶರವ || ಅರಿಯರೆನ್ನನು ಶಕ್ರನೆಂದೇ | ತರುಬಿದಿಙ್ಮಂಡಲವ ಮುಸುಕಿದ | ರಿರಿತಕಂಜದದಿ ಟ್ಟನಾವೆನು ಸುರರ ಘಟ್ಟನಲಿ ||೩೭|| ಝಗಝಗಿಪಬಾಣಾಗ್ನಿ ಭುಗುಭುಗು | ಭುಗಿಲೆನಲು ದಿವ್ಯಾಸ್ತ್ರತ ತಿಯಲಿ | ಹೊಗೆಯ ತೋರಿಸಿದೆನು ಚತುರ್ದಶಭುವನ ಭವನದಲಿ || ವಿಗಡರದ ಲೆಕ್ಕಿಸದೆ ಲೋಟಿಸಿ | ಮಗುಚಿದರು ಮದ್ಬಾಣಮಹಿಮೆಯ|ನೊಗಡಿಸಿತು ಕಾಲಾಗ್ನಿ ಕಾಲಾಂತಕರಿಗಾಸಮರ||೩೮||ದೊರೆಗಳೇ ರಿತು ರಥತುರಂಗಮ | ಕರಿಗಳಲಿ ಕಾಲಾಳ ಬಿಂಕವ | ನರಸ ಬಣ್ಣಿಸಲರಿಯೆನಾಸುರಕರ್ಮಕಲಹವಲೇ|| ಸರಿಗರೆದ್ದುದು ಮೂರುಕೋಟಿಯ | ಸುರರು ಸರಿಗಳಲಿಟ್ಟರಶನಿಯ | ಶರದಲೆಡೆಯಲಿ ತರುಬಿದರು ಕೈಸೋತುದೆನಗೆಂದ ||೩೯|| ಲಟಕಟಿಸುವಾಮೂರುಕೋಟಿಯ | ಭಟರು ಕರೆದರು ಕಲುವಳೆಯನು | ಬ್ಬಟೆಯನದನೇನೆಂಬೆನವದಿರ ಸಮರಸಂಭ್ರಮವ || ಕುಟಿಲಕದನದೊಳೊದಗಿತದು ಕಲು | ಗುಟಿಕ ಶರಶತಕೋಟಿಯಲಿ ಪಡಿ | ಭಟಬಲವ ಬೆದರಿಸಿದೆಚಿತ್ತೈಸೆಂದನಾಪಾರ್ಥ ||೪೦|| ತೆರಳದವದಿರ ಹೂಡಿ ದರು ದ | ಳ್ಳುರಿಯಧಾರೆಯಪಾವಕಾಸ್ತ್ರವ | ನರಸ ಹೊಗೆದುದು ಭುವನ ಹೊಯ್ದುದು ಝಳ ಜಗ ತ್ರಯವಾ || ಸರಕುದೆಗೆದುದು ಸತ್ಯಲೋಕಕೆ | ಥರಥರದಜಗವಿಂದ್ರಸಾರಥಿ | ಜರಿದು ಜವಗುಂದಿ ದನು ಝಾಡಿಸುವನಲನುಬ್ಬೆಯಲಿ || ಸಾರಥಿಯ ಸಂತೈಸಿ ತೇರಿನ | ವಾರುವಂಗಳ ನೇಣನೋಜೆಯೊ| ಳೋರಣಿಸಿ ಸಂವರಿಸಿ ರಥವನು ವರುಣಬಾಣದಲಿ || ವಾರಿಧಿಯ ಕೆದರಿದನು ಕೆಟ್ಟವು | ಭೂರಿಗಿಡಗಳು ಮಾರುತನ ಕೈ | ವಾರ ಕುಂದಿದುದಸುರಮುಖದನಲಾಸ್ತ್ರಪರಿಹರಿಸಿ ||೪೧|| ಅವರು ಮಗುಳೆಚ್ಚರು

ತ್ರಿಲೀಮುಖ । ದವೆಯವದೊಳುಬ್ಬೆದ್ದ ಗಿರಿಗಳು । ಕವಿಯೆ ಕಡಿದೊಟ್ಟಿದೆನು ಭಾರಿಯವಜ್ರಬಾಣ ದಲಿ॥ಅವರು ತಿಮಿರಾಸ್ತ್ರದಲಿ ಕೆತ್ತರು । ಭುವನನಯನದ ಕದವನಾಗಳೆ । ರವಿಯಶರದಲಿ ಮುರಿದೆನಗುಳಿ ಯನರಸಕೇಳೆಂದ ॥೪೩॥ ಬಳಿಕ ಸುರಿದರು ಹಾವುಗಳ ಹೆ । ಮ್ಮಳೆಯನಲ್ಲಿಗೆ ಗರುಡಬಾಣವ । ಸುಳಿ ಸಿದೆನು ಬಳಿಕಾದುದರ್ಧಗ್ರಾಸವಾಶರಕೆ ॥ ಉಲಿದು ದನುಜರು ಮತ್ತೆ ಕೆಂಡದ । ಮಳೆಯ ಕರೆದರು ಮರಳಿ ಜಲಧಿಯ । ತುಳುಕಿದೆನು ತೊಡಕಾಯ್ತು ಸಾರಥಿ ಮತ್ತೆ ಬಸವಳಿದ ॥೪೪॥ ಸಾರಥಿತ್ವದ ಕೈಮೆ ತಪ್ಪಿತು । ಕಾರಶರಸಂಧಾನವೆರಡರ । ಭಾರ ಬಿದ್ದುದು ಮೇಲೆ ದನುಜರ ಮೂರುಕೋಟಿ ಯದು ॥ ಧೀರರಾತ್ಮಸ್ತುತಿಗೆ ನಾಚದ । ರಾರು ಜೀಯ ಮಹಾಹವದವಿ । ಸ್ತಾರವನು ಮಾತಲಿಯ ಕೈಯಲಿ ಚಿತ್ತವಿಸಿಯೆಂದ ॥೪೫॥ ತೊಡಚಿದೆನು ಬೊಮ್ಮಾಸ್ತ್ರವನು ಹುರಿ । ಯೊಡೆದುದಸುರರು ಮಲೆತವರನಿ । ಕ್ಕಡಿಯ ಮಾಡಿತು ಬಂದುದಳಿವು ನಿವಾತಕವಚರಿಗೆ ॥ ಕಡುಹಿನಿಂದಾಗ್ನೇಯವಾ ರುಣ । ದಡಬಳಿಗರನು ಬಾಚಿದವು ಬರ । ಸಿಡಿಲ ಸೆರೆಬಿಟ್ಟಂತೆ ಕಳಚಿದವಸುರಬಲದಸುವ ॥೪೬॥ ಕಾಳದನುಜರು ಮೂರುಕೋಟಿಯೊ । ಳಾಳುಳಿಯದಕ್ಕಾಡಿತಮರರ । ಸೂಳೆಯರ ಸೆರೆ ಬಿಟ್ಟುದ ರಿನಗರೋಪಕಂಠದಲಿ ॥ ಧೂಳಿಪಟವಾಯಿತು ಹಿರಣ್ಯಪು । ರಾಲಯದ ನೆಲೆಗಟ್ಟು ಮರಳಿದು । ಕಾಳಿ ಕೇಯರ ಪುರಕೆ ಬಂದೆನು ರಾಯ ಕೇಳೆಂದ ॥೪೭॥ ಕೆರಳಿತಲ್ಲಿ ನಿವಾತಕವಚರ । ಮರಣವಾರ್ತೆಯ ಕೇಳಿದಸುರರು । ಪುರದ ಬಾಹೆಯೊಳಡ್ಡಹಾಯ್ದರು ತರುಬಿದರು ರಥವ ॥ ಅರಸ ಚಿತ್ತೈಸವದಿರಲಿ ಪರಿ । ಪರಿಯಮಾಯಾರಚನೆ ರಂಜಿಸಿ । ತೆರಡುಸಾವಿರ ಮಡಿಗೆ ಮಿಗಿಲು ನಿವಾತಕವಚರಿಗೆ ॥೪೮॥ ಬೀಸಿದರು ಬಿರುಗಾಳಿಯಾಗಿ ಮ । ಹಾಸಮುದ್ರದ ನೂಕುತೆರೆಯಲಿ । ಬೇಸರಿಸಿದರು ಹರಿದರವನಿಯ ಲಗ್ನಿರೂಪಾಗಿ ॥ ಆಸುರದ ತಮವಾಗಿ ರವಿಶತ । ದಾಸರಿನ ಬಿಸಿಲಾಗಿ ಮಾಯಾ । ಭ್ಯಾಸಿಗಳು ಮೋ ಹಿಸುವರದನೇಂಬಣ್ಣಿಸುವೆನೆಂದ ॥೪೯॥ ಘೋರತರವದು ಬಳಿಕ ದುಷ್ಪ್ರತಿ । ಕಾರವಿತರರಿಗಿಂದು ಮೌಳಿಯ । ಸಾರತರಕೃಪೆಯಾಯ್ತಲೇ ಸರಹಸ್ಯಸಾಂಗದಲಿ ॥ ಭಾರಿಸಿದುದಾವಂಗದಲಿ ಮಾ । ಯಾರಚನೆಯಾವಿಧದಲಾವಮಾ । ಯಾರಚನೆರಿಯನು ಸೀಳಿ ಬಿಸುಟೆನು ಶಿಲ್ಪದಲಿ ಖಳರ ॥೫೦॥ ಮುರಿ ದುದಸುರರ ಮಾಯೆ ಕಾಹಿನೊ । ಳೆರೆದರಸದವೊಲವರು ನಿಜದಲಿ । ತರುಬಿ ನಿಂದರು ತೂಳಿದರು ಗಜಹಯರಥೌಘದಲಿ ॥ ತರಿದವುಗಿದವು ತುಂಡಿಸಿದವಗಿ । ದೆರಗಿದವು ಸೀಳಿದವು ಕೊಯ್ದವು । ಕೊರೆದು ಕುಪ್ಪಳಿಸಿದವು ನಿಮಿಷಕೆ ಶರವರಿವ್ರಜವ ॥೫೧॥ ಜೀಯ ವಿಗಡಬ್ರಹ್ಮಶರವಿಂ । ದಾಯುಧದ ಮುಂ ಗುಡಿಯಲಿರಿದುದು । ಮಾಯಕಾರ ಮೋಹರವನುಬ್ಬಟೆ ಚತುರ್ಬಲವ ॥ ಹೋಯಿತಸುರರ ಸೇನೆ ಸರಿ ದುದು । ನಾಯಕರು ನಾಸಾದಿಗಂತ । ಸ್ಥಾಯಿಗಳು ಸಗ್ಗಾದಿಭೋಗಕೆ ಭೂಪ ಕೇಳೆಂದ ॥೫೨॥ ಕಡುಹುವಗ್ಗದಕಾಲಕೇಯರ । ಗಡಣವಡಗಿತು ಸುರರ ಬಲುಸೆರೆ । ಬಿಡಿಸಿದವು ಬಳಿಕಾಯ್ತು ಕಡುಸುಮ್ಮಾನ ಸುರಕುಲಕೆ ॥ ಒಡೆದುದಿಳೆಯೆನೆ ಬಾಹುವಿನ ಬಿರು । ನುಡಿಯ ಕೈಗಳ ತುದಿವೆರಳ ಬೊ । ಬ್ಬಿಡಿಕೆಗಳ ಸುರಭಟರು ಹರಿದರು ಮುಂದೆ ಸುರಪುರಕೆ ॥೫೩॥ ಕಟ್ಟು ಗುಡಿಯನು ಖೋಡಿಯೇ ಜಗ । ಜಟ್ಟಿಗಳು ನಗ್ಗಾಯ್ತಲೇ ನಿ । ನಟ್ಟಸಸಿ ಸುರಕುಜವಲೇ ಕೊಡದೇ ಮನೋ ರಥವ ॥ ಕೆಟ್ಟುದಹಿತನಿವಾತಕವಚರ । ಥಟ್ಟು ಹುಡಿ ಯಾಯಿತ್ತುದನುಜರ । ಹುಟ್ಟುವುರಿದುದು

ಜೀಯ ಚಿತ್ತೈಸೆಂದರಿಂದ್ರಂಗೆ ॥೩೪॥ ಸುರಕೇಯರ ನಗರಿಯಲಿ ದು । ರ್ವ್ಯಾಳಿಸಿತ್ತಲೇ ಪ್ರೈತ್ಯ ದಿವಿಜರ । ಸೂಳೆಯರು ಸೆರೆಬಿಟ್ಟು ಬಂದರು ಯಕ್ಷಕಿನ್ನರರ ॥ ಕಾಲ ಸಂಕಲೆ ಕಡಿದವಾಖಳ । ರೂಳಿಗಕೆ ಕಡೆಯಾಯ್ತು ಸುರಪುರ । ಪಾಳುವೇ ಬಕಾಹು ತೆಗೆಯಲಿ ಯೆಂದರಾಚರರು ॥೩೫॥ ಪುರದ ಬಾಹೆಯ ಕೋರಡಿಯ ಸಂ । ವರಣೆ ತೆಗೆಂ ನಿರ್ಭಯದಿ ಸಂ । ಚರಿಸುವುದು ನಂದನದೊಳಗೆ ನಿಮ್ಮಡಿಯರಾಣಿಯರು ॥ ತರತರದ ಕೊಳ್ವ ಕಾಹಿನ । ಸುರಭಟರು ಸುಖನಿದ್ರೈಯಲಿ । ನಿರುತ ನಿಜನಿಳಯದೊಳಗೆಂದುದು ಸುರಜನವ್ರಾತ ॥೩೬॥ ಕೇಳಿದನು ಪರುಷಾಶ್ರು ಹೊದೆಸಿದ । ವ್ಯಾಲಿಗಳ ಸಾವಿರವನುಬ್ಬಿದ । ಮೇಲುಮದದ ಸರೋಮಪುಳಕದ ಸರ್ವಸೌಖ್ಯದಲಿ ॥ ಬಾಲೆಯರ ಬರಹೇಳು ರತುನನಿ । ವಾಳಿಗಳ ತರಹೇಳೆನುತ ಸುರ । ಮೌಳಿಮಂಡಿತಚರಣನೆದ್ದನು ಬಂದನಿದಿರಾಗಿ ॥೩೭॥ ಕವಿದುದಮರವ್ರಾತ ಕಾಂತಾ । ನಿವಹ ಹೊರವಂಟುದು ಸುರೇಂದ್ರನ । ಭವನದಲಿ ಗುಡಿ ನೆಗಹಿತಮರಾವತಿಯ ಚೌಕದಲಿ ॥ ತವತವಗೆ ತನಿವರಿವಜನದು । ತ್ಸವವನದನೇನೆಂಬೆನಂದಿನ । ದಿವಸದೊಸಗೆಯನಮರಲೋಕದೊಳರಸ ಕೇಳೆಂದ ॥೩೮॥ ಇದಿರು ಬಂದನು ಪದಯುಗವಲೆರ । ಗಿದೊಡೆ ಬಿಗಿದಪ್ಪಿದನು ಸುಮ್ಮಾ । ನದ ಸಗಾಢವನೇನನೆಂಬೆನು ಸಾಲಿಗಳ ॥ ಹೊದರಿನಲಿ ಹೊದಿಸಿದನು ಮಗೆ ನಾ । ದಿದನು ಹರುಷಾಶ್ರುಗಳಲೆನ್ನ । ಭ್ಯುದಯವೇ ನಿಮ್ಮಡಿಯ ಕರುಣಾಕಟಾಕ್ಷಕೃಪೆಯೆಂದ ॥೩೯॥ ಸುರರು ಕೊಂಡಾಡಿದರು ಸುರಮುನಿ । ವರರ ಪರಮಾಶೀರ್ವಚೋವಿ । ಸ್ತರಕೆ ಫಲವಿದಲಾ ಭವತ್ಕರುಣಾಂಬಕಾಲೋಕ ॥ ಅರಿಸುಭಟಸಂತೋಷಮಯಸಾ । ಗರವ ಸುರಿಯವೆ ಸರಳು ವಡಬ । ಸ್ಫುರಣ ಮೇಘಜ್ವಾಲೆ ಜಾಲಕರಾಳಜಿಹ್ವೆಯಲಿ ॥೬೦॥ ಲೇಸುಮಾಡಿದೆ ನಾಕವನು ಖಳ । ರೀಸುದಿವಸ ವಿಭಾಡಿಸಿದರೆ ಸು । ರೇಶನಾಪತ್ತಾಪನಿವಾರ್ಪಣವ ರಚಿಸಿದೆಲಾ ॥ ಈಸುಪುಣ್ಯೋದಯಕೆ ಪೂರ್ವಮಹೀಶಕುಲ ನೋಂತುದು ಯೆನುತ ಸಂ । ತೋಷಮಯಜಲಧಿಯಲಿ ತೇಂಕಾಡಿದನು ಯಮಸೂನು ॥೬೧॥ ಹೊಗಳಿ ನಿಲ್ಲದು ಜಿಹ್ವೆ ತೆಕ್ಕೆಯ । ಸೊಗಸಿನಲಿ ಮೈದಣಿಯದೀಕ್ಷಣ । ಯುಗಳ ಬೀಯದು ನೋಡಿ ಪಾರ್ಥನ ಮಾತ ಸವಿಸವಿದು ॥ ತೆಗೆದು ನಿಲ್ಲದು ಕರ್ಣಯುಗ ಸುರ । ನಗರಿಯುತ್ತಮಗಂಧಭರದಲಿ । ಮುಗಿಯದರಸನ ಗಂಧವಹವವನೀಶ ಕೇಳೆಂದ ॥೬೨॥ ನೃಪನ ಮುದವನು ಭೀಮಸೇನನ । ವಿಪುಳ ಸುಮ್ಮಾನವನು ನಕುಲನ । ಚಪಲಮುದವನು ಪುಳಕವನು ಸಹದೇವನವಯವದ ॥ ದ್ರುಪದಸುತೆಯುತ್ಸವವ ಮುನಿಜನ । ದಪಗತಗ್ಲಾನಿಯನು ಪುರಜನ । ದುಪಚಿತಾನಂದವನು ಬಣ್ಣಿಸಲರಿದು ತನಗೆಂದ॥ ಶಿವನ ಘಾಟದ ಶರ ಚತುರ್ದಶ । ಭುವನಭಂಜನವಿದು ಮಹೀಯಾ । ಹವಕೆ ಹೂಣಿಗವಾಯ್ತಲಾಹೇರಾಳಸುಕೃತವಿದು ॥ ಎವಗೆ ತೋರಿಸಬೇಹುದೀಶಾಂ ಭವಮಹಾಸ್ತ್ರಪ್ರಯೋಗಕೇಳೀ । ವಿವರಣಾಪಕಾಬತಿಯಾಯ್ತೆಂದನು ಧನಂಜಯಗೆ ॥ ಜೀಯ ನಿಮ್ಮಡಿಯನು ಶಂಭುವಿ । ನಾಯುಧದಲೇ ಸಲಿಸಿದ ಪೆನಾ । ಗ್ನೇಯವಾರುಣವೈಂದ್ರಕೌಬೇರಾಸ್ತ್ರಕೌಶಲವ ॥ ಆಯತವ ತೋರಿಸುವೆನೀಗಳ । ನಾಯತವ್ರು ರವಿತುರಗರಾಜಿಗೆ । ಲಾಯ ನೀಡಿತು ಪಶ್ಚಿಮಾಶಾಗಿರಿಯ ತಪ್ಪಲಲಿ ॥೬೪॥ ಅರಸ ಕಳುಹಿದ ನಿಂದ್ರಸೂತನ । ನರಮನೆಗೆ ಬಂದನು ಧನಂಜಯ । ವೆರಸಿ ಪಣಸದ ಚೌಕಿಗೆಯಲಿ ಮುನೀಂದ್ರಮೋ

ಳದಲಿ ॥ ಅರಸಿ ಬಣ್ಣಿಪ ಸೊಡರ ಬಲಿದಳು । ಹರಸಿದರು ಮುನಿವಧುಗಳಕ್ಷತೆ । ವೆರಸಿ ಗದುಗಿನ ವೀರ ನಾರಾಯಣನಮೈದುನನ ... ... ... ... ॥೬೬॥

ಅಂತು ಸಂಧಿ ೧೨ ಕ್ಕೆ ಪದ ೬೭೩ ಕ್ಕಂ ಮಂಗಳಮಸ್ತು.

## ಹ ದಿ ಮೂ ರ ನೆ ಯ ಸಂ ಧಿ

ಸೂಚನೆ॥ ಅಡವಿಯಲಿ ಫಣಿಭೋಗದಲಿ ಬಿಗಿ । ವಡೆದು ಬಳಲಿದಭೀಮಸೇನನ । ಬಿಡಿಸಿದನು ಯಮಸೂನು ಧರ್ಮಕಥಾಪ್ರಸಂಗದಲಿ ॥

ಕೇಳು ಜನಮೇಜಯಧರಿತ್ರೀ । ಪಾಲ ಪಾಶುಪತಾಸ್ತ್ರವೇದದ । ಪಾಳಿಯುಚ್ಚಾರಣೆಯಲಿ ತತ್ಪ್ರಣವಸ್ವರೂಪವೆನೆ ॥ ಮೇಳವಿಸಿತರುಣಾಂಶು ಪೂರ್ವದಿ । ಶಾಲತಾಂಗಿಯ ಮಂಡನೋಚಿತ ಮೌಳಿಮಾಣಿಕವೆನಲು ಮೆರೆದುದು ಬಿಂಬ ದಿನಮಣಿಯ ॥೧॥ ಅರಸನುಪ್ಪವಡಿಸಿದನೆದ್ದನು । ವರಮೃಕೋದರನರ್ಜುನನ ದೃಗು । ಸರಸಿರುಹವರಳಿದವು ಮಾದ್ರೀಸುತರು ಮೈಮುರಿದು ॥ ಹರಿಯ ನೆನೆವರು ನಿದ್ರೆ ತಿಳಿದುದು । ಪರಿಜನಕೆ ಮುನಿನಿಕರವೆದ್ದುದು । ತರಣಿಸಂಧ್ಯಾಸಮಯಸತ್ಕೃತಿಜಪಸಮಾಧಿಯಲಿ ॥೨॥ ಮುನಿಜನಕೆ ಕೈಮುಗಿದು ಯಮನಂ । ದನನ ಚರಣಕ್ಕೆರಗಿ ಶಂಭುವ । ನೆನೆದ ಗವಸಣಿಗೆಯಲಿ ತೆಗೆದನು ಗರುವಗಾಂಡಿವವ ॥ ಜನಪ ಕೇಳ್ಕೆ ಕೊಪ್ಪಿನಲಿ ಸಿಂ । ಜನಿಯ ಸಿಕ್ಕಿದನಳ್ಳಿರಿದು ಮಾ । ರ್ದನಿ ದಿಗಂತದಲೊದರಲೊದರಿಸಿದನು ಮಹಾಧನುವ ॥೩॥ ಘೋರತರಲಯಭೈರವನ ಹುಂಕಾರವೋ ಸಂಹಾರಸುತಿಯೋಂ । ಕಾರವೋ ಕಲ್ಪಾಂತತಾಂಡವವೇದಪಂಡಿತನ ॥ ಅರುಭಟೆಯೋ ಪೋಣ್ತ್ರವಿಕ್ರಮ । ವೀರಪದಭಿನ್ನಾಬ್ಜಜಾಂಡಕ । ಘೋರರವವೆನೆ ಮೆರೆದುದರ್ಜುನಚಾಪಟಂಕಾರ ॥೪॥ ಏನಿದದ್ಭುತರವವೆನುತ ವೈ ।ಮಾನಿಕರು ನ ಡುಗಿದರು ಗ । ರ್ವಾನುಸಯಗತವಾಯ್ತಲೇಸುರಪುರದ ಗರುವರಿಗೆ ॥ ಆನಿರುತಿಯಮವರುಣವಾಯು ಕೃ । ಶಾನುಧನದಮಹೇಶ್ವರೈತರ । ಲಾನೆಯಲಿ ಹೊರವಂಟನಂಬರಗತಿಯಲಮರೇಂದ್ರ ॥೫॥ ರೆದುದಭ್ರದೊಳಮರಗಣಮುನಿ । ವರರುಸಹಿತ ಯುಧಿಷ್ಠಿರಾದಿಗ । ಳೆರಡುವಂಕವ ಹೊದ್ದಿದರು ರಿತನಯನೆಡಬಲವ ॥ ತರುನಿಕರಗಿರಿನಿಚಯವಲ್ಲಿಯ । ಪರಿಜನವು ತರುಬಿದುದು ನನಗಿದ । ನೆರಸ ಸಳಲವೆ ನರನ ಮಹಾಸ್ತ್ರನಾಟಕವ ॥೬॥ ಮೊದಲೊಳನಲಮಹಾಸ್ತ್ರವನು ಹೂ । ಡಿದನು ಹೆ ಮದು ಭುವನದಿಕ್ಕುಗ । ಳೊದರಿದವು ಪಂಠಿಸಿತು ರವಿರಥ ಗಗನಮಾರ್ಗದಲಿ ॥ ಉದಧಿಯುದಧಿಯ ತೆರೆಯ ಗಂಟಿ । ಕ್ಕಿದವು ಹರಹರ ಹೇಳಬಾರದ । ಹೊದರು ಹೊದಿಸಿತು ಕೇಳು ಮೇಲಣ ಜಗದ ಪಂತಿಗಳ ॥೭॥ ಅಹಹ ಬೆಂದುದು ಭುವನವಿದು ವಿ । ಗ್ರಹದ ಸಮಯವೆ ತಮ್ಮಲೀಲೆಗೆ । ಕುಹಕಮತಿಗಳು ತಂದರ್ಸೆ ತ್ರೈಜಗಕೆ ತಲ್ಲಣವ ॥ ರಹವಿದೇ

ನೆಂದಭ್ರತಳದಿಂ। ಮಹಿಗೆ ಬಂದನು ದೇವಮುನಿ ದುಸ್ಸಹವಿದೇಸ್ಸೆ ಪಾರ್ಥ ಹೋಹೋ ಸಾಕುಸಾಕೆಂದ ॥೮॥ ತೊಡಚದಿರು ಬ್ರಹ್ಮಾಸ್ತ್ರವಿದು ಬಾ। ಯ್ದಡಿಯನಿದು ನಿಮಿಷದಲಿ ಭುವನವ। ನಡುಗಿ ತಣಿಯದಿದೊಂದು ಮತ್ತೀಶಾಂಭವಾದಿಗಳ॥ ತೊಡಚಿದೊಡೆ ಸಂಹಾರಸಮಯವೆ। ನೆಡೆಯಲನುಭವಿಸುವುದು ಜಗವಿದು।ಕೆಡಿಸದಿರು ಕೆಡಿಸದಿರು ತೆಗೆತೆಗೆಯೆಂದನಾಮುನಿಪ ॥೯॥ ಲಕ್ಷ್ಯವಿಲ್ಲದೆ ತೊಡಚುವೊಡೆ ನಿ। ರ್ಲಕ್ಷ್ಯಶರವೇ ನೀನುಪಾರ್ಜಿಸಿ। ದಕ್ಷಯವಲೇ ಪಾರ್ಥ ಗಣನೆಯ ಗುತ್ತಿನಂಬುಗಳೇ ॥ ಶಿಕ್ಷೆರಕ್ಷೆಗೆ ಬಾಣವೊಂದೇ। ಲಕ್ಷ್ಯವಿದು ನೀನರಿಯದುದಕೆ ವಿ। ಲಕ್ಷ್ಯನಾದೆನು ನಾನೆನುತ ಮುನಿನುಡಿದನರ್ಜುನಗೆ ॥೧೦॥ ಹರ ಮಹಾಸಾಸ್ತ್ರಾದಿಗಳ ಲೀಲೆಯ। ನರಸನೋಡಲುಬೇಹುದಾದರೆ। ಬೆರಸುವುದು, ತತ್ಸಮಯ ಸ್ಮರಿಸು ನೃಪನ ಕಣುಮನವ ॥ ಹೊರೆವಹೇರಾಳದ ಮಹಾಸಂ। ಗರವಹುದು ಮುಂದಣಕಥಾವಿ। ಸ್ತರವ ವಿರಚಿಸಬಾರದನುಚಿತವೆಂದನಾಮುನಿಪ ॥೧೧॥ ಅರಸ ಕೇಳ್ಳೆ ನಾರದನ ನುಡಿ। ಗುರುತರದಲೀಪಾರ್ಥನಾಬಿಲು। ದಿರುವ ಮಗುಳಿಳುಹಿದನು ಮುನಿಪನ ಮಾತ ಮನ್ನಿಸುತ ॥ ಹರೆದುದಮರರಮೇಲೆ ನೋಡುವ। ನೆರವಿ ದಿಗುಪಾಲಕರು ನಿಜಮಂ। ದಿರಕೆ ಸರಿದರು ದೇವಮುನಿ ಹಾಯಿದನು ಗಗನದಲಿ ॥೧೨॥ ಇವರು ಕಾಮ್ಯಕಕಾನನವನನು। ಭವಿಸಿ ಬಳಿಕಲ್ಲಿಂದ ಹೊರವಂ। ಟವೆಗಡೆಯ ಪರ್ವತಕೆ ಬಂದರು ಯಾಮುನಾಹ್ವಯದ ॥ ದಿವಿಜರಿಪು ಹೈಡಿಂಬನಾತುದಿ। ಗವರನೇರಿಸಿದನು ತದಗ್ರದೊ। ಳವನಿಪತಿ ಕೆಲದಿವಸವಿದ್ದಲ್ಲಿಂದ ಹೊರವಂಟ ॥೧೩॥ ಅರಸ ಕೇಳ್ಳೆ ಕಾರ್ತಿಕೇಯನ। ವರಮಹಾಶ್ರಮಕ್ಕೆದಿದನು ಮುನಿ। ವರರು ಸಹಿತೊಲವಿನಲಿ ನೂಕಿದನೊಂದುವತ್ಸರವ ॥ ಧರಣಿಪತಿ ಬೃಹದಶ್ವನಾಶ್ರಮ। ವರಕೆ ಬಂದನು ತೀರ್ಥಸೇವಾ। ಪರಮಪಾವನಕರಣನಿರ್ದನು ಪರ್ಣಶಾಲೆಯಲಿ ॥೧೪॥ ಬಂದನೊಬ್ಬನು ಪವನಸುತನವು। ಳಿಂದನಟವೀತಟದ ಖಗಮೃಗ। ವೃಂದದಬಿಕ್ಕೆಯ ಹಕ್ಕೆಯಾಡುಂಬೊಲದ ಸೋಹೆಗಳ ॥ ನಿಂದನೆಲೆನೀರ್ದಾಣಹಜ್ಜೆಗ। ಳಿಂದ ಭೇದಿಸಿ ಜೀಯ ಚಿತ್ತವಿ। ಸೆಂದು ಬಿನ್ನಹಮಾಡಿದನು ಕಲಿಭೀಮಸೇನಂಗೆ ॥೧೫॥ ಇದೆ ಮಹಾತಾಂತಾರವತಿದೂ। ರದಲಿ ವೃಕಶಾರ್ದೂಲಕೇಸರಿ। ಕದಡಿ ಕಳಭಕ್ರೋಡಖಡ್ಗಿಲುಲಾಯಸಾರಂಗ ॥ ಮದದ ರಹಿಯಲಿ ಮಾನಿಸರು ಸೋಂ। ಕಿದೊಡೆಸಡೆಯವು ಹೊಲನ ಹೊದರಿ। ಕ್ಕಿದವು ದೀಹದ ಹಿಂಡಿನಂತಿರೆ ಜೀಯ ಚಿತ್ತೈಸು ॥೧೬॥ ಮೇಹುಗಾಡಿನೊಳವರ ಮೈ ಮಿಗೆ। ಸೋಹಿದರೆ ಸುವ್ವಲೆಯ ಸುಬ್ಬಲೆ। ಯಾಹವದಲೇ ತೋಳ ತೆಕ್ಕೆಯ ತೋಟಿ ತೇಗುವರೆ ॥ ತೋಹಿನಲಿ ತೊಡಳಾಗಿ ಗೋರಿಯ। ಗಾಹಿನಲಿ ಗುರಿ ಗಡಬಡಿಸೆ ಬಲು। ಸಾಹಸಕ್ಕಂಜುವೆವು ನೀವೇಳೆಂದನಾಶಬರ ॥೧೭॥ ಕಂಡಮೃಗಮೈದೆಗೆಯದಿಕ್ಕೆಯ। ಹಿಂಡು ಹೊಳಹಿನ ಹುಲಿಯ ಮೋಕೆಯ। ಮಿಂಡವಂದಿಯಲಾವಣಿಗೆಯ ಲುಲಾಯಲಾಲನೆಯ। ತೊಂಡುಮೊಲನ ತೊಡಂಕು ನವಿಲಿನ। ಖಂಡೆಯದ ಮೊನೆ ನಡದಖಡ್ಗಬ! ಹಿಂಡುಗಳ ತೋರಿಸುವೆ ನೇಳೆಂದನಿಲಜಗೆ ನುಡಿದ ॥೧೮॥ ಅಂಗಚಿತ್ತವನಿತ್ತನಾಶಬ। ರಂಗೆ ಬಲೆಗಳ ತೆಗೆಸಿದನು ಹಸು। ರಂಗಿಯನು ತೊಟ್ಟನು ಚಡಾಳಿಸಿ ಪದದೊಳೆಕ್ಕಡವ ॥ ಸಿಂಗಶರಭವನಳವಿಗೊಡ್ಡಲವ। ರಂಗುಲಿಘುಲಡುಪಾಯಲೌಡಿಯ। ಜಂಗುಳಿಯ ಜೋಡಿಸಿದನಂದು ಜವಾಯ್ಲುಜಾಯಿಲನ ॥೧೯॥ ಮಡಿದಕೊಡಕೆಗಳೊಡ್ಡಿದುರದೊ। ಪ್ಪಿಡಿಯ ನಡುವಿನ ಕೊಂಕಿದುಗುರಿನ। ನಿಡುವೊಡಲ ನಿಮ್ನಾಂಸಜಂ

ಹೊಯ ಕೆಂಪಿನಾಲಿಗಳ । ಸಿಡಿಲುಗಳ ಗರ್ಜನೆಯ ಗಗನವ । ತುಡುಕುವಾಗುಳಿಕೆಗಳ ಮೊರಹಿನ । ಮಿಡುಕುಗಳ ಸಾಯ್ಗುಕಿದವು ಹಾಸದವಿಳಾಸದಲಿ ॥೨೦॥ ಹೆಸರಸಾಯ್ಗುಳ ಹಾಸ ಹರಿದು । ಬ್ಯಸದಲೊಳಿದವದಿರಿ ಹಿಡಿಮೃಗ । ಮುಸಗಿದವು ಹದವಿಲುಗಳೊಡೆದವು ಹೆದೆಯ ಹರಿವಿನಲಿ ॥ ನುಸುಳಿದವು ಮೊಲನುರಿಯಹೊಗೆಗಳ । ದೆಸೆವಿಡಿದು ಕೆದರಿದವು ಹೊಲದಲಿ । ಹಸುಬಹರಡೆಗಳೇನನೆಂಬೆನು ಶಕುನಸೂಚಕವ ॥೨೧॥ ಬಗೆಯನವಶಕುನವ ಮೃಗವ್ಯಾದ । ಸೊಗಸಿನಲಿ ಸಿಲುಕಿದಮುನೋವೃತ್ತಿಗಳೊಳುಂಟೆ ವಿವೇಕಧರ್ಮವಿಚಾರವಿಸ್ತಾರ ॥ ಹೊಗರೊಗುವತೊಂಗರಿಯ ಬಿಲುಸರ । ಝುಗುಳ ಹೊದೆಗಳ ನಡೆದುದಡವಿಯ । ಬೆಗಡುಗೊಳಿಸುತ ಮುಂದಮುಂದೆ ಪುಳಿಂದಸಂದೋಹ ॥೨೨॥ ಬಂಡಿಗಳ ಬೆಳ್ಳಾರವಲೆಗಳ । ಖಂಡವಲೆಗಳ ತಡಿಕೆವಲೆಗಳ । ಗುಂಡುವಲೆಗಳ ಬೀಸುವಲೆಗಳ ಕಾಲುಗಣ್ಣಿಗಳ ॥ ದಂಡಿವಲೆಗಳ ತೊಡಕುವಲೆಗಳ । ಹಿಂಡುವಲೆಗಳ ಮುಯಣಿವಂಟಿನ । ಮಂಡವಿಗೆಬಲೆಗಳ ಕಿರಾತರು ಕೆದರಿತಗಲದಲಿ ॥ ೨೩ ॥ ಏನನೆಂಬೆನು ಜೀಯ ಹೊಕ್ಕನು । ಕಾನನವನನಿಲಜನು ಶಬರವಿ । ತಾನವಿಕ್ಕಿದವೇಡೆಗಳ ಬೆಳ್ಳಾರಸುತ್ತುಗಳ ॥ ಕಾನನವನಳಿವಿನ ಶಿಲೋಚ್ಚಯ । ಸಾನುವಿನ ಗಹ್ವರದಗಂಡ । ಸ್ಥಾನದೀರ್ಘದ್ರೋಣಿಗಳಲರಸಿದರು ಮೃಗಕುಲವ ॥ ಬೊಬ್ಬೆಗಳ ಪಟಹಪ ಮೃದಂಗದ । ಸರ್ಬಲಗ್ಗಯ ಸೋಹಿನಲಿ ಸುಳಿ । ವಬ್ಬರಕೆ ಹಿಂಡೊಡೆದು ಹಾಯ್ದವು ಸೂಸಿದವು ದೆಸೆಗೆ ॥ ತೆಬ್ಬಿದವು ಬೆಳ್ಳಾರವಲೆ ಹರಿ । ದುಬ್ಬಿಹಾಯ್ದೊಡೆವೇಡ್ಡೆಯವರಿಗೆ । ಹಬ್ಬವಾಯ್ತೇನೆಂಬೆನಗಣಿತಮೃಗನಿಪಾತನವ ॥೨೫॥ ಹೊಕ್ಕು ತಿವಿದರು ಸಬಳದಲಿ ಜಡಿ । ವೆಕ್ಕಲನನಳವಿಯಲಿ ಹರಿಣನ । ನಿಕ್ಕಿದರು ನಾರಾಚದಲಿ ಸೈವರಿದು ಸೈರಿಭನ ॥ ಸೆಕ್ಕಿದರು ಸುರಗಿಯಲಿ ಹೊದರಲಿ । ಹೊಕ್ಕು ಹುಲಿಗಳ ಕೆಣಕಿ ಖಡ್ಗದ । ಲಿಕ್ಕಡಿಯತೇರಿದರು ತೂರಿದರಖಿಳಮೃಗಕುಲವ ॥ ೨೬॥ ಕಳಚಿ ಹಾಸವನುಬ್ಬರಿಸಲ । ವ್ವಳಿಸಿ ಕಂಠೀರವನ ಮೋರೆಗೆ । ನಿಲುಕಿದವು ಕದುಬಿದವು ಹಾಯ್ದವು ಹಣುಗಿ ತುಡುಕಿದವು ॥ ಸೆಳೆದವುಡಿದಕ್ಕಳಿಸಿಯೆಡಬಲ । ಬಳಸಿದವು ಮೆಲುವಾಯ್ದಿದವು ವೆ । ಗ್ಗಳಿಸಿದವು ಕುಸುಬಿದವು ಕುನ್ನಿಗಳಖಿಳಮೃಗಕುಲವ ॥೨೭॥ ಗಾಯವಡೆದೆಕ್ಕಲನ ರಭಸದ । ಜಾಯಿಲನ ಗಳಗರ್ಜನೆಯ ಪ್ರೊ । ರಾಯದೇರಿನ ಕರಡಿಕಾಡಾನೆಗಳ ಕಳಕಳದ ॥ ನೋಯಲೊರಲುವಶರಭಸಿಂಹಲು । ಲಾಯಮೃಕಶಾರ್ದೂಲಶಶಗೋ । ಮಾಯುಮೊದಲಾದಖಿಳಮೃಗರವ ತುಂಬಿತಂಬರವ ॥೨೮॥ ಮುಳುದೊಡಕಿನೊಳು ಕೂದಲೊಂದೇ । ಸಿಲುಕಿ ನಿಂದವು ಚಮರಿಮೃಗ ಮರಿ । ಗಳಿಗೆ ಮೊಲೆಗೊಡುತಿರುಕಿನಲಿ ಹುದುಗಿದವು ಹುಲ್ಲೆಗಳು ॥ ಎಳವರಿಯನಡಗಲಿಸಿ ನಿಂದವು । ಮುಲಿತು ಸಿಂಹದಮಿಥುನಹಿಂಡಿನ । ಕಳಭವನು ಹಿಂದಿಕ್ಕಿ ವನಕರಿ ತೂಳಿದವುಪಡೆಯ ॥೨೯॥ ಪಡೆ ಬೆದರೆ ಪಡಿತಳಿಸಿ ಪವನಜ । ಹಿಡಿದು ಬೀಸಿದನಾನೆಗಳನವ । ಗಡಿಸಿ ಸಿಂಹವ ಸೀಳಿದನು ಹಾಯ್ದೆತ್ತುವೆಕ್ಕಲನ ॥ ಮಡದಲುರೆಘಟ್ಟಿಸಿದಮುಷ್ಟಿಯೊಳಡಸಿ ತಿವಿದನು ಹುಲಿಯಕರಡಿಯ । ಕೆಡಹಿದನು ಕೊಂದನು ವಸಾಂತದೊಳಖಿಳಮೃಗಕುಲವ ॥೩೦॥ ಈತನುರುಬೆಗೆ ಬೆದರಿತುರುಸಂ । ಘಾತದಲಿ ಹಬ್ಬಂದಿಯೊಂದು ವಿ । ಘಾತದಲಿ ಹಾಯ್ದುದು ಕಿರಾತವ್ರಜವ ನೊಡೆದುಳಿದು ॥ ಈತನರೆಯಟ್ಟಿದನು ಶಬರ । ವ್ರಾತವುಳಿದುದು ಹಿಂದೆಭೀಮನ । ಭೀತಿಯಲಿ ಹೊಕ್ಕದು ಮಹಾಗಿರಿಗಹನಗಹ್ವರವ ॥೩೧॥ ಮುಡುಹು ಸೋಂಕಿದೊಡುಲಿದು ಹೆಮ್ಮರ । ನುಡಿದು ಬಿದ್ದುದು

ಪಾದಘಾತದೊ । ಳಡಿಗಡಿಗೆ ನೆಗ್ಗಿದುದು ನೆಲನುಬ್ಬರದ ಬೊಬ್ಬೆಯಲಿ ॥ ಜಡಿದುದಬುಜಭವಾಂಡವೆ ನಲವ । ಗಡೆಯಭೀಮನ ಕಳಕಳಕೆ ಕಿವಿ । ಯೊಡೆದು ತಿಳಿದುದು ನಿದ್ರೆಯುರಿದಿಕ್ಕಿಯ ಮಹೋರಗನ ॥೩೨॥ ತೆಕ್ಕೆ ಸಡಿಲಿತು ತರಗೆಲೆಯಹೊದ । ರಿಕ್ಕರಿಸೆ ಮೈಮುರಿಯಲನಿಲಜ । ನೆಕ್ಕತುಳದಲಿ ಮೇಲೆಹಾಯ್ದನು ಕಾಣದಹಿಪತಿಯ ॥ ಸಿಕ್ಕಿದವು ಹೆದ್ದೊಡೆಗಳುರಗನ । ತೆಕ್ಕೆಯಲಿ ಡೆಂಡಣಿಸಿ ಫಣಿಪತಿ । ಡೊಕ್ಕರಕೆ ಹಬ್ಬಿದನು ಬಿಗಿದನು ಭಟನ ಪೇರುರವ ॥೩೩॥ ಭಟ ಮರಳೆ ಸಂತೈಸಿಕೊಂಡಟ । ಮುಟಿಸಿ ಗದೆಯಲಿ ಹೊಯ್ದು ಬಿಗುಹಿನ । ಕಟಕವನು ಬಿಚ್ಚಿದನು ಹೆಚ್ಚಿದ ಸೌಕಿಬೊಬ್ಬಿಡುತ ॥ ಪುಟದ ಕಂತುಕದಂತೆ ಫಣಿ ಲಟ । ಕಟಿಸಲೌಕಿತು ಗಿಡಗನೆರಕೆಯ । ಪುಟದ ಗಿರಿಯುಂಪದಲಿ ಗಿರಿಗಿರಿಗುಟ್ಟಿದನು ಭೀಮ ॥೩೪॥ ಝಾಡಿಸಲು ಝಾಡಿಸಲು ಬಿಗುಹತಿ । ಗಾಡಿಸಿತು ಕೊಡಹಿದೊಡೆ ಮಿಗೆ ಮೈಗೂಡಿ ಬಿಗಿದುದು ಭುಜಗವಳಯದ ಮಂದಿರಾದ್ರಿಯೆನೆ ॥ ರೂಡಿಸಿದ ಭುಜಬಲದ ಸಿರಿಯ । ಕ್ಕಾಡಿತೇ ತನಗೆನುತ ಖಾಡಾ । ಖಾಡಿಯಲಿ ಕಾತರಿಸಿ ಕಳವಳಿಸಿದನು ಕಲಿಭೀಮ ॥೩೫॥ ಅರಸ ಕೇಳಿತ್ತಲು ಮಹೀಶನ । ಹೊರೆಯಲಾಯ್ತುತ್ಪಾತಶತನಿ । ಷ್ಠುರವಿದೇನೋ ದೈವಕೃತಫಲವಾವುದಿವಕೆನುತ ॥ ಕರೆಸಿ ಧೌಮ್ಯಂಗರುಹಲಿದನು । ಮ್ಮರಸುಗಳಿಗೆಸಘಾತಸೂಚಕ । ವೆರಿದಿದರ ನಿರ್ವಾಹವೆಂದೊಡೆ ನೃಪತಿ ಚಿಂತಿಸಿದ ॥೩೬॥ ಭೀಮಸಾವೆಡೆಯೆನೆ ಕಿರಾತ । ಸ್ತೋಮಸಹಿತ ಮೃಗವ್ಯಕೇಳೀ । ಕಾಮನೈದಿದನೆನಲು ನೃಪ ಹೊರವಂಟನಾಶ್ರಮವ ॥ ಭೂಮಿಸುರರೊಡನೈದಿ ಬರೆ ಸಂಗ್ರಾಮಧೀರನ ಹಜ್ಜೆವಿಡಿದು ಮಹೀಮನೋಹರನರಸಿ ಹೊಕ್ಕನು ಘೋರಕಾನನವ ॥೩೭॥ ಹುದುಗಿದಗ್ಗದಸತ್ವದುಸ್ಸಹ । ಸದ ನಿರೂಢಿಯ ಸೋಸಮಯಗದು । ಗದಿತ ಕಂಠದ ತಳಿತಭಂಗದತಿರುಗುವಾಲಿಗಳ ॥ ಪೆದರೆದೆಯ ಪೇರಾಳಶೋಕದ । ಕೆದರುಗೇಶದ ಕೆಲಕೆಜಾರಿದ । ಗದೆಯ ಗರುವಾಯಳಿದಭೀಮನ ಕಂಡನಾಭೂಪ ॥೩೮॥ ಅಕಟ ಹಿಂದನುಭವಿಸಿದೆನು ಕಂ । ಟಕಹಲವನೀ ಪರಿಯ ಬಲುಕಂ । ಟಕಮಹಾಕರ್ದಮದೊಳದ್ದಿತೆ ವಿಧಿಮಹಾದೇವಾ ॥ ವಿಕಟನಾಗಾಯುತವುದತ್ತಾ । ಣಕನ ಸಾಹಸವಡಗಿತೇ ವನ । ನಿಕಟ ಭುಜಗಾಟೋಪಪತಾಳಿಯೊಳೆನುತ ಬಿಸುಸುಯ್ದ ॥೩೯॥ ಏನು ಕುಂತೀಸುತನಪಾಯವಿ । ದೇನು ಫಣಿಬಂಧನವಿಧಾನವಿ । ದೇನು ನಿನಗೆ ವಿನೋದವೋ ತ್ರಾಸಾಪಜಯವಿಧಿಯೋ ॥ ಏನಿದಕೆ ಕರ್ತವ್ಯನಮಗೀ । ಹೀನದೆಸೆಗೆ ನಿಮಿತ್ತದುಷ್ಕೃತ । ವೇನು ಶಿವಶಿವಯೆನುತ ನುಡಿಸಿದನನಿಲನಂದನನ ॥೪೦॥ ನೋಡಿದನು ಕಂದೆರೆದು ಕಂಠಕೆ । ಹೂಡಿದುರಗನ ಘೋರಬಂಧದ । ಗಾಢದಲಿ ನುಡಿ ನೆಗ್ಗಿ ನುಡಿದನು ಬೆರಳ ಸನ್ನೆಯಲಿ ॥ ಖೇಡನಾದನೆಜಾತರಿಪು ಮಾ । ತಾಡಿಸಿದನಹಿಪತಿಯನೆಲೆ ಸಾಡಾಡಿಗಳ ನಾಟಕದ ಫಣಿಯಲ್ಲಾರು ನೀನೆಂದ ॥೪೧॥ ಅನಿಲಸುತನಪರಾಧಿಯೋ ನೀ । ವಿನಯಹೀನನೊ ಮೇಣು ಪರಪೀಡನ ವೃಥಾದುಷ್ಕರ್ಮಸಂಗ್ರಹಬೇಹುದೇ ನಿನಗೆ ॥ ದನುಜನೋ ಗಂಧರ್ವನೋ ಯ । ಕ್ಷನೊ ಸರೀಸೃಪರೂಪದಿವಿಜೇಂ । ದ್ರನೊ ನಿಧಾನಿಸಲರಿಯೆ ನೀನಾರೆಂದನವನೀಶ ॥೪೨॥ ಕೇಳಿದನು ಫಣಿ ಭೀಮಸೇನನ । ಮೌಳಿತಲ್ಪದ ತಲೆಯ ಹೊಳಹಿನ । ನಾಲಗೆಯ ಚೂರಣದ ಝಡಿತೆಗೆ ಚಲಿಸುವಾಲಿಗಳ ॥ ಮೇಲುವೊಗದಲಿ ನೃಪನ ನುಡಿಗಳ । ನಾಲಿಸುತ ನುಡಿದನು ಕರಾಳಾ । ಭೀಳದಂಷ್ಟ್ರಾಂತರವಿಸಂಸ್ಖಳಜಿಹ್ವೆಗಳ ಜಡಿದು ॥೪೩॥ ಏನಹನು ನಿನಗೀತನೀನಾ । ರೇನು ನಿನ್ನಭಿಧಾನ ವಿಪ್ರನ । ಸೂನುವೋ ಕ್ಷತ್ರಿಯನೊ ವೈಶ್ಯನೊ ಶೂದ್ರಸಂಭ

ವನೋ ॥ ಏನುನಿನಗಿವನೇಕೆ ಬರವು ನಿ । ದಾನವನು ಹೇಳೆನಲು ಕುಂತೀ । ಸೂನು ನುಡಿದನು ತನ್ನ ಪೂರ್ವಾಪರದ ಸಂಗತಿಯ ॥೪೪॥ ಸೋಮವಂಶ ಪರಂಪರೆಯೊಳು । ದ್ದಾಮಪಾಂಡುಕ್ಷಿತಿಪನು ದಿಸಿದ । ನಾಮಹೇಶನಸುತಯುಧಿಷ್ಠಿರನೆಂಬುದಭಿಧಾನ ॥ ಭೀಮನೀತನು ಪಾರ್ಥನಕುಲಸ । ನಾಮಸಹದೇವಾಖ್ಯಪಾಂಡವ । ನಾಮಧೇಯರು ನಾವೆಯೆಂದನು ಭೂಪನಾಫಣಿಗೆ ॥೪೫॥ ಬೀತು ದಖಿಳೈಶ್ವರ್ಯ ಕಪಟ । ದ್ಯೂತದಲಿ ಕೌರವರು ಕೊಂಡರು । ಭೂತಳವನೆಮಗಾಯ್ತು ಬಳಿಕಟ ವೀಪರಿಭ್ರಮಣ ॥ ಈತನೆನ್ನೊಡಹುಟ್ಟಿದನು ನೀ । ನೀತನನು ಬಿಡಬಹುದೆ ಬಿಡು ವಿ । ಖ್ಯಾತರಿಗೆ ಪರ ಪೀಡೆ ಧರ್ಮವಿನಾಶಕರವೆಂದ ॥೪೬॥ ಆದೊಡೆಲೆಧರಣೀಶ ಧರ್ಮವ । ಸಾದರಿಸುವೈ ಧರ್ಮವೆಂ ಬುದು । ವೇದಮಾರ್ಗವಲೇ ಸುಧರ್ಮದ ಸಾರಸಂಗತಿಯ ॥ ಕೈದುವುಳ್ಳೊಡೆ ಕಾದು ನಿನ್ನಯ । ಸೋದರನ ಬಿಡುವೆನು ಮನಃಪರಿ । ಭೇದವನು ಬಿಸುಟೆನ್ನು ಧರ್ಮರಹಸ್ಯವಿಸ್ತರವ ॥೪೭॥ ಉಸುರ ಬಹುದೇ ಧರ್ಮತತ್ವ । ಪ್ರಸರಣವಿದೇನೆಂದು ನೀಶಂ । ಕಿಸಲು ವೇದಸ್ಮೃತಿಪುರಾಣತ್ರಾಣ ತುಷ್ಟಿ ಸದೆ ॥ ಎಸೆವವಿಪ್ರರ ಮತಿಗೆ ಸಂಭಾ । ವಿಸುವಧರ್ಮವನರುಹುವೆನು ನೀ । ಬೆಸಗೊಳೆಂದನು ಧರ್ಮ ಸುತ ನಹುಷಂಗೆ ವಿನಯದಲಿ ॥೪೮॥ ಎಸೆವವಿಪ್ರರ ಮತಿಗೆ ಸಂಭಾ । ವಿಸುವಧರ್ಮಸ್ಥಿತಿಯನಭಿವ । ರ್ಣಿಸುವೆನೆಂದೈ ಭೂಪತಿಯೆ ಭೂದೇವಕುಲದೊಳಗೆ ॥ ಎಸೆವವಿಪ್ರನದಾರು ಪರಿಶೋ । ಧಿಸು ವುದೈ ಬ್ರಾಹ್ಮಣ್ಯವೇತರ । ದೆಸೆಯೊಳಿದನೇ ಮುನ್ನ ಹೇಳೆನೆ ಭೂಪನಿಂತೆಂದ ॥೪೯॥ ಉರಗಕೇಳ್ಪಿ ತೃಮಾತೃವಂಶೋ । ತ್ಕರ ವಿಶುದ್ಧಸದಾಗ್ನಿ ಹೋತ್ರದ । ಭರ ದಮಸ್ವಾಧ್ಯಾಯಸತ್ವವಹಿಂಸೆಪರಿ ತೋಷ ॥ ವರಗುಣಂಗಳಿವಾವನಲಿ ಗೋ । ಚರಿಸುವಾತನೆ ವಿಪ್ರನೆಂಬರು । ಹಿರಿಯರೆಂದನು ಧರ್ಮ ಸುತ ನಹುಷಂಗೆ ವಿನಯದಲಿ ॥೫೦॥ ಆಯಿತಿದು ಮಿತ್ರವಾವುದೈ ಸ್ವಾ । ಧ್ಯಾಯವೆಂಬುದದೇನು ಸತ್ಯದ । ಕಾಯವಾವುದು ಹಿಂಸೆಪರಿತೋಷಂಗಳಿಂದೇನು ॥ ರಾಯ ಹೇಳಿವರರಿವ ನಿಜಗುಣ । ದಾಯತವನೆನೆ ಧರ್ಮವತಿರಮ । ಣೀಯವೆನೆ ನಹುಷಂಗೆ ವಿರಚಿಸಿದನು ಮಹೀಪಾಲ ॥೫೧॥ ನಿಯತವೀಶ್ರೋತ್ರಾ ದಿಪಂಚೇಂ । ದ್ರಿಯದ ನಿಗ್ರಹ ದಮವೆನಿಪ್ಪುದು । ಭಯವನಿತ್ತರರಿಗೆ ಕಲಸದಿಹುದೇಯಹಿಂಸಕಣಾ॥ ನಯವಿದನೆ ಚಿತ್ತೈಸು ಲೋಕ । ತ್ರಯವನೊಂದೇಸತ್ಯದಿಂವವೆ । ಜಯಿಸಬಹುದಾಸತ್ಯವುಳ್ಳೊಡೆವಿಪ್ರನ ವನೆಂದ॥೫೨॥ಸತ್ಯವೇ ಸ್ವಾಧ್ಯಾಯ ಸತ್ಯವೆ । ನಿತ್ಯಕರ್ಮವಿಧಾನವೊಂದೇ । ಸತ್ಯವೇ ಜಪ ಹೋಮ ಯ ಜ್ಞವಿಧಾನ ದಾನ ತಪ ॥ ಸತ್ಯವುಳ್ಳೊಡೆಶೂದ್ರನವನಿಂ । ದತ್ಯಧಿಕನಾದ್ವಿಜರೊಳಗೆ ಮರ । ಸತ್ಯಹೀ ನನೆ ಹೀನಜಾತಿಗನೆಂದನಾಭೂಪ ॥೫೩॥ ಧೀರನಾವವ ದಿಟ್ಟನಾರು ವಿ । ಕಾರಿಯಾರು ವಿನೀತ ನಾರಾ । ಚಾರಹೀನನದಾರು ಸುವ್ರತಿಯಾರು ಶಠನಾರು ॥ ಕ್ರೂರನಾರತಿಕಷ್ಟನಾರು ವಿ । ಚಾರಿ ಯಾರು ವಿಮುಕ್ತನಾರು ವಿ । ದೂರನಾರಿಹಪರಕೆ ಭೂಮಿಪಾಲ ಹೇಳೆಂದ ॥೫೪॥ ನಾರಿಯರ ಕಡೆಗಣ್ಣ ಹೊಯ್ಲಿನ । ಧಾರೆಗಳು ಕದನಾವನಾತನೆ । ಧೀರನಾತನೆ ದಿಟ್ಟನೆಬಲೆಯರುಬ್ಬುಗವಳದಲಿ ॥ ಮೀರೆದಪ್ಪುವನೇ ವಿಕಾರಿ ವಿ । ಚಾರಪರನೆ ವಿನೀತನೆನ್ನಾ । ಚಾರಯುತನಾಚಾರಹೀನನು ಫಣಿಪ ಕೇಳೆಂದ ॥೫೫॥ ಕೃತಕವಲ್ಲದ್ವಂದ್ವಸಹನೇ । ವ್ರತಿ ಮುಮುಕ್ಷು ವಿಚಾರಯುಕ್ತನು । ಕೃತಕನೇ ಶ ಠನಪ್ರಗಲ್ಭಕೃತಘ್ನನೇ ಕ್ರೂರ ॥ ಕ್ಷಿತಿಗೆ ಲೋಭಿಯೆ ಕಷ್ಟನಾತ್ಮಾ । ರತನೆಮುಕ್ತನು ವೇದ

ಮಾರ್ಗಚ್ಯುತನೆ ಲೋಕದ್ವಯಕೆ ದೂರನು ಘಣಿಪ ಕೇಳೆಂದ ॥೫೬॥ ಆರು ಭಂಡರು ಸುಜನನಿಂದ್ಯರದಾ
ರುಹಾಲಾಹಳಸೊರೂಪರದಾರು ಸಾಹಸಿಯಾರು ಸಜ್ಜನನಾರು ಶುಚಿಯಾರು ॥ ಆರು ಹಗೆ ಸಖಸಾರು
ಸೇವ್ಯನ । ದಾರು ದುರ್ಲಭನಾರು ದುಸ್ಸಹ । ನಾರು ದುರ್ಮತಿರು ಧರ್ಮಜ ತಿಳಿಯಹೇಳೆಂದ ॥೫೭॥
ವ್ಯಸನಿ ನಿಂದ್ಯನು ರಣದೊಳೊಡೆಯನ । ಬಿಸುಟುಹೋಹನೆ ಭಂಡನತಿಸಾ ಹಸಿಕನೇ ಸೇವ
ಕನು ಮಿತ್ರದ್ರೋಹಿಯೇ ವಿಷವು ॥ ಪಿಸುಣನೇ ಹಗೆ ಪರಸತಿಗೆ ಮನ । ಮಿಸುಕದವನೇ ಶುಚಿ ಪರಾರ್ಥ ।
ವ್ಯಸನಿಯೇ ಸಜ್ಜನನು ಸರ್ಪಾಧೀಶ ಕೇಳೆಂದ ॥೫೮॥ ವಿನುತಪಗತತ್ತ್ವಜ್ಞಾನತೀಸೇ । ವ್ಯನು ಸುದುರ್ಲ
ಭನೇ ಜಿತೇಂದ್ರಿಯ । ನನುಗುಣನೆ ಸಖಸಾರು ಸ್ಮರಿಸದವನೆ ದುಸ್ಸಹನು ॥ ಮನುಜರಲಿ ದುರ್ಮತಿಯ
ಲಾದು । ರ್ಜನರುಗಾಶ್ರಯವೆಂದು ತೋರಿದು । ದೆನಗೆ ನಿನಗಭಿಮತವೆ ಕೈಕೊಳ್ಳೆಂದನಾ ಭೂಪ ॥೫೯॥
ಅಹುದಲೇ ಬಳಿಕೇನು ವಿದ್ಯಾ । ಮಹಿಮದಾನತಪೋಗುಣಕೆ ಸು । ನಿಹಿತನೀ ಧರ್ಮದಲಿ ಸತ್ಯಾಚಾ
ರಶೀಲದಲಿ ॥ ಕುಹಕಿಯಲ್ಲ ವಿರೋಧಿಯಲ್ಲತಿ । ಸುಹಿಯೈ ಸಾರಾಜ್ಞಾನಲ್ಲೆನ । ಬಹುದೆ ನಿನ್ನಕು
ತಿಗಳನೆಂದನು ನಹುಷನರಸಂಗೆ ॥೬೦॥ ಅರಸ ಕೇಳ್ಳೈ ಕ್ಷಾತ್ರತೇಜವ । ಹೊರೆವುದೇ ಬ್ರಾಹ್ಮಣ್ಯ
ಶಕ್ತಿ । ಸ್ಫುರಣೆ ನೀನೀ ಬ್ರಹ್ಮವರ್ಗದ ಸಾರಸೌಖ್ಯವಲಿ ॥ ಮರೆದೆಲಾ ವಿಪ್ರಾವಮಾನವೆ । ಸಿರಿಗೆ ನಂ
ಜುಕಣಾ ಮಹೀಸುರ । ವರರುಪಾಸನೆ ನಿನಗೆ ನೀ ಕೃತಕೃತ್ಯನಹೆಯೆಂದ ॥೬೧॥ ನೂರುಯಜ್ಞದಹೊ
ಯ್ಲರಿಗೆ ಹರಿ । ದೇರಿದೆನು ಸುರಪತಿಯ ಪೀಠವ । ಸೋರುಗಡಿಸಿತು ಪದವಿಯದು ವಿಪ್ರಾವಮಾನ
ದಲಿ ॥ ಮಾರುಮಾತೇನೈ ಮಹೀಸುರ । ರೇರಿಸಿದರೇರುವುದು ಮುನಿದೊಡೆ । ಕಾರಿಸುವರೈ ನೂರುಯ
ಜ್ಞವ ನೆಂದನಾ ನಹುಷ ॥೬೨॥ ಎನ್ನ ವೃತ್ತಾಂತದ ನಿಧಾನವ । ಮುನ್ನವೇ ಬೆಸಗೊಳಲು
ಹೇಳಿದೆ । ನಿನ್ನ ನಿನ್ನಭಿಧಾನವನು ನೀನಾವನೆಂಬುದನು ॥ ಇನ್ನು ಕೇಳುವೆನೆನಲು ನಿಮ್ಮಲಿ ।
ಮುನ್ನಿನವರ ಯಯಾತಿಯಯ್ಯನು । ನನ್ನ ನಾಮವೆ ನಹುಷನೆಂಬುದು ನೃಪತಿ ಕೇಳೆಂದ ॥೬೩॥
ಮಾಡಿದೆನು ಮಖಶತವನದು ಹೋ । ಗಾಡಿತಿಂದ್ರನನಲ್ಲಿ ತನಗೆಡೆ । ಮಾಡಿತರಮನೆ ಕಂಡುದಾತೆ
ತ್ತೀಸಕೋಟಿಗಳು ॥ ನಾಡುಬೀಡೆನಗಾಯ್ತು ವಶ ಖಯು । ಖೋಡಿಯಿಲ್ಲದೆ ಶಕ್ರಪದದಲಿ ।
ಝಾಡಿಸುವೆನದನೇನ ಹೇಳುವೆನೆನುತ ಬಿಸುಸುಯ್ದ ॥೬೪॥ ಅರಸ ಕೇಳ್ಳೈ ರಂಭೆಯೂರ್ವಶಿ । ವರತಿ
ಲೋತ್ತಮೆ ಗೌರಿ ಮೇನಕಿ । ಸುರಸೆ ಸುವದನೆ ಮಂಜುಘೋಷೆ ಸುಕೇಶಿಮೊದಲಾದ ॥ ಸುರಪತಿಯ
ರೆನ್ನರಮನೆಯತರೊ । ತ್ತರುಗಳಾದರು ಮೂರುಲಕ್ಷದ । ಹೊರಗೆ ಮೂವತ್ತಾರುಸಾವಿರವೆಂದ
ನಾನಹುಷ ॥೬೫॥ ಈಸುನಾರಿಯರಿರಲು ಬಯಲಭಿ । ಲಾಷೆ ದಿವಿಜೇಶ್ವರನ ರಾಣೀ । ವಾಸ
ದಲಿ ಗರಿಗಟ್ಟಿ ತಂದುದು ತನ್ನನೀವಿಧಿಗೆ ॥ ಪೀಸಲಿನ ಮಾನಿನಿಯರಲಿ ಮನ । ದಾಸೆ ಮನುಜರ
ಮುರಿವುದಕೆ ನಾ । ನೈಸಲೇ ದೃಷ್ಟಾಂತವೆಂದನು ನಹುಷನರಸಂಗೆ ॥೬೬॥ ಆಧಿ ಬಿದ್ದುದು ಶಚಿಯ
ಮೇಲಣಾ । ವೇಧೆಯಲಿ ವಿಟಬುದ್ಧಿ ಸಿರಿಗುಪ । ರೋಧವೈಸಲೆ ಸತಿಯುಪಾಯವ ಮಾಡಿ ಶಿಶುಗಳಿಗೆ ॥
ಬೋಧಿಸಿದೊಡವರೆನ್ನ ವಾಹನ । ಸಾಧವೆಯಾದರು ಮುನೀಂದ್ರವಿ । ರೋಧವಾಯ್ತೆನಗಲ್ಲಿ ಶಪಿ
ಸಿದನಂದಗಸ್ತ್ಯಮುನಿ ॥೬೭॥ ಸರ್ಪಗತಿ ಸರ್ಪತ್ವವೆನೆ ಫಡ । ಸರ್ಪನೀನಾಗೆಂದೊಡೆನ್ನಯ । ದರ್ಪ
ವನು ಕೆಡೆನೂಕಿ ಬಿದ್ದೆನು ಮುನಿಯಚರಣದಲಿ ॥ ಸರ್ಪತನ ದನುಭವಕೆ ಕಡೆಯೆಂ । ದಪ್ಪುದೆನೆ ಧರ್ಮ

ಜನ ವರನಾ । ಗ್ದರ್ಪಣದಲಹುದೆಂದನಿಂದಿದು ಘಟಿಸಿತೆನಗೆಂದ ॥೬೮॥ ಎನುತ ದಿವ್ಯಾವಯವ ಕಾಂತಿಯ । ಮಿನುಗುವೋೀಹರದೇಳ್ಗೆ ಮೂಡಿದ । ಘನಮಿಷ್ಟಾಂಗದಲುರಗಕಾಯದ ಕೋೀಹಳೆಯನುಗಿದು ॥ ಜನಪ ನಿನ್ನೊಡಹುಟ್ಟಿದರ ಕೊ । ಳ್ಳೆನುತ ಹೇಮವಿಮಾನದಲಿ ಸುರ । ವನಿತೆಯರ ವಂಗಡದಲೆಸೆದನ ನಹುಷನಭ್ರದಲಿ ॥೬೯॥ ದೃಗುಡದಲಿ ಬರೆ ಭೀಮಸೇನನ । ತೆಗೆದು ಬಿಗಿಯಪ್ಪಿದನು ಖೇದದ । ಹೊಗರಿದೇಕೆ ವೃಥಾಮನೋವ್ಯಥೆಯೇನು ತಾಳದಿರು ॥ ಜಗವರಿಯೆ ನಮ್ಮನ್ವಯದ ಪ್ರೂ । ರ್ವಿಗನಲಾ ನಹುಷಂಗೆ ಬಂದು । ಬ್ಬೆಗದ ಹದನಿದು ನಮ್ಮ ಪಾಡೇನೆಂದನಾಭೂಪ ॥೭೦॥ ನಿನ್ನ ದೆಸೆಯಿಂದಾಯ್ತು ಲೇಪ್ರುತಿ । ಪನ್ನ ಶಾಪವಿಮೋಕ್ಷವಿದರಲಿ । ನಿನ್ನದರ್ಪಕೆ ಹಾನಿಯೇ ಹೇರಾಳಸುಕೃತವಿದು ॥ ತನ್ನ ರಿಷ್ಟವನೀಕ್ಷಿಸದೆ ಪರ । ರುನ್ನತಿಯ ಬಯಸುವರು ಸಜ್ಜನ । ರಿನ್ನು ಸಾಕೆಂದೊರಸಿದನು ಪವನಜನ ಕಂಬನಿಯ ॥೭೧॥ ತಿಳುಹಿ ತಂದನು ಸಕಲಮುನಿಸಂ । ಕುಲಸಹಿತ ತನ್ನಾಶ್ರಮಕೆ ಕ್ರೋ । ಮಲೆಯ ಕೈಯಿಂದೊಳಸಿವನು ಭೀಮನ ಮನೋವ್ಯಥೆಯ ॥ ಹಳಿವು ನಮಗೆಲ್ಲಿಯದಪಾಯದ । ಜಲಧಿಗಳು ಬತ್ತುವವು ಯದುಕುಲ । ತಿಲಕಗದುಗಿನವೀರ ನಾರಾಯಣನಕರುಣದಲಿ ॥೭೨॥

ಅಂತು ಸಂಧಿ ೧೩ ಕ್ಕೆ ಪದ ೩೭೪ ಕ್ಕಂ ಮಂಗಳಮಸ್ತು.

---

## ಹದಿನಾಲ್ಕನೆಯ ಸಂಧಿ.

ಸೂ॥ ಕರುಣಿ ಬಿಜಯಂಗೈದು ಪಾಂಡವ । ಧರಣಿಪನ ಸಂತೈಸಿ ಯಾದವ ।
ರರಸನಿದ್ದನು ಸಕಲಮುನಿಜನಸಹಿತ ವನದೊಳಗೆ

ಪದ॥ ಚಿತ್ತವಿಸು ಜನಮೇಜಯಕ್ಷಿತಿ । ಪೋತ್ತಮನೆ ಧರ್ಮಜನ ಮುಖದಲಿ । ಕೆತ್ತುದುಗುಡವ ಬಿಡಿಸಿ ಭೀಮನ ತಂದನಾಶ್ರಮಕೆ ॥ ಮತ್ತಕಾಶಿನಿಧೌಮ್ಯನಿಖಿಲಮ । ಹೋತ್ತಮರು ಪೀಯೂಷಮಥುರರ । ಸೋತ್ತರದನುಡಿಗಳಲಿ ನಾದಿದರನಿಲಜನ ಮನವ ॥೧॥ ಮುಗಿಲು ಬೆಳತುದು ಬರಿಯಗಡಬಡೆ । ಗಗನಕುಳಿದುದು ಕೊಂಡನೆಲನನು । ತೆಗೆದು ನಿಂದುದು ಮೋಡಿಯಂಕದವೊಲು ನದೀನಿವಹ ॥ ನಗುವಕೊಳನಭ್ಯಾಗತೆಯ ಹಂ । ಸೆಗಳು ಮೆರೆದವು ಮೊರೆವತುಂಬಿಯ । ಸುಗಡತನ ತಾವರೆಯೊಳೆಸೆದುದು ಶರದಸಮಯದಲಿ ॥೨॥ ಸವೆದುದೀವನವಿಲ್ಲಿ ಫಲಮೃಗ । ನಿವಹ ಬೀತುದು ನಮ್ಮ ಕಾಲಾ । ಟವನು ಸೈರಿಸಿ ನಿಲುವವನವನು ಕಾಣೆ ನಾನೆನುತ ॥ ನವಗೆ ಮಗುಳಾಕಾಮ್ಯಕದವನ । ಭವನವೈಸಲೆಯೆಂದು ಮುನಿಜನ । ನಿವಹಸಹಿತವನೀಶ ಕಾಮ್ಯಕವನಕೆ ನಡೆತಂದ ॥೩॥ ಆಶರತ್ಕಾಲವನು ತದ್ವನ । ವಾಸದಲಿ ನೂಕಿದನು ಘನಪರಿ । ತೋಷಸೂಚಕಶಕುನವಂಗಸ್ಫುರಣೆಮೊದಲಾದ ॥ ಮೀಸಲಳಿಯದಹರುಷರಸದಾ । ವೇಶದಲಿವನವುಕ್ಕಿ ಹಿಗ್ಗಿದ । ನೀಶಕುನ ಸುಮ್ಮಾನವಿದಕೇನಹುದು ಫಲವೆಂದ ॥೪॥ ಇದಕೆ ಕೃಷ್ಣಾಗಮನವೇ ಫಲ । ದುದಯವೈಸಲೆಯೆನುತಲಿರೆ ಬಂ । ದಿದಿರೆ ನಿಂದನು ದೂತನಮಲದ್ವಾ

ರಕಾಪುರದ ॥ ಇದೆ ಕೃಪಾನಿಧಿ ಬಂದನಸುರಾ । ಧ್ಯದಯಘಾತಕ ಬಂದ ರಿಪುಬಲ । ಮದನಮದಹರ ಬಂದನಿದೆ ಯೆಂದನು ಮಹೀಪತಿಗೆ ॥೫॥ ಸೂಚಿಸಿದವೇ ಶಕುನ ಪ್ರಸರಪಿ । ಗೋಚರಿಸಿತೇ ಗರುವನಿಧಿ ನಾ । ವಾಚರಿಸಿತೇನೋ ಶಿವಾ ಭವಭವಸಹಸ್ರದಲಿ ॥ ಸಾಚಿಬವು ನಿಗಮಂಗಳಾವನ । ಸೂಚಿಸುವವೆ ನ್ನೊಳಗೆ ಕೃಪೆಯಲ । ರೋಚಕವನಾದ್ಯವಮಾಡಿದೆನುತ್ತ ಹೊರವಂಟ ॥೬॥ ಹಳುವವನು ಹೊರವಂಟು ಗರುಡನ । ಪ್ರಳಯಿಷೆಯ ದೂರದಲಿ ಕಂಡನು । ತುಳುಕಿದವು ಸಂತೋಷಜಲ ನಿಟ್ಟಿಸಳಂಗಂಗಳಲಿ ॥ ತಳಿತರೋಮಾಂಚದಲಿ ಸಮ್ಮದ । ಪುಳಕದಲಿ ಪೂರಾಯದಶ್ವಿನ । ಲಳಿಯೊಡೆಯ ಪ್ರಿಯಿಕ್ಕತೈದಿ ದನಖಿಳಿಜನಸಹಿತ ॥೭॥ ಇಳಿದು ದಂಡಿಗೆಯಿಂದ ಕರ್ಣಾ । ಜಲಧಿ ಬಂದನು ಕಾಲುನಡೆಯಲಿ । ಸೆಳೆದು ಬಿಗಿಯಪ್ಪಿದನಿದೇನಾಸುರವಿದೇನೆನುತ ॥ ಬಳಿಕ ಭೀಮಾರ್ಜುನರ ಯಮಳರ । ನೊಲಿದು ಮನ್ನಿಸಿ ಸತಿಯಲೋಚನ । ಜಲವ ಸೆರಗಿನೊಳೊರಸಿ ಸಂತೈಸಿದನು ಬಾಲಕಿಯ ॥೮॥ ಕುಶಲವೇ ಕುರು ರಾಯನೊಳಿಗ । ವೆಸಗದಲೆ ನಿಮ್ಮುತ್ತಲವಧಿಯ । ದೆಸೆ ಸಮೀಪಪೆ ತೊಳಲಿಬರಲಾ ವನವನಾಂತರದಲಿ ॥ ಪಶುಪತಿಯ ಹಿಡಿವಂಬು ಕೈವ । ಶಿಸಿತುಗಡ ಪಾರ್ಥಂಗೆ ಸಮಗಂ । ದೊಸಗೆಯಾಯಿತು ಪುಣ್ಯಾವೆಂ ದನು ಹರಿ ಯುಧಿಷ್ಠಿರಗೆ ॥೯॥ ಆಗಲೀಕೃಷ್ಣವೆಕೆ ನಮ್ಮು । ಪಾಗುಘಟ್ಟಿನರಕ್ಷೆ ತೊಡಚಿದು । ದಾಗ ಳಿದ್ದುದು ಪಾಶುಪತಶರವದರಬಳಿವಿಡಿದು ॥ ಈಗಳೊಸಗೆಯೆ ಯಮ್ಮ ಪಂಚಕ । ದಾಗುಹೋಗನು ಹೊತ್ತುನಡಸಿದೆ । ಯಾಗಳಾಯ್ತ್ತುಮಗೊಸಗೆಯೆಂದನು ನೃಪತಿ ವಿನಯದಲಿ ॥೧೦॥ ತೊಳಲಿದೆವಲಾ ಕೃಷ್ಣ ತಪ್ಪದೆ । ಹಳುವಹಳುವವನಮರಪುರದಲಿ । ಕೆಲವುದಿನವಿರಲರ್ಜುನಂಗಾಯ್ತೂರ್ವಶಿಯಶಾಪ ॥ ಖಳರನಲ್ಲಿ ನಿವಾತಕವಚರ । ಗೆಲಿದು ಬಂದನು ಪಾರ್ಥನದರೊಳು । ಕೆಲಬರಸುರರ ಕಾದಿ ಕೊಂದನು ಭೀಮನಡವಿಯಲಿ ॥೧೧॥ ಇಂತು ತಲೆಯೊತ್ತುತ ಮಹಾವಿಪಿ । ನಾಂತರವ ತೊಳಲಿದೆವು ಬಳಿಕವ ॥ ನಾಂತದೊಳಗಿಂದಾದುದೂಳಿಗನಹುಷನೃಪತಿಯಲಿ ॥ ಭ್ರಾಂತಿಯೈಸಲೆ ಭೀಮನುರಗಾ । ಕ್ರಾಂತನಾ ದನು ಧರ್ಮಕಥೆಯಲಿ । ಸಂತವಾಯ್ತು ವಿಶಾಪವಾದನು ನಹುಷನಾಕ್ಷಣಕೆ ॥೧೨॥ ಮರಳಿ ಕಾಮ್ಯಕ ವನದಳದವಂ । ದಿರವ ನೆಲೆಮಾಡಿದೆವು ಬಹು । ವಿಸ್ತರಣವಿದು ಹಿಂದಾದವಿಪಿನಾಂತರಪರಿಭ್ರಮದ । ಕರುಣಿ ನಿಮ್ಮಡಿಯಂಘ್ರಿಕಮಲದ । ದರುಶನದಿನಾಯಾಸಪಾರಂ । ಪರೆಗೆ ಬಿಡುಗಡೆಯೆನುತ ಪ್ರಿಯಿ ಕ್ಕಿದನು ಯಮಸೂನು ॥೧೩॥ ರಾಯ ಕೇಳಾಕ್ಷಣಕೆ ಮಾರ್ಕಂ । ಡೇಯನಾರದರಿಳಿದರಬುಜದ । ಳಾ ಯತಾಕ್ಷಂಗೆರಗಿದರು ಭಯಭರಿತಭಕ್ತಿಯಲಿ ॥ ತಾಯಿ ಕರುಗಳ ಬಿಡದವೊಲು । ನಿರ್ದಾಯದಲಿ ನಿಜ ಭಕ್ತಸಂಗದ । ಮಾಯೆ ಬಿಡದೈ ನಿನ್ನ ನೆಂದರು ಹೊರಳಿ ಚರಣದಲಿ ॥೧೪॥ ತಪದಲರಿದು ಸಮಾಧಿಯೋ ಗದ । ಲುಪಶಮದಲುಬ್ಬೆದ್ದು ಹೋಮದ । ಜಪದ ಜಂಜಡದೊಳಗೆ ಸಿಲುಕಿ ಜನಾರ್ದನನ ಮರೆವ ॥ ಅಪಸರರು ನಾವ್ಕರ್ಮನಿಷ್ಠೆಯ । ಕೃಪಣರೆವಗೆಯು ತನ್ನ ತೋರುವ । ಕೃಪೆಯ ನೋಡೈ ಭೂಪನೆ ನುತಿಕ್ಷಿಸಿದರಚ್ಯುತನ ॥೧೫॥ ಈಯಘಾಟದದೈವವಿದು ನಿ । ದಾರ್ಯದಲಿ ನಿಮ್ಮೊಳಗೆ ಸೇರಿತು । ರಾಯರಿದ್ದರು ಹಿಂದೆ ಭರತಭಗೀರಥಾದಿಗಳು ॥ ಆಯಿತೇ ಯವರಿಗೆ ಸರೋಜದ । ಳಾಯತಾಕ್ಷನ ಚರಣಸೇವೆ ನಿ । ರಾಯಸದ ಸಹವಾಸಭೋಜನವೆಂದನಾನೃಪನ ॥೧೬॥ ವರುಷಹದಿನಾರರಲಿ ಮೃ ತ್ಯುವು । ಪರುಠವಿಸಿದುದು ಕರ್ಮಗತಿ ಪುರ । ಹರನ ಸೇವೆಯ ಮಾಡಿ ಸವೆದೆನು ಸರ್ವಭಾವದಲಿ ॥

ಕರುಣಿ ಬಿಜಯಂಗೈದು ಮೃತ್ಯುವಿ । ನರಿವೆಗಂಟಲೊಳಿಳಿವತನ್ನನು । ಬರೆಸಳೆದನೆಂದವುಳವೊರ್ಕಂ ಡೇಯಮುನಿ ನುಡಿದ ॥೧೭॥ ಓಕರಿಸಿದಳು ಮೃತ್ಯುವೆನ್ನನು। ಲೋಕದಲಿ ಹೊರಗೆಂದು ಯಮಗಿವು । ರಾಕರಣೆಗಳ ಜೀವಜಾತಿಯೊಳಲ್ಲವಿವನೆಂದು ॥ ಲೋಕದಲಿ ಡಂಗುರವ ಹೊಯ್ಸಿದ । ನೀಕಮಲನಾ ಭನುಕಣಾ ಕರು । ಣ್ಯೈಕನಿಧಿ ನಿಮಗೊಲಿದನೆಂದನು ಮುನಿ ಯುಧಿಷ್ಠಿರಗೆ ॥೧೮॥ ಧರಣಿಪತಿ ಕೇಳ್ಪ್ರ ಳಯದಲಿ ಸಾ । ಗರದತೆರೆ ಮುಂದಾಡಿದವು ಸಾ । ಗರದತೆರೆಯಲಿ ಸಕಲಜಲಧಿಗಳೇಕರೂಪದಲಿ ॥ ಧರೆಯ ಮುಳುಗಿಸಿ ಮೇಲೆಮೇಲು । ಬ್ಬರಿಸಿ ಜಗದಡಿಕಿಲಿನ ಜೋಡಿಯ । ಜರುಹಿದವು ನೀರೇರಿತಗ್ಗದ ಸತ್ಯಲೋಕದಲಿ ॥೧೯॥ ಜಗದಜೀವರ ಕರ್ಮಬೀಜಾ । ಳಿಗಳ ಭೈತ್ರವ ತನ್ನ ಬಾಲಕೆ । ಬಿಗಿದು ನೀರಲಿ ಸುಳಿಸಿದನು ಮತ್ಸ್ಯಾವತಾರದಲಿ ॥ ಬಗೆಯಲಾ ಪಲಯಿಾತನೇ ದೃ । ಗ್ಯುಗಕೆ ಗೋಚರನಾದನರಸುವ । ನಿಗಮವಿೀತನ ಹಜ್ಜೆಗಾಣವು ರಾಯ ಕೇಳೆಂದ ॥೨೦॥ ಮುರಳಿ ಹೂಡಿದನೀ ಜಗದ್ವಿ । ಸ್ತರಣವೆನು ಮಾಯಾವುಹೋದಧಿ । ಹೊರೆದನುನ್ನತಸತ್ಯದಲಿ ಮೇಲಾದಲೋಚನದ ॥ ಉರಿಯಲದ್ದುವನಿದನು ಲೀಲಾ । ಚರಿತವಿದು ಕೃಷ್ಣಂಗೆ ನಿನ್ನಯ । ಸಿರಿಯೆ ಸಿರಿ ಬಡತನವೆ ಬಡತನವೆಂದನಾಮುನಿಪ ॥೨೧॥ ಅರಸಕೇಳ್ಕಲ್ಪಾಂತ್ರದಲಿ ಬಿಡ। ಬೆರಿದುದೀಬ್ರಹ್ಮಾಂಡಬಹಿರಾ। ವರಣಜಲನಿಧಿ ಜಲದೊಳೊಂದಾಯ್ತೋ ನನುಪುರುವೆನು ॥ ಹರಿವಿನೋದದೊಳಾಲದೆಲೆಯಲಿ । ಸಿರಿಸಹಿತ ಪವಡಿಸಿದನಿನಶಶಿ । ಕಿರಣವಿಲ್ಲ ಮ ಹಾಂಧಕಾರಸಭಾರವಾಯ್ತೆಂದ ॥೨೨॥ ಈನೆಲನನೀಚಂದ್ರಸೂರ್ಯರ್ಕ್ । ಶಾನುತೇಜವನೀಸಮೀರಣ । ನೂನಭುವನವ ಕಾಣೆನೊಂದೇ ಸಲಿಲಸೃಷ್ಟಿಯಲಿ ॥ ಏನಹೇಳುವೆನೆನ್ನ ಚಿತ್ತ । ಗ್ಲಾನಿಯನು ಬಲು ತೆರೆಯ ಹೊಯ್ಲಿನೊ । ಳಾನು ಮುಳುಗುತ್ತೇಳುತಿದ್ದೆನು ರಾಯಕೇಳೆಂದ ॥೨೩॥ ಹೇಳಲೇನದಮೃ ತ್ಯುವಿನಗೋ । ನಾಳಿಯೊಳಗಂದಿಳಿಯಲೊಲ್ಲದೆ । ಕಾಳುಮಾಡಿದನೇ ಮುರಾರಿಯ ಭಜಿಸಿ ಭಕ್ತಿ ಯಲಿ ॥ ಬಾಲಕನೊಳವಗುಣವನಕಟಾ । ತಾಳಬಹುದೇ ತಾಯೆ ಮೃತ್ಯುವೆ । ತಾಳಿಗೆಯ ತೆಗೆದೆನ್ನ ನೊಳಕೊಳ್ಳೆಂದು ಹಲುಬಿದನು ॥೨೪॥ ನೀರುಹೊಕ್ಕದು ನೂಕಿ ವಿವಿಧ । ದ್ವಾರದಲಿ ಬೆಂಡೇಳ್ವನೊ ವ್ಮತಿ । ದೂರ ಮುಳುಗುವೆನಡ್ಡಬೀಳ್ವೆನು ತೆರೆಯ ಹೊಯ್ಲಿನಲಿ ॥ ವೂರಿಗುಬ್ಬಸವೆನ್ನ ಮರಣವ । ನಾರು ಕಂಡರು ಹೇಸಿ ನನ್ನನು । ದೊರಬಿಸುಟಳು ಮೃತ್ಯು ಬಳಲಿದೆನಿಂತು ಹಲಕಾಲ ॥೨೫॥ ಮು ಳುಗುತೇಳುತ ಬರುತ ವಟಕುಜ । ದೆಲೆಯಲೀತನ ಕಂಡೆನೈನಾ । ನೆಳತಟಕೆ ಬಿದ್ದಂತೆ ತೆರೆಯಡತರಕೆ ತನಿಗೆ ಡೆದು ॥ ಜಲಜಸಂಭವನಾಜಲವ ಮು । ಕ್ಕಳಿಸುತುಗಳುತ ನಾಲ್ಕುಮುಖದಲಿ । ಸಿಲುಕಿ ನಿಗುರುತ ನಿಲುತ ಬಂದನು ಕಂಡನೀಹರಿಯ ॥೨೬॥ ಅರುನೀನೆನುತಾತನೀತನ । ನಾರಿದನು ಬೆಸಗೊಳಲು ಜಗದಾ । ಧಾರಕನು ಜಗದುದರಹರಿ ತಾನೆಂದೊಡಜ ನಗುತ ॥ ಭೂರಿಜಗವೆನ್ನುದರದಲಿ ನೀ । ನಾರು ಜಗಕೆಂದೆ ನುತ ಗರುವ ವಿ । ಕಾರದಲಿಪರಮೇಷ್ಠಿ ನಿಜತೇಜನ ಪಚಾರಿಸಿದ ॥ ಆದವೇನಿನ್ನುದರದಲಿ ಜಗ । ವಾದೊ ಡೀಕ್ಷಿಪೆನೆನುತಲೀಕಮ । ಲೋದರನು ಕಮಲಜನ ಜಠರವ ಹೊಕ್ಕು ಹೊರವಂಟ ॥ ಭೇದಿಸಿದೆನಾನೆನ್ನ ಜಠರದೊ । ಳಾದಲೋಕವನೆಣಿಸಿ ಬಾಯೆನ । ಲಾದುರಾಗ್ರಹಿ ಯಿಳಿದನಸುರಾಂಕನ ಜಠರದಲಿ ॥೨೮॥ ಹೊಲಬುದಪ್ಪಿದನಲ್ಲಿ ಭುವನಾ । ವಳಿಗಳಿದ್ದವು ಕೋಟಿರುದ್ರಾ । ವಳಿಗಳಿದ್ದವು ಕೋಟಿಪರಮೇಷ್ಠಿ ಗಳು ಶತಕೋಟಿ ॥ ಹುಲುನೊರಜುಸಾಗರದ ಸಲಿಲವ । ನಳೆವವೊಲು ನೊಳ ಹಾರಿ ಗಗನದ ।

ತಲೆಗಡೆಯ ಕಾಣಿಸುವೆನೆಂಬವೊಲಾಯ್ತು ಕೇಳೆಂದ ॥ ಹಲವುಯುಗಪರಿಯಂತರಲ್ಲಿಯೆ । ತೊಳಲಿ
ಕಡೆಗಾಣದೆ ಕೃಪಾಳುವ । ನೊಲಿದು ಹೊಗಳಿದನಜನು ವೇದಸಹಸ್ರಸೂಕ್ತದಲಿ ॥ ಬಳಿಕ ಕಾರುಣ್ಯ
ದಲಿ ನಾಭೀ । ನಳಿನದಲಿ ತೆಗೆದನು ವಿರಿಂಚಿಗೆ । ನಳಿನಸಂಭವನೆಂಬಹೆಸರಾಯ್ತಂದುಮೊದಲಾಗಿ ॥
ಆಮಹಾಜಲಕಗ್ನಿಮುಖದಲಿ । ಹೋಮವಾಯ್ತು ತದಗ್ನಿಯಡಗಿದು । ದಾಮರುತ್ತಿನಲಾ ಬಹಳ
ಬಹಿರಾವರಣಪವನ ॥ ವ್ಯೋಮದಲಿ ತದಹಮ್ಮಹತ್ತುವಿ । ರಾಮವಾಪ್ರಕೃತಿಯಲಿ ಮಾಯಾ ।
ಕಾಮಿನಿಗೆ ಪರಮಾತ್ಮನಲಿ ಲಯವೆಂದನಾಮುನಿಪ ॥೩೧॥ ಏಸುದಿನವೀಜಗದ ಬಾಳುವೆ । ಯೈಸುದಿನ
ವಿಪ್ರಳಯಮಯಪರಿ । ಭಾಸಮಾನಬ್ರಹ್ಮತೇಜೋರೂಪವೈಸುದಿನ ॥ ಆಸದಾನಂದೈಕರಸಕೆ ಪ ।
ರಾಸಿತಾವಿದ್ಯಾಪ್ರಪಂಚವಿ । ಲಾಸವಾಯ್ತು ವಿಭಾಗಸೃಷ್ಟಿವಿಧಾನಚಿಂತೆಯಲಿ ॥೩೨॥ ಏಕಮೇವಾ
ದ್ವಿತಯಮೆಂಬನಿ । ರಾಕುಳಿತತೇಜೋನಿಧಿಗೆ ಮಾ । ಯಾಕಳತ್ರದೊಳಾಯ್ತುನಿಜಗುಣಭೇದವವ
ರಂದ ॥ ಆಕಮಳಭವನೀಮುಕುಂದಪಿ । ನಾಕಿಯೆಂಬಭಿಧಾನದೊಳಿತ್ರಿಗು । ಣಾಕೃತಿಯ ಕೈಕೊಂಡನು
ರುಲೀಲಾವಿನೋದದಲಿ ॥೩೩॥ ಆರಜೋಗುಣಕಬುಜಭವನಧಿ । ಕಾರಿ ತನ್ನ ಶರೀರಧರ್ಮವ ।
ನಾರಿಯನು ಮಾಡಿದನು ಶತರೂಪಾಭಿಧಾನದಲಿ ॥ ಸೇರಿಸಿದನರ್ಧದಲಿ ಮನುವನು । ದಾರಚರಿತನು ಸಕ
ಲಧರ್ಮದ। ಸಾರವನು ವಿಸ್ತರಿಸಿದನು ಮನು ಭುವನವಿಭುವಾಗಿ ॥೩೪॥ ಭೃಗುಪುಲಸ್ತ್ಯವಸಿಷ್ಠದಕ್ಷಾ।
ದಿಗಳೆನಿಪ್ಪನವಪ್ರಜೇಶ್ವರ । ರೊಗುಮಿಗೆಯ ಮಾಡಿದನು ಸೃಷ್ಟಿಗೆ ಬೇರೆಬೇರವರ ॥ ಜಗದಜೋಡ
ಣೆಯಾಯ್ತು ಭೂತಾ । ಳಿಗೆ ಚತುರ್ವಿಧಸೃಷ್ಟಿಯೊಡ್ಡಣೆ । ನಿಗಮಮತದಲಿ ಹೂಡಿತ್ರವನೀಪಾಲಕೇ
ಳೆಂದ ॥೩೫॥ ಆದಿಯಲಿ ಕೃತಯುಗಹರಿಶ್ಚಂದ್ರಾದಿಗಳು ಸೂರ್ಯಾನ್ವಯಕೆ ಬಾಧ । ಸಾದಿನಿಮ್ಮನ್ವ
ಯಕೆ ಬಳಿಕ ಪುರೂರವಕ್ಷಿತಿಪ ॥ ಮೇದಿನಿಯನಾಯುಗದಲವರೇ । ಪಾದಿ ಸಲಹಿದರಿಲ್ಲ ಬೆಳಗಿತು
ವೇದಬೋಧಿತಧರ್ಮಸೂರ್ಯಪ್ರಭೆಗೆ ಮಿಗಿಲಾಗಿ ॥೩೬॥ ಆಯುಗದತರುವಾಯಲಾತ್ರೇ । ತಾಯು
ಗವಲೇ ಬಳಿಕ ಧರ್ಮದ । ಲಾಯದಲಿ ಕಟ್ಟಿದರಧರ್ಮವನೊಂದುಪಾದದಲಿ ॥ ರಾಯ ಕೇಳ್ಳೈ ದ್ವಾಪ
ರದಲಿ ದೃ । ಥಾಯಿಯಲಿ ತಾಧರ್ಮವೆರಡಡಿ । ಬೀಯವಾದುದು ನಿಂದುದೆನಿಸಿತು ನಿನ್ನದೆಸೆ
ಯಿಂದ ॥೩೭॥ ಕಲಿಯರಾಜ್ಯದಲೊಂದುಪಾದದ । ಸಲುಗೆ ಧರ್ಮಕ್ಕಹುದುಗಡ ಮೆ । ಗ್ಗಳೆಯಮದರೊ
ಳಸತ್ಯಧರ್ಮದ್ರೋಹಮಾತ್ಸರ್ಯ ॥ ಕಳವು ಹಿಂಸೆಯನೀತಿ ಲೋಭ । ಸ್ಖಲಿತವಾರಡಿ ಠಕ್ಕು॥
ವಂಚನೆ । ಹಳಿವು ಹಾದರ ಕವತೆಯೆಂಬಿವರುಬ್ಬು ಹಿರಿದೆಂದ ॥೩೮॥ ಈಯಧರ್ಮವ ಪತಿಕರಿಸಿ ತ ॥
ನ್ನಾಯತಕೆ ಭೂತಳವ ತಂದು ನಿ । ರಾಯಸದಲೇ ಬಳಸುತಿರ್ದನು ದುಂಧುವೆಂಬಸುರ ॥
ರಾಯ ಕೇಳಾದೈತ್ಯನನು ತ । ನ್ನಾಯುಧಕೆ ಬಲಿಗೊಟ್ಟು ಬಳಿಕ । ಸ್ಥಾಯಿಧರ್ಮವಬ
ಲಿದು ಕೊಟ್ಟನು ದುಂಧುಮಾರನೃಪ ॥೩೯॥ ಆನೃಪನ ರಾಜ್ಯದಲಿ ಯಜ್ಞಾವಿ । ಧಾನವೈ
ದಿಕವಿಧಿಕೃತಾನು । ಷ್ಠಾನಯಮನಿಯಮಾದಿಯೋಗವಿಶಿಷ್ಟನೀತಿಯಲಿ ॥ ದೀನಭಾವವನುಳಿದು
ಯಾಚ್ನಾ । ಹೀನವೃತ್ತಿಯ ಬಿಸುಟು ಲೋಕದ । ಭಾನುತೇಜದಲೆಸೆದುದಂದುಮಹೀಸು
ರವ್ರಾತ ॥೪೦॥ ರಣದೊಳಹಿತರ ಶಿರದ ಮಿದುಳ್ । ತಣವು ಶಸ್ತ್ರಕೆ ವಿತ್ತ ಭೂಸುರ । ಗಣಕೆ
ಮೆರೆಯುಶಿವನದವಿಭ್ರಮ ನಿಜಸತೀಜನಕೆ ॥ ಗುಣಮನುಷ್ಯವ್ರಜಕೆ ಪರಿರ । ಕ್ಷಣವಶೇಷಪ್ರಜೆಗೆ

ನೆಲುಥಾ । ರಿಣಿಪತಿಗಳೊಪ್ಪಿದರು ಕೃತಯುಗದಾದಿಕಾಲದಲಿ ॥೪೧॥ ಪ್ರೌಢನೇ ವ್ಯವಹರಿಸಲಗ್ಗದ । ಮೂಢನೇ ಬರಲೊಂದೆಸತ್ಯನಿ । ರೂಢಿಯಲಿ ವಾಣಿಜ್ಯಸುವ್ಯವಹಾರಮಾರ್ಗದಲಿ ॥ ಗಾಢವಿಕ್ರಯ ಸಕ್ರಯದೊಳೇ । ಗೂಢಕರುಮೂಲ್ಯೈಕಲಾಭನಿ । ರೂಢಪರರೊಪ್ಪಿದರು ವೈಶ್ಯರು ಧರ್ಮಕಾಲದಲಿ ॥ ನಿಜಕೃಷಿವ್ಯವಸಾಯದಲಿ ತ । ದ್ದ್ವಿಜಕುಲದ ಶುಶ್ರೂಷೆಯಲಿ ಪಾ । ದಜರು ಕೃತಕೃತ್ಯರು ಚತುರ್ವರ್ಣ ದಲಿ ಮಾರ್ಗವಿದು ॥ ನಿಜನಿಜಾಂಗದ ಧರ್ಮಗತಿಯಲಿ । ಮಜಡರಾದೊಡೆ ಮನುಜರಾದವ । ರಜನ ಪರಮಾಯುಷ್ಯಪರಿಯಂತಿಹರು ನರಕದಲಿ ॥೪೩॥ ನಯವಿದನೆ ಕೇಳ್ವೇದಶಾಸ್ತ್ರಾ । ಧ್ಯಯನದಲಿ ಪಿತೃಮಾತೃಶುಶ್ರೂ । ಷೆಯಲಿ ಗುರುಪರಿಚರ್ಯದಲಿ ವಿಮಲಾಗ್ನಿಕಾರ್ಯದಲಿ ॥ ನಿಯತಮೌನವ್ರತದ ಸಂಗ । ಪ್ರಿಯದ ಶೌಚಾಸ್ತೇಯದಿಂದ್ರಿಯ । ಜಯದವಿಮಲಬ್ರಹ್ಮಚರ್ಯಾಶ್ರಮದಗತಿ ಯೆಂದ ॥೪೪॥ ದೇವಗುರುಪಿತೃವನ್ಹಿಶುಶ್ರೂ । ಷಾವಧಾನನಿರಂತಷಟ್ಕ । ರ್ಮಾ- ಲಂಬನಿಜೋನ್ನ ತಾಲಾಭ್ಯೈಕಸಂತೋಷ ॥ ಪಾವನವ್ರತನಿಜಪುರಂಧ್ರೀ । ಸೇವೆ ಸತ್ಯಾಸ್ತೇಯಶೌಚಗು । ಣಾವಳಿಗ ಳುಳ್ಳಾತ ಗೃಹಪತಿಯೆಂದನಾಮುನಿಪ ॥೪೫॥ ವನವನದೊಳಾಶ್ರಮದೊಳಗೆ ಕುಲ । ವನಿತೆಸಹಿತಮ ಲಾಗ್ನಿಹೋತ್ರದ । ನೆನಹು ತಪ್ಪದೆ ಕಂದಮೂಲಫಲಾಶನಂಗಳಲಿ ॥ ವಿನಯಯಜ್ಞತಪೋವ್ರತಾ ದಿಗ । ಳನಿತರಲಿ ನಿಷ್ಠಾತ್ಮನಾದೊಡೆ । ವಿಪುತ್ರವಾನಪ್ರಸ್ಥನೆಂಬರು ರಾಯ ಕೇಳೆಂದ ॥೪೬॥ ಮದನ ನಂಬನು ಮುರಿದು ರೋಷವ । ಕದನದಲಿ ಸೋಲಿಸಿದು ಲೋಭವ । ನೊದೆದು ಮೋಹವನೊಕ್ಕಿ ಯಿಗದಾಮದವ ಮತ್ಸರದಾ । ಎದೆಯಲಂಕವ ಬರೆದು ವೈರಾ । ಗ್ಯದ ಸುಸುವ್ಯಗ್ರಾಜ್ಞಾನಯೋಗದ ಪದದ ಬೆಳೆ ಸಿರಿವಂತನೇ ಯತಿಯೆಂದನಾಮುನಿಪ ॥೪೭॥ ಧರಣಿಪತಿ ಕೇಳ್ಜಾತಿವರ್ಗದ । ಪರಮ ಧರ್ಮದಸಾರವಿದನಾ । ಚರಿಸಿ ಸಿದ್ಧಿಯನೈದಿದನು ಪಿತೃಮಾತೃಭಕ್ತಿಯಲಿ ॥ ಒರೆಗೆ ಬಣ್ಣಕೆ ಬೆರಸಿ ವೇದೋ । ಚ್ಚರಿತಧರ್ಮವನರುಹಿದನು ಭೂ । ಸುರಗೆ ಧರ್ಮವ್ಯಾಧನೆಂಬನ ಕಥೆಯ ಕೇಳೆಂದ ॥೪೮॥

ಅಂತು ಸಂಧಿ ೧೪ ಕ್ಕೆ ಪದ ೭೯೩ ಕ್ಕಂ ಮಂಗಳಮಸ್ತು.

---

## ಹದಿನೈದನೆಯ ಸಂಧಿ.

ಸೂಚನೆ ॥ ಮುನಿಗಳುಪಕಥೆಯಲಿ ಯುಧಿಷ್ಠಿರ । ಜನಪತಿಯ ಸಂತೈಸಿ ಕಾಮ್ಯಕ ॥
ವನದಿನಸುರಾರಿ ಬಂದನು ದ್ವಾರಕಾಪುರಿಗೆ ॥

ಪದ॥ ಕೇಳು ಜನಮೇಜಯಧರಿತ್ರೀ । ಪಾಲ ಮಾರ್ಕಂಡೇಯಮುನಿಪತಿ । ಹೇಳಿದನು ವೇದೋಕ್ತಧರ್ಮದಸಾರಸಂಗತಿಯ ॥ ಶೀಲಗುಣಸಚ್ಚರಿತ್ರದಲಿ ಸಂ । ಮೇಳವಿಸಿ ಮುದ್ಗಲ್ಯವಂಶವಿ । ಶಾಲನೊಬ್ಬನು ವಿಪ್ರನಿರ್ದನು ಬ್ರಹ್ಮಚರಿಯದಲಿ ॥೧॥ ಧರಣಿಪತಿ ಕೇಳಾಮಹೀಸುರ । ವರನು ವೇದಾಧ್ಯಯನಪರನನ । ವರತವಿದ್ಯಾಭ್ಯಾಸಶೀಲನು ವನದಲೊಂದುದಿನ ॥ ಮರದಮೊದಲಲಿ ವೇದಪಾಠದ ।

ಲಿರೆ ಮಹೀರುಹದಗ್ರದಲಿ ಸಂಚಳಿಸುತಿಹಖಗವಿಷ್ಠೆ ಬಿದ್ದುದು ಮೇಲೆ ಭೂಸುರನ॥೨॥ ಮೇಲೆ ನೋಡಿ ದೊಡತಧಿಕರೋಷಜ್ವಾಲೆಯಲಿ ಗರಿ ಸೀದು ಧರಣಿಯ । ಮೇಲೆ ಬಿದ್ದುದು ವಿಹಗವೀತನಮುಂದೆ ತನು ಬೆಂದು॥ ಲೀಲೆಯಲಿ ಭೂದೇವನಲ್ಲಿಂ। ಮೇಲೆ ಭಿಕ್ಷಾಟನಕೆ ಭೂಸುರರಾಲಯದ ಪಂತಿಯಲಿ ಹೊಕ್ಕನು ರಾಯ ಕೇಳೆಂದ ॥೩॥ ಬಂದು ಮನೆಯಲಿ ಭಿಕ್ಷೆಗೋಸುಗ । ನಿಂದನಾ ಮನೆಯಾಕೆ ಭಿಕ್ಷವ । ತಂದಹೆನು ನಿಲ್ಲೆನುತ ಪತಿಪರಿಚರ್ಯೆಯನು ಮಾಡಿ ॥ ತಂದು ಭಿಕ್ಷವ ಹಿಡಿಯೆನಲ್ದ್ವಿಜ । ನಂದು ಮುನಿದೀಕ್ಷಿಸಿ ದೊಡಾಸತಿ । ಯೆಂದಳೆಲೆಮರುಳೇ ಕುಜಾಗ್ರದ ವಿಹಗನಲ್ಲೆಂದು ॥೪॥ ಬೆರಗಿನೊಳು ದ್ವಿಜನಿರ್ದ ನಿದನೆಂ । ತರತಳಿನ ತೆಲೆವಿಪ್ರ ನಿಗಮವ । ನರಿಯೆ ಧರ್ಮರಹಸ್ಯತತ್ವದ ಸಾರಸಂಗತಿಯ ॥ ಅರಿದು ಪತಿಪರಿಚರ್ಯೆಯಲಿ ಕೈ । ಮರೆಯದಾರಾಗಲಿ ಸುಧರ್ಮದೊ । ಳೆರಕವುಳ್ಳೊಡೆಧನ್ಯರೆಂದಳು ಕಾಂತೆ ಭೂಸುರಗೆ ॥೫॥ ಇಲ್ಲಿಗಿದೆ ನಾಲ್ಕೈದು ಯೋಜನ । ದಲ್ಲಿ ಪಟ್ಟಣವದರೊಳೊಬ್ಬನು । ಬಲ್ಲನಗ್ಗದ ಧರ್ಮಮುದ್ರಾಘಟನವಿಘಟನವ ॥ ಅಲ್ಲಿಗೈದುವುದಾತನಲಿ ನೀ । ನೆಲ್ಲವನು ತಿಳಿ ನಿನ್ನ ಚಿತ್ತದೊ । ಳಿಲ್ಲಲೇ ಪರಿಪಾಕವೆಂದುಪದೇಶಿಸಿದಳಬಲೆ ॥೬॥ ಹೆಸರು ಧರ್ಮವ್ಯಾಧನಾತನ । ದೆಸೆಯೊಳರಿ ಹೋಗೆನಲು ಬಂದನು । ವಸುಧೆಯಮರನು ನಗರಿಗಾಸತಿ ಕೊಟ್ಟ ಕುರುಹಿನಲಿ ॥ ಹಸಿದು ಬೀದಿಗಳೊಳಗೆ ತೊಳಲಿದು । ಗಸಣಿಗೊಳುತ ಪುರಾಂತದಲಿ ಕ । ರ್ಕಶಪುಳಿಂದರ ಕೇರಿಯಿರೆ ಕಂಡಲ್ಲಿಗೈತಂದ ॥೭॥ ಬಸೆನೆಣನ ಸುಂಟಿಗೆಯ ಹರಹಿನ । ಹಸಿಯತೊಗಲಿನ ತಳಿತ್ರಖಂಡದ । ಹಸಗದುರುಗಲ ಕಾಳಿಜದ ಜಂಗಡೆಯ ಗಳಗೆಗಳ॥ ಬಸೆಯ ಹರವಿಯ ಸಾಲ ತೋರಳಿಗೆ। ಬೆಸಳಿಗೆಯ ಕುರಿದಲೆಯ ಪಂತಿಯ। ಕುಸುರಿದೆಲುವಿನ ಕೋದವಿಹಾನಂಗಡಿಯಲೈತಂದ ॥೮॥ ಬರಬರಲು ದೂರದಲಿ ವಿಪ್ರನ । ಬರವ ಕಂಡಿದಿರಾಗಿ ಬಂದುಪಚರಿಸಿದನು ಬಂದೈ ಪತಿವ್ರತೆಯೆನ್ನ ದೂರಿದಳೆ॥ ಧರಣಿಯಮರೋತ್ತಮುಗಿದು ಸಂ। ಚರಣಯೋಗ್ಯಸ್ಥಾನವಲ್ಲಾ । ದರಿಸುವೊಡೆಬಾಯೆನುತ ತನ್ನಾಲಯಕೆ ಕೊಂಡೊಯ್ದ ॥೯॥ ಒಳಗೆಮುಂಚದಮೇಲೆ ನಡುಗುವ । ತಲೆಯ ತೆರಳಿದಮೆಯ್ಯ ಬೆಳುಪಿನ । ತಲೆನವಿರ ತಗ್ಗಿದಶರೀರದ ನೆಗ್ಗಿದವಯವದ ॥ ತಳಿತಸೆರೆಗಳ ತಾರದಾನನ। ದಿಳಿದಹುಬ್ಬಿನ ಹುದಿದಕಣ್ಗಳ । ಚಲಿತವಚನದ ವೃದ್ಧರನು ತೋರಿದನು ಮುನಿಸುತಗೆ ॥೧೦॥ ಇವರು ಮಾತಾಪಿತೃಗಳೆನ್ನಯ । ಯುವತಿಯಿವಳಿವಳೆನ್ನ ಮಗನಿಂ। ತಿವರ ರಕ್ಷೆಗೆ ಬೇಂಟೆಯಾಡುವೆನಡವಿಯಡವಿಯಲಿ ॥ ಕವಲುಗೋಲಲಿ ಮೃಗಗಣವ ಕೊಂ । ದವನು ತಹೆನಂಗಡಿಯಲವ ಮಾ । ರುವೆನು ಲೋಭವನಲ್ಲಿ ಮಾಡೆನು ವಿಪ್ರ ಕೇಳೆಂದ ॥೧೧॥ ದೊರಕಿದನಿತಾದ್ರವ್ಯದಲಿ ವಿ । ಸ್ತರಿಸುವೆನು ಸಕುಟುಂಬವಿದನೇ । ಹೊರೆವೆನಾರ್ಜಿಸುವೆನು ಕುಟುಂಬಕೆ ತಕ್ಕನಿತು ಧನವ ॥ ನಿರುತವಿದು ಮಾತಾಪಿತರ ಪರ । ಚರಿಯದಲಿ ರಾಗಾದಿದೋಷಾ । ಚರಣವದು ಮನವಚನಕಾಯದೊಳಿಲ್ಲ ತನಗೆಂದ ॥೧೨॥ ಭೂತಹಿಂಸೆಯಿದಲ್ಲ ನಮಗಿದು । ಮಾತೃಪಿತೃರಕ್ಷಾರ್ಥವೆಮ್ಮಯ । ಜಾತಿಧರ್ಮವು ಮಾಂಸವಿಕ್ರಯಮೃಗವಧಾಟಗಳು ॥ ಜಾತಿಧರ್ಮತ್ಯಾಗಕರ್ಮವಿ । ಜಾತಿಧರ್ಮಗ್ರಹಣವೇ ವಿ । ಖ್ಯಾತಕುಂಭೀಪಾಕಸಾಧನ ವಿಪ್ರ ಕೇಳೆಂದ ॥೧೩॥ ವಿತತಭಾಷಿತವನ್ಯವಿತ್ತಾ । ಹೃತಿಪರವ್ಯಾಪಾರವಾತ್ಮ । ಸ್ತುತಿ ಪರಸ್ತ್ರೀವ್ಯಸನವತ್ಯಾಸ್ವಾದ ಬಕವೃತ್ತಿ ॥ ಕೃತವಿನಾಶನ ಡಂಭಹಿಂಸಾ । ರತಿ ನಿಜಾನ್ವಯಧರ್ಮಕರ್ಮ । ಚ್ಯುತಿಗಳಿವು ದೋಷಾಂಕುರಂಗಳು ವಿಪ್ರ ಕೇಳೆಂದ ॥

ಸಾಂಗವೇದಾಧ್ಯಯನ ಸಜ್ಜನ । ಸಂಗ ಶಾಸ್ತ್ರಶ್ರವಣ ತೃಷ್ಣಾ । ಭಂಗ ಯಜನ ಧ್ಯಾನಮೌನವ್ರತ
ಸದಾಚಾರ ॥ ಮಾಂಗಲಿಕಕರ್ಮಾಭಿಯೋಗ ಕುಲಾಂಗನಾರತಿಯಾತ್ಮಚಿಂತೆ ಪ । ರಾಙ್ಮುಖತ್ವಮು
ಖ್ಯವಿವು ಸದ್ಧರ್ಮಗತಿಯೆಂದ ॥೧೫॥ ಧನಮದವ ಸತ್ಕುಲಮದವ ಯೌ । ವನಮದವ ವಿದ್ಯಾಮದ
ವ ಪರಿ। ಜನಮದವ ವೈಭವಮದವನಾಚಾರಮದವ ॥ ಮಾನನದಿಂ ಶ್ರವಣಾದಿ ನಿಷಿಧ್ಯಾ। ಸನದಿನಿವುಗ
ಳನೊತ್ತಿ ವಿದ್ಯಾ । ವಿನಯಸೌಶೀಲ್ಯದಲಿ ನಡೆವುದು ವಿಪ್ರರೊಳೆಂದ ॥೧೬॥ ನೀವು ಜಾತಿಯೊಳಧಿಕ
ತರರಿಂ । ದಾವು ಜಾತಿವಿಹೀನರಾಗಿಯೆ । ಭಾವಶುದ್ಧಿಯಲೇ ಸ್ವಧರ್ಮಾಚಾರಮಾರ್ಗದಲಿ ॥ ಆವ
ದೂಣೆಯುವಿಲ್ಲವೀದ್ವಿಜ । ದೇವಗುರುಪರಿಚರ್ಯೆಯಲಿ ಸಂ । ಭಾವಿತರು ಸಾಮಾದೇವಮ್ಮನು ನೋಡಿ
ನಡೆಯೆಂದ ॥೧೭॥ ಈಪರಿಯಲುರುಧರ್ಮಕಥನಾ । ಳಾಪದಲಿ ಮುನಿಸುತಗೆ ಸಂದೇ। ಹಾಪನೋದವ
ತಿಳುಹಿ ಕಳುಹಿದನಾಮಹೀಸುರನ॥ ಭೂಪ ಕೇಳ್ಕೈ ಕ್ಷತ್ರಧರ್ಮಕ । ಳಾಪದಲಿ ನಿನಗಿಲ್ಲ ಕೊರತೆ ಕೃ ।
ತಾಪರಾಧರು ಕೌರವರು ನಿರ್ನಾಮರಹರೆಂದ ॥೧೮॥ ಬಾಹುಬಲ ಬಲವಿಲ್ಲ ದೈವ ! ದ್ರೋಹಿಗಳಿಗೆ
ಸುಧರ್ಮನಿಷ್ಠುರ । ಸಾಹಸಪ್ರ ಕಿರಿದಾದೊಡೆಯುಕೊಯ್ವರುವಿರೋಧಿಗಳ ॥ ಆಹರಾತ್ಮಜವಸುಳಿತ
ನದ । ವ್ಯಾಹದಲಿ ತಾರಕನನಿಕ್ಕನೆ । ಯಾಹವದಜಯುಸಿರಿಯು ಧರ್ಮದ ಬೆನ್ನಲಿಹುದೆಂದ ॥೧೯॥
ಎಂದು ಮಾರ್ಕಂಡೇಯಮುನಿ ಯಮ । ನಂದನನನೀತಿಹಾಸಕಥೆಗಳ । ಲಿಂದವಿಟ್ಟನು ಚಿತ್ತವನು
ಖಯುಖೋಡಿಗಳ ಕಳೆದು ॥ ಕಂದುಕಸರಿಕೆಯೇಕೆ ನಿಮಗೆ ಮು । ಕುಂದನೊಲಿವಿದೆ ಬಯಕೆ ಬೇರೇ ।
ಕೆಂದು ಮಾರ್ಕಂಡೇಯನಾರದರಡರಿದರು ಸಭೆಯ ॥೨೦॥ ಅರಸ ಕೇಳ್ಕೈ ದ್ರೌಪದಿಗೆ ಹರಿ । ಯರಸಿ
ನುಡಿದಳು ಸತ್ಯಭಾಮಾ । ಸರಸಿಜಾನನೆ ನಗೆನುಡಿಯ ಸವ್ಯೋಕೇಳದಲಿ ॥ ಅರಸಿ ಕೌತುಕವೆನಗೆ
ನೀನ್ಯೆ । ವರಗೆ ಸತಿ ವಲ್ಲಭರಚಿತ್ತಾ । ಕರುಷಣವು ನಿನಗೆಂತು ಸೇರಿಹುದೇಕಭಾವದಲಿ ॥೨೧॥
ಮಂತ್ರಸಿದ್ಧಿಯೊ ಮೇಣು ಶಾಬರ । ಯಂತ್ರರಕ್ಷೆಯೊ ಮೂಲ್ಯವೌಷಧ । ತಂತ್ರತಿಲಕವೊ ರಮ
ಣರವರ್ಶೈವರ ವಶೀಕರಣ ॥ ಯಂತ್ರಮುಖಯಹಾಹೆಗಳು ನೃಪರೀ । ಯಂತ್ರಸೂತ್ರದ ಕೀಲಿಕೆ ನಿನ್ನನಿ ।
ಯಂತ್ರಣವ ಹೇಳೌ ನಿಧಾನವನೆಂದಳೆಂದುಮುಖಿ ॥೨೨॥ ದೇವಿಯೆಂದಳು ಸತ್ಯಭಾಮಾ । ದೇವಿ
ಯರು ಮುಗುದೆಯರಲಾ ನಾ । ನಾವಮಂತ್ರದ ತಂತ್ರತೊಡಕಿನ ತೋಟಿಯುಳ್ಳವಳು ॥ ಭಾವಶು
ದ್ಧಿಯಲೈವರನು ಸಂ । ಭಾವಿಸುವೆನವರವರಚಿತ್ತದ । ಭಾವವರಿದುಪಚರಿಸುವೆನು ಚತುರತೆಯಚಾ
ಳಿಯಲಿ ॥೨೩॥ ಬಲವರಿದು ಹತ್ತುವದು ಚಿತ್ತದ । ನೆಲೆಯರಿದು ನೆಮ್ಮುವುದು ಮುರಿವಿನ। ಹೊಳವರಿ
ದುಹಿಂಗುವುದು ಹೊಗ್ಗುವದು ಮನದೊಳೊಳವರಿದು ॥ಸುಳಿವರಿದು ಸೋಂಕುವುದು ತವಕಕೆ । ಬಲಿದು
ಮುನಿವುದು ಸವಿಯಬೇಟವ । ಬೆಳಸಿ ಬೆಸೆವುದು ಬಗೆಯಲೆಂದಳು ನಳಿನಮುಖಿ ನಗುತ ॥೨೪॥ ರಸಿಕ
ಹರಿ ಹದಿನಾರುಸಾವಿರ । ಶಶಿಮುಖಿಯರಲಿ ಬೇಟಚೌಗನ । ದೆಸಕ ಬಿಮ್ಮಿತು ಬಗೆಯ ಭಂಗವ್ಯಾಪ್ತಿ
ಕೃಷ್ಣನಲಿ ॥ ನುಸುಳು ನೆಲೆಡಿಳ್ಳಿಯುತ್ತು ಪ್ರಸರ। ಬೆಸುಗೆ ಬಿಗುಹುಳುಕೊತ್ತುಕಲೆಗಳ । ರಸದ ಪಸರವ
ನರಿಯಬಾರದು ವಿಗಡಪಿಟರುಗಳ ॥೨೫॥ ನೀವು ಮುಗುದೆಯರತಿವಿದಗ್ಧನು । ದೇವಕೀಸುತನೆನ್ನ ವರು
ಧ । ಮಾವಲಂಬರು ದಿಟ್ಟರಲ್ಲ ಮನೋಜಲೀಲೆಯಲಿ ॥ ನೀವು ಸೊಬಗಿನನಿಧಿಯಲೇ ಶತ । ಸಾವಿ
ರದಸತಿಯರಲಿ ಕೃಷ್ಣನ । ಜೀವವಿಶ್ವಮುಸತಿಯರೆಂದಳು ನಗುತ ತರಳಾಕ್ಷಿ ॥೨೬॥ ಅರಸ ಕೇಳ್ಕೈ ಸತ್ಯ

ಭಾಮಾ । ಸರಸಿಜಾನನೆ ದ್ರುಪದಸುತೆಯುರು । ಸರಸಮೇಳದಲೊಪ್ಪಿದರು ಚತುರ್ಗೋಷ್ಠೀಲೀಲೆಯಲಿ ॥ ಹರಿಯುಧಿಷ್ಠಿರಭೀಮಪಾರ್ಥರು । ವರಮುನಿಗಳಿತಿಹಾಸಮಯಬಂ । ಧುರಕಥಾಕೇಳಿಯಲಿ ಕಳಿದರು ಹಲವುದಿವಸಗಳ ॥೨೭॥ ಹಗೆಗಳಮರಾರಿಗಳು ನಮ್ಮಯ । ನಗರಿಶೂನ್ಯಾಸನದಲಿದ್ದುದು । ವಿಗಡ ರಾಮಾದಿಗಳು ವಿಷಯಂಗಳವಿನೋದಿಗಳು ॥ ಅಗಲಲಾರೆನು ನಿಮ್ಮವನದೋ । ಲಗಕೆ ಬಿಡೆಯವ ಕಾಣೆನೆಂದನು । ನಗುತ ಕರುಣಾಸಿಂಧು ಯಮನಂದನನ ಮೊಗನೋಡಿ ॥೨೮॥ ನುಡಿದ ಕಾಲಾವಧಿಗೆ ಜರೆತೆರೆ । ಯಡಗಿದವು ಜಾಣಿನಲಿ ಸತ್ಯವ । ನಡಸಿದಿರಿ ಕಡೆಸಾರಿಗೆಯಲುನ್ನತಿಯಕೆಡಿಸದಿರಿ ॥ ಕಡು ಮನದಕರ್ಣಾದಿಗಳು ಕೈ । ದುಡುಕಿದೊಡೆಕೈಗಾಯ್ದುಧರ್ಮದ । ತಡಿಗೆ ಜಾರಿ ಜಯಾಧ್ವದಲಿ ಜಂಘಾಲರಹಿರೆಂದ ॥೨೯॥ ಮರೆಯಲಿಹಕಾಲದಲಿ ಬಲಿದೆ । ಚ್ಚರಲಿಹುದು ಬೇಕಾದೊಡೆಮಗೆ । ಚ್ಚರಿಸಿ ಕಾರ್ಯಸ್ಥಿತಿಯನೇ ಚರಿಸುವುದು ನಿಮ್ಮೊಳಗೆ ॥ ಅರಿದಿಹುದು ನೀನೆಂದು ರಾಯಂ । ಗರುಹಿ ಭೀಮಾದಿಗಳಿಗುಚಿತವ । ನೆರೆನುಡಿದು ದುರುಪದಿಯ ಮನ್ನಿಸಿ ಮರಳಿದನು ಪುರಕೆ ॥೩೦॥ ಅರಸಿ ಹರಿಯಾಮ್ನಾಯತತಿಕು । ಕ್ಕರಿಸಿದವು ಮುನಿಗಳ ಸಮಾಧಿಗೆ । ಕರುಬುವವರಾವಲ್ಲ ಕಾಣರು ನಖಿಗ ಕೊನೆಗಳನು ॥ ಅರಸ ತಾನೇ ಹರಿ ಹರಿದು ತ । ನ್ನರಕದವರನು ಬಿಡದೆ ಸಲವುವ । ಕರುಣಾವಂತುಟೊ ರಾಯಗದುಗಿನವೀರನಾರಯಣನ ... ... ... ... ॥೩೧॥

ಅಂತು ಸಂಧಿ ೧೫ ಕ್ಕೆ ಪದ ೮೨೫ ಕ್ಕಂ ಮಂಗಳಮಸ್ತು.

## ಹದಿನಾರನೆಯ ಸಂಧಿ.

ಸೂಚನೆ ॥ ವಿಪಿನದಲಿ ಪಾಂಚಾಲೆ ಭಕುತಿಯ । ತಪದಲಿರೆ ದೂರ್ವಾಸನುಗ್ರವ ।
ನಪಹರಿಸಿ ಹರಿ ಮರಳಿ ಹೊಕ್ಕನು ದ್ವಾರಕಾಪುರಿಯ ॥

ಪದ॥ ಕೇಳು ಜನಮೇಜಯಧರಿತ್ರೀ । ಪಾಲ ಪಾಂಡುಕುಮಾರಕರುವಿಪಿ । ನಾಲಯದೊಳನುಭವಿಸಿದರು ಸಂವತ್ಸರಾಷ್ಟಕವ ॥ ಲೀಲೆ ಮಿಗೆಯೈತಂದು ಯಮುನಾ । ಕೂಲದಲಿ ವರತೀರ್ಥಸೇವಾ । ಶೀಲರಿದ್ದರು ಸಕಲಮುನಿಜನಸಹಿತ ಹರುಷದಲಿ ॥೧॥ ಆಸುಯೋಧನನೇಕಛತ್ರವಿ । ಳಾಸದುರ್ವೀರಾಜ್ಯಪದವಿ । ವ್ಯಾಸವಿಭವದ ಸುಖದ ಸೌಖ್ಯವನನುಭವಿಸುತಿರಲು ॥ ಭೂಸುರವ್ರಜನಿಕರವರವಿ । ವ್ಯಾಸಮುನಿಜನಸಹಿತ ವರದೂ । ರ್ವಾಸಮುನಿಪತಿ ಬಂದು ಹೊಕ್ಕನು ಹಸ್ತಿನಾಪುರವ ॥೨॥ ಮುನಿಯ ಬರವನು ಕೇಳಿ ದುರ್ಯೋ । ಧನನು ಭೀಷ್ಮದ್ರೋಣಗೌತಮ । ಇನತನಯ ಗುರುಸೂನು ವಿದುರಾದಿಗಳನೊಡಗೊಂಡು ॥ ವಿನುತಭೂಸುರನಿವಹಕಾಂತಾ । ಜನದಕನ್ನಡಿಕಲಶವಾದ್ಯ । ಧ್ವನಿಸಹಿತಲಿದಿರಾಗಿ ಕಾಣಿಕೆಯಿತ್ತು ನಮಿಸಿದರು ॥೩॥ ವಂದನೆಯ ಕೈಕೊಳುತ ಗಂಗಾ । ನಂದನನ ಕೈವಿಡಿದು ಬರೆ ಕೃಪ । ಮುಂದೆ ಕರ್ಣಾದಿಗಳ ಗಡಣದಿ ಹೊಕ್ಕನರಮನೆಯ ॥ ಬಂದನಂಗನೆಸಹಿತ ನಮಿಸಿದ ।

ನಂಧನೃಪನನು ಹರಸಿ ಹರುಷದ । ಲಂದು ಮುನಿ ಮಂಡಿಸಿದನುನ್ನತಸಿಂಹಪೀಠದಲಿ ॥೪॥ ಹೊಳೆವ ಹೊಂಗಳಶೋದಕದಿ । ಮುನಿಕುಲಲಲಾಮನ ಪಾದಪದ್ಮವ । ತೊಳೆದು ಮಧುಪರ್ಕಾದಿಮನ್ನಣೆ ಯಿಂದ ಸತ್ಕರಿಸಿ ॥ ಬಳಿಕ ಕುಶಲವ ಕೇಳ್ದು ಮುನಿಸಂ । ಕುಲವನೊಲಿದಾದರಿಸಲಿತ್ತಲು । ವೊಲವು ಮಿಗೆ ಯೆಡೆಯಾದುದಾರೋಗಣೆಗೆ ಮುನಿ ಹೊಕ್ಕ ॥೫॥ ಷಡುರಸಾನ್ನದಲಾದರಣೆಯಿಂ । ದುಡು ಗೊರೆಗಳಿಂ ತುಷ್ಟಿಬಡಿಸಿದ । ಪೊಡವಿಪಾಲಕರುಷಿಗಳಷ್ಟಾಸ್ತಿತಿಸಾವಿರವ ॥ ಕಡುಸುಖದ ಸನ್ಯಾಸಿ ವೇಷದ । ಮೃಡನು ಮುದದಲಿ ಕೌರವನ ಮೈ । ದಡವಿ ಮೆಚ್ಚಿದೆ ಮಗನೆ ಬೇಡೊಲಿದುದನು ನಿನ ಗೆಂದ ॥೬॥ ಅರಸ ಕೇಳಂಗೈತಳದಲಿಹ । ಪರುಷವನು ಕಲ್ಲೆಂದು ಟಿಕ್ಕೆಯ । ಹರಳಿನಲಿ ಹರುಷಿಸುವ ಮೂಢಮನುಷ್ಯರಂದದಲಿ ॥ ಅರಸಕೌರವನೆಂಬನೆನಿಬರು । ವೆರಸಿ ಪಾಂಡವರರಸಿಯುಣ್ಣಲೊಡ । ನಿರದೆ ಕವಳವ ಬೇಡಿಯಭ್ಯಾಗತರು ನೀವೆಂದ ॥೭॥ ಭೂಪ ಕೇಳೆರಡುಂಟೆ ನಿನ್ನಾ । ಶಾಪವನು ಕೈಕೊಂ ಡೆನೆನುತ ಮ । ಹಾಪರಾಕ್ರಮಿಯೇಳಲೊಡನೆದ್ದುದು ನೃಪಸ್ತೋಮ ॥ ತಾಪಸರು ಬಳಿವಿಡಿದು ಬರೆ ಬಳಿಕಾ । ಪುರವ ಹೊರವಂಟು ಭವನಿರ್ಲೇಪ ಭೀಷ್ಮದ್ರೋಣರೆನು ಕಳುಹಿದನು ಮನೆಗಳಿಗೆ ॥೮॥ ಅಗಡುಕೌರವನೊಡ್ಡಿದನಲಾ । ವಿಗಡವನು ಮುನಿಯುಗ್ರರೋಷದ । ಸೆಗಳಿಕೆಗೆ ಪಾಂಡವರು ಸವಿದು ತ್ತ್ಯಾದರೆಕಟೆನುತ ॥ ದುಗುಡದಲಿ ಗಾಂಗೇಯವಿದುರಾ । ದಿಗಳು ಮನೆಯೊಳಗಿತ್ತ ಕೌರವ । ನಗುತ ಕರ್ಣಾದಿಗಳ ಗಡಣದಿ ಪೊಕ್ಕನರಮನೆಯ ॥೯॥ ಮರುದಿವಸ ಸತಿಯುಂಡಸಮಯವ । ನರಿದು ಮುನಿ ಪತಿ ಬರಲು ಕಪಟದ । ನಿರಿಗೆಯನು ಬಲ್ಲನೆ ಯುಧಿಷ್ಠಿರನೆದ್ದು ಸಭೆಸಹಿತ ॥ ಕಿರಿದೆಡೆಯಲಿದಿರಾಗಿ ಭಕುತಿಯ । ಹೊರಿಗೆಯಲಿ ಕುಸಿವಂತೆ ನೃಪಬಂ । ದೆರಗಿದನು ಮುನಿವರಗೆ ತನ್ನನುಜಾತರೊಡ ಗೂಡಿ ॥೧೦॥ ಕುಶಲವೇ ನಿಮಗೆನುತ ಲೈವರ । ನೊಸಲ ನಿಜಕರತಳದಲೆತ್ತುತ । ಲೊಸೆದು ಧೌಮ್ಯಾ ದ್ಯಖಿಳಭೂಸುರಜನವ ಮನ್ನಿಸುತ ॥ ಹೊಸಕುಶೆಯ ಪೀಠದಲಿ ಮುನಿವೇ । ಷ್ಟಿಸಿದನರ್ಘ್ಯಾಚಮನ ಪಾದ್ಯ । ಪ್ರಸರಮಧುಪರ್ಕಗಳ ಮಾಡಿ ಮಹೀಶನಿಂತೆಂದ ॥೧೧॥ ದೇಶ ಕಾನನ ವಸನ ವಲ್ಕಲ । ಭೂಸುರವ್ರಜವಾತ್ಮಜನವು ಪ । ಲಾಶಪರ್ಣವೆ ಪಾತ್ರೆ ಭೋಜನ ಕಂದಮೂಲಫಲ ॥ ಈ ಸರಿತ್ಪಾ ನೀಯಮಜ್ಜನ । ವಾಸವೇ ಗುಹೆ ಭವನ ರಾಜ್ಯವಿ । ಳಾಸವೆಮ್ಮದು ಜೀಯ ಚಿತ್ತೈಸೆಂದ ಯಮ ಸೂನು ॥೧೨॥ ಧಾರಿಣೀಪತಿ ಹೇಳಬಹುದುಪ । ಚಾರವೇಕಿದು ರಾಜ್ಯಪದವಿ । ಸ್ವಾತ್ರರವಾವುದು ರಾಜಋಷಿ ನಿನಗಾರು ಸರಿಯಿನ್ನು ॥ ಸಾರೆಯಾಯ್ತುಸ್ತ್ವಮಯಸಮಯಕು । ದಾರವನ್ನಿಯ ವಿವಿ ಧಪೀಡಾ । ಕಾರಕುಂಟೆ ಚಿಕಿತ್ಸೆಯೆಂದನು ಮುನಿ ನೃಪಾಲಂಗೆ ॥೧೩॥ ಆವಜನ್ಮದ ಸುಕೃತಫಲ ಸಂ । ಭಾವಿಸಿದುದೋ ನಿಮ್ಮ ಭರವಸೆ । ದಾವ ಪಡೆವನು ಕೊಟ್ಟೆನೆಂದನು ನೃಪತಿ ಕೈಮುಗಿದು ॥ ಆವಿಗಡ ಮುನಿ ಬಳಿಕನುಷ್ಠಾ । ನಾವಲಂಬನಕತ್ತ ಯಮುನಾ । ದೇವಿಯರ ಹೊಗಲಿತ್ತ ನೃಪ ಕರಸಿದನು ದುರುಪದಿಯ ॥೧೪॥ ಅರಸಿಯಾರೋಗಿಸಿದಭಾವವ । ಬರವಿನಲಿ ನೃಪನರಿದು ಅರಸನ । ಹರುಷವ ಡಗಿತು ಧೈರ್ಯ ಸೃಕ್ಕಿತು ವೃಷ್ಣನಯನಾಂಬು ॥ ಉರಿಹೊಡೆದಕೆಂದಾವರೆಯವೋಲ್ । ಕರಕುವಡೆ ದುದು ಮುಖ ಕಪೋಲಕೆ । ಕರವನಿಟ್ಟನು ಮುಂದುಗೆಟ್ಟು ಮಹೀಶ ಚಿಂತಿಸಿದ ॥೧೫॥ ತುಡುಕಿ ಸುರ ಪನ ಸಿರಿಯ ಶರಧಿಯ । ಮಡುವಿನಲಿ ಹಾಯ್ಕಿದನು ರೋಷವ । ಹಿಡಿದರೀಗಳೆ ಸುಟ್ಟು ಬೊಟ್ಟಿಡು

ವನು ಜಗತ್ತ್ರಯವ ॥ ಮೃಡ ಮುನಿದು ಕೋಪಿಸಲಿ ಶಾಪವ । ಕೊಡಲಿ ನಾನದಕಂಜೆನೆನ್ನಯ । ನುಡಿಗನೃತ ಸಂಭಾವಿಸಿತಲಾ ಕೆಟ್ಟೆ ನಾನೆಂದ ॥೧೬॥ ಏನಿದೇನೆಲೆ ನೃಪತಿ ಚಿತ್ತ । ಗ್ಲಾನಿಯನು ಬಿಡು ನಿನ್ನ ವಚನಕೆ । ಹಾನಿಯುಂಟೇ ಸದೆವೆ ಸುರಪನ ಸಗ್ಗಗಿಗ್ಗವನು ॥ ಆನೆ ವರವರಿದೆಳೆದು ತಹೆ ಸುರ । ಧೇನುವನು ನಿಮ್ಮಡಿಗೆನುತ ಪವ । ಮಾನಸುತ ನಿಜಗದೆಯ ಜಡಿದನು ಬೇಗ ಬೆಸಸೆನುತ ॥೧೭॥ ಬರಿಯನುಡಿಯೇಕಕಟ ನಿಮ್ಮಯ । ಹೊರಿಗೆವಾಳನು ಕೃಷ್ಣನಾತನ । ಮರೆಯಹೊಕ್ಕರಿಗುಂಟೆ ದೋಷ ದರಿದ್ರ ಮೃತ್ಯುಭಯ ॥ ಮರೆದಿರೈ ಸೆಳೆಸೀರೆಯಲಿ ಸತಿ । ಯೊರಲಲಕ್ಷಯವಿತ್ತು ತನ್ನನು । ಮೆರೆದ ಮಹಿಮಾರ್ಣವನ ಭಜಿಸುವುದೆಂದನಾಥೌಮ್ಯ ॥೧೮॥ ಕ್ಷತ್ರತೇಜದತೀವ್ರ ಪಾತನಿ । ಮಿತ್ತನಿಮಗಂಜನು ಸುರೇಶ್ವರ । ಸತ್ಯ ಕೆಡುವರೆ ಸಾರೆಯಿದೆಲಾ ಕೌರವನ ನಗರ ॥ ಸತ್ಯವಾರಿಯ ಸುರಭಿಗಳುಪಿದ । ಕಾರ್ತವೀರ್ಯಾರ್ಜುನನ ಕಥೆಯನು । ಮತ್ತೆ ಹೇಳುವೆ ಭಜಿಸು ಕೃಷ್ಣನನೆಂದನಾಥೌಮ್ಯ ॥೧೯॥ ನಾಮವನು ನಂಬಿದಮಹಾತ್ಮರ । ನಾಮವನು ನೆನೆದವರು ಪಡೆವರು । ಕಾಮಿತವನೆಲೆನಿಮ್ಮನೆಲೆ ನಿಮಗರಿಯಬಾರದಲೇ ॥ ನಾಮನಿಮ್ಮಲಿ ಕೃಪೆ ವಿಶೇಷವು । ಕಾಮಿನಿಗೆ ಕರಗುವನು ಕೃಷ್ಣನು । ಯಾಮಿಹಿಳೆ ಭಜಿಸುವುದು ಬೇಗದಲೆಂದನಾಥೌಮ್ಯ ॥೨೦॥ ಭೂಸುರರ ಕಳಕಳವೆ ನೃಪನಾ । ಕ್ಲೇಶವನು ಪವಮಾನಸುತನಾ । ಕ್ರೋಶವನು ನರನಾಟವನು ಮಾದ್ರೇಯರುಪಟಳವ ॥ ಆಸರೋಜಾನನೆ ನಿರೀಕ್ಷಿಸು । ತಾಸುರದದುಃಖದಲಿ ಮುನಿಮಂ । ತ್ರೋಪದೇಶದ ಬಲುಮೆಯಿಂದವೆ ನೆನೆವಳಚ್ಯುತನ ॥೨೧॥ ಮುಗುದೆಮಿಗೆ ನಿಂದಿರ್ದು ಸಮಪದ । ಯುಗಳದಲಿ ಸೂರ್ಯನ ನಿರೀಕ್ಷಿಸಿ । ಮುಗಿದುಕೈಗಳ ಮಿಗಿಲೆ ಯೆವೆಯನು ಮುಚ್ಚಿ ನಾಸಿಕವ ॥ ನೆಗಹು ಪುಳಕಾಂಬುಗಳು ಮೈಯುಲಿ । ಬಿಗಿದು ಪೊನಲಾಗಿರಲು ಹಿಂಮೆಟ್ಟಿ । ಗೊಗುಪಕ್ಕುಂತಳದಬಲೆ ಕಾಮಿಸಿ ನೆನೆದಳಚ್ಯುತನ ॥೨೨॥ ಶ್ರೀರಮಾವರ ದೈತ್ಯಕುಲಸಂ । ಹಾರ ಭಕ್ತಜನಾರ್ತಿಪರಭವ । ದೂರ ಸಕಲಚರಾಚರಾತ್ಮಕ ದುಷ್ಟಕಂಸಹರಾ ॥ ಚಾರುಗುಣಗಂಭೀರ ಕರುಣಾಕಾರ ವಿಹಿತವಿಚಾರಪಾರಾ । ವಾರ ಹರಿ ಮೈದೋರೆನುತ ಹಲುಬಿದಳು ಲಲಿತಾಂಗಿ ॥ ನೀಲಕಂಠನ ನೇತ್ರವಹ್ನಿ । ಜ್ವಾಲೆಗಾಹುತಿಯಾಗಿ ಮಗ್ನದ । ಕಾಲಕಾಮನ ಪಥವ ಪಡೆದರು ಪಾಂಡುನಂದನರು ॥ ಏಳುದಿವ್ಯೈ ಯೆನ್ನನುಡಿಯನು । ಪಾಲಿಸೈ ಸಂಕಲ್ಪವಳಿದೊಡೆ । ಹಾಳು ಹೊರುಪುದು ಕೃಷ್ಣ ಮೈದೋರೆಂದಳಿಂದುಮುಖಿ ॥೨೪॥ ಹಿಂದೆ ನಾಸಾಪಾಯದಿರುಬಿನ । ಬಂಧನವ ಬಿಡಿಸಿದೆಯಲ್ಲೈ ಗೋ । ವಿಂದ ಶರಣಾನಂದಕಂದ ಮುಕುಂದ ಗುಣವೃಂದ ॥ ಇಂದು ರುದ್ರನು ತಪ್ಪಸಾಧಸ । ಬಂದೊಡೆಮ್ಮನುಕಾವರಾರೆಲೆ । ತಂದೆ ನೀನೇಗತಿಯೆನುತ ಹಲುಬಿದಳು ಲಲಿತಾಂಗಿ ॥೨೫॥ ಅರಸುವೆನೆ ಪರಿಪೂರ್ಣ ಕೇಳೆಂ । ದರುಹುವೆನೆ ಸರ್ವಜ್ಞ ನಾಕೆಂ । ದೊರಲಲಾರೆನು ತಾಯಿ ನೀನೆಮಗಾವು ಶಿಶುಗಳಲೇ ॥ ಕುರುಹುದೋರೈ ಕೃಷ್ಣ ಕರುಣವ । ಕರೆದು ಕಳೆಯಲು ಭಕುತರಾರ್ತಿಯ । ನರವಿಪ್ರುಳಿಘುರಟ್ಟರಾರುಂಟೆಂದಳಿಂದುಮುಖಿ ॥೨೬॥ ಮುನ್ನವೇ ಮುನಿದಂಬರೀಷನ । ಬೆನ್ನನೆತ್ತಲು ಹರನ ನೇತ್ರದ । ವಹ್ನಿಯೊಳಗುದಯಿಸಿದ ಕೆಂಗಿಡಿ ಸುಡಲು ಕಂಗೆಡುತ ॥ ಉನ್ನತೋನ್ನತ ಕೃಷ್ಣರಕ್ಷಿಸು । ಪನ್ನಗಾಸನ ಹಲಯೆ ರಕ್ಷಿಸು । ಅನ್ಯಗತಿಯೆನಗಾರೆನುತ ಹಲುಬಿದಳು ಭೂಪಾಲ ॥೨೭॥ ಬಳಿಕ ನಿನ್ನಯವರಸುದರ್ಶನ । ಸುಳಿವುದೋರಲು ಕೋಟಿಸೂರ್ಯರ । ಬೆಳಗು ಬೀರಲು ಹೊತ್ತಿವು

ರಿವುರಿಲೋಕವಮೂರರಲಿ ॥ ಬಲುಬಿಸಿಲು ಬಾಯ್ತಾಂತಚಂದ್ರಿಕೆ । ಹೆಳಗೆನಲು ಘನರೋಷವನ್ನಾಯ । ಬೆಳಗು ಬೀರುತುದು ಚಕಿತಚಂದ್ರಮನಾದ ದೂರ್ವಾಸ ॥೨೮॥ ಅಗಿದುಬೆಂಬತ್ತಿದೊಡೆ ಮುನಿಪರೊ । ಜಗವನೆಲ್ಲವ ತೊಳಲಿ ಭಕುತಿಯ । ಬಿಗುಹಿನಲಿ ಮೈಯಿಕ್ಕ ಸುತಿಸಾರೂಪ್ಯಮಾನವಲಿ ॥ ಹೊಗಳಿದೊಡೆ ಹಿಂಗಿದವಲಾ ಸುರ । ರುಗಳುಘೋಯೆನಲಂಬುರುಹನ । ಬೆಗಡ ಬಿಡಿಸಿದ ಕೃಷ್ಣ ಮೈವೋರೆಂದಳಿಂದುಮುಖಿ॥೨೯॥ ಅವನಿಪತಿ ಕೇಳಖಿಳನಿಗಮ । ಸ್ತವಕೆ ತಾನೆಡೆಗುಡದ ಮಹಿಮಾ । ರ್ಣವನನೇಕಭವಂಗಳಲಿ ಭಜಿಸಿದರೆಹೊ ನಿನ್ನವರು॥ ಯುವತಿಯಕ್ಕೆಯ ಸೈರಿಸದೆ ಯಾ। ದವಶಿರೋಮಣಿ ಸುಳಿದನಾಪಾಂ। ಡವರು ಕಂಡರು ದೂರದಲಿ ಖಗರಾಜಕೇತನವ ॥೩೦॥ ಮುಗುಳುನನೆಗಳ ಹೂಂಗುವಂಗದ। ನಗೆಮೊಗದೊಳಾನಂದಬಿಂದುಗ । ಳೊಗುವಕಂಗಳ ಹೊತ್ತುಹರುಷಸ್ಪಂದಸಂಪ್ರುಟದಾ ॥ ಬಗೆಯಬೆರಸದ ಕರವಸದೊಳಾ । ನಗೆಯೊಳೆಡೆಗೊಂಡಮಳಜನ್ಮದ । ಮೊಗದ ಪಾಂಡವರೆರಗಿದರು ಧೌಮ್ಯಾದಿಗಳುಸಹಿತ ॥ ರಥವನಿಳಿದಸುರಾರಿ ಸುಮನೋ । ರಥವಿಡಿದು ಬಪ್ಪಂತೆ ಕುಂತೀ । ಸುತರ ನಿಜಭುಜವಾರಿ ತಕ್ಕೈಸಿದನು ಹರುಷದಲಿ ॥ ಕ್ಷಿತಿಯಮರರಾಶೀರ್ವಚನಸಂ । ಸ್ತುತಿಗೆ ತಲೆವಾಗುತ್ತ ಮಿಗೆ ದ್ರು । ಪದಿಯ ಹೊರೆಗೈದಿದುದುಘೋಯೆಂದುದಸುರ ಸ್ತೋಮ ॥೩೧॥ ಧ್ಯಾನಗೋಚರನಾಗಿ ವನಿತೆಯ । ಮಾನಸದಲಿಹಪರಮಹಂಸನು । ಮಾನುಷಾಕೃತಿಯಾಗಿ ತೋರಿದಬಾಹ್ಯರಚನೆಯಲಿ ॥ ಮಾನಿನಿಯ ಮೈದಡವಿ ಚಿಂತೆಯ । ದೇನು ತಂಗಿ ಲತಾಂಗಿ ಹೇಳೌ । ಮೌನಮುದ್ರೆಯದೇನೆನಲು ಕಂದೆರೆದಳಿಂದುಮುಖಿ ॥೩೨॥ ಉಬ್ಬಿದಳು ಹರುಷದಲಿ ದುಗುಡದ । ಕೊಬ್ಬು ಮುರಿದುದು ಪುಳಕವಾರಿಯೊ । ಳೊಬ್ಬುಳಿಯೊಳೊಡೆಹಾಯ್ದು ನಿಂದವು ನಯನವಾರಿಗಳು ॥ ಸಭ್ಯತಾಲತೆ ಹೂತು ಪಸರಿಸಿ । ಹಬ್ಬಿ ಫಲವಾದಂತೆ ಕಾಯುವ । ನಿಬ್ಬರದಲೀಡಾಡಿದಳು ಹರಿಪದಪಯೋಜದಲಿ ॥೩೩॥ ಧರಣಿಯನು ಬಿಡದಳೆದು ಹೆಚ್ಚಿದ। ಚರಣವಿದು ಸುರನದಿಯ ಸೃಜಿಸಿದ। ಚರಣವಿದು ಕಲ್ಲಾದಹಲ್ಯಾಶಾಪನಿರುಹರಣ॥ ಚರಣವಿದು ಕಾಳಿಂಗಮರ್ದನ। ಚರಣವಿದು ಶಕಟಪ್ರಭಂಜನ। ಚರಣವಿದೆಲಾಯೆನುತ ಕೊಂಡಾಡಿದಳು ಹರಿಪದವ ॥೩೪॥ ಸ್ತೋತ್ರಕೀಗಳು ಸಮಯವೇ ಹೇ। ಳೇತಕೀಸ್ತುತಿತಂಗಿ ಚಿತ್ತದೊಳಾತುರವಿದೇನೆನುತ ಹಿಡಿದೆತ್ತಿದನು ಮಸ್ತಕವ॥ ಬೀತತರುಶುಕನಿಕರಕೀವುದೆ। ಔತಣವಸಲೆ ತುಷ್ಟಿಬಡಿಸುವ। ರೀತಿಯನು ನೀ ಬಲ್ಲೆಯೆಂದಳು ಕಮಲಮುಖಿನಗುತ ॥೩೫॥ ಶೌರಿ ಕೇಳ್ ಸಾಕ್ಷಾತ್ಶಿವನವ। ತಾರವಹದೂರ್ವಾಸಮುನಿ ಪರಿ। ವಾರಸಹಿತೈತಂದೊಡಭ್ಯಾಗತೆಯನ್ನಪನಿತ್ತ ॥ ತೀರಿತಕ್ಷಯದನ್ನ ವಿಂದುಮ । ಹಾಮುನೀಂದ್ರಗುಪಾರ ನಿನ್ನಯ । ವೀರಮನ್ನಿದುನನೆಂದು ಬಿನ್ನೈಸಿದಳು ನಳಿನಾಕ್ಷಿ ॥೩೬॥ ನಾವು ಹಸಿದೈತಂದೊಡೀಪರಿ । ದೇವಿ ನಾನಾದೂರ ದೂರುವು । ದಾವುದುಚಿತವು ಹೇಳೆನಲು ನಡನಡುಗ ನೈಮಾಗಿದು ॥ ದೇವ ನಿಮ್ಮಯ ಹಸಿವು ಕಳೆವೊಡೆ । ಭಾವಶುದ್ಧಿಯಭಕುತಿಬೇಹುದು । ನಾವು ಚಂಚಲಚಿತ್ತರೆಂದಳು ಕಮಲಮುಖಿ ನಗುತ ॥೩೭॥ ಮೊತ್ತುಗಳು ಸೊಗಸುವುದೆ ಹಸಿವಿಂ । ದಾತುರರಿಗೆಲೆತಂಗಿತಾರೌ । ಪ್ರೀತಿವಿದರೊಳಿದಿತ್ತುದೇ ಕ್ಷುಧೆಗಮೃತಪುಂಜವದು ॥ ಏತಕೀಜಂಜಡವೆನಲು ಜಲ । ಜಾತಮುಖಿ ಕಂಪಿಸುತ ಕುಮುದಾ । ರಾತಿ ಕೊಟ್ಟಸ್ಥಾಲಿಯನು ತಡವಿದಳು ಕರದಿಂದ ॥೩೮॥ ಕಂಡು ಕಿಂಚಿತ್ಪಾಕಶೇಷವ । ಕೊಂಡು ಬಂದೊಡೆ ಕೃಷ್ಣನದ ಕೈ । ಕೊಂಡು ಸವಿದನು ತಣಿದು ತಲೆದೂಗಿದನು ತೇಗಿದನು ॥ ಪಾಂಡವರ

ಪತಿಕರಿಸಿ ನಲಿವುತ । ಚಾಂಡನುಡಿದನು ಹೃದಯಕ್ಷುಧೆಯನು । ಖಂಡಿಸಿದೆಲಾಯೆನುತ ಕೊಂಡಾಡಿದನು ದ್ರೌಪದಿಯ ॥೪೦॥ ಅರಸ ಕೇಳೀಚೆಯಲಿ ಮುನಿದು । ಬ್ಬರದ ತನುವಿನ ತಳಿತರೋಮದ । ಭರದ ತುಷ್ಟಿಯ ಬಳಿಯತೇಗುವಹಿಗ್ಗುವೆಳ್ಳಿಗಳ ॥ ಕೊರಳಿನುಡರುವಹೊಟ್ಟೆಗಳ ಋಷಿ । ವರರು ಸಹ ದೂರ್ವಾಸಮುನಿಯ । ಚ್ಚರಿಯವಾಳುತ ತನ್ನೊಳುಲಿದನು ಮುರಹರನ ಬರವ ॥೪೧॥ ಬಂದನೇ ಗೋವಿಂದಭಕುತರ । ಬಂಧುವಲ್ಲಾ ಆತ್ರನೊಳು ಮನ । ಸಂದಮನುಜರ ಸಣಸಮಾಣಿಪರಾರು ಭುವನದಲಿ ॥ ಎಂದೆನುತ ದೂರ್ವಾಸಮುನಿಪತಿ । ಬಂದು ಕಂಡನು ಪರ್ಣಶಾಲೆಯ । ಲಂದು ಕುಂತೀಸುತಸಹಾಯನ ಕೃಷ್ಣರಾಯನನು ॥೪೨॥ ಕಾಣುತಿದಿರೆದ್ದ ಸುರಮರ್ಗನ । ಕಾಣಿಕೆಯ ಕೊಟ್ಟೆರಗಿ ಹೋಹೋ । ಸ್ಥಾಣುವಿನ ಬರವೆತ್ತಣಿಂದಾಯ್ತೆನುತ ಕೈಮುಗಿಯೆ ॥ ಮಾಣು ಮಾಧವ ನಿಲ್ಲು ಮಾನವ । ಸಾಣೆಯದನಾಟಕದ ನುಡಿಯಿದು । ಜಾಣನೀನಹೆಯೆನುತ ಮುನಿ ಹಾಯ್ದಪ್ಪಿದನು ಹರಿಯ ॥೪೩॥ ಯತಿಗಳೈತರೆ ಗಾರುಹಸ್ತ್ಯ । ಪ್ರತತಿ ವಂದಿಸಬೇಹುದಾಪ । ದ್ಗತಿಯ ತೋರುವಪಂಥವೈಸಲೆ ನೀನು ವಂದಿಪುದು ॥ ಅತಿಸಹಜವೈ ಕೃಷ್ಣ ಕುಳ್ಳಿರು । ಸುತಿಶಿರೋಮಣಿ ಕುಳ್ಳಿರವ್ಯಾ । ಹತಗ್ರಹಸ್ಥನು ಕುಳ್ಳಿರೆನುತವೆ ಮುನಿಪ ಮಂಡಿಸಿದ ॥೪೪॥ ತುಂಬಿ ಕುಳ್ಳಿರ್ದಖಿಳಮುನಿನಿಕ । ರುಂಬಸಭೆಯೊಳಗಿದ್ದಮುನಿಪಂ । ಗಂಬುಜಾನನೆ ನಮಿಸೆ ಹರಸಿದನೈದೆಯಾಗೆನುತ ॥ ಹಂಬಲಿಸುತಿಹನಿಗಮಶಾಸ್ತ್ರಗ । ಳಿಂಬುಗಾಣದಗಾಧದೈವದ । ಬೆಂಬಳಿಯಲಿರಲಿನ್ನದಾವುದಸಾಧ್ಯನಿಮಗೆಂದ ॥೪೫॥ ವೈವಶವ ಮಾಡದಿರಲೇ ಪರ । ದೈವವನು ಕುರುಕುಲದಬೇರನು । ಕೊಯ್ವನೀಹರಿ ಒಳಿಸಲಿಸಿ ಭೀಮಾರ್ಜುನಾಸ್ತ್ರದಲಿ ॥ ಕಾವನೈ ನಿಮ್ಮೈವರನು ಕೈ । ಗಾವನೇ ಪರರಾಜ್ಯಲಕುಮಿಯ । ಕೈವಿಡಿವಸಂಕಲ್ಪಸಿದ್ಧಿಪುದೆಂದನಾಮುನಿಪ ॥೪೬॥ ಎಲೆಮುನೀಶ್ವರ ನಿಮ್ಮನುಡಿಯ । ಸ್ಖಲಿತವಿದು ಯುಹಪರದಗತಿನಿ । ನ್ನೊಲವು ಕೃಷ್ಣನ ಕರುಣೆಯಿರಲಿನ್ನಾವುದರಿದೆಮಗೆ ॥ ನಳಿನಸಖನಪರಾಂಬುರಾಶಿಯ । ನಿಲುಕಿತೈದನೆ ಹಸಿದುದೀಮುನಿ । ಬಳಗವಾರೋಗಣೆಗೆ ಚಿತ್ತವಿಸೆಂದ ಯಮಸೂನು ॥೪೭॥ ಬೇರುನೀರೂಡಾಗೆ ತಣಿಯವೆ । ಭೂರುಹದಶಾಖೋಪಶಾಖೆಗ । ಳೋರಣೆಯ ನಿಜದೇಹವಂಗೋಪಾಂಗನೆಂದೆನಿಪ ॥ ಶ್ರೀರಮಣಸಂತೃಪ್ತನಾದೊಡೆ । ಬೇರೆಭೋಜನವೆಮಗೆ ಬೇಹುದೆ । ಭೂರಮಣ ಕೇಳೆನುತ ಮತ್ತಿಂತೆಂದನಾಮುನಿಪ ॥೪೮॥ ವೃಷ್ಟಭೋಜನದಿಂದನಾವ್ಸಂ । ತುಷ್ಟರಾಗೊಲಿದುದನು ಬೇಡೆನೆ ದುಷ್ಟಕೌರವ ನಮ್ಮನಟ್ಟಿದ ಧೂರ್ತವಿದ್ಯೆಯಲಿ ॥ ಕಷ್ಟವೇ ಕೈಗಟ್ಟಿತಲ್ಲದೆ । ಕೆಟ್ಟರೇ ಪಾಂಡವರು ಹರಿಪದ । ನಿಷ್ಠರನು ನಿಲುಕುವನೆ ದುರ್ಜನನೆಂದನಾಮುನಿಪ ॥೪೯॥ ಎಂದು ಹರಿಯನು ಹೊಗಳಿ ನಾನಾ । ಚಂದದಲಿ ಪಾಂಡವರ ತಿಳುಹಿ ಮುನೀಂ । ದ್ರತನ್ನಾಶ್ರಮಕೆ ಸರಿದನು ತಾಪಸರುಸಹಿತ ॥ ಅಂದು ಕುಂತೀನಂದನರಿಗಾ । ನಂದಸುಖವನು ಕರೆದು ದೇವಮು । ಕುಂದಬಿಜಯಂಗೈದು ಹೊಕ್ಕನು ದ್ವಾರಕಾಪುರಿಯ ... ... ... ॥೫೦॥

ಅಂತು ಸಂಧಿ ೧೬ ಕ್ಕೆ ಪದ ೮೫೪ ಕ್ಕಂ ಮಂಗಳಮಸ್ತು.

## ಹದಿನೇಳನೆಯ ಸಂಧಿ.

ಸೂಚನೆ॥ ರಾಯಕುರುಪತಿ ವಿದುರಗುರುಗಾಂ । ಗೇಯಕೃಪರಲ್ಲೆನಲು ಪಾಂಡವ ।
ರಾಯ ವಿಪಿನಕೆ ಘೋಷಯಾತ್ರೆಯ ನೆವದಲೈತಂದ ॥

ಕೇಳು ಜನಮೇಜಯಧರಿತ್ರೀ । ಪಾಲ ನಿಜನಗರಕ್ಕೆ ಲಕ್ಷ್ಮೀ । ಲೋಲ ಬಿಜಯಂಗೈದನಿತ್ತಲು ಪಾಂಡುನಂದನರು ॥ ಮೇಲುದುಗುಡದ ಮುಖದಚಿಂತೆಯ । ಜಾಳಿಗೆಯ ಜಡಮನದಲಿದ್ದರು । ಸೂಳುಸುಯ್ಲಿನ ಹೊಯ್ಲನಾಸಾಪುಟದ ಬೆರಳಿನಲಿ ॥ ಸೂರೆವೋದುದು ರಾಜ್ಯಸಿರಿ ಮುಮ್ಮಾರುವೋದುದು ಲಜ್ಜೆಬಿಟ್ಟವ । ಸೇರಿ ಕಾನನಕಿಳಿದು ವನದಿಂದಡರಿ ಗಿರಿಕುಲವ ॥ ತಾರುತಟ್ಟಿಗೆಹಾಯ್ವಸುಖಮನ । ದೇರು ಮಸಗಿ ಮುರಾರಿ ಕೃಪೆಯನು । ತೋರಿಯಡಗಿದನಕಟವಿಧಿಯೆಂದಳಲಿದನು ಭೂಪ ॥೧॥ ಎಹಗೆ ಸೈರಿಸಿನಿಂದರೋ ವ್ರಜ । ಮಹಿಳೆಯರು ಕೃಷ್ಣಾಂಘ್ರಿವಿರಹದ । ದಹನದಾಪಸ್ತಂಭಕೌಷಧ ದಾನಶೌಂಡರಿಗೆ ॥ ಅಹಹ ಕೊಡುವೆನು ನನ್ನನೆನುತು । ಮ್ಮಹದ ಮೊನೆ ಮುರಿದವನಿಪತಿ ನಿ । ಸ್ಪೃಹೆಯಲಿದ್ದನು ರಾಜಕಾರ್ಯವಿಹಾರಲೀಲೆಗಳ ॥೨॥ ಅರಸ ಕೇಳೈ ಹಸ್ತಿನಾಪುರ । ವರಕೆ ಕಾಮ್ಯಕವನದಿನೊಬ್ಬನು । ಧರಣಿಸುರನೈತಂದು ಕರ್ಣಾದಿಗಳಮನೆಗಳಲಿ ॥ ಇರಲಿರಲು ಧೃತರಾಷ್ಟ್ರಭೂಪತಿ । ಕರೆಸಿ ಬೆಸಗೊಂಡನು ಯುಧಿಷ್ಠಿರ । ನಿರವನಟವೀಕ್ಷೇತ್ರಪರಿಭ್ರಮಣೈಕಭೀಷಣವ ॥೩॥ ವಿವಿಧವನಪರ್ಯಟ್ಟಣದಾಯಾ । ಸವನು ತತ್ಪರಿಸರದ ಕಂಟಕ । ನಿವಹವನು ದಾನವರ ದಕ್ಕಡತನದ ಘಟ್ಟಣೆಯ ॥ ಅವಚಿದಾಪತ್ತಿನ ಮನಃಖೇ । ದವನು ಖೋಡಿಯ ಖತಿಯ ಲಜ್ಜಾ । ವಿವರಣವನರುಹಿದನು ಧೃತರಾಷ್ಟ್ರವನೀಶಂಗೆ ॥೪॥ ಈ ವಿಧಿಯೆ ಪಾಂಡವರಿಗಕಟಾ । ಸಾವು ಸೇರದು ತನಗೆ ತಾವ್ಸು । ನ್ನಾವನೋಹಿಯನಳಿದೆನೋ ಭವಭವಸಹಸ್ರದಲಿ ॥ ಈವಿಲಾಸವನೀವಿಭವಸಂ । ಭಾವನೆಯನೀಪಡವನೀವು । ತಾ್ರವಳಿಯ ಸುಡಲೆನುತ ಮಿಗೆ ಮರುಗಿದನು ಧೃತರಾಷ್ಟ್ರ ॥ ಮರಳಿಮರಳಿ ಯುಧಿಷ್ಠಿರನ ಮನ । ದಿರವ ಭೀಮನ ಖತಿಯ ಪಾರ್ಥನ । ಪರಿಯ ನಕುಲನ ನಿಲವನಾಸಹದೇವನಾಯತವ ॥ ತರಳೆಯುಬ್ಬೆಯನಾಪುರೋಹಿತ । ವರನ ಭೇದವನಾಮುನೀಂದ್ರರ । ಪರಗತಿಯನಡಿಗಡಿಗೆ ಕೇಳಿದು ಮರುಗಿದನು ನೃಪತಿ ॥೫॥ ಅಳಲುವೀಧೃತರಾಷ್ಟ್ರನುರುಕೆಳ । ಕಳವಕೇಳಿದು ಕರ್ಣಶಕುನಿಗ । ಳುಲಿದು ತಂಬುಲ ಸೂಸೆ ನಕ್ಕರು ಹೊಯ್ದು ಕರತಲವ ॥ ಖಳಶಿರೋಮಣಿಗಳು ಮಹೀಶನ । ನಿಳಯಕೈತಂದರು ಸುಲೋಚನ । ಜಲವ ಸೆರಗಿನೊಳೊರಸಿ ನುಡಿದರು ಭೇದವೇಕೆನುತ ॥೬॥ ಭೇದವೇಕೆಂದೇನು ಮಕ್ಕಳು । ಬೀದಿಗರವಾದರು ವನಾಂತದ । ಲಾದಚಿತ್ತವ್ಯಥೆಯ ಕೇಳಿದು ಬೆಂದುದೆನ್ನೊಡಲು ॥ ಆದಿವಾಕರನಂತೆ ನಿಚ್ಚಲು । ಕಾದುಮುದಯಾಸ್ತಮಯದಲಿ ದನು । ಜಾರಿ ಖಳರೊಡನಟವಿಗೋಟಲೆಯೆಂದುಬಿಸುಸುಯ್ದ ॥೭॥ ಈಕುಮಾರಕರಲ್ಲಲೇ ಕುಂ । ತೀಕುಮಾರರು ನವೆಯುತಿದ್ದರೆ । ಸಾಕುಸಾಕೆಳಲೇಕೆ ಸತ್ವಾಧಿಕರು ಸಜ್ಜನರು ॥ ಈಕುರುಕ್ಷಿತಿಪತಿಯೊಳೆನ್ನಾ । ಯ್ಯೆಕಲವವುಂಟೇ ವಿಚಾರಿಸಿ । ಶೋ

ಕವನು ಬಿಡು ಬಯಲಡ್ಡೊಂಬೇಕೆಂದನಾಶಕುನಿ ॥೧೦॥ ವಿಷಯಲಂಪಟರೆಕ್ಷಲೀಲಾ । ವ್ಯಸನಕೋಸುಗ ವೊತ್ತೆಯಿಟ್ಟರು । ವಸುಮತಿಯನನ್ಯಾಯವುಂಟೇ ನಿನ್ನ ಮಕ್ಕಳಲಿ ॥ ಉಸುರಲಮ್ಮದೆ ಸತ್ಯವಸುಪಾ । ಲಿಸಲು ಹೊಕ್ಕರರಣ್ಯವನು ತ । ದ್ವ್ಯಸನಫಲಭೋಗಿಗಳಿಗಳಲುವಿರೇಕೆ ನೀವೆಂದ ॥೧೧॥ ಅವರು ಕುಹಕೋಪಾಯದಲಿ ಕೌ । ರವರ ಕೆಡಿಸದೆ ಮಾಣರರ್ಜುನ । ಪವನಜರ ಭಾಷೆಗಳ ಮರೆದಿರೆ ಜೂಜು ಸಭೆಯೊಳಗೆ ॥ ಅವರು ಸುಜನರು ನಿಮ್ಮವರು ಖಳ । ರವರು ಸದಮಲಸಾಧುಗಳು ಕೌ । ರವರಸಾಧುಗಳೆಂದು ತೋರಿತೆ ನಿಮ್ಮ ಚಿತ್ತದಲಿ ॥೧೨॥ ಗಳಹನೆನಿಲಜಗಾಢಗರ್ವದ । ಹುಳುಕನರ್ಜುನನವರ ದೇಹದ । ನೆಳಲು ಮಾದ್ರೀಸುತರು ಮಕ್ಕಳು ವಿಪುಳಸಾಹಸರು ॥ ಅಳಲಬಹುದರಸಂಗೆ ಗಳಿಗೆಗೆ । ತಿಳಿವನವದಿರ ಸಂಗದಲಿ ಮನ । ಮುಳಿವನೆರಡಟ್ಟಿಹನು ಧರ್ಮಜನೆಂದನಾಶಕುನಿ ॥೧೩॥ ಅವರವನವಾಸದ ದಿನಂಗಳು । ನವಗೆ ಸುದಿನ ಸ್ವರಾಜ್ಯಾನುಭವವೆವ । ರವಧಿ ತುಂಬಿದಬಳಿಕ ನೋಡಾ ಸಾಧುಗಳ ಪರಿಯ ॥ ನಿವಗೆ ದುರ್ಯೋಧನನ ಸಾಮ್ರಾ । ಜ್ಯವ ನಿರೀಕ್ಷಿಸುವರ್ತಿಯಲಿ ಪಾಂ । ಡವರ ಹಂಬಲ ಮರೆವುದುಚಿತವು ಕರ್ಣಹೇಳೆಂದ ॥೧೪॥ ಬೇವುತಾಪರಿಪಕ್ವವಾದೊಡೆ । ಹಾವುಮೆಕ್ಕೆಗೆ ಸಾಕ್ಷಿಗಡ ಧ । ರ್ಮಾರ್ಣವಪಾನದ ಕವಿಗೆ ಕಾಪಾಟಗಳ ನೆರವಿಗಡ ॥ ಆವಿಡಂಬದ ಶಕುನಿಕರ್ಣರು । ಜೀವಸಖರ್ರೆ ತಪ್ಪೊಳಗೆ ದು । ರ್ಭಾವಭೀಕರಹೃದಯ ನುಡಿದನು ಕರ್ಣನರಸಂಗೆ ॥೧೫॥ ಆಹ ಶಕುನಿಯ ಮಾತಿನಲಿ ಸಂ । ದೇಹವೇ ಪಾಂಡವರು ಬಂಧು । ದ್ರೋಹಿಗಳು ತಮ್ಮವಧೆ ತುಂಬಲು ಕೇಡ ತಹರೆಂಬ ॥ ಈಹದನು ತಪ್ಪುವುದೆ ನೀವತಿ । ಮೋಹದಲಿ ಬಿಷ್ಣೆ ಬೀಸಿಬಿದ್ದರ । ಕಾಮ್ಯಕರು ಕೌರವರ ಕೆಡಿಸುವರೆಂದನಾಕರ್ಣ ॥ ಈಸಿರಿಯ ಸುಗ್ಗಿಯಲಿ ನಿನ್ನವ । ರೀಸುಹೆಚ್ಚುಗೆಯಾಗಿ ಬದುಕಿದ । ರ್ಕೈಸುವನು ನೀ ನೋಡಿ ಹಿಗ್ಗದೆ ಪಾಂಡುನಂದನರು ॥ ಗಾಸಿಯಾದರು ಗುಟ್ಟಬೆಟ್ಟದ । ಹ್ರಸರದೊಳೆಂದಳಲಿ ಮರುಗುತ । ಸೂಸಿದ್ರೆ ಸಾಹಿತ್ಯಭಾಷ್ಪಂಬುನೆಂದನಾಕರ್ಣ ॥೧೭॥ ಸೊಗಸು ತಳಿತುದು ತರಳಮನ ತಳ । ವೆಳಗುಚಿದಂತಾಯ್ತು ವರೊಲವು ಕಾ । ಡಿಗೆಯ ಕೆಸರೊಳಗದ್ದ ನೀಲದಸರಿಗೆ ಸರಿಯಾಯ್ತು ॥ ಮುಗುಳುಗರಗಳೆ ಬಾಷ್ಪಬಿಂದುವ । ನುಗುರುಕೊನೆಯಲ ಮಿಡಿದು ಕರ್ಣನ । ಹೊಗಳಿದನು ಬಳಿಕೇನು ಸಿಂಗಿಯಲುಂಟೆ ಸವಿಯೆಂದ ॥೧೮॥ ಹೋಗಲಾಪಾಂಡವರ ಚಿಂತೆಯ । ನೀಗಿದೆನು ನೀವಿನ್ನು ನೆನೆವು । ದ್ಯೋಗವೇನೆನೆ ನಗುತ ನುಡಿದರು ಕರ್ಣಶಕುನಿಗಳು ॥ ಈಗಳೀವಿಭವದವಿಲಾಸದ । ಭೋಗದಗ್ಗಳಿಕೆಗಳ ಭುಜದ । ಪಾರ್ಥರವನವರಿದ್ದವನದಲಿ ತೋರಬೇಕೆಂದ ॥೧೯॥ ನಾಡೊಳಗೆ ತುರುಹಟ್ಟಿಯಲಿ ಹೊಲ । ನಾಡಿ ಹೆಚ್ಚಿದಗೋಕದಂಬವ । ನೋಡುವುದು ನೆವ ಕುರುಪತಿಯು ಗಾಢದಸಗಾಡಿಕೆಯ ॥ ನೋಡಿ ನಸಿಯಲಿ ಪಾಂಡುಸುತರವ । ರಾಡುಗಾಡಿನ ಹೊಲನ ಹೊರೆಯಲಿ । ಕೂಡೆ ತನು ಪರಿಮಳದಲರಮನೆಯಂಗನಾನಿವಹ ॥೨೦॥ ವನದ ಚಿಮ್ಮಂಡೆಗಳ ಘೋರ । ಧ್ವನಿಗಳಲಿ ಕಿವಿ ಮೃಗಕುಲದ ಸೋಗ । ಡಿನಲಿ ನಾಸಿಕ ರೌದ್ರಭೂತಾಲೋಕನದಿ ನಯದ ॥ ಜನಪರುರೆ ಬೆದರುವರು ನಿನ್ನರ । ಮನೆಯ ಸತಿಯರ ನೇವುರದ ನು । ಣ್ದನಿಗಳಲಿ ತನಿಗಂಧದಲಿ ರೂಪುಗಳ ಸೊಗಸಿನಲಿ ॥೨೧॥ ಸಿರಿಗೆ ಸಫಲತೆಯಹುದು ನಾನಿದ । ನರಿಯೆ ನೀವವರಿದ್ದವಿಪಿನಾಂ । ತರಕೆ ಗಮಿಸುವುದುಚಿತವೇ ಮನಮುನಿಸು ನೆರೆಬಲಿದು ॥ ಕೆರಳಿದೊಡೆ ಕಾ

ಹುದು ಭೀಮನ । ದುರುಳತನವೀ ಕೌರವೇಂದ್ರನ । ಹುರುಳು ಹುರಿಯೇರುವುದು ಮತವಲ್ಲೆಂದನಂಧ ನೃಪ ॥೨೨॥ ಹೊಕ್ಕು ಹೊಗೆವವರೊಡನೆ ಸೆಣಸಿನ । ಸಾಣೆಯಿಕ್ಕವು ಮಸೆವಕದನವ । ಕಾಣೆವೆಮ್ಮರಿ ಕೆಯಲಿ ಸಲುಗೆಯ ಸ್ವಾರ್ಥಸಾಮದಲಿ ॥ ರಾಣಿಯರ ರಹಿಯಿಂದ ರಂಜಿಸಿ । ಜಾಣಿನಲಿ ಬಹೆವೆರಸ ನಿಮ್ಮಡಿ । ಯಾಣೆಯಿಂದೊತ್ತಬಡಿಸಿವರು ನೃಪಕರ್ಣಶಕುನಿಗಳು ॥೨೩॥ ಪರಿಮಿತದಲೀವಾರ್ತೆ ನೆಗ ಳಿದು । ದರಮನೆಯಲಿದನೈದೆ ಕೇಳಿದು । ಗುರುವಿದುರಗಾಂಗೇಯಕೃಪರಳಲಿದರು ತಮ್ಮೊಳಗೆ ॥ ಕರೆಸಿ ನುಡಿದರು ಕರ್ಣಸೌಬಲ । ಕುರುಪತಿಗಳಿಗೆ ಘೋಷಯಾತ್ರಾ । ಭರವನೆಂದೆವು ಹೋಹುದನುಚಿತವೆಂ ದರನಿಬರಿಗೆ ॥೨೪॥ ಅವಗಡೆಯಸಾಭೀಮ ನೀವೆಂ । ಬವರು ನಿಸ್ಸೀಮರು ಚತುರ್ಬಲ । ನಿವಹ ನಿಲ್ಲದು ತುಡುಕುವುದು ತುಳಿವುದು ತಪೋವನವ ॥ ವಿವಿಧಋಷಿ ಗಳನೇಡಿಸುವರೀ । ಯುವತಿಯರು ಕೈಕಾಲುಮೆಟ್ಟಿನ । ಬವರಗಂಟಿಕ್ಕುವುದು ಲೇಸಲ್ಲೆಂದನಾಭೀಷ್ಮ ॥೨೫॥ ಸಾರದೆವು ನಿಮ್ಮೊಡನೆ ಬಾ ರೆವು । ದೂರಲಾಗದು ನಿಮ್ಮನಿನಿಬರ । ಮೀರಿದೊಡೆರಣಭಂಗ ತಪ್ಪದು ಹೋಗಬೇಡೆನಲು ॥ ದೂರ ತಾರೆವು ನಿಮಗೆ ಸಾಕ್ಷ್ಯ । ಮೀರಿ ನಡೆಯೆವು ಕಾರ್ಯಗತಿಯಲಿ । ಜಾರುಜಡತೆಯ ಮಾಡೆವೆಂದನು ಕೌರವರರಾಯ ॥೨೬॥ ಆದೊಡಲ್ಲಿ ಶುಭಾಶುಭದ ಫಲ । ಬೀದಿವರಿಸುವುದೈಸಲೇ ನಿಮ । ಗೀದುರಾ ಗ್ರಹವೇಕೆ ಕಾಬಿರಿ ಫಲವನಗ್ರದಲಿ ॥ ಆದುದಾಗಲಿ ಹೋಗಿಯೆನೆ ದು । ರ್ಭೇದಗರುವಗ್ರಂಥಿ ಕೆಲ್ಲು ಷವಿ । ನೋದತೀಲರು ಭುಜವ ಹೊಯ್ದರು ನೋಡಬಹುದೆನುತ ॥೨೭॥ ಕೇರಿಯಲಿ ಸಾರಿದರು ಕೊಟ್ಟರು । ವಾರಕವನೆಬಲಾಜನಕೆ ಭಂ । ಡಾರಸವೆದುಡು ಗಣಿಕೆಯರಿಗಾಭರಣದಾನದಲಿ ॥ ಸಾರಪರಿ ಮಳವಸ್ತುಗಳ ಬಲು । ಭಾರಣೆಯ ಪೆಟ್ಟಿಗೆಗಳೊಟ್ಟಿತು । ತೇರುಗಳಮೇಲೊದಗಿತಕ್ಷೋಹಿಣಿಯ ರಾಣಿಯರು ॥೨೮॥ ಬಿಗಿದಬೀಯಗಬದ್ಧರದಬಂಡಿಗಳು ರಾಣೀವಾಸದಂದಣ । ತೆಗೆದು ವೊರಲುವ ಕಂಚುಕಿಗಳುಗ್ಗಡದರಭಸದಲಿ ॥ ಗಗನವಡಗಿತು ಪಲ್ಲವದ ಸ । ತ್ತಿಗೆಯ ಸಾಲಿನ ಝಲ್ಲರಿಯಝಾ । ಡಿಗಳಲಾಡುವಚಮರಸೀಗುರಿಗಳ ಪತಾಕೆಯಲಿ ॥೨೯॥ ಸವಡಿಯಾನೆಯಮೇಲೆ ಗಣಿಕಾ । ನಿವಹ ದಂ ಡಿಗೆಗಳಲಿ ಕೆಲಬರು । ಯುವತಿಯರು ಕೆಲರಶ್ವಚಯದಲಿ ರಥನಿಕಾಯದಲಿ ॥ ಯುವತಿಮಯವ್ರೋ ಸೃಷ್ಟಿ ಗಣಿಕಾ । ಯುವತಿಯರ ನೆಲನೀಮದೋ ದಿಗುವಿವರಕರೆದುದೊ ಕಾಂತೆಯರನೆನೆ ಕವಿದುದಗಲ ದಲಿ॥೩೦॥ಅರಸಕೇಳ್ಯೆ ಹತ್ತುಸಾವಿರ । ಕರಿಘಟಾವಳಿಯೆಂಟುಸಾವಿರ । ವರವರೂಥವು ರಾವುತರ ವಾಘೆ ಯಲಿಹಯಕೋಟಿ ॥ ಬಿರುದಿನಗ್ಗದಭಟರ ಸಂಖ್ಯೆಯ । ನರಿಯೆನಿಂತಿದು ಘೋಷಯಾತ್ರೆಯ । ಪರು ಠವಣೆಗೊದಗಿದಚತುರ್ಬಲವವನಿಪಾಲಕನ ॥೩೧॥ ನೆರೆದುದಗಣಿತವಂದಿಗಳು ಕವಿ । ವರರು ವಿದ್ವಾಂ ಸರು ವಿಧಾವಂ । ತರು ಸುನರ್ತಕಕಥಕಪರಿಹಾಸಕರು ಪಾಠಕರು ॥ ಚರರು ಮಲ್ಲರು ಬೇಂಟೆಗಾ ರೆರು । ಪರಿಜನಾವಳಿಸಹಿತ ನಗರಾಂ । ತರದ ಪಯಣದಮೇಲೆಪಯಣದಲರಸನೈತಂದ ॥೩೨॥ ಅರಸ ಕೇಳಿವರತ್ತ ಪಯಣದ । ಭರದಿನೈತರೆ ಮುಂದೆ ವಾಯಸ । ವೆರಡು ತಮ್ಮೊಳು ಕದನಮುಖದಲಿ ವಾ ಮದೆಸೆಗಾಗಿ ॥ ಪರಿದವಲ್ಲಿಂಬಳಿಕ ಹಸುಬನ । ಸರುವು ವಾಮದಿ ಗರ್ದಭನ ಬಲ । ಕರಿಯಹಕ್ಕಿಯ ತಡೆಯು ಮುನ್ನಿಸದೈದಿದನು ಭೂಪ॥೩೩॥ಅರಸ ಕೇಳ್ಯೆ ದ್ವೈತವನ ಬಂ। ಧುರನದೀನದತೀರದಲಿ । ಸರ ಸಿಯಲಿ ದೀರ್ಘಿಕೆಗಳಲಿ ನದದಲಿ ವರತಟಾಕದಲಿ ॥ ಬೆರಸಿ ಬಿಟ್ಟುದು ಕೂಡೆ ಪಾಳೆಯ । ವರಮನೆಯ

ಗುಡಿ ನೆಗಹಿದವು ವಿ । ಸ್ತರಿಸಿದವು ಮಂಡವಿಗೆಚ್ಚಂಡ್ರೆಯಭದ್ರಭವನಗಳು ॥೩೪॥ ಕರೆಸಿದನು ಕಿಲ್ಲಾರಿಗಳನಾ । ದರಿಸಿ ಹಟ್ಟಿಯ ತುರುಗಳೆಲ್ಲವ । ತರಿಸಿ ನೋಡಿದನಲ್ಲಿ ಹಿಂಡಿನ ಕೋಟಿಸಂಖ್ಯೆಗಳ ॥ ಹರಿವ ಹಾರುವ ಪಂತಿಸುವ ಸ್ಸೆ । ವರಿವ ಮೆರಳುವ ಮುರಿವ ನಿಲುವೆಳೆ । ಗರುಗಳನು ನೋಡಿದನು ನಗುತ ನರೇಂದ್ರನೊಲವಿನಲಿ ॥ ಬೆಳೆವಿಣಿಲಮಿಡಿಗಲೆವಬಾಲದ । ನೆಲಕೆ ನಿಗುರುವಗಂಗೆದೊವಲಿನ । ಹಲಗೆಬೆನ್ನಿನ ಸಿಡಿಲಮರಿಯೆನೆ ಮೆರವಹುಂಕೃತಿಯ ॥ ಕೆಲವಿದಿರುಬರೆಲಯದಿಯದ್ರಿಯ । ಹಳಚುವಂತಿರೆ ಹರಿವಹಾರುವ ।ಸಲಗನಳ್ಳಿರದಾಡುತಿರ್ದವು ಹಿಂಡುಹಿಂಡಿನಲಿ ॥ ತರಿಸಿ ಹೋರಿಯಗವಿಯ ಗೂಳಿಯ ಬರಿಸಿದನು ಕೆಲಕೆಲವಕೃಷಿಕರಿ।ಗಿರಿಸಿದನು ಗೋಲಕ್ಷವಿತ್ತನು ವಿಪ್ರಸಂಕುಲಕೆ॥ಕರೆಸಿ ಕೊಟ್ಟನು ಭಟ್ಟರಿಗೆ ಮ । ಲ್ಲರಿಗೆ ವಿಟರಿಗೆ ನಟವಿಧಾವಂ । ತರಿಗೆ ಬಹುವಿಧಬಹಳವಂದಿಗೆ ಮಾಗಧವ್ರಜಕೆ ॥೩೭॥ ಅಂಗಚಿತ್ತವನಿತ್ತು ಮೊದಲಸ । ಮಂಗನನು ಪತಿಕರಿಸಿ ಹಿಂಡಿನ । ವಂಗಡದ ಗೋಪಾಲನಿಕರಕೆ। ಕೊಟ್ಟನುಡುಗೊರೆಯ ॥ ಹಿಂಗಿದವು ತುರು ಬೇಟೆಯಾಡಿವ್ಯ । ಗಂಗಳಿಗೆ ಮದ್ದರೆದು ಕಡಿವಾ । ಗಂಗಳನು ಕೊಡಿಸಿದನು ಪರಿವಾರಕೆ ವಿನೋದದಲಿ ... ... ॥೩೮॥

ಅಂತು ಸಂಧಿ ೧೭ ಕ್ಕೆ ಪದ ೯೧೩ ಕ್ಕಂ ಮಂಗಳಮಸ್ತು.

---

## ಹ ದಿ ನೆಂ ಟ ನೆ ಯ ಸಂ ಧಿ .

---

ಸೂಚನೆ॥ ಪರಿವಿಡಿಯಲಾದ್ವೈತವನದಲಿ । ಬೆರಸಿ ಬಿಟ್ಟುದು ಬೀಡು ಗಂಧ ।
ರ್ವರಿಗೆ ಕೌರವಬಲದೊಡನೆ ಮಸೆದುದು ಮಹಾಸಮರ ॥

---

ಕೇಳು ಜನಮೇಜಯಧರಿತ್ರೀ । ಪಾಲ ತುರುಪಳ್ಳಿಗಳ ನೋಡಿ ವ । ನಾಳಿ ತಪ್ಪದೆ ಬೇಂಟೆಯಾಡಿ ಸಮಸ್ತಬಲಸಹಿತ ॥ ಲೀಲೆ ಮಿಗಲಾಪಾಂಡವರ ವನ । ವೇಲೆಯಲಿ ನಿಸ್ಸಾಳರಭಸದ। ಸೂಳ ಸಂಕೇತದಲಿ ನೃಪ ಬಿಡಿಸಿದನು ಪಾಳೆಯವ ॥೧॥ ಲಾಯ ನೀಡಿತು ಮುಂದೆ ರಾವುತ। ಪಾಯಕರಿಗೆ ಡವಂಕ ಮಂತ್ರಿಪ । ಸಾಯತರು ಕರ್ಣಾದಿಗಳಿಗೆಡೆಯಾಯ್ತು ಬಲವಂಕ ॥ ರಾಯನರಮನೆವೃಶ್ಚಿಕದ ಕಳ । ಶಾಯತದ ಬೆಳಗಿನಲಿ ಪಾಂಡವ। ರಾಯರೆಲೆವನೆಗಳನು ನಗುತಿದ್ದುದು ನವಾಯಿಯಲಿ॥ ಅರಸ ಕೇಳೈ ಕೌರವೇಶ್ವರ । ನರಸಿಯರು ಲೀಲೆಯಲಿ ಶತಸಾ । ವಿರಸಖೀಜನಸಹಿತ ಹೊರವಂಟರು ವನಾಂತರಕೆ ॥ ಸರಸಿಜದ ನಿಜಗಂಧದಲಿ ತನು । ಪರಿಮಳವ ತಕ್ಕೈಸಿ ವನದಲಿ । ತರಳೆಯರು ತುಂಬಿದರು ಮರಿದುಂಬಿಗಳ ಡೊಂಬಿನಲಿ ॥೩॥ ಕೆಲರು ಹೊಂದಾವರೆಯ ಹಂತಿಯ । ಕೊಳನ ಹೊಕ್ಕರು ಬಿಲ್ವಫಲಗಳ ನಿಲುಕಿ ಕೊಯಿದರು ಕೊಡಹಿ ಮೊಲೆಗಳ ಮೇಲುದಿನ ನಿರಿಯ ॥ ಕೆಲರು ಹೂಗೊಂಚಲಿನ ತುಂಬಿಯ । ಬಳಗವನು ಬೆಂಕೊಂಡರುಲಿವರ । ಗಿಳಿಗೆ ಹಾರದ ಬಲೆಗಳನು ಹಾಯ್ಕಿದರು ಕೊಂಬಿನಲಿ ॥೪॥ ಪಾರಿವದ ಪಾಢ್ಯರನು ನಮಿಸುತ । ವಾರನಾರಿಯರಾನನದಲಿ ಚ । ಕೋರಿಗಳ ಚಾಳೈಸಿ

ದರು ಕೆಲರಂಗಪರಿಮಳಿಕೆ ॥ ಸಾರಿದೊಡೆ ಮೊರದುಂಬಿಗಳ ಸುಖ । ಪಾರಣೆಯ ಬೆಸಗೊಳುತ ನಗುತ
ವಿ । ಕಾರಿಗಳು ಮೆಡ್ಡೈಸಿದರು ನೃಪ ಮುನಿನಿಜಾಶ್ರಮವ ॥೫॥ ನೇವುರದ ದನಿ ಘಟ್ಟಿಸಿತು ವೇ । ದಾವ
ಳಿಯ ನಿರ್ಘೋಷವನು ಸಾ । ನಾವಿಭೂಷಣಕಾಂತಿ ಕೆಣಕಿತು ಮುನಿಸಮಾಧಿಗಳ ॥ ಆವಧೂಜನದಂ
ಗಗಂಧ । ಪ್ರಾವರಣ ಹುತಚರುಪುರೋಡಾ । ಶಾವಳಿಯ ಸೌರಭವ ಮುಸುಕಿತು ವನದವಳಯದಲಿ॥
ಹೊಕ್ಕರಿವರಾಶ್ರಮವ ತುರುಗಿದ । ತಕ್ಕರಂತಃಕರಣತುರಗಕೆ । ದುಕ್ಕುಡಿಯನಿಕ್ಕಿದರು ತಿರುಹಿದರೆರ
ಡುವಾಘೆಯಲಿ ॥ ಸಿಕ್ಕಿದವು ಧಾಳಿಯಲಿ ಧೈರ್ಯದ । ದಕ್ಕಡರ ಮನಹರಹಿನೊಳ್'ಹಾ । ಯಿಕ್ಕಿದರು
ಕಡೆಗಣ್ಣಬಲೆಗಳ ಮುನಿಮೃಗಾವಳಿಗೆ ॥೭॥ ಸುಕುಸುಮವ ಮುಟ್ಟಿದರು ಧೌತಾಂ । ಶುಕದೊಳಗೆ
ತಂಬುಲವ ಕಟ್ಟಿದ । ರಕಟುಪಾಧ್ಯರ ಮೋರೆಯೆನುತೇಡಿಸುತ ಬೆರಳಿನಲಿ ॥ ಚಕಿತಧೃತಿಯರು ದೀಕ್ಷಿತರ
ಚಂ । ಡಿಕೆಗಳನು ತುಡುಕಿದರು ಮುನಿಪಟು । ನಿಕರಶಿರದಲಿ ಕುಣಿಸಿದರು ಕುಂಚಿತಕರಾಂಗುಲಿಯ ॥೮॥
ರಾಯರೆಂಬವರಿಲ್ಲಲಾ ಸ್ವಾ । ಧ್ಯಾಯ ಕೆಟ್ಟುದು ಮುಟ್ಟಿದರು ಪಾ । ಧ್ಯಾಯರನು ಶೂದ್ರಿಯರು
ಸೆಳೆದರು ಮೌಂಜಿಮೇಖಲೆಯ ॥ ಹಾಯಿದರು ಯಜ್ಞೋಪವೀತಕೆ । ಬಾಯಲೆಂಜಲನಿಡಿಯಬರು
ವರ । ಲಾಯೆನುತ ಬಿಟ್ಟೋಡಿದರು ಸುಬ್ರಹ್ಮಚಾರಿಗಳು ॥೯॥ ಕೆದರಿದರು ಗಡ್ಡವನುಪಾಧ್ಯರು । ಬೆದ
ರಿನಿಂದರಿದೇನಿರವು ಮಾ । ಡಿದವಿಟಾಳವ ಹೇಳುವೆವು ಕುಂತೀಕುಮಾರಂಗೆ ॥ ಇದು ಮಹಾಋಷಿಸೇ
ವಿತಾಶ್ರಮ । ವಿದರ ಶಿಷ್ಟಾಚಾರವನು ಕೆಡಿ । ಸಿದವರೇ ಕ್ಷಯವಹರು ಹರಹರಯೆಂದರಾದ್ವಿಜರು ॥೧೦॥
ಹೇಳಿದೊಡೆ ಕುಂತೀಕುಮಾರರು । ಕೇಳಿ ಮಾಡುವುದಾವುದೋ ವನ । ಪಾಲಕರು ತಾವಿಂದು ಪೃಥ್ವೀ
ಪಾಲನೆಮ್ಮೊಡೆಯ ॥ ಹೇಳಿ ಬಳಿಕರ್ಜುನನ ಭೀಮನ । ಧಾಳಿಯನು ತಹುದೆನುತಲತಿಘಾ । ತಾಳಿ
ಯರು ಮುನಿಜನವ ಬೈದರು ಬಹುವಿಕಾರದಲಿ ॥೧೧॥ ಶಾಂತರಿದೆ ವಿಜಿತೇಂದ್ರಿಯರು ವೇ । ದಾಂತ
ನಿಷ್ಠರು ಸುವ್ರತಿಗಳ । ಶ್ರಾಂತವೇದಾಧ್ಯಯನಯಾಜ್ಞಿಕಕರ್ಮಕೋವಿದರು ॥ ಸಂತತಾನುಷ್ಠಾನಪರ
ರನ । ದೆಂತು ನೀವಾಕ್ರಮಿಸುವಿರಿ ವಿ । ಭ್ರಾಂತರೌ ನೀವೆನುತ ಜರಿದರು ಕಾಮಿನೀಜನವ ॥೧೨॥
ಒದೆದು ಪದದಲಿ ಕೆಂದಳಿರತೋ । ರಿದೆವಶೋಕೆಗೆ ಮಧ್ಯಗಂಡೂ । ಷದಲಿ ಬಕುಳದ ಮರನ ಭುಲ್ಲವಿ
ಸಿದೆವು ಕುರುವಕಕೆ ॥ ತುದಿಮೊಲೆಯ ಸೋಂಕಿನಲಿ ಹೂದೋ । ರಿದೆವು ಕಣ್ಣೋರೆಯಲಿ ತಿಲಕವ ।
ಕದುಕಿದೆವು ನೀವಾವಘನಪದವೆಂದರಬಲೆಯರು ॥ ಬಟ್ಟಮೊಲೆಯ ಸೋಂಕಿನಲಿ ಶಾಂತರ । ತಲೆಕೆಳಕ
ಮಾಡುವೆವು ಕಡೆಗ । ಣ್ಣಲಗಿನಲಿ ಕೊಯ್ದೊತ್ತುವೆವು ವಿಜಿತೇಂದ್ರಿಯರ ಮನವ ॥ ಎಳನಗೆಗಳಲಿ
ವೇದಪಾಠರ । ಕಲಕಿ ಮಿಗೆ ವೇದಾಂತನಿಷ್ಠರ । ಹೊಳಸಿ ಪ್ರವಾಳಿಸುವೆವೆಮಗಿದಿರಾರು ಲೋಕ
ದಲಿ ॥೧೪॥ ಎನುತ ಕವಿದಾದು ಮತ್ತೆ ಕಾಂತಾ । ಜನ ಸುಯೋಧನನರಮನೆಯ ಸೊಂ । ಪಿನ
ಸಖೀನಿಕುರುಂಬ ತುಂಬಿತು ವರತಪೋವನವ ॥ ಮನಸಿಜನ ದಳ ನೂಕಿತೇಳೇ । ಳೆನುತ ಚೆಲ್ಲಿತು ಮುನಿ
ನಿಕರ ನೃಪ । ವನಿತೆಯಿದಿರಲಿ ಸುಳಿದರಿವದಿರು ಮಂದಿ ಸಂದಣಿಸಿ ॥೧೫॥ ಈಕೆ ಪಾಂಡವಸತಿಕಣಾ
ತೆಗೆ । ಯೀಕೆಯತಿದಾರಿದ್ರಮಾನುಷ । ಯೀಕೆಯೆಲ್ಲೋಳಗಿಹಳು ರಾಣೀವಾಸವೆಂಬರಲೇ ॥ ಈಕೆಯ
ಹುದಲ್ಲಿದಕೆ ಪಣವೇ । ನೀಕೆ ಬಣಗಕಟೆಂದು ಕಾಂತಾ । ನೀಕ ತವೆಮ್ಮೊಳು ನುಡಿವುತಿದ್ದುದು ತೋರಿ
ಬೆರಳಿನಲಿ ॥೧೬॥ ಕುಣಿವರೆಂದುಗೆಕಾಲ ಝಣಝಣ । ಝಣಝಣತ್ಕೃತಿರಭಸ ಮಿಗೆ ಕಂ । ಕಣದ

ದನಿದೋರುವರು ನುಡಿನುಡಿ ಸಿಕ್ಕಿ ಕಂಠದಲಿ ॥ ಮಣಿಮಯದ ಕುಂಡಲವನಲುಗಿಸಿ । ಯೆಣಿಸುವಂತಿರೆ
ಕೊರಳಹಾರದ । ಮಣಿಗಳನು ಮುತ್ತುಗಳ ಮೆರೆವರು ಮುರಿದಮೌಳಿಯಲಿ ॥೧೭॥ ಬಳಿಯಲೈದಿತು
ಮುನಿಗಳಿವರುಪ । ಟಳವನೆರಸಂಗರುಹಿದರು ಪೆ । ಗ್ಗಳಿಸಿ ಭೀಮಂಗೆಂದರರ್ಜುನಯಮಳರಿದಿರಿನಲಿ ॥
ಉಳಿದರೆಮಗೀವನವಿಟಾಳ । ಪ್ರಳಯವಾಯುದು ಕಾನನಾಂತರ । ನಿಳಯದಲಿ ನಿಲಿಸೆಮ್ಮನೆಂದುದು ಸಕ
ಲಮುನಿನಿಕರ ॥೧೮॥ ಅರಸಲಾಕುರುರಾಯಸಾತನ । ಬರವು ತುರುಪಟ್ಟಿಗಳ ಗೋವಿ । ಸ್ತರಣಕೋ
ಸುಗವೈಸೆ ಪಾಳೆಯ ಸಾರ್ವಭೌಮನದು ॥ ಪರಿಸರದಲಿದ್ದುದು ವಿನೋದಕೆ । ತರುಣಿಯರು ಬರಲೇಕೆ
ನೀವ । ಬ್ಬರಿಸುವಿರಿ ನಮ್ಮವರಲಾಯೆಂದನು ಮಹೀಪಾಲ ॥೧೯॥ ಔಡುಗಚ್ಚಿದನಂಘ್ರಿಯಲಿ ನೆಲ
ಬೀಡು ಬಿಡಲೊದೆದನು ಕರಾಂಗುಲಿ । ಗೂಡಿ ಮುರಿದೌಕಿದನು ಖತಿಯಲಿ ನಿಜಗದಾಯುಧವ ॥ ನೋ
ಡಿದನು ಕುರುರಾಯನಲಿ ಹೊ । ಯ್ದಾಡಿ ಬರಬೇಕೆಂಬಭೀಮನ । ಮೋಡಿಯನು ನೃಪನರಿದು ಸಂತೈ
ಸಿದನು ಸಾಮದಲಿ ॥೨೦॥ ಕರೆಸಿದನು ನೃಪವಾರಿಕೇಳಿಗೆ । ವರವಧೂವರ್ಗವನು ಕ್ರೀಳಿಸು । ತಿರುಗಿತಂ
ಗಜಘಟ್ಟ ಝಣಝಣರವದ ರಭಸದಲಿ ॥ ಸರಿದಿಳಿವಗಿರಿಯೊಂಗುಕ್ಕೈಯಲಿ । ಸುರಿವರಳ ಮುಡಿಯೊಂ
ದುಕ್ಕೈಯಲಿ । ಭರದಿ ಗಮನಸ್ವೇದಜಲ ಮುಘುಮುಘಿಸೆ ದೆಸೆದೆಸೆಗೆ ॥೨೧॥ ಬಹುವೊಲೆಗಳಳ್ಳಿರಿಯಲೇ
ಕಾ । ವಳಿಗಳನು ಕೆಲಕೊತ್ತಿ ಮೇಲುದ । ಕಳಚಿ ನಡುಗಿಸಿ ನಡುವನಂಜಿಸಿ ಜಘನಮಂಡಲವ ॥ ಅಳಕ
ನಿಕರವ ಕುಣಿಸಿ ಮಣಿಕುಂ । ಡಲವನಲುಗಿಸಿ ಹಣೆಯ ಮುತ್ತಿನ । ತಿಲಕವನು ತನಿಗೆದರಿ ನಡೆದುದು
ಕೂಡೆ ಸತಿನಿವಹ ॥೨೨॥ ತಾರಕೆಗಳುಳಿದಂಬರದ ವಿ । ಸ್ತಾರವೋ ಗತಹಂಸಕುಲಕಾ । ಸಾರವೋ
ನಿರ್ಮಲತಪೋವನವೆನಲು ರಂಜಿಸಿತು ॥ ನಾರಿಯರ ದಳ ತಿರುಗಿದೊಡೆ ತನಿ । ಸೌರಭದದಳ ತೆಗೆಯ
ದಾಕಾಂ । ತಾರದೊಳಗೇನೆಂಬೆನಾಸೌಗಂಧಬಂಧುರವ ॥೨೩॥ ಅರಸ ಕೇಳೈ ವಾರಿಕೇಳಿಗೆ । ಕುರುಪ
ತಿಯ ನೇಮದಲಿ ಶತಸಾ । ವಿರಸರೋಜಾನನೆಯರೈದಿತು ವನವನಂಗಳಲಿ ॥ ಪರಿಮಳದ ಪಸರಣದ
ಪದ್ಮಾ । ಕರಸಹಸ್ರದ ಸಾಲ ಸುಮನೋ । ಹರಮಹೋದ್ಯಾನವನು ಕಂಡೈತಂದರಬಲೆಯರು ॥೨೪॥
ರಾಯಕುವರರು ಸಚಿವಮಂತ್ರಿಪ । ಸಾಯತರಮಕ್ಕಳು ಚಮೂಪರ । ನಾಯಕರ ನಂದನರು ವಿಟರು
ವಿನೋದಿಗಳು ಪುರದಾ ॥ ಆಯತಾಕ್ಷಿಯರೊಡನೆ ರಾವುತ । ಪಾಯಕರಸುತರಾಳಮೇಳ ನ । ವಾಯಿ
ಗಳ ನಾಗರಿಕರೈದಿತು ಕೋಟಿಸಂಖ್ಯೆಯಲಿ ॥೨೫॥ ತವಗ ತಳಿ ಮುಳುವೇಲಿ ಬಾಗಿಲ । ಜವಳಿಗದ
ಬೀಯಗದಲಿದ್ದುದು । ಬವಿಜವನವುದ್ದಂಡತರಪರಿಮಳದ ಪೂರದಲಿ ॥ ಯುವತಿಯರ ದಳ ನೂಕಿತು
ದಕೋ । ತ್ಸವವೃಥಾಕೇಳಿಯಲಿ ಕನಕೋ । ದ್ಭವಕವಾಟವನೊದೆದು ಕರೆದರು ಕಾಹಿನವರುಗಳ ॥೨೬॥
ಆರಿವರು ಕರೆವವರೆನುತಸುರ । ವೀರರೌಕಿತು ಬಾಗಿಲಲಿ ನೀ । ವಾರೆನಲು ತೆಗೆ ಕದವನರಿಯಾ ರಾಯ
ನರಮನೆಯಾ ॥ ವಾರನಾರಿಯರವನಿಪತಿಯ ಕು । ಮಾರರಿದೆ ಬೇಹವರು ಸರಸಿಯು । ವಾರಿಕೇಳಿಗೆ
ಬಂದೆವೆಂದರು ಗಜರಿ ಗರ್ಜಿಸುತ ॥೨೭॥ ಹೊಗಬಹುದೆ ಗಂಧರ್ವರಾಯನ । ಮುಗನವನವಿದು ನೋ
ಡಿದೊಡೆ ದೃಗು । ಯುಗಳದೆವೆ ಸೀವುದುಕಣಾ ಘಡ ಹೋಗಿಹೋಗಿಯೆನೆ ॥ ತೆಗೆ ವಿಕಾರವೆ ನಮ್ಮೊಡನೆ
ತೆಗೆ । ತೆಗೆ ಕದವ ಗಂಧರ್ವನಾರಿಗೆ । ಮುಗನದಾವವನೆನುತ ಹೊಕ್ಕರು ತಳಿಯ ಮುರಿದೊದೆದು ॥೨೮॥
ಒಳಲಿದವು ಕಹಳೆಗಳು ಕಾಹಿನ । ಸುರಭಟರು ನೆರೆದಸಿಮುಸುಂಡಿಯ । ಪರಶುಮುದ್ಗರಚಾಪಮಾರ್ಗ

ಣಾಸಬಳಸೂನಗೆಯ ॥ ಹರಿಗೆಖಡ್ಗದಲರಿಭಟರ ಚ । ಪ್ಪರಿಸಿದರು ಗಂಧರ್ವಭಟರಿಗೆ । ಕುರುಪತಿಯ ಸುಭಟರಿಗೆ ತೊಡಕಿತು ತ್ರೋಟಿ ತೋಪಿನಲಿ ॥೨೯॥ ಚೆಲ್ಲಿದರು ಚಪಳೆಯರು ಮುನಿಜನ । ವೆಲ್ಲ ಪಾಂಡವರಾಶ್ರಮದ ಮೊ । ಗ್ಗಲ್ಲಮೊನೆಗಣೆ ಮೊರೆದು ಮುರಿದವು ಮೊನೆಯ ಮುಂಬಿಗರ ॥ ಚೆಲ್ಲೆಗಂಗಳ ಯುವತಿಯರ ಸಾ । ನಲ್ಲಿ ಕಾಣೆನು ಕಾಮುಕರು ನಿಂ । ದಲ್ಲಿ ನಿಲ್ಲದೆ ಹರಿದರವನೀಪತಿಯ ಪಾಳೆಯಕೆ ॥೩೦॥ ಬರಿಯಮಕ್ಕಳ ತಂಡವೇ ಹೊ । ಕ್ಕಿರಿಪುದವದಿರನುರುಪಿ ದಿವಿಜರು । ಜರೆದು ನೂಕಿತು ತೋಪಿನೊಳಬಿದ್ದವರ ಹೊರವಡಿಸಿ ॥ ಮುರಿದು ತಳಿಗಳ ಬಲಿದು ಬಾಗಿಲ । ಹೊರಗೆ ನಿಂದರು ವಾರಿಕೇಳಿಯ । ಮರೆದು ಶೋಣಿತವಾರಿಕೇಳಿಗೆ ಬನ್ನಿ ನೀವೆನುತ ॥೩೧॥ ನೃಪಸುತರ ಪಡಿಪಲಕೆ ಬಂದಿತು । ವಿಪುಳಬಲ ಹಲ್ಲಣಿಸಿ ಹೊಯ್ಲೊ । ಯ್ಯಪಸರರ ಗಂಧರ್ವಸುಭಟರನೆನುತ ಸೂಟಿಯಲಿ ॥ ಕುಪಿತರರೆಯಟ್ಟಿದರು ತೋಪಿನ । ಕಪಿಗಳಾವೆಡೆ ಕಾಣಬಹುದೆನು । ತುಪಚರಿತರೊಳಸರಿಯೆ ಹೊಗಿಸಿದರವರ ನಾವೆನವ ॥೩೨॥ ಬಂದಬಲ ಹೇರಾಳ ತೆಗೆತೆಗೆ । ಯೆಂದು ತೋಪಿನಕಡೆಗೆ ಹಾಯಿದು । ನಿಂದು ನೆರಹಿದರದಟಗಂಧರ್ವರು ಭಟವ್ರಜವ ॥ ಬಂದುಪದುನಡುವನಕೆ ಕೌರವ । ವೃಂದವನು ಕರೆದರು ವಿನೋದಕೆ । ಬಂದರೈ ನಾರಾಚಸಲಿಲಕ್ರೀಡೆಯಿದೆಯೆನುತ ॥೩೩॥ ಮುರಿಯೆಸುತ ಗಂಧರ್ವಬಲ ಮು । ಕ್ಕುರಿಕಿ ಕೌರವಬಲವ ತತ್ತರ । ದರಿದು ತರಪರವಿಲ್ಲೆನಿಸಿ ಹೊಗಿಸಿದರು ಪಾಳೆಯವ ॥ ಹೊರಗುಡಿಯ ಹೊರಪಾಳೆಯದ ಭಟ । ರರುಹಿದರು ಕುರುಪತಿಗೆ ಖತ್ತಿಯುಲಿ । ಜರೆದು ಜೋಡಿಸಿ ಬಿಟ್ಟನಕ್ಷೌಹಿಣಿಯನಾಯಕರ ॥೩೪॥ ಹಲ್ಲಣಿಸಿತೀಚಾತುರಂಗವ । ದೆಲ್ಲ ಕವಿದುದು ಹೊಕ್ಕು ದಿವಿಜರ । ಚೆಲ್ಲಬಡಿದರು ಚಾಚಿದರು ತೋಪಿನ ಕವಾಟದಲಿ ॥ ನಿಲ್ಲದಾಕಿದರಂತಕನ ಪುರ । ದೆಲ್ಲೆಯಲಿ ಹೆಕ್ಕಳದ ಖಡುಗದ ಘುಲ್ಲಣೆಯ ಖಣಿಖಟಿಲಗಾಢಿಕೆ ಕಂಟಿಸಿತು ನಭವ ॥೩೫॥ ಬಲದ ಪದಘಟ್ಟಣೆಗೆ ಹೆಮ್ಮರ । ನುಲಿದು ಬಿದ್ದವು ಸಾಲಪೂಗಾ । ವಳಿಕಪಿತ್ಥಲವಂಗ ತುಂಬುರ ನಿಂಬ ದಾಳಿಂಬ ॥ ಫಲಪಲಾಶರಸಾಲತ್ರಮಿಗು । ಗ್ಗುಳ ಮಧೂಕಾಶೋಕ ಬಿಲ್ವಾ । ಮಲಕ ಜಂಬೀರಾದಿಗಳು ನುಗ್ಗಾಯ್ತು ನಿಮಿಷದಲಿ ॥೩೬॥ ಕದಡಿದವು ಸರರಸಿಗಳು ಕೆಡೆದವು । ಕದಳಿಗಳು ಗೊನೆಸಹಿತ ಮುಂಡಿಗೆ । ಮುದುಡಿ ನೆಲಕೊರಗಿದವು ಮಿರುಗುವನಾಗವಲ್ಲಿಗಳು ॥ ತುದಿಗೊನೆಯ ಚೆಂದೆಂಗು ಖರ್ಜೂ । ರದಲಿ ಕಾಣೆನು ಹುರುಳೆಸಾರಂ । ಗದ ವಿಶ್ರಾಮವನೇನನೆಂಬೆನು ನಿಮಿಷಮಾತ್ರದಲಿ ॥೩೭॥ ತೋಟ ಹುಡಿಹುಡಿಯಾಯ್ತು ಮುರಿದುದು ತೋಟಿಯಲಿ ನಮ್ಮವರು ಹಗೆಗಳ । ಘಾಟವವರಾಚೆಯಲಿ ದುರ್ಬಲ ನಮ್ಮದೀಚೆಯಲಿ ॥ ಆಟವಿಕದಳ ಹೊಯ್ದು ಮಿಂಡರ । ಮಿಾಟನೆತ್ತಿದರವರು ಕಾಹಿನ । ಕೋಟಲೆಗೆ ನಾವೊಲ್ಲೆವೆಂದರು ಚಿತ್ರಸೇನಂಗೆ ॥೩೮॥ ಅವರು ಮರ್ತ್ಯರು ನಮ್ಮದಕಟಾ । ದಿವಿಜರೀವಿಧಿಯಾದುದೇ ಕವಿ । ಕವಿಯೆನುತ ಬೇಹವರಿಗಿತ್ತನು ರಣಕೆ ವೀಳೆಯವ ॥ ಗವಿಯ ಗರುವರು ಗಾಢಿಸಿತು ಮಾ । ನವರ ಮರುಕಕೆ ಮುರಿದುದೀಸುರ । ನಿವಹ ಸುಡಲಾಹವವನೆನುತ್ತೈದಿದರು ಸೂಟಿಯಲಿ ॥೩೯॥ ಆತುದಿದು ತೋಪಿನಲಿ ಗಂಧ । ರ್ವಾತಿರೇಕವ ಸ್ಥೈರಿಸುತ ಪದ । ಘಾತಧೂಳೀಪಟಲ ಪರಿಚುಂಬಿಸಿಮುದಂಬರವ ॥ ಭೀತಿಬಿಟ್ಟುದೆ ಮನುಜರಿಗೆ ನ । ಮ್ಮಾತಗಳ ಕೂಡಹುದಲ್ಲೈ ಕಾ । ಲಾತುದೇ ಕಲಿತನವೆನುತಕೈಕೊಂಡರವಗಡಿಸಿ ॥೪೦॥ ಆರು ನಿಲುವರು ದೇವಲೋಕದ । ವೀರರಲ್ಲಾ ವಿಗಡರೆಸುಗೆಯ । ಭೂರಿಬಾಣದ ಹಿಂಡು

ತರಿದವು ಹೊಗುವಗಂಡಿಗರ ॥ ವಾರುವನ ಮುಖದಿರುಹಿದವು ಮದ । ವಾರಣಂಗಳ ಕೊಡಹಿದವು ಹೊಂ । ದೇರು ಮುಗ್ಗಿದವೊಗ್ಗು ಮುರಿದುದು ಮಿಗುವಕಾಲಾಳ ॥೪೧॥ ಮುರಿದುದಿದು ಗಂಧರ್ವಬಲ ಮಿ । ಕ್ಕುರುಬಿಕೊಂಡೇ ಬಂದುದಗ್ಗದ । ಗರುವರಳಿದುದು ಬರಿಯದುರುಯಶವುಳಿದುದರಸಂಗೆ ॥ ಕರಿತುರಗರಥಪಾಯದಳಹೆಣ । ಹೊರಳಿಗೆಟ್ಟಿತು ಪಾಳೆಯದ ಗೋಪುರದ ಹೊರಬಾಹೆಯಲಿ ನಿಂದುದು ಬಳಿಕೆ ಬೇಹವರು ॥೪೨॥ ಮುರಿದು ಬರುತದೆ ಜೀಯ ನಾಯಕ । ರುರಿವವರ ಬಲುಗಾಯದಲಿ ಕು । ಕ್ಕುರಿಸಿದರು ಗಂಧರ್ವರಿದೆ ಕಡೆವನದ ಕಾಹಿನಲಿ ॥ ಮೆರಳಿ ಪಾಳೆಯ ಬಿಡಲಿ ಮೇಣ್ತಾಗೆ । ಯಿರಿತಕಂಗೈಸುವರ ಬಿಡು ಕೈ । ಮರೆಯಬೇಡೆನೆ ಬೆರಳ ಮೂಗಿನಲರಸ ಬೆರಗಾದ ... ॥೪೩॥

ಅಂತು ಸಂಧಿ ೧೮ ಕ್ಕೆ ಪದ ೯೪೪ ಕ್ಕಂ ಮಂಗಳಮಸ್ತು.

## ಹತ್ತೊಂಭತ್ತನೆಯ ಸಂಧಿ.

ಸೂಚನೆ॥ ರಾಯದಳವನು ಮುರಿದು ಕೌರವ । ರಾಯನನುಜರು ಸಹಿತ ಗಗನಕೆ । ಹಾಯಿದನು ಗಂಧರ್ವಪತಿ ಸುರಪತಿಯ ನೇಮದಲಿ ॥

ಕೇಳು ಜನಮೇಜಯಧರಿತ್ರೀ । ಪಾಲ ವನಪಾಲಕರ ಜಗಳದೊ । ಳಾಳು ನೊಂದುದು ಧರೆಗೆ ಬಿದ್ದುದು ತೋಟತೋಹಿನಲಿ ॥ ಆಲಿಗಳ ಕೆಳ್ಳೋಟದೊಲಹಿನ । ಮಾಳಿಯುಬ್ಬೆಯ ಸೂಲ ದುಗುಡದ । ಜಾಳಿಗೆಯ ಜಡಮನದಲಿದ್ದನು ಕೌರವರರಾಯ ॥೧॥ ಜೀಯ ದುಗುಡವಿದೇಕೆ ದಿವಿಜರ । ರಾಯತಿಖಿಯನುನಿರುತಿಜಲಧಿಪ । ವಾಯುಧನದಶಿವಾದಿಗಳ ಸಾಹಸಕೆ ಮೂವಡಿಯ ॥ ರಾಯಭಟರಿದೆ ನೇಮಿಸಾ ಸುರ । ರಾಯನೂರಿನ ಹಾಡುಗರ ಹುಲು । ನಾಯಕರಿಗಿನಿತೇಕೆ ಖತಿ ಬೆಸಸೆಂದನಾಕರ್ಣ ॥೨॥ ನೇಮವಾಯಿತು ಸುಭಟರೊಳಗೆ ಸ । ನಾಮರೆದ್ದರು ಕರ್ಣಸೌಬಲ । ಭೂಮಿಪತಿಯನುಜಾತಬಾಹ್ಲಿಕ ಶಲ್ಯನಂದನರು ॥ ಸೋಮದತ್ತನ ಮಗ ಕಳಿಂಗ ಸು । ಧಾಮಚಿತ್ರಮಹಾರಥಾದಿ ಮ । ಹಾಮಹಿಮರನುವಾಯ್ತು ಗಜಹಯರಥನಿಕಾಯದಲಿ ॥೩॥ ನೂಕಿದರು ಮುಂಗುಡಿಯವರು ಬನ । ದಾಕೆಯಲಿ ಹೊಯ್ದರು ವಿರೋಧಿ ವಿ । ವೇಕಸರನಿಕ್ಕಿದರು ಸಿಕ್ಕಿದರುರವ ಸಬಳದಲಿ ॥ ಆಕೆವಾಳರು ಕರ್ಣಶಕುನಿಗ । ಳೇಕೆ ನಿಲುವರು ಬಿರುದುಪಾಡಿನ । ನೇಕಭಟರೊಳಬಿದ್ದು ತಿವಿದರು ಬೆರಸಿ ಪರಬಲವ ॥೪॥ ಮತ್ತೆ ಮುರಿದುದು ದೇವಬಲ ಬೆಂ । ಬತ್ತಿ ತಿವಿದರು ಕೌರವನ ಭಟ । ರೆತ್ತಿಹಾಯ್ಕಿದರದಟಗಂಧರ್ವರಭಟವ್ರಜವ ॥ ತೆತ್ತಿಸಿದಶರದೇರ ಸುರಿಗರು । ಳೊತ್ತುಗೈಗಳ ತಾಳಿಗೆಯ ತಲೆ । ಹೊತ್ತು ರಕ್ತದರಹಿಯಲೋಡಿತು ಸೇನೆ ಸುರಪುರಕೆ ॥೫॥ ಹುಯ್ಯಲಾದುದು ಚಿತ್ರಸೇನನ । ಬಯ್ಯಲೇತಕೆ ಬೇರೆಗಾಯದ । ಮೆಯ್ಯಬಿಸುಟಾಯುಧದ ಬೆನ್ನಲಿ ಬಿಟ್ಟಮಂಡೆಗಳ ॥ ಸುಯ್ಯಬಹಳದಭಟರು ತೊದಳಿಸು । ತೊಯ್ಯನೆಂದರು ಜೀಯ ಕರ್ಣನ । ಕಯ್ಯಲಮರರ ಜೀವವದೆ ಜಾರುವುದು ಹಿತ ನಿಮಗೆ ॥೬॥ ಕಳವೆ

ಳಿಸದಿರಿ ಧನುವ ತಾಹೆ । ಬ್ಬಲವ ಕರೆಕರೆ ಹುಲುಮನುಷ್ಯರ । ಬಲುಹುಗಡ ಬಯಲಾಯ್ತು ಗಡ ಗಂಧರ್ವರಾಟೋಪ ॥ ನೆಲನೊಳೊಕ್ಕರೆ ಶೋಣಿತಕೆ ರಾ । ಟಳವ ಹಿಡಿ ಬರಹೇಳು ಶಾಕಿನಿ । ಕುಲವ ಡಾಕಿನಿಯರನು ನೆತ್ತರು ಗುಡುಹಿ ಕೈನೆಯರ ॥೭॥ ಏನ ಹೇಳುವೆನರಸ ದಿವಿಜರ । ಸೇನೆಯಲ್ಲಾ ಛತ್ರಚಮರ ವಿ । ತಾನದಲಿ ನಭವಿಲ್ಲ ನೆಗಹಿದ ಸಬಳಸೆಲ್ಲೆಹಕೆ ॥ ವೈನುಸುಳ ಕಾಣೆನು ಸಮೀರನ । ಭಾನುಕಿರಣದ ಸುಳಿವನೀಶ್ವರ । ತಾನೆಬಲ್ಲನು ಶಿವಶಿವೆನೆ ಜೋಡಿಸಿತು ನಿಮಿಷದಲಿ ॥೮॥ ತಿನ್ನಡಗ ಕೊಯ್ನಣನ ಮನುಜರ । ಬೆನ್ನಲುಗಿ ತನಿಗರುಳನಕಟಾ । ಕನ್ನಿಗಳಿರುದ್ಯಾನವನವನು ಕೆಡಿಸಿ ಕಳೆದಿರಲಾ ॥ ಮುನ್ನ ಮುರಿದವರಾರೆನುತ ವಿ । ತ್ಪನ್ನರನು ತೊಲಗಿಸುತ ಸುರಪನ । ಮನ್ನಣೆಯ ಗಂಧರ್ವಬಲ ಬೆರಸಿದುದು ಪರಬಲವ ॥೯॥ ಹೊಯ್ದರೊಳಬಿದ್ದವರ ಮುಂದಲೆ । ನಾಯ್ದು ತಿವಿದರು ಮುರಿದ ಮೂಳೆಯ । ಹೊಯ್ದು ಕರುಳಿನ ಮಿದುಳ ಜೋರಿನ ಬಸಿವ ಶೋಣಿತದ ॥ ಕೈಯುಗಳ ಖಣಿಕಟಿಲ ಹೊಯ್ಲಿನ । ಬಾಯ್ದಣಿಯೆ ಬೈಗುಳಿನಲುಭಯದ । ಕೆಯ್ದುಗಾರರು ನೀಗಿದರು ನಿಜಪತಿಯ ಹಣರಿಣವ ॥೧೦॥ ಬಿಟ್ಟಸೂಟಿಯ ಕುದುರೆಗಾರರ । ನಿಟ್ಟೆಡೆಯಲೌಕಿದವುದೇಭದ । ಘಟ್ಟಿಗಳನುಬ್ಬೆದ್ದು ಹರಿಸುವ ರಥದವಾಜಿಗಳ ॥ ಬಿಟ್ಟನಾರಾಚದ ವಿಘಾತದೊ । ಳಿಟ್ಟಸೆಲ್ಲೆಹ ಸಬಳಬಿಟ್ಟೇ । ರಿಟ್ಟಿಗಳ ಮಳೆ ನಾದಿದವು ಕಾದಿದರು ಚೂಣಿಯಲಿ ॥೧೧॥ ಮುರಿದಚೂಣಿಯಭಟರು ತಂದರು । ಬಿರಿಸಿನರೆ ನೆಲೆಗಿದು ನಿಹಾರದೊ । ಳಿರಿದು ನೆರೆಸೊಪ್ಪಾಗಿ ಸಾರಿದು ಸರಿದು ಹಿನ್ನೆಲೆಗೆ ॥ ಸುರಿಯಲಂಬರುಣಾಂಬುಗಳ ನದಿ । ಹೊರೆಮುರಿಯೆ ದೊರೆನಿಕ್ಕಿದರುಬೊ । ಬ್ಬಿರಿದಿರಿವದನಿ ಘಟ್ಟಿಸಿತ್ತುನಿಸ್ಸಾಳಯದದನಿಯ ॥೧೨॥ ನೂಕಿದೊಡೆಕರ್ಣಾದಿದೊರೆಗಳ । ಡಾಕನಾನುವರಾರು ದಿವಿಜಾ । ನೀಕದಲಿ ಧಕ್ಕಡರು ಸುರು ದುವ್ವಾಳಿಸಿತು ನಭಕೆ ॥ ತೋಕಿದೆವು ನಾರಾಚ ದೆಸೆದೆಸೆ । ಯೋಕ್ಳಿಸಿದವು ಸರಳನೆನೆ ಸ । ವ್ಯಾಕುಳರ ಹಿಂದಿಕ್ಕಿ ಹಿಂಡಿದವೆಸುವನತಿಬಲರ ॥೧೩॥ ಮುರಿದುದಾಗಂಧರ್ವಬಲ ಹೊ । ಕ್ಕಿರಿದು ಕೌರವರಾಯದಳದಲಿ । ಕುರುಹಿನವರಪ್ಪಿದರು ಖಚರೀಜನದ ಕುಚಯುಗವ ॥ ಉರುಬಿತ್ತರೆನೆಲೆ ಚಿತ್ರಸೇನನ । ಸೆರೆಗ ಹಿಡಿದುದು ಸಮರಹೊಯ್ಲೊ । ಯ್ಕಿರಿಮನದ ಕನ್ನಿಗಳನೆನುತೇರಿದನು ಮಣಿರಥವ ॥೧೪॥ ಧನುವ ಕೊಂಡನು ತನ್ನ ತೂಕದ । ವಿನುತಭಟರೊಗ್ಗಾಯ್ತು ವಾದ್ಯ । ಧ್ವನಿಯ ಥಟ್ಟಣೆ ಧಾತುಗೆಡಿಸಿತು ಜಗದ ಜೋಡಿಗಳ ॥ ಮನುಜರಿಪುದಿರ ಮುರಿದು ಬಹಭಟ । ರನಿಮಿಷರು ಬಯಲಾಯ್ತು ಕಟಕಟ । ದನುಜರಿಪುಗಳ ದೆಸೆಗಳಳಿದವೆ ಶಿವಶಿವಾಯೆಂದ ॥೧೫॥ ನೂಕಿದನು ಗಂಧರ್ವಸೇನೆಯೊ । ಳಾಕೆವಾಳರ ಮುಂದೆ ತಾನವಿ । ವೇಕಿಯೋ ದೊರೆತನದಲ್ಲಿದ್ದನು ಸಕಲದಳಸಹಿತ ॥ ಸೋಕಬಹುದೇ ಕರ್ಣಕೆಲಬಲ । ದಾಕೆವಾಳರ ಕೊಂಬನೇ ನೆರೆ । ತೋಕಿದನು ಗಂಧರ್ವಜಲಧಿಯ ನೊಂದುನಿಮಿಷದಲಿ ॥೧೬॥ ಗಾಯವಡೆದರು ಕೆಲರು ನೆಲದಲಿ । ಲಾಯನೀಡಿತು ಕೆಲಬರಿಗೆ ಘ್ರೊ । ರಾಯದೆಸುಗೆಗೆ ಹಸುಗೆಯಾದರು ಭಟರು ದೆಸೆದೆಸೆಗೆ ॥ ಆಯುಧದ ಮೊದೆಯೊಟ್ಟಿತಾಕ । ರ್ಣಾಯತಾಸ್ತ್ರನ ಕೆಣಕಿ ಖೇಚರ । ರಾಯದಳ ನುಗ್ಗಾಯ್ತು ದೊರೆ ಹೊಕ್ಕನು ಮಹಾಹವವ ॥೧೭॥ ತೊಲಗು ಮರ್ತ್ಯರಿಗೀಸುದರ್ಪದ । ಕಲಿತನವೆ ಫಡ ನಿಮಿಷ ಸೈರಿಸು । ಹುಲುಭಟರ ಹುರಿದೀಪ್ತಾಪಾನಳನ ಸಗಳಿಯಲಿ ॥ ಅಳುಕುವುದೆ ಖಚರೇಂದ್ರಜಲಧರ । ನೆಲವೊ ತೋರಾ ಚಾಪವಿದ್ಯಾ । ಕಲೆಯ

ನೆನೆನೊಡನೆಸುತ ಬೊಬ್ಬಿರಿದೆಚ್ಚನಿನಸುತನ ॥೧೮॥ ಹೇಳಬಹುದೆ ಸುರೇಂದ್ರಭವನದ । ಸೂಳೆಯರ ಸೂಳಾಯತದ ವಾ । ಚಾಳತನವೇ ನೆರವೆ ನಟರಿಗೆ ಮುಖ್ಯವಿದ್ಯೆಯಲಾ ॥ ಆಳುತನದಂಗದಲಿಬಹರೆ ಶ । ರಾಳಿಯಲಿ ಮಾತಾಡೆನುತ ಕೆಂ । ಗೋಲಿನಲಿ ಸಲೆ ಹೂಳಿದನು ಉದ್ಯಾನವನತಳವ ॥೧೯॥
ಪ್ರೌಢಮೆಚ್ಚು ಮರ್ತ್ಯರಲಿ ಬಿಲು । ವಿದ್ಯಾತಿಶಯ ಕಿರಿದುಂಟಲಾ ತಾ । ನೀತ ಕರ್ಣನೆ ಕೌರವೇಂದ್ರಗೆ ಬೇಹಭಟನಿವನೇ ॥ ಆತುಕೊಳ್ಳಾಪೂಡೆಯೆನುತ ದಿ । ಗ್ವ್ರಾತವಂಪಿನಲಡಗೆ ರಿಪುಶರಜಾತವನು ಹರೆಗಡಿದು ಕರ್ಣನ ಧನುವ ಖಂಡಿಸಿದ ॥೨೦॥ ಇದುಶರಾವಳಿಯಹುದು ಸರಿಗಮ । ಪಧನಿಗಳ ಸ್ವರವಲ್ಲಲಾ ಸ್ವೇ । ರಿದಧನುರ್ವಿದ್ಯಾತಿಶಯಯೋಗ್ಯತೆ ವಿಶೇಷವಲಾ ॥ ಇದೆ ಮನುಷ್ಯರ ಕಲಹ ನೋಡೆನು । ತೊಡರು ಹೊಸಚಾಪದಲಿ ಕಲಿ ಚಿ । ಮ್ಮಿದನು ಚಾಮೀಕರಸರೇಖಾವಳಿ ತ್ರಿಲೀಮುಖವ ।॥೨೧॥ ಕಡಿದು ಗಂಧರ್ವನ ಶರೌಘವ । ನಡಸಿ ನೆಟ್ಟವು ಕರ್ಣಶರ ಸ್ವೈ । ಗೆಡಹಿದವು ಕಿಂಪುರುಷ ಗುಹ್ಯಕ ಯಕ್ಷರಾಕ್ಷಸರ ॥ ಹೊಡಕರಿಸಿ ಹೊದರೆದ್ದು ಬಲ ಸಂ । ಗಡಿಸಿ ತಲೆವರಿಗೆಯಲಿ ಕರ್ಣನ । ಬಿಡುಸರಳಪೇಟೆಯಲಿ ಬೆಪರದೆ ನೂಕಿತಳವಿಯಲಿ ॥೨೨॥ ಸಂಧಿಸಿತು ಪಡೆ ಚಿತ್ರಸೇನನ । ಹಿಂದೆ ನಿಲಿಸಿ ವಿರೋಧಿಶರಹತಿ । ಗಂಪವಳಿಯದೆ ಮುತ್ತಿದುದು ಕಟ್ಟಳವಿಯಲಿ ರಥವ ॥ ಮುಂದುಗೆಟ್ಟನು ಕರ್ಣನೆನೆ ಕೈ । ಗುಂಡಿದರು ಸೌಬಲಸುಯೋಧನ । ನಂದನರು ದುಶ್ಶಾಸನಾದಿ ಸಮಸ್ತ ಪರಿವಾರ ॥೨೩॥ ನೊರಜಿನೆರಕೆಯ ಗಾಳಿಯಲಿ ಹೆ । ಮ್ಮರದ ಪೊದಲಳುಕುವುದೆ ಘಡ ಕಾ । ತರಿಸದಿರಿ ಕೌರವರೆನುತ ಕಲಿಕರ್ಣ ಬೊಬ್ಬಿರಿದ ॥ ಶರನಿಧಿಗೆ ಬಡಬಾಗ್ನಿ ಮುನಿವವೊ । ಉರುವಣಿಪ ಹೆಬ್ಬುಲವನೊಂದೇ । ಸರಳಿನಲಿ ಸವರಿದನು ಸುಳಿಸಿದನೌಕಿ ನಿಜರಥವ ॥೨೪॥ ಗೆದ್ದುದೇ ರಣವೆಲವೊ ಟವಿಜರ । ದೊಡ್ಡಯದ ಸೂಳೆಯರ ಚೌರಿಗೆ । ಬಿದ್ದನರ ವೀಳೆಯದ ಬವಗರು ಭಟರ ಮೋಡಿಯಲಿ ॥ ಹೊಪ್ಪದೊಡೆ ಮುರುಳಹರೆ ಭಯರಸ । ಗದ್ದುಗೆಯ ಮಂಜಿಡಿಕೆ ಮನದವ । ರಿದ್ದು ಫಲವೇನೆನುತ ಕೈಮಾಡಿದನು ಕಲಿಕರ್ಣ ॥೨೫॥ ನೊಂದುದಾತನ ಪೊರೆಯ ಸುಭಟರ । ಸಂದಣಿಗಳಿಕ್ಕಲಿಸಿ ಬಿದ್ದುದು । ಮುಂದೆಬಲು ಗಂಧರ್ವಬಲವಿನಸುತನ ಶರಹತಿಗೆ ॥ ಒಂದುನಿಮಿಷಕೆ ಮತ್ತೆ ಪಡಿಬಲ । ಬಂದುದಗಣಿತ ಯಕ್ಷರಾಕ್ಷಸ । ವೃಂದ ಮುಕ್ಕುರುಕಿದುದು ಕರ್ಣನ ರಥದ ಮುಂಕಣಿಯ ॥೨೬॥ ಅರಸ ಕೇಳ್ ಕೇಡೆಯಲಿ ಕೌರವ । ರರಸ ಬಂದನು ಸರ್ವದಳಸಹಿ । ತೆರಡುಬಲದುಬ್ಬರದ ಬೊಬ್ಬೆಗೆ ಬಿರಿದುದವನಿತಳ ॥ ನರವೃಕೋದರ ನಕುಲ ಮೊದಲಾ । ದರು ಕುತೂಹಲವಿವರಸುತ್ತಣ । ಮೊರಡಿಗಳ ಮೇಲಿದ್ದು ನೋಡಿದರೀ ಮಹಾಹವವ ॥೨೭॥ ತೆಗೆಸಿದನು ನೃಪ ನಿನಸುತನ ಮು । ತ್ತಿಗೆಯು ನೆರೆ ದೊಡ್ಡನಲಿ ಸೂಸುವ । ಹೊಗರಗಣೆಗಳ ಹೊಯ್ವಪ್ರಾಯುಧಕಡಿವಪರಶುಗಳ ॥ ಬಿಗಿಯಸಬಳದಲೋಡಿಸುವ ಲೌ । ಡಿಗಳ ಚಿಮ್ಮುವ ಸುರಗಿಗಳ ಕಾ । ಳಗದ ರೌದ್ರಾಟೋಪ ರಂಜಿಸಿತಮರರಾಲಿಗಳ ॥೨೮॥ ನೂಕಿತದು ಕೌರವನ ತುಡುಗು ಮೊಗ । ಸಾಕಿತದು ಪಾಳೆಯಕೆ ಮುರಿದು । ದಿವೌಕಸರು ಜಾರಿದರು ಜೋಡಿಸಿ ಮತ್ತೆ ಕುರುಬಲವ ॥ ತೋಕುವರು ಗಂಧರ್ವರು ಭಯಾ । ನೀಕದೋಹರಿಸಾಹರಿಯಸು । ವ್ಯಾಕುಲರನೀಕ್ಷಿಸುತಲಿದ್ದರು ಪವನಜಾದಿಗಳು ॥೨೯॥ ಈಸುಕೊಂಡಾಡಿದರೆ ಸುರರುಪ । **ಹಾಸಮಾಡುವರೆಮ್ಮನೆನುತ ಮ । ಹಾಸಗರ್ವರು ಚಿತ್ರಸೇನನ ಮನ್ನಣೆಯಭಟರು ॥ ಪಾಶಚಕ್ರಮು**

ಸುಂಡಿ ಪರಿಘ । ಪ್ರಾಸ ಪರಶುಕೃಪಾಣಾಸುಬಳಶ । ರಾಸನಾದಿಯ ಕೈದುಗಾರರು ಕವನಕನ್ನಾಯ್ತು ಜೋಡುಮಾಡಿತು ಖಚರಬಲ ಕೈ । ಗೂಡಿ ಕವಿದುದು ಚಿತ್ರಸೇನನ । ಜೋಡಿಯಲಿ ಜಝ್ಝರಿಸಿದ್ದರು ಮುಂದೆ ಮುಂಗುಡಿಯ ॥ ಅಡಿದೊಡೆ ಹಾವಿಂಗೆ ಹದ್ದಿನ । ಕೂಡೆ ಮಾರುಕವೆ ಘಸ ಯೆನುತ ಕೈ । ಮಾಡಿದರು ರಿಪುಭಟರು ನಿಂದರು ನಿಮಿಷಮಾತ್ರದಲಿ ॥೩೧॥ ಗಳಿಯಹಿಂಡಿನಮೇಲೆ ಗಿಡಗ । ಬಳಗ ಕವಿದಂದದಲಿ ಸೂಟಿಯ । ಲಳವಿಗೊಡ್ಡಿದಚಾತುರಂಗವೆ ಚಿನಕಡಿಯಮಾಡಿ ॥ ಎಲೆಸುಯೋಧನ ಬೀಳು ಕೈದುವ । ನಿಳುಹಿ ಖೇಚರರಾಯನಂಘ್ರಿಯೊ । ಳೆಲವೂ ರವಿಸುತ ಹೋಗೆನುತ ಹೊಕ್ಕಿರಿದರುರವಣಿಸಿ ॥೩೨॥ ಗರುವರೇ ನೀವೆಲವೊ ಸುರಪನ । ಪುರದವನ್ನವಿಗರು ಸುಯೋಧನ । ನರಮನೆಯನ್ನವಿಗಳಿಗೆ ಪಾಡಹರೆ ತೊಡಕುವೊಡೆ ॥ ಅರಘುಪರಿಯಂತಾರು ನೀವೆನು । ತರಿಭಟಂಗಾಗ್ನೇಯವಾರುಣ । ನಿರುತಿಮೊದಲಾದಸ್ತ್ರಚಯವನು ಕವಿಸಿದನು ಕರ್ಣ ॥೩೩॥ ನೈರುತಿಕಾಗ್ನೇಯಯಾವ್ಯಕ । ವಾರುಣಕೆ ಸುರರೊಡೆಯರೆಮ್ಮಲಿ । ವೈರಬಂಧವಿದುಂಟೆ ಸಾಧನವಹರೆ ದಿವ್ಯಶರ ॥ ಸೇರದರೆ ನಿನಗಾದರಿದಕೋ । ವಾರುಣಾಪ್ರತಿಕಾರಪಾವಕ । ನೈರುತಾದಿಗೆ ಕೊಳ್ಳೆನುತ ಗಂಧರ್ವಪತಿಯೆಚ್ಚ ॥೩೪॥ ಗಬ್ಬರಿಸಿದವು ದಿವ್ಯಶರ ಭಯ । ಗಬ್ಬವನಸಪತಿಶರಶರ ಮಗು । ಕೆಬ್ಬಿಸಿದನಿನಸೂನು ಪರ್ವತತಿಮಿರಘಣಿಶರವ ॥ ಪಬ್ಬತಕೆ ವಜ್ರಾಸ್ತ್ರತಿಮಿರದ । ಹಬ್ಬುಗೆಗೆ ರವಿಬಾಣ ಹಾವುಗ । ಳೊಬ್ಬುಳಿಗೆ ಗರುಡಾಸ್ತ್ರವನು ಗಂಧರ್ವಪತಿಯೆಚ್ಚ ॥೩೫॥ ಸವೆದವಿನಸುತನಂಬು ಖೇಚರ । ನವಗಡಿಸಿ ಕವಿದೆಚ್ಚನೀತನ । ಸವಗಸೀಸಕಜೋಡು ತೊಟ್ಟವು ಸರಳಜೋಡುಗಳ ॥ ಕವಿದುದೆಡಬಲನಂಕದಲಿ ಸುರ । ನಿವಹ ಸೂಟಿಯ ಸರಳಸೋನೆಗೆ । ಡವರಿಸಿದವಡಿಗಡಿಗೆ ಕರ್ಣನ ರಥದ ವಾಜಿಗಳು ॥೩೬॥ ಜೋಡು ಹರಿದುದು ಸೀಸಕದ ದಡಿ । ಬೀಡು ಬಿರಿದುದು ತಲೆಯ ಚಿಪ್ಪಿನ । ಜೋಡು ಜರಿದುದು ಮನಕೆ ಸುರಿದುದು ಸೊಗಡ ರಣರಭಸ ॥ ಖೋಡಿ ಕೊಪ್ಪರಿಸಿದುದು ಧೈರ್ಯವ । ನೀಡಿರಿದುದಪದೆಸೆ ವಿಕಾಳಿಸಿ । ಖೇಡತನ ಭುಲ್ಲೈಸುತಿದ್ದುದು ಭಾನುನಂದನನ ॥೩೭॥ ಮುತ್ತಿಕೊಂಡನು ಬಿಲುಸರಳಸಭ । ಕೊತ್ತಿದನು ರಣಭಯವನಹಿತನ । ಕುತ್ತಿದನು ಕಂಗಳಲಿ ಕುಡಿದನು ಮನದಲರಿಭಟನ ॥ ಕೆತ್ತಿದನು ಕೂರಲಗಿನಲಿ ಮುಳು । ಮುತ್ತ ಹೂತಂದದಲಿ ಹುದುಗಿದ । ನೆತ್ತರಿನ ನೆಣವಸೆಯಲೆಸೆದನು ರಣದೊಳಾಖಚರ ॥೩೮॥ ನೊಂದೊಡಬ್ಬಿತು ದರ್ಪತಿಖಿ ಖತಿ । ಗೊಂದುಮುದದುಬ್ಬಿನಲಿ ಘಾತದ । ಕಂದುಕದವೋಲ್ಕುಣಿವುದಂತಃಖೇದ ಕೊಬ್ಬಿನಲಿ ॥ ನೊಂದುದಿನಿಸಿಲ್ಲಕಟ ದೈತ್ಯರ । ದಂಮುಗದಲಾವಿಂದು ಮರ್ತ್ಯರು । ಬಂದಿವಿಡಿವರೆ ಬಲುಹನೆನುತೋರಂತೆ ಚಿಂತಿಸಿದ ॥೩೯॥ ಖತಿಯಲುಗಿದನು ದಿವ್ಯಬಾಣಪ್ರತತಿಯನು ರಥಸೂತಹಯಸಂ । ತತಿಶರಾಸನ ಕೇತುದಂಡಚ್ಛತ್ರಚಾಮರವ ॥ ಹುತವಹನೊಳೊಟ್ಟಿದನು ಸಮರ । ವ್ಯತಿಕರದಲಾಗ್ನೇಯಶರ ಚಿಂ । ಮಿತು ಚಡಾಳಿಸಿ ಕೆಂಡ ಕೆದರಲು ಕರ್ಣ ಬೆರಗಾದ ॥೪೦॥ ವಿರಥನಾದನು ಹಲಗೆಖಡ್ಗದ । ಲರಿಭಟನ ಸಂಮುಖಕೆ ಚಿಮ್ಮಿದ । ರೆರಡನೊಂದಂಬಿನಲಿ ಕಡಿದನು ಜಡಿದನಿನಸುತನ ॥ ತಿರುಗಿ ಹಾಯ್ದನು ಬಳಿಕ ಕರ್ಣನ । ಮುರಿವ ಕಂಡು ವಿಕರ್ಣ ತನ್ನಯ । ವರರಥವ ಚಾಚಿದನು ಬೋಳೈಸಿದನು ರವಿಸುತನ ॥೪೧॥ ಪೈಸರಿತೋ ಕುರುಚತುರ್ಬಲ । ಗಾಸಿಯಾದನು ಕರ್ಣನಿದು ದೊರೆ । ಗೈಸಲೇ ದುವ್ಮಾನವೆನುತಲ್ಲಲ್ಲಿ ಕುರುಸೇನೆ ॥ ಓಸರಿಸಿತಡತರದಮುಖದಲಿ ।

ಸೂಸಿದರು ಸಮರಥರು ಸೋಲವ । ಸಾಸುಯೋಧನ ನಗುತ ಕಂಡನು ನೋಡಿ ಕೆಲಬಲನ ॥೪೨॥ ಅವನಿಪನ ಮೊಗಸನ್ನೆಯಲಿ ಸೂ । ಳವಿಸಿದವು ನಿಸ್ಸಾಳಕೋಟಿಗ । ಳವಡಿದುದು ಬಹುವಿಧದವಾದ್ಯಧ್ವನಿ ದಿಶಾಮುಖವ ॥ ತವತವಗೆ ಧುರತೋರಹತ್ತರು । ತವಕಿಸುತ ಹುರಿಯೇರಿದರು ಕೌ । ರವರು ಕರ್ಣನ ಹರಿಬದಾಹವವೆಮಗೆತಮಗೆನುತ ॥೪೩॥ ಮುರಿದು ದಳ ಸಂವರಿಸಿ ಪಡಿಮುಖ । ಕುರುಬಿದುದು ದುರಿಯೋಧನಾನುಜ । ರರಸಿದರು ಗಂಧರ್ವನಾವೆಡೆ ತೋರುತೋರೆನುತ ॥ ತರುಬುವುದು ಜಯವೊಮ್ಮೆ ಮನದಲಿ । ಕರುಬುವುದು ಮತ್ತೊಮ್ಮೆ ತಪ್ಪೇ । ನಿರಿದಸಹಸವ ತೋರೆನುತ ಬೆರಸಿದರು ಪರಬಲವ ॥೪೪॥ ಅರಸನನುಜರೆ ನೀವು ಕರ್ಣನ । ಹರಿಬದವರೇ ಹರಹರೆಮಗಿ । ನ್ನಿರಿದಲ್ಕೆ ನಿಮಗೀ ಸುಖವುರುಘೋಂಪಿಸಿದುದಿನ್ನೇನು ॥ ತರಹರವು ನಮಗಿಲ್ಲಲಾ ಫೂ । ತುರೆಯೆನುತ ಪಡಿತಳಿಸಿ ಗಂಧ । ರ್ವರ ಚಮೂಪರು ನೂಕಿದರು ತರುಬಿದರು ಪರಬಲವ ॥೪೫॥ ಎಚ್ಚರಿರಿದರು ಹೊಯ್ದರಿಟ್ಟರು । ಚುಚ್ಚಿದರು ಸೀಳಿದರು ನೂಕಿದ । ರಿಚ್ಚಟರ ಸೇರಿದರು ದಡಿವಲೆಕಣ್ಣಿವಲೆಗಳಲಿ ॥ ಕೊಚ್ಚಿದರು ನುಗ್ಗಿದರುಕೊಯ್ದರು । ನುಚ್ಚುನುರಿಮಾಡಿದರು ಹರಿಬಕೆ । ಹೆಚ್ಚಿ ಹೊಗುವವನೀಶನನುಜರ ಮನ್ನಣೆಯ ಭಟರ ॥೪೬॥ ಗಾಯವಡೆಯದರಿಲ್ಲ ಸಾಯದೆ । ನೋಯವವರಿಲ್ಲೆರಡುಬಲದಲಿ । ಬೀಯವಾದರು ಸುಭಟರಿಗೆ ಗಂಧರ್ವಪತಿ ಮುಳಿದು ॥ ರಾಯನನುಜರ ತಟ್ಟಿದನು ದೀ । ರ್ಘಾಯುವನು ಹಿಡಿದನು ವಿಕರ್ಣನ । ನೋಯಲೆಚ್ಚನು ಕೆದರಿದನು ಕೌರವಚತುರ್ಬಲವ ॥೪೭॥ ಘಡಯೆನುತ ಕುರುರಾಯನಾತನ । ಪಡಿಮುಖಕೆ ನೂಕಿದನು ಜೋಡಿಸಿ । ಜಡಿವನಿಸ್ಸಾಳಾಯತ್ರದ ಕಹಳೆಗಳ ಕಳಕಳದಾ ॥ ಬಿಡುರಥದ ಧಟ್ಟಣೆಯ ಧಾಳಿಯ । ಕಡುಗುದುರೆಗಳ ನೆತ್ತಿಯಂಕುಶ । ದೆಡೆಯ ಘಟೆಯಾನೆಗಳ ದಳ ಸಂದಣಿಸಿತೊಗ್ಗಿನಲಿ ॥೪೮॥ ನುಗ್ಗನಿವ ಕೈಕೊಂಬನೇ ರಣ । ದಗ್ಗಳರ ಮೂಳೆಯಲಿ ಕದನದ । ಹುಗ್ಗಿಗರ ಸಾಕಿದನು ಶಾಕಿನಿಡಾಕಿನೀಗಣವ ॥ ಬಗ್ಗಿ ಕವಿವರನಿಂದ್ರಲೋಕದ । ಸುಗ್ಗಿಯಲಿ ಸೇರಿಸಿದನಾಹವ । ದುಗ್ಗಡವನೇನೆಂಬೆನೈ ಗಂಧರ್ವವಿಕ್ರಮವ ॥೪೯॥ ಮೀಟೆನಿಪಗಂಧರ್ವರೊಂದೇ । ಕೋಟಿ ಕವಿದುದು ಕುರುಬಲಕೆ ಪಡಿ । ಗೋಟೆಯಾದುದು ನೃಪತಿ ಸಿಲುಕಿದನವರ ವೇಡೆಯಲಿ ॥ ದಾಟಿತರಸನ ಧೈರ್ಯ ಕೈದುಗ । ಳಾಟ ನಿಂದುದು ಕರದ ಹೊಯ್ಲಿನ । ನೋಟಕರು ಘೋಳೆಂದರಿತ್ತಲು ಪಾಂಡವರ ವನದಿ ॥೫೦॥ ಅರರೆ ದೊರೆದೊರೆ ಡೊಂಬಿಯಲಿ ಡಾ । ವರಿಸುವರ ಹೊಯ್ದೊಯ್ಯೆನುತ ಖೇ । ಚರರ ಕಂಬಿಗಳಾಡಿದವು ಸುತ್ತಲು ಸುಯೋಧನನ ॥ ಅರಸರಂಜದಿರಂಜಬೇಡೆನು । ತುರವಣಿಸಿ ಕೌರವನರೇಂದ್ರನ । ಕರದ ಧನುವನು ಕಳೆದುಕೊಂಡನು ಖಚರಪತಿ ನಗುತ ॥೫೧॥ ಹಯದ ಪಡಿವಾಘೆಯಲಿ ಬಾಹು । ದ್ವಯವ ಬಿಗಿದನು ತನ್ನ ರಥದಲಿ । ಜಯವಿಹೀನನ ತಂದು ಕುಳ್ಳಿರಿಸಿದನು ಕೌರವನ ॥ ಭಯಭರಿತದುಶ್ಶಾಸನನ ದು । ರ್ಜಯನ ಚಿತ್ರಾಂಗದವಿಕರ್ಣನ । ನಯವಿದೂರರ ತಂದರಿಪ್ಪತ್ತೈದುಸಹಭವರ ॥೫೨॥ ಇಳಿದು ಗಜವನು ಕೈದುಗಳ ನೆಲ । ಕೆಳಹಿ ಜೋದರು ವಾರುವದಿನಿಳೆ । ಗಿಳಿದು ರಾವ್ತರು ಹಾಯ್ಕಿದರು ದೂಹತ್ತಿಲೌಡಿಗಳ ॥ ಬಿಲುಸರಳ್ಗಳ ಬಿಸುಟ ರಥಿಕರು । ನೆಲಕೆ ಹಾಯ್ದರು ಕೈಯ ಕೈದುವ । ನಿಳುಹಿ ಪಯದಳ ಬೀಳುಗೊಂಡುದು ಖೇಚರೇಶ್ವರನ ॥೫೩॥ ಮುಟ್ಟದಿರಿ ಪರಿವಾರ ಕೈದುವ । ಕೊಟ್ಟು ಹೋಗಲಿ ದೊರೆಗಳಾದರ । ಬಿಟ್ಟುವರಿ

ಗಮರೇಂದ್ರನಾಣೆಯೆನುತ್ತ ಸಾರಿದರು ॥ ಕೆಟ್ಟುದೀ ಕುರುಪತಿಯ ದಳ ಜಗ । ಜಟ್ಟಿಗಳು ಕರ್ಣಾದಿಗಳು ಮುಸು । ಕಿಟ್ಟು ಜಾರಿತು ಕಂಡದೆಸೆಗವನೀಶ ಕೇಳೆಂದ ॥೩೪॥ ಖಿನ್ನನಾದನು ಪಾರ್ಥನನಿಳೆಜ । ನುನ್ನತೋತ್ಸವನಾದನತಿಸಂ । ಪನ್ನಸಮ್ಮದರಾದರಾಮಾದ್ರೀಕುಮಾರಕರು ॥ ಇನ್ನು ಪಾಂಡವ ರಾಜ್ಯಸಿರಿ ಯೆಮ । ಗಿನ್ನು ಲೇಸಹುದಕಟ ದೈವದ । ಗನ್ನಗತಕವೆಯೆನುತ ಹಿಗ್ಗಿತು ಮುನಿವಧೂನಿಕರ ॥೩೫॥ ಭಾವನವರರ್ತಿಯಲಿ ಜಲಕೇ । ಳೀವಿನೋದಕೆ ಬಂದು ಗಂಧ । ರ್ವಾವಳಿಯ ಕೇಳಿಯಲಿ ಚಿತ್ತೈಸಿದಿರಲಾಯೆನುತ ॥ ದೇವಿಯರು ನಸುನಗುತ ಚಿತ್ತದ । ಚಾವಡಿಯಲೋಲೈಸಿಕೊಂಡಳು । ಭೂವಳಯದೇಕಾಧಿಪತ್ಯದ ಸೌಖ್ಯಸಂಪದವ ॥೩೬॥ ಕೇಳಿದನು ಯಮಸೂನು ದುಗುಡವ । ತಾಳಿದನು ನಳನಹುಷಭರತನೃ । ಪಾಲಪಾರಂಪರೆಯಲುದಿಸಿದ ಸೋಮವಂಶದಲಿ ॥ ಕೋಳುಹೋದುದೆ ಕೀರ್ತಿ ನಮ್ಮಾ । ಬಾಳಿಕೆಯ ಸುಡಲೆನುತ ಚಿಂತಾ । ಲೋಲಚಿತ್ತನು ನೆನೆವುತಿದ್ದನು ವೀರನರಯಣನ ॥೩೭॥

ಅಂತು ಸಂಧಿ ೧೯ ಕ್ಕೆ ಪದ ೧೧೧೨ ಕ್ಕಂ ಮಂಗಳಮಸ್ತು.

---

## ಇಪ್ಪತ್ತನೆಯ ಸಂಧಿ.

ಸೂಚನೆ। ರಾಯದಳವನು ಮುರಿದು ಕೌರವ । ರಾಯನನು ಕೊಂಡೊಯ್ವ ಖೇಚರ ।
ರಾಯನನು ತಾಗಿದನು ಮುರಳಿಜತಂದನಾ ಪಾರ್ಥ ॥

ಕೇಳು ಜನಮೇಜಯಧರಿತ್ರೀ । ಪಾಲ ಸಿಕ್ಕಿದನತ್ತ ಕುರುಭೂ । ಪಾಲನದನೇಹೇಳುವೆನು ಪಾಳೆಯದ ಗಜಬಜವ ॥ ಆಳು ನಡೆದುದು ಕಂಡಮುಖದಲಿ । ಕೀಳುಮೇಲೊಂಪಾಯ್ತು ಧನಿಕರ । ಪೀಳಿಗೆಯ ಧನ ಸೂರೆವೋದುದು ಕೇರಿಕೇರಿಯಲಿ ॥೧॥ ಕುದುರೆ ಹಾಯ್ದವು ಕಂಡಮುಖದಲಿ । ಮದಗಜಾವಳಿಯೋಡಿದವು ರಥ । ಕೆದರಿದವು ಕಾಲಾಳು ಹಾಯ್ದರು ಬಿಟ್ಟಮಂಡೆಯಲಿ ॥ ಕದಡಿದುದು ಜನಜಲಧಿ ರುಝಾಡಿಸಿ । ಬೆದರಿದವು ಕೇರಿಗಳು ರಾಯನ । ಹದನದೇನೇನೆನುತ ಹರಿದರು ಹರೆದರಗಲದಲಿ ॥ ಗಾಳಿಯುರಿದುದು ರವಿಯ ಕಿರಣಕೆ । ಬಾಲೆಯರು ಗೋಚರವೆ ದಡ್ಡಿಯ । ಮೇಲು ಬೀಯಗದಂಗರಕ್ಷೆಯ ಕಂಚುಕೀಜನದ ॥ ಮೇಳವವದೇನಾಯ್ತೊ ಬೀದಿಯ । ಗಾಳುಮಂದಿಯ ನಡುವೆ ಕುರುಭೂ । ಪಾಲನರಸಿಯರಳುತ ಹರಿದರು ಬಿಟ್ಟಮಂಡೆಯಲಿ ॥೩॥ ಕುರುಪತಿಯ ದುಶ್ಶಾಸನಾದಿಗ । ಳರಸಿಯರು ಭಟಭಟರೊಳೊದರಿದ । ರರಸನುಪಹತಿಗೊಪ್ಪುಗೊಟ್ಟರೆ ಕರ್ಣಶಕುನಿಗಳು ॥ ಗುರುನದೀಸುತರಿದ್ದೊಡೀಪರಿ । ಪರಿಭವಕೆ ಪಾಡಹುದೆ ಪಾಂಡವ । ರರಸನಿಹವನವಾವುದೆಂದರಸಿದಳು ಭಾನುಮತಿ ॥೪॥ ಅರಸಿಯರು ಸಖಿಯರು ಕುಮಾರಕ । ರರಸನನುಜರ ಹೆಂಡಿರನಿಬರು । ವೆರಸಿ ಬಂದಳು ಭಾನುಮತಿ ಯಮತನುಜನಾಶ್ರಮಕೆ ॥ ಕರುಣಿ ರಕ್ಷಿಸು ಸೋಮವಂಶೋ । ದ್ಧರಣ ರಕ್ಷಿಸು ಸತ್ಯಧರ್ಮದ । ಸಿರಿಯೆ ರಕ್ಷಿಸೆನುತ್ತ ಧೊಪ್ಪನೆ ಬಿದ್ದಳಂಘ್ರಿಯಲಿ ॥೫॥ ನಾದಿದಳು ನೃಪನಂಘ್ರಿಯನು ನಯ । ನೋದಕದ ಧಾರೆಯಲಿ ಭಾಳವ । ತೇದು ತಿಲಕದ ಗಂಧದಲಿ ಬೈತಲೆಯ ಮುತ್ತುಗಳ ॥ ಆದರಿಸಿ ನವಕುಸ್ಮು

ಮದಲಿ ಘನ। ರೋದನಧ್ವನಿಮಂತ್ರದಲಿ ನೃಪ । ಪಾದಪೂಜೆಯ ರಚಿಸುವವೊಲೊಪ್ಪಿದಳು ಭಾನು ಮತಿ ॥೬॥ ಖಳರು ಕೌರವರಿಂದು ಸಜ್ಜನ । ಕುಲಶಿರೋಮಣಿ ನೀನು ಕರುಣಾ । ಜಲಧಿ ನಿನಗಪರಾಧಿಗಳು ನಾವಹೆವು ಜಗವರಿಯೆ ॥ ಹುಳಿಗೆ ಹಾಲಳುಕಿದೊಡೆ ಹಾಲಿನ । ಜಲಧಿ ಕೆಡುವುದೆ ಜೀಯ ನಿನ್ನವ। ರೆಳಸಿಕೊಂಡರು ಕಾಯಬೇಕೆಂದೊರಲಿದಳು ತರಳೆ ॥೭॥ ರಾಯರಿಗೆ ಬಿನ್ನಹವ ಮಾಡೌ । ತಾಯೆ ದುರುಪದಿದೇವಿಯೇ ಹಿರಿ । ದಾಯಸವ ಪಡಿಸಿದನು ಕುರುಪತಿ ನಿನ್ನ ಮೈದುನನು ॥ ನೋಯಿಸಲು ಸಿರಿಖಂಡನಿಜಗುಣ । ದಾಯತವ ಬಿಡದಂತೆ ನೀವೇ । ಕಾಯಬೇಹುದು ಪತಿಯನೆಂದೊರಲಿದಳು ಭಾನುಮತಿ ॥೮॥ ಚುಂಬಿಸಿತು ಕಡುಶೋಕ ಮಿಡಿದನು । ಕಂಬನಿಯನುಗುರಿನಲಿ ಘನಕರು । ಣಾಂಬುನಿಧಿ ಸೀಗುರಿಸಿ ಮೈಗೂಡಿರಿದರೋಮದಲಿ ॥ ಹಂಬಲಿಸಬೇಡಕಟ ಕುರುಪತಿ । ಯೆಂಬನಾರೌ ಬೊಪ್ಪನವರೇ । ನೆಂಬರೇಳೌ ತಾಯೆಯೆನುತೆತ್ತಿದನು ಭಾಮಿನಿಯ ॥ ಭೀಮ ಬಾ ಕುರುರಾಜಕುಲಚೂ । ಡಾಮಣಿಯ ತಾ ಹೋಗು ಕದನೋ । ದ್ದಾಮದರ್ಪನ ತಾ ನಿಜಾನ್ವಯಕುಮುದಚಂದ್ರಮನ ॥ ತಾ ಮನೋವ್ಯಥೆ ಬೇಡ ನೃಪಚಿಂ । ತಾಮಣಿಯ ತಾಯೆನಲು ಕರಯುಗ । ತಾಮರಸವನು ಮುಗಿದು ಬಿನ್ನಹಮಾಡಿದನು ಭೀಮ ॥೧೦॥ ಬೆಸಸಬೇಹುದು ನೀತಿಶಾಸ್ತ್ರದ । ಬೆಸುಗೆತಪ್ಪದೆ ರಾಜಧರ್ಮದ । ಮುಸುಡುಕಂದದೆ ಖೋಡಿಮಿಡಿಯದೆ ಕುಶಲರಾದವರು ॥ ಎಸಗುವದು ನಾವಾವಕಾರ್ಯದೊ । ಳಸುವನಿಕ್ಕಿ ತದರ್ಥವನು ಪರ । ರೆಸಗಿದೊಡೆ ನಮಗೇನುಬಾಧಕವೆಂದನಾಭೀಮ ॥೧೧॥ ತಮ್ಮ ಸಂಕಟಕಿವರು ವಿನಯವ । ನೆಮ್ಮ ಬಿನ್ನಹಮಾಡುತಿದೊಡೆ । ನಿಮ್ಮಡಿಗೆ ಪರಿತೋಷವೇ ಕರ್ತವ್ಯವಿಷಯದಲಿ ॥ ಎಮ್ಮ ಮನ ಮುಂಚುವುದು ಕಾರ್ಯದ । ಹಮ್ಮುಗೆಯು ನೀವರಿಯಿರೇ ತಮ । ತಮ್ಮ ದುಷ್ಕೃತ ತಮಗೆ ಫಲಿಸಿದರೇನು ನಿಮಗೆಂಹ ॥೧೨॥ ಅನುಜ ಕೇಳಪಕಾರಿಜನದಲಿ । ನೆನೆವುದುಪಕಾರವನು ಗುಣಹೀನನಲಿ ಗುಣವನು ತೋರುವುದು ಗರುವರಿಗೆ ತೊಡಿಗೆಯದು ॥ ಅನುಜನಲ್ಲಾ ನಮಗೆ ಕೌರವ । ಜನಪನವರಪರಾಧಶತವನು । ನೆನೆವೊಡಿದು ಹೊತ್ತೇ ಮಹಾಬೇವೆಂದನಾಭೂಪ ॥೧೩॥ ಭರತವಂಶದೊಳವರ ಭಂಗವೆ । ನಿರುತವೆಮ್ಮದು ನಮ್ಮ ಭಂಗ । ಸ್ಫುರಣವವರದು ತಾವರಿಯರಾವರಿವೆವೀಹದನ ॥ ಪರರ ಕಲಹಕೆ ನಾವು ನೂರ್ವೈ । ವರುಗಳಂತಃಕಲಹಕದು ನೂ । ರ್ವರು ವಿಚಾರಿಸಲೈವರಾವೆಂದನು ಮಹೀಪಾಲ ॥೧೪॥ ಆವನಾಗಲಿ ಬೇಡಿದಂಗೊಲಿ । ದೀವುದೇ ನೃಪಧರ್ಮ ಹಗೆಕೆಳೆ । ಯಾವನಾಗಲಿ ಸೆಣಸಿದೊಡೆಕಾದುವುದೆ ನೃಪನೀತಿ ॥ ಆವನಾಗಲಿ ಶರಣುವೊಕ್ಕೊಡೆಕಾವುದೇ ಕ್ಷತ್ರಿಯರ ಮತವಿಂ । ತಾವುದುಚಿತವು ಭೀಮ ನೀ ಹೇಳೆಂದನಾಭೂಪ ॥೧೫॥ ಆರಿಗಾರುಪಕಾರಿಗಳು ಮೇ । ಣಾರಿಗಾರಪಕಾರಿಗಳು ತಾ । ನಾರಿಗಾರುಂಟವರವರ ಕೃತಕರ್ಮಸಂಸ್ಕಾರ ॥ ಹೋರಿಸುವುದಳಿಸುವುದು ಸೌಖ್ಯಕೆ । ಸೇರಿಸುವುದಿದಕಹಿತಹಿತರೆಂ । ದಾರ ಮುರಿವುದು ಮನ್ನಿಸುವುದೈ ಭೀಮ ಹೇಳೆಂದ ॥೧೬॥ ಅದರಿನಾಚೆಯಭವದ ದುಷ್ಕೃತ । ವೊದಗಿತೀಜನ್ಮದಲಿ ವನವಾ । ಸದ ಪರಿಕ್ಲೇಶಾನುಭವಕಿವರೇನಮಾಡುವರು ॥ ಒದಗಿದುತ್ಸವದಲ್ಲಿ ಪರರ । ಭ್ಯುದಯವನು ಬಯಸುವುದು ಪರರಿಗೆ । ಮುದವನಾಚರಿಸುವದು ಧರ್ಮಜ್ಞರಿಗೆ ಗುಣವೆಂದ ॥೧೭॥ ಎಣಿಸಲೇಕಿದನದನು ಕೌರವ । ಗಣ ಮರಳಿ ಬಂದಲ್ಲದಾರೋ । ಗಣೆಯ ಮಾಡೆನು ಪಾರ್ಥ ನೀನ್ನಡಿ ನಿನ್ನ ಹವಣೇನು ॥ ರಣದೊಳರಿಗಳ ಮುರಿದು ಕುರುಧಾ । ರಿಣಿಪ

ತಿಯೆ ತಹುದುಂಟೆಯೆನೆ ಬಿಲು । ಗಣಗಳನು ತಿದ್ದಿದನು ಫಲ್ಗುಣ ಹೂಡಿದನು ರಥವ ॥೧೮॥ ಎಮ ಗೆ ನುಡಿ ಬೇರುಂಟೆ ನೀತಿ । ಭ್ರಮಿತರಾವಲ್ಲನಿಲಸುತನು । ಭ್ರಮಿತನವ ಸೈರಿಸುವುದೈ ಕಾರುಣ್ಯನಿಧಿ ನೀನು ॥ ನಿಮಿಷದಲಿ ಗಂಧರ್ವಕನಸಾ । ಕ್ರಮಿಸಿ ಕೌರವಗಣವನೀಪದ । ಕಮಲದಿದಿರಲಿ ಕೆಡಹಿ ತೋರುವೆನೆನುತ ಹೊರವಂಟ ॥೧೯॥ ಮುರಿದು ಚೆಲ್ಲಿದಸಕಲಕುರುಬಲ । ನೆರೆದುದರ್ಜುನನೊಡನೆ ಸೂಟಿಯೊ । ಳರಿಭಟನ ಬೆಂಬತ್ತಿದನು ಫಡ ನಿಲ್ಲುನಿಲ್ಲೆನುತ ॥ ಸೆರೆಯ ಬಿಡು ಗಂಧರ್ವಲೋಕವ ನುರುಹುವೆನು ಹಿಂದಿಕ್ಕಿಕೊಂಬನ । ಶಿರವ ಚಂಡಾಡುವೆನೆನುತಕವಿದೆಚ್ಚನಾಪಾರ್ಥ ॥ ಸರಳಿನುಬ್ಬೆಗೆ ಸೆಡದು ಸಮರಕೆ । ತಿರುಗಿ ನಿಂದುದು ಖಚರಬಲವು । ಬ್ಬರದಬೊಬ್ಬೆಯಲುರುಬಿದುದು ಶರಹತಿಗೆ ಸೈರಿಸುತ ॥ ಉರುಳಿದವು ಗಂಧರ್ವಶಿರ ನಭ । ಸರಳಮಯ ದಿಗುಜಾಲವಂಬಿನ । ಹೊರಳಿಯಲಿ ಹೊದಿಸಿದುದೆನಲು ಕವಿದೆಚ್ಚನಾಪಾರ್ಥ ॥೨೧॥ ಮೊರೆವೆಗರಿಗಳ ಮೊನೆಯಲುದಿರುವ । ಹೊರಳಿಗಿಡಿಗಳ ಬಾಯಧಾರೆಗ । ಳುರಿಯಹೊದರಿನ ಹುದಿದಹೊಂಬರಹದ ಸುರೇಖೆಗಳ ॥ ಸರಳು ಹೊಕ್ಕವು ಹೆಕ್ಕಿದವು ಖೇ । ಚರಬಲವನೊಕ್ಕಿದವು ತೂರಿದ । ವರಿಭಟನ ಚುಚ್ಚಿದವು ಹೆಚ್ಚಿದವೆಂಟುದೆಸೆಗಳಲಿ ॥೨೨॥ ಕೋಲ ಬಲುವಳೆಗೊಡ್ಡಿಹರಿಗೆಯ । ಮೇಳೆಯವ ಮರೆಗೊಂಡು ಖೇಚರ । ರಾಳು ನಿಂದೆಚ್ಚಿತು ನಿಹಾರದಲರ್ಜುನನ ರಥವ ॥ ಕೋಲುಗಳನಾಹರಿಗೆ ಹಲಗೆಯ ಮೇಳೆಯವನಾಮರೆಯಲುಗಿದೆಸು । ವಾಳ ನೊಂದಂಬಿನಲಿ ಸಂದಣಿಗೆಡಹಿದನು ಪಾರ್ಥ ॥೨೩॥ ಮುಟ್ಟಿ ಹೆಣನನು ಖಚರಬಲ ಹುರಿ । ಗಟ್ಟಿ ತಲೆವರಿಗೆಯಲಿ ಪಾರ್ಥನ । ಕಟ್ಟಳವಿಯಲಿ ಚೂರಿಸಿದರುಬ್ಬಣದಮೊನೆಗಳಲಿ ॥ ದಿಟ್ಟರಹಿರೋ ಕೌರವೇಂದ್ರನ । ಕಟ್ಟಿದಾತನ ಕರೆಯಿ ನಿಮ್ಮನು । ಮುಟ್ಟಿದರೆ ನೃಪನಾಣೆಯೆನುತೊಡಹಾಯ್ಸಿದನು ರಥವ ॥೨೪॥ ಗಜಬ ಪದಘಟ್ಟಣೆಯ ಬಹಳಾಂ । ಬುಜದವೊಲು ರಥಚಕ್ರಹತಿಯಲಿ । ಗಿಜಗಿಜಿಯ ಮಾಡಿಸಿದಖೇಚರಚಟುಲಪಟುಭಟರ ॥ ವಿಜಯನಲ್ಲಾ ಸುರಪುರದಮೌ । ರಜಗನಾವೆಡೆ ಕುರುಬಲದ ಗಜ । ಬಜದ ಗರುವನ ತೋರೆನುತ ತೂಳಿದನು ಕಲಿಪಾರ್ಥ ॥೨೫॥ ಅಳವಿಯಲಿ ಕೈಮಾಡಿ ಖೇಚರ ರಳಲಿಗರು ಮುಮ್ಮುಳಿತರಾದರು । ಬೆಳಗಿದವು ದಿವ್ಯಾಸ್ತ್ರಧಾರೆಗಳಖಿಳದಿಗುತಟವ ॥ ತಳಪಟದೊಳಾಸರೆಸಹಿತ ಕೈ । ಚಳಕದಲಿ ತೆಗದೆಸುತ ಸಮರಕೆ । ಮಲೆತು ನಿಂದನು ಚಿತ್ರಸೇನನು ಪಾರ್ಥನಿದಿರಿನಲಿ ॥೨೬॥ ಬಿಡು ಸೆರೆಯನವಗಡೆಯತನವೆಂ । ಮೊಡನೆ ಸಲ್ಲದು ಸೂಳೆಯರ ಸುರೆ । ಗುಡಿಹಿಗಳ ರಸವಾದಿಗಳ ಸೇರುವೆಯಲೊಪ್ಪುವುದು ॥ ಫಡಯೆನುತ ನಾರಾಚದಲಿ ಬಲ । ನೆಡನ ಕೀಲಿಸಿ ಪಿಂಗಡೆಯ ಮುಂ । ಗುಡಿಯ ಕಟ್ಟಿದನಂಬಿನಲಿ ಖಚರಾಧಿಪನ ರಥವ ॥೨೭॥ ನೂಕದಿರಲಾಹವಕೆ ಸಮ್ಮುಖ । ವೇಕೆನುತ ಹತ್ತಿದನು ಗಗನವ । ನಾಕಿರೀಟಿಯ ಗೆಲುವೆನೆಂದುಬ್ಬರದಬೊಬ್ಬೆಯಲಿ ॥ ನಾಕನಿಳಯರ ಮಾರ್ಗದೊಳಗ । ವ್ಯಾಕುಳನು ಭುಲ್ಲೈಸಿದೊಡೆ ಲೋ । ಕೈಕವೀರನಲಾ ಧನಂಜಯನಡರಿದನು ನಭವ ॥೨೮॥ ಎಲವೊ ಕೌರವಸಹಿತ ಕಮಠನ । ಕೆಳಗೆ ಧ್ರುವನಿಂ ಮೇಲೆ ಹೊಕ್ಕೊಡೆ । ಕೊಲುವೆನಲ್ಲದೆ ಬಿಡುವೆನೇ ಫಲ ನಿಲುನಿಲ್ಲೆನುತ ॥ ತುಳುಕಿದನು ಕೆಂಗೋಲನಿನವಂ । ಡಲಕೆ ದಿಗ್ಭ್ರಮೆಯಾಯ್ತು ನಭದಲಿ । [illegible] ವಿಮಾನತತಿ ಚೆಲ್ಲಿದವು ದೆಸೆದೆಸೆಗೆ ॥೨೯॥ ತಿರುಗಿ ನಿಂದನು ಖಚರಪತಿ ನಿಷ್ಠುರ [illegible] ಪಾರ್ಥ [illegible] ಡು । ಮರುಳೊ ಮೂಢನೊ ಜಡನೊ ಪಿತ್ತಭ್ರಾಂತಿವಿಹ್ವಲನೊ ॥

ಧುರದ ಕೌತುಕಗರೆಳವಮೋಘರ್ಗಂ । ತರಿತ್ರಹೃದಯನೊ ನಿಲ್ಲು ಚಾಪದ । ಶರವನುಪಸಂಹರಿಸಿ ನಮ್ಮಯ ಮಾತ ಕೇಳೆಂದ ॥೩೦॥ ಹುಲಿಯ ಮುರಿದೊತ್ತಿದೊಡೆ ಪತ್ರಸಂ । ಕುಲಕೆ ಸಂಕಟವೇನು ವಾಯಸ । ಕುಲವ ಕೈಮಾಡಿದೊಡೆ ಕೋಟಲೆಯೇನು ಕೋಗಿಲೆಗೆ ॥ ಖಳರ ಕೊಪ್ಪರಿಸಿದೊಡೆ ಸುಜನರ । ತಲೆಗೆ ವೇದನೆಯೇನು ಕೌರವ । ಕುಲವನದ್ದಿದೊಡೇನು ಜಠರದಶೂಲೆ ನಿನಗೆಂದ ॥೩೧॥ ಹೋದವಾರಿಯ ಕರೆದು ಮನೆಯೊಳ । ಗಾದರಿಸಿದವರುಂಟೆ ನೀರಲಿ । ಸಾದಕೆಂಡವನುರುಹಿ ಮುಡಿದವರುಂಟೆ ಮಂಡೆಯಲಿ ॥ ಕೈದು ಮುರಿದೊಡೆ ಹಗೆಗೆ ತನ್ನಯ । ಕೈದುಕೊಟ್ಟವರುಂಟೆ ಕುರುಪತಿ । ತೀದಡೀತನ ಬಿಡಿಸಿಕೊಂಬಿರೆ ಲೇಸುಲೇಸೆಂದ ॥೩೨॥ ಜನಪನೀತಿಯೊ ಮೇಣುಖೋಳೆಯ । ತನವೊ ಬಿಲುಜಾಣಿಕೆಯೊ ಬಿಂಕವೊ । ನಿನಗೆ ಕದನದ ಕಲುಹೆಯೋ ಸಾವಲಯೆವಿದನೀಗ ॥ ಬನಕೆ ಮರಳ್ಕೆ ಮರುಳೆ ನೀಹುದು । ವನೆಯಹಾವನು ಹದ್ದುಹಿಡಿದೊಡೆ । ಮನಕತವಮಾಡುವರೆ ಬಿಜಯಂಗೈಯಿ ನೀವೆಂದ ॥ ನಟರಲಾ ನೀವ್ಸುರಪುರದ ಚಾ । ವಟೆಯರ್ಕ ಚತುರೋಕ್ತಿಗಳಲಟ । ಮಟಿಸಿದೊಡೆ ನಾ ಮರಳುವೆನೆ ಬಿಡುಬಿಡು ಸುಯೋಧನನ ॥ ಕಟುಮಧುರವುರಿಸೀತವತಿಸಂ । ಕಟವುಸುಖವಿಷವಮೃತವಾವುದು । ಘಟಿಸಿತಗ್ರಜನಾಜ್ಞೆಯಿದು ನಮಗೆಂದನಾಪಾರ್ಥ ॥೩೪॥ ಧರ್ಮವಾಗಲಿ ಮೇಣುಜಗದಲ । ಧರ್ಮವಾಗಲಿ ರಾಜಮಂತ್ರದ । ಮರ್ಮವಾಗಲಿ ನೀತಿಬಾಹಿರವಾಗಲದು ಮೇಣು ॥ ಧರ್ಮಪುತ್ರನ ಬೆಸನು ವೈದಿಕ । ಧರ್ಮವೆಮಗದು ರಾಜಮಂತ್ರದನಿರ್ಮಲಿನಮತವೆಮಗೆ ಬೇರೊಂದಿಲ್ಲ ಮತವೆಂದ ॥೩೫॥ ನುಸುಳುಗಂಡಿಯಿದಲ್ಲ ಕೌರವ । ಮಸಮಶೀತ್ರನನಕಟ ಬಿಡು ನಿನ್ನ ಸಿರಿಗುಬ್ಬಸವಮಾಡೆನಂಘ್ರಿಗಳಾಣೆ ಧರ್ಮಜನ ॥ ಮಸಗುವರೆ ಹಿಡಿ ಧನುವ ನೆನುತೆ । ಬ್ಬಿಸಿದನವಿರಳಶರವನಾತನ ಮುಸಿಕಿದವು ಮುಕ್ಕಿರಿಸಿದವು ರಥಸನ್ನಿವೇಶದಲಿ ॥೩೬॥ ಕೋಲ ಬರಿದೇ ಬೀಯಮಾಡದಿ । ರೇಳು ಫಲುಗುಣ ಮರುಳು ನೀದಿಟ । ಕೇಳುವರೆ ನಾವಿವನಕಟ್ಟಿದೆವಿಂದ್ರನಾಜ್ಞೆಯಲಿ ॥ ಪಾಲಿಸಾ ನಿಮ್ಮಯ್ಯ ಬೆಸಸಿದ । ನೇಳಿಸದೆ ಕೇಳೆನಲು ಕೆಂಗರಿಗೋಲ ತೂಗುತ ಪಾರ್ಥ ನುಡಿದನು ಚಿತ್ರಸೇನಂಗೆ ॥೩೭॥ ಕುರುಪತಿಯ ಕಟ್ಟುವೊಡೆ ಸುರಪತಿ । ಕರೆದು ಬೆಸಸಿದ ನಿನಗೆಯೆಮಗೆ । ಮ್ಮರಸ ನೇಮವ ಕೊಟ್ಟನೀಕುರುಪತಿಯ ಬಿಡಿಸೆಂದು ॥ ಸುರಪತಿಗೆ ಕೃತಕಾರ್ಯ ನೀನಾ । ಗಿರಲು ನಾವಕೃತಾರ್ಥರಾಗಿಯೆ । ಮರಳಿ ಭೂಪನ ಕಾಬೆವೈಸಲೆ ಜಾಣನಹೆನೆಂದ ॥೩೮॥ ಬಿಡುವೆಯಾದೊಡೆ ನೃಪನಸೆರೆಯನು । ಬಿಡಿಸುವೆನು ಮೇಣಲ್ಲದಿರ್ದೊಡೆ । ಬಿಡಿಸುವೆನು ನಿನ್ನಸುರಸೆರೆಯನು ನಿನ್ನ ದೇಹದಲಿ ॥ ಮಡಿಗೆ ತೆರಪಿಲ್ಲೇಳೆನುತ ಕೈ । ಗಡಿಯಲೆಚ್ಚನು ಕಾಲಕೂಟದ । ಕಡಲು ಕವಿವಂದದಲಿ ಕವಿದವು ಪಾರ್ಥನಂಬುಗಳು ॥೩೯॥ ಕಡಿದನರ್ಜುನನಂಬನೀಸವ । ಗಡವಿದೇಕೈ ಮರುಳೆ ಕೆಂಡವ । ಮಡಿಲೊಳಿಕ್ಕುವುದರ್ತಿಯೇಸಂಧಾನ ನಿಮಗೆಮಗೆ ॥ ಬಿಡುವೆನಿನಿಬರ ಸೆರೆಗಳನು ನಿ । ನ್ನೊಡೆಯನಲ್ಲಿಗೆ ಕೊಂಡು ನಡೆಯೆಂ । ದೊಡನೆ ಬಂದನು ಧರ್ಮರಾಯನ ಬಳಿಗೆ ಖಚರೇಂದ್ರ ॥೪೦॥ ಸೋಲವೆಮ್ಮದು ನಿಮ್ಮ ತಮ್ಮನು । ಮೇಲುಗೈ ನಿಮ್ಮಡಿಗಳಾಜ್ಞಾ । ಪಾಲಕರು ಭೀಮಾರ್ಜುನರು ಮಾದ್ರೀಕುಮಾರಕರು ॥ ಕಾಳಗದೊಳೆಮ್ಮಖಿಳಖಚರರ । ಧೂಳಿಪಟಮಾಡಿದನು ಲಕ್ಷ್ಮೀ । ಲೋಲ ನಿಮಗೊಲಿದಿಹನು ಗದುಗಿನವೀರನಾರಯಣ ... ॥೪೧॥

ಅಂತು ಸಂಧಿ ೨೦ ಕ್ಕೆ ಪದ ೧೦೪೩ ಕ್ಕಂ ಮಂಗಳಮಸ್ತು.

## ಇಪ್ಪತ್ತೊಂದನೆಯ ಸಂಧಿ.

**ಸೂಚನೆ॥ ಕಳುಹಿದನು ಯಮಸೂನು ವಂಶ । ಪ್ರಳಯನಂ ಪ್ರಾಯೋಪವೇಶವ ।**
**ತಿಳುಹಿ ದೈತ್ಯರು ಸಂತವಿಟ್ಟರು ಕೌರವೇಶ್ವರನ ॥**

ಕೇಳು ಜನಮೇಜಯಧರಿತ್ರೀ । ಪಾಲ ಕೌರವನೃಪನ ತಂದು ಕೃ । ಪಾಳುವಿನ ಚರಣಾಗ್ರ
ದಲಿ ಕೆಡಹಿದನು ಕಲಿಪಾರ್ಥ ॥ ತೋಳ ಹಿಂಗಟ್ಟುಗಳ ಮೋರೆಯ । ಕಾಳಿಕೆಯ ಬಿಡುದಲೆಯ ನೀರೊ
ರೆ । ವಾಲಿಗಳ ಕುರುಭೂಪನಿದ್ದನು ತಮ್ಮದಿರುಸಹಿತ ॥೧॥ ಕೊಳ್ಳಿ ಸೆರೆಯನು ನಿಮ್ಮ ಸಹಭವ ।
ರೆಲ್ಲರಂ ಕಡುಮೂರ್ಖರಿದು ನಿ । ಮ್ಮೆಲ್ಲರಿಗೆ ಮತವೈಸಲೇ ನಾವೆಂದು ಫಲವೇನು ॥ ಖುಲ್ಲರಿವದಿರ
ಬಿಡಿಸಿದೊಡೆ ತಳುವಿಲ್ಲದಹುದಪಘಾತ ಸಾಕಿ । ನ್ನಿಲ್ಲಿಯದು ನಯ ಬೀಳುಗೊಡಿ ನೀವೆಂದನಾ
ಖಚರ ॥೨॥ ಮಾನಭಂಗವು ಬರಲಿ ಮೇಣಭಿ । ಮಾನವಾಲಿಂಗಿಸಲಿ ಚರಣದೊ । ಳಾನತರ ಪಾಲಿ
ಸುವುದೇ ಕ್ಷತ್ರಿಯರ ಧರ್ಮವಿದು ॥ ನೀನೆಮಗೆ ಬಾಂಧವನೆನುತ ಸ । ನ್ಮಾನದಲಿ ಕಳುಹಿದನು ಬಳಿ
ಕು । ದ್ಯಾನದಲಿ ದೇವೇಂದ್ರನೆತ್ತಿದನಳಿದಖೇಚರರ ॥೩॥ ಕಳುಹಿದನು ಖೇಚರನ ನವನಿಪ । ತಿಲಕ
ನೋಡಿದನೀತನನು ನಿಜ । ಲಲನೆಯನು ಕರೆದನು ಸುಯೋಧನನೊಂದನಕಟೆನುತ ॥ ನಳಿನಮುಖಿ
ಹೆಡಗೈಯ ಬಿಡು ಕಲು । ನೆಲನು ಹಾಸಿಕೆ ಹಂಸತಲ್ಪದ । ಪಳಿಕಿನಲಿ ಪವಡಿಸುವಗೀವಿಧಿಯೇ ಶಿವಾ
ಯೆಂದ ॥೪॥ ಬಂದಳಬುಜಾನನೆ ಸುಯೋಧನ । ನಂದವನು ನೋಡಿದಳು ಸುಯ್ದಳು । ಬೆಂದವಿಧಿ
ಬಂಧನವ ತಂದುದೆ ಸಾರ್ವಭೌಮರಿಗೆ ॥ ಒಂದು ಕೈ ಗಲ್ಲದಲಿ ಬಿಡಿಸಿದ । ಳೊಂದು ಕೈಯಲಿ ಭುಜ
ದಪಾಶವ । ನಿಂದುಮುಖಿ ದುರಿಯೋಧನನ ದುಶ್ಶಾಸನನುಸಹಿತ ॥೫॥ ಕೆಳದಿಯರ ಕೈಯಿಂದ ಕೊ
ಯ್ಸಿದ । ಳುಳಿದ ಕೌರವನನುಜವರ್ಗದ । ಬಲುಹುರಿಯನೇಣುಗಳ ನವದಿರ ಗೋಣುಗಳು ಮಣಿಯೆ॥
ಅಳಲಿಸಿದನೇ ಖಚರನಾತನ । ಕೊಲಿಸಬೇಹುದು ಕಳುಹಿ ಕಷ್ಟವ । ಬಳಸಿದಿರಿ ಭೂಪಾಲಯೆಂದಳು
ನಳಿನಮುಖಿ ನಗುತ ॥೬॥ ಅರಸನೊಂದ್ಯೆ ಮರ್ದನಕೆ ಮ । ಲ್ಲರುಗಳಿಲ್ಲೆಮಗೊತ್ತುವವು ಕಲು ।
ಹರಳು ಮಜ್ಜನಭೋಗಿಸುವರಸಿತಾಂಬು ತಿಳಿಗೊಳನು ॥ ಹರಿಣಶಾರ್ದೂಲಾದಿ ಚರ್ಮಂ । ಬರವೆ
ಸಮಕಟ್ಟೆಮಗೆ ರತ್ನಾ । ಭರಣವೇ ರುದ್ರಾಕ್ಷಿಯೆಂದಳು ನಗುತ ತರಳಾಕ್ಷಿ ॥೭॥ ಮಾರುವವು ಮಟ
ಶಾಖಿ ಗಿರಿಗಳು। ತೋರಕರಿಗಳು ಭದ್ರಗಜ ವನ । ಭೂರುಹದನೆಳಲೆಮಗೆ ಸತ್ತಿಗೆ ಪಲ್ಲವವ್ರಾತ ॥ ಚಾರು
ಚಾಮರ ಕಿರುಮೊರಡಿ ವಿ । ಸ್ತಾರಪೀಠವು ಹಂತಿಗಾರರು । ಭೂರಿಸರ್ಪಾವಳಿಗಳರಮನೆ ಹೊದರು
ಹೊಸಮೆಳೆಯ ॥೮॥ ಈ ವಿಪತ್ತಿನ ನಿಮ್ಮಡಿಯ ಸಂ । ಭಾವಿಸುವೊಡೆಮಗಾದವಸ್ಥೆಗ । ಳೀವಿಧಿಗ
ಳೇಕೆಮ್ಮ ಬಾಳಿಕೆ ಯೆಂದು ದುಗುಡದಲಿ ॥ ದೇವನಿರ್ಪನು ಧರ್ಮಸುತನಿ । ನ್ನಾವುದುಚಿತಾನುಚಿತವೆಂ
ಬುದ । ಭಾವನವರೇ ಬಲ್ಲಿರೆಂದಳು ದ್ರುಪದಾದೇವಿ ॥೯॥ ಮಾನಿನಿಯ ಕಟಕಿಯ ಮಹಾಸ್ತ್ರಕೆ ।
ಮೌನವನು ಮರೆಗೊಂಡು ಕಲುಷ । ಧ್ಯಾನನಿದ್ದನು ಚಿತ್ತದಲಿ ಬೇರೊಂದ ಚಿಂತಿಸುತ ॥ ಭಾನುಮತಿ ಕೈ
ಮುಗಿದಳೀಕ । ರ್ಣಾನುಗತತಾಟಂಕಮುದ್ರೆಯ । ನೀನಲೈ ದಯಗೈದೆಯೆಂದಳೆರಗಿದಳು ಚರಣದಲಿ ॥

ಎತ್ತಿದನು ರಾಣಿಯನು ನೃಪ ತಲೆ । ಗುತ್ತಲೇಕೈನಿನಗೆ ಬಂದಾ । ಪತ್ತುನಮ್ಮದು ನಮ್ಮತೊಡಕಿನ ತೋಟಿಗಳು ನಿನಗೆ ॥ ಹೆತ್ತತಾಯ್ಗಾಂಧಾರಿನದಿನಾ । ವಿತ್ತಡಿಗಳಕಟಕಟ ನೀದು । ಶ್ಚಿತ್ತನಾಗದಿರೆಂದು ನುಡಿದನು ನೃಪತಿ ಕೌರವಗೆ ॥೧೧॥ ದ್ರೋಣರೆಂದುದವಾಡೆ ಭೀಷ್ಮನ । ವಾಣಿ ವಿಷವೈ ನಿನಗೆ ವಿದುರನು । ರಾಣಿಕವನಿನ್ನಲ್ಲಿ ಬಲ್ಲನೆ ಬಗೆಯೆ ನೀನಿವರ ॥ ಪ್ರಾಣವಾಯುಗಳವೆರು ಸುಭಟ । ಶ್ರೇಣಿ ದೇಹಕೆ ನಿನ್ನ ತನು ನಿ । ತ್ರಾಣವದರಿಂದಾಯ್ತು ಪರಿಭವವೆಂದನಾಭೂಪ ॥೧೨॥ ಬಿಡಿಸಿದದರಿಂ ದ್ವಯವಿಷಾದದ । ತಡಿಯ ಚಿತ್ತದ ನೈಗೆ ಬೇರೊಂ । ದೆಡೆಯಲಿದ್ದುದು ಬೀಳುಕೊಂಡನು ಧರ್ಮನಂದನನ ॥ ಒಡನೆ ಬಂದರು ರಾಣಿಯರು ಕೈ । ಗುಡಿಯ ವರಸುದ್ದಿಯಲಿ ಸೂಸಿದ । ಪಡೆಯು ಧವಿಷಕೆ ನೆರೆದುದಿನಸುತಸೌಲರುಸಹಿತ ॥೧೩॥ ಭಟರ ಬೊಬ್ಬೆಗಳಡಗಿದವು ಬಾ । ಯ್ದುಟಿಗಳಾಡವು ವಂದಿನಿಕರಕೆ । ಪಟಹಪಣವ ಮೃದಂಗ ವಿದ್ದವು ಮೌನದೀಕ್ಷೆಯಲಿ ॥ ಚಟುಲಗಜಹಯರಥದವೆರು ಲಟ । ಲಟಿಸದಿದ್ದರು ಕೌರವೇಂದ್ರನ । ಕಟಕ ದುಮ್ಮಾನದಲಿ ಬಂದುದುಹಸ್ತಿನಾಪುರಕೆ ॥೧೪॥ ಹೊಗಲಿ ಪಾಳೆಯಪುರವನೆಂದು । ಬೈಗದ ಬೆಳೆ ಸಿರಿವಂತನೆತ್ತಿದ । ದುಗುಡದಲಿ ಕುಳ್ಳಿರ್ದನಾಸುರನದಿಯ ತೀರದಲಿ ॥ ಹೊಗೆವಮೋರೆಯ ನೆಲಕೆ ನಟ್ಟಾ । ಲಿಗಳ ನಿಖಿಳೇಂದ್ರಿಯದ ರೇಚಕ । ಬಿಗಿಯೆ ಬೇಗೆಯ ಬೇಸರಿನ ಬೆಸಗುದಿಯ ಸುಯ್ಲಿನಲಿ ॥೧೫॥ ತರಿಸಿ ಗಂಗಾಜಲವ ಗೋಮಯ । ವೆರಸಿ ಕುಶಸಮ್ಮಾರ್ಜನೆಯ ವಿ । ಸ್ತರಿಸಿ ಪರಿಕರಶುದ್ಧಿಯಲಿ ಪಸರಿಸಿದಬರ್ಹಿಯಲಿ ॥ ನಿರಶನವ್ರತವೆಂದು ಮಂತ್ರೋ । ಚ್ಚರಿತಸಂಕಲ್ಪದಲಿ ಕೌರವ । ರರಸ ಪವಡಿಸಿದನು ಕೃತಪ್ರಾಯೋಪವೇಶದಲಿ ॥೧೬॥ ಹೊಗಿಸಬೇಡಾರುವನು ಕರ್ಣಾದಿಗಳು ಮೊದಲಾಗೆಂದು ದಡ್ಡಿಯ । ನುಗುಳುಗಂಡಿಯಕಾಹ ಕೊಟ್ಟನು ತನ್ನ ಬೇಹವರ ॥ ದುಗುಡದಲಿ ಪರಿವಾರ ಬಂದೋ । ಲಗಿಸಿ ಹೊರಗೇ ಹೋಗುತಿರ್ದುದು । ನಗುತ ಹೊಕ್ಕಳು ಭಾನುಮತಿ ಕಂಚುಕಿಯನೊಡೆನೂಕಿ ॥ ಏನುದಿಟ ಸಂಕಲ್ಪವಿನಿತಕೆ । ನಾನು ಹೊರಗೇ ಹೊಗುವವೇಳು ಕೃ । ಶಾನುವನು ಬೀಳುವೆವು ನಡೆ ಭಾಗೀರಥೀಮಡುವ ॥ ಮಾನನಿಧಿಯೇ ವಿವಿಧಗರಳವಿ । ತಾನವನು ತರಿಸುವೆನು ನಿಶ್ಚಯ । ವೇನು ನಿರಶನಮರಣವೇಕೆಂದಳು ಸರೋಜಮುಖಿ ॥೧೭॥ ತರುಣಿ ನೀ ಹೆಸರಿಸಿದವಿವು ದು । ರ್ಮರಣಸಾಧನವಮಲದರ್ಭಾ । ಸ್ತರಣವಿದು ಪಾವನವಲಾ ಪ್ರಾಯೋಪವೇಶದಲಿ ॥ ಪರಿಹರಿಸುವೆನು ದೇಹವನು ಸುಡ । ಲರಸುತನವನು ಪಾಂಡುಪುತ್ರರ । ಕರುಣಕಲುಷಿತಕಾಯವಿದನಾದರಿಸುವೆನೆ ಯೆಂದ ॥೧೮॥ ಈ ನಿರಾಹಾರವು ನಿರರ್ಥಕ । ವೇನನೆಂಬೆನ್ನ ಜೀಯ ಮುರಿದಭಿ । ಮಾನ ಬೆಸವುದೆ ಬಣ್ಣವಳಿವುದೆ ಬಂದದುರಿಯಶದ ॥ ಆ ನದೀಸುತವಿದುರರೆಂದುದ । ನೀನುಪೇಕ್ಷಿಸಿ ಕಳೆವೆ ಹೆಂಗಸು । ನೀನರಿಯೆಯೆನಬೇಡ ಚಿತ್ತೈಸೊಂದುಬಿನ್ನಪವ ॥೨೦॥ ತಮ್ಮ ನೆರೆ ಧಟ್ಟೈಸಿ ರಣದಲಿ । ನಮ್ಮ ಬಿಡಿಸಿದರವರು ನೀವಿ । ನ್ನೆಮ್ಮ ಹಿಂದಣ ಹಳಿವ ನೋಡದಿರೆಂದು ಯಮಸುತನಾ ॥ ನಮ್ಮ ನಗರಿಗೆ ಕರೆಸಿ ಧರೆಯನು । ತಮ್ಮ ಪಟ್ಟಣಸಹಿತ ಕೊಟ್ಟೊಡೆ । ನಿಮ್ಮನೀಗಲು ಲೋಕ ಮೆಚ್ಚುವುದೆಂದಳಿಂದುಮುಖಿ ॥೨೧॥ ಕರೆಸಿದೊಡೆ ದಿಟಬಾರರವರಾ । ದರಣೆಯನು ಕೈಕೊಂಡು ನಿಲುವರು । ವರುಷಹದಿಮೂರಾದೊಡಲ್ಲದೆ ಮುಟ್ಟರೀನೆಲನ ॥ ಅರಿಗಳುಪಟಲದಿಂದ ತಪ್ಪಿಸಿ । ಮರಳಿಚಿದಜೀವೋಪಕಾರಕೆ । ಕುರುಕುಲಾಗ್ರಣಿ ಲೇಸುಮಾಡಿದನೆಂಬುದೀಲೋಕ ॥೨೨॥

ನುಡಿದವಧಿಹದಿಮೂರುವರುಷದ । ಹೆಡತಲೆಯನೊದೆದೆದ್ದು ನವಿಮ್ಮ । ಪೊಡವಿಯರ್ಧಕೆ ಬಲಿಯ ಬೀ
ಸದೆ ಬಿಡುವರೇ ಬಳಿಕ ॥ ನುಡಿಯ ಸಲಿಸದಮುನ್ನ ನೀಕೊಟ್ಟೊಡೆ ಕೃತಜ್ಞತೆ ತಪ್ಪುವುದು ಮಿಗೆ ।
ನುಡಿಯಲಮ್ಮೆನು ರಾಜಕಾರ್ಯವನೆಂದಳಿಂದುಮುಖಿ ॥೨೪॥ ಮರೆವಹಗೆಯೇ ನಾವು ಮಾಡಿದ । ನರಿಯ
ಲಾ ಮೊದಲಿಸಿ ಮರ್ಮವ । ನಿರಿವಸುರಗಿಕಣಾ ಸದಾಪಾಂಚಾಲೆ ಪವನಜರು ॥ ಮರುಗಲೇತಕೆ
ಭಾನುಮತಿ ನಿ । ನ್ನುರುವಮಗನಲಿ ರಾಜ್ಯಭಾರವ । ಹೊರಿಸಿ ಬದುಕುವುದೆನ್ನ ಕಾಡದೆ ಹೋಗು
ನೀನೆಂದ ॥೨೫॥ ಸಾಕುಸಾಕೀಮಾತಿನಲಿ ಮಗ । ಗೇಕರಾಜ್ಯದ ಪಟ್ಟವಾಯ್ತೆವಿ । ವೇಕಿಗಳಿಗಧಿದೈವ
ವೇ ತಾನೀಸುಹಿರಿದಲ್ಲ ॥ ಮೂಕಭಾವದ ದೀಕ್ಷೆ ತನಗೆಂ । ದಾಕಮಲಮುಖಿಯಿದ್ದಳಿತ್ತಲು । ನೂಕಿ
ದವು ದಂಡಿಗೆಗಳರಮನೆಯಿಂದ ಸಂದಣಿಸಿ ॥೨೬॥ ಬಂದಳಾಗಾಂಧಾರಿ ಸೊಸೆಯರ । ವೃಂದಸಹಿತು
ರವಣಿಸಿ ಹೊಕ್ಕಳು । ನಿಂದು ನೋಡಿದಳಾತನಿರವನು ಕುಶೆಯಹಕ್ಕೆಯಲಿ ॥ ಕಂದಿದಳು ಕಡುಶೋಕ
ಶಿಖಿಯಲಿ । ಬೆಂದಳೇನ್ನೆ ಮಗನೆ ಹಾಸಿಕೆ । ಯಂದ ಲೇಸಾಯ್ತೆನುತ ಕುಳ್ಳಿರ್ದಳು ಸಮೀಪದಲಿ
॥೨೭॥ ಏನುದರ್ಭಾಸ್ತರಣಶಯನವಿ । ದೇನುಕಾರಣ ನಿರಶನವ್ರತ । ವೇನು ಸಾಧಿಸಲಾದುದೀಪ್ರಾ
ಯೋಪವೇಶದಲಿ ॥ ಏನಸಿದ್ಧಿಯಿದಕ್ಕೆ ಮೋಹಿದ । ಮೌನಮುದ್ರೆಯ ಬಿಸುಟು ಹೇಳೆ । ನ್ನಾಣೆಯೆ
ನುತವೆ ಹಣೆಯ ಹಣೆಯಲಿ ಚಾಚಿದಳು ಮಗನ ॥೨೮॥ ತಾಯ ಹೇಳುವುದೇನು ಪಾಂಡವ । ರಾಯ
ರುಳುಹಿದಪೊಡಲನಿದನಿದ । ರಾಯಸವನಾಹೇಳಲರಿಯೆನು ಹೊರಗೆ ಕೇಳುವುದು ॥ ನೋಯಲೇತಕೆ
ನಿಮಗೆ ಮಕ್ಕಳು । ತಾಯೆ ನೂರುಂಟನಿಬರಲಿ ಕುಂ । ದಾಯಿತೊಂದೈಸಲೆ ಮನೋವ್ಯಥೆಯೇಕೆ ನಿಮ
ಗೆಂದ ॥೨೯॥ ಮಾಡಿದೆನು ಸಂಕಲ್ಪವಿದರೊಳು । ಗೂಡ ಕಳಚುವೆನೊಮ್ಮೆ ನೀವೇ । ನೋಡಿ ಸಂತಸ
ಪಡುವುದಾದುಶ್ಶಾಸನಾದಿಗಳ ॥ ಕೇಡಿಗನು ಕುರುವಂಶಕೆಂದಿಳೆ । ಯಾಡುವುದು ತನ್ನೊಬ್ಬನನು ನಾ ।
ಮೂಡಿದೆನು ನೆರೆ ಮುಳುಗಿದೊಡೆ ಕುಲಕೆಲ್ಲ ಲೇಸೆಂದ ॥ ಉಸುರುಬೀಯದಮುನ್ನ ರಾಜ್ಯವ । ನೊಸೆ
ದು ಕೊಟ್ಟೆನು ಪಟ್ಟಬಂಧನ । ದೊಸಗೆಯಲಿ ಕೌತುಕವನೀಕಿಸಿಯಾರೆ ಕೇಳುವೆನು ॥ ಅಸುವನಳುಕದೆ
ಬಿಡುವೆನೌ ಶಂಕಿಸದೆ ದುಶ್ಶಾಸನಗೆ ಪಟ್ಟವ । ನೆಸಗಿ ನಡೆಯೌ ತಾಯೆ ಬಿಜಯಂಗೈಯಿ ನೀವೆಂದ
॥೩೦॥ ಆಸಮಯದಲಿ ವಿಗತನಯನಮ । ಹೀಶ ಬಂದನು ಜನಪದದ ವಿ । ನ್ಯಾಸದುಗ್ಗಡಣೆಯಲಿ
ವಿದುರನ ಹೆಗಲ ತೋಳಿನಲಿ ॥ ಆಸರಿನ ಬೇಗುದಿಯ ಬೆಂಕಿಯ । ಬೇಸರಿನ ಬಿಸುಸುಯ್ಲರಾಣೀ ।
ವಾಸಕುಲವಿದಿರೆದ್ದುದಖಿಳಾಭರಣರಭಸದಲಿ ॥೩೧॥ ಸಂತವಿಡಿರೇ ಮಗನ ನಿಜದೇ । ಹಾಂತಕೃತಸಂ
ಕಲ್ಪಗಡ ನೃಪ । ನಂತರಂಗವ ಕರೆಸಿಯೆಂದಳಲಿದಳು ಗಾಂಧಾರಿ ॥ ಭ್ರಾಂತಿ ಬಿಗಿದಿದೆ ಚದುರಚಿ
ತ್ತಕೆ । ಚಿಂತೆ ಬೇರೊಂದಾಯ್ತು ರಾಯನ । ಹಂತಿಕಾರರು ಬರಲಿ ಹಿಡಿಯಲಿ ನಿರಶನವ್ರತವ ॥೩೨॥
ಸಾಕು ಮಗನೆ ದುರಂತಚಿಂತೆಯಿ । ದೇಕೆ ಸಂಕಲ್ಪಾಭಿಯೋಗ । ವ್ಯಾಕುಲತೆ ಬೇಡೇಳು ಪಾಲಿಸು
ಸಕಲ ಭೂತಳವ ॥ ಆಕುಮಾರರ ಕರೆಸಿ ಗುಣದಲಿ । ಸಾಕುವುದು ಜೀವೋಪಕಾರಕೆ । ಕಾಕ ನೆನೆಯ
ದಿರೆನುತ ಮುಂಡಾಡಿದನು ನಂದನನ ॥೩೩॥ ಸವೆದು ಹೋಯ್ತಾಯುಷ್ಯ ತನಗಿ । ನ್ನವನಿಯಾಗದು
ಮೊರೆ ಯುಧಿಷ್ಠಿರ । ಪವನಜರು ನಿನಗನ್ಯರೇ ಕರೆಸುವುದು ರಾಜ್ಯದಲಿ ॥ ಅವರುಗಳ ನಿಲಿಸುವುದು
ನೆಲದ । ರ್ಧವನು ದುಶ್ಶಾಸನಿಗೆ ಕೊಡುವುದು । ನಿಮಗೆ ಚಿತ್ತಕೆ ಬಹರೆ ಯೆಂದನು ತಂದೆಗವನೀಶ

||೩೪|| ಆದರವರಂತಿರಲಿ ನಿನಗಿ । ನ್ನೀದುರಾಗ್ರಹ ಬೇಡ ನಿನಗಳಿ । ವಾದೊಡೀಕುರುವಂಶವಳಿವುದು
ಪಟ್ಟವಾವನಲಿ ॥ ಬೀದಿಗಲಹದೊಳೊಮ್ಮೆ ಹೈಸರ । ವಾದೊಡದು ಪರಿಹರಿಸಿದವರೇ । ಸೋದರರಲಾ
ಹೆಚ್ಚುಕುಂದೇನೆಂದನಂಧನೃಪ ||೩೫|| ಕಲಹ ಬೀದಿಯೊಳಾಯ್ತು ಕಟ್ಟಿದ । ರಳಿವಿನೋದದಲಹಿತ
ರಡಹೊ । ಯ್ದೆಳೆದು ತಂದನು ಪಾರ್ಥನೆಮ್ಮಯ ತೋಳ ನೇಣುಗಳ ॥ ನಳಿನಮುಖಿ ಕಡುಮುಹುಳಿ
ಯಲಿ ಮೊ । ದಲಿಸಿ ಕೊಯ್ದಳು ತನಗೆ ಭಂಗದ । ಉಳಿವುದೆತ್ತಣಮಾತು ಕರುಣಿಸು ಬೊಪ್ಪ ನೀ
ವೆಂದ ||೩೬|| ದೋಷ ನಿಮಗಿಲ್ಲೆನ್ನ ಮೇಲಭಿ । ಲಾಷೆಯನು ಬಿಡಿ ನಿಮ್ಮ ಮಗ ಕುಲ । ಭೂಷಣನಲಾ
ಧರ್ಮಸುತನಾತನಲಿ ಹುರುಡಿಸುವ ॥ ರೋಷವುಂಟೇ ತನಗೆ ನಿಮಗಿದು । ದೂಷಣವೆ ತಾನಲ್ಲ ನಾನಾ
ಪೋಷಿಸುವೆನೈ ಪಾಂಡುಸುತರರಸಾಗಬೇಕೆಂದ ||೩೭|| ಸಾರವೀನುಡಿ ಕಟಿಕಿಯಲ್ಲ ವಿ । ಚಾರಪರರಿಗೆ
ನಿಮ್ಮ ಚಿತ್ತಕೆ । ಬಾರದಿದ್ದೊಡೆನಿಲಲಿ ದುಶ್ಶಾಸನನ ಕರೆಸುವುದು ॥ ಸೇರಿಸುವುದವನಿಯನು ಮೋಹಿ
ದು । ಭಾರವೇ ನಿಮ್ಮರಮನೆಗೆ ವಿ । ಸ್ತಾರದಿಂದವೆ ಬಿಜಯಮಾಡೆನುತತ್ತ ಮುಂದಾದ ||೩೮|| ಮು
ನಿಸಿನಲಿ ಧೃತರಾಷ್ಟ್ರ ತನ್ನರ । ಮನೆಗೆ ತಿರುಗಿದನಿತ್ತ ನಾರೀ । ಜನವನೆಲ್ಲವ ಬೀಳುಕೊಟ್ಟನು
ಬೈದು ಖಾತಿಯಲಿ ॥ ಮನಕತದಿ ಕಾತರಿಸಿ ಗಂಗಾ । ತನುಜಗುರುಜದ್ರೋಣಗೌತಮ । ರನುಚಿತ
ಪ್ರಾರಂಭಭೀತರು ಬಂದರೊಗ್ಗಿನಲಿ ॥ ರಾಯನಿಹಹದನೇನು ನಿದ್ರಾ । ನಾಯಕಿಯ ಮೇಳವದಲ್ಲೈ
ದನೆ। ಜೀಯ ಯೆನಲೊಳಹೊಕ್ಕು ನಿಂದರು ನೃಪಸಮೀಪದಲಿ ॥ ಆಯಿತೇ ಸಾವೆಂದನುಡಿಯಿದು ।
ಹೋಯಿತನಶನದಿಂದ ದೇಹದ । ಬೀಯದಲಿ ಸಂಕಲ್ಪಗಡ ಹೇಳೆಂದನಾಭೀಷ್ಮ ||೩೯|| ಈಸುದಿನ ಸಾ
ಮ್ರಾಜ್ಯಸೌಖ್ಯವಿ । ಳಾಸದಲಿ ಬಳಸಿದೆನು ಸಾಕಿ । ನ್ನೀಶರೀರವ ನೂಕಿ ನಿಲುವೆನು ಮುಕ್ತಿರಾಜ್ಯದಲಿ
ಆಶೆಯವನಿಯೊಳಿಲ್ಲ ವಿಷಯಾ । ಭ್ಯಾಸಿಗೊಮ್ಮೆ ವಿರಕ್ತಿದೆಸೆಯಹು । ದೈಸಲೇ ಗುರು ನೀವು ಬೆಸ
ಸುವುದೆಂದನಾಭೂಪ ||೪೦|| ಕೇಳಿದೆವು ಹಿಂದಾದಖೇಚರ । ರೊಳಿಗವನಡಹಾಯ್ದು ನಿಮ್ಮವ । ನೋ
ಲಯಿಸಿದಂದವನು ನಿನಗದರಿಂದ ಪರಿಭವವೇ ॥ ತಾಳದಂತಿರಲವರ ಕರೆಸುವೆ । ಮೇಳು ಭೀಮಾರ್ಜು
ನರ ನಿನಗಿ । ನ್ನಾಳುಗೆಲಸದೊಳಿರಿಸಿ ನಡೆಸುವೆನೆಂದನಾಭೀಷ್ಮ ||೪೧|| ಮೊದಲು ಧೃತರಾಷ್ಟ್ರಂಗೆ
ತಾ ಜನಿ । ಸಿದುದು ಬಳಿಕೀದೇಹಧರ್ಮಜ । ನುದರದಿಂದವೆ ಬಂದುದಿನ್ನವರೊಡನೆ ಮತ್ಸರವೇ ॥
ಅದು ನಿಲಲಿ ದುರ್ವಿಷಯವೈರಾ । ಗ್ಯದಲಿ ದೇಹವ ಬಿಡುವೆನಲ್ಲದೆ । ಬೆದರು ಭಂಗದೊಳಿಲ್ಲ ಬಿಜಯಂ
ಗೈಯಿ ನೀವೆಂದ ||೪೨|| ನಾವು ಪಡಿಬಾಹಿರರು ಬೀಯದ । ಸೇವಕರು ಸಮಹಂತ್ರಿಗಾರರಿ । ಗೀವೃದ್ಧ
ದೃಢಮುದ್ರಿತಾಂತರ್ಮಾನಸಾಮೃತವ ॥ ಭೂವಧುವ ಬೋಳೈಸು ಕಾನನ । ಜೀವಿಗಳು ತಮ್ಮೊಲಿದು
ದಾಗಲಿ । ಸಾವುದನುಚಿತವೆಂದು ನುಡಿದರು ಭೀಷ್ಮಗುರುನೃಪರು ||೪೩|| ಎಮ್ಮ ನುಡಿಗಳಪಥ್ಯವಾ
ದೊಡೆ । ನಿಮ್ಮ ಕರ್ಣಾದಿಗಳ ಕರೆಸುವು । ದೆಮ್ಮ ನುಡಿಗವರೆಂದಮಾತನುಸಾರಿಯೆನಿಸಿದೊಡೆ ॥ ಒಮ್ಮೆ
ಕೈಕೊಂಬುದು ವೃಥಾ ನೃಪ । ಧರ್ಮವನು ಬಿಡಬೇಡ ಸಮರವ । ನೆಮ್ಮಿ ಸಾವುದು ಗುಣವು ಗರುವರಿ
ಗೆಂದನಾಭೀಷ್ಮ ||೪೪|| ಕದನವಾಗಲಿ ಪಾಂಡುಸುತರಲಿ । ಕದಡ ಮಾಡುವುದುಚಿತವೇ ನಮ । ಗಿದಿರು
ಬಳಿಕಾರುಂಟು ಭಾರತವರುಷಸೀಮೆಯಲಿ ॥ ಇದನರಿತು ಸಂಕಲ್ಪಭಂಗಾ । ಸ್ಪದವ ಮಾಡುವುದೊಳ್ಳಿ
ತೇ ನಿಜ । ಸದನಕಭಿಮುಖರಾಗಿ ಕರುಣಿಪುದೆಂದನಾಭೂಪ ||೪೫|| ಐಸಲೇ ದೈವೋಪಹತಮನ ।

ದಾಸರಾರಿಂದಡಗುವುದು ಸಾ। ಮೇಸನೊರಲಿದೊಡಾಗದವರೇ ಬಂದು ನಿಲಿಸುವರು ॥ ಈಸರಲಿ ಮರಳುವೆವೆನುತ ನಿಜ। ವಾಸಕ್ಕೈದಿದರಿತ್ತ ಪೋಹಿದ। ಪಾಶಕುನಿಕರ್ಣಾದಿಗಳ ಪಂಡಿಗೆಗಳೊಗ್ಗಿನಲಿ ॥೪೭॥ ಹೊಕ್ಕು ರಾಯನ ಕಂಡಿರೇ ನೀ। ಹಕ್ಕಿಹುಲ್ಲಿನಲಿರವು ಹರಹರ। ಮಕ್ಕಳಾಟಕೆಯಾವುದಗ್ಗದ ಸಾರ್ವಭೌಮರಿಗೆ ॥ ಸಿಕ್ಕುವನು ಹಗೆ ತನಗೆ ತಾನೇ। ಸಿಕ್ಕುವನು ಹಗೆಗಳಿಗೆ ಲೋಕದೊ। ಳಕ್ಕಜವೆ ಜಯವಜಯವೆಂದರು ಕರ್ಣಶಕುನಿಗಳು ॥೪೮॥ ಹರಿಬ ಬೇಕೇ ಪುತ್ತ ಗಂಧ। ರ್ವರಿಗೆ ಪೂತರನಟ್ಟಿಭೀಮನ। ನರನೊಳನುಸಂಧಾನವೇ ನಾಲ್ಕೆಂಟುದಿವಸದಲಿ ॥ ಧರೆಯೊಳವರಿರದಂತೆ ಘಟ್ಟಿಸಿ। ತೆರಳಿಚುವೆವಿದಕಕಟ ದರ್ಭೆಯ। ಹರಿಹಿ ಹಕ್ಕೆಯನಿಕ್ಕಲೇಕೆಂದೊದರಿದರು ಖಳರು ॥೪೯॥ ಪೂತನಮರೆಗಟ್ಟುವುದು ತಾ। ಬೂತುಭೀಮಾರ್ಜುನರಕೂಡೆ ಪಿ। ಘೌತಿ ಕೈಯೊಡನುಚಿತವೇ ಕೆಡಿಸುಡಿಪುದೇ ಲೋಕ ॥ ಈತನುವನೀ ಪರಿಯಲೇ ನಿ। ಭೂರ್ತವನೆ ಮಾಡುವೆನು ನನ್ನನು। ಜಾತನಲಿ ಭೂವಧುವ ಸೇರಿಸಿ ಬದುಕಿ ನೀವೆಂದ॥೫೦॥ ನಿನ್ನೊಡನೆ ಹುತವಹನ ಹೊಗುವೆವು। ಮನ್ನಣೆಯ ಮಾತಲ್ಲ ನಿನ್ನಿಂ। ಮುನ್ನ ಮುಂಡಿತಶಿರದಲೆಸೆವೆವು ತೀರ್ಥಯಾತ್ರೆಯಲಿ ॥ ಎನ್ನ ಮತ ಸೌಬಲನಮತವಿದು। ಪಿನ್ನ ಕೆಲರಲಿ ಬೆರಸುವುದ ಬೇ। ರಿನ್ನ ಮಾತೇಕೆನುತ ಮುರಿದರು ತಮ್ಮಮನೆಗಳಿಗೆ ॥೫೧॥ ಉಳಿವಭಟ್ಟರ ನಿಲಿಸಿದನು ಸಮು। ಸಲನ ಹೊಗಳುವಕಾಹಕರ ಕಳ। ಕಳವ ನಭಕೊತ್ತಿದನು ಕಹಳಾರವಕೆ ಕೋಪಿಸುತ ॥ ತಲೆಮುಸುಕಿನಲಿ ತಾರಿದೊಡದನ । ತಳಿತಮುಗುಡಲಿ ಮೋರೆಯಲಿ ಕುರು । ಕುಲಭಯಂಕರನೈದಿದನು ದುಶ್ಯಾಸನನು ನೃಪನ ॥೫೨॥ ಹೊಕ್ಕನೊಳಗನು ರಾಯನಂಘ್ರಿಯೊ । ಳೊಕ್ಕನೊಡೆಲನು ಲೋಚನಾಂಬುಗ । ಳುಕ್ಕಿದವು ಕಳವಳಿಸಿದವು ಕರಣೇಂದ್ರಿಯಾದಿಗಳು ॥ ಬಿಕ್ಕಿದನು ಬಿಂಬಿಂಬು ಸೆರೆಗಳು । ಮುಕ್ಕುರಿಕಿದವು ಕೊರಳ ಹೃದಯದೊ । ಳೊಕ್ಕಲಿಕ್ಕಿತು ಶೋಕಪಾವಕನಾನೃಪಾನುಜನ ॥೫೩॥ ಅನುಜನಪ್ಪುತಶೋಕರಸದಲಿ । ಕೊನರುತರಸನ ಮೋಹ ಕುರುಕುಲ । ವನಪರಶು ಕುಳ್ಳಿರ್ದನೊಯ್ಯನೆ ಮಾನಿನಿಯ ಮಲಗಿ ॥ ನಿನಗಿದೇನುದ್ವೇಗವೀಹ । ಸ್ತಿನಪುರದ ಸಾಮ್ರಾಜ್ಯಸಿರಿ ರಿಪು । ಜನಪರಿಗೆ ಹುರುಡಿಸಳೆ ಹೇಳೆನುತೆತ್ತಿದನು ಹಣೆಯ ॥೫೪॥ ಸೆಳೆದು ಬಿಗಿಯಪ್ಪಿದನು ಲೋಚನ । ಜಲವ ತೊಡೆದನು ಪಾಂಡುಪುತ್ರರು । ಸೆಳೆದುಕೊಳ್ಳರೆ ನೆಲನನಕಟಾ ಮತ್ಪರೋಕ್ಷದಲಿ ॥ ಕುಲವನೀಸುದ್ಧರಿಸು ಸೇಸೆಯ । ತಳಿವೆನಾ ಮುಂದಿಟ್ಟು ಬರಿದ । ನ್ನಳಲಿದರು ಪ್ರಾಯೋಪವೇಶವ ಬಿಡನು ನಾನೆಂದ ॥೫೫॥ ಅಳಿದರಳಿವೆ ಭವತ್ಪರೋಕ್ಷದೊ । ಳುಳಿವೆನೇ ನಿನ್ನರಸಿ ಧರೆಗಾ । ನಳುಪುವೆನೆ ನಿನ್ನಳಿವನೀಕ್ಷಿಸಿ ಧೈರ್ಯವೇ ತನಗೆ॥ ನೆಲನ ಕುಂತಿಯಮಕ್ಕಳೇ ಕೈ । ಕೊಳಲಿ ಮಾಣಲಿ ಸಿರಿಗೆ ಸೇಸೆಯ । ತಳಿವರಿಗೆ ತಳಿನಿನ್ನ ಬಿಡದಿಹ ಬಾಷೆ ನನಗೆಂದ ॥೫೬॥ ಧಾತುಗೆಡಲೇಕೀಸುಕಾತರೆ । ಬೀತುಹೋಹುದು ಜೀತಮರನೇ । ಕಾತಿಹುದಲೈ ಹತವಿಧಿಗೆ ವಿಪರೀತಕೃತಿ ಸಹಜ ॥ ಆತಗಳು ಸಮುಗುಪಕರಿಸಿ ವಿ । ಖ್ಯಾತರಾದರು ಮರಳಿ ನಾವಿ। ನ್ನಾತಗಳನಳುಕಿಸುವುಪಾಯವ ಕಂಡೊಡೇನೆಂದ ॥೫೭॥ ಮರುಳುತಮ್ಮ ವೃಥಾ ಖಳಾಡಂ । ಬರವಿದಲ್ಲದೆ ಪಾಂಡುಪುತ್ರರ । ಪರಿಭವಿಸಲೊಡಬಡುವರೇ ವಿದುರಾದಿಬಾಹಿರರು ॥ ಅರಮನೆಗೆ ನೀ ಹೋಗು ಹಸ್ತಿನ । ಪುರಕೆ ನೀನರಸಾಗು ಮೋಹದ । ಮರುಳತನವೀಕ್ಷತ್ರಧರ್ಮದೊಳಿಲ್ಲ ಕೇಳೆಂದ ॥೫೮॥ **ಮಗಗೆ ಮುನಿವನು ತಂದೆ ತಂದೆಗೆ । ಮಗ ಮುನಿವನೊಡಹುಟ್ಟಿದರು ಬಲು । ಹಗೆಕಣಾತಮ್ಮೊ**

ಳಗೆ ಭೂಪರ ಖುಲ್ಲವಿದ್ಯವಿದು ‖ ಜಗದ ಪರಿವಿಡಿಯೆಮ್ಮೊಳಲ್ಲದೆ । ಸೊಗಸಿ ರಾಜ್ಯವನಿತ್ತೆ ನಿನಗದು । ಮಗುಚಿದರೆ ಯೆನ್ನಾಣೆಯೆನುತಪ್ಪಿದನು ಖಳಪತಿಯು ‖೫೯‖ ಭ್ರಾಂತಿಯೇಕೆ ಭವತ್ಪರೋಕ್ಷದೊ । ಳಂತಕನ ಪುರವಲ್ಲದುರ್ವಿ । ಕಾಂತೆಗಳುಪಿದೆನಾದೊಡೊಡಹುಟ್ಟಿದನೆ ನಿಮ್ಮಡಿಯು ‖ ಸಂತವಿಡು ವೀವಾತು ಸಾಕಿ । ನ್ನಂತರಲಿಸಿಮಗೇನು ಹದನಾ । ಯ್ತಂತರದೊಳಾಹದನನೀಕ್ಷಿಪನೆನುತ ಹೊರವಂಟ ‖೬೦‖ ಧರಣಿಪತಿ ಕೇಳ್ಬಳಿಕ ಹಸ್ತಿನ । ಪುರದ ನಿಖಿಳಶ್ರೇಣಿ ಕುಲನಾ । ಗರಿಕಜನ ಪರಿವಾರಪಾಡಿ ಪಸಾಯ್ತಪೌರಜನ ‖ ಅರಸ ಬಿಜಯಂಗೈದು ನಮ್ಮನು । ಹೊರೆವುದಲ್ಲದೊಡಾವನಾಂತರ । ವರಕೆ ನೇಮವ ಕೊಡುವುದೆಂದೊರಲಿದರು ತಮತಮಗೆ ‖೬೧‖ ಪರಿಜನದೊಳವರವರ ಮುಖ್ಯರ । ಕರಸಿದನು ದುಶ್ಶಾಸನನು ನಿಮ । ಗರಸುನೃಪನೀತಿಯಲಿ । ಪಾಲಿಸುವನು ಮಹೀತಳವ ‖ ಧರೆಯನಾತಂಗಿತ್ತೆವೆಮಗೀ । ಸುರನದೀತೀರದಲಿ ಕಾಶೀ । ಶ್ವರನಸನ್ನಿಧಿಯಿರವು ಘಟಿಸಿದುದೆಂದನಾಭೂಪ ‖೬೨‖ ರಾಯನೀಪರಿ ನುಡಿದು ಜನಸಮು । ದಾಯವನು ಕಳುಹಿದನು ಸುಮನೋ । ಭೂಯಸಾಪೇಕ್ಷನು ಸಮಾಧಿಯೊಳಿರಲು ರಾತ್ರಿಯಲಿ ‖ ದಾಯವಿದು ತಮಗೆಂದು ದೈತ್ಯನಿ । ಕಾಯ ಬಂದು ರಸಾತಳಕೆ ಕುರು। ರಾಯನನು ಕೊಂಡೊಯ್ದು ತಿಳುಹಿದರವರು ಸಾಮದಲಿ ‖ ಅರಸ ನೀ ಪ್ರಾಯೋಪವೇಶದಿ । ಮರಣದೀಕ್ಷಿತನಾದೆಗಡ ನಿ । ಮ್ಮರಸುಗುಲಕನುಚಿತವ ನೆನೆದೈ ಕಾಕಬಳಸಿದೆಲಾ ‖ ಸುರರು ಪಾಂಡುಕುಮಾರರಾಗವ । ತರಿಸಿದರು ನೆಲವವರಿಗೈ ನಾ । ಪಿರಲು ಸುಡಲೀದೈತ್ಯಜನ್ಮವನೆಂದರಾಖಳರು ‖೬೪‖ ಸಾಯಬರು ನಿನಗಿಂದು ಮೊದಲು ಸ । ಹಾಯರಾವಾಹವಕೆ ರಿಪುಕೌಂ । ತೇಯರಿಗೆ ಕೊಡಬೇಡವಿನ್ನು ತಿಲಾಂಶಭೂತಲವ ‖ ಲಾಯಸಹಿತೀಗಜರಥಾಶ್ವನಿ । ಕಾಯ ನಿನ್ನದು ದೈತ್ಯಸಚಿವಪ । ಸಾಯಿತರು ನಿನ್ನವರು ಸಾವೆವು ನಿಮ್ಮಸಮರದಲಿ ‖೬೫‖ ಮಾನವನು ನಾನಿನ್ನು ನೀವೋ । ದಾನವರು ಗಂಧರ್ವರಿಂದಭಿ । ಮಾನವನಗಕ್ಕಾಡಿಹೋಯಿತು ಹೇಳಲೇನದನು ‖ ಮಾನಿನಿಯ ಮೊದಲೆಯನಾಪವ । ಮಾನಸುತನ ಸಗರ್ವವಚನವ । ನೇನಹೇಳುವೆನೆನುತ ಸುಯ್ದನು ಕೌರವರರಾಯ ‖೬೬‖ ನರರು ನೀವ್ದಾನವರು ಸಾವಂ । ದೊರೆದರೊಡಹುಟ್ಟಿದರುನಿಮಗಿ । ನ್ನರಸವೇಳಾಯ್ತೊರುವೆಗ್ಗಳದೈತ್ಯಭಟರೆಲ್ಲ ‖ ಸುರಪುರದ ಸೂಳೆಯರ ಪಡಿಗವ । ನಿರಿಸುವರು ಗಂಧರ್ವರವದಿರ । ಕರುಳ ತಿಂಬೆವು ನಾವೆನುತ ಗರ್ಜಿಸಿತು ಖಳನಿಕರ ‖೬೭‖ ಎಂದು ಭೂಪನ ತಿಳುಹಿ ಕಳುಹಲು । ಬಂದು ಮರಳಿ ಮಹೀತಳಕೆ ತ । ನ್ನಿಂದುವದನೆಯು ಮಾತಿನಲಿ ನಿಂದವನು ತಾನಾಗಿ ‖ ಬಂದನೆರಮನೆಗೆಖಿಳಜನವಾ । ನಂದರಸದಲಿ ಮುಳುಗೆ ಪುರದಲಿ । ಸಂದಣಿಸಿದವು ಗುಡಿಗಳೊಸಗೆಯಲಳಿಯಲಗ್ಗಗಳ ‖೬೮‖ ಮತ್ತೆ ನೆಗ್ಗಿತು ನಯವಧರ್ಮದ । ಕುತ್ತುದಲೆ ನೆಗೆಹಿದುದು ಸತ್ಯದ । ಬಿತ್ತು ಹುರಿದುದು ಪಟ್ಟಗಟ್ಟಿದುದಾಕೃತಘ್ನತೆಗೆ ‖ ನೆತ್ತಿಕಣ್ಣಾಯ್ತಧಮತಗೆ ನಗೆ । ಯೊತ್ತಿತಾರಡಿ ಸುಜನಮಾರ್ಗವ । ಕೆತ್ತುದಟಮಟವೀಸುಯೋಧನ ಸೌಮನಸ್ಯದಲಿ ‖೬೯‖ ಮರೆದು ಕಳೆದನು ಬಂದಲಜ್ಜೆಯ । ಬರನಟನವನು ಮುಂದಣುಪಹತಿ । ಗುರುವದೈತ್ಯರ ಮೈತ್ರಿಯನು ನೆನೆನೆನೆದುಹಿಗ್ಗಿದನು ‖ ಮುರಿದುದಿನ್ನೇನಹಿತದರ್ಪದ । ಹೊರಿಗೆಯೆಂದು ತ್ಸವದಲವನಿಪ । ಮರೆದನಧ್ವರಶಾಲೆಯಲಿ ಮಾಡಿದ ಮಹಾಕ್ರತುವ ‖೭೦‖ ಕೇಳಿದರು ಪಾಂಡವರು ಕುರುಭೂ । ಪಾಲಕನ ಸಂಕಲ್ಪವನು ಪಾ । ತಾಳದಲಿ ಸುರವೈರಿವರ್ಗದ ಸಖ್ಯಸಂಗತಿಯು ‖ ಮೇಲಣ

ಧ್ವರಕರ್ವುವನು ನಗು । ತಾಲಿಸಿದರಡಿಗಡಿಗೆ ಲಕ್ಷ್ಮೀ । ಲೋಲನಂಘ್ರಿಯ ನೆನೆಯುತಿದ್ದರು ವೀರನಾರಯಣನ ॥ ॥೭೧॥

ಅಂತು ಸಂಧಿ ೨೧ ಕ್ಕೆ ಪದ ೧೧೨೪ ಕ್ಕಂ ಮಂಗಳಮಸ್ತು.



## ಇಪ್ಪತ್ತೆರಡನೆಯ ಸಂಧಿ.

**ಸೂಚನೆ॥ ರಾಯನರಸಿಯ ಹಿಡಿದೆಳವರಿಪು । ರಾಯದಳವನು ಮುರಿದು ಫಲುಗುಣ । ವಾಯುಜರು ಪರಿಭವಿಸಿ ಬಿಟ್ಟರು ಕಲಿಜಯದ್ರಥನ ॥**

ಕೇಳು ಜನಮೇಜಯಧರಿತ್ರೀ । ಪಾಲಲೆಕ್ಕಕೆ ಸಂದವಟವೀ । ಪಾಳಿಪರಿಯಟಣಪ್ರಬಂಧಕ ವರುಷಹನ್ನೊಂದು ॥ ಮೇಲೆಮೇಲೌಕುವವಿಪತ್ಕ । ಲ್ಲೋಲಕೋಳಾಹಲಿತಕಲುಷಕ । ರಾಳಕಾಲಾಂಬುಧಿಯನೀಸಾಡಿದರು ಬೇಸರದೆ ॥ ೧ ॥ ಸಿಂಧುದೇಶಕಬಂದಸವನಿಪ । ಬಂಧಕೃತಿಯಲಿ ಬಳಿಕ ಬಿಡುಗಡೆ । ಯಂದಭೂಪತಿಯಳಿಯ ಕೇಳಿದನಾಜಯದ್ರಥನು ॥ ಅಂಧತೆಯನೇನೆಂಬೆನೈ ಪ್ರತಿ । ಬಂಧಕರು ಬೇಡೆನಲು ನಯದಭಿ । ಸಂಧಿಯಲಿ ಸೀವರಿಸಿ ಸಂವರಿಸಿದನು ಸೈನಿಕವ ॥೨॥ ನೆರಹಿದನು ಹದಿನಾರುಸಾಸಿರ । ಕರಿಘಟೆಯನೈವತ್ತುಸಾವಿರ । ತುರುಗವನು ಹಟನಾಲ್ಕುಸಾವಿರಕನಕಮಯರಥವ ॥ ಚರಣಚೌಪಟರೈದುಲಕ್ಷವ । ಬರಸಿದನು ಬಹುವಾದ್ಯರವದ । ಕ್ಕಿರವೊಡೆಯೆ ಸೂಳೈಸೆ ಮೇಳೈಸಿದನು ಮೋಹರವ ॥ ಜೀಯ ಭಾಸ್ಕರಭೌಮರಶುಭ । ಸ್ಥಾಯಿಗಳು ಗುರುಮಂದರಭಿಭವ । ದಾಯಿಗಳು ವಿಪರೀತದೆಸೆ ಬುಧಶುಕ್ರರಾಹುಗಳು ॥ ಯಾಯಿಗಳಿಗ ಪಜಯನಿವಾಸ । ಸ್ಥಾಯಿಗೊಳ್ಳಿತು ಚಿತ್ತವಿಸಿಯೆನೆ । ಜೋಯಿಸರ ಜವಿವಲೆಗೆ ಸಿಲುಕೆನೆನುತ್ತ ಹೊರವಂಟ ॥೪॥ ಉರಿಹೊಗೆಯ ದಿಕ್ಕಿನಲಿ ಹಕ್ಕಿಗ । ಳೊರಲಿದವು ಗೋವಾಯುರವವ । ಬ್ಬರಿಸಿದುದು ದೆಸೆದೆಸೆಗಳಲಿ ಸೂಚಿಸಿತು ರಣಭಯವ ॥ ದುರುಳನದ ಕೈಕೊಂಬನೇ ಕುರು । ನರಪತಿಯಸತ್ಸಂಪ್ರದಾಯದ । ಗರುಡಿಕಾರನಲಾ ಚತುಷ್ಟಯದುಷ್ಟಮಂತ್ರಿಗಳ ॥೫॥ ಭರದಪಯಣದಮೇಲೆ ಪಯಣದ । ಉರವಣಿಸಿ ನಡೆತಂದು ಪಾಂಡವ । ರರಸನಿಹವಿಮಲಾಶ್ರಮದ ವಿಪಿನೋಪಕಂಠದಲಿ ॥ ಹರಹಿದವು ಗುಡಿ ಗಜಹಯದ ಮಂ । ದಿರರಚನೆ ರಹಿಯಾಯ್ತು ಬಿಟ್ಟನು । ಕುರುನೃಪಾಲನ ಮೈದುನನು ಭೂಪಾಲ ಕೇಳೆಂದ ॥೬॥ ಏನ ನೆನೆದನೊ ದುಷ್ಟಮಂತ್ರವಿ । ತಾನಪೇಕ್ಷಿತ ಕಳುಹಿದನು ಮದ । ನಾನುರಾಗದಲಾಭರಣವನುಲೇಪನಾದಿಗಳ ॥ ಸಾನುನಯದಲಿ ಪಾಂಡುಪುತ್ರರ । ಮಾನಿನಿಗೆ ಕೊಡಿ ನಿರ್ಜನದೊಳಬು । ಜಾನನೆಯ ಸೇರಿಸುವುದೆಮಗೆಂದಟ್ಟಿದನು ಚರರ ॥ ಬನದೊಳಡಗಿದರವರು ಕುಂತೀ । ತನುಜರೈವರು ಬೇಂಟೆಯಾಡಲು । ನೆನೆದು ಧೌಮ್ಯನನಬುಜಮುಖಿಯಾಶ್ರಮದ ಕಾಹಿನಲಿ ॥ ಮುನಿಜನಂಗಳ ನಿಲಿಸಿಕೊಂಡರು । ಧನುವ ಬೆಂಬತ್ತಳಿಕೆಗಳ ನೃಪ । ಜನಲಲಾಮರು ಬನಬನದೊಳರಸಿದ

ರು ಮೃಗಕುಲವ ॥೮॥ ಹೋದರವರತ್ತಲು ಪಿಕಾರವಿ । ನೋದಶೀಲನ ಶಿಷ್ಯರುಬ್ಬಟೆ । ಬೀದಿವರಿದುದು ಪರ್ಣಶಾಲೆಗೆ ಬಂದರಂಗನೆಯು ॥ ಆದರಿಸಿ ಮುನಿಜನವನೊಯ್ಯನೆ । ಕೈದುಗಳ ಹೊರಗಿರಿಸಿ ದೂರದ । ಲಾದುರಾತ್ಮರು ಕಂಡು ಮೈಯಿಕ್ಕಿದರು ಮಾನಿನಿಗೆ ॥೯॥ ದೇವಿ ಚಿತ್ತೈಸುವುದು ನಿಮ್ಮಯ । ಭಾವಕೌರವನೃಪನ ಮೈದುನ । ಭಾಪಿಸಲು ದುಸ್ಸಳೆಯರಮಣನ ಕಲಿಜಯದ್ರಥನ ॥ ಈವಿವಿಧರತ್ನಾಭರಣ । ಪಟ್ಟಾವಳಿಯನನುಲೇಪನಾದಿಯ । ಪಾವುಡವನವಧರಿಸಬೇಕೆಂಟಿಳುಹಿದರು ಮುಂದೆ ॥೧೦॥ ಎಸೆವಳೇ ದುಸ್ಸಳೆ ಜಯದ್ರಥ । ಕುಶಲನೇ ಪಾವುಡವ ನೀವೊ । ಪ್ಪಿಸುವುದೊಡೆಯರ ಮುಂದೆ ಬಿಜಯಂಗೈವರೀಕ್ಷಣಕ ॥ ಶಿಶುಗಳಾವೆಮಗೀಸ್ವಸಂತ್ರತೆ । ಯೆಸಕವೆಲ್ಲಿಯದಕಟ ವಸ್ತು । ಪ್ರಸರವೆಮಗೇಕೆನುತ ನುಡಿವಳು ನಗುತ ಇಳಸಾಕ್ಷಿ ॥೧೧॥ ನಾರಸೀರೆಯ ನುಡುವವೆಮಗಾ । ಹಾರವೇ ಫಲಮೂಲತತಿ ಶೃಂ । ಗಾರವೆಮಗೆ ಪತಿವ್ರತಾಗುಣವಲ್ಲದಿತರದಲಿ ॥ ಸೇರುವುದೆ ಮನವಿದನು ಪಾಂಡುಕು । ಮಾರರಿಗೆ ತೋರಿಸುವುದೈ ಬೀ । ಡಾರವನು ಬಿಡಿ ಬೇರೆ ವನದೊಳಗೆಂದಳಿಂದುಮುಖಿ ॥೧೨॥ ತಾಯೆ ನೀನಿವನೊಪ್ಪುಗೊಂಬುದು । ರಾಯಬಿಡವನೆ ಮತ್ತೆ ಪಾಂಡವ । ರಾಯರಿಗೆ ಪಾವುಡವನಟ್ಟುವನಿದನುಪೇಕ್ಷಿಸದೆ ॥ ಆಯತಾಂಬಕಿ ತೆಗಸಿಯೆನೆ ನಟಿಸಿ ರಾಯನವಿದೇಕೆನುತ ದೂತರ । ಸಾಯುವತಿ ಜರೆದೊಳಗೆ ಹೊಕ್ಕಳು ತಳಿರಮಂಟಪವ । ಮುಸುಳಿತಿವದರ ಮೋರೆ ಕಾರ್ಯದ । ಬೆಸುಗೆ ಹತ್ತದೆ ಸತಿಯ ನುಡಿಯಲಿ । ರಸವಕಾಣದ ಭೀತಿಯಲಿ ಮರಳಿದರು ಪಾಳೆಯಕೆ ॥ ಉಸುರಲಮ್ಮೆವು ಜೀಯನೋಲಳು । ಶಶಿವದನೆ ಗುಣಸಾಮದಲಿ ಸಾ । ಧಿಸುವುದರಿದೆನೆ ತಾನೆ ನೋಡುವೆನೆನುತ ಹೊರವಂಟ ॥೧೪॥ ಹೆಗಲಹಿರಿಯಬ್ಬಣಕತಾರಿಯ । ಬಿಗಿದುಡಿಗೆ ರತ್ನಾಭರಣ ಝಗ । ಝಗಸೆ ಝಣಝಣರವದ ರಸಭದ ಖಡಿಯತತಿ ಮೆರೆಯೆ ॥ ಬಗೆವಸಾದುಜವಾಜಿಕತ್ತುರಿ । ಯಗರುಪರಿಮಳದಂಗವಟ್ಟದ । ವಿಗಡಹೊಕ್ಕನು ವನವಸಾಪಾಂಚಾಲೆಯಾಶ್ರಮವ ॥೧೫॥ ತೊಲಗದುದು ಮುನಿನಿಕರಪೀತನ । ಸುಳಿವ ಕಂಡುಸುತೇಜದಲಿ ಖಳ । ತಿಲಕ ಬಂದನು ಪರ್ಣಶಾಲೆಯ ಮುಖದಮಂಟಪಕೆ ॥ ಲಲನೆಯೊಳೆ ಹೊಗಲೊಡನೆ ಹೊಕ್ಕನು । ನಳಿನಮುಖಿ ಬಂದವ ಜಯದ್ರಥ । ನಳುಕಲೇಕೌ ದ್ರೌಪದಿಯೆ ನೀನೆನುತ ಮಂಡಿಸಿದ ॥ ಬೆದರಲೇತಕೆ ನಮ್ಮನಾದಿನಿ । ಮದವಳಿಗೆ ನೀನಾದರೊಡಹು । ಟ್ಟಿದನು ನೀನಹೆ ಯೆನಗೆ ನಿಮ್ಮಲಿ ಬೇರೆ ಭಯವೇನು ॥ ಸದನವಿದು ಪತಿಶೂನ್ಯ ತಾನೆಂ । ಬುದು ಪತಿವ್ರತೆಯೆಲ್ಲಿಯನುಚಿತ । ವಿದು ವಿಚಾರವ ಬಲ್ಲೆ ನೀನೆಂದಳು ಸರೋಜಮುಖಿ ॥೧೭॥ ಅಹಹ ಪಾತಿವ್ರತ್ಯವತಿಸ । ನ್ನಿಹಿತವಲ್ಲಾ ನಿನಗೆ ಹಲಬರ । ಮಹಿಳೆ ಸತಿಯೆನಿಸುವರೆ ಸೂಳೆಯರೇಕಪುರುಷರಲಿ ॥ ವಿಹರಿಸುವರೇ ಲೋಕಧರ್ಮದ । ರಹಣಿ ರಚಿಸುವುದಲೇ ನಮ । ಗಹುದು ಮತವಲ್ಲದೊಡೆ ಮಾಣಲೆನುತ್ತ ಮುರಿದೆದ್ದ ॥೧೮॥ ತರಳೆ ಮಿಗೆ ತಲ್ಲಣಿಸಿ ತಳಿರೋ । ವರಿಯ ಹೊಗುತಿರಲಟ್ಟಿ ಮೇಲುದ । ಬರಸೆಳೆದು ತುರುಬಿಂಗೆಹಾಯ್ದನು ಹಿಡಿದು ಕುಸುಬಿದನು ॥ ಒರಲಿದಳು ಹಾ ಭೀಮ ಹಾ ನೃಪ । ವರಧನಂಜಯ ಹಾಯೆನುತ ಕಾ । ತರಸೆ ಕಮಲಾನನೆಯ ಕಂದವನೌಚಿ ಹೊರವಂಟ ॥೧೯॥ ರಾಣಿವಾಸವಲಾ ಯುಧಿಷ್ಠಿರ । ನಾಣೆ ಬಿಡು ಬಿಡೆನುತ್ತ ಸುಜನ । ಶ್ರೇಣಿಯಡ್ಡೈಸಿದೊಡೆ ಬೀಸಿದನವನು ಖಂಡೆಯವ ॥ ರಾಣಿ ನಡೆಸಡೆ ನಮಗೆ ಪಾಂಡವ । ರಾಣೆಯಿಟ್ಟರು ಮುನಿಗಳಲ್ಲಿಹ । ಜಾಣು ತಪ್ಪದೆನುತ ಹೊರವಂಡಿಸಿದನಾಶ್ರಮವ ॥೨೦॥

ವಾತನೀತನ । ನಿಲುಕಿಹೊಯ್ದನು ದಂಡೆಯಿಂದಡ । ಕಳಚಿ ಮಾರುತಿ ಹೊಕ್ಕೊಡವ ಚಿಮ್ಮಿದನು ಚೀಲ ಯವ ॥ ಖಳನ ಬಾಹುವನೊದೆದು ತುರುಬಿಗೆ । ನಿಲುಕಿ ಕುಸುಬಿದನವನ ಗೋಣಿನ । ಲಲಗ ಹೊಡಲು ಕಂಡನರ್ಜುನನಾವೃಕೋದರನ ॥೩೩॥ ಭೀಮ ಬಿಡಿಸದಿರವನ ಗಂಟಲ । ನೀಮದಾಂಧನನೊಯ್ದು ಕೆಡ ಹುವ । ಭೂಮಿಪತಿಯಂಘ್ರಿಯಲಿ ಕಾಯಲಿ ಮುನಿದು ಮೇಣ್ಕೊಲಲಿ ॥ ತಾಮಸನ ಬಿಗಿಯೆನಲುನಗು ತು । ದ್ದಾಮನೆಂದನು ಕೊಲುವನೆಂದೇ । ಕಾಮಿಸಿದೆನೈ ಪಾರ್ಥ ಕೆಡದೇ ಯೆನ್ನ ಸಂಕಲ್ಪ ॥೩೪॥ ನೆನೆಯದಿರು ಸಂಕಲ್ಪಹಾನಿಯ । ನನುಚಿತಕೆ ಮನದಾರದಿರು ಮಾ । ನಿನಿಯಿರಲಿ ರಥದಿಂದ ಕುನ್ನಿಯ ಕೆಡಹು ಧಾರುಣಿಗೆ ॥ ಮುನಿಪನೇರಲಿ ರಥದವಾಜಿಯ । ನನುಗೊಳಿಸಿ ಸಾರಥ್ಯದಲಿ ಬರ । ಲೆನುತ ಭೀ ಮನ ಮನದ ಖತಿಯನು ಬಿಡಿಸಿದನು ಪಾರ್ಥ ॥೩೫॥ ವೈರಿಬಾಹುದ್ವಯವ ಬದ್ಧಗೆ । ದಾರದಲಿ ಕಟ್ಟಿ ದನು ಸಾರೀ । ಚೋರ ನಡೆನಡೆಯೆನುತ ತಿವಿದನು ಬಿಲ್ಲಕೊಪ್ಪಿನಲಿ ॥ ಕೌರವೇಂದ್ರನ ಮತವೊ ನಿನ್ನ ವಿ । ಕಾರವೋ ಹೆಂಗಳ್ಳವಿದ್ಯೆಯ । ನಾರುಕಲಿಸಿದರೆನುತ ತಂದರು ಧರ್ಮಜನ ಹೊರೆಗೆ ॥೩೬॥ ಸಿಂಧು ಭೂಪನಲಾ ಭುಜಾಗ್ರದ । ಬಂಧನವ ಬಿಡು ಭೀಮ ಶಿವಶಿವ । ನೊಂದೆನೈ ನಿಷ್ಕರುಣಿಗಳು ನೀವೆಂದನ ವನೀಶ ॥ ಕೊಂದು ಬಿಸುಡುವನೇಮ ಕಂದ । ಪಾರಂಧಕನನುಳುಹುವೊಡೆ ತನಗಿಂ। ನ್ನಿಂಧನವ ಮಾ ಡಿಸುವದೈಸಲೆ ಯೆಂದನಾಭೀಮ ॥೩೭॥ ಹದನಿದೊಳ್ಳಿತು ತಂಗಿ ವೈಧ । ವ್ಯದಲಿ ನವೆಯಳೆ ಸುಬಲ ನಂದನೆ । ಯುದರಕುಂತೀದೇವಿಯುದರಕೆ ಭಿನ್ನಭಾವನೆಯೇ ॥ ಕದನದಲಿ ಹಿಡಿವಡೆದವರ ಕೊಲು । ವುದು ನರೇಂದ್ರರ ಧರ್ಮವಲ್ಲೆಂ । ದಿದರ ಮೇಲಾವರಿಯೆವೆಂದನು ಧರ್ಮನಂದನನು ॥೩೮॥ ಈತನ ಳಿಯದೆ ಮತ್ಪ್ರತಿಜ್ಞಾ । ಖ್ಯಾತಿ ಮಸುಳದೆ ತಿದ್ದುವನುವನು । ಭೂತಳಾಧಿಪ ನೀವು ಬೆಸಸುವುದೆನಲು ಮುನಿಜನವ ॥ ಅತ ನೋಡಿದನಾವುಟದಕನು । ನೀತಿಯೆನೆ ಧೌಮ್ಯಾದಿಸುಜನ । ವ್ರಾತ ನಿಶ್ಚೈಸಿದರು ಮನದಲಿ ಧರ್ಮನಿರ್ಣಯವ ॥೩೯॥ ಮಾನಧನರಿಗೆ ವಧೆಯೆನಿಪುದಭಿ । ಮಾನಭಂಜನವಿವನುಕಟ್ಟಳಿ । ಮಾನಿ ಭಂಗಿಸಿ ಬಿಟ್ಟೊಡೀತಂಗಿದುವ ಮರಣವಲಾ ॥ ಈ ನುಡಿಯ ಸಲಿಸಿದೊಡೆ ಯಿವನಪ । ಮಾ ನಹತನಿದು ಧರ್ಮನಿಶ್ಚಯ । ವೇನುಸಂಶಯವಿಲ್ಲೆನುತ ನುಡಿದುದು ಮುನಿಸ್ತೋಮ ॥೪೦॥ ಅಹು ದೆನುತ ಕಲಿಭೀಮ ಮಾಡಿದ । ರಹವನದನೇನೆಂಬನೈ ಕೂ । ರಿಹಕಟಾರಿಯಹಣಿಗೆಯಲಿ ಬಾಚಿದನು ಸಿರಿಮುಡಿಯ ॥ ಆಹಿತಶಿರವಿದಲಾಯೆನುತ ಗೃಹ। ಮಹಿಳೆಯರು ವಿಹಿತಾಂಗುಲಿಯ ಸಂ । ಪ್ರಹರಣಾ ದಿ ಪರಿಭವಿಸಿದರು ಘೊಳ್ಳೆನಲು ನಿಖಿಲಜನ ॥೪೧॥ ಬಿಟ್ಟರೀತನತೋಳ ಹಿಂಗ್ಯೆ । ಗಟ್ಟುಗಳನೆಲೆಕುನ್ನಿ ಹೋಗೆನೆ । ಕೆಟ್ಟಕೇಡದನೇನಹೇಳುವೆನಾಜಯದ್ರಥನಾ । ಬೆಟ್ಟದಿಂದುರುಳುವೆನೊ ಹಾಸರೆ । ಗಟ್ಟಿ ಹೊಗುವೆನೊ ಮಡುವನೆನುತಡಿ। ಯಿಟ್ಟನಂತಃಕಲುಷಚಿತ್ತ ದುರಂತಚಿಂತೆಯಲಿ ॥೪೨॥ ಚಿಂತಿಸಿದೊ ಡೇನಹುದು ಹೊಗುವೆನು । ಕಂತುಮಥನನಮರೆಯ ನಿವದಿರಿ । ಗಂತಕನು ತಾನಹೆನು ಗೆಲುವೆನು ಬಳಿ ಕ ಬವರದಲಿ ॥ ಭ್ರಾಂತಿಯೇ ಬಿಡು ತನ್ನನೆನುತ ಪು । ರಾಂತಕಧ್ಯಾನದಲಿ ವಿಮಲ । ಸ್ವಾಂತನೇಕಾ ಗ್ರದಲಿ ಭಜಿಸಿದನಿಂದುಶೇಖರನ ॥೪೩॥ ಇವನನಿಷ್ಠೆಗೆ ಮೆಚ್ಚಿ ಗೌರೀ । ಧವನು ವೈದೋರಿದನು ರಾ ಜ್ಯ । ಪ್ರವರಕೊಟ್ಟನು ಬೇಡು ಸಾಕು ಭವನ್ಮನೋರಥವ ॥ ವಿವರಿಸೆನೆ ಕಂದೆರೆದು ಮುಂದಿಹ । ಶಿವನ ಕಂಡನು ವೈಯ ಚಾಚಿದ । ನವನಿಯಲಿ ಜಯಜಯ ಮಹೇಶ ನಮಶ್ಶಿವಾಯೆನುತ ॥೪೪॥ ವರದನಾ

ದ್ಯೆ ಶಂಭು ಕರುಣಾ । ಕರ ಹಸಾದವು ಪಾಂಡುಸುತರ್ಗೆ । ವರನು ದಿನವೊಂದರಲಿ ಗೆಲುವುದು ತನಗ ಭೀಷ್ಟವಿದು ॥ ಕರುಣಿಸ್ಕೆ ತನಗೆನಲು ನಕ್ಕನು । ಗಿರಿಸುತೆಯ ಮೊಗನೋಡಿ ಭಾರಿಯ । ವರವ ವಿವರಿಸಿದನು ಜಯದ್ರಥನೆಂದನಿಂದುಧರ ॥೪೫॥ ಪಾಶುಪತಶರವೆನ್ನ ಸತ್ವವಿ । ಳಾಸವದೆ ಫಲುಗುಣನ ಕೈಯಲಿ । ವಾಸವಾಬ್ಜಭವಾದಿಬಿರುದರ ಬಗೆಯದಾಹವಕೆ ॥ ಅಸುಭಟನೊಬ್ಬನಸುಳಿಯೆ ಮಿ । ಕ್ಕೇಸು ಪಾಂಡವರುಗಳನೊಂದೇ । ವಾಸರದಲವಗಡಿಸು ಹೋಗೆಂದನು ಮಖಧ್ವಂಸಿ ॥೪೬॥ ಸಾಕು ಜೀಯ ಹಸಾದವೆಂದವಿ । ವೇಕನಿಧಿ ಬೀಳ್ಕೊಂಡನೀಶನ । ನೀಕುಮಾರರು ವನದೊಳಿದ್ದರು ಖತಿಯ ಭಾರದಲಿ ನೂಕುನೂಕಾಡುವವಿಪತ್ತಿನ । ವ್ಯೆಕೃತಿಗೆ ನಾನೊಬ್ಬನೇ ಧಿಟ । ವಾಕೆವಾಳನೆ ಶಿವಶಿವಾಯೆಂದರಸ ಬಿಸುಸುಯ್ದ ॥೪೭॥ ಬಂದಮಾರ್ಕಂಡೇಯಮುನಿಗಭಿ । ವಂದಿಸಿದನೀಬ್ರಹ್ಮಸೃಷ್ಟಿಯ । ಲಿಂದುತಾನಲ್ಲದೆ ಸುಧಾಕರಸೂರ್ಯವಂಶದಲಿ ॥ ಹಿಂದೆ ನವೆದವರಾರು ಪರಿಭವ । ದಿಂದ ನಮ್ಮಂದದಲಿ ವಿಪಿನದೊಳಿಂದುಮುಖಿಯರು ಭಂಗವಟ್ಟರೆ ಯೆನುತ ಬಿಸುಸುಯ್ದ ॥೪೮॥ ಎನಲು ನಕ್ಕನು ಮುನಿಪನವನಿಪ । ಜನಶಿರೋಮಣಿ ಕೇಳು ನಿಮ್ಮಾ । ವನದೊಳಬುಜಾನನೆಯ ಕೊಂಡೋಡಲು ಜಯದ್ರಥನು ॥ ಅನುಜರಾಗಳೆ ಹರಿದು ಮರಳಿಚಿ । ವನಜಮುಖಿಯನು ತಂದರವನನು । ನೆನೆಯಬಾರದವಿಧಿಯಮಾಡಿದರೆಂದನಾಮುನಿಪ ॥೪೯॥ ಅರಸಮುನಿಯದಿರಾವಪಾಡಿನ । ನರಪತಿಗಳ್ಗೆ ನೀವು ವಿಶ್ವಂ । ಭರೆಯ ಘನತೆಯ ಕೇಳಿದರಿಯಾ ಕೈಟಭಾಂತಕನಾ ॥ ವರಮುನಿಯಶಾಪವನು ತಾನೇ । ಧರಿಸಿ ನರರೂಪಿನಲಿ ನವೆದುದ । ನರಸ ಬಣ್ಣಿಸಲೆನ್ನಹವಣಲ್ಲೆಂದನಾಮುನಿಪ ॥೫೦॥ ಆಡವಿಯಲಿ ತೊಳಲಿದನು ರಾಮನ । ಮಡದಿಯನು ರಕ್ಕಸನು ಕದ್ದನು । ಕೆಡಿಸಿ ಬಳಿಕರಿಸಿದನು ರಾಣೀವಾಸವನುಕೂಡೆ ॥ ಕಡಲಮಧ್ಯದ ಖಳನೊಡನೆ ಕೈ । ಹೊಡೆದುದಲ್ಲಿಗೆ ತೆತ್ತಿಗರು ನಾ । ಡಡವಿಗೋಡಗವಾಳುಕುದುರೆಗಳಸುರವಿಗ್ರಹಕೆ ॥ ಸಾಗರದತೆರೆಗಳಲಿ ಗಿರಿಗಳ । ತೂಗಿ ಸೇನೆಯ ನಡೆಸಿ ದಶಮುಖ । ನಾಗ ಕೆಡಿಸಿದು ರಾಮರಮಣಿಯ ಬಿಡಿಸಿದಾಯಸವ ॥ ಈಗಳೀನರರೇನನಾನುವ । ರಾಗರುವರಘುರಾಯವಜ್ರಕೆ । ಬೇಗಡೆಯ ವಿಧಿ ಮಾಡಿತೆಂದನು ಮುನಿ ನೃಪಾಲಂಗೆ ॥೫೨॥ ಎಂದು ರಾಮಾಯಣಾವ ವಿಸ್ತರ । ದಿಂದ ಹೇಳಿದು ಸಂತವಿಟ್ಟನು । ಕಂದುಕಸರಿಕೆಯಡಗಿತಾಧರ್ಮಜನ ಚಿತ್ತದಲಿ ॥ ಸಂದಣಿಸೆ ತನುಪುಳಕ ಪರಮಾ । ನಂದರಸದಲಿ ಮುಳುಗಿ ಬಳಿಕರ । ವಿಂದನಾಭನ ನೆನೆಯುತಿದ್ದರು ವೀರನರಯಣಿನ ... ॥೫೩॥

ಅಂತು ಸಂಧಿ ೨೨ ಕ್ಕೆ ಪದ ೧೧೭೭ಕ್ಕಂ ಮಂಗಳಮಸ್ತು.



## ಇಪ್ಪತ್ತಮೂರನೆಯ ಸಂಧಿ.

॥ಸೂಚನೆ॥ ಧರಣಿಪತಿ ತಂದಿತ್ತನಾದ್ವಿಜ । ನರಣಿಯನು ಬಳಿಕಮಲಧರ್ಮದ । ಸರಣಿಯಿಂದೆತ್ತಿದನು ವನದಲಿ ನಿಜಸಹೋದರರ ॥ ॥ಪದ॥ ಕೇಳು ಜನಮೇಜಯಧರಿತ್ರೀ । ಪಾಲ ರಾಮಾಯಣವನಾಮುನಿ । ಹೇಳಿದನು ಹೂಳಿದನು ಭೂಪನ ಮಾನಸವ್ಯಥೆಯ॥ ಹೇಳಿದನು ಸಾವಿತ್ರಿಯುನ್ನತ

ತ । ಶೀಲವನು ಪತಿಭಕ್ತಿಯಿಂದವೆ । ಕಾಲ ನುಂಗಿದಪತಿಯ ಮರಳಿಚಿತಂದಸಂಗತಿಯ ॥೧॥ ಪತಿಭಕತಿ ಯುನ್ನತಿಕೆಯಲಿ ನಿ । ಷ್ಕೃತೆಯಲಾ ಸಾವಿತ್ರಿಯಾಕೆಯು । ನುತಚರಿತ್ರದವ್ರೋಲು ನಿಮ್ಮದ್ರೌಪದೀದೇ ವಿ ॥ ಹಿತವನಾಚರಿಸುವಳು ವಂಶೋ । ನ್ನತಿಯನುದ್ಧರಿಸುವಳು ನಿಮಗುಪ । ಹತಿಯದೆಲ್ಲಿಯದೆಂ ದು ಮಾರ್ಕಂಡೇಯಮುನಿ ನುಡಿದ ॥೨॥ ಮಾನನಿಧಿ ಸಾವಿತ್ರಿಯಾಖ್ಯಾ । ಖ್ಯಾನವನು ಕೇಳಿದನು ಚಿ ತ್ತ । ಗ್ಲಾನಿಯನು ಬೀಳ್ಕೊಟ್ಟನಮಳೋತ್ಸಾಹಭಾವದಲಿ ॥ ಕಾನನಾನುಭವಕ್ಕೆ ಕಡೆಯಿ । ಲ್ಲೇನು ನ ಮಗೆನುತಿತುಳಹರುಷಾ । ನೂನಕುಂತೀತನಯರಿದ್ದರು ಪರ್ಣಶಾಲೆಯಲಿ ॥೩॥ ಹಿಂಗಿದವು ಹನ್ನೊಂ ದವರೆವರು । ಷಂಗಳಟವೀತಟದೊಳಿರಲರು । ಟಿಂಗಳೊಳಗೊಂದಾದುದಾಪತ್ತಾತ್ಮಮಹೀಶರಿಗೆ ॥ ತುಂಗ ವಿಕ್ರಮಸಾಮುನೀಶ್ವರ । ಸಂಗತಿಯ ಸೊಗಸಿನಲಿ ಬಹುಟಿವ । ಸಂಗಳನು ನೂಕಿದನು ನೃಪತಿ ಪ್ಲಾ ಶಶಾಲೆಯಲಿ ॥೪॥ ವಿಮಲವಾನಪ್ರಸ್ಥಜನದಾ । ಶ್ರಮದೊಳಗೆ ಸಾರಂಗಮೃಗಪಿಳೆ । ಯುಮರನಿಸಾ ಸನದ ಸಾಧನದರಣಿಯನು ಕೊಂಡು ॥ ಕಮಳಸಖನುದಯದಲಿ ಸಂಧ್ಯಾ । ರಮಣಿಯಭಿವಂದನೆಗೆ ಸನ್ಮುನಿ । ಸಮಿತಿ ಹಿಂಗಿದಹಿಂದೆ ಕೊಂಡೋಡಿತು ವನಾಂತರಕೆ ॥ ೫ ॥ ಎಲೆಲೆಮೃಗವರಣಿಯನು ವಂಚಿಸಿ । ಕಳೆದುದೋ ಕಾಳಾಯ್ತುನುತ ತ । ಲ್ಲಣಿಸಿದಳು ನಿಜಪತಿಯ ಭಯದಲಿ ಮುನಿಯುವ ಧುವಂದು ॥ ಹೊಳೆಯ ಸಂಧ್ಯಾಸಾಧನಗಳು ಕಳ । ವಳಿಸಿಹೋದ್ದಿಜನುಪಾರ್ಥಿವ । ರಿಳಿ ಯಬಿಟ್ಟಿರಲಾಯೆನುತ ಹರಿತಂದರಾಶ್ರಮಕೆ ॥ ಎಲೆಯುಧಿಷ್ಠಿರ ರೋಷವಿಪನಿ । ಸ್ಸೀಳಸಿಗ್ರವು ವುದರಣಿಯನು ಮೃಗ । ಸೆಳೆದುಕೊಂಡೀಹೋದರ ಹೊಕ್ಕದು ಬಹಳ ಕಾನನದಾ ॥ ಅಲ್ಪುಂ ಸ್ವಾಧಾನವಿತರರ । ಹಳಿವಿಗಾನೊಳಗಾದೆನೆನೆ ಮುನಿ । ತಿಲಕನಾಶ್ರಮವನುಬಿಡದಿನಿಸ ಹೋದನಿ ಟ ॥೭॥ ಜಾಳಿಸಿದಹದನಿಲ್ಲ ಮುಹ್ಮೊನೆ । ಬೋಳೆಗಳು ನಿಡುಗುಂಡುಗಳ ಬಡಿ । ಕೋಲುಗಳ ನೆಕ್ಕಡವನುರುಪಾರಿಯದಕುಪ್ಪಸವ ॥ ಮೇಳವಿಸಿಹೊರ ವಂಟನವನೀ । ಪಾಲಬೇಂಟೆಗೆ ಮೃಗದಹೆ ಜ್ಜೆಯ । ಮೇಲೆ ಹೆಜ್ಜೆಯ ನಡಸುವನು ತನ್ನನುಜರೊಡಗೂಡಿ ॥೮॥ ತರಣಿಯನ್ನೆಯನಂದು ಮಾಯಾ । ಹರಿಣನನು ಬೆಂಬತ್ತಿ ವಿಪ್ಪಿಲ । ಕರಣಾವಂದದಲಿ ಮದವಾರ್ಗ್ವಾನದಲಿ ॥ ಧರ ಣಿಪತಿ ಬಳಿಸಲಿಸಿ ಮುನಿಪತಿ । ಯರಣಿಯನು ಕೊಂಡೊಯ್ದುಹುಲುಮೃಗ । ಸರಣಿಯಲಿ ಸ್ವೈ ವರಿದನಂದಾಕರ್ಣಮಾರ್ಗಣನು ॥೯॥ ಇರುಬಿನೊಳಗದೆ ಕುತ್ತು ಹೆಮ್ಮರ । ಮರುಗಳೊಳಗದೆ ತೊ ಡಚು ಬಾಣವ । ನೆರಗಿ ತಿವಿ ತೋಟಟ್ಟಿಯಲಿ ಸಿಡಿವಲೆಯನೊಡ್ಡೆನುತ ॥ ಅರಸಿದರು ನಟ್ಟ ಡವಿಯಲಿ ಮುಂ ದುರುಬಿದರು । ಬಿಳ್ಬಾರಬಲೆಗಳ । ಹರಹಿ ಸೊಪ್ಪಿನ ತೋಹಿನಲಿ ಸಿಲುಕಿಸಿದರಾ ಮೃಗವ ॥೧೦॥ ಕೇಳು ಜನಮೇಜಯ ಹಿಮಾಂಶುವಿ । ಶಾಲವಂಶಜರಡವಿಯಲಿ ಮುನಿ । ಸಾ ಲನರಣಿಯನೊಯ್ದುಮೃಗವನು ಹಿಡಿದರೊಳಬಿದ್ದ ॥ ಮೇಲೆತೋರುವಢಗೆ ಮಹಿಪರ । ಬಾಗಿಗ ಳೊಣಗಿದವು ಬಳಲಿಕೆ । ಯೋಳಿಗೆಯಲಾಸನ್ನ ಲತೆಯುರುಬಿನಲಿ ಮಲಗಿದರು ॥೧೧॥ ದಾಹವಾ ದುದು ನಿಳಯಮೀಕಾಂ । ತಾರ ನಿರ್ಜಲಪ್ರದೇಶಲಂಘಿಸಿಗೆ । ಭಾರ ಪಥವಿನ್ನೆನುತವನೆಂದರಸನಾಳವ ಳಿದು ॥ ನೀರನಾರೈ ಹೋಗು ನಕುಲಸ । ರೋರುಹದಪತ್ರದಲಿ ಪೊಟ್ಟಣ । ವಾಡಿಯನು ಕ ಟ್ಟೆಂದು ಕುಂತೀಸೂನು ನೇಮಿಸಿದ ॥ ಬಗೆವನೇ ಬಳಲಿಕೆಯನತಿಸಹ । ಸಿಗಳ ದೇವನು ಹಿರಿಯ

ಸಾಜ್ಞೆಯು । ನುಗುಳಲವ್ಕೆದೆ ಧನುವ ಕೊಂಡನು ನಡೆದನತಿಪಥವ ॥ ದೃಗುಮನೋಮಂಜು ಳದ ಕಂಜಾ । ಳಿಗಳ ಕಡುಪರಿಮಳದ ಪಸರದ । ಸೊಗಸು ತೀವಿತು ವಿಮಳಪದ್ಮಾಕರದ ಪವಮಾನ ॥೧೩॥ ಹಿತವನ್ನೈ ಹಿರಿಯಯ್ಯನೆನಗೆಂ । ದತುಳಬಲ ಪರಿತೋಷದಲಿ ಮಾ । ರುತನ ಬಳಿವಿಡಿದೈದಿದನು ನಕುಲಾಂಕನಾ ಕೊಳನ ॥ ಹತಿಯುಹುದು ನಿನಗೊಪ್ಪೆ ತಪ್ಪದು । ಹಿತವು ಬಳಿಕೆಂಬಂತೆ ಖಗಸಂ । ತತಿಗಳುಲಿದೊಪ್ಪಿದವು ಪದ್ಮಾಕರದ ತೀರದಲಿ ॥೧೪॥ ಇರವಿನಲಿ ರಚನೆಯಲಿ ಮಧುರೋ । ತ್ತರವ ನೆರೆ ಬೀರುತ್ತಲಂತಃ । ಕರಣವಲಿ ಕತ್ತರಿಸಿ ಕೊಂಡಿಹಕುಜನನಂದದಲಿ ॥ ಪರಿಮಳದ ಪಸರದಲಿ ಶೈತ್ಯೋ । ತ್ಕರುಷದಲಿ ಲೇಸೆನಿಸಿ ಕುಡಿದೊಡೆ ಹರಣವನೆ ಹಿಂಗಿಸುವಸರಸಿಯವಾರಿ ಚೆಲುವಾಯ್ತು ॥೧೫॥ ಖಳನ ಸತ್ಯದವೋಲು ವಂಚಿಸಿ । ಗೆಲಿದುದಾತನ ಮನವ ಮಾಯೆಯ । ಚೆಲುವಿನಂತಿರೆ ಚದುರಕೆಡಿಸಿತು ತಿಳಿಯಲರಿದೆನಿಸಿ ॥ ಲಲನೆಯರ ಹೃದಯದವೊಲೀಕ್ಷಿಸೆ । ನೆಲೆಯನೀಯದಕ್ಲತಕಸರಸಿಯ । ಸುಲಭತೆಗೆ ಸಹದೇವನಣ್ಣನು ಸೋತು ನಡೆತಂದ ॥೧೬॥ ಇಳಿದು ಮೊನೆಮುಂಚೆರಗನಗ್ರಕೆ । ಬಲಿದು ಹೊಕ್ಕನು ಜಾನುದಘ್ನ । ಸ್ಥಳವನಂಜುಳಿಯಿಂದ ತೊಳೆದನು ಚರಣವದನವನು ॥ ತುಳುಕಿದನು ವಾರಿಯನು ತನ್ನಯ । ಬಳಲಿಕೆಯನಪಹರಿಸಿ ಭೂಪತಿ । ಗಳಿಗೆ ಬಳಿಕಾನೊಯ್ವೆನೆಂದನು ಮನ್ನಿಸಿದನಂದು ॥೧೭॥ ಜಲವನಂಜುಳಿಯಿಂದ ಮೊಗೆದೀಂ । ಟಲು ನೆನೆಯಲಭ್ರದಲಿ ಗುಹ್ಯಕ । ನುಲಿದನೆಲೆನಕುಲಾಂಕಮಾಣೆನಗುತ್ತರವ ರಚಿಸಿ ॥ ಬಳಿಕಸಲಿಲವನೀಂಟು ಮಾತುಗ । ಳೊಳವು ಮರುಳಾಗದಿರೆನಲು ಖಗೆ । ಗಳುಕಿ ಬಳಲಿದ್ದು ಮೇಲೆ ಯಾಲಿಸಿ ವಿಚಾರಿಸನು ನುಡಿಯ ॥೧೮॥ ಜಡಿಯುಲೆರಡಳ್ಳೆಗಳು ಕೊರಳಲಿ । ಕುಡಿದನುದಕವನಬುಜದೆಲೆಯಲಿ । ಹಿಡಿದನನಿಬರಿಗಮಳಜಲವನು ಮರಳಿನಿಮಿಷದಲಿ ॥ ತಡಿಯನಡರಿದ್ದು ಧೊಪ್ಪನವನಿಗೆ । ಕೆಡೆದು ಪರವಶನಾದನಿತ್ತಲು । ತಡೆದನೇಕೆಂದಟ್ಟಿದನು ಸಹದೇವನನು ನೃಪತಿ ॥೧೯॥ ತವಕ ದಿಗೆ ನಡೆತಂದು ಪ್ರೆಮರಿ । ದವನ ಕಂಡನು ಖಸಳಳಗೆ ದರ । ಹರಿಸಲುದಕವ ಕುಡಿದು ಬಳಿಕೈದುವೆನಿದನೆ ನುತ ॥ ಲವಲವಿಸಿ ತಾಳಿಗೆಯ ತಲ್ಲಣ । ದವನು ಹೊಕ್ಕನು ಕೊಳವನವಳಾಂ । ಬುವನು ಮೊಗೆದನು ಮೊಗಕೆ ಮೋಹಲು ಮೇಲೆದನಿಯಾಯ್ತು ॥೨೦॥ ಬಿಡುಬಿಡೆಲೆಸಹದೇವಯೆನ್ನಯ । ನುಡಿಗೆ ಮಾರುತ್ತರವ ಕೊಡು ಮುಂ । ಗೆಡದೆ ಮುಂದಣ ನಿನ್ನವನ ಕಂಡಿಂತು ಮರುಳಹರೆ॥ ಮಡಿಯಲೆಳಸದಿರೆನಲು ಖಗಯುವ । ಗಡಿಸೆ ಸ್ಥಿರಿಸಲರಿಯದುತ್ತರ । ಗೊಡದೆ ಜಲವೀಂಟಿದನು ಹಾಂಟಿದುದನು ಕಳೇಬರದ ॥೨೧॥ ಈತನತಿವಿಸ್ಕಿಮರೆದನತ್ತಲು । ಕಾತರಿಸಿನು ಭೂಪನಿಬ್ಬರ । ಮಾತು ಮುಖದಿರುಹಿತ್ತು ಶಿಶುಗಳಿಗಾವದದನಾಯ್ತೋ ॥ ತಾತ ಹೋಗ್ಯೆ ಪಾರ್ಥಬಾಲಕ । ರೇತಕತ್ತಲೆ ತಡೆದರೆಂಬುದ । ನೀತಿಳಿದು ತಾ ಜಲವನೆನೆ ಕೈಕೊಂಡು ನಡೆತಂದ ॥೨೨॥ ಹಿಮದಗಾಳಿಯುಪಥವಿಡಿದು ಮ । ಧ್ಯಮದಪಾಂಡವನೈತರುತ ಮುಂ । ದಮಲಸರಸಿಯ ತೀರದಲಿ ಕೀಲಿಸಿದವುಗ್ಗಲಲಿ ॥ ಯಮಳರೊರಗಿರೆ ಕಂಡು ಮನದಲಿ । ತಮುವ ಹಿಡಿದನು ನೀರುಗುಡಿಟೀ । ಮಮತೆ ಪಿಂಗಲಾದ್ಕೆವೆನೆನುತಿಳಿದನು ಸರೋವರವ ॥೨೩॥ ಚರಣವದನವ ತೊಳೆದು ಥಗೆಥಾ । ವರಿಸಲಕ್ಷಮನಾಗಿ ಕರದಲಿ । ತೆರೆಗಳನು ತೆಗೆ ನೂಕಿ ಮೊಗೆದನು ಗರಳಮಯಜಲವ ॥ ಮರುಳೆ ನೀ ಕೌಂತೇಯ ಮಾದ್ರೇ । ಯರನು ನೋಡುವುದಿತ್ತನನಗು । ತ್ತರವೆನಿ

ತ್ತುದಕವನು ಕುಡಿಯೆಂದುದು ನಭೋವಚನ ||೨೪|| ಮೇಲೆಯಾರೈವನೆ ಸುತ್ರಪ್ಲ್ಲಾ | ಲೋಲಚಿತ್ತ ನು ಕಾಮಿ ಮೃಗಯಾ | ಕೇಳಿಲಂಪಟನರ್ಥಲಾಭದ್ಯೂತಲೋಲುಪನು || ಕೇಳು ಜನಮೇಜಯ ತಟಾಕದ | ಕಾಳಕೂಟವ ಕುಡಿದನರ್ಜುನ | ಕಾಲಿಡುತ ಡೆಂಡಣಿಸಿ ಮೈಮರೆದವರ ಕೂಡಿದನು ||೨೫|| ತಡೆದರತ್ತಲು ಮೂವರನುಜರು | ಮಡಿದರೇನೋ ಚಿತ್ರವಾಯಿತು | ನಡೆ ಸಮೀರಕುಮಾರ ನೀ ಹೋಗತ್ತ ತಳುವದಿರು || ತಡೆಯದೈತಹುದೆನೆ 'ಹಸಾದವ | ನುಡಿಯನಾನುತ್ತ್ರೈದಿ ಹಜ್ಜೆಯ | ಹಿಡಿದು ಬಳಸಲಿಸಿದನು ಬರೆಬರೆ ಕಂಡನದ್ಭುತವ ||೨೬|| ಘಟ್ಟುಗೆಡೆದಸುಗಳೆದತನ್ನೊಡ | ಹುಟ್ಟಿದರನೀಕ್ಷಿಸಿದನು ಸುರಿನ | ಬಟ್ಟೆಯನು ನೋಡಿದನು ಮೂಗಿನ ಬಳಿಯ ಬೆರಳಿಟ್ಟು || ಮುಟ್ಟಿತಿವರಿಗೆ ಮರಣವಿನ್ನೇ | ನಟ್ಟ ಕೊಲುವೆನು ಜವನಮೃತ್ಯುವ | ನಿಟ್ಟಿಲುವನುದುರಿಸುವೆನೆನುತೊದರಿದನು ಕಲಿಭೀಮ ||೨೭|| ಮನ್ನಣೆಗೆ ಹಿರಿಯಯ್ಯನೆಂದಾ | ನಿನ್ನು ಬಗೆವೆನೆ ಜವನಗಂಟಲ | ಮುನ್ನ ತಿರುಹುವೆನೆನುತ ಕಿಡಿಕಿಡಿವೋದನಾಭೀಮ || ಇನ್ನೊದರಿ ಫಲವೇನು ಕುಡಿವೆನು | ಮುನ್ನ ಜಲವನು ಬಳಿಕ ನೋಡುವೆ | ತನ್ನವರ ಮಾರ್ಗವನೆನುತ ಮೊಗೆದನು ವಿಷೋದಕವ ||೨೮|| ಮಾಣು ಮಾರುತ್ತರವ ಕೊಡು ಮುಂಗಾಣಬೇಹುದು ತಂದೆ ತನಗೀ | ಕ್ಷೋಣಿಯಲಿ ಪೂರ್ವದಪರಿಗ್ರಹವೀಸರೋವರವು || ಜಾಣನಾದೊಡೆ ಜಾರಬಿಡು ಬಗೆ | ಕೇಣವನುನೀನೆನಲು ಗಗನದ | ವಾಣಿಯನು ಮನ್ನಿಸದೆ ಮಾರುತಿಯಿಂಟಿದನು ಜಲವ ||೨೯|| ದಡದಡಿಸಿ ಕೊಳನಿಂದ ಹೊರಗಡಿ | ಯಿಡುತ ಬಳಲಿದನನಿಲಸುತನವ | ರೊಡನೆ ಮೈಯಿಕ್ಕಿದನು ಕಳಚಿದನೀಲಗಿರಿಯಂತೆ || ಅಡೆಗೆಡೆದನಾಭೀಮನಿತ್ತಲು | ಕಡುನಿರೋಧವ ಹಿಡದು ತಾನೇ | ನಡೆದು ಬಂದನು ಧರ್ಮಸುತನಾಕೊಳನ ಪಥವಿಡಿದು ||೩೦|| ಮೇಲೆ ಮುಗುಳ್ದಾಲಿಗಳ ಚಾಚಿದ | ತೋಳಮೇಲಿನ ತಲೆಯ ಸುಯ್ಲಿನ | ಲೀಲೆಯಡಗಿದಮುಖದ ಮಸುಳಿದಕಾಯಕಾಂತಿಗಳ || ಮೇಲುಮುಸುಕಿನ ಮುಗ್ಗುಲಿನಲಿಹ | ನಾಲುವರನೀಕ್ಷಿಸುತ ಭೂಪತಿ | ಕೋಲುಮರುಮನೆಗೊಂಡವೋಲ್ಮರುಗಿದನು ಚಿತ್ತದಲಿ ||೩೧|| ಮುಸುಕನರೆದೆರೆದವರವರಮೊಗ | ದುಸುರುಗಳನಾಲಿಸಿದನಕಟಾ | ಶಿಶುಗಳಿಗೆ ಕಡುಹಾನಿಯಾಯಿತೆ ಶಿವಮಹಾದೇವಾ || ನಿಶಿತಶಸ್ತ್ರದ ಗಾಯವಿಲ್ಲು| ಬ್ಬಸದ ಸಾವಿನ್ನಾವುದೋ ನಾ | ನಸುಗಳೆಯದೇಕುಳಿದೆನೆಂದಳಲಿದನು ಯಮಸೂನು ||೩೨|| ಇಂದಿನಲಿ ಕಡೆಯಾಯ್ತುಲಾವಿಮಳೇಂದುವಂಶಕೆ ಕೌರವನಫಲ | ಸಂದುದಿನ್ನ ಹಿತಾವನೀಶರಿಗಾಯ್ತು ಪರಿತೋಷ || ಕೊಂದರಾರಕಟಕಟೆನುತ್ತರ | ವಿಂದನಾಭನ ಕೃಪೆಗೆ ಬಾಹಿರ | ನಿಂದು ತಾನಾದೆನೆ ಮಹಾದೇವೆಂದು ಬಿಸುಸುಯ್ದ || ||೩೩|| ಹೋಗಲಿನ್ನೀನೀರುಗುಡಿದಿವ | ರಾಗುಹೋಗರಸುವೆನೆನುತ ಢಗೆ | ತಾಗಿದವನಿಪನಿಳಿದು ಹೊಕ್ಕನು ವಿಷಸರೋವರವ || ಬಾಗಿ ಮೊಗೆದನು ಜಲವನಭ್ರದೊ | ಳಾಗಲಾದುದು ರಭಸವೆಲೆಸಕ | ಳಾಗಮಜ್ಞ ಮಹೀಶ ಕೇಳೆಂದುದು ನಭೋನಿನದ ||೩೪|| ಅನುಜರವಿವೇಕಿಗಳು ಪುಣ್ಯ | ಜನದಲಧಿಕನು ನೀನಿಧಾನಿಸಿ | ನನಗೆ ಮಾರುತ್ತರವನಿತ್ತು ನಿರಂತರಾಯುದಲಿ || ತನುವಿಗಾಪ್ಯಾಯನವ ಮಾಡುವು | ದೆನಲು ಕೇಳಿದು ಢಗೆಯ ಸೈರಿಸಿ | ಘನಪಥದ ನುಡಿಯಾರದೆಂದವನೀಶನಾಲಿಸಿದ ||೩೫|| ಬಿಸುಟನುದಕವನಾನುಡಿಯನಾ | ಲಿಸಿದನಾರೈ ನೀನು ನಿನಗಾ | ಗಸದಲಿರವೇನಸುರನೋ ಕಿನ್ನರನೊ ನಿರ್ಜರನೋ | ಉಸುರೆನಲು ತಾಯಕ್ಷನೀಸಾ | ರಸವು ನನ್ನದುನಿನ್ನ ತಮ್ಮದಿ | ರಸುವನೆಳೆದವನಾನು ಕೇಳೈ ಧರ್ಮಸು

ತಯೆಂದ ॥ ಬಾಲಕರು ನೀವೆನ್ನ ಮಾತನು । ಕೇಳಿ ಯುದಕವ ಕುಡಿವುದೆನೆ ಭೂ । ಪಾಲ ನಿನ್ನವರೆನ್ನ ಮಾತನು ಕೇಳಿ ಮನ್ನಿಸದೆ ॥ ಮೇಲುಗಾಣದೆ ನೀರುಕುಡಿದು ವಿ । ತಾಳಿಸಿದರಿಂದೆನ್ನ ಮಾತನು । ಕೇಳಿ ನೀನುತ್ತರವ ರಚಿಸೆನೆ ನೃಪತಿ ಹೇಳೆಂದ ॥೩೭॥ ಜಲನಿಧಿಗೆ ಸರಿ ಸರಸಿಯಾವುದು । ನೆಲಕೆ ಹಿತವನದಾರು ಮರ್ತ್ಯ । ವಳಿಗೆ ಮಾತೆಯದಾರು ಸೂರ್ಯಪ್ರಭೆಗೆ ಸರಿಯೇನು ॥ ತಿಳುಹು ಧರ್ಮಜ ಸಕಲಧರ್ಮಾವಳಿಯ ಸಾರವನೆನಲು ಯಕ್ಷನ । ಬಲುಮೆಗವನೀಪಾಲನತಿಪರಿತೋಷದಲಿ ನುಡಿದ ॥೩೮॥ ಗಗನವೆಬುಧಿಗೆ ಸರಿಸರೋವರ । ಜಗಕೆ ಹಿತವನು ಶಕ್ರಮನುಜಾ । ದಿಗಳವಾತಾರೂಪು ಗೋವುಗಳಿದು ನಿಧಾನಮತ ॥ ಬಗೆಯಲುಗ್ರದ ಸತ್ಯವೆಂಬುದು । ಗಗನಮಣಿಗೆಣೆಯೆನಲು ಚಿತ್ತಕೆ । ಸೊಗಸಿ ತಲೆದೂಗಿದನು ಮಗುಳಿಂತೆಂದನಾಖಚರ ॥೩೯॥ ನಯವಿದನೆ ಕೇಳಾವನ್ಯಕ್ಷ । ತ್ರಿಯನು ವಿಪ್ರರೊಳಾವನ್ಯ ಶ್ರೋ । ತ್ರಿಯನು ಸುಜನರೊಳಾವನ್ಯ ಮಾಪುರುಷನೆಂಬುವನು ॥ ನಿಯತಧೀಮಸದಾರುದೇವ । ಪ್ರಿಯನದಾವನು ಕಠಿನ ಕಷ್ಟ । ಶ್ರಿಯನ ದಾವನು ಧರ್ಮಸುತ ಹೇಳೆಂದನಾ ಖಚರ ॥೪೦॥ ಧೃತಿಯುತಕ್ಷತ್ರಿಯನು ವೇದ । ಪ್ರತಿಯುತ ಶ್ರೋತ್ರಿಯನ ಹಿಂಸಾ । ರತನು ಮಹಪುರುಷನು ಸುಧೀಮನು ಸಾಧುಸೇವಕನು ॥ ಸತತಪರರುಪಕಾರಿದೇವ । ಪ್ರತತಿಪ್ರಿಯನು ಪರರಗುಣದು । ನ್ನತಿಯ ಸ್ಮರಿಸದವನು ಕಷ್ಟನು ಯಕ್ಷಕೇಳೆಂದ ॥೪೦॥ ನಿಂದ್ಯನಾವನು ಲೋಕದೊಳಗಭಿ । ವಂದ್ಯನಾವನುಜೀವವಿರೆ ಮೃತ । ನಂದಡಾವನು ದೇಶಕಳಿವೆಹುದಾರ ದೆಸೆಯಿಂದ ॥ ಸಂದ ಯಜ್ಞವದೆಂತು ಕೆಡುವುದು । ತಂದೆಹೇಳ್ಳೆ ತನಗೆನಲು ಸಾ । ನಂದದಿಂದವೆ ಕಾಣಿಸಿದನಾಖಚರಗುತ್ತರವ ॥ ಕೇಳು ಪರನಿಂದಕನೆ ನಿಂದ್ಯನು । ಹೇಳಲೇಂ ಪರಹಿತನೆ ವಂದ್ಯನು । ಹೇಳಿದಿಚ್ಛೆಗೆ ನಡೆವನೃಪನಿಂದಳಿವುದಾದೇಶ ॥ ಕೇಳು ನಡೆವನೇ ದರಿದ್ರನು । ಸಾಲದೆನಿಸಿದ ದಕ್ಷಿಣೆಯ ಯ । ಜ್ಞಾಳಿ ನಿಷ್ಫಲವೆಂದುನುಡಿದನು ರಾಯ ಕೌಂತೇಯ ॥೪೩॥ ನರಕಿಯಾವನು ಸುಜನರಲಿ ಬಾ । ಹಿರನದಾವನು ಲೋಕ ವಲಯುಲು । ವರ್ಣಿಪರೆ ಹೊಂದಿದನದಾವನು ಭೂಮಿಪಾಲರಲಿ ॥ ಮರುಳದಾವನು ಮಾನಭಂಗದ । ಭರತನಾವನು ಹೇಳುಧರ್ಮಜ । ಸರಸಿಯಲಿಬಳಿಕುದಕವನು ಕುಡಿಯೆಂದನಾಖಚರ ॥೪೪॥ ಎನೆ ಕೃತಘ್ನನೆನರಕಿವಿದ್ಯಾ । ಧನಮದಾಂಧನೆ ಬಾಹಿರನು ಹೊ । ಕ್ಕನುವರವ ಹಿರಗುವಮಹೀಪತಿ ಜೀವಪಿರೆ ಮೃತನು ॥ ವಿನುತಗುರುವರಿಯದನೆ ಮರುಳಂ । ಗನೆಯರಲಿ ವಿಶ್ವಾಸಪರನೇ । ಜನವರಯಲಭಿಮಾನಹೀನನು ಯಕ್ಷಕೇಳೆಂದ ॥೪೫॥ ಒಲೆದನೊಡಲನು ಧರ್ಮಸಂಗತಿ । ಗಳ ಸುಸಂವಾದದಲಿ ನಿಜತನು । ಪುಳಕವುಬ್ಬರಿಸಿದುದು ಗಬ್ಬರಿಸಿದುದುದು ಪ್ಪಕೃತವ ॥ ಎಲೆಮಹೀಪತಿ ಮೆಚ್ಚಿದೆನು ಬೇ । ಡಳಿದತಮ್ಮಂದಿರಲಿಯೊಬ್ಬನ । ತಲೆಯ ಬದುಕಿಸಿಕೊಡುವನೆನೆ ಯಮತನುಜನಿಂತೆಂದ ॥೪೬॥ ಅಸುವನಿತ್ತ ಖಚರಪತಿ ಜೀ । ವಿಸಲಿ ನಕುಲನು ಧನ್ಯನಾನೆನೆ । ನಸುನಗುತ ಚೇತರಿಸಿಮ್ಮೊಮ್ಮುಡಿದೆದ್ದನಾನಕುಡ ॥ ನಿಶಿತೆಮತಿ ಮೆಚ್ಚಿದೆನು ಬೇಡಿ । ನ್ನಸುವ ನೊಬ್ಬಂಗಿತ್ತನೆನೆಜೀ । ವಿಸಲಿ ಸಹದೇವಾಂಕನೆಂದನು ಧರ್ಮನಂದನನು ॥೪೭॥ ಜನಪ ನಿನ್ನಾಳಾಪವೆನ್ನೆಯ । ಮನಕೆವಿಸ್ಮಯವಾಯ್ತು ಭೀಮಾ । ರ್ಜನರು ನಿನ್ನೊಡಹುಟ್ಟಿದರು ನೀನವರಿಗತಿಹಿತನು ॥ ಅನುಜರವರಿರಲೇಕೆ ಮಾದ್ರೀತನುಜರೆಂಬರ ಒಯುಸಿದ್ಧೈಸೇ । ಳೆಸಲು ನಸುನಗೆ ಮೊಳೆಯೆ ನುಡಿದನುಧರ್ಮನಂದನನು ॥೪೮॥ ಸಾವು ಬೊಪ್ಪಂಗಾಗೆಮಾ

ದ್ರೀ । ದೇವಿ ತನ್ನನು ಕರೆದು ಶಿಶುಗಳ । ನೋವುಕ್ಕೇಡಿದು ನಿನ್ನದಾರ್ಕೈದಿವರ ಸಲಹುವುದು ॥ ಭಾವ ಭೇದವನರಿವ ಬಗೆಯುದೆ । ಕಾವುದೆಲೆ ಮಗನೆಂದುಬೆಸಸಿದ । ಳಾವಪರಿಯಲಿ ಮರೆವೆನ್ಸೆ ಮಾದ್ರೀಕುಮಾರಕರಾ ॥೪೯॥ ಎನಲು ಮೆಚ್ಚಿದನುಳಿದಭೀಮಾ । ರ್ಜುನರ ಹರಣವನಿತ್ತು ನಿಜನಂ । ದನನನಪ್ಪಿದನೊಲವಿನಲಿ ಯಮರಾಜನ್ಕೈತಂದು ॥ ತನುಜ ಸಾಕಿನ್ನಾಯ್ತು ನಿಮಗೇ । ವನನಿವಾಸವು ಬೀಳುಗೊಡು ಮುನಿ । ಜನವನಿನ್ನಜ್ಞಾತವಾಸಕೆ ಮನವಮಾಡೆಂದ ॥೫೦॥ ನೀವು ಪಾಂಡವರೆಂದು ನಿಮ್ಮನೆ । ದಾವಮಾನವರರಿಯದಿರಲಿ ಮ । ಹಾವಿಭವದಲಿ ಬೆಳಗುವದು ಬಳಿಕವನಿಮಂಡಲವ ॥ ದೈವಬಲ ನಿಮಗುಂಟು ಮೇಣಿ । ನ್ನಾವುದರಿದಲ್ಲೆಂದು ತನುಜನ ನೋವಿ ಮನ್ನಿಸಿ ಬೀಳುಗೊಟ್ಟನು ಪಾಂಡುನಂದನರ ॥೫೧॥ ಅರಣಿಯನು ತಂದಿತ್ತು ಧರಣೀ । ಸುರನ ಮನ್ನಿಸಿ ಮುನಿಗಳನು ಭೂ । ಸುರರ ಸಚಿವರ ಪರಿಕರರಥೌಮ್ಯಾದಿಮಂತ್ರಿಗಳ ॥ ವರಸುಭದ್ರಾದೇವಿಪಾಂಚಾ । ಲರನು ಧೃಷ್ಟದ್ಯುಮ್ನ ಮೊದಲಾ । ಗಿರೆ ನಿಜಾಪ್ತರನವರವರಮಂದಿರಕೆ ಕಳುಹಿದನು ॥೫೨॥ ಜಯ ನಮೋಜಯ ಭಕ್ತರಿಘು ಸಂ । ಹರ ನಮೋಜಯ ಸಕಲಭುವನೇ । ಶ್ವರ ನಮೋಜಯ ಕೃಷ್ಣ ಕೇಶವ ವಿಷ್ಣು ವಾಮನನೇ ॥ ಪರಮಪುಣ್ಯಶ್ಲೋಕ ಜಯ ಜಗ । ಭರಿತ ನಿರ್ಮಳರೂಪ ಜಯಜಯ । ಕರುಣಿ ರಕ್ಷಿಸು ರಾಯಗದುಗಿನವೀರನಾರಯಣಾ ॥೫೩॥

ಅಂತು ಸಂಧಿ ೨೩ ಕ್ಕೆ ಪದ ೧೨೩೦ ಕ್ಕಂ ಮಂಗಳಮಸ್ತು.

ಇತಿ ಶ್ರೀಮದಚಿಂತ್ಯಮಹಿಮ ಗದಗು ವೀರನಾರಾಯಣಚರಣಾರವಿಂದ ಮಕರಂದ ಮಧುಪಾನಪುಷ್ಟವಚಃಷಟ್ಪದಿ ನಿಕಾಯ ಶ್ರೀಮತ್ಕುಮಾರವ್ಯಾಸ ಯೋಗೀಂದ್ರ ವಿರಚಿತವಪ್ಪ ಕರ್ಣಾಟಭಾರತಕಥಾಮಂಜರಿಯೋಳ್ ಅರಣ್ಯಪರ್ವ ಸಮಾಪ್ತವಾದುದು.



॥ ಶ್ರೀರಸ್ತು. ॥

ಶ್ರೀವೇದವ್ಯಾಸಾಯನಮಃ.



# ಕನ್ನಡ ಮಹಾಭಾರತ–ವಿರಾಟಪರ್ವ.



## ಮೊದಲನೆಯ ಸಂಧಿ.

॥ಸೂಚನೆ॥ ಕಾಯಿದರು ಸತ್ಯವನು ವನವಾ । ಸಾಯತವ ನೆರೆಗೆಲಿದು ಪಾಂಡವ । ರಾಯರೋಲೈಸಿದರು ಬಂದು ವಿರಾಟನಗರಿಯಲಿ ॥ ॥ಪದ॥ ಕೇಳು ಜನಮೇಜಯಧರಿತ್ರೀ । ಪಾಲಮುನಿಜನನೃಪಜನಂಗಳ । ಬೀಳುಗೊಟ್ಟನು ಭೂಮಿಪತಿ ಬಲವಂದು ಹುತವಹನ ॥ ಮೇಲುಶಕುನವ ಚಾರುನಿನ

ದವೆ । ನಾಲಿಸುತ ಸೋದರರೆರುಸಹಿತವೆ । ನಾಲಯುವ ಹೊರವಂಟು ಸಾರಿದರೊಂದುವಟಕುಜವ ॥ ಬಂದು ವಟಕ್ಕುಪ್ರದಡಿಯಲನಿಬರು । ನಿಂದು ದುರುಪದಿಸಹಿತ ಬಳಲಿಕೆ । ಯಿಂದ ವಿಶ್ರಮಿಸಿದರು ಚಿಂತಿಸಿ ಧರ್ಮನಂದನನು ॥ ಹಿಂದೆ ಹನ್ನೆರಡಬುದ ಸವೆದ್ದವು । ಮುಂದರ್ಣನುವಿಂಗೇನುಗತಿ ಬಳಿ ಕೊಂದುವರ್ಷಾಜ್ಞಾತವಾಸಕ್ಕಾವಠಾವೆಂದ ॥೨॥ ಬಡಗಲವರೆದು ಮೂಡಣಾಲಸುಗ । ಳೊಡೆಗೆಣೆಯು ರಾಗಿಹರು ತೆಂಕಣ । ಕಡೆಯುವರು ಕಂಡಿಹರು ಕೆಲಬಲದವರು ಕೊಂಡೆಯರು ॥ ಪಡುವಣಾವರೆತಿಕೃಶ ರು ನಾವಿ । ಸ್ನಡಗಿರಲು ತೆರನಾವುದೆಂದೆನೆ । ನುಡಿವನರ್ಜುನದೇವನವನೀಪತಿಗೆ ವಿನಯದಲಿ ॥೩॥ ಒಳಿತವನು ಹೊಕ್ಕಿರದು ಕೌರವ । ರೊಳಗೆ ಹಗೆಯಾಗಿಹನು ಕೀಚಕ । ಒಲ ವಿರಾಟಂಗವನದೆಸೆಯಿಂ ಭಯವಿಹೀನವದು ॥ ಮುಳಿದು ಹೇಳಿಕೆಯಾದರವಿಸುತ । ಕಲಿತ್ರಿಗರ್ತಾದಿಗಳೆನಿಪಮಂ । ಡಳಿಕರನು ಕೈಕೊಳ್ಳದಾಳುವರವರು ಪಶ್ಚಿಮವ ॥೪॥ ನೃಪತಿ ನಿಶ್ಚೈಸಿದನು ಮತ್ಸ್ಯಾ । ಧಿಪನ ನಗರಿಯೊಳಲ್ಲಿ ಸ್ಥರಿಸಿ । ಕೃಪಣತನದಲಿ ನೂಕಬೇಹುದು ನುಡಿದ್ದವತ್ಸರವ ॥ ಗುಪಿತನೆಂತಳವಮುಪ್ರಾಶ್ರಯ । ದೆಸದೆ ಸೆಯನೆಂತಾನುಪಿರಿ ನಿ । ಷ್ಕೃಪೆಯೊಳೆಂತಾನೆಂಬೆನೆಂದನು ಧರ್ಮನಂದನನು ॥೫॥ ದೇವ ನಿಮ್ಮಯ ಮತವೆ ಮತವೆಮ । ಗಾವವೇಷದ ವಿವರ ನಿಮಗದ । ನೀವು ಬೆಸಸುವುದೆಂದು ಭೀಮಾರ್ಜುನರು ಬಿನ್ನ ವಿಸೆ ॥ ನಾವು ಭೂಸುರವೇಷದಲಿ ಸಂ । ಭಾವಿತರು ಮತ್ಸ್ಯಲ್ಲಿ ಸಸ್ಯಾ । ನಾವಲಂಬನ ಕಂಕನೆಂಬಭಿಧಾನ ತನಗೆಂದ ॥೬॥ ವಲಲನೆಂಬಬಿಧಾನದಲಿ ನೃಪ । ನಿಳಯವನು ಸಾರುವೆನು ತಾನೆಂ । ದುಲಿಯೆ ಮಾರುತಿ ನುಡಿದ ವರನಾಟ್ಯವಿದವೇಷವನು ॥ ಫಲುಗುಣನು ಹಯಗೋನಿವಾಸ । ಸ್ಥಳವಿಳಾಸಿತರೆನಲು ಯಮಳರು । ಲಲನೆ ಬಿನ್ನಹಮಾಡಿದಳು ಸೈಳೇಂದ್ರಿವೇಷವನು ॥ ತೊಳಲಿದಿರಿ ಹನ್ನೆರಡುವರುಷವು । ಹಳುವದಲಿ ಸೊಂಪಡಗ ಪರರೊಡ । ನುಳಿಗೆಲಸಮೊಳಗವಿದೆಂತ್ಯೆ ಸಾರ್ವಭೌಮರಿಗೆ ॥ ಬಳಲಿದಿರಿ ಹಿರಿದಾಗಿ ನಿಮ್ಮುವ । ನಳಲಿಸಿದೆನೆನ್ನಿಂದ ಪಾಪಿಗ । ಳೊಳರೆ ಭುವನದೊಳೆಂದು ಕುಂತೀಸೂನು ಬಿಸುಸುಯ್ದ್ದ ॥೮॥ ಒಡಲ ಬಳಿನೆಳಲಿಂಗೆ ಗತಿ ಬೇ । ರ್ಪಡಿಸಿಹುದ್ಯೆ ಸುಖದುಃಖವಿವು ಸ । ಮ್ಮಡಿಗಳಲಿ ತನುನಾಲ್ಕರಲಿ ಜೀವಾತ್ಮ ನೀವೆಮಗೆ ॥ ಅಡವಿಯೇ ಸಾಮ್ರಾಜ್ಯ ನಿಮ್ಮಡಿ । ಯೊಡನಿರಲು ನೀವಿಲ್ಲದಾಪುರ । ವೆಡವಿ ನಮಗಹುದೆಂದು ಬಿನ್ನವಿಸಿದರು ಭೂಪತಿಗೆ ॥೯॥ ತುಷ್ಟನಾದನು ನೃಪತಿಕೃತಪರಿ । ಶಿಷ್ಟಪಾಲನು ಜಗದೊಳೆತ್ಯ । ತ್ಕೃಷ್ಟಚರಿತನು ತೆಂಕದೆಸೆಗೆ ಸಹೋದರರುಸಹಿತ ॥ ದುಷ್ಟಮೃಗಗಳ ಬೇಂಟೆಯಾಡಿ ವ । ಸಿಷ್ಟಮುನಿಯಾಶ್ರಮದಸುಜನರ । ರಿಷ್ಟವನು ಪರಿಹರಿಸುತೈತಂದರು ಸರಾಗದಲಿ ॥೧೦॥ ಬಂದು ಮತ್ಸ್ಯಪುರೋಪಕಂಠದ । ನಂದನದ ಕೆಲಕಡೆಯಲನಿಬರು । ಸಿಂದು ನಾಲ್ಕುದೆಸೆ ರುನೀಕ್ಷಿಸಿ ಕನಿಜಸ್ಥಿವಾಸದಲಿ ॥ ತಂದಚರ್ಮದಲಖಿಳಕೈದುವ । ನೊಂದುಹೆಣನಾಕಾರದಲಿ ಬಿಗಿ । ದೊಂದುಬನ್ನಿಯಮರದ ತುದಿಯಲಿ ಕಟ್ಟಲೇರಿದರು ॥೧೧॥ ತೆಗೆಯದಿರಿ ನೀವೆಂದು ತುರುಗಾಹಿಗಳನಂಜಿಸಿ ಧರ್ಮಸುತದೃಗು । ಯುಗವ ಮುಚ್ಚಿ ಸುರೇಂದ್ರಯಮವರುಣಾದಿಗಳಿಗೆರಗಿ ॥ ವಿಗಡನೀಕಲಿಭೀಮ ನೀಕ್ಕೆ । ದುಗಳನೀತಂಗೀಯದಿರಿ ಕೈ । ಮುಗಿದು ಬೇಡಿದೆನೆಂದು ಸುರರಿಗೆ ನುಡಿದನವನೀಶ ॥ ಈವುದಾಬೇಡಿದರೆ ಪಾರ್ಥಂ । ಗೀವುದೀಯಜ್ಞಾತವಾಸದೊ । ಳೀವಿಗಡಭೀಮಂಗೆ ಕೊಡದಿರಿಯೆನಲು ಖತಿಗೊಂಡು ॥ ನೀವು ಕುಂತಿಯಮಕ್ಕಳಾದಿರಿ। ನಾವು ದುರ್ಯೋಧನನವರು ತ। ಪ್ಪಾವುದಿದಕೆಂದನಿಲ

ಸುತನೊಡೊತ್ತಿ ಗರ್ಜಿಸಿದ ॥೧೩॥ ಸುರನಿಕರ ಕಾದಿರಲಿ ಮೇಣೀ । ಧರಣಿ ಕೊಡೆನೆಂದಿರಲಿ ಹಸ್ತಿನ । ಪುರಗೆ ಧಾಳಿಯನಿಡುವೆನಮರರ ಮೋರೆಗಳತಿವಿದು ॥ ಉರುತರಾಸ್ತ್ರವನೊಯ್ವೆನೆಂದ । ಬ್ಬರಿಸಿ ಮಾರುತಿ ನುಡಿಯೆ ತಮ್ಮನ । ಭರದ ಖತಿಯನು ನಿಲಿಸಿ ಸಂತೈಸಿದನು ಸಾಮದಲಿ ॥೧೪॥ ಅವಧಿ ಯೊಂದೇವ ರುಷವಿದರೊಳ । ಗೆವಗೆ ಸ್ಮರಣೆಯುಂಟುನೀ ಮುನಿ । ದವಗಡಿಸಿದೊಡೆ ಬಳಿಕ ಸ್ಮರಿಸಲರಿಯೆ ಮನ ಮುಳಿಸು ॥ ಅವನಿಯಲಿ ಹನ್ನೆರಡುವರುಷವು । ನವೆದುದುಂನಿಷ್ಫಲವಲಾ ಕೌ । ರವರಂಗೆತ್ತಿಲ್ಲಾಗಹುದು ನೀನೇಬಲ್ಲೆಹೋಗೆಂದ ॥೧೫॥ ಹದುಳವಿಟ್ಟನು ಭೀಮನನು ನಿ । ರ್ಮದನು ಮತ್ಸ್ಯನ ಪುರಿಗೆ ಯತಿ ವೇ । ಷದಲಿ ಬಂದನು ಹೊನ್ನ ಸಾರಿಯುಚೀಲಕಕ್ಷದಲಿ ॥ ಇದಿರೊಳಾನತರಾಯ್ತು ಕಂಡವ । ರುದಿತ ತೇಜಃಪುಂಜದಲಿ ಸೊಂ । ಪೊದವಿ ಬರಲು ವಿರಾಟ ಕಾಣಿಸಿಕೊಂಡನುಚಿತದಲಿ ॥೧೬॥ ಇತ್ತ ಬಿಜ ಯಂಗೈಯಿ ಹಿರಿಯರು । ದೆತ್ತಣಿಂದೈ-ತಂದಿರೈಯ । ತ್ಯುತ್ತಮದ ವೇಷದ ಮಹಾತ್ಮರ ಕಂಡು ಬ ದುಕಿದೆವು ॥ ಚಿತ್ತವಿಸು ಭೂಪಾಲ ಪಾಂಡವ । ರತ್ತ ವನವಾಸಕ್ಕೆ ನಡೆಯಲು । ಇತ್ತ ಬಂದೆವು ಮು ನ್ನಿನೋಲಗವೆಂತುಸಿತಾಗಿ ॥ ಕೆಟ್ಟುದಿಂದ್ರಪ್ರಸ್ಥ ಪಾಂಡವ । ರುಟ್ಟ ಹೋದರು ನಾರಸೀರೆಯ । ನ ಟ್ಟಡವಿ ಮನೆಯಾಯ್ತು ರಾಜಾನ್ವಯದ ರಾಯರಿಗೆ ॥ ಬಿಟ್ಟರೆಮ್ಮನು ಜಠರಭರಣಕೆ । ನೆಟ್ಟನಾಶ್ರ ಯವಿಲ್ಲದಿರ ಕಂ । ಗೆಟ್ಟು ಬಂದೆವು ಕಂಕನೆಂಬಭಿಧಾನ ತನಗೆಂದ ॥೧೭॥ ಓಲಗಕೆ ಬಂದುಳಿದರಾಯರ । ಮೌಳಿಮೌಕ್ತಿಕಮಣಿಮಯೂಖನಿ । ವಾಳಿಯಲಿ ನೆರೆ ಮೆರೆವುದಾತನ ಪಾದಪದ್ಮಯುಗ ॥ ಕಾಲವಾ ವನಸಾವಪಲಯಲಿ । ಕೇಳುವಾಡದು ಧರ್ಮಪುತ್ರನ । ನಾಳುಗೊಂಡನು ಮತ್ಸ್ಯನಲೆ ಜನಮೇಜಯ ಕ್ಷಿತಿಪಾ ॥೧೮॥ ಆದುದೈ ನಿರ್ವಾಹ ಕಂಕಂ । ಗಾದುದಾಮತ್ಸ್ಯೇಶನಿಂದ ವಿ । ವಾದವಿಲ್ಲದೆ ಸೇವೆ ನಿಜ ವಾದಂತೆ ಇರುತಿರಲು ॥ ಹೋದವಿತ್ತಲು ಕೆಲವುದಿನ ತನ । ಗಾದಸಾಹಾಯ್ಯದಲಿ ಬಪುಬಲ । ಭೇದಿ ಮಾ ರುತಿ ಬಂದು ಕಂಡನು ಮತ್ಸ್ಯಭೂಪತಿಯ ॥೨೦॥ ಏನುಪರಿಣತೆ ನಿನಗೆ ಬಾಣಸಿ । ಯಾನು ಭೀಮನ ಮನೆಯವನು ಮ । ತ್ತೇನು ಭುಜಬಲವೆಂಬೆನೆಸಗ್ಗದಮಲ್ಲವಿದ್ಯೆಯಲಿ ॥ ನೀನಧಿಕನೆಂದಾಸವಿಾರನ । ಸೂನುವನು ಮನ್ನಿಸಿದನಿತ್ತಲು । ಮಾನಸಿಥಿ ಮರುದಿವಸ ಹೊಕ್ಕನು ಪಾರ್ಥನಾಹೊಳಲ ॥ ಸುರಪ ನರಸಿಯ ಶಾಪದಲಿ ಸಿತ । ತುರಗನರೆವೆಣ್ಣಾಗಿ ಮತ್ಸ್ಯೇ । ಶ್ವರನ ಮಗಳಿಗೆ ನಾಟ್ಯವಿದ್ಯಾಭ್ಯಾಸಸಂಗ ದಲಿ ॥ ಇರಲು ಯಮಳರು ತುರಗಗೋವ್ರಜ । ಭರಣರಾದರು ಬಳಿಕ ಪಾಂಡವ । ರರಸಿಸಾಂದಳೊಲವಿ ನಲಿ ವೈರಾಟಪಟ್ಟಣವ ॥೨೨॥ ತರಣಿಗಂಜಿದೊಡಿಂದು ತಲೆಗಾ । ಯ್ದಿರಿಸಿದನೊ ಮರೆಯಾಗಿ ತಿಮಿ ರದ । ಹೊರಳಿಗಳನನ ಮುಡಿಗ ಮೋಹಿದವೇಣಿ ವಲ್ಲರಿಯಾ ॥ ಹಿರಿದು ಸ್ಮರಿಸಲಾರೆನೆಂದೊಡ । ನಿರಿ ಸಿದನೊ ಕೈರವವನನಲೆಂ । ದರರೆಕಂಗಳಧಾಳವೊಪ್ಪಿರೆ ಬಂದಳಬುಜಮುಖಿ ॥೨೩॥ ಮೊಲೆಯ ಮೇಲು ದು ಜಾರಿ ಜಾರಿದ । ರೆಳಿಮನರು ಕಂಗಳನ ಮಿಂಚಿನ । ಹೊಳಕುನೆಡನಡೆಗೆಟ್ಟು ನಿಂದರು ಚಿತ್ತವಿಹ್ವಲರು ತೆಳುವ್ವಸಿರು ತಲೆದೋರಿ ತೋರಿದು । ದಲಗು ಮರುಮೊನೆಯೆನುತ ವಿಟರಳ । ವಳಿಯೆ ನಡೆತರುತಿ ದ್ದಳಂಗನ ರಾಜವೀಥಿಯಲಿ ॥೨೪॥ ಎಲೆಲೆ ಮದನನಗಜವು ತೊತ್ತಳ । ದುಳಿದುದೋ ಕಾಮುಕರನೆ ಗಾ । ವಳಿಯೊಳಗ ಗಾಳಾಯ್ತು ಗರುಪಿಕೆ ವಿಟವಿದೂಷಕರ ॥ ಅಳುಕಿದರು ಮನುಮತನಗರುಡಿಯ । ಬಲುಮಗಾರರು ಬಂದಳಿಗ್ಗದ । ನಳಿನಮುಖಿ ಬಹುಜನದ ಮನಕಚ್ಚರಿಯನೊದವಿಸುತ ॥೨೫॥ ಜನ

ದ ಜಾಣಕ್ಕಾಡಲಾಮೋ । ಹನಮಹಾಂಬುಧಿಯೊಳಗೆ ನೃಪನಂ । ಗನೆಯು ಭವನಕೆ ಬರಲು ಬೆರಗಾ
ಯ್ತಖಿಳನಾರಿಯರು ॥ ಪನಿತೆಮಾನಿಸೆಯಲ್ಲ ಮನುಜರ । ಗನಿತರೂಪೆಲ್ಲಿಯದು ವಿಸ್ಮಯ । ವೆನುತ
ಮನದೊಳಗಳುಕಿದರು ಮತ್ಸ್ಯೇಶನರಸಿಯರು ॥೨೬॥ ಬರವ ಕಂಡು ಸುಧೇಷ್ಣೆ ಮನದಲಿ । ಹರುಷ
ಮಿಗೆ ಹೊಂಗಿದಳು ಕರೆಕರೆ । ತರುಣಿಯಾರೆಂದಟ್ಟಿದಳು ಕೆಳದಿಯರನನಿಬರನು ॥ ಸರಸಿಜಾಯತಗಂಧ
ವನು ಮೋ । ಹರಿಸಿ ಮುಂಚುವಪರಿಮಳವನಂ । ದರಸಿ ಬೀರುತ ಬಂದು ಹೊಕ್ಕಳು ರಾಜಮಂದಿರ
ವ ॥೨೭॥ ಕೆಳದಿಯರು ಕಾಣಿಸಿದರರಸನ । ಲಲನೆಯನು ಪರಿಯಂಕಪೀಠದ । ಕೆಲಕೆ ಕರೆದಳು ಕಮಲ
ವದನೆಯನುಚಿತವಚನದಲಿ ॥ ನಳಿನಮುಖಿ ನೀನಾರು ನಿನಗಾ । ರೊಳರು ರಮಣರು ಮಾಸಿಕೊಂಡಿಹ ।
ಮಲಿನ ವೃತ್ತಿಯಿದೇಕೆನುತ ಬೆಸಗೊಂಡಳಂಗನೆಯು ॥೨೮॥ ಅತುಳ ಬಲಗಂಧರ್ವರೈವರು । ಪತಿಗಳೆ
ನಗುಂಟೆನ್ನ ಚಿತ್ತಕೆ । ಖತಿಯ ಮಾಡಿದರೊಂದುವರುಷವು ಬಿಡುವೆಸವರುಗಳ ॥ ಸತತವಾಕುಂತೀಕು
ಮಾರರ । ಸತಿಯುರೋಲೈಸಿದ್ದೆ ಬಳಿಕವ । ರತಿಗಹನವನನಿಷ್ಠರಾದರು ತನಗೆ ಬರವಾಯ್ತು ॥ ಏನಮಾಡ
ಲುಬಲ್ಲೆ ಯೆಂದೊಡೆ । ಮಾನಿನಿಯ ಸಿರಿಮುಡಿಯ ಕಟ್ಟುವ । ಸೂನಮುಡಿಸುವ ವರಕಟಾಕ್ಷಕೆ ಕಾಡಿ
ಗೆಯನಿಡುವ ॥ ಏನ ಹೇಳಿದ ಮಾತಬಲ್ಲೆನು । ಸಾನುರಾಗದೊಳೆಂದೆನಲು ವರ । ಮಾನಿನಿಯ ನಸುನ
ಗುತ ನುಡಿಸಿದಳೆಂದುವಿನಯದಲಿ ॥೩೦॥ ಎನಲು ಮೆಚ್ಚಿದಳಾವಿರಾಟನ । ವನಿತೆ, ವೀರರ ವಧುವನಾಸ
ಘು । ಜನದೊಳಗ ನೇಮಿಸಿದಳನಿಬರಿಂಗಾಯ್ತು ನಿರ್ವಾಹ ॥ ಮಾನದ ಥಗೆಯಡಗಿದವು ಮತ್ಸ್ಯೇ । ಶನ
ಪುರಾಂತರದೊಳಗೆ ಮೈಮರ । ಸನುಪಮಿತಭುಜಸತ್ವರಿದ್ದರು ಭೂಪ ಕೇಳೆಂದ ॥೩೧॥ ಆಸುಧೇಷ್ಣಾ
ದೇವಿಯರ ನಿಡು । ಕೇಶವನು ಹಿಕ್ಕುವಳು ಮುದದಲಿ । ವಾಸು ಮಲ್ಲಿಗೆಯರಳದಖ್ಖಾಳವನು ಮು
ಡಿಸುವಳು ॥ ಆಸತಿಯ ಮನವೊಲಿದು ನಡೆವಳು । ಲೇಸುಲೇಸೆಂದೆನಿಸಿ ಬಾಳುವ । ಬಾಸೆಯನು ಸಲಿಸು
ತ್ತಲಿರ್ದಳು ಪತಿಗಳಾಜ್ಞೆಯಲಿ ॥೩೨॥ ಯಮನ ಮಗ ಸನ್ಯಾಸಿವೇಷದಿ । ಪವನಸುತ ಬಾಣಸಿನ ಮ
ನೆಯಲಿ । ಬಪಜರಾಯನ ತನಯನಿರ್ದ ಶಿಖಂಡಿವೇಷದಲಿ ॥ ಜವಳಿಮಕ್ಕಳು ತುರಗಗೋವ್ರಜ । ನಿವ
ಹರಾದರು ಕಮಲಮುಖಿ ಕಾ । ಲವನು ಕಳೆದಳು ರಾಯನೊಲುಮೆಯ ಕೆಳದಿಯರಕೂಡೆ ॥೩೩॥

ಅಂತು ಸಂಧಿ ೧ಕ್ಕೆ ಪದ ೩೩ಕ್ಕಂ ಮಂಗಳಮಸ್ತು.

॥ಸೂಚನೆ॥ ಅರಸು ಕುರು [illegible] ಳಗವ । ಕರಸಿ ಕಳು
ಹಲು ವಲಲ ಕೊಂದನು ಮತ್ಸ್ಯ [illegible] ಯಧರಿತ್ರೀ । ಪಾಲ
ಕುಂತೀತನುಜರೈವರ । ಸಾಳುಗ [illegible] ಕಾಲವನು ಕಳಿವುತ್ತ
ಲಿರ ದು । ಶ್ಯಾಲಕುರುಪತಿ ಪಾಂಡು [illegible] ನು ಮನದೊಳಗೆ ॥೧॥
ಆದುದವಪಪಂಭ್ರಮಣಾವಿ । ಸ್ಸ್ವಾ [illegible] ಳವರೀಗ ಹದಿಮೂರೆ
ಬುದನವವರಲಾ ॥ ಆಡುರಾತ್ಮರ [illegible] । ಸಾಧಕವದೇನೆಂದು [illegible] ಲಾದದಲಿ ಮಲ್ಲರನು

ಬರಹೇಳೆಂದು ನೇಮಿಸಿದ ॥೨॥ ಕರೆಯಲೊಡನೈತಂದರಾಮ । ಲ್ಲರು ಮಹೋತ್ಸವದಿಂದ ಸರ್ವಾ । ಭರಣಭೂಷಿತಗಂಧಮಾಲ್ಯಾಂಬರವಿಲೇಪನಯು ॥ ಕರಿಗಿರಿಗಳವರಲ್ಲಿ ಜನಿಸಿತೊ । ಹರಯೊನಲ್ಲು ಜೀ ಮೂತಮುಖ್ಯರು । ಕುರುಪತಿಯು ಬಳಿಸ್ಯಟ ಬೆಸನೇನೆಂದರವನಿಪನ ॥೩॥ ಮಲ್ಲಕೇಳ್ಗೆ ಜೀಮೂತಧರಣಿ ಯೊ । ಳೆಲ್ಲಿ ಕುಂತೀತನುಜರಿಪ್ಪರೊ । ಒಲ್ಲವಿಕೆಯಲಿ ದೇಶಗಳ ತಿರುಗಾಡಿಸೂಹೆಯಲಿ ॥ ನಿಲ್ಲದಿಲ್ಲಿಗೆ ತಿಳಿದುಕಳುಹಿಸು । ಎಲ್ಲಪೇತಕೆ ಹೋಗೆನಲು ಕರ । ಪಲ್ಲವವ ಮುಗಿವುತ್ತ ಬಿನ್ನೈಸಿದನು ಜೀಮೂ ತ ॥೪॥ ಜೀಯಪಾಂಡವರಿದ್ದ ಠಾವನು । ಬಾಯಮಾತಲ್ಲರಸ । ಬೇಕು ಮ । ಹಾಯತದ ಕುಶಲದಲಿ ಬ ಹುವಿಧದಿಂದಲೆಂದೆನಲು ॥ ರಾಯನೆಂದನು ಜಟ್ಟಿಗರ ಕೂ । ಡಾಯತದಲೈದುವದು ಮಲ್ಲರ । ದಾಯದ ಲಿ ವ್ಯವಹರಿಸಿ ತಿಳಿವುದು ಮಂತ್ರ ನಿನಗೆಂದ ॥೫॥ ನಿನ್ನ ಸಾಹಸವರಿವೆನೆಂತಿರ । ಲಿನ್ನು ಪರಿಂಸಬೇ ಕು ಮಲ್ಲರ । ಉನ್ನತದ ಸಾಹಸವ ಶೌರ್ಯವ ನಿನ್ನ ಮುಂದೆನಲು ॥ ನನ್ನಿಯಿಂದವೆ ನೋಡೆನುತ ಸಂ । ಪ ನ್ನ ಶೌರ್ಯನು ಮಿವಿಸಿದ ನ । ತ್ಯನ್ನತದ ಬಂಧುಗಳ ಭುಜಬಲದಿ-ರವನೆರಸಂಗೆ ॥೬॥ ಬಲ್ಲಹರುಕು ಶಲದಲಿ ಕಾಳಗ । ವಲ್ಲಿ ನಿಜವಿಕ್ರಮರು ಮೇಗರೆ । ಯಲ್ಲ ಧರ್ಮಜ್ಞರು ಮಹಾಹವವೀರರವರೆನಲು ॥ ಎಲ್ಲವೆದ್ದುದು ಜೀಯಕುರುಕುಲ । ಮಲ್ಲನೋಡೆನುತುಲಿದು ಚೌಪಟ । ಮಲ್ಲನಾಜೀಮೂತನಿರ್ಸೈಸಿದ ಪ ರಾಕ್ರಮವ ॥೭॥ ಪುಂಡರೀಕನ ಪಿಂಗಳಾಕ್ಷನ । ಚಂಡಬಲಜಗ ಜಟ್ಟಿರಣದು । ದ್ದಂಡಕೇಸರಿ ವೀರ ಬಾಹು ಮಹಾಮದೋನ್ನತದ ॥ ಹಿಂಡುಗಲ ಕನುವುಗ್ರಕೇಶಿಪ್ರ । ಚಂಡಭೈರವರಾಹು ಕಲಿಭೇ । ರುಂ ಡನೆಂಬತಿಬಲರ ತೋರಿದನಾನರಾಧಿಪಗೆ ॥ ೮ ॥ ಕದನಕರ್ಕಶ । ಕಾಲಭೈರವ । ಮಧುವನನ ನರಸಿಂಹ ಘಾಟನ । ಸದೆಮಳ್ಳಿವನಾಗರಿಕ ಜಟ್ಟಿಗವೀರಭೇತಾಳ ॥ ಗದೆ ವಿಭಾಂಡನ ದೈತ್ಯನರಸುರ । ಚದುರಚ ಪಳರ ಬಲವನೊಬ್ಬನೆ । ಸದವವರನೈನೂರತೋರಿದನಾನರಾಧಿಪಗೆ ॥೯॥ ಒಬ್ಬನಾಲ್ನೂರಿರವ ಕೊಂಬ ವ । ನೊಬ್ಬ ನಗ್ಗಜವೆರಡ ಮೇಣ್ಮ । ತ್ತೊಬ್ಬ ನೂರರಬದಿಯನೊದಗಿದ ಸಾಮ್ಯಗಾಧಿಪನಾ ॥ ಹೆ ಬ್ಬುಲಿಯನಾರ್ರೆಳಸೀಳಿದ । ನಿಬ್ಬರುಗಳೊಂದಾಗಿ ಕೂಡಿಯೆ । ಬೊಬ್ಬುಳಿಯ ನೊಡೆವಂತೆ ಕೊಂದ ರು ಹಲವುಮಲ್ಲರನು ॥೧೦॥ ಉಡಿದನೊಬ್ಬನೆ ಗಜದದಾಡೆಯ । ಕೆಡಹಿದನು ಕೇಸರಿಯ ಬೀಳುವ । ಸಿಡಿ ಲವೋ। ಲಾರ್ಭಟಿಸಿ ತೂಳುವನಿವನು ಪ್ರತಿಭಟನಾ ॥ ಮಡಿದನಿವನೆಂದೆನಿಸಿ ಹೊಕ್ಕೊಡ । ನೊಡನೆ ತಿವಿ ವನು ಜೀಯಗಡ ಗಡ । ಬಡೆಯಮಾತಲ್ಲೆಂದನನುಪಮಮಲ್ಲಜೀಮೂತ ॥೧೧॥ ಹೊಡೆದು ಭುಜವನು ಹೂಂಕರಿಸಿ ಕಿಡಿ । ಯಿಡುವವಿಗಾಸೆಯ ತಿದ್ದುತೊಲವಿನ । ಲಡಿಗಡಿಗೆಯಾರ್ಭಟಿಸಿ ನಿಂದಾಮಲ್ಲಜೀ ಮೂತ ॥ ನುಡಿ ನೃಪತಿ ಹದನೇನು ರಿಪುಗಳ । ಮಡುಹಿ ಬರಲೋ ಮೇಣು ಕೈಸೆರೆ । ವಿಡಿದು ತರಲೋ ನಿಶ್ಚಯವನುಸುರೆಂದನಾಮಲ್ಲ ॥೧೨॥ ಈ ಪರಿಯ ಜಟ್ಟಿಗಳು ತಮ್ಮಪ್ರ । ತಾಪವನು ವಿಸ್ತರಿಸೆ ಕು ರುಕುಲ । ದೀಪನಪ್ಪಣೆಗೊಟ್ಟು ಮಗುಳೆಂತೆಂದ ನವಪೊಡನೆ ॥ ವ್ಯಾಪಿಸುವದವನಿಯಲಿ ಮಲ್ಲರ ತೋ ಪುಜಾಳಿಯ ಮೆರೆದು ಹೊಗಳಿಸಿ । ಯಾಪುರವಲೇ ತನ್ನ ಬಿರುದಾವಳಿಪರಾಕ್ರಮವ ॥೧೩॥ ಸುದ್ದಿಯಿ ಲ್ಲದೆ ಹೋದಪಾಂಡವ । ರಿದ್ದರಾದೊಡೆ ಬೀಡುಗಲಹದ । ಯುದ್ಧ ಕೇಳದೆ ತಿರುಗಿಸುವುದೊಬ್ಬನನು ಕರಿಪುರಿಗೆ ॥ ಉದ್ದುರುಟತನ ಬೇಡ ಮಲ್ಲರೆ । ಗೆದ್ದು ನೀವಾರಾಜಕಾರ್ಯಕೆ । ಬುದ್ಧಿವಂತಿಕೆ ನಮ್ಮೊ ಳುಂಟೆಂದನು ಸುಯೋಧನನು ॥೧೪॥ ತರಿಸಿದನು ಚೊಂದೊಡವ ರತ್ನಾ । ಭರಣಮೊಪ್ಪುವತೋಳ

ಭಾಪುರಿ । ವರಮಣಿಗಳಿಂದೆಸೆವಬಿರುದಿನ ಕಡೆಯಸರಪಳಿಯ ॥ ಕೊರಳ ಹಾರದ ವಜ್ರಮಾಣಿಕ । ದು ರುಗಿದೆತ್ತಿದಚೀನಚೀನಾಂ । ಬರವನಿತ್ತುಪಚರಿಸಿದನು ಕಲಿಮಲ್ಲಸಂತತಿಯ ॥೧೫॥ ಚಂದನದ ಕುಂ ಕುಮದ ಕತ್ತುರಿ । ಯಿಂದಲನುಲೇಪನಜವಾಡಿಸು । ಗಂಧಕಪ್ಪುರಪೀಳಯುವ ಸಾರಾಮ್ರಫಲಗಳನು ॥ ಅಂದವಂಗಲ್ಲವನು ಕೊಡಿಸಲು । ಯಿಂದು ದಿನಪರು ಪಡಿಯೆಯೆನಲಾ । ನಂದದಿಂ ನಿಂದಿದರು ನೇ ಮವನಿತ್ತು ಹೋಗೆಂದ ॥೧೬॥ ಹೊಡೆಸಿದರು ಭೇರಿಗಳತಂಬಟ ।ಎಡಬಲದ ಡೌಡೆಗಳ ವಿೀಗೆ ಬೊ। ಬ್ಬಿಡು ವನಿಸ್ಸಾಳದ ಮಹಾರವರಾಯಗಡಿಬಿಡಿಯಾ ॥ ಘುಡುಘುಡುಸ್ವರವೆಸೆಯಲಂಬರ । ವೊಡೆದುದೋಯೆಂ ಬಂತೆ ನಗರವ । ನೊಡನೆ ಹೊರವಂಟರು ನೃಪಾಲನ ಮಲ್ಲಸಂದೋಹ ॥೧೭॥ ಸುರನದಿಯನುತ್ತರಿಸಿ ನಾನಾ । ಪರಿಯ ದೇಶವ ಹೊಕ್ಕು ಗೋದಾ । ವರಿಯ ತೀರದಪಟ್ಟಣವ ಶೋಧಿಸುತಪಯಣದಲಿ॥ ಬ ರುತಲಂತಾತುಂಗಭದ್ರಾ । ವರನದಿಯ ರಾಷ್ಟ್ರಾಂತದೊಳು ಪಿೀಗೆ । ಪರಿಕಿಸುತ ಜೀಮೂತ ನಡೆದನು ಮ ಲ್ಲಜನವೆರಸ ॥೧೮॥ ಬಂದನೀಪರಿ ಹಲವುಯೋಜನ । ದಿಂದಲೊಂದಿನರಾತ್ರಿಯಲಿ ಮುದ । ದಿಂದ ಮ ಲಗಿರಲೊಬ್ಬಮಲ್ಲನು ಬದಿ ಕನಸಿನಲಿ ॥ ಬಂದುದಿದಕೋಮೃತ್ಯು ಹಾಹಾ । ಯೆಂದು ನಿದ್ರೆಯನುಳಿ ದು ಹುಗೂಳ । ಯಿಂದು ಮಲ್ಲರು ಗಜಬಜಿಸೆ ಜೀಮೂತನಿಂತೆಂದ ॥೧೯॥ ಏನಿದೇನಾಶ್ಚರ್ಯಕರೆಯ ವ । ನೇನ ಕಂಡನು ಕನಸಿನಲಿ ತಾ । ನೇನನೆಂದನು ರಹವನನುತಡಿಗಡಿಗೆ ಬೆರಗಾಗಿ ॥ ಮೌನದಲಿ ಮುಳುಗಿದರು ತಂದರು । ಹೀನಪ್ರದಯನನೆಂದನವನು ಮ । ನ್ನೊಗ್ಗಿರಾಗವನುಳಿದು ಕನಸಿನ ಭಯವು ದಿಟವೆಂದು ॥೨೦॥ ಕಾಲವಲ್ಲದ ಕಾಲಮೃತ್ಯುವಿ । ನೇಳಿಗೆಯನೇಸಂಬೆ ಮಲ್ಲರ।ಪಾಳೆಯವ ಹೊಕ್ಕೊಡನೆ ಸಂಹರಿಸುವುದನಾಕಂಡ ॥ ಹೇಳಲೊಬ್ಬನು ಪುಳಯಬೇಕೆಂ ।ದೋಲಗಿಸಿದವಲಾ ಯೆಸೆವಕ । ಟ್ಯಾಳುಗ ಳ ಬಲ್ಲಹನಯೆಂದನು ಮಲ್ಲನೊಡೆಯಂಗ ॥೨೧॥ ಕಾಲಗತಿ ಯೆಂತಿಹುದೊ ರಿಪುಗಳು । ಶೀಲಪುಂಗ ವರೆಂದು ನುಡಿವರು । ಯಾಳಿಗಪಜಯವಹುದು [illegible] ಗೆ ಲೇಸೆನಲು ॥ ಕೇಳುತಾಜೀಮೂತ ಮಲ್ಲನು । ಹೇಳುಹೇಳಿನ್ನೊಮ್ಮೆ ಮೃತ್ಯುಚ । [illegible] ಕೊಂದುದೇ ಸಟೆಯೆನುತ ನಡೆಗೊಂ ಡ ॥೨೨॥ ಹಲವುಪಯಣದಮೇಲ ಮತ್ಸ್ಯನ । [illegible] ಗ್ಯೆತಂದು ಭಟ್ಟರ । ಕಳುಹಿದನು ಪು ರದರಸಗೆಮ್ಮಯ ಬರವನರುಹೆನಲು ॥ ನಲವು ಮಿಗಲ್ಕೆ [illegible] ಕೋಟಾ । ವಳಯ ಹೊಕ್ಕನು ದೂತ ರಿಗೆ ತಾ । ತಿಳುಹಿದನು ಕರೆದೊಯ್ದುರವರನು ರಾಜಪ [illegible] ॥೨೩॥ ಬಂದು ಕಂಡು ವಿರಾಟರಾಯ ಗೆ । ನಿಂದುಕರಗಳ ಮುಗಿದು ಮಲ್ಲರ । ಬೃಂದ ಪುರಬಾಹೆ [illegible] ವಿಟ್ಟುದ ಹೇಳಿದನು ನೃಪಗೆ ॥ ಮುಂ ದೆ ಕಳುಹಿದರೆನಲು ನೃಪ ತಾ । ನೆಂದನಾದಾ [illegible] ಬಂದು ಪುರವಣಿಸಿದನು ಭೂಮಿಾ ಪಾಲನೋಲಗಕೆ ॥೨೪॥ ಕರವ ಮುಗಿದಾವಾ [illegible] ಮವನಿತ್ತು ಮಲ್ಲರ । ಕರೆಯೆನ ಲು ತಿರುಗಿದನು ಭಟ್ಟನುಸಹಿತ ವಹಿಲದಲಿ ॥ [illegible] ಇರುತಿ । ದರ್ಪರನು ಕಂಡು ನೃ ಪಾಲನೆಮ್ಮನು । ಕರಿಯಕಳುಹಿದ ಸಂದೊಹ [illegible] ದದಿ ॥೨೫॥ ಪರಿಪರಿಯಶೃಂಗಾ ರದಲಿ ಮ । ಲ್ಲರುಗಳೇಳಲು ಮುಂದೆನಾದಿಪ । [illegible] ತೆಪಾತಕನಿಕರದೊಗ್ಗಿನಲಿ॥ ಪುರವ ಹೊಕ್ಕರು ರಾಜಸಭೆಗೊಡ । ನಿರದೆ ನಡೆಯಲು [illegible] । ಸಿರಿಯೋಳೋಲಗವಿತ್ತು ಕುಳ್ಳಿ ರ್ದನು ಸರಾಗದಲಿ ॥೨೬॥ ಉರವಣಿಸಿ ಮುಂದಿಪಸ್ಗ್ರಹಿತ [illegible] । ಪ್ವರುಗಳೆಲ್ಲರ ನಿಲಿಸಿ ತಾಳಿಯ । ವರ

ಮಣಿಗಳಿಂದೆಸೆವ ಭೂಮಿಪತಿಗೆ ಜೀವನೂತ॥ಶಿರವ ಬಾಗುತ ನಿಂದಿರಲು ಮಲ್ಲರುಗಳೆಲ್ಲರು ಕೈಮುಗಿಯು । ಲ್ಕರಸ ಬೆಸಗೊಂಡನು ಮಹಾಸಂತೋಷಚಿತ್ತದಲಿ॥೨೭॥ಬಂದಕಾರಿಯವೇನೆನಲು ನಗು । ತೆಂದನಾಜೀಮೂತಮಲ್ಲರ । ವೃಂದಸಹಿತಲೆ ತಿರುಗಿ ದೇಶದಮೇಲೆ ಕಾಳಗಕೆ ॥ನಿಂದು ಜೈಸಿದು ಮಲ್ಲರೆನು ವೈತಂದು ನಿಮ್ಮಯಪುರಕೆ ಮತ್ತಿಲ್ಲಿಂದಗಪಿಸುವೆನಲದಾವನ ರಾಷ್ಟ್ರ ಸಮಗೆಂದ॥೨೮॥ ಇಂದು ವಂಶದಲಧಿಕರಾಯರ । ವೃಂದದೊಳಗಾನಹುಷಪುತ್ರರು । ಸಂದರಾವಮಾಲೆಯಲಿ ಬಳಿಕಾಶಂತನೇಶ್ವರಗೆ ॥ ನಂದನನು ಜನಿಸಲ್ಕೆಯುವಗಂ । ನಂಧನೃಪ ಜನಿಸಿದನುಆತನ । ನಂದನನು ಕುರುರಾಯನಾತನ ಮಲ್ಲರಾವೆಂದ ॥ ಕೇಳಿದನು ಅರಿಯುವ ಸಂತಸ । ದೇಳಿಗೆಯಲಿಂತೆಂದ ನಮ್ಮಲಿ । ಕಾಳಗವೆ ವರಜಟ್ಟಿಗಳುಯುಹರಿಸಿನೋದವಲಾ ॥ ಕೀನಿಪ್ಪೀಡಿಕೆಗೆ ಕದನಕೆ । ನಾಳೆ ಕರೆಸುವನೆಂದು ಭೂಪತಿ । ಹೇಳಿದನು ಚರರಿಂಗೆ ಪಡಿಪಾನಗಳ ಕೂಡಿಸಂದು ॥೩೦॥ಮಲ್ಲರನು ಕಳುಹಿಸಿದನಾಟನ । ದಲ್ಲಿ ಕಂಕನ ಮುಖವನೀಕ್ಷಿಸಿ । ಬಲ್ಲಿವನ ಬಳಿಯಿಂದ ಬಂದನಿದಕ್ಕೆ ಹದನೇನು ॥ ಇಲ್ಲಿಯವರೊಡನಾನಲಾಪವ । ಎಲ್ಲವೆನಲಿಂತಂದನಾಭೂ । ವಲ್ಲಭನು ಜನಮೇಜಯಕ್ಷಿತಿಪಾಲ ಕೇಳೆಂದ ॥೩೧॥ ಕರೆಸು ನಿಮ್ಮಯ ಮಲ್ಲರನು ಸಂ । ಗರವ ಜಯಿಸಲಿ ಜಯಿಸಟರಲಾ । ಪರಿಯ ಬಿಡುವರೆ ರಾಯಲಕ್ಷಣಗಳನು ವಹಿಸಿರ್ದು ॥ ಕರೆಸೆನಲು ಕಳುಹಿದನು ದೂತರ । ನಿರದೆ ಬಂದುದು ಡೌಡೆಜಾಗಟೆ । ಮೊರೆಯೆ ಬಿರುದಿನ ಭಟ್ಟರುಲಿಯಲು ಮತ್ಸ್ಯನೋಲಗಕೆ ॥೩೨॥ತುಳುವತುಂಬರನಾಗನಾದಳ । ಮಳಿಗಮುಖ್ಯರು ಬಂದು ಸಭೆಯಲಿ। ನಲಿದು ಮಿಗೆ ಗರ್ಜಿಸಿತು ರಾಯನ ಮುಂದೆ ಕೆಲಕೆಲರು ॥ ಛಲದೊಳಗೆ ಬಲದೊಳಗೆ ಮಲ್ಲರ । ಬಳಗಗಂಡನು ತಾನು ಹೇಳೆಂ । ಬುಲುಹುಗಳ ಸಂತೈಸಿ ನಗುತ ವಿರಾಟನಿಂತೆಂದ ॥೩೩॥ ಕಳುಹಿಸಿದನಿಭಪುರಿಯ ನೃಪಕುಲ । ತಿಲಕಕೌರವಮಲ್ಲಯುದ್ಧಕೆ । ಹೊಳಲಿಗೈದಲು ನಿಮ್ಮ ಕರಸಿದೆವೆನಲು ತಮತಮಗೆ ॥ ನಲಿದು ಹರುಷದಲಂದು ಬಾಹ । ಪ್ಪಳಿಸಿ ಮುಷ್ಟಿಯ ಜಡಿದು ಕದನ । ಕ್ಕೆಳಸಿದರು ಕಳುಹಿದರು ದೂತರ ಮಲ್ಲರಿದ್ದೆಡೆಗೆ ॥೩೪॥ ಚರರು ಕಳುಹಲು ಬಂದರವದಿರ । ಕರೆದು ತಿರುಹಿದರಾಕ್ಷಣದಲುರೆ । ಹಿರಿದು ಶೃಂಗಾರವನು ಮಾಡಿದರೇನ ಪೇಳುವೆನು ॥ ಕರಿಯಮೋಹರದೆಗೆದವೊಲು ಬಂ । ದುರವಣಿಸಿ ನಡೆತಂದು ನೃಪಮಂ । ಟಿರವ ಹೊಗಲದ ಕಂಡು ಹಿಂದು ವಿರಾಟ ಮನ್ನಿಸಿದ ॥ ಒರಲು ಯವರಿದಿರಾಗಿ ಬಂದರು । ಕರವ ಧರಣಿಯಲುದ್ದಿ ಮಿಗೆಯು । ಬ್ಬರಿಸಿ ಭುಜವನು ಹೊಯ್ದು ನಿಂದೊಡೆ ಕಂಡು ಖಾತಿಯಲಿ ॥ ಧುರುವ ಜೈಸಿದರಾದವದಿರ । ಶಿರವ ಚಂಡಾಡುವೆನನುತ ಮೋ । ಹರಿಸಿ ಕಿಡಿಕಿಡಿವೋಗಿ ಸಿಂಧುರಮಲ್ಲ ಮಾರಾಂತ ॥೩೬॥ ಅಳವಿಯಲಿ ಬಂದೊಬ್ಬರೊಬ್ಬರು । ಹಳಚಿದರು ಹೆರಸಾರಿ ಮುಷ್ಟಿಯ । ಬಲಿದು ಪುಟನೆಗದೆದ್ದು ಹಿಡಿದನು ತಿವಿದು ಸಿಂಧುರನ ॥ ಆಳುಕದವನಾಭುಜದ ಸತ್ವದ । ಬಳಲಿ ಸಿಂಧುರ ತಡೆದು ನಲಕ । ಪ್ಪಳಿಸೆ ಶಿರ ಶತಚೂರ್ಣವಾದುದು ಜಾಪಂತಾಸ್ಥಾನ ॥೩೭॥ ಮಡಟನವ ಶವದೆಗೆದು ರಣಕವ । ಗಡಿಸಲಾಟಿಪಂತಮಲ್ಲನು । ಜಡಿದು ಹಳಚಿದ ನೂಂದು ಸಿಂಧುರನವನಬಲತಿರವ ॥ ಮಡಮುಂದು ಕಿತ್ತಿಟ್ಟ ಡೌಡೆಯ । ಹೊಡೆಯೆನಲು ಧ್ರುಂವದ್ದು ಕಟ್ಟಲು । ನಡುಗಿತಾಯಾಸ್ಥಾನಮಲೆ ಜನಮೇಜಯಕ್ಷಿತಿಪಾ॥೩೮॥ ಮುಡುಹ ಚಪ್ಪರಿಸುತ್ತ ದಳದುಳ । ಜಡಿವನುಕ್ಕಿನಕೊಡಲಿಯನು ಯವ । ಗಡೆಯನಾರಸುತೆರಗಿದನು ಸಿಂಧುರನ ಮಸ್ತಕವ ॥ ಕೆಡೆದನವ ತತ್ತರಿಸಿ ಬೀಳುತ । ಹೊಡಕರಿಸಿಕೊಂಡಿವನ ಶಿರವನು । ಮಡದಲೆರಗಲುಸಿಡಿದವಾಲಿಗಳ

ವನಿಗೊರಗಿದನು ॥೩೯॥ ಯೆದ್ದನವ ಬೊಬ್ಬಿರಿದು ಸಿಂಧುರ । ಗೆದ್ದ ಗರ್ವವನುಗುಳೆನುತಲು । ಬೈದು ಹೊಕ್ಕನು ತೋಳ ತೆಕ್ಕೆಯ ಮಲ್ಲಹೋಲಿಕೆಗೆ ॥ ಭದ್ರಗಜಕ್ಕೆಯಿಕ್ಕದವೊಲುರೆ । ಯೆದ್ದು ಸಿಂಧುರ ತರಹರಿಸಿ ಮೇ । ಲೆದ್ದು ಬರಸೆಳೆದೊದೆಗು ಕುಸಿದೆತ್ತಿದನು ಮುಷ್ಟಿಯಲಿ ॥೪೦॥ ಎರಗಿದನು ತಲೆ ಬಿರಿಯಲಾಮು । ಕ್ಕುರಿಕಿ ಶೋಣಿತಧಾರೆ ಬಾಯಿಂ । ದೊರತೆಯಿಡೆ ಪ್ರಮರೆದು ತುಂಬುರ ಕಳನ ಮಧ್ಯದಲಿ ॥ ಒರಗಿದನು ಕಂಡುಳಿದಮಲ್ಲರು । ಧುರಕೆ ಮಿಸುಕದೆ ಮುಸುಕಿದಲೆಯಲಿ ।ಸರಿವವರನ್ನೆ ಪನೆಂದು ದುಗುಡವ ಹೊತ್ತು ಬೆರಗಾದ ॥೪೧॥ ಅವನಿಪತಿ ಕೇಳುಳಿದಮಲ್ಲರ । ಹವಣರಿದು ಸಿಂಧು ರನು ತನ್ನೊಳು । ಬವರವನು ಜೈಸು ವೊಡೆ ತಾವ್ಬೇಗದಲಿ ಬರಲೆಂದು ॥ ಕವಿದು ಹಳಚಲು ಜೋಡಿ ಸಲು ಯುವ । ನಿಮಿಷದಲಿ ಯನಿಬರನು ಬಳಿಕಾ । ಜವಳಿಯಿಂದಪ್ಪಳಿಸಿವನು ಕಂಠರಸ ಮಾಣಿಸಿದ ॥೪೨॥ ಧುರವ ಜೈಸಿದಿರಿಂದು ಯುದ್ಧಕೆ । ಕರೆಸುವೆನು ನಾಕೆನುತ ವರಕ । ರ್ಪರದವೀಳಯವಿತ್ತವರ ಬೀಡಿಕೆಗೆ ಬೀಳ್ಕೊಟ್ಟ ॥ ಅರಸ ಮರುಳ್ಕೆ ಮನ್ನಿಸದೆ ಸಂ । ಗರಕೆ ಸೇವುವ ಕೊಟ್ಟೆಯುಕಟಾ । ಮರ ಣವುಳಿವರಿಗಾಯಿತೆಂದನು ನಗುತ ಕಂಕಮುನಿ ॥ ಬವರವನು ಮನ್ನಿಸಲುಬೇಕೆಂ । ದವನಿಪತಿ ನೆರೆ ನುಡಿವ ಮಲ್ಲರ ।ನಿವಹಮೈತಹುದೆಂದು ನೇಮವನಿತ್ತುದೊಳಿತಾಯ್ತು ॥ ಅವರು ಬಂದೊಡೆ ನಾಳೆ ಮಾ ಡುವ । ಹವಣದಾವುದು ಬಿಟ್ಟುಕಳೆ ಹೇ । ಳುವೆನು ನಿನಗಿನ್ನೊಮ್ಮೆ ಗೆಲುಗ್ಗೆಯುಹವುನೋರಥವ॥೪೪॥ ಅವನಿಪತಿ ಕೇಳ್ನಿನ್ನ ಬಾಣಸಿ । ನವನು ಪೂರ್ವದಿ ಭೀಮಸೇನನ । ಭವನದಲಿ ಬಲುಮಲ್ಲವಿದ್ಯವ ಸಾ ಧಿಸಿದನವನು ॥ ಪವನಸುತನಿಂ ಬಲುಮೆ ಯಿವನೊಳ । ಗವನು ತಿಳುಹಿಸಿಕೊಂಬನೀತನ । ಹವಣನಾ ಕಂಡರಿವೆ ಕರೆಸಿನ್ನೆಂದನಾಕಂಕ ॥೪೫॥ ಬಲ್ಲೆ ನಾತನ ಕೈಗುಣಕೆ ಸರಿ । ಯಿಲ್ಲ ಸುಭಟರೊಳುಳಿದಸಾ ಹಸ । ಮಲ್ಲನಿವರೊಳಗರಿವ ಪವನಜ ಮಲ್ಲಕೌಶಲವ ॥ ಅಲ್ಲವೆಂದೆನೆ ನೃಪತಿ ತಾತ । ಪ್ಪಲ್ಲ ಜೈಸಲಿ ಮೇಣು ಸೋಲಲಿ । ಬಲ್ಲೆ ನಾನಂಜದಿರು ಬೇಗದಿ ಕರೆಸು ನೀನೆಂದ ॥೪೬॥ ಎಲೆಮಹೀಸುರ ಯಿಾವಿವೇ ಕವ । ಬಳಸುವೆನೆ ನೀನರಿಯದಿದ್ದೊಡೆ । ತಿಳಿದೆನಾನೆಲ್ಲವನು ಸಂಹರಿಸುವನು ಸಿಂಧುರನು ॥ ಉಳಿದ ವರ ಗಣಿಸುವನೆ ತಾ ಹಿಂ । ದಳಿದವರೆ ಬಲರೆಂದು ಬಡವನ ।ಕೊಲಿಸದಿರುಯೆನೆ ಕರೆಸುತೋರುವೆನವ ನ ಸಾಹಸವ ॥೪೭॥ ಎನಲು ಹರುಷಿತನಾಗಿ ದುಗುಡವ । ನೆಸುಕಲಿಸಿ ಮುಗುಳೆಂದನೆಂದೊ । ಮ್ಮಿನಲಿ ಸೋತೊಪ್ಪಿಸಿನಗೆಕಾರಣವಿಲ್ಲ ನಾರದನು ॥ ನಿನಗೆ ಬಹುದಪಕೀರ್ತಿಯೆನೆ ವರ । ಮುನಿಪನೆಂದನು ಲೇಸು ಹೊಲ್ಲೆಹ । ವೆನಗೆ ತಾಗಲಿ ಕರೆಸೆನಲು ಕರೆಸಿದನು ಪವನಜನ ॥೪೮॥ ಮುರಿದಮೀಸೆಯಹೊ ದರವಲೆ ಕೆಂ । ಪೊರೆದಕಂಗಳ ಹೊಗರುಮೋರೆಯ । ತುರುಗದೇಲನ ರೋಮಪುಳಕದ ಹುರಿಯಹು । ಬ್ಬುಗಳ ॥ ಹೊರೆದದೇಹದ ರೌದ್ರಮುನಿ । ಷ್ಕ [illegible] ಬಿಗಲಹಕೆ । ಯುರವಣಿಪಮನವುಳ್ಳ ಭೀಮನು ಬಂದನೋಲಗಕೆ ॥೪೯॥ ಬರವ ಕಾಣು [illegible] ದನುಪ । ಚರಿಸಿ ಭೀಮಂಗೆಂದನೀಸಂ ಗರವ ಜಯಿಸಿಗೊಡೆಮ್ಮಮಲ್ಲರು ವೃತ್ತನಾಯಿಗಳ [illegible] ಬಲ್ಲ [illegible] ಮಲ್ಲವಿದ್ಯವ । ನರಿತಿಹೈ ನೀ ನೆಂದು ಮುನಿಯೆನೆ । ಕರೆಸಿದೆವು ನಿನ್ನುವನು ನಿ [illegible] ದ ॥೫೦॥ ಎನಲು ಕಿರುನಗೆ ಮಿಸು ಗೆ ಮುಖದಲಿ । ಯನಿಲಜನು ಮುಗುಳೆಂದನೀತಕೆ [illegible] ಪೆ ಸತ್ತೊಡೆನಗದು ಸ್ವಾಮಿಕಾರ್ಯ ವಲೆ ॥ ಅನುವರವ ಜೈಸಿದೊಡೆ ನೀವೆಂ । ದನಿತು [illegible] ವೃತ್ತನಾಯಿಗ । ಳೆನಗೆ ನಿಮ್ಮಯ ಕರುಣ

ಸಾಕೆಂದನಿಲಜನು ನುಡಿದ ॥೫೧॥ ಪ್ರಾಣದತಿಶಯವೇನು ಮಿಗೆ ಸಂ । ಗ್ರಾಣಿಸುವುದಿನ್ನೊಮ್ಮೆ ನಾನೇ । ಕಾಣೆ ಕಾಣುವೆನವರಜೀವದನಿಲಕಡೆಯನೆಲ್ಲ ॥ ಕ್ಷೋಣಿಪತಿ ಕರೆಸೆನಲು ಮಲ್ಲ । ಶ್ರೇಣಿಯನು ಕರೆಸಿದನು ಮಲ್ಲರ । ಕಾಣದಾಸಿಂಧೂರಸಿಂತೆಂದನು ನರಾಧಿಪಗೆ ॥೫೨॥ ನರಪತಿಯೆ ಚಿತ್ತೈಸು ನಿನ್ನಿನ । ಪರಿಯ ಮಾಡದೆ ಸತ್ವವಂತರ । ಕರೆಸೆನಲು ಪವನಜನ ತೋರಿದರೊಡನೆ ಗಹಗಹಿಸಿ ॥ ಕಿರುಕುಳಿಗನಿವನೆಂದೊಡದಟು। ಸ್ಫುರಿಸಿ ಫುಟನೆಗದೆದ್ದು ತಿವಿಯಲು । ಮುರಿದು ಕೊಸರುವಕೋಪದಿಂ ತಾ ಮಸಗಿ ಬೊಬ್ಬಿಟ್ಟ ॥೫೩॥ ಛಿಟ್ಟನಹೆ ಬಾಣಸಿನಮನೆಯಲಿ । ಕಟ್ಟಳಿಲ್ಲದಕೂಳ ತಿಂದಾರೆ । ಹೊಟ್ಟೆಯನು ನೆರೆ ಬೆಳಸಿ ದೇಹದಲುಬ್ಬಿಕೊಬ್ಬಿನಲಿ ॥ ಹೊಟ್ಟುಗುಟ್ಟಿದೆ ತಾಗಲೆದೆ ಜಗ । ಜಟ್ಟಿಗಳಕೂಡ ಕಟ ಮರುಳೇ । ಬಿಟ್ಟೆನೊಮ್ಮೆಗೆ ಹೋಗು ನಿನಗಳಿವಿಲ್ಲ ಹೋಗೆಂದ ॥೫೪॥ ಆಗಲದಕೇನೊಮ್ಮೆ ಮಲ್ಲೋ । ದ್ಯೋಗವನು ನಾವ್ಮಾಳ್ಪೆವದನಿ । ನ್ನೀಗ ನೋಡಿದವೇಲೆ ಗಹಗಹಿಸುವುದು ನೀತವಲಾ ॥ ವೇಗರಿಯದುಬ್ಬಿನಲಿ ನಕ್ಕೊಡೆ । ಹೋಗಬಿಡುವೆನೆ ಸೋಲದಲಿ ಹೆರೆ । ಸಾಗುವೆನೆ ಯೆನ್ನೊಡನೆ ಸೆಣಸೆಂದನಿಲಜನು ನುಡಿದ ॥೫೫॥ ಎಲವೊ ಬಾಣಸಿ ಯೆನ್ನೊಡನೆ ಹೆ । ಕ್ಕಳಿಸಿ ಸಮರವ ತೊಡಕಿದೊಡೆ ನಿ । ಟ್ಟೆಲುವ ಮುರವೆನು ಯೆನುತ ಸಿಂಧುರ ಗಾಢಗರ್ವದಲಿ॥ ಹಳಚಿದನು ಖತಿಯೇರೆ ಬಾಹ । ಪ್ಪಳಿಸಿ ತಿವಿಯಲು ಭೀಮ ನಗುತಿದ । ಕಳುಕದಿರೆ ಭೀತಿಯಲಿ ಸಿಂಧುರ ಹೊಕ್ಕನುರವಣಿಸಿ॥೫೬॥ ಎರಗಿದೊಡೆ ಕರಘಾತದುರುಬೆಯ । ಧರಿಸಿ ನಿಮಿಷದಿ ಸಿಂಧುರನ ಸರ । ಸರನೆ ಬಿಗಿಯಪ್ಪಿದನು ಕುಕ್ಕರಿಸಿದನು ಭೂಮಿಯಲಿ ॥ ನಿರಿನಿಟಲುನಿಟಿಲೆಂದು ನಿಟ್ಟೆಲು । ಮುರಿಯೆ ಶೋಣಿತವಾರಿ ಬಾಯೊಳ। ಗೊರತೆಯಿಡೆ ಯೊರಗಿದನು ಸಿಂಧುರ ಕಳನ ಮಧ್ಯದಲಿ ॥೫೭॥ ಎದ್ದನಾಗಜಸಿಂಗಬಾಣಸಿ । ದೊದ್ದೆಗೂಳಿನ ವೈರಿಸಿರಿಯ ಬಲು । ಬಿದ್ದಿನಕ್ಕಿನಭೂತಪವಮಾನಜನ ಕಿಬ್ಬದಿಯಾ ॥ ಗುದ್ದಿದೊಡೆಕಲಿಭೀಮ ನದಕು । ಬ್ಬೆದ್ದು ಗೋಣನು ತಿರುಹಿ ಬಸುರೊಳ । ಗದ್ದಯಿಸಿ ಯರೆದರೆದು ಕಾಲಲಿ ತಿಕ್ಕಿದನು ಭೀಮ ॥೫೮॥ ಖತಿಯೊಳುರಿದೆಗೆದೆದ್ದು ಪಿಂಗಲಿ । ಯತಿಶಯದಕುಶಲದಲಿ ಕಲಿಭೂ । ಪತಿಯೆ ಚಿತ್ತೈಸೆನುತ ಹೊಕ್ಕನು ತೋಳ ತಕ್ಕೆಯಲಿ ॥ ಧೃತಿಗೆವದೆ ಹೋರಿದರು ಸಾಧಕ । ದತಿಶಯದ ಯುಕ್ತಿಯಲಿ ಜಾಣಿನ । ಮತಿ ಮರೆದು ಮಂಡಿಸಿರೆ ಮಲ್ಲನು ಯುದ್ಧರಂಗದಲಿ ॥೫೯॥ ಕಂಡು ಪವನಜ ತುಡುಕಿ ಮಿಗೆ ಮುಂ । ಕೊಂಡು ನೆಲಕಪ್ಪಳಿಸೆ ಮಲ್ಲನ । ದೊಂಡೆಗರುಳೊಡೆಸೂಸೆ ಚೆಲ್ಲಿತು ರಾಜಸಭೆಯೊಳಗೆ॥ ಇಂಡೆಮಿದುಳಿನ ಹೊನಲಿನಲಿ ಕಡಿ । ಖಂಡಶೋಣಿತವಾರಿಯೊಳು ಮಿಗೆ । ದಿಂಡುಗೆಡೆದೊರಗಿದನು ಪಿಂಗಳಿ ಕಳನ ಮಧ್ಯದಲಿ ॥೬೦॥ ಛಿಟ್ಟನಹೆ ಬಾಣಸಿಗ ಸವಿಯೊಳ । ಗಟ್ಟಕೂಳನು ತಿಂದು ದೇಹದೊ । ಳಟ್ಟೆಯಲಿ ಶಿರವಿರಲಹಂಕಾರದಲಿ ನೀನೆಂದು ॥ ದಿಟ್ಟಿಸುತ ಜೀಮೂತಮಲ್ಲನು । ಕಟ್ಟಳವಿಗೈದಿದನು ಮಿಗೆ ಬೊಬ್ಬಿಟ್ಟು ಹೊಕ್ಕನು ತೋಳ ತಕ್ಕೆಯ ಮಲ್ಲಗಾಳಗಕೆ ॥೬೧॥ ಪೈಸರದ ಬಲು ಬಂಧಧಕ್ಕಡ । ವಾಸುಗಿಯ ಪೋರವದ ವರಶ । ಕ್ತಿಶವಮಾರುತಿಕದನಕೈವಡಿಯಿಂದ ಮಿಗೆಲೆನಲು ॥ ಈಸು ಹತ್ತಾಹತ್ತಿಯಿಂದವೆ । ರೋಷದಲಿ ಜೀಮೂತಭೀಮನ । ಗಾಸಿಯಲಿ ಸಭೆ ಬೆದರಿ ನಿಂದುದು ನೃಪತಿ ನೃಪರಿರಲು ॥ ಅದಿರಿತಂಬ್ರಿಗೆ ಭೂಮಿ ದಿಕ್ಕರಿ । ಯೊದರಿತಹಿಪತಿಯುಳುಕೆ ಕೂರ್ಮನು । ಬೆದರಿ ಬಿದ್ದನು ಭೀಮ ಜೀಮೂತಕರ ಪದಹತಿಗೆ ॥ ಹೆದರಿ ಚಲಿಸಿತು ರಾಜಸಭೆ ನೆರೆ । ಹದುಳಿಪುದೆ ಪುರವನ

ವು ಹೇಳೆನೆ । ಕದನಗಲಿಗಳು ತಿವಿವಸೂಳುಗಳಿಂದ ಭಯವಾಯ್ತು ॥೬೩॥ ಅದ್ದಿದವು ಬದಿಯೊಳಗೆ ಭೀಮನ । ಗುದ್ದುಗಳು ಜೀಮೂತಮಲ್ಲನ । ವುದ್ದುರುಟು ಬಯಲಾಯ್ತು ಹಾಲತು ಕುರುಪತಿಯ ಮಂತ್ರ ॥ ಹೊದ್ದಿದನು ಭೂಮಿಯನು ಮೈಮರೆ । ದೊದ್ದುಕೊಳುತಲೆ ಚಲಿಸಿ ಕಳನೊಳು । ಬಿದ್ದು ಹೊರಳಲು ಬಂದು ಕುಣಿದನು ಖಳನ ವಕ್ಷದಲಿ ॥೬೪॥ ಮೆಟ್ಟಿ ಸರ್ರನೆ ಸೀಳಿ ನೆರೆ ಕರ । ಯಟ್ಟಿ ಹಾಯ್ದನು ಹೊಯ್ದುಭರದಲಿ । ನಿಟ್ಟೆಲುವು ಹುಡಿಯಾಯ್ತು ಕಂಡನು ಮನೆಯೊಳಾಯುಮನಾ ॥ ಥಟ್ಟರಾದೊಡೆ ಕವಿಯೆನಲು ಮತಿ । ಗೆಟ್ಟು ತವತವಗೆಲ್ಲ ಭೀಮನ । ದಟ್ಟಿಸುತ ಮುತ್ತಿದರು ವಜ್ರದ ಮುಷ್ಟಿಗಳ ಜಡಿದು ॥೬೫॥ ಕಂಡು ಪವನಜ ಗಹಗಹಿಸಿ ಮುಂ । ಕೊಂಡು ತುಳಿದನು ಯೆಡಬಲದೊಳುರೆ । ಹಿಂಡುಜಟ್ಟಿಗಳನುವ ಚಿಗಿಚಿಗಿಯಾಗೆ ಸಭೆ ಹೇಸೆ ॥ ದೊಂಡೆಗರುಳೊಡೆಸೂಸೆ ರಣದೊಳು । ದಿಂಡುಗೆಡೆದರು ಬಂದ ಮಲ್ಲರು । ಕಂಡುದೈ ಭಾನುಜನ ಪಟ್ಟಣಕಂದು ಯೈನೂರು ॥೬೬॥ ಮೆಚ್ಚಿದನು ಭೂಪಾಲ ವಲಲನ । ಹೆಚ್ಚಿ ಕೊಂಡಾಡಿದನು ಮುನಿಯೊಳ । ಗೆಚ್ಚರಿಸಿದನು ಲೇಸಮಾಡಿದೆ ನಿನ್ನದೆಸೆಯಿಂದ ॥ ಕಿಚ್ಚು ನಂದಿದತೆರನವೋಲು ಮ । ಹೋಚ್ಚವಕೆ ಮಿಗಿಲಾಯ್ತು ಪೊತರೆ । ನಿಚ್ಚಟದ ಸಾಹಸಿಕ ನೀನೆಂದುಲಿದನಾಮತ್ಸ್ಯ ॥೬೭॥ ಹರೆದುದೋಲಗ ಮತ್ಸ್ಯಭೂಪತಿ । ಕರೆಸಿ ಚರರನು ಸಭೆಯನೆಂದಿನ । ಪರಿಯಮಾಡೆಂದಿತ್ತು ನೇಮವ ಕಂಕನನು ಕಳುಹಿ ॥ ಮರುತಜನ ಬೀಳ್ಕೊಟ್ಟು ಚಿಂತೆಯ । ಪರಿಹರಿಸಿ ಸ್ವಸ್ಥತೆಯನೈದಿದ । ನರಸ ಕೇಳೈ ಪಾಂಡವರ ಸಾಹಸಪದೀಗೆಂದ॥ ಕೌರವೇಂದ್ರನ ಮನೆಯ ಮಲ್ಲರ । ತೋರಹತ್ತರ ಮುರಿದನದಟಸ । ಮೀರಸುತನೆಂದರಿಕೆಯಾಗದೆ ಗೆಲಿದು ಬದುಕಿದರು ॥ ವೀರನಾರಾಯಣನ ಕರುಣದ । ವಾಂಛೆಯ ಕಾಲುವೆಯ ಭಾಗ್ಯದ । ಚಾರುಶಾಲೀವನದ ವೀರರು ತೊಳವಿಬಳಲಿದರು ॥ ... ... ॥೬೮॥

ಅಂತು ಸಂಧಿ ೨ಕ್ಕೆ ಪದ ೧೦೨ಕ್ಕಂ ಮಂಗಳಮಸ್ತು.

---

## ಮೂರನೆಯ ಸಂಧಿ.

॥ ಸೂಚನೆ॥ ಕುಸುಮಶರನುರುವಣೆಯಗಾಯದ।ಲೆಸುಗೆವಡೆದನು ಕೀಚಕನು ತನ್ನಸುವಿನಳಿತೆಯ ನೋಡದೆಯೇ ತುಡುಕಿದನು ದುಕುಪದಿಯಾ ॥ಪದ॥ ಕೇಳು ಜನಮೇಜಯಧರಿತ್ರೀ। ಪಾಲ ನಿಮ್ಮಯ ಪೂರ್ವಪೃಥ್ವೀ । ಪಾಲರಿದ್ದರು ಗುಪ್ತದಿಂದ ವಿರಾಟನಗರಿಯಲಿ॥ ಕಾಲ ಸವೆದುದು ಹತ್ತುತಿಂಗಳ । ಮೇಲೆ ಮತ್ತೊಂದತಿಶಯೋಕ್ತಿಯ । ನಾಲಿಸ [illegible] ಸ್ತರದೊಳರುಪುವೆನೆಂದನಾಮುನಿಪ ॥ ಆವಿರಾಟನರಾಜಧಾನಿಯೊ । ಳೀವಿಳಾಸದಿ ಮುಸು [illegible] । ಸೇವೆಯಲಿ ಪಾಂಡವರು ಕಳೆದರು ಹತ್ತುಮಾಸವನು ॥ ರಾವಣನು ಮುನ್ನೊಂದು ಸೀತಾ [illegible] ಸುಪಿದಕಥೆಯುವೋಲ್ ಭಾವಿಸಿದಕೀಚಕವಿಡಂಬವ ಕೇಳು ಭೂಪಾಲಾ ॥ ಬಂದುದಿವಸ ವಿರಾ[illegible]ಯ । ಮಂದಿರಕ್ಕೆಯ್ತಲೆಸಲೆಂದೈ । ತಂದ ನಾಕೆಯ ತಮ್ಮ ಕೀಚಕನತುಳಭುಜಬಲನು ॥ ಹಿಂಡ ಮುಂದಿಕ್ಕಲದ ಸತಿಯರ । ಸಂದಣಿಯ ಮಧ್ಯದ

ಲಿ ಮೆರೆವೆರ।ವಿಂದವದನೆಯುಕಂಡು ಕಾಣಿಕೆಗೊಟ್ಟು ಹೊಕ್ಕವೆಂಟ॥ಅನುಜನನು ತೆಗೆದಪ್ಪಿ ಸಿಂಹಾಸನ ದ ಕೆಲದಲಿ ಕುಳ್ಳಿರಿಸಿ ಮನ । ದಣಿಯಲಂಗನೆ ಮನ್ನಿಸಿದಳ್ಕೆ ತತ್ಸಹೋದರನ॥ತನುವುಳಕ ತಲೆದೋರ ಲವನು । ಬ್ಬಿನಲಿ ಸತ್ಕೃತನಾಗಿ ಕಮಳಾ । ನನೆಯರನು ಕಂಡನು ಸುಧೇಷ್ಣೆಯ ಮೇಳದಬಲೆಯ ರ ॥ ಅವರ ಮಧ್ಯದಲಮಲತಾರಾ । ನಿವಹದಲಿ ರೋಹಿಣಿಯವೊಲ್ಸುರ । ಯುವತಿಯರಲೂರ್ವಶಿಯ ವೊಲ್ಸುದಿಗಳೊಳುಜಾಹ್ನವಿಯಾ ॥ ಅವಯವದ ಪರಿಮಳದ ಪಸರಕೆ । ಕವಿವತುಂಬಿಯ ಸಾರಸಂಗೀ ತವನು ಕೇಳುತ ಕಂಡನವ ಪಾಂಚಾಲನಂದನೆಯ ॥೫॥ ಮೊದಲೊಳವನವಳಂಗವಟ್ಟವ । ನೊದವಿ ನೋಡಿದೊಡಲ್ಲಿಯೇ ಗಾ । ಢದಲಿ ನಟ್ಟವು ಕೀಳಲರಿದಾಯ್ತಾಲಿಗಳನಲುಗಿ ॥ ಮದನ ಮಸೆದೋರಿದ ನು ಹೂಗಣೆ । ಹೃದಯವನು ತಾಗಿದುದು ಹರಹರ । ಹೆದರಿದನು ಹಮ್ಮೈಸಿದನು ಖಳನೊಂದು ನಿ ಮಿಷದಲಿ ॥ ನಿಂದು ನೋಡಿದ ದ್ರೌಪದಿಯಮೊಗ । ದಂದವನು ಕಂಡಾಗ ಕೀಚಕ । ನೊಂದನೆನೆ ಮೊ ಗ ತೆಗೆಯಲೆಚ್ಚನು ಕಾಮ ಕೈಗೂಡಿ ॥ ಅಂದು ಬೆರಗಾದನು ವಿಳಾಸಿನಿ । ಯಿಂದು ಸೆಳೆದಳು ಮನವ ನಿವಳಾ । ರೆಂದು ಭಾವಿಸಿ ಚಾಚಿದನು ಕದಪಿನಲಿ ಕರತಳವ ॥೭॥ ತಿಳಿಯಿವಳುಮೂಜಗವ ಮೋಹಿಪ ತಿಲಕವೋ ಕಾಮಂಗೆ ಕಟ್ಟಿದ । ಕಳನ ಭಾಷೆಗೆ ನಿಂದವಾಸಾಳೋ ಮಹಾದೇವಾ ॥ ಕೊಲೆಗೆಡಿಗಕಂ ದರ್ಪಕನ ಕೂ । ರಲಗೊ ಮದನನ ಸೊಕ್ಕಿದಾನೆಯೊ । ನಳಿನಮುಖಿಯಿವಳಾರಸತಿಯೆಂದಳುಪಿ ನೋಡಿದನು ॥೮॥ ಜಗವ ಕೆಡುಹಲು ಜಲಜವಿಶಿಖನು । ಬಿಗಿದಬಲೆಯಿವಳಲ್ಲಲೇ ಯೋ । ಗಿಗಳ ಯ ತಿಗಳನಿಸಲು ಕಾಮನು ಮಸೆದಕೂರಲಗೋ ॥ ಮುಗುದಸಾದನು ಕಾಮನಂಬುಗ । ಳುಗಿದವೆದೆಯಲಿ ನೆಟ್ಟದೃಷ್ಟಿಯ । ತೆಗೆಯಲಾರದೆ ಸೋತು ಕೀಚಕ ಪಾತಕವ ನೆನೆದ ॥೯॥ ಸೂರೆವೋಯಿತು ಚಿತ್ತ ಕಂಗಳು । ಮಾರುವೋದವು ಖಳನ ಧೈರ್ಯವು । ತೂರಿಪೋದುದು ಕರಣದಲಿ ಕಳವಳದ ಬೀಡಾ ಯ್ತು ॥ ಮೀರಿ ಪೊಗುವಂಗಜನ ಶರದಲಿ । ದ್ದೋರುವೋಯಿತು ಹೃದಯ ಕಣ್ಣೀರಿ । ಗಾರೆಯಿವ ಳಾರೆನುತ ಗಜಬಜಿಸಿದನು ನಿಮಿಷದಲಿ ॥೧೦॥ ರತಿಯ ಚೆಲುವಂತಿರಲಿ ಸಿರಿಪಾ । ರ್ವತಿಯ ರೂಪಂ ತಿರಲಿ ಬೊಮ್ಮನ । ಸತಿಯ ಸೊಬಗಂತಿರಲಿ ಯಾಬಾಲಕಿಯ ರೂಪಿಂಗೆ ॥ ಪ್ರತಿಯ ಕಾಣೆನು ಪಾಂಡ ವರ ದುರು । ಪತಿಯ ರೂಪಿಂಗೈದುಮಡಿಯಿಾ । ಸತಿಯ ವಿಭ್ರಮವೈದಿತೆನ್ನಯ ಮನವನೆನುತಿರ್ದ ॥ ೧೧॥ ಅರಿವು ತಲೆಕೆಳಗಾಯ್ತು ಧೈರ್ಯದ । ನಿರಿಗೆ ನಗೆಗೆಡೆಯಾಯ್ತು ಲಜ್ಜೆಯ । ಹೊರಿಗೆ ಬರಿದೊ ರೆಯಾಯ್ತು ಕರಿಮೊಳೆಯಾಯ್ತು ಭಯಬೀಜ ॥ ಮರವೆ ಗರಿಗಟ್ಟಿತು ಮನೋಭವ । ನಿರಿಗೆಲಸ ಬ ಲುಹಾಯ್ತು ಹೊಗಳುವೊ । ಡರಿಯೆಸಾತನ ತನುವಿನಂತಸ್ತಾಪದೇಳ್ಗೆಯನು ॥೧೨॥ ಬೀಳುಕೊಂ ಡುದು ಲಜ್ಜೆ ಮಹಿಮೆಯ । ಕೀಲು ಕಳಚಿತ್ತು ದ್ರುಪದತನುಜೆಯ । ಸಾಲಿಯಲಿ ನುಂಗಿದನು ಮಸದಲಿ ಸತಿಯ ಸೆರೆವಿಡಿದು ॥ ಕೇಳು ಬಿನ್ನಹವಕ್ಕ ನಿಮ್ಮಡಿ । ಯೋಲೆಕಾತಿಯರೊಳಗೆ ಮಿಾಟಿನ । ಮೇಲು ಗೈಯವಳಾವಳೆಂದಗ್ರಜೆಯ ಬೆಸಗೊಂಡ ॥೧೩॥ ಈಕೆ ಗಂಧರ್ವರ ರಮಣಿ ನ । ವ್ಯಾಕೆಯಾಗಿರೆ ಮಾ ನ್ಯವ್ಯಕ್ತಿಯೊ । ಳೀಕೆಯನು ಸಲಹುವೆವು ಬಲ್ಲಿದರಿವಳವಲ್ಲಭರು ॥ ಸಾಕು ಬೀಡಾರಕ್ಕೆ ನೀ ಹೋ । ಗೀಕೆ ವಿನಯಪರಳಲ್ಲ ನಿಂದಿರು । ಕಾಕಸಾಡದಿರೆನುತ ಬೀಳ್ಕೊಟ್ಟಳು ನಿಜಾನುಜನ ॥೧೪॥ ತಾರಿತಂತಕಕ ರಣ ಕಾಮನ । ಕೂರುಗಣೆ ಕಾಲಿಕ್ಕಿದವು ಮನ । ದೇರು ಮುಚ್ಚಿತು ದುಗುಡ ಬಲಿದುದು ಮುಸುಕು

ಮೋರೆಯಲಿ ॥ ವಿಾರಿ ನಿಜಮಂದಿರಕೆ ಢಗೆ ಮ್ಯ । ದೋರೆಬಂದನು ಮರುದಿವಸ ತಲೆ । ಮಾರಿ ಕಂ
ಡನು ದ್ರೌಪದಿಯನರಮನೆಯ ಬಾಗಿಲಲಿ ॥೧೫॥ ಕಳುಹಿದನು ತನ್ನೊಡನೆ ಬಹ । ಗಾವಳಿಯ ಪರಿ
ವಾರವನು ತನ್ನಯ । ಬಳಿಯಹಡಪದ ಬಾಲಕನ ಹಿಂದಿಕ್ಕಿ ನಡೆತಂದು ॥ ಬಲಿದು ಸಿಂಹದಸತಿಗೆ ನರಿ
ಮನ । ವಳುಪ್ಪುವಂತಿರೆ ಗರುಡನರಸಿಗೆ । ನಲಿದು ಫಣಿಬಯಸುವವೊಲ್ಗೈದಿದ ಬಾಲಕಿಯ ಬಳಿಗೆ॥೧೬॥
ಖಳನ ಮನದಿಂಗಿತವನಾಗಳೆ । ತಿಳಿದು ಕಾಮಿನಿ ಬೆದರಿದಳು ಕಳ । ವಳಿಗ ಸೋತನು ಕೆಟ್ಟೆನೆಂದಳು
ತನ್ನ ಮನದೊಳಗೆ ॥ ತೊಲಗಿ ಹಿಂದಡಿಯಿಡಲು ಕೀಚಕ । ನೆಳುಕದೆ,ತಂದಬುಜವದನೆಯ । ಬಳಿಗೆ
ಬಂದನು ನುಡಿಸಲಾಗದೆ ತರಳೆ ನೀನೆಂದ ॥೧೭॥ ಎಲೆಮರುಳೆ ಬೀಡೆಳುಪದಿರು ಕೂ । ರಲಗ ಕೊರ
ಳಿಗೆ ಬಯಸದಿರು ಕಳ । ವಳಿಸದಿರು ಕೈಯೊಡನೆ ನಿನ್ನರಮನೆಗೆ ತೆರಳುವುದು ॥ ಸುಲಭೆ ನಾ ನಿನ
ಗಲ್ಲ ನಿನ್ನನು । ಕೆಲರು ನಗುವರು ಪರದ ಸದ್ಗತಿ । ತೊಲಗುವುದು ಬೇಡಕಟ ಯೆಂದಳು ಪಾಂಡವರ
ರಾಣಿ ॥೧೮॥ ನಿಲ್ಲಲೆಗೆಸ್ವಳೀಂಟ್ರು ಕಾಮನ । ಬಲ್ಲಹದ ಬಲುಗಾಯ ತಾಗಿತು । ಬಲ್ಲೆ ನೀನೌಷಧಿ
ಯ ರಕ್ಷಿಸಿಕೊಂಬುದೆನ್ನೊಡಲ ॥ ಮೆಲ್ಲನಡಿಯಿಡು ಮಾತ ಮನ್ನಿಸು । ಚೆಲ್ಲೆಗಂಗಳನೆನ್ನ ಮುಖದ
ಲಿ । ಚೆಲ್ಲಿ ಸಪ್ರಾಣಿಸಲು ಬೇಹುದು ವಿಗತಜೀವನವ ॥೧೯॥ ಎಲೆಗೆಪಾತಕಿ ನಿನ್ನ ಕಣ್ಣೆಂ । ಬಲಗಿನಲಿ
ತನ್ನೆದೆಯ ನೋಯಿಸಿ । ತೊಲಗಬಹುದೇ ಕರುಣವಿಲ್ಲವೆ ನಿನ್ನ ಮನದೊಳಗೆ ॥ ಬಲಿದು ಬಂದೆನು
ಕಾಮನೂಳಿಗ । ಬಲುಹು ಯೆನ್ನಯ ಭಯವ ತಗ್ಗಿಸಿ । ತಲೆಯ ಕಾಯಲುಬೇಕೆನುತ ಕೀಚಕನು ಕೈ
ಮುಗಿದ ॥೨೦॥ ಪರರ ಸತಿಗಳುಪಿದರೆ ಪಾತಕ । ದೊರಕುವುದು ನಿಜಲಕ್ಷ್ಮಿ ತೊಲಗುಗು । ಧರೆಯೊ
ಳೆಗ್ಗದಕೀರ್ತಿ ಮಾಸುಗು ಗತಿಗೆ ಕೇಡಹುದು ॥ ಕೊರಳುಹಲವಾದಸುರನಂತಕ । ಪುರವನೈದಿದಕಥೆಯ
ನೀಕೇ । ಳ್ದರಿಯಲಾ ಕಡುಪಾಪಿ ಹೋಗೆಂದಳು ಸರೋಜಮುಖಿ ॥೨೧॥ ಮೇಲೆ ಸದ್ಗತಿ ಬೆಂದುಹೋ
ಗಲಿ । ಕಾಲನವರೈತರಲಿ,ಬಂಧುಗ । ಳೇಳಿಸಲಿ, ತನ್ನವರು ತೊಲಗಲಿ,ರಾಣಿಯರು ಬಿಡಲಿ ॥ ಬಾಲೆ
ನಿನಗಾನೊಲಿದೆ ಕಾಮನ । ಕೋಲು-ಯೆನ್ನನು ಮರಳಲೀಯದು । ಲೋಲಲೋಚನೆ ಬಿರುಬ ನುಡಿ
ಯದೆ ತನ್ನನುಳುಹೆಂದ ॥೨೨॥ ಎಳನಗೆಯ ಬೆಳದಿಂಗಳನು ನೀ । ತಳಿದು ತಾಪವ ಕೆಡಿಸು ಮಧುರ
ದ । ಮೆಲುನುಡಿಯ ಸುಧೆಯಿಂದ ತೃಷ್ಣೆಯನಕಟ ಪರಿಹರಿಸು ॥ ಅಳಿಮನದ ಬಡತನವ ನಿನ್ನಯ
ಕಳಶಕುಚಲಕ್ಷ್ಮಿಯಲಿ ಕಳೆ ಮನ । ದೊಲವನಿತ್ತಲು ತಿದ್ದಬೇಹುದು ಕಾಂತೆ ಕೇಳೆಂದ ॥೨೩॥ ಕೇಳಿ
ಕಿವಿಮುಚ್ಚಿದಳು ತನ್ನಯ । ಮೇಳದೈವರ ನೆನೆದು ಹರಹರ । ಶೂಲಪಾಣಿ ಮುಕುಂದ ಯೆನುತವೆ ರ
ವಿಯನೀಕ್ಷಿಸುತ ॥ ಕಾಳುಮೂಳನಲಾ ಖಳಾಗ್ರಣಿ । ಮೇಲುಗಾಣನಲಾ ಮದಾಂಧನ । ಸೋಲಿಸುವ
ರಾರುಂಟೆನುತ ತಲೆವಾಗಿದಳು ತರಳೆ ॥೨೪॥ ಎಲೆದುರಾತ್ಮ ಮಹಾಪರಾಧವ । ಬಳಸುವರೆ ಬಯಲಿಂ
ಗೆ ನಿನ್ನಯ । ಕುಲದ ಬೇರನು ಕಾಯ್ವರೇ ಬಹುದಾವುದಿದರಿಂದ ॥ ಹಳಿವು ಹೊದ್ದದೆ ಹೆತ್ತವರು
ಮ । ಕ್ಕಳುಗಳೆಂಬೀಬದುಕು ಮಾಣದೆ । ಯೆಳಸಿಕೊಂಬಂತಾಯಿತೆಂದಳು ಪಾಂಡವರರಾಣಿ ॥೨೫॥
ಕಾತರಿಸದಿರು ಮಂದಿವಾಳದ । ಮಾತುಗಳು ಸಾ[illegible] ತೊಲಗ್ಯೆ । ಸೋತೊಡೇನದು ಮನುಜಧರ್ಮ
ದ ಚಿತ್ತಚಲನವಲಾ ॥ ಕ್ಷಾತ್ರತುಕ್ಷಣ ಜಾರು ಕೇ[illegible] । ತಾತಗಳು ಸ್ವೈರಿಸರು ದೇವ । ವ್ರಾತದಲಿ ಬ
ಲ್ಲಿದರು ತನ್ನವರೆಂದಳಿಂದುಮುಖಿ ॥೨೬॥ ಸಾಪ್ಪು [illegible] ತನಗೆ ಕಾಮನ । ಡಾವರವು ಘನ ನಿನ್ನ ನೆರೆ

ವೇ । ಸಾವೆನಲ್ಲದೆ ಕಾವುನಂಬಿಂಗೊಡಲನೊಪ್ಪಿಸೆನು ॥ ಭಾವೆ ನೂಕದಿರೆನ್ನ ವರೆರಾ । ಜೀವವುುಖಿ ಕೃಪೆವಾಡು ತನ್ನಯ । ಜೀವಸವನುಳುಹೆನುತ ಕವುಲಾನನೆಗೆ ಕೈವುುಗಿದ ॥೨೭॥ ಮರುಳತನ ಬೇಡೆ ಲವೊ ಗಂಧ । ರ್ವರಿಗೆ ಹೆಂಡತಿ ತಾನು ನಿನ್ನಯ । ದುರುಳತನವನು ಸೈರಿಸರು ತನ್ನವರು ಬಲ್ಲಿದರು॥ ಸೊರಹದಿರು ಅಪಕೀರ್ತಿಸಾಲದು । ನೆರೆಯದಿರು ನೀ ನಿನ್ನ ನಿಳಯಕೆ । ಮರಳುವುದು ಲೇಸೆಂದು ತೃಣವನು ಹಿಡಿದು ಸಾರಿದಳು ॥ ದ್ರೌಪದಿಗೆ ಖಳ ನುಡಿದನೆನ್ನಾ । ಟೋಪವನು ನೀನರಿಯೆ ಬಡವರೆ । ಕೋಪವಾದಡಿಗೆ ಮೃತ್ಯು ನಿನ್ನವರೆನ್ನನೇಗುವರು॥ಅಪೆಸವರಂತಿರಲಿನೀನೆನಗೋಪಳಾದೊಡೆ ಸಾಕು ಮ ಲತೊಡೆ । ಯಾಪಿಸಾಕಿಗೆ ತೆರಳುವೆನೆಬಳಿಕಲ್ಲಿ ನೋಡೆಂದ ॥೨೯॥ ಹುಳುಕನಲ್ಲಾ ತುಂಬಿ ಕೋಗಿಲೆ । ಗ ಳಹನಲ್ಲಾ ಶಶಿವಸಂತರ । ಬಲುಹುವೊನ್ಯರನಿರಿಯದೇ ತಂಗಾಳಿ ಧಾರ್ಮಿಕನೇ ॥ ಖಳನಲಾ ಮಾ ಕಂದ ಲೋಕದ । ಕೊಲೆಗೆಟಗಲ್ಲಾ ಮನೋಭವ । ನಿಳಿಕೆಗೊಂಬರೆ ಪಾಪಿಯೊಲಿಯದೆ ಕೊಲುವರೇ ಯೆಂದ ॥೩೦॥ ಒಲಿದು ನಿನ್ನನು ನಾವು ಕೊಲ್ಲೆವು । ಕೊಲುವಸುಭಟರು ಬೇರೆ ಬಯಲಿಗೆ । ಹಲವ ಗಳಹಿದೊಡೇನುಫಲವಿಲ್ಲಕಟ ಸಾರಿದೆನು ॥ ತಿಳುಪಿದೊಡೆಯೆನ್ನವರು ನಿನ್ನಯ। ತಲೆಯುನರಿದುಂ ತು ಷ್ಟರಾಗರು। ಕಲಕುವರು ನಿನ್ನಸ್ವ-ಯಾಬ್ಧಿಯುನೆಂದಳಿಂದು ಮುಖಿ ॥೩೧॥ ಕುಲದೊಳೊಬ್ಬನು ಜನಿಸಿ ವಂಶವ । ನಳಿದನಕಟಕಟೆಂದುದುರ್ಯಶ । ವುಳಿವುದಲ್ಲದೆ ಲೇಸಗಾಣೆನು ಬರಿದೆ ಗಳಹದಿರು ॥ ಕೊಲೆಗೆ ಡಿಕೆಯೋಪಾಪಿಹೆಂಗುಸು । ಪಲಬರನುಕೊಲಿಸಿದಳುಸುಡಲೆಂ । ದಳಲುವರುನಿನ್ನ ಖಳರಾಣಿಯರೆಂದ ಳಿಂದುವುುಖಿ ॥೩೨॥ ಹರಿವಿರಂಚಿಗಳಾದೊಡೆಯುಸಂ । ಗರದೊಳೆನಗಿದಿರಿಲ್ಲ ಮರುಳೇ । ತರುಣಿ ನಿ ನ್ನೊಡನೇನುತೋರಾ ನಿನ್ನ ವಲ್ಲಭರಾ ॥ ಪರಸತಿಯ ಸೆರೆಗೈಯೆ ಮುತ್ತಿತು । ನೆರೆದು ಕೋಡಗವಿಂ ಡು ಸುಭಟನು । ಸರಿದನೆ ತಕನಗರಿಗರಿಯಾಯ್ತೆಂದಳಿಂದುಮುಖಿ ॥೩೩॥ ನೀರೆ ನೂಕದಿರೆನ್ನ ಮನ ವುುಂ । ಮಾರುವೋದುದು ನೀನು ಚಿತ್ತವ । ಸೂರೆಗೊಂಡೀಮದನನಂಬಿಂಗೊಡಲ ಹೂಣಿಸುವೆ ॥ ಜಾರದಿರು ಯೆನ್ನೆದೆಗೆ ತಾಪವ । ಬೀರದಿರು ಕಾರುಣ್ಯವನು ಕೈ । ದೋರೆನಗೆ ಕಮಲಾಕ್ಷಿ ಮರಣವ ಮಾಣಿಸಕಟೆಂದ ॥೩೪॥ ಮರುಳೆ ಮನದ ವಿಕಾರಮಾರಿಯ। ಸರಸವಾಡುವರುಂಟೆ ಮೃತ್ಯುವ । ನೆರೆವ ರೇ ಧಳ್ಳುರಿಯ ಪ್ರತಿಮೆಯುನಪ್ಪುವರೆ ಬಯಸಿ ॥ ಸರಳನಂಗೈಸುವರೆ ಪಾಪಿಯೆ।ಮರಳು ನಿನ್ನರಮನೆಗೆ ಯೆನ್ನಯ । ಗರುವಗಂಡರು ಕಡಿದು ಹರಹುವರೆಂದಳಿಂದುಮುಖಿ ॥೩೫॥ ತೋಳ ತೆಕ್ಕೆಯ ತೊಡಿಸಿ ಕಾಮನ । ಕೋಲ ತಪ್ಪಿಸು ಖಳನ ಕಗ್ಗೊಲೆ । ಯೊಳಗಿವ ಕೇಳುಸುರದಿಹರೆ ಸಮರ್ಥರಾದವರು ॥ ಸೋಲಿಸಿದಗೆಲವಿಂದ ಬಲುಮಾ।ತಾಳಿಯುವನೆನ್ನದಿರು ಹರಣದ। ಮೇಲೆ ಸರಸವೆ ತಾಯಬೇಹುದು ಕಾಂ ತೆ ಕೇಳೆಂದ ॥೩೬॥ ಉಳಿದತನ್ನರಸಿಯರ ನಿನ್ನಯ । ಬಳಿಯ ತೊತ್ತಿರ ಮಾಡುವೆನು ಕೇ । ಳೆಲೆಗೆ ತ ನ್ನೊಡಲಿಂಗಯೊಡತನ ನಿನ್ನದಾಗಿರಲಿ ॥ ಲಲನೆ ನಿನ್ನೊಳು ನೆಟ್ಟಲೋಚನ । ತೊಲಗಲಾರದು ತನ್ನ ನಾಯುವ । ಬಳಲಿಸದೆ ಕೃಪೆಮಾಡಬೇಹುದೆನುತ್ತ ಕೈಮುಗಿದ ॥ನ್ಯಾಯವನು ಮಿಗೆ ಗೆಲುವುದೀಯ । ನ್ಯಾಯವಧಮನಧರ್ಮಮಾರ್ಗ । ನ್ಯಾಯಿಗಳ ತಿಮಿರಕ್ಕೆ ಭಾಸ್ಕರರಾವುದಂತರವೋ ॥ ಕಾಯರೆನ್ನವ ರವರಕ್ಕೈಗುಣ। ದಾಯತವ ಬಲ್ಲವರೆ ಬಲ್ಲರು । ನಾಯಿ ಸಿಂಹಕ್ಕಿದಿರೆ ಫಡ ಹೋಗೆಂದು ತಿರುಗಿದಳು॥೩೮॥ ಪೂಣೆಹೊಕ್ಕದು ವಿರಹದಾಸೆಯ। ಕಾಣೆನಾಕೆಯ ಮಾತಿನಲಿ ಮುಂ। ಗಾಣಿಕೆಯಲೇ ಸೂರೆವೋದುದು

ಮನದಸರ್ವಸ್ವ ॥ ತ್ರಾಣ ಸಡಿಲಿತು ಬುದ್ಧಿ ಕದಡಿ ಕೃ । ಪಾಣಪಾಣಿ ವಿರಾಟರಾಯನ । ರಾಣಿಯು ರ ಮನೆಗೈದಿದನು ಕಂಡನು ನಿಜಾಗ್ರಜೆಯ ॥೩೯॥ ಹಣೆಯನಂಘ್ರಿಗೆ ಚಾಚಲಿತ್ತಿದ । ಕೆಣಕಿಗನ ತೆಗೆ ದಪ್ಪಿ ಮದವಾ । ರಣನೆ ಕುಳ್ಳಿರೆನುತ್ತ ನೋಡಿದಳಾಸಹೋದರನ ॥ ಹೆಣಮುಸುಡಿ ಬಿಟ್ಟಿದೆ ಲತಾಂಗಿ ಯು । ಕೆಣಕಿದನೊ ಕಡುಪಾಪಿ ವಂಶವ । ಹಣಿದವಾಡದೆ ಮಾಣನೇಗುವೆನೆನುತ ಮರುಗಿದಳು ॥೪೦॥ ಅಳುಕಿತಗ್ಗದ ಮಹಿಮೆ ಮುಸುಡಿನ । ಬೆಳಕು ಕಂದಿತು ಬಹಳಚಿಂತಾ । ಜಲಧಿಯೊಳಗದ್ದಂತೆ ಸೊಂಪಡಗಿತು ನಿಜಾಕಾರ ॥ ಕುಲಶಿರೋಮಣಿ ಹೇಳು ಚಿತ್ತದ । ನೆಲೆಯನೆನೆ ನಸುನಾಚಿ ಮದನನ । ಹಿಳುಕು ಸುಮತಿಯ ಸೀಳೆ ಬಳಿಕಿಂತೆಂದನವ ನಗುತ ॥೪೧॥ ಬೇರೆ ಬಿನ್ನಹವೇನು ಸತಿಯರ । ನೂರುಮ ಡಿ ಚಲುವಿನಲಿ ಚಿತ್ತವ । ಸೂರೆಗೊಂಡಿಹಳವಳು ನಿನ್ನೋಲಗದ ಸತಿಯರಲಿ ॥ ಮಾರಿದಳು ಮದನಂ ಗೆ ಜೀವಿಸ । ಲಾರೆನಾಕೆಯನೊಳಗುಮಾಡಿಸಿ । ತೋರಿದೊಡೆ ತನ್ನೊಡಲೊಳಸುವಿಂಗಹುದು ನಿರ್ವಾ ಹ ॥೪೨॥ ಕೀರ್ತಿಲತೆ ಕುಡಿಯೊಣಗಿತ್ತೈ ಮದ ನಾರ್ತನಾದ್ಯೆ ಕುಲಕೆ ಕಾಲನ । ಮೂರ್ತಿ ನೀನವತರಿ ಸಿದ್ದೈ ಸಂಹರಿಸಿದ್ದೈ ಕುಲವ ॥ ಸ್ಫೂರ್ತಿಗೆಡೆ ಮನುಜರಿಗೆ ರಾವಣ । ಸಾರ್ತಿಯಪ್ಪುದು ಅರಿಯಲಾ ಕ ಡು । ಧೂರ್ತತನಕಂಜುವೆನೆನುತ ನಡುಗಿದಳು ನಳಿನಾಕ್ಷಿ ॥ ಬೇಟವೇ ಪರವಧುವಿನಲ್ಲಿ ಕೈ । ಮಾಟವೇ ಪರವಿತ್ತದಲಿ ತೆಗೆ । ದೋಟವೇ ಕದನದಲಿ ಗುಣವೇ ರಾಜಪುತ್ರರಿಗೆ ॥ ಆಟವಿಕರೊಡನಾಡಿ ಕಲಿತು ವಿ । ರಾಟನನು ಕೊಲಲೆಣಿಸಿದ್ದೈ ನಿ । ನ್ನಾಟಕಂಜುವೆನೆನುತ ಮುಖದಿರುಹಿದಳು ತರಳಾಕ್ಷಿ ॥೪೪॥ ಅವ ಳ ಗಂಡರು ಸುರರು ಸುರರಿಗೆ । ನವಗದಾವಂತರವು ಮುಳಿದೊಡೆ । ದಿವಿಜದಳಕಿದಿರಾರು ನಮ್ಮನದಾ ರುಕಾವವರು ॥ ಅವಳ ತೊಡಕೇ ಬೇಡ ಸತಿಯರ । ನಿವಹದಲಿ ನೀನಾರ ಬಯಸಿದೊ । ಡವಳ ನಾ ಮುಂದಿಟ್ಟು ಮದುವೆಯನೊಲಿದು ಮಾಡುವೆನು ॥೪೫॥ ಅಕ್ಕ ಮರುಳೌ ಚಿತ್ತವವಳಲಿ । ಸಿಕ್ಕಿ ಬೇ ರ್ಪರಿಯಿತ್ತು ಬಂದೇ । ಮಿಕ್ಕಡಿಂಬಕೆ ಮದುವೆಯುಂಟೇ ಮನವ ಬೇರಿರಿಸಿ ॥ ಮಕ್ಕಳಾಟಿಕೆಯಾದೊ ಡಾಗಲಿ । ತಕ್ಕರಲ್ಲೆಂದೆನಲಿ ಸಲಹುವು । ದಕ್ಕ ಸೈಳೇಂದ್ರಿಯನು ಸೇರಿಸಬೇಕು ತನಗೆಂದ ॥೪೬॥ ಸೊಗಸ ಟತರರ ಮಾತು ಕಣ್ಣಿಗ । ಳೊಗಡಿಸವು ಮಿಕ್ಕವರ ರೂಹನು । ಹಗೆಗಳಾಗಹವುಳಿದವರ ನಾಮಗಳು ನಾಲಗೆಗೆ ॥ ಸೆಗಳಿಕೆಯ ಸಸಿಯಾದೆನೆನ್ನಯ । ಬಗೆಯ ಸಲಿಸೌ ಹರಿದಕರುಳಿನ । ಮೃಗದಮರಿಯನು ಸಲಹಬೇಕೆಂದೆರಗಿದನು ಪದಕೆ ॥೪೭॥ ಆಲಿನೀರೆರಿದವು ತಮ್ಮನ । ಮೇಲೆ ತಳಿತುದು ಮೋಹ ಕಾಲನ । ಪಾಳೆಯಕೆ ಕೈಗೊಟ್ಟಳೆಂಗನೆ ನೆಗಹಿದಳು ಖಳನ ॥ ಏಳು ಭವನಕೆ ಹೋಗು ತರುಣಿಯ । ನಾಳೆ ನಾ ಕಳುಹುವೆನು ಫರಸತಿ । ಮೇಳ ಲೇಸಲ್ಲೆನುತ ಬೀಳ್ಕೊಟ್ಟಳು ನಿಜಾನುಜನ ॥೪೮॥ ಮನದೊಳಗೆ ಗುಡಿಗಟ್ಟಿದನು ಮಾ । ನಿನಿಯ ಕರುಣಾಪಾಂಗ ರಸಭಾ । ಜನವು ಪುಣ್ಯವಲಾಯೆನುತ ಬೀಳ್ಕೊಂಡ ನ ಗ್ರಜೆಯ ॥ ಮನದೊಳೊದವಿದಮರುಳತನದು । ಬ್ಬಿನಲಿ ಹೊಕ್ಕನು ಮನೆಯನಿತ್ತಲು । ದಿನಕರಂ ಗಾಯಿತ್ತು ಬೀಡಸ್ತಾಚಲಾದ್ರಿಯಲಿ ॥೪೯॥ ವರದಿಗಂಗನೆ ಯಿಟ್ಟ ಚಂದನ । ತಿಲಕವೋ ಮನುಮತ ನ ರಾಣಿಯ । ಕರದಲಿಹಕನ್ನಡಿಯೊ ಮದನನ ಬಿರುದಿನೊಡ್ಡಣವೋ ॥ ಸುರತವಿರಹಿಯ ಸುಡುವಕೆಂ ಡದ । ಹೊರಳಿಯೋ ಹೇಳೆನಲು ಮಿಗೆ ಹಿಮ । ಕರನು ಜನಿಸಿದರಜನಿಮಧ್ಯದೊಳವನಿ ಥಳಥಳಿಸೆ ॥೫೦॥ ಬೆಚ್ಚಿದವು ಚಕ್ರಾಂಕಯುಗ ತಾ । ವ್ಯಚ್ಚಿದವು ಮರಿದುಂಬಿ ಕುಮುದವ । ಮುಚ್ಚಿದವು ಮುಸು

ಡುಗುಳನಂಬುಜರಾಜಿ ತವತವಗೆ || ಹೆಚ್ಚಿದವು ಸಾಗರದ ತೆರೆಗಳು | ಬೆಚ್ಚಿದರು ಜಾರೆಯರು ಚಂದ್ರಮ | ಕಿಚ್ಚನಿಕ್ಕಿದನಕಟ ಸಕಲವಿಯೋಗಿಜನಮನಕೆ ||೫೧|| ಖಳನ ವಿರಹದ ತಾಪದುಂಬ ವೆ | ಗ್ಗಳಿಸ ತನ್ನೆರಮನೆಗೆ ಬಂದನು | ಕಳವಳಿಗ ಹಾಯ್ದೆನುತ ಕೆಡೆವನು ತಳಿರಹಾಸಿನಲಿ || ನಳಿನವೈರಿಯ ಸುಳಿವು ತನ್ನಯ | ಕೊಲೆಗೆ ಬಂದುದು ಪಾಪಿ ಕಿವುಲು | ಜಲಜ ಲೋಚನೆಗೇಕವಾಡಿದನೆನುತ ಚಲುವಿಕೆಯ ||೫೨|| ಹಾಸಿದೆಳದಳಿರೊಣಗಿದವು ಹೊಗೆ | ಸೂಸಿತಾಸುಯ್ಲಿನಲಿ ಮೆಲ್ಲನೆ | ಬೀಸುತಿಹ ಸುಳಿವಾಳೆಯೆಲೆ ಬಾಡಿದವು ಝಳಹೊಯ್ದು || ಆಸಸಿಯ ಕೋಗಿಲೆಯ ತುಂಬಿಯ | ನಾಸರೋಜವ ಮಲ್ಲಿಗೆಯ ಕೈ | ವೀಸಿದನು ಕುಸುಮಾಸ್ತ್ರ ಕೀಚಕನ ಕಗ್ಗೊಲೆಗೆ ||೫೩|| ಉಂಡುದೊಡಲೊಳು ವೀಳೆಯದ ಕರ್ಪುರದಹಳುಕುಗಳಮಳಗಂಧದ | ಸರಸಕರ್ದಮ ಕುಂಕುಮಂದುದು ಪೂಸಿದಂಗದಲಿ || ಹೊಂಬಳನೀರನ ಪೊಟ್ಟಣವು ಥಳ್ಳಿಂವೊಲಾದುದು ಬಳಿದಚಂದ್ರಿಕ | ಕರಗಿ ಕಡುಗದತವರವಾದುದು ಕೀಚಕನ ದೆಸೆಗೆ ||೫೪|| ಪರಿಮಳದ ಸುಳಿವಾಲವಟ್ಟದೊ | ಳರವೆ ಪೂಸಿದಗಂಧಕರ್ಪುರ | ವರರ ಸೀದವು ಕೀಚಕನ ಕಾಮಾಗ್ನಿತಾಪದಲಿ || ಪರಮಪಾತಿವ್ರತಗಳುಪಿ ತಾಸ್ | ಹರಣಪಾಸಿಯ ಮರದು ಪಾತಕ | ಹೊರಳುತ್ತಿರ್ದನು ಚಂದ್ರಕಾಂತದ ಮೇಲುಮಚ್ಚಿನಲಿ ||೫೫|| ಇರುಗಳಿಗೆ ಯುಗವಾಗಿ ಸೂಸಿದ | ಸಿರುಳನು ದ್ಘುಮಾಚಲದ ತಿಂವಲಿ | ತರಣಿ ತಲೆದೋರಿದನು ತೂಡಿದನು ಭುವನದಂಧತೆಯ || ಪರಿಮಳದ ಪಾವುಡಬನಳ್ಳಿಗಳ | ಕರಸಿಪವು ತಾವರೆಗಳೆಸೆ ಕಾ | ತರಲತಾಂಗಿಯ ಸುಯ್ಲ ತಾಗಿತು ಕುಮುದನೀಪತಿಗೆ ||೫೬||

ಅಂತು ಸಂಧಿ ೩ ಕ್ಕೆ ಪದ ೧೫೭ ಕ್ಕಂ ಮಂಗಳಮಸ್ತು.



## ನಾಲ್ಕನೆಯ ಸಂಧಿ.

||ಸೂಚನೆ|| ರಾಯಕಾರ್ಯಬಲವಿಲಯಹರನಬು | ಜಾಯತಾಕ್ಷಿಯ ಸಲಹಿ ಕೀಚಕ | ರಾಯವಂಶಾ
ರಣ್ಯವನು ಸವರಿದನು ಕಲಿಭೀಮ ||

||ಪದ|| ಬಯಸಿದಳು ಮೃತ್ಯುವನು ಕಡುಪಾ | ಪಿಯ ಮನೋಧರ್ಮವನು ಜನಮೇ | ಜಯಮಹೀಪತಿ ಕೇಳು ಪಾಂಚಾಲಿಯನು ಕರೆಸಿದಳು || ನಯವಿಹೀನೆ ಸುಧೇಷ್ಣೆ ಬಂದಾ | ಕೆಯನು ಬೆಸಸಿದಳೆಲೆಗ ಯಮುನಾ | ಉಯಿದಲುತ್ತಮಮಧುವ ನೀಘಟತೆಯಲಿ ತಹುದೆಂದು ||೧|| ಅಮ್ಮನಲ್ಲಿಗೆ ದೇವಿ ನಿಮ್ಮಯ | ತಮ್ಮ ದುರುಳನು ಲೇಸುಹೊಲ್ಲೆಹ | ನೆಮ್ಮ ತಾಗುವುಪಾತಕಳಿದರೆ ಬಳಕಹಳಿವೆಮಗೆ || ನಿಮ್ಮ ಸಾವೂಲ್ಯಸಿ ನಿಮಗೆ ವಿ | ಕರ್ಮವನು ಮಾಡುವುದು ನಮಗದು | ಧರ್ಮವಲ್ಲುಳಿದವರ ಕಳುಹುವುದೆಂದಳಿಂದುಮುಖಿ ||೨|| ಎನಲು ಭುಗಿಲೆಂದಳು ಸುದೇತಕೆ | ಮನದ ಗರ್ವವನುಡಿವ ನಿನ್ನಿಂ | ದೆನಗೆ ಮೇಣಣ್ಣನವಗುಂಟೇ ಹಾನಿ ಹಂಬಗಳು || ಅನುಜನಾರೆಂದರಿಯೆ ಸಾಕಾ | ತನ ಸಮೀಪಕೆ ಹೋಗಿ ಬಾ ನಡೆ | ಯೆನಲು ಕೈಕೊಂಡಬಲೆ ಹೊರವಂಟಳು ನಿಜಾಲಯವ ||೩|| ದೇವಿ ನೇಮಿಸಲರಿಯೆನೆಂದೊಡೆ | ದಾವ ಧರ್ಮವು ಶಿವಶಿವೀಹದ | ಸಾವನವರಿಗೆ ತಹುದು ಬದ್ಧವಿಧಾ

ಸುರವಣಿಸಿ ಕೀಚಕನ ಹೊಯ್ದನು ಒದೆದು ಕೆಡಹಿದನು ॥ ದುರುಳನಡಗೆಡೆದೆದ್ದು ನಿಮಿಷದೊ । ಳೊರಲುತೋಡಿದನಾಲಯಕೆ ಬಳಿ । ಕರಸನೊಡಲಾಪಖಿಳಜನ ನಡುಗಿತ್ತು ಭಯಹೊಯ್ದು ॥೧೬॥ ಹೊಡೆಮರಳಿ ಮುಂದೆದ್ದು ತರುಣಿಜನ । ಹಿಡಿಯ ಕೊಡಹುತ ಮೊಲೆಗೆ ಮೇಲುದು । ತೊಡಿಸಿ ಗಲ್ಲದ ರಕುತವನು ಬೆರಳಿಂದ ಮಿಡಿಮಿಡಿದು ॥ ಸುಡಿಯಲಾಗದೆ ಖಳನು ಹೆಂಗುಸ । ಬಡಿಯೆ ನೋಡುತ್ತಿಹರೆ ಹಿರಿಯರು । ಒಡೆಯವರ್ಗಿನದ ಹೊತ್ತು ಲೇಸೆಂದಬಲೆ ಹಲುಬಿದಳು ॥೧೭॥ ಶಿವಶಿವಾ ಪಾಪಿಗಳು ಪತಿಯಾ । ದವರ ತಾಗಲಿ ಸುಯ್ಲುಕಟಿಸಾ । ಲುವರ ನಡುವಣ ಹಾವು ಸಾಯದು ನಿರಪರಾಧಿಯನು ॥ ಅವಗಡಿಸಿದನು ಖಳನು ಧರ್ಮದ । ವಿವರ ಸುದ್ದಿಯನಾಡದೀಜನ । ನಿವಹ ಘೋರಾರಣ್ಯವಾಯ್ತೆಂದೊರಲಿದಳು ತರಳೆ ॥೧೮॥ ಎಲವೊ ದೇಸಿಗ ಕಂಕಭಟ್ಟನೆ । ಹಲವುಧರ್ಮವ ಬಲ್ಲೆಗಡ ನೃಪ । ತಿಲಕ ಗರುಹುವುದೇನು ಸನ್ಯಾಸಿಗಳಿಗುಚಿತವಿದು ॥ ತಿಳಿಯೆ ದೇಸಿಗರಂಗ ದೇಸಿಗ । ರೊಲವು ಸಮನಿಸಬೇಕು ಸಭೆಯಲಿ । ಬಲವಿಹೀನರಗತಿಯಿದೆಲ್ಲೆಂದಬಲ ಯೊರಲಿದಳು ॥೧೯॥ ಧೈರ್ಯವನು ನೆರೆಬಲಿದು ಮೇಲಣ । ಕಾರ್ಯಭಾಗವನರಿದು ನೃಪಜನ । ವರ್ಯನೋಡದೆ ನುಡಿಸದಿದ್ದನು ಧರ್ಮನಂದನನು ॥ ಶೌರ್ಯಕವಸರವಲ್ಲ ಸಮಯಾ । ಚಾರ್ಯನಾಜ್ಞೆಯೆನುತ್ತ ಬಳಿಕಾ । ತುರ್ಯರಿದ್ದರು ಪಾರ್ಥಯಮಳರು ಬಲಿದಮುಗುಡವಲಿ ॥೨೦॥ ನೊಂದಳಕಟಾ ಸತಿಯೆನುತ್ತ ಮನ । ನೊಂದು ನೃವರಗಾಗಿ ಖತಿಯಲಿ । ಕಂಡು ಸಮ್ಮುಖವಾಗಿ ರೋಷದೊಳೆಡನೊಡೆಯುವವಿ ॥ ಮುಂದಿಯುರಿಯುದವೂಲು ಕುಚೇಷ್ಟೆಯೊ । ಳೊಂದು ಹುಲ್ಲನ ಬಾಗಿ ನೋಡಿದ । ನಂದು ರಾಜಾಲಯದ ಮುಂದಣ ಮರನನಾಭೀಮ ॥೨೧॥ ಒಳಗೆ ನಿಶ್ಚೈಸಿದನು ಮೊದಲಲಿ । ಕಳೆದು ಹಿಂಡುವೆನಿವಳ ಬಡಿದೀ । ಖಳನನಿವನೊಡ ಹುಟ್ಟಿದರನಿವನಖಿಳಬಾಂಧವರ ॥ ಬಳಿಕ ವಿಗಡವಿರಾಟರಾಯನ । ಕೊಲುವೆನಂಬುದಮುನ್ನ ಕೌರವ। ಕುಲವ ಸವರುವೆನೆಂದುಕಡಿಕಡಿವೋದನಾಭೀಮ ॥೨೨॥ ಆತನಿಂಗಿತದನುವನರಿತು ಮ । ಹೀತಳಾಧಿಪಧರ್ಮಸುತನತಿ । ಕಾತರಿಸಬೇಡೆಲಲ ಸೈರಿಸುಸೈರಿಸಕಟೆನುತ ॥ ಈತರುವ ಮುರಿಯದಿರು ಸುಜನ । ವ್ರಾತಕಾಶ್ರಯ ವೂರಿಹುದಿದಿದೆ । ಹಾಲಿಬೆಯಿಂತುಂಟು ನಿನ್ನಯ ಬಾಣಸಿನಮನೆಗೆ ॥೨೩॥ ಧರ್ಮಮಯುತರುವಿದನು ಮುರಿಯದಿ । ರಮ್ಮ ಮಾತನು ಕೇಳೆನಲು ಮಿಗೆ । ಸುಮ್ಮನೋಲಗದಿಂದ ಸರಿದನು ಭೀಮ ದುಗುಡದಲಿ ॥ ಕರ್ಮಫಲವಿದು ನಿನಗೆ ಮಾನಿನಿ । ನಿಮ್ಮ ಭವನಕೆ ಹೋಗು ಶಿಕ್ಷಿಸ । ಲಮ್ಮದೀಸಭೆ ಬಗೆಯನಾತನು ಮತ್ಸ್ಯಭೂಪತಿಯು ॥೨೪॥ ಕೋಪಕವಸರವಲ್ಲ ಪತಿಗಳು ಕಾಪುರುಷರೇ ಸನ್ನವರು ಪರ । ತಾಪವನು ಒಳಕೊಳ್ಳಡು ಪತಿವ್ರತೆ ಪುಣ್ಯವಧು ನೀನು ॥ ದೀಪವಲ್ಲಾ ಕ್ಷಮೆಯ ಖಿಳದೋ । ಷಾಪಹಾರವು ಶೌರ್ಯಧರ್ಮದ । ರೂಪು ನೆಲೆಯಾಕ್ಷಮೆಯೆನಲು ಬಳಿಕೆಂದಳಿಂದುಮುಖಿ ॥೨೫॥ ನೀರು ಹೊರಗಕ್ಕುವುದು ಮೂರೇ । ಬಾರಿ ಬಳಿಕದು ಪಾಪಿ ಝಾಡಿಸ । ಸೈರಿಸದು ಅನ್ಯಾಯಬಹಳತೆಗೇನ ಮಾಡುವೆನು ॥ ಸೈರಣೆಗೆ ತಾನವಧಿಯಿಲ್ಲಾ । ಪೌರುಷವು ಕಡುಬಂಜೆಯಾಯಿತು । ಆರಯಿಕೆಯಲಿ ಜಣಗಿ ಜಾರಿಯಿಂದಳಿಂದುಮುಖಿ ॥೨೬॥ ಆರರೆ ಹೆಂಗುಸು ದಿಟ್ಟೆ ಮೋನದೊ । ಳಿರಲಿದಾವಂತರವು ರಾಯನ । ಹೊರೆಯಲೀಬಾಯ್ಬಡಿಕತನ ಗರುವಾಯಿಯೇಯೆನಲು ॥ ಕೆರಳಿದಳು ಲಲಿತಾಂಗಿಯಿಲ್ಲಿಯ । ಹಿರಿಯರಲಿ ಹುರುಳಿಲ್ಲ ಮಾರುತಿ । ಗರುಹುವೆನು ಬಳಿಕಾದುದಾಗಲಿ ಯೆನುತ

ತಿರುಗಿದಳು ||೨೭|| ಆಸುಧೇಷ್ಣೆಯ ಮನೆಗೆ ಬರಲವ । ಳೀಸತಿಯು ನುಡಿಸಿದಳು ತಂಗಿ ವಿ । ಳಾಸವಳಿದಿದೆ ಮುಖದಮುಗುಡವಿದೇನು ಹದನೆನಲು || ಈಸುಮುರವೆಯಲರಸುತನದ ಮ । ಹಾಸಗಾಥಿಕೆ ಯೆಮ್ಮ ನೀವಪ । ಹಾಸ ಮಾಡುವಿರೆನುತದುರುಪದಿನುಡಿದಳೊಡತಿಯನು ||೨೮|| ಮರುಳನಿಮ್ಮೊಡ ಹುಟ್ಟಿದನು ನೀ । ವರಸುಗಳು ತಿರುಕುಳಿಗಳಾವಿ । ನ್ನಿರಲುಬಾರದುನೃಪತಿ ತಪ್ಪಿದೊಡಾರು ಕಾವವರು || ಕರೆಸಿ ಬುದ್ಧಿಯ ಹೇಳಿಯೆನ್ನನು । ಹೊರೆಯಲಾಪರೆ ಹೊರೆಯಿರಲ್ಲದೊ । ಡರಸಿಕಳುಹುವುದೆನ್ನನೆನಲಿಂತೆಂದಳಾರಾಣಿ ||೨೯|| ಲಲನೆ ಕೇಳನ್ಯಾಯದವರನು । ಕೊಲಿಸುವೆನು ಭಯಬೇಡ ಪರಸತಿ । ಗಳುಪಿದವನೊಡಹುಟ್ಟಿದನೆ ಕಡುಪಾಪಿ ಹಗೆಯೆನಲು || ಕೊಲಿಸುವೊಡೆ ನೀವೇಕೆ ತಪ್ಪಿನ । ಬಳಿಯಲೆನ್ನಾತಗಳು ಕೀಚಕ । ಕುಲವ ಸವರುವರೆನಗೆ ಕಾರಣ ವಿಲ್ಲ ಸಾರಿದೆನು ||೩೦|| ಎಂದು ಬೀಳ್ಕೊಂಡಬಲೆ ತನ್ನಯ । ಮಂದಿರಕೆ ಬಂದೊಳಗೊಳಗೆ ಮನ । ನೊಂದು ಸೈವೆರಗಾಗಿ ಚಿಂತಿಸಿ ನೂಕಿದಳು ಹಗಲ || ಕೊಂದು ಕೊಂಬೆನೆ ಯಾತ್ಮಘಾತಕ । ಹಿಂದೆ ಹತ್ತಿದೆಮಾಣದೇಗುವೆ । ನೆಂದು ದ್ರೌಪದಿ ತನ್ನ ಮನದಲಿ ಹಿರಿದು ಮರುಗಿದಳು ||೩೧|| ಆರಿಗುಸುರುವೆನಾರಸಾರುವೆ । ನಾರಿಗೊರಲುವೆನಾರಗರುಹುವೆ । ನಾರಬೇಡುವೆನಕಟ ಹೆಂಗುಸುಜನ್ಮವನುಸುಡಲಿ || ಘೋರಪಾತಕಿಯೆನ್ನವೊಲು ಮು । ನ್ನಾರು ನವೆದವರುಂಟು ಮರಣವು । ಬಾರದೆಂದೊರಲಿದಳು ಬಸಿರನು ಹೊಯ್ದು ಶಶಿವದನೆ ||೩೨|| ಯಮಸುತಂಗರುಹುವೆನೆ ಧರ್ಮ । ಕ್ಷಮೆಯ ಗರ ಹೊಡೆದಿಹುದು ಪಾರ್ಥನು । ಮಮತೆಯುಳ್ಳವನೆಂಬೆನೇತಮ್ಮಣ್ಣನಾಜ್ಞೆಯಲಿ || ಭ್ರಮಿತನಾಗಿಹನುಳಿದರಿಬ್ಬರು । ರಮಣರಿವರೀನಾಯಕೊಲಲ । ಕ್ಷಮರು ನಿಸ್ಸಂದೇಹವೆಂದಳು ತನ್ನಮನದೊಳಗೆ ||೩೩|| ಎಲ್ಲರೊಳು ಕಲಿಭೀಮನೇ ಮಿಡು । ಕುಳ್ಳಗಂಡನು ಹಾನಿಹರಿಬಕೆ । ನಿಲ್ಲದಂಗೈಸುವನು ಕಡುಹೀಹಾಳಿಯುಳ್ಳವನು || ಖುಲ್ಲನವನುಪಟಳವನೆಂತಂ । ಗಲ್ಲವನು ಹೇಳುವೆನು ಬಳಿಕವ । ನಲ್ಲಿ ಹುರುಳಿಲ್ಲದೊಡೆ ಕುಡಿವೆನು ಘೋರತರವಿಷವ ||೩೪|| ನಿಳಯವನು ಹೊರವಂಟು ಕಂಗಳ । ಬೆಳಗು ತಿಮಿರವ ಕೆಡಿಸೆ ಕಂಕಣ । ಲಲಿತಝುಂಕೃತಿಯಿಂದ ತೂಗುವವಾಮಭುಜಲತೆಯ || ಒಲೆದು ಮೇಲುದಸೂಸೆ ನಡುಗುವ । ಮೊಲೆಯ ಭರದಲಿ ಯಡಿಯಿಡುತ ಕಳ । ವಳದ ಕರಣದ ಮುಗುದೆ ಬಂದಳು ಬಾಣಸಿನ ಮನೆಗೆ ||೩೫|| ಕೆಲವಲೊಟ್ಟಿದಪತ್ರಶಾಕಾ । ವಳಿಯ ಫಲರಾಶಿಗಳ ಕಳವೆಯ । ಹೊಳೆವುತಿಹರಾಶಿಾನ್ನದಕ್ಕಿಯ ಸಾಲಹರಿಯಣದ || ಕೆಲಬಲದ ಸಂಭಾರಚೂರ್ಣದ । ಲಲಿತ ಬೋನದ ವಿವಿಧಭಕ್ಷ್ಯಾ । ವಳಿಯ ಬಾಣಸದೊಳಗೆ ಬಂದಳು ಮತ್ತಗಜಗಮನೆ ||೩೬|| ತರಿದ ಕುರಿಗಳ ಹಂದಿಯಡಗಿನ । ಜುಂತರಕುತದ ಮೊಲನ ಖಂಡದ । ತಿರಿದಗುಬ್ಬಿಯ ಕೀಸಿ ಸೀಳಿದನವಿಲ ಲಾವುಗೆಯಾ || ತುರುಗಿದೆಲುವಿನ ಸಾಲಸುಂಟಿಗೆ । ಮೆರೆವಮಾಂಸದರಾಸಿಗಳ ಹರೆ । ದೆರಕೆಗಳ ಕಂಡಬಲೆ ಹೊಗಳಿವಳೆಡಬಲದಮನೆಯ ||೩೭|| ಆರಲಿದನೊ ಭೀಮನೀಸೂ । ದಾರವಿದ್ಯೆಯ ಭಾವು ವಿಧಿಮುನಿ । ದಾರಸಾವಂಗದಲಿ ಬರಸದು ಶಿವಶಿವಾಯೆನುತ || ನಾರಿ ನಸುನಗುತೊಳಗೆ ಹೊಕ್ಕು ಬ । ಕಾರಿ ಮಂಚದೊಳಿರಲು ನಿದ್ರಾ । ಭಾರವಿಹ್ವಲಕರಣನನು ಹೊದ್ದಿದಳು ಲಲಿತಾಂಗಿ ||೩೮|| ಎಬ್ಬಿಸಲು ಭುಗಿಲೆಂಬನೋ ಮೇ । ಣೊಬ್ಬಳೇತಕೆ ಬಂದೆ ಮೋರೆಯ । ಮಬ್ಬಿದೇಕೆಂದೆನ್ನ ಸಂತೈಸುವನೊ ಸಾಮದಲಿ || ತುಬ್ಬುವುದೊ ತಾಬಂದ ಬರವದು । ನಿಬ್ಬರವಲಾ ಜನದ ಮನಕೆ । ನ್ನೆಬ್ಬಿಸಿಯೆ

ನೋಡುವೆನುತ ನಾಂದಳು ವಲ್ಲಭನ ॥೩೯॥ ಮೆಲ್ಲಮೆಲ್ಲನೆ ಮುಸುಕ ಸಡಲಿಸಿ । ಗಲ್ಲವನು ಹಿಡಿದೆಲುಗ
ಲಪ್ರತಿ । ಮಲ್ಲನೆದ್ದನು ನೋಡಿದನು ಪಾಂಚಾಲನಂದನೆಯ ॥ ವಲ್ಲಭೆಯೆ ಬರವೇನು ಮುಖದಲಿ ।
ತಲ್ಲಣಾವೆ ತಲೆದೋರುತಿದೆ ತಳು । ಪಿಲ್ಲವೇಸುಪೇರುಳೇಕೆ ಬಂದೆ ಲತಾಂಗಿ ಹೇಳೆಂದ ॥೪೦॥ ಸೈರಿಸರು
ಬಾಣಸದ ಭವನದ । ನಾರಿಯರು ದುರ್ಜನರು ಖುಲ್ಲಕು । ಠಾರುವರರಮನೆಯ ನಾಯ್ಗಳು ನಾವು
ದೇಸಿಗರು ॥ ಭಾರಪಿದು ಕೆಲದವರು ಮಾತಿರೆ । ನಾವು ನೀ ಹೇಳೆನುತ ದುಗುಡವಿ । ಪಾರದೆಸೆಯಿಂದಾ
ಯಿತೆನಲಿಂತೆಂದಳಿಂದುಮುಖಿ ॥೪೧॥ ನಿನ್ನ ಹಗಲಿರಯುಟ್ಟ ಕೀಚಕ । ಕುನ್ನಿಯೊದೆದನು ರಾಜಸಭೆಯಲಿ
ನಿನ್ನ ತಂಬಿಗರಿರಲು ಸಂಭವವುಚಿತವೆ ತನಗೆ ॥ ಎನ್ನನವಬೆಂಬಳಿಯ ಬಿಡನಾ । ನಿನ್ನ ಬದುಕುವಳ
ಲ್ಲ ಪಾತಕ । ನಿನ್ನ ತಾಗದೆ ಮಾಣವೆನಲಾಭೀಮ ಖತಿಗೊಂಡ ॥೪೨॥ ಉಸುರಲಾಗದು ನಿನ್ನ ಹಂ
ಬಕೆ । ಮಿಸುಕುವವರಾವಲ್ಲ ಹೆಂಡಿರ । ಗಸಣಿಗೊಂಬವರಲ್ಲ ಹುದುಪಿನ ಗಂಡತನವಿದನು ॥ ಶಿವದ
ನೆ ಸುಡು ಕಷ್ಟವ್ರಿಯುವ । ದೆಸೆಯುವರು ನಾವಲ್ಲ ನಿನ್ನವ । ರಸಮಸಾಹಸರಳಿವನಾಳ್ವಂಗರುಹು
ಹೋಗೆಂದ ॥೪೩॥ ರಮಣಿ ಕೇಳುಳಿವವರು ತನ್ನನು । ರಮಿಸುವರು ಮಾನಾರ್ಥವೆನ ನಿ । ರ್ಗಮಿಸು
ವರು ನೀನಲ್ಲದುಳಿದವರುಚಿತಬಾಹಿರರು ॥ ಮಮತೆಯಲಿ ನೀ ನೋಡು ಚಿತ್ತದ । ಸ್ವಮತೆಯನು ಬೀ
ಳ್ಕೊಡು ಕುಠಾರನ । ಯಮನ ಕಾಣಿಸಿ ಕರುಣಿಸೆಂದಳು ಕಾಂತೆ ಕೈಮುಗಿದು ॥೪೪॥ ಕಲಹಕಾದೊ
ಡೆ ಸಾವು ರಮಿಸುವ । ರುಳಿದವರು ಬಳಿಕೇನು ಗಾದೆಯು । ಬಳಿಕ ಕಲಬರು ಗಳಿಸಿದರೆ ಕೆಲದುಂಡುಜಾ
ರುವರು ॥ ಅಳುಕ ನಡೆವವರಲ್ಲ ನಿನ್ನಯ । ಹಳಿವುಹಂಬವ ಹೇಳಿ ಚಿತ್ತವ । ತಿಳುಹಿಕೊಂಬುದು ನಾವು
ಭೀತರು ಧರ್ಮಜನ ಹೊರೆಗೆ ॥೪೫॥ ಹೆಂಡತಿಯ ಹಂಬದಲಿ ಯೊಬ್ಬನೆ । ಗಂಡುಗೂಸೇ ಪ್ರಿಯನು
ಕಡಿ । ಖಂಡವನು ಮಾಡುವನು ಮೇಣ್ ನಿನ್ನೊಡಲನಿಕ್ಕುವನು ॥ ಗಂಡರೈವರು ಮೂರುಲೋಕದ ।
ಗಂಡರೊಬ್ಬಳನಾಳಲಾರರು । ಗಂಡರೋ ನೀವ್ ಷಂಡರೋ ಹೇಳೆಂದಳಿಂದುಮುಖಿ ॥೪೬॥ ಅಂದು ಕೌ
ರವರಾಯ ಸಭೆಯಲಿ । ತಂದು ತೋರಿದನುನ್ನತಿಯ ಬಳಿ । ಕಿಂದು ಕೀಚಕಕುನ್ನಿಯೊದೆದನು ರಾಜ
ಸಭೆಯೊಳಗೆ ॥ ಅಂದುಮೇಣಿಂಪಾದಭಂಗಕೆ । ಕುಂದದಾವುದು ನೀವು ಬಲ್ಲಿದ । ರೆಂದು ಹೊಕ್ಕೊಡೆ
ಹೆಣ್ಣ ಕೊಂದಿರಿಯೆಂದಳಿಂದುಮುಖಿ ॥೪೭॥ ದಾನವರು ಮಾನವರೊಳೆನ್ನಭಿ । ಮಾನವನು ಕೊಂ
ಬವನ ಹೆಸರನ । ದೇನನೆಂಬುದು ನೊಂದು ನುಡಿದೊಡೆ ಖಾತಿಯಿಲ್ಲೆಮಗೆ ॥ ಈನಪುಂಸಕರೊಡನೆ
ಹುಟ್ಟಿದ । ನಾನು ಮೂಗುಳ್ಳವನೆ ಮಾನಿನಿ । ನೀನು ತೋರಿದಪರಿಯಲೆಂಬುದು ಭೀತಿ ಬೇಡೆಂದ ॥೪೮॥
ಅಂದು ದುಶ್ಯಾಸನನ ಕರುಳನು । ತಿಂದೊಡಲ್ಲದೆ ತಣಿವು ದೊರಕೊಳ । ದೆಂದು ಹಾಯ್ದೊಡೆ ಹಲುಗಿ
ರಿದು ಮಾಣಿಸಿದ ನಾವ್ಯಥೆಯ ॥ ಇಂದು ಕೀಚಕನಾಯ ನೆರಗುವೆ । ನೆಂದು ಮರಸನು ನೋಡಿದೊಡೆ ಬೇ ।
ಡೆಂದಹದನನು ಕಂಡೆ ನೀನೆನಗುಂಟೆಯಪರಾಧ ॥೪೯॥ ಹೆಣ್ಣ ಹಂಬಕ್ಕೋಸುಗವೆತ । ಮ್ಮಣ್ಣನಾಜ್ಞೆಯ
ಮೀರಿ ಕುಂತಿಯ । ಚೆಣ್ಣ ಬದುಕದನೆಂದು ನುಡಿವರು ಕುಜನರಾದವರು ॥ ಅಣ್ಣನವಗಿ ದೂಲುವು
ದು ನಾ । ವುಣ್ಣದುಂಡಿಯವು ರಾಮನಾಜ್ಞೆಯ । ಕಣ್ಣಿಯಲಿ ಬಿಗಿವಡೆದು ಕೆಡೆದವು ಕಾಂತೆ ಕೇಳೆಂ
ದ ॥೫೦॥ ಹೊದ್ದುವುದು ಫಲುಗುಣನ ಪಾದಕೆ । ಒದ್ದ ಯಮನಂದನನ ಮನವನು । ತಿದ್ದುವುದು
ಸಹದೇವನಕುಲರ ಕೈಯಲೆನಿಸುವುದು ॥ ಗದ್ದು ಕೊಡುವರು ನಿನ್ನ ಪಾಲಿಸ । ದಿದ್ದರಾದೊಡೆ ದೋಷ

ವವರನು । ಹೊಮ್ಮುವುದು ನೀನೆನ್ನ ಬರಿದೇ ಕಾಡಬೇಡೆಂದ ॥೫೧॥ ಗಂಡುಗರ್ವವ ನುಡಿಯೆವೆಮ್ಮ ಯ । ದಂಡಿ ತಾನದು ಬೇರೆ ಸಾವೀ । ಭಂಡತನದಲಿ ಬದುಕಲರಿಯೆವು ಧರ್ಮನಿರ್ಮನನು ॥ ಕೊಂಡು ಕೊಸರುವರಲ್ಲ ರಾಯನ । ಸಂಡಲೆದು ಕೀಚಕನ ತಲೆಯನು । ಚಂಡಸಾಡಿಸು ರಮಣಿ ಮೇಣರ್ಜುನಗೆ ಹೇಳೆಂದ ॥೫೨॥ ತರುಣಿ ಧಿಟ ಕೇಳಿಂದು ಮೊದಲಾ । ಗರಸಿ ನೀಸಾಲ್ವರಿಗೆ ಸಾವೆಡೆ । ಮುರಿದವರು ಬಿಟ್ಟವರು ನಿನ್ನಯ ಸೂಳುಪಾಳೆಯವ ॥ ಅರಸನಂ ಪ್ರಾರ್ಥಿಸುವುದರ್ಜುನ । ವರನಕುಲಸಹದೇವರಿಗೆ ವಿ । ಸ್ತರಿಸಿ ಹೇಳ್ವುದು ನಮ್ಮೊಡನೆ ಫಲಸಿದ್ಧಿಯಿಲ್ಲೆಂದ ॥೫೩॥ ಕೇಳುತಿದ್ದಳು ಕೊರಳ ಸೆರೆ ಗೋ । ಸಾಳಿಗೌಕಿತು ಬಿಕ್ಕಿಬಿಕ್ಕಿವಿ । ಲೋಲಲೋಚನೆ ಯಕಟ ನನೆದಳು ಬಾಷ್ಪವಾರಿಯಲಿ ॥ ಶೂಲ ಮರುವೊನೆಗೊಂಡವೊಲು ಸುಳಿ । ವಾಳೆ ಝುಳತಾಗಿದವೊಲುದರ । ಜ್ವಾಲೆ ನೆತ್ತಿಗೆ ನಿಲುಕೆ ಹಲುಬಿದಳಬಲೆ ಬಿಸುಸುಯ್ದು ॥೫೪॥ ಕೆಂದಳದ ಸೆಕೆಯಲಿ ಕಪೋಲವು । ಕಂದಿ ಕಸರಿಕೆಯಾಯ್ತು ನಿಡುಸುಯ್ಲಿಂದ ಸೀಕರಿವೋದವೇಕಾವಳಿಯಮುತ್ತುಗಳು ॥ ಸಂದಣಿಸಿದೆವೆಗಳಲಿ ಬಾಷ್ಪದ । ಬಿಂದು ತಳಿತುದು ಸಟ್ಟದೃಷ್ಟಿಯೊ । ಳಿಂದುಮುಖಿ ಸೈಗರೆದು ತೂಗಿದಳಡಿಗಡಿಗೆ ಸಿರವ ॥೫೫॥ ಆವಹೆಂಗುಸನೆಳಲಿಸಿದೆನಿ । ನ್ನಾವಧರ್ಮವನಳಿದೆನೋ ತಾ । ನಾವಪಾಪದ ಫಲಕೆ ಹಿಡಿದೆನೊ ಸಂಚಕಾರವನು ॥ ಆವಹೆಂಗುಸು ನವೆದಳೆನ್ನವೊ । ಲಾವಳಳಲಿದು ಮರುಗಿದಳು ಮ । ತ್ತಾವಳೆನ್ನಂದದಲಿ ಪಡೆದವಳುಂಟೆ ಲೋಕದಲಿ ॥೫೬॥ ಇನ್ನು ಹುಟ್ಟದೆಯಿರಲಿ ನಾರಿಯ । ರೆನ್ನವೊಲು ಭಂಗಿತರು ಭುವನದೊ । ಳಿನ್ನು ಜನಿಸಲುಬೇಡ ಗಂಡರು ಭೀಮಸನ್ನಿಭರು ॥ ಎನ್ನವೊಲು ಪಾಂಡವರವೊಲು ಸಂ । ಪನ್ನದುಃಖಿಗಳಾರು ನವೆದರು । ಮುನ್ನಸವರೊಳಗೆಂದು ದ್ರೌಪದಿ ಹಿರಿದುಹಲುಬಿದಳು ॥೫೭॥ ಆವಗರಳವ ಕುಡಿವನೋ ಮೇ । ಣಾವಬೆಟ್ಟವನಡರಿಬೀಳ್ವೆನೊ । ಯಾವಮಡುವನು ಹೊಗುವೆನೋ ಹಾಸರೆಯ ಗುಂಪಿನಲಿ ॥ ಆವಕುಂತವಹಾಯ್ವೆನೋ ಮೇ । ಣಾವ ಪಾವಕನೊಳಗೆ ಹೊಗುವೆನೊ । ಸಾವು ಸಮನಿಸದೆನಗೆನುತ ಮರುಗಿದಳು ನಳಿಸಾಕ್ಷಿ ॥೫೮॥ ಮಂದೆಗೆಳೆಸಿದಪಾಪಿ ಕೌರವ । ನಂದು ಮುಂದಲೆವಿಡಿದು ಸೈಂಧವ । ಬಂದು ಬಳಿಕಾರಣ್ಯವಾಸದೊಳೆನ್ನನೆಳದೊಯ್ದ ॥ ಇಂದು ಕೀಚಕನಾಯ ಕಾಲಲಿ । ನೊಂದೆನಾನೀಮೂರುಬಾರಿಯೆ । ಬಂದಭಂಗವೆ ಸಾಕೆನುತ ಬಸವಳಿದಳಿಂದುಮುಖಿ ॥೫೯॥ ಜನನವೇ ಪಾಂಚಾಲರಾಯನ । ಮನೆ ಮನೋವಲ್ಲಭರವಾರೆನೆ । ಮನುಜಗಿಸುಜರು ಗಣ್ಯವೇ ಗೀರ್ವಾಣರಿಂ ಮಿಗಿಲು ॥ ಎನಗೆ ಬಂದೆಡರೀವಿರಾಟನ । ವನಿತೆಯರುಗಳ ಮುಡಿಯ ಕಟ್ಟುವ । ತನುವ ತಿರುಗುವಕಾಲನೊತ್ತುವಕೆಲಸದುತ್ಸಾಹ ॥ ॥೬೦॥ ಹಗೆಗಳಿಗೆ ತಂಪಾಗಿ ಬದುಕುವ । ಮುಗುದರಿನ್ನಾರುಂಟು ಭಂಗಕೆ । ಹೆಗಲ ಕೊಟ್ಟಾನುವ ವಿರೋಧಿಗಳುಂಟೆ ಲೋಕದಲಿ ॥ ವಿಗಡಬಿರುದನು ಬಿಟ್ಟು ಬಡಿಹೋ । ರಿಗಳು ಪಾಂಡವರಂತೆ ಮೂಗು । ರ್ಗಳದಿನ್ನಾರುಂಟೆನುತ ಮರುಗಿದಳು ನಳಿಸಾಕ್ಷಿ ॥೬೧॥ ಕಾಲನನು ಕೆರಳಿದೊಡೆ ಮುರಿವ । ಚ್ಛಾಳುತನದವರೆನ್ನನೊಬ್ಬಳ । ನಾಳಲಾರಿರ ಪಾಪಿಗಳಿರಪಕೀರ್ತಿಗಳುಕಿರಲಾ ॥ ತೋಳಹೊರೆ ನಿಮಗೇಕೆ ಭೂಮಿಾ । ಪಾಲವಂಶದೊಳುದಿಸಲೇತಕೆ । ಕೂಳುಗೇಡಿಂಗೊಡಲ ಹೊರುವಿರಿಯೆಂದಳಿಂದುಮುಖಿ ॥೬೨॥ ಧರೆಯ ಭಂಡಾರವನು ಪುರವನು । ಕರಿತುರಗರಥಪಾಯದಳವನು । ಕುರುಕುಲಾಗ್ರಣಿ ಸೆಳೆದುಕೊಂಡನು ನಿಮ್ಮ ಹೊರವಡಿಸಿ ॥ ದುರುಳಕೀಚಕಗೆನ್ನ ಕೊಟ್ಟಿರಿ । ಪರಿಮಿತದಲಿರವಾಯ್ತು

ನಿಮ್ಮ ಕೃ | ವರಿಗೆ ಲೇಸಾಯ್ತು ಕಟಯೆಂದಬುಜಾಕ್ಷಿ ಹಲುಬಿದಳು || ಭಾವ ಭಾಗ್ಯಾಧಿಕನು ಕೌರವ | ದೇವನರಸುಗಳೊಡೆಯ ತನಗವನು | ನೀವು ಕೃಷ್ಣನ ಕೂರ್ಪರ ಧರ್ಮಾದಿ ಪಾಲಿಸಿರೀಗ || ನೀವು ತಟತಟವಾಗಿ ಲೋಗರ | ಸೇವೆಯಲಿ ಬೆಂದೊಡಲ ಹೊರೆದಿರಿ | ಸಾವವಳು ನಿಮಗಂಜಲೇಕೆಂದಬಲೆ ಯೊರಲಿದಳು ||೧೪|| ಭೀಮ ಕೊಟ್ಟನು ತನಗೆ ಸಾವಿನ | ನೇಮವನು ನಿಮ್ಮಣ್ಣನಾಜ್ಞೆವಿ | ರಾಮವಾಗದೆ ಬದುಕಿ ಧರ್ಮದ ಮೈಸಿರಿಯನರಿದು || ಕಾಮಿನಿಯ ಕೇಳಿಯಲಿ ನೆನೆವುದು | ತಾಮಸದಿ ತಾ ಮೀರಿ ನುಡಿದು | ದ್ದಾಮತೆಯ ಸೈರಿಸುವುದೆಂದೆರಗಿದಳು ಚರಣದಲಿ ||೧೫|| ಎನಲು ಕಂಬನಿದುಂಬಿದನು ಕಡು ನನೆದುದಂತಃಕರಣ ರೋಷದ | ಘನತೆ ಹೆಚ್ಚಿತು ಹಗೆಗಳನು ಹಿಂಡಿದನು ಮನದೊಳಗೆ || ತನುಪುಳಕವುಬ್ಬರಿಸಿ ಮೆಲ್ಲನೆ | ವನಿತೆಯನು ತೆಗೆದಪ್ಪಿದನು ಕಂ | ಬನಿಯ ತೊಡೆದನು ಸೆರಗಿನಲಿ ಕಲಿಭೀಮ ಮಾನಿನಿಯ ||೧೬|| ಕುರುಳ ನೇವರಿಸಿದನು ಗಲ್ಲವ | ನೊರಸಿ ಮುಂಡಾಡಿದನು ಮಂಚದ | ಹೊರೆಯ ಗಿಂಡಿಯ ನೀರಿನಲಿ ತೊಳೆದನು ಮುಖಾಂಬುಜವ || ಅರಸಿ ಬಿಡು ಬಿಡು ಖಾತಿಯನು ವಿ | ಸ್ತರಿಸಲೇಕೆಮ್ಮಣ್ಣನಾಜ್ಞೆಯ | ಗಿರಿಯ ದಾಂಟಿದೆ ದಾಂಟಿದೆನು ಹೋಗೆಂದನಾಭೀಮ ||೧೭|| ಬಸುರ ಬಗಿವೆನು ಕೀಚಕನ ನಸು | ಮಿಸುಕಿದೊಡೆ ವೈರಾಟವಂಶದ | ಹೆಸರ ತೊಡೆವೆನು ನಮ್ಮನರಿದೊಡೆ ಕೌರವವ್ರಜವ || ಕುಸುರಿದರಿವೆನು ಭೀಮ ಕಷ್ಟವ | ನೆಸಗಿದನು ಹಾಯೆಂದರಾದೊಡೆ | ಮುಸುಡನವರಾದ್ರಿಯಲಿ ತೇವೆನು ದೇವಸಂತತಿಯ ||೧೮|| ಮುನಿದನಾದೊಡೆಯಣ್ಣ ತನಪಿಂ | ದಿನಲಿ ಹರಿಯಲಿ ಪಾರ್ಥನಕುಲರು | ಕನಲಿದೊಡೆ ಕೈದೋರುವೆನು ಸಹದೇವನಿವರುಗಳ || ಅನುಜನೆಂಬೆನೆ ಕೃಷ್ಣ ಹಾಯ್ದೊಡೆ | ಘನಮುರಾರಿಯ ಮೀರುವೆನು ಬಳಿ | ಕೆನಗೆ ಸಮಬಲರಾರು ತರಿವೆನು ಕೀಚಕಾನ್ವಯವ ||೧೯|| ಈ ಸುದಿನವೆಮ್ಮಣ್ಣನಾಜ್ಞೆಯ | ಪಾಶದಲಿ ಸಿಕ್ಕಿರ್ದ ಸಿಂಹದ | ಕೂಸನು ಕಣಕುವವೊಲೀ ಕುರುಕೀಚಕಾದಿಗಳು || ಗಾಸಿಯಾದರು ಕೆಣಕಿ ನಾಯಿಗಳ | ವೀಸಬಡಿಯಲಸುವ ಕೊಂಬನು | ವಾಸಿ ಧರ್ಮದ ಮೇರೆದಪ್ಪಿತು ಕಾಂತೆ ಕೇಳೆಂದ ||೨೦|| ತರುಣಿ ಕೀಚಕ ಕೌರವೇಂದ್ರರ | ಹರಣಕಿವ ಕೋ ಸಂಚಕಾರವ | ಕೆರಳಿದೊಡೆ ಯಾಭೀಮ ಬಗೆವನೆ ನೀತಿಗೀತಿಗಳ || ಕೆರಳಿಚುವೆಯಿನ್ನೇನು ನಿನ್ನಯ | ಮಬವೆನ್ನದು ಸಾಯಿಜಾರನ | ಕರೆದು ಸಂಕೇತದಲಿ ಸೂಚಿಸು ನಾಟ್ಯಮಂದಿರವ || ಅಲ್ಲಿಗಿರುಳೈತಂದು ಮರೆಯಲಿ | ಖುಲ್ಲನುದರವ ಬಗಿದು ರಕುತವ | ಚೆಲ್ಲುವೆನು ಶಾಕಿನಿಯರುಗೆ ಸಂದೇಹ ಬೇಡಿದಕೆ || ಅಲ್ಲಿ ಕೆಲಬಲನರಿದುದಾದೊಡೆ | ಬಲ್ಲೆನದಕೌಷಧಿಯ ಕರೆಮರೆ | ಯಿಲ್ಲ ಮಾನಿನಿ ಹೋಗೆನುತ ಬೀಳ್ಕೊಟ್ಟನಂಗನೆಯ || ||೨೧|| ಹರುಷದಲಿ ಹೆಚ್ಚಿದಳು ಪುರುಷರ | ಪುರುಷನಲ್ಲಾ ಭೀಮ ನಿನ್ನಯ | ಪರಮಸುಕೃತೋದಯವಲಾ ನೀನೊಬ್ಬನೆಂದೆನುತ || ಅರಸಿ ಕಾಂತನ ಬೀಳುಕೊಂಡಳು | ತಿರುಗಿದಳು ನಿಜಭವನಕತ್ತಲು | ತರಣಿ ತೆಗೆದನು ತಾವರೆಯ ಬಾಗಿಲಿನ ಬೀಯಗವ ||೨೨|| ಆದಿವಸವರಮನೆಗೆ ಬರುತ ವೃ | ಕೋದರನ ವಲ್ಲಭೆಯ ಕರೆದನು | ಕೈಮುಡುಕಲಕಿದನು ಮಾತಾಡಿಸಿದನಂಗನೆಯ || ಹೋಟಿರುಳು ಯುಗವಾಗಿ ಸವೆದುದು | ನೀ ದಯಾಂಬುಧಿ ಕುಸುಮಶರ ಯಮ | ಸಾಧನವನೀ ಬಲ್ಲೆಯೆಂದನು ಕೀಚಕನು ನಗುತ ||೨೩|| ಕುಸುಮಶರ ಯಮನಾದನು ಅಮೃತವು | ವಿಷವೆಮಗೆ ಬಳಿಕಾಲಿಕಲುಗಳು | ಒಸಿಯುಹವು ಬಾಂಧವರು ವೈರಿಗಳಹರು ನಿಮಿಷದಲಿ || ಬಿಸಿದರೊಲ್ಲದಲಹರು ಲೋಗರ | ಶಪಥದನೆಗಳುಪಿದುದು

ರಾತ್ಮನ । ವಸುಧೆಹೊರದೆಲೆಪಾಪಿ ಕೀಚಕ ಯೆಂದಳಿಂದುಮುಖಿ ॥೭೫॥ ಬಳಿಕ ನಿನ್ನ ಪುರಾಣಧರ್ಮದ ವ । ತಿಳಿದುಕೊಂಬೆನಿದೊಮ್ಮೆ ನಿನ್ನಯ । ಲಲಿತಕರುಣಕಟಾಕ್ಷಕವಚವ ತೊಡಿಸಿ ತನ್ನೊಡಲ ॥ ಅಳು ಕದೆಸುವಮನೋಜನಂಬಿನ । ಹಿಳುಕ ಮುರಿ ಡಿಂಗರಿಗನೆಹೆನೆಂ । ದಳಿಮೊನದಲಾಖೂಳನಬುಜಾನನೆಗೆ ಕೈಮುಗಿದ ॥೭೬॥ ಅರಿದರಾದೊಡೆ ನಿನ್ನ ವಂಶವ । ತರಿವರೆನ್ನವರೆಲವೊ ಕೇಳೆಲ । ನರಿಯುದ್ದಂದದಿ ಬಂದು ನಾಟ್ಯದ ಗರುಡಿಯೊಳಗಿಹುದು ॥ ನೆರೆದುಪಾಯುಷ ನಿನಗೆ ಕತ್ತಲೆ । ಮರೆಯೊಳಾನ್ಯೆತಹೆನು ಯೆನ್ನನು । ಮರೆದು ನೀ ಬಿಡೆ ಯಾದುದಾಗಲಿಯೆಂದಳಿಂದುಮುಖಿ ॥೭೭॥ ಖಳ ಹಸಾದವ ಹಾಯ್ಕಿ ತನ್ನಯ । ನಿಳಯಕೈದಿದನಬುಜಬಾಂಧವ । ನಿಳಿದನಸ್ತಾಚಲದ ತಪ್ಪಲ ತಾವರೆಯಬನಕೆ ॥ ನಳಿನಮುಖಿ ನಲವೇರಿ ಕಗ್ಗ । ತ್ತಲೆಯ ಹಬ್ಬುಗೆಯೊಳಗೆ ಕಂಗಳ । ಬೆಳಗು ಬಟ್ಟೆಯ ತೋರೆ ಬಂದಳು ಬಾಣಸಿನಮನೆಗೆ ॥ ಭೀಮನಿಂಟರು ನಾಟ್ಯನಿಲಯದ । ನಾಮದಾಂಥಗೆ ನುಡಿದು ಬಂದೆನು । ತಾಮಸದ ಪಾಪದಿರು ಹೂಡುರಲ್ಪಬುದ್ಧಿಗಳ ॥ ಕಾಮುಕನಿವಗೆದಹಿ ನಿಜಸು । ಪ್ರೇಮವನು ತೋರೆನಲು ನಗುತು । ದ್ದಾಮನೆದ್ದನು ಪಳಿಯನುಟ್ಟನು ಮುಬ್ಬಿಗಂಟಿನಲಿ ॥೭೯॥ ಖಳನ ಮುಖಯೆಂದಬಲೆ ನೊಸಲಲಿ । ತಿಲಕವನು ರಚಿಸಿದಳು ಸೇಸೆಯ । ತಳಿದಳೇಲಸಿ ತಿಗುರಗೆಲಿದಳು ಹಿಣಿಲ ಹೊಸಪರಿಯ ॥ ಬಲುಭುಜನ ಹರಸಿದಳು ಕಗ್ಗ । ತ್ತಲೆಯ ಹಬ್ಬುಗೆಯೊಳಗೆ ನಾಟ್ಯದ । ನಿಲಯಮಧ್ಯದ ಮಣಿಯಮಂಚದಮೇಲೆ ಪವಡಿಸಿದ ॥೮೦॥ ಅನಿಲನಪಾರಿಯ ಬೇಟಪಾತನು । ತುರಿಗಿದನು ಮಲ್ಲಿಗೆಯ ಮೊಗ್ಗೆಯ । ನಿರಿಕಿ ತಾ ಪೂಸಿದನು ಸಾದುಜವಾಜಿಕತ್ತುರಿಯ ॥ ಮೆರೆವಗಂಧದ ಡಿಗೆಯನು ರಚಿಸಿದ । ಸೆರಗಿನೊಯ್ಯಾರದಲಿ ಸುರಗಿಯ । ತಿರುಹುತಿರುಳೊಬ್ಬನೆ ನಿಜಾಲಯದಿಂದ ಹೊರವಂಟ ॥೮೧॥ ಕಾಲಪಾಶದಲೆಳಸಿಕೊಂಬಕ । ರಾಳವರಿ ಸುಡುಗಾಡಲೈತಂ । ದಾಲಯವ ಹೊಕ್ಕನು ಕೃತಾಂತನ ಬಾಯ ಹೊಗುವಂತೆ ॥ ಮೇಲೆಮೇಲವಳಕನಕತನವ । ನಾಲಿಸದೆ ಸುಂವಾನಗಲಿ ಕೇ । ಡಾಳಿ ಬಂದನು ಮಂಚವಿದ್ದೆಡೆಗಾಗ ತಡವರಿಸಿ ॥೮೨॥ ವನಜಮುಖಿ ನೀಳಯನನೆನುಲೇ । ನನವ ಮಲ್ಲಿಗೆಯರಳ ತೊಡಿಗೆಯ । ನನುಪಮಾಂಬರವಿದ ಮನೋಹರವಪರಿಚಿತ್ರ ನು ॥ ನಿನಗೆ ಪಾಸಟಿಯಾನು ಯೆನ್ನವೊ । ಲನಿಮಿಷರೊಳಾರುಂಟು ಚೆಲುವರು । ಮನುಜರೆನ್ನನು ಹೋಲುವರೆ ಸ್ತ್ರೀಯರಿ ಕೇಳೆಂದ ॥೮೩॥ ಎನ್ನವೋಲ್ಪುರುಷರಲಿ ಚೆಲುವರೆ । ಮುನ್ನ ನೀ ಕಂಡಿದೆಯಾದೊಡೆ । ಯೆನ್ನವೋಲಾಣೆಲೆಗೆ ಹುಸಿಯದೆ ಹೇಳುಹೇಳೆಂದ ॥ ಮುನ್ನ ನಿನ್ನಂತಪ್ಪಸತ್ತಿಯರು । ಯೆನ್ನನೇ ಬಯಸುವರು ನಾರಿಯ । ರೆನ್ನ ಕಂಡೊಡೆ ಸೋಲದವರಿಲ್ಲೆಲೆಗೆ ನಿಸ್ಸಾಣೆ ॥೮೪॥ ಎಲವೊ ಕೀಚಕ ನಿನ್ನ ಹೋಲುವ । ಚೆಲುವರಿಲ್ಲಂತಿರಲಿ ಲೋಕದ । ಲಲನೆಯರ ಪರಿಯಲ್ಲ ತನ್ನಯರೂಪುಬೇರೊಂದು ॥ ಇಳೆಯೊಳಗೆನಗೆಣೆಯಿಲ್ಲ ನಿನಗಾನೊಲಿದು ಬಂದೆನು ತನ್ನಪರಿಯನು । ಬಳಿಕ ನೋಡಾ ಬೇಗ ತೋರುವೆನೆಂದನಾಭೀಮ ॥೮೫॥ ಎನಗೆ ಪುರುಷರು ಸೋಲದವರಿಲ್ಲೆನಗೆ ಪಾಸಟಿ ನೀನು ನಿನಗಾ । ಮನವೊಲಿದೆ ನೀ ನೋಡು ತನ್ನಯ ಹೆಣ್ಣತನದನುವಾ ॥ ಎನಲು ಹರುಷದಲುಬ್ಬಿ ಕೀಚಕ । ನನಿಲಜನ ಮೈದಡವಿ ವ್ಯತ್ಯ । ಸ್ತನವ ಕಾಣದೆ ಹೆದರಿ ಬಳಿಕಿಂತೆಂದನವ ನಗುತ ॥೮೬॥ ಎಲೆಗೆ ಕಲುಮೈಯಾದೆ ಕಡುಗೋ । ಮಲತೆಯೆತ್ತಲು ಕರ್ಕಶಾಂಗದ । ಬಲುಹಿದೆತ್ತಲು ಮಾಯೆವೇಷವಧರಿಸಿದೆಯೊ ಮೇಣು ॥ ತಿಳುಹೆನಲು ಕೇಳೆಲ

ಕರೆನ್ನನೆಳೆದೊಯ್ದು ॥ ಬೀಳಿಸುವರಗ್ನಿಯಲಿ ನೀವಕ । ಟೇಳಿ ತಪವೇಕೆನುತ ಮೊರೆಯಿಡೆ । ಕೇಳಿದನು ಕಲಿಭೀಮ ಬಹಳಾಕ್ರಂದನಧ್ವನಿಯ ॥೯೯॥ ಈ ದುರಾತ್ಮರಿಗಗ್ರಜನ ಕಾ । ಪ್ಪದದೇ ತಮ್ಮಣ್ಣನಲ್ಲಿಗೆ । ಹೊಯ್ದು ಕಳುಹಲುಬೇಕಲಾ ಕುನ್ನಿಗಳನೀಕ್ಷಣಕೆ ॥ ಬಯ್ದು ಫಲವೇನೆಂದು ಮಾರುತಿ । ಹಾಯ್ದು ಝುಂಕಿಸಿ ರುದ್ರಭೂಮಿಯ । ಸ್ವೈದಿದನು ಘಡಯೆನುತ ಕೊಂಡನು ಮುರಿದು ಹೆಮ್ಮರನ ॥೧೦೦॥ ಎಲೆಲೆ ಗಂಧರ್ವಕನ ಹೆಂಗುಸ । ಬಿಳಿಚಿಬಿಡಿರೋ ಪಾಪಿ ಹೋಗಲಿ । ಕೊಲೆಗೆಡಿಗನಿವನೆನುತ ಹೆಣನನು ಬಿಸುಟು ದೆಸೆದೆಸೆಗೆ ॥ ತಲೆಗೆದರಿ ತೆಗೆದೋಡೆ ನಕ್ಕನು । ಕಳಕಳಸಿ ಕಲಿಭೀಮಸೇಲೆಸಾ । ಯ್ಕಳಿರ ಹೋದೊಡೆ ಬಿಡುವನೇ ಹಾಯೆನುತ ಕೈಕೊಂಡ ॥೧೦೧॥ ತಿರುಹಿದನು ಹೆಮ್ಮರನನವದಿರ । ನೆರೆದು ನಿಟ್ಟೊರಸಿದನು ದೆಸೆದೆಸೆ । ಗೊರಲಿ ಚಿಮ್ಮುವ ಚಪಲರನು ಬೆಂಬತ್ತಿ ಬರಿಗೈದು ॥ ಕುರಿದರಿಯ ಮಾಡಿದನು ನೂರೆ । ವರನು ಕೊಂದನು ಮರನ ಹಾಯಿಕಿ । ಮರಳಿ ಮಿಣ್ಣನೆ ಬಂದು ಹೊಕ್ಕನು ಬಾಣಸದಮನೆಯ ॥೧೦೨॥ ಸುಳಿಯಲಮ್ಮದು ಪೌರಜನವಿವ । ರಳಿವ ವಚನಿಸಲಮ್ಮರಿಕೆಯ । ನೆಲುಕಲಮ್ಮದು ನೋಡಲಮ್ಮದು ಮಂದಿ ಗುಜುಗುಜಿಸಿ ॥ ನಳಿನಮುಖಿ ನಸುನಗುತ ತಿಳಿಗೊಳ । ದೊಳಗೆ ಹೊಕ್ಕಳು ಮಿಂದು ಬೀದಿಗಳೊಳಗೆ ಬರುತಿರೆ ಕಂಡು ಕೈಗಳ ಮುಗಿದುದಖಿಳಜನ॥೧೦೩॥ ಈಕೆಗೋಸುಗವಳಿದನೆಕಟ ವಿ । ವೇಕಿಕೀಚಕನೆಂದು ಕೆಲಬರಿ । ದೇಕೆ ನಮಗೀಚಿಂತೆ ಶಿವಶಿವಯೆಂದು ಕೆಲಕೆಲರು ॥ ನೂಕಿ ಕವಿದುದು ಮಂದಿ ಮಧ್ಯದೊ । ಳೀಕೆ ಮೆಲ್ಲನೆ ಬರುತಲಾ ಲೋ । ಕೈಕವೀರನ ಕಂಡಳಾಬಾಣಸದಬಾಗಿಲಲಿ ॥೧೦೪॥ ಮುಗುಳುನಗೆಯಲಿ ಕಣ್ಣ ಕಡೆಯಲಿ । ವಿಗಡಭೀಮನ ನೋಡಿ ಕೈಗಳ । ಮುಗಿದೆವಾ ಗಂಧರ್ವಪತಿಗೆ ನಮೋನಮೋಯೆನುತ ॥ ಹೊಗರಿಡುವಹರುಷದಲಿ ರೋಮಾ । ಳಿಗಳ ನುಡಿಯಲಿ ತನ್ನ ನಿಳಯಕೆ । ಮುಗುದೆ ಬಂದಳು ಸೂರ್ಯನೆಡರಿದನುದಯಪರ್ವತವ ॥೧೦೫॥ ಊರೊಳಗೆ ಗುಜುಗುಜಿಸಿ ವಾರ್ತಾ । ಭಾರ ಮಸಗಿತು ನೆರೆದನೆರವಿಯೊ । ಳಾರ ಬಾಯ್ದೊಳೊಡೆಯು ಜಪವಾಯ್ತು ಜನಜನಿತ ॥ ಭೂರಿಚಿಂತಾತುರವಿರಾಟನು । ಮಾರಿಯೋ ಸೈರಂಧ್ರಿಯೋ ಯಿಾ ನಾರಿಯಿರಬೇಡೆಂದು ತನ್ನಯರಸಿಗೆ ನೇಮಿಸಿದ ॥೧೦೬॥ ಅಳಲು ಕೈಮಿಗಲಾವಿರಾಟನ । ಲಲನೆ ಸೈರಂಧ್ರಿಯನು ಕರೆಸಿದ । ಳೆಲೆಮಹಾತುಮೆ ತಾಯೆ ನಿಮಗಂಜುವೆವು ಶರಣೆನುತ ॥ ಹೊಳಲೊಳಿದ್ದೊಡೆ ಭೀತಿ ಘನ ನೀ । ವೊಲಿದಠಾನಿಗೆ ಬಿಜಯಮಾಡುವು । ದುಳುಹಬೇಹುದು ತಮ್ಮನೆನಲಿಂತೆಂದಳಿಂದುಮುಖಿ ॥೧೦೭॥ ಎಮ್ಮದೇನಪರಾಧದೇವಿಯೆ । ನಿಮ್ಮ ತಮ್ಮನು ತಪ್ಪಿನಡೆದೊಡೆ । ಯೆಮ್ಮ ರಮಣರು ಸೈರಿಸದೆ ಸೀಳಿವರು ದುರ್ಜನರ ॥ ನಿಮ್ಮ ಪಾಪೋಲ್ಕೈಸಿ ಮುಳ್ಳಿದು । ನಿಮ್ಮ ಕೆಡಿಸುವರಲ್ಲ ಧೂರ್ತರು । ತಮ್ಮ ಪಾತದಲಿ ತಾನೆ ಕೆಟ್ಟರು ನೀತಿಬಾಹಿರರು॥೧೦೮॥ ತಾವು ತಮ್ಮಿಂದಳಿದರದು ಸಾ । ಕಾವು ನಿಮಗಂಜುವೆವು ನಿಮ್ಮಲಿ । ಯಾವುದೂ ತಪ್ಪಿಲ್ಲ ನೀವಿಲ್ಲಿರಲು ಬೇಡೆನಲು॥ ನಾವು ಮುನ್ನಿಹರಲ್ಲ ನಿಮ್ಮಯ । ಸೇವೆಯಲಿ ಹದಿಮೂರುದಿವಸವು । ನೀವು ನೋಕಿದೊಡಿರದೆ ಮಾಣೆವು ದೇವಿ ಚಿತ್ತೈಸು ॥೧೦೯॥ ಅಳುಕದಿರಿ ಹದಿಮೂರುದಿವಸವ । ಕಳಿದ ಬಳಿಕೆಮಗೆಲ್ಲ ಲೇಸಹುದು । ದೆಳಿವು ಹೋದರು ದುಷ್ಕರಾದವರಿನ್ನು ಭಯಬೇಡ॥ ಕಲಹದವರಾವಲ್ಲೆನುತ ನಿಜ । ನಿಳಯವನು ಸಾರಿದಳು ದುರುಪದಿ । ಗಳಿಗೆ ಗಳಿಗೆಗೆ ಕೀಚಕನ ವೃತ್ತಾಂತ ಪಸರಿಸಿತು ॥೧೧೦॥

ಅಂತು ಸಂಧಿ ೪ ಕ್ಕೆ ಪದ ೨೬೮ ಕ್ಕಂ ಮಂಗಳಮಸ್ತು.



## ಐದನೆಯ ಸಂಧಿ.

**ಸೂಚನೆ || ವಿಗ್ರಹಕೆ ಸಮತಳಿಸಿ ಕುರುಕುಲ | ದಗ್ರಣಿಯ ಮುಂಕೊಂಡು ದಕ್ಷಿಣ | ಗೋಗ್ರಹಣದಲಿ ಭೀಮ ಹಿಡಿದನು ಕಲಿಸುಶರ್ಮಕನ ||**

||ಪದ|| ಕೇಳು ಜನಮೇಜಯಧರಿತ್ರೀ | ಪಾಲ ಕೌರವದೂತರವನಿಯ | ಮೇಲೆ ತೊಳಲುತಲರಸಿ ಕಾಣದೆ ಪಾಂಡುನಂದನರ || ಹೋಲುಪಿಕೆಯಿಂದಿಡಿಯಲಾರದೆ | ಕಾಲ ಸವೆಯಲು ನಾಲ್ಕುದಿಕ್ಕಿನ | ಮೂಲೆಯವರ್ಗಿತಂದು ಬಿನ್ನವಿಸಿದರು ಕುರುಪತಿಗೆ ||೧|| ವಿತಳದೊಳು ಹೊಕ್ಕಿರಲಿಯಮರಾ | ವತಿಯೊಳಗೆ ಮೇಣಿರಲಿ ನಮ್ಮಾ | ಕ್ಷಿತಿಯೊಳಗೆ ಸುಳುಹಿಲ್ಲ ನೃಪಕುಂತೀಕುಮಾರಕರ || ಮತಿಯ ಹಬ್ಬುಗೆಯಿಂದ ನಾನಾ | ಗತಿಯೊಳಗೆ ಹೊಕ್ಕರಸಿದೆವು ಕುರು | ಪತಿಯೆ ಕೇಳ್ನಿರ್ನಾಮರಾದರು ನಿನ್ನವೈರಿಗಳು ||೨|| ಎನಲು ನಸುನಗುತರಸ ಮನದಲಿ | ತನಗೆ ಹಗೆಯಿಲ್ಲೆಂದದೂತರ | ಮನವೊಲಿದು ಮನ್ನಿಸಿದ ನಾಲ್ಕುಕಡೆಯ ವಾರ್ತೆಗಳ || ತನತನಗೆ ಮಂತ್ರಿಗಳು ಬೆಸಗೊಳ | ಲಿನಿತುದೂತರೊಳೊಬ್ಬಕೀಚಕ | ಹನನವನು ವಿಸ್ತರಿಸಿದನು ಕುರುರಾಯನಿದಿರಿನಲಿ ||೩|| ಬಂದುವಾರ್ತೆಯಲಾತ್ರಿಗರ್ತಾ | ನಂದಕರವಿದು ಜೀಯ ಕೀಚಕ | ವೃಂದವನು ಗಂಧರ್ವರಿರುಳೈತಂದು ಖಾತಿಯಲಿ || ಕೊಂದು ಹೋದರು ರಾವಣನ ವಿಧಿ | ಯಿಂದು ಕೀಚಕಗಾಯಿತೆನೆ ಕೇ | ಳ್ದೊಂದುನಿಮಿಷಮಹೀಶ ಮೋನವ ಹಿಡಿದು ಬೆರಗಾದ ||೪|| ಹೇಳುಹೇಳಿನ್ನೊಮ್ಮೆ ಮತ್ಸ್ಯನ | ತೋಳು ಮುರಿದುದೆ ಸುಭಟರೊಳು ಕ | ಟ್ಟಾಳುಕೀಚಕ ಮಡಿದನೇ ಗಂಧರ್ವರಿರಿದವರೇ || ಮೇಲಣವರಿಗೆ ಮರ್ತ್ಯರಿಗೆ ಕೈ | ಕಾಲುಮೆಟ್ಟಿನತೋಟಿಯೇತಕೆ | ಹೋಲದೋ ಹುಸಿ ಹೋಗೆನುತ ಮುಖದಿರುಹಿದನು ಭೂಪ ||೫|| ಅಹುದು ಜೀಯವಧರಿಸು ದಿವಿಜರ | ಮಹಿಳೆಯೋಲೈಸಿದಳು ಮತ್ಸ್ಯನ | ಮಹಿಳೆಯನು ಬಳಿಕಾಕೆಯೋಲಗದಲ್ಲಿ ಸತಿಯಿರಲು || ಕುಹಕಿ ಕಂಡಳುಪಿದೊಡೆ ನಾಟ್ಯದ | ಗೃಹವ ಸೂಚನೆಗೊಟ್ಟು ನಿಮಿಷಕೆ | ರಹವ ಮಾಡಿದರವರು ಸವರಿದರಖಿಳಕೀಚಕರ ||೬|| ಅವನಿಪತಿ ಮೂಗಿನಲಿ ಕರಪ | ಲ್ಲವವನಿಟ್ಟನು ತಲೆಯ ತೂಗಿದ | ನವಳು ದುರುಪದಿ ಖಳರ ಕೊಂದವ ಭೀಮಗಂಧರ್ವ || ದಿವಿಜಸತಿ ಯೆತ್ತಲು ವಿರಾಟನ | ಭವನದೋಲಗವೆತ್ತಲದು ಪಾಂ | ಡವರ ಕೃತ್ರಿಮತಂತ್ರ ಮರೆಯಿರಿಗಾರದವರೆಂದ ||೭|| ಪವಮಳವ ಕದ್ದೋಡುವನಿಲನ | ಹರಿವಹಜ್ಜೆಯ ಹತ್ತುವೊಡೆಮಧು | ಕರನೆ ಬಲ್ಲುದು ಜೀಯ ಬಲ್ಲಿರಿ ನಿಮ್ಮವರ ಪರಿಯ || ಹರೆದಮಾತಿನ ಹದನು ಬಳಿಕಾ | ಚರರಿಗಿದು ಗೋಚರಿಸುವುದೆ ಯೆಂ | ದರಸನನು ಕೊಂಡಾಡಿದರು ಮಂತ್ರಿಗಳು ತಮತಮಗೆ ||೮|| ಪ್ರೌಢಿಯಲ್ಲಿದು ಕೇಳಿಬಲ್ಲೆವು | ರೂಢಿಯಲಿ ಸಮಬಲರು ಭೀಮ ಸ | ಗಾಢದಲಿ ಬಲಭದ್ರಕೀಚಕಶಲ್ಯರೆಂಬವರು || ಗೂಢರನು ಗರುವಾಯಿಗೆಡಿಸಿಯೆ | ಗಾಢಿಕೆಯ ನರೆ ಮೆರೆಯಬೇಕೆನೆ | ರೂಢಿ ಸಮತಳಿಸಿತ್ತು ಸೇನೆಯ ನೆರೆಹಬೇಕೆಂದ ||೯|| ಕರೆಸಿದನು ಗಾಂಗೇಯ ಗರುಡಿಯ | ಗುರುವನಶ್ವತ್ಥಾಮಸೃಂಜಯ | ವರಕೃಪಾಚಾರಿಯ್ಯನಸ್ಯೆಂಧವಸೂರ್ಯನಂದನನ || ಬರಿಸಿದನು ತೆಂಕಣದವಿಗುತಟ | ದರಸುಗಳದೆಸೆಯಿಂದ ಬೇಹಿನ | ಚರರುಬಂದರು ಕೇಳಿರೈ ಹೊಸವಾರ್ತೆಯನು ಯೆಂದ ||೧೦|| ಭೀಮ ಕೀಚಕ ಶಲ್ಯನೀಬಲ | ರಾಮನೆಂಬೀನಾಲುವರು ಸಂ |

ಗ್ರಾಮದೊಳು ಸರಿ ಖಚರರೆಂಬುದು ಬೈಲಿನಪವಾದ ॥ ಘೀಮಸಾಗಲುಬೇಕು ಕೀಚಕ । ಕಾಮುಕನು ದುರುಪಟುಗೆಯುಳುಪಿದ । ತಾಮಸನ ಹಿಡಿದೊರಸಿದವನೆಂದನು ಸುಯೋಧನನು ॥೧೧॥ ಮಾತು ಹೋಲುವೆಯಹುದು ನುಡಿದುದು । ನೀತಿ ಧರ್ಮಜನಿದ್ದದೇಶ । ವ್ರಾತದೊಳು ಬರನಿಲ್ಲ ಸಮೆಯುವು ಬೆಳೆದ ಬೆಳಸುಗಳು ॥ ಬೀತಬನವಲ್ಲಿಲ್ಲ ಹುಸಿ ಕೊಲೆ । ಪಾತಕಾದಿಗಳಿಲ್ಲ ಸೊಂಪಿನ । ಸೂತಸವಸಿರಿಯೆಂದು ನುಡಿದನು ರಾಯ ಗಾಂಗೇಯ ॥೧೨॥ ಎಲ್ಲಿ ಲಕ್ಷ್ಮಿಯಬೀಡು ಧರಣಿಯೊ । ಳೆಲ್ಲಿ ಸೊಂಪಿನ ನಾಡು ನಗರದೊ । ಳೆಲ್ಲಿ ವಿಭವದ ಕಡಲು ಶೈತ್ಯದ ಸಾರಸೌರಂಭ ॥ ಎಲ್ಲಿ ನೆಲಸಿಹುವಲ್ಲಿ ಪಾಂಡವ । ರಿಲ್ಲ ದಿರಲನ್ನವರ ನಲೆಗಾ । ಬಲ್ಲಿ ಸಂಶಯವಿಲ್ಲವೆಂದವನು ಭೀಷ್ಮ ನಸುನಗುತ ॥೧೩॥ ಅತ್ತ ಹಿಮಗಿರಿ ಮೇರೆ ಭಾವಿಸ । ಲಿತ್ತ ಮೂರುಸಮುದ್ರಗಡಿಯಿಂ । ದತ್ತ ನಾನಾದೇಶವೆಂಬಿವು ಬರದಬೇಗೆಯಲಿ॥ ಹೊತ್ತಿ ಹೊಗೆದವು ಮಧ್ಯದೇಶದ । ಲುತ್ತಮದ ಸಿರಿ ಫಲದಬೆಳಸುಗ । ಳೊತ್ತೆಯಿದು ಪಾಂಡವರ ಚಾವಡಿಯೆಂದನಾದ್ರೋಣ ॥೧೪॥ ಅವಧಿ ತುಂಬಿದಮುನ್ನಲೀ ಪಾಂ । ಡವರ ಕಾಣಿಸಿಕೊಂಬ ಮತ್ತಂ । ತವರು ಸತ್ಯಕೆ ನಡೆಯಬೇಹುದು ಮುನ್ನಿನಂದದಲಿ ॥ ಅವರ ನೆಲೆಗಾಣಿಸುವ ಮಂತ್ರದ । ಹವಣನರುಪುವೆನೆಂದು ರಪಿಸುತ । ನವನಿಪಗೆ ನಸುನಗುತ ನುಡಿದನು ರಾಜಕಾಲಯವ ॥೧೫॥ ರಾಜಮಂದಿರದೊಳಗೆ ನೀತಿಗ । ಳೋಜಯಿಲ್ಲದಸಚಿವರಿಂ ನಿ । ರ್ವ್ಯಾಜದಲಿ ಕೇಡಹುದು ತಪ್ಪದು ಲೋಕವಾರ್ತೆಯಿದು ॥ ಗಾಜು ಕೀರ್ವಣಿಸಿದೊಡೆ ರಜತದ । ರಾಜ ಭೂಷಣವಹುದೆ ಕರ್ಣನ । ಬೀಜಮಂತ್ರಗಳಿಂದ ಕೇಡಹುದೆಂದನಾಭೀಷ್ಮ ॥೧೬॥ ಅವರು ಸತ್ಯಕೆ ನಡೆವರಲ್ಲದೆ । ಬವರಕಂಜುವರಲ್ಲ ಪಾಂಡವ । ರವಧಿ ಬೀಳ್ಕೊಳಬಂದುದ್ಯ ನೀ ಸಮಯದೊಳು ಕರಸಿ॥ ಅವರ ಧರಣಿಯನವರಿಗಿತ್ತೊಡೆ । ನಿಮ್ಮಗನಿಷ್ಟತೆ ಯಿಲ್ಲ ಕೇಳೆಲೆ । ಯುವನಿಪತಿಯೆಂದೆನುತ ನುಡಿದನು ಮತ್ತೆ ಗಾಂಗೇಯ ॥೧೭॥ ನನ್ನಿ ನಿಮ್ಮಯ ನುಡಿಯ ಕೈಕೊಂ । ಡನ್ನ ಭೂಮಿಯನೀಯೆನಯ್ಯನ । ಬನ್ನಣೆಯ ಮಾತಿನ್ನು ಕೊಳ್ಳದು ಸಾಕು ಸಂಧಿಯನು ॥ ಮನ್ನಿಸುತ ಮರುಳಾದನೀನಿ । ಪ್ಪನ್ನತೆಯ ಬೀಳ್ಕೊಂಡಪಾಂಡವ । ಗುನ್ನಿಗಳ ಗರುವಾಯಮಾಡುವಿರೆಂದು ಖಳನುಡಿದ ॥೧೮॥ ಅರಿವಿರಾಟನ ಪುರಕ ಹಾಯಿದು । ತುರುಸೆರೆಯ ತೆಗೆಸುವೆವು ಪಾಂಡವ । ರಿರಲು ಧರ್ಮದ ಮೇರೆ ಮರ್ಯಾದೆಗಳ ಬಲ್ಲವರು ॥ ಅರವರಿಸದಂಗೈಸುವರು ನಾ । ವಂದುಕೊಂಬವು ಬಳಿಕ ವನದಲಿ । ವರುಷಹದಿಮೂರಕ್ಕೆ ಕೊಡುವೆವು ಮತ್ತೆ ವೀಳೆಯವ ॥೧೯॥ ಬಳ್ಳಿತಿದು ನಿರ್ದೋಷನಿರ್ಣಯ । ವೆಲ್ಲರಭಿಮತವಹುದು ರಿಪುಗಳ । ಖುಲ್ಲವಿದ್ಯೆಯ ನರಿವುಪಾಯಕೆ ಬೇರೆ ತಾವಿಲ್ಲ ॥ ಅಲ್ಲಿ ಪಾಂಡವರಿಹರು ಸಂಶಯ । ವಿಲ್ಲ ದೇಶದ ಸೊಂಪುಸಿರಿಮು । ತ್ತೆಲ್ಲಿಯೂಹಿರದಿಲ್ಲ ನಿಶ್ಚಯವೆಂದನಾಕರ್ಣ ॥೨೦॥ ಗುರುವಿನಭಿಮತವಹೊಡಕೃಪ ಮೊಗ । ದಿರುಹದಿದ್ದೊಡಭೀಷ್ಮಮನದಲಿ । ಮುರಿಯದಿರ್ದೊಡೆ ಗುರುಕುಮಾರನ ಮತಕ ಸೇರುವೊಡೆ ॥ ವರಶಕುನಿಯಹುದೆಂದೊಡಾಸೋ । ದರರು ತಪ್ಪಲ್ಲೆಂದರಾದೊಡೆ । ಅರಸ ನೆಗಳದ ಮಂತ್ರವೆಂದು ಸುಶರ್ಮ ಹೊಗಳಿದನು ॥೨೧॥ ಮತವಹುದು ತಪ್ಪಲ್ಲ ಪಾಂಡವ । ಗತಿಯನರಿವೊಡೆ ಮಾರ್ಗವಿದು ಸ । ಮ್ಮತವು ನಿರ್ಮಳನೀತಿಕಾರರ ಮನಕೆ ಮತವಹುದು ॥ ಅತಿಗಳಿತವಾಯ್ತವಧಿದಿವಸ । ಸ್ಥಿತಿಯೊಳೈದಾರಾಗೆ ಬಳಿಕೀ । ಕ್ಷಿತಿಗೆ ಪಾಂಡವರುತ್ತರಾಯಿಗಳೆಂದನಾಭೀಷ್ಮ ॥೨೨॥ ಪರಿಗಣಿಸಿ ನೋಡಿದೊಡೆ ಮಾಡಿದ

ಕಳಿಕೆಯೇಕನೆ ನೂಕಿದುದು ಕುರುಸೇನೆ ದಟ್ಟೈಸಿ ॥೩೪॥ ಎರಡುಮೊಗವಾಗಿ ತೆಂಕಲು । ಹರಿದು ತುರುಗಳ ತಡೆಯಿ ನಾವು । ತ್ತರದಲಾನುವೆವನುತ ನೃಪತಿ ತ್ರಿಗರ್ತನಸು [illegible] ॥ ಮುಂಯೊಡಮ ಪಟನಾರುಸಾವಿರ । ವರಮಹಾರಥರೊಗ್ಗಿಸಲಿ ದು । ರ್ಧರ ಸುಶರ್ಮನು ಧಾಳಿಯಿಟ್ಟನು ತೆಂಕದೆಸೆಗಾಗ ॥೩೫॥ ಅಸಿತಪಕ್ಷಾಷ್ಟಮಿಯು ದಿನ ಸಂ । ಧಿಸಿದರಾಳೆದ್ದುದು ವಿರಾಟನ । ಪಶುಸಮೂಹವ ಮುತ್ತಿದರು ಗೋಪಾಲಕರ ಕೆಡಹಿ ॥ ಹೊಸಮುಖಕೆ ಸೀವರಿಸಿದವು ದೆಸೆದೆ । ಸೆಗೆ ಹಿಂಡುಗಳೊಡೆದು ಹಾಯ್ದವು । ಮುಸುಗಿತಂಭಾರವದ ಕಳಕಳವಾಯ್ತು ನಿಮಿಷದಲಿ ॥೩೬॥ ಆಳು ಸುತ್ತಲು ಕಟ್ಟಿ ತುರುಗಳ । ಕೋಳ ಹಿಡಿದರು ಬೊಬ್ಬಿರಿದು ಗೋ । ಪಾಲರಾಂತೊಡೆ ಕಾದಿದರು ಕಟಿಖಿಡಮಯವಾಗಿ ॥ ಮೇಲೆ ಮೇಲೈತಪ್ಪಹೆಬ್ಬಲ । ದಾಳುಕುದುರೆಯ ಕಂಡು ನೂಕದು । ಕಾಳಗವು ತಮಗೆನುತ ತಿರುಗಿತು ಗೋವರಳಿದವರು ॥೩೭॥ ಮುಸುಪಕಂಬಳಿ ಕೊಂಬು ಕಲ್ಲಿಯ । ಬಿಸುಟು ಗಾಯಿಟ ಗೋವಳರು ಹೊ । ತ್ತುಸುವ ಕೊರಳಲಿ ಹಿಡಿದು ನಾಲಗೆಯೊಣಗಿ ಢಗೆಹೊಯ್ದು ॥ ವಿಷಮರಣಭೀತಿಯಲಿ ಕಂದಿದ । ಮುಸುಡ ತೊದಳನ ನುಡಿಯ ಮರಣದೆ । ದೆಸೆಯ ಕೈಸನ್ನೆಗಳ ಕಾತರರೈದಿದರು ಪುರವ ॥೩೮॥ ಬಸಿವನೆತ್ತರ ಗೋವರರಸಂ । ಗುಸುರಲಾರದೆ ಘೂಪ್ಪನಡೆಗಡ । [illegible] ಕೇಳಿದರು ಕೆಲರು ಕಲಬಲರು ತಮ್ಮ ಸಂತೈಸಿ ॥ ಅಸಮಬಲವದು ಜೀಯ ಗೋವರ । ಕುಸುರಿದರರುವತ್ತುಸಾವಿರ । ಪಶುಸಮೂಹವ ಹಿಡಿದರೆಂದರು ಮತ್ಸ್ಯಭೂಪತಿಗೆ ॥೩೯॥ ಕೇಳಿ ಬಿಸುಸುಯ್ದನು ವಿರಾಟನೃ । ಪಾಲನಿಂದಿನಲಳಿದನೇ ಕ । ಟ್ಟಾಳುಕೀಚಕನನುತ ನೋಡಿದನಂದು ಕೆಲಬಲನ ॥ ಆಳು ಗಿಜಿಬಿಜಿಸುತ್ತ ಹಾಯಿಕು । ವಿಳೆಯವನಿಂದನಗೆ ತನಗೆಂ । ದೋಲಗದೊಳಬ್ಬರಣೆ ಮಸಗಿತು ಕದಡಿದಾಸ್ಥಾನ ॥೪೦॥ ಕೇಳಿ ಸಿಡಿಲೇಳಿಗಯಿಲೆದ್ದ ನೃ । ಪಾಲಕರು ಗಜಬಜಿಸಿ ರಭಸದೊ । ಳೋಲಗವ ಹೊರವಂಟು ನಡೆದರು ಭಾಷೆಗಳ ಕೊಡುತ ॥ ಆಳುಗೈದುವ ಕೊಂಡು ಕರಿಘಟೆ । ಮೇಳವಿಸಿ ಹಲ್ಲಣಿಸ ತೇಜಿಗ । ಳೋಳಿಯಲಿ ರಥ ಹೂಡಿ ಕವಿದುದು ಮತ್ಸ್ಯಪರಿವಾರ ॥೪೧॥ ಇವರು ತಮ್ಮೊಳಗೆಂದವರದುನ । ಮ್ಮವರ ಬಲ ತುರುಗೊಂಡವರು ಕೌ । ರವರು ನಮ್ಮ ಪರೀಕ್ಷೆಗೋಸುಗ ಬಂದಹದನಹುದು ॥ ಅವಧಿ ತೀರದಮುನ್ನ ಕಾಣಿಸ । ನಮಗೆ ಬಳಿಕಾರಣ್ಯವಾಸವ । ನಿವರು ಕರುಣಿಸಬಂದರೆಂದನು ಧರ್ಮನಂದನನು ॥೪೨॥ ಅವಧಿ ತೀರಲಿ ಮೇಣುಮಾಣಲಿ । ಯವಗೆ ತುರುಹುಯ್ಯಲಸು ಕೇಳಿದು । ಕವಿಯಲುದಕವ ಕೊಂಡೊಡಾಪಾತಕವನಣಿಸುವೊಡೆ ॥ ಎವಗೆ ನೂಕದು ಸಾಕದಂತಿರ । ಲವರ ಕೂಡಿದು ನಡೆದು ವರಗೋ । ನಿವಹವನು ಮರಳಿಚುವೆನೆಂದನು ಧರ್ಮನಂದನನು ॥೪೩॥ ಎಂದು ತಮ್ಮಂದಿರುಸಹಿತ ಯಮ । ನಂದನನು ಕಲಹಾವಲೋಕಾ । ನಂದಪರಿಕರಲುಳಿತಕೋಮಲಕಾಯನನುವಾಗಿ ॥ ಬಂದ ಮತ್ಸ್ಯನ ಸೇಮದಲಿ ನಡೆ । ತಂದು ರಥವೇರಿದನು ಪಾರ್ಥನ । ಹಿಂದಕುಳಿಸಿ ವಿರಾಟನೊಡನವನೀಶ ಹೊರವಂಟ ॥೪೪॥ ವರವಿರಾಟಸಹೋದರರು ಸಾ । ವಿರದಸಂಖ್ಯೆಯರಾಜಪುತ್ರರು । ಕೊರಳಪದಕದ ಕಾಲತೊಡರಿನ ಮಣಿಯಮೌಳಿಗಳ ॥ ಪರಿಮಳದಕತ್ತುರಿಯತಿಲಕದ । ಹೊರೆದಗಂಧದ ತೋರಮುಡುಹಿನ । ಕರದಖಂಡೆಯರಥಟರೈದಿದರಾನಕುದುರೆಯಲಿ ॥೪೫॥ ತೂಳುವರೆಗಳ ಲಗ್ಗೆಯಲಿ ಕೆಂ । ಧೂಳಿ ಮಸಗಿ ವಿರಾಟಭೂಪತಿ । ಯಾಳು ಕವಿತರೆ ಕಂಡು ಸ್ಯೆರಿಸಿ ತುರುವ ಹಿಂದಿಕ್ಕ ॥ ಕಾಳಗವ

ಕೊಟ್ಟರು ಛಡಾಳಿಸಿ । ಸೂಳವಿಸಿ ನಿಸ್ಸಾಳ ದಿಕ್ಕಿನ । ಮೂಲೆ ಬಿರಿಯೆ ವಿರಾಟಬಲ ಹಳಚಿದುದು ಪ
ರಬಲವ ॥೪೬॥ ಘಡಪರಾಟನ ಚುಕ್ಕಿಗಳಿರವ । ಗಡಿಸದಿರಿ ಸಾಯದಿರಿ ಬಿರುದರೆ । ಹೆಡತಲೆಯ ಹಾ
ವಾದ ಕೀಚಕನಳಿದನಿನ್ನೇನು ॥ ಮಿಡುಕಿ ಕಟಕವ ಹೊಕ್ಕು ನರಿ ಹಲು । ಬಿಡುವವೊಲು ವೈರಾಟ ಕೆ
ಟ್ಟನು । ಕಡೆಗೆನುತ ಕೈವೊಯ್ದು ನಕ್ಕುದು ಕೂಡೆ ಕುರುಸೇನೆ ॥೪೭॥ ಕುದುರೆ ಹೊಕ್ಕವು ದಂತಿಘ
ಟೆ ತೂ । ಳಿದವು ರಥವಾಜಿಗಳು ಸೇನೆಯ । ಹೊದರ ಹೊಯ್ದವು ಕೂಡೆ ಕಾಲಾಳಿರಿದು ಕಾದಿದರು ॥
ಕದಡಿತಾದಳ ವೈರಿಯೊಳೊಕ್ಕವು । ಬಿದಿರಿದೆಲುಗಳು ಮುರಿದು ನೆತ್ತಿಯ । ಮಿದುಳು ಸುರಿದುದು ನೆ
ತ್ತರುಬ್ಬರಿಸಿದುದು ನೆರೆ ಮುಸುಗಿ ॥೪೮॥ ದಿಂಡುಗೆಡೆದವು ದಂತಿಘಟೆ ಶತ । ಖಂಡವಾದವು ತುರುಗದ
ಳ ಮುಂ । ಕೊಂಡಿಬಿದು ಕಾಲಾಳು ಕೆಡೆದವು ತಾರುಥಟ್ಟಿನಲಿ ॥ ತುಂಡಿಸಿತು ರಥವಾಜಿ ಮಿದುಳಿನ ।
ಜೊಂಡಿನಲಿ ರಣಭೂಮಿ ರಕುತದ । ಗುಂಡಿಗೆಗಳೊಗ್ಗಾಯ್ತು ಶಾಕಿನಿಡಾಕಿನೀಜನಕೆ ॥೪೯॥ ಚೂಳಿ
ಕೆಯ ಬಲ ಮುರಿದು ದೊರೆಗಳ । ಮೇಲೆ ಬಿದ್ದುದು ಬವರ ಬಳಿಕ । ಚ್ಚಾಳುತನದಲಿ ಹೊಕ್ಕು ದು
ವ್ವಾಳಿಸುವ ನಿಜರಥದ ॥ ಮೇಲುದಳ ಕವಿದುದು ಮಹಾರಥ । ರೇಳುಸಾವಿರ ಮತ್ಸ್ಯಭೂಪನ । ಕಾ
ಳಗಕೆ ತೆಗೆದರು ತ್ರಿಗರ್ತರ ಸೇನೆ ಮುರಿವಡೆದು ॥೫೦॥ ಬಲ ಮುರಿದು ಬರುತಿರಲು ಖಾತಿಯ । ತ
ಳೆದು ವೀರಸುಶರ್ಮನಂಬಿನ । ಮಳೆಯ ಕರೆಯುತ ರಿಪುವಿರಾಟನ ರಥವ ತರುಬಿದನು ॥ ಎಲವೊ ಘಡ
ಘಡ ಮತ್ಸ್ಯ ಹುಲುಮಂ । ಡಳಿಕ ನಿನಗೇಕಾಳುತನವೆಂ । ದುಳಿದು ಕೈಕೊಂಡೆಚ್ಚು ಕಾದಿದನಾವಿರಾ
ಟನಲಿ ॥೫೧॥ ಸರಳು ತೀರಲು ಕಿತ್ತು ಸುರಗಿಯ । ತಿರುಹಿ ಹೊಯ್ದಾಡಿದರು ಮುರಿದೊಡೆ । ಪರಿ
ಘದಲಿ ಕಾದಿದರು ಹೊಕ್ಕರು ಹಲಗೆಖಡ್ಗದಲಿ ॥ ಬೆರಸಿ ತಿವಿದಾಡಿದರು ಮತ್ಸ್ಯನ । ಭರವ ಹೊಗಳು
ತ ಕಲಿಸುಶರ್ಮಕ । ನುರವಣಿಸಿದನು ಗಾಯವಡೆದು ವಿರಾಟನನು ಹಿಡಿದ ॥೫೨॥ ಸಿಕ್ಕಿದನು ದೊ
ರೆಯೊಪ್ಪುಗೊಟ್ಟರು । ಚುಕ್ಕಿಗಳು ಕೀಚಕನ ನೆಳಲಿರೆ । ಸಿಕ್ಕಲೀಸುವನೇ ವಿರಾಟನನೆನುತ ಬಲ ಬೆದರೆ
ಉಕ್ಕಿದಾತನ ಹೆಗಲು ಬೇವುದು । ಮಕ್ಕಳಾಟಿಕೆಯಾಯ್ತು ತಾ ಕೈಯಿಕ್ಕಲೇಕೆಂದೊರಲಿದರು ಮತ್ಸ್ಯ
ನ ಸಹೋದರರು ॥ ಬಲವನಾಯಕವಾಯ್ತು ಮತ್ಸ್ಯನ । ಕುಲಕೆ ಬಂದುದು ಕೇಡು ಸುಮ್ಮನೆ । ನಿ
ಲುವುದನುಚಿತ ಭೀಮ ಬಿಡಿಸು ವಿರಾಟಭೂಪತಿಯ ॥ ಗೆಲವು ಪರಬಲಕಾಯಿತೆನೆ ರಿಪು । ಕುಲದವಾ
ನಲನಣ್ಣನಾಜ್ಞೆಯ । ತಲೆಯೊಳಾಂತನು ಮುಂದಣಾಲದಮರವ ನೋಡಿದನು ॥೫೪॥ ಹೆಮ್ಮರವನಿದ
ಕಿತ್ತು ವೈರಿಸು । ಶರ್ಮಕನನೊರಸುವೆನು ಬವರದೊ । ಳೊಮ್ಮೆಯರಿಮೋಹರವನರೆವೆನು ಜೀಯ
ಚಿತ್ತೈಸು ॥ ತಮ್ಮ ಸೈರಿಸು ಮರನ ಮುರಿಯದಿ । ರೆಮ್ಮಮಾತನು ಕೇಳು ಹೊಲ್ಲಹ । ವೆಮ್ಮ ತಾ
ಗದೆ ಮಾಣದೆಂದನು ಧರ್ಮನಂದನನು ॥೫೫॥ ಮರನ ಮುರಿದೊಡೆ ನಮ್ಮನರಿವನು । ಕುರುಕುಲಾ
ಗ್ರಣಿ ಯಿದಮಾನುಷ । ಪರಮಸಾಹಸ ಭೀಮಸೇನಂಗಲ್ಲದಿಲ್ಲೆಂದು ॥ ಅರಿಕೆಯಹುದೆನೆ ಭೀಮನಂ
ದನು । ಕುರುಕುಲಾಗ್ರಣಿಸಹಿತಿದಲ್ಲವ । ನೊರಸಿ ಕಳೆದೊಡೆ ಬಳಿಕ ನಮಗಾರುಂಟು ಮುನಿವವರು
॥೫೬॥ ಉಗ್ರಕರ್ಮವ ನೆನೆಯಬೇಡ । ವ್ಯಗ್ರದಲಿ ಸಾಧಿಸಿದೆವವಧಿಸ । ಮಗ್ರವನು ಸಾಕಿನ್ನು ಬಿಡಿಸು
ವಿರಾಟಭೂಪತಿಯ ॥ ವಿಗ್ರಹವ ಜಯಿಸೆನಲು ಕುರುಕುಲ । ದಗ್ರಿಯನು ಬೀಳ್ಕೊಂಡು ವಿಲಯಮ ।
**ಹೋಗ್ರಸನ್ನಿಭ ನೆರೆದನಿಭಹಯರಥಪದಾತಿಗಳ ॥೫೭॥ ಸರಳ ಸಾರದಲೆಂಟುಸಾವಿರ । ತುರೆಗವ**

ನು ಸೀಳಿದನು ಕೊಂದನು । ಕಂಘುಟಿಯುಸ್ತನೂರವುುಂದನು ತೇರುಸಾವಿರವ ॥ ಅತಿಪದಾತಿಯುನೊಂದುಲಕ್ಕವ । ನೊರಸಿದನು ಬೆಂಬತ್ತಿ ಬಿಡುಬಿಡು । ದೊರೆವಿರಾಟನನೆನುತ ಹಿಡಿದನು ಕಲಿಸುಶರ್ಮಕನ ॥೨೮॥ ಪಲಲ ಮೆಚ್ಚಿದೆನ್ಯೆ ಮಹಾದೇ । ವಲಘುಸಾಹಸಿ ತನ್ನ ಬಿಡಿಸಿದೆ । ಸಿಲುಕಿದನು ಹಗೆಯೆನುತ ಬೋಳೈಸಿದವಿರಾಟನೃಪ॥ ಬಳಿಕ ಯುಮುನಂದನನು ಬಿಡಿಸಿದ । ಕಲಿಸುಶರ್ಮನ ನಿರುಳುಗಾಳಗದೊಳಗೆ ತುರು ಮರಳಿದವು ಗೆಲಿದರು ಪಾಂಡುನಂದನರು ॥೨೯॥ ನೀವೆಯರಸುಗಳಿನ್ನು ನಿಮ್ಮಯ । ಸೇವಯುಲಿ ತಾನಿಹೆನು ಸಾಲ್ವಂ । ದಾವದೇಶದ ವೀರರೋಕಂಕಾಬಿಭಟರೆನುತ ॥ ಆವಿರಾಟನು ನುಡಿಯೆ ಸನ್ಮಾ । ನಾವಲಂಬಕೆ ತುಷ್ಟನಾದನು । ಭಾವಿಪೊಡೆ ಧರೆ ನಮ್ಮದೆಂದನು ಧರ್ಮನಂದನನು ॥೩೦॥ ಮಾನಭಂಗದಮೇಲೆ ಕೌರವ । ಸೇನೆ ಸರಿಯೆ ಸುಶರ್ಮ ಕಡುದುಂ । ಮಾನದಿಂದಲೆ ಮುಸುಕಿನಲಿ ತಿರುಗಿದನು ಪಾಳೆಯಕೆ ॥ ಭಾನು ಭುವನದ ನಯನ ನಿಸ್ರಾ । ಮೌನಮುದ್ರೆಯನೊಡೆದನುತ್ತರ । ಘೋಸುನಿಗ್ರಹಣವನು ಮಾಡಿದನಂದು ಕುರುರಾಯ ॥ ... ॥೩೧॥

ಅಂತು ಸಂಧಿ ೫ಕ್ಕೆ ಪದ ೩೦೯ಕ್ಕಂ ಮಂಗಳಮಸ್ತು.

---

## ಆರನೆಯ ಸಂಧಿ.

ಸೂಚನೆ ॥ ವೈರಿಭಟಸಂವರ್ತನೂತನ । ಭೈರವನು ಕಲಿಪಾರ್ಥಸಮರೋ । ದಾರಸಾರಥಿಯಾದನಂದು ವಿರಾಟನಂದನಗೆ

॥ಪದ॥ ಕೇಳು ಜನಮೇಜಯ ಸುಯೋಧನ । ನಾಳು ಮುತ್ತಿತು ತುರುಗಳನು ಮೇ । ಲಾಳು ಕವಿದುದು ಭೀಷ್ಮಕರ್ಣದ್ರೋಣಮೊದಲಾಗಿ ॥ ಕೋಲಸೂಟಿಯ ನುವಳೆಗೆ ಗೋ । ಪಾಲ ಪಡೆ ಮುಗ್ಗಿದುದು ಗೋವರ । ಕಾಲ ಹೊಯ್ದರು ಕರ್ಣದುಶ್ಶಾಸನಜಯದ್ರಥರು ॥೧॥ ರಾಯಚಮೂಣಿಯ ಚಾತುರಂಗವ । ನಾಯಕರು ಮೇಳವಿಸಿ ಸಮರೋ । ಪಾಯದಲಿ ಹಿಂಟಕ್ಕಿ ಕವಿದರು ಕೋಡ ಕೈಯವರು॥ ಸಾಯಲಲಸಪ ಗೋವರನು ಕೈ । ಗಾಯದೆಸುತವೆ ಸೆರೆಯ ಕೊಂಡರು । ಮಾಯವಾಯಿತು ಹರಿಬಕಾರರ ಸೇನೆ ರಣದೊಳಗೆ ॥೨॥ ಮೇಲುದಳಕಿದಿರಾಗಿ ಬರೆ ಹಂ । ಗಾಳಗದೊಳೊಡೆಮುರಿದು ಗೋವರು। ಧೂಳಿಗೋಟೆಯಕೊಂಡರಮರರರಾಜಧಾನಿಗಳ ॥ ಸಾಲರಿದು ಕೆಟ್ಟೋಡಿದರು ಗೋ । ಪಾಲನೊಬ್ಬನ ಹಿಡಿದು ಮೂಗಿನ । ಮೇಲೆ ಸುಣ್ಣವ ಬರೆದು ಬಿಟ್ಟರು ಹಗೆಯ ಪಟ್ಟಣಕೆ ॥೩॥ಗರುವಗೋವರು ಹುಯ್ಯಲಿಗೆ ಹರೆ । ಹುಂದು ಕೆಡೆದರು ರಾಯಮೋಹರ । ತೆರಳಿ ತುರುಗಳ ಹಿಡಿದು ಹಿಂದಿಕ್ಕಿದರು ಕಾಳಗಕೆ ॥ ಬಿರುದರನು ಬರಹೇಳು ಹೋಗೆನೆ । ಕರದ ಬಿಲ್ಲನು ಬಿಸುಟು ಬದುಕಿದ । ತಿರವ ತಡಹುತ ಗೋಪನೊಬ್ಬನು ಪುರಕೆ ಹರಿತಂದ ॥೪॥ ಗಣನೆಯಿಲ್ಲದು ಮತ್ತೆ ಮೇಲಂ । ಕಣದ ಭಾರಣೆ ನೂಕಿತೆಲವೋ । ರಣದವಾರ್ತೆಯದೇನೆನುತ ಜನವೆಲ್ಲ ಗಜಬಜಿಸೆ ॥ ರಣವು ಕಿರಿದಲ್ಲೆನುತ ಥಗೆ ಸಂ । ದಣಿಸಲವನೈತಂದು ಮೇಳದ । ಗಣಿಕೆಯರ ಮಧ್ಯದಲಿ ಮೆರೆದಿರೆ ಕಂಡನುತ್ತರನ ॥೫॥ ಬೆಗಡು ಮುಸುಕಿದಮುಖದ ಭೀತಿಯ । ಥಗೆಯಹೊಯ್ಲಿನ ಹೃದಯತುದಿನಾ । ಲಗೆಯ ತೊದಳಿನ ನುಡಿಯ ಬೆರಗಿನ ಬರತತಾಳಿಗೆಯ ॥

ಅಗಿವಹುಯ್ಯಲುಗಾರ ಬಹಳೋ । ಲಗಕೆ ಬಂದನು ನೃಪವಿರಾಟನ । ಮಗನ ಕಾಲಿಂಗೆರಗಿದನು ದೂಲದನು ಕಳಕಳವ ॥೬॥ ಏಳು ಮನ್ನೆಯಗಂಡನಾಗು ನೃ । ಪಾಲ ಕೌರವರಾಯ ತುರುಗಳ । ಕೋಳ ಹಿಡಿದನು ಸೇನೆ ಬಂದುದು ಧರಣಿಯಗಲದಲಿ ॥ ಧಾಳಿ ಬರುತಿದೆ ಕರೆಸಿಕೋ ನಿ । ನ್ನಾಳು ಕುದುರೆಯ ರಾಣಿವಾಸದ । ಗೂಳೆಯವ ತೆಗೆಸೆಂದು ನುಡಿದನು ಬಿನ್ನಹದ ಬಿರುಬ ॥೭॥ ಏನೆಲವೊ ತುದಿಮೂಗಿನಲಿ ಬಿಳು । ಪೇನು ಧಗೆಹೊಯ್ದೇಕೆ ಬಂದೆಯ । ದೇನು ನಿನ್ನಿನರಣಿವನೆಯ್ಯನು ಗೆಲಿದುದೇನಾಯ್ತು ॥ ಏನುಭಯ ಬೇಡೆನ್ನು ಕಲಹನಿ । ಧಾನವಾರ್ತೆಯನೆನಲು ಕೌರವ । ಸೇನೆ ಬಂದುದು ತುರುವ ಹಿಡಿದರು ಬಡಗದಿಕ್ಕಿನಲಿ ॥೮॥ ರಾಯ ತಾನೈತಂದನಾತನ । ನಾಯಕರು ಗುರುಸುತನು ಗುರುಗಾಂ । ಗೇಯ ಶಕುನಿವಿಕರ್ಣ ಕರ್ಣ ಜಯದ್ರಥಾದಿಗಳು ॥ ಜೀಯ ಬಿನ್ನಹ ದಳದ ತೆರಳಿಕೆ । ತಾಯಿಮಳಲಂಬುಧಿಗೆ ಮೋಹರ । ದಾಯತವ ನಾನೆತ್ತ ಬಲ್ಲೆನು ಹೊಕ್ಕು ಹೊಗಳುವೊಡೆ ॥೯॥ ಎತ್ತ ದುವ್ವಾಳಿಸುವೊಡಾಲಿಗ । ಳತ್ತಲಾನೆಯ ಘಟ್ಟ ಕಾಲಾ । ಳೊತ್ತರದ ರಥವಾಜಿ ರೂಢಿಯರಾಯರಾವುತರು ॥ ಸುತ್ತ ಬಳಸಿಹುದೆತ್ತ ಮನ ಹು । ವೆತ್ತ ಮೋಹರವಲ್ಲದನ್ಯವ । ಮತ್ತೆ ಕಾಣೆನು ಜೀಯ ಹದನಿದು ವೈರಿವಾಹಿನಿಯ ॥೧೦॥ ಒಪ್ಪಿದರೊ ಪಡಿನೆಲನನವನಿಯ । ದಪ್ಪಿಯೋ ಮೋಹಣೆನಲು ಝಲ್ಲರಿ । ಯೊಡ್ಡು ತಳಿತುದು ಚಮರಸಿಗುರಿಗಳ ಪತಾಕೆಯಲಿ ॥ ಅಡ್ಡಹಾಯ್ದಿನಕಿರಣಪವನನ । ಖಡ್ಡತನ ನಗೆಯಾಯ್ತು ಕೌರವ । ನೊಡ್ಡ ನಭಿವರ್ಣಿಸುವೊಡರಿಯೆನು ಜೀಯ ಕೇಳೆಂದ ॥೧೧॥ ಒಳಗೆ ನೀ ಕಾದುವೊಡೆ ದುರ್ಗವ । ಬಲಿಸು ಬವರವ ಹಿಂದುಗಳೆಯದೆ । ನಿಲುವಮನ ನಿನಗೀಗಲುಂಟೇ ನಡೆಯಬೇಕೆನಲು ॥ ಕೆಲಬಲನ ನೋಡಿದನು ಪಿಸಾಸೆಯ । ನಲುಗಿದನು ತನ್ನಿದಿರ ಮೇಳದ । ಲಲನೆಯರ ಮೊಗನೋಡುತುತ್ತರ ಬಿರುದ ಕೆದರಿದನು ॥೧೨॥ ನೂಕು ಕುನ್ನಿಯ ನಾಹವದ ಭೀ । ತಾಕುಳನು ತಾನೀಗ ಹೆಂಡಿರ । ಸಾಕಿ ಬದುಕುವಲೌಲ್ಯತೆಯಲೊಟ್ಟೈಸಿ ಬಂದನಗೆ ॥ ಕಾಕಬಳಸುವನಿವನು ತಾನು । ದ್ರೇಕಿಸಿಯೆ ಸಮರದಲಿ ನಿಲಲು ಪಿ । ನಾಕಧರನಿಗೆ ನೂಕದೆಂದನು ಸತಿಯರಿದಿರಿನಲಿ ॥೧೩॥ ಎನಿತುಬಲ ಘನವಾದೊಡೇನದು । ನಿನಗೆ ಗಹನವೆ ಜೀಯ ಜಗದಲಿ । ದಿನಪನಿದಿರಲಿ ಧಿಟ್ಟತನವೇ ತಮದ ಗಾವಳಿಗೆ ॥ ಜಿನುಗುರಾಯರ ಬಿಂಕ ಗೋವರ । ಮೊನಗೆ ಮರದೊಡೆ ಸಾಕು ನಿಂದಿರು । ಜನಪ ತೋರಿಸು ಕೈಗುಣವ ಕೌರವನ ಥಟ್ಟಿನಲಿ ॥೧೪॥ ಎಂದೊಡುಬ್ಬರಿಸಿದನು ತಾ ಕಲಿ । ಯೆಂದು ಬಗೆದನು ಪಿಸಾಸೆಯನು ಬೆರಳಿಂದ ತಿರುಹುತ ಮುಗುಳುನಗೆ ಹರುಷದಲಿ ಮೈಮರೆದ ॥ ಸಂದಣಿಸಿ ರೋಮಾಂಚ ಕೆಲಬಲ । ದಿಂದುಮುಖಿಯರ ನೋಡಿದನು ನಲ । ವಿಂದ ನುಡಿದನು ತನ್ನ ಪೌರುಷತನದ ಪರಿಣತಯ ॥೧೫॥ ಅಹುದಹುದು ತಪ್ಪೇನು ಜೂಜಿನ । ಕುಹಕದಲಿ ಪಾಂಡವರ ಸೋಲಿಸಿ । ಮಹಿಯಕೊಂಡಂತೆನ್ನ ಕೆಣಕಿದನೇ ಸುಯೋಧನನು ॥ ಸಹಸದಿಂದವೆ ತುರುವ ಮರಳಿಚಿ । ತಹೆನು ಬಳಿಕಾ ಕೌರವನ ನಿ । ರ್ವಹಿಸಲೀವೆನೆ ಸೂರೆಗೊಂಬೆನು ಹಸ್ತಿನಾಪುರವ ॥೧೬॥ ಹಿಡಿದು ರಾಜ್ಯವ ಕೊಂಡುಹೆಂಗುಸ । ಬಡಿದು ಪಾಂಡವರಾಯರನು ಹೊರ । ವಡಿಸಿ ಕೊಬ್ಬಿದ ಭುಜಬಲವನೆನ್ನೊಡನೆ ತೋರಿದನೆ ॥ ಬಡಯುಧಿಷ್ಠಿರನೆಂದು ಬಗೆದನೆ । ಕಡುಗಿದೊಡೆ ಕೌರವನ ಕೀರ್ತಿಯ । ತೊಡೆವೆನರಿಯನಲಾ ಎನುತ ಸುಕುಮಾರ ಖತಿಗೊಂಡ ॥೧೭॥ ತನಗೆ ಬಡಪಾಂಡವರ ತೆವರಿದ । ಮನದಗರ್ವದ ಕೊಬ್ಬು ಕಾಲನ । ಮನೆಯನಾಳಿಪುದಲ್ಲದಿದ್ದೊಡೆ ತನ್ನ ವೈ

ವನು ॥ ನೆನೆದು ದುರ್ಯೋಧನನು ತಾಮೇ । ದಿನಿಯನಾಳ್ವನೆ ಹಾ ಮಹಾದೇ । ವೆನುತಲುತ್ತರ
ಬಿರುದ ನುಡಿದನು ಹೆಂಗಳಿದಿರಿನಲಿ ॥ ೧೮ ॥ ಜವನ ಮೀಸೆಯಮುರಿದನೋ ಭೈ । ರವನ
ದಾಡೆಯನಲುಗಿದನೊ ಮೃ । ತ್ಯುವಿನ ಮೇಲುದ ಸೆಳೆದನೋ ಕೇಸರಿಯ ಕೆಣಕಿದನೋ ॥ ಬ
ವರವನು ತೊಡಗಿದನಲಾ ಕೌ । ರವನಕಟ ಮರುಳಾದನೆಂದಾ । ಯುವತಿಯರ ಮೊಗನೋಡು
ತುತ್ತರ ಬಿರುದ ಕೆದರಿದನು ॥ ಆರೊಡನೆ ಕಾದುವೆನು ಕೆಲಬರು । ಹಾರುವರು ಕೆಲರಂತಕನ
ನೆರೆ । ಯೂರವರು ಕೆಲರಥಮಕುಲದಲಿ ಸಂದು ಬಂದವರು ॥ ವೀರರೆಂಬವರವರು ಮೇಲಿನ್ನಾರ ಹೆ
ಸರುಂಟವರೊಳೆಂದು ಕು । ಮಾರ ನೆಣಗೊಬ್ಬಿನಲಿ ನುಡಿದನು ಹೆಂಗಳಿದಿರಿನಲಿ ॥೨೦॥ ಪೊಡವಿಪತಿಗ
ಳು ಬಂದು ತುರುಗಳ । ಹಿಡಿವರೇ ಲೋಕದಲಿ ಯಧಮರ । ಬಡಮನದ ಮನ್ನೆಯರ ಮೃಸಿರಿ ಕೌರ
ವನೊಳಾಯ್ತು ॥ ಕಡೆಗೆ ದುರಿಯಶವುಳಿವುದಲ್ಲದೆ । ಬಿಡುವೆನೇ ಗೋಧನವನೆನ್ನೊಳು । ತೊಡಕಿ ಬದು
ಕುವನಾವನೆಂದನು ಖಂಡೆಯವ ಜಡಿದು ॥೨೧॥ ಖಳನ ಮುರಿವೆನು ಹಸ್ತಿನಾಪುರ । ದೊಳಗೆ ಠಾಣಾಂ
ತರವನಿಕ್ಕುವೆ । ತೊಲಗಿಸುವೆ ಕೌರವನ ಸೇನೆಯ ಧೂಳಿಪಟಮಾಡಿ ॥ ಗೆಲವ ತಹೆನೆಂದುತ್ತರನು
ಕೋ । ಮಲೆಯರಿದಿರಲಿ ಬಾಯ್ಗೆ ಬಂದುದ । ಗಳಹುತಿದ್ದನು ಬೇಕುಬೇಡೆಂಬವರ ನಾಕಾಣೆ ॥೨೨॥
ಅರಿಯನೇ ಗಾಂಗೇಯನನು ತಾ । ನರಿಯದವನೇ ದ್ರೋಣ ಕುಲದಲಿ । ಕೊರತೆಯೆನಿಸುವಕರ್ಣನೆಂ
ಬವನೆನಗೆ ಸಮಬಲನೆ ॥ ಬರಿಯಬಯಲಾಡಂಬರದಿ ಬರಿ । ತುರುವ ಹಿಡಿದೊಡೆ ತನ್ನ ಹೆಂಡಿರ । ಸೆ
ರೆಯ ತಾರದೆ ಮಾಣ್ಬೆನೆಂದನು ನಾರಿಯರ ಮುಂದೆ ॥೨೩॥ ನುಡಿದು ಫಲವೇನಿನ್ನು ಸಾರಥಿ । ಮಡಿದ
ನಿನ್ನಿನ ಬವರದಲಿ ತಾ । ಮುಡುಹನಾದೆನು ಶಿವಶಿವಾ ಇಂದೆನ್ನ ಕೈಮನಕೆ ॥ ಗಡಣಿಸುವಸಾರಥಿಯ
ನೊಬ್ಬನ । ಪಡೆದೆನಾದೊಡೆ ಕೌರವೇಂದ್ರನ । ಪಡೆಗೆ ಹಬ್ಬವ ಮಾಡುವೆನು ತೋರುವೆನು ಕೈಗುಣವ
॥೨೪॥ ಸಾರಥಿಯ ಶಿವ ಕೊಟ್ಟನಾದೊಡೆ। ಮಾರಿಗುಬ್ಬಸವಾಗದಂತಕ। ನೂರುತುಂಬದೆ ದೊಳ್ಳು ನೂ
ಕದೆ ರಣಪಿಶಾಚರಿಗೆ ॥ ದೋರೆಗರುಳಲಿ ದಾನವಿಯರೊಡ । ಲೇರು ಪತ್ತದೆ ಹಬ್ಬವಾಗದೆ । ಭೂರಿ
ಭೇತಾಳರಿಗೆ ಹೋದುದೆ ಬರಿದೆ ರಣವೆಂದ ॥೨೫॥ ಕೇಳಿದನು ಕಲಿಪಾರ್ಥನೀತನ। ಬಾಲಭಾಷೆಗಳೆಲ್ಲವನು
ಪಾಂ । ಚಾಲೆಗೆಕ್ಕಟಿ ನುಡಿದನಾವಿನ್ನಿಹುದು ಮತವಲ್ಲ ॥ ಕಾಲ ಸವೆದುದು ನಮ್ಮ ರಾಜ್ಯದ। ಮೇಲೆ ನಿ
ಲುಕಲುಬೇಕು ಕೌರವ । ರಾಳು ನವಗೋಸುಗವೆ ಬಂದುದು ಕಾಂತೆ ಕೇಳೆಂದ ॥೨೬॥ ನರನ ಸಾರಥಿ
ಯೆಂದು ನೀನು । ತ್ತರೆಗೆ ಸೂಚಿಸಿ ತನ್ನನೀಗಳೆ । ಕರಸೆನಲು ಕೈಕೊಂಡು ದುರುಪದಿ ಬಂದಳೊಲವಿ
ನಲಿ ॥ ತರುಣಿ ಕೇಳರ್ಜುನನ ಸಾರಥಿ । ವರಬೃಹನ್ನಳೆ ಕಾಂಡವಾಗ್ನಿಯ । ಪೊರೆದನಿವ ತಾನೆಂದು ಸ
ತಿಯುತ್ತರೆಗೆ ಹೇಳಿದಳು ॥೨೭॥ ಕೇಳಿ ಹರುಷಿತೆಯಾದಳುತ್ತರೆ । ಯೋಲಗಕೆ ಬಂದಣ್ಣನಂಘ್ರಿಗೆ ।
ಲೋಲಲೋಚನೆಯೆರಗಿ ಕೈಮುಗಿದೆಂದಳೀಹದನ ॥ ಕೇಳಿದೆನು ಸಾರಥಿಯ ನೆಲೆಯನು । ಕಾಳಗಕೆ ನ
ಡೆಯಣ್ಣದೇವನ್ನ । ಪಾಲಕರ ಜಯಿಸೆಂದೊಡುತ್ತರ ನಗುತ ಬೆಸಗೊಂಡ ॥೨೮॥ ತಂಗಿ ಹೇಳೌ ತಾ
ಯೆ ನಿನಗೀ । ಸಂಗತಿಯ ಕೇಳಿದರಾವನ । ನಂಗನೆಯರುಳ್ಳವನೆ ಸಾರಥಿತನದ ಕೈಮೆಯಲಿ॥ ಮಂ
ಗಳವಲೇ ಬಳಿಕ ರಣದೊಳ । ಭಂಗನಹೆ ನಿಸ್ಸಾಣ ತಪ್ಪದು । ತುಂಗವಿಕ್ರಮತನವನುಳುಹಿದೆ ಹೇಳು
ಹೇಳೆಂದ ॥೨೯॥ ಎಂದಳೀಸ್ತ್ರೀಯಿಂದ್ರಸುರಪನ । ನಂದನನ ನುಡುವಂದು ಪಾರ್ಥನ । ಮುಂದೆ ಸಾರ

ಥಿಯಾದಗಡ ನಾವರಿಯೆವೀಹದನ ॥ ಹಿಂದುಗಳೆಯದೆ ಕರೆಸು ನಮ್ಮ ಬೃ । ಹಂದಳೆಯನೆನೆ ನಗುತ ಲೇಸಾ । ಯ್ತೆಂದು ಪರಮೋತ್ಸಾಹದಲಿ ಸೈರಂಧ್ರಿಗಿಂತೆಂದ॥೩೦॥ಸಾರಥಿಯ ಕೊಟ್ಟೆನ್ನನುಳುಹಿದೆ ವಾರಿಜಾನನೆ ಲೇಸುಮಾಡಿದೆ । ಕೌರವನ ತನಿಗರುಳ ಬಗೆವೆನು ತಡವ ಮಾಡಿಸದೆ ॥ ನಾರಿ ನೀನೇ ಹೋಗಿ ಪಾರ್ಥನ । ಸಾರಥಿಯ ತಾ ಯೆನಲು ನಮ್ಮನು । ವೀರ ಬಗೆಯನು ನಿಮ್ಮ ತಂಗಿಯು ಕಳುಹಿ ಕರೆಸುವುದು ॥೩೧॥ ತಾಯೆ ನೀನೇ ಹೋಗಿ ಸೂತನ । ತಾ ಯೆನಲು ಕೈಕೊಂಡು ಕಮಲದ । ಳಾಯತಾಕ್ಷಿ ಮನೋಭವನ ಮರಿಯಾನೆಯಂದದಲಿ ॥ ರಾಯಕುವರಿ ನವಾಯುಗತಿಗರು । ನಾಯಿಯಲಿ ಬರೆ ವಿಟರ ಕರಣದ । ಲಾಯ ತೊಡಕಿತು ತೆಗೆದಳಂಗನೆ ಜನರ ಕಣ್ಮನವ ॥೩೨॥ಐದುಶರವೇಕೊಂದುಬಾಣವಿದೈದದೇಇನ್ನುಮುಮ ಕಾಮನ । ಕೈದುಗಾರತನಕ್ಕೆ ಕೋಡದೆ ಕೊಂಕದಿಪರಾರು ॥ ಬಯ್ದುಕೊಳ್ಳನೆ ಮುನಿ ಮನವನಡ । ಹಾಯ್ದು ಹಿಡಿಯನೆ ಹಿರಿಯರನು ವಿಧಿ । ಕೊಯ್ದು ನಕಟಾ ಕೊರಳನೆಂದುದು ನಗುತ ವಿಟನಿಕರ ॥೩೩॥ ಅರಳುಗಂಗಳ ಬೆಳಗುಹೊಯ್ದು । ಬ್ಬರಿಸೆ ಚಿತ್ತದ ತಿಮಿರ ಹೆಚ್ಚಿತು । ಕುರುಳಕಾಳಿಕೆಯಿಂದ ಮುಖ ಬಿಳುಪೇರೆ ವಿಟಜನದ ॥ ಸರಸತರಲಾವಣ್ಯರಸದಿಂ । ದುರಿ ಮಸಗೆ ಜನಹೃದಯದಲಿ ಮೈ । ಪರಿಮಳದ ಪಸರದಲಿ ಪದ್ಮಿನಿ ಬಂದಳೊಲವಿನಲಿ ॥೩೪॥ ನಡೆ ನಡೆಯ ಬಂಧಿಸಿತು ನೋಟವ । ನುಡಿಗಿಸಿತು ಕುಡಿನೋಟ ಸಖಿಯರ । ನುಡಿ ಸಮೇಳದ ಮಾತುಮುನಿಬರ ಮಾತ ಮಾಣಿಸಿತು ॥ ಕೆಡಸಿತಧರದ ರಾಗ ರಾಗವ । ಬಡತನವ ಹೆಚ್ಚಿಸಿತು ನಡುವಿನ। ಬಡತನವು ವಿಟಜನಕೆನಲು ನಡೆತಂದಳಿಂದುಮುಖಿ ॥೩೫॥ ಕುರುಳ ತಿದ್ದುತ ಮೊಲೆಗೆ ಮೇಲುದ । ಸರವುತೇಕಾವಳಿಯ ಮೆಲ್ಲನೆ । ತಿರುಹಿಹಾಯ್ಕುತ ಬಿಡುಮುಡಿಯನೆಡಗೈಯೊಳೊಂದಿಸುತ ॥ ವರನಿತಂಬಿನಿಯ ನಿರಿಯರಭಸದ । ಚರಣದಂದುಗೆದನಿಯ ಗಮನದ । ಭರದಿ ಕಿರುಬೆಮರಿಡುತೆ ನಡೆತರುತಿರ್ದಳಿಂದುಮುಖಿ ॥೩೬॥ ಬರವ ಕಂಡನು ಪಾರ್ಥನೇನು । ತ್ತರೆ ಕುಮಾರಿ ಕಠೋರಗತಿಯಲಿ । ಬರವು ಭಾರಿಯಕಾರಿಯವ ಸೂಚಿಸುವುದೆನೆ ನಗುತ ॥ ಬರವು ಬೇರಿಲ್ಲೆನ್ನಮಾತನು । ಹುರುಳುಗೆಡಿಸದೆ ಸಲಿಸುವೊಡೆ ನಿಮು। ಗರುಹಿದಪೆನೆನೆ ಮಿಾರಬಲ್ಲೆನೆ ಮಗಳೆ ಹೇಳೆಂದ ॥ ಪುರಕೆ ಹಾಯ್ದರು ಹಸ್ತಿನಾಪುರ । ಪರಸುಗಳು ಹೊಲನೊಳಗೆ ಶತಸಾ । ವಿರದ ತುರುಗಳ ಹಿಡಿದರೆಳೆದರು ಗೋವಪಡೆ ಕಾದಿ ॥ ಮರಳಿಚುವೊಡೆಮ್ಮಣ್ಣದೇವನ। ಧುರಕೆ ಸಾರಥಿಯಿಲ್ಲ ನೀವಾ । ನರನ ಸಾರಥಿಯೆಂದು ಕೇಳಿದೆವೆಂದಳಿಂದುಮುಖಿ ॥೩೭॥ ಇನ್ನು ನೀವೇ ಬಲ್ಲಿರೆನೆ ನಡೆ । ನಿನ್ನಮಾತನು ಮಿಾರಬಲ್ಲೆನೆ । ಮುನ್ನ ಸಾರಥಿಯಹೆನು ನೋಡುವೆನೆನುತ ವಹಿಲದಲಿ॥ ಬೆನ್ನಲಬಲೆಯನೈದಲೊಸಂ । ಪನ್ನಬಲನೋಲಗಕೆ ಬರೆ ಪರು । ಷೋನ್ನತಿಯ ಉತ್ತರಕುಮಾರನು ಕರೆದು ಮನ್ನಿಸಿದ ॥೩೮॥ ಎಲೆಬೃಹನ್ನಳೆ ತೆತ್ತುದೆನಗ । ಗ್ಗಳೆಯರೊಳು ವಿಗ್ರಹವು ಸಾರಥಿ । ಯಳಿದನೆನ್ನವ ನೀನು ಸಾರಥಿಯಾಗಿ ಸಮರದಲಿ ॥ ಉಳುಹಬೇಹುದು ನೀ ಸಮರ್ಥನು । ಫಲುಗುಣನ ಸಾರಥಿಯಲೈ ನೀ । ನೊಲಿದು ಮೆಚ್ಚಲು ಕಾದಿ ತೋರುವೆನಹಿತಸೇನೆಯಲಿ ॥೪೦॥ ಭರತವಿದ್ಯಾವಿಷಯದಲಿ ಪರಿ । ಚರಿಯತನ ನವಗಲ್ಲದೀಸಂ । ಗರದಸಾರಥಿತನವ ಮರೆದೆವು ಹಲವುಕಾಲದಲಿ ॥ಅತಿಭಟರು ಭೀಷ್ಮಾದಿಗಳು ನಿಲ । ಲರಿದು ಸಾರಥಿತನದ ಕ್ರಮನ । ಬರಡರಿಗೆ ದೊರಕೊಂಬುದೇ ರಣಸೂರೆಯಲ್ಲೆಂದ ॥೪೧॥ ಆನಿರಲು ಭೀಷ್ಮಾದಿಗಳು ನಿನ । ಗೇನಮಾಡಲುಬಲ್ಲರಳುಕದೆ। ನೀನು ನಿಲು ಸಾಕೊಂ

ದುನಿಮಿಷಕೆ ಗೆಲುವೆನವರುಗಳ ॥ ತಾನದಾರೆಂದರಿಯೆಲಾ ಗುರು । ಸೂನುಕರ್ಣದ್ರೋಣರೆಂಬವ । ರಾನರಿಯದವಲ್ಲ ಸಾರಥಿಯಾಗು ಸಾಕೆಂದ ॥೪೨॥ ವೀರನಹೆ ಬಳಿಕೇನು ರಾಜಕು । ಮಾರನಿರುವೊಡೆ ಹರೆಯವಲ್ಲಾ । ಸಾರಥಿತ್ವವ ಮಾಡಿ ನೋಡುವ ರಥವ ತರಸೆನಲು ॥ ವಾರುವದ ಮಂದಿರದಲಾಯಿದು । ಚಾರುತುರುಗಾವಳಿಯ ಬಿಗಿದನು । ತೇರ ಸಂವರಿಸಿದನು ರಥವೇರಿದನು ಕಲಿಪಾರ್ಥ ॥೪೩॥ ಮಂಗಳಾರತಿಯೆತ್ತಿದರು ನಿಖಿ । ಳಾಂಗನೆಯರುತ್ತರಗೆ ನಿಜಸ। ರ್ವಾಂಗಶೃಂಗಾರದಲಿ ಹೊಳೆಯುತ ಬಂದು ರಥವೇರಿ ॥ ಹೊಂಗೆಲಸಮಯಕವಚವನು ಪಾ । ರ್ಥಂಗೆ ಕೊಟ್ಟನು ಜೋಡುಸೀಸಕ । ದಂಗಿಗಳನಳವಡಿಸಿ ರಾಜಕುಮಾರನನುವಾದ ॥೪೪॥ ನರನು ತಲೆಕೆಳಗಾಗಿ ಕವಚವ । ಸರಿವುತಿರೆ ಘೊಳ್ಳೆಂದು ಕೈಹೊ । ಯ್ದು ರಸಿಯರು ನಗೆ ಸಾಚಿದಂತಿರೆ ಪಾರ್ಥ ತಲೆವಾಗಿ ॥ ತಿರುಗಿ ಮೇಲ್ಮುಖವಾಗಿ ತೊಡಲು । ತ್ತರೆ ಬಳಿಕ ನಸುನಗಲು ಸಾರಥಿ । ಯರಿಯ ತಪ್ಪೇನೆನುತಲುತ್ತರ ತಾನೆ ತೊಡಿಸಿದನು ॥೪೫॥ ಕವಚವನು ತೊಡಲರಿಯದವನೆ । ಹವಕೆ ಸಾರಥಿತನವ ಮಾಡುವ । ಹವಣು ತಾನೆಂತೆನುತಲಿದ್ದರು ನಿಖಿಲನಾರಿಯರು ॥ ಬವರವನು ನಮ್ಮಣ್ಣಗೆಲಿದಪ । ನವರ ಮಣಿಪರಿಧಾನವಾಭರ । ಣವನು ಸಾರಥಿ ಕೊಂಡುಬಾಯೆಂದಳು ಸರೋಜಮುಖಿ ॥೪೬॥ ನಸುನಗುತ ಕೈಕೊಂಡನರ್ಜುನ । ನೆಸಗಿದನು ರಥವನು ಸಮೀರನ । ಮಿಸುಕಲೀಯದೆ ಮುಂದೆ ಮಿಕ್ಕವು ವಿಗಡವಾಜಿಗಳು ॥ ಹೊಸಪರಿಯ ಸಾರಥಿಯಲಾ ನಮ । ಗೆಸದಳವು ಸಂಗಾತ ಬರಲೆಂ । ದುಸುರದೆಳಿದುದು ಹಿಂದೆ ಪುರದಲಿ ಚಾತುರಂಗಬಲ ॥೪೭॥ ಗತಿಗೆ ಕುಣಿದವು ನಾಸಿಕದ ಹುಂ । ಕೃತಿಯುಪವನನ ಹಳಿವಲುಳಿಯಲಿ । ಗತಿಯ ಸಂಚಿತಪಂಚಧಾರಾಪ್ರೌಢವಾಜಿಗಳು ॥ ವಿತತರಥಪದದಳಿತವಸುಧೋ । ತ್ಪತಿತಧೂಳೀಪಟಲಪರಿಚುಂ । ಬಿತದಿಶಾಮುಖನೈದಿದನು ಕುರುರಾಯ ಮೋಹರವ ॥೪೮॥

**ಅಂತು ಸಂಧಿ ೬ಕ್ಕೆ ಪದ ೩೭೭ಕ್ಕಂ ಮಂಗಳಮಸ್ತು.**



ಏಳನೆಯ ಸಂಧಿ.

**ಸೂಚನೆ॥ ಚಂಡರಿಪುಬಲವಿಲಯಹರನು | ದ್ದಂಡಬಲಶಸ್ತ್ರಾಸ್ತ್ರವನುಕೈ | ಗೊಂಡು ಸುರಪನ ಸೂನು ತಡೆದನು ವೈರಿಮೋಹರವ**

॥ ಪದ ॥ ಎಲೆಪರೀಕ್ಷಿತತನಯ ಕೇಳ್ನೃಪ । ತಿಲಕನತಿವೇಗದಲಿ ರಥವನು । ಕೊಳುಗುಳಕೆ ತರೆ ಕಂಡನುತ್ತರ ಮುಂದೆ ದೂರದಲಿ ॥ ತಳಿತಕುಂತದ ಬಾಯುಧಾರೆಯು । ಹೊಳವುಗಳ ಹೊದರೆದ್ದಸಿಂಧದ । ಸೆಳೆಯುಸೀಗುರಿಗಳಸುರಂಭದ ಸಕಲಮೋಹರವ ॥೧॥ ಕರಿಘಟಾವಳಿಯೊಡ್ಡುಗಲ್ಲಿನ । ತುರಗನಿಕರದ ತೆರೆಯ ತೇರಿನ । ಹೊರಳಿಗಳ ಸುಳಿಯಾತಪತ್ರದ ಬಹಳ ಬುದ್ಬುದದ ॥ ನರನಿಕಾಯದ ಜಲಚರೌಘದ । ತರದವಾದ್ಯಧ್ವನಿಯರವದು । ಬ್ಬರದೊಳಿದ್ದುದು ಬಹಳಬಲನಿಧಿಯಂತೆ ಕುರುಸೇನೆ ॥೨॥ ಜಡಿವಖಡ್ಗದ ಕಿಡಿಯ ಸೇನೆಯ । ಕಡುಹುಗಳ ಕೇಸುರಿಯ ಬಲದು । ಗ್ಗಡದ ರಭಸದ ರೌದ್ರರವಘಟಘಟಿತನಿಸ್ವನದ ॥ ಇಡಿದಧೂಳಿಯ ಧೂಮರಾಶಿಯ । ಪಡೆ

ವಿರಾಟನ ಮಗನ ಕಂಗಳಿ । ಗೊಡನೊಡನೆ ದಾವಾಗ್ನಿಯಂತಿರೆ ತೋರಿತಿದಿರಿನಲಿ ॥೩॥ ಪ್ರಳಯಮೇಘದ ಮಾತೃಕೆಯೊ ಕರಿ । ಕುಳವೊ ಸಿಡಿಲಿನ ಗರುಡಿಯೋ ಕಳ । ಕಳವೊ ಕಲ್ಪಾನಲನ ಧೂಮಾವಳಿಯೊ ಕೈದುಗಳೋ ॥ ನೆಲನದಡ್ಡಿಯ ಬೆಟ್ಟದಡವಿಯೊ । ತಳಿತತೆಕ್ಕೆಯವೋ ಜಗಂಗಳನಳಿವಜಲಧಿಯೊ ಸೇನೆಯೋ ನಾವರಿಯೆವಿದನೆಂದ ॥೪॥ ಕಾಲಕೂಟದ ತೊರೆಯೊ ಮಾರಿಯ । ಗೂಳೆಯವೊ ಮೃತ್ಯುವಿನ ಗಂಟಲ । ತಾಳಿಗೆಯೊ ಭೈರವನ ಥಟ್ಟೋ ಜವನಜಂಗುಳಿಯೋ ॥ ಕಾಲರುದ್ರನ ನೊಸಲ ನೆಪ್ಪಿ । ಜ್ವಾಲೆಯೋ ಕೌರವನ ಸೇನಾ । ಜಾಲವೋ ಶಿವಯೆನುತ ಹೆದರಿದನಂದು ಸುಕುಮಾರ ॥೫॥ ಕಡೆಗೆ ಹಾಯ್ದವು ಕಂಗಳೀಬಲ । ಗಡಲ ಮನಸೀಸಾಡಲಾರದು । ವೊಡಲುವಿಡಿದಿರದೇನ ಕಾಣಲುಬಾರದದದ್ಭುತವ ॥ ಪೊಡವಿಯಿದಾದುದೊ ಮೋಹರವನಿದ । ರೊಡನೆ ಕಾದುವನಾವನಾತನೆ । ಮೃಡನು ಶಿವ ಶಿವ ಕಾಟ ಗೆಲಿದೆವು ಬಲಕ ನಮೊಯೆಂದ ॥೬॥ ಹಸಿದಮಾರಿಯ ಮಂದೆಯಲಿ ಕುರಿ । ನುಸುಳಿದಂತಾದೆನು ಬೃಹನ್ನಳೆ । ಎಸಗದಿರು ತೇಜಿಗಳ ತಡೆ ಚಮ್ಮಟಿಕೆಯನು ಬಿಸುಡು ॥ ಮಿಸುಕಬಾರದು ಪ್ರಳಯಕಾಲನ । ಮುಸುಕನುಗಿವವನಾವು ಕೌರವ । ನಸಮಬಲನೈ ರಥವ ಮರಳಿಚು ಜಾಳಿಸುವೆನೆಂದ ॥೭॥ ಎಲೆಕುಮಾರಕ ಮೊದಲ ಚುಂಬನ । ದೊಳಗೆ ಹಲುಬಿದ್ದಂತೆ ಕಾಳಗ । ಬೆಳಸಲರಿಯದಮುನ್ನ ಹಿಡಿದೈ ಸಮರಭೀತಿಯನು ॥ ಅಳುಕಲಾಗದು ನಿಮ್ಮ ತಂದೆಯ । ಕುಲಕೆ ಕುಂದನುತಾರದಿರು ಮನ । ಗೆಲವಿನಲಿ ಕಾದೆನುತ ರಥವನು ಬೇಗ ಹರಿಸಿದನು ॥೮॥ ಸಾರಿ ಬರಬರಲವನ ತನು ಮಿಗೆ । ಭಾರಿಸಿತು ಮೈಮುರಿದು ರೋಮಾಪಿ । ಕಾರ ಘನಕಾಹೇರಿತವಯವ ನಡುಗಿ ಡೆಂಡಣಿಸಿ ॥ ಭೂರಿಭಯತಾಪದಲಿ ತಾಳಿಗೆ । ನೀರು ದೆಗೆದುದು ತುಟಿಯೊಣಗಿ ಸುಕು । ಮಾರ ಕಣ್ಣೆವೆ ಸೀಯೆ ಕರದಲಿ ಮುಚ್ಚಿದನು ಮುಖವ ॥೯॥ ಏಕೆ ಸಾರಥಿ ರಥವ ಮುಂದಕೆ । ನೂಕಿ ಗಂಟಲ ಕೊಯ್ವೆ ಸುಡುಸುಡು । ಕಾಕಲಾ ಕಣ್ಣೊಡೆಪವೇ ಕಾಸಾ ಮಹಾಬಲವ ॥ ನಾಕನಿಳಯರಿಗರಿದು ನಿನಗೆ ವಿ । ವೇಕವೆಳ್ಳನಿತಿಲ್ಲ ತೆಗೆತೆಗೆ । ಸಾಕು ವಾಘೆಯ ಮರಳಿ ಹಿಡಿ ತೇಜಿಗಳ ತಿರುಹೆಂದ ॥೧೦॥ ನುಡಿಯ ಕೇಳದೆ ಮುಂದೆ ಹತ್ತಂ । ಟಡಿಯನರ್ಜುನ ರಥವ ಹರಿಸಲು । ಹಿಡಿದಬಿಲ್ಲಂಬುಗಳು ಬಿದ್ದವು ಕೈಯ ನೆರೆ ತೆಗೆದು ॥ ಹಿಡಿ ಹಯವನಿರಿಗಾರಸಾರಥಿ । ನುಡಿವವರು ನಾವ್ಪಗೆಗಳೇ ನಿ । ನ್ನೊಡೆಯರೆಲ್ಲಾಸ್ವಾಮಿದುರುಹಿಕೆ ಲೇಸುಲೇಸೆಂದ ॥೧೧॥ ಎಂದೊಡರ್ಜುನ ನಗುತ ರಥವನು । ಮುಂದೆನಾಲ್ಕಂಟಡಿಯನೂಕಲು । ಕೊಂದನೀಸಾರಥಿಯೆನುತ ಸಂವರಿಸಿ ಮುಂಜೆರಗ ॥ ಬಂದು ಮೆಲ್ಲನೆ ರಥದ ಹಿಂದಕೆ । ನಿಂದು ಧುಮ್ಮಿಕ್ಕಿದನು ಬದುಕಿದೆ । ನೆಂದು ನಿಟ್ಟೋಟದಲಿ ಹಾಯ್ದನು ಬಿಟ್ಟಮಂಡೆಯಲಿ ॥೧೨॥ ನೋಡಿದನು ಕಲಿಪಾರ್ಥನೀಕೇ । ಡಾಡಿ ಕೆದರಿದಕೇಶದಲಿ ಕೆ । ಟ್ಟೋಡುತಿರಲೆಲೆಪಾಪಿ ಹಾಯ್ದನು ಹಿಡಿಯಬೇಕೆನುತ ॥ ಕೂಡೆ ಸೂಟಿಯೊಳಟ್ಟಲಿಳಿಯ । ಲ್ಲಾಡಲಹಿಪತಿ ಹೆದರಲಿತ್ತಲು ನೋಡಿ । ಕೌರವಸೇನೆ ಕೆಡೆದುದು ನಗೆಯಕಡಲೊಳಗೆ ॥೧೩॥ ಎಲೆಲೆ ಕಾದಲುಬಂದವೀರನ । ಬಲುಹ ನೋಡಾ ಶಿವಶಿವಾ ಬೆಂ । ಬಳಿಯಲಟ್ಟುವವೀರನಾವನೊ ಸುಭಟನಹನವನು ॥ ತಿಳಿಯಲರಿದಿವನಾವನೋ ವೆ । ಗ್ಗಳೆಯನಹನಾಕಾರದಲಿ ನೆರೆ । ಫಲುಗುಣನ ಹೋಲುವವನನುತ ಗಜಬಜಿಸಿತರಿಸೇನೆ ॥೧೪॥ ಈತಸಾರಥಿಯಳವಿಯಲಿ ಮಿಗು । ವಾತನುತ್ತರನರ್ಜುನಂಗೀ । ಸೂತತನವೆತ್ತಲು ನಪುಂಸಕವೇಷ ವೀಕ್ಷಿಸಲು ॥ ಈತನರ್ಜುನನಾಗ

ಲೆಪುರು । ಹೂತನಾಗಲಿ ರಾವುನಾಗಲಿ। ಅತ್ತೊಡರಿವೆನು ಬರಲಿ ಯೆಂದನು ಖಾತಿಯಲಿ ಕರ್ಣ॥೧೫॥ ಇತ್ತಲರ್ಜುನನುತ್ತರನ ಬೆಂಬತ್ತಿ ಬಂದನು ಹೋದೆಯಾದೊಡೆ । ಕಿತ್ತು ಬಿಸುಡುವೆ ನಿನ್ನ ತಲೆಯನು ನಿಲ್ಲುನಿಲ್ಲೆನುತ ॥ ಮೃತ್ಯುವೋ ಸಾರಥಿಯೊ ಪಾಪಿಯು । ನೆತ್ತಿಯಿಂದವೆ ಮಾಡಿಕೊಂಡೆನೆ । ನುತ್ತರಮ ರಳಿದ್ದು ನೋಡಿ ನಿಲ್ಲದೆ ಮತ್ತೆ ಸೈವರಿದ ॥೧೬॥ ಇಟ್ಟಣಿಸಿ ಸರ ನೂರು ಹಜ್ಜೆಯೊ । ಳಟ್ಟಿ ಹಿಡಿದನಿದೇನ ಮಾಡಿದೆ । ಹುಟ್ಟಿದೆಯೊ ಹಾದರಕೆ ಕ್ಷತ್ರಿಯಬೀಜವೋ ನೀನು ॥ ದಿಟ್ಟತನ ಮಿಗೆ ಹೆಂಗಳೆದಿರಲಿ । ಹೊಟ್ಟುಗುಟ್ಟಿದೆ ಹಗೆಗಳೆದಿರಲಿ।ಬಿಟ್ಟುಕೊಂಡೆ ದುರಾತ್ಮ ಮುರಿದೆ ವಿರಾಟನನ್ವಯವ॥೧೭॥ಹಲುಗಿರಿದು ಬಾಯೊಳಗೆ ಬೆರಳಿ।ಟ್ಟಳುಕಿ ತಲೆವಾಗಿದನು ಸಾರಥಿ। ಕಳುಹು ಕಳೆಯೆನ್ನ ನಿನ್ನ ಬಸುರಲಿ ಮರಳಿ ಬಂದವನು॥ಕೊಳುಗುಳದೊಳೀಯೊಡ್ಡಮುರಿವ।ಗ್ಗಳೆಯರುಂಟೇ ಲೋಗರಿಂದವೆ। ಕೊಲಿಸದಿರು ನೀ ಕುತ್ತಿಕೆಡಹು ಕಠಾರಿಯಿದೆಯೆಂದ॥೧೮॥ಮನನವಲೊಡಲೊಡೆವಂತೆ ನಗುತ।ರ್ಜುನನು ಗಜರಿಪ ಶಲ್ಯರೊ ಸಭೆಯಲಿ । ವನಜಮುಖಿಯರ ಮುಂದೆ ಸೊರಹಿದೆ ಬಾಯ್ಗೆ ಬಂದಂತೆ ॥ ಅನುವರದೊಳೀಸಾಯ್ತು ರಿಪುವಾ । ಹಿನಿಯನಿರಿಯದೆ ನಾಡ ನರಿಯವೊ । ಲೆಸಗೆ ನೀ ಹಲುಗಿರಿಯೆ ಬಿಡುವೆನೆ ಕಾದು ನಡೆಯೆಂದ ॥೧೯॥ ಹೇವ ಬೇಡಾ ವೀರರಿಪರ । ಜೀವಗಳ್ಳರ ಪಥವ ಹಿಡಿವರೆ । ಸಾವಿಗಂಜಿದವೇ ನಪುಂಸಕರೆಮ್ಮನೋಡೆನಲು ॥ ನೀವು ವೀರರು ನೆರೆ ನಪುಂಸಕ । ರಾವು ಸಾವವರಲ್ಲ ಲೋಕದ । ಜೀವಗಳ್ಳರಿಗಾವು ಗುರುಗಳು ಬಿಟ್ಟು ಕಳುಹೆಂದ ॥೨೦॥ ಹರುಕನ್ನೇ ನೀನೆಲವೊ ರಾಯರೊ । ಳುರುವನೃಪ ನಿಮ್ಮಯ್ಯ ನೀನಿಂ । ದಿರಿದು ಮೆರೆವವಸರವಲಾ ಜೌವನದ ಧುರಭರವು ॥ ಸರಿಗಳೆಯದಪಕೀರ್ತಿ ರವಿಶಶಿ । ಮುರಿದು ಬೀಳ್ವನ್ನಬರವೆಲೆ ನರ । ಗುರಿಯೆ ನಡೆ ಕಾಳಗಕೆನುತ ಹಿಡಿದೆಳೆದನುತ್ತರನ ॥೨೧॥ ಕೊಳುಗುಳದೊಳೋಡಿದೊಡೆಹಜ್ಜೆಗೆ । ಫಲ ಮಹಾಪಾತಕವು ಮುಂದಣಿ । ಗೊಲೆದು ಹಜ್ಜೆಯನಿಡಲು ಹಜ್ಜೆಯೊಳಶ್ವಮೇಧಫಲ ॥ ಅಳಿದನಾದೊಡೆ ದೇವಲೋಕದ । ಲಲನೆಯರು ತೊತ್ತಿರು ಸುರೇಂದ್ರನು । ನೆಲನನುಘ್ಘುಡಿಸುವನು ವೀರಸ್ವರ್ಗವಹುದೆಂದ ॥ ೨೨ ॥ ಧುರದಲೋಡಿದ ಪಾತಕವ ಭೂ । ಸುರರು ಕಳೆದಪರಶ್ವಮೇಧವ। ಧರಣಿಯೋಳ್ಪ್ರತ್ಯಕ್ಷವಾಗಿಯೆ ಮಾಡಬಹುದೆಮಗೆ ॥ ಸುರರ ಸತಿಯರು ಸೊಲ್ಲೆವೆಮಗೆ । ನ್ನರಮನೆಯ ನಾರಿಯರೆ ಸಾಕೆ । ಮ್ಮರಸುತನವೆಮಗಿಂದ್ರಪದವಿಯು ಬಿಟ್ಟು ಕಳುಹೆಂದ ॥೨೩॥ ಆಳೊಳೊಡ್ಡುಳ್ಳವನು ಭಾರಿಯ । ತೋಳುಗಳ ಹೊತ್ತವನು ಮನೆಯಲಿ ಸೂಳೆಯರ ಮುಂದೊದರು ಬಾಷ್ಪಳಗೆಡಹಿ ಓದೀಗ ॥ ಕೋಲನಿಕ್ಕದೆ ಗಾಯವಡೆಯದೆ । ಕಾಲುವೇಗವತೋರಿದೊಡೆ ನಿ । ನ್ನೋಲಗದೊಳೆಂತಕಟನಾಚದೆ ಕುಳ್ಳಿತಿಹೆಯೆಂದ ॥೨೪॥ ಕೆತ್ತುಕೊಂಡಾನಾಚಿಕೆಗೆ ನೆರೆ। ಕುತ್ತಿಕೊಳಬೇಕೆಂಬ ಗಾದೆಯ । ನೆತ್ತಿ ಹೊದ್ದಿಸಬೇಡ ನಾವಂಜುವೆವು ಕಾಳಗಕೆ।ಕತ್ತಿಗನು ನೀನಹಿತನಂತಿರೆ।ಮಿತ್ತುವಹರೇ ನಿನಗೆ ಬೇಡಿದ। ನಿತ್ತು ಸಲಹುವೆನೆನ್ನ ಕೊಲ್ಲದೆ ಬಿಟ್ಟುಕಳುಹೆಂದ॥೨೫॥ ಒಳಿತವನು ವಾರುವವ ಮುಕ್ತಾ । ವಳಿಯಲಂಕಾರವನು ರಥವನು । ಲಲನೆಯರ ನಾನೀಸಿಕೊಡುವೆನು ರಾಜಭವನದಲಿ ॥ ಎಲೆಬ್ಬ ಹನ್ನಳೆ ನಮ್ಮ ಬೊಪ್ಪನು । ಸಲಹಿದಕೆ ಕೈಯೊಡನೆ ತೋರುಗೆ । ಸಲುವೆನ ವಲಾನಿನ್ನದೆಂದೊಡೆ ಪಾರ್ಥನಿಂತೆಂದ ॥೨೬॥ ಪೊಡವಿಪತಿಗಳ ಬಸುರ ಬಂದೀ । ಯೊಡಲ ಕಕ್ಕುಲಿತೆಯನು ಕಾಳೆಗ । ದೆಡೆಗೆ ಮಾಡಿದರಿಲ್ಲ ಭೂತಭವಿಷ್ಯಮಾನದಲಿ ॥ ನುಡಿಯಬಹುದೇ ಬಂಜೆವಾತನು ।

ಸುಡುಸುಡೆಲವೋ ರಾಜಬಾಹಿರ। ನಡೆ ವರೂಥದ ಹೊರೆಗೆ ಕಾದಲುಬೇಡ ಬಾಯೆಂದ॥೨೭॥ ಕಾದುವೆನು ಮಾರೊಡ್ಡಿನಲಿ ನೀ । ನೈದಿಸೆನ್ನಯ ರಥವ ಮನದಲಿ । ಭೇದತನವನು ಬಿಟ್ಟು ಸಾರಥಿಯಾಗು ಸಾಕೆನಲು ॥ ಆದಿಯಲಿ ನೀನಾವರಾಯರ । ಕಾದಿ ಗೆಲಿದ್ದೈ ಹುಲುಬೃಹನ್ನಳೆ । ಯಾದನಿನಗೀಕದನನಾಟಕವಿದ್ಯವಲ್ಲೆಂದ ॥೨೮॥ ಎನ್ನವಂದಿಗ ರಾಜಪುತ್ರರಿ । ಗಿನ್ನು ಮೊಗಸಲು ಬಾರದಿದೆ ನೀ । ನೆನ್ನ ಸಾರಥಿಮಾಡಿಕೊಂಡೀಬಲವ ಜಯಿಸುವೆಯ ॥ ಅನ್ಯರನು ಮನಗಾಬರಲ್ಲದೆ । ತನ್ನ ತಾ ಮನಗಾಬರೇಯಿಾ । ಗನ್ನಗತಕವ ಸಾವುಬಲ್ಲೆವು ಬಿಟ್ಟು ಕಳುಹೆಂದ ॥ ಎಲವೊಸಾರಥಿಯಾಗು ನಡೆ ನೀ । ಗಳಹಿದೊಡೆ ಕಟವಾಯ್ಗೆ ಕೊಯ್ವೆನು । ಕೊಲುವೆನೀಪ್ರತಿಭಟನಿಕಾಯವ ನಿನ್ನ ಸಾಕ್ಷಿಯಲಿ ॥ ಬಳಿಕ ನೀನಗು ನಡೆಯೆನುತ ರಿಪು । ಬಲಭಯಂಕರನುತ್ತರನ ಹೆಡ । ತಲೆಯ ಹೆದರಿನೊಳೌಂಕಿ ತಂದನು ರಥವನೇರಿಸಿದ ॥೩೦॥ ಖೇದತನ ಬೇಡೆಲವೊ ರಣದೊಳ । ಗೋಡಿಸುವೆನಹಿತರನು ಹರಣವ । ಹೂಡಿಸುವೆನಂತಕನ ನಗರಿಗೆ ಥಟ್ಟನಡೆಹೊಯ್ದು ॥ ಕೋಡಮಿರು ಕೊಂಕದಿರು ಧೈರ್ಯವ । ಮಾಡಿ ಸಾರಥಿಯಾಗೆನುತ ಕಲಿ । ಮಾಡಿಕೊಂಡೊಯ್ದನು ಸಮಿಾಪದ ಶಮಿಯ ಪೊದೆಗಾಗಿ ॥೩೧॥ ಮರನನೇರಿದರೊಳಗೆ ಪಾಂಡವ । ರರಸಿ ಹೋದರು ಕೈದುಗಳ ಮಿಗೆ । ಹರಣಾಭರಣಾಕ್ಷಮೆಗಳಲಿ ನೀನೆನಗೆ ನೀಡೆನಲು ॥ ಅರಸುಮಕ್ಕಳು ಮುಟ್ಟಲನುಚಿತ । ಮರದ ಮೇಲಣ ಹೆಣನಿದೇನೈ । ವರಬೃಹನ್ನಳೆ ಮತ್ತೆ ಕೆಲಸವ ಹೇಳು ತನಗೆಂದ ॥೩೨॥ ಹೊರಗೆ ತೊಗಲಲಿ ಬಿಗಿದು ಕೆಲಬಲ । ನರಿಯದಂದದಿ ಪಾಂಡುನಂದನ । ರುರುವಕೈದುವ ಕಟ್ಟಿದರು ಹೆಣನಲ್ಲ ತೆಗೆಯೆನಲು ॥ ಸೆರಗನಳವಡಿಸಿಕ್ಕಿ ಭೀತಿಯ । ತೊರೆದು ತುದಿಗೇರಿದನು ನೇಣ್ಗಳ । ಹರಿದು ಕೈದುವ ಬಿಟ್ಟು ಕಂಡಂಜಿದನು॥೩೩॥ ಭಯಹೊಡೆದು ಕಾಲಭುಜಗನ ನಾಲಗೆಯೊ ಶರ । ಜಾಲವೋ ಕಲ್ಪಾಂತವಹ್ನಿ । ಜ್ವಾಲೆಯೋ ಕೈದುಗಳೊ ಕಾಲಾಂತಕನದಾಡೆಗಳೋ ॥ ತೋಳು ಥರಿಸುವವೆಂತು ನೋಡಿದೊ । ಡಾಲಿಯುರೆ ಬೆಂದವು ಬೃಹನ್ನಳೆ । ಕಾಳುಮಾಡಿದೆ ಕೊಂದೆಯೆನುತೋರಂತೆಹಲುಬಿದನು ॥೩೪॥ ಹೊಗರಹೊರಳಿಯ ಹೊಳೆವಬಾಯ್ಧಾ । ರೆಗಳ ತಳಪದ ಕಾಂತಿ ಹೊನ್ನಾ । ಯುಗದ ಬಹಳಪ್ರಭಶರೌಘಾನಲನ ಗಹಗಹಿಸಿ ॥ ಝುಗಝುಗಿಸೆ ಕಣ್ಮುಚ್ಚಿ ಕೈಗಳ । ಮುಗಿದು ಸಾರಥಿಗೆಂದ ನೆನ್ನನು । ತೆಗೆದುಕೊಳ್ಳೈ ತಂದೆ ಸಿಲುಕಿದೆನ ಸ್ತ್ರಸೀಮೆಯಲಿ ॥೩೫॥ ತ್ರುಡುಕಬಹುದೇ ದೋಷಿ ಹಾವಿನ । ಕೊಡನ ನಿನಗಿವು ಕೈದುಗಳೆ ಬರ । ಸಿಡಿಲ ಧಾವಣಿಯಾಗುತಿವೆ ಕೈಯಿಕ್ಕಲಂಜುವೆನು ॥ ಬಿಡಿಸು ಸಾರಥಿಯೆನ್ನನೆನೆ ಫಡ । ನಡುಗದಿರು ಫಲುಗುಣನ ನೆನೆ ಕೈ । ದುಡುಕುಕೈವಶವಹವು ತೆಗೆ ಸಾಕೆಂದನಾಪಾರ್ಥ ॥೩೬॥ ಉಲಿದು ಸತ್ವದೊಳೌಂಕಿ ಕಾಯುವ । ಬಲಿದುತೆಕ್ಕೆಯೊಳೊತ್ತಿ ಬೆವರುತ । ಬಳಲಿ ನೀಡಿದನರ್ಜುನನ ಕರತಳಕೆ ಗಾಂಡಿವವ ॥ ಬಲುಹಿನಿಂದವುಡೊತ್ತಿ ತೆಗೆತೆಗೆ । ದುಳಿದವೀ ಗಳ ನೀಡಿ ಮರನನು । ಮಲಗಿ ಥಗೆಯಿಂದಳ್ಳೆ ವೊಯ್ದು ಕುಮಾರನಿಂತೆಂದ ॥೩೭॥ ಗಿರಿಯನೆತ್ತಲುಬಹುದು ಬಿಲುಗಳ । ಕೆರಳಿಚುವೊಡಾರೆನು ಬೃಹನ್ನಳೆ । ಧರಿಸಲಾಪ್ಪೈ ನೀ ಸಮರ್ಥನು ನಿನಗೆ ಶರಣೆನುತ ॥ ಸರಳ ಪೊದೆಗಳ ದೇವದತ್ತವ । ಪರಶುತೋಮರಕುಂತವಸಿಮು । ದ್ಗರಗದಾದಂಡಾದಿಶಸ್ತ್ರವ ತೆಗೆದು ನೀಡಿದನು ॥೩೮॥ ಹೇಳು ಸಾರಥಿ ಬಿಲ್ಲಿದಾವನ । ತೋಳಿಗಳವಡುವುದು ಮಹಾಶರ । ಜಾಲ ಬೆಸಗೈದಸಮಿಾರಗೆಮಿಕ್ಕಬಿಲ್ಲುಗಳ ॥ ಕಾಳಗದೊಳಿವನಾರು ತೆಗೆವರು ಮೇಲುಗೈ

ದುಗಳಾಂಗವು ಕೈ । ವೇಳಪಿಸುವುವು ಮನದ ಸಂಶಯ ಹಿಂಗಹೇಳೆಂದ ॥೩೯॥ ಇದು ಕಣಾ ಗಾಂಡೀವ ಮಿದು । ಬಿಡದ ಮಹಾಧನು ಪಾರ್ಥನದು ಬಳಿಕಿದು ಯುಧಿಷ್ಠಿರಚಾಪವೀಧನು ಭೀಮಸೇನನದು ॥ ಇದು ನಕುಲಕೋದಂಡವಿಲುತಾ । ನಿದುವೆ ಸಹದೇವನದು ಭಾರಿಯ ಗದೆಯಿದನಿಲಜನದು ಕಿರೀಟಿಯ ಬಾಣವಿವು ಯೆಂದ ॥೪೦॥ ಅವರವರ ಬತ್ತಳಿಕೆಚಾಪವ । ನವರಶರವನು ಕಂಬುಖಡ್ಗವ । ಕವಚಸೀಸಕಜೋಡುಗಳಬಿರುದುಗಳತಕ್ಕಯವ ॥ ವಿವಿಧಶಸ್ತ್ರಾಸ್ತ್ರವನು ಫಲುಗುಣ । ವಿವರಿಸಲು ಬೆರಗಾಗಿ ಸಾರಥಿ । ಯವನು ತಾಸಾಂಡು ಮತ್ಸ್ಯನ ಸೂನು ಬೆಸಗೊಂಡ ॥೪೧॥ ಆರು ನೀನರ್ಜನನೊ ನಕುಲನೂ । ಮಾರುತನ ಸುತನೋ ಯುಧಿಷ್ಠಿರ । ವೀರನೋ ಸಹದೇವನೋ ಮೇಣವರ ಬಾಂಧವನೋ ॥ ಧೀರ ಹೇಳೈ ಬೇಡಿಕೊಂಬೆನು । ಕಾರಣವ ವಿಸ್ತರಿಸು ಪಾಂಡುಕು । ಮಾರರಾಯುಧತತಿಯ ನೀನಂತರವ ಹೇಳೆಂದ ॥೪೨॥ ಆದೊಡಾನರ್ಜನನು ಬಾಣಸಿ । ಯಾದವಲಲನು ಭೀಮ ವರಯತಿ । ಯಾದಂಕನು ಧರ್ಮಪುತ್ರನು ನಮ್ಮಗೋಕುಲವ ॥ ಕಾದವನು ಸಹದೇವ ರಾವುತ । ನಾದವನು ನಕುಲನು ವಿಳಾಸಿನಿ । ಯಾದವಳು ಸೈರೇಂಧ್ರಿ ರಾಣೀವಾಸವೆಮಗೆಂದ ॥೪೩॥ ಅಹುದು ಬಳಿಕೇನುಳಿದವರಾಗ । ಮಹಿಮೆ ತಾನಲ್ಲಿಯದು ಕಾಣಲು । ಬಹುದಲಾ ಜೀವಿಸಿದರತಿಶಯವನು ಮಹಾದೇವಾ ॥ ಗಹನಮಾತದೆ ನುಡಿದತಪ್ಪಿನ । ಬಹಳತೆಯ ಭಾವಿಸದೆ ತನ್ನನು । ಕುಹಕಿಯೆನ್ನದೆ ಕಾಯಬೇಕೆಂದೆರಗಿದನು ಪದಕ ॥೪೪॥ ಮಹಿಳೆಯನು ನೆಗಹಿದನು ನಿನ್ನಯ । ಮೇಲೆ ತಪ್ಪಿಲ್ಲೆನುತ ಫಲುಗುಣ । ಬೋಳಯಿಸಿ ನಿಂದಿರ್ದು ಕೃಮುಗದುತ್ತರನು ನಗುತ ॥ ಬಾಲಕನ ಬಿನ್ನಪವನೊಂದನು । ಕೇಳಬೇಹುದು ನಿಮ್ಮದಶನಾ । ಮಾಳಿಯನು ಪೇಳಲ್ವಮತಿಯನು ತಿಳುಹಬೇಕೆಂದ ॥೪೫॥ ಎನಲು ನಸುನಗುತರ್ಜನನು ಫಲು । ಗುಣ ಧನಂಜಯ ಜಿಷ್ಣು ಸಿತವಾ । ಹನ ವಿಜಯ ಭೀಭತ್ಸು ಪಾರ್ಥ ಕಿರೀಟಿಮೊದಲಾದ ॥ ವಿನುತಕೃಷ್ಣನು ಸವ್ಯಸಾಚಿಗ । ಳೆನಿಪಹೆಸರನು ತಿಳುಹಿ ಪುನರಪಿ । ತನಗೆಬಂದಂದವನು ವಿಸ್ತರವಾಗಿ ವಿರಚಿಸಿದ ॥೪೬॥ ಸಂಶಿದನು ಲೇಸಾಗಿ ನಿಶ್ಚಯ । ವಿಂಬುಗೊಂಡುದು ಪಾರ್ಥ ನಿನಗೀ । ಡೊಂಬಿದೇಕೈ ಬೃಹನ್ನಳೆತನದ ಬಹುರೂಪು ॥ ಅಂಬುಜಾಕ್ಷನ ಸಾಹಸ ಪ್ರತಿ । ಬಿಂಬವಲ್ಲಾ ನೀನು ನಿನ್ನ ವಿ । ಡಂಬಿಸಿದರೂಪಿಂಗೆ ಕಾರಣವೇನು ಹೇಳೆಂದ ॥೪೭॥ ಇದು ಕಣಾ ಧರ್ಮಜನ ಸತ್ಯಾಭ್ಯುದಯಕೋಸುಗವುರ್ವಸಿಯ ಶಾ । ಪದಲಿ ಬಂದುದು ಹೊತ್ತು ನೂಕಿದೆನೊಂದುವತ್ಸರವ ॥ ಇದಕೆನಮ್ಮ ದ್ರಾಯುಷ್ಯ ನಿರ್ವಿ । ಘ್ನದಲಿ ನೂಕಿದೆವವಧಿಯನು ತ । ನ್ನದಟುತನವನು ಭೀತಿಗೊಳ್ಳದ ನೋಡು ನೀನೆಂದ ॥೪೮॥ ಬಳೆಯ ನೆಗ್ಗೊತ್ತಿದನು ಕೌರವ । ಬಲದ ಗಂಟಲಬಳೆಯ ಮುರಿವವೊ । ಲಲಘುಸಾಹಸಿ ಪಳಿಯನುಟ್ಟನು ಮಲ್ಲಗಂಟಿನಲಿ ॥ ತಲೆನವಿರ ಹಿಣಿಲಿಂದು ತಿಲಕವ । ಗೆಲಿದು ಕಗ್ಗಟ್ಟಿನ ಕಠಾರಿಯ । ಹೊಳೆವಗೊಂಡೆಯ ಮೆರೆಯೆ ಗಂಡಂದವನು ಕೈಕೊಂಡ ॥೪೯॥ ತೇರ ತೆಗೆದನು ತನ್ನ ಮುನ್ನಿನ । ವಾರುವಂಗಳ ಹೂಡಿದನು ಕಪಿ । ವೀರ ನೆನೆಯಲು ಬಂದು ಮಂಡಿಸಿದೆನು ಧ್ವಜಾಗ್ರದಲಿ ॥ ಚಾರುಸೀಸಕ ಜೋಡುಕುಲಿಶದ । ಸಾರಕವಚವ ಬಿಗಿದು ಬೊಬ್ಬೆಯ । ಭಾರವಣೆ ಮಿಗೆ ಧನುವ ಕೊಂಡನು ತಿರುವನೇರಿಸಿದ ॥೫೦॥ ರಾಯಧರ್ಮಜ ಬಾಳುಗೆನುತ ನಿ । ಜಾಯುಧದ ಗುರುವಿಂಗೆರಗಿ ಸುರ । ರಾಯನಂದನನೊಲವಿನಲಿ ಗಾಂಡಿವವ ಜೇವಡಿಸಿ ॥ ರಾಯಕುವರನ

ಸೂತತನದ ವಿ। ಡಾಯಿಯುರಿಯಲುಬಹುದೆನುತ ಸಮು। ರಾಯುತಾಸ್ತ್ರನು ಪಾರ್ಥ ಮ್ಬೈದೋರಿದ ನು ಪರಬಲಕೆ ॥೫೧॥ ಸಡಿಲಬಿಡೆ ವಾಘೆಯನು ಚಿಮ್ಮಿದ। ವೊಡನೊಡನ ವೇಗಾಯ್ಲುತೇಜಿಗ। ಳೊಡೆದುಟಳೆಯೆನೆ ಗಜರು ಮಿಗೆ ಗರ್ಜಿಸಿದವಳ್ಳಿರಿದು॥ ಕುಡಿನೊರೆಯು ಕಟವಾಯ ಲೋಳೆಯ। ಲೊಡಲ ಸಂಚದನುಡಿಯ ಘುಡುಘುಡು। ಘುಡಿಪನಾಸಾಪುಟದ ಹುಂಕೃತಿ। ಮಸಗೆ ಮುಂಚಿದವು ॥೫೨॥ ಅರು ಕೌರವನಲ್ಲಿಭೀಷ್ಮನ। ದಾರು ಕೃಪನಾವವನು ದ್ರೋಣನ। ದಾರು ಬಲದೊಳಗಾವನಶ್ವತ್ಥಾಮನೆಂಬುವನು॥ ಪೇರ ತಿಳುಹೆನಗಲ್ಲಿ ಕರ್ಣನ। ದಾರು ನಾ ಕಂಡರಿಯೆನೆನಲಾ। ವೈರಿದಲ್ಲಣ ಪಾರ್ಥ ನಗುತುತ್ತರನೊಳಿಂತೆಂದ ॥೫೩॥ ಉದಯದರುಣನ ಕರುವ ಹಿಡಿದಂ। ದದಲಿ ವರ್ಣಚ್ಛವಿಯಲೊಪ್ಪುವ। ಕುದುರೆಗಳ ಥಳಥಳಿಸಿ ಬೆಳಗುವಕೊಡನಹಳವಿಗೆಯ॥ ಗದಗದಿಪಮಣಿಮಯದ ತೇರನ। ಕದನಕೋಳಾಹಳನು ಗರುಡಿಯ। ಸದನಸರ್ವಜ್ಞನನು ನೋಡೈ ದ್ರೋಣನವನೆಂದ ॥೫೪॥ ನವರತುನಕೇವಣದ ರಥವತಿ। ಜವದ ತೇಜಿಯ ತೆಕ್ಕೆಗಳ ರಾ। ರವದ ರೌದ್ರಾಯುಧದ ಗಡಣದ ಹರಿಯ ಹಳವಿಗೆಯ॥ ಬವರಭೈರವನಾತನತಿಬಲ। ಶಿವನನೊಸಲಂದದಲಿ ಮೆರೆವವ। ನಿವನು ಜಿತಸಂಗ್ರಾಮನಶ್ವತ್ಥಾಮನೋಡೆಂದ ॥೫೫॥ ಖುರದಲವನಿಯ ಹೊಯ್ದು ಲಹರಿಯ। ಲುರಮಸಗಲುಬ್ಬೆದ್ದ ತೇಜಿಯ। ಮೆರೆವಮುಕ್ತಾವಳಿಯ ತೇರಿನ ನವವಿಳಾಸವಲಿ॥ ಸರಳ ತಿರುಹುತ ನಿಂದು ಧನುವಿನ। ನಿರುತವನು ನೆರೆ ನೋಡಿ ತಾಷ್ಟೋಂ। ಕರಿಸುವವನತಿಬಲಕೃಪಾಚಾರಿಯನು ನೋಡೆಂದ ॥೫೬॥ ಲಲಿತ ರತ್ನಪ್ರಭೆಯ ತೇರಿನ। ಲುಲಿವಬಹುವಿಧವಾದ್ಯರಭಸದ। ಕಳಕಳದ ಕಡುದರ್ಪದಿಂದಳ್ಳಿರವತೇಜಿಗಳ॥ ಲಳಿಯಲಹರಿಯಲಗ್ಗಗಳ ಮೋ। ಹಳಿಸಿ ಬಿಲುಝೇಂಕಾರರವದಿಂ। ದುಲಿವವನು ಕಲಿಕರ್ಣನತುಳ ಪರಾಕ್ರಮಾನಳನು ॥೫೭॥ ಅತ್ತಲೈದನೆ ಬಹಳಬಲದೊ। ತ್ತೊತ್ತೆಯಲಿ ನಮ್ಮಿಭಯರಾಯರ। ಮುತ್ತಯನು ತಾನೆನಿಸಿ ಹೂಡಿದಬಿಳಿಯತೇಜಿಗಳ॥ ತೆತ್ತಿಸಿದಹೊಂದಾಳಸಿಂದದ ಸತ್ತಿಗೆಯ ಸಾಲಿನಲಿ ಬಪುಕುಲ। ಮೃತ್ಯುವಾತನು ವೀರಗಂಗಾಸುತನು ನೋಡೆಂದ ॥೫೮॥ ಆಗವಹಾವಿನಹಳವಿಗೆಯ ಮಿಗೆ। ನೆಗಹಿ ಮುಸುಕಿದ ಝಲ್ಲರಿಯ ಚೋ। ಡಿಗಳ ತುಡುಕುವತಂಬಟಂಗಳ ಮೊರೆವಚಂಬಕದ॥ ನೆಗಹಿ ಸಿಗುರುವತೆಕ್ಕೆಯದ ಮದ। ವೊಗುವಕರಿಗಳ ಮಧ್ಯದಲಿ ತಾ। ನಗಡುದುರಿಯೋಧನನು ಜೂಜನಜಾಣನವನೆಂದ ॥೫೯॥ ಅವನ ಬಲವಂಕದಲಿ ನಿಂದವ। ನವನು ಭೂರಿಶ್ರವನು ಮತ್ತಾ। ಭುವನಪತಿಯೆಡವಂಕದಲಿ ನಿಂದವ ಜಯದ್ರಥನು॥ ತವತವಗೆ ಬಲುಗೈಗಳೆನಿಸುವ। ಶಿವನ ನೊಸಲಂದದಲಿಮೆರೆವವ। ರವನಿಪಾಲಕರನುಜರನು ನೋಡೆಂದನಾಪಾರ್ಥ ॥೬೦॥ ಹೊಗಳಲೆನುಪಮುಸ್ಯನ್ಯಪಿಂತೀ। ದ್ವಿಗುಣವಂಥಾಸುರನ ಸೇನೆಗ। ತ್ರಿಗುಣವಿದು ರಾವಣನಮೋಹರಕೆನುತ ಫಲುಗುಣನು॥ ಹಗೆಯ ಭುಜದಗ್ಗಳಿಕೆಯನು ನಾ। ಲಗೆ ದಣಿಯೆ ಕೈವಾರಿಸುತ ಮಿಗೆ। ನಿಗುಚಿದನು ಫಲುಗುಣನು ತಾ ಗಾಂಡಿವವ ಜೇವಡೆದು ॥೬೧॥ ಖುರಪುಟದಲಾಕಾಶಭಿತ್ತಿಯ। ಬರೆವವೋಲ್ಲೂರಿಯನ ತುರಗವ। ಕರೆವವೋಲ್ಕೈಗಟ್ಟಿ ದುವ್ವಾಳಿಸುವೊಡಾಹವಕೆ॥ ಅರರೆ ಪೊತುರೆ ಹಯವೆನುತ ಚ। ಪ್ಪರಿಸಲೊಡೆನಿಗುರಿದವು ಕೆಂದೂ। ಳಿರದೆ ನಭಕುಪ್ಪರಿಸಿ ರವಿಮಂಡಲವನಂಡಲೆಯೆ ॥೬೨॥ ತುರಗಗರ್ಜನೆ ರಥದ ಚೀತ್ಕೃತಿ। ವರಧನುಷ್ಟಂಕಾರ ಕಪಿಯ। ಬ್ಬರಣೆ ಪಾರ್ಥನ ಬೊಬ್ಬೆ ನಿಷ್ಠುರದೇವದತ್ತರವ॥ ಅರರೆ

ಹೊದರೆದ್ದವು ಗಿರಿವ್ರಜ । ಬಿರಿಯೆ ಜಲಸಧಿ ಜರಿಯೆ ತಾರಕೆ । ಸುರಿಯೆ ಸುರಕುಲ ಸಂಯೆ ಭೀತಿ ಯಲಹರಿ ಬಲಹರಿಯೆ ॥೬೩॥ ಶಿರವು ಸಿಡಿಲೆರಗಿದವೊಲುತ್ತರ । ತಿರುಗಿ ಬಿದ್ದನು ಮೂರ್ಛೆಯಲಿ ಹೊಡೆ । ಮರಳಿದವು ಕಣ್ಣಾಲಿ ಕಾರಿದವರುಣವಾರಿಗಳ ॥ ಹೊರಳುತಿರಲೆಲೆಪಾಪಿ ಸ್ಥೈರಿಸ। ಲರಿಯನಿ ನ್ನೇನೆನುತ ಫಲುಗುಣ । ಸೆರಗಿನಲಿ ಬೀಸಿದನು ಕುಳ್ಳಿರಿಸಿದನು ರಥದೊಳಗೆ ॥೬೪॥ ಏನು ಮತ್ಸ್ಯ ಕುಮಾರ ಬವಣಿಯಿ । ದೇನು ನಿನಗೆಂದೆನಲು ಜಗದವ । ನಾನದಂದದ ಸಿಡಿಲು ಸುಳಿದುದು ಬಿರಿದು ದೆನ್ನೊಡಲು ॥ ಆನಲಾಪೆನೆ ನಿನ್ನ ಬಹಳ । ಧ್ಯಾನವನು ಸಾಕೆನ್ನ ಕಳಹು ಪ । ಹಾನಿದಾನವ ಮಾ ಣುವಮಾಣೆನೆ ಪಾರ್ಥನಿಂತೆಂದ ॥೬೫॥ ಖೇಡನಾಗದಿರದುಭುತಧ್ವನಿ । ಮಾಡೆನಂಜದಿರಂಜದಿರು ಧೃತಿ ಮಾಡಿಕೊಂಡೀರಥವ ಜೋಡಿಸೆನುತ್ತ ಸಂತೈಸಿ ॥ ಮೂಡಿಗೆಯಲಂಬುಗಿದು ತಿರುವಿಗೆ । ಹೂಡಿದನು ಫಲುಗುಣನ ಕದನವ । ನೋಡಲಮರಶ್ರೇಣಿ ಮೇಳೈಸಿತ್ತು ಗಗನದಲಿ ॥ ॥೬೬॥

ಅಂತು ಸಂಧಿ ೭ ಕ್ಕೆ ಪದ ೪೪೩ ಕ್ಕಂ ಮಂಗಳವುಸ್ತು.

## ಎಂಟನೆಯ ಸಂಧಿ.



ಸೂಚನೆ॥ ಕದನಚೌಪಟಮಲ್ಲ ಪರಬಲ । ಮದನಮಪಹರರುದ್ರಸಹಿತರ । ಸದೆದು ಮರಳಿಚಿದನ ವಿರಾಟನ ನಿಖಿಳಗೋಕುಲವ॥

॥ಪದ॥ ಭಯವು ಭಾರವಿಸಿತ್ತು ಜನಮೇ । ಜಯಮಹೀಪತಿ ಕೇಳು ಕುರುಸೇ। ನೆಯಲಿ ಭೀಷ ದ್ರೋಣರರಿದರು ಪಾರ್ಥನೆಂಬುದನು ॥ ಜಯವು ಜೋಡಿಸಲರಿಯದಿದು ಸಂ । ಶಯದ ಸುಳಿವುತಾ ತಶತವಿದು । ಲಯದ ಬೀಜವು ಭೀಷ್ಮ ಚಿತ್ತವಿಸೆಂದನಾ ದ್ರೋಣ ॥೧॥ ಸುರಿವುತಿವೆ ಕಂಬನಿಗಳನು ಗಜ । ತುರುಗಚಯ ಪೊರೆಯುಗಿದೊಡಾಯುಧ । ಮುರಿದು ಬಿದ್ದುದು ಬೀಸುತಿದೆ ಬಿರುಗಾಳಿ ಬಲ ಬೆದರೆ ॥ ಹರಿವುತಿವೆ ತಾರಕೆಗಳ ಭ್ರದೊ । ಳರುಣಮಯಜಲಧಾರೆಯಿದೆ ತರ । ತರದಲಿದೆ ಪಡಿಸೂ ರ್ಯಮಂಡಲವೆಂದನಾದ್ರೋಣ ॥ ಇದೆ ಬಹಳ ಭೂಕಂಪವದುಭುತ । ವಿದೆ ದಿಶಾವಳಿ ಧೂಮಕೇತು ಗ । ಳಿದೆ ಪತಾಕಾಭಂಗವಿದೆ ವಿಪರೀತಪರಿವೇಷ ॥ ಇದು ಸಮಾಹಿತವಲ್ಲ ರಾಜಾ । ಭ್ಯುದಯಕರವೇ ಭೀಷ್ಮನಮ್ಮನು । ಸದೆಯದಿಹನೇ ಸುರಪನಂದನನೆಂದನಾದ್ರೋಣ ॥೩॥ ಬಿರಿಯಲಬುಜಭವಾಂಡವಿ ದೆ ಕಪಿ । ವರನ ಕಳಕಳ ದೇವದತ್ತದ । ಥರಥುರದ ದೆಖ್ಖಾಳವಿದೆ ಗಾಂಡಿವದ ಬೊಬ್ಬೆಯಿದೆ ॥ ನರ ನನಿಷ್ಠುರ ಸಿಂಹರವವಿದೆ । ತುರುಗಿ ದಳ್ಳುರಿ ಸಾರುತಿದೆ ಸಂ । ಗರಕೆ ಸಾಹಸಮಲ್ಲ ಮೊಳಗಿದನೆಂದ ನಾದ್ರೋಣ ॥೪॥ ಬಲವ ಬೆದರಿಸಿ ಹಗೆಯ ಭುಜದ । ಗ್ಗಳಿಕೆಯನೆ ಕೊಂಡಾಡಿ ಸಾಮಿಯ । ನಿಳಿಕೆ ಗಾಬಿರಿ ನಿಮ್ಮ ಪೈಕಕೆ ಖುಲ್ಲತನ ಸಹಜ ॥ ಫಲುಗುಣನೆಯಾಗಲಿ ಸುರೇಂದ್ರನೆ। ನಿಲಲಿ ಭಾರ್ಗವರಾ ಮನಾಗಲಿ। ಗೆಲಿದು ಕೊಡುವೆನು ನಿಮಿಷಕೆಂದನು ಖಾತಿಯಲಿ ಕರ್ಣ ॥೫॥ ನರನು ನರನೆಂದನವರತ

ತಲೆ । ಬುಯೆು ಹೊಗಳುಪರಾನಿರಲು ಸಂ । ಗರಕೆ ತಲೆದೋರಿದೊಡೆ ತರಿವೆನು ಲೋಕಪಾಲಕರ ॥ ನರನ ತೆತ್ತಿಗರೆಹು ತತ್ತ್ರಡೆ।ಪುರದೊಳಗೆ ಕೌರವನವರು ದು । ಶ್ಚರಿತರೆರಡಿಪ್ಪಹಿರ ಖೂಳರು ನಿಮ್ಮೊಳೇನಂದ ॥೭॥ ಹೊಕ್ಕು ತಾ ಬಳಿಸಲಿಸಿದೊಪಹಿಂ। ದಿಕ್ಕಿ ಕೊಂಬವರಾರು ಹಗೆವನ। ಸಿಕ್ಕಿದುರಗನ ಸೆಳವ ಸಾವನು ಗರುಡತುಂಡದಲಿ ॥ ಪಕ್ಕತುಳದಲಿ ವೈರಿಪಾರ್ಥನ । ನೊಕ್ಕಲಿಕ್ಕುವೆನರಸ ನಿನ್ನೀ । ಚುಕ್ಕಿಗಳ ಚಾಪಲವ ಕೇಳದಿರೆಂದನಾಕರ್ಣ ॥೭॥ ಎನಲು ಭುಗಿಲೆಂದನು ಕೃಪಾಚಾ । ರ್ಯನುಸುಯೋಧನ ಕೇಳುರಾಧಾ । ತನಯನಿವ ಬೊಗುಳಿದೊಡೆ ನಿಶ್ಚಯವೆಂದು ನಂಬದಿರು ॥ ಅನುವರದೊಳರ್ಜುನನ ಗೆಲುವೊಡೆ। ಯೆನಗೆ ನಿನಗೀತಂಗೆ ಕಲಬು । ಗನಿಮಿಷರಿಗಳವಲ್ಲ ಬಲ್ಲೆ ಪಾರ್ಥನದಟುಗಳ ॥೮॥ ಮಾಡಿದನು ಹರನೊಡನ ಖಾಡಾ । ಖಾಡಿಯನು ಸುರಪತಿಯ ತೋಟವ । ಬೇಡಿದೊಡೆ ಬೇಳಿದನು ವಹ್ನಿಗೆ ಬಾಡಿಸೂಯುವಲ ॥ ರೂಢಿಗುತ್ತರ ಕುರುಗಳರ್ಥವ । ಹೂಡಿಸಿದನರಮನೆಗೆ ದೈತ್ಯರ । ಬೀಡ ಬಂಗೈದನು ಹಿರಣ್ಯಕಪುರನಿವಾಸಿಗಳ॥೯॥ ಬಾಗಿಸಿದಬಿಲ್ಲಿನಲಿ ರಾಯರ । ಮೂಗ ಕೊಯ್ದನು ಮದುವೆಯಲಿ ನೀ । ನೀಗಳೊವರುವೆ ಕೌರವೇಂದ್ರನನಂದು ಬಿಡಿಸಿದೆಲಾ ॥ ಆಗರುವ ಸೈಂಧವನ ಮುಡಿಯ ಪ । ಭಾಗಿಸಿದಭಟನಾರು ಪಾರ್ಥನ। ಲಾಗುವೇಗವನಾರುಬಲ್ಲರು ಕರ್ಣ ಕೇಳೆಂದ ॥೧೦॥ ಮರುಳ ಕರ್ಣಗೆ ಕೂಡೆನ ತೋರವ । ಬರಬ ನಾಸವ ನಿಮ್ಮಕಣ್ಣಿಗೆ । ನರನು ದೊಡ್ಡಿತು ವುಳಿದವೀರರ ಕಣ್ಗೆ ತುಸವಾತ್ರ ॥ ಮರುಳುಹಾರುವಗದ್ಯಪದ್ಯದ । ಸರಸವಿದ್ಯೆಗಳಲ್ಲದೀಸಂ । ಗರದ ಕರ್ಕಶವಿದ್ಯೆ ನಿಮಗೇಕಂದನಾಕರ್ಣ ॥೧೧॥ ಹಣೆಗ ಮಟ್ಟಿಯು ಬಡಿದು ದರ್ಭೆಯು । ಹಣಿದು ಬೆರಳಲಿ ಸಕ್ಕ ಧೋತ್ರದ । ದಣಬವನು ನೆಂಪಿಡಿದು ಮುಪಳದಮನೆಯ ಚೌಕದಲಿ ॥ ಮಣಿಗೆ ಮಂಡಿಸಿ ಕುಳ್ಳಿತುಂಬೆ । ತಣಿವ ಪದ್ಯಯು ಎಲ್ಲರಲ್ಲವೆ । ರಣಪತಾಂಡ ಪಿದ್ಯೆ ನಿಮಗೇಕೆಂದನಾಕರ್ಣ ॥೧೨॥ ಇಂದು ಪಿತೃದಿನವೆಂದು ಸಂಕ್ರಮಯ । ಪಂದು ಸೂರ್ಯಗ್ರಹಣ ಹಬ್ಬದಿನ । ವಿಂದು ಯಜ್ಞಾರಂಭಟನ ವಡ್ಡಂತಿಲೇಸುಂದು ॥ ಒಂದು ಸಾಸಿರವುಖದ ದಾನಕ । ತಂದವಸ್ತುವ ಬಾಚಿ ಹೊಳ್ಳಿಸಿ ॥ ತಿಂದು ಕೂಚ್ಛದ ನಿಮಗ ಸುಭಟರ ಮಾತದೇಕೆಂದ ॥೧೩॥ ಬಲ್ಲರೈ ಕೌರವನ ಧನವನು । ಹೊಳ್ಳಿಸಲು ಮೃಷ್ಟಾನ್ನದಿಂದವ। ಡೊಳ್ಳುವಳಸಿಯು ರಾಜಗುರುತನದಿಂದ ಬರತಿಹಿರ॥ ಬಿಲ್ಲ ವಿದ್ಯಾ ವಿಷಯರುಪುಭಟ। ಮಲ್ಲರೊಡನಿಯು ಕದನವದು ಜಡ । ರೆಲ್ಲರಿಗೆ ಸುಲಭವ ಜಪಾನುಷ್ಠಾನವಲ್ಲೆಂದ ॥೧೪॥ ಕೇಳಿದಶ್ವತ್ಥಾಮ ಕಡಿಗಳ । ನಾಲಿಗಳಲುಗುಳಿದನು ಕೇಳಲ । ಖೂಳ ಸೂತನ ಮಗನೆ ಸುಭಟಾಂಗದಲಿ ಖರೆಯೆನಲಾ ॥ ಕೇಳುಜಾತಿಗೆ ತಕ್ಕನುಡಿಗಳು । ಮೇಳವಿಸದವು ಕ್ಷುಲ್ಲವ ನಾಲಗೆ । ಹೇಳಿತೆಂಬುದು ತಪ್ಪದಾಯಿತು ಕರ್ಣಕೇಳೆಂದ ॥೧೫॥ ನಗುವ ವಿಪ್ರರಸಾವಿರಾಯರ । ಮಗನು ಹೇಳಾ ದಾನಧರ್ಮಾ । ದಿಗಳೊಳರ್ಥವನಾರು ಕೊಂಬರು ದ್ವಿಜರು ಹೊರಗಾಗಿ ॥ ಜಗವ ರಕ್ಷಿಸಲಾವು ಕೊಂಬೆವು । ಮಗುಳೆ ಕೊಡುವವು ಕ್ಷತ್ರವೈಶ್ಯಾ । ದಿಗಳು ಕೊಡುವರು ತತ್ಪ್ರತಿಗ್ರಹಯೋಗ್ಯರಲ್ಲೆಂದ ॥೧೬॥ ಉಳಿದವರ್ಣತ್ರಯಕೆ ಬೆಸಕೈವಳತಯಲ ಶೂದ್ರನು ಕೃತಾರ್ಥನು । ತಿಳಿಯೆ ನೀನಾರಿದರೊಳಗೆ ಕೆಂಬುವನೊ ಕೊಡುವವನೊ ॥ ಕುಲವಿಹೀನನ ತಂದು ಕೌರವ । ತಿಲಕ ಪತಿಕರಿಸಿದೊಡೆ ನಾಲಗೆ । ಯುಲಿಯಲಾಯಿತು ಕರ್ಣನಿನ್ನಯ ಭವವ ನೆನೆಯೆಂದ ॥೧೭॥ ಪರರು ಪತಿಕರಿಸಿದೊಡೆ ಲಜ್ಜೆಗೆ । ಶಿರವ ನಸುಬಾಗುವರು ಗರುವರು ।

ರಿದವು ಮು । ಮ್ಮೊನೆಯವರ ಮನ್ನಿಸದೆ ಬೆಂಬತ್ತಿದನು ಕೌರವನ ॥ ಜನಪ ಬಿಡುಬಿಡು ತುರುಗಳನು ಫಲು । ಗುಣಕಣಾ ಬಂದವನು ಕುರುಕುಲ । ವನದವಾನಳನರಿಯೆನುತಲುತ್ತರನು ಬೊಬ್ಬಿರಿದ ॥ ॥೩೦॥ ಎಲೆಲೆ ನರ ಜಾರಿದನು ರಾಯನ । ಬಳಿಯ ಹತ್ತಿದಸಡ್ಡಹಾಯ್ದತಿ । ಬಲನ ತೆಗೆ ನಮ್ಮತ್ತಲೆನುತಾದ್ರೋಣಗೌತಮರು ॥ ಹಿಳುಕ ಕನ್ನೆಗೆ ಸೇದಿ ಬೊಬ್ಬೆಯ । ಕಳಕಳದಿಯಡಗಟ್ಟಿದರು ನಿ । ಲ್ಲೆಲವೊ ಫಲುಗುಣ ಕಾದಿ ನೀನೊಟ್ಟೈಸಿಪೋಗೆನುತ ॥೩೧॥ ನಗುತ ಫಲುಗುಣನೆರಡೆರಡು ಕೋ । ಲುಗಳನವರವರಂಘ್ರಿಗಚ್ಚಿನು । ತೆಗೆದು ಹಾಯ್ದನು ಮುಂದೆ ಕೌರವರಾಯಮೋಹರಕ ॥ ಹೊಗರೊಗುವಹೊಸಕಣೆಯ ದಟ್ಟಿಯ । ಬಿಗಿದನೆಡಬಲನಿದಿರಿನಲಿ ಸ । ಗಳಿಗೆಯ ಸಸಿಯಂತಾಯ್ತು ಕೌರವಸೇನೆ ನಿಮಿಷದಲಿ ॥೩೨॥ ಬಿಂದವಾನೆಗಳರ್ಜುನನ ಬಿಲು । ದಿರುಪಿನಬ್ಬರಕತಿರಥರ ಬಾ । ಯ್ದೊರಳೆ ಹಾಯ್ದವು ಪೀರಿಹನುಮನ ಗಾಢಗರ್ಜನೆಗೆ ॥ ಶಿರವೊಡೆದು ಸಿಡಿಯಿತು ಕಿರೀಟಿಯ । ಪರಮಶಂಖಧ್ವನಿಗೆ ಕುರುಬಲ । ಹೊರಳಿಯೊಡೆದುದು ಹಾರಿ ಬಿದ್ದುದು ಹೆದರಿ ಹಮ್ಮೈಸಿ ॥೩೩॥ ಎಲೆಲೆ ನರನೋ ಸುಭಟಜೀವನ । ದಳವುಳಿಗನೋ ದಿಟ್ಟರಾಯರ । ದಳದ ದಾವಾನಲನೊ ಪಾರ್ಥನೊ ಕಾಲಭೈರವನೋ ॥ ಗೆಲುವರಾವೆಡೆ ಕರ್ಣಕೃಪಸೌ । ಬಲಜಯದ್ರಥರೆಂಬವರ ಹೆಡ । ತಲೆಗೆ ನಾಲಗೆ ಹೋಯಿತೆಂದುದು ಕೂಡೆ ಕುರುಸೇನೆ ॥೩೪॥ ಮುರಳಿ ಹೊಡೆ ಹಿಂಡಾಕಳನು ಗೋ । ವರನು ಬಿಡು ಹೆಡಗೈಯ ಹೊಯ್ನು । ಮ್ಮರಸ ನಯದಪ್ಪಿದನು ತುರುಸೆರೆವಿಡಿವರೇ ನೃಪರು ॥ ಕೊರಳ ಕಡಿತಕೆ ಹೊತ್ತ ಹಗೆವನ । ಸರಳಿಗಸುಗಳ ತೆರೆದಿರೆಂದ । ಬ್ಬರಿಸಿ ಕುರುಬಲ ಬಾಯಬಿಟ್ಟುದು ರಾಯರಿದಿರಿನಲಿ ॥ ಬೊಬ್ಬಿರಿದು ನರನಸಲು ಕಣಗಳು । ಹಬ್ಬಿದವು ಹುರಿಗೊಂಡು ಹೂಣಿಗ । ರೊಬ್ಬುಳಿಯ ಹರಿಗಡಿದು ಕರಿಗಳ ಹೊದರ ಮೆದೆಗಡಿ ॥ ತೆಬ್ಬನೂದೆದುರೆ ಬಳಿಕ ಗರಿವೊರೆ । ದಬ್ಬರಿಸಿ ಕಬ್ಬಕ್ಕಿ ಗಗನವ । ಹಬ್ಬಿದಂತಿರೆ ಮುಸುಗಿದವು ಫಲುಗುಣನ ಶರಜಾಲ ॥೩೬॥ ತುಡುಕಿ ಖಂಡವ ಕಚ್ಚಿ ಹಾರುವ । ಗಿಡಿಗನಂತಿರೆ ಭಟರ ಗಂಟಲ । ಕಡಿದು ಹಾಯ್ವಂಬುಗಳು ಬಳಿಯಲಿ ಕೊಂದತ್ತಲೆಗಳಲಿ ॥ ಅಡಸಿದವು ನಿರಿನಿಟಿಲುಗರದೆಲು । ಮೊಡೆಯೆಥಟ್ಟುಗಿದಾನೆಗಳ ನಡೆ । ಗೆಡಹಿದವು ಗರಿಸಹಿತ ಹಾಯ್ದವು ಹಯದ ಹೊಟ್ಟೆಯಲಿ ॥೩೭॥ ಕರುಳ ಬಾಯಲಿ ಕಾರಿ ಕಾಲಾ । ಳೊರಳಿ ಕೆಡೆದುದು ಬೋಳೆಯಂಬುಗ । ಳುರಿಯೆ ಸಮಸೀಳಾಗಿ ಬಿದ್ದವು ಗಜದ ಹೋಳುಗಳು ॥ ಕೊರಳು ಹರಿದೊಡನೆದ್ದ ರಕುತದ । ಹೊರಳಿಗಳ ಹೊನಲಿನಲಿ ಮುಳುಗಿತು । ತುರಗರಥದಳರಾಜಿ ಹೊಸಕುಮ್ಮರಿಯ ಸೋಲಿಸಿತು ॥೩೮॥ ಹರಿಗೆ ಖಂಡಿಸಿ ಜೋಡುಸೀಸಕ । ಜರಿದು ಬಲುದೋಳುಡಿದು ಗೋಣರೆ । ಹರಿದು ನಿಟ್ಟೆಲು ಮುರಿದು ತೊಡೆಯರೆಗಡಿದು ತಲೆಯೊಡೆದು ॥ ನರಹರಿದು ಕರುಳೊಕ್ಕುನೆಣನು । ಬ್ಬರಿಸಿ ಕಾಳಿಜ ಹಾಯ್ದು ನೆತ್ತರು । ಸುರಿದು ತಳದಗಲವಲಿ ಹೊರಳತು ವೈರಿಪಾಯದಳ ॥೩೯॥ ಮುಂದೆ ಕಪಿವಂಬುಗಳು ಸುಭಟರ ಕೊಂದು ಬಿದ್ದವು ಮತ್ತೆ ಬಳಿಯಲಿ । ಬಂದವಕೆ ಗುರಿಯಿಲ್ಲ ಹೇಳುವೆನೇನನದ್ಭುತವ ॥ ಬಂದುಗುರಿಗೆರಡಂಬ ತೊಡಬೇ । ಡೆಂದು ಪಾರ್ಥನ ಬೇಡಿಕೊಂಡವು । ಸಂದಮಂತ್ರಾಸ್ತ್ರಂಗಳೆಲೆಜನಮೇಜಯಕ್ಷಿತಿಪ ॥೪೦॥ ಹಿಕ್ಕಿದವು ಹಯ ಬಲದಸುಭಟರ । ನೊಕ್ಕಿ ತೂರಿದ ವಾನೆಗಳ ಸಾ । ಲಿಕ್ಕಿ ನೆಟ್ಟವ ಬಹಳ ರಕ್ತದ ಕೆಸರ ಕೈಗಳಲಿ ॥ ಮುಕ್ಕಿದವು ಮಲೆತವರ ಮಾಂಸವ । ನಿಕ್ಕಿದವು ದ್ವಿಜಗಣಾಕ ಸತ್ತ್ವವ

ನಿಕ್ಕಿದವು ದಿಗುವಳಯದಲಿ ರಣಧೀರನಂಬುಗಳು ॥೪೧॥ ಬಗ್ಗೊಡೆಯದೌಕಿದಮಹೀಶರು। ಮುಗ್ಗಿದರು ಮುನ್ನಾಳಮೇಳದ । ಹೊಗ್ಗಿನಲಿ ಮುಂಕೊಂಡು ಬಿರುದರು ಬಿಸುಟರೊಡಲುಗಳ ॥ ನುಗ್ಗುನುಸಿಯಾಯ್ತುತಿರಥರು ಗಜ । ವೊಗ್ಗರದಮೊನೆ ಮುರಿದು ಕಾಲನ । ಸಗ್ಗಳೆಯ ಸೆಳದಂತೆ ಸುರಿದವು ರಕ್ತಧಾರೆಗಳು ॥೪೨॥ ಕಾಲದಲಿ ಪರಿಪಕ್ವವಾದವಿ । ಶಾಲಿತಸ್ಥಾವರದಜಂಗಮ । ಜಾಲವನು ಕಾಲಾಗ್ನಿ ಕವಿಕವಿದಟ್ಟಿಸುಡುವಂತೆ ॥ ಮೇಲುಮೇಲೊಡಗವಿವಬಾಣ। ಜ್ವಾಲೆಯಲಿ ಕುರುಸೈನ್ಯಕಾನನ। ಮಾಲೆಯನು ಕಲಿಪಾರ್ಥಪಾವಕನುರುಹಿದನು ಮುಳಿದು ॥೪೩॥ ದೇವ ಬಿಲ್ಲಾಳಾವಲಾಘುವ।ದಾವಘಾಡಿಕೆಯಾವ ಚಳಕವ । ದಾವಶರಸಂಧಾನವಾವವಿಹಾರವಾವಪರಿ ॥ ರಾವಣನೊಳಿಂದ್ರಾರಿರಾಘುವ । ದೇವಲಕ್ಷ್ಮಣರಲ್ಲಿ ಕಾಣೆನಿ । ದಾವಧನುಶರವಿದ್ಯೆ ಮಝುಭಾಪೆಂದನಾಹನುಮ ॥೪೪॥ ಕಾಣಬಾರದು ಬಿಡುವಹೂಡುವ । ಕೇಣವನು ಪರಿಮಾಣುಪುಂಜವ । ಕಾಣವೇ ಕಣ್ಣುಗಳು ನಮ್ಮವು ಮರ್ತ್ಯರಾಲಿಗಳೆ ॥ ಜಾಣಪಣವಿದು ಶಿವ ಸುದರ್ಶನ । ಪಾಣಿಗಳಿಗಹುದಮರಪತಿಪದ । ದಾಣೆ ಹುಸಿಯಲ್ಲೆನುತ ಬೆರಗಾಯಿತ್ತು ಸುರಕಟಕ ॥೪೫॥ ಏರುವಡೆದರು ಕೆಲರು ಕೆಲರಸು । ಸೂರೆವೋದುದು ಕೆಲರು ಕೆಲರೆದೆ । ಡೋರುಗಳು ಪೂರಾಯಗಾಯದಲುಸುರ ತೆಗೆಬಗೆಯ ॥ ಕಾರಿದರು।ರಕ್ತವನು ಸಗ್ಗಕೆ । ಗೂರುಮಾರಾಡಿದರು ತಲೆಗಳ ಹೇರಿದರು ಹರಣವನು ವೊಟ್ಟಿಗೆಕಾಲನರಮನೆಗೆ ॥ ಚೆಲ್ಲಿಹೋಯಿತು ಕೆಲರು ಕೆಲಬರು । ಬಿಲ್ಲ ಬಿರುದರು ಕೋಲ ಬಿಸುಟರು । ಗಲ್ಲೆಗೆಡದರು ಕೆಲರು ಪಾರ್ಥನ ಕೋಲತೋಹಿನಲಿ ॥ ಮೆಲ್ಲಮೆಲ್ಲನೆ ಸರಿವಕೌರವ । ಮಲ್ಲನನು ಕಂಡಟ್ಟಿದನು ತುರು । ಗಳ್ಳ ಹೋರದಿರೆನುತ ಮೊದಲಿಸಿದನು ಕಲಿಪಾರ್ಥ ॥೪೬॥ ಕಾಯಲಾಪರೆ ಕರೆಯಿರಾಕ । ರ್ಣಾಯತಾಸ್ತ್ರರನಕಟಕೌರವ । ರಾಯಸಿಲುಕಿದನೆಲ್ಲಿಭೀಷ್ಮದ್ರೋಣಕೃಪರೆನುತ ॥ ಬಾಯಬಿಡೆಕುರುಸೇನೆಗುರುಗಾಂ। ಗೇಯಶಕುನಿವಿಕರ್ಣಕೃಪರಾ। ಧೇಯಸೈಂಧವಚಿತ್ರಸೇನಾದಿಗಳು ಜೋಡಿಸಿತು ॥೪೭॥ ಇತ್ತತುರಗಳ ಬಿಸುಟು ರಾಯನ । ತೆತ್ತಿಗರು ತಲ್ಲಣಿಸಿ ಹಾಯ್ದರು । ಹೊತ್ತಿದವು ಮುಸುಡುಗಳು ಸಂಗರವಿಜಯಗರ್ವಿತರ ॥ ಸುತ್ತಗೋವರ ಸನ್ನೆಯಲಿ ಪುರ । ದತ್ತ ಮುಂದಾದವು ಪಶುವ್ರಜ । ವುತ್ತರನು ಮುಳುಗಿದನು ಪರಿತೋಷಪ್ರವಾಹದಲಿ ॥೪೮॥ ಬಿಗಿದಕಚ್ಚುಲ ತೊರೆದುಗುವಹಾ । ಲುಗಳ ನಿರಿಗೆ ಸೂಳೆದ್ದಬಾಲದ । ಮೊಗನೆಗಹಿ ದೆಸೆದೆಸೆಯ ನೋಡುತ ಬೆಚ್ಚಿ ಬಿರುವರಿವ ॥ ಅಗಿದು ಸರಳಿಸಿ ನಿಲುವಹೊಸಬರ । ಸೊಗಡಿಗವ್ವಳಿಸುತ್ತ ಗೋವರು । ತೆಗೆದಪಥದಲಿ ತೆಕ್ಕೆವರಿದವು ಹಿಂಡುಹಿಂಡಿನಲಿ ॥೫೦॥ ಕೆಲವುಕಡೆಗಂಡಿಳು ಬಾಲದ। ಬಳಿಗೆ ಮೂಗಿಟ್ಟಡಿಗಡಿಗೆ ಮನ। ನಲಿದು ಮೋರೆಯನೆತ್ತಿ ಸುಕ್ಕಿಸಿ ಮತ್ತೆ ಹರಿಹರಿದು॥ಮಲೆತುಕಾಲಲಿ ನೆಲನ ಕೆರದ । ವ್ವಳಿಸಿ ಮೆತ್ತೊಂದಿದಿರುವರೆ ಬಲು ಸಲಗನೀಡಿರಿದಾಡುತಿರ್ದುದು ಹಿಂಡುಹಿಂಡಿನಲಿ ॥೫೧॥ ತಿರುಗಿ ಕೆಂದೂಳಿಡುತ ತುರುಗಳು । ಪುರಕೆಹಾಯ್ದುವು ನಲವು ಮಿಗಲು । ತ್ತರಕಿರೀಟಿಗಳಾಂತುಕೊಂಡರು ಮತ್ತೆ ಕಾಳಗವ ॥ ಅರಸುಮೋಹರ ಮುರಿದು ಹರಿಬವ । ಮರಳಿಚುವಮಿಡುಕುಳ್ಳವೀರರ । ಧುರಕೆ ಬರಹೇಳೆನುತ ಬಾಣವ ತೂಗಿದನು ಪಾರ್ಥ ॥೫೨॥

ಅಂತು ಸಂಧಿ ೮ ಕ್ಕೆ ಪದ ೪೯೫ ಕ್ಕಂ ಮಂಗಳಮಸ್ತು.



# ಒಂಭತ್ತನೆಯ ಸಂಧಿ.

||ಸೂಚನೆ|| ರಾಯರಿಪುಬಲಜಲಧಿವಡಬಾನಲ | ಜೀಯನರ್ಜುನ ನಿಖಿಳಕೌರವ| ರಾಯದಳವನು/ಜೈಸಿದನು ಸಮ್ಮೋಹನಾಸ್ತ್ರದಲಿ ||

||ಪದ|| ಮರಳಿದ್ದವು ತುರು ಮಾರಿಗೌತಣ | ಮರಳಿ ಹೇಳಿತು ಹಸಿದಹೆಬ್ಬುಲಿ | ಮೊರೆಯೆ ದನಿದೋರಿದವು ಹುಲುಮೃಗವೇನನುಸುರುವೆನು || ಧರಣಿಪನೆ ಹಿಂದಿಕ್ಕಿ ಸೌಬಲ| ಪುರುಳದುಶ್ಶಾಸನಜಯದ್ರಥ | ರುರುಬಿದರು ತರುಬಿದರು ಪುರಬಲಕಾಲಭೈರವನ ||೧|| ಹತ್ತುಸಾವಿರರಥಸಹಿತ ಭಟ | ರೊತ್ತಿ ಕವಿದರು ಲಗ್ಗವರೆಯಲಿ | ಬಿತ್ತರಿಸಿ ಬೈಬೈದು ಸಾರುವ ಗೌರುಗಹಳೆಗಳ || ಸತ್ತಿಗೆಯಸಾಲುಗಳೊಳಂಬರ | ಕೆತ್ತುದೆನೆ ಕಲಸ್ಕ್ರಲಸಿಚಯದ | ನೆತ್ತಿ ಬಿರಿಯಲು ಮೊಳಗಿದವು ನಿಸ್ಸಾಳಕೋಟಿಗಳು ||೨|| ಚಂಬಕನ ಪರಿಪಕ್ಕಿಡವುರಗ | ಬೊಂಬುಲಿಯ ಗೋಮುಖದ ಡೌಡೆಯ | ಕೊಂಬುಕಹಳೆಯ ರಾಯಗಿಡಿಮಿಡಿಪಟಹಪಟಹಂಡಿಮಾಪ || ತಂಬಟದ ನಿಸ್ಸಾಳವಂಬರ | ತುಂಬಿದುದು ನೆಲಕುಸಿಯೆ ಬಲವಾ | ಡಂಬರದಲರ್ಜುನನ ಮುಸುಕಿತು ದೊರೆಯ ಸನ್ನೆಯಲಿ ||೩|| ಮರಳಿದ್ದವು ತುರುವೆಂಬ ಗರ್ವದ | ಗಿರಿಗೆ ಕೋ ಕುಲಿಶವನು ಸೇನೆಯ | ನೊರಸಿದುತ್ಸವಜಲಧಿಗಿದೆಕೋ ವಾಡಬಾನಲನು || ಅರಸನಳುಕಿದನೆಂಬಬಯದು| ಬ್ಬರದಬಳಿ ಸಿಗದೆ ನಿದಾಘದ | ಬಿರುಬಿಸಿಲ ಕೊಳ್ಳೆಂದು ಕೈಗೊಂಡೆಚ್ಚ ರತಿರಥರು ||೪|| ಮೊಗಕೆ ಪಲಗೆಯನೊಡ್ಡಿ ಕಾಲಾ| ಳಗದು ಕವಿದುದು ಸರಳ ಸರಿಯಲಿ | ಬಿಗಿದಬಲ್ಲಾಳೌಕಿತುರುವಣಿಸಿದರು ಸಬಳಿಗರು|| ಉಗಿದೊತಾಯುಧವಲಿರಿದರುಭಾ | ಷೆಗಳರಾವುತ್ತರು ಕೆಂಗಲಿಯಕೋ | ಲುಗಳಹೆಮ್ಮಳಿಗರೆದು ಕಪಿದರು ಚೋದರುರವಣಿಸಿ ||೫|| ಅರರೆ ರಾವುತರಾವುತೆಂಬ | ಬ್ಬರಣೆ ಮಸಗಿದುದೊಂದುದೆಸೆಯಲಿ| ಸರಿಸಹಳಿಗ ಪೂತುಪಾಯಕುಯೆಂಬಕಳಕಳಿಕೆ|| ಧಿರುರೆ ಸಾರಥಿಹಳುಹಳೆಂಬ| ಬ್ಬರಣೆ ಮಸಗಿದುದೊಂದುಕಡೆಯಲಿ | ಕಲಘುಟಿಯ ಕಡುಹೊಂದುಕಡೆಯಲಿ ಮುಸುಕಿತರ್ಜುನನ ||೬|| ಸುರಪನವಸಿಯ ಚಟ್ಟಿ ದೊಡೆಸುರ | ರರಮನೆಯಗಾಯಕರ ಗೆಲಿದೊಡೆ| ಜರಡುಜಂತ್ರದಮೀನನೆಚ್ಚೊಡೆ ರಾಯಕಟಕದಲಿ || ಗೊರವನೊಳು ಕಾದಿದೊಡೆ ಹೆಂಗುಸ| ನಿರುಳುಕದ್ದೋಡಿದೊಡೆಧಿಟನೀಧುರಕೆ ಧೀರನೆ ಪಾರ್ಥ ಫಡಯೆನುತೆಚ್ಚ ರತಿರಥರು ||೭|| ಭಂಡರುಲಿದೊಡೆ ಗರುವರದವಾ | ಕೊರ್ಂಡು ನುಡಿವರೆ ಸಾಕಿದೇತಕೆ | ದಂಡವರಿಪೆನು ನಿಮಿಷಸೈರಿಸಿ ನಿಂದು ಕಾದುವೊಡೆ || ಕೊಂಡಹಜ್ಜೆಗೆ ಹಂಗಿಗರು ಪಿಗೆ | ಗಂಡುಗೆಡದಿರಿ ನಿಮ್ಮ ಬಗೆಗಳ | ಕಂಡುಬಲ್ಲೆನೆನುತ್ತ ಫಲುಗುಣನೆಚ್ಚನತಿರಥರ ||೮|| ಗುರುಸುತನ ಬಳಿ ರಥವನೈಸಾ | ವಿರವ ಕೊಂದನು ಕರ್ಣನೊಡನೆಯು | ವರಮಹಾರಥರೆಂಟುಸಾವಿರವನು ರಣಾಗ್ರದಲಿ || ಗುರುನದೀಜರ ಬಳಿರಥವಸಾ | ವಿರವ ಕೃಪಸೈಂಧವಸುಯೋಧನ | ರರಸುಘಟ್ಟಿನ ರಥವ ಮುರಿದನು ಹತ್ತುಸಾವಿರವ ||೯|| ತುರುಗದಳವೆಂಬತ್ತುಸಾವಿರ | ಕರಿಘಟೆಯನೈವತ್ತುಸಾವಿರ | ವರ ರಥವ ಹುಡಿಮಾಡಿದನು ಹನ್ನೆರಡುಸಾವಿರವ || ಧುರಕೆ ವೆಗ್ಗಳವಾದರಥಿಕರ | ತಿರವ ತರಿದನು ಮೂರುಕೋಟಿಯ | ನರಸುಕಾಲಾಳುಗಳ ಗಣನೆಯನರಿಯೆನಾನೆಂದ ೧೦|| ಸವಗ ಸೀಳಿತು ಕೃಪನ ಭೀಷ್ಮನ | ಕವಚ ಹರಿದುದು ದ್ರೋಣ ನೊಂದನು | ರವಿಯಮಗೆ

ಮಸೆಗಂಡನಶ್ವತ್ಥಾಮ ಮೈಮರೆದ ॥ ಅವನಿಪತಿಗೇರಾಯ್ತು ಸಲೆ ಸೈಂ । ಧವ ಶಕುನಿ ದುಶ್ಶಾಸನಾ
ದಿಗ । ಳವಯವದೊಳಂಬುಗಳನಾಯ್ದರು ತೋದರಕ್ತದಲಿ ॥೧೧॥ ಕಡಿವಡೆದುದಾಚಾರ್ಯಬಲ ಬೆಂ।
ಗೊಡದೆ ನಾಯಕರಾಂತು ತಮಗಿನ್ನೊಡಲುಗಳವೇಲಾಶೆಯೇಕೆನೆನ್ನುತ ಮಿಗೆ ಮಸಗಿ ॥ ಸೆಡೆದು
ಸೊಪ್ಪಾದಖಿಳಸುಭಟರ । ಗಡಣವನು ಮೇಳೈಸಿ ಮಗುಳವ । ಗಡಿಸಿ ನೂಕಿತು ಸೇನೆ ಭೀಷ್ಮದ್ರೋ
ಣರಾಜ್ಞೆಯಲಿ ॥೧೨॥ ಖತಿಯಲಶ್ವತ್ಥಾಮನೀರವಿ । ಸುತನ ಜರೆದನು ಗಾಯವಡೆದೈ । ಪ್ರತಿಭಟ
ನ ಭಾರವಣೆ ಲೇಸೇ ಕರ್ಣ ನೀನರಿವೈ ॥ ಅತಿಬಲನು ನೀನಹಿತಬಲವನ । ಹುತವಹನು ನೀನಿರಲು
ಕುರುಭೂ । ಪತಿಯ ಬಲ ನುಗ್ಗಾಯ್ತಲಾ ನಿಷ್ಕರುಣಿ ನೀನೆಂದ ॥೧೩॥ ಭಟನು ನಾನಿರಲುಭಯ
ರಾಯರ । ಕಟಕದೊಳಗಿನ್ನಾವನೆಂದು । ಬ್ಬಟೆಯ ನುಡಿಗಳ ನುಡಿದು ಬಾಚಿದೆ ಕೌರವನ ಧನವ ॥
ಭಟನು ಫಲುಗುಣನಹನು ತೋರಾ । ಪಟುತನವನೆಲೆಯುಪಚಯಾಸ್ತ್ರೀ । ಪಿಟನೆ ಪಿಪ್ಪಲನಾದೆ
ಯೆಂದನು ದ್ರೋಣಸುತ ನಗುತ ॥೧೪॥ ಆಗಳೇಳಿಸಿ ನುಡಿದನುಚಿತಾ । ನೀಗಳೇನಾಯಿತ್ತು ನುಡಿಗಳ।
ತಾಗನರಿಯದೆ ತರಿಚುಗೆಡೆವರೆ ಗರುವರಾದವರ ॥ ಈಗಳಾವ್ಹಾರುವರು ಕ್ಷತ್ರಿಯ । ನಾಗಿ ನೀನರ್ಜುನನ
ತುರುಗಳ । ಬೇಗ ಮರಳಿಚಿ ತಂದು ತೋರದೆ ಮಾಣೆ ಬಿಟವೆಂದ ॥೧೫॥ ಎಲವೊ ಗರುಡಿಯ ಕಟ್ಟಿ
ನಾಮವ । ಕಲಿಸಿ ಬಳಿಕಾಕೋಲಮುಕ್ಕಳ । ಬಲದಿ ಬದುಕುವಕೃಪಣವೃತ್ತಿಯ ನಿಮ್ಮ ಕೂಡೆಮಗೆ
ಕಲಹವೇತಕೆ ಕಾಣಬಹುದೆಂ । ದಲಘುಭುಜಬಲ ಭಾನುಸುತ ಕಡು । ಮುಳಿದು ಘಡಘಡ ಪಾರ್ಥ
ವೈದೋರೆನುತ ಮಾರಾಂತ ॥೧೬॥ ಇತ್ತಲಿತ್ತಲು ಪಾರ್ಥ ನಿಲುನಿಲು । ಮೃತ್ಯುಯನ ಹಾರುವ
ರಸಂಜಿಸಿ । ಹೊತ್ತುಗಳೆದರೆ ಹೋಹುದೇ ಕೈದೋರು ಮೈದೋರು ॥ ತೆತ್ತಿಗರ ಕರೆ ನಿನ್ನ ಬೇರ್ಕೆ
ನು । ಕಿತ್ತು ಕಡಲೊಳು ತೊಳೆವರಿಪುಭಟ । ಮೃತ್ಯುವಲಯಾ ಕರ್ಣನೆನುತಿದಿರಾಗಿ ನಡೆತಂದ
॥೧೭॥ ಉಂಟು ನೀನಾಹವದೊಳಗೆ ಗೆಲ । ಲೆಂಟೆದೆಯಲಾ ನಿನ್ನ ಕೋಲುವ । ರುಂಟೆ ವೀರರು
ಕೌರವೇಂದ್ರನ ಬಹಳಕಟಕದಲಿ ॥ ಟೆಂಟಣಿಸದಿದಿರಾಗು ನಿನ್ನಯ । ಸುಂಟಗೆಯನಿತ್ತಖಿಳಭೂತದ
ನಂಟನರ್ಜುನನೆನಿಸಿಕೊಂಬೆನು ಕರ್ಣಕೇಳೆಂದ ॥೧೮॥ ಚಕಿತಚಾಪರು ಗಾಢಬದ್ಧ । ಭ್ರುಕುಟಭೀಷಣ
ಮುಖರು ರೋಷ । ಪ್ರಕಟಪಾವಕವಿಸ್ಫುಲಿಂಗರು ಹೊಕ್ಕು ಸಮತಳಿಸಿ ॥ ವಿಕಟಶೌರ್ಯೋತ್ಕಟಮ
ಹಾಸಾ । ಯಕರು ನಿಷ್ಠುರಸಿಂಹಗರ್ಜನ । ವಿಕಳಿತಾಚಲಸನ್ನಿವೇಶರು ಹೊಕ್ಕು ತರುಬಿದರು ॥೧೯॥
ಪೂತುರೇ ಬಿಲುಗಾರ ಮಝರೇ । ಸೂತನಂದನ ಬಾಣರಚನಾ । ನೂತನವಬಿಲುವಿದ್ಯೆ ಭಾರ್ಗವ
ಸಂಪ್ರದಾಯವಲಾ ॥ ಆತುಕೊಳ್ಳೈ ನಮ್ಮ ಬಲುಮಗ । ಳೇತರತಿಶಯವೆನುತ ಸರಳಿನ । ಸೇತುವನು
ಕಟ್ಟಿದನು ಗಗನಾಂಗಣಕೆ ಕಲಿಪಾರ್ಥ ॥೨೦॥ ಮೇಲುಗೈಯಹೆ ಬಿರುದರೊಳು ಬಿ । ಲ್ಲಾಳು ನೀನಹೆ
ಚಾಪವಿದ್ಯಾ । ಭಾಳನೇತ್ರನೆ ಗರುಡಿಯಲ್ಲಾ ಕಲಿತಮನೆ ನಿನಗೆ ॥ ಕೋಲು ನಮ್ಮವು ಕೆಲವು ಸಮ
ಗೈ । ಯಾಳೆ ನಿಮಗಾವೆನುತ ನೋಟಕ । ರಾಲಿ ಝೊಂಪಿಡೆ ಕರ್ಣ ತುಡುಕಿದನಂಬಿನಂಬುಧಿಯ
॥೨೧॥ ಅಹಹ ಫಲುಗುಣ ನೋಡಲಮ್ಮೆನು । ಬಹಳಬಾಣಾದ್ಭುತವಾದುದು । ಮಹಿ ಮಹಾದೇ
ವೆನುತ ಸಾರಥಿ ಮುಚ್ಚಿದನು ಮುಖವ ॥ ರಹವ ಮಾಡದಿರೆಲವೊ ತನಗಿದು । ಗಹನವೇ ನೋಡೆನು
ತ ನರನತಿ । ಸಹಸದಲಿ ಕೆದರಿದನು ಕರ್ಣನ ಬಾಣಪಂಜರವ ॥೨೨॥ ವೀರನಲ್ಲಾ ಬನದರಾಜಕು ।

ಮಾರನೆಲ್ಲಾ ಕೌರವನ ಬಡಿ । ಹೋರಿಯುಲ್ಲಾ ತಿಳಿದಿರ್ಕೆ ದಿಟವೇಕಚಕ್ರದಲಿ ॥ ಸಾರಿಯರ ಸಾತ್ಯಕ ದಚೋಹವ । ಸಾರು ತೆಗೆದರು ಪಾರ್ಥ ನಿನಗೀ । ಶೌರಿಯುದಸಿರಿಯೆಂತೆನುತ ತೆಗೆದೆಚ್ಚನಾಕರ್ಣ ॥೨೩॥ ಬಲುಗಡಿಯುನಹೆ ಬೇಟೆಗಾರರ । ಬಳಗವುಳ್ಳವನಹೆ ವಿರೋಧಿಯು । ದಳಕ ನೀನೊಡ್ಡುಳ್ಳಭಟನಹೆ ಸ್ವಾಮಿಕಾರ್ಯದಲಿ ॥ ತಲೆಯು ತೆರುವವನಹೆ ಕುಭ್ಹಾಷೆಗೆ । ಮುಳಿವವರು ನಾನಲ್ಲ ಸೈರಿಸು । ಬಳಿಕೆನುತ ಕಲಿಪಾರ್ಥ ಸುರಿದನು ಸರಳಸರಿವಳೆಯು ॥೨೪॥ ಅದ್ದನೋ ಬಾಣಾಂಬುಧಿಯಲೊಡೆ । ಬಿದ್ದನೋ ವಿತಳವಲಿ ಮೇಗ್ಹೊಫ । ಕದ್ದನೋ ಕೈವಾರವೇತಕೆ ಕಾಣೆವಿನಸುತನಾ ॥ ತಿದ್ದಿತಾತನದೆಸೆ ನದೀಸುತ । ನಿದ್ದನಾದೊಡೆ ಕೌರವೇಂದ್ರನ । ಹೊದ್ದಹೇಳೆಂದೊದರುತಿರ್ದುದು ಕೂಡೆ ಕುರುಸೇನೆ ॥೨೫॥ ಇಡಿದಪೋಡದಮುತ್ತಿಗೆಯು ಮೇ । ಲೊಡೆದು ಮೂಡುವರವಿಯವೋಲ್ಸೈರೆ । ಕಡಿದು ಶರಪಂಜರವ ಮುಸುಕಿದನರ್ಜುನನ ರಥವ ॥ ನಡುಗಿದನು ವೈರಾಟ ಹಯುವಡಿ । ಗಡಿಗೆ ನೊಂದವು ಹನುಮನಂಬರ । ವೊಡೆಯೆ ಬೊಬ್ಬಿರಿದನು ಮಹಾದ್ಭುತವಾಯ್ತು ನಿಮಿಷದಲಿ ॥೨೬॥ ಸ್ತೋಲವಾಯ್ತಿತು ಕರ್ಣಗೆಂಬರ । ಸಾಲಗೆಯು ಕೊಯ್ಕೈಲವೊ ಮಝುಬಿ । ಲ್ಲಾಳುರಾಯನ ಪಟ್ಟದಾನೆ ವಿರೋಧಿಭೂಪತಿಯಾ ॥ ಭಾಳದಕ್ಕರ ತೊಡೆಯಿತೋ ತೆಗೆ । ಕಾಳಗವನೆಂದಖಿಳ ಕುರುಬಲ । ಜಾಲ ಬೊಬ್ಬಿಡೆ ಕರ್ಣ ಮೆರೆದನು ಬಿಲ್ಲಬಲುಮೆಯಲಿ ॥೨೭॥ ಅರಿಭಟನ ಶರಜಾಲವನು ಸಂ । ಹರಿಸಿದನು ನಿಮಿಷದಲಿ ಫಲುಗುಣ । ನೆರಡುಶರದಲಿ ಸಾರಥಿಯನೈದಂಬಿನಲಿ ಹಯುವ ॥ ಶರಚತುಷ್ಟಯದಿಂದ ಕರ್ಣನ । ಕರದ ಬಿಲ್ಲನು ಕಡಿಯೆ ಭಗ್ನೋ । ತ್ಕರುಷಭಂಗಿತನಾಗಿ ಮುರಿದನು ಪೋನದಲಿಕರ್ಣ ॥೨೮॥ ಓಟವೇ ಯುಪಜಯುದ ಬೊಡ್ಡಿಯು । ಬೇಟವೇ ಬೆಸಗೊಳ್ಳಿರ್ಕೆ ವೊಳ । ತೋಟಿಗೊತ್ತಾಳಹುದು ನಾಲಗೆಯಾಗಳೇನಾಯ್ತು ॥ ಲಟವಿಕಭೂಪತಿಯು ಕೀರ್ತಿಯು । ಕೂಟಣಿಗರೊಗ್ಗಾಯ್ತು ತೆಗೆ ಮರು । ಳಾಟವಿನ್ನೇಕೆನುತ ಪಾರ್ಥನ ತಾಗಿದನುದ್ರೋಣ ॥೨೯॥ ಇದಿರುಗೊಳ್ಳೈ ಪಾರ್ಥ, ವಿಪ್ರರಿ । ಗದಟುತ್ರನವೆಲ್ಲಿಯದು ಕರ್ಣನ । ಸದೆಬಡಿದಸಾಹಸಕೆ ಹಿಗ್ಗದಿರೆಮ್ಮ ಕೈಗುಣವ ॥ ಕದನದಲಿ ನೀ ನೋಡ್ಡುಕೈಸಾ । ರಿದವು ಗಡ ಕಾವಾರಿ ಹಿಡಿವ । ಗ್ದದಶರಾವಳಿಯುದರಪರಿಯಂತೆಮಗೆ ತೋರೆಂದ ॥೩೦॥ ಇದಿರುಗೊಂಡೆನು ವಂದಿಸಿದೆನೆ । ಮ್ಮದಯು ನಿಮ್ಮದು ನಿಮ್ಮ ಕೃಪೆಯಲಿ । ವಿದಿತವೆನಗೀವಿದ್ಯೆ ನೀವ್ಕಿಮಾರಿ ಮುರವ್ಯೆರಿ ॥ ಹೃದಯು ನಿಮ್ಮದು ಕಾಳಗಕೆ ನಿ । ಮ್ಮದಿರೊಳಾಳೇ ತಾನು ಕರುಣಾ । ಸ್ಪದರು ನೀವೆಂದೆಚ್ಚನರ್ಜುನನವರಮೋಹರಕೆ ॥೩೧॥ ವಿನಯುವುಚಿತವೆ ತತ್ತ್ವಸಮರದ । ಮೊನೆಯೊಳಾರಿದಿರಾದೊಡಿರುವುದು । ಜನಪರಿಗೆ ಕರ್ತವ್ಯವದು ಸಾಕುಳಿದಮಾತೇನು ॥ ತನುಜ ಸೈರಿಸುಸೈರಿಸೆಂದೆ । ಚ್ಚನು ನಿರಂತರಬಾಣವರುಷವ । ನನಿಮಿಷಾವಳಿ ಪೂತುರೆನೆ ಕೈದೋರಿದನು ದ್ರೋಣ ॥೩೨॥ ಭಾವಿಸಲ್ಪ್ರತಿಬಿಂಬದಲಿ ಬೇ । ರಾವುದತಿಶಯುವುಂಟು ನೀವೆನ । ಗಾವಪರಿಯಲಿ ಕಲಿಸಿದಿರಿ ನಿಮಗೊಪ್ಪಿಸುವೆನವನು ॥ ನೀವು ನೋಡುವುದೆನುತ ನರನೆಸ । ಲಾವುದೆಂಬರವಾವುದವನಿಯು । ದಾವುದರಿಬಲವೆನಲು ಹಬ್ಬಿತು ಪಾರ್ಥಶರಜಾಲ ॥೩೩॥ ವಿಷಯುಲಂಪಟತನದಲಾವ್ನಿ । ರ್ಮಿಸಿದೆವಶ್ವತ್ಥಾಮನನು ನ । ಮ್ಮಸೆವಮೋಹದಕಂದನೈಯೆಲೆಪಾರ್ಥ ನೀನೆಮಗೆ ॥ ಎಸುಗೆಗಾರರದಾರಿಗೀಶರ । ವಿಸರ ಸಂಭವಿಸುವುದಿದಾರಿಗೆ । ವಿಷಮವೀರನ ಕೈಯು ಚಳಕವಿದೆಂದನಾದ್ರೋಣ ॥೩೪॥ ಎನುತ ಸುರಿದನು ಸರಳ

ಸಾರವ । ನನಲಗರ್ಭದ ಬಾಯಧಾರೆಗ । ಳನಿಲಗರ್ಭದ ಗರಿಗಳಶನಿಯಗರ್ಭವಿಂಟೆಗಳ ॥ ಮೊನೆಯ ಬಂಬಲುಗಿಡಿಯ ಹೊಗರಿನ । ತನಿಹೊಗೆಯ ಹೊದರುಗಳ ಪುಂಖ । ಧ್ವನಿಯ ಥಟ್ಟಣೆ ಮಿಗಲು ಕವಿದವು ದ್ರೋಣನಂಬುಗಳು ॥೩೫॥ ದೇವಭಾರದ್ವಾಜ ಬಲುವಿ । ದ್ಯಾವಿಷಯನವರುದ್ರ ಘನಶಸ್ತ್ರಾವಳೀನಿರ್ಮಾಣನೂತನಕರ್ಮಲಭವ ಯೆನುತ ॥ ಕೋವಿದನ ಶರತತಿವಿಸ್ತರವನು ಗಾಂ । ಡೀವಿಯಗಣಿತಬಾಣಭಾನುಕ । ರಾವಳಿಯಲಿಪಹರಿಸಿದನು ಸುರರಾಜಸುತ ನಗುತ ॥೩೬॥ ಹಿಳುಕನೀದುದೊ ಗಗನವಂಬಿನ । ಜಲಧಿ ಜರಿದುದೊ ಪಾರ್ಥನೆಂಬ । ಗ್ಗಳವಿರಿಂಚನ ಬಾಣಸೃಷ್ಟಿಯೊ ಬಲ್ಲನಾವವನು ॥ ಇಳೆಯ ಮರ್ತ್ಯರು ಶಿವಶಿವಾ ತಗೆ । ಫಲುಗುಣಗೆ ಸರಿಯೆಂಬವರಬಾ । ಯ್ಬುಳಿವುದೋ ಗುಡಾಕೇಶೆ ಮತ್ಸರವೆಂದುದಮರಗಣ ॥೩೭॥ ಬಳಿಕ ಪಾರ್ಥನ ಬಾಣದಲಿ ಬಸ । ವಳಿಯೆ ಸಾರಥಿ ಮೆಲ್ಲಮೆಲ್ಲನೆ । ತೊಲಗಿಸಿದನಾರಥವನಿತ್ತಲು ಕರ್ಣನೀಕ್ಷಿಸಿದ ॥ ಎಲೆಲೆ ಕಟಕಾಚಾರ್ಯ ಗೆಲಿದನು । ಫಲುಗುಣನನಿನ್ನೇನು ಕೌರವ । ಬಲದಹಗೆ ಹರಿವಾಯ್ತು ರಾಜಾಭ್ಯುದಯವಿನ್ನೆಂದ ॥೩೮॥ ಘಡಘಡಿಲವೋ ಕರ್ಣ ಸಾರಥಿ । ಮಡಿದೊಡೇನಮಸೋಲವೇ ಕಾ । ಳ್ಗಡೆಯದಿರು ನೋಡಾದೊಡಯ್ಯನ ಹರಿಬವಾಹನವ ॥ ನುಡಿಗೆ ತೆರಸಾಯ್ತೆಂಬಖುಲ್ಲರ । ಬೆಡಗನೋಡೆನುತುಗ್ರಚಾಪವ । ಮಿಡಿದು ಮಂಡಿಸಿ ಹರನ ಹೋಲುವಸುಭಟ ಮಾರಾಂತ ॥೩೯॥ ಆವುದ್ಯೆ ನೀನರುದಬಿಲುವಿದ್ಯಾವಿಷಯಘನ ಚಾಪವೇದಾ । ಧ್ಯಾವಳಿಯಶರವಮೌಕ್ತಿಕೋಪನ್ಯಾಸವೆಂತೆಂತು ॥ ಕೋವಿದರ ಭೂಸುರರ ಯುಕ್ತಿಯ । ನೀವು ಕೊಂಡಿರೆ ಶಸ್ತ್ರವಿದ್ಯಾ । ಭಾವಗೋಷ್ಠಿಯ ಬಲ್ಲೊಡರಿಯೆಂದೆಚ್ಚನರ್ಜುನನ ॥೪೦॥ ಅಕ್ರಮವತಿರಿಭುವನವಿದ್ಯಾಚಕ್ರವರ್ತಿಗಳೆಂದು ನೀವೀ । ವಿಕ್ರಮದ ಮಾತಿನಲಿ ಮೇಗರೆ ಮೆರವಭಟರುಗಳೇ ॥ ಶಕ್ರನಳುಕುವಬಾಹುಬಲವಿಪ್ರು । ಚಕ್ರದೊಳಗಿನ್ನಾರಿಗುಂಟಿದು । ವಕ್ರಭಣಿತೆಗೆ ಸಲುವುದಶ್ವತ್ಥಾಮನನುತೆಚ್ಚ ॥೪೧॥ ಅರ್ಜುನನ ಶರವಿದ್ಯೆವಿವರಿಸೆ । ದುರ್ಜಯವಲಾ ಗರುವತನದಲಿ । ಗರ್ಜಿಸಿದೊಡೇನಹುದೆನುತ ಗುರುಸೂನು ಹರುಷದಲಿ ॥ ನಿರ್ಜರರು ಮಝಭಾಪುರೆನಲಾ । ವರ್ಜಿಸಿದತಿರುವಿನಲಿ ಸಂಗರ । ನಿರ್ಜಿತೇಂದ್ರಿಯನೆಸಲು ಕಣೆಗಳು ಕವಿದವಂಬರಕೆ ॥೪೨॥ ಗುರುತನೂಜನಲಾ ವಿಭಾಡಿಸಿ । ಹುರುಳುಗೆಡಿಸಲುಬಹುದೆ ನೋಡು । ತ್ತರಸುಯೋಧನಸೈನ್ಯಶರಧಿಯ ಗುಂಪಿನತಿಬಲರ ॥ ಹರನ ಸರಿದೊರೆಯಸ್ತ್ರವಿದ್ಯಾ । ಧರರು ಮರ್ತ್ಯರೊಳಾರು ಲೇಸೆಂ । ದುರುಳೆಗಡಿದನು ಪಾರ್ಥನಶ್ವತ್ಥಾಮನಂಬುಗಳ ॥೪೩॥ ಗುರುಸುತನ ಶರಜಾಲವನು ಸಂ । ಹರಿಸಿ ಮಗುಳಸ್ತ್ರೌಘವನು ವಿ । ಸ್ತರಿಸಿದನು ಕಲಿಪಾರ್ಥನೀತನ ಸರಳುಗಳ ಸವರಿ ॥ ತರಣಿಬಿಂಬವ ನಭವಹೂಳ್ದುದು । ಗುರುಸುತನ ಸಾಮರ್ಥ್ಯವಿಂತಿ । ಬ್ಬರಿಗೆ ಸಮಬಲವಾಗಿ ಸಮತಳಿಸಿತ್ತು ರಣಕೇಳಿ ॥೪೪॥ ತೀರವರ್ಜನನಂಬು ರಣದಲಿ । ತೀರಿದವು ಗುರುಸುತನ ಶರಕ್ರ । ವಾರವೇ ಕೈಗುಂದಿ ನಿಂದನು ದ್ರೋಣನಂದನನು ॥ ವ್ಯೇರುಮೊಗದಿರುಹಿತ್ತಲಾ ರಣ । ಧೀರನಶ್ವತ್ಥಾಮ ಸೋತನು । ಸಾರೆನುತ ಕೃಪನೊರುಬಿದನುತರುಬಿದನು ಫಲುಗುಣನ ॥೪೫॥ ತಂದೆಮಕ್ಕಳು ಸೋತರಿನ್ನೇ । ನೆಂದು ಮುಯ್ಯಾನದಿರ್ಕು ನಿಲುನಿ । ಲ್ಲೆಂದು ಕೃಪೆನಹಾಯ್ದು ಪಾರ್ಥನ ರಥವ ತರುಬಿದನು ॥ ಬಂದಪರಿ ಲೇಸೆನುತ ಫಲುಗುಣ । ನೊಂದು ಕವಲಂಬಿನಲಿ ಗುರುಗಳಿ । ಗಿಂದು ವಂದಿಸಬೇಕೆನುತ ಕೀಲಿಸಿದನಾರಥವ ॥೪೬॥ ತರಹರಿಸಿ ಶರವೈದರಲಿ

ಸಂ । ಹರಿಸಿಕೊಳ್ಳೆಂದೆಚ್ಚೊಡೀತನ । ತುರಗವನು ತಾಗಿದವು ನೊಂದವು ರಥದ ವಾಘೆಗಳು ॥ ಕೆರಳಿ ಫಲುಗುಣನರ್ಧಚಂದ್ರದ । ಸರಳಿನಲಿ ಸಾರಥಿಯ ತುರಗವ । ಕರದಬಿಲ್ಲನು ಕಡಿಯೆ ತೊಲಗಿದನಾ ಕೃಪಾಚಾರ್ಯ ॥೪೭॥ ಎಲೆಲೆ ಕರ್ಣದ್ರೋಣಗುರುಸುತ । ರಲಘುಭುಜಬಲಕೃಪನು ಹೊಕ್ಕಿರಿ । ದಳುಕಿದರು ಮಝಭಾಪುರೆಂತುಟೊ ಪಾರ್ಥನಗ್ಗಳಿಕೆ ॥ ಗೆಲುವನೊಬ್ಬನೆ ನಮ್ಮ ಬಲದಲಿ । ನಿಲುಕಿ ಹಿಂಗುವಸುಭಟರಿನಿಬರು । ಸುಲಭವೆಮಗೀಸೋಲವೆಂದುದು ಕೂಡೆ ಕುರುಸೇನೆ ॥೪೮॥ ಬಾಯಬಿಟ್ಟುದು ಸಕಲ ಕೌರವ । ರಾಯದಳವಡಮುಖದಲಭಟರು । ಹಾಯಿದರು ತವಪೇನು ತೆರದರಸಾಯ್ತು ಕುರುಸೇನೆ ॥ ಕಾಯಬೇಕೆಂದೆನುತ ವರಗಾಂ । ಗೇಯ ಚಾಪವ ಮಿಡಿದು ಬೆರಳಲಿ । ಸಾಯಕವ ತೂಗುತ್ತ ತಡೆದನು ಪಾರ್ಥನುರವಣೆಯ ॥೪೯॥ ಓಡಿದವರಲ್ಲಲ್ಲಿ ಧೈರ್ಯವ। ಮಾಡಿತ್ತಚ್ಚಾಳೊಗ್ಗಿನಲಿ ಹುರಿ । ಗೂಡಿತಬ್ಬರ ವುಗುಳೆ ನಿಬ್ಬರವಾಯ್ತು ನಿಮಿಷದಲಿ ॥ ಕೂಡೆ ಗುಗುಟ್ಟಿತು ಚತುರ್ಬಲ। ಜೋಡುಮಾಡಿತು ಕಪಿದುದೀತನ।ಕೂಡೆ ಘನಗಂಭೀರಭೇರಿಯಬಹಳರಭಸದಲಿ ॥೫೦॥ ತೊಲಗು ರಾಯಪಿತಾಮಹನ ಖತಿ । ಬಲುಹು ತೆತ್ತಿಗರಹರೆ ರುದ್ರನ । ನಳಿನನಾಭನ ಕರಸು ನೀ ಸಿಶು ಸಾರುಸಾರೆನುತ ॥ ಉಲಿವಬಳಿಯಮಹಾರಥರ ಕಳ। ಕಳದ ಕಹಳೆಯಪಾಠಕರ ಗಾ।ವಳಿಯಬಿರುಬಿನ ಬಹಳತೆಯಲೈತಂದ ನಾಭೀಷ್ಮ ॥೫೧॥ಪೂತುರೇ ಕಲಿಪಾರ್ಥ ಭುವನ । ಖ್ಯಾತನಾದೈ ಕಂದ ದ್ರೋಣನ । ಸೂತಸುತಕೃಪಗುರು ತನೂಜರ ಗೆಲಿದೆ ಬಳಿಕೇನು ॥ ಬೀತುದೇ ನಿಮ್ಮವಧಿ ಕುರುಕುಲ । ಜಾತವನು ಹರೆಗೆಡಿದು ನಿಮಯ। ಭೂತಳವನಾಳುವಿರೆ ನೀವೆಂದೆಚ್ಚನಾಭೀಷ್ಮ ॥೫೨॥ ನಿಮ್ಮ ಕಾರುಣ್ಯಾವಲೋಕನ । ವೆಮ್ಮಸಿರಿ ಬೇರೆಮಗೆ ಕಾಳಗ । ದೆಮ್ಮಗೆಯ ವಿಕ್ರಮದ ವಿವರಣವಿದ್ಯೆಫಲಿಸುವುದೇ ॥ ಬಿಮ್ಮು ಬೀಸರವಹುದೆ ನಿಮ್ಮಯ । ಸೊಮ್ಮಿನವರಿಗೆ ಬೇರರರಾಜ್ಯದ। ಹೆಮ್ಮೆತಾನಮಗೇಕೆನುತ ಕೈಯೊಡನೆ ನರನೆಚ್ಚ ॥೫೩॥ ಎನಲು ಪಾರ್ಥನ ಬಾಣವನು ಖಂ । ಡಿಸುತ ಸೂತನ ನೆರಡರಲಿ ಕೀ। ಲಿಸಿದನೈವಂಬಿನಲಿ ಹನುಮನ ಹಸ್ತಯನೊಡೆಯೆಚ್ಚ ॥ ನಿಶಿತಶರವೆಂಟರಲಿ ಕವಚವ । ಕುಸುರಿದರಿದನು ನರನ ವಕ್ಷದ । ಬಿಸುಗೆಬಿಡೆ ಮೂರಂಬಿನಲಿ ಮುರಿಯೆಚ್ಚುಬೊಬ್ಬಿರಿದ ॥೫೪॥ ಅರಿಯಶರಹತಿಗುತ್ತರನ ತನು। ಬಿರಿಯೆ ಬಸವಳಿದನು ಕಪೀಶ್ವರ।ನೊರಲಿದನು ರಾವಣನ ಗಾಯವ ನೆನೆದನಟಗಡಿಗೆ ॥ ಮರೆದ ಮಲಗಿದಸೂತನನಸಾ। ಲ್ಕೆರಡು ಗಳಿಗೆಯ ಬೀಸಿ ಮೂಗಿನೊ।ಳೆರಲ ಕಂಡನು ಪಾರ್ಥನೆತ್ತಿದನಳುಕಿದುತ್ತರನ॥೫೫॥ ಕವಳವಿದಕೋ ಬಾಣಶಾಸ್ತ್ರ । ನಿವಹಧಾರಾಸ್ತಂಭವಿಸ್ಮಾ । ಹವದೊಳೆಂಜದಿರೆನುತೆ ಕೊಡಲುತ್ತರನ ದುಗುಡದಲಿ ॥ ಬವರದ್ಧಾಧಿಯನರಿಯದನ ಕೊಂ । ದವನು ನೀನೋ ಭೀಷ್ಮನೋ ಯೆನ । ಲವನ ನುಡಿಗರ್ಜನನು ನಗುತಪರಾಧವುಂಟೆಂದ ॥೫೬॥ ಹದುಳಿಸಿನ್ನಂಜದಿರು ಬಾಣಾ । ಘದ ವಿದಾರಣ ವಿದು ವಿಚಾರಿಸ। ಲೆದೆಬಿರಿದು ತಾನೊಂದೆನಿದೆ ನೋಡೆನ್ನ ಗಾಯವನು ॥ ಒದೆಮುಕೊಳುತ್ತೆಥಾನೆ ಸಿಂಧದ । ತುದಿಯ ಹನುಮನು ವಜ್ರಮಯದೇ । ಹದಲಿ ನೆಟ್ಟವು ಕೋಲು ಮುನಿದೊಡೆ ರುದ್ರನೀಭೀಷ್ಮ। ಎಂದು ಮೂರಂಬಿನಲಿ ಗಂಗಾ । ನಂದನನ ಮುಸುಕಿದನು ಸಾರಥಿ । ನೊಂದನಾಧ್ವಜದಂಡವುಡಿದುದು ರಥ ವಿಸಂಚಿಸಿತು ॥ ಮುಂದುಗೆಟ್ಟನು ಭೀಷ್ಮನಹುದೋ । ಕಂದಯೆನುತಾರಂಬಿನಲಿ ಖತಿ । ಯಿಂ

ದುದು ಅರುಣಮಯೂಖಲ । ನೆರವಣಿಗೆಯಲಿ ನಿಂದು ತೊಟ್ಟನು ನರ ಮಹಾಶರವ ॥ ತರಿದನೆಡೆಯ
ಲಿ ಭೀಷ್ಮನುರೆ ಬೊ । ಬ್ಬಿರಿದು ಬಳಿಕಾಗ್ನೇಯಬಾಣವ । ಗರಿಯಮಂತ್ರಿಸಿ ಹೂಡಿದನು ಕುರು
ಸೇನೆ ಕಳವಳಿಸೆ ॥೫೯॥ ವರುಣ ಬಾಣದಲಸ್ತ್ರವನು ಸಂ । ಹರಿಸಿದನು ಕಲಿ ಭೀಷ್ಮನೊಬ್ಬೊ । ಬ್ಬ
ರು ಪರಾಜಯ ರೋಷಪಾವಕ ವಿಸ್ಫುಲಿಂಗತರು ॥ ಹರಿಸಿದರು ಕೌಬೇರಮಾರುತ । ನಿರುತಿ ಯ
ಮ ಪುರುಹೂತ ಶಂಕರ । ಪರಿಪರಿಯ ಪ್ರತ್ಯಸ್ತ್ರವನು ಗಾಂಗೇಯ ಫಲುಗುಣರು ॥೬೦॥ ಮವೆ
ತುನಿಲುವೊಡೆ ಭೀಷ್ಮನಲ್ಲದೆ । ಕೆಲರು ಪಾರ್ಥನ ದಿವ್ಯ ಬಾಣಾ । ವಳಿಯ ಗಾರಾಗಾರಗಿನ್ನೀ ಭೀಷ್ಮ
ನುರುವಣೆಗೆ ॥ ಕಲಿಧನಂಜಯ ನಲ್ಲದಿದಿರಲಿ । ನಿಲುವರುಂಟೇ ಭುಜಗ ಸುರನರ । ರೊಳಗೆ ಕೆಲರೆಂ
ದಿಂದ್ರ ನುಡಿದನು ಬೆರಳನೊವೆದೊವೆದು ॥೬೧॥ ಪೂತುಪಾಯಕುಪಾರ್ಥ ಬಿಲು ವಿ । ದ್ಯಾತಿಶಯ
ದಲಿ ಭೀಷ್ಮನೀಪುರು।ಹೂತನಮರಾರಿಗಳಮಿಕ್ಕರಲಾಮಹಾದೇವ ॥ ಈತಗಳು ಜನಿಸಿದೊಡೆ ಹಿಂದೆ
ಮ । ಹೀತಳವ ಕದ್ದೊಯ್ವನೇ ಖಳ । ಸೀತೆಬನದಲಿ ನವೆವಳೇ ಯೆನುತಿರ್ದುದಮರಗಣ ॥೬೨॥
ಹಿಂದೆ ಕರ್ಣನ ಕೈಮೆಯನು ಗುರು । ನಂದನನಬಿಲುಗಾರತನವನು । ಮಂದರೋಪಮ ಧೈರ್ಯವಾ
ಚಾರಿಯನ ಪರಿಣತಿಯ ॥ ಇಂದು ಕೃಪನಗ್ಗಳಿಕೆಯನು ನಲ । ವಿಂದ ಕಂಡೆಸಪಾರಪರಿಯ । ಲ್ಲಿಂದ
ನುತ್ತರನರ್ಜುನಗೆ ಗಾಂಗೇಯನುರವಣೆಯ ॥೬೩॥ ಎನೆಕುಮಾರಕ ಕಾರ್ತವೀರ್ಯಾ । ರ್ಜುನನನಾತ
ನ ತೋರತೋಳಿನ । ಬನವಕಡಿದನು ವೀರಭಾರ್ಗವರಾಮನತಿಬಲನು॥ ಮುನಿದು ಮಲೆತೊಡೆ ಭೀಷ್ಮ
ಸಾತನ । ಮನಕೆ ಭೀತಿಯ ನಿತ್ತನೀತನೊ । ಳೆನಗೆ ಸರಿನೂಕುವದೆ ಕಾಳಗವೆಂದನಾಪಾರ್ಥ ॥೬೪॥
ಮತ್ತೆ ಗಂಗಾಸೂನು ಪಾರ್ಥನ । ತೆತ್ತಿಸಿದನೈದಂಬಿನಲಿ ರಥ । ಕಿತ್ತುಮುಗುಚಲು ಮೂರು ವಜ್ರಾ
ಸ್ತ್ರದಲಿ ಕೀಲಿಸಿದ ॥ ಹುತ್ತಕುರುಗನು ಬಗಿದು ಹೊಗುವವೊ । ಲುತ್ತರಿಸಿದವು ಸರಳು ಮಿಗೆ ಧೃ
ತಿ । ವೆತ್ತು ಫಲುಗುಣನವರ ನೆಚ್ಚನು ಹತ್ತುಬಾಣದಲಿ ॥೬೫॥ ನರನಶರದಲಿ ಭೀಷ್ಮನೆದೆತನು । ಬಿ
ರಿಯೆ ಮೈಝೊಂಪಿಸಿತು ಸಲೆ ತರ । ಹರಿಸಲರಿಯದೆ ಮಲಗಿನಿಂದನು ರಥದ ಕಂಬುಗೆಯ ॥ ಅರರೆ
ಸೋತನು ಭೀಷ್ಮನಿನ್ನೀ । ನುರಿದುದೋ ಕುರುಸೇನೆ ಯಾವೆಡೆ । ದೊರೆಯನುತ ಬಾಯ್ಬಿಡಲು
ಕೌರವರಾಯ ಮಾರಾಂತ ॥೬೬॥ ಸೀಳುನಾಯ್ಗಳ ಬಾಯಕೆಲಬಲ । ದಾಳಹಂಗಿನ ಮೊರೆಯೆ ಸು
ಭಟರ । ಸೋಲವದುರಾಯರಿಗೆ ಸೋಲವೆ ನೂಕುನೂಕೆನುತ ॥ ಕೋಲಹೊದೆಗಳ ಕೆದರಿಸಿಂಧದ ।
ಮೇಲೆಹಾವನುಹಾಯ್ಕಿಸಾರಥಿ । ಮೇಳವಿಸಲವನಿಪನ ರಥವನು ನೆರೆದುದತಿರಥರು ॥೬೭॥ ಕಲಕಿ ಕೆ
ದರಿದ ಬಲಜಲಧಿಯೊ । ಬ್ಬುಳಿಗೆಬಂದುದು ತಳಿತಸತ್ತಿಗೆ । ಗಳವಿಡಾಯಿಯಲಳ್ಳಿರಿವ ನಿಸ್ಸಾಳಕೋ
ಟಿಗಳ ॥ ಉಲಿವಕಹಳೆಯ ಬೈಗುಳೆಡಗೈ । ತಳದಬಾಯ್ಬುಲಗೈಯನೊವೆವುತ । ಬಳಿಕ ಭಟ್ಟರು ಹೊಗ
ಳಿದರು ಕೌರವನ ಬಿರುದುಗಳ ॥೬೮॥ ಒಗ್ಗುಮುರಿಯದೆ ಸೇನೆಮೊಳಗುವ । ಲಗ್ಗವರೆಯಲಿ ಹೆಣನ
ತುಳಿದೊಡೆ । ಮುಗ್ಗಿಕವಿದುದು ಕೌರವೇಂದ್ರನ ಮೊಗದಸನ್ನೆಯಲಿ ॥ ಹುಗ್ಗಿಗರಬಲು ಹುರಿಯನಿಗು
ಚುವೆ । ನೆಗ್ಗುವೆನು ನಿಲ್ಲೆನುತ ಸೇನೆಯ । ನಗ್ಗದಲೊಳಿಕ್ಕಿದನು ಫಲುಗುಣನಗಣಿತಾಸ್ತ್ರದಲಿ
॥೬೯॥ ವೀರರಿದಿರಹ ಹೊತ್ತು ರಣಮೈ । ಲಾರರಾದರು ಮರಳಿತೆಗೆವುದು । ಭೈರವನ ಸಾರೂಪ್ಯ
ವಾದರು ಪೂತುಮಝರೆನುತ॥ ಕೌರವನು ಕರ್ಣಾದಿಗಳ ನುಡಿ । ಹೋರೆಹದಿರಿನೊಳವಗಡಿಸಿ ಹೊಂ ।

ದೇರಪುವ್ವಾಳಿಸುತ ಮೂದಲಿಸಿದನು ಫಲ್ಗುಣನ ||೨೦|| ಬಾಲವೃದ್ಧರ ವಿಪ್ರರನುನೀ | ಕಾಳಗ ದೊಳೋಡಿಸಿದೆನೆಂದೇ | ಮೇಲುಪೋಗಿನಲಿರಲು ಬೇಡೆಲೆಪಾರ್ಥ ಮರುಳಾದೈ || ಆಳಿದಡವಿಯೆ ರಾಜ್ಯವಲ್ಲದೆ | ಮೇಲೆಧರಣಿಯ ಬಯಸಿದೊಡೆನಿವು | ಗಾಳಲೀವೆನೆ ಹೋಗುಹೋಗಾರಣ್ಯಕೆನುತೆಚ್ಚ ||೨೧|| ಗಾರುಗೆಡೆಯಬ್ಧಿರೆಲವೊ ಸತ್ಯವ | ಮಾರಲಮ್ಮದೆ ಲೋಕ ನಿನ್ನನು | ದೂರಬೇಕೆಂದಡವಿಯೊಕ್ಕೆವು ಹೊಲ್ಲೆಯೇನಿದಕೆ || ಜಾರಹೋಯಿತ್ತವಧಿಯಿನ್ನೀ | ಮಾರಿಗಳಹುವ ನಿನ್ನಗಂಟಲ | ನೂರಿ ರಾಜ್ಯವ ತೆಗೆವೆ ಸ್ಥಿರಿಸೆನುತ್ತ ನರನೆಚ್ಚ ||೨೨|| ಅರಿಯೆನೀನೆಲೆ ಮರುಳೆಗರುಡನ | ತರವಳಿಕೆಯಲಿ ಹಾವುಕನ್ನವ | ಕೊರೆದುಬದುಕುವುದೇ ವೃಥಾಕಕ್ಕುಲಿತೆನಿನಗೇಕೆ || ತರಿದುತಿರಿಕಲ್ಲಾಡುವೆನು ನಿ | ಮ್ಮರುವರ್ವೈವರ ಶಿರವನರ್ಜುನ | ಬರಿದೆಗಳಹದಿರೆನುತ ಕೌರವರಾಯ ತೆಗೆದೆಚ್ಚ ||೨೩|| ಗರುಡನೀನಹೆ ನಿನ್ನಪಕ್ಕವ | ಮುರಿದು ಹೆಡತಲೆಗಡುಬಿನ್ನೆಲು | ಮುರಿಯೆ ದುವ್ವಾಳಿಸುವ ಮುರರಿಪು ವೆನ್ನ ನೀನರಿಯಾ || ತರಹರಿಸಿ ಕಲಿಯಾಗುಯೆಂದ | ಬ್ಬರಿಸಿ ಕೌರವ ನೆದೆಯನಗುಳಿದ | ನೆರಡುಬಾಣದೊಳರುಣ ಜಲದೊರತೆಗಳ ಕಾಣಿಸಿದ ||೨೪|| ನವನಿಕಾರಿಯಪಿಲ್ಲಿಸೀರಿಗ | ಳವಯವದ ರಕುತದಲಿ ತೋದವು | ಜವವಳಿದು ಸಾರಥಿಯು ಸೂಚಿಸಿ ರಥವ ಮರಳಿಚಿದ || ಕವಿದನರ್ಜುನ ನೋಡಿದರುಕೌ | ರವ ಪಲಾಯನವಕಟಕಟ ಪಾ | ರ್ಥವರ ಪಂತವೆ ಮರಳಿನಿಂದರು ಕೊಲುವುದಿಲ್ಲೆಂದ || ||೨೫|| ಮಾತುಹಳಸವ ಮುನ್ನಕೈಗಳು | ಸೋತು ತೆಗೆದವೆಹೊಳ್ಳುವಾತಿಪು | ನೀತಿಯೇ ಪರಪತಿಗಳಿಗೆ ಬಹುಭಂಗವನ್ಯಯಕೆ || ಭೀತನಲ್ಲದೆ ಕಾದಿಮಡಿದನ | ಮಾತುಗಳಲಾಪುಣ್ಯ ಕಥನವು | ಭೂತಳಾಧಿಪ ಮರಳಿ ನೋಡೆನ್ನಾಣೆ ನೀನೆಂದ ||೨೬|| ಹುರುಳುಗೆಟ್ಟುದು ಗರುವತನವೆಂ | ದರಸನಾಚಿದ ನಧಿಕ ಶೌರ್ಯೋ | ತ್ಕರುಷದಲಿ ಕಲಿಯಾಗಿ ನಿಂದನು ಮತ್ತೆ ಕಾಳಗಕೆ || ದೊರೆಯ ದುಗುಡವ ಕಂಡು ತಮತಮ | ಗುರವಣಿಸಿದರು ಸಕಲ ಸುಭಟರು | ಹೊರಳಿಗಟ್ಟಿತು ಸೇನೆ ನಿಚ್ಚಟರಳಿವ ನಿಶ್ಚಯಿಸಿ ||೨೭|| ನೊಂದನವನಿಪನೆಂದು ಪಾರ್ಥನ | ಕೊಂದು ತೋರುವೆ ನೆಂದರವಿಸುತ | ನೊಂದು ಕಡೆಯಲಿ ಪೊಳೆಗವನು ಬಿಲುಬಿಲ್ಲಜೇವಡೆದು || ಒಂದು ಕಡೆಯಲಿ ಮಸಗಿದರು ಗುರು | ನಂದನನು ವೃಷಸೇನ ಸೈಂಧವ | ರೊಂದು ಕಡೆಯಲಿ ಭೀಷ್ಮ ಕೃಪದುಶ್ಯಾಸನಾದಿಗಳು ||೨೮|| ಗುರುಚಡಾಳಿಸಿ ಹೊಕ್ಕ ನೊಮ್ಮಿಂ | ಗುರುವಣಿಸಿದನು ಬಾಹ್ಲಿಕನು ಭಾ | ಸುರ ಕಳಿಂಗ ಸುಕೇತು ಭೂರಿಶ್ರವನು ದುಸ್ಸಹನು || ನರನನಮುತ್ತಿದರೊಂದು ಕಡೆಯಲಿ | ತೆರಳಿಕೆಯ ತೇರಿನಲಿ ಬಲಮೋ | ಹರಿಸಿ ಕವಿದುದು ಸುತ್ತ ಮುತ್ತಿತು ಕಲಿಧನಂಜಯನ ||೨೯|| ಅಂಗವಿಸಿತರಿಸೇನೆ ಲೋಕವ | ನುಂಗಿಯುಗುಳುವ ಕಡಲುಭಾರ್ಗವ | ರಂಗಭೂಮಿಯು ತೊಳೆವ ಜಲಧಿಯು ಜೋಕೆಯಂದದಲಿ || ಭಂಗಿತರು ಮರುವಲಗೆಯಲಿ ಸ | ರ್ವಾಂಗ ಬಲಜೋಡಿಸಿತು ನಮ್ಮಳಿ | ವಿಂಗೆಹದನೇನೆನುತ ಮತ್ಸ್ಯನಸೂನು ಚಿಂತಿಸಿದ ||೩೦|| ನೆರೆದತಿಮಿರದ ಘಟ್ಟಸೂರ್ಯನ | ತೆರಳಿಚುವ ಪ್ರೋಲ್ಮೇಘ ಘಟೆಗಳು | ಮುರಿದು ಮೋಹರವೌಕಿಪವನನ ಸೆರಗಹಿಡಿವಂತೆ || ತೆರಳದೊತ್ತಂಬರಿಸಿ ಕುರುಬಲ | ಪೊರಲಿ ಹೆಣನನು ತುಳಿದು ಮೇಲ | ಬ್ಬರಿಸಿ ಬರೆ ಸಮ್ಮೋಹನಾಸ್ತ್ರವ ಹೂಡಿದನು ಪಾರ್ಥ || ಎಸಲು ಸಮ್ಮೋಹನದ ಶರಪಸ | ರಿಸಿತು ಬಲದಲಿ ಬಹಳ ನಿದ್ರಾ | ವ್ಯಸನ ವಿಹ್ವಲಿತಾಂತರಂಗರು ಮೈಯನೊಲೆದೊಲೆದು ||೩೧||

ಸಂ। ಗರದೊಳಭಿಮುಖರಾಗಿ ಮರಣಾಂ। ತರವನೆಯ್ದುವರವರುಯವನೀಪಾಲಕೇಳೆಂದ ॥೧೯॥ ಮಾತೃ
ಪಿತೃಗಳ ಶತ್ರುಭಾವವ । ನಾತು ನಿಜಸಂತಾನದಲಿ ಸಂ । ಪ್ರೀತಿಯನು ನೆಲೆಗೊಳಿಸಿ ಸರ್ವಜ್ಞಾಧಿ
ಕಾರದಲಿ ॥ ಖ್ಯಾತವನು ಮಾಡಿದೊಡೆ ಹಂಸ। ವ್ರಾತಮಧ್ಯದ ಬಕನವೊಲು ವಿ । ಖ್ಯಾತಸಭೆಯೊಳು
ಯೋಗ್ಯರಹರೇ ಭೂಪಕೇಳೆಂದ ॥೨೦॥ ಸುರರಮೇಳದಲಾಡುವವರಿ । ಬ್ಬರುಕಣಾ ಪ್ರಭುವಾಗಿ
ಯುೂ ಕ್ಷಮೆ । ವೆರಸಿದವನು ದರಿದ್ರನಾಗಿಯುದಾನಿಯೆನಿಸುವನು ॥ ಅರಿದೆನಿಸಿದತಿ ಬಲನ ಧರ್ಮೋ ।
ತ್ಕರುಷದುರ್ಬಲಯುತನ ಸೈರಣೆ । ಸರಿಸವೆನಿಸದು ರಾಯಚಿತ್ತೈಸೆಂದನಾವಿದುರ ॥೨೧॥ ಧರಣಿನುಂ
ಗುವಳಿಬ್ಬರನು ಸಂ । ಗರವ ಜಯಿಸದನೃಪನ ದೇಶಾಂ । ತರವ ಚರಿಸದ ಪಂಡಿತನ ನಿದುಶಾಸ್ತ್ರಸಿದ್ಧವ
ಲೆ ॥ ಅರಸುಕುಲದಲಿ ಹುಟ್ಟಿ ಸಾಪ । ತ್ನರುಗಳಿರೆ ದೇಹಾಭಿಲಾಷೆಯ । ಉರಗನಂತೊಳಗಿಹುದು
ಧರ್ಮವೆ ಯೆಂದನಾವಿದುರ ॥೨೨॥ ನರಜನುಮವೆತ್ಯಧಿಕವದರೊಳು । ಗುರುಹಿರಿಯರಿವರೆಂದು ದಾ
ನ । ಕ್ಕರುಹರಿವರಲ್ಲೆಂದು ನೋಡದೆ ಮೂಢಮಾರ್ಗದಲಿ ॥ ಕರೆದಪಾತ್ರಂಗಿತ್ತು ಪಾತ್ರನ । ಪರಿಹರಿ
ಸಲೀ ಯೆರಡರಿಂ ಸಂ । ಹರಣವೈಸುವುಪಾರ್ಜಿಸಿದಧನವರಸ ಕೇಳೆಂದ ॥೨೩॥ ತಂದೆತಾಯಿಗಳಿಬ್ಬರಾ
ತ್ಮಜ । ವೃಂದವನು ಮಿಗೆ ಸಲಹಿ ತತ್ಸ್ನುತ । ರಿಂದ ಲೇಸನು ಪಡೆವವೊಲು ತಜ್ಜನಪದದ ಧನವ ॥
ಹೊಂದಿಸದೆ ನೃಪಮಂತ್ರಿಗಳು ಸಾ । ನಂದದಲಿ ರಕ್ಷಿಸಿಯೆ ಬಳಿಕದ । ರಿಂದ ಸಕಲೈಶ್ವರ್ಯಪದವಹು
ದರಸಕೇಳೆಂದ ॥೨೪॥ ಕಾಮಿನಿಯರಾರುಗಳು ಕೆಲಬರು । ಕಾಮಿತವ ಕಾಮಿಸುವರಲ್ಲದೆ । ತಾಮಸದಿ
ನಾಮೂರುಕರು ಪೂಜಿಸಿದಪೂಜೆಗಳ ॥ ಪ್ರೇಮದಿಂದೊಡಬಡುವರಲ್ಲದೆ । ಸೀಮೆವಿಡಿದಿಹುದಾಗದೆಂ
ಬುದ । ನಾಮದಾಂಧರು ಬಲ್ಲರೇ ಧೃತರಾಷ್ಟ್ರ ಕೇಳೆಂದ ॥೨೫॥ ತನ್ನ ಸುಖದುಃಖಂಗಳಿಗೆ ನಿ। ಭಿ
ನ್ನವಹಬಾಂಧವರ ವರ್ಜಿಸಿ । ಗನ್ನಗತನದಲುಂಡು ಜಾರುವಗಾವಿಲರ ಕೂಡಿ ॥ ಅನ್ಯರನು ಪತಿಕರಿಸಿ
ಬಹುಮಾ । ನ್ಯೋನ್ನತಿಕೆಯನು ವಿರಚಿಸುವುದಿದು । ತನ್ನತಾನೇ ಕೊಂದುಕೊಂಬುದು ಭೂಪಕೇಳೆಂ
ದ ॥೨೬॥ ಪಿತನಿರಲು ದಾತಾರನಿರೆ ನಿಜ । ಪತಿಯಿರಲು ಸುತದಾಸಸತಿಯರು । ತ್ರಿತಯರುಂ ಸ್ವಾ
ತಂತ್ರ್ಯದವರಲ್ಲಾವಕಾಲದಲಿ॥ ಕ್ಷಿತಿಯೊಳುತ್ತಮ ಮಧ್ಯಮಾಧಮ। ಗತಿಯ ಪುರುಷತ್ರಯವನವರಿಂ।
ಗಿತವ ಪರರಾಯತವನರಿವೈ ಭೂಪ ಕೇಳೆಂದ ॥೨೭॥ ಬೆಳಸುಘನತೃಣವಧಿಕಜಲನಿ । ರ್ಮಳವೆನಿಪಕಾ
ಲದಲಿ ಪರಮಂ । ಡಲಕೆ ನಡೆದುತ್ಕೃಷ್ಟಘಾತವಿಹೀನವೆಂದೆನಿಸಿ ॥ ಬಲುಹಹುದು ನಿಜಬಲಕೆ ಬಲವಾ।
ನೆಲನಮೆಟ್ಟಲು ವೈರಿಸೇನಾ । ವಳಿಗೆ ಹೀನತೆಯೆಂದನದುಧೃತರಾಷ್ಟ್ರ ಕೇಳೆಂದ ॥೨೮॥ ಮಾಲೆಗಾ
ರತಿಳೀ ಮುಖನಪಶು । ಪಾಲಕನವೊಲು ಪ್ರಜೆಯ ರಕ್ಷಿಸಿ । ಮೇಲೆ ತೆಗೆವೈ ಧನವನುಳಿದಂಗಾರಕಾರು
ಕನ ॥ ವೋಲುಗಡೆದುವ್ಯಾಘ್ರನಂತೆ ವಿ । ತಾಳಿಸಲಿ ಪ್ರಜೆನಸಿಯಲರಸಿನ । ಬಾಳಿಕೆಗೆ ಸಂದೇಹವರಿ
ಯಾರಾಯಕೇಳೆಂದ ॥೨೯॥ ಎಲ್ಲಿಹುದು ಋಣಭಯವು ಮನುಜರೊ । ಳೆಲ್ಲಿಹುದು ದೇವಾಂಶ ನಿಜ
ವಾ । ಗೆಲ್ಲಿಹುದು ಸನ್ಮಾರ್ಗಭೀಕರವಲ್ಲಿ ಬ್ರಾಹ್ಮಣ್ಯ ॥ ಎಲ್ಲಿಹುದು ಪರಸತಿಯರಂಜಿಕೆ ಯೆ। ಲ್ಲಿಹುದು
ವಿಜ್ಞಾನವಿದನರಿ । ದಲ್ಲದಿಹಪರವಿಲ್ಲಚಿತ್ತೈಸೆಂದನಾವಿದುರ ॥೩೦॥ ರಕ್ಷಿಸಿದಧನದಿಂ ಪುರಂಧ್ರಿಯ ।
ರಕ್ಷಿಸುವುದುಪುರಂಧ್ರಿಯಿಂದವೆ । ರಕ್ಷಿಸುವುದಾತ್ಮನನು ಧನವಿಡಿದಾವಕಾಲದಲಿ ॥ ಲಕ್ಷ್ಯಭೇದವನರಿದು
ನಡೆದು ವಿ । ಲಕ್ಷ್ಯವನು ಮರಿದಾತ್ಮರಕ್ಷೆಯ । ನೀಕ್ಷಿಸುವುದದುನಯವಲ್ಲೈ ಭೂಪಾಲಕೇಳೆಂದ ॥೩೧॥

ತಿಳಿದು ನಾಲ್ವರೊಳೊರೆದಕಾರ್ಯದ । ಉಳಿವುದಿಬ್ಬರನಿಬ್ಬರೊಳು ಮ । ತ್ತುಳಿವುದೊಬ್ಬನನೊಬ್ಬ ನಿಂ ನಿಶ್ಚಯಿಸಿ ಬಳಿಕವನ ॥ ಕಳೆದು ತಾನೇ ತನ್ನೊಳಗೆ ಬಗೆ । ಗೊಳೆ ವಿಚಾರಿಸಿ ಮಾಳ್ಪಕಾರ್ಯಕೆ ಹಳಿವು ಹೊರುವುದೆ ರಾಯ ಚಿತ್ತೈಸೆಂದನಾವಿದುರ ॥೩೨॥ ನಿವಡಿಸಿದವಿದ್ಯಕ್ಕೆ ಸಮಬಂ । ಧುವನು ರೋಗಾವಳಿಗೆ ಸಮಶ । ತ್ರುವನು ಸಂತತಿಗಳಿಗೆ ಸಮಸಂತೋಷದುದಯವನು ॥ ರವಿಗೆ ಸಮವಹತೇಜ ವನು ವಾ । ಸವನ ಸಮಭಾಗ್ಯವನು ಬಲದಲಿ । ಶಿವನ ಬಲದಿಂದಧಿಕಬಲವನು ಕಾಣೆನಾನೆಂದ ॥೩೩॥ ಹಿರಿದು ಮಾನೋನ್ನತಿಕೆಯನು ಬಂ । ಧುರದ ಧವವನು ಗಾರುಹಸ್ಥ್ಯವ । ಪರಮಧರ್ಮವನಾಪಬ ಯಸುವನವನ ಭವನದಲಿ ॥ ನಿರುತ ವೃದ್ಧಜ್ಞಾನಿವಂಶೋ । ತ್ಕರದರಿದ್ರಸ್ತ್ರೀಯನಪತ್ಯಾಂ । ತರಭಗಿ ನಿಯಿನಾಲ್ವರಿರಬೇಕೆಂದನಾವಿದುರ ॥೩೪॥ ಧರಣಿಪತಿ ಚಿತ್ತವಿಸು ಸಗ್ಗದ । ಲೊರೆದನಿಂದ್ರಂಗಮರ ಗುರು ದೇ । ವರಲಿ ಸಂಕಲ್ಪವನು ಕೃತವಿದ್ಯರಲಿ ವಿನಯವನು ॥ ಹಿರಿಯರಲಿ ಸಂಭಾವನೆಯ ಸಂ । ಹರಣಪಡವನು ಪಾಪಕಾರ್ಯದೊ । ಳಿರದೆ ಮಾಡುವುದೆಂಬನಾಲ್ಕನು ರಾಯಕೇಳೆಂದ ॥೩೫॥ ಆವುದೀ ಲೋಕಕ್ಕೆ ಹಿತವದ । ನೋವಿ ನಡೆವ ಜನಕ್ಕೆ ನಿಂದೆಯ । ದಾವುದದನಾಚರಿಸುವ ಹ ನಾಸ್ತಿಕರ ನಂಬುಗೆ ಯ ॥ ತಾವುಗಾಣುತ ತತ್ವವಿಜ್ಞಾ । ನಾವಲಂಬನನೆನಿಪನಾತನು । ಭೂವಲಯದೊಳಗುತ್ತಮನು ಭೂಪಾಲಕೇಳೆಂದ ॥೩೬॥ ಪಿತನು ಗುರು ಸಖಿಪಾತ್ರತಾಯೆಂ । ಬಿತರಳಪಂಚಾಗ್ನಿಯನು ಕ್ರಮದಿಂ । ಪ್ರತಿದಿನಂ ಪಂಚಯಮಾಳ್ಪುದು ಲೇಸಬಯಸುವೊಡೆ ॥ ಪಿತೃಗಳನು ದೇವರನು ವೃದ್ಧರ । ನತಿಥಿಗಳ ಪೂಜಿಸಿದ ನಾವವ । ಪಿತನ ಕೀರ್ತಿಯಧರ್ಮವನು ಪಡೆವವನೆ ಸುತನೆಂದ ॥೩೭॥ ಸಿರಿಯನುಳ್ಳವನವನೆ ಕುಲಜನು । ಸಿರಿಯನುಳ್ಳವನೇ ವಿದಗ್ಧನು । ಸಿರಿಯನುಳ್ಳವನೇ ಮಹಾತ್ಮನು ಸಕಲಗುಣಯುತನು ॥ ಸಿರಿಯನುಳ್ಳವನೇ ಸುಶೀಲನು । ಸಿರಿರಹಿತ ಶಿವನಾದೊಡಾಗಲಿ । ಸರಕುಮಾಡದು ಲೋಕವವನೀಪಾಲ ಕೇಳೆಂದ॥೩೮॥ಸಿರಿ ನೆಲೆಯೆಜೌವನ ನೆಲೆಯೆ ಮೈ। ಸಿರಿ ನೆಲೆಯೆ ತನು ನೆಲೆಯೆ ಖಂಡೆಯ। ಸಿರಿನೆಲೆಯೆ ನಿನಗರಸುತನವುಳ್ಳನ್ನ ನೀತಿಯಲಿ॥ ಧರೆಯ ರಕ್ಷಿಸು ಬಂಧುಗಳನು।ದ್ಧರಿಸು ಧರ್ಮವ ಸಾಧಿಸಿಂತಿದು। ನರ ಪತಿಗಳಿಗೆ ನೀತಿ ಚಿತ್ತೈಸೆಂದನಾವಿದುರ ॥೩೯॥ ವರುಷವೈದರೊಳರಸೆನಿಸಿ ದಶ । ವರುಷದಾಸತ್ವವನು ಭಾವಿಸಿ । ವರುಷ ಹದಿನಾರರಲಿ ಪುತ್ರನ ಮಿತ್ರನೆಂದೆನಿಸಿ ॥ ಪರಿವಿಡಿಗಳಲಿ ನಡಿಸಿ ಮದವ । ತ್ಸರವ ಮಾಣಿಸದಿರದೆ ಮಕ್ಕಳ। ನರಮೃಗವ ಮಾಡುವರೆ ಭೂಮಿಪಾಲ ಕೇಳೆಂದ॥೪೦॥ ಧನಮದದಿ ಕುಲಮ ದದಿ ವಿದ್ಯಾ । ಘನಮದದಿಯೌವನಮದದಿ ಗುರು । ವನು ವಿಭಾಡಿಸಿ ನೀನುತಾನೆಂದೆನುತ ಹೂಂ ಕರಿಸಿ ॥ ಮುನಿಸಿನಲಿ ಸಾತ್ವಿಕರೊಳೊಬ್ಬರ । ನನುಗೆಡಿಸಿ ಗರ್ಜಿಸಲು ನರಕದಿ। ಮುಣುಗಿದಲ್ಲದೆ ಬೇರೆ ಗತಿಯಿಲ್ಲೆಂದನಾವಿದುರ ॥೪೧॥ ಸಲಹಿದೊಡೆಯನ ದಿವ್ಯಮಂತ್ರವ । ಕಲಿಸಿದಾಚಾರ್ಯನನು ಅನುವರ। ದೊಳಗೆ ತಲೆಗಾಯಿದನ ದುರ್ಭಿಕ್ಷದಲಿ ಸಲಹಿದನ ॥ ಜಲದೊಳಳ್ದನನೆತ್ತಿದನ ನುರಿ। ಯೊಳಗೆ ಪರಿ ಹರಿಸಿದನ ಮರೆದವ । ನಿಳಿವನ್ನೈ ಕುಲಕೋಟಿಸಹಿತ ಮಹಾಂಧನರಕದಲಿ ॥೪೨॥ ಒಲಿವವಳ ಬಿಸುಟೊ ಲ್ಲದವಳಿಗೆ । ಹಲುಬುವವನಹಿತರಲಿ ಸಖ್ಯಾ । ವಳಿಯನೆಸಗುವನೆರಿಯದುದ ತಾಬಲ್ಲೆನೆಂಬವನು ॥ ಒಲಿದು ಕೇಳದೆ ಹೇಳುವವ ಕೈ । ನಿಲುಕಲರಿಯದಕಾರ್ಯದಲಿ ಹಂ । ಬಲಿಸಿ ಮರುಗುವನವನೆ ಮೂಢ ನು ರಾಯಕೇಳೆಂದ ॥೪೩॥ ಹರುಷದರ್ಪಕ್ರೋಧಲಜ್ಜಾ । ತುರತೆ ಮಾನಾಮಾನಪ್ರಿವ್ರರಲಿ । ನಿರುತಸ

ಮನೆಂದೆನಿಸಿ ಕೃತ್ಯಾಕೃತ್ಯಕೌಶಲವ ‖ ವಿರಚಿಸುವಕಾಲದಲಿ ತೀತೋ । ತ್ಕರದಿ ಭಯವೊಡ್ಡೈಸಲದ
ರಂ । ಪರಿಹರಿಸದಾಕಾರ್ಯವೆಸಗುವನವನೆ ಪಂಡಿತನು ‖೪೪‖ ಕರೆಕರದು ವ್ಯೃಷ್ಟಾನ್ನವನು ಭೂ ।
ಸುರರಿಗೀವ ಸದಾಗ್ನಿಹೋತ್ರಾ । ಚರಿತನಹವೇದಾಂತವೇದಿಯಸಾಪತಿವ್ರತೆಯ ‖ ಉರುತರಪವಾಸೋ
ಪವಾಸಿಯ । ನಿರದೆ ಮಾಸಸಹಸ್ರಜೀವಿಯ । ನರಸಕೇಳಭಿವಂದಿಸುವರ್ವೈ ಮೂರುಮೂರ್ತಿಗಳು ‖೪೫‖
ಬಿಸುಟು ಕಳೆವುದು ನೀತಿಶಾಸ್ತ್ರವ । ನುಸುರದಾಚಾರಿಯನ ವೇದ । ಪ್ರಸರವಿಲ್ಲದಋಷಿಜನವ ರಕ್ಷಿಸದ
ಭೂಭುಜನ ‖ ಒಸೆಯದಬಲೆಯನೂರೊಳಾಡುವ । ಪಶುವ ಕಾಯ್ದನನಡವಿಗುರಿಯಹ । ನುಸಿಯ
ನಾಪಿತನಿಂತರುವರನುರಾಯಕೇಳೆಂದ ‖೪೬‖ ವ್ಯಸನವೇಳರ ಕಾಲುಕಣ್ಣಿಯ । ಹಸರದೊಳಗಳವಳಿದು
ಹೆಚ್ಚಿದ । ವಿಷಮುದಿರುಬಿನೊಳದ್ದು ಮಾಯಾಮಯದ ತೋಹಿನಲಿ ‖ ಬಸವಳಿದು ಷಡುವರ್ಗವೇಥೆ
ಯ । ನುಸುಳುಗಂಡಿಯ ನೀಕ್ಷಿಸದೆ ತಾ । ಮಸದೊಳಿರುತಿಹುದುಚಿತವೆ: ಹೇಳೆಂದನಾವಿದುರ ‖೪೭‖
ಅತಿಬಲನ ಹಗೆಗೊಳುವನಿಹಪರ । ಗತಿವಿಚಾರವ ಮರೆವಲೋಕ । ಸ್ಥಿತಿಯನುಲ್ಲಂಘಿಸುವ ಮರ್ಮ
ಜ್ಞರ ವಿರೋಧಿಸುವ ‖ ವಿತತಭಾಷಿತನಪ್ಪ ತನ್ನಿಂ । ಗಿತವನವರಾಯತವನರಿಯದ । ಕ್ಷಿತಿಪನವಮೂ
ಢಾತ್ಮನೈ ಭೂಪಾಲಕೇಳೆಂದ ‖೪೮‖ ಬಲುಹರದು ಕೋಪಿಸುವ ಬವಕನ । ಬಳಿಯಬದು ಕೊಡುವಾತ
ಹಿತವನು । ತಿಳಿದು ನಿರ್ಮಳನೆನಿಪ ಮೇಲಣತಾಗುಬಾಗುಗಳ ‖ ಹೊಲಬರಿದು ಸುಖದುಃಖದಲಿ ಸಂ ।
ಚರಿಸದಿಹ ಗಂಗಾಮಡುವಿನಂ । ತೊಳಗುದೋರದೆ ನಡೆವವನು ಪಂಡಿತನು ಕೇಳೆಂದ ‖೪೯‖ ದಾನ
ವಿಲ್ಲದವಿತ್ತ ಬುಧಸ। ಸ್ಮಾನವಿಲ್ಲದರಾಜ್ಯ ಬಲುಸು।ಯ್ದಾನವಿಲ್ಲದ ಸುದತಿ ಧೀಮಾನಿಲ್ಲದಾಸ್ಥಾನ‖ ಜ್ಞಾ
ನವಿಲ್ಲದತಪವು ವೇದಪ । ಧಾನವಿಲ್ಲದ ವಿಪ್ರ ಶರಸಂ । ಧಾನವಿಲ್ಲದಸಮರ ಮೆರೆಯದುರಾಯ ಕೇಳೆಂ
ದ ‖೫೦‖ ದಿನವ ಬಂಜೆಯಮಾಡದಿಹ ಪರ । ವಿನಯನಹ ವರದೈವಗುರುಪೂ । ಜನೆಯ ಬುಧಸೇವನೆಯ
ಕಾಲೋಚಿತದ ವಿತರಣವ ‖ ಮನನಬಂಶ್ರವಣಾದಿ ನಿಧಿಧ್ಯಾ । ಸನಬನಿವನನು‌ಗೊಳಿಪನಾವನು । ಮನು
ಜರೊಳಗುತ್ತಮನಲೇ ಭೂಪಾಲಕೇಳೆಂದ ‖೫೧‖ ಸಲುವನೆಂದಂತಃಪುರಕೆ ಸಂ । ಚಲಿಸುವವನಾಪ್ತರ
ನು ಬಿಸುಟ । ಗ್ಗಳಿಸುವವನಹಿತರಲಿ ಧರ್ಮವನುಳಿದಧರ್ಮವನು ‖ ಸಲಿಸುವವನೇಕಾಂತದಲ್ಲಿಗೆ ।
ಸುಳಿವವನು ಹಸಿವಿಲ್ಲದುಂಬುವ । ನಿಳೆಯೊಳಗೆ ಮೂಢಾತ್ಮನೈ ಧೃತರಾಷ್ಟ್ರ ಕೇಳೆಂದ ‖೫೨‖ ಬುಧ
ರೊಳಗೆ ಹಗೆಗೊಳುವ ಬುಧರಂ । ನಿಧನಗೈದಪಬುಧರನೇಳಿಸ । ಬುಧರಜರೆದೊಡೆನಲಿವಬುಧರಂ
ಪೊಗಳ್ದರಂ ಪಳಿವ ‖ ಬುಧರನಧಮರ ಮಾಳ್ಪಬುಧರಂ । ವ್ಯಥೆಗೊಳಿಪಬುಧರ್ಗೀವರಂ ಕನ । ಲ್ವಧ
ಮಭೂಪರಿಗಂಟದಿಹುದೆ ವಿನಾಶಕರವೆಂದ‖ ೫೩‖ ಕುಸುಮಫಲತಾಂಬೂಲಗಂಧ। ಪ್ರಸರಭೋಜನಗಮ
ನನೆನಹಿಂ । ದೆಸೆವಕಾಯದೊಳೆನಿಬರೊರಗಿದೊಡೊಬ್ಬನೆಚ್ಚರಿಕೆ ‖ ಎಸೆಯಲನಿತುಮನೊಬ್ಬನೇ ವ ।
ರ್ಜಿಸುವುದವನೀಪಾಲರಿಗೆ ತಾ । ಸಸಿನವೆನಿಸದು ರಾಯ ಚಿತ್ತೈಸೆಂದನಾವಿದುರ ‖೫೪‖ ಕಳಿದತರ
ಣಿಯ ಕಿರಣದಲಿ ನಿ । ರ್ಮಳಿನಜಲದಲಿ ದುಗ್ಧಪಾನಂ । ಗಳಲಿ ವರಯುವತಿಯರ ಸಂಭೋಗಾಂತ
ರಂಗಳಲಿ ‖ ತಳಿತಹೋಮದ ಹೊಗೆಗಳಲಿ ದಿನ । ಬಲದೊಳಾಯುಷ್ಯಾಭಿವೃದ್ಧಿಯ । ಬೆಳವಿಗೆಗಳಹ
ವರಸ ಚಿತ್ತೈಸೆಂದನಾವಿದುರ ‖೫೫‖ ಎಳೆಯರವಿಶ್ಮಯಲಿ ಪ್ರೇತಾಂ । ಗಳದಧೂಮಜ್ವಾಲೆಯಲಿ
ಗಾ । ವಿಲವಯೋವೃದ್ಧೆಯರ ಸಂಭೋಗಾಂತರಂಗಳಲಿ ‖ ಕೊಳಚೆನೀರಿನಬಳಕೆಯಲಿ ಕ । ತ್ತಲೆಯ

ದಧ್ಯೋದನದಲಾಯುಷ । ಳಿಳಿದು ಹೋಗದೆ ದಿನದಿನದೊಳವನೀಶ ಕೇಳೆಂದ ॥೫೭॥ ಮಸುಳಿಸಿದ್ದದು ಕೂಲ ಕರದಲಿ । ಪಸರಿಸಿದುಗುರು ಭುಕ್ತ್ಯದುನ್ನತಿ । ಯೆಸೆವನಿಷ್ಠುರವಾಕ್ಯವುದಯಾಸ್ತಮಯಕಾಲದ ॥ ಲಿ ಎಸೆವನಿದ್ರಾಂಗನೆಯೊಳೊಂಟರೆ । ಬಿಸಜಲೋಚನನಾದೊಡೆಯು ವರ್ಜಿಸುವಳವರನು ಭಾಗ್ಯಸಿರಿ ಭೂಲಪಾಕೇಳೆಂದ ॥೫೮॥ ಒಂದುಮೊದಲಾರಂತ್ಯವಾದಾ । ಸಂದಪೂಗಫಲಕ್ರಮಂಗಳ । ಚಂದವನು ಚಿತ್ತೈಸು ಲಾಭವಲಾಭಸುಖದುಃಖ ॥ ಕುಂದದಿಹದಾಯುಷ್ಯಮರಣವಿ । ದೆಂದು ತತ್ಕಾಲದಲಿ ಭೋಗಿಸು। ವಂದವನು ಚಿತ್ತೈಸುವುದು ತಾಂಬೂಲಧಾರಕರ ॥ ನಾಗವಲ್ಲಿಯ ಹಿಂದುಮುಂದನು। ನೀಗಿ ಕಳೆಯದೆ ಚೂರ್ಣಪರ್ಣ । ತ್ಯಾಗವಿಲ್ಲದೆ ವಂತಧಾವನಪರ್ಣವನು ಸವಿದು ॥ ಭೋಗಿಸುವೊಡಮರೇಂದ್ರನಾಗಲಿ । ನಾಗಭೂಷಣನಾದೊಡವನನು । ನೀಗಿ ಕಳೆವಳು ಭಾಗ್ಯವಧು ಭೂಪಾಲ ಕೇಳೆಂದ ॥೫೯॥ ಸ್ನಾನಪಂಚಕನಿರ್ದ್ರವದ ಸಂ । ಸ್ಥಾನದಲಿ ನಿದ್ರಾಗಂನೆಯಸ । ಸ್ನಾನಿಸುವೊಡಾಸಾರ್ದ್ರವದಪಂಚಕದ ಪರಿವಿಡಿಯ ॥ ಸ್ಥಾನವರಿದಾರೋಗಣೆಯಸಂ । ಥಾನದಲಿ ಚಿತ್ತೈಸುವುದು ರಾ । ಜಾನುಮತವಿದು ಸಕಲಸುಖಕರಸೆಂದನಾವಿದುರ ॥೬೦॥ ಜನಪನಿತ ಮಲಮೂತ್ರಮೂರಾ । ರೆನಿಸುವುದು ರತಿಯೊಂದು ನಿಜಭೋ । ಜನವೆರಡು ಸುಯ್ಲೊಂದು ವರತಾಂಬೂಲ ಹದಿನೈದು ॥ ಇನಿತುವನು ತಪ್ಪದೆ ನಡೆಸಲಾ । ಜನಪನಾರೋಗಣೆಗೆಸುಖಸಂ । ಜನಿಸುವುದು ಟನಚರಿಯದಿಂದವನೀಶಕೇಳೆಂದ ॥೬೧॥ ನೆರೆದಸಚರಾಚರವಿದೆಲ್ಲವು । ನರರನಿಜಭೋಜನಕೆ ಜನಿಸಿದ । ವರಸಕೇಳಿದರೊಳಗಭೋಜ್ಯಾಭೋಜ್ಯವನು ತಿಳಿದು ॥ ಪರಿಹಸಬಲ್ಲವರುಗಳುಘನ । ತರದಸುಕೃತವನೈದುವರು ಭೂ । ವರರೊಳಗೆ ಸಂದೇಹವೇ ಭೂಪಾಲಕೇಳೆಂದ ॥೬೨॥ ತುರುಗಹೃದಯಧ್ವನಿಯುಸಿಡಿಲಿನ । ಥರಥುರದಗರ್ಜನೆಯು ಸಾರಿಯು । ರಿರವಪುರುಷನ ಭಾಗ್ಯದೇವತೆಯೊಲಿವಕಾಲವನು ॥ ವರುಷದುದಯುವ ಬರನದಿನವನು । ವಿರಚಿಸುವರೆ ವಿಧಾತೃಗಳವ । ಲ್ಲರಸ ಕೇಳ್ಮಾನವರಿಗಿದುಗೋಚರಿಸಲರಿದೆಂದ ॥೬೩॥ ಬಡತನಗಳೆಡಸಿದೊಡೆ ಬಂಧುಗ । ಳೆಡಹಿಕಾಣರು ಭಂಟತಾನಾ । ದೊಡೆಯು ಬಂದಾಪತ್ತಿನೊಳಗೆ ಪರಾಙ್ಮುಖರೆಯಾಗಿ ॥ ನುಡಿಸದವನೇ ಹಗೆ ಶರೀರದೊ । ಳಡಸಿದಾರುಜೆ ಬಾಧೆಗಡವಿಯ । ಗಿಡಮರಂಗಳು ರಕ್ಷಿಸವೆ ಹೇಳೆಂದನಾವಿದುರ ॥೬೪॥ ಕಾಲದೊಳಗೆ ವಸಂತ ವಿದ್ಯಾ । ಜಾಲದೊಳಗೆ ಕವಿತ್ವ ಗಜವೈ । ಹಾಳಿಯಲಿದೇವೇಂದ್ರ ವಿಪ್ರಶ್ರೇಣಿಯೊಳು ವಾಣಿ ॥ ಭಾಳನೇತ್ರನು ದೈವದಲಿ ಬಿ । ಲ್ಲಾಳಿನಲಿ ಮನ್ಮಥನು ಧನದಲಿ । ಹೇಳಲೇನಭಿಮಾನವೇ ಧನವೆಂದನಾವಿದುರ ॥೬೫॥ ಮುಂದೆ ಗುರುವನು ಬಂಧುಜನವನು । ಹಿಂದೆ ಕರ್ಮಾಂತ್ಯದಲಿ ಸೇವಕ । ವೃಂದವನು ಕೊಂಡಾಡುವುದು ಸಾಹಿತ್ಯಭಾವವಿದು ॥ ಹಿಂದುಮುಂದಾವಾಗ ನಿನ್ನಯ । ನಂದನರ ನಾವುಗಳು ಹೊಗಳುವುದಂದವೇ ಭೂಪಾಲ ಚಿತ್ತೈಸೆಂದನಾವಿದುರ ॥೬೬॥ ತುರಗದೆಡಬಲ ಗಜದ ಸಮ್ಮುಖ। ತರುಣಿಯರುಗಳ ಸರ್ವತೋಮುಖ । ಹಿರಿದುದುರ್ಜನನಿದ್ದ ದೇಶವದೆಯ್ದೆ ವ್ಯಾಘ್ರಮುಖ ॥ ಭರದಿನಾದೇಶವನು ಬಿಟ್ಟರ। ವರಿಸದನ್ಯಗ್ರಾಮವವನಾಂ। ತರವನೈದುವುದಲ್ಲದಲ್ಲಿಹುದುಚಿತವಲ್ಲೆಂದ ॥೬೭॥ ಎತ್ತಲೆತ್ತಲು ಪೋಪಮನುಜಂ । ಗತ್ತಲತ್ತಲೆ ದೈವ ಕೂಡೆ ಬ । ರುತ್ತಿಹುದು ಬೆಂಬಿಡದೆ ನಾನಾದೇಶದೇಶದಲಿ ॥ ಮಿತ್ರನುರುಮಧ್ಯಸ್ಥ ಪುರುಷನ । ಮಿತ್ರನಾದಾಸೀನನೊಬ್ಬನು । ಕೃತ್ರಿಮನು ಸಹಜೀವಿಯುಂತ್ರಿವರ

ರಸಕೇಳೆಂದ ॥೧೮॥ ಗುರುವಿರೋಧ ಮಹೀಬುಧರ ಮ। ತ್ಸರವು ದೈವದ್ರೋಹ ಗುಣಸಾ। ಗರನ ಬಂಧುದ್ವೇಷವತ್ಯಾಲೀಢದೀನತನ ॥ ಕರುಣಜನಪಾಂಡಿತ್ಯವೆಂಬಿವ । ನರವರಿಸದಂಗ್ಯೈಸೆ ಭೂಪನ । ಸಿರಿಗೆ ಮೊಳೆಯದೆ ಕೇಡು ಚಿತ್ತೈಸೆಂದನಾವಿದುರ ॥೧೯॥ ಬಲುಪ್ರಧಾನನ ವೈರ ಹಿತವಹ । ಲಲನೆಯರ ಮನದಳಲು ಹಗೆಯಲಿ । ಬಳಸುವಂತಸ್ತವನಸಾಮಿಕರೊಡನೆ ಕೆಳೆಗೋಷ್ಠಿ ॥ ಬಲದೊಡನೆ ನಿರ್ಬಂಧ ಧರ್ಮದ । ನೆಲೆಯನರಿಯದದಾನಿಗಳ ಸಿರಿ । ಸುಳಿವ ಗಾಳಿಗೆ ಮಲೆವದೀಪವು ಕೇಳು ಧೃತರಾಷ್ಟ್ರ ॥೨೦॥ ಹುಸಿ ಪರದ್ರೋಹವು ಪರಸ್ತ್ರೀ । ವ್ಯಸನ ಪೇಯವಸೂಯೆ ಮಾನ । ದ್ವಿಷತೆ ಪತಿತಸಮೇತವಾತ್ಮಸ್ತುತಿಯೆನಿಪ್ಪವನು ॥ ಬೆಸುಟು ತದ್ವಿಪರೀತದಲಿ ವ । ರ್ತಿಸುವನವನೇ ರಾಯನಾತಗೆ । ವಸುಧೆಯೊಳಗೆಣೆಯಾವನೈ ಭೂಪಾಲ ಕೇಳೆಂದ ॥೨೧॥ ಇದು ಸವಹಿತವಿದು ಶುಭೋದಯ। ವಿದುಸಕಲಪುರುಷಾರ್ಥಸಾಧನ । ವಿದು ಸುಜನಸನ್ಮಾನವಿದು ಸಂಸಾರ ಸೌಖ್ಯಫಲ ॥ ಇದು ಸುಲಭವಿದು ಬಲವಿದಾವ್ಯಾ। ಯದ ಸುನಿಶ್ಚಯ ನೀತಿಕಾರ್ಯದ।ಹದನನರಿವಾಚರಿಸಬಲ್ಲವನವನೆ ಪಂಡಿತನು ॥೨೨॥ ಶತ್ರುಕಾಲಸುದೇಶವರ್ಗಸು । ಮಿತ್ರರುದಯಾಪಾಯಕರಣಸು । ಪುತ್ರನೆಂಬಿವು ಮೂರುತೆರನಾಗಿಪ್ಪವಿದರೊಳಗೆ ॥ ಕ್ಷತ್ರಧರ್ಮವಿವೇಕವೆಂಬಿವ । ಸ್ತೋತ್ರಗೊಳಿಸನೆ ರಾಯನವಗೆ ಧ । ರಿತ್ರಿಯೊಳಗೆಣೆಯಾವನೈ ಭೂಪಾಲ ಕೇಳೆಂದ ॥೨೩॥ ಎಲ್ಲಿಸುಲಲಿತವಿದ್ಯೆ ಬಹುಗುಣ। ವೆಲ್ಲಿ ಗಣಿಕಾನಿಕರ ಗುಣಗಣ । ವೆಲ್ಲಿಗುರುಕಾರ್ಯ್ಯಪ್ಪವಲ್ಲ ವರೂಥಸಂದೋಹ ॥ ಎಲ್ಲಿಸುಭಟನಿಕಾಯ ನೆರೆದಿಹು । ದೆಲ್ಲ ತನ್ನಾಧೀನವಾಡಲು । ಬಲ್ಲವನೆ ನೃಪನಾತಗಿದಿರಾರೈ ಧರಿತ್ರಿಯಲಿ ॥೨೪॥ ದ್ವಾರವೊಂಭತ್ತಿಂದ್ರಿಯದ ಹಂ । ಕಾರಕರಣಚತುಷ್ಟಯಂಗಳ । ಸಾರಭೂತಾಧಿಕದ ಸುಳುವಿನ ಪಂಚವಾಯುಗಳ ॥ ಹೋರಟೆಗಳಲಿ ಬಳಲಿ ಜೀವನ । ಧೀರನಹವೊಲು ಪಾಂಡುಪುತ್ರರ । ಕೌರವರ ಬೇಳಂಬದಲಿ ಬೆಂಡಾದೆ ನೀನೆಂದ ॥೨೫॥ ಮತ್ತನನು ಶಾಂತನನು ಪ್ರಮದೋ । ನ್ಮತ್ತನತಿಕುಪಿತಾನನನು ಚಲ । ಚಿತ್ತನನು ಕಾಮುಕನುಲುಬ್ಧನು ಶೂರನೆಂಬವನು ॥ ಕ್ಷುತ್ತೃಷೆನದಗ್ಗಳಿಕೆಯಿಂತೀ । ಹತ್ತುಜನವಾವಾಗ ಧರ್ಮದ । ತತ್ತ್ವವರಿಗಳನರಿಯರೈ ಭೂಪಾಲಕೇಳೆಂದ ॥೨೬॥ ದಾನವಿಷ್ಟಾಪೂರ್ತಿ ವಿನಯಸ । ಮಾನದೇವಾರ್ಚನೆ ಮಹೀಸುರ । ಧೇನುಸಂತರ್ಪಣ ಮಹಾತಿಥಿಪೂಜೆ ಗುರುಭಕ್ತಿ ॥ ಧ್ಯಾನ ದೀನಾನಾಥಬಂಧುವಿ । ತಾನ ಶರಣಾಗತಸುರಕ್ಷಾ । ಸ್ನಾನತೀರ್ಥಂಗಳಲಿ ಮಾಡಲು ಬೇಹುದವನಿಪರು ॥೨೭॥ ಧರೆಯೊಳೀಹೊತ್ತಿನಲಿ ನಿನಗೈ । ಶ್ವರಿಯದಲಿ ಮಕ್ಕಳಲಿ ಖಂಡೆಯ । ಸಿರಿಯಲೊಡಹುಟ್ಟಿದರು ಸಪ್ತಾಂಗದಲಿ ಸತಿಯರಲಿ ॥ ಗುರುಪಿತಾಮಹಬಂಧು ಜನಮಿ । ತ್ರರಲದಾವುದು ಕೊರತೆ ಕೌಂತೇ । ಯರ ನೆರವಿಗರ ಮಾಡುವರೆ ಧೃತರಾಷ್ಟ್ರ ಕೇಳೆಂದ ॥೨೮॥ ಉಭಯಕುಲ ಶುದ್ಧಿಯಲಿ ಹೆಚ್ಚಿದ । ವಿಭವದಲಿ ವಿಗ್ರಹದಲಧಿಕ । ಪ್ರಭೆಗಳಲಿ ಸತ್ಯದಲಿ ಸಾಹಿತ್ಯದಲಿ ವಿನಯದಲಿ ॥ ಅಭವನಂಘ್ರಿಯ ಸೇವೆಯಲಿ ಹರಿ । ನಿಭನೆನಿಸಿ ಬದುಕುವನು ರಾಜ್ಯಕೆ । ವಿಭುವೆನಿಸುವನು ರಾಯ ಚಿತ್ತೈಸೆಂದನಾವಿದುರ ॥೨೯॥ ವೇಸಿಯಹಪರಿಯಂಕದಲಿ ನಿಜ । ದಾಸಿಯಹ ಶಿಶ್ರೂಷೆಯಲಿ ನಿ । ರ್ದೋಷಿಯಹ ಪತಿಭಕ್ತಿಯಲಿ ಮೋಹದಲಿ ತಾಯೆನಿಸಿ । ॥ ಏಸುಕಾರ್ಯಕೆ ಮಂತ್ರಿಯೆನಿಸುವ । ಮೈಸಿರಿಯನುಳ್ಳವಳು ರಾಣೀ । ವಾಸವೆಂದೆನಿಸುವಳೆಲೈ ಭೂಪಾಲಕೇಳೆಂದ ॥೩೦॥ ತಂದೆತಾಯಿಗಳಾಜ್ಞೆಯನು ಸಾ । ನಂದದಲಿ ಪಾಲಿಸುತ ಮ

ನವನು । ಮುಂಪುಗೆಡಿಸದೆ ಧರ್ಮದಲಿ ರಾಜ್ಯವನು ಪಾಲಿಸುತ ॥ ಬಂಧುಬಳಗವ ಸಲಹಿ ಭೂಸುರ । ವೃಂದವನು ನೆರೆ ಪೊರೆವೊಡವ ಸುತ । ವಂದ್ಯನೈಲೋಕಕ್ಕೆ ಚಿತ್ತೈಸೆಂದನಾವಿದುರ ॥೮೧॥ ಇಹಪರದ ಸುಖಸಂಗತಿಯ ಸಂ । ಗ್ರಹಿಸಿ ವೇದಾಚಾರದಲಿ ಸ । ನ್ನಿಹಿತನಾಗಿ ಸಮಸ್ತ ಕಳೆಯಲಭಿಜ್ಞನೆಂದೆನಿಸಿ ॥ ಅಹಿತಕುಲವನು ಸಮರದಲಿ ನಿ । ರ್ವಹಿಸಿ ಶರಣಾಗತರ ಪಾಲಿಸು । ತಿಹೊಡವನು ಮಗನೆಂದೆನಿಸುವನು ಭೂಪ ಕೇಳೆಂದ ॥೮೨॥ ಇಂದ್ರಿಯವನೊಡೆತುಳಿದು ಕರ್ಮದ । ಬಂದಿಯಲಿ ತಲೆಬಳಚಿ ವಿಷಯದ । ದಂದುಗವನೀಡಾಡಿ ಮಾಯಾಪಾಶವನು ಹರಿದು ॥ ದ್ವಂದ್ವದಲಿ ರೂಪಡಗಿ ವಿಶ್ವದ । ಲೊಂದಿ ಮೆರೆಯಲುಬಲ್ಲವನು ಗುರು । ವೆಂದೆನಿಸುವನು ರಾಯ ಚಿತ್ತೈಸೆಂದನಾವಿದುರ ॥೮೩॥ ಒಡಲೊಡವೆ ಮೊದಲಾದುವೆಲ್ಲವ । ತವೆಯದೊಪ್ಪಿಸಿ ಗುರುವಿನಂಘ್ರಿಯ । ಹಿಡಿದು ಭಜಿಸುತ ಕೊಟ್ಟ ಕೆಲಸಂಗಳೊಳಗಿನಿತುವನು ॥ ಬಿಡದೆ ಮಾತುತ್ತರವನವಗೆ । ಕೊಡದೆ ಭಯಭಕ್ತಿಯಲಿ ತಪ್ಪದೆ । ನಡೆಯಬಲ್ಲವನವನೆಶಿಷ್ಯನು ರಾಯ ಕೇಳೆಂದ ॥೮೪॥ ಮುಕುತಿವಿದರುಗಳಾಗಿ ವಿದ್ಯಾಧಿಕರೆನಿಸಿ ಸಮಬುದ್ಧಿಗಳನಾಟಕವ ನಟಿಸುತ ಪರಮತತ್ವಜ್ಞಾನಪರರಾಗಿ ॥ ಸಕಲಕಳೆಯಲಭಿಜ್ಞರಹಹ । ಧಾರ್ಮಿಕರು ಪರಪುರುಷಾರ್ಥಗಳು ವೈ । ದಿಕರಲೇ ವಿದ್ವಾಂಸರೆನಿಸುವರರಸ ಕೇಳೆಂದ ॥೮೫॥ ದಂಡನೀತಿಸ್ಮೃತಿಜ್ಯೋತಿಷ । ದ್ವಂಡದಪಾರಂಗರಸನಿಪುಣನ । ಪಂಡಿತಪ್ರಿಯಶಾಲಿಪೋಷಕಕರ್ಮದೀಕ್ಷಿತನಾ ॥ ಚಂಡದೈವಜ್ಞನಸಧಿಕಗುಣ । ಮಂಡನನ ಬಹುಶಾಸ್ತ್ರಪಠನನ । ಪಂಡಿತನಪೌರೋಹಿತನ ಮಾಡುವುದರಸ ಕೇಳೆಂದ ॥೮೬॥ ಸ್ಥೂಲಸೂಕ್ಷ್ಮಕೃತಜ್ಞನುತ್ಸವ । ಶೀಲನಕ್ರೋಧಿಯನದೀರ್ಘವಿ । ಶಾಲಸೂತ್ರಿಯ ವೃದ್ಧಸೇವಕ ಸತ್ಯವಾಕ್ಯುಚಿಯ ॥ ಕಾಲಭೀತ ವಿನೀತ ನವ್ಯಸ । ನಾಳಿ ಸೂರ ರಹಸ್ಯಸತ್ಕೃತಿ । ಲೋಲಸಾನ್ವಿತಮಂತ್ರಿಯುಂಟೇ ರಾಯನಿನಗೆಂದ ॥೮೭॥ ತುರಗಗಜಭಟರಳವರಿವಸಂ । ಗರಮಹೋತ್ಸಾಹನ ಜಿತಶ್ರಮ । ನರಿಕಟಕಭೇದಕನ ನಾನಾಯುಧವಿಶಾರದನ ॥ ಭರಿತಧೈರ್ಯನ ಪರುಷತನ ಸಂ । ಗರಸದಾರನಸೂರ್ಧ್ವರೋಮನ । ನಿರದೆಸೇನಾಪತಿಯ ಮಾಡುವುದರಸ ಕೇಳೆಂದ ॥೮೮॥ ತಿಳಿದವನ ಮತಿವಿದನ ಭಾಷಾ । ವಳಿಲಿಪಿಜ್ಞನ ಸಾಕ್ಷರನ ಮಂ । ಡಳಿಕ ಸಾಮಂತರವಿಶೇಷವಲವಸರವನರಿದು ॥ ಸಲೆ ಕರೆವ ಕಳುಹಿಸುವ ನಿಲಿಸುವ । ಬಲುಹನುಳ್ಳನ ಸುಕರದಕ್ಷರ । ತಿಳಿವಹೃದಯನ ಸಂಧಿವಿಗ್ರಹಕೆಣಿಸಬೇಕೆಂದ ॥೮೯॥ ಮಿಸುಪಮಣಿಗಣಲೋಹಕಾಂಚನ । ವಿಸರಭೇದವನರಿವಕೊಟ್ಟುದ । ನಸಿಯಲೀಯದೆ ತಾನು ಭಕ್ಷಿಸದಹಿ ನಿಧಾನವನು ॥ ಒಸೆದು ಕಾದಿಪ್ಪಂತೆ ಕಾದಿಹ । ಹುಸಿಯದಾಪ್ತನ ಬಹುಕುಟುಂಬ । ವ್ಯಸನವುಳ್ಳನ ಮಾಳ್ಪುದೈ ಭಂಡಾರರಕ್ಷಕನ ॥೯೦॥ ಮನವಚನಕಾಯದಲಿ ದಾತಾ । ರನಹಿತವನುಳ್ಳನ ವಿನೀತನ । ವಿನುತ ವನಿತಾನತಮುಖನ ನಿಷ್ಕಳಿತದೋಷಕನ ॥ ಮುನಿವವರ ಬುದ್ಧಿಯಲಿ ಸಿಲುಕದ । ವನ ವಿಶೇಷಕಳಾಪ್ರವೀಣನ । ಜನಪಚಿತ್ತೈಸುವುದಲೈ ತಾಂಬೂಲಧಾರಕನ ॥೯೧॥ ಪಿತೃಪಿತಾಮಹಸೂಪಶಾಸ್ತ್ರ । ಯುತನ ಕೈಕರಣೆಗಳಲಧಿಕನ । ನತಿಶುಚಿಯ ಸಂಗ್ರಹಿಯನಕ್ರೋಧಿಯನನಾಲಸನ ॥ ಪತಿಹಿತನ ಷಡುರಸವಿಶೇಷಾ । ನ್ವಿತನನಿತರಾಲಯವಿದೂರನ । ಪತಿಕರಿಸುವುದು ಸೂಪಕಾರತೆಗರಸ ಕೇಳೆಂದ ॥೯೨॥ ನಿಶಿತ ಪರಿಮಳಮೋದದಿಂ ಮೋ । ದಿಸುವ ಗಂಧದ್ರವ್ಯದಲಿ ಪಂ । ಳಿಸಿದ ಜೀವನಜೀವ ತನ್ನಯ ಜೀವನವೆಯೆಂದು ॥ ವಸುಮತೀಶರಿಗಿತ್ತು ತಾ ಭೋ । ಗಸದೆ ಬಳಸದೆ ರಾಜನನೋಲ । ವಿಸುವಮನೆಪಾನೀ

ಯಧಾರಕನರಸಕೇಳೆಂದ ॥೯೩॥ ಉನ್ನತ ನರೂಪಾಧಿಕನ ಸಂ । ಪೂರ್ಣದಕ್ಷನನನ್ಯರೆನ್ನವರೆನ್ನದನ ಪರ ರಿಂಗಿತಾಕಾರಪ್ರಭೇದಕನ ॥ ಮನ್ನಣೆಗೆ ಬೆರೆಯದನಸಾಪ್ತನ । ನನ್ಯಕಾರ್ಯೋಚಿತಸಮಪ್ರತಿ । ಪನ್ನಪ ಡಿಹಾರಕನ ಮಾಡುವುದುದರಸ ಕೇಳೆಂದ ॥೯೪॥ ಗ್ರಾಮಮೂರರ ಸಂಚರಣೆಗಳ । ಸೀಮೆಯಲಿ ಸರಿ ಗಮಪಧನಿಗಳ । ನೇಮತಪ್ಪದೆ ಹರಣಭರಣದ ಹೊಂಪುತಿರುಪುಗಳ ॥ ಕೋಮಲಿತಶಾರೀರಹೃದಯ ದ । ರಾಮಣೀಯಕರಚನೆಯಲ್ಲಿ ಸ । ನಾಮನೆನಿಸುವನವನೆ ಗಾಯಕನರಸ ಕೇಳೆಂದ ॥೯೫॥ ತಾಳಲ ಯಬೊಂಬಾಳಮಿಶ್ರದ । ಹೇಳಿಕೆಯಸಾತಾಯಶುದ್ಧದ । ಸಾಳಗದ ಸಂಕೀರ್ಣದೇಸಿಯ ವಿನಿಧರಚನೆ ಗಳ ॥ ಮೇಳವರಿವುತ ವಾದ್ಯಸಾಧನ । ದೇಳಿಗೆಯ ಸಂಪೂರ್ಣಮಾರ್ಗದ । ಸೂಳುಗಳ ಲಯಮಾನವ ರಿದವನವನೆ ಗಾಯಕನು ॥೯೬॥ ಗಾಯದಲಿ ಮೇಣ್ಬೊಬ್ಬೆಯದಲಡು । ಪಾಯಿಗಳನುಪಕಾಯದೊ ಳಗೆ ನ । ವಾಯಿಗಳ ಬಿನ್ನಾಣದಲಿ ಬಳಿಸಂದು ಬೇಸರದೆ ॥ ಸ್ಥಾಯಿಯಲಿ ಸಂಚಾರದಲಿ ಸಮ । ಗೈಯೆನಿಸಿನಾನಾವಿನೋದದ । ದಾಯಮರಿವವನವನೆ ಮಲ್ಲನುಕೇಳು ಧೃತರಾಷ್ಟ್ರ ॥೯೭॥ ಎಡಬಲನ ನಾರೈವುತೊಬ್ಬನ । ಬಿಡದೆ ನೋಡುತ ಮಕ್ಷಿಕಂಗಳ । ಗಡಣವನು ಕೆದರುಸುತ ಕಿಗ್ಗಣ್ಣಿಕ್ಕಿ ಕೆಲಬಲನ॥ ಜಡಿದುನೂಕುವ ಸ್ವಾಮಿಕಾರ್ಯದ । ಕಡೆಯೆನಿಸುತಾವಾಗ ಸೇವೆಗೆ । ಸೆಡೆಯದವನೇ ಚಮರಧಾರಕ ನರಪಕೇಳೆಂದ ॥೯೮॥ ಗುಳಿತೆವರನೀಕ್ಷಿಸುತ ಬಟ್ಟೆಯ । ಮೆಳೆಮರಂಗಳ ಹೋಯ್ಲುತಪ್ಪಿಸಿ । ನೆಳಲನ ರಸುತ ವೇಗದತಿ ಸಾಮಾನ್ಯಗತಿಗಳಲಿ ॥ ಬಳಿವಿಡಿದು ಭೂಭುಜರ ಯಾನಂ । ಗಳೊಳು ತಾ ಕಡೆಗೈಯ ಸ್ಸೈರಿಸಿ । ಬಳಸುವವನೇ ಛತ್ರಧಾರಕನರಸಕೇಳೆಂದ ॥೯೯॥ ಹರುಷದಲಿ ನಿಜಜನನಿ ಗರ್ಭವ । ಧರಿಸಿ ಕೊಂಡಾಡುವವೊಲುತ್ತಮ । ಪುರುಷರಂತರ್ಯಾಮಿಯನು ತಾಳ್ವಂತೆ ಭೂಭುಜರ ॥ ಧುರಸಿ ಸುಖಸಂ ಗತಿಗಳಲಿ ಸಂ । ಚರಿಸುತಾಳ್ದನ ಹಾನಿವೃದ್ಧಿಯ । ಲಿರಲು ಬೆಸದರನೆನಿಸುವನು ಭೂಪಾಲಕೇಳೆಂದ ॥೧೦೦॥ ಹಿಂದೆಮಾಡಿದ ಸುಕೃತಫಲವೈ । ತಂಮಸಾರುವವೋಲು ಸಾಸಾ । ಚಂದದಾಪತ್ತಿನಲಿ ಹರಿ ನಿಜಭಕ್ತಸಂತತಿಯಾ ॥ ಮುಂದೆ ನಿಲುವವೊಲವನಿಪಾಲರ । ದಂದುಗದ ಹೊತ್ತಿನಲಿ ಗಜಹಯ । ವೃಂದವನೆ ಸಲಹುವನು ವಾಹಕ ನರಸಕೇಳೆಂದ ॥೧೦೧॥ ಪರ್ಬತವನೊಡೆದುಳಿಸಿ ಭೂಮಿಯ । ನಿಬ್ಬ ಗಿಯಮಾಡಿಸುತ ರಥಗಜ । ದೊಬ್ಬುಳಿಯ ಹರೆಗಡಿಸಿ ಕಾದಿಸುತಾನೆಗಳ ಮೇಲೆ ॥ ಬೊಬ್ಬಿರಿದು ಸರ ವಳೆಯ ಸುರಿಯುತ । ವುಬ್ಬರದಬವರದೊಳಗಹಿತರ । ಗುಬ್ಬಸವನೆಸಗುವನೆ ಜೋದನುರಾಯಕೇಳೆಂ ದ ॥೧೦೨॥ ಕುದುರೆಗಳನಾರೈದು ರಥವನು । ಹದುಳಿಸುತ ಸಾರಥಿಯ ಸಲಹು । ತ್ರಿದಿರ ಮರಿಯೇತ ತನ್ನ ಕಾಯಿದುಕೊಳುತ ಕೆಲಬಲನ ॥ ಸದೆದು ಮರಳುವಲಾಗುವೇಗದ । ಕದನಕಾಲಾನಲನವನು ತಾ । ಮೊದಲಿಗನಲೇ ರಥಿಕರಿಗೆ ಧೃತರಾಷ್ಟ್ರ ಕೇಳೆಂದ ॥೧೦೩॥ ಬಿಟ್ಟಸೂಟಿಯಲರಿನೃಪಾಲರ । ಮು ಟ್ಟಿ ಮೂದಲಿಸುತ್ತ ಮೋಹಿದ । ಘಟ್ಟನೊಡೆಹಾಯ್ದಹಿತಬಲದೊಳಗಾನೆಮಂಮರಿದು ॥ ಹೊಟ್ಟು ಗುಟ್ಟುತ ಹೆಣನ ಮಟ್ಟಾ । ಮಟ್ಟಿ ಮಸಗಲು ಕಳನಚೌಕದ । ಲಟ್ಟಿಯಾಡಿಸಬಲ್ಲೊಡವರಾವುತನು ಕೇ ಳೆಂದ ॥೧೦೪॥ ಬೇಸರದೆ ಕಾಳೋರಗನನ । ಡ್ಡೈಸಿ ಕಟ್ಟಿರುವೆಗಳು ಖಂಡವ । ಸೂಸಿ ಕಡಿಕಡಿದೊ ಟ್ಟೈದಂದದಲಹಿತಬಲದೊಳಗೆ ॥ ಓಸರಿಸದೊಳಹೊಕ್ಕು ಸಮರವಿ । ಳಾಸವನು ನೆರೆಮೆರೆದು ಕೇಶಾ । ಕೇಶಿಗೊದಗುವನೆಕಾಲಾಳರಸ ಕೇಳೆಂದ ॥೧೦೫॥ ಬರಲು ಕಂಡೊಡೆ ವಂದಿಸುತ ಲಂ । ತರಿಸದತಿಮನ

ವರಿದು ಮಿಗೆ ಹಿ| ತ್ತಿರೆಯೆನಿಸದತಿದೂರವೆನಿಸದೆ ಮಧ್ಯಗತನೆನಿಸಿ ॥ ಪರಿವಿಡಿಯುಲೋಲಗಿಸುತರಸನ । ಸಿರಿಮೊಗವನೀಕ್ಷಿಸುತ ಬೆಸಸಿದ । ನರವರಿಸದಾಕ್ಷಣಕೆ ಮಾಡುವನವನೆ ಸೇವಕನು ॥೧೦೬॥ ಕುನಖಿ ಕುಷ್ಠ ಕುಶೀಲಕನ ಕುಬ್ಜನನು ವಿಧವಾಲಿಂಗಿ ದಾಸಿಯು । ತನುವಿಕಾರಿಯುನಂಗಹೀನನಪಂಗುಳಾಂಧಕನ ॥ ಘನರುಜಾಂಗನ ಬಿಡುದಲೆಯು ರೋ । ಧಿನಿಯುದಿಪ್ಪವಡಿಸುವಸಮಯದ । ಲಿನಿಬರನುಕಾಣ್ಬುದು ಮಹೀಶರಿಗಂಗವಲ್ಲೆಂದ ॥೧೦೭॥ ಕಲಸಕನ್ನಡಿ ಕರಿತು ರಗ ಗೋ । ಕುಲ ವೃಷಭ ಬುಧನಿಚಯ ಗಿರಿಸಂ । ಕುಳ ಸುವಾಸಿನಿ ಮಾತೃ ಪಿತೃ ವರವಾಹಿನೀನಿಚಯ ॥ ಜಲಧಿವಸನ ಚ್ಛತ್ರವುರ್ವೀ । ಲಲನೆಯರನೀಕ್ಷಿಸುವುದವನಿಪ । ತಿಲಕರುಪ್ಪವಡಿಸುವಸಮಯದೊಳರಸ ಕೇಳೆಂದ ॥೧೦೮॥ ಶ್ವಾನಕುಕ್ಕುಟ ಕಾಕಬಕಪವ । ಮಾನಖಗಪತಿಟಿವಿಜರಜನಿಕ್ರ । ಶಾನುವಿನಗಾರ್ಧಭನ ವೃಷಭನ ಶಿಂಶುಮಾರಕನ ॥ ನೂನಹಯಕುಂಜರನವರಪಂ । ಚಾನನನ ಮೃಗಪೋತಕನ ಗುಣ। ವಾನರೇಂದ್ರನೊಳಿರಲು ಬೇಹುದು ಭೂಪಕೇಳೆಂದ ॥೧೦೯॥ ಪರಿಪರಿಯದಾನಂಗಳನು ಕರೆ । ಕರೆದು ಲೋಗರಿಗಿತ್ತು ಪರರನು । ಹೊರೆದು ತನ್ನಾಶ್ರಿತರ ನತಿಗಳೆದಾಪ್ತಬಾಂಧವರ ॥ ಸರುಕುಮಾಡದೆ ಗರ್ವದಿಂದು । ಬ್ಬರಿಸುತಿಹ ಪಾತಕರ ಪದವಿಯ । ನರಸಬಣ್ಣಿಸಲಾರು ಬಲ್ಲರು ಯಮನ ನಗರಿಯಲಿ ॥೧೧೦॥ ಮೂರುಕೋಟಿಯ ಕೋಟಿಯರ್ಥವ । ಮಿಾರಟಿಹ ರೋಮಾಳಿಸಂಖ್ಯೆಯೊ । ಳಾರನೆನ್ನದೆ ನಿಜಪತಿಯ ಸಹಗಮನದಲಿ ತನುವ ॥ ಮಾರಿದಬಲೆಯರುಗಳ ದೆಸೆಯಿಂ । ದಾರುಮಡಿ ಸ್ವರ್ಗಾದಿಭೋಗವ । ಸೂರೆಗೊಂಬುದು ತಪ್ಪದವನೀಪಾಲ ಕೇಳೆಂದ ॥೧೧೧॥ ಆವನೊಬ್ಬನು ಸತ್ಯಕೋಸುಗ । ಭಾವಶುದ್ಧಿಯ ಕೂಡಿ ದಶಪಂ। ಥಾವಸಾಧನನವನಧರ್ಮಗಳರ್ಥವನು ಯಮನು ॥ ಓವನನ್ಯಾಯದಲಿ ಸೂರ್ಳ್ಳೆ । ನೋವಿ ರಚಿಸಿದವಂಗೆ ಗತಿಯಿ । ನ್ನಾವುದೆಂಬುದ ನಾರು ಬಲ್ಲರು ಭೂಪ ಕೇಳೆಂದ ॥೧೧೨॥ ಕೋಪವೆಂಬುದನರ್ಥಸಾಧನ । ಕೋಪವೇ ಸಂಸಾರಬಂಧನ । ಕೋಪದಿಂದುರುತರದ ಸುಕೃತವು ಲಯವನೈದುವುದು ॥ ಕೋಪವನು ವರ್ಜಿಸಲುಬೇಹುದು । ಕೋಪವುಳ್ಳವನಾವನಾಗಲಿ । ಕಾಪುರುಷನಿಹಪರಕೆ ಚಿತ್ತೈಸೆಂದನಾ ವಿದುರ ॥೧೧೩॥ ವೈದ್ಯನಲಿ ಮಾಂಸದಲಿ ದ್ವಿಜನಲಿ । ನಿದ್ರೆಯಲಿ ತರುವಿನಲಿವನದಲಿ। ವಿದ್ಯೆಯಲಿ ಪದವಿಯಲಿ ಸಂಖ್ಯಾಸಂಖ್ಯವೆಸರುಗಳಾ ॥ ತದ್ವಿಷಯಕೆ ಮಹಾಸಬುದವನು । ಹೊದ್ದಿಸುವುದತಿಕಷ್ಟವವರಿಗೆ। ಸದ್ಯಫಲವದು ತಪ್ಪದವನೀಪಾಲ ಕೇಳೆಂದ ॥೧೧೪॥ ಸೃಷ್ಟಿಸಂಹಾರದಲಿ ಭೂತದ। ಕಟ್ಟಳೆಯ ಗತಿವಿಗತಿಯಲಿ ನೆರೆ । ಮುಟ್ಟಿಸದ ವಿದ್ಯೆಯಲವಿದ್ಯೆಯಲಪ್ರತಿಮನೆನಿಸಿ ॥ ನಷ್ಟಿಯಲಿ ತುಷ್ಟಿಯಲಿ ಮನವನು । ಬಿಟ್ಟು ಹಿಡಿಯದೆ ಕಾಲಕರ್ಮವ । ಮೆಟ್ಟಿ ನಿಲೆ ಭಗವಾನುಯೆನಿಸುವನರಸಕೇಳೆಂದ ॥೧೧೫॥ ಗರುವ ಮಾ[illegible]ನು ವ[illegible]ನಿತದ್ರೈವಾ । ಪರನು ಕಡುಸುಖಿ ಭೋಗಿ ರೂಪೋ । ತ್ಕರನು ಧನಿಕನು ರಾಜಪೂಜ್ಯನು ಕೀರ್ತಿವಲ್ಲಭ[illegible] ॥ ಗುರುಜನಕೆ ಬಹುವಿದ್ಯೆಯುಳ್ಳವ । ನರಸ ಕೇಳ್ಳೆ ವಿದ್ಯೆಯಿಲ್ಲದ । ನರನು ನರಪಶುವವನಜನ್ಮ ನಿರರ್ಥಕ[illegible]ಂದ ॥೧೧೬॥ ವಿದ್ಯೆ ಸತ್ಕುಲ ಬಹುವಿವೇಕವು । ಬುದ್ಧಿಜಾಣ್ಮೆಯ ನುಡಿಯಾಸಡಗರ । ಶುದ್ಧಚಿತ್ತ ಸು[illegible]ಲ ಭುಜಬಲ ಭದ್ರವೆಂದೆನಿಸಿ ॥ ಉದ್ಯೊಗವು ಮೊದಲಾದಗುಣಗಳಿ । ವಿ[illegible] ಫಲವೇನೀಜಗದ ತೊರೆ । [illegible]ಮುದ್ದು ಹೊದ್ದದನರಗೆ ದಾರಿದ್ರ್ಯಾಂಗನಾವರಗೆ ॥೧೧೭॥ ಧರೆಯೊಳಗೆ ಶುಚಿಯುತನು ವೈಶ್ಯಾ । ನರ[illegible] [illegible]ಕಾಂತಾದರ್ಶಿಯಹಕವಿ । ವರನು ಸುವ್ರತಕಾಮನೆನಿಸು

ವ ಬ್ರಾಹ್ಮಣೋತ್ತಮನು ॥ ಹರಿಹರಾತ್ಮಕನಾಮ ಕೀರ್ತನ । ವೆರಸಿ ಬದುಕುವನೊಬ್ಬನೀನಾ । ಲ್ವರುಗಳಲ್ಲದೆ ಭುವನದೊಳಗನ್ಯತ್ರವಿಲ್ಲೆಂದ ॥೧೧೮॥ ಹರಿಭಕತಿಲೋಲುಪನೆನಿಸಿ ಶಂ । ಕರನ ಬದ್ಧದ್ವೇಷಿಯುಹಶಂ । ಕರನ ಭಕ್ತಿಯೊಳಧಿಕವಾಗಿಯು ವೈಷ್ಣವರಮೇಲೆ ॥ ಎರಕವಿಲ್ಲದ ಕರ್ಮಚಂಡಾ । ಲರುಗಳೆಪ್ಪತ್ತೈದುಕೋಟಿಯು । ನರಕದೊಳಗೋಲಾಡುತಿಹರೆಲೆ ರಾಯಕೇಳೆಂದ ॥೧೧೯॥ ಯತಿಕೆಡುಗು ದುಸ್ಸಂಗದಲಿ ಭೂ। ಪತಿಕೆಡುಗುದುರ್ಮಂತ್ರದಲಿ ವರ।ಸುತಕೆಡುಗು ಲಾಲನೆಗಳಲಿ ಕೃಷಿಕೆಡುಗುಪೇಕ್ಷೆಯಲಿ॥ ಮತಿ ಕೆಡಗು ಮಧುಪಾನದಲಿ ಸ। ದ್ಗತಿ ಕೆಡುಗು ದುಶ್ಚರಿತದಲಿ ನಿಜ । ಸತಿಕೆಡುಗು ದುರ್ವ್ಯಸನದಲಿ ಭೂಪಾಲಕೇಳೆಂದ॥೧೨೦॥ಉಂಡುತೀರಿಸಬೇಕು ತಾ ಮುಂ। ಕೊಂಡು ಮಾಡಿದಪುಣ್ಯಪಾಪದ। ತಂಡವನು ತರಹರಣವಿಲ್ಲದೆಭವಭವಂಗಳಲಿ ॥ ಹಿಂಡಿಹಿಳಿವುದುಬೆಂಬಿಡದೆ ಸಮ। ದಂಡಿಯಲಿ ಹಗೆಕೆಳೆಗಳೆನ್ನದೆ। ಗಂಡುಗೆಡಿಸದೆಬಿಡುವುದೇ ವಿಧಿಯೆಂದನಾವಿದುರ॥೧೨೧॥ ಸ್ನೇಹಪೂರ್ವಕದಿಂದ ಮನದೊಳ। ಗೂಹಿಸಲು ಲಕ್ಷ್ಮೀಶನವರಿಗೆ। ಬೇಹಪುರುಷಾರ್ಥಂಗಳಹವೆಲ್ಲಿದ್ದರಲ್ಲಲ್ಲಿ ॥ ಈಹದನು ತಪ್ಪುವುದೆ ಕೂರ್ಮನು। ಮೋಹದಲಿ ತತ್ಸಂತತಿಗೆ ನಿ । ರ್ವಾಹವಹವೋಲರಸ ಚಿತ್ತೈಸೆಂದನಾವಿದುರ ॥೧೨೨॥ಕೂಡಿದೆಡೆಯಲಕೃತ್ಯಶತವನು । ಜೋಡಿಸಿದವರು ಮಿತ್ರರುಗಳಿಗೆ । ಕೇಡಚಿಂತಿಸಿದವರುಗಳು ಪುರುಷಾರ್ಥವನು ತಮಗೆ ॥ ಮಾಡಿದವರುಗಳಿಗೆ ವಿಘಾತಿಯ । ಹೂಡಿದವದಿರು ನರಕದೊಳಗೋ । ಲಾಡದಿಹರೇ ರಾಯ ಚಿತ್ತೈಸೆಂದನಾವಿದುರ ॥೧೨೩॥ ಕುಲಜನಾಗಲಕುಲಜನಾಗಲಿ । ಜಲರುಹಾಕ್ಷನ ನಾಮಕೀರ್ತನ । ದೊಳಗೆ ಬದುಕುವನಾವನಾತನೆ ಸುಕೃತಿಯೆಂಬುವನು ॥ ಉಳಿದಜಪತಪನಿಯಮಹೋಮಂ । ಗಳಲಿ ಸಂಸಾರಾರ್ಣವವನು । ಚ್ಛಳಿಸಬಹುದೇ ರಾಯ ಚಿತ್ತೈಸೆಂದ ನಾವಿದುರ ॥೧೨೪॥ ಜಾತರೂಪದ ಲೇಸುಹೊಲ್ಲೆಹ । ವೀತಿಹೋತ್ರನ ದೇಹಕಾರಣ । ಭೂತವಾಗಿ ಹವಹಗೆ ಸದಸತ್ತುಗಳ ಭೇದವನು ॥ ನೀತಿಮುಖದಿಂದರಿವುದುತ್ತಮ । ನೀತ ಮಧ್ಯಮನೀತ ಕನಿಯಸ । ನೀತನೆಂಬುದನರಸ ಚಿತ್ತೈಸೆಂದನಾವಿದುರ॥೧೨೫॥ ಅವನಿಯಲಿಜನಜನಿತಧನಧಾ । ನ್ಯವನು ಕಳುಹಲಗ್ಗೆದು ಸಂತೋ । ಷವನು ಮಾಡುವಕಡೆಯಲೊಂದೇ ನೂರುಮಡಿಯಾಗಿ ॥ ಲವಲವಿಕೆ ಮಿಗಲೆತ್ತಿ ಸಪ್ತಾಂ । ಗವನು ಸಲಹುತ್ತಿರಲು ಬೇಹುದು । ರವಿಯವೊಲು ಸಾಸಿರಮುಖದೊಳವನೀಶ ಕೇಳೆಂದ ॥೧೨೬॥ ಇನನುದಯಿಸಲಿ ಪಶ್ಚಿಮಾದ್ರಿಯೊ । ಳೆನಲನೊಮ್ಮೆ ಹಿಮಾಂಶುವಾಗಲಿ । ಕನಕಗಿರಿಯಳ್ಳಾಟವಾಗಲಿ ಪರ್ವತಾಗ್ರದಲಿ ॥ ವನಜ ವಿಕಸಿತವಾದೊಡೆಯು ಸ । ಜ್ಜನರುಗಳು ನುಡಿದೆರಡನಾಡರು । ಮನವಚನಕಾಯದಲಿ ಚಿತ್ತೈಸೆಂದನಾವಿದುರ ॥೧೨೭॥ಹರನಕೊರಳಿಂಗಾಭರಣವಾ। ದುರಗಪವನಾಶನವೆನಿಸುವಂ । ತರಸ ನಿನ್ನಯಬಸುರಬಂದೇನಹರು ಪಾಂಡವರು ॥ ನರಪಶುಗಳಾದರುಕಣಾ ನೀ। ನಿರಲು ವನವಾಸದಲಿ ಸೊಪ್ಪನ । ವರತಮೆಲುವುದೆ ರಾಯ ಚಿತ್ತೈಸೆಂದನಾವಿದುರ ॥೧೨೮॥ ದೇವತಾಸ್ಥಾನದಲಿ ವಿಪ್ರಸ। ಭಾವಳಯದಲಿ ರಾಜಪುರುಷರ । ಸೇವೆಯಲಿ ರವಿಶಶಿಗಳುದಯಾಸ್ತಮಯ ಕಾಲದಲಿ ॥ ಗೋವುಗಳ ನೆರವಿಯಲಿ ವರವೃಂ । ದಾವನದೊಳುಪಹತಿಯ ಮಾಡುವ । ದಾವಗುಣ ಗರುವರಿಗೆ ಚಿತ್ತೈಸೆಂದನಾವಿದುರ ॥೧೨೯॥ ನಾಯನಡುಬೋನವನು ನೆಚ್ಚಿ ವೃ । ಥಾಯ ಕೆಡಬೇಡಾ ಯುಧಿಷ್ಠಿರ । ರಾಯನನು ಕರೆಸುವುದು ಭೀಷ್ಮಾದಿಗಳ ಮುಂದಿಟ್ಟು ॥ ನ್ಯಾಯಮುಖದಲಿ ಸಕಲ ರಾಜ್ಯ । ಶ್ರೀಯನರ್ಧವನಿತ್ತು

ಳವನಿಯಲಿ ॥ ಪತನ ತಪ್ಪದು ಮರಳಿ ಬಾರದ । ಮತವನರಿದು ಮಹಾನುಭಾವರ । ಗತಿವಿಡಿದು ನಡೆವುದು ನಯವು ಕೇಳೆಂದನಾಮುನಿಪ ॥೧೪॥ ಸಕಲಧರ್ಮದ ಸಾರವನು ಮತಿ । ವಿಕಳನಾಗದೆ ಚಿತ್ತವಿಸು ಬಾ । ಧಕವದಾವುದು ನಿನಗದನು ನೀನನ್ಯರುಗಳಲ್ಲಿ ॥ ಯುಕುತಿಯಿಂದದ ಮಾಡದಿರು ನಿ । ರ್ಮುಕುತನಹೆ ಸಂಸಾರದಲಿ ಸಾ । ಧಕಪಿದೊಂದೇ ಸಕಲಜನಮತವೆಂದನಾಮುನಿಪ ॥೧೫॥ ಒಂದು ವಸ್ತುವನೆರಡುಮಾಡುವೆ । ನೆಂದು ಬುದ್ಧಿಭ್ರಂಶದಲಿ ಮನ । ಸಂದು ಸಮ್ಯಜ್ಞಾನದುದಯದ ನೆಲೆಯು ಕಾಣಿಸದೆ ॥ ದಂದುಗಂಬಡುತಿಹರು ತತ್ವದ । ಹಿಂದುಮುಂದರಿಯದೆ ಮಹಾತ್ಮರು । ಒಂದಪಥದಲಿ ಬಾರದೇ ಕೆಡುತಿಹುದು ಜಗವೆಂದ ॥೧೬॥ ಪ್ರಣವದೊಂದಾವರ್ಣಮೂರರ । ಗುಣವಿಡಿದು ತೋರುವ ಚರಾಚರ । ವೆಣಿಸಬಾರದು ವಿಶ್ವದಲೆ ನಿಸ್ಯೂತವಾಗಿಹುದು ॥ ಹಣಿದು ಬೀಳುವಹೊಳೆವ ಜ್ಯೋತಿರ್ಗಣದವೊಲು ತೊಳತೊಳಗಿ ಬೆಳಗುವ । ಗುಣರಹಿತನ ನಿಜಸ್ವರೂಪವಿದೆಂದನಾಮುನಿಪ ॥ ನಳಿನಮಿತ್ರನು ಪಶ್ಚಿಮಾಂಬುಧಿ । ಗಿಳಿಯೆ ನಾನಾಪಕ್ಷಿಜಾತಿಗ । ಳುಲಿಯುತೈತಂದೊಂದುವೃಕ್ಷವನೇರಿ ರಾತ್ರಿಯನು ॥ ಕಳಿದು ನಾನಾದೆಸೆಗೆ ಹರಿವವೊ । ಲಿಳೆಯ ಭೋಗದ ದೃಷ್ಟಿ ತೀರಿದ । ಬಳಿಕ ಲೋಕಾಂತರವನೆಯ್ದುವರೆಂದ ನಾಮುನಿಪ ॥೧೭॥ ಪೊಡವಿಯೊಳಗುದಯಿಸಿದದುಷ್ಕೃತ । ಒಡೆದು ಭೂಪರನದು ಪುರೋಹಿತ । ರೆಡೆಗೆ ಬಳಿಕಾಮುಖ್ಯಶಿಷ್ಯನ ದೋಷ ಗುರುವಿನದು ॥ ಮಡದಿ ಮಾಡಿದ ಪಾತಕವು ಪತಿ । ಗೊಡಲಹುದು ಪರಮಾರ್ಥವಿದು ಪರ । ವಿಡಿಯನರಿಯದೆ ಕೆಡುವುದೀಜಗವೆಂದನಾಮುನಿಪ ॥೧೮॥ ದುರ್ಜನರಿಗರಜವುದು ಲೋಕವು । ಸಜ್ಜನರ ಲೆಕ್ಕಿಸದು ತಾರ್ಕ್ಷ್ಯನು । ಸೆಜ್ಜೆಯೊಳಗಿಹದಂದಶೂಕನನರ್ಚಿಸುವರೊಲಿದು ॥ ಉಜ್ವಲಿತಭಕ್ತಿಯಲಿ ಬಹಳವಿ। ತರ್ಜೆಯಲಿ ಮೂಢಾತ್ಮರಿಕ್ಕಿದ । ಹೆಜ್ಜೆಯಿದು ಲೋಕಕ್ಕೆ ಕೇಳ್ ನೀನೆಂದನಾಮುನಿಪ ॥೧೯॥ ತಳಪಟದೊಳಾಯುಷ್ಯರಾಶಿಯ । ನಳೆವಕೊಳಗವು ಸೂರ್ಯನೆಂಬುದ। ತಿಳಿದಹೋರಾತ್ರಿಯಲಿ ಸಂಖ್ಯೆಯು ಸಲಿಗೆಯಂಕಿಸದೆ ॥ ಬಳಸುವುದು ಸನ್ಮಾರ್ಗದಲಿ ಮುಂ। ಕೊಳಿಸುವುದು ಸದ್ಧರ್ಮದಲಿ ವೆ । ಗ್ಗಳಿಸದಿರು ಷಡುವರ್ಗದಲಿ ಕೇಳೆಂದನಾಮುನಿಪ ॥೨೦॥ ನಷ್ಟಿಯಿದು ಸಂಸಾರದೊಳಗು । ತ್ಕೃಷ್ಟವಿದುಮನ್ವಾದಿಮಾರ್ಗದ । ದೃಷ್ಟವಿದು ಲೋಕಾಂತರದ ಸುಖದುಃಖದೇಳಿಗೆಯಾ ॥ ಹುಟ್ಟುಮೆಟ್ಟಿನ ಕಾಲಕರ್ಮದ । ಕಟ್ಟಳೆಯಿದೆಂದರಿದು ನಡೆವಂ । ಗಟ್ಟಳಿಸುವುದಿದಾವುದೈ ಹೇಳೆಂದನಾಮುನಿಪ ॥೨೧॥ ಶಿಲೆಯ ರೂಹನು ಮೂಢರುಗಳ । ಗ್ಗಳೆಯ ಪಾವಕನನು ಮಹೀಸುರ । ರಳೆಯೊಳಗೆ ಪರಮಾತ್ಮನೇ ಪರದೈವ ತಾನೆಂದು ॥ ಒಲಿದು ಪೂಜಿಸುತಿಹರು ಹೃದಯಾಂ । ಗಳದೊಳಗೆ ವರಯೋಗಿಗಳು ಕೈ । ವಳಸುವುದು ಜನಪೀಪ್ರಕಾರದೊಳರಸ ಕೇಳೆಂದ ॥೨೨॥ ಜ್ಞಾನಿಗಳನೊಡಬಡಿಸಬಹುದ । ಜ್ಞಾನಿಗಳನಹುದೆನಿಸಬಹುದು । ಜ್ಞಾನಲವವನು ಕೂಡಿಕೊಂಡಿಹದುರ್ವಿದಗ್ಧರನು ॥ ಏನ ತಿಳುಹಲು ಬಹುದು ವಿಷ್ಣು । ಸ್ಥಾನಗಳವಲ್ಲಿದನು ಮಿಕ್ಕಿನ । ಮಾನವರ ಪಾಡಾವುದೆಂದನು ಮುನಿ ನೃಪಾಲಂಗೆ ॥೨೩॥ ದಾನವೊಂದಾಪಾಲನೆಯ ಫಲ । ದಾನವೊಂದೇ ಪ್ರಭೆಯು ಪಿದರೊಳು । ದಾನದಿಂದಹುದಿಹಪರಂಗಳ ಸೌಖ್ಯಸಂಪದವು ॥ ದಾನವೇ ಸಂಸಾರಸಾಧನ । ದಾನದಿಂ ಪಾರತ್ರಿಯಫಲವಿ । ಸ್ವರ್ಗನೆಂಬೆನು ಕಡೆಯೊಳಚ್ಯುತಪದವಿ ಫಲವೆಂದ ॥೨೪॥ ಅರಸನೊಡೆಯನು ದಂಡನಾಥನು । ಗುರುಹಿರಿಯನುತ್ತಮನು ದೇವಾ । ಪರನು ಸಾಹಿತ್ಯ

ನು ಸದಸ್ಯನು ತತ್ಪುರುಷನೆಂದು । ಪರಿಪರಿಯ ನಾಮಂಗಳಲಿಹಂ । ಕರೆಸುವರು ಜೀವಾತ್ಮ ತೊಲಗಿ ದ । ಮರುದಿವಸ ಹೆಣನೆನ್ನರೇ ಹೇಳೆಂದನಾಮುನಿಪ ॥೨೬॥ ವರುಷವೊಂದೊಳು ಮಾಸಮೂರರೊ । ಳಿರದೆ ಪಕ್ಷತ್ರಯದೊಳಗೆ ಬಂ । ದಿರುವುದು ದಿನವೂರರಲಿ ಸಂಪ್ರೇಷಣಾಡಿದಕೆ ॥ ಧರೆಯೊಳುತ್ಕಟ ಪುಣ್ಯಪಾಪೋ । ತ್ಕರದ ಫಲವಿದು ತಪ್ಪಬಾರದು । ಮರಳುವುದು ಪರಲೋಕದೆಸೆಗವನೀಶ ಕೇಳೆಂದ॥ ಒಂದು ಭೂಪಿಂಡದಲಿ ನಾನಾ । ಚಂದದಿಂ ಪ್ರಾಣಿಗಳು ಜನಿಸುವ । ರೊಂದು ಸೂರ್ಯಜ್ಯೋತಿಸ್ಸಿನಲಿ ನಾನಾ ಜ್ಯೋತಿಯುದಿಸುವವು ॥ ಒಂದುಪರವಸ್ತುವಿನ ಬಳಿಯಲಿ । ಬಂದುದಬುಜಭವಾಂಡಕೋಟಿಗ । ಳೆಂದರೆ ಯುಬೇರಿಲ್ಲ ಸರ್ವವು ವಿಷ್ಣುಮಯವೆಂದ ॥೨೮॥ ತಾನಿವನು ಹಗೆ ಕೆಳೆವಿವೇಕ । ಜ್ಞಾನವಜ್ಞಾನಂಗಳಿ ಹಪರ । ಹಾನಿವೃದ್ಧಿಯುಮಾರ್ಗವಾರ್ಗದೊಳೇಕಚಿತ್ತದಲಿ ॥ ದಾನಧರ್ಮಪರೋಪಕಾರವಿ । ಧಾನದೀಕ್ಷಾಕರ್ಮನಿಷ್ಠರು । ಮಾನನೀಯರಲೇ ಮಹಿಪತಿ ಕೇಳು ನೀನೆಂದ ॥೨೯॥ ಕರಣಗುಣಸಂಹನನಸಸಂಧ್ಯಾಂ । ತರದವಸ್ಥಾಂತರದ ಲೋಕೋ । ತ್ಕರದ ತಾಪತ್ರಯದ ಲಕ್ಷಣಲಕ್ಷಿತವನರಿದು ॥ ಪರಿವಿಡಿಯಮೂರ್ತಿತ್ರಯಂಗಳ । ಗುರುಲಘುವನಾರೈದು ನಡೆವಂ । ಗಿಂದೆನಿಸುವುದವಾವುದ್ಗ ಹೇಳೆಂದನಾ ಮುನಿಪ ॥೩೦॥ ವೇದನಾಲ್ಕಾಶ್ರಮವುತಾನಾ । ಲ್ಕಾದಿಮೂರುತಿ ನಾಲ್ಕುವರ್ಣವಿ । ಭೇದನಾಲ್ಕಾಕರಣ ನಾಲುಕುಪಾಯನಾಲ್ಕರಲಿ ॥ ಭೇದಿಸಲು ಪುರುಷಾರ್ಥನಾಲ್ಕರ । ಹಾದಿಯರಿದು ವಿಮುಕ್ತನಾಲುಕ । ನೈದುವನು ಸಂದೇಹವೇ ಹೇಳೆಂದನಾಮುನಿಪ ॥೩೧॥ ಭೂತವರ್ಣಸ್ಥಾನಪರ್ವನಿ । ಪಾತವಧ್ವರಕೃತಕಕರ್ಕಶ । ಜಾತಿಮುಖಪಾರಣಾದಿ ಶರಸಂತತಿಯ ಸೋಹೆಗಳ ॥ ಧಾತುಮೂಲಾದಿಗಳನರಿವುದು । ಪ್ರೀತಿಯಿಂದಿಹಪರವ ಗೆಲುವುದು । ಭೂತಳದೊಳುತ್ತಮವಲೇ ಭೂಪಾಲ ಕೇಳೆಂದ ॥೩೨॥ ಆರುಗುಣರುತುವರ್ಣವರ್ಣವ । ದಾರುದರ್ಶನಪಾತ್ರವಂಗವ । ದಾರುಭೇದದ ಬಗೆಯನರಿವುದು ಶಿಷ್ಟ ಮಾರ್ಗದಲಿ ॥ ತೋರಲೀಮಾಯಾಪ್ರಪಂಚವ । ಮೀರಿಕೇಡಿಲ್ಲದಪರವ ಕೈ । ಸೂರೆಗೊಂಬುದು ಪರಮಮಂತ್ರವಿದೆಂದನಾಮುನಿಪ ॥೩೩॥ ಜಲಧಿರಸಮಾತೃಕರಸದಿಕರ । ತಳಪಿಭಕ್ತಿಗಳಂಗದೀಪಾ । ವಳಿಮುನೀಶ್ವರರುಗಳಧಾತುಗುಣದಿವೇಧೆಗಳ ॥ ತಿಳಿದು ತಾಳದಗತಿಯಗಮಕಂ । ಗಳನರಿದು ನಡವವರುಗಳು ನಿ । ರ್ಮಳದಲೆಡಹದೆ ಬೆರಸಿಕೊಂಬುದು ಮುಕುತಿರಾಜ್ಯವನು ॥೩೪॥ ಕಾಯದಿಗ್ಬಂಧಪ್ರಣಾಮವಿ । ಧೇಯವರ್ಜನೆ ಯೋಗಸಿದ್ಧನಿ । ಕಾಯನಾಲ್ಕರವಿಂದ್ರಿಯಸ್ಥಿತಿಗತಿಯನಾರೈದು ॥ ಆಯವನು ವಿವರಿಸುತ ಮೇಲಣ । ಬೀಯವಿದು ತನಗೆಂಬುದನು ನಿ । ರ್ದಾಯದಲಿ ನಿಶ್ಚಯಿಸಬೇಹುದು ರಾಯ ಕೇಳೆಂದ ॥೩೫॥ ನವನವಬ್ಯೂಹಂಗಳಬುಜೋ । ದ್ಭವನವಾಳಲಿಖಂಡನವರಸ । ನವನವದವಿಗ್ರಹದನಾಟಕಲಕ್ಷಣನನರಿದು॥ ನವವಿಧಾಮಳಭಕ್ತಿರಸವನು । ಸವಿದು ನಿಲೆ ಸನ್ನಿತ್ಯವಸ್ತುವ । ನವರಸವನಾರೈದು ನಡೆವುದು ಭೂಪಕೇಳೆಂದ ॥೩೬॥ ಹತ್ತುಮುಖದಲಿ ಲೋಕದೊಳಗು । ತ್ಪತ್ತಿಯಾದ ಚರಾಚರಂಗಳ । ಲುತ್ತಮಾಧಮರೆನ್ನದೇ ಹರಿ ಸರ್ವಗತನಾಗಿ ॥ ಸತ್ತುವನು ನಾನಾತರದಲಿ ವಿ । ಚಿತ್ರಚರಿತನು ಕಪಟನಾಟಕ । ಸೂತ್ರಧಾರಕನೆಂದರಿದು ಸುಖಿಯಾಗು ನೀನೆಂದ ॥೩೭॥ ಲೇಸುಮಾಡಿದಿರೆನ್ನಚಿತ್ತದ । ಬೇಸರಿಕೆ ಬಯಲಾಯ್ತು ನಿಮ್ಮಿಂಪ । ದೇಶದಿಂದ ಕೃತಾರ್ಥನಾದೆನು ಗೆಲಿದೆನಿಹಪರವ ॥ ಗಾಸಿಯಾದುದು ರಾಗ ಲೋಭದ । ಮೀಸಲಳಿದುದು ನಿಮ್ಮದೆಸೆಯಿಂ । ದೇಸುಧನ್ಯರೊ ನಾವು

ಚಿತ್ತೈಸೆಂದನಾಭೂಪ ||೩೮|| ಸ್ವರ್ಗವಾವುದು ನರಕವಾವುದು । ವಿಗ್ರಹದವಲಪಸಿದ್ಧಿಯಾವುದ। ನುಗ್ರಹಿಸಲೇನಹುದು ಪಾತ್ರಾಪಾತ್ರವೆಂದೇನು || ಉಗ್ರವಾವುದು ದೈವದೊಳಗೆ ಸ । ಮಗ್ರವಾವುದು ಧರ್ಮದೊಳಗೆಯು । ನುಗ್ರಹಿಸಿಯುಪದೇಶಿಸಲು ಬೇಕೆಂದನಾಭೂಪ ||೩೯|| ಸುಲಭನತಿಸಾಹಿತ್ಯ ಮಂಗಳ । ನಿಳಯನಗಣಿತ ಮಹಿಮನನ್ವಯ । ತಿಲಕನನುಪಮ ಚರಿತ ದೈವಾಪರನು ಪುಣ್ಯನಿಧಿ || ಕುಲಯುತನು ಕೋವಿದನು ಕರುಣಾ । ಜಲಧಿ ಕೌತುಕಯುಕ್ತಿವಿದನೆಂ । ದಿಳೆ ಹೊಗಳುತಿರಲದುವೆಕೇಳೈಸ್ವರ್ಗಗತಿಯೆಂದ ||೪೦|| ಪಾತಕನು ಪತಿತನು ಕೃತಘ್ನನು । ಘಾತಕನು ಮರ್ಮನು ದುರಾಶ್ಯನ। ಧೀತಕನು ದೂಷಕನು ದುರ್ಜನನಪ್ರಯೋಜಕನು || ನೀತಿರಹಿತನನಾರ್ಯ ಧರ್ಮಸ । ಮೇತ ದೈವದ್ರೋಹಿಯೆಂಬುದು। ಭೂತಳವಿದೇನರಕ ಚಿತ್ತೈಸೆಂದ ನಾಮುನಿಪ ||೪೧|| ದೇಹವಿಡಿದಿಹಕರ್ಮವದು ನಿ । ರ್ದೇಹದಲಿದೊರಕುವ ಮಾನವ ದೆ। ದೇಹವೇ ಸಾಧನ ಸಕಲಪುರುಷಾರ್ಥಶೀಲಂಗೆ || ಐಹಿಕಾಮುಷ್ಮಿಕದಗತಿ ಸಂ। ಮೋಹಿಸುವದುಶಲ್ಯದಲಿಸಂದೇಹವೇ ಧೃತರಾಷ್ಟ್ರಚಿತ್ತೈಸೆಂದನಾಮುನಿಪ ||೪೨||ಗರುಡಪಂಚಾಕ್ಷರಿಯೊಳಲ್ಲದೆ। ಗರಳಭಯವಡಗುವುದೆ ವಿಷ್ಣು । ಸ್ಮರಣೆಯಿಂದಲ್ಲದೆ ಮಹಾಪಾತಕಕೆ ಕಡೆಯಹುದೆ || ಹಿರಿದು ಸಂಸಾರಾಂಬುಧಿಯನು । ತ್ತರಿಸುವೊಡೆ ಗುರುಮುಖದೊಳಲ್ಲದೆ । ನಿರತಿಶಯವಿಸ್ತಾರವುದೈ ಹೇಳೆಂದ ನಾಮುನಿಪ ||೪೩|| ತನ್ನ ಮನೆಯಲಿ ಮೂರ್ಖನತಿಸಂ । ಪನ್ನ ಪೂಜ್ಯನು ಭೂಮಿಪಾಲನು । ತನ್ನದೇಶದೊಳಧಿಕ ಸ್ವಗ್ರಾಮದಲಿ ಪ್ರಭು ಪೂಜ್ಯ || ಧನ್ನವಿಲ್ಲದ ಹೋಹತಾವಿನೊ । ಳನ್ಯವೆನಿಸದೆ ವಿಶ್ವದೊಳುಸಂ । ಪನ್ನ ಪೂಜ್ಯರು ಪಾತ್ರರೈ ವಿದ್ವಾಂಸರುಗಳೆಂದ ||೪೪|| ಒಬ್ಬನಹನೈ ಶೂರ ನೂರರೊ । ಳೊಬ್ಬನಹ ಸಾಪಿರಕೆ ಪಂಡಿತ । ನೊಬ್ಬನಹನೈ ಶತ್ರು ಶತಸಾಪಿರಕೆ ಲೋಕದಲಿ || ಒಬ್ಬದಾನಿಯು ಕಾಣೆನಾನಿ । ನ್ನೊಬ್ಬರೊಬ್ಬರಿಗೊಂದುಗುಣವದು । ಸಬ್ಬಗುಣಸಂಪನ್ನರೈ ವಿದ್ವಾಂಸರುಗಳೆಂದ ||೪೫|| ಸತಿಯರಿಗೆ ಗತಿಯಾವುದೈ ನಿಜ । ಪತಿಗಳಲ್ಲದೆ ವಿಪ್ರಜಾತಿಗೆ । ಹುತವಹನು ವರ್ಣತ್ರಯಕೆ ಭೂದೇವರುಗಳಿರಲು || ಕ್ಷಿತಿಯೊಳತಿಶಯವಾವುದೈ ಭೂ। ಪತಿಯೆ ಕೇಳಿಹಪರಕೆ ಸುಖಸಂ। ಗತಿಯನೊಲುವೊಡೆಪೂಜಿಸುವುದೈ ಬ್ರಾಹ್ಮಣೋತ್ತಮರ ||೪೬|| ಚೋರರನು ಕಂಟಕನ ಹಿಂಸಾ । ಚಾರನನು ಷಂಡನನು ಸಮಯವಿ ।ಕಾರಭೇದಿಯನಿಂತಿರುವವರನು ಕಂಡು ಮನ್ನಿಸದೆ || ದೂರದಲಿ ವರ್ಜಿಸುವುದು ಬಹಿ । ಷ್ಕಾರಿಗಳು ಸರ್ವಕ್ಕಿವರುಗಳು । ಸಾರದುದು ಸರ್ವೇಶ್ವರನ ಮತವರಸ ಕೇಳೆಂದ ||೪೭|| ಮೊದಲಲಾಮಾಹಿಷನನಾಮ । ಧ್ಯದಲಿ ವೃಷಲೀವಲ್ಲಭನನಂ । ತ್ಯದಲಿ ವಾಗ್ದೂಷಕನ ಕಂಡವರುಗಳ ಭಾಗ್ಯನಿಧಿ || ಕದಡಿಹರಿವುದು ಕಂಡ ಮುಖದಲಿ । ಸದಮಳಿತಶಾಸ್ತ್ರಾರ್ಥನಿಶ್ಚಯ । ವಿದನರಿದು ನಡೆವುದು ನಯವುಭೂಪಾಲ ಕೇಳೆಂದ ||೪೮|| ಕುಲರಹಿತ ಷಡುವರ್ಗಮುಖದಲಿ । ಗಳಿಸಿದರ್ಥವನುಂಡು ಕಾಲವ । ಕಳಿವನಿರ್ಭಾಗ್ಯರುಕಣಾ ಮಾಹಿಷಿಕರೆಂಬುವರು || ಇಳೆಯೊಳವರೊಡನಾಡಿದವದಿರು । ಗಳಿಗೆ ನರಕಾರ್ಣವದೊಳಾಳುತ । ಮುಳುಗುತಿರುತಿಹರಲ್ಲದೇ ಗತಿಯಿಲ್ಲ ಕೇಳೆಂದ ||೪೯|| ದೈವದಾಧೀನದಲಿ ಜಗವಾ । ದೈವಮಂತ್ರಾಧೀನ ಮಂತ್ರವು । ಭೂಮಿಬುಧರಾಧೀನವಾಗಿಹುದಾಗಿ ಲೋಕದಲಿ || ದೈವವೇ ಬ್ರಾಹ್ಮಣನದಲ್ಲದೆ । ಭಾವಿಸಲು ಬುಧರಿಂದಧಿಕವಹ। ದೈವವೆಂಬುದದಾವುದೈ ಹೇಳೆಂದನಾಮುನಿಪ|| ೫೦|| ಕೆಲಸಗತಿಯಲಿ ಕಡೆದತಿಲೆಯನು । ಕಲುಕುಟಿಕನಿಳುಹುಪನದಲ್ಲದೆ । ಹಲವುಪರಿಯಿಂದದನು ಲೋಕಕೆ

ದೈವವನು ಮಾಡಿ ॥ ಸಲಿಸುವವರುಂಟೇ ಸುರಾಸುರ । ರೊಳಗೆ ವಿಪ್ರೋತ್ತಮರುಳಿಯೆ ಜಗ । ದೊಳಗೆ ದೈವವದಾವುದೈ ಹೇಳೆಂದನಾಮುನಿಪ ॥೫೧॥ ಎಣಿಸಬಹುದೂರ್ವರೆಯ ಸೈಕತ । ಮಣಿಯನೊಯ್ಯಾರದಲಿ ಗಗನಾಂ । ಗಣದೊಳೈತಹ ವೃಷ್ಟಿಬಿಂದುವ ಲೆಕ್ಕಗೊಳಬಹುದು ॥ ಎಣಿಸಬಾರದದೊಂದುದಿವಿಜರ । ಗಣಕಗೋಚರವಾಗಿ ಸದ್ಬ್ರಾ । ಹ್ಮಣನೊಳೊಬ್ಬನ ರಕ್ಷಿಸಿದಫಲವರಸ ಕೇಳೆಂದ॥ ಜಾತಿಧರ್ಮವನನುಸರಿಸಿ ವರ । ಮಾತೃಪಿತೃಪರಿಚಯದೊಳಗೆ ನಡೆ। ವಾತ ಪರರ ಗುಣಾಗುಣಸ್ತುತಿನಿಂದೆಗಳನರಿದು ॥ ಭೂತನಾತನ ಭಕುತಿಯಲಿ ವಿ । ಖ್ಯಾತವಹಗುರುದೈವದಲಿ ಭಯ । ಭೀತಿಹಿರಿದಿರಲದುವೆ ಕೇಳ್ಸುಕೃತಕ್ಕೆಕಡೆಯೆಂದ ॥೫೩॥ ಅರ್ಥದಿಂದಹಸಿದ್ಧಿಯಾವುದ । ನರ್ಥವೆಂಬುದದೇನು ತನಗೆ । ಸ್ವಾರ್ಥವಾರು ಪರಾರ್ಥದಿಂದಹುದಾವುದುದವನಿಯಲಿ ॥ ತೀರ್ಥವಾವುದು ವಿಪ್ರರೊಳಗೆ ಸ । ಮರ್ಥರಾರು ಸುಧಾತ್ರಿಯೊಳಗೆಯು । ವ್ಯರ್ಥಜೀವಿಗಳಾರು ಚಿತ್ತೈಸೆಂದನಾಮುನಿಪ ॥೫೪॥ ಧನವನುಳ್ಳಮಹಾತ್ಮನಾವುದ । ನೆನೆದೊಡದು ಕೈಸಾರುವುದು ನಿ । ರ್ಧನಿಕನಾವುದ ನೆನೆದಬಯಕೆಯದಲ್ಲದೇ ಬೇರೆ ॥ ಧನಿಕನಂತೆ ಸಮಸ್ತಸುಖ ಸಂ । ಜನಿಸುವುದೆ ಸರ್ವಕ್ಕೆ ಸಾಧನ । ಧನವದಲ್ಲದೆ ಭುವನದೊಳಗನ್ಯತ್ರವಿಲ್ಲೆಂದ ॥೫೫॥ ವ್ಯರ್ಥರುಗಳೊಡನಾಟತನ್ನಯ । ಸ್ವಾರ್ಥರಲ್ಲದರುಗಳ ಕೂಟ ಪ । ರಾರ್ಥದಿಂದುಜ್ಜೀವಿಸಿದವನ ಬದುಕು ಲೋಕದಲಿ ॥ ಅರ್ಥವಿಲ್ಲದಸಿರಿಯು ಸಡಗರ । ವರ್ಥಯಿಲ್ಲದಬಾಳುವೆಗಳೀ । ಯರ್ಥಪಾರಂಪರೆಯಲೇ ಕೇಳೆಂದ ನಾಮುನಿಪ ॥೫೬॥ ಮಾಡುವುದು ಧರ್ಮವನು ಸುಜನರ । ಕೂಡುವುದು ಪರಪೀಡೆಯಂಬುದ । ಮಾಡಲಾಗದು ಕರಣಮೂರರೊಳಲ್ಲದಾಟವನು ॥ ಅಡಲಾಗದುದಸಭ್ಯಜನವನು । ಕೂಡಲಾಗದಿದೆಂಬಮಾರ್ಗವ । ನೋಡಿ ನಡೆವುದು ತನಗೆ ಪರಮಸ್ವಾರ್ಥಕರವೆಂದ ॥೫೭॥ ಕರಿತುರಗಮೊದಲಾದವಸ್ತುಗ । ಳರಮನೆಗಳಲಿ ಪುತ್ರಮಿತ್ರರು । ತರುಣಿಯರು ಸಹಚರರು ಗೋತ್ರಜರಡವಿಯೊಳಗಿಕ್ಕಿ ॥ ತಿರುಗುವರು ನಿಜಸುಕೃತದುಷ್ಕೃತ । ವೆರಡುಬೆಂಬಿಡವಲ್ಲದುಳಿದುದ । ನರಸಬಲ್ಲವರಾರು ಧರ್ಮರಹಸ್ಯವಿಸ್ತರವ ॥೫೮॥ ಧರ್ಮದಾಧಾರದಲಿಹುದು ಜಗ । ಧರ್ಮವುಳ್ಳನನಾಶ್ರಯಿಸುವುದು । ಧರ್ಮವೇ ನೂಕುವದು ಜನ್ಮಾಂತರದ ಪಾತಕವ ॥ ಧರ್ಮವೇ ಸರ್ವಪ್ರತಿಷ್ಠಿತ । ಧರ್ಮವೆಂಬುದು ಪರಮಪದವಾ । ಧರ್ಮವನು ಬಿಟ್ಟಿಹುದು ಬದುಕಲ್ಲರಸ ಕೇಳೆಂದ ॥೫೯॥ ಪರಿಪರಿಯ ಯಜ್ಞವನು ವಿರಚಿಸಿ । ಸುರಪತಿಯ ಸಂತುಷ್ಟಿಬಡಿಸಲು । ಸುರಿವನವಸಂಪೂರ್ಣವಾಗಿ ಸುವೃಷ್ಟಿಯನು ಜಗಕೆ ॥ ಹರಿಹಯನು ಸಸ್ಯಾದಿಕಂಗಳ । ಹೊರೆಯಲೋಸುಗ ಮುನ್ನೆಮುಯ್ಯಾ । ಗಿರುತಿಹನು ಭುವನದ್ವಯದೊಳವನೀಶ ಕೇಳೆಂದ ॥೬೦॥ ಎತ್ತಲಾನು ಸುತೀರ್ಥವೆಂಬುದ । ಚಿತ್ತವಿಸುವೊಡೆಸರ್ವತೀರ್ಥದ । ಸತ್ವವನು ಸನ್ನಿಹಿತವಾಗವಧರಿಸು ನೀನದನು ॥ ವಿಸ್ತರಿಸುವೆನು ವಿಪ್ರಪಾದದ । ಮುಕ್ತವಿಮಳೋದಕವನಾವನು । ನೆತ್ತಿಯಲಿ ಧರಿಸಿದವನವನು ಕೃತಾರ್ಥನಹನೆಂದ॥೬೧॥ ಶರಧಿಯೊಳು ಹದಿಯೋಗನಿದ್ರೆಯೊ । ಳಿರಲು ಭೃಗುವೈತಂದು ಲಕ್ಷ್ಮೀ । ಧರನ ವಕ್ಷಸ್ಥಳವನೊದೆಯಲು ಮುನಿಯ ಚರಣವನು ॥ ಸಿರಿಯುದರದೊಳಗೊತ್ತಿ ಧರಣೀ । ಸುರರ ಮೆರೆದನು ತೀರ್ಥಪಾದವ । ಧರೆಯೊಳಗೆ ಬುಧರಿಂದಧಿಕವಹದೈವವಿಲ್ಲೆಂದ ॥೬೨॥ ಮಾಡುತಿಹ ಯಜ್ಞವನು ಪರರಿಗೆ । ಮಾಡಿಸುವ ವೇದಾಧ್ಯಯನವನು । ಮಾಡುತಿಹತದ್ವಿಷಯದಲಿ ಯೋಗ್ಯರನು ಮಾಡಿಸುವ ॥ ಮಾಡು

ತಿಹದಾನವನು ಲೋಗರು । ನೀತುತಿರಲೊಳಕೊಂಬಗುಣವನು । ಮಾಡಿಕೊಂಡಿಹನೇ ಸಮರ್ಥನು ವಿಪ್ರರೊಳಗೆಂದ ॥೬೩॥ ವೇದಪುರುಷನ ವಿಗ್ರಹದಲಿ ವಿ । ಷಾದವಿಲ್ಲದ ಬಿಸಜಸಂಭವ । ಸಾದಿಯಾದ ಸಮಸ್ತದೇವರು ನೆಲೆವನೆಗಳಾಗಿ ॥ ನೇಮಕೊಂಡಹರೆಂತು ಕಾರಣ । ವಾದಿಸದೆ ವಿಪ್ರೋತ್ತಮರನ ಭಿ। ವಾಟಸುವುದುತ್ತಮನಲೇ ಕೇಳೆಂದ ನಾಮುನಿಪ॥೬೪॥ ಯುವತಿಯರು ಗಾಯಕರು ಕವಿಗಳು। ತವ ತವಗೆ ಕೈವಾರಿಸುವರಾ । ವವನವನೆ ಮಾವಗಲು ದೂಷಕನಿಹಪರಂಗಳಿಗೆ ॥ ಇವರು ಮೂವರು ನಿಂದಿಸುವರಾ । ವವನವನು ಸರ್ವಜ್ಞನೆನಿಸುವ । ನವನಿಪತಿಚಿತ್ತೈಸು ಧರ್ಮರಹಸ್ಯವಿಸ್ತರವ ॥ ೬೫ ॥ ಜ್ಞಾತವಾವ್ದಜ್ಞಾತವಾವುದು । ನೀತಿಯಾವುದು ದ್ವೈತವಾವ್ದ । ದ್ವೈತವಾವುದು ವೈದಿಕಾಂಗದಲಿ ॥ ಖ್ಯಾತಿಯಾವ್ದಖ್ಯಾತಿಯಾವುದು । ಜಾತಿಯಾವುದಜಾತಿಯಾವುದು । ಭೂತಳದೊಳವನೀಶ ಚಿತ್ತೈಸೆಂದನಾಮುನಿಪ ॥೬೬॥ ಧರಣಿಯಮರರ ಸೇವೆಯನು ವಿ । ಸ್ತರಿಸಿ ಸತ್ಕಾರದಲವರನಾ । ದರಿಸಿ ಬಹುಮಾನವನು ವಿರಚಿಸಿದಾಮಹಾತ್ಮಂಗೆ ॥ ಎರವಹುದೆ ಸ್ವರ್ಗಾಪವರ್ಗದ । ಸಿರಿಯದೆಂಬುದನರಿದು ನಡವಂ । ಗುಂದೆನಿಸುವದಾವುದೈ ಹೇಳೆಂದನಾಮುನಿಪ ॥೬೭॥ ಯೋನಿಮುಖವೆಂಬತ್ತುನಾಲ್ಕನ । ಹೀನಜನ್ಮಂಗಳೊಳಗುದಯಿಸಿ । ಹಾನಿವೃದ್ಧಿಗಳಿಂದು ಜ್ಞಾನದ ಕಡೆಯಕಾಣೆಯದಲಿ ॥ ಮಾನವರ ಬಸುರಲಿ ಬಂದ। ಜ್ಞಾತತಮರೆಂಬಂತೆ ತಾ ಕ। ರ್ಮಾನುಗತವಾಗಿಹುದಲೇ ಭೂಪಾಲಕೇಳೆಂದ ॥೬೮॥ ಪಾನಟಂ ಸೂಕರನು ಬಧಿರವ । ಮಾನಟಂ ಕ್ಷಯರೋಗಿ ಗುರುಜನ । ಹಾನಿಯಿಂದವ ಕಷ್ಟ ಗರ್ದಟ ಕುಕ್ಕುಟಾನ್ವಯವು ॥ ಹೀನಗತಿಯಿಂದುರುಗ ನಾನಾ । ಯೋನಿಗಳ ಸಚರಾಚರವು ಕ। ರ್ಮಾನುಗತವಾಗುವಯಿಸುವುವವನೀಶ ಕೇಳೆಂದ ॥೬೯॥ ಪರರಪಟುತನವಾದದಲಿ ಮೂ । ಗರವೊಲಿಹ ಪರವಚನದುತ್ಕಟ । ದೂರಗೆ ಬಧಿರತ್ವವನು ಪರಗುಣದೋಷದರುಶನವು ॥ ದೊರಕಿದೊಡೆಜಾತ್ಯಾಂಧನೆನಿಸುವ । ಪುರುಷನಾವನವನು ಸಾಕ್ಷಾ । ತ್ಪರಮಪುರುಷೋತ್ತಮನಲೇ ಭೂಪಾಲ ಕೇಳೆಂದ ॥೭೦॥ ಇಷ್ಟಸಂತರ್ಪಣವ ಮಾಡಿ ವಿ । ಶಿಷ್ಟಪೂಜಾಪಾತ್ರರನು ಸಂ । ತುಷ್ಟಿಬಡಿಸಿ ಸಧರ್ಮದಲಿ ರಾಜ್ಯವನು ರಕ್ಷಿಸುತ ॥ ಕೊಟ್ಟವರ ಕೊಂಡವರ ಮತ್ತೊಡ । ಬಟ್ಟವರನನುಜಾತ್ಮಜರನೊಳಗಿಟ್ಟು ಕೊಂಡಿಹುದುಚಿತವದು ಭೂಪಾಲ ಕೇಳೆಂದ ॥೭೧॥ ನುಡಿದುದನು ಪೂರೈಸಿಕಾಲದ । ಕಡೆಯಕಾಣಿಸಿ ಹೋಹವರ ಬೀ । ಳ್ಕೊಡುತ ಹಳೆಯರನಾಪ್ತರನು ಮನ್ನಿಸುತ ತನ್ನವನು ॥ ಹಿಡಿದು ಸೇವೆಯ ಮಾಡುವವರನು । ಬಿಡದೆ ನಾನಾತೆರದ ಪದವಿಯ । ಕೊಡುತಲಿಹುದಿದು ನೀತಿ ಚಿತ್ತೈಸೆಂದ ನಾಮುನಿಪ ॥೭೨॥ ವಿಲಗಸಾಗರವಾಗಿ ದೇಶವ । ಹಿಳಿದು ಹಿಂಡುತ ದಾನಧರ್ಮವ। ನುಳಿದು ದೇವಬ್ರಾಹ್ಮರುಗಳೆನ್ನದೆ ಕಂಡವರ ನೆಳೆದು ॥ ಗಳಿಗೆಸಂಖ್ಯೆಗೆ ದಂಡದೋಷವ। ಕೊಳುತ ಕಡೆಯಲಧೋಗತಿಗಳೊಳ। ಗಿಳಿದು ಹೋಹುದನೀತಿ ಚಿತ್ತೈಸೆಂದ ನಾಮುನಿಪ ॥೭೩॥ ಯೋನಿಯಲ್ಲದಠಾವುಗಳಲಿ ವಿ । ಯೋನಿಯಲ್ಲದ ವಿಷಯದಲಿ ಪಶು । ಯೋನಿಯಲಿ ಸಂಭೋಗಿಸುವ ಪಾತಕರ ಪರಿವಿಡಿಯ ॥ ಏನಹೇಳಲುಬಹುದು ನರಕವಿ । ತಾನದೊಳಗೋಲಾಡಿ ಬಳಿಕಾ । ಶ್ವಾನಯೋನಿಯೊಳವರು ಜನಿಸುವರೆಂದ ನಾಮುನಿಪ ॥೭೪॥ ಜೀವಪರಮನ ಭೇದವನು ಸಂ। ಭಾವಿಸದೆ ವೇದಾಂತಶಾಸ್ತ್ರವಿ। ದಾವಮುಖವೆಂದರಿಯದೆಯೆ ದಾಸೋಹವೆಂದೆನುತ ॥ ಕೋವಿದರ ಸಂಗವನುಳಿದು ಮಾ । ಯಾವಿಲಾಸದ ನೆಲೆಯ ನೋಡದೆ । ಸಾವುತಿಹನೆ

ದ್ವ್ಯಕ್ತಿ ಚಿತ್ತೈಸೆಂದನಾಮುನಿಪ ॥೭೫॥ ಉತ್ತಮರ ಸಂಗದೊಳಗೋಲಾ। ಡುತ್ತ ಮರ್ವಿಷಯಂಗ ಳನು ಮುರಿ । ಯೊತ್ತಿ ಸಕಲಚರಾಚರದ ಸುಖದುಃಖವನು ತಾನು ॥ ಹೊತ್ತು ನಡೆಯುತ ಪುಣ್ಯಾಪಾ ಪವಿ । ದೆತ್ತಣದು ತನಗೆಂಬಕಾಣಿಕೆ। ಯುತ್ತರೋತ್ತರಸಿದ್ಧಿ ಚಿತ್ತೈಸೆಂದನಾಮುನಿಪ॥೭೬॥ ಪೊಡ ವಿಯೊಳಗೆ ಪುರೋಹಿತನ ನವ । ಗಡಿಸಿ ಧರ್ಮದ ಬಲದಿ ನಾಕಕೆ । ನಡೆವರಾಯರ ಹೊಯ್ದು ಳಿಯಲಿ ಕ್ಕುವರಧೋಗತಿಗೆ ॥ ಕೆಡಿಸುವರು ಶಾಸ್ತ್ರವನು ರಾಷ್ಟ್ರವ । ತಡೆಗಡಿಸಿ ಚತುರಂಗಬಲವನು । ಹುಡಿಹುಡಿಯ ಮಾಡುವರು ನಿರ್ಜರರರಸ ಕೇಳೆಂದ ॥೭೭॥ ಬಲಿಯ ರಾಜ್ಯ ವಿಭೀಷಣನ ಸಿರಿ । ಜಲನಿಧಿಯ ಗಂಭೀರ ಬಾಣನ । ಬಲುಹು ಹನುಮಾನುವಿನ ಭುಜಬಲ ವೀರರಾಘವನ ॥ ಛಲ ದಧೀಚಿಯ ದಾನ ಪಾರ್ಥನ । ಕಳೆ ಯುಧಿಷ್ಠಿರನೃಪನ ಸ್ಥಿರಣೆ । ಗಳವಡುವಬ್ಬದುಕುಳೆನ್ನೊಡದು ವಿಖ್ಯಾತಿ ಕೇಳೆಂದ ॥೭೮॥ ಇರುಳುಹಗಲನವರತಪತಿಪು । ಚರಿಯುವನು ಮಾಡುತ್ತ ಪರಪುರು । ಷರನು ನೆನೆಯದೆಪಲವುಸಂತತಿಗಳಿಗೆ ತಾಯಾಗಿ ॥ ಇರುತ ದೇವಬ್ರಾಹ್ಮರನು ತಾ । ನಿರುತ ಸತ್ಕರಿಸು ತ್ತಲಂತಃ । ಪುರದಲೆಸೆಯೆ ಗೃಹಸ್ಥೆಯೆನಿಸುವಳರಸ ಕೇಳೆಂದ ॥೭೯॥ ಮಡದಿ ನಿಜನಿಳಯವನು ಬಿಟ್ಟಡಿ । ಗಡಿಗೆ ಪರಗೃಹದೊಳಗೆ ಬಾಯನು । ಬಡಿದು ಮನೆಮನೆವಾರ್ತೆಯೆನ್ನದೆ ಬೀದಿಗಲಹ ವನು॥ ಒಡರಿಚುತ ಪತಿಯೊಬ್ಬನುಂಟೆಂ । ದೆಣಿ ನೋಡದೆ ಬಿಟ್ಟ ಹತ್ತನು । ಸಡೆದೊಡೆಯು ವರ್ಜಿ ಸುವುದುತ್ತಮಪುರುಷರುಗಳೆಂದ ॥೮೦॥ ಹುಡಿಯನೋಸರಿಸುತ್ತ ಮೇಲುವ । ನಡಿಗಡಿಗೆ ಸಂವೃತ್ತ ಮೌನವ । ಹಿಡಿಪಥೋಮುಖಿಯಾಗಿ ಕಿಗ್ಗಣ್ಣಿಕ್ಕಿ ಕೆಲಬಲನ ॥ ಬಿಡದೆ ನೋಡುತ ಮುಗುಳುನಗೆಯಲಿ। ಜಡಿದು ಜಾರುವಜಾರವನಿತೆಯ । ಗೊಡವೆಗೊಳಗಾಗದವರುತ್ತಮಪುರುಷರುಗಳೆಂದ ॥೮೧॥ ಗುರು ವಿನಲಿ ತಂದೆಯಲಿ ತಾಯಲಿ । ಹಿರಿಯರಲಿ ದೈವದಲಿ ಪಾಪದ । ಲಿರುಬಿನಲಿ ಗೋವಿನಲಿ ವರತೀರ್ಥ ದಲಿ ತನ್ನವನು ॥ ಹೊರೆವವಾತಾರನಲಿ ಮಂತ್ರದ । ಪರಮಸೇವೆಗಳಲ್ಲಿ ಧರಣೀ । ಸುರರೊಳಂಜಿಕೆ ಹಿರಿದಿರಲುಬೇಕೆಂದನಾಮುನಿಪ ॥೮೨॥ ನೀತಿವಿದನಲ್ಲದಕುಮಂತ್ರಿ । ನೀತವರನಲ್ಲದಪುರೋಹಿತ । ರೀತ ಕವರಿಂದಾದಪುರುಷಾರ್ಥಂಗಳೆಯ್ದುವವು ॥ ಕಾತರಿಸಿ ಸಮರಾಂಗಣಕೆ ಭಯ । ಭೀತಿಯಹಭೂಭುಜರ ದೆಸೆಯಿಂ । ಬೀತು ಹೋಗದೆ ಸಕಲಸಂಪದವರಸ ಕೇಳೆಂದ ॥೮೩॥ ಧರ್ಮವಾವುದು ಮೇಣು ಜಗದೊಳ । ಧರ್ಮವಾವುದು ರಾಜಮಂತ್ರದ । ಧರ್ಮವಾವುದು ಮಾರ್ಗವಾವುದವಮಾರ್ಗವೆಂದೇನು ॥ ಕರ್ಮವಾ ವುದು ವಿಧಿತಹಿತದು । ಷ್ಕರ್ಮವಾವುದದೆಂಬಭೇದವ । ನಿರ್ಮಿಸಾ ಸಾಕೆಂದು ಬಿನ್ನಹಮಾಡಿದನು ಭೂಪ ॥೮೪॥ ಸತಿಸಹಿತ ನಿರಚಿಸಿದಧರ್ಮ । ಸ್ಥಿತಿ ಸಮೃದ್ಧಿಕವಾಗಿ ಸಲುವುದು । ಪತಿಗಳಲ್ಲದೆ ತನ್ನ ಸ್ವಾತಂತ್ರ್ಯದಲಿ ಮಾಡಿದುದು॥ ಅತಿಶಯವನೆಯ್ದದುಕಣಾ ಭೂ । ಪತಿಯೆ ಕೇಳಿಹಪರದಗತಿ ನಿಜ । ಸತಿಯದೆಸೆಯಿಂದಲ್ಲದೇ ಫಲಿಸುವುದು ಹುಸಿಯೆಂದ ॥೮೫॥ ಅತಿಥಿ ಪೂಜೆಯನುಳಿದು ಜೀವ । ಸ್ಥಿತರ ಧರ್ಮಸ್ಥಿತಿಯನೆಪಹರಿ । ಸುತ ಬಲದಲೀಯುವನಿಯಲಿ ನಿರಿಯಣದ ಕಾಲದಲಿ ॥ ಗತಿಗೆಡಿಸಿಕೊಂಡೊ ಯ್ದುದೈವ । ಸ್ವತನುನಾಯಕನರಕದೊಳಗ । ದ್ದುತ ಬಹನು ಕುಲಕೋಟಿಸಹಿತವನೀಶ ಕೇಳೆಂದ ॥೮೬॥ ತಮ್ಮ ಕಾರ್ಯನಿಮಿತ್ತಗರ್ವವ। ನೆಮ್ಮಿದೊಡೆ ಸದ್ಗರ್ವದಿಂದುರೆ । ದೊಮ್ಮಿತಹುದಾಕಾರ್ಯಮರ್ತ್ಯಕ್ಕೆ ಚರಾಚರಂಗಳಲಿ ॥ ನಿರ್ಮಮತೆಯಲಿ ನಡೆದುಪಶ್ರುತ । ಲುಮ್ಮಹದಲೈದುವವೊಲೌಕುತ । ಕರ್ಮಿಗ

ಳನೊಳಹೊಖ್ಖ ಕೊಂಬುದು ಭೂಪ ಕೇಳೆಂದ ॥೮೭॥ ಅರಸ ಕೇಳ್ಕೆ ಮಾರ್ಗಮೂರಾ । ಗಿರುತಿಹವು ಸಂಪೂರ್ಣದವ ಗುರು । ಪಂಚಭಯುಪಲವರ್ತನೆಗಳೆಂಬಿನಿತನತಿಗಳೆದು ॥ ತಿರುಗಬಂದೊಡೆ ನಾಲ್ಕನೆಯ ಮತ । ದೊರಕಲುಬವ್ರದೆ ಕಳೆಗಳನು ಪಂ । ಗುಸುವನರೋತ್ತಮರಿಗವನೀಪಾಲ ಕೇಳೆಂದ ॥೮೮॥ ಕಾದುದಕದಾನ್ನಾಸ ಸಿದ್ಧಿಯು । ಪ್ರತಿಕಾಂಗದ ಮಂತ್ರಸಾಧನ । ವೇದಹೀನಂಗಿತ್ತ ಫಲವಾಶ್ರಾದ್ಧಕರ್ಮದಲಿ ॥ ಐವು ಪದಕ್ಷಿಣಿಗಳೆಂಬಿವು । ಬೂಟಯಲಿ ಬೇಳಿವಸಪಿಸ್ಸಿನ । ಹಾನಿಯಿಲ್ಲದೆ ಫಲಸನೀಯವು ಭೂಪ ಕೇಳೆಂದ ॥೮೯॥ ಇಹಪರವಗತಿದಾನಧರ್ಮದ । ಬಹಳತೆಗಳನು ತತ್ಸ್ವಭಾವದ । ವಿಹಿತವುಣ್ಯದ ಬೆಳವಿಗೆಯು ಫಲವೊಂದು ನೂರಾಗಿ ॥ ಬಹುದು ಸದ್ವಂಶದಲಿ ಜನಿಸಿಹ । ಮಹಿಪನಿರೆ ಲೋಕಾಂತರದ ಸುಖ। ವಹುದು ಸಂತಾನಾಭಿವೃದ್ಧಿಯುನೃಪತಿ ಕೇಳೆಂದ॥೯೦॥ ಚೋರರನು ಕಾಣುತ್ತ ಮರಳಿದು । ಚೋರನೆಂದೊಡೆ ಪತಿತನನು ನಿ । ಷ್ಠೂರತನದಿಂ ಪತಿತನೆಂದೊಡೆ ಸಾಮ್ಯದೋಷವದು ॥ ಸಾರುವುದು ಮಿಥ್ಯೋತ್ತರದಲಿ ವಿ । ಚಾರಿಸದೆ ನುಡಿದವುಗವ್ಮಡಿ । ನಾರಕದ ಫಲತಪ್ಪದವನೀಪಾಲ ಕೇಳೆಂದ ॥೯೧॥ ವಿಸ್ತೃತಮಘಕ್ಕೆಟಭಗ ಪ್ರದ । ಸ್ಸಿನಲಿ ಮೇದಿನಿಯಾದುದಿದನೀ। ನನುಭವಿಸುವೊಡೆ ಪುಣ್ಯಕೀರ್ತಿಯೆಂಬ ಪುರುಷಾಳವ ॥ ಹೊಸಲಿನಲಿ ತರವಿಡಿದು ಲೇಸಾ । ಗನುಭವಿಸುವುದದಲ್ಲದಿದ್ದೊಡೆ । ಮಸುಜವಮಾಂಸವ ಭಕ್ಷಿಸಿದಫಲವರಸ ಕೇಳೆಂದ ॥೯೨॥ ತನ್ನದಾನವನಪಹರಿಸಿಕೊಂ । ಡನ್ಯರಿತ್ತುದಕಡ್ಡಬೀಳುವ । ಧನ್ಯರುಗಳರವತ್ತು ಸಾವಿರ ವರುಷ ಪರಿಯಂತ ॥ ಖಿನ್ನವಹವಿಷ್ಟಿಯೊಳು ಕ್ರಿಮಿಗಳ । ಜನ್ಮದಲಿ ಹರಿಹರಿದು ನೀ। ನಿನ್ನು ಕೊಟ್ಟುದನುಳುಹಿಕೊಂಬುದು ಧರ್ಮವಲ್ಲೆಂದ॥೯೩॥ ಕರಣಾಮೂರರೊಳಿತ್ತವಸ್ತುವ । ನಿರಿಸಿಕೊಂಡಿಹ ಮಾಸಮಾಸಾಂ । ತರದೊಳೊಂದಕೆ ನೂರುಗುಣದಲಿ ಕೋಟಿಪರಿಯಂತ ॥ ಬಿಡದಹುದು ಪಾಪಪ್ರಶಂಸೆಯನಿರಿಸಿ ಕೊಂಡಿಹಪಾನನರಕವ । ನೆರಡಕೊಂದೇದಾನ ಕಾರಣವೆಂದನಾಮುನಿಪ ॥೯೪॥ ದ್ಯೂತದಲಿ ಮದ್ಯದಲಿ ಘುಸಕಂ । ಡೂತಿಯಲಿ ನಿದ್ರೆಯಲಿ ಕಲಹದಿ । ಘಾತಿಯಲಿ ಮೈಥುನವಲಾಹಾರದಲಿ ಬಳಿಸಂದು ॥ ಕೈತವದ ಪುದ್ಯೋಗದಲಿ ದು । ರ್ನೀತಿಯಲಿ ಪರಸತಿಯರಲಿ ಸಂ । ಪ್ರೀತಿ ಬಲಿವುದು ಬೆದಕಬೆದಕಲು ಭೂಪ ಕೇಳೆಂದ ॥೯೫॥ ದುಷ್ಕೃತವನೆಸಗುವರು ಫಲದಲಿ । ಕಕ್ಕುಲಿಸುವರು ಸುಕೃತವೆಂಬುದ । ಲೆಕ್ಕಿಸರು ತತ್ಫಲವನೇ ಬಯಸುವರು ಮಾನವರು ॥ ಇಕ್ಕದೆರೆಯದೆ ಬಿತ್ತಿ ಬೆಳೆಯದೆ । ಪುಕ್ಕಟೆಯು ಸ್ವರ್ಗಾದಿ ಭೋಗವು । ಸಿಕ್ಕಲರಿವುದೆ ರಾಯ ಚಿತ್ತೈಸೆಂದನಾಮುನಿಪ ॥೯೬॥ ವರಶ್ರುತಿಸ್ಮೃತಿಗಳುಕಣಾ ಭೂ । ಸುರರದೃಷ್ಟಿಗಳಿದರೊಳೊಂದೇ । ಕೊರತೆಯಾಗಲು ಕಾಣೆನಿನಿತುವನೆರಡರರಿವಿನಲಿ ॥ ನಿರುತವಿದು ಜಾತ್ಯಂಧರೆನಿಸುವ । ರರಸಕೇಳೀಮಾಂಸದೃಷ್ಟಿಗ । ಳಿರವಲೇ ಸರ್ವತ್ರಸಾಧಾರಣವು ಲೋಕದಲಿ ॥೯೭॥ ವಾಚಿಸದೆ ವೇದಾರ್ಥನಿಚಯವ । ನಾಚರಿಸದಾಲಸ್ಯಬಂದುತ್ತು । ಕೋಚವಾಗಿ ಪರಾನ್ನಪೂರಿತ ತಪ್ತತನುವಾದ ॥ ನೀಚವಹಭೂಸುರರ ಕರುಳನು । ತೋಚುವಳಲೇ ಮೃತ್ಯುವವನುನಿ । ಶಾಚರನು ದ್ವಿಜನಲ್ಲ ಚಿತ್ತೈಸೆಂದನಾಮುನಿಪ ॥೯೮॥ ಸರಸಿಜಾಸನವಿಷ್ಣುನಾಮ । ಸ್ಮರಣೆಯಲಿ ಶ್ರುತಿಮೂಲವಾಕ್ಯೋ । ತ್ಕರುಷೆಯಲಿ ಭೂತಕ್ಕೆ ಹಿತವಪ್ಪನಡವಳಿಯನ್ನರಿದು ॥ ಪರವಚನವನು ತ್ರಿಕರಣದೊಳು । ಚ್ಚರಿಸಲಾಗದು ಸರ್ವದಾ ಸ । ತ್ಪುರುಷರೆಭಿಮವಲ್ಲ ಚಿತ್ತೈಸೆಂದನಾಮುನಿಪ ॥ ೯೯ ॥

ಲೋಕಸಮ್ಮತವಾವುದದನು ನಿ। ರಾಕರಿಸುವವರುಗಳು ತಾವೇ। ಸಾಕೆವಾಳರೆ ಜಗಕೆ ತಮ್ಮನದಾರು ಬಲ್ಲವರು ॥ಬೇಕು ಬೇಡೆಂಬುದಕೆ ತಾವವಿ। ವೇಕಿಗಳು ಮೊದಲಿಂಗೆಪಾಪ್ರಮಾ । ಣೀಕರುಗಳವರಲ್ಲ ಚಿತ್ತೈಸೆಂದ ಸಾಮುನಿಪ ॥೧೦೦॥ ಉತ್ತಮರುಗಳ ನಿಂದಿಸುವರು। ವೃತ್ತರಾಗಿಯಧರ್ಮಕೋಟಿಯೆ । ನಿತ್ಯವಿಧಿತಮಗಾಗೆ ಧರ್ಮದತಾರತಮ್ಯವನು ॥ ಎತ್ತಲಿಂದರಿಯದೆ ಜಗಕ್ಕೆ ಜ । ಡತ್ವರಾಗಿಪವೇದಬಾಹ್ಯರ । ಮೃತ್ಯುದೇವತೆ ಮುರಿದು ಮೋದದೆ ಬಿಡುವಳೇ ಯೆಂದ ॥೧೦೧॥ ಲೋಕದೊಳಗಣ ಪುಣ್ಯಪಾಪಾ। ನೀಕವನು ಯಮರಾಜನಾಲಯ । ಪಾಕೆವಾಳಂಗರುಹುವರು ಹಟನಾಲ್ಕುಮುಖವಾಗಿ ॥ ನಾಲ್ಕುಕಡೆಯಲಿ ಕವಿದು ಬರಿಸುವ।ರೌಕಿ ದಿನಟನಪಲ್ಲಿ ಗರ್ವೋ । ದ್ರೇಕವಲಿ ಮೈಮರೆದು ಕೆಡಬೇಡೆಂದಸಾಮುನಿಪ ॥೧೦೨॥ ಚಕ್ರಿಯೊಬ್ಬನು ಹತ್ತುಕಡಿಕರ। ಲೆಕ್ಕವಂತಾಚಕ್ರಿಹತ್ತರ । ಲೆಕ್ಕದೊಳಗಾಧ್ವಜಕನಾಧ್ವಜಿ ಹತ್ತರಸಮಾನ॥ ಮಿಕ್ಕವೇಸಿಗೆ ವೇಸಿಹತ್ತರ। ಲೆಕ್ಕವೊಬ್ಬರಸಂಗೆ ಪಾತಕ। ಪೊಕ್ಕಲಿಕ್ಕುವುದರಸುತನ ಸಾಮಾನ್ಯವಲ್ಲೆಂದ ॥ ಬಲುಕರಿಸಿ ಭೂಮಿಯೊಳಗೊಂದಂ । ಗುಲವನೊತ್ತಿದವಂಗೆ ಪಶುಸಂ । ಕುಲದಲೊಂದೇಗೋವನಪಹರಿಸಿದ ದುರಾತ್ಮಂಗೆ ॥ ಅಳುಪಿ ಕನ್ಯಾರತ್ನದೊಳ । ಗೊಬ್ಬಳನು ಭೋಗಿಸಿದಂಗೆ ನರಕದೊ । ಳುಳಿಹವಲ್ಲದೆ ಬೇರೆಗತಿಯಿಲ್ಲೆಂದ ಸಾಮುನಿಪ ॥೧೦೪॥ ದಾನವಿರಹಿತರಾಗಿ ಜನಿಸಿದ । ಮಾನವರು ದಾರಿದ್ರರದರಿಂ । ಹೀನಸುಕೃತಿಗಳಾಗಿಯವರಿಂ ಘೋರತರನರಕ ॥ ಆನರಕದಿಂ ಮರಳಿ ಪಾತಕ । ಯೋನಿ ಮರಳಿ ದರಿದ್ರವದು ತಾ । ನೇನಮಾಡಿಯು ಬೆನ್ನಬಿಡದವನೀಶ ಕೇಳೆಂದ ॥೧೦೫॥ ಪಾಕಶಾಸನನೈದಿ ವೃತ್ರನ । ಢಾಕರಿಕೆಡಿಸಿ ದಧೀಚಿಯಸ್ಥಿಯ । ಲೌಕಿ ಹೊಯ್ಯಲು ದಾನತನವನು ನೀರೊಡಲ ಗೆಡೆಯೆ ॥ ತೂಕಗುಂದಿ ಜಲಾಭಿದೇವತೆ । ಯಾಕಪರ್ಣಿಯ ಕರುಣದಲಿ ದ । ರ್ಭಾಕೃತಿಯ ಕೈಕೊಂಡುದವನೀಪಾಲ ಕೇಳೆಂದ ॥೧೦೬॥ ಆದಿಯಲಿ ಕಮಲಾಸನನು ಮಧು । ಸೂದನನು ಮಧ್ಯದಲಿ ಮೇಲಣ । ಬಾದಿಯಲಿ ಗಿರಿಜೇಶನಿಪ ತ್ರಿಮೂರ್ತಿಮಯವಾಗಿ ॥ ಕಾದುಕೊಂಡಿಹರೈದೆ ಲೋಕವ । ನೈದೆ ದರ್ಭಾಂಕುರದ ಮಹಿಮೆಯ । ಭೇದವನು ಬಣ್ಣಿಸುವನಾವನು ಭೂಪಕೇಳೆಂದ ॥ ಬೆರಳ ಮೊದಲಿ ಭೂಸುರರು ನಡು । ವೆರಳೆಡೆಗಳಲಿ ಪಾರ್ಥಿವರು ತುದಿ । ವೆರಳೊಳಗೆ ವೈಶ್ಯರುಗಳೀಕ್ರಮದಲಿ ಪವಿತ್ರವಿದು ॥ ಧರಿಸಬೇಹುದು ದರ್ಭೆಕರಾಂ । ಬುರುಹದಲಿ ದಿನದಿನದ ಸಂಧ್ಯಾಂ । ತರದ ಸಮಯದಲರಸ ಚಿತ್ತೈಸೆಂದಸಾಮುನಿಪ॥೧೦೭॥ ಪರಿದಪ್ಪಿದದಿನ ಸುಕಲ್ಪಿತ । ಧಾರೆಯುದುಗಿದ ದಾನ ದಮ್ಭಾಕಾರ ವಿರಹಿತವಾದ ಸಂಧ್ಯಾವಂದನಾದಿಯಲಿ॥ ಪಾದಪೆಮ್ಡದಶೌಚ ವಿನಯಪಿ । ಹಾರವಿಲ್ಲದ ಪೂಜನೆಗಳುಪ। ಕಾರವಹುದೇ ರಾಯ ಚಿತ್ತೈಸೆಂದಸಾಮುನಿಪ ॥೧೦೯॥ ಹರನಕೊರಳಿಂಗಾಭರಣವಾ । ದುರಗ ಪವನಾಶನವೆನಿಸುವಂ । ತರಸ ನಿನ್ನಯ ಬಸುರ ಬಂದೇನಹರು ಪಾಂಡವರು ॥ ಧರೆಯನಾಳುವ ಭಾಗ್ಯವಿಲ್ಲದೆ। ನರಪಶುಗಳಾದರು ಕಣಾ ನೀ । ನಿರಲವರಿಗೀ ವಿಧಿಯೆ ಚಿತ್ತೈಸೆಂದಸಾಮುನಿಪ ॥೧೧೦॥ ದೇವತಾಸ್ಥಾನದಲಿ ವಿಪ್ರನ । ಭಾವಳಿಯದಲಿ ರಾಜಪುರುಷರ। ಸೇವೆಯಲಿ ಗುರುಸದನದಲಿ ನದಿಯಲಿ ತಟಾಕದಲಿ ॥ ಗೋವುಗಳ ನೆರವಿಯಲಿ ವರವೃಂ । ದಾವನದೊಳುಪಹತಿಯ ಮಾಡುವ । ದಾವಗುಣ ಗರುವರಿಗೆ ಚಿತ್ತೈಸೆಂದಸಾ ಮುನಿಪ ॥೧೧೧॥ ದೆಸೆಗಳೇ ವಾಸಸ್ಸು ರಾಜ್ಯ । ಪ್ರಸರಣವು ನಿರ್ಲಜ್ಜೆ ಜಡೆರಂ । ಜಿಸುವಧೂಳೀಧೂಸರದ ಗಂಗಾಧರನ

ವೋಲು ॥ ಎಸೆವಸುತರಲ್ಲದಿರೆ ಸಲೆಶ್ರೋ । ಭಿಸುವುದೇ ಸಂಸಾರವೆಂಬುದು। ವಸುಧೆಯೊಳು ಪುಣ್ಯಾಧಿಕರುಗಳಿಗಲ್ಲದಿಲ್ಲೆಂದ ॥ ೧೧೨ ॥ ಗುರುಸುತನ ವೋಲಾಯು ನೀಲಾಂ । ಬರನವೋಲು ಬಲ ದಶರಥನವೋ । ಲ್ಪಿಸು ನದೀಜನವೋಲು ಶೌರ್ಯವು ರಘುಪತಿಯವೋಲು ॥ ಅರಿವಿನಾಶನ ನಹುಷನವೊಲ್ವೆ । ಸಿರಿಯು ಮಾರುತಿಯವೊಲು ಗತಿ ಸಂ । ವರಿಸುವುದು ಶಿವನೊಲಿದವರುಗಳಿಗಲ್ಲದಿಲ್ಲೆಂದ ॥೧೧೩॥ ಕ್ಷಿತಿಯವೊಲು ಪಾವನತೆ ಕುರುಭೂ । ಪತಿಯವೋಲಭಿಮಾನ ಲಕ್ಷ್ಮೀ । ಪತಿಯವೊಲು ಸತ್ಕೀರ್ತಿವಿದುರನವೋಲು ವಿಜ್ಞಾನ ॥ ಕ್ಷಿತಿಯವೊಲುಸ್ಫುರಣೆಸುಹೃತ್ಸಂ । ತತಿಯವೊಲುಪರಿಣಾಮ ಕುಂತೀ । ಸುತರವೊಲು ಕ್ಷಾತ್ರಿಕವು ತ್ರೈಲೋಕದೊಳಗಿಲ್ಲೆಂದ ॥೧೧೪॥ ಗಗನದಗಲದಲೊಲಿವದೃಷ್ಟಿಯೊ । ಳೊಗುವಕೀಲಾಲವ ಸಮುದ್ರವ । ಹೊಗುವನದಿ ನಾನಾಪ್ರಕಾರದ ರೂಪುಗಳ ಲೆಸೆವ ॥ ಜಗದೊಡೆಯ ದೈವದ ಪದಾಂಬುಜ । ಯುಗಳದರ್ಚನೆಪೂಜನೆಗಳಿವು । ಜಗದುದರಕನ ಮುಟ್ಟುವೇ ಭೂಪಾಲಕೇಳೆಂದ ॥೧೧೫॥ ಜಗದೊಳಗೆ ವಾರಾಹವಿಷ್ಣು । ಸ್ಥಳದೊಳಗೆ ವಾಮನನು ವನಸಂ । ಕುಳದೊಳಗೆ ನರಸಿಂಹನಾಗಿಯೆ ಭಕ್ತನಿಕರವನು ॥ ಸಲಹುತಿಹನೊಪ್ಪಿರ್ಯಯು ಜಗತ್ರಯು । ದೊಳಗೆ ಹೊರಗೆಂಬನ್ನದೆಲ್ಲಿಯು । ಜಲರುಹಾಕ್ಷನು ಕೃಷ್ಣಕೇಶವನಲ್ಲದಿಲ್ಲೆಂದ ॥೧೧೬॥ ಕತ್ತಲೆಯ ಕಾಲಾಟ ಸೂರ್ಯನ । ನೆತ್ತುವುದು ದುಷ್ಕರ್ಮಕೋಟಿಗ । ಳೆತ್ತ ಮುಟ್ಟುವವೈ ಮಹಾಪುರುಷರನು ಖಗಪತಿಯು ॥ ತತ್ತುದೇ ವಿಷ ಕೃಷ್ಣರಾಯನ । ಭಕ್ತರುಗಳನುಭವಿಸುವುದು ತಾ । ಪತ್ಯವೇ ಜೀವರಿಗೆ ನೀಹೇಳೆಂದನಾಮುನಿಪ ॥೧೧೭॥ ಅರುಹಬಾರದು ಮುಂದೆ ಬಹದಿನ । ಬಿರಿಸು ನೀನೆಚ್ಚತ್ತು ನಡೆ ನೃಪ । ಮರೆಯುಳಿಯರು ನಿನ್ನಾತ್ಮಜರ ವೈರಾನುಬಂಧದಲಿ ॥ ಬರಿದಹುದು ಬ್ರಹ್ಮಾಂಡನೀನದ । ನುಡಿಯೆ ಪೇಳುತಾಗುಬಾಗಿನ । ಹೊರಗೆ ದೈವಾಧೀನವಾಗಿಹುದೆಂದನಾಮುನಿಪ ॥೧೧೮॥ ತೆರಹುಗುಡದೆ ಧರಿತ್ರಿಯೊಳಗೇ । ಬರುವದೈತ್ಯಕಸಹಸ್ರಕೋಟಿಯ । ನಿರದು ಭೂಭಾರವನಿಳುಹಿ ನಿರ್ಜರರ ಮಗುಳವನು ॥ ಪೊರೆಯುವಾಯಿಕಿ ಭಕ್ತರನು ನೆರೆ । ಮೆರೆಯಲೋಸುಗ ಜನಿಸಿದನಲಾ । ಹರಿಯರಿಯಲಾ ಶ್ರೀ ಕೃಷ್ಣರಾಯನು ಮನುಜನಲ್ಲೆಂದ ॥ ಆತನಾಪಾಂಡವರ ಹರಿಬವ । ನಾತು ಪಾರ್ಥನ ರಥಕೆ ತಾನೇ । ಸೂತನಾದನು ನಿಮಗೆ ಜಯವೆಲ್ಲಿಯದು ಭೂಪತಿಯೆ ॥ ಭೂತಳವನೊಪ್ಪಿಸುವುದನುರಾ । ರಾತಿಯನು ಮರೆವೊಕ್ಕು ಬದುಕುವು । ದೀತತುಕ್ಷಣವಲ್ಲದಿದ್ದೊಡೆ ಕೆಡುವಿರಕಟೆಂದ ॥೧೨೦॥ ಜಲಧಿಯೊಳು ದುಗ್ಧಾಬ್ಧಿ ತೀರ್ಥಾ । ವಳಿಗಳೊಳು ಸುರನದಿ ಮುನೀಶ್ವರ । ರೊಳಗೆ ವೇದವ್ಯಾಸವ್ರತಿಗಳೊಳು ಹನುಮಂತ॥ ಜಲರುಹಾಕ್ಷನೆ ದೈವದೊಳು ಕೇ। ಳುಳಿದಧರಣೀಪಾಲರೊಳಗಗ್ಗಳೆಯನೃಪಧರ್ಮಜನು ಚಿತ್ತೈಸೆಂದನಾಮುನಿಪ ॥೧೨೧॥ ಈಪರಿಯ ಬೋಧೆಯಲಿ ನೃಪನನು । ತಾಪವನು ಪರಿಹರಿಸುತ ಬುದ್ಧಿ । ಧ್ಯಾನವ ಧೃತರಾಷ್ಟ್ರಭೂಪನ ಚಿತ್ತದಲಿ ನಿಲಿಸಿ ॥ ಕಾಪಥಂಗಳ ಬಿಡಿಸಿ ತತ್ವಕ । ಲಾಪವಿಮಲಜ್ಞಾನವಾದಯವ । ರೂಪತಾನೆಂಬಂತೆ ಸೂರ್ಯೋದಯವ ಕಾಣಿಸಿದ ॥೧೨೨॥ ಧರಣಿಪನ ಸಂತೈಸಿದನು ಮುನಿ । ವನನು ತನ್ನಾಶ್ರಮಕೆ ತಿರುಗಿದ । ನುರುತರಪ್ರೇಮದಲಿ ಧೃತರಾಷ್ಟ್ರನವನೀಶ್ವರನು ॥ ಹುದುಗುವ ಮಹಾಸಂಪದದಲಿ । ಹೊರೆದು ಹೊಂಪುಳಿವೋಗಿ ಲಕ್ಷ್ಮೀ । ಧರನ ನೆನೆವನು ರಾಯಗದುಗಿನ ವೀರನಾರಯಣ ... ... ॥೧೨೩॥

ಅಂತು ಸಂಧಿ ೪ಕ್ಕೆ ಪದ ೩೫೪ಕ್ಕಂ ಮಂಗಳಮಸ್ತು.

## ಐದನೆಯ ಸಂಧಿ.

॥ ಸೂಚನೆ ॥ ಜೀಳುಕೊಂಡುದು ರಜನಿ ಕುರುಭೂ । ಪಾಲನುಪ್ಪವಡಿಸಿದನೋಲಗ । ಶಾಲೆಯಲಿ ನೆರೆದನು ಸಭ್ಯರನಾಪ್ತ ಮಂತ್ರಿಗಳ ॥

॥ ಪದ ॥ ಕೇಳುವೆವು ಕರೆ ಸಂಜಯನನವ । ರೋಲಗದವೈಸಿರಿಯನೆಂದುನೃ । ಪಾಲನಟ್ಟಿದಡೂತರೊಡನೈತಂದರೋಲಗಕೆ ॥ ಮೇಳವಿಸಿದನು ಕುರುನೃಪತಿ ಜನ । ಜಾಲವನು ಲೇಸೆನುತ ಪಾಂಡುನೃ । ಪಾಲಕರ ಸಿಂಗಿಘಕಪೆಲ್ಲಿಯದೆನುತ ನಸುನಕ್ಕ ॥೧॥ ಬಂದು ಮೈಯಿಕ್ಕಿದನು ಕುರುನೃಪ । ವೃಂದವನು ಗಾಂಧಾರಿಯನು ಯಮ । ನಂದನನು ಬೆಸಗೊಂಡು ಕಳುಹಿದನುಚಿತವಚನದಲಿ ॥ ಎಂದು ಬಳಿಕಿನ ರಾಜಕಾರ್ಯವ । ನಂದು ಬಿನ್ನೈಸಿದನು ಚಿತ್ತೈ । ಸೆಂದು ಧೃತರಾಷ್ಟ್ರಂಗೆ ದುರ್ಯೋಧನಗೆ ಕೈಮುಗಿದು ॥೨॥ ಜೀಯ ಬಿನ್ನಹವಿಂದು ಪಾಂಡವ । ರಾಯನೈಶ್ವರ್ಯವನು ಸಾವಿರ । ಬಾಯ ಸರ್ಪನು ಹೊಗಳಲಳವಲ್ಲೆನ್ನ ಪಾಡೇನು ॥ ನಾಯಕರ ಕಡುಹುಗಳನವರನ । ರಾಯತನವನನಿಬರಿಗೆ ಕಮಲದ । ಳಾಯತಾಕ್ಷನ ಕರುಣದಳತೆ ವಿಚಿತ್ರತರವೆಂದ ॥೩॥ ಓಲಗದೊಳುಬ್ಬೆದ್ದು ನುಡಿಯಲಿ ಹೂಳಿ ತಮತಮಗೆನ್ನ ಜರೆದರು । ಕಾಳಗಕೆ ಕೈಗಟ್ಟಿ ವಿಂಡೆದ್ದೋಡಿತವನಿಪರು ॥ ಮೇಲೆ ಸಂತೈಸಿದನು ಧರ್ಮನೃ । ಪಾಲನಲ್ಲಿಂಬಳಿಕ ಮುರಹರ । ಸಾಲಯಕೆ ಪಂಪಿಸಿದನೊಳರ್ಜುನನೆನ್ನ ಕರೆಸಿದನು ॥೪॥ ದೇವನಿದ್ದನು ಸತ್ಯಭಾಮಾ । ದೇವಿಯರ ನಸುಮುಳಿಗೆಯರ್ಜುನ । ದೇವಸಂಕದಮೇಲೆ ಸಿರಿಪದ ಪಂಕಜವನೀಡಿ ॥ ನಾವು ಬರಲೆಮಗುಚಿತವಲಿ ಸಂ । ಭಾವನೆಯ ಮಾಡಿದನು ಸಮಗಿ । ನ್ನಾವುದನು ನೇಮಿಸಿದಿರೆನಲಿಂತೆಂದನಸುರಾರಿ ॥೫॥ ಎಮಗೆ ಸರಿಯಿತ್ತೆಂದಡಲ್ಲಿ । ಮಮತೆ ಬೇರೊಬ್ಬರಲಿ ಪಕ್ಷ । ಭ್ರಮೆಯ ಮಾಡೆವು ಹಿತವ ಬಯಸುವೆನೆರಡುಸಂತತಿಗೆ ॥ ಕಮಲಮುಖಿಯುದಿಪಿತಿವ ಲಕ್ಷ್ಮೀ । ರಮಣ ಲಕ್ಷ್ಮೀರಮಣ ಲಕ್ಷ್ಮೀ । ರಮಣ ಯೆಂದೊರೆದೊಪೆ ಸಂಜಯನೊಂದೆನಾನೆಂದ ॥೬॥ ರಾಪ್ತದ್ರೆ ಗೋವಿಂದ ಸಲಹೆ । ದೇವಕೀಸುತ ಗಂಡವೈವರ । ಭಾವಚಿಟ್ಟತು ನೀನಲ್ಲೆ ದೇಸಿಗರ ದೈವವಲೆ ॥ ದೇವ ಕೆಟ್ಟೆನು ಕೆಟ್ಟೆನ್ನೆ ಕರು । ಣಾವಲಂಬನದಿಂದ ತಪೆಯೆ । ಜೀವನವನೆಂದೊಪಂದಳು ಪಂಗಗನು ತಾನೆಂದ ॥೭॥ ಭಂಟನಹೆ ಭಕತರಿಗೆ ನೆನೆವರು । ನಂಟರೆಮಗೊಲಿದಾತೆ ಹೊಗಳಿದ । ರೆಂಟುಮುಡಿ ಹಿಗ್ಗುವೆವು ಮೆಚ್ಚೆವು ತಕ್ಕಸಾಧಕರ ॥ ಉಂಟು ಪಾಂಡವರೈವರಲಿ ಬಲು । ನಂಟುತನ ಮರೆಯೇತಕೈವರ । ಕಂಟಕರು ನಮಗಾವಕಂಟಕರೆಂದು ಹುಲುಸುಡಿವ ॥೮॥ ನೆನೆವುದೆಂದನು ಪಾರ್ಥನಾಕಾ । ನನದೊಳಗೆ ಗಂಧರ್ವರಲಿ ಬಂ । ಧನವನೀಗೋಗ್ರಹಣದಲಿ ಮಾಡಿದಸಲಾಯುಸವ ॥ ವನಚವದನೆಯ ಬಯಸಿದೊಡ ಬಿಲ್ಲಿನಲಿ ಬಡಿವಡೆದುದನು ಕೌರವ । ಜನಪ ಮರೆದಿರಲಾಗದೆಂದರಸಂಗೆ ಹೇಳೆಂದ ॥೯॥ ಧೀರ ಭೀಮನ ಗದೆಯಹೊಯ್ಲಿನ । ಭಾರಣೆಯ ನಮ್ಮ ತುಳಚಾಪದ । ಸಾರಶಸ್ತ್ರಾವಳಿಯ ಮಳೆಗಾಲದ ಮಹಾದ್ಭುತವ ॥ ವೀರನಕುಲನ ಸಾತ್ಯಕಿಯ ಶರ । ಸಾರವನು ಸಹದೇವಮತ್ಸ್ಯರು । ದಾರತೆಯ ನಿಮ್ಮರಸ ನೆನೆದಿಹುದೆಂದನಾಪಾರ್ಥ ॥೧೦॥ ಹಿಂದೆ ಜೂಜಿನ ಸಭೆಯೊಳಗೆ ನಾ । ಪೆಂದಮಾತುಗಳುಂಟು ತಾವದ । ಮುಂದೆ ನೋಡಲಿ ಕರ್ಣಶಕುನಿಸುಯೋಧನಾದಿಗಳು ॥ ಯೆಂದು ನೆನೆವುದು ದೇಶಕಾ

ಲವ । ಹಿಂದುಗಳೆಯುವು ಬೇಗ ಮಾಡುವು । ದೆಂದು ಬಿನ್ನಹಮಾಡಹೇಳಿದನರ್ಜುನನು ನಿಮಗೆ ॥ ತೊ
ಡೆಗಳಿಗೆ ಸುಕ್ಷೇಮವೇ ನಿ । ನ್ನೊಡೆಯುಗಮನೊಡಹುಟ್ಟಿದನ ಪ್ಯ।ಜಡಿದುದೆ ಪಾಳಿಸದರನಿಬರಿಗಹುದು
ರಕ್ತಜಲ ॥ ಒಡನೆ ಹುಟ್ಟಿದನೂಪರಲಿ ಪ್ಯ । ಗಡಿಪರೆ ಬೆಸಗೊಂಬುದಂಜದೆ । ಯೊಡಯುರಿಗೆ ಹ
ಣೆಗೊಂಡೆ ಹೇಳೆಂದಟ್ಟಿದನು ಭೀಮ ॥೧೨॥ ಸಾಕು ಸಂಜಯ ಗಳಹದಿರು ಘಡ । ನೂಕಿವನಸಾರಲ್ಲಿ
ಗಟ್ಟಿದ । ರಾಕುತಾರರ ಬಯಲಗ್ರಹಗರ್ಜನೆಯ ಗರ ಹೊಡೆದು ॥ ತೇಕಿ ತಳಕೆಳತಾದನೀಯುವಿ । ವೇ
ಕಿಸಾಗರನೆಲೆನೃಪತಿ ಜಗ । ದೇಕಪೀರನು ಕರ್ಣತಾನಿರೆ ಸಂಧಿಯೇ ಕಂದ ॥೧೩॥ ಮಂದಿಯುಲಿ ಪ್ಯಮ
ರೆದು ಬಾಹಿರ । ನೆಂಪವಮಾತನು ರಾಜಸಭೆಯುಲಿ । ತಂದು ಹರಹುವನಿವನು ತಿಷ್ಟನೆ ಜಗದಭಂಡನ
ಲಾ ॥ ಇಂದುಮರೌಳಿಯುನೊಂದು ಬಾಗೆ । ಹಿಂದುಮುಂದನು ಮಾಡುವೆನು ತಾ । ಮಂದಿಕುಂತೀ
ಮಕ್ಕಳಿದಿರೇ ತನಗೆ ಹೇಳೆಂದ ॥೧೪॥ ಭಂಡನೇ ಸಂಜಯನು ಲೋಕದ । ಭಂಡನೀನೆಲೆಕರ್ಣನಿನಗಾ ।
ಪಾಂಡವರಪರಿಯುಂತರೇ ನಿನಗವರ ಸೇನೆಯುಲಿ ॥ ಗಂಡನೊಬ್ಬನು ಸಾಕು ಕೆದರುವೆ । ಖಂಡಗರ್ವದ
ಮಾತನಿನ್ನನು । ದಿಂಡುಗೆಡುವನು ಮುನಿದೊಡರ್ಜುನನೆಂದನಾಭೀಷ್ಮ ॥೧೫॥ ಖುಲ್ಲನಿವನೈ ಕರ್ಣನಿವ
ನೇ । ಬಲ್ಲಿದನು ತಾನೆಂದು ಬಿಟವಿವ । ನಲ್ಲಿ ನಂಬುಗೆಮಾಡದಿರು ಮರುಳೇ ಮಹೀಪತಿಯೆ ॥ ಇಲ
ನೋಡರ್ಜುನಗೆ ಪಡಿ ನರ । ರಲ್ಲಿ ನಿರ್ಜರರಲ್ಲಿ ಪನ್ನಗ । ರಲ್ಲಿ ಕೈಮಾಡಗಳೆ ಸಾವೆಂದೊರೆದನಾಭೀಷ್ಮ
॥೧೬॥ಮುರಿಯುಟರು ಗಾಂಗೇಯನೆಂದುಮಹಾಪರಮಮಂತ್ರವು ಪಾರ್ಥನನು ಸಂ। ಗರದೊಳಾನುಮರಿಲ್ಲ
ಕೇಳಮರಾಸುರಾಳಿಯುಲಿ ॥ ಮರುಳರಾಪಾಪಹೊಕ್ಕನುಡಿಗಳ ।ಗರುಮರಭಿಮತವಲ್ಲ ಸಂಧಿಗೆ । ಕೊರ
ಳು ಕೊಳಿಸುವುದುಚಿತವೆಂದನು ದ್ರೋಣಸರಸಂಗೆ ॥೧೭॥ ಹುರುಳುಗೆಡಿಸುಮಿರಾವು ನುಡಿದೊಡೆ । ಕ
ರಗಿ ಕುಂತೀ ಮಕ್ಕಳೆಂದೊಡೆ । ಹರಹಿಕೊಂಬಿರಿ ಡಿಂಬವೆಮ್ಮಲಿ ಜೀವವವರಲಿ ॥ ಭರತಸಂತತಿಯಲ್ಲಿ
ಕೆಲಬರು ಸುರರು ಕೆಲಬರು ನರರೆ ಸಾಕಂ । ತಿರಲಿ ಸಮರಬೊಳೆಮ್ಮ ನೋಡೆಂದನು ಸುಯೋಧನ
ನು ॥೧೮॥ ಜೀಪ ಮಗನೇ ಕೃಷ್ಣರಾಯನು । ರೂಪಿಸಿದಕಟ್ಬಾಳು ಕೆಲಕೆಲ । ರಾಡುವರು ಸಾಕ್ಷಾತಲ
ಕ್ಷ್ಮೀಕಾಂತ ಹರಿಯೆಂದು ॥ ಕೂಡಿಕೊಂಡಿಹನವರಮಾತನು । ಕೇಡನವರಿಗೆ ಹೊದ್ದಲೀಯನು । ನಾಡ
ನೊಪ್ಪಿಸು ಮಗನೆಯೆಂದನು ನಗುತ ಧೃತರಾಷ್ಟ್ರ ॥೧೯॥ ಮರುಳುಗಳಲಾ ಬೊಪ್ಪನವರೇ । ಮು
ರಹರನು ಹರಿಯೆಂದು ಮನ್ನಿಪ । ನುಡಿಹೆನು ನೀವಂಜಬೇಡಿ ನಿಮಗಾಗದವಸಾನ ॥ ಗುರುನದೀಸು
ತಮುಖ್ಯರಿರಲೀ । ಕುರುಕುಲಕೆ ಕೇಡಹುದೆ ಕೊಲುವೊಡೆ । ಸುರಪತಿಯ ಸುತನಳವೆಯೆಂದನು
ಕೌರವರರಾಯ ॥೨೦॥ ಭಾರ ಹೆಚ್ಚಿದೊಡೊರಲಿ ಭೂಮಿ । ನಾರಿಬಿನ್ನಹಮಾಡಿದೊಡೆದೈ । ತ್ಯಾರಿ
ಬಿಜಯಂಗೈದನವನಿಗೆ ಮನುಜವೇಷದಲಿ ॥ ಭೂರಿದನುಜರನೊರಸಿದನು ಕೈ । ವಾರ ಬಳಿಕರ್ಜುನನ
ಕೈಯುಲಿ । ಕೌರವನ ಕೊಲಿಸುವನು ಸಾವಿನ್ನಂಜಲೇಕೆಂದ ॥೨೧॥ ಕಾವನಾತನೆ ಕೊಲುವನಾತನೆ । ಸಾ
ವೆನಾತನ ಕೈಯುಬಾಯುಲಿ । ನೀವು ಪಾಂಡವರೊಡನೆ ಸುಖದಲಿ ರಾಜ್ಯಮಾಡುವುದು ॥ ಸಾವಸಾನಂಜಿ
ದೊಡೆ ಬದುಕುವ । ನೀವು ಚಿಂತಿಸಲೇಕೆ ನಿಮ್ಮನು । ಕಾವನೈ ಕರುಣದಲಿ ಗದುಗಿನವೀರನಾರಯಣ ॥

ಅಂತು ಸಂಧಿ ೫ ಕ್ಕೆ ಪದ ೩೭೬ ಕ್ಕೆ ಮಂಗಳಮಸ್ತು.

ಆರನೆಯ ಸಂಧಿ.

|| ಸೂಚನೆ || ಸಮರದನುಸಂಧಾನದಲಿ ಸಂ | ಭ್ರಮಿಸಿ ಶೌರಿ ಸಮೀರಸುತನಲಿ | ಸಮತೆಯನು ಸೇರಿಸಿದನಂದು ಸಮಗ್ರಸೂಕ್ತಿಯಲಿ ||

||ಪದ|| ಕೇಳು ಜನಮೇಜಯಧರಿತ್ರೀ | ಪಾಲ ಧರ್ಮಜನಹಿತ ಮಂತ್ರಿಯ | ಬೀಳುಕೊಟ್ಟನು ಬಂದನಸುರಾರಾತಿಯಿದ್ದೆಡೆಗೆ || ಮೇಲಣನುವಿನ್ನೇನು ಲಕ್ಷ್ಮೀ | ಲೋಲ ಕರುಣಿಸು ಕೌರವಕ್ಷಿತಿ | ಪಾಲಕರಲೆಮಗೇನು ಘಟಿಸುವುದೆಂದು ನೃಪ ನುಡಿದ ||೧|| ಕ್ಷಮೆಗೆ ಸೇರುವರಲ್ಲ ಮೂರ್ಖರು | ಕುಮತಿಗಳು ಮುಂದರಿಯದವರ | ಕ್ರಮವ ನೆಗಳಿದೊಡಳಿವುದನ್ವಯದಮಳಕೀರ್ತಿಗಳು || ನಮಗೆ ಹದನೇನಿನ್ನು ಸಂಧಿಯೊ | ಸಮರವೋ ಚಿತ್ತೈಸ ಬೇಹುದು | ಕಮಲಲೋಚನಯೆಂದು ಬಿನ್ನೈಸಿದನು ಯಮಸೂನು ||೨|| ಯೇನುನಿನ್ನಭಿಮತವು ವರಸಂ| ಧಾನವೋ ಸಂಗ್ರಾಮವೋ ನಯ | ವೇನು ಮನದೊಳಗಿರಿಸದೆ ಹೇಳು ನಿಶ್ಚಯವ || ನೀನೊಲಿದಹದವಾವುದದನೊಲಿ | ದಾವು ಘಟಿಸುವೆವೆಂದು ಕುಂತೀ | ಸೂನುವನು ಬೆಸಗೊಂಡನಸುರವಿರೋಧಿ ನಸುನಗುತ ||೩|| ಅಳಿವವೊಡಲಿದು ಅವನಿಸಾಗರ| ವುಳಿಯಲುಳಿವುದು ಕೀರ್ತಿಸೋದರ | ರೊಳಗೊಳಗೆಹೊಯ್ದಾಡಿ ಕೆಟ್ಟರು ಯೆಂಬದುರಿಯಶದಾ || ಹಳಿವುಹೊರುವುದು ದೇವ ಸುಡಲಾ | ನೆಲನನಾಕೌರವನ ಕೈಯಲಿ | ಕೆಲವುನಗರಿಯ ಕೊಡಿಸಿ ನಮ್ಮನು ಸಂತವಿಡಿಯೆಂಬ ||೪|| ವರಕುಶಸ್ಥಳವನು ವೃಕಸ್ಥಳ | ಪುರವವಾವಂತಿಯನು ಕೌರವ | ಧರಣಿಪಾಲನಲೀಸಿಕೊಡುವುದು ವಾರಣಾವತವ || ಶರಧಿಮೇಲೆಯೊಳೈದನೆಯಪುರ | ವರನ ನೊಲಿದುದ ಕೊಡಲಿ ಮನವ | ತ್ಸರವ ಮರೆದೋಲೈಸುವೆವು ಧೃತರಾಷ್ಟ್ರಸಂಭ್ರಮಗಳ ||೫|| ನೀವು ಬಿಜಯಂಗೈದು ಸಂಧಿಯ | ನಾವಪರಿಯಲಿ ಘಟಿಸಿ ಕುರುಭೂ | ಪಾವಳಿಯೊಳೆಮ್ಮಿರವು ಸಂಭವಿಸುವವೊಲೆಸಗುವದು || ಲಾವಕರ ನುಡಿಗಳಲಿ ಕೆಡುವುದು | ಕೋಪಿದರ ಮನವವರಮೇಲೆಮ | ಗಾವಮನಮುನಿಸಿಲ್ಲ ಸಂಧಿಯ ಘಟಿಸಿ ಸಾಕೆಂದ ||೬|| ಎನೆ ಮುರಾಂತಕನಳುಕಿ ಯಮನಂ | ದನನ ನುಡಿ ಸಂಧಾನದಲಿ ಸಂ | ಜನಿಸಿತಾದೊಡೆ ಕಾಣೆನವನಿಯಹೊರೆಗೆ ಹರಿವುಗಳ || ಮನದೊಳನುಸಂಧಾನವಂತಕ | ತನುಜನಲಿ ತೊಳಸಾಯ್ತು ತೋಟಿಯ | ನೆನಹು ತಾನೇನೆನುತ ಚಿಂತಿಸುತಿರ್ದನಸುರಾರಿ ||೭|| ಎಲೆಕೃತಾಂತಜ ವೈರಿಭೂಮಿಪ ಕುಲಕೃತಾಂತ ಸರಾಗನಹೆ ನಿ | ರ್ಮಳಿನಧರ್ಮದಲಾಸುಯೋಧನನಧಿಕಕಲ್ಮಷನು || ನೆಲವ ಕೊಡಲರಿಯನು ವೃಥಾಕ | ಕ್ಕುಲಿತೆಯಲ್ಲದೆ ಕಾಣೆನಿದರಲಿ | ಫಲವನೆನುತಸುರಾರಿ ನುಡಿದನು ಧರ್ಮತನಯಂಗೆ ||೮|| ಅರಸನಭಿಮತವಿಂದು ಸಂಧಿಗೆ | ಮರಳಿತೆಲೆ ಪವಮಾನಸುತ ನಿ | ನ್ನರಿತವಾವುದು ಮನವ ವಂಚಿಸಬೇಡ ಹೇಳೆನಲು || ಧರಣಿಪತಿ ತಪ್ಪುವನೆ ಕರ್ಕಶ | ಭರದ ಕದನದಲೇನುಫಲ ಸೋ | ದರರ ವಧೆಗೊಡಬಡುವನಲ್ಲಸುರಾರಿ ಕೇಳೆಂದ ||೯|| ಹಗೆಯ ನಮ್ಮವರೊಳಗೆಯೆದೆಗ | ಚ್ಚುಗಳ ಖುಲ್ಲಕುಠಾರರಪನಂ | ಬುಗೆಯ ಬೆಳಸಿಪರವು ಪುರಾಕೃತಕರ್ಮದವಶೇಷ || ಬಗೆಯದವಮಾನವನು ಕೌರವ | ರಗಡುಮಾಡಿದರೆಲ್ಲಬಚಿತ್ತದ | ದುಗುಡವಿಂದೆಮಗಿಲ್ಲ ಸಂಧಿಯ ರಚಿಸಿ ಸಾಕೆಂದ ||೧೦|| ಎಲೆಮಹಾದೇವಾಯ್ತುಹಾಲಾ | ಹಲಸುಧಾರಸವೃಕ್ಕಿದುರಿಯ | ಗ್ಗಳಿಸಿ ಶೀತಳವಾಯ್ತು ಸಿಡಿಲಾಟೋಪ ನಯವಾಯ್ತು || ಕೊಳುಗುಳಕೆ ಪವಮಾನನಂದನ | ನಳುಕಿದನು ಮರುಳು

ಮಾಯೆ ಕುಂತೀ । ಲಲನೆ ಹೆತ್ತಳು ಸುತರನೆಂಬನು ಶೌರಿ ನಸುನಗುತ ॥೧೧॥ ಈತನಭಿಮತವಿದು ಜಗತ್ಪ್ರ । ಖ್ಯಾತಸಾಹಸಿ ಪಾರ್ಥ ಹೇಳೈ । ಮಾತನಾಳಾಪವನು ಕೇಳುವೆ ಶ್ರುತಿರಸಾಯನವ ॥ ಭೀತಿಬೇಡಿನ್ನೆನಲು ಬೇರೆ । ಮಾಗೇತರಭಿಮತವೇನ ಬೆಸಸಿದೊ । ಡಾತುಕೊಂಬೆನು ತಿರದಲೆಂದನು ಪಾರ್ಥ ವಿನಯದಲಿ ॥೧೨॥ ನಕುಲನೀ ಹೇಳನುಮತವನಿ । ನ್ನಾಕುತಿ ಸಮರವೊ ಸಾಮವೋ ಮೇ । ಣ್ನಾಕರಮಂತ್ರವನರುಹು ನೀನಿನ್ನಂಜಬೇಡೆನಲು ॥ ಉಕುತಿ ನಮಗಿನ್ನೇನುಭಯರಾ । ಜಕವ ಸಂತೈಸುವುದು ಬೇರೆ । ಮ್ಮಾಕುತಿಯೆಲ್ಲಿಯದೆಂದನಾ ಮಾದ್ರೇಯನೊಲವಿನಲಿ ॥೧೩॥ ಆವುದಭಿಮತವೇನುಹದಸಹ । ದೇವ ನೀ ಹೇಳೆನಲು ಓನ್ನಹ । ದೇವ ನೇರದು ಸಂಧಿ ಸಂಗರವೆಮಗೆ ನೇರುವದು ॥ ಆವವಿಧದಲಿ ಸಮರವನೆ ಸಂ । ಭಾವಿಸುವುದೆನೆ ನಗುತ ವರರಾ । ಜೀವನಾಭನು ಕಳುಹಿದನು ದ್ರೌಪದಿಯೆಡೆಗೆ ಚರರ ॥೧೪॥ ದೇವಿ ಚಿತ್ತೈಸುವುದು ವರವನು । ದೇವಸುತನಟ್ಟಿದನು ಸಂ । ಭಾವಿಸುವುದುರಾಯರಲಿ ಸಂಧಾನಸಂರಂಭ ॥ ನೀವು ಬಿಜಯಂಗೈವುದು ಚಿತ್ತದೊ । ಳಾವಹುದನಾಪವನಸಾಂ । ಜೀವನಾಭಾದಿಗಳಿಗರುಹುವುದೆಂದವರಾಚರರು ॥೧೫॥ ಏನುಪವನೇನೆಲವೊ ವರಸಂ । ಧಾನವೇ ಕೌರವರೊಳೆಮಸು । ಮ್ಮಾನವೇ ಸತಿಗಳಿಗೆ ಪಾಪಿಗಳಿಂದರೇ ಸತಿಯ ॥ ದಾನವಾಂತಕನೆಸಗುವನ ತ । ಪ್ಪೇನುತಪ್ಪೇನೆನುತ ನಸುನಗು । ಧ್ಯಾನನಾಂಬುಜವದನೆ ಬಂದಳು ಕೃಷ್ಣನೋಲಗಕೆ ॥ ಭ್ರೂಲತೆಯು ಸುರಚಾಪವುರುಕೇ । ಶಾಳಿಗಳ ಕಾರ್ಮುಗಿಲಪಾಂಗದ । ಸಾಲುಕುಡಿಮಿಂಚುಗಳ ನೂಪುರರವದಮೊಳಗುಗಳ ॥ ಆಲತಾಂಗಿಯ ಗಮನವೇ ಮಳೆ । ಗಾಲದಂತಿರೆ ಧಾರ್ತರಾಷ್ಟ್ರಕು । ಲಾಳಿ ನಿಲುವುದೆ ಪವನಜನ ಸಂಪ್ರತಿಯನೇರುವೆಗೆ ॥೧೭॥ ಕವಿದಚಿಪ್ರಾವಳಿಯ ಪಟ್ಟಿಯ । ವಿವಿಧನೆಲಸುಗ್ಗುಡಣೆಯಲಿ ವರ । ಯುವತಿ ಬಂದಳು ಸುಮಿಯರೊಯ್ಯಾರದಲಿ ನೃಪಸಭೆಗೆ ॥ ನವಬಕುಳಕದೊಳಗೆ ಮಿಂಚಿನ । ಗವಿಸಹಿತ ಮುಂಮೇಘಬಂದು । ದ್ಭವಿಸಿತೆನೆ ದಂಡಿಗೆಯನಿಳಿದಳು ಹೊಕ್ಕಳೋಲಗವ ॥೧೮॥ ಎಲೆಸಮೀರಕುಮಾರ ಸಂಪ್ರತಿ । ಗೆಳಸಿದೈ ಕಲಿನಕುಲವ ಕುಲಬಲಿ । ಕಲಸಿದೈ ಕೈವಾರವಾದುದೆ ಕೌರವೇಂದ್ರನಲಿ ॥ ಕಲಿಸಿದೈ ಕೃಷ್ಣಂಗೆ ನೀತಿಯ । ಬಳಸಿದೈ ಬಹುವಿಧವಸರಕವ । ಳಿಸಿದೈ ಶತಕುಲವನೆಂದನಿಲಜನ ನೋಡಿದಳು ॥೧೯॥ ಬೇರಬಿಟ್ಟವನೇ ಮಹೀಪತಿ । ನಾಡೊಳೈದೂರುಗಳನವರಲಿ । ಮಾಡುವಾತನು ಕೃಷ್ಣನೆ ಸಂಧಾನವನು ನಿಮಗೆ ॥ ಕೇಡುಗನ ಕೌರವನೃಪಾಲನ । ಕೂಡಬದುಕುವ ಭೀಮಸೇನನೆ । ರೂಢಿಸಿತಲಾ ನಿಮ್ಮ ಸಿರಿ ಸೋದರರ ಸೇರುವೆಗೆ ॥೨೦॥ ಯತಿಗಳಾಬಿ ನೀವ್ರತೋಷ । ಚ್ಯುತರಲೇ ಬಳಿಕೇನು ಧರ್ಮ । ಜ್ಞಾತೆಯು ನೆಲೆಗಳನವದಮನವೆರಗುವುವೆ ಕೌರವಕೆ ॥ ಕ್ಷಿತಿಯಪಾಲಿಸುವುದು ವಿರೋಧಿ। ವ್ಯತಿಕರವ ಬಿಡಿಸುವುದು ಕುಂತೀ । ಸುತರು ಕೌರವನೃಪರೊಡನೆ ಸುಖದಲಿ ರಾಜ್ಯಮಾಡುವುದು॥೨೧॥ ಸೋಲಗೆಲವೇ ಕೌರವರ ಸಂ । ಪಾಳಿಯೊಳು ಸೋದರರು ನೀವ್ ಪ್ರಾಂ । ಚಾಲರಾವೇ ಹೊರಗು ನಿಮ್ಮೊಳು ಸಲುಗೆಯೇಕೆಮಗೆ ॥ ಮೇಳವೇ ಸಿರಿ ಘಟಿಸಿತದು ಜನ । ಜಾಲಹೆಂಡಿರಪೂರ್ವವೇ ಕ್ಷಿತಿ । ಪಾಲಕರು ನೀವಾಗಲೆಮಗದು ಪರಮಪರಿಣಾಮ ॥೨೨॥ ಭೀಮಬಲವಾರಾತಿಸೇನಾ । ಭೀಮ ಕುರುಕುಲಕುಸುಮಮಾರ್ಗಣ । ಭೀಮಮರದೈಮಾನಿನಿಯ ಮಾನಾಪಹಾನಿಗಳ ॥ ರಾಮನಬಲೆಗೆ ಕುದಿದಘುನಸಂ । ಗ್ರಾಮವನು ನೀಕೇಳಿದರಿಯಾ। ಪ್ರೇಮದಲಿ ನೋಡೆನ್ನನೆಂದಳು ದ್ರೌಪದೀದೇವಿ ॥೨೩॥ ಧರೆಗೆ

ಕಟ್ಟಭಿಮಾನ ಹೆಂಡಿರ । ಹರಿಬವಾಹರಿಬದಲಿ ಕೆಡಹುವು । ದರಿಯನವಗಡಿಸಿದರೆ ಸಾವುದು ಪಂಥವುಳ್ಳರಿಗೆ ॥ ಸುರನರೋರಗರೊಳಗೆ ನಿಮ್ಮಿ । ವರಿಗೆ ಸರಿಯಿಲ್ಲಬಲೆಯೊಬ್ಬಳ । ಹರಿಬದಲಿ ಹಂಗಾದಿರೆಂಬಪದೆಸೆಯನಾನುವಿರಿ ॥೨೪॥ ಮುಂದಲೆಯ ಹಿಡಿದೆಳೆದು ಸಭೆಯಲಿ । ತಂದು ಸೀರೆಯ ಸುಲಿದೊಡವದಿರ । ಮುಂದೆ ಮೌನದೊಳಿದ್ದರಲ್ಲದೆ ಪತಿಗಳುಸುರಿದರೆ ॥ ಅಂದು ನೀ ಹಿಂದಿಕ್ಕಿಕೊಂಡುದ। ನಿಂದುಮರದ್ದೈ ಸಂಧಿಗೋಸುಗ । ಮುಂದುವರಿದ್ದೈ ಕೃಷ್ಣಯೆಂದಳು ದ್ರೌಪದೀ ದೇವಿ ॥೨೫॥ ತನಯರೈವರ ವೀರಸಹದೇ । ವನುಘಟೋತ್ಕಚನೀ ಸುಭದ್ರಾ । ತನಯನೆಮ್ಮಯತಂದೆ ಮೂರಕ್ಷೋಹಿಣೀಸೇನೆ ॥ ಇನಿಬರುಂ ಕಾದುವರು ದುಶ್ಶಾ । ಸನನ ರಕುತವ ಸುರಿದು ಕುರುಕುಲ । ವನವ ಸುಡುವರು ~~ನಿಮ್ಮ ಹಂಗ~~ಿಂದಿಳಿಂದುಮುಖಿ ॥೨೬॥ ವರಸತಿಯ ಬಿಸುಸುಯ್ಲ ಗಾಳಿಯೊ । ಳುರಿ ಚಡಾಳಿಸಿ ರೋಷಮುಖದು । ಬ್ಬರದೊಳೌಡೊತ್ತಿದನು ಹಿಡಿದನು ಖತಿಯನಹಿತರಿಗೆ ॥ ತರುಣಿ ಸ್ಮರಿಸುಸ್ಮರಿಸಿನ್ನೀಸುರಿವಕಂಬನಿಗಳಿಗೆ ಶತಸಾ। ವಿರಮಡಿಯ ಕಂಬನಿಯ ಸುರಿಸುವೆ ಹಗೆಯಹೆಂಡಿರಲಿ॥೨೭॥ ಉರಿಹೊಗುವ ಮೀಸೆಗಳ ಬೆರಳಲಿ । ಮುರುಹಿ ವಾಮದಕರದಿ ತರುಣಿಯ । ಕುರುಳ ಸಂತೈಸಿದನು ಕಿಡಿಕಿಡಿವೋಗಿ ಖಾತಿಯಲಿ ॥ ನರಕಮರ್ದನ ಕೇಳು ಕೌರವ । ನರಿಗಳಿದಿರೇ ಕೀಳುವೆನು ಕುಲ । ಗಿರಿಗಳನು ತೊಡೆವೆನು ಕೃತಾಂತನ ಭಾಳದಕ್ಕರವ ॥೨೮॥ ಯಮಸುತನ ಹರುವೆಂತುಟೆಂ । ತಾಕ್ರಮಕೆ ಮೊಗದಿರುಹಿದೆನು ಬಳಿಕೀ । ಕಮಲವದನೆಯ ಹರಿಬವೆನ್ನದು ಪತಿಗಳಿನಿಬರಲಿ ॥ ಎಮಗೆ ಸಂಪ್ರತಿಯಿಲ್ಲಮನಘನ । ಸಮರವೇ ಸರ್ವತ್ರಕೋಪ । ಶ್ರಮಕೆ ರಿಪುರುಧಿರಾಂಬುಹನನವೆ ವಿಪುಳಫಲವೆಂದ ॥೨೯॥ ಕೆಡಹಿ ರಿಪುವನು ಕರುಳದಂಡೆಯ । ಮುಡಿಸುವೆನು ಮಾನಿನಿಗೆ ರಕುತವ। ಕುಡಿಯಲೆರೆವೆನು ಶಾಕಿನಿಯರಿಗೆತ್ತತ್ಸಹೋದರರಾ ॥ ನಡದು ಪ್ರತಿಜ್ಞೆಯ ಮಾಡಿ ಮುರರಿಪು । ಕೊಡಿಸು ಸಾಕ್ಕೆ ದೂರನಿವರಿಗೆ । ತಡೆಯದಾನೆರಡೂರ ಕೊಂಬೆನು ಕೌರವೇಂದ್ರನಲಿ ॥ ... ಸಂಧಿ ... ॥೩೦॥

ಅಂತು ಸಂಧಿ ೬ ಕ್ಕೆ ಪದ ೩೦೬ ಕ್ಕಂ ಮಂಗಳಮಸ್ತು.



## ಏಳನೆಯ ಸಂಧಿ.

॥ಸೂಚನೆ॥ ದುರಿತವಿಪಿನಕೃಶಾನು ಯದುಕುಲ । ವರಕುಶೇಶಯಭಾನು ನಿಜಪದ । ಶರಣಜನಸುರಧೇನು ಹೊಕ್ಕನು ಹಸ್ತಿನಾಪುರವ ॥

ಪದ॥ ದೇವ ಸಂಧಿಯನೊಲಿದು ಮಾಡುವು । ದಾವು ಮುಖದಿರುಹಿದೆವು ಯಿಾಸಹ । ದೇವ ನೀ ಸಾತ್ಯಕಿಯುಧಾಮನ್ಯುತ್ತ ಮೌಂಜಸರು ॥ ಭಾರವೆಮ್ಮದು ಬಳಿಕಲರ್ಜುನ । ದೇವಧರ್ಮಜನಕುಲರೆಂಬುದ । ನಾವು ಮಿಸುಕುವರಲ್ಲ ಚಿತ್ತೈಸೆಂದನಾಭೀಮ ॥೧॥ ಕೆಲರು ಸಂಪ್ರತಿಗೊಲಿವರಿತ್ತಲು । ಕೆಲರು ವಿಗ್ರಹಕೆಳಸುವವರಿದ । ರೊಳಗೆ ನಿರ್ಮಳವಲ್ಲದಿರೆ ನೃಪಕಾರ್ಯವೆಂತಹುದು ॥ ತಿಳಿಯ ಹೇಳವನೀಶ ಪರಮಂ । ಡಲಕೆ ಪಯಣವ ಮಾಡುವೆವು ನಾ । ವಳುಕಿದವರಲ್ಲೆನಲು ಕೃಷ್ಣಂಗರಸನಿಂತೆಂದ॥೨॥

ವಿದಿತವೈದೂರಗಳ ಕೊಟ್ಟೊಡೆ । ಹದುಳವಿಡುವುದು ಮುರಿದರಾದೊಡೆ । ಕದನವನೆ ಕೈಕೊಳ್ವು ದುಚಿತಾನುಚಿತವನುವರಿದು ॥ ಹದನ ನೀನೆ ಬಲ್ಲೆ ಸಾಕಿ । ನ್ನಿದು ನಿಧಾನವು ಬಗೆಯಲೆಮ್ಮ । ಭ್ಯು ದಯ ನಿಮ್ಮಾಧೀನವೆಂದನು ಧರ್ಮನಂದನನು ॥೩॥ ಪಯಣವನು ನಿಶ್ಚೈಸಿ ದನುಜಾ । ರಿಯನು ಬೀಳ್ಕೊಂಡವನಿಪತಿ ಪಾಳೆಯದೊಳಗೆ ಸಾರಿಸಿದನಗ್ಗದಮಂಡಲೀಕರಿಗೆ॥ನಯದೊಳಾವುರುದಿವಸ ಮಂ ಗಳ । ಮಯಮುಹೂರ್ತದ ಜೋಯಿಸರ ಜೋ । ಕೆಯಲಿ ನಿರ್ಗಮನಿರುತನಾದನು ಕೃಷ್ಣನೊಲವಿನಲಿ ॥೪॥ ಮೊರೆಯೆ ದುಂದುಭಿಶಂಖಕಹಳಾ । ವರಮೃದಂಗಾದಿಗಳು ಭೂಸುರ । ಸುರಭಿಗಳ ಬಲವಂದು ದಧಿದುರ್ವಾಕ್ಷತಾವಳಿಯಾ ॥ ಧರಿಸಿ ಧರಣೀದೇವರನು ಸ । ತ್ಕರಿಸಿ ಕರತಳದಿಂದ ನಾಸಿಕ । ದೆರಲ ಚಂದ್ರೋದಯವನೀಕ್ಷಿಸಿ ದೇವ ಹೊರವಂಟ ॥೫॥ ಘನಬಳಾಹಕಸೈನ್ಯಸುಗ್ರೀ । ವನನು ನಿರ್ಮಳ ಮೇಘಪುಷ್ಪನ । ನನುವಿನಲಿ ಹೂಡಿದನುದಾರುಕ ಹೇಮಮಯರಥವ ॥ ಧನುವಶಸ್ತ್ರಾಸ್ತ್ರವು ಸುದ ರ್ಶನ । ಕನಕಕವಚಕೃಪಾಣವನು ಸ್ಯಂ । ದನದೊಳಿಳುಹೆಂದಸುರರಿಪು ಸಾತ್ಯಕಿಗೆ ನೇಮಿಸಿದ ॥೬॥ ಇವಂಗವದಿರು ಸಟ್ವನೇ ಮುನಿ । ವವರುಸಾವಿವರವರು ಮತ್ತಂ। ತವರಿಗವನಿಯನೀಸಿಕೊಡುವುದು ನ ಮ್ಮಭರವಸಿಕೆ ॥ ಅವಗಡಿಸಿದೊಡೆ ಕಾದುವುದು ಕೌ । ರವರು ಖುಲ್ಲರು ರಥಗೊಳಗೆ ಕೈ । ದುವನು ತುಂಬೆಂದುಸುರರಿಪು ಸಾತ್ಯಕಿಗೆ ನೇಮಿಸಿದ ॥೭॥ ತಳಿತಸನ್ನಾಹದಲಿ ಸಾರಥಿ । ಸುಳಿಸಿದನು ಹೊಂದೇ ರನಭ್ರಕೆ । ತಳಿತವಮಳಚ್ಛತ್ರಚಾಮರಸಿತಪತಾಕೆಗಳು ॥ ಅಳುಕೆನೆಲನಕ್ಷೋಣಿಬಲವಿ । ಟ್ಟಳಿಸಿ ನಡೆ ದುದು ರಥಕೆ ದಾನವ । ಕುಲಟಿಶಾಪಟಕೃಷ್ಣ ಬಿಜಯಂಗೈದ ನೊಲವಿನಲಿ ॥೮॥ ಕಳುಹುತೈತಂದಖಿಳ ಪಾಂಡವ । ಬಲಕೆ ನೇಮವ ಕೊಟ್ಟು ಧರ್ಮಜ । ಫಲುಗುಣನ ನಿಲಿಸಿದನು ಸಹದೇವನನು ನಕುಲನ ನು ॥ ಕಳುಹಿದನು ನೀ ಮರಳೆನಲು ಬೆಂಬಳಿಯಲನಿಲಜನೈದಿಹಗೆಯಲಿ । ಕಲಹಪನು ಮಸೆಯೆಂ ದು ನಂಬುಗೆಗೊಂಡು ಮರಳಿದನು ॥೯॥ ದೇವಿಯರು ನೀನ್ಮರಳಿಯೆನೆರಾ । ಜೀವನಾಭನಹೊರಗ ದ್ರೌಪದದೇವಿ ಬಂದಳು ನೊಸಲಚಾಚಿದಳಂಘ್ರಿಕಮಲದಲಿ ॥ ಸ್ಥಾವರಕೆ ಜಂಗಮಕೆ ನೀನೇ । ಜೀವ ಜೇಷ್ಟಕನವದಿರಂತ । ಭಾರ್ಗವವನು ನೆರೆಬಲಿಯಲಾಗದು ಸಂಧಿಕಾರ್ಯದಲಿ ॥೧೦॥ ಖಳರು ಯೆಮ್ಮ ನ್ನತಿಯ ಕೀಲನು । ಕಳಚಿ ಕಳೆವರು ಮರಳೆಮಾಡುವ । ರಳುಕಿದರು ತನ್ನವರು ಪತಿಗಳೆ ಪರಮವೈರಿ ಗಳು ॥ ಹಳಿವ ನೀನೆ ಬಲ್ಲೆ ನೀನೆ । ನ್ನಳಿವ ನೀನೆ ಬಲ್ಲೆ ಹರಿದಾ । ಗಳಲಿದೆನು ಸಲಹೆಂದು ಕಂಬನಿ ದುಂಬಿದಳು ತರಳೆ ॥೧೧॥ ಏಳುತಾಯೆ ಸರೋಜಮುಖಿ ವಿಪಿ । ನಾಲಯದೊಳತಿನವದೆ ನಿನ್ನವ। ರಾ ಳಿಗೊಂಡಂದವನು ಬಲ್ಲೆನು ನಿನ್ನಹರಿಬದಲಿ॥ ಕಾಳಗವನೇ ಬಲಿದು ತಹೆ ನಿವ ।ರೇಳಿಲವ ಮಾಡಿದೊಡೆ ರಿಪುಗಳ । ಸೀಳಿ ಕರುಳನು ಮುಡಿಸದಿಹೆನೇ ನಿನ್ನ ಕಬರಿಯಲಿ ॥೧೨॥ ದೇವಕಿಯ ಮೇಲಾಣೆ ವರವ ಸು । ದೇವನಂಘ್ರಿಗಳಾಣೆ ಮನುಮತ । ದೇವನಾಣೆ ನಿಧಾನವನು ಕೇಳಬಲೆ ನಿನ್ನಾಣೆ ॥ ನಾವುಸಂಧಿ ಯನೆವದಲವದಿರ । ಭಾವವನು ಕಲಿಮಾಡಿ ಕೋಪವ । ತೀವಿ ಸಂಧಿಯ ಮುರಿದುಬಹೆವಿದನಂಬು ನೀನೆಂದ ॥೧೩॥ ಮರಳಿದಳು ತರಳಾಕ್ಷಿ ಮುರರಿಪು । ಬರುತಲಾಬಟ್ಟೆಯಲಿ ಕಂಡನು । ವರಭರದ್ವಾ ಜ್ಯಾಖ್ಯ ಗೌತಮ ಕಣ್ವ ಮುನಿವರರ ॥ ಉರಗಮಾಲಿಮತಂಗಗರ್ಗ್ಯಾರ್ಗಂ । ಗಿರಸನಾರದ ಶುಕಪರಾಶ ರ । ಪರಶುರಾಮಶ್ವೇತಕೇತುಪ್ರಮುಖ ಮುನಿವರರ ॥೧೪॥ ಮುನಿವರನುಪಚರಿಸಿದನು ಹ । ಸ್ತಿನವು

ರಿಗೆ ಸಂಗಾತಬಹೆವೆಂ । ದೆನಲು ಬರಹೇಳಿದನು ಸಕಲಮಹಾತಪೋಧನರ ॥ ಘನಕುಶಸ್ಥಳಪುರದಲೆಡೆಗೈ । ದನು ಸುಯೋಧನನಲ್ಲಿ ಗಟ್ಟಿವ । ವಿನುತದೂತರು ಬಿನ್ನವಿಸಿದರು ಮುರಹರನ ಬರವ ॥೧೫॥ ಕೇಳಿದನು ಧೃತರಾಷ್ಟ್ರಸಾಗ ಕೃ । ಪಾಳುವಿನ ಗಮನವನು ಚಿತ್ತವ । ಹೂಳಿ ಹೆಚ್ಚಿದ ಹರುಷದಲಿ ಯುಬ್ಬೆದ್ದನಡಿಗಡಿಗೆ ॥ ಹೇಳಿದನು ವಿದುರಂಗೆ ಭಂಡಾ । ರಾಲಯದೊಳುಳ್ಳವುಳವಮೌಕ್ತಿಕ । ಜಾಳಿಗೆಯ ಪೆಟ್ಟಿಗೆಯೊಳಾಯಿಸುವರಸುರತ್ನಗಳಾ ॥೧೬॥ ಎಲೆವಿದುರ ಕೇಳೈಸುಯೋಧನ । ಸುಳಿಯೆ ಸಕಲಮಹಾಪ್ರಧಾನರು । ನಳಿನನಾಭನನಿದಿರುಗೊಳಲಿ ಕೃತಾರ್ಥರಾದವರು ॥ ಹೊಳಲುಗುಡಿತೋರಣದಲೆಸೆಯಲಿ । ಕಳಸಕನ್ನಡಿಸಹಿತ ನಡೆಯಲಿ । ನಳಿನವದನೆಯರೆಂದು ನೇಮಿಸಿದನು ಮಹೀಪಾಲ ॥೧೭॥ ತೆಗೆ ಸುವಸ್ತುವನೀಯದಿರು ಹರಿ । ಹಗೆಕಣಾ ಕುಂತೀಕುಮಾರರು । ಹಗೆಗಳೇ ಮನ್ನಿಸಿದರೆಂದುಳುಹುವನೆ ಮುರವೈರಿ ॥ ನಗರಿಗಾತನು ಬರಲಿಯಾದವ । ನಗಡತನಕೌಷಧಿಯ ಬಲ್ಲೆನು । ಬಿಗಿದು ಕೆಡಹುವೆನೆಂದು ನುಡಿದನು ಕೌರವರರಾಯ ॥೧೮॥ ಖಾತಿಗೊಂಡನು ಭೀಷ್ಮನೆಲೆಕಡು । ಪಾತಕನೆ ನೀ ಕೃಷ್ಣನನು ಬಿಗಿ । ವಾತನೇ ಬಳಿಕೇನು ಬಲ್ಲೆನು ನಿನ್ನ ಸಾಹಸವ ॥ ಈತನುಡಿದೀಮಾತಕೇಳಲು । ಪಾತಕವು ಬಹುದೆಂದು ಗಂಗಾ । ಜಾತನೋಲಗದಿಂದ ಬಂದನು ತನ್ನ ಮಂದಿರಕೆ ॥೧೯॥ ಪುರವ ರಚಿಸಿದರು ದಯದಲಿ ಬಿ । ತ್ತರ ಮಿಗಲು ಗಾಂಗೇಯಗೌತಮ । ಗುರುವಿದುರಶಲ್ಯಾದಿಸುಜನರು ಬಂದರಿದಿರಾಗಿ ॥ ತರುಣಿಯರು ಕೆಂದಳಿರ ಕಲಶದ । ಕರತಳದ ಗರುವಾಯಿಯಲಿ ಪಂ। ಕರುಹನಾಭನನಿದಿರುಗೊಂಡರುವಿವಿಧವಿಭವದಲಿ ॥೨೦॥ ಹೊಳಹು ಮಿಗೆ ದೂರದಲಿ ಗರುಡನ । ಹಳವಿಗೆಯ ಕಂಡಖಿಳಜನವಂ । ಜುಳಿಯನಿಟ್ಟದ ಭಾಳದಲಿ ಪರಿಶುದ್ಧಭಾವದಲಿ ॥ ನಳಿನನಾಭನ ದಿವ್ಯಮೂರ್ತಿಯ । ಲಲಿತಕಾಂತಿಯ ಕಡಲೊಳಗೆ ನೆರೆ । ಮುಳುಗಿದುದು ಪರಿಜನದ ಕಣ್ಣುಮನವೊಂದುನಿಮಿಷದಲಿ॥೨೧॥ ಮಂದಿವೃಯಿಕ್ಕಿತು ಮುರಾಂತಕ । ನಿಂದು ಮನದೊಲವಿನಲಿಗಂಗಾ । ನಂದನದ್ರೋಣಾದಿಗಳನೆತ್ತಿದನು ಕರುಣದಲಿ ॥ ಮಂದಿರದಸುಕ್ಷೇಮಕುಶಲವ । ನಂದು ಕೇಳಿದು ವೀಳೆಯವನಾ । ಮಂದಿಗಿತ್ತನು ದೇವ ಬಂದನು ಹಸ್ತಿನಾಪುರಿಗೆ ॥೨೨॥ ಗಿಳಿಯ ತುಂಬಿಯ ಹಂಸೆಗಳ ಕೋಗಿಲೆಯ ಕೊಳವಕ್ಕಿಗಳ ಕೊಂಚೆಯ । ಕೊಳಲುವಕ್ಕಿಯ ಜಕ್ಕವಕ್ಕಿಯ ನವಿಲುಪಾರಿವಪಾ ॥ ಕಳರುತಿಯ ಕರ್ಣಾಮೃತದತನಿ । ವಳೆಯ ಕರೆದುದು ಯಾದವೇಂದ್ರನ। ಬಲದಕಿ ವಿಗಳಲಿಭಪುರಿಯ ಹೊರವಳಯದುದ್ಯಾನ॥೨೩॥ ನಸುಬಿರಿದಪರಿಪಕ್ವದಾಡಿಮ । ವಸರದೊಳಗರವಟ್ಟಿಗೆಯ ದರ । ಹಸಿತಪಂಕಜದಳದ ಮಕರಂದದತಟಾಕದಲಿ ॥ ರಸಭರಿತಖರ್ಜೂರಫಲಸಂ । ಪ್ರಸರಸತ್ರವನೆಸಗಿಯುಪವನ । ವೈಸೆದುದ್ದೈ ಧಾರ್ಮಿಕನವೊಲು ಯದುರಾಯನಿದಿರಿನಲಿ ॥೨೪॥ ಎಳೆಲತೆಯನೆರಗಿಸುತ-ಮೆಲತರೆ । ತಳಿರುಗಳನಲ್ಲಾಡಿವರಪರಿ । ಮಳದ ಕಪ್ಪವ ಕೊಂಡು ಮರಿದುಂಬಿಗಳ ಗೀತವನು ॥ ಸಲೆ ಸೊಗಸಿ ಮಕರಂದನೆಲೆಯಲಿ । ತಳಿತು ಬೀಡನುಬಿಡುತ ಜನದಲಿ। ಸುಳಿದುದೈ ತಂಗಾಳಿ ಭೂಮಿಪಾಲನಂದದಲಿ ॥೨೫॥ ಮಘಮಘಿಪಹೊಂಬಾಳೆಗಳ ರಸ । ಪೊಗುವಮಧುರ ದ್ರಾಕ್ಷೆಗಳ ನಸು । ಮುಗಿಲ ತುಡುಕುವತೆಂಗುಗಳ ನೆರೆಕಾತಪನಸುಗಳ ॥ ಬಿಗಿದಪಣ್ಗೊನೆವಾಳೆಗಳ ಸೊಂ । ಪೊಗುವಕರ್ಪೂರದದ್ರುಮೌಘ ದ । ಸೊಗಸು ಸೆಳೆದುದು ಮನವನಾಗಜನಗರದುಪವನದ ॥೨೬॥ ಲಲಿತಶುಕಚಯಚಂಚುಪುಟದಿಂ । ದಳಿತಜಂಬೂಪಕ್ವಫಲರ

ಸ । ಲುಳಿತನವಮಕರಂದ ಮಧುರೋರ್ಝರನಿವಾತದಲಿ ॥ ತಳಿತಕಿನ್ನರಮಿಥುನಶುಕಪರಿ । ಮಳಿತ ಗೀತಶ್ರವಣಸಂದುದ । ಸುಳಿನಸುಪ್ತಮರಾಳವೆಸೆದುದು ಗಜಪುರೋದ್ಯಾನ ॥೨೭॥ ಅರರೆಪಾತಾಳದ ವಿಸಾಳಿನಿ । ಯರಿಗೆ ಜೌಂಗೆಯೋ ಸುದುರ್ಗದ । ಹಿರಿಯಗಳೊ ಬಲುಗೋಟೆಯೋ ನಿಜಣಿಗೆಯೋ ದಿವದಾ ॥ ಮುಂಮುರಿದ ಹುಲಿಮುಖದ ಹೇಮದ। ಫರದತೆನೆಗಳ ವಜ್ರಮಯಬಂ। ಧುರಕವಾಟಸ್ಫುಟದಲೆಸದುದು ಹಸ್ತಿನಾನಗರ ॥೨೮॥ ಹೊಗಳುತ್ತೈತಂದಸುರರಿಪುಗಜ । ನಗರವನು ಹೊಕ್ಕನು ಸುಯೋಧನ । ನಗಣಿತೈಶ್ವರ್ಯವ ಮಹಾದೇವನುತ ನಲವಿನಲಿ ॥ ಬೀಗಿದಬೀದಿಯ ನಯದನೆಲೆಗ। ಟ್ಟುಗಳ ಮಣಿಮಯಹೇಮದುಪ್ಪರಿ । ಗೆಗಳ ಕೇರಿಗಳೊಳಗೆ ಬರುತಿರ್ದನು ಮುರಧ್ವಂಸಿ ॥೨೯॥ ಮಂದಗತಿಸುಳಿವಾನೆಕುದುರೆಯು । ಸಂಧಣಿಯಕೇಲಿಸಿದಭೂಮಿಪ । ರಂದಣದ ಸಾಲುಗಳ ತೆಕ್ಕೆಯುಗಳಿಯ ದಾಳುಗಳ ॥ ಮಂದಿಯುಲಿ ಹೊಗಲಿನಿಲಗುಬ್ಬಸ । ವೆಂದೊಡುಳಿದವರಳವೆಯೆನಲರ । ವಿಂದನಾಭನು ಬಂದನಾಧೃತರಾಷ್ಟ್ರನರಮನೆಗೆ ॥೩೦॥ ಇದಿರುಗೊಂಡನು ಕಾಣಿಕೆಯನಿ । ಕ್ಕಿದನು ಕುಶಲಕ್ಷೇಮವನು ಕೇ । ಳಿದನು ಭಕತಿಯಲೆರಗಿದನು ಚರಣದಲಿ ಧೃತರಾಷ್ಟ್ರ ॥ ಸದನವನು ಹೊಕ್ಕಂತೆ ನಿಮಿಷಾರ್ಧದಲಿ ಕುಳ್ಳಿರ್ದನಿಬರನು ಕಳು । ಹಿದನು ಕಾರುಣ್ಯದಲಿ ಗದುಗಿನವೀರನಾರಾಯಣ ॥ ॥೩೧॥

ಅಂತು ಸಂಧಿ ೭ಕ್ಕಂ ಪದ ೩೩೭ಕ್ಕಂ ಮಂಗಳಮಸ್ತು.



## ಎಂಟನೆಯ ಸಂಧಿ.

॥ಸೂಚನೆ॥ ಶರಣದೇಹಿಕದೇವನೆಂಬೀ । ಬಿರುದ ಮೆರೆಯಲು ರಾಯಭಾರವ । ಧರಿಸಿ ಕೌರವನರಮನೆಗೆ ನಡೆತಂದನಸುರಾರಿ ॥

॥ಪದ॥ ಕೇಳು ಜನಮೇಜಯಧರಿತ್ರೀ । ಪಾಲ ಮುರಹರ ಗುರುನದೀಜರ । ಬೀಳುಕೊಟ್ಟನು ಕೃಪನ ಮನ್ನಿಸಿ ಮನೆಗೆ ಕಳುಹಿದನು ॥ ಆಲಯಕೆ ವಿದುರಂಗೆ ಕೊಟ್ಟನು । ವೀಳಯವನೊಡನೆಯ್ದಿಬಂದವನ್ನ । ಪಾಲಕರ ಮೊಗಸನ್ನೆಯಲಿ ಕಳುಹಿದನು ಮನೆಗಳಿಗೆ ॥೧॥ ಶೌರಿ ಕಾಣಿಸಿಕೊಂಡನಾಗಾಂ। ಧಾರಿಯನು ಸುಕ್ಷೇಮಕುಶಲವ । ನಾರಯಿದು ಕಾಣಿಕೆಯ ಕೊಂಡನು ಕೊಟ್ಟನುಡುಗೊರೆಯಾ॥ ಕೌರವನು ತನ್ನರಮನೆಗೆ ಹರಿ । ಬಾರದಿರನೆಂದಖಿಳವಿಧದಲಿ । ಸಾರವಸ್ತುವ ತರಿಸಿಯಾರೋಗಣೆಗೆ ಮಾಡಿಸಿದಾ ॥೨॥ ನಡುವೆ ಮಣಿಮಂಚದಲಿ ಮೇಲ್ವಾ । ಸಡಿಕಿಲನು ಪಚ್ಚಡಿಸಿದರು ಮೇ । ಲಡರಿದವು ಮಣಿಖಚಿತಚಿತ್ರದಮೇಲುಕಟ್ಟುಗಳು ॥ ಉಡುಗೊರೆಯ ತರಿಸಿದನು ರಾಯನ। ಮಡದಿಯರು ಹೊಂಗಳಸಜಲವನು । ಪಡಿಗವನು ಹಿಡಿದಸುರರಿಪುವಿನ ಬರವ ಹಾರಿದರು ॥೩॥ ತವತವಗೆಗಾಂಗೇಯಗುರುಕೃಪ । ರವಿಸುತಾದಿಗಳಸುರರಿಪುನಿಜ । ಭವನಕೈತಹನೆಂದುಸಪದರುಸಾರವಸ್ತುಗಳ ॥ ಅವನಿಪನ ಬೀಳ್ಕೊಟ್ಟುಕೌರವ । ಭವನವನು ಹೊರವಂಟು ವರಭಾ । ಗವತಮಸ್ತಕರತ್ನವಿದುರನ ಮನೆಗೆ ನಡೆತಂದ ॥೪॥ ತೊಲಗಿದವು ಜನಮನದ ಬಿಲುಗ । ತ್ತಲೆಗಳಿದಿರಲಿ ಕಂಡಜೀವರ ಹಲವುಜನ್ಮಾಂತರದದುರಿತಾಂಬೋಧಿಬತ್ತಿದವು ॥ ಬಳಿಕ ಮುನಿಗಳಸಹಿತ ಕರುಣಾ । ಜಲಧಿ ತಾನಾಕೌರವೇಂದ್ರನ । ಹೊಳ

ಲೊಳಗೆ ನಿಜಶರಣನಿಹವುನೆಗಾಗೆ ಬರುತಿರ್ದ ॥೫॥ ಕರಣ ನಿರ್ಮಳವಾಯ್ತು ಮನವು । ಬ್ಬರಿಸಿತತಿ ಪರಿತೋಷದೇಳಿಗೆ । ಪರಮಸುಖದಲಿ ತನುವ ಮರೆದನು ನಯನಜಲವೊಗಲು ಎರಡುಪೋರದಗಾಢ ಭಕ್ತಿಯು । ಭರದಲವಲವಿಕೆಯಲಿ ನಿಜನಂ । ದಿರವಹೊರವಂಡುತ್ತ ಕಂಡನು ವಿದುರನಚ್ಯುತನ ॥೬॥ ಸಿರಿಮೊಗದ ಕಿರುಬೆಮರ ತೇಜಿಯ । ಖುರುಪುಟದ ಕೆಂಧೂಳಿ ಸೋಂಕಿದ । ಸಿರಿಮುಡಿಯ ಕುಡಿಮಿಾಸೆಯಲಿ ಕೆಂಪಡರ್ದರೇಣುಗಳ ॥ ಖರಮರೀಚಿಯ ಜಳಕೆ ಬಾಡಿದ । ತರುಣತುಲಸಿಯದಂಡೆಯೊಪ್ಪುವ । ಗರುವದೇವನ ಬರವಿ ಕಂಡನು ಬಾಗಿಲಲಿ ವಿದುರ ॥೭॥ ತನುವ ಮರೆದನು ಪುಳಕಜಲದಲಿ । ನನೆದು ನಾರಾಯಣನ ಪದದರು । ಶನದ ಹರುಷಾರಣ್ಯದಲಿ ಮನ ಹೊಲಬುದಪ್ಪಿದನು ॥ ನೆನೆವಸನ ಕಾದಿಗಳಿಗೊಪ್ಪಿಯು ಮನಗೊಡದವುಹಿಮಾವಲಂಬನು । ಮನೆಗೆ ಬಹ ಕರುಣಾಳುತನ ಹೊಸತೆನುತ ಹೊಂಗಿದನು ॥೮॥ ವೇದದೆರಕೆಗಳಡಗದುಪನಿಷ । ಪಾದಿದಿವ್ಯಸ್ಮೃತಿಯ ಗಡಣೆಗೆ । ಹೋದಹೊಲಬಳವಡದುಮುನಿಗಳ ಮುಖಕೆ ಮನಗುಡದ ॥ ಕಾದಿಕಡಗುವತಾರ್ಕಿಕರು ಬೆಂ । ಡಾದರಲ್ಲದೆ ನಿಜವನರಿಯದ । ನಾದಿಸಿದ್ಧನ ಬರವ ಕಂಡನು ಬಾಗಿಲಲಿ ವಿದುರ ॥೯॥ ತೊಳಲುವುಪನಿಷದೆರಕೆಯಿವು ಶ್ರುತಿ । ಗಳ ಸರಾಗದಬಳಕೆಯಿವು ಮುನಿ । ಗಳಸಮಾಧಿಗಳಾದಿಯಿವು ಯೋಗಿಗಳ ಬಗೆಗಳಿವು ॥ ಎಲೆಲೆ ಭಕತರ ಭಾಗ್ಯಶಾಲಿಯ। ಬೆಳೆಗಳಿವೆಲಾ ಶಿವ ಯೆನುತ ಪದ । ನಳಿನಯುಗಳದಲೋಡಲನೀಡಾಡಿದನು ಹರುಷದಲಿ ॥೧೦॥ ನೋಡಿದನು ಮನದಣಿಯೆ ಮಿಗೆ ಕೊಂ । ಡಾಡಿದನು ಬೀದಿಯಲಿ ಹರಿದೆಡೆ । ಯಾಡಿದನು ಭ್ರಮೆಯಾಯ್ತು ವಿದುರಂಗೆಂಬಗಾವಳಿಯ ॥ ಕೂಡೆ ಕುಣಿದನು ಮನೆಯ ಮುರಿದೀಡಾಡಿದನು ಮೈಮರೆದ ಹರುಷದ । ಗಾಢಿಕೆಯಲಪ್ರತಿಮನೆಸೆದನು ಭಕತಿಕೇಳಿಯಲಿ ॥೧೧॥ ಹಸಿದನಾವೈತಂದೊಡೀಪರಿ । ಮಸಗಿಕುಣಿದಾಡಿದರೆ ಮೇಣೀ । ವಸತಿಯನುಸುಗಿದೆತ್ತಿಬಿಸುಟರೆ ತನಗೆ ತೆವಹುದೆ ॥ ವಸುಮತಿಯವಲ್ಲಭರು ಮಿಗೆ ಪ್ರಾರ್ಥಿಸಿದೊಡಲ್ಲದೆ ಬಂದವೈ ನಾ । ಚಿಸದಿರೈ ಬಾ ವಿದರಯೆನುತೊಳಹೊಕ್ಕನಸುರಾರಿ ॥೧೨॥ ನೆರೆಯೆ ಕೃತ್ಯಾಕೃತ್ಯಭಾವವ । ಮರೆದು ಕಳೆದನುಮನವು ರಾರಿಯ । ನಿರಿಕಿಕೊಂಡವು ಕಂಗಳೊಡಬೆಚ್ಚವು ಪದಾಬ್ಜದಲಿ ॥ ಅರಿವು ಮಯಣಾಮಯದ ಭಕ್ತಿಯೊ । ಳೆರಗಿಸಿದಸಿದ್ಧಪುತ್ಥಳಿಯವೊಲು ಕಡು । ಬೆರಗ ಕೇಣಿಯ ಕೊಂಡು ಮೌನದೊಳಿದ್ದನಾ ದುರ ॥೧೩॥ ಒಲವೊರವೆ ಕೌತುಕವು ಪಾಲ್ಗಡ । ಲೊಳಗೆ ಮಲಗುವ ವಿಷ್ಣು ವಿದುರನ । ನಿಳಯದೆಳಗೊಕ್ಕು ಡಿತಹಾಲಲಿ ಹಸಿವನೂಕಿದನು ॥ ಹೊಲಬುಗೆಡಿಸಿದನೆಖಿಳನಿಗಮಂ । ಗಳನು ತನ್ನರಿಕೆಯ ಭಜಕಂ। ಗೊಲಿದು ತಾನೈತರಲು ಕರುಣದಘನತೆಯೆನೆಲೋಕ ॥೧೪॥ ಹರಿಯ ಪದಕಮಲಾಭಿಷೇಕ ವರಪಯೋಬಿಂದುಗಳು ಕೌರವ । ನರವುನೆಯನೊಳಕೊಂಬವೋಲ್ಕಡ[illegible]ಳಲು ॥ [illegible] ಮುರಹರ ಸೊಡನೆ ಹಾಲಿನ । ಶರಧಿ ಮೇರೆಯನೊಡದು ಒಳಗಿ। ಚ್ಛರಿ[illegible] ಗಳಿದರು ಮುರಹರನ ॥೧೫॥ ತೊಲಗಿದಸು ಬಂದಂತೆ ತರಣಿಯ । ಹೊಳೆಹು ಸೋಂಕಿದ ಜಕ್ಕಯ । ಬಳಗದಂತಿರೆ ಕೃಷ್ಣರಾಯನ ಬರವಶಾಕೇಳ್ದು ॥ ಪುಳಕಪಸರಿಸಿ ಪರಮಹರುಷವ । ತಳೆದು ವನ ಕಾಣಿಕೆಯ ಕಂ । ಗಳಿಗೆ ಕಡುಲೋಲುಪತಿಮಿಗೆ ಹರಿತಂದಳಾಕುಂತಿ ॥೧೬॥ ಬರಲು ಕಂಡ ರಾರಿ ಮಂಚದೊ । ಳಿರದೆ ಧಿಮ್ಮನೆ ನಿಂದು ನರರಂ । ಚರಣಗಳ ನಾಟಕವ ತಾನೇ ನಟಿಸಿ ತೋ

ನು ॥ ಹಿರಿಯರಿಗೆ ತಾ ಹಿರಿಯನೆಂಬೀ । ಗರುವತನವನು ಬಿಸುಟು ಕುಂತಿಗೆ । ಕರವ ಮುಗಿದೆರಗಿದ
ನು ಮುನಿಜನನಿಕರವೃಷ್ಟೆಯನಲು ॥ ಅಮಿತಕರುಣಾಸಿಂಧುವಿನ ಪದ । ಕಮಲದಲಿ ಬಂದೆರಗಿ ಪುಳ
ಕೋ । ದ್ಗಮದ ತನಿಸುಖಪಾನರಸಸೌರಂಭದಲಿ ಮುಳುಗಿ ॥ ಗಮಿಸಲರಿಯದ ಗರ್ಭವೇದ । ಪ್ರಮಿ
ತಿಗಳು ನೀವೆಂತುನಡೆತಂ । ದೆಮಗೆ ಗೋಚರವಾದಿರೆಸುತವೆ ಹೊಗಳಿದಳು ಕುಂತಿ ॥೧೮॥ ದೇವಕಿ
ಯು ವಸುದೇವನನು ಬಲ ದೇವನೌಭದ್ರಾದ್ಧಿಯದು ಭೂ । ಪಾವಳಿಯು ಸುಕ್ಷೇಮಕುಶಲವ ಕುಂತಿ ಬೆಸ
ಗೊಳಲು॥ ದೇವ ನಗೆಮೊಗದಿಂದ ವರವಸು। ದೇವದೇವಕಿಯಾದಿಯಾಗಿರ। ಲಾಪಿಳಾಸಮಶಹೀರೀರವ
ನು ಕುಂತಿಗರುಹಿದನು ॥೧೯॥ ಯಮತನುಜನಧಿಕನು ಹಿಡಿಂಬಾ । ರಮಣನತಿಬಲ್ಲಿದನು ಪಾರ್ಥನ ।
ವಿಮಳವಿಗ್ರಹಲೇಸು ಸಕಲಮಹೀಶಪರಿವೃತರು॥ ಯಮಳರೆರವತಿ ಚೆಲುವನೇಹದ।ರಮಣಿಯಾಕೆಯಿಸು
ತರುಮಹದುರ್ಧರುಕೇಳೆಂದಸುರರಿಪು ಕುಂತಿಗೆ ಸೆಯಾಮಿಸಿದ ॥೨೦॥ ನರನವಗನಭಿಮನ್ಯು ಕುಶಲನು
ವರಸುಭದ್ರಾದೇವಿಮೊದಲಾ।ಗಿರವು ಬಾಂಧವರೆಲ್ಲಜೀವಂತರು ನಿಧಾನಿಸಲು॥ ಪರಮಮಿತ್ರರು ತಮ್ಮೊ
ಳೊಂದಾ। ದರು ದ್ರುಪದನಕ್ಷೋಣಿಸೇನೆಯು । ನೆರವಬಂದನು ರಾಜಕಾರ್ಯದ ಬಳಕೆಲೇಸೆಂದ ॥೨೧॥
ಅದಿತಿಮಕ್ಕಳ ಹಡೆದುದೇಲೋ। ಕದಲಿ ಫಲ ಕೌಸಲೆಕುಮಾರರ । ಪದವ ಹಡದುದೇ ಸಫಲವಿನತಗೆ ಮ
ಕ್ಕಳಾದಫಲಾ ॥ಮುದಟ ನೀನೇ ಮಕ್ಕಳನುಪಡೆ । ಪಿದುವೆ ಫಲಕೇಳೆಂದು ಪರಿತೋ । ಷದಲಿ ಕುಂತಿಯ
ಹೊಗಳಿದನುಮುರವೈರಿಯುಚಿತದಲಿ ॥೨೨॥ ಲೋಕಮೆಚ್ಚಲು ನಿನ್ನಸುತರು ದೃ । ಢೈಕಸತ್ಯರು ನುಡಿ
ದಕಾಲವ । ನೂಕಿದರು ರಾಜ್ಯಾಭಿಲಾಷಗೆ ನೆರಹಿದರು ಬಲವ ॥ ಆ ಕುಮಾರರಿಗರ್ಧರಾಜ್ಯವ । ನೀಕುತಾ
ರರಲೀಸಿಕೊಡುವವಿ। ವೇಕದಲಿ ತಾ ಬಂದೆನೆಂದನು ಕುಂತಿಗಸುರಾರಿ॥೨೩॥ ಪರಮಪರಿತೋಷದಲಿ ಕೃ
ಷ್ಣನ । ವರಸುಧಾಮಯ ವಚನವನು ಪಂ । ಕರುಹಮುಖಿ ಕೇಳುತ್ತ ನೆನೆದಳು ನಯನವಾರಿಯಲಿ ॥
ಮುರಮಥನ್ನನಾಕುಂತಿಗೆಲ್ಲವ । ನೊರೆದು ವಿದುರನ ಕರೆದು ಕೌರವ । ನರಮನೆಯು ಸಮಯವನು
ನೋಡಿದು ತಮಗೆ ಹೇಳೆಂದ ॥೨೪॥ ಹೋಗುನೀನಾತಂಗೆ ಪಾಂಡವ । ರಾಗ ಸಮುದಯ ಬಂದನೆಂ
ಬುದ । ನೀಗಳರುಹುವುದಾತ ಮಾಡಿದಗುಣದ ಬೆಳವಿಗೆಯು ॥ ತಾಗುಬಾಗಿನ ಹವಣನಾತನ । ಲಾಗ
ನೋಡುವೆನೆನಲು ಕುರುಕುಲ । ಸಾಗರಾಗ್ನಿಯು ಮನೆಗೆ ಬಂದನು ವಿದುರ ಹರಿ ಬೆಸಸೆ ॥೨೫॥ ಒಲ
ಗದೊಳಿರ್ದಖಿಳಮೂರ್ಖರ । ಮೌಳಿಯನು ಕಂಡವಧರಿಸುಸಿರಿ । ಲೋಲಬಿಜಯಂಗೈಯಲವಸರವುಂ
ಟೆ ಹೇಳೆನಲು ॥ ನಾಳೆ ಕಾಣಿಸಿಕೊಂಬವಿನ್ನೇ । ನಾಳಿಕಾರ್ದನಬರವು ಹಗೆವರ । ಪಾಲಿಸಿಯೆ ಬಳಿಸಂಧಿ
ಕಾರ್ಯಕೆ ಬಾರದಿರನೆಂದ ॥೨೬॥ ನೋಡಿರ್ದ್ಯ ಪಾಂಡವರುಪಾತಕ। ರಾಡಿದಾಟವನಾಡಿದೊಡೆ ಯಿಾ ।
ನಾಡೊಳಗೆ ಹುದುಸಲುವುದವನಯೊಳಥಕಲೇಸೆನಿಸಿ ॥ ರೂಢಿಯೊಳಗಾಚಾರವಡಗಿತು। ಜೋಡಿಮಿಗೆ
ಮನಿಸಿದರನೀಬೀ । ಡಾಡಿಕೂಡಿದನೆಂದು ಹೋಯ್ದುದನು ರವಿಸುತನ ಕರವ ॥೨೭॥ ನಾಳೆಬರಹೇಳೆಂ
ದು ವಿದುರನ । ಬೀಳುಕೊಟ್ಟನು ಬೇಹಭಟರಿಗೆ । ವೀಳೆಯವ ನೀಡಿದನು ಹರದುದು ರಾಯನಾಸ್ಥಾ
॥ ಜಾಳಿಸಿತು ತಮ ಮೂಡಣಟ್ರಿಯು । ಮೇಲೆ ತಲೆದೋರಿದನು ರವಿ ಭೂ । ಪಾಲಕೌರವನಂದಿ
ರೂಡ್ಡೋಲಗವ ರಚಿಸಿದನು ॥೨೮॥ ಕರೆಸಿಡನು ಮಣಿಮಕುಟಕಿರಣದ । ಗರುವರನು ಗಾಢಪ್ರತಾ
ರ । ಬರಿಸಿದನು ತೂಕದಮಹಾಮಂಡಳಿಕಮನ್ನೆಯರ ॥ ಧುರವಿಜಯಸಿದ್ಧರನು ಚಾಮಿಾ । ಕರದ

ಗದ್ದುಗೆಯಖಿಳಸಾವಂ । ತರನು ಪೃಥ್ವೀ । ಪಾಲರನು ನೆರಹಿದನು ಭೂಪಾಲ ॥೨೯॥ ಬಲದಗದ್ದುಗೆಗಳಲಿ ಭಟರ । ಗ್ಗಳೆಯರವಿಸುತನಮಿಯುಮುಗನೃಪ। ತಿಲಕದುಶ್ಶಾಸನ ಕೃಪದ್ರೋಣಾದಿ ನಾಯಕರು । ಹೊಳೆವರತುನದ ಸಾಲಮಕುಟದ । ಚೆಲುವಿಕೆಯು ಸೌರಂಭದಲಿ ಗಜ । ಗಲಿಸಿವರು ಮಾಣಿಕ್ಯಮಯ ಭೂಷಣವಿಳಾಸದಲಿ ॥ ಸತಿಸಹಿತ ಧೃತರಾಷ್ಟ್ರಭೂಪತಿ। ಸುತನ ಬಲವಂಕವಲಿ ಕನಕೋಚಿತದ ಪೀಠದಲೆಸೆದನಾತನ ಬಲದಭಾಗದಲಿ ॥ ಚತುರಚತುರಾನನರು ಕರ್ನ । ಸ್ಮೃತಿಸಮಸ್ತಕಳಾಸ್ವತಂತ್ರರು । ನುತಗುಣರು ನೃಪಸಭೆಯೊಳೆಸೆದರು ಭೂಸುರಸಂದೋಹ ॥೩೧॥ ಮುಮಿಯತಿಬಲಶಕುನಿ ಸೈಂಧವ । ನಧಟನೃಪಕಾಂಭೋಜರಥಸಂ । ಪದನು ಭೂರಿಶ್ರವಸು ಲೋಚನವೀರವೃಷಸೇನ ॥ ಕದನಕಾಲಾನಳರು ವರಹೇ। ಮದಮುಕುಟರಚನೆಗಳಲೆಡವಂ । ಕವಲಿ ಕುಳ್ಳಿರ್ದರು ಮಹಾಯಾಸ್ಥಾನರಚನೆಯಲಿ॥ ತರುಣಶೃಂಗಾರದ ಮಹಾಬಂ । ಧುರದ ನೂರ್ವರು ಕೌರವೇಂದ್ರನ। ವರಕುಮಾರರು ಮುಂದೆ ಮೆರೆದರು ಲಕ್ಷಣಾದಿಗಳೂ ॥ ವರಕಿರೀಟದ ಕಾಲತೊಡರಿನ ಕೊರಳಸರಕದ ಕೈಯ್ಯಸುರಗಿಯ । ಅರಸನನುಜರುನೂರ್ವರೆಡವಂಕದಲಿ ರಂಜಿಸಿತೂ ॥೩೩॥ ವಿಸುಪತಮ್ಮಮುಖೇಂದುವನು ಸೈರಿಸದಚಂದ್ರನ ಕಿತ್ತು ನಭದಲಿ । ಬಿಸುಟು ಬೇಗ=ಳಹಿಡಿದರೋ ಹೇಳೆನಲು ಸಭೆಯೊಳಗೆ ॥ ಶಶಿವದನೆಯರ ಕೈಯ ಸೀಗುರಿ । ಯೆನೆದವಿಕ್ಕೆಲದಲಿ ಸುಯೋಧನ। ವಸುಮತೀಶನ ವೈಭವಾಯಾಸ್ಥಾನ ಚೆಲುವಾಯ್ತು॥೩೪॥ ಕಲಹವಿಲ್ಲದೆ ನೂಲಿನೆಳೆಯಲಿ । ತಲೆಯನರಿವವಿರೋಧಿರಾಯರ । ನಳುಕಿಸುವಸಾಮದಲಿ ನಿಲಿಸುವನಿಖಿಳಭೂಭುಜರ ॥ ಬಲಿದರೊಳಲಂಚದಲಿ ಭಿದ್ರಿಸಿ । ಕೊಲುವವನಿದೂಡೆ ಮಂತ್ರಶಕ್ತಿಯೊ। ಳಳುಕಿಸುವಮಂತ್ರಿಗಳು ಮೆರೆದರು ವಾಮಭಾಗದಲಿ ॥೩೫॥ ನಿಗಮತರ್ಕಪುರಾಣಕಾವ್ಯಾ । ದಿಗಳ ವಿಸಟಂಬರಿಗಳೊತ್ತೊ । ತ್ತುಗಳೊಳಿಟ್ಟೆಡೆಯಾಗಿ ಹಿಗ್ಗದಜಠರದಂಘ್ರಿಯರು । ಬಗೆಯುಪನ್ಯಾಸದಸುಶಾಖಾ । ಳಿಗಳ ಬೀಳಲು ಬೆಳೆದಗಡ್ಡದ। ವಿಗಡಭೂಯೋಪಾಧ್ಯರಿದ್ದರು ರಾಜಸಭೆಯೊಳಗೆ ॥೩೬॥ ಸಲೆಸಮಸ್ತಕನಂತಪದ್ಯವ । ಗಳಿಲನನ್ವೈಸುವಸುಶಾಂತಿಯು । ಲಲಿತವೃಂಧುರಸಮಾಧಿಸುಕುಮಾರಾದಿರಚನೆಯಲಿ ಹಲವುಪಮೆಯುತ್ಪ್ರೇಕ್ಷೆರೂಪಕ । ಸುಲಲಿತಾಲಂಕೃತಿಚಮತ್ಕೃತಿ । ಗಳ ಚತುರ್ಭಾಷಾವಿಶಾರದಕವಿಗಳೊಪ್ಪಿದರು ॥೩೭॥ ನುಡಿದು ತಲೆದೂಗಿಸುವಮರಗ । ನ್ನಡಕೆ ಹಾಹಾಯೆನಿಸಿ ಮೆಚ್ಚನುಪಡೆವವಾಗ್ಮಿಗಳೋದಿ ಹೊಗಳಿಸಿಕೊಂಬಗಮಕಿಗಳು॥ ಕೊಡುವಪದವಿಗೆ ಸುಪ್ರಮೇಯದ । ಗಡಣಕಬುಜಭವಾದಿವಿಭುಗಳು। ಬಿಡಿಸಲರಿದೆನಿಪತುಳತಾರ್ಕಿಕ ಜನಗಳೊಪ್ಪಿದರು ॥೩೮॥ ನುತಸುಭೋದಯ ಜೀಯ । ಶತ್ರು । ಪ್ರತತಿಸಂಹಾರಕ ಸಮಸ್ತ। ಕ್ಷಿತಿಪತಬ್ರಹ್ಮಾಯುರಸ್ತುವೆನುತ್ತ ಕೈನೆಗಹಿ ॥ ನುತಗುಣನ ಬಿರುದಾವಳಿಯ ಸಂ । ಗತಿಯನೆಭಿವರ್ಣಿಸುವ ಸಮಯೋ । ಚಿತದ ಮನ್ನಣೆವಡೆದು ಮೆರೆದುದು ಭಟ್ಟಸಂದೋಹ ॥ ಬರೆದ ಬಳಿಕದುವಿಧಿಯುಸೀಮೆಯ । ಭರಹ ನಿಜಕಾರ್ಯಾರ್ಥಲಾಭವು । ದೊರಕಿದೊಡೆಪತಿಯರ್ಥನೀರಲಿ ಬರದಲಿಪಿಯಂತೆ॥ ಬಯಗುಪಿತಲೋಲುಪರು ಲಂಚದ। ಪರಮಜೀವನಜಾಣರಾಸಿರಿ । ಕರಣದವರೊಪ್ಪಿದರು ಭೂಪಾಲಕನ ಸಭೆಯೊಳಗೆ ॥೪೦॥ ನಳನ ನಹುಷನ ಶಾಲಿಹೋತ್ರನ। ಬಲುಮೆಗಳು ಕಿರಿದೆಂಬವಿದ್ಯಾ । ನಿಳಯವರರೇವಂತತೋರಾಟವನು ನಸುನಗುತ ॥ ಬಲಿದದೃಢವಾಘೆಗಳು ದುಷ್ಟಾ । ವಳಿಯಹಯಪ್ರೌಢಪ್ರತಾಪರು। ಹೊಳೆವಮಕುಟದ ಸಾಲುಗಳಲೊಪ್ಪಿದರು ರಾವುತ

ರು ॥೪೧॥ ಅತಿಮದದಿ ತನು ಸೊಕ್ಕಿದೈರಾ । ವತವಕಿವಿಡಿದೆಳೆವ ದಿಗ್ಗಜ । ತತಿಯನವುಳಾಂಕುಶದ ಲಂಜಿಸಿಕೆಲಬಲಕೆ ಬಿಡುವ ॥ ನುತಗಜಾರೋಹಕರು ಕುರುಭೂ । ಪತಿಯ ಹೊರೆಯಲಿ ಮೆರೆದರೈಮ ರಾವತಿಯ ರಾಯನ ಸಭೆಯೊಲೆಸೆಮದು ಕೌರವಸ್ಥಾನ ॥೪೨॥ ನಡೆದು ಪರಮಂಡಲದ ರಾಯರ । ಜಡಿದುಕಪ್ಪವತಪ್ಪತಿಪ್ಪರ । ಗಡಣಿಸೆದುಪು ಪವನವೇಗದ ರಾಯಭಾರಿಗಳು ॥ ಕಡುಗಿದೊಡೆ ಕಾಲಂಗೆ ಬಿರುದಿನ । ತೊಡರನಿಕ್ಕುವಜವನಪಾಡೆಯ। ತುಡುಕುವಗ್ಗದ ವೀರರೆಸೆದುದು ದಿಟ್ಟವಾಳಿಯಲಿ ॥೪೩॥ ಎಳೆಯುಮಿಂಚಿನ ಕಿಡಿಯಸೂಸುವ । ನಳಿನದೃಶೆಯರು ಶಶಿಯಬಿಂಬವ । ಹಳಿವಹುರುಡಿಸುವಸವುಮು ಖಿಯರು ಕೋಮಲಾಂಗಿಯರು ॥ ಸೆಳೆನಡುವಿನಸಗ್ಗಳೆಯರೊಪ್ಪುವ । ಕಲಶಕುಚಯರು ಜಘನಘನ ಚಳ । ದಳೀಯರು ಕುರುರಾಯನೆಡವಂಕದಲಿ ಮೋಹಿದರು ॥೪೪॥ ಗಾನದಬಲೆಯರನುಪಮಿತಲಯ। ತಾನವಿಸ್ಯಾಸಾವಲಂಬನ । ಸಾನುರಾಗದಿ ಮರುಳುಗೊಳಿಸುವರಲ್ಲಿ ಪಲ್ಲವರ ॥ ಆನಿತಂಬದಪೊಳೆವಮೊ ಲೆಗಳ । ನೂನಮಧ್ಯದೊಳೆಸವಬಾಸೆಯ । ಮಾನವತಿಯರೆನಿಪ್ಪಹಸ್ತಿನಿಯರುಗಳೊಪ್ಪಿದರು ॥೪೫॥ ತಳಿತಹುಬ್ಬಿನಕುರುಳುಕೊಂಚಿಯ । ಬಳಲುಮುಡಿಗಳಕೆಂಪಿನಧರದ । ಚಲಿತನಯನದ ಗೌರ್ಣವರ್ಣದ ನೂನರಾಗತೆಯ ॥ ಜಲಜಗಂಧವ ಮೆರೆವರೋಮಾ । ವಳಿಯ ಮಿವರಮಧ್ಯಮದರತಿ । ಗಳಿರ್ದರು ಚಿತ್ತಿನಿಶಂಕಿಣಿಯರು ನೃಪನ ಸಭೆಯೊಳಗೆ ॥೪೬॥ ಗರುವಿಕೆಯ ಗಾಡಿಕೆಯಸುರತಾ । ತುರದಚಿತ್ತದ ಸುಗುಣಬುದ್ಧಿಯ । ತರಳತರಮೃದುಮಧುರ ವಚನದ ಪ್ರೌಢಮುಗ್ಧೆಯರ ॥ ಸರಸಿಯರು ಕೆಡು ಚಲುವೆಯರುಅ । ಪ್ಸರಿಯಗೆ ಹೊಕ್ಕ್ರಗಳೆಸುವ । ಸರೆಸ ಪದ್ಮಿನಿರೊಪ್ಪಿದರು ಕರ್ಣಾಟವನಿತೆಯ ರು ॥೪೭॥ ನಳಿನವದನದ ಹೊಳೆವಕಡೆಗಣ್ಣ । ಳಸುಕಾಂತಿಯ ನವವಿಳಾಸದ। ಬೆಳವಿಗೆಯ ಶೃಂ ಗಾರದೊಯ್ಯಾರದವಿಡಂಬನದ ॥ ಬಲುಮೊಲೆಯ ಹಂಸಗಳನಡೆಯಲಿ । ಬಲುಮಸದಪುಗೆರತಿಗ ಳಂತ್ಯದ । ಬಳಲಿಕೆಯಬೊಬ್ಬುಳಿಯವರ । ಚೋಳಿತಿಯಗೊಪ್ಪಿದರು ॥೪೮॥ ತೋಳುಗಳ ಕೋಮ ಲಿಕಿಗಳ ಬಿಂ । ಬಾಳಕೇಶವ ಕೊಂಕುಗುರುಳಿನ । ಲೋಲನಯನದ ದಂತಿಗಮನದ ಸುರಭಿಪರಿಮಳ ದ ॥ ಲೀಲೆಯಲಿ ಸೊಗಸುಪಮನೋಜನ । ಕೇಳಿಯಲಿ ಮಷ್ಯಮೆಯರೆನಿಸುವ । ಮಾಳವದ ಮಾನಿನಿ ಯರೆಸೆದರು ಸಿರಿಯಸೊಬಗಿನಲಿ ॥೪೯॥ ಸುರತಸೌಖ್ಯವಲಂಪಟತ್ವದ । ಕರಿಯಗವನದಗಳಿಯನುಡಿ ಗಳ । ಗುರುನಿತಂಬದಶಶಿಯಬಿಂಬವನೇಳಿಪಾವನದ ॥ ಪುರುಷರನು ಬಲುತರದಿ ಮೋಹಿಪ। ಪರಿಮಳಗೆ ಮಿಗೆಕವಿವತುಂಬಿಯ । ಸರಸಿಜಾಕ್ಷಿಯರೆಸದರಾಪಾಂಚಾಲನಾರಿಯರು ॥೫೦॥ ಅಸಿಯಬಂಸೆಯ ವಿ ಕಟನಯದ । ಬಸುರಬಾಸೆಯ ಸೊಗಸು ಮಿಗೆ ರಂ । ಜಿಸುವನಡುವಿನ ಸುಳಿವನಾಭಿಯ ವೃತ್ತಕುಚ ಯುಗದ ॥ ಎಸೆವನಗೆಗಣ್ಣಳ ವಿನೋದ । ಪ್ರಸದೇಳ್ಗೆಯ ಕಾಮರಸ ಪಸ । ರಿಸುವಸುರತದ ಗುಜ್ಜರಿ ಗಳೊಪ್ಪಿದರು ಸಭೆಯೊಳಗೆ ॥೫೧॥ ಘನತರವರದ ಪತಿಗೆ ವರಚುಂ । ಬನದಸೌಖ್ಯಕೆ ನಾಗರಿಕರಾ । ಮನವಿಡಿದಕೈಕೊಂಬಸುರತವ ಪಳತೆಯೊಳೆಸೆವ ॥ ಮುನಿಸುಪುರುಷದ ಸಕಲಸರಸದ । ಕಿಸುಗಳತುಂ ಗೋರುಜಂಘೆಯ । ವನಜಮುಖಿಯರು ಮೆರೆವಸೌರಾಷ್ಟ್ರನಾರಿಯರು ॥೫೨ ನುಡಿಯೊಳಮೃತದ ರಸವನೇಳಿಪ । ನಡೆಯೊಳಂಚೆಯೊಳಣಕವಾಡುವ । ಕುಡಿತೆಗಣ್ಗಳ ಬಲೆಯ ಬಿಸಸುವರಭಿಕಮೃಗಕು ಲಕೆ । ಬೆಡಗುನುಡಿಯಲಿ ಸುರತ ಭೋಗದ । ಕಡಲೊಳಗೆ ವಿಟಚಯವಮುಳುಗಿಪ । ಕಡುಗರುವಬಿ

ಬ್ಬೋಕರಿದ್ದರು ಬಹಳವಿಭವದಲಿ ॥೫೩॥ ಲಲಿತಸುಭಗಲತಾಂಗಿ ಸರಸಿಜ । ದಳವಲೋಚನೆ ಮಧ್ಯರತಿ ವಿಟ । ನೊಲಿದರೊಲಿವಳು ಬೆರಸ ಬೆರಸದೆ ಮನವ ಬೈಚಿಡುವ ॥ ನಳಿನಮುಖಿ ಬೇಟದಲಿ ಬೇಗೆಯು । ಬೆಳೆಸುವಳು ಕಡುಚಪಲಸುರತದ । ನೆಲೆಯನುಪವಕಳಿಂಗವನಿತೆಯರೋದರೊಗ್ಗಿನಲಿ ॥೫೪॥ ಅಳಕಾತಿ ಸರೋಜಮುಖಿಯನು । ಕೂಲರತಿ ಕಮನೀಯರೂಪಿಣಿ । ಲೋಲಲೋಚನೆ ಕಠಿಣಕುಚಯುಗೆ ರಾಗ ವತಿಯೆನಿಪ ॥ ಲೀಲೆಯಲಿ ಲೋಕವನು ಮೋಹಿಪ । ಸೋಲಿಸುವ ಸೊಬಗಿಯರು ಸಖಿಯರು । ಮೇಲವಣಿಯಲಿ ಮೆರೆದರೊಡ್ಡಿಯದೇಶದಬಲೆಯರು ॥೫೫॥ ಗುರುನಿತಂಬದ ತರಳನಯನದ । ಕರಯುಗ ಮನದ ಗೌರವವರ್ಣದ। ಸರಸಿಜಾನನಕಾಂತಿಗಳ ಪಾಟಳಿಯ ಪರಿಮಳದ ॥ ಹರುಷಕೇಳಿಯ ಕುಹಕಭಾವದ । ಬೆರಕೆಗಳ ಸಂಪೂರ್ಣಭಾವದ । ತರುಣಿಯರು ಲೇಸೆನಿಸಿದರು ಗೌಳವದನಾರಿಯರು ॥೫೬॥ ಒಲಿಸಲರಿಯರು ವಿಟನ ಚಿತ್ತವ । ನಿಲಿಸಲರಿಯರು ಕತ್ತುರಿಯಯುತಾ । ಪಲವುಮಾತಿನಲಸುವಹುಸಿಯವಿಟರಹುರಡಿನಲಿ ॥ ಕಲಹವನು ಕಲ್ಪಿಸುತ ವಲಿತರ । ಛಲಮನದೊಳಾನುವರು ಸುರತ । ಕ್ಕೊಲಿದು ಕೂಡುವಮನವಮಳಿಯಲಸತಿಯರೊಪ್ಪಿದರು ॥೫೭॥ ಮುಸುಕಿನಲಿ ಮೂಲೋಕವನು ಮೋಹಿಸುವಕಡೆನೋಟದಲಿ ಕಂಡವ ರಸುವನಲ್ಲಾಡಿಸುತ ಕೂಟದೊಳಮರಪದವಿಯನು ॥ ಹುಸಿಯೆನಿಸಿ ತೋರಿಸುವಮದನ । ನಹೆಸರಬಿರಿದನು ಜಗದೊಳಗೆ ಸಾ । ರಿಸುವರೆಸದಿಹರಲ್ಲಿ ಕೋಸಲದೇಶದಬಲೆಯರು ॥೫೮॥ ನೋಡಲರಿವರು ವಿಟನಚಿತ್ತವ । ಕೂಡಲರಿಯರು ಬೆಳಸಬೇಟವ । ಮಾಡಲರಿಯರು ಹಣವಿನಾಸೆಗೆ ಜೀವದುಳಿವೆಂದು ॥ ಬೇಡಿಬೇಸರಸುಖವಿಳಾಸದ । ಜೋಡಿಗಳ ತೋರಿಸುವಜವ್ವನ । ಗೇಡಿಗಳು ಚೆಲುವಾದರ್ಕೆಕೊಂಕಣದ ನಾರಿಯರು ॥೫೯॥ ಮುಡಿಯಭಾರದೊಳ್ಗೊಲಿದು ತರುಬಿದ । ತೊಡವೆಗಳಚಲುವಿವರಯೂರ್ವಸಿ । ಪಡಿಯೆ ನಾರೆಂಬಮರನಯ್ಯಾರದೊಡಾಕೆಗಳನಳಿದು ॥ ಸಡಗರದಸುಳಿನುಡಿಗೆ ತಲೆಯನು । ಗೊಡಹಿಸುವಮಿಗೆ ನೆರೆದರಾದರು । ಕಡೆಯಕಾಸಿಸವಫಟೆಯರು ಪತಿಯರೊಪ್ಪಿದರು ॥೬೦॥ ಮುಂದು ನೋಡಿದರಖಿಳರಾಯ । ರುಪರವ ಬಾಗಲು ಲಾಳವಾಳವ । ತುರಕಕೊಂಕಣ ಗೌಳಘೂರ್ಜರವಂಗಹಮ್ಮೀರ ॥ ವರತ್ರಿಗರ್ತರು ನೆರೆದುಜೀಯೆನು । ತಿರಲು ಕೋಮಲತೆಯರು ಸಿತಜಾ । ವರವ ಚಿಮ್ಮಲು ಭೂಪ ಮೆರೆದನು ಸಿಂಹಪೀಠದಲಿ ॥೬೧॥ ಆವದೇಸಿಯದಾವವಿಸ್ತರ । ವಾವದೇಶದ ಸಿರಿಯಸಡಗರ । ವಾವಪರಿಯ ವಿಳಾಸವಾವವಿಡಾಯಿ ತಾನೆನಲು ॥ ಹಾವುಹಳವಿಗೆಯಾದರಾಯನು । ರಾವಣಾರಿಯಕಾಣಿಕೆಗೆ ಬಲು । ಠೀವಿಯನು ತೋರಿದನು ನಾರುಪಭಟ್ಟರೋಳಿಯಲಿ ॥೬೨॥ ಬರಲಿ ಕರೆ ಕೈತವದಶಿಕ್ಷಾ । ಗುರುವನೆನುತವನೀಶ ದೂತರ । ಹರಿಯಬಿಟ್ಟನು ಪರಿಯನಿಳಯಕೆ ಹರಿಯ ಬೇಗದಲಿ ॥ ಚರರು ಹರಿತಂದಸುರರಿಪುವಿನ । ಚರಣದಲಿ ಪ್ಯಯಿಕ್ಕಿ ನೊಸಲಲಿ । ಕರಪುಟಾಂಜಲಿ ಮೆರೆವುತಿರೆ ಬಿನ್ನಹವ ಮಾಡಿದರು ॥೬೪॥ ದೇವ ದೇವರ ಸಮಯವೆನೆ ರಾ । ಜೀವನಾಭನು ಮುಗುಳುನಗೆಯಲಿ । ಭಾವನವರಟ್ಟಿದರೆ ಹರ ಹರ ಬಹೆವು ನಡೆಯೆನುತ ॥ ರಾವಣನ ಪರಿ ನೆಲಸಿತಿವನಲಿ ಸಾವಿಗಂಜುವನಲ್ಲ ಖಳನು ನ । ಯಾವಿಳನು ನಮ್ಮಕುತಿ ಕೊಳ್ಳದು ವಿದುರ ಕೇಳೆಂದ ॥೬೪॥ ಎನುತ ಮಂಚವನಿಳಿದು ವರಕಾಂ । ಚನವರೂಥಕೆ ಕೈಗೊಡುವಯದು । ಜನಪರುಗ್ಗಡಣೆಯಲಿ ಬಿಜಯೆಂಗೈದನಸುರಾರಿ ॥ ಮುನಿನಿಕರ ಸಂದಣಿಸಿತಭ್ರದೊಳನಿಮಿಷಾವಳಿ ನೆರೆದಿಭಪುರಿ । ಜನವೊಡನೆ ನಡೆ

ತರಲುಹರಿಬರುತಿರ್ದನೋಲಗಕೆ ॥೧೫॥ ಕಲಿಮಲವ ಹೊಲೆಗಲಸಿದಿಭಪುರಿಯೊಳಗೆನಿರ್ಮಳವಾಯ್ತು
ಕೃಷ್ಣನ। ಚಲುವದರುಶನದಿಂದ ಬೆಂದವು ಭವದಭಯಬೀಜ॥ಲಲನೆಯರು ತಮತಮ್ಮನಯನಂಗಳಿಗೆ ದೇ
ವನ ತೆಗೆದು ಸನುಮತ।ಪುಳಕರಾದರು ಕೇಳು ಜನಮೇಜಯ ಮಹೀಪಾಲ॥೧೬॥ಕಂಜಸಂಭವಪಿತನಬಂ
ದನು। ನಂದಿನಲ್ಲಿ ಪವಡಿಸುವ ಬಂದನು। ನಂಜಿನಲಿ ಪವಡಿಸುವಬಂದನು।ಕುಂಜರನ ಮೊರೆಗೇಳಿ ಸಲಹಿ
ದದೇವನಿದೆ ಬಂದ॥ ಅಂಜನಾಸುತನೊಡೆಯ ಬಂದನು।ಅಂಜಿದಮರರಿಗಭಯವಿತ್ತವ।ಭಂಜನೆಗೆ ಬಲು
ದೈವಬಂದನು ನೃಪತಿಯರಮನೆಗೆ॥೧೭॥ದೇವ ಬಂದನು ತನ್ನ ನೆನೆವರ। ಕಾವ ಬಂದನು ದೈತ್ಯಕುಲವ
ನ।ದಾವ ಬಂದನುಭಾಗವತಜನಲೋಲುಪನುಬಂದ॥ಭಾವಿಸುವಘಗಹಾರಿ ಬಂದನು।ವೊವಿಬಂದೊಡೆ ತ
ನ್ನಬೀರುವ ದೇವ ಬಂದನು ವೀರನಾರಾಯಣ ಬಂದನರಮನೆಗೆ॥೧೮॥ ಅರಸ ಬಂದನು ಭಾಗವತಜನ।
ಪರುಷ ಬಂದನು ಭಕ್ತವತ್ಸಲ। ಕರುಣಿ ಬಂದನು ತನ್ನ ನೆನೆದೊಡೆಪರಮಪದವೀವ॥ಪರಮಪುರುಷೋ
ತ್ತಮನುಬಂದನು।ದುರಿತದುರ್ಗವಿಘಾತ ಬಂದನು।ಸುರರ ಸಲಹುವದೇವ ಬಂದನು ನೃಪತಿಯರಮನೆ
ಗೆ॥೧೯॥ಕ್ಷೀರವಾರಿಧಿಶಯನ ಬಂದನು । ವಾಂಛೋವರಕೃಷ್ಣ ಬಂದನು। ಧಾರಿಣಿಯ ಹೊರೆಯಿಳಿಯ
ಲೋಸುಗ ಮನುಜವೇಷದಲಿ ॥ ಭೂರಿದನುಜರಸೊರಸಿ ಕೌರವ। ವಾರಿಧಿಯ ಮುಕ್ಕುಳಿಸಲೋಸುಗ ।
ಘೋರನೈತರುತಿರ್ದನಂದು ನೃಪಾಲನರಮನೆಗೆ ॥೨೦॥ ಸರಸಿಜಾಕ್ಷನು ಬಂದ ಯದುಕುಲ। ವರಶಿರೋ
ಮಣಿ ಬಂದ ವಾಸವ । ಶರಧಿಬಡಬಾನಲನು ಬಂದನು ಕಾಮಪಿತ ಬಂದ॥ ದುರಿತಕದಳಕುಠಾರ ಬಂದ
ನು । ಸುರಸಮೂಹಾರ್ಚಿತನು ಬಂದನು । ಅರಸಸಿರಿವರ ವೀರನರಹರಿ ಬಂದನೋಲಗಕೆ ॥೨೧॥ ಯಾ
ದವರ ಕುಲತಿಲಕ ಬಂದನು । ಸಾಧುಸಜ್ಜನರರಸು ಬಂದನು । ಮೇದಿನಿಯ ನೃಪನಿವಹವಿಪಿನಕೃಶಾನು
ಯಿದೆ ಬಂದ ॥ ವೇದವೇದ್ಯನು ಬಂದನಿದೆ ಸನ । ಕಾದಿಪೂಜ್ಯನು ಬಂದನಭುಜವಭ । ವಾದಿದೇವಪ್ರಿ
ಯನು ಬಂದನು ನೃಪತಿಯೋಲಗಕೆ ॥೨೨॥ ಕಂಡವರಕದುದುಂತರಾತಿಗೆ।ಕೆಂಡವನು ಬೀಳುತ್ತ ಕೈಗಳ
ಮಂಡೆಗಾನಿಸಿದಮರಗದ್ಭುತ ಕೋಟಿಗಳ ಕೊಡುತ ॥ ಕಂಡಮುಕ್ತಿಯಲಿ ಹೊಗಳಿದಮರಿಗೆ । ಹಿಂಡುಮು
ಕ್ತಿಯ ಬೀರುವವನವು । ದ್ದಂಡದೇವನು ಬರುತಲಿರ್ದನು ನೃಪತಿಯೋಲಗಕೆ ॥೨೩॥ ರಾಮ ಬಂದನು
ಸಕಲಮುನಿಜನ । ಪ್ರೇಮ ಬಂದನು ಪಾಂಡವರ ಸ । ಕ್ಷೇಮ ಬಂದನು ಲಕ್ಷ್ಮನಾಗ್ರಜನಖಿಳದಾತಾ
ರ ॥ ಭೂಮಿಯೊಳಗೈದಡಿಯ ಬೇಡಿದ । ಆ ಮಹಾತ್ಮನು ತಾನೆ ಬಂದನು । ಕಾಮಪಥ ಮುರವೈರಿ
ಬಂದನು ನೃಪತಿಯೋಲಗಕೆ ॥೨೪॥ ಸುರರ ಸಲಹುವದೇವ ಬಂದನು। ನರನ ಜೀವನ ಸಖನು ಬಂದನು।
ಪರಮಕರುಣೋದಯನು ಬಂದನು ಸಿರಿಯರಸ ಬಂದ ॥ ಸಿರಿಲತಾಂಗಿಯರಮಣ ಬಂದನು । ಸರಸಿ
ಜಾಕ್ಷನು ತಾನೆ ಬಂದನು । ವರಅಹಲ್ಯೆಗೆ ಮೋಕ್ಷವಿತ್ತವ ಬಂದನೋಲಗಕೆ ॥೨೫॥ ಬರಲು ಮುರಹ
ರನಿದಿರುವಂದರು। ಗುರುನದೀಜದ್ರೋಣಗೌತ್ತಮ । ಗುರುಸುತಾದಿಸಮಸ್ತಭೂಪಸಮೂಹಸಂದೋ
ಹ ॥ ಚರಣದಲಿ ಚಾಚಿದರು ಭೂಮೀಶ್ವರರು ಮಕುಟವನಂತತಾರಾ । ಪರಿವೃತೇಂದುವಿನಂತೆ ಮೆರೆ
ದವು ಹರಿಯಪದಯುಗಳ ॥೨೬॥ ಅರಿದಲ್ಲೈ ಮುರವೈರಿಸನಕಾ । ದ್ಯರ ಸಮಾಧಿಗೆ ಸುಳಿಯದಂಘ್ರಿ
ಯ । ದರುಶನವಫಲಭೋಗಸಾರಿದುದಸ್ಮದಾಘ್ಯರಿಗೆ ॥ ಸುರನರೋರಗರೊಳು ಕೃತಾರ್ಥರು । ನಿರುತ
ತಾವಲ್ಲದೊಡೆ ನಿಮ್ಮಯ । ಸರಸಿಜಾಂಘ್ರಿಯ ಸೇವೆ ದೊರೆಕುವುದಾವಮುನಿಗಳಿಗೆ ॥೨೭॥ ಎಂದು ಗಂ

ಗಾನಂದನನು ನಲ । ವಿಂದ ಕೈಗುಡೆ ಸುರನದಿಯುತುದಿ । ಯಿಂದ ಮರಿಮಿಂಚುಗಳ ಮುಗಿಲಿಳಿವಂತೆ ಭೂತಳಕೆ ॥ ಅಂದು ನೀಲಾಚಲನಿಕಾಯದ । ಸೌಂದರಾಂಗದ ಕೌಸ್ತುಭಪ್ರಭೆ । ಯಿಂದ ಕಾಂಚನರಥವನಿಳಿದನು ದಾನವಾರಾತಿ ॥೭೮॥ ಸಮರಸರ್ವಜ್ಞರುಗಳಂಘ್ರಿಗೆ। ನಮಿಸಿದರು ಬಹಳೋಲಗದ ಸಂಭ್ರಮದ ಸಿಂ ತಲೆವಾಗುತಿರ್ದುದು ನೊಸಲಕ್ಕಿಗಳಲಿ ॥ ಕಮಲನಯನದ ದೇವನೇ ಸಾ । ಕೆಮಗೆ ಮಾಡುವುದೇನೆನುತ ತ । ಕ್ಕಮತಿ ಕೌರವ ನಿಳಿಯದಿರ್ದನು ಸಿಂಹ ವಿಷ್ಟರವ ॥೭೯॥ ಸೆಣಸುಸೇರದದೇವನಿದಿರಲಿ । ಮಣಿಯದಾತನ ಕಾಣುತವೆ ಧಾ । ರುಣಿಯನೊತ್ತಿದನುಂಗುಟದ ತುದಿಯಿಂದ ನಸುನಗುತ ॥ ಮಣಿಖಚಿತಕಾಂಚನದ ಪೀಠದ । ಗೋಣಿಸು ಮುರಿದುದು ಮೇಲೆ ಸುರಸಂ । ಧಣಿಗಳಾಯೆನೆ ಕವಿದು ಬಿದ್ದನು ಹರಿಯ ಚರಣದಲಿ ॥೮೦॥ ಧರಣಿಪತಿ ಸಿಂಹಾಸನದಮೇ । ಲಿರದೆ ಬಹರೆ ನಾವು ಬಂದೇ । ಹರಸುವೆವು ತಪ್ಪಾವುದೆನುತೆತ್ತಿದನು ಮಸ್ತಕವ ॥ ಸುರನದೀಸುತ ಕೈಗುಡಲು ಕೇ । ಸುಂಯು ಪೀಠಕೆ ದೇವ ಬಂದನು । ಕುರುಕುಲಾಗ್ರಣಿಗಳ ಸುಸನ್ಮಾನವನು ಕೈಕೊಳುತ ॥೮೧॥ ಹರಿಯ ಹರಿವಿಷ್ಟರದ ಬಲದಲಿ । ಧರಣಿಪತಿ ಕುಳ್ಳಿರ್ದಸಾತನ । ಹಿರಿಯಮಗನೆಡವಂಕದಲಿ ಕರ್ಣಾದಿಗಳುಸಹಿತ ॥ ಹರಿಯ ನೇಮವ ಕೊಂಡು ಸನ್ಮುನಿ । ವರರು ಕುಳ್ಳಿರ್ದರು ನದೀಸುತ। ತರಿಸಿದನು ಪಡಿಗವನು ಹೊಂಗಳಸದ ಸುವಾರಿಗಳ ॥೮೨॥ ಚರಣಯುಗಳವ ತೊಳೆದು ತೀರ್ಥವ । ಶಿರದೊಳಿಟ್ಟು ಮಹಾನುಭಾವನ । ದರುಶನದಿ ಮಜ್ಜನ್ಮ ಸಫಲವೆನುತ್ತ ಕೈಮುಗಿದು ॥ ಪರಶುರಾಮಾದಿಗಳ ಮಿಗೆ ಸ । ತ್ಕರಿಸಿ ಗಂಧಾಕ್ಷತೆಗಳಿಂದು । ಪಚರಿಸಿ ಹೊಂಬಟ್ಟಲಲಿ ವೀಳೆಯವಿತ್ತನನಿಬರಿಗೆ ॥ ಕುಶಲವೇ ಕುರುರಾಯ ಬಾರೈ । ಮುಸುಡಮುಗುಡವಿದೇಕೆ ಬಾಯೆಂ । ದಸುರರಿಪುಕೌರವನ ಕರೆದನು ತನ್ನ ಸಮ್ಮುಖಕೆ ॥ ಉಸುರಲಮ್ಮೆನು ಭಾವತನದೊಂದೆಸಕ ಸಲುಗೆಯ ನೇಮವಾದೊಡೆ । ಬಿಸಜಲೋಚನ ಬಿನ್ನಹವನವಧರಿಸಬೇಕೆಂದ ॥೮೪॥ ನೀವು ಬಿಜಯಂಗೈವಿರೆಂದು ಮ । ಹಾವಿಳಾಸದೊಳಳವಡಿಸಿ ಸಾ । ನಾವಿಧದ ಷಡುರಸವ ಗರುಡಿಯಲಿಂದುಸವೆಸಿದೆನು ॥ ದೇವ ನಮ್ಮರಮನೆಗೆ ಬಾರದೆ । ನೀವು ವಿದುರನ ಮನೆಯಲುಂಡಿರಿ । ಗೋವಳಿಗತನ ನಿಮ್ಮ ಮೈಸಿರಿ ತಪ್ಪದಾಯ್ತೆಂದ ॥೮೫॥ ಈಕೃಪನಸಿದ್ರೋಣನೀಗಂ । ಗಾಕುಮಾರನ ಮನೆಯ ಹೊಗದವಿ । ವೇಕಿ ತೊತ್ತಿನಮಗನ ಮನೆಯಲಿ ಹಸಿವಸೂಕಿದಿರಿ ॥ ಸಾಕಿದಾತನು ನಂದಗೋಪನು । ಕಾಕಬಳಸಲುಸಲ್ಲದೇ ನಿಮಗೇಕೆ ರಾಯರ ನೀತಿಯೆಂದನು ನಗುತ ಕುರುರಾಯ ॥೮೬॥ ಪ್ರಿಯದಲುಂಬುದು ಮೇಣು ವಿಬುಧಾ । ಶ್ರಯದಲುಂಬುದು ಮಾನವರಿಗಿದು ನಿಯತವಿಂತಲ್ಲದೊಡೆ ಕೇಳೈ ಕೌರವರರಾಯ ॥ ಪ್ರಿಯನು ನೀನಲ್ಲೆಮಗೆ ವಿಬುಧಾ । ಶ್ರಯವು ತಾ ಮುನ್ನಿಲ್ಲ ನಿನ್ನಾ । ಲಯದಲೆಮಗೆಂತೂಟ ಸಂಭವಿಸುವುದು ಹೇಳೆಂದ ॥೮೭॥ ಕುರುಪತಿಯ ಬಿರುನುಡಿಯ ಕೇಳಿದು । ಕರಣದಲಿ ಕೋಪಾಗ್ನಿ ಯುಕ್ಕಲು । ಕೆರಳಿನಿರ್ಭೀತಿಯಲಿ ನುಡಿದನು ವಿದುರಸರಸಂಗೆ ॥ ದುರುಳನೀನಾಡಿದನುಡಿಗೆ ಯು । ತ್ತರವ ನೀಯಲದೇಕೆ ನಿನ್ನಯ । ವರಜನನಿಗಾಪಿಯಲಿ ಗಂಡರದಾರು ಹೇಳೆಂದ॥ ಕಡುಮುಳಿಸಿನಲಿ ಭೀಮ ನಿನ್ನಯ । ತೊಡೆಗಳನು ಕಡಿವಾಸಮಯದೊಳು । ತಡೆದು ನಿನ್ನನು ಕಾಯಬೇಕೆಂದುಳುಹಿದೆನು ಧನುವ ॥ ಕೆಡನುಡಿಸಿಕೊಂಡಿನ್ನು ಕಾವೆನೆ । ನುಡಿದು ಫಲವೇನೆನುತ ವಿದುರನು । ಹಿಡಿದಬಿಲ್ಲನು ಮುರಿದನಾಕುರುರಾಯ ಬೆರಗಾಗೆ ॥೮೭॥ ಧನುಮುರಿಯೆ ಗಾಂ

ಧಾರಿಗತಲೋ । ಚನರು ಮಮ್ಮಲಮರುಗಿತ್ತರಸನ । ನೆನಹಿನ್ನೆವಡಿಯಾಯ್ತು ಭೀಷ್ಮದ್ರೋಣರಳಲಿದರು ॥ ಮನದ ಪರುಷವ ನಗುತ ಮಧುಸೂ । ದನನು ನುಡಿದನು ಮರುಳು ಕೌರವ । ಜನವ ಕೇಳ್ಕೈ ಮತ್ತೆ ನಮ್ಮಯಶೀಲ ಬೇರೆಂದ ॥೮೮॥ ಹಗೆಯನೊಳಗಿಡಲಾಗದದು ವೈ । ರಿಗಳ ನಿಳಯದಲನ್ನಪಾನಾದಿಗಳನುಣಲಾಗದು ನಿಧಾನಿಸೆ ರಾಜನೀತಿಯಿದು ॥ ಬಗೆಯನೀ ಪಾಂಡವರಿಗಹಿತನು । ವಿಗಡಪಾಂಡವರೆನ್ನಜೀವನ । ಹಗೆಯನಂಬುವನೆಂತು ಹೇಳ್ಕೈ ಕೌರವರರಾಯ ॥೮೯॥ ಸೇರುವನು ಸಕಳಂಕಚಂದ್ರನು । ವಾರಿಧಿಗೆ ನೀನಖಿಳಗೋಷ್ಪದ । ವಾರ ಜಾರೆಯಮಕ್ಕಳಿಗೆ ನೀಜೀವ ತಪ್ಪೇನೂ ॥ ಆರು ತಮ್ಮಂದದಮಹಾತ್ಮರು । ಸೇರುವರಲ್ಲೈ ಪಾಂಡುಪುತ್ರರ । ಕೂರುಮೆಗೆ ನಾನೆನ್ನನೀಬಂದನುವ ಹೇಳೆಂದ ॥ ಕುಲದವನಹೃದಯಾಂಧಕಾರವ । ಕಳಚಲೆಂದು ಹಿಮಾಂಶು ಪರಹಿದ । ನೆಳೆಯಬೆಳುದಿಂಗಳೆನಲಾಸುರರಿಪುಕುಲಾಂತಕನಾ ॥ ತೊಳಪದಶನಮಯೂಖತತಿ ಹೊಳ । ಹೊಳೆಯ ನುಡಿದನು ತತ್ಸಭಾಮಂ । ಡಲ ಮಹಾಂಬುಧಿಸುಳಿದೆರೆಯ ತನಿಗರ್ಜಣವಡಗಿದ್ದವು (ದಂ?) ... ... ॥೯೦॥

ಅಂತು ಸಂಧಿ ೮ ಕ್ಕೆ ಪದ ೫೦೮ ಕ್ಕಂ ಮಂಗಳಮಸ್ತು.



## ಒಂಭತ್ತನೆಯ ಸಂಧಿ.

ಸೂಚನೆ ॥ ಬಿಡುನೆಲನ ಕೇಳ್ದುಗರ ಮಾತಿಂ । ಗೊಡಬಡದಿರಂತಕನ ನಗರಿಗೆ । ನಡೆಯಬೇಡೆಂದಸುರ ರಿಪು ಕೌರವನನುರೆ ಜರೆದ ॥

ಪದ ॥ ಅವಧಿ ಸವೆದುದು ಪಾಂಡವರು ನಿ । ನ್ನವರು ಜನವಾಸಪ್ರವಾಸದೊ । ಳವರು ನವೆದರು ಕೂಡಿಕೊಂಡುದು ಮಧಿಕಗರ್ವ ನಿಮಗೆ ॥ ಅವನಿಯರ್ಧವನೀವುದೀಯು । ಧ್ರುವದ ಬಾಳಿಕೆಯೊಳಗೆ ಪುರುಷಾ । ರ್ಥವನೆ ಸಂಚಿಸಕಲಿಯಬೇಹುದು ಭೂಪ ಕೇಳೆಂದ ॥೧॥ ಅರಸುತನ ತನಗಧಿಕವಾಗುತ । ಬರಬರಲು ಕಷ್ಟಾಲಿಗಳು ದರ । ಪಂಸಕಾಣವು ವರ್ತಮಾನದ ನೃಪರ ಬಳಕೆಯದು ॥ ಸಿರಿಯಮದವೆಂಬಧಿಕತಾಮಸ । ದೊರಕಿದಕ್ಷಿಗೆ ನೀತಿಕಾರರ । ಪರಮವಚನಾಂಜನವ ಪ್ರಜ್ವಲಿಸುವುದು ನಯವೆಂದ ॥ ॥೨॥ ಕೋಶ ಬಲುತಳತಂತ್ರ ಹೆಚ್ಚಿದ । ದೇಶ ದುರ್ಗವಮಾತ್ಯಮಿತ್ರಮು । ಹೇಶಜನವೆಂಬುದು ಕಣಾ ಸಪ್ತಾಂಗಸನ್ನಾಹ ॥ ಯಿಾಸು ನಿನಗುಂಟಿಲ್ಲಿ ಮಿತ್ರಮು । ಹೀಶರೆಂಬುದತೊರವೆ ಪಾಂಡವ । ರಾಸಹಾಯವು ಬರಲು ನಿನಗಿದಿರಿಲ್ಲ ಕೇಳೆಂದ ॥೩॥ ಹೇಳಿದೀಸಪ್ತಾಂಗದೊಳಗೊಂ । ದೇಳಿಥಿಟವಾಗಿರ್ದನೃಪತಿಯ । ಬಾಳಿಕೆಗೆ ಸಂದೇಹವರಿಯಾ ರಾಜನೀತಿಗಳ ॥ ಹೇಳಲಮ್ಮಮವಲ್ಲ ಹಿರಿಯರು । ಹೇಳಿದೊಡೆನೀ ಕೇಳೆ ಕುರುಕುಲ । ಮೌಳಿ ನಯದಲಿ ನಡೆಯಕಟ ಯೆಂದಸುರರಿಪುನುಡಿದ ॥೪॥ ಸಾಮವೆಂಬುದು ರಾಜನೀತಿಗೆ । ತಾಮನೋಹರರೂಪು ಬದುಕುವ । ಭೂಮಿಪಾಲರನಂತವಿಭವಕೆ ಬೀಜಮಂತ್ರವಿದು ॥ ಸಾಮ ತಪ್ಪಿದಬಳಿಕ ನೀತಿವಿ । ರಾಮವಾಗದೆ ಬಿಡದು ದಂಡದ । ಸೀಮೆಯೆಂಬುದುಪಾಯದಲೆ ಸಾಮಾನ್ಯತರವೆಂದ ॥೪॥ ಮಾಡಿದಪರಾಧಂಗಳನು ಮರೆ । ದಾಡದರತಿಮೋಹದಲಿಧಿಟ ನೀ । ಗೂಡಿಬದುಕುವನುಡಿಯನುಡಿವರು ನಮ್ಮ ಮನ ಮೆಚ್ಚೆ ॥ ಕಾಡಿನೊಳಗಾಡಿದರು ದುಃಖವ । ತೋಡಿದರು ನೀನ

ಮಗುಚಿತವೆ । ಮಾತಿ ನಾಡನು ಕೊಡುವುದೆಂದನು ದಾನವಧ್ವಂಸಿ ॥೬॥ ವಿದುರನುತ್ಸವ ಕೃಪನಸ ಮ್ಮತ । ನದಿಯುಮಗನೊಲವಂಧನೃಪನ । ಭ್ಯುದಯ ಕೇಳೆಂದಸುರಂಪು ನಯನುಡಿಯ ಗರ್ಥಣಿಸಲು ॥ ಮದದ ಮೈಗಾಣಿಕೆಯ ಮಸಲೇ । ಪದ ಮಹಾಖಳನಪ್ಪಮೊಗವಿಪ । ಲುದಧಿಯೊಳಗದ್ದಂತೆಯಿ ರ್ದುದು ರಾಯಸಾಸ್ಥಾನ ॥೭॥ ಅವಮಗಂದ್ರಪ್ರಸ್ಥದಲಿ ರಾ । ಜ್ಯವನು ಕಳಸಪತಿತ್ತು ನೀ ಪಾಂ । ಡವಪ್ರತಿಷ್ಠಾಚಾರ್ಯನೆಂಬೀಬಿರುದ ಸಲಿಸದೊಡೆ ॥ ಅವನಿಯಲಿ ನಿನ್ನೊಡನೆ ತಲೆಯೊ । ತ್ತುವನ್ನ ಪಾಲಕರಿಲ್ಲ ನುಡಿಗಳು । ಕಿವಿಗೆ ಕರ್ಕಶವೀಗಲಾದೊಡೆ ಮುಂದೆ ಲೇಸೆಂದ ॥೮॥ ಕಳಕಳಿಕೆತಗ್ಗಿದಸ ಭಾಸ್ಥಳ । ದೊಳಗೆ ಸಿಂಹಧ್ವನಿಯಲವನಿಪ । ಕುಲಕುಠಾರನು ಪರಶುರಾಮನು ನುಡಿದನರಸಂಗೆ ॥ ಎಲೆಸುಯೋಧನ ಕೃಷ್ಣರಾಯನ। ನಳಲಿಸುವರೇ ಲೋಭವೇಕೆ। ಗ್ಗಳದ ನಿರ್ಬಂಧನವು ಪ್ರಾಜ್ಞರಿಗು ಚಿತವಲ್ಲೆಂದ॥೯॥ ದಿವಿಜರಿದಿರಲ್ಲೆಂದು ಡಂಭೋ। ದ್ಭವನು ನರನಾರಾಯಣಾಖ್ಯರ । ನವಗಡಿಸಿ ಮು ರಿವಡೆದು ಕೆಟ್ಟನು ಗಾಢಗರ್ವದಲಿ ॥ ಅವರೊಳರ್ಜುನನರನು ಯದುಸಂ। ಭವನು ನಾರಾಯಣನು ಬಿ ಡು ಪಾಂ। ಡವರ ವೈರವನೆಂದು ಭಾರ್ಗವ ನುಡಿದನರಸಂಗೆ ॥೧೦॥ ತಪ್ಪು ನುಡಿಯನು ಪರಶುರಾಮನು। ದರ್ಪವಿದು ಲೇಸಲ್ಲ ಕೃಷ್ಣಂ। ಗೊಪ್ಪಿಸುವುದಧರ್ಮವನೀತಳವನು ಸರಾಗದಲಿ॥ ತಪ್ಪುಸುಡಿದೊಡ ಗರುಡ ದೇವನ। ದರ್ಪವನು ಹುಸಿಳೆದು ಬಿಸುಟಂ। ತೊಪ್ಪಿತಾಗದಿವೆಂದು ನುಡಿವನು ಕಣ್ವಮುನಿನಗುತ॥೧೧॥ ಅಹುದು ಕಣ್ವನ ಮಾತು ಕೃಷ್ಣನ । ಮಹಿಮೆ ಘನಪದ—ನಿದುಗರ್ವ । ಗ್ರಹ ಹಿಡಿದು ಮರುಳಾಗ ದಿರು ಮುನ್ನೊಬ್ಬಗಾವಿಲನು ॥ ಬಹಳಗುರು ಕ್ಷಣಗೆ ತ್ರೈಲೋಕ್ಯಪ್ರ । ಮಹಿಯೊಳೆಲ್ಲಿಯು ಗಳಿಸಬಿರ ಲವ । ನಹವ ಮುರಿದನು ಬಳಿಕ ವಿಶ್ವಾಮಿತ್ರಮುನಿ ಬಂದು ॥೧೨॥ ನಿಮ್ಮ ಪೂರ್ವಯಯಾತಿ ನಾಕ ದೊ । ಳೆಮ್ಮವೋಲಾರುಂಟು ಜಗದಲಿ । ಧರ್ಮಪರನೆನೆ ಸುರರು ಹಟಂಕ್ಕದರು ಹಡತಲೆಗೆ ॥ ಧ ರ್ಮಪಥಹುಲುವಟ್ಟೆ ಯೆನಿಸಿದ । ಹಮ್ಮಿನಲಿ ಕೆಡಬೇಡ ನೀತಿಯ । ನಮ್ಮದವ ಕಡನಂದು ನಾರದ ನುಡಿದನರಸಂಗೆ ॥೧೩॥ ಅವನಿಪತಿ ಕೇಳಾವು ಪಾಂಡವ । ರವರು ಬನದಲಿ ಕಂದಮೂಲವ । ಸವಿದು ಕೊಂಬರು ಋಷಿಗಳಿಗೆ ಹಂಗೇಕೆ ಭೂಮಿಪರ ॥ ಇವರದಾವನಪಕ್ಷಪಾತ । ವ್ಯವಹರಣೆಯವರಲ್ಲ ಕೇಳಿ। ನ್ನಿವರ ನುಡಿಗಳನೆಂದು ನುಡಿದನು ಮತ್ತೆ ಮುರವೈರಿ ॥೧೪॥ ಬರಳ ಪಿನಾಸಿಯೊಳಿಡುತ ಕಿರುನಗೆ। ವೆರಸಿ ಕರ್ಣಾದಿಗಳ ವದನವ। ತಿರುಗಿ ನೋಡುತ ಹಲಯ ನುಡಿಗಳ ಕಿವುಡುಗೇಳುತ್ತ ॥ ಮರುಳುತನ ದಾಳಾಪವೇತಕೆ । ಮುರಹರನೆ ಪಾಂಡವರ ಹಂಬಲ। ಮರೆದು ಕಳೆ ಕರಣಕ್ಕೆ ಖಾತಿಯ ಬಳಸಬೇಡೆಂದ ॥೧೫॥ ಅವರು ನಮ್ಮೊಳು ಸರಸವಾಡುವ । ಹವಣದಲ್ಲದೆ ರಾಜಕಾರ್ಯವ । ನಿಪುಗ ಯೋಚಿಸಿ ಕಳು ಹಿದಂದವ ಮೆಚ್ಚಿ ನಾನಿದನು ॥ ಬವರ ಬೇಕೇ ಬೇಡಿಕೊಂಬುದು । ಅವನಿಗವನಿಯ ಮಾತ ನೀನಾ । ಡುವರೆ ಪಾಂಡವರೇಕೆ ನೀವೇಕೆಂದು ಖಳ ನುಡಿದ ॥೧೬॥ ಮಾವ ಪೊದಲುಸಹಲಯ ಮಧ್ಯದೊ । ಳಾವಿರಾಟನ ಸಖ್ಯ ಕಡೆಯಲಿ । ನೀವು ಮಮಪ್ರಾಣಾಹಿಯೆಂಬಿರಿ ನಿಮ್ಮ ಪಾಂಡವರ ॥ ನಾವು ಕಡ ಯಲಿ ಹೊರಗು ನಮಗ । ನ್ನಾವಭೂಪರ ಸಖ್ಯವಿದ್ದುದು । ದೇವ ಸಾಚಿಸಬೇಡ ಸಂಧಿಯ ಮಾತು ಮರೆಯೆಂದ॥೧೭॥ ಮಾಡು ಸಂಧಿಯನೆಮ್ಮವಚನಕೆ। ಕೂಡದಿರು ನಿಪಮಾತುಗಳ ನಿನ। ಗಾಡುವವರಿಗೆ ಚಿತ್ತಗೊಡದಿರು ಹಿಸುಣ ಹೊಗಿಸದಿರು ॥ ನಾಡನಾಲ್ಕೆಗಳೆಯರೆಂಬುದ । ಮಾಡದಿರು ಪಾಂಡವನ್ನ

ಪಾಲರ| ಕೊಡುವಾಳಿಕೆ ಪಥ್ಯಕೇಳೆಂದಸುರರಿಪು ನುಡಿದ ||೧೮|| ನೀತಿಗಾಲಯ ನಿಮ್ಮ ಕುಲವಿ| ಖ್ಯಾತವದು ನೆಲೆ ಸಕಲ ಸೌಖ್ಯ | ವ್ರಾತಕಿದು ಸಪ್ರಪಂಚವೆನಿಸಿತು ಕೌರವಾನ್ವಯವು || ಭೂತಳದಲೋಲುಪತೆಯೊಳು ಕುಲ | ಘಾತಕನು ನೀನೆಂಬಕೀರ್ತಿಗೆ | ಯೋತುನೆಲೆಯಾಗದಿರು ಬೇಡಿದೆವೆಂದು ಹರಿನುಡಿದ ||೧೯|| ಧರೆಯನ್ನೃಪರಿಗೆ ಹಸ್ತಿನಾಪುರ | ದರಮನೆಯ ಬಾಗಿಲಲಿ ಸಮಯವು | ದೊರೆಕಲಂತದು ಪುಣ್ಯವೆಂಬೀಸಾರ್ವಭೌಮರಿಗೆ || ಸಿರಿಗೆ ಪಾಂಡವರನ್ಯರಾದೊಡೆ | ಮೆರೆಯಲರಿವುದೆ ನಿಮ್ಮ ಸಿರಿಕಾ | ತರಿಗತನವನು ಮಾಣು ಕೇಳೆಂದಸುರರಿಪು ನುಡಿದ ||೨೦|| ಯಮಜನಿನಗೊಳ್ಳಿದನು ಪಾರ್ಥನ| ಮಮತೆ ನಿನ್ನಲಿ ಹಿರಿದು ಭೀಮನ| ತಮದನುಜ ಹಂಗಿದ್ದವು ನಕುಲನು ನಿನ್ನೊಳೆರಡರಿಯ|| ತಮತಮಗೆ ತಮ್ಮೈವರುಂ ನಿ | ನ್ನಮಲವಚನವಹಾರ ಹರುಷ | ಧೃತಿಮಿತತನವನು ಮಾಡದಿರು ಸೋದರರ ಸಲಹೆಂದ ||೨೧|| ಅವರಿಗಿಂದ್ರಪ್ರಸ್ಥಪುರದಾ | ಜ್ಯವನು ಕುಳಸಹಿತಿತ್ತು ನೀಪಾಂ | ಡವಪ್ರತಿಷ್ಠಾಚಾರ್ಯನೆಂಬೀಬಿರುದ ಧರಿಸಿದರೆ || ಅವನಿಯಲಿ ನಿನ್ನೊಡನೆ ತಲೆದೋ | ರುವ ನೃಪಾಲಕರಿಲ್ಲ ನುಡಿಗಳು | ಕಿವಿಗೆ ಕರ್ಕಶವೀಗಲಾದೊಡೆ ತುದಿಗೆ ಲೇಸೆಂದ ||೨೨|| ಧರ್ಮಜನ ಕಡುಮೋಹವೆಂಬುದು | ನಿಮ್ಮ ಚಿತ್ತದೊಳಿರಲಿ ಭೀಮನ| ಹಮ್ಮು ತಮ್ಮೊಳಗಿರಲಿ ಫಲುಗುಣನೊಲವದಂತಿರಲಿ || ನಮ್ಮ ಭೂಮಿಯೊಳೆರಡು ಬೇಡುವ | ರೆಮ್ಮ ಬಂಧುಗಳಲ್ಲ ಸಂಧಿಗೆ | ತಮ್ಮನೊಡಬಡನೆಂದು ದುಶ್ಶಾಸನನ ನೋಡಿದನು ||೨೩|| ಬಂಧುಕೃತ್ಯದ ಮಾತು ಸೂರ್ಯರಿಂ | ಗಂಧಕಾರವು ಸೇರುವುದೆ ನಿ | ರ್ಬಂಧದಲಿ ನೀವೇಕೆ ನುಡಿವಿರಿ ರಾಜಕಾರಿಯವ || ಸಂಧಿಯಾಗದು ಪಾಂಡವರ ಸಂ | ಬಂಧನಮಗೇಕೆನುತ ಕರುಣಾ | ಸಿಂಧುವಿನ ಮೊಗನೋಡಿ ದಶ್ಶಾಸನನು ಗರ್ಜಿಸಿದ ||೨೪|| ಕೆಡಿಸದಿರು ಧೃತರಾಷ್ಟ್ರಕುಲದಲಿ| ಕೊಡಲಿಯನು ನೀಹಿಡದು ವಂಶವ | ಕಡಿಸಿಕಳೆದೊಡೆ ಹಾನಿವೃದ್ಧಿಗಳೆಲ್ಲ ನಿನಗಹುದು || ನುಡಿಗೆ ಸನುಮತರಾಗಿ ತಾಕುಲ | ಗಡಿಯನಿವ ಮುಂದರಿಯನೀವಿಂ | ತೊಡಬಡಿಸಿ ಪಾಂಡವರ ಸಾಮ್ಯವನೀಸಿಕೊಡಿಯೆಂದ ||೨೫|| ಈಪರಿಯ ನುಡಿಗೇಳು ದೈವದ | ಮೋಹ ತಪ್ಪಿದ ಬಳಿಕ ಸುಭಟರ | ಸಾಹಸಿಕೆ ಹುರುಳಿಲ್ಲ ನೆಂಬದಿರೆಮ್ಮ ಬಲುಹುಗಳ || ಬಾಹಿರವ ನೀನಾಡದಿರು ವೈ | ದೇಹಿಯನು ಸೆರೆವೊಯ್ದ ಸ್ವಾಮಿ| ದ್ರೋಹಿಯನು ಹೋಲದಿರು ಕೌರವ ಯೆಂದನಾಭೀಷ್ಮ ||೨೬|| ನೆಲನ ಬೇಡುವಪಾಂಡವರ ಭುಜ | ಬಲದೊಳಗೆ ತುಂಡಿಲ್ಲ ನೀತಿಯ | ತಿಳುಹಲೈತಂದಸುರರಿಪು ಸಾಮಾನ್ಯಬಳನಲ್ಲ || ಇಳೆಯೊಳರ್ಧವನೊಪ್ಪುಗೊಡು ಯಮ | ಕುಲಲಲಾಮನ ನೇಮವನು ನೀ | ಸಲಿಸು ಕೆಡಿಸದಿರೀವಿಳಾಸವನೆಂದನಾದ್ರೋಣ ||೨೭|| ಹಲವು ಹೊಲ್ಲಹಗಳನು ಪಾಂಡವ | ರೊಳಗೆ ನೆನೆದೆನು ಮುಚ್ಚುಮರೆಯೇ | ನಿಳಯಲೋಭದ ಬಗೆಗೆ ನೆಗಳಿದೆ ರಾಜಕಾರಿಯವ || ನೆಲನ ಕೊಂಡೆನು ಜೂಜುಗಾರರ | ವಿಲಗದಲಿ ಪಾಂಡವರ್ಗೆ ಪುಸಲು | ಹಳುವವೇ ಶರ್ಣಿಸಲ್ಲಿಲ್ಲೆಲೆ ಕೃಷ್ಣ ಕೇಳೆಂದ ||೨೮|| ತಾಗುವೆಪಕೀರಿತಿಗೆ ಹೇಸುವ | ರಾಗಿ ಸತ್ಯವನುಳುಹಿ ಹಳುವವ | ನೋಗಿಸಿದೊಡದು ಕುಲಕೆ ಕುಂದೇ ಪಾಂಡುತನಯರಿಗೆ || ನೀಗಿದರು ವನವಾಸವನು ಸು | ಭಾಗದವನಿಯ ಕೊಂಬ ಛಲವನು | ಹೋಗಬಿಡುವನೆ ಭೀಮನೆಂದನು ನಗುತ ಮುರವೈರಿ ||೨೯|| ಕೊಡು ವೃಕಸ್ಥಳವನು ಕುಶಸ್ಥಳ | ವೊಡವಿಯಾವಂತಿಯನು ಕುಳದಲಿ | ಕೊಡಿಸಿ ಕಳೆ ಸಿರಿ ಕರಣದವರಲಿ ವಾರಣಾವತವ || ಕೊಡು ನಿನಗೆ ಮನಬಂದುದೊಂ

ದನು । ನಡಿಸಿಕೊಡುವೆನು ಪಾಂಡವರನೆವ। ಗಡೆಯುತನ ಬೇಡಿನ್ನು ಕೇಳೆಂದಸುರರಿಪು ನುಡಿದ॥೩೦॥ ಪರಮಪುರುಷನು ಕೃಷ್ಣರಾಯನು। ಕುರುಕುಲದ ಹಿರಿಯನು ನದೀಸುತ। ಪುರಮಥನಸಮಚಾಪವಿದ್ಯನು। ದ್ರೋಣನಪಬಂದ ॥ ಧರಣಿಪತಿ, ಬಲುಹುಳ್ಳವರು ನಿ । ನ್ನರಮನೆಯೊಳಂತೇ ವಿಚಾರಿಸು । ಮರುಳುತನ ಬೇಡವರನುಡಿಗೇಳೆಂದನಾವಿದುರ ॥೩೧॥ ಬೇಡಿದೊಂದೊಂದೂರು ನಮ್ಮಯ । ನಾಡ ತಲೆ ಮಂಡೆಗಳು ರಾಜ್ಯದ । ರೂಢಿಯೈದೂರುಗಳ ಬೆಳವಿಗೆ ಹಸ್ತಿನಾನಗರ ॥ ಜೋತಲಿಯನು ಮಾನನಿಧಿ ಕೊಂ । ಡಾಡಲೇತಕೆ ಧರೆಯನೀರಡಿ । ಮಾಡಿಕೊಂಡ ಮಹಾತ್ಮ ನಿನಗಂಜುವೆನು ನಾನೆಂದ ॥ ೩೨॥ ಕರೆದು ಮೂರಡಿನೆಲನ ಧಾರೆಯ । ನೆರೆದು ಬಲಿ ತಳಕಿಳಿದನನ್ನೀ । ಧರೆಯೊಳೈದೂರುಗಳನಿತ್ತನಗಾವಪದವಹುದು ॥ ಪರಮಪುರುಷನು ನೀನು ನಿನಗಾಂ। ಶರಣುಹೊಕ್ಕನು ಬಂದಪಥದಲಿ । ಮರಳಿ ಬಿಜಯಂಗೈವುದೆಂದನು ನಗುತ ಕುರುರಾಯ ॥೩೩॥ ಸಲಲಿ ನಿಜಪಾಂಡವರೊಳೆತ್ತಿದ । ಛಲವಬೆಳವಿಗೆಯು ಕಟ್ಟ ನಿಮ್ಮಯ। ಬಳಗ ಬದುಕಲಿ ಮತ್ತೆ ನವೆಯಲಿ ಧರ್ಮನಂದನನು ॥ ಜಲಧಿಸೀರೆಯ ಮಹಿಯೊಳೊಂದೇ। ಸ್ಥಳವನೈವರಿಗೀವುದೆನೆ ಕಳ । ವಳಿಸಿಯವಗಡಿಸಿದನು ಜಡಿದನು ದನುಜವೈರಿಯನು॥೩೪॥ ನೆಲನೊಳರ್ಧವನೀವುದಿಲ್ಲೀ। ಸ್ಥಳವನೈದನು ಮುನ್ನ ಕೊಡೆಯೆ। ನ್ನಿಳೆಯೊಳಿರಿಸಿ ಮುಟ್ಟಲೀಯೆನೆ ದೇಕೆಕೈವಾರ॥ ನೆಲನ ಕಡೆಯಲಿ ಮುಷ್ಟಿಮೂನಿಯ। ಚಟ್ಟಳಿಪ ಧರಣಿಯನಿತ್ತನಾದೊಡೆ। ಬಳಿಕ ನೀ ನಗುಹೋಗು ಕದನಕೆ ಕೊಂಡು ಬಾಯೆಂದ॥೩೫॥ ದನವ ಕಾದುದು ತೀರ್ದ ಬನ। ಬನಕೆ ತೊಳಲ್ವುದು ಕಡೆಯನೃದಿತೆ । ಮುನಿಗಳೊಳು ಭೋಳುಗಳನೆರಗಿಸಿಕೊಂಬುದದ ಬಿಸುಟು ॥ ವನಧಿಯನೆಯೆಡೆಗೊಂಡು ನಡುಹಾ । ವಿನಲಿ ಹಕ್ಕಯ ಬಿಸುಟು ನಮ್ಮೊಳು । ಮನಕತವ ನೀ ತಿಳುಹಲೋಸುಗ ಬಹರ ಹೇಳೆಂದ ॥೩೬॥ ಖತಿಯ ಹಿಡಿದನು ಶೌರಿಮಣಿಯದ । ಮತಗುಡದ ಘಣಿಕೇತನನು ಕಂ । ಡತುಲಬಲಗುರುಸಿಂಧುತನಯರಾಟಗಳ ಮೊಗನೋಡಿ ॥ ವ್ಯತಿಕರವನಿವಬಯಸಿ ಮಿಗೆ ಬೇ । ಡುತಲಿ ಕದನವ ನೆನೆವಭೂಪನ । ಸತಿಯ ಉಪಯೊಳಗೋಲೆಯುಸ್ಥಿರವರವೆ ತಾನೆಂದ ॥೩೭॥ ಕಡೆಗೆ ಧೃತರಾಷ್ಟ್ರವನೀಶನು । ಮಡದಿಸುತಲನಾಥನಾಗಿಯೆ । ಕೆಡುವನೆಂಬುದ ಬಲ್ಲೆ ನಾಪಾಂಡವರ ರಾಜ್ಯದಲಿ ॥ ಪಡೆಗೆ ಪವಮಾನಜನಸಮಯವ। ಹಡೆಯದಿಹ ತರುವಾಯಲೀತನು । ನಡಸಿಕೊಡುವನು ತಪ್ಪದೆಕಟಕಟೆಂದನಾವಿದುರ ॥೩೮॥ ಮನದ ಸಂಕೇತದಲಿ ದುರಿಯೋ । ಧನನ ಕಟ್ಟಲು ವಿದುರಗಂಗಾ । ತನಯಧೃತರಾಷ್ಟ್ರವನಿಪರಾಳೋಚಿಸಿದಹದನ॥ ಮನದೊಳರಿದನು ಬಳಿಕ ದುಶ್ಶಾ । ಸನನು ದುರಿಯೋಧನಗೆ ಮುನಿಬರ । ನೆನಹ ಬಿನ್ನಹಮಾಡಿದನು ಖಾತಿಯಲಿ ಕಳವಳಿಸಿ ॥೩೯॥ ಹೆತ್ತವರು ಮರೆಳಿದರು ನಾವಿ । ನ್ನೆತ್ತ ತಿರುಗುವೆವಣ್ಣದೇವರೆ । ಚಿತ್ತವಿಸಿದಿರೆ ರಾಜಕಾರ್ಯದಹದ ವಿಸಂಚಿಸಿತು ॥ ಮುತ್ತಯನ ಕಿರಿಯಯ್ಯನಯ್ಯನ । ಚಿತ್ತಕೊಂಕಿತು ಸಾಕು ನಿಂದೆಗೆ । ನುತ್ತಲಗ್ರಜ ಸಹಿತಲೋಲಗದಿಂದ ಹೊರವಂಟ ॥೪೦॥ ಮುನಿದು ದುರಿಯೋಧನನು ದುಶ್ಶಾ । ಸನನು ಕೆಲದರಮನೆಯೊಳಾಳೋ । ಚನೆಯ ಮಾಡಿದರೆಂದು ಸೌಬಲಕರ್ಣರೊಡಗೂಡಿ ॥ ದನುಜವೈರಿ ಕುಮಂತ್ರದಲಿ ಬೊ। ಪ್ಪನೊಳು ಖಾತಿಯನಿಕ್ಕಿದನು ಕೈ । ಮನದ ಕಲಿಗಳು ಕಟ್ಟ ಕೃಷ್ಣನನೆಂದು ಗಜಬಜಿಸೆ ॥೪೧॥ ಎರಡು ಬಲವನು ಮಸೆದು ಕೊಳಿಸುವ । ಭರವು ಯಾದವನದು ನಿಧಾನಿಸ । ಲರಿ ನಮಗೆ ಮುರವೈರಿಯಲ್ಲದೆ

ಪಾಂಡುಸಂಭವರ || ತರುಸಿ ಘುಂನೇಣುಗಳನೀತನ | ಕರವೆರಡನೊಡೆಬಿಗಿದೊತವದಿರು | ಕರಳಿ ಮಾ
ದುವುದಾಪ್ಪೆಂದನು ಕೌರವರರಾಯ||೪೨|| ಗಾಳಿಯುಪಶಮಿಸಿದೊಡೆವಹ್ನಿ ಜ್ವಾಲೆ ತಾನೇ ನಿಲುವುದೇ
ತನ| ತೋಳಬಿಗಿದೊಡೆ ಬಳಿಕ ಮಾಸಗುಂದುವರು ಪಾಂಡವರು|| ಮೇಳವಿಸಿ ನೇಣುಗಳನೆನುತ ನೃ| ಪಾಲ
ನೆವಟದು ಗಜಬಜಿಸುವುದ| ಸೋಲಿಸುತ ಸಾತ್ಯಕಿಯೊಡನೆ ಕೃತವರ್ಮನೆರುಹಿದನು||೪೩|| ಆಳುಕುದುರೆಯು
ಬಾಗಿಲಿಗೆ ಬರ | ಹೇಳು ಕೈದುವ ಕೊಂಡು ವೀರಭ | ಟಾಳಿ ಹತ್ತಿರೆ ನಿಲಲಿ ಕೃಪೇಸಿದರ ಕಪಿಕಪಿದು||
ಬೀಳಬಡಿವುದು ಹೊಕ್ಕುಗಂಡನ | ಮೇಲೆ ಗಂಡನು ಕಡಿದು ಕುರುಭೂ | ಪಾಲಕನ ನೂರನತ್ತರಲಿ
ಸಾದುವುದು ಮೇದಿನಿಯು ||೪೪|| ಎಂದು ಸುಭಟರಿಗರುಹಿ ಸಾತ್ಯಕಿ | ಬಂದು ಕೃಷ್ಣನ ಕಿವಿಯ ಹತ್ತಿ
ರೆ | ನಿಂದು ವದನವ ಚಾಚಿ ಬಿನ್ನಹಮಾಡಿದನು ನಗುತ || ಮಂದಮತಿಗಳು ತಪ್ಪಿದರು ಮನ | ಗುಂ
ದಲಾಗದು ಜೀಯ ಚಿತ್ತ | ಕೆಂದೊಡಸುರಾರಾತಿ ನಗುತವೆ ಭೀಷ್ಮಗಿಂತೆಂದ ||೪೫|| ಪರಣತಪಾರ್ಥಿ
ಗಳಿಗಂತಃ | ಕರಣನನವುದು ಸುಜನಂಗ ನಿ | ಷ್ಠುರತೆಗಲ್ಲದೆ ಮನವನೀಯರು ಮಹಿಯಮೂಢಜನ ||
ಕರಗುವದು ಶಿಶಿರಾಂತ ಚಂದ್ರನ | ಕಿರಣ ತಾಗಲು ವಜ್ರಹತಿಗ | ಬ್ಬರಿಸಿದಲ್ಲದೆ ಗಿರಿಗಳೊಡೆಯುವು
ಭೀಷ್ಮಕೇಳೆಂದ ||೪೬|| ದೂತರನು ಕಟ್ಟುವುದು ರಾಯರ | ಗೇತರುಚಿತವು ನಮ್ಮ ಕಟ್ಟಲು | ಕಾತರ
ಸುತದ ನಿಮ್ಮ ಪೂರ್ವ್ಮದಿರನು ನೀ ಕರಸ || ಮಾತನಾಡಿಸಿ ನೋಡು ನಮಗೇ | ಭೀತಿ ತಾನಿಲ್ಲನಲು
ಗಂಗಾ | ಜಾತ ಧೃತರಾಷ್ಟ್ರಂಗೆ ನುಡಿದನು ಕೌರವನ ಹದನ ||೪೭|| ಅವನಿಪತಿ ಕೇಳಿದನು ಆಗಳೆ |
ಶಿವಶಿವೆಂದನು ವಿದುರ ಕರೆ ಕೌ | ರವನ ಮಗನೇ ಮೃತ್ಯುವಲ್ಲಾ ಭರತಸಂತತಿಗ || ಅವಳ ಬರಹೇಳಿ
ತ್ತ ಮಗನಾ | ಟವನು ನೋಡಲಿ ಹೆತ್ತಮೋಹದ | ಹವಣುಗಳ ಬೆಸಗೊಂಬಗಾಂಧಾರಿಯನು ಕರ
ಯೆಂದ ||೪೮|| ಜನಪನಾಜ್ಞೆಯು ಮೇಲೆ ದುರಿಯೋ | ಧನನ ತಂದರು ಸಭೆಗೆ ಮತ್ತೀ | ವನಜಮು
ಖಿಗಿದನೆಂದೊಡಾಗಾಂಧಾರನಡತಂದು || ದನುಜವೈರಿಯ ಕಟ್ಟುವೈ ಕೃ | ಷ್ಣನನು ಬಿಗಿವೈ ಧಟ್ಟಮ
ಗಹೆ | ತ್ತೆನಗೆ ಹರುಷವನಿತ್ತ ಯೆಂದಳು ಮುಳಿದು ಗಾಂಧಾರಿ ||೪೯|| ನಟ್ಟನಲೆಧೃತರಾಷ್ಟ್ರನೃ
ಪ ನೀ | ನಿಟ್ಟುಕಚ್ಚಿದು ಪಾಪಿಮಗನನು | ಹುಟ್ಟದಂದೇ ಬಿಸುಡದಾದವು ಬಾಳುಗೇಡಿಯನು || ಕ
ಟ್ಟುವನುಗಡ ಕೃಷ್ಣನನು ಮೈ | ಮುಟ್ಟುವನುಗಡ ಗಗನವನು ಬಲು | ಧಿಟ್ಟತನ ತಾನೀನು ಪೇಳು
ವೆನೆಂದಳಿಂದುಮುಖಿ ||೫೦|| ಮರುಳಮಗನೇ ಕೃಷ್ಣರಾಯನ | ಕೆರಳಿಚುವರೇ ಯಾದವರು ನಮ |
ಗೆರವಿಗರೆ ವಸುದೇವನಲಿ ತಾ ಭೇದವೇ ನಿನಗೆ || ದುರುಳುತನವಿದು ಬೇಡ ಖುಲ್ಲರ | ನೆರವಿಯೊಳಗಾ
ಡಿದೊಡೆ ತಪ್ಪದು | ನರಕವೆಂದನು ಕುರುಪತಿಗೆ ಧೃತರಾಷ್ಟ್ರಭೂಪಾಲ ||೫೧|| ಎಲೆಮರುಳೆ ಧೃತರಾ
ಷ್ಟ್ರ ನಂದನ | ಬಳಗವೀತನ ಬಂಧುಕೃತ್ಯದ | ಬಳಕೆಯಲಿ ನೀ ನಿನ್ನ ಕಂದನ ಬೇಡಿಕೊಳಲೇಕೈ ||
ಮುಳಿದು ಬಗುಳುವನಾಯಿ ಚಂದ್ರಮ | ನಳುಕುವನೆ ನರಿಯೊರಲಿದೊಡಕಳ | ವಳವಹುದೆ ಸಿಂಹ
ಕ್ಕೆಯೆಂದನು ಖಾತಿಯಲಿ ವಿದುರ ||೫೨|| ನೂರಜು ಪೊಕ್ಕೊಡೆ ಕಲಕುವುದೆ ಸಾ | ಗರದಜಲ ನೊಣ
ವೆರಗಿದೊಡೆ ಕುಲ| ಗಿರಿಗಳಲ್ಲಾಡುವವೆ ಕೇಳ್ ಧೃತರಾಷ್ಟ್ರಭೂಪತಿಯೆ || ತೆರಳಲರಿವನ ಕೊಬ್ಬಿದೊ
ಳ್ಳೆಯ | ಮರಿಗೆ ಗರುಡನು ನಿನ್ನಮಕ್ಕಳ | ದುರುಳುತನಕಂಜುವನೆ ಮುರರಿಪುವೆಂದನಾವಿದುರ
||೫೩|| ಲೋಕಮೈಮರೆವಂದು ಜಲಧಿಗ | ಳಾಕಿ ಹಳಚುವಹೊತ್ತು ತಾನಿಹ | ನೇಕಮೇವಾದ್ವಿತಿಯ

ಗಳು ॥ ಸಮತೆಯುಲಿ ನೀ ನೋಡು ಶರಣರ । ಮಮತೆ ಬೇಹುದು ಜೀಯ ಲಕ್ಷ್ಮೀ । ರಮಣ ಕೃಪೆ ಮಾಡೆನುತ ವೈಯಿಕ್ಕಿದಳು ಗಾಂಧಾರಿ ॥೬೬॥ ಮಾನ ನಿನ್ನದು ಭಕತಜನದಪ । ಮಾನ ನಿನ್ನದು ನಿನ್ನ ಶರಣರ । ಹಾನಿವೃದ್ಧಿಗಳೆಲ್ಲ ನಿನ್ನದು ಬೇರೆಗತಿಯುಂಟೆ ॥ ಆನತರ ತೇಜೋಭಿಮಾನವ । ನೀನೊಲಿದು ಸಲಹೆಂದು ಮುದದಲಿ । ಭಾನುಮತಿ ವೈಯಿಕ್ಕಿದಳು ಮುರಹರನ ಚರಣದಲಿ ॥ ಕಂಗಳನು ಕರುಣಿಸಿದನೆಂಧನ್ನ । ಪಂಗೆ ಬಳಿಕೀ ಕೃಷ್ಣರಾಯನ । ಮಂಗಳತ್ರೀಮೂರ್ತಿಯನು ಮನತಣಿಯೆ ತಾ ನೋಡಿ ॥ ಕಂಗಳೆಡಗಲಿ ದೇವ ನಿಮ್ಮಾ । ಯಂಗವಟ್ಟವ ಕಂಡಬಳಿಕೀ । ಕಂಗಳಿತರವ ಕಾಣಲಾಗದು ಕೃಪೆಯ ಮಾಡೆಂದ ॥೬೮॥ ತಾತ ಹೆದರದಿರೀಮುಕುಂದನ ಕೈ । ತವಕ ಬೆಚ್ಚದಿರು ಸಂಧಿಯ । ಮಾತು ತಾನಿದು ಹೃದಯವೇ ಬೆಸಗೊಳ್ಳಿ ಮುರಹರನ॥ ಈತನಂತರ್ಯಾಮಿಜೀವ । ವ್ರಾತದಲಿ ಜನಜನಿತವೀಜಗ। ವೀತಸಾಚ್ಛ್ವಯೊಳೊಲೆವುದೆಂದನು ಕೌರವರರಾಯ॥೬೯॥ ಸಂಗಿಯೆನಿಸನು ಜಗವ ಹುಟ್ಟಿಸಿ।ನುಂಗಿದೊಡೆ ನಿಷ್ಕರುಣಿಯೆನಿಸನು। ಅಂಗರಕ್ಷೆಯ ಮಾಡಿ ಮೋಹಿತನಲ್ಲ ಮೂಜಗಕೆ॥ ಜಂಗಮಸ್ಥಾವರಕೆ ಚೈತ। ನ್ಯಾಂಗರಕ್ಷನು ಘನಕೆ ಘನವಣು। ವಿಂಗೆ ತಾನಣುವೆನಿಪಪರತರವಸ್ತು ನೋಡೀತ॥೭೦॥ ಎನ್ನ ಹೃದಯದೊಳಿರ್ದ ಮುಂವನು। ಗನ್ನದಲಿ ಸಂಧಿಯನು ಬಪುಗಳೊ। ಳಿನ್ನುತಾ ತನ್ನವರೊಳಿರ್ದಾನು ಡಿವನೀಹದನ॥ ಘನ್ನನಂತಿರೆ ತೋಂಭಸ್ಸಾ। ಭಿನ್ನನಂತಿರವೆುರವ ತಿಳಿಲು। ಭಿನ್ನನ್ಯೆ ಮುರವೈರಿ ಸಾವಿನ್ನಂಜಲೇಕೆಂದ॥೭೧॥ ಹಳಚುವುವು ಹಾಹೆಗಳು ಸೂತ್ರವ । ನೆಲುಗಿದೊಡೆ ತತ್ಪುಣ್ಯಪಾಪಾ। ವಳಿಗಳಾ ಹಾಹೆಗಳಿಗೊಂದೇ ಸೂತ್ರಧರನಿರಲು॥ ಕೊಲುವನೆನ್ಯರನ್ಯರಿಂದವೆ । ಕೊಲಿಸುವನು ಕಮಲಾಕ್ಷನಲ್ಲದೆ ಉಳಿದಜೀವವ್ರಾತಕೀಸ್ವಾತಂತ್ರ್ಯವಿಲ್ಲೆಂದ ॥೭೨॥ ಇಳಿದನವನಿಗೆ ಧಾರುಣಿಯ ಹೊರೆ। ಗಳೆಯಲೋಸುಗವಿಲ್ಲಿ ನಮ್ಮೊಳ। ಗೊಳಗೆ ವೈರವಬಿತ್ತಿ ಬರಕೈವನು ಮಹಾಬಲವ॥ ಛಲಕೆ ಮಣಿಯದೆ ರಾವಣಾದಿಗ। ಳಳಿದಬಳಲಾ ಕೀರ್ತಿಕಾಯುವಿ । ದಳಿವುದೆಗ್ಗದಕೀರ್ತಿಯುಳಿದಿರಲಂಜಲೇಕೆಂದ ॥೭೩॥ ನಾವು ಸಂಧಿಯನೊಮಿವೆವೆಮ್ಮಯ । ಭಾವದಲಿ ಹುಳುಕಿಲ್ಲ ಸಂಪ್ರತಿ । ದೇವನಭಿಮತವಲ್ಲ ಬಲ್ಲೆನು ಮುರಹರನ ಬರವ ॥ ನೀವು ಮೇಗರೆಯುಂತದವರೇ । ರಾವಣಾಂಯ ಬಗೆಯ ಬಲ್ಲೆನು। ಸಾವೆನೀತನ ಕೈಯಬಾಯಲಿ ಭೀತಿ ಬೇಡೆಂದ ॥೭೪॥ ಮಣಿದು ಬದುಕುವನಲ್ಲ ಹಗೆಯುಲಿ। ಸೆಣಸಿ ಬಿಡುವವನಲ್ಲ ದಿಟಧಾ। ರಿಣಿಯ ಸಿರಿಗೆಳುವವನಲ್ಲಳುಕಿಲ್ಲ ಕಾಯದಲಿ ॥ ರಣಮಹೋತ್ಸವವೆಮ್ಮಮತ ಕೈ । ದಣಿಯೆ ಹೊಯ್ದಾಡುವೆನು ಕೃಷ್ಣನ । ಕೆಣಕಿದಲ್ಲದೆ ಪಹಿಲದಲಿ ಕೈವಲ್ಯವಿಲ್ಲೆಂದ ॥೭೫॥ ಎನಲು ನಸುನಗುತಸುರರಿಪುಮು । ನ್ನಿನಸ್ವರೂಪಾಕಾರವನು ಮಗು । ಳೆನುಕರಿಸಿ ಧೃತರಾಷ್ಟ್ರಭೀಷ್ಮರಿಗೆಂದನೀಹದನ ॥ ಘನಸುಯೋಧನಪಾಂಡುವಿನನಂ । ದನರೊಳಾದವಿವಾದ ನಮಗೇ । ಕೆನುತ ರಾಜಾಲಯವನಸುರಧ್ವಂಸಿ ಹೊರವಂಟ ॥೭೬॥ ಬಂದು ವಿದುರನ ಮನೆಗೆ ದೇವಮು । ಕುಂದ ಕುಂತಿಯ ಕರೆದು ನಿನ್ನಯ। ಕಂದನೈವರಮೇಲೆ ಕೌರವನೃಪರ ಖತಿ ಹಿರಿದು ॥ ಇಂದು ಮುರಿದುದು ಸಂಧಿ ನಿನ್ನಯ । ಕಂದಕರ್ಣನ ಬೇಡಿಕೊಳು ನೀ । ನೆಂದು ನೇಮಿಸಿ ಮರಳಿದನು ಮುರವೈರಿ ಹರುಷದಲಿ ॥ ವಿದುರಭಾರದ್ವಾಜಗೌತಮ । ನದಿಯಮಗಧೃತರಾಷ್ಟ್ರಸಾತನ । ಸುದತಿಕರ್ಣವಿಕರ್ಣಶಲ್ಯಸುಬಾಹುಗುರುಸುತರು ॥ ವದನದುತ್ಸವ ವಡಗಿ ಕೃಷ್ಣನ । ಪದವನೋಲೈಸುತ್ತಬರೆ ಕರು। ಣದಲಿ ಮುರಹರನವರನುಚಿತೋಕ್ತಿಯ

ಲಿ ಬೀಳ್ಕೊಟ್ಟ ॥೭೯॥ ನಯದೊಳೇಕಾಂತದಲಿ ಸಲೆ ತೋ । ರಿಯೆ ನುಡಿವುದವೆಸಾಸೆಯನು ನೀವ್ । ಬಯಸಲಾಗದು ಹಿತವನೇ ಮಾಡುವುದು ಕುರುಕುಲಕೆ॥ ನಿಯತವಿದು ಪಾಂಡವರೊಡನೆ ಸಂ । ಧಿಯೆ ಸದರ ಸಮರಂಗವೀಯ । ಸ್ವಯುಕೆ ನಿರ್ಣಯವೆಂದು ನೀವಾತಂಗೆ ಹೇಳುವುದು ॥೭೯॥ ಎಂದುಗಾಂಗೇಯಾದಿಗಳನರ । ವಿಂದನಾಭನು ಬೀಳುಕೊಟ್ಟನು । ನಿಂದನಾರವಿಸುತನ ಕರೆದನು ರಥದ ಹೊರೆಗಾಗಿ ॥ ಬಂದು ಕಿರಿದೆಡೆಗಾಗಿ ಕಳುಹುವು । ದೆಂದು ನೇಮಿಸಿ ಬಳಿಕ ತಾಪಸ । ವೃಂದವನು ಕಾರುಣ್ಯನಿಧಿ ಕಳುಹಿದ ತಪೋವನಕೆ ... ... ॥೮೦॥

ಅಂತು ಸಂಧಿ ೯ ಕ್ಕೆ ಪದ ೫೮೭ಕ್ಕಂ ಮಂಗಳಮಸ್ತು.



ಹತ್ತನೆಯ ಸಂಧಿ.

ಸೂಚನೆ ॥ ಸೆಣಸುವದಟರಗಂಡ ಸಮರಾಂ । ಗಣಕತುಲಭೇರುಂಡನಾವಿನ । ಮಣಿಯಮಗನುದ್ದಂಡಕರ್ಣನ ಕಂಡಳಾಕುಂತಿ ॥

ಪದ ॥ ಒಲಿದವರನುಜ್ಜೀವಿಸುವಬಗೆ । ಬಲುಹು ಮುರಮಥನಂಗೆ ಮುನಿದರ । ತಲೆಯ ಬರಹವ ತೊಡೆವನಲ್ಲದೆ ಬಳಿಕ ಸ್ಥಿರಸನು ॥ ನಳಿನನಾಭನು ಭಜಕರಿಗೆ ಬೆಂ । ಬಳಿಯ ಬಿರುದನು ಭೇದದಲಿ ಕುರು । ಕುಲವ ಕೊಂದನು ಕೇಳು ಜನಮೇಜಯಮಹೀಪಾಲ ॥೧॥ ಇನತನೂಜನಕೂಡೆ ಮೈದುನ । ತನದ ಸರಸವನೆಸಗಿ ರಥದೊಳು । ದನುಜರಿಪುಬರಸೆಳೆದು ಕುಳ್ಳಿರಿಸಿದನು ಪ್ರೀತದಲಿ ॥ ಎನಗೆ ನಿಮ್ಮಡಿಗಳಲಿ ಸಮಸೇ । ವನೆಯೆ ದೇವ ಮುರಾರಿಯಂಜಪೆ । ನೆನಲು ತೊಡೆಸೋಂಕಿನಲಿ ಸಾರಿದು ಶೌರಿಯಿಂತೆಂದ ॥೨॥ ಭೇದವಿಲ್ಲೆಲೆಕರ್ಣ ನಿರ್ಮಳ । ಯಾದವರು ಕೌರವರೊಳಗೆ ಸಂಪಾದಿಸಿದೊಡನ್ವಯದ ಮೊದಲೆರಡಿಲ್ಲ ನಿನ್ನಾಣೆ ॥ ಮೇದಿನೀಪತಿನೀನು ಚಿತ್ತದೊ । ಳಾದುದರಿಪಿಲ್ಲೆನುತ ದಾನವ । ಸೂದನನು ರವಿಸುತಗೆ ಕಿವಿಯಲಿ ಬಿತ್ತಿದನು ಭಯವ ॥೩॥ ದಾನವಾಂತಕ ಬೆಸಸು ವಂಶವಿ । ಹೀನನನು ನಿಮ್ಮಡಿಗಳೊಡನೆ ಸ । ಮಾನಿಸುವರೇ ನಾಕನುತ ರವಿಸೂನು ಕೈಮುಗಿದು ॥ ಮಾನನಿಧಿ ನಿನ್ನಾಣೆ ಬಾರೈ । ನೀನು ನಮ್ಮೆಲ್ಲರ ಹವಣೆ ವರ । ಭಾನುವಂಶಲಲಾಮ ನೀ ರಾಮಂಗೆ ಸರಿಯೆಂದ ॥೪॥ ಕಳೆದುಕೊಂಡನು ವೀಳೆಯವನಂ । ಜುಳಿಯಲಾತಂಗಿತ್ತು ಕರ್ಣನ । ಕೆಲಕೆ ಬರಸೆಳೆದವನ ಕರದೊಳು ಕರತಳವನಿಕ್ಕಿ ॥ ಎಲೆದಿವಾಕರತನಯ ವಿನ್ನಯ । ಕುಲವನರಿಯೆಯಲಾ ಸುಯೋಧನ । ನಲಿ ವೃಥಾಸೇವಕತನದಲಿಹುದುಚಿತವಲ್ಲೆಂದ ॥೫॥ ಲಲನೆ ಪಡೆದೀಯೈದುಮಂತ್ರಂ । ಗಳಲಿ ಮೊದಲಲಿ ನಿನ್ನನಂತರ । ದಲಿ ಯುಧಿಷ್ಠಿರದೇವ ಮೂರನೆಯಾತ ಕಲಿಭೀಮ ॥ ಫಲುಗುಣನು ನಾಲ್ಕನೆಯಲೈದನೆ । ಯಲಿ ನಕುಲಸಹದೇವರಾದರು । ಬಳಿಕಮಾದ್ರಿಯಲೊಂದುಮಂತ್ರದೊಳಿಬ್ಬರುದಿಸಿದರು ॥೬॥ ಅದರನಾಪಾಂಡವರಲೈವರ । ಮೊದಲಿಗನು ನೀನಿರಲು ಧರಣಿಯ । ಕದನಪಿತ್ಥಂಡಕ್ಕೆ ಕಾಮಿತವಲ್ಲ ನೀನಿರಲು ॥ ಇ

ದು ನಿಧಾನವು ಕರ್ಣ ನಿನ್ನ । ಭಯ್ಯದಯುವನೆ ಬಯಸುವೆನು ನಿನ್ನಯ । ಪದಕೆ ಕೆಡಹುವೆನೈವರನು ನ
ಡೆ ತನ್ನಸಂಗಾತ ॥೭॥ ನಿನಗೆ ಹಸ್ತಿನಪುರದ ರಾಜ್ಯದ । ಘನತೆಯನು ಮಾಡುವೆನು ಪಾಂಡವ। ಜನ
ಪಕೌರವಜನಪರೋಲೈಸುವರು ಗದ್ದುಗೆಯ ॥ ನಿನಗೆ ಕಿಂಕರವೆರಡುಸ್ತೋತ್ರಿ । ಯೆನಿಸಲೊಲ್ಲದೆ ನೀನು
ದುರಿಯೋ । ಧನನ ಬಾಯ್ದಂಬುಲಕೆ ಕೈಯಾನುವರೆ ಹೇಳೆಂದ ॥೮॥ ಎಡದವ್ವೆಯಲಿ ಕೌರವೇಂ
ದ್ರರ । ಗಡಣ ಬಲದಲಿ ಪಾಂಡುತನಯರ। ಗಡಣವಿದಿರಲಿ ಮಾದ್ರವಾಗದಯಾದವಾದಿಗಳು ॥ ನಡು
ವೆ ನೀನೋಲಗದೊಳೊಪ್ಪುವ । ಕಡುವಿಳಾಸವ ಬಿಸುಟು ಕುರುಪತಿ । ನುಡಿಸೆ ಜೀಯಹಸಾದವೆಂಬು
ದು ಕಷ್ಟ ನಿನಗೆಂದ ॥೯॥ ಶೌರಿಯುವಲಿದಿರಿಲ್ಲ ಕುಲದಲಿ । ಸೂರಿಯನ ಮಗನೊಡನೆಹುಟ್ಟಿದ। ವೀ
ರರೈವರು ಪಾಂಡುತನಯರು ನಿನ್ನ ವೈಭವಕೆ ॥ ಆರು ಸರಿಯೈ ಕರ್ಣ ನಡೆನಡೆ । ಧಾರಿಣೀಪತಿಯಾ
ಗು ನೀನಿರೆ । ವೈರಪಿತ್ರಂಡಕ್ಕೆ ಬಳಿಕಿಲ್ಲೆಂದನಸುರಾರಿ ॥೧೦॥ ಕೊರಳಸೆಲೆಹಿಗ್ಗಿದುವು ದೃಗುಜಲ । ವು
ರವಣಿಸಿ ಕಡುನೊಂದನೆಕಟಾ । ಕುರುಪತಿಗೆ ಕೇಡಾದುದೆಂದನು ತನ್ನ ಮನದೊಳಗೆ ॥ ಹರಿಯು ಹಗೆ
ಪೊಗೆದೋರದುರುಹದೆ । ಬರಿದೆ ಹೋದುದೆ ತನ್ನ ವಂಶವ । ನರುಹಿ ಕೊಂದನು ಹಲವುಮಾತೇನೆಂದು
ಚಿಂತಿಸಿದ ॥೧೧॥ ಕಾದಿ ಕೊಲುವೊಡೆ ಪಾಂಡುಸುತರು ಸ । ಹೋದರರು ಕೊಲಲಿಲ್ಲಕೊಲ್ಲದೆ । ಕಾದೆ
ನಾದೊಡೆಕೌರವಂಗೆವನಿಯಲಿ ಹೊಗಲಿಲ್ಲ ॥ ಭೇದದಲಿ ಹೊಕ್ಕಿರಿದನೋ ಮಧು। ಸೂದನಕಟಕಟೆನುತ
ಘನಚಿಂ । ತೋದಧಿಯಲದ್ದವೊಲು ಮೌನದೊಳಿದ್ದನಾಕರ್ಣ ॥೧೨॥ ಏನುಪೇಳ್ಕೆ ಕರ್ಣ ಚಿತ್ತ ।
ಗ್ಲಾನಿಯಾವುದು ಮನಕೆ ಕುಂತೀ । ಸೂನುಗಳ ಬೆಸಕೈಸಿಕೊಂಬುದು ಸೇರದೇ ನಿನಗೆ ॥ ಹಾನಿಯಿಲ್ಲೆ
ನ್ನಾಣೆ ನುಡಿನುಡಿ । ಮೌನವೇತಕೆ ಮರುಳುತನ ಬೇ। ಡಾನು ನಿನ್ನ ಪದೆಸೆಯ ಬಯಸುವನಲ್ಲ ಕೇಳೆಂದ
॥೧೩॥ ಮರುಳುಮಾಡುವಮಹಿಯರಾಜ್ಯದ । ಸಿರಿಗೆ ಸೋಲುವನಲ್ಲ ಕೌಂತೇ । ಯರು ಸುಯೋಧನ
ರೆನಗೆ ಬೆಸಕೈವಲ್ಲಿ ಮನವಿಲ್ಲ ॥ ಹೊರೆದಪಾತ್ರಾರಂಗೆ ಹಗೆವರ । ಶಿರವನಾದೊಪ್ಪಿಸುವೆನೆಂಬೀ । ಭರ
ದೊಳಿರ್ದನು ಕೌರವೇಂದ್ರನ ಕೊಂದೆ ನೀನೆಂದ ॥೧೪॥ ಒಡನೆ ಹುಟ್ಟಿದೆನೆಂಬಕಥನವ । ನೆಡೆಗುಡದೆ
ಬಣ್ಣಿಸಿದೆ ವಿಜಯನ । ನೆಗಡುಬಾಣಕೆ ಬಲಿಯನಿಕ್ಕುವಹದನ ಮಾಡಿಸಿದೆ ॥ ನುಡಿದು ಫಲವೇನಿನ್ನು
ಕೇಳೆ ನ್ನೊಡೆಯನಾದಂತಹೆನು ಬಾಣನು । ಪೊಡವಿಯಲಿ ನೀ ಹರಹಿಕೊಳು ನಿನ್ನವರ ನಿಲಿಸೆಂದ
॥೧೫॥ ವೀರಕೌರವರಾಯನೇ ವಾ । ದಾರಹಾತನ ಹಗೆಯೆ ಹಗೆ ಕೈ । ವಾರವೇ ಕೈವಾರವಾದಂತಹೆ
ನು ಕುರುನೃಪತಿ ॥ ಶೌರಿ ಕೇಳೈ ನಾಳೆ ಸಮರದ । ಸಾರದಲಿ ತೋರುವೆನು ನಿಜಭುಜ । ವಾರತೆಯ
ಸಂಪನ್ನತನವನು ಪಾಂಡುತನಯರಲಿ ॥೧೬॥ ಪಲವುಮಾತೇನಖಿಳಜನಕೆ । ನ್ನಳಿವು ಸೊಗಸದು ಕೌ
ರವೇಶ್ವರ । ನೊಲುಮೆ ತಪ್ಪಿಸಿ ಭುವನದೊಳಗೆನಗಾಪ್ತಜನವಿಲ್ಲ ॥ ಸಲಹಿದನು ಮನ್ನಣೆಯೆಯೆನ
ಗ । ಗ್ಗಳಿಕೆಯಲ್ಲದೆ ಹೀನವೃತ್ತಿಯ । ಬಳಸಿ ನಡಸೆನು ಕೌರವೇಂದ್ರನನೆಂತು ಮರೆದಪೆನೋ ॥೧೭॥
ಕೋಡಿ ತಣಿಯನು ಬಿರುದ ಹೊಗಳಿಸಿ । ಮಾಡಿ ತಣಿಯನು ನಿಚ್ಚಲುಚಿತವ । ಮಾಡಿ ತಣಿಯನು
ಮಾನನಿಧಿಯನದೆಂತು ಮರೆವಪೆನು ॥ ಕಾತಲಾಗನು ಕೃಷ್ಣ ಖಾತಿಯ। ಮಾಡಲಾಗದುಬಂದೆನಾದೊ
ಡೆ । ರೊಷಿ ಪಿಚ್ಚದು ಕೌರವನ ಪಗೆ ... ತನಗೆಂದ ॥೧೮॥ ಅರು ... ಬಂಬಲು ।
ಗರುಳು ಚರುವಿನಯೆಲುವಿನೊಟ್ಟಿಲ । ಬೆರಳಸಮಿಧೆಯನಡಗನಹಿತಾಮತಿಯರಚನೆಯಲಿ ॥ ಸಿರಕಪಾ

ಲದಪಾತ್ರೆಗಳ ತಿಲ । ದೊರಳೆಗಳ ಕೇಶೌಘವಧರ್ಭಾ೦ । ಕುರವಲಾಹವಯಜ್ಞಾದೀಕ್ಷಿತನಹೆನು ತಾನೆಂದ ॥೧೯॥ ವರಾ೦ಗೌತ್ರವಾಯುಸ್ತ ನಾಳೀ । ಭಾರತವು ಚತುರಂಗಬಲದಲಿ । ಕೌರವರಾಣ ಹಿಂಗೆ ರಣ ದಲಿ ಸುಭಟಕೋಟಿಯನು ॥ ತೀರಿಸಿಯೆ ಪತಿಯುವಸರಕ್ಕೆ ಶ । ರೀರವನು ನೂಕುಸಿಸ್ವ ನಿನ್ನಯ । ವೀ ರಸ್ವೈವರ ಸೋಯಿಸೆನು ರಾಜೀವಸಖಸಾಣೆ ॥೨೦॥ ಎನಲು ಕರ್ಣನ ದೃಢವ ಕಂಡನು । ಮನದೊಳು ತ್ಸಾಹಿಸಿದನಾದೊಡೆ । ತನಯಸ್ವೈವರ ಪದನು ನಿನ್ನದು ಬಲುಹ ಮಾಡುವೊಡೆ ॥ ಮನಕೆ ಖತಿಯಹು ವರುಹದಿರ್ದೊಡೆ । ತನಗೆ ಗುಣವಲ್ಲೆಂಬಕಾರಣ । ವಿನಿತನೊಡ್ಡೈಸಿದೆನು ನೀ ಸುಖಿಯಾಗು ಹೋ ಗೆಂದ ॥೨೧॥ ಬಂದೊಡೊಳ್ಳಿತು ಬಾರದಿದ್ದೊಡೆ । ಕಂದ ಕೇಳ್ಮೈ ಮಧುರವಚನು । ಮಂದಮತಿಯ ನು ತಿಳಿಹಿ ತಮ್ಮಂದಿರಿಗೆ ರಾಜ್ಯವನು ॥ ಇಂದು ಕೊಡಿಸುವದುಚಿತ ಸಂಪ್ರತಿ । ಗೆಂದು ಸೇರಿಸು ನಿನ್ನ ಮಾತನು । ಒಂದುಗಳೆಯನು ಕೌರವೇಶ್ವರನೆಂದನಸುರಾರಿ ॥೨೨॥ ಮಸೆದುಟಿತ್ತಂಪದಲಿ ಮತ್ಸರ । ಸಸಿತ ತಾನೀಗನೀತಿಯ । ನುಸುಳದೊಡೆಮನಗಾಣ್ಬನೇ ಕೌರವಮಹೀಶ್ವರನ ॥ ಪಿಷಮುವದು ಕ ಟ್ಟಾಳುಮಂತ್ರದೊ । ಳೆಸಗಲಾಗದು ತನ್ನ ಧೀರತೆ । ನುಸುಳಹುದು ಮುರವೈರಿ ಸಾನಿಯುನರಿಯೆ ನಾ ನೆಂದ ॥೨೩॥ ಕಳುಹಬೇಹುದು ದೇವ ದಿನಪತಿ । ಯಿಳಿದನಪರಾಂಬುಧಿಗೆ ಸಂಪತಿ । ಯುಳಿದಹೊತ್ತಿಂ ನೀಗ ನೆಟ್ಟನೆ ನೀವು ಪಾಂಡವರು ॥ ಹುಲುಸರವಿ ಹಾವಹುದು ಹುತ್ತಿನ । ತಲೆಯಲಿರಲಜ್ಞನಿಗೆ ಹಿ ಸುಣರ । ಬಳಿಕೆ ಹೊಗುವುದು ಕಳುಹಬೇಕೆಂದೆರಗಿದನು ಕರ್ಣ ॥೨೪॥ ಬೀಳುಕೊಂಡನು ಮನೆಗೆಬಂ ನು ವಿ । ಶಾಲಮತಿ ಚಿಂತಿಸಿದನಾಸಿರಿ । ಲೋಲನಮಾಡಿದಮಂತ್ರಮನದಲಿ ನಟ್ಟು ಬೇರೂರಿ ॥ ಕಾಳು ಮಾಡಿದನಕಟ ಕೌರವ । ಬಾಳಲರಿಯದೆ ಕೆಟ್ಟನೀಗೋ । ಪಾಲ ಬಂದೇ ಬಿಡನು ಜೀವವ ಕೊಳ್ಳದಿರ ನೆಂದ ॥೨೫॥ ವೀರ ರವಿಸುತನೊಂದುದಿನ ರವಿ । ವಾರದಲಿ ಸಂತೋಷ ಮಿಗೆ ಭಾ । ಗೀರಥೀತೀರದ ಲಿ ತಾತಂಗರ್ಘ್ಯವನು ಕೊಡುತ ॥ ಸಾರಮಂತ್ರವ ಜಪಿಸುತಿರಲು ವು । ದಾರಸುರಭೂಜನನುಕುಂತೀ ನಾರಿ ಕಾಣಲುಬಂದಳಾತ್ಮಜನಿದ್ದನಟಿಗಾಗಿ ॥೨೬॥ ಬರಲು ತಾಯಿಗ್ದಿರಾಗಿ ರವಿಸುತ । ನಿರದೆ ಬಂ ದನು ದಂಡವಂತಿರೆ । ಚರಣದಲಿ ಮೈಯಿಕ್ಕಲಾತನ ನೊಸಲ ನೆಗಹಿದಳು ॥ ಬರಸೆಳೆದು ಬಿಗಿಯಪ್ಪಿದ ಳು ನೀ । ರುರವಣಿಸಿದವು ನಯನದಲಿ ಸೆರೆ । ಕೊರಳಿಗಾಕಿದುದಳಲಿನಬುಧಿಯೊಳಾಳ್ದಳಾಕುಂತಿ ॥೨೭॥ ಆಸಮಯದಲಿ ಗಂಗೆ ನಾರೀ । ವೇಷದಲಿ ನಡೆತಂದಳೆಲೆಕುಂ । ತೀಸತಿಯೆ ಕೈಯೊಡೆಯಕಂದ ನನೊಪ್ಪುಗೊಳು ನೀನು ॥ ಈಸುದಿನಪರಿವಸಾಗುಹೋಗಿನ । ಭಾಷೆಯನು ತಲೆಗಾಯ್ದೆ ನಿನ್ನಯ । ಭಾ ಗೆ ಸಂದುದೆನುತ್ತ ತಾಯಿಗೆ ಕೊಟ್ಟಳಾತ್ಮಜನ ॥೨೮॥ ಇರಲಿರಲು ರವಿ ಬಂದನಕ್ಕಟ । ಕರೆದನೀತನ ಕಿವಿಯೊಳೆಲ್ಲವ । ನೊರೆವ ನಿನಗೆಲೆಮಗನೆ ಕುಂತೀದೇವಿ ತಾಯಹುದು ॥ ಮುರಹರನ ಮತದಿಂದ ನಿ ನ್ನಯ । ಸರಳಬೇಡಲು ಬಂದಳಿಂದಿನ । ಹರಿಗೆ ಕವಚವನಿತ್ತವೊಲು ಮರುಳಾಗಬೇಡೆಂದ ॥೨೯॥ ಬೆಸಸಿದುದಕೆ ಪಸಾದವೆಂದನು । ಬಿಸಜಬಂಧುವ ಕಳುಹಿದನು ಮ । ನ್ನಿಸಿದನಿತ್ತಲು ಮಾತೆಯನು ಭ ಯಭರಿತಭಕ್ತಿಯಲಿ ॥ ಒಸೆದು ಬಿಜಯಂಗೈದಪದನನು । ವುಸುರಬೇಹುದು ತಾಯೆಯೆನೆ ಕೋ । ಕಿ ಸುತ ನುಡಿದಳು ಕುಂತಿ ಕರ್ಣನ ತೆಗೆದು ಬಿಗಿಯಪ್ಪಿ ॥೩೦॥ ಮಗನೆ ತಮ್ಮಂದಿರನು ಪಾಲಿಸು । ವಿಗಡ ತನವನು ಮಾಣು ನೀನೋ । ಲಗಿಸುವರೆ ಕುರುಪತಿಯ ನಿನಗವರಂದಿರೆಯಿತ್ತಂಡ ॥ ಸೊಗಸು ತಾನೆಂ

ದುದನು ಹಿಸುಣರ । ಬಗೆಯ ನೀ ಕೇಳದಿರು ನೀ ಮನ । ಬಿಗಿಸದಿರು ಸಲಿಸೆನ್ನ ವಚನವನೆಂದಳಾಕುಂತಿ ॥೩೧॥ ತಾಯುಹುದು ತಾಬಲ್ಲೆನದು ಸಂ । ಜಾಯತವು ಪಾಂಡವರು ತಮ್ಮದಿ । ರಾಯುಭಯರಾಯರಲಿ ಪಟ್ಟವದಹಿರಿಯ ತಾನಹುದು ॥ ರಾಯನೆನ್ನನು ನಚ್ಚಿ ಹೊರೆದನು । ಸಾಯಲಳುಕುವೆನೇ ಸುಡೇತಕೆ । ಬೀರಿಳೆಯಬಾಳಿಕೆ ಕೃತಘ್ನತೆಗಿಲ್ಲ ಗತಿಯೆಂದ ॥೩೨॥ ಮಕ್ಕಳೈವರಿಗಾಹಿರಿಯನದು । ತಕ್ಕಮಾತವು ತಾಯೆ ಸಂದೇ । ಹಕ್ಕೆ ನೆಲೆಯಿಲ್ಲದು ನಿಲಲಿ ಧಾರಿಣಿಯ ಬಯಸುವರೆ ॥ ತಕ್ಕುದೇ ದಾತಾರನೆರಸಿಯೊ । ಛೊಕ್ಕತನವಿರಲಾರು ಮೆಚ್ಚುವ । ರಕ್ಕ ಹೇಳೌ ಹೇಸಳೇ ಜಯಲಕ್ಷ್ಮಿ ತನಗೆಂದ ॥೩೩॥ ಇದು ನೀವರುಹಿದಬಳಿಕ ರವಿ । ನಂದನನು ಯೆಂದರಿದೆನಲ್ಲದೆ । ಹಿಂದೆ ದುರಿಯೋಧನನದಾವುದ ಸೋಡಿ ಸಲಹಿದನು ॥ ಬಂದು ಪಾಂಡವರೊಡನೆ ಕೂಡಿದ । ರಿಂದು ಶೌರಿಯ ಮಾತದಂತಿರ । ಲಿಂದು ನೀವ್ಮಡಿ ಬಂದ ಕಾರ್ಯವ ಬೆಸಸಿನೀವೆಂದ ॥೩೪॥ ಆದೊಡೈವರ ಮಕ್ಕಳನು ತಲೆ । ಗಾದು ತೋರ್ಪ ಕಂದ ನಿನಗೆ । ನ್ನೀದುರಾಗ್ರಹವೊಪ್ಪುವುದೆ ಕೌರವನ ಸೇವೆಯಲಿ ॥ ಹೋದಬಾಣವ ಮರಳಿ ತೊಡರು । ಮಾದು ಕಳೆ ವೈರವನೆನಲ್ಕೆಹ । ಸಾದವೆಂದನು ಬೀಳುಕೊಟ್ಟನು ಬಂದನರಮನೆಗೆ ॥೩೫॥

ಅಂತು ಸಂಧಿ ೧೦ ಕ್ಕಂ ಪದ ೬೨೩ ಕ್ಕಂ ಮಂಗಳಮಸ್ತು.



ಹನ್ನೊಂದನೆಯ ಸಂಧಿ.

ಸೂಚನೆ ॥ ಅವನಿಯಮಿರಿತ್ತು ಗಗನ ತಾರಾ । ನಿವಹವನು ಬಿದಿರಿತ್ತು ವರಪಾಂ । ಡವರು ಕಣ್ಣೊಳು ವೆಂಠಿಸಿದರು ಕವುತ ಕಂಠಣಿಸೆ ॥

ಪದ ॥ ಕೇಳುಜನಮೇಜಯಧರಿತ್ರೀ । ಪಾಲ ಸಂಧಿಯ ಮುರಿದು ಲಕ್ಷ್ಮೀಲೋ । ಲಸ್ಸೆತರುತಿವರ ಹೊರೆಗಟ್ಟಿದನು ಸಾತ್ಯಕಿಯ ॥ ಕೇಳಿದನು ಮುರಹರನ ಬರವನು । ಮೌಳಿಮಸ್ತಕದಖಿಳಧರಣೀಪಾಲರೊಡನಿದಿರಾಗಿ ಬಂದನು ಧರ್ಮನಂದನನು ॥೧॥ ದೂರದಲಿ ದುಮ್ಮಾನಿಸಿದವಪ । ನಾರವಿಂದವ ಕಂಡು ಸಂಧಿಗೆ । ಸೇರರವಟರು ಬಲಿದುಮಾಹವವೀತನಂಗದಲಿ॥ ಶೌರಿಗಾಯ್ತವಮಾನವಿದಲೇ । ಮಾರಿಗುತ್ತರವೆನುತ ಬಂದನು । ಮಾರುತನ ಮಗನಸುರಮರ್ದನನಿಂಗಿತವನರಿದು ॥೨॥ ದರುಶನವ ನೀಡಿದರು ಕೃಷ್ಣನ । ಚರಣದಲಿ ಮೈಯಿಕ್ಕಿದರು ಮಿ । ಕ್ಕರಸುಗಳು ದ್ರುಪದಾದಿನಾಯಕರೆರಗಿದರು ಪದಕೆ ॥ ಪರಮಬಾಂಧವರೆಲ್ಲ ಚೀವಂ । ತರೆ ನದೀಸುತವಿದುರಗುರುನೃಪ । ಗುರುತನುಜಧೃತರಾಷ್ಟ್ರಯೆಂದನು ಧರ್ಮನಂದನನು ॥ ಭೂಮಿಪತಿ ನಿಜಬಾಂಧವರು ಸು । ಕ್ಷೇಮಿಗಳು ತಾವೆಲ್ಲ ನಿಮ್ಮಾ । ಕ್ಷೇಮಕುಶಲವ ಕೇಳಿವರು ಕಳುಹಿದರು ಹರಕೆಗಳ ॥ ಆಮಹಾ ಸಂಗ್ರಾಮಮುಖದಲಿ । ತೋಮರದ ಕಾಣಿಕೆಗಳಲಿ ಸು । ಪ್ರೇಮವನು ಬೆಸಸುವುದು ದುರಿಯೋಧನನ ಮತವೆಂದ ॥ ಭೂಮಿಯೊಳಗರ್ಧವನು ಬೇಡಿದೊ । ಡಾಮಹೀಪತಿಯೈವರಿಗೆ ಸಂ । ಗ್ರಾಮಭೂಮಿಯನೈದೆ ಕೊಟ್ಟನು ನಿಮ್ಮೊಳಪ್ರಿಯನು ॥ ಸಾಮದಲಿ ಸೊಗಸಿಲ್ಲ ನೀವ್ ನಿ । ಸ್ಸೀಮರಾದೊಡೆ ಜೋಡಿಸುವುದು । ದ್ದಾಮಕುರುಭೂಮಿ

ಯಲಿ ಕುಳವರಿದವರ ಪತಿಕರಿಸಿ ॥೫॥ ಮುನಿದೊಡೆಯು ನಿಮ್ಮೊಳಗೈನೀವೇ । ಮನಕತವ ಮಾಡುವರೆ ಯಗ್ರಜ । ರನುಜರಲಿ ಕದಡಾದೊಡುಪಶಮಿಸುವಿರಿ ನಿಮ್ಮೊಳಗೆ ॥ ಎನಗೆ ನಿಮ್ಮಯ ದೂಸರಿಂದಾ । ಯ್ತುನಿತುಸಭೆಯಲಿ ಮಾನಹಾನಿಗ । ಳೆನಲು ನೊಂದನು ಧರ್ಮಸುತನಿಂತೆಂದ ನಸುನಗುತ ॥೬॥ ಮು ಳಿದು ಸುರಗಿಯನುಗಿದು ಗಗನಕೆ । ನಿಲುಕಿ ಮಾಡುವದೇನು ನಿಮ್ಮಡಿ । ಗಳಿಗೆ ತಪ್ಪಿದಖಳರುವಖಿಳವ್ಯಾ ಪ್ತಿಗೇಗುವರು ॥ ಖಳರು ಮಾಡಿದಖತಿಯನೆನ್ನೊಳು । ತಿಳಿದು ಮರೆಯಲುಬೇಕು ಕರುಣಾ । ಜಲಧಿ ನೀನೆಂದೆಂಘ್ರಿಗಳ ಪಿಡಿದನು ಯುಧಿಷ್ಠಿರನು ॥೭॥ ಬರಿದೆ ಕಾಡದಿರೇಳು ಮನದಲಿ । ಮರೆದೆವಾಗಳೆ ಕೌ ರವನು ಮುಂ । ದರಿಯದನುಕರಿಸಿದನು ಹೋಗಲಿ ನಿಮ್ಮ ದೂರೇಕೆ ॥ ನೆರವಣಿಗೆಯುಂಟಾದೊಡಿಂದಿ ನ । ಮರುದಿವಸಸಂಗ್ರಾಮ ಸ್ಥಿರಿಸ । ಲರಿಯರವದಿರು ನಡೆ ಕುರುಕ್ಷೇತ್ರಕ್ಕೆ ಬೇಗದಲಿ ॥ ಹಾನಿಯನು ನೀ ಹೊತ್ತು ಭೃತ್ಯರ । ಮಾನವನು ಪತಿಕರಿಸಬೇಹುದು । ತಾನೊಡೆಯನಾದಂಗೆ ಗುಣವೆಂದೊಡೆಯ ನೀನಾಗಿ ॥ ಮಾನಭಂಗವ ಧರಿಸಿಯೆಮ್ಮಭಿ । ಮಾನವನು ನೀನುಳುಹಿದ್ದೆ ಸಂಧಾನವನು ಕೇಳಿಸದೆ ಸಲ ಹಿದೆಯೆಂದನಾಭೀಮ ॥೮॥ ಮಾರಿಯರಕೆಗಳಡಗದಂತಕ । ನೂಡುತುಂಬದೆ ಶಾಕಿನಿಯರೊಡ । ಲೋ ರೆ ನನೆಯದೆ ಡಾಕಿನಿಯರಿಗೆ ಸೋಕುಸಾಲಿಡದೆ॥ ಕೌರವನ ತನಿಗರುಳದಂಡೆಯ। ತೋರಣದ ಬಾಗಿಲಿನ ವಿಭವದಿ । ವಾರಣಾಹ್ವಯನಗರಿಯನು ಹೊಗದಿಹೆನೆ ಹೇಳೆಂದ ॥೧೦॥ ತೋರು ನಡೆ ಗಜಬಜಿಸಲೇ ಕಿಂ । ಸಾರುತಿಂಗಳೆ ನಾಳೆಪಯಣಕೆ । ಸಾರಿ ಸೇಳೆಂದವರುಪಪ್ಲಾವ್ಯಕ್ಕೆ ನಡೆತಂದು ॥ ಬೇರೆಬೇರವನೀ ಶರಿಗೆ ಪಡಿ । ಹಾರವನು ಕಳುಹಿದರು ಕೃಷ್ಣನ । ದೂರು ಬರಲಳವಡಿಸಿದರು ಸಂಗ್ರಾಮಸಾಧನವ ॥ ॥೧೧॥ ಗುಡಿಯ ಮಂಡವಿಗೆಗಳ ವಂಗಡ । ದೊಡನೊಡನೆ ಸಂಭ್ರಮಿಸಿದ್ದವು ಬರ । ಸಿಡಿಲು ಬೊಬ್ಬಿ ಡುವಂತೆ ಮಸೆದವು ಕೂಡೆ ಕೈದುಗಳು ॥ ದಡಿಯ ಬಲಿಸುವಗುಳವ ರೆಂಚೆಯ । ಗಡಣಿಸುವಬಲುನೀ ಲಗಾವಿಯ । ತೊಡಿಸುವುತ್ಸಹವಾಯ್ತು ವರಪಾಂಡವರ ಬೀಡಿನಲಿ ॥೧೨॥ ಹಿಳುಕಿ ತಿದ್ದುವಬಿಲ್ಲಬಾಗಿ ನ । ಹೊಳಹನೊಯ್ಯಾರಿಸುವಮಾರ್ತಿರು । ಗಳನುಜೋಡಿಸುವವರುಕೈದುವಮಸೆವಮಂಡಲಿಯ ॥ ಕ ಳಕಳಿಕೆ ಬಲುಹಾಯ್ತು ರಾವುತ। ರಲಿ ಗಜಾರೋಹಕರ ರಥಿಕಾ। ವಳಿಯರವ ರಂಗದಲಿ ಬಲುಸಂವರ ಣೆಯೊಪ್ಪಿದವು ॥೧೩॥ ಚೂಳಿ ಹರಿದುದು ದೆಸೆದೆಸೆಗೆ ಭೂ । ಪಾಲರಿಗೆ ರಾಯಸದ ಹದನನು । ಕೇಳಿ ದಾಗಲೆ ಕವಿದು ಬಂದರು ತಮ್ಮದಳಸಹಿತ ॥ ಸೂಳವಿಸಿದವು ಸನ್ನೆಯಲಿ ನಿ । ಸ್ಸಾಳವಂದಿನ ಮರು ದಿವಸ ವೈ । ಹಾಳಿಯನು ಹೊರವಂಟರನಿಬರು ದೈತ್ಯರಿಪುಸಹಿತ ॥೧೪॥ ಎಲೆಲೆ ನೆಲ ಬೆಸವಾದುದೋ ಬಲು । ದಳದ ತೆರಳಿಕೆ ತೀವಿತವನಿಯ । ತಳಪಟದ ಹುಬ್ಬಸೆಯೊಳಬ್ಬರಿಸಿದವು ಬೊಬ್ಬೆಗಳು ॥ ತಲೆ ವರೆಯ ತೂಕದಲಿ ಫಣಿಪತಿ । ಬಳುಕತೊಡಗಿದ ತರಣಿ ಸೇನೋ । ಚ್ಚಲಿತಧೂಳಿಯ ಝುಗೆಯ ಕೊ ಟ್ಟನು ಭೂಪ ಕೇಳೆಂದ ॥೧೫॥ಹಿಣಿಲ ಹಾಹೆಯ ಬಿರುದುಗಳ ಥಾ। ಣಿಯ ನಾಯಕವಾಡಿಗಳ ಸಂ। ದಣಿಯ ಸಂಕುಲ ಕೈಯಚೌರಿಯ ವೀರನೂಪುರದ ॥ ಕುಣಿವಸುರಗಿಯ ಪಳಪರದ ತೊಂ । ಕಣಿಯ ಭೇದಿಪಖಡ್ಗ ಬಿಲುಬಲು । ಕಣೆಯ ಸಂಖ್ಯೆಯಕೈದುಗಳ ಕಾಲಾಳ ನೋಡಿದರು ॥ ಫಳಫಳಿಪಸೂನಿಗೆಯ ಮುಂಮೊನೆ । ಗಳ ರಥಾಂಗದ ಮೇಲುಪಸರದ। ಪಳಹರದ ಖುರಹತಿಯ ಜೋಡಜವಾಯ್ಲ ಕುದುರೆ ಗಳ ॥ ಬಲದಬದ್ಧರದೊಟ್ಟಿದಂಬಿನ । ಹೊಳೆವಹೊದೆಗಳ ಸೂತರುರವಣೆ । ಗಳ ಸುರೆಸ್ನೆಯ ಗತಿ

ವಾಜಿಯು ರಥವ ನೋಡಿದರು ||೧೭|| ಅಳವಿಗೊಟ್ಟೊಡೆ ರವಿಯ ತುರಗವ । ನುಳುಹಿ ಮುಂಚುವ ಗತಿಯ ನೊಸಲಲಿ। ಹೊಳೆವ ಕನ್ನಡಿಗಳ ಖುರಾಂತದ ಜೋಡು ಚಲುವುಗಳ ॥ ಬಿಳಿಯ ಚೌರಿಯ ಝಲ್ಲರಿಯ ಹ । ತ್ತೊಳೆದರಾಪ್ತರ ಸಂಸದಲಿ ನೆಲ। ನಲುಗೆ ನಿಗುರುವ ನಿಲುವ ನಿರುತದ ಹಯವ ನೋಡಿದರು ||೧೮|| ಸ್ಥಲದೆಡಬಲದೊರತೆಯೆನೆ ಸುಕ । ಪೋಲದಲಿ ಸಾಲಿಡುವ ಮದಜಲ । ಧಾರೆಗಳ ಬರಿಕ್ಕೆಯ ಲೌಡಿಯ ವಜ್ರಮುಷ್ಟಿಗಳ ॥ ಸಾಳಿವಿಲುಗಳ ರಾಯಜೋದರ । ಮೇಲವಣಿಗಳ ಚಿತ್ರಗತಿಶ್ರುಂ । ಡಾಲವನು ನೋಡಿದರು ಗಜಸೇನಾಸಮುದ್ರದಲಿ ||೧೯|| ಅವನಿಪಾಲರ ಮಕುಟಮಣಿಗಳ । ನಿವಹದೆತ್ತಿದ ಖಡ್ಗ ಪರುಶುಗ । ಳವಿಮಲದ ದೊರೆಗಳ ಪತಾಕಾವಳಿಯ ಬೆಳುನೊರೆಯ ॥ ವಿವಿಧಗಜಹಯ ಜಲಚರೌಘದ। ಪವನಜನ ಕೈಸನ್ನೆಗಳ ಘನ । ಪವನಹತಿಯಲಿ ಲಹರಿಮಿಗಿಸಿತು ಬಹಳ ಬಲಜಲಧಿ ||೨೦|| ಹರಿಯುಧಿಷ್ಠಿರರೊಂದು ಗಜಕಂ । ಧರದೊಳಿರ್ದರು ನಿಖಿಳಸೇನೆಯ । ತೆರಳಿಕೆಯ ತೋರಿಸುತ ಬಂದರು ಭೀಮಫಲುಗುಣರು ॥ ಬಿರುದಧೃಷ್ಟದ್ಯುಮ್ನ ಮೊದಲಾ । ಗದೆ ಶಿಖಂಡಿಯ ಸಹಿತ ದ್ರುಪದನು । ಭರವಿಗಿಲು ತೋರಿದನು ಮೂರಕ್ಷೋಹಿಣಿ ಸೇನೆಯನು॥ ವರಯುಧಾಮನ್ಯೂತ್ತಮೌಂಜಸ। ಸುರುಶಿಖಂಡಿ ಸುಚೇಕಿತಾನರು। ಧುರಧುರಂಧರವೀರಪಾಂಚಾಲಕ್ಷಿತೀಶ್ವರರು॥ ತುರುಕರನು ಸಾಹಸ ಸಮುದ್ರರ। ಮುರಿಯವನಖುರಸಾಳಕೇಶೀ । ಶ್ವರರಥಟ್ಟನು ತೋರಿದನು ಪಾಂಚಾಲಭೂಪಾಲ ||೨೧|| ವರವಿರಾಟನು ಶಂಖನೃಪನು । ತ್ತರಶರದ್ಯುಮ್ನ ಕಶ್ರುತಚಂ । ದ್ರರು ಶತಾನೀಕರು ಶತಾಯುಧರೆನಿಪನೃಪವರರು ॥ ತುರಗ ಗಜರಥ ಪಾಯದಳಸಾ। ಗರವ ಸೌರಂಭದಲಿ ನಿಜಸಂ । ವರಣೆಯನು ತೋರಿದನು ತಮ್ಮಕ್ಷೋಹಿಣೀದಳವ ||೨೩|| ಜಯಸಮರಸಾಮಗ್ರಬಲ ಕೈ । ಕೆಯನೃಪಾಲರು ತಂದರಕ್ಷೋ । ಹಿಣಿಯನು ತೋರಿಸರ್ವಭಕಂಧರದ ಭೂಪತಿಗೆ ॥ ಭಯವಿಹೀನರು ಪಾಂಡ್ಯ ನೃಪಸಂ । ಜಯರು ಸೋಮಕಭೂಪರಕ್ಷೋ । ಹಿಣಿಯನು ತೋರಿದರವನಿ ಕುಸಿದುದು ವಳೆದ ಪದಹತಿಗೆ ||೨೪|| ಚೈದ್ಯದೇಶದ ಧೃಷ್ಟಕೇತುಬ । ಲೋದಧಿಯನಕ್ಷೌಹಿಣಿಯ ಮೊದ । ಲಾದುದೆನೆ ತೋರಿದನು ಕುಂತೀಭೋಜನಕ್ಷೋಹಿಣಿ॥ ಆದುವೇಳಕ್ಷೋಹಿಣಿಬಲ ಬೇ । ರಾದರಾಯಕವಾಟಿಯಲಿ ಹಿರಿ। ದಾದುದಾಹವಸೇನೆ ಗೋಚರವಲ್ಲ ಗಣನೆಯಲಿ ||೨೫|| ಕ್ಷೇತ್ರಧರ್ಮನು ನೀಲನಭ್ರುವ । ಕ್ಷತ್ರಶೌರಿಯ ತನುಜ ವತ್ಸಜ । ಚಿತ್ರವರ್ಮ ಹಿರಣ್ಯವರ್ಮನು ಚಾರುಚೇಷ್ಟಕನು ॥ ಶತ್ರುಮಥನನು ವಿಂಧ್ಯಗಿರಿಯಸ । ಹೋತ್ರರನ್ವಯದವರು ಪಾಂಡವ । ಮೈತ್ರರೊದಗಿತು ಕೇಳು ಜನಮೇಜಯ ಮಹೀಪಾಲ ||೨೬|| ವೀರಪಾರ್ಥರಿಗಿರುಳು ಸೋತಂ । ಗಾರವರ್ಮನು ಗಗನಚರಪರಿ । ವಾರಬಹಳದಿ ಬಂದು ಕಂಡನು ಕಲಿಯುಧಿಷ್ಠಿರನ ॥ ಕೌರವೇಂದ್ರನ ನೋಯಿಸಿದ ಧುರಧೀರಸಾಹಸಚಿತ್ರಸೇನನು । ವಾರಗುಣನಿಧಿ ಬಂದು ಕಂಡನು ಮಿತ್ರಭಾವದಲಿ ॥ ಕಾಳರುಳ ಪಟ್ಟಣಕೆ ಚಂದ್ರನ । ತೋರಣವ ಬಿಗಿದಂತೆ ದಾಡೆಗ । ಳೋರಣದ ಹೊಳಹುಗಳ ಹೊಗರಡರ್ದೊಡಲ ಕಪ್ಪುಗಳ ॥ ಭಾರದೇಹಸುಭಟ ಭಯಂಕರ । ತೋರಪುತ್ರನು ದೈತ್ಯಕುಲಪರಿ । ವಾರ ಬಹಳದಿ ಬಂದು ಕಂಡನು ಕಲಿಘಟೋತ್ಕಚನು ||೨೮|| ಬಲದ ಪೆಖ್ಯಾಳವನು ನೋಡಿದ । ರೊಲವಿನಲಿ ನಿಜಸೇನೆಸಹಿತತಿ । ಬಲರು ಪಾಪಾಷ್ಟಕ್ಕೆ ಬಂದರು ಪೂರ್ಕರಾಯುವ ॥ ಬಳಿಕ ಸುಮುಹೂರ್ತದಲಿ ಮೊರೆಗುಡಿ । ಗಳನು ಹಾಯ್ಕಿದರಂದು ಯದುಕುಲ । ತಿಲಕ ಗದುಗಿನ ವೀರನಾರಾ

ಯಣನ ನೇಮದಲಿ ॥೨೯॥ ಪರಿಮಿತಕೆ ತನ್ನಾಪ್ತಸಚಿವರ । ಕರೆಸಿಕೊಂಡನು ಕೃಷ್ಣರಾಯಂ । ಗರ ಸಬಿನ್ನಹವಮಾಡಿದನು ನೃಪಕಾರ್ಯಸಂಗತಿಯ ॥ ಧುರಕೆ ಸೇನಾನಾಥರಿಲ್ಲದೆ । ನೆರೆದಬಲಸಾಲಿರುಹೆ ಮು ರಿದೊಡೆ । ಹರೆದವೋಲು ಹುರುಳಿಲ್ಲ ದಳಪತಿಯಾವನಹನೆಂದ ॥೩೦॥ ದ್ರುಪದನಾಗಲಿಯೆಂದು ಕೆಲಬ ರು । ವಿಪುಳಬಲದ ವಿರಾಟನಾಗಲಿ । ನೃಪಶಿಖಂಡಿಯೆ ಯೆಂದು ಕೆಲಬರು ಭೀಮಸುತನೆಂದು ॥ ಅ ಪರಮಿತಮತವಾಗೆ ಸರ್ವರ । ವ್ಯಪಗತಾರ್ಥಿಸುರೇಂದ್ರಸುತನೀ । ದ್ರುಪದಸುತ ಸೇನಾಧಿಪತಿಯಹುದೆ ನ್ನಮತವೆಂದ ॥೩೧॥ ಬಿಂಬವನು ಬೇರಿರಿಸಿ ಬಹುಮತ । ವೆಂಬಬಿಸಿಲಲಿ ರಾಜನಯವೆಂ । ದೆಂಬನೈಧಿ ಲು ನಯವುಗೆಟ್ಟುದು ಕೃಷ್ಣ ಹೇಳೆನಲು ॥ ಎಂಬುದೇ ನೀ ನಿಲಿಸು ಸುಭಟಕ । ದಂಬದಧಿಪತಿತನಕೆ ಫಲುಗುಣ । ನೆಂಬಮಾತೆಮ್ಮಭಿಮತವು ಭೂಪಾಲ ಕೇಳೆಂದ ॥೩೨॥ ಕರೆಸಿಧೃಷ್ಟದ್ಯುಮ್ನನನು ಸಂ । ಗರದ ಸೇನಾಪತ್ಯವನು ವಿ । ಸ್ತರಿಸಲಳವಡಿಸಿದರು ಸುಮುಹೂರ್ತದ ಸರಾಗದಲಿ ॥ ಪುರದೊಳಗೆ ಗುಡಿ ನೆಗಹಿದವು ಭೂ । ಸುರರ ವಿಮಳಾಮ್ನಾಯರವ ವಿ । ಸ್ತರಿಸಲಳವಡಿಸಿದರು ಮಂಗಳವಿಹಿತ ವಸ್ತುಗಳ ॥೩೩॥ ಸೂಳವಿಸಿದವು ಕಟಕದಲಿ ನಿ । ಸ್ಸಾಳಕೋಟಿಗಳಳ್ಳಿರಿಯೆ ಹೆ । ಗ್ಗಾಳೆಗಳು ಸಾರಿ ದವು ಭಟರುಬ್ಬಟೆಯ ಬಿರುದುಗಳ ॥ ಲೋಲನಯನೆಯರಾರತಿಯ । ಸಮಸಾಲು ಸಂದಣಿಸಿದ್ದವು ವೆ ರಪಾಂ । ಚಾಲತನಯಂಗೆಸಗಿದರು ಮೂರ್ಧಾಭಿಷೇಚನವ ॥೩೪॥ ದರುಶನವನಿತ್ತಖಿಳಧರಣೀ । ಶ್ವ ರರು ಕಂಡರು ಸೂತಮಾಗಧ । ವರವಿಬುಧವೈತಾಳಿಕರ ಕಾರ್ಪಣ್ಯವಡಗಿದ್ದವು ॥ ಧುರಕೆ ಧೃಷ್ಟದ್ಯು ಮ್ನನಾಜ್ಞೆಯೊ । ಳಿರವು ನಿಮಗೆಂದೈದೆ ಭೂಪಾ । ಲರ ನಿವಾಸಂಗಳಲಿ ಹೊಯ್ದರು ಚರರು ಡಂ ಗುರವ ॥೩೫॥ ರೂಢಿಸಿದಸುಮುಹೂರ್ತದಲಿ ಹೊರ । ಬೀಡ ಬಿಟ್ಟರು ರಣಕೆ ಪಯಣವ । ಮಾಡ ಲೋಸುಗ ಸಾರಿದರು ನೃಪಪಾಳೆಯಂಗಳಲಿ ॥ ಕೂಡಿತಾಹವಸೈನ್ಯಸಾಗರ । ವೀಡಿರಿದು ನಡೆಗೊಂ ಡುದಭ್ರ ದ । ರೂಢಿಗಳ ಜೋಡಿಗಳ ಜೋಕೆಯ ಘನತರಂಗದಲಿ ॥೩೬॥ ಹಂಯ ಚರಣಕ್ಕೆರಗಿ ವಿ ಜಯದ । ಹರಕೆಗಳ ಕೈಕೊಂಡು ರಥವನು । ತುರಗಗಜವನು ಗಡಣಮಿಗಲೇರಿದರು ಪಾಂಡವರು ॥ ಗರುಡಸಿಂಧವನೆಗಹಿ ದಾರುಕ । ನಿರದೆ ರಥದನು ಸುಳಿಸೆ ಘನಮೋ । ಹರದಮಧ್ಯದೊಳಸುರಧೂ ಳೀಪಟನು ಹೊರವಂಟ ॥೩೭॥ ಮುಂದೆ ಹರಿರಥ ನಡೆಯಲಾತನ । ಹಿಂದೆ ಧರ್ಮಜನೆಡಬಲದಲಾ । ನಂದನರು ಕೆಲಬಲದಲಾಭೀಮಾರ್ಜನಾದಿಗಳು ॥ ಸಂದಣಿಸಿದುದು ಸೇನೆ ಸೈರಿಸಿ । ನಂದನಾದೊಡೆ ಫಣಿಗೆ ಸರಿಯಿ । ಲ್ಲೆಂದು ಸುರಕುಲವುಲಿಯೆ ನಡೆದುದು ಪಾಂಡುಸುತಸೇನೆ ॥೩೮॥ ಸಿಡಿಲು ಸಿಗು ರೆದ್ದಂತೆ ಭಾರಿಸಿ । ಜಡಿವಕೈದುಗಳೊಳಗೆ ಮೊಳಗುವ । ಕಡುದೆರೆಯ ಲಹರಿಯವೊಲುರವಣಿಸಿದವು ಬೊಬ್ಬೆಗಳು ॥ ನಡುಗಿತವನಿಯೆಜಾಂಡಖರ್ಪರ । ಪೊಡೆಯೆಲವಣಿಯಲಗ್ಗಸೂಳಿನ । ಹೊಡಗುಳಿ ಸೊಳಬ್ಬರಿಸಿದವು ನಿಸ್ಸಾಳಕೋಟಿಗಳು ॥೩೯॥ ಪ್ರಳಯಜಲನಿಧಿಯಂತೆ ದಳ ಬರ । ಲಿಳೆ ಕುಸಿಯೆ ಕ ಮಠಂಗೆ ಮೇಲುಸು । ರುಲಿಯೆ ದಿಗುದಂತಿಗಳು ಮೊಣಕಾಲೂರಿ ಮನಗುಂದೆ ॥ ಬಲಮಹಾಂಬು ಧಿಬಲುಗಡಲ ಮು । ಕ್ಕಳಿಸಿ ನಡೆದುದ್ಧುಕಡುಭರದ ಕಾ । ಲ್ದಳಿಯ ಕದನಾಳಾಪಕರಕಾಹುರಕೆ ಪೊಸ ತಾಯ್ತು ॥೪೦॥ ಗಜದಬೃಂಹಿತರವದ ವಾಜಿ । ವ್ರಜದ ಹೇಷಾಧ್ವನಿಯ ತೇರಿನ । ವಿಜಯಚೀತ್ಕೃತಿರವ ದ ಗಿಂಟಂಕಾರಕಳಕಳದ ॥ ಗಜಬಜಕೆ ಗಾಢಿಸಿತು ಬೊಬ್ಬೆಯ । ಗಜರುಗಳ ಗರ್ಜನೆಗೆ ನಡುಗಿತು ।

ತ್ರಿಜಗವೆನಲ್ಕೈದಿದರು ಪಣಯದಮೇಲೆ ಪಯಣದಲಿ ॥೪೧॥ ಅರಸಿ ನಡೆದುದು ರಾಯಕಟಕದ । ತೆರಳಿಕೆಯ ಸೌರಂಭವಿಳೆಗ । ಚ್ಚರಿಯ ಬೀರಿತ್ತು ವರಕುರುಕ್ಷೇತ್ರಕ್ಕೆ ಗಮಿಸಿದರು ॥ ಅರಿವಿಜಯಿಗಳು ನೆಲನ ಗೆಲಿದರು । ಹರಿಯು ನೇಮದಲೆಡೆಯರಿದು ಬಲ । ಶರಧಿ ಬಿಟ್ಟುದು ಕಳನ ಪಶ್ಚಿಮದೆಸೆಯ ಪಸರದಲಿ ॥೪೨॥ ಸೂಳವಿಸಿದವು ಸನ್ನೆಯಲಿ ನಿ । ಸ್ಸಾಳಲಗ್ಗೆಗಳಡಗಿದವು ಕಿರು । ಗಾಳೆ ಸನ್ನೆಯಲೂದಿದವು ಮಾಣಿಸಿದವಬ್ಬರವ ॥ ಕೇಳು ಜನಮೇಜಯಧರಿತ್ರೀ । ಪಾಲ ಮಾರ್ಗಶ್ರಮದ ಸೇನಾ । ಜಾಲ ಸ್ಥೈವೆರಗಾಗಿ ನಿಂದುದು ಕಳನ ಮಧ್ಯದಲಿ ॥೪೩॥ ಮೇಲುಗುಡಿಗಳ ಭದ್ರದುಪ್ಪರ । ಶಾಲೆಗಳ ಮಂಡವಿಗೆಗಳ ಬ । ಲ್ಲಾಳದಡ್ಡಿಯ ಚಂಪೆಯದ ಗುಡಾರದೋರವಿಯ ॥ ಸಾಲುಕಳಸದ ಮೇಲುಗಟ್ಟಿನ । ಕೀಲಣದ ಹೊಂಗೆಲಸದಲಿ ರಾ । ಜಾಲಯವನನುಕರಿಸಿದರು ಕುಂತೀಕುಮಾರರಿಗೆ ॥ ಅರಮನೆಯ ಕೆಲದಲಿ ಮುರಾಂತಕ । ನರಮನೆಗಳಾಕೆಲದೊಳರ್ಜುನ । ನಿರವು ಹಿಂದಣಭಾಗದಲಿ ನಕುಲಂಗೆ ಗುಡಾರ ॥ ಅರಿಭಯಂಕರಭೀಮಸೇನನ । ನಿರುಪಮಾಲಯವೆಡದಕಡೆಯಲಿ । ಸರಿಸದಲಿ ಸೂತ್ರಿಸಿತು ಸಹದೇವಂಗೆ ನೃಪಭವನ ॥೪೫॥ ವೀರಪಾಂಡವರೈವರರಸು ಕು । ಮಾರವರ್ಗದ ಮಂಡವಿಗೆ ಗು । ಡಾರವನೊಳಕೊಂಡು ಬಿಗಿದವು ತಳಿಯಕಟ್ಟುಗಳು ॥ ಓರಣದ ಸಾಲುಗಳ ಸುತ್ತಲು । ಭಾರಿಸಿತು ಪಾಂಚಾಲಮತ್ಸ್ಯರ । ಭೂರಿ ಬಿಟ್ಟುದುವರ ಮಹೀಶನಗುಡಿಯಬಳಸಿನಲಿ ॥೪೬॥ ಕೇಳು ಜನಮೇಜಯಧರಿತ್ರೀ । ಪಾಲ ಬೀಡಿನ ತೆಕ್ಕೆ ಬಿಗಿದುದು । ಮೇಳೆಯದ ಬಲವದಕೆ ಹೊರವಳಯದಲಿ ಕಲುಗೋಟೆ ॥ ಮೇಲೆ ಪಡಿಯಗಳಾಶ್ರಯಕೆ ಮುಳು । ವೇಲಿ ದೇಹದ ಸಿಂಹಶರಭ । ವ್ಯಾಳಶಾರ್ದೂಲಾವಳಿಯ ಸುಯ್ದಾನವೊಪ್ಪಿದವು ॥೪೭॥ ಎರಡುಬಾಗಿಲಸೂತ್ರದಲಿ ವಿ। ಸ್ತರಿಸಿದಂಗಡಿ ಸೋಮವೀಧಿಯ ।ತರಣಿವೀಧಿಯಲವರವರ ಪಾಳೆಯಕೆ ಮುರಿವುಗಳ॥ ಸುರರು ಸೃಷ್ಟಿಸಬಾರದಿನ್ನೀ । ನರರುಗಳ ಪಾಡೇನು ಕೌಂತೇ । ಯರ ಸಮಗ್ರದ ಬೀಡು ಕುರುಭೂಮಿಯಲಿ ರಂಜಿಸಿತು ॥೪೮॥ ಬಲದ ಮುಂಗುಡಿ ಭೀಮನದು ಪಿಂ । ಗೆಳಿಯಲಾತನ ಕಾಹು ಬೀಡಿನ । ವಳಯದಾರೈಕೆಗಳು ಸಾತ್ಯಕಿಪಾರ್ಥನಕುಲರಿಗೆ ॥ ಬಲಮಹಾಂಬುಧಿಯೊಳಗಿರುಳ ತಳ । ವಳಿಕೆ ಹೈಡಿಂಬಂಗೆ ಪಾಂಡವ । ರುಳಿವು ಗದುಗಿನವೀರನಾರಾಯಣನ ಸುಯ್ದಾನ॥ ... ... ... ॥೪೯॥

ಅಂತು ಸಂಧಿ ೧೧ಕ್ಕೆ ಪದ ೬೭೩ಕ್ಕಂ ಮಂಗಳಮಸ್ತು.

ಇತಿ ಶ್ರೀಮದಚಿಂತ್ಯಮಹಿಮ ಗದುಗು ವೀರನಾರಾಯಣ ಚರಣಾರವಿಂದ ಮಕರಂದ ಮಧುಪಾನಪುಷ್ಟವಚಃ ಷಟ್ಪದಿ ನಿಕಾಯ ಶ್ರೀಮತ್ಕುಮಾರ ವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ಣಾಟ ಭಾರತ ಕಥಾಮಂಜರಿಯೊಳ್ ಉದ್ಯೋಗ ಪರ್ವಂ ಸಮಾಪ್ತಮಾದುದು.



ಶ್ರೀರಸ್ತು.

ಶ್ರೀ ವೇದವ್ಯಾಸಾಯನಮಃ.

# ಕನ್ನಡ ಮಹಾಭಾರತ—ಭೀಷ್ಮಪರ್ವ

## ಮೊದಲನೆಯ ಸಂಧಿ.

**ಸೂಚನೆ ॥ ವೈರಿಭಟಕುಲವಿಲಯಹರನುವು । ದಾರತೇಜೋಭದ್ರನಾಭಾ । ಗೀರಥೀಸುತ ಧರಿಸಿದನು ಕುರುಸೇನೆಯೊಡೆತನವ ॥**

ಪದ ॥ ಕೇಳು ಜನಮೇಜಯಧರಿತ್ರೀ । ಪಾಲ ಕೌರವರಾಯನಲ್ಲಿಗೆ । ಕಾಳಗದ ಕಾತರಿಗರೆವರಟ್ಟಿದರು ಭಟ್ಟರನು ॥ ಕೇಳಿದನು ಕುರುಭೂಮಿಯಲಿ ರಿಪು । ಜಾಲದುದಯಾನನಂದು ಕುರುಕುಲ । ಮೌಳಿ ಬರಿಸಿದಪರಿಮಿತಕೆ ತನ್ನಾಪ್ತಮಂತ್ರಿಗಳ ॥೧॥ ರವಿಜಗುರುಸುತಶಲ್ಯಕಲಶೋ । ದ್ಭವನುಸೌಬಲರಾದಿಯಾದವ । ರವನಿಪಾಲನ ಕಂಡರೆಂದೇಕಾಂತಭವನದಲಿ ॥ ಅವನಿಪತಿ ಹದನೇನು ರಿಪುಪಾಂ । ಡವರ ಬೇಡಿನ ಗುಪಿತವನು ಮಾ । ನವರು ಚಿತ್ತೈಸಿದಿರೆ ಬೆಸಸುವುದೆನಲು ನೃಪ ನುಡಿದ ॥೨॥ ಸಂದಣಿಸಿ ಕುರುಭೂಮಿಯಲಿ ತಾ । ಮಂದಿ ಬಿಟ್ಟುದು ಸಾಡಗಾವಳಿ । ಬಂದುದಿಲ್ಲಿಗೆ ಕಳುಹಿದರು ದೂತರನು, ದುರ್ಜನರು ॥ ನಂದಗೋಪನ ಮಗನ ಕೊಂಡೆಯ । ದಿಂದ ಕಲಿಯೇರಿದರು, ಕೃಪಣರ । ಕೊಂದೊಡಹುದಪಕೀರ್ತಿಯಿದಕಿನ್ನೇನುಹದನೆಂದ॥೩॥ ಭೂರಿನೆರೆದುದು ಗಾವಳಿಯ ಗುರು । ಭಾರಧೃಷ್ಟದ್ಯುಮ್ನನದು ಗಡ । ಜಾರದೇವನ ಜೋಕೆ ಮಂದಿಯ ಕಾಹುಕಟ್ಟುಗಡ ॥ ಧಾರುಣಿಯಲಂಪಟರು ಕದನವ । ಹಾರಿ ಬಂದರಲೈ ಕೃತಾಂತನ । ಭೂರಿಭೂತದಧಾತುವಾಯಿತು ಲೇಸುಲೇಸೆಂದ ॥೪॥ ನಾಡಮನ್ನೆಯಸನ್ನೆಯರುಗಳ । ಕೂಡಿಕೊಂಡೆಮ್ಮೊಡನೆ ಕಲಹವ । ಮಾಡಿ ಮಹಿಪಾಲನೆಯ ಪಟ್ಟಕೆ ನೊಸಲನೊಡ್ಡುವನೆ ॥ ನೋಡಿರೈ ನಿರುಪಮವಲಾ ಕಾ । ಡಾಡಿಗಳ ಕಲಿತನವನೆನೆವಾ । ತಾಡಿದನು ಕಲಿಕರ್ಣನಾತನ ಮನದಮೈಸಿರಿಯ ॥೫॥ ನೆರೆದದೊದ್ದೆಯನೊರಸಬಹುದೇ । ನರಿದೆ ಜೇಯ ವಿರೋಧಿರಾಯರ । ನೆರವಿ ನಿನಗೇಗುವುದು ಗಹನವೆ ನಿನ್ನವೀರರಿಗೆ ॥ ಕರಿಗಳಿಗೆ ಪ್ರತ್ಯೇಕವಿದ ಕೇ । ಸರಿಗಳೆಮ್ಮನು ಕಳುಹು ನಿಮ್ಮಡಿ । ಪರಿಮಿತಕೆ ಬರಲಾವಭಾರವಿದೆಂದನಾಕರ್ಣ ॥೬॥ ಕಲಕುವೆನು ಪಾಂಡವರ ಸೇನಾ । ಜಲಧಿಯನು ತೇರಿನಲಿ ತಲೆಗಳ । ಕಳುಹುವೆನು ಕದನದಲಿ ಕೈಮಿಾರಿದಕುಠಾರರನು ॥ ಹೊಳಲ ಹೊರಶೂಲದಲಿ ತಲೆಗಳ । ಸೆಳಸುವೆನು ತಾವೀಳೆಯವನೆಂ । ದಲಘುಭುಜಬಲಕರ್ಣ ನುಡಿದನು ಕೌರವೇಂದ್ರಂಗೆ ॥೭॥ ಕುಲಿಶಪರಿಯಂತೇಕೆ ನೇಗಿಲ । ಬಳಿಯ ಹುಲುವೇಟಕೆ ವಿರೋಧಿಗ । ಳಲಿ ಬಲಕೆ ಕಲಿಕರ್ಣನೀಪರಿಯಂತ ಸಂಗರವೆ ॥ ಹೊಳಲ ಪರಿವಾರಕ್ಕೆ ಸಾರಿಸು । ಕೆಲಬಲದ ರಾಯರಿಗೆ ದೂತರ

ಕಳುಹಿಕರೆಯಿಸಿ ಕಾದಿಸೆಂದನು ಕೌರವರರಾಯ ||೮|| ಮೂಗಿನಲಿ ಬೆರಳಿಟ್ಟು ಮುಕುಟವ । ತೂಗಿದನು ಚತುರಂಗಬಲವನು । ಬೇಗದಲಿ ಕೊಳುಗುಳಕೆ ಕಳುಹಿಸು ಗೆಲಿಸು ಕಾಳಗವ || ತಾಗಿಬಾಗಿದವರುಳು ತನದು । ದ್ಯೋಗವನದೇನೆಂಬೆನೆಕಟಕ । ಟೀಗಳಳಿದುದು ಕೌರವಾನ್ವಯವೆಂದನಾದ್ರೋಣ || ಹಿಂದೆ ಬಗುಳುವನಿವನು ಬಾಯಿಗೆ । ಬಂದಪರಿಯಲಿ ಪಾಂಡುತನಯರ । ಕೊಂದನಾಗಳೆಕರ್ಣನಿನ್ನಾರೊಡನೆ ಸಂಗ್ರಾಮ || ಹಿಂದೆ ಹಮ್ಮಿದಸಮರದಲಿ ನಡೆ । ತಂದು ಕಟ್ಟಿದ ಖೇಚರರಟ್ಟಿ। ರಂದು ನಿನ್ನನು ಬಿಡಿಸಿದವನರ್ಜುನನೊ ರವಿಸುತನೊ ||೧೦|| ಸಾಹಸಿಗರಲ್ಲಿಲ್ಲ ಹರಿ ತುರು । ಗಾಹಿ ಪಾಂಡವರ್ರವರಡವಿಯ । ಮೋಹುಕಾರರು ಬಂದಭೂಭುಜರೆಲ್ಲ ತಾ ನೆರವಿ || ಆಹವಕೆ ನಿನ್ನೂರ ತಳವರ ಗಾಹಿನವರನು ಕಳುಹುವುದು ಸಂ । ದೇಹವೇ ನೀನಿಲ್ಲಿ ಸುಖದಲಿ ರಾಜ್ಯವಾಡುವುದು ||೧೧|| ಎಲೆಸುಯೋಧನ ಕಾಳು ಗೆಡೆದೊಡೆ । ಫಲವನಿದರಲಿ ಕಾಣೆನಹಿತರ । ಬಲದ ಭಾರಣೆಬಲುಹು ಭೀಮಾರ್ಜುನರು ಬಲ್ಲಿದರು || ನಳಿನನಾಭನ ಮಂತ್ರಶಕ್ತಿಯು । ಬಲುಹು ನೀನಿರ್ದ್ಯವ ರವರ । ಗ್ಗಳಸದೈವರು ಕೆಟ್ಟರಿನ್ನೇನೆಂದನಾದ್ರೋಣ ||೧೨|| ಅಸುರರಿಪುವಿನ ಮಾತ ನೀ ಮ । ನ್ನಿಸದೆ ಕೌರವಕುಲವನದ್ದಿದೆ । ನುಸಿಗಳೆವದಿರು ನೆರದು ಪಾರ್ಥನನೇನ ಮಾಡುವರು || ಅಸುರರಲಿ ಸುರರಲಿ ಭುಜಂಗ । ಪ್ರಸರದಲಿ ಭೀಮಾರ್ಜುನರ ಸೈ । ರಿಸುವರುಂಟೇ ಕೆಟ್ಟರಿನ್ನೇನೆಂದನಾದ್ರೋಣ ||೧೩|| ಅವರಿಗಸುರಾಂತಕ ಸಹಾಯನು । ನಿವಗೆ ಗಂಗಾಸುತನ ಬಲವಾ । ಹವವನಾತನ ನೇಮದಲಿ ನೆಗಳುವುದು ನೀತಿಯಿದು || ಅವರಿವರ ನುಡಿಗಳಲಿ ಫಲವಿಲ್ಲವನಿಪತಿ ಕೇಳೆನಲು ಕಲಶೋ । ದ್ಭವನ ನುಡಿಯಲಿ ಬಳಿಕ ಮಣಿದನು ಕೌರವರರಾಯ ||೧೪|| ಮತವಹುದು ತಪ್ಪೇನು ಗಂಗಾ । ಸುತನ ತಿಳಿವೆವು ವೀರಪಟ್ಟವ । ನತುಳಬಲಭೀಷ್ಮಂಗೆ ಕಟ್ಟುವೆನೆನುತ ಕುರುರಾಯ || ಮತವ ನಿಶ್ಚಯದಿಂದ ಗುರುಗುರು । ಸುತನ ಕಳುಹಿದನಿತ್ತಲಬುಜ । ಪ್ರತತಿಯು ತ್ಸವವಡಗೆ ಪಡುವಣ ಕಡಲೊಳಿನನಿಳಿದ ||೧೫|| ವಿನುತ ಸಂಧ್ಯಾದೇವಿಗಭಿವಂ । ದನೆ ಜಪಾದಿಸಮಸ್ತ ದೇವಾ । ರ್ಚನೆಯ ಮಾಡಿಯೆ ರವಿತನೂಜನ ಕರಸಿ ಹಂತಿಯಲಿ || ಜನಪನಾರೋಗಿಸಿದನಾಪ್ತಾ । ವನಿಪಸಚಿವರುಸಹಿತ ಭೀಷ್ಮನ । ಮನೆಗೆ ಬಂದನು ಕೇಳು ಜನಮೇಜಯಮಹೀಪಾಲ ||೧೬|| ಮುಂದೆ ಹರಿದರು ಕೈಯ ಕಂಬಿಯ । ಸಂದಣಿಯ ಪಡಿವಳರು ಗಂಗಾ । ನಂದನಂಗೀಹದನ ನರುಹಲು ಬಂದನಿದಿರಾಗಿ || ಕಂದುಮೋರೆಯ ರಾಯನನು ತೆಗೆ । ದಂದಣದೊಳಾಲಿಂಗಿಸುತ ನಲ । ವಿಂದ ಮನ್ನಿಸಿತಂದ ನರಮನೆಗುಚಿತವಚನದಲಿ ||೧೭|| ಏನಿರುಳ್ಳುನೀ ಬಂದಹದನಿದು । ಮಾನನಿಧಿ ಬೇಕಾದೊಡೆಮ್ಮನು । ನೀನು ಕರೆಸುವುದರುಹುವುದು ಬರವೇನು ಹೇಳೆನಲು || ಏನಹೇಳುವೆ ನಗೆಯನನುಸಂ । ಧಾನವನು ಪಾಂಡವರು ಕುರುಭೂ । ಮಿಾನಿವಾಸಕೆಬಂದುಬಿಟ್ಟರು ಕಿರಿದು ಬಲವೆರಸಿ ||೧೮|| ಹರಿಯ ಹಿಸುಣಿಕೆಯುವರಚಿತ್ತವ । ಬೆರಸಿ ವೈರವ ಬಿತ್ತಿ ಬಂದೀ । ಧರೆಯ ಭಾಗವ ಬೇಡಿ ಕಲಹವ ಮಸೆದು ತಮ್ಮೊಡನೆ । ಹರನಸಮದಂಡಿಗಳು ನೀವೆಮ । ಗಿರಲು ಜಯಿಸುವವೀರನಾವನು । ಮರುಳತನವನು ಧರ್ಮಪುತ್ರನೊಳರಿಯಲಾಯ್ತೆಂದ ||೧೯|| ಬಂದರೇ ಪಾಂಡವರು ಸುದ್ದಿಯ । ತಂದರೇ ನಿನ್ನವರು ನಿನಗೇ । ನೆಂದು ಭಾಷೆಯನಿತ್ತರೈ ಕರ್ಣಾದಿನಾಯಕರು || ಇಂದು ಸಂತತಿಗರುಹರಲ್ಲಾ । ಬಂದರೇನಪರಾಧವೇಮಿ । ನ್ನೆಂದುಪರಿಯಂತವರು ನವೆಯಲಿಯೆಂದನಾಭೀಷ್ಮ ||೨೦|| ಜಗದಗುರುವಲ್ಲಾ ಮುರಾಂತಕ |

ನಗಣಿತೆನುಪಮಮಹಿಮನಲ್ಲಾ । ಸಗುಣನಿರ್ಗುಣನಹಮಹಾತ್ಮನನಂತರಾತ್ಮಕನು ॥ ವಿಗಡಿಸಲು ಜಯವಹುದೆ ಜಾಣರ । ಬಗೆಗೆ ಬಹುದೇ ನಿನ್ನ ಮತವೆಲೆ । ಮಗನೆ ಮರುಳಾದ್ಯಮದಾಂಧರ ಮಾತ ನೀ ಕೇಳಿ ॥೨೧॥ ಮಿಕ್ಕಮಾತೇನಿನ್ನು ನೀ ಹಿಂ । ದಿಕ್ಕಿಕೊಂಡೊಡೆ ಕೊಲುವನಾವನು । ಮಕ್ಕಳಾದೊಡದೇನುಬಲ್ಲೆನು ನಿಮ್ಮವಿಕ್ರಮವ ॥ ಹೊಕ್ಕುಹಗೆಗಳ ಹೊಯ್ದು ದಿಗುಬಲಿ । ಯಿಕ್ಕಿ ತನ್ನಯ ಹರುಷಜಲಧಿಯ । ನುಕ್ಕಿಸಲುಬೇಕೆನಲು ಕೇಳಿದು ಭೀಷ್ಮನಿಂತೆಂದ ॥೨೨॥ ದೈವಬಲವವರಲ್ಲಿ ನೀವೇ । ದೈವಹೀನರ್ಧರ್ಮಪರರವ। ರೈವರುಂಸತ್ಪುರುಷಶೀಲರು ನೀವಧರ್ಮಿಗಳು ॥ ಮುಯ್ಯುಸಾನುಪವರ್ಗ ಲೋಕವು । ಬೈವುದೈ ನಿಮ್ಮನಿಬರನು ನಿವು । ಗೈವಡಿಯುಸಹಸಿಗಳವರು ದುರ್ಬಲರು ನೀವೆಂದ ॥೨೩॥ ದಯವನತ್ತಲುತಿದ್ದಿಯಿಮ್ಮನು । ಭಯಮಹಾಬ್ಧಿಯೊಳದ್ದಿ ಸಮರದ । ಜಯವನವರಿಗೆ ಮಾಡಿ ವಮ್ಮಥಿಮತವ ಮರುಳ್ಮಾಡಿ॥ ನಯವ ನೀವೊಯ್ದುವರನಿಂಮನು । ನಿಯಮಿಸುವರಾರುಂಟು ಭಾಗ್ಯೋದಯವಿಹೀನರು ನಾವೆನುತ ಕುರುರಾಯ ಬಿಸುಸುಯ್ದ ॥೨೪॥ ಉಚಿತವನು ನಾವರಿಯೆ ಪಾರ್ಥಿಕ । ರುಚಿತವನು ನೆರೆ ನುಡಿಯೆ ನಿನಗದು । ರುಚಿಸದಿರ್ದೊಡೆ ಮಾಣಲಹಿತವ ನುಡಿವರಾವಲ್ಲ ॥ ವಚನವ ತಿಗಾಢದಲಿ ನೆಟ್ಟುದು । ಸಚಿವನಯವಿನ್ನೇಕೆ ಸೇನಾ । ನಿಚಯಕೆಮ್ಮನು ಮೊದಲಿಗನ ಮಾಡರಸ ಹೋಗೆಂದ ॥೨೫॥ ಖಳನ ಕಳುಹಿದನತಿಬಲನು ತ । ನ್ನೊಳಗೆತಿಳಿದನುಪಾಂಡುನಂದನ । ರುಳಿವು ನಮ್ಮಯ ಮಿಾಂ ಕಾದುವೊಡಸುರರಿಪುವಿಹನು ॥ ಅಳುಕಿ ಕಾದುವರಿಲ್ಲ ಹಾವಿನ । ಹಳವಿಗೆಯ ಮರ್ಖಂಗದುರ ಬಿಂ । ಬಲವ ಕಾಣೆನು ತನಗೆ ಹದನೇನೆಂದು ಚಿಂತಿಸಿದ ॥೨೬॥ ಆದೊಡೇನದಿರಾದಪುಬಲ । ವಾದುದನು ಸಂಹರಿಸಿಯೈವರ । ಕಾದು ಬಿಡುವನುವೊಡಲನಾಸಂಗ್ರಾಮಭೂಮಿಯಲಿ ॥ ಆದುದಾಗಲಿ ಬಳಿಕ ಮಾಡುವ । ಭೇದ ಬೇರಿಲ್ಲೆನುತ ಮಿಗೆ ಸಂವಾದವನು ಬೀಳ್ಕೊಟ್ಟು ಗಂಗಾಸೂನು ಪವಡಿಸಿದ ॥೨೭॥ ಮಗನೊಡನೆ ಮೊದಲಿಸಿ ಭೀಷ್ಮನು । ಪುಗುವಗಡ ಪರಸೇನೆಯಲಿ ಕಾ । ಳಗವ ನೋಡುವೆನೆಂಬವೊಲು ತಲೆದೋರಿದನು ದಿನಪ ॥ ನಗೆಯುಡುಗಿ ನಾಚಿದ್ದವು ಕುಮುದಾ । ಳಿಗಳು ಹೊಂಗಾಣಿಕೆಯ ಹರುಷದೊ । ಳೊಗೆದು ವಿರಹವ ಬೀಳುಕೊಟ್ಟವು ಜಕ್ಕವಕ್ಕಿಗಳು ॥೨೮॥ ಅರಸನುಪ್ಪವಡಿಸಿದನವನೀ । ಶ್ವರ ವಿಹಿತಸತ್ಕರ್ಮವನು ವಿಶ್ವಸ್ಮರಿಸಿ ಸಿಂಹಾಸನಕ ಬಂದನು ಹರುಷದುಬ್ಬಿನಲಿ ॥ ಚರರನಟ್ಟಿದನಖಿಳಧರಣೀ । ಶ್ವರನಿಕಾಯಕೆ ಸಕಲಸುಭಟರ । ಬರಿಸಿದನು ತರಿಸಿದನು ಪಟ್ಟಕೆ ಬೇಹವಸ್ತುಗಳ॥ ಗುರುಸುತನು ರವಿತನುಜವಾದ್ರೇ। ಶ್ವರಕೃಪದ್ರೋಣಾದಿಗಳು ಬಂ । ದರಮನೆಯ ಪೊಕ್ಕರು ನದೀನಂದನನ ಬಳಿವಿಡಿದು ॥ ನೆರೆದುದವನಿಸುರಾಳಿ ಕೇ । ಸರಿಯಪೀಠವ ರಚಿಸಿ ವೈದಿಕ । ಪರಿಣತರ ಮತದಿಂದ ವಿಸ್ತರಿಸಿದರು ಮಂಗಳವ ॥೩೦॥ ಕಮಲಜನ ಹೋಲುವೆಯ ಧಾರುಣಿ । ಯಮರಕರದಲಿ ನಿಗಮಪೂತೋ । ತ್ತಮಸುಧಾರೆಗಳಿಳಿದು ವಿಭಸನ್ನಿಭನ ಮಸ್ತಕಕೆ ॥ ಅಮಮ ಉರುತರವ್ಯೋಮಗಂಗಾ । ವಿಮಲನದಿ ಯಿಳಿತಂದು ಸಾರ್ದುದೊ । ಹಿಮಗಿರಿಯಲೆಂಬಂತೆಯೆಸೆದುದು ಪಟ್ಟದಭಿಷೇಕ ॥೩೧॥ ಆರತಿಗಳೆತ್ತಿದ್ದವು ಬಳಿಕು । ಪ್ಪಾರತಿಯು ಸೂಸಿದವು ನೃಪಪರಿ । ವಾರವೆಲ್ಲರು ಬಂದು ಕಂಡರು ಕಾಣಿಕೆಯ ನೀಡಿ ॥ ಕೌರವೇಂದ್ರನ ಮೋಹದ ಗುರು । ಭಾರ ಭೀಷ್ಮಂಗಾಯ್ತು ಸಮರದ । ವೀರಪಟ್ಟವನಾಂತನಾಚಾರ್ಯಾದಿಗಳು

ಮಣಿಯೆ ॥೩೨॥ ಈನದೀನಂದನನ ಬಲದಲಿ। ಸೇನೆ ಶಿವಗಂಜುವುದೆ ಕುಂತೀ । ಸೂನುಗಳಿಗಾರಣ್ಯಜಪವಿನ್ನವರಿಗಿಳೆಯೇಕೆ ॥ ಮಾನನಿಧಿ ಭೀಷ್ಮಂಗೆ ಸಮರಸ । ಮಾನಭಟನಿಸ್ಸಾವನೆಂದು ಮ । ನೋನುರಾಗದಮೇಲೆ ಕೌರವರಾಯ ಬಣ್ಣಿಸಿದ ॥೩೩॥ ಎಲೆಮರುಳೆ ಭೂಪಾಲ ಕೌರವ । ಕುಲಪಿತಾಮಹನಹನು ಧರ್ಮಂ । ಗಳಲಿ ಪರಿಣತನಹನು ಕಾಳಗವೇಕೆ ಯಿವರೇಕೆ ॥ ಗಳದ ಗರಳದ ದನಿಯ ಭಟ್ಟನ್ನುಂ । ಡಳಿಯೊಡನೆ ಮನ್ನಣೆಯೆ ಹೇಳ್ಕೆ । ಕಳಿದಹರೆಯಂಗೆಂದು ಕಳವಳಿಸಿದನು ಕಲಿಕರ್ಣ ॥೩೪॥ ತೊಗಲು ಸಡಿಲಿದಗಲ್ಲ ಬತ್ತಿದ । ಹೆಗಲನಲುಗಿದನರೆತ ವಿಸ್ತಾರ್ಯಯ । ಜಗುಳ್ದಹಲುಗಳ ನಟ್ಟಕಂಗಳ ನೆಗ್ಗಿದವಯವದ ॥ ಅಗಿಯಲಲುಗುವತಲೆಯ ಮುಪ್ಪಿನ । ಮುಗುದನೀತನ ಜಯಸಹೇಳಿದು । ನಗೆಯೆಸೆದು ದೈರಾಯಕಟಕದೊಳೆಂದನಾಕರ್ಣ॥೩೫॥ ಇಲ್ಲಿ ಭೀಷ್ಮರು ರಾಘವನ। ಬಲದಲ್ಲಿ ಜಾಂಬವರುಭಯವೀರರು । ಬಲ್ಲಿದರು ಬಳಿಕುಳಿದವೀರರ ಶೌರ್ಯವೊಪ್ಪುವುದೆ ॥ ನಿಲ್ಲು ನೀಕೊಲಲೆಳಸುವೊಡೆ ಹಗೆಯಲ್ಲಿಗೊಪ್ಪಿಸಿ ಕೊಲಿಸರೇತಕೆ । ಬಿಲ್ಲಿನಲಿ ಬಲಿದಪ್ಪಗೆಡಹುವೆನೆಂದನಾಕರ್ಣ ॥೩೬॥ ಹಾನುಡಿಯದಿರು ನಿನ್ನ ಹವಣಿನ । ಮಾನಿಸನೆ ಸುರಸಿಂಧುಜಾತನು । ನೀನಿನಜಮೇಲರಿಯೆ ಜವ್ವನದುಬ್ಬುಗೊಬ್ಬಿನಲಿ ॥ ನೀನುಸರಿಯೇರಾಮಕಟಕದ । ಹಾನಿಯನು ಕಾಯ್ದಾತ ಜಾಂಬವ । ನೇನುಕೊರತೆಯೆನುತ್ತ ನುಡಿದನು ಗರುಡಿಯಾಚಾರ್ಯ ॥೩೭॥ ರಣದೊಳೊಡ್ಡಿದರಾತಿಗಳನೀ। ಹಣೆಯಪಟ್ಟದವೀರಜಯಿಸಲು । ಹಣಿವಿಗಾನೋಲೈಸೆ ಮಾಡುವಿ ಸಮರದಲಿತಪವ ॥ ರಣದಲಿವರತಗೆಡೆದರಾದೊಡೆ । ಮಣಿಯದಿರಿದಪೆನೆನ್ನಬರ ಮಾ। ರ್ಗಣೆಯನಾಹವದೊಳಗೆ ಸರಳಿಸೆನೆಂದನಾಕರ್ಣ ॥೩೮॥ ಗಳಹದಿರು ರಾಧೇಯ ನಿನ್ನಯ । ಕುಲವ ನೋಡದೆ ಮೀರೆದಪ್ಪುವೆ । ಸಲುಗೆಯದಲೇ ಸ್ವಾಮಿಸಂಪತ್ತಿನ ಸಗಾಢತನ ॥ ಕಲಿಗಳುಳಿದಂತೆನ್ನ ಸರಿಸಕೆ । ನಿಲುವನಾವನು ದೇವದಾನವ । ರೊಳಗೆ ನಿನ್ನೊಡನೆಂದು ಫಲವೇನೆಂದನಾಭೀಷ್ಮ ॥೩೯॥ ಕೇಳು ಕೃಪ ಕೇಳ್ಕೆ ಜಯದ್ರಥ । ಕೇಳು ಗುರುಸುತ ಶಲ್ಯ ಕುಂಭಜ । ಕೇಳು ದುಶ್ಶಾಸನ ವಿಕರ್ಣ ಸುಲೋಚನಾದಿಗಳು ॥ ಕಾಳಗದೊಳರಿ ದಶಸಹಸ್ರನೃ । ಪಾಲರನು ಮಣಿಖಚಿತ ನಿರ್ಮಲ । ಮೌಳಿಗಳ ದಿಗುಬಲಿಯಕೊಡುವೆನು ದಿವಸದಿವಸದಲಿ ॥೪೦॥ ಹರಿಯ ಚಕ್ರವ ತುಡುಕಿಸುವೆವಾ । ನರಪತಾಕನ ರಥವ ಹಿಂದಕೆ । ಮುರಿಯಲಿಸುವೆನು ಮಹಿಮರಿಬ್ಬರ ನಡವಳಿಯ ಕೆಡಿಸಿ ॥ ಸುರನರೋರಗರೊಳಗೆ ಮಿಡುಕು । ಕ್ಷರಿಗೆ ಕಟ್ಟಿದತೊಡರು ನೀನು । ಬ್ಬರಿಸಿ ನುಡಿವರೆನೊರಜ ಕೊಲುವೊಡೆ ಕೈದುವೇಕೆಂದ ॥೪೧॥ ಜಲಧಿಯುಬ್ಬಿದವೊಲು ಸಭಾವಂ । ಡಳಿಯೊಳಗೆಸಂವಾದಹೃದಯರ । ಕಳಕಳಿಕೆ ದಿಗುತಟವ ಗಬ್ಬರಿಸಿದುದು ಗುಪಿತದಲಿ ॥ ಕೆಲರುಭೀಷ್ಮನನಿನತನೂಜನ । ಕೆಲರು ಕೊಂಡಾಡಿದರು ಭೂಪತಿ । ಯಳುಕಿ ಭೀಷ್ಮನ ಬೇಡಿಕೊಂಡನು ವಿನಯಪರನಾಗಿ ॥೪೨॥ ಬೀಳುಕೊಂಡುದು ರಜನಿ ಮರುದಿನ । ವಾಳುಕುದುರೆಯು ನೆರಹಿ ಧರಣೀ । ಪಾಲಸುಮುಹೂರ್ತದಲಿ ಹೊಯ್ಸಿವನಂದು ಹೊರಗುಡಿಯ ॥ ಸೂಳವಿಸಿದವು ಲಗ್ಗೆಯಲಿ ನಿ । ಸ್ಸಾಳಕೋಟಿಗಳರುಚತುರ್ಬಲ । ಮೇಳದಲಿ ಬಂದುದು ಸಮಸ್ತಮಹಾಮಹೀಶ್ವರರು ॥೪೩॥ ವೀರಧೃತರಾಷ್ಟ್ರಂಗೆ ವರಗಾಂ । ಧಾರಿಗೆರಗಿದೆನವರಹರಕೆಯ । ಭೂರಿಗಳ ಕೈಕೊಳುತಲವನೀ ಸುರರಿಗಭಿನಮಿಸಿ ॥ ಚಾರುಚಮರದ ನಿಕರದವರೊ । ಯ್ಯಾರಿಸಲು ಜಯರವಧ್ವರಭಸದು। ದಾರವೆಸೆಯಲು ಬೀಳುಕೊಂಡನು ರಾಜಮಂದಿರವ॥೪೪॥

ಒಡನೊಡನೆ ಕರಿತುರಗವೇರಿದ । ರೊಡನೆ ಹುಟ್ಟಿದ ಶತಕುಮಾರರ । ಗಡಣದಾಪ್ತರು ಕರ್ಣ ಶಕುನಿ ಜಯದ್ರಥಾದಿಗಳು ॥ ಅಡಸಿದ್ದವು ಝಲ್ಲರಿಗಳೆಳ್ತುವ । ತುಡುಕಿದ್ದವು ಸೀಗುರಿಗಳಂತ್ಯದ । ಕಡಲವೊಲು ಪಡೆ ನಡೆಯೆ ಹಸ್ತಿನಪುರವ ಹೊರವಂಟ ॥೪೫॥ ಭುಗುಭುಗಿಪ ಚಂಬಕನ ಗಜಕೋ । ಟೆಗಳ ಮುಂದಣಡಾವೆಗಳ ಮಿಗೆ । ಗಗನ ವೊಡನೊಡೆದೊದರೆ ಮೊರೆವ ಗಭೀರ ಭೇರಿಗಳ ॥ ಅಗಿವ ಪಟಹ ಮೃದಂಗಕಹಳಾ । ಳಿಗಳ ಕಳಕಳ ಬಹಳ ದೆಸೆದಿ । ಕ್ಕುಗಳ ಮಾತಾಡಿಸಿ ಮಹಾಬಲ ತೆರಳಿತಿಭಪುರಿಯ ॥೪೬॥ ಅಗಿವವಜ್ರದ ಹೊಳಹುಗಳೊ ಮಿಗೆ । ಹಗಲೊಡೆಯನ ಪ್ರಭೆಯೊ ಮಿಂಚಿನ । ಬಿಗಿಯತೆಕ್ಕೆಯೊ ಸೂರ್ಯಕಾಂತಚ್ಛವಿಯ ತೆಕ್ಕೆಗಳೊ ॥ ಜಗುಳಿದೊರೆಗಳ ಜಾಳಿಹೊಗರಲ । ಗುಗಳಝಳಪಿಸೆ ಹೊಳೆಹೊಳೆವ ಕೈ । ದುಗಳ ಹಬ್ಬುಗೆವೆಳಗು ಗಬ್ಬರಿಸಿದವು ದಿಗುತಟವ ॥೪೭॥ ಜಲಧಿಗಳ ಕುಡಿದುದು ನಭೋಮಂ । ಡಲವ ಸೆಳೆದುದು ಸುರನದಿಯನು । ಕ್ಕುಳಿಸಿತಖಿಳಾದ್ರಿಗಳ ನುಂಗಿತು ದಿವವನಳುಕಿಸಿತು ॥ ನೆಲನ ಸವಸಿತು ನೆಸ್ಸಿನ ಕಂ । ಗಳನು ತುಡುಕಿತು ನೆನೆಯಬಾರದು । ನಳಿನಭವಹರನಾದನೆನುತುಚ್ಚಳಿಸೆಪದಧೂಳಿ ॥೪೮॥ ಸುರಿವಮದಗಜಧಾರೆಯಲಿ ಹೊಸ । ಸರಸಿಗಳು ಸಂಭವಿಸಿದವು ನೃಪ । ವರರ ಮಕುಟದ ಮಣಿಯಲಾದವು ಚಂದ್ರಸೂರಿಯರು ॥ ಗಿರಿಗಳಾದವು ದಂತಿಯಲಿ ಪಡಿ । ಧರಣಿಯಾದವು ಛತ್ರಚಮರಿಯ । ಲರರೆ ನೂತನಸೃಷ್ಟಿಯಾಯ್ತು ವಿರಿಂಚಿಸೃಷ್ಟಿಯಲಿ ॥೪೯॥ ಅರರೆ ನಡೆದುದು ಸೇನೆ ಕುಲಗಿರಿ । ಯೆರಡು ಕೂರುಮಫಣಿಪರಿಬ್ಬರು । ಕರಿಗಳೆಂಟ್ಟಿದಿಸಲು ಮಿಗೆ ಹದಿನಾರನಳವಡಿಸಿ ॥ ಸರಸಿಜೋದ್ಭವ ರಚಿಸದಿರ್ದೊಡೆ । ಧರಿಸಲಾಪ್ಪುದೆ ಭರವನೆನೆ ಕುರು । ಧರೆಗೆ ಬಂದುದು ಸೇನೆ ಪಯಣದಮೇಲೆ ಪಯಣದಲಿ ॥೫೦॥ ನಡೆದು ಬಿಡದು ಕೌರವೇಂದ್ರನ । ಪಡೆ ಕುರುಕ್ಷೇತ್ರಕ್ಕೆ ಮೂಡಣ । ಕಡೆಯಲಳವಡಿಸಿದರು ಬೀಡಾಯಿತ್ತು ಪಹಿಲದಲಿ ॥ ಗುಡಿಗಳನು ಹೊಯ್ಸಿದರು ಲೋಹದ । ತಡಿಕೆಗಳ ನಳವಡಿಸಿ ಬೀಡಿನ । ನಡುವೆಬಿಡಿಸಿದ ನವನಿಪಾಲನ ರಾಜಮಂದಿರವ ॥೫೧॥ ಅಳವಿನಾಲ್ವತ್ತೆಂಟುಯೋಜನ । ದಳವಿಯೊಳಗಿಟ್ಟಣಿಸಿ ಬಿಟ್ಟುದು । ವಳಯದಗಳಲ್ಲಲ್ಲಿ ತಳಿಮುಳುವೇಲಿಪಡಿಯಗಳು ॥ ಕೆಲದೊಳೊಪ್ಪುವನೇತ್ರವತಿ ನಿ । ರ್ಮಳಗಭೀರೋದಕದನದಿ ಕುರು । ಬಲದ ಪಾಳೆಯದಂದವಿದು ಕೇಳ್ಳ ಮಹೀಪಾಲ ॥೫೨॥ ಪಡೆಯ ಮುಂಗುಡಿ ಭೀಷ್ಮನದು ಬಲ । ದೆಡೆಗೆ ಪಿಂಗಳಿಯಾತನದು ನೃಪ । ಗಡಣ ಬೀಡಿನ ಕಾಹು ಗಂಗಾಸುತನ ಗುರುಭಾರ ॥ ನಡೆವೊಡಾತನ ಮಾತು ಮರಳಿದು । ಬಿಡುವೊಡಾತನ ನೇಮ ಕೌರವ । ಪಡೆಗೆ ಭಾರಿಯ ವಜ್ರಪಂಜರವಾದನಾಭೀಷ್ಮ ॥೫೩॥ ಕೇಳು ಜನಮೇಜಯಧರಿತ್ರೀ । ಪಾಲ ಧೃತರಾಷ್ಟ್ರಂಗೆ ಮಕ್ಕಳ । ಮೇಲೆ ಮನವಾಯ್ತಖಿಳ ಶೋಕೋದ್ರೇಕಮನನಾಗಿ ॥ ಕಾಳಗದೊಳೇನಾದರೋ ಭೂ । ಪಾಲತಿಲಕರು ದೃಗುವಿಹೀನನ । ಬಾಳಿಕೆಯ ಸುಡಲೆನುತ ತನ್ನೊಳು ಹಿರಿದು ಚಿಂತಿಸಿದ ॥೫೪॥ ಆಸಮಯದಲಿ ರಾಯ ವೇದ । ವ್ಯಾಸಮುನಿಯೈತಂದು ಗತಪರಿ । ತೋಷವನು ಸಂತೈಸಿ ಕರಸಿದನಂದು ಸಂಜಯನ ॥ ಆಸಮಯವೃತ್ತಾಂತ ನಿನಗೆ ಸ । ಮಾಸವಿಸ್ತರವಾಗಿ ಬರಲಿ ಮ । ಹೀಶತಿಲಕಂಗರುಹುವುದು ನೀನೆಂದು ನೇಮಿಸಿದ ॥೫೫॥ ಪರಮವೇದವ್ಯಾಸಮುನಿಪನ । ಕರುಣವಾಗಲು ಕಂಗಳಿಗೆ ಗೋ । ಚರಿಸಿತಾಭಾರತ ಮಹಾಸಂಗ್ರಾಮಸೌರಂಭ ॥ ಧುರದ ವೃತ್ತಾಂತವನು ಚಿತ್ತೈ । ಸೆರಸ ತಿಳುಹುವೆನೆಂದು ಸಲೆ ವಿ ।

ಸ್ಮರಿಸಬಗೆದನು ಸಂಜಯನು ಧೃತರಾಷ್ಟ್ರಭೂಪತಿಗೆ ॥೫೬॥ ಅವಧರಿಸು ಧೃತರಾಷ್ಟ್ರ ಗಂಗಾ । ಭವನ ನೇಮದಲಂದು ಮಹದಾ । ಹವಕೆ ನಡೆವುದು ಕಟಕವಲ್ಲಿಗುಲೂಕನೆಂಬವನ ॥ ಇವರು ಕಳುಹಿದೊಡವನುರಿಪುಪಾಂ । ಡವರ ಹೊರೆಗೈತಂದು ಮಹದಾ । ಹವಕೆ ನಿಂದರು ಧರ್ಮಪುತ್ರ ವಿಲಂಬವೇಕೆಂದ ॥೫೭॥ ಅಗ್ಗಳೆಯನೆಮ್ಮರಸ ಸಂಪ್ರತಿ । ನೆಗ್ಗಿ ಕೆಟ್ಟಿರಿ ನೀವು ನಿಮಗೀ । ಹುಗ್ಗಿಗರು ಹುರಿಗೂಡಿ ಗೆಲಿದೇನಿಳೆಯ ಕೊಡಿಸುವರೆ ॥ ತಗ್ಗಿ ತಾಮಾತೇಕೆ ರಣದಲಿ । ನುಗ್ಗುನುಗ್ಗಾಗದೆ ಸಹೋದರ । ರೊಗ್ಗ ಮುರಿಯದೆ ಮಾಣದುರೆಕೇಡಾಯ್ತು ನಿಮಗೆಂದ ॥೫೮॥ ಬೆಂಬಲಕೆ ತಾನೆಂದು ಬಯಲವಿ । ಡಂಬದಲಿ ಕಾಳಗವ ಮಸೆದಿರಿ । ನಂಬಿ ಕೆಡುವಿರಿ ಕೃಷ್ಣನನು ನೀವೇನ ಮಾಡುವಿರಿ ॥ ಇಂಬುಗೈವುದು ನೀತಿ ರಣಕೆ ತ್ರಿ । ಯಂಬಕನ ನಮರಾಧಿಪನ ಕೈ । ಕೊಂಬನೇ ಭೂಪಾಲನೆನೆ ಕೈಕೊಂಡನಾಭೀಮ ॥೫೯॥ ಸೀಳು ಕುನ್ನಿಯ ಬಾಯನೆಲವೋ । ತೋಳತೀಟೆಯನೆವನನೆತ್ತಿಯ । ಮೇಲೆ ಕಳೆವೆನು ಕಲಕುವೆನು ಕೌರವಕುಲಾಂಬುಧಿಯ ॥ ಹೇಳು ಹೋಗಾಸಾಯನಾಡಿಸಿ । ಕೇಳುತಿರಲೇಕಹಿತಕೌರವ । ಕಾಲ ಪವನಜನೆಂದು ನಿನ್ನೊಡೆಯಂಗೆ ಹೇಳೆಂದ ॥೬೦॥ ಮಾಡಲಿದ್ದುದು ಬಹಳ ಪೌರುಷ । ವಾಡಿ ಕೆಡಿಸಲದೇಕೆ ಕೌರವ । ರಾಡಿ ಕೆಡಿಸಲಿ ನೀತಿಹೀನರ ಮಾತು ನಮಗೇಕೆ ॥ ಮಾಡಿದೆವು ಗುರುಭಾರವನು ಮುರ । ಗೇಡಿಯಲಿ ರಣಪಾರುಪತ್ಯವ । ಮಾಡುವಾತನು ಕೃಷ್ಣನೆಂದನು ಧರ್ಮಸುತ ನಗುತ ॥೬೧॥ ವೈರಿದೂತನ ಕಳುಹಿದರು ಕೈ । ವಾರಿಗಳು ಜಯ ಜೀಯಯೆನೆ ಹೊಂ । ದೇರ ತರಿಸಿದನಬುಜನಾಭನ ಪದಯುಗಳಕೆರಗಿ ॥ ವಾರುವನ ಖುರನಾಲ್ಕರಲಿ ಮಣಿ । ಚಾರುಕನಕವ ಸುರಿದು ತನ್ನಯ । ತೇರನೇರಿದನೊರಲಿದವು ನಿಸ್ಸಾಳಕೋಟಿಗಳು ॥೬೨॥ ಹರಿಯಬಲವಂದಣ್ಣನಂಘ್ರಿಗೆ । ಶಿರವ ಬಾಗಿ ನಿಜಾಯುಧವ ವಿ । ಸ್ತರಿಸಿ ಪವನಜಪಾರ್ಥಮಾದ್ರೀಸುತರು ರಥವೇರಿ॥ ಧುರಕೆನಡೆದರು ದ್ರುಪದಸಾತ್ಯಕಿ । ವರವಿರಾಟಾದಿಗಳು ಚೂಣಿಯೊ । ಳುರವಣಿಸಿದುದು ಸೇನೆ ನಡೆದುದು ಮುಂದೆ ಮೋಹರಿಸಿ ॥೬೩॥ ಬಳಿಕಧೃಷ್ಟದ್ಯುಮ್ನನಾಜ್ಞೆಯೊ । ಳೆಳವಿಗೊಟ್ಟುದು ಬಂದು ಮೂಡಣ । ಜಲಧಿಗಾಂತುದು ಪಶ್ಚಿಮಾಂಬುಧಿಯೆಂಬರಭಸದಲಿ ॥ ಪಳಹವದ ತೋಮರದ ಕುಂತಾ । ವಳಿಯ ಚಮರದ ಛತ್ರಮಯಸಂ । ಕುಳದಿನೆಸೆದುದು ಭೂತನಾಲ್ಕಾಕಾಶಗತವಾಗೆ ॥ ॥೬೪॥

ಅಂತು ಸಂಧಿ ೧ಕ್ಕೆ ಪದ ೬೪ಕ್ಕಂ ಮಂಗಳಮಸ್ತು.



ಎರಡನೆಯ ಸಂಧಿ.

ಸೂಚನೆ॥ ಸಾಮದಲಿ ರಿಪುಬಲದ ಸುಭಟ । ಸ್ತೋಮವನು ತನ್ನೊಳಗುಮಾಡಿದ । ಭೂಮಿಪತಿಯಮನಂದನನು ಸಂಗ್ರಾಮಕನುವಾದ ॥

ಪದ॥ ಕೇಳು ಜನಮೇಜಯಧರಿತ್ರೀ । ಪಾಲ ಧೃಷ್ಟದ್ಯುಮ್ನಭೀಷ್ಮರ । ಪಾಳೆಯದಲಂದವಮ ಕೈಗೈದಿಳೆಗೆ ಹೊಸತೆನಿಸಿ ॥ ಕಾಳಗಕ್ಕನುವಾಗಿ ರಥತುರ । ಗಾಳಿ ಕರಿಕಾಳಾಳುಸುಭಟರ । ಮೇಲುಗೈಚಮರಗಳವೀಕ್ಷಿಸುತಿರ್ದುದುಭಯಬಲ ॥೧॥ ಮಡವುಸೋಂಕದಮುನ್ನ ಗಗನವ । ತುಡುಕ

ಬಗೆದವು ತೇಜಿಗಳು ಕೈ । ಸಡಿಲೆ ವಾಘೆಯಸೂಸಿ ಸುಳಿದವು ರಥದ ವಾಜಿಗಳು ॥ ತುಡುಕುವೆಂಕುಶ ದಿಂದ ಮುನ್ನಿಳೆ । ಯೊಡಯೆ ಗಜ ಗಾಡಿಸಿದವರಸನ । ಬಿಡುಹ ತಡೆಯೊಡೆಗಲಸಬಗೆದುದು ವಿಗಡ ಪಾಯದಳ ॥೨॥ ಗಜಗಳುರುಗರ್ಜನೆಯವಾಜಿ । ವ್ರಜದ ಹೇಷಾರವದ ತೇರಿನ । ಗಜಬಜದ ಕಾಲಾಳ ಕಡುಹಿನ ಬೊಬ್ಬೆಯಬ್ಬರದ ॥ ಗಜರುವೆಗ್ಗದಕಹಳೆಗಳ ದಿ । ಗ್ವ್ರಜವ ನುಡಿಸುವರಾಯಗಿಡಿಗನ । ವಿಜಯಬಲ ತೊಡರಿಕ್ಕಿತೈ ಕಲ್ಪಾಂತಸಾಗರಕೆ ॥೩॥ ತಿಗಡಲೊದರುವಹರಿಗೆಗಳ ಗೌ । ರಗಿವಹೆಗ್ಗಾಳೆ ಗಳ ರಭಸದೊ । ಳಗಿವಖಡುಗದ ಹೊದರ ಡೊಂಕಣಿಗಳ ಢಣಾಕೃತಿಯ ॥ ಬಿಗಿದಬಲುಬೊಬ್ಬೆಗಳ ಬಿರುದರ । ವಿಗಡವೂದಲೆಗಳ ಮಹಾಧ್ವನಿ । ಬಗಿದುದೈ ತಾವರೆಯತನಯನ ಕರ್ಣಕೋಟರವ ॥೪॥ ಕುಣಿವಕುದುರೆಯ ಮದಮುಖದ ಭಾ । ರಣೆಯಲೊದೆವಾನೆಗಳ ತುರುಗವ । ಕೆಣಕಿ ಕೀಲಿಸಿಹಿ ಡಿವತೇರಿನ ಸೂತರೋಜೆಗಳ ॥ ಅಣೆವಹರಿಗೆಯನೊಬ್ಬರೊಬ್ಬರ । ಸಣಸಿನಲಿ ತಿವಿದಗಿವಭಟರೊ । ಡ್ಡಣೆಸಘಾಡಿಸಿತುಭಯಬಲದಲಿ ಭೂಪಕೇಳೆಂದ ॥೫॥ ತಳಪದಲಿ ಝಳಪಿಸುವಪಾಯುಧ । ಹೊಳೆ ಹುಗಳ ಹೊಸಮಸೆಯ ಝಳಪದ । ಬೆಳಗುಗಳ ಬಿಟ್ಟೆಲರ ಧಾರೆಯ ಬಳ್ಳಿಮಿಂಚುಗಳ ॥ ಅಲಗಿನು ಬ್ಬರ್ಗ್ಗಡಿಯ ಹಬ್ಬುಗೆ । ಥಳಥಳಿಸಿ ಸೈದೆಗೆದುದೈ ಹೆ । ಬ್ಬಲದಿವಾಕರಶತವನೆನೆ ಹೆಸರಿಡುವನಾರೆಂದ ॥೬॥ ಕೇಳು ಜನಮೇಜಯಧರಿತ್ರೀ । ಪಾಲ ಭೀಷ್ಮನ ಹೊರೆಗೆ ಕುರುಭೂ । ಪಾಲ ಬಂದನು ಬಿನ್ನವಿ ಸಿದನು ಮುಕುಳಕರನಾಗಿ ॥ ಮೇಳವಿಸಿ ಮಂಡಿಸಿದರಿಪುನೃಪ । ಜಾಲದೊಳು ಯಮಸೂನುವಾವ ನ । ಮೇಲೆ ಭೀಮಾದಿಗಳ ವಿವರಿಸಿ ತೋರಬೇಕೆಂದ ॥೭॥ ನಸುನಗೆಯ ಚೂಣಿಯಲಿ ರತುನದ । ರ ಸುಮೆಪಸರಿಸಿ ಕೌರವೇಂದ್ರಂ । ಗೆಸುರಿದನು ಕಲಿಭೀಷ್ಮನವಧರಿಸೈ ಮಹೀಪತಿಯೆ ॥ ಪಸರಿಸಿ ದ ಮುಗಿಲೊಡ್ಡಿನಲಿ ಮಿಂ । ಚೆಸೆವವೊಲು ಗಜಬಲದ ಮಧ್ಯದೊ । ಳೆಸೆವನಾತನು ವೀರಧೃಷ್ಟ ದ್ಯುಮ್ನನೋಡೆಂದ ॥೮॥ ಇವಕಣಾ ಪಾಂಡವರ ಸೇನಾ । ರ್ಣವಕೆನಾಯಕನಿವನ ಕೆಲಬಲ । ದವ ರು ತೆಕ್ಕೆಯ ತೇರುತೇಜಿಯ ಥಟ್ಟಿನುನ್ನತಿಯ ॥ ಬವರಿಗರು ಪಾಂಚಾಲಕುಲಸಂ । ಭವರು ದ್ರುಪದ ಸಹೋದರರರುವ । ತ್ತ್ಮವರು ಸೃಂಜಯ ವರಯುಧಾಮನ್ಯೂತ್ತಮೌಂಜಸರು ॥೯॥ ಡೊಂಕಣಿಯ ಹೊದರುಗಳಲೆಡಬಲ । ವಂಕದಾನೆಯ ಥಟ್ಟುಗಳ ನಿ । ಶ್ಶಂಕಮಲ್ಲನು ದ್ರುಪದನಾತವಿರಾಟನೃಪನೀ ತ ॥ ಮುಂಕುಡಿಯ ನಾಯಕರಿವರು ಪರಿ । ಯಂಕಕಾರರು ಯಿವರ ಬಳಿಯಲಿ । ಬಿಂಕದೆರಡಕ್ಷೋಣಿ ಬಲವದೆ ಭೂಪಕೇಳೆಂದ ॥೧೦॥ ಇವರ ಮೋಹರದಾಚೆಯಲಿ ನಿಂ । ದವರ ಕುಂತಿಯಭೋಜಕೈಕೆಯ ರಿವರ ಬಳಿಯಲಿ ತಳಿತುದೆರಡಕ್ಷೋಹಿಣೀಸೇನೆ ॥ ಇವರಹತ್ತಿರೆ ಮೋಹರಿಸಿ ನಿಂ । ದವರು ಪಾಂಡ್ಯ ಶಿಖಂಡಿಸೋಮಕ । ರಿವರ ಮೋಹರದೊಳಗೆ ಯೊಂದಕ್ಷೋಹಿಣೀಸೇನೆ ॥೧೧॥ ಅರೆನೆಲೆಯ ದಳದತ್ತ ದೃಷ್ಟಿಯ । ಧರಧುರದ ನೋಟದಲಿ ಕುಂತೀ । ವರಕುಮಾರಕರೈವರಮಳದ್ರೌಪದೀಸುತರು ॥ ಉರಿ ಯಕರುವಿಟ್ಟಂತೆ ಪ್ರಳಯದ । ಹರನ ಖತಿ ಹೊಗುವಂತೆ ಸಿಡಿಲಿನ । ಹೊರಳಿ ಹೊದರೆದ್ದಂತೆ ನಿಂದಿ ರ್ದವ ಘಟೋತ್ಕಜನು ॥೧೨॥ ಭೀಮಸೇನನ ಮಗನವನು ಸಂ । ಗ್ರಾಮಚೌಪಟನಿವನ ಬಳಿಯಲಿ ತಾಮಸರು ಬಲುಮೊಗದ ಹೊಗರಿನ ಹೊಳೆವದಾಡೆಗಳ ॥ ಕಾಮರೂಪಿಗಳೊಂದು ಕೋಟಿಸ । ನಾವ ದೈತ್ಯರು ಕುಂಭಕರ್ಣ್ಣ । ಸ್ತೋಮವೆನಲೈದಿದೆ ಕೃತಾಂತನ ಕ್ರೂರಪರಿವಾರ ॥೧೩॥ ಅವನ ಬಳಿಯಲಿ

ಫಲುಗುಣಗೆ ಮಲೆ । ವವರ ಗಂಡನು ರಿಪುಕುಮಾರಕ । ನಿವಹದಾವಾನಳನ ನೋಡಭಿಮನ್ಯುಫಲುಗು ಣನ ॥ ಕುವರನಿವಮಗನಲ್ಲ ಬಲುಗೈ । ಇವನ ಮೋಹರದೊತ್ತಿನಲಿ ನಿಂ । ದವರು ಸಾತ್ಯಕಿವಿಂದನ ನುವಿಂದಾದಿನಾಯಕರು ॥೧೪॥ ಇವರೊಳೊಂದಕ್ಷೋಹಿಣಿಯಿದೆ ಮಾ । ಧವನಮನೆಯದುದುಷ್ಟಕೇತು। ಪುರನೀತನು ಚೈದ್ಯನಂದನನಿವರಕೂಡಿಹನು ॥ ಅವರ ಹೊರೆಯಲಿ ವೀರಸೇನಾ । ನಿವಹದಲಿ ಸಹದೇವ ನಾತನ। ಸಮಹರೆಯನಕುಲಾಂಕರಿವರಾಹವಧುರಂಧರರು ॥೧೫॥ ಇತ್ತಲಿದೆ ಕಲ್ಪಾಂತರುದ್ರನ । ಮೊ ತ್ತಕಾಳೋರಗನ ಜಂಗುಳಿ । ಮೃತ್ಯುವಿನ ಮೋಹರ ಕೃತಾಂತನ ಥಟ್ಟು ಭೈರವನ॥ ತೆತ್ತಿಗರ ದಾವಣಿ ಯೊಳೆಣ್ಣನ । ಮತ್ತವಾರಣಭೀಮಸೇನನ । ನಿತ್ತ ನೋಡೈ ಮಗನೆ ಕೌರವಕೇಣಿಕಾರರನು॥೧೬॥ಕೆಲ ದಲಾತರುವಾಯಲಾಹವ । ದಳಲಿಗರ ಮೇಳದಲಿ ಮಕುಟದ । ಲಲಿತರತ್ನಪ್ರಭೆಯ ಲಹರಿಯ ಲಾವ ಣಿಗೆ ಮಿಗಲು ॥ ಚಲತುರಂಗದ ಭಾರಿಯಾನೆಯ । ದಳದ ರಥಪಾಯ್ದಳದ ಹೊದರಿನ । ವಳಯದಲಿ ನಿಂದಾತನೆಹಿತನು ರಾಯಧರ್ಮಜನು ॥೧೭॥ ತಿಳಿಯಲೊಬ್ಬನ ಮೈಯರೋಮದ । ಕುಳಿಯಲಬುಜ ಭವಾಂಡಕೋಟಿಯ । ಸುಳಿವುಗಡ ಶ್ರುತಿನಿಕರ ಮೊರಲಿದೊಡೊಳಗುದೋರಗದ ॥ ಹಲವುಮಾತೇನಾ ತನೀತನ । ಬಳಿಯ ಭಂಡಿಯ ಬೋವನಾಗಿಯೆ । ಸುಳಿವನೀತನ ನೋಡುಮಗನೇ ವೀರನಾರಯಣ ॥೧೮॥ ಆತನೆಡವಂಕದಲಿ ಹನುಮನ । ಕೇತನದ ಗರುವಾಯಿಯಲಿ ನವ । ಶಾತಕುಂಭ ವರೂಥದಲಿ ನೆರತೀವಿದಸ್ತ್ರದಲಿ ॥ ನೂತನಾಶ್ವನಿಕಾಯ ಖುರಪುಟ । ಧೂತ ಧೂಳೀಪಟಲನಹಿತದಿ । ಶಾಪಟನು ಜಯಯುವತಿವಿಟನರ್ಜುನನ ನೋಡೆಂದ ॥೧೯॥ ಅದೆ ಧುರಂಧರದುರುಳರೊಡ್ಡಿನ । ಹೊದರ ಬಣ್ಣಿ ಸಲೆನಗೆ ನೂಕದು । ತುದಿಯನರಿಯನು ದಳದ ಮನ್ನೆಯಮಂಡಲೀಕರಿಗೆ ॥ ಕದನವಿದು ಬಾರಂಕವಾ ರ । ಭ್ಯುದಯ ತಲೆದೋರುವುದೊ ನಮಗೇ । ಕದರ ಚಿಂತೆ ಮುರಾರಿಬಲ್ಲನು ಕಂದಕೇಳೆಂದ ॥೨೦॥ ಅವರೊಳೇಳಕ್ಷೋಹಿಣಿಬಲ ನ । ವ್ಮವರೊಳಗೆ ಹನ್ನೊಂದು ಮತ್ತವ । ರವರ ಸಖ್ಯಕೆ ನೆರದುದೇಕಾ ದಶಶತಕ್ಷೋಹಿಣಿ ॥ ತವಿಸುವೊಡೆ ತನಗೊಂದುದಿವ ಮೂ । ದಿವಸ ಗುರುವಿಗೆ ಐದುದಿವಸಕೆ । ರವಿ ಜ ನಿಮಿಷ ದ್ರೌಣಿ ನಿಮಿಷಾರ್ಧಕೆ ಧನಂಜಯನು ॥೨೧॥ ಎಸಲು ಗುರುತನಯನ ಸಘಾಟಕೆ । ಕೊ ನರತಾತನ ಮನವಜಾಂಡಕೆ । ತನುಪುಳಕಮುಬ್ಬಿನಲಿ ಪಾರ್ಥನ ಪಟುಪರಾಕ್ರಮದ ॥ ಮೊನೆಗಣೆಯ ನುಡಿ ಸೋಂಕೆಕರ್ಣ್ಣವ । ನನಿತುಕುಸಿದ ರಸಾತಳಕೆ ಕುರು । ಜನಪನನಿಬದ್ಧಪ್ರಳಾಪವ ಬಿಡಿಸಿದನು ಭೀಷ್ಮ ॥೨೨॥ ತಾಗಲನುಗೈದೆರಡುಬಲ ಕೈ । ಲಾಗನೀಕ್ಷಿಸುತಿರಲು ರಿಪುಬಲ । ಸಾಗರವ ಸೌರಂಭವ ನು ಬಿಡೆನೋಡಿ ಧರ್ಮಜನು ॥ ತೂಗಿದನು ಶಿರವನು ಮಹಾಹವ । ವೀಗಲಾಗದಮುನ್ನ ಭೇದದ । ಲಾಗಿನಲಿ ಭೀಷ್ಮಾದಿಗಳ ಮನವೊಲಿಸಬೇಕೆಂದ ॥೨೩॥ ಬಂದು ಭೀಷ್ಮನ ಚರಣಕಮಲ । ದ್ವಂದ್ವದಲಿ ಚಾಚಿದನು ಮಕುಟವ । ನಿಂದೆನಾಹವದೊಳಗೆ ತನಗಿನ್ನೇನುನಿರ್ವಾಹ ॥ ನಿಂದು ಕಾದುವೊಡೆನಗೆ ಯಿನ್ನಿಂ । ದೆಂದು ಹರಿಯದು ಬವರವೆಮಗೇ । ನೆಂದು ಬೆಸಸುವಿರೆನುತೆ ಕರುಣವ ತೋರಿದನು ಭೂ ಪ ॥೨೪॥ ನೀವರಿಯಲೆಪುತ್ತರಾಯಿಗ । ಳಾವಪರಿಯಲಿ ಕೌರವನುಬಹ । ಳಾವಮಾನವ ನೆಗಳೆನಮ್ಮ ಯ ಸತ್ಯಭಾಷೆಯನು ॥ ನೀವುಮೆಚ್ಚಲು ನಡಸಿದೈವು ತಲೆ । ಗಾವುದುಂಟೇ ಕರುಣಿಸಲ್ಲದೊ । ತಾವಹ ದನೇನೆಮಗೆ ನೇಮಿಸಿ ಕಳುಹಬೇಕೆಂದ ॥೨೫॥ ಏಳುಮಗನೇ ತನ್ನ ನುಡಿಯನು । ಕೇಳೆನುತ ಭೂಪಾ

ಲಕಿಲಕನ । ಮೌಳಿಯನು ಪಿಡಿದೆತ್ತಿ ಗಂಗಾಸೂನುನಸುನಗುತ ॥ ಆಳುಗೊಂಡನು ಕೌರವನಪರ । ರಾಳುತನವೆಮಗಾಯ್ತು ಪರಸೇ । ವಾಲಘುಸ್ಥಿತನೆನ್ನನೇತಕೆ ನುಡಿಸಿದಪ್ಪೆಯೆಂದ ॥೨೬॥ ಹಿರಿಯನಾಗಲಿ ಸುಜನನಾಗಲಿ । ಗರುವನಾಗಲಿ ಅರ್ಥವುಳ್ಳನ । ಚರಣಸೇವಕರಹರು ಜಗದಲಿ ವರ್ತಮಾನವಿದು॥ ಪರರ ಭಜಕರಲ್ಲಾವಗುಣವಾ । ದಿರವದಾವಗ್ಗಳಿಕೆ ಯಾವುದು । ಗರುವತನವೆತ್ತೆಂದೆ ಪುರುಷಾಧಮನು ತಾನೆಂದ ॥೨೭॥ ಕೌರವನ ಹಣವೆಂಬಬಲುಹುರಿ । ಧಾರದಲಿ ನಾಬದ್ಧನಾದೆನು । ವೀರನಾನೇಗೈವೆನೆನೆ ಯಮಸೂನು ಕೈಮುಗಿದ ॥ ವೈರವೃತ್ತಿಯು ರಣದಲೆಮ್ಮಗೆ । ಸ್ನಾರುಗತಿ ನೀನುಭಯನೃಪರಿಗೆ । ಕಾರುಣಿಕ ನೀ ಮುನಿದೊಡೆಮಗಿನ್ನಾಸೆಯಿಲ್ಲೆಂದ ॥೨೮॥ ಮಾನನಿಧಿ ಕೇಳ್ ಕೌರವಂಗಾ । ಧೀನವೆಮ್ಮ ಯ ತನು ವಿಧಾತ್ರಾ । ಧೀನವೆಮ್ಮಯ ಜೀವವದು ಕಾರಣದಿನಾಹವಕೆ ॥ ನೀನು ಚಿಂತಿಸಬೇಡ ತನ್ನವ । ಸಾನಕಾಲಕೆ ಮತ್ತೆ ಬರಲು ನಿ । ಧಾನಬುದ್ಧಿಯ ಕಲಿಸಿಕಳುಹುವೆ ಮರುಳೆನೀನೆಂದ ॥೨೯॥ ಎನೆ ಹಸಾದವಹಾಯ್ಕೆಯಮನಂ । ದನನು ಕಳುಹಿಸಿಕೊಂಡು ಗಂಗಾ ತನುಜನುಚಿತೋಕ್ತಿಗಳ ನೆನೆದಡಿಗಡಿಗೆಪುಳಕಿಸುತ ॥ ವಿನುತಮತಿ ನಡೆತರಲುಸುಭಟರು । ತನತನಗೆ ತೊಲಗಿದರು ಪಾಂಡವ । ಜನಪ ಮೈಯಿಕ್ಕಿದನು ದ್ರೋಣನ ಚರಣಕಮಲದಲಿ ॥೩೦॥ ಅರಸ ಬಂದೆಯಪೂರ್ವವಾಯಿತು । ದರುಶನವು ತಮಗೆನುತ ಗರುಡಿಯ । ಗುರು ಮಹೀಪಾಲಕನ ಮಕುಟವನೆತ್ತಿದನು ನಗುತ ॥ ಬರಸೆಳೆದು ಬಿಗಿಯಪ್ಪಿದನು ಸಂ । ಗರಸಮಯದೊಳು ಬಹರೆ ನಿನ್ನಯ। ಭರವಸದ ಬಗೆಯೇನು ನೃಪಬಿನ್ನಹವ ಮಾಡೆಂದ ॥೩೧॥ ಎಮಗೆ ದೇವರು ನೀನು ಗುರು ನೀ । ನೆಮಗೆ ತಾತನು ನೀನುಮಹದಾ । ಹವದೊಳಗೆ ಪತಿಕರಿಸಿ ರಕ್ಷಿಸಲೊಡೆಯ ನೀನೆಮಗೆ ॥ ಅವನಿಯಾಸೆಯಲಿಂದು ತೆತ್ತಿದು । ಬವರವೆಮಗಿನ್ನೇನುಗತಿ ಕೌ । ರವಜಯಪ್ರಿಯನೀನ್ನು ನಮಗೆಂತೆಂದು ನೃಪನುಡಿದ ॥೩೨॥ ಅರಸಕೇಳರ್ಥಕ್ಕೆ ಧರಣಿಯ । ನರರು ಕಿಂಕರರರ್ಥ ತಾಕಿಂ । ಕರತೆಯನು ಮಾಡುವುದು ಜಗದಲಿ ವರ್ತಮಾನವಿದು ॥ ನಿರುತಿ ಕೌರವರರ್ಥದಲಿ ಕಿಂ । ಕರತೆಯೆಮಗಾಯಿತು ರಾಜ್ಯೈ । ಶ್ವರಿಯ ಪರಸೇನಾಲಘುಸ್ಥಿತರಾವು ಕೇಳೆಂದ ॥೩೩॥ ಆದೊಡೆಮಗಿನ್ನೇನುಗತಿ ರಣ । ವಾದಸಿದ್ಧಿಯದೆಂತು ಜಯಸಂ । ವಾದಕರು ತಮಗಾರೆನುತ ಗುರುಮತ್ತೆ ನಸುನಗುತ ॥ ಕಾದುವಾಸಮಯದೊಳಗೆಪ್ರಿಯ । ವಾದನುಡಿಯನು ಕೇಳಿದೊಡೆಯಿಾ । ಮೇದಿನಿಯೊಳಾವಿರೆವು ಚಿಂತಿಸಬೇಡ ಹೋಗೆಂದ ॥೩೪॥ ಎನಲುಯಮನಂದನನು ಬೀಳ್ಕೊಂ । ಡನುನಯದೊಳುತ್ಸಾಹಿಸುತ ಬಂ । ದನು ಮಹಾಸಂಗರದ ಮಧ್ಯದ ಕೃಪನ ರಥಕಾಗಿ ॥ ವಿನಯದಿಂ ಬಿನ್ನೈಸಿ ಕೃಪನೆಂ । ದನು ನಿಧಾನಿಸಲಾವುದಿಮ ಕೇಳ್ । ಜನಪ ನಿನ್ನನು ಸಾವು ಕೊಲ್ಲೆವು ಮರಳು ನೀನೆಂದ ॥೩೫॥ ಕೃಪನ ಬೀಳ್ಕೊಂಡತುಳಜಯಲೋ । ಲುಪನು ಶಲ್ಯನ ಹೊರೆಗೆ ಬಂದನು । ವಿಪುಳಮತಿ ಬಿನ್ನೈಸಿದನು ನಿಜರಾಜಕಾರಿಯವ ॥ ಕೃಪೆಯ ಮಾಡುವದೆಮಗೆರಣದಲಿ । ತಪನತನಯನ ತೇಜವನು ನಿ । ಷ್ಕೃಪೆಯೊಳವಗಡಿಸೆಂದು ಶಲ್ಯನೊಳಭಯವನು ಪಡೆದ ॥೩೬॥ ದಳದೊಳಗೆ ಬೇಹವರು ನಾಲ್ವರ । ನೊಳಗುಮಾಡಿಧರಾಧಿಪನ ಮನ । ಗೆಲವಿನಲಿ ತಿರುಗಿದನು ಕೌರವಮೋಹರವನುಳಿದು ॥ ತಿಳಿದು ತನ್ನೊಳು ಭೀಮಸೇನನ । ಬಲುಗದಾಘಾತದಲಿ ಕುರುಕುಲ । ವಳಿವುದೆಂದು ಯುಯುತ್ಸು ರಥದಿಂದಿಳಿದು ನಡೆತಂದ ॥೩೭॥ ಎರಡುಬಲ ಬೆರಗಾಗಿ ನೋಡು। ತ್ತಿರೆ ಯುಯುತ್ಸುಮಹೀಶನಂಘ್ರಿ

ಗೆ । ಕರವ ಮುಗಿದೆರಗಿದೊಡೆ ಪಿಡಿದೆತ್ತಿದನು ಕರುಣದಲಿ ॥ ಧರಣಿಪತಿ ನೀನಾರೆನಲು ಕೇ । ಳರಸ ಕೌರವನನುಜ ನಿನ್ನನು । ಶರಣುವೊಗಲ್ಕೆತಂದೆಯುಭಯವನಿತ್ತು ಸಲಹೆಂದ ॥೩೮॥ ಹಿಂದೆ ರಾವಣನೆನು ಜನಡೆದ್ಕೆ । ತಂದು ಶರಣಾಗತನ ರಕ್ಷಿಪನೆಂದು ರಾಘವನಂಘ್ರಿಕಮಲವ ಕಂಡು ಬದುಕಿದನು ॥ ಇಂದು ನಿನ್ನಂಘ್ರಿಯುನು ಮರೆವೊಗ । ಲೆಂದು ಬಂದೆನು ಪತಿಕರಿಸಬೇ । ಕೆಂದು ಕೌರವನನುಜ ಬಿನ್ನೈಸಿದನು ಭೂಪತಿಗೆ ॥೩೯॥ ಎನಗೆ ಭೀಮಾರ್ಜುನರವೊಲು ನೀ । ನನುಜನಲ್ಲದೆ ಬೇರೆ ನಿನ್ನಲಿ । ಮನವಿಭೇದವ ಬಲ್ಲನೇ ಬಾಯೆನುತ್ತಕೈವಿಡಿದು ॥ ಜನಪನಭಯವನಿತ್ತು ಕೌರವ । ನನುಜನನು ಕೊಂಡೊಯ್ದನಾಹವ । ದನುಕರಣೆಯಲಿ ಸೇನೆ ಗಜಬಜಿಸಿತ್ತು ಬೊಬ್ಬೆಯಲಿ ॥ ... ॥೪೦॥

ಅಂತು ಸಂಧಿ ೨ ಕ್ಕೆ ಪದ ೧೦೪ಕ್ಕಂ ಮಂಗಳಮಸ್ತು.



## ಮೂರನೆಯ ಸಂಧಿ.

ಸೂಚನೆ ॥ ರಾಯದನುಜಘೋರಟ್ಟಪಾಂಡವ । ರಾಯಜಂಗಮಜೀವ ನಿರ್ಜಿತ । ಮಾಯ ನಿಜವನುತೋರಿ ಪಾರ್ಥನನೊಲಿದು ಬೋಧಿಸಿದ ॥

ಪದ ॥ ಹಳಚಲನುವಾಯ್ತುಭಯಸೇನಾ । ಜಲಧಿ ಕಳಕಳ ಮಿಗಲು ಮಾರುತಿ । ಮೊಳಗಿದನು ಪೌಂಡ್ರಕವ ಭೂಪನನಂತವಿಜಯವನು ॥ ಇಳೆ ಬಿರಿಯೆ ಮಣಿಪುಷ್ಪಕವ ನಿ । ರ್ಮಲಸುಘೋಷದ ರವವ ಕೋಳಾ । ಹಳಿಸಿದರು ಸಹದೇವನಕುಲರು ಸಮರಕನುವಾಗಿ ॥೧॥ ಮುರವಿಜಯ ನಾಪಾಂಚಜನ್ಯವ । ನಿರದೆಫಲುಗುಣದೇವದತ್ತ । ಸ್ಫುರಿತರವವೆನೆ ರಚಿಸಿದರು ಮೂಲೋಕಮ್ಮೈಮರೆಯೆ ॥ ತುರಗವನು ಮೇಳೈಸಿ ವಾಘೆಯ । ತಿರುಹಿ ಚಂಮಟಿಗೆಯಲಿ ತೇಜಿಯ । ಬರಿದೆ ಬೆದರಿಸಿ ಕೃಷ್ಣ ಪಾರ್ಥನ ರಥವ ಹೊಳಸಿದನು ॥೨॥ ಚಟುಲಖುರಪುಟದಿಂದವುರ್ವೀ । ನಿಟಿಲನೆಗ್ಗಿತು ಬಹಳಧೂಳೀ । ಪಟಲಧೂಸರಜಗಗಳೆನಲಸುದಾರಿ ನಲವಿನಲಿ ॥ ಪಟುಗತಿಯಗರುವಾಯಿಯಲಿ ಸಂ । ಘಟಿಸಿ ಹಯವನು ಸುಳಿಸಿದನು ಚೌ । ಪಟದಲೊಯ್ಯಾರಿಸುತ ಮಿಗೆ ಬೋಳೈಸಿದನು ಹಯವ ॥೩॥ ಗತಿಗೆ ಕುಣಿದವು ನಾಸಿಕದ ಹೂಂ । ಕೃತಿಗೆ ಮುಖದುನ್ನತಿಯ ಲುಳಿಯವ । ನತಿಶಯದ ಘಂಟೆಗಳ ಹೊಯ್ಲಿನ ಘಣಘಣಧ್ವನಿಯ ॥ ವಿತತಸ್ವಸ್ಕಂದಲೋಳಿಗಳಲಾ । ಯತದವಾಘೆಯ ಜಠರದೇಶೋ । ನ್ನತಿಹಯಾವಳಿಖಳನೆಗೆಲಿದವು ಹರಿಯನೇಮದಲಿ ॥೪॥ ನಿಲಿಸಿದನು ಫಲುಗುಣನ ತೇರನು । ತಳಪಟದೊಳಿಂದೀಮಹಾರಥ । ರಳವಿಗೊಂಡಿಗೆ ನಿನ್ನೊಳುಂಟೇ ಕ್ಷೈಮನದ ಕಡುಹು ॥ ಉಳಿದಬಿಲುವಿದ್ಯಾಚಮತ್ಕೃತಿ । ಬಲುಹು ಗರುಡಿಯಲಲ್ಲದೀಲಪು । ಬಲಕೆ ತೋರಿಸಬಹುದೆ ಹೇಳೆಂದರ್ಜುನನ ಜರೆದ ॥೫॥ ಸಹಸವೆನ್ನದು ಜೀಯನೆರಬಿ । ರ್ದಹಿತಬಲವೆನಗಾವಘನ ಬಿ । ನ್ನಹವ ಕೇಳೈ ಕೃಷ್ಣ ಕೌರವರಾಯರೊಡ್ಡಿನಲಿ ॥ ಬಹಳಬಲರಿವರಾರು ಸೇನಾ । ಗಹನವಲಿ ನಾಯಕರ ವಿವರಿಸ । ಬಹುದುಬೆಸಸೆನೆಗೆಂದು ನುಡಿದನು ಪಾರ್ಥ ಕೈಮುಗಿದು ॥೬॥ ಆಪೊಡರ್ಜುನ ನೋಡು ಸೈನ್ಯವ । ಹೋದಧಿಯ ಮಧ್ಯದಲಿ ಮೆರೆವವ । ನಾ

ದುರಂತಪರಾಕ್ರಮನು ಗಂಗಾಕುಮಾರಕನು ॥ ಕಾದಲಿವನರಿದಖಿಳಬಲವಿಭು । ವಾದೊಡವನತಿಬಲನು ಕಾಲನ । ಕಾದಿಸಿದಚಲದಾಕಮಲ್ಲನು ಭೀಷ್ಮ ನೋಡೆಂದ ॥೭॥ ಮಿಸುಪತುದಿವೆರಳಂಬು ಗೊಲೆಗೇ । ರಿಸಿದಬಿಲು ಮಣಿಮಯದ ಮಕುಟದ । ರಸುಮೆಗಳ ಝಾಡಿಯಲಿ ಹೊಂದೇರಿನ ವಿಡಾಯಿಯಲಿ ॥ ಮಸೆಗಣೆಯ ಬತ್ತಳಿಕೆ ತಿಮಿರೇ । ರಿಸಿದಮೈ ಕತ್ತುರಿಯ ತಿಲಕದ । ನೊಸಲಿನಾತನನೋಡು ಗರುಡಿಯ ಜಾಣನಾದ್ರೋಣ॥೮॥ ರಾಯರೀತನ ಬಳಿಯಲಾಕ। ರ್ಣಾಯತಾಸ್ತ್ರರು ಕಾರ್ಮುಕಸ್ವಾ। ಧ್ಯಾಯನಿಷ್ಠರು ಹತ್ತುಸಾವಿರ ಮಕುಟವರ್ಧನರು ॥ ಸಾಯಲಂಜದಸಿತಗರದೆ ತ । ಸ್ಸಾಯತರಲಪ್ರತಿಮದೃಢಬಲ । ನಾಯಕರ ನೆರವಿಯಲಿ ಶಲ್ಯನೃಪಾಲನವನೆಂದ ॥೯॥ ಗಣನೆಗೆಟ್ಟಿದೆ ಹೆಗಲ ಹಿರಿಯು । ಬ್ಬಣದ ಕನಕದ ಝಗೆಯ ತಲೆ ಚ । ಡ್ಡಣೆಯ ನೇಣಿನ ಹೊಗರು ಮೋರೆಯ ಕೆಂಪಿನಾಲಿಗಳ ॥ ಮಣಿಮಯದ ತೇರುಗಳಲಾಸಂ । ದಣಿಯ ಮಾದ್ರೇಶ್ವರನಿವನು ಫಲು। ಗುಣನೆ ಯಿಕ್ಷಿಸು ಇವನೊಳೊಂದಕ್ಷೋಹಿಣೀಬಲವ ॥೧೦॥ ಕನಕಸಿಂಧದಘಟ್ಟ ಸಮ್ಮುಖ । ದಳಪಿಯಲಿ ವಿಕ್ರಮದ ಸೆಗಳಿಯ । ಝುಳಪದಲಿ ಕಾಹೇರಿದಾಲಿಯ ಬಿಗಿದಹುಬ್ಬುಗಳ ॥ ಹಿಳುಕಸೌಕಿದ ತುದಿವೆರಳ ನಡು । ಗಳದ ಕಪ್ಪಿನ ನೊಸಲ ನಯನದ । ಬಲುಭುಜನ ಸಮಜೋಳಿಯಶ್ವತ್ಥಾಮ ನಿಸ್ಸೀಮ ॥೧೧॥ ಆತನೊಡ್ಡಿನ ಸಾರೆ ಸಂಗರ । ಕಾತುಕೊಂಡದೆ ಕೃಪನ ದಳಸಂ । ಘಾತವೊಂದಕ್ಷೋಹಿಣಿಸುಭಟರ ಸಾಲ ಮಧ್ಯದಲಿ ॥ ಆತ ಗೌತಮನವರ ಬಳಿಯಲ । ಭೀತ ಬಾಹ್ಲಿಕವಿಂಧ್ಯರದೆ ವಿ । ಖ್ಯಾತರೊಂದಕ್ಷೋಹಿಣಿಕೌರವಸೈನ್ಯಶರಧಿಯಲಿ ॥೧೨॥ ರಾಯರಣಗರ ಮುಂದೆ ಕೌರವ । ರಾಯ ದಳಶೃಂಗಾರಮಲೆವರ । ರಾಯಮರ್ದನನೆಂದು ಬಿರುದಿನೊಳುಲಿವಕಹಳೆಗಳು ॥ ಜೀಯ ಜಯಜಯಯೆಂಬಪಂಡಿತ । ನಾಯಕರ ಮಧ್ಯದಲಿ ಬೆರಳಲಿ । ಸಾಯಕವ ತಿರುಹುವನು ಕರ್ಣನು ನೋಡು ಕಲಿಪಾರ್ಥ ॥೧೩॥ ಈತ ಮಾಳವನೀತ ಕೊಂಕಣ । ನೀತ ಗುಜ್ಜರನೀತ ಕೋಸಲ। ನೀತ ಬರ್ಬರ ನೀತಚೀನಕ ನೀತ ಹಂಮಿರಾರ॥ ಈತ ಕೇರಳ ನೀತ ಸಿಂಹಳ । ನೀತ ಜೀನಜ ನೀತ ಬೋಟಕ । ನೀತ ಮಾಗಧ ನೀತ ಗೌಳನೃಪಾಲ ನೋಡೆಂದ ॥೧೪॥ ಆಳುಗೆಲಸಕೆ ಕೆಲಬರರಸನ । ಕೇಳಮೇಳಕೆ ಕೆಲರು ಕೆಲಬರು । ಬಾಲೆಯರ ಕೊಳುಕೊಡೆಯ ಬಹಳದ ಬಂಧುಕೃತ್ಯದಲಿ ॥ ತೋಳಬಲವರೆಗೆಳಸಿ ಕೆಲಬರು । ಮೇಲೆನಮ್ಮಯ ಹಗೆಗೆ ಕೆಲಬರು । ಕಾಳಗದ ಕಾಮುಕ ನೃಪಾಲರ ನೆರವಿಯದೆಯೆಂದ ॥೧೫॥ ತಳಿತಪಲ್ಲವಸತ್ತಿಗೆಯ ಹೊಳೆ । ಹೊಳೆವಮೌಳಿಯ ರತುನಲಹರಿಯ । ಚಲಿಸಿ ಚಿಮ್ಮುವಚಮರಸೀಗುರಿಗಳ ವಿಡಾಯಿಗಳ ॥ ಹಲಗೆಯಲಿ ತೆತ್ತಿಸಿದಹಾವಿನ । ಹಳವಿಗೆಯ ಹೊಂದೇರ ನೃಪಮಂ। ಡಳಿಯ ಮಧ್ಯದೊಳಿಹನೆ ದುರಿಯೋಧನ ಮಹೀಪಾಲ॥೧೬॥ ಕಳಲಿದುರಗನ ನೆರವಿ ಟೊಪ್ಪರ । ಗಳದಸಾಳ್ವನಹಿಂಡು ಹಸಿದ । ವ್ಯಾಳಿಸಸಿಂಪಾದಮೊತ್ತ, ಕುಪಿತಕೃತಾಂತ ನೊಡ್ಡವಣೆ ॥ ಕೊಲೆಗೆಲಸಕುಬ್ಬೆದ್ದರುವ್ರನ। ಬಳಗವೆನೆ ಹರಹರ ಮಹಾರಥ। ರೆಳಗೊಟ್ಟದೆ ನೋಡು ದುರಿಯೋಧನ ಸಹೋದರರ ॥೧೭॥ ಉಳಿಗೆ ಮಿಂಚಿನಮುಂದೆ ಸುಗತಿಯ । ಳಕಕನಿಲನ ಘಟ್ಟ ಬಿದಿಯ । ಬಳಿಗೆ ಪುರುಷಾಮೃಗದಸಾವಳಿಯೆನೆ ವಿಲಾಸದಲಿ ॥ ಹೊಳವಚೌರಿಯ ಸುತ್ತು ಜಲ್ಲರಿ । ನೆಲಕಗಿವ ಜೋಡುಗಳ ತೇಜಿಯ । ದಳವ ನೋಡೈ ಪಾರ್ಥ ಬಳಸಿದಕಲಿಜಯದ್ರಥನ॥೧೮॥ ತೋರದಲಿ ಕುಲಗಿರಿಯಸತ್ವದ । ಸಾರದಲಿ ವಜ್ರವನು ನಿನದದಿ । ಕಾರಮೇಘಧ್ವನಿಯನುಗಿದೇನೊಂ

ದು ಮಾಡಿದನೊ ॥ ವಾರಿಜೋದ್ಭವನೆನಲು ಜಾಡಿಯು । ಭಾರರೆಂಚೆಯ ಕೈಯು ಖಡುಗವ । ವಾರಣದ ಬಲಮಧ್ಯದಲಿ ಭಗದತ್ತನವನೆಂದ ॥೧೯॥ ಹೊಗರೊಗುವ ಸೂಲಿಗೆಯ ಸುಪ ತಾ । ಕೆಗಳ ಸಿಂಧದ ಹೊಳೆವಹೊಂಗಂ । ಬುಗೆಯ ಹೂಡಿವಹಯದ ಸೂತರ ಗಳದಗರ್ಜನೆಯ ॥ ಅಗಿವಚೀತ್ಕಾರದ ಛಡಾಳದ । ವಿಗಡರಥಿಕರ ರಹಿಯರಥವಾ । ಜಿಗಳ ನೋಡೈ ಪಾರ್ಥ ಭೂರಿಶ್ರವನ ಸೈನ್ಯವಿದು ॥೨೦॥ ಹಲಗೆ ಕಡಿತಲೆ ಹರಿಗೆ ಖಂಡೆಯ । ಹೊಳೆವಮುಡ್ಡುಕಠಾರಿ ಡೊಂಕಣಿ। ಬಿಲುಸರಳು ತೋರೀಟಿ ಮುದ್ಗರ ಪಾಶ ಕೊಂತದಲಿ ॥ ತಲೆಯನೇಣಿನ ಕೈಯ ಚೌರಿಯ । ಝಳಿಯ ಜೋಡಿನ ಕಡೆಯ ಘಂಟೆಯ । ದಳವನೀಕ್ಷಿಸು ಪಾರ್ಥ ದುಶ್ಶಾಸನನ ಪಾಯದಳ ॥೨೧॥ ವೀರನಭಿಮನ್ಯುವಿನ ವೊಲು ರಣ । ಧೀರನೀತನ ನೋಡು ಕರ್ಣಕು । ಮಾರಕನು ವೃಷಸೇನನೀತನು ಚಿತ್ರಸೇನಕರು ॥ ಚಾರುಲಕ್ಷಣನವರು ನೂರುಕು । ಮಾರರೆದೆ ದುರ್ಯೋಧನಾತ್ಮಜ । ರಾರುವನು ಕೈಕೊಳ್ಳರವದಿರು ಸುಬಲನಂದನರು ॥೨೨॥ ಕರಿಘಟೆಯ ಕೂಲದಲಿ ಹಯರಥ । ನರರತೆರೆಮಾಲೆಯಲಿ ಬಲುಝು । ಲ್ಲರಿಯ ಬುದ್ಬುದ ತತಿಯಲಸ್ತ್ರದಕಿಡಿಯುವಡಬನಲಿ ॥ ಬಿರುದರಾಯರ ಮಕುಟರತ್ನದ । ಲರಿಬಲಾರ್ಣವ ಗಜರುಮಿಗಿಲ । ಳ್ಳಿರಿವುತಿದೆ ಬಹುವಿಧದ ವಾದ್ಯವಿಡಾಯರಭಸದಲಿ ॥೨೩॥ ಆಳಮಯುವಖಿಳೋರ್ವಿ ಪದಹತಿ । ಧೂಳಿಮಯ ವಾಕಾಶ ರಥತುರ । ಗಾಳಿಮಯ ದಿಗುಜಾಲವೇನೆಂಬೆನು ಮಹಾದ್ಭುತವ ॥ ಕಾಳಗಕೆ ನೀನಲ್ಲದವನಿಯೊ । ಳಾಳ ಕಾಣೆನು ಪಾರ್ಥ ಸಾಕಿ । ನ್ನೇಳು ಬಾಣವ ತೂಗಿ ಮಾತಾಡಿಸು ಮಹಾಧನುವ॥೨೪॥ಎಲೆಧನಂಜಯ ಹಗೆಯ ಹೆಚ್ಚಿದ।ಹಳುವವಿದೆ ನಿನ್ನ ತುಳಕೋಪಾ।ನಳನನೌತಣಿಸೈ ಸುಯೋಧನ ಸೈನ್ಯಗಿರಿವಜ್ರ ॥ ಎಲೆಸಮೀರಕುಮಾರ ರಿಪುಬಲ । ವಿಲಯಮೇಘನಿಕಾಯವಿದೆ ಭುಜ । ಬಲವ ತೋರೈ ತಂದೆ ನೋಡುವೆನೆಂದನಸುರಾರಿ ॥೨೫॥ ಮೆಟ್ಟಿ ನೋಡಿದನಹಿತರಾಯರ । ಘಟ್ಟುಗಳತೆರಳಿಕೆಯನುತ್ಸವ । ಗೆಟ್ಟು ಫಲುಗುಣ ಸೆಡೆದು ಮನದಲಿ ನೊಂದು ತಲೆದೂಗಿ ॥ ಕೆಟ್ಟೆಕಾಯದ ಸುಖಕಳುಪಿಯೊಡ । ಹುಟ್ಟಿದರ ಕೈಯಾರೆಕೊಂದರೆ ।ಮುಟ್ಟದೇ ಕಡುಪಾಪ ಘನಪರಿತಾಪ ತನಗೆಂದ॥೨೬॥ ಕೆಲಬರೊಡಹುಟ್ಟಿದರು ಗುರುಗಳು । ಕೆಲರು ಕೆಲಬರು ಮಾವಮೈದುನ । ನಳಿಯ ಮಗ ಹಿರಿಯಯ್ಯ ಮುತ್ತಯ ಮೊಮ್ಮನೆನಿಸುವರು ॥ ಕಳನೊಳನಿಬರ ಕೊಂದು ಶಿವಶಿವ । ಕೆಲವು ದಿವಸದ ಸಿರಿಗೆ ಸೋಲಿದು । ಮುಳುಗುವನೆ ಹಾಹಾ ಭವಾಬ್ಧಿಯೊಳೆನುತ ಮನಮುರಿದ ॥೨೭॥ ಇದಿರುಗಾಣದೆ ಕೊಲೆಗೆ ನಿಬ್ಬಂ । ಧದಲಿ ಬೆಸಸುವ ಕೃಷ್ಣನಕಟಾ । ಮದಮುಖನೊ ದುರ್ಬೋಧಕನೊ ವಂಚಕನೊ ಘಾತಕನೊ ॥ ಯದುಗಳನ್ವಯದೊಳಗೆ ಧರ್ಮಾ । ಸ್ಪದರು ಜನಿಸಿರಲಾ ಮುರಾರಿಯ । ಹೃದಯಬಿಟ್ಟತನುತ್ತ ಫಲುಗುಣ ತೂಗಿದನು ಶಿರವ ॥೨೮॥ ನರಕಕರ್ಮವ ಮಾಡಿ ೦೧ ಪದೊಳ । ದುರಿತಭಾಜನನಾಗಿ ಕಡೆಯಲಿ । ಪರಕೆ ಬಾಹಿರನಾಗಿ ನಾನಾಯೋನಿಯೊಳು ಸುಳಿದು ॥ ಹೊರಳುವನುವನುಕೃಷ್ಣಸ್ವಾಯನು। ಕರುಣಿಸಿದನ್ಯೆ ಹಿತವನಪಹರ। ಹರಮಹಾದೇವೆಂದುಜೋಳಕೆ ಬದುಕಿದೆನೆಯೆಂದ ॥೨೯॥ ಮುಳಿಯಲಾಗದು ಕೃಷ್ಣನಿಮ್ಮನು । ತಿಳುಹವೆನು ಸಮರ್ಥನೇ ಕುಲ। ಗೊಲ. ಕೊಕ್ಕರಿಸಿದೆನು ನಸೆಬೆನು ನಯನವಾರಿಯಲಿ ॥ ಬಲುಹನೀಮುಖದಲ್ಲಿ ತೋರುವೊ । ಡಳುಕಿದೆನು ಸಾಮ್ರಾಜ್ಯಸಂಪದ । ಗಳಿಪಸಕಲಭ್ರಾಂತಿ ಬೀತುದು ದೇವ ಕೇಳೆಂದ ॥೩೦॥ ಎಡಹಿದೊಡೆ ರುಜೆಯಾದಿಯಾಪ।

ತ್ತಡಸಿದೊಡೆ ಮೋಣಾವತೆರದಿಂ । ದೊಡಲುವಿಡಿದೊಡೆ ಮರಣತತ್ವದು ಸುರರಿಗೊಳಗಾಗಿ ॥ ಕೆಡು ವಕಾಯುವನಂಬಿ ಬಂಧುಗ । ಳೊಡನೆ ವೈರವ ಮಸೆದು ನರಕಕೆ । ನಡವೆನೇ ತಾನೆನುತ ರಥದಲಿ ಬಿಲ್ಲ ನಿಳುಹಿದನು ॥೩೧॥ ಕರಗಲಂತಃಕರಣ ಚಿಂತಾ । ತುರನು ಸಂಗ್ರಾಮದ ವಿರಕ್ತಿಯು । ಲಿರಲು ಕಂಡ ನು ಕಮಲನಾಭನು ನಗುತ ಮನದೊಳಗೆ ॥ ತರಳನಿವನೆದ್ದೈತ್ರಕಳೆಯುಲಿ । ಪುಚಿತನು ತಾನಲ್ಲ ನಯ ದಲಿ । ನರನ ಬೋಧಿಸಬೇಕೆನುತ ನುಡಿಸಿದನು ಫಲುಗುಣನ ॥೩೨॥ ಏನು ಫಲುಗುಣ ಸಮರದಲಿ ದುಃ । ಮಾನವಾವುದು ಹದನು ಶೌರ್ಯಕೆ । ಹಾನಿಯಲ್ಲಾ ತ್ರಿಜಗಚಾಪಟವಲ್ಲ ನೀನೆನಿಪ ॥ ಮಾನವ ರ್ಗವು ಮುರಿಯದೇ ರಿಪು । ಸೇನೆ ನಗದೇ ತತ್ತಸಮರವ । ನೀನುಪೇಕ್ಷಿಸಿ ನೋಡುತಿಹರೇ ಬಿಲ್ಲ ಹಿಡಿ ಯೆಂದ ॥೩೩॥ ಆವನಿಮ್ಮಯ ಕ್ಷಾತ್ರಧರ್ಮವ । ಭಾವಿಸದೆ ಮೋಣಾವಶತಿವಂ । ಶಾವಳಿಯ ನೆಮ್ಮ ಗೆಯ ನೋಡದೆ ತತ್ತಕಾಳಗಕೆ ॥ ಆವನಿಮ್ಮಗ್ಗಳಿಕೆಗುಚಿತವ । ತೀವಿ ಬಳಸದೆ ಕದನಮುಖದಲಿ । ಹೇವ ವೀರರಿಗೆಲ್ಲಿಯದು ವಿಸ್ಮಯವಲಾಯೆಂದ ॥೩೪॥ ಅಲಗನೊರಸೊರಸಿಲ್ಲ ಕೈವ್ಯ । ಗಳಲಿ ಮುಳುಗಿದ ಬಾಣವಿಲ್ಲವ ಗಳಿಸಿ । ನೊಸಲಲಿ ಮುರಿದಖಂಡೆಯವಿಲ್ಲ ನೋಡುವೊಡೆ ॥ ಕಲಹದಲಿ ಪಡಿಮುಖದಗಾ ಯದ । ಚಳರಕುತದೊರಹಿಲ್ಲ ನೀ ಮು । ನ್ನಳುಕಿ ಕೈದುವ ಹಾಯ್ಕಿದೈ ಸರಿಯಿಲ್ಲ ನಿನಗೆಂದ ॥೩೫॥ ತರುಣಿಯರ ಮುಂದಸ್ತ್ರಶಸ್ತ್ರವ । ತಿರುಹಬಹುದುಬ್ಬರಿಸಬಹುದ । ಬ್ಬರಿಸಬಹುದೆನಗಾರು ಸರಿ ತಾ ವೀರನೆನಬಹುದು॥ ಕರಿತುರಂಗದ ಬಹಳಶಸ್ತ್ರ । ತ್ಕರದ ಬಾಣದ ತಗಹಿನಲಿ ಮುಖ । ದಿರು ಹದಿಹ ಕಲಿಯಾರು ಕುಂತೀಸೂನು ಕೇಳೆಂದ ॥೩೬॥ ಬಂಧುಹನನಕೆ ಮನದಳಲು ಭವ । ವಿಂಧ್ಯದಲಿ ಬೆಳ್ಳಾಗಿ ರೌರವ । ಸಿಂಧುವಿನೊಳೋಲಾಡಟಿಹನೇ ಪರಮಪಾತಕನು ॥ ಸಂಧಿಯಲಿ ನಮ್ಮವನಿ ರಣ ಸಂ । ಬಂಧವುಂಟೇ ಬರಲಿ ರಣದಭಿ । ಸಂಧಿ ಸಾಕೆನ್ನೆನುತ ಫಲುಗುಣ ಬಾಗಿದನು ಶಿರವ ॥೩೭॥ ಎ ಲವೊ ಫಲುಗುಣ ನುಡಿದಭಾಷೆಯ । ಸಲಿಸಿಕಾನನದೊಳಗೆ ತೊಟ್ಟನೆ । ತೊಳಲಿ ಹದಿಮೂರಬುದ ಬಂದಾಪತ್ತನನುಭವಿಸಿ ॥ ನೆಲನ ಭಾಗೆಯ ಬೇಡಿ ಸಂಧಿಗೆ । ಕಳುಹಿದಿರಿ ಕೌರವನು ನೂಕಿಸಿ । ಕಳೆದ ನಿಮಗಿನ್ನೇನು ಹೊಲ್ಲಹವೆಂದನಸುರಾರಿ ॥೩೮॥ ಎವಗೆ ನೀನುತ್ತರನ ಕಥೆವೇ । ಳುವೆ ನಗುವೆಯಾತನ ನು ನೀನೀ । ಬವರದಲಿ ಪಡಿಯಾದೆಲೋಗರನಿಂದೆ ತನಗಹುದು ॥ ಲವಲವಿಕೆಯಲಿ ಕಾದಬೇಕೆ । ಮ್ಮವ ನಿಯನು ಕೈಕೊಳ್ಳಬೇಕಂ । ಬವಗಡೆಯುತನವೆತ್ತಲಡಗಿತು ಪಾರ್ಥಹೇಳೆಂದ ॥೩೯॥ ಬಲುಹ ನೀ ನೂ ಡುವೊಡೆ ಪರಮಂ । ಡಳಿಕರನು ತಂದೊಡ್ಡು ಬಳಿಕೆ । ನ್ನಳವನೀಕ್ಷಿಸು ಸಡೆದೆನಾದೊಡೆ ನಿಮ್ಮ ಮೈ ದುನನೆ ॥ ಕೊಲುವೆನಂತೈ ಭೀಷ್ಮನನು ಮನ । ವಳುಕದೆಂತೈ ತಪ್ಪುವೆನು ಗುರು । ಗಳಿಗೆ ಕೃಪಗುರು ಸುತರನಿರಿವುದಿದಾವನಯ ವೆಂದ ॥೪೦॥ ಹೊಳೆದು ಹೋಹೈಶ್ವರ್ಯರಥಸಕೆ । ತಲೆಯ ಮಾರಿಯಧರ್ಮ ಕೋಟಿಯ । ಗಳಿಸಿ ಬಳಿಕಾಫಲವನಲಸದೆ ಭವಭವಂಗಳಲಿ ॥ ತೊಳಲಿ ಬಳಲುವ ಜೀವಭಾವದ । ಲುಳಿ ವುದಾವುದು ಲಾಗು ಮೂಢರ। ಬಳಕೆಗಾವಂಜುವೆವು ಸಂಗ್ರಾಮಕೆ ನಮೋಯೆಂದ ॥೪೧॥ ಆಲಿಸದೆ ಕು ಲಧಲವ ನೀತಿಯ। ಪಾಲಿಸದೆ ಕೊಲೆಗಡಿಗತನದಲಿ।ಮೇಲುಗಾಣದೆ ಬಂಧುಗಳ ಗುರುಗಳ ಸಹೋದರರ॥ ಕೋಲ ಮೊನೆಯಲಿ ಕೊಂದುನೆತ್ತರ । ಗೂಳನುಂಬಪ್ರೊಲಖಿಳರಾಜ್ಯದ । ಮೇಲೆ ಸೊಗಸುವ ಸಿರಿಯ ನೊಲ್ಲೆನು ಕೊಲುವನಲ್ಲೆಂದ ॥೪೨॥ ಆರನೈ ನೀ ಕೊಲುವೆ ನಿನ್ನಿಂ । ದಾರು ಸಾವರು ದೇಹಿಯೋ

ನಿಜ । ಧೀರಸಾತ್ಮನ ಕೊಲುವೆಯೋ ಧಿಟ ನಿನ್ನ ಹವಣೇನು ॥ ಚಾರುದೇಹಕೆ ಭೂತನಿಕರಕೆ । ವೈರವಿಲ್ಲುಳಿದಂತೆ ವಿಗತವಿ । ಚಾರ ನಚಲನಗಪ್ಯ ನಿದ್ವಯಸ್ವಾತ ನೋಡೆಂದ ॥೪೩॥ ತನುವಳಿದ ಬಳಿಕಿನಲಿ ತನು ಸಂ । ಜನಿಸುಗೆಂಬುದು ಭವಭವಂಗಳ । ತನುವಿನಲಿ ಕೌಮಾರಯೌವನವಾರ್ಧಕಂಗಳಲಿ ॥ ತನುವಿಕಾರಿಸುವುದು ಸುಕರ್ಮದ । ವಿನುತದುಷ್ಕೃತವೆಂಬಹುಸಿಕ । ಲ್ಪನೆಶರೀರಕ್ಕಲ್ಲದಾತ್ಮಂಗಿಲ್ಲ ಕೇಳೆಂದ ॥೪೪॥ ಅಳಿವನಲ್ಲುದಯಿಸುವನಲ್ಲ । ಗ್ಗಳಿಸುವವನಲ್ಲಡಗುವವನ । ಲ್ಲಳಿವದೇಹದಬಳಿಯ ಹೊಣೆಯೋ ಸಚ್ಚಿದಾತ್ಮಕನು ॥ ಕಳೆಚುವೊಡೆ ಕಾಯುವೆ ಕಳಲ್ಚುವು । ದುಳಿವುದಾವುದು ಚಿನುಮಯಂಗೀ । ಕಳಕಳದ ಕಾಲಾಟ ಕೊಳ್ಳದು ಪಾರ್ಥಕೇಳೆಂದ ॥೪೫॥ ನಿನಗೆ ಸಾವವನಲ್ಲನಿನ್ನಿಂ । ಬಿನಲಿ ನೋವವನಲ್ಲ ದಿಟ ನೀ । ಮುನಿದು ಗಗನಕ್ಕಲಗನುಗಿದೊಡೆ ಗಗನವಳುಕುವುದೆ॥ ತನುವಿಗೀಗುಣಧರ್ಮಕರ್ಮದ । ಹೊನಲ ಹೊಗುವನೆ ಶುದ್ಧನಿರ್ಮಲ । ಚಿನುಮಯಾತ್ಮಕನೆಲೆ ವೃಥಾಹಂಕಾರವೇಕೆಂದ ॥೪೬॥ ಆದೊಡೆಲೆಮುರವೈರಿ ಕೇಳಿದಿ । ರಾದಬಾಂಧವರಿನಿಬರನು ತಾ ।ಕಾದಿಕೊಂದನು ಪಾರ್ಥಪಾತಕನೆನ್ನದೇ ಲೋಕ ॥ ಈದುರಂತಕ್ಕೇನು ಗತಿಯಪ । ವಾದವಾವಂಗಾದುದಾತನ। ವೈದಿಕನು ಪರಗತಿಗೆ ಬಾಹಿರನೆಂದನಾಪಾರ್ಥ ॥೪೭॥ ಮರುಳೆ ಫಲುಗುಣ ಕೇಳು ಸೂರ್ಯನ । ಕಿರಣ ಹೊಲೆಯನ ನೋಡಿದೊಡೆ ಹೊಲೆ । ಹೊರೆವುದೇ ಸ್ನಾನದಲಿ ವಿಧಿಸಲು ಬಹುದೆ ನೋಡಿದೊಡೆ ॥ ಪರಮತತ್ವಜ್ಞಾನನಿಷ್ಠರ।ಚರತವೇ ಸುಚರಿತ್ರವಾವಂ।ಗರವುತಾಸತ್ಕರ್ಮದುಷ್ಕರ್ಮಾನುಗುಣವೆಂದ॥೪೮॥ಕೊಂದೆನಾನೆನಗಾಯ್ತುಪಾತಕ । ವೆಂದು ಮನದಲಿ ಮರುಗುವಾತನು । ಬಂದಿಯಲಿ ಹಣೆಗೊಂಬವಾಹಂಕಾರಮಮಕಾರ ॥ಕಂದುಕಲೆ ತನಗೆತ್ತಣದು ನಿ । ರ್ದ್ವಂದ್ವಕನು ಮೃತಜಾತತಾನ।ಲ್ಲೆಂದು ಕಂಡನವಂಗೆ ಪಾಪದಲೇಪವಿಲ್ಲೆಂದ ॥೪೯॥ ಹರಿಯೆ ಚಿತ್ತೈಸ್ಯೆಯಹಿಂಸೆ ಪರಮಧರ್ಮವೆ ಯೆಂಬವಾಕ್ಯೋ । ಚ್ಚರಣೆಸಾರೋದ್ಧಾರವಲ್ಲಾ ಸಕಲದರುಶನಕೆ॥ನೆರವಿಯಿನಿಬರು ತನ್ನವರ ಕೊರಳ ಳರಿತದಲಿ ಕೊಕ್ಕರಿಸದಿರ್ದೊಡೆ। ನರಕದೊಳುನೂರೊಂದುಕುಲ ಮುಳುಗಾಡದಿರದೆಂದ ॥೫೦॥ ನಿರುತವರ್ಜುನ ಕೇಳಹಿಂಸಾ । ಪರಮಧರ್ಮದ ತತ್ಸ್ವರೂಪವ । ನೊರವೆನಾಲಿಸು ಸಚ್ಚಿದಾನಂದೈಕಘನವೆನಿಪ ॥ ನಿರುಪಮಾತ್ಮನ ನಿಲವ ನೋಡದ । ನರಕ ಜಡನಾಜೀವನೆಂಬೀ । ದುರುಳತನವೇ ಹಿಂಸೆಯರಿತೊಡಹಿಂಸೆ ಕೇಳೆಂದ॥೫೧॥ ನೆರವಿ ಬೇರೊಂದಿಲ್ಲ ಭೂತದ। ಹರಹು ಕರಣೇಂದ್ರಿಯದ ಸಂದಣಿ । ಮರುತಪಂಚಕಬುದ್ಧಿಕರ್ಮೇಂದ್ರಿಯದ ಕಾಲೆಣಿಕೆ ॥ ನೆರೆಯಲೊಡಲಾಗಿಹುದು ಕಲ್ಪನೆ । ಹರೆದು ಜೀವಭ್ರಾಂತಿ ಬೀತೊಡೆ । ಪರಮನಾಗಿಹನಲ್ಲಿ ಕೊಲುವೊಡೆ ಸಾವನಲ್ಲೆಂದ ॥೫೨॥ ಕರ್ಮವೇ ಹೂಡುವುದು ತನುವನು । ಕರ್ಮವೇ ಸಲಹುವುದು ಕಡೆಯಲಿ । ಕರ್ಮವೇ ಕಳಚುವುದು ಚಿತ್ತಭ್ರಮೆಯ ಬಾಹಿರರ ॥ ಕರ್ಮ ತಾನೇನಾದೊಡಾಗಲಿ । ನಿರ್ಮಮತೆಯಲಿ ಮಾಡಿ ನಮ್ಮಲಿ । ನಿರ್ಮಿಸಲು ಕಲಿಪಾರ್ಥ ನೀನಿರ್ಲೇಪನಹೆಯೆಂದ ॥೫೩॥ ಅಸುರರಿಪು ಕೇಳಾದಿಯಲಿ ಸಂ । ಚಿಸಿದಕರ್ಮವು ಜೀವರನು ಬಂ । ಧಿಸಲು ತದ್ಗುಣದೋಷಕರ್ಮವನೇಕೆ ತಾಗುವುದು ॥ ಪಸರಿಸಿದೆಲಾ ಸ್ಮಾರ್ತಮಾರ್ಗ । ಪ್ರಸರ ಕೊಂದೊಡೆ ಪಾಪವಾವನ । ನೆಸಗೆ ಪುಣ್ಯವೆನಿಪ್ಪಪಿವರಕ್ಕೇನು ನೆಲೆಯೆಂದ ॥೫೪॥ ಸುಕೃತದುಷ್ಕೃತವೆಂಬವೇ ಬಾಧಕವು ಜೀವರಿಗೀಯಹಂಕೃತಿ । ವಿಕಳತೆಗೆ ತಾ ಜೀವ ಬೀಜದಚಿಟ್ಟುಮುರಿಗಳಿಗೆ॥ ಸಕಲಕರ್ತೃತ್ವಾದಿಭೋಕ್ತೃ । ತ್ವಕ

ವಿದಾತ್ಮಂಗಿಲ್ಲ ಪಿತ್ರಾ । ಧಿಕನು ತಿರುಗುತ ಲೋಕ ತಿರುಗುವುದೆಂಬತೆರನೆಂಬ್ಬೈ ॥ ಮರುಳೆ ಫಲುಗುಣ ಕೇಳು ಸಚರಾ । ಚರವೆನಿಪಜಗವೆನ್ನ ಲೀಲಾ । ಚರಿತದಲಿ ತೋರುವುದು ಹರೆವುದು ತನ್ನನೇಮದಲಿ॥ ನಿರುತ ನೀ ಕೇಳುವೊಡೆ ತಿಳಿಯುವು । ನರಸುರಾದಿಗಳೆಂಬಸಚರಾ । ಚರವಿದಾನಲ್ಲದೆ ವಿಚಾರಿಸಲನ್ಯವಿಲ್ಲೆಂದ ॥೫೬॥ ಜಗದೊಳಾನೇ ಚರಿಸುವೆನು ತ । ಜ್ಜಗವಿದೆಲ್ಲವು ತನ್ನಮಾಯೆಯೊ । ಳೊಗೆದು ತೋರಿಸಿ ಸುಳಿಸೆ ಸುಳಿವುದು ಹಿಡಿಯುಲಡಗುವುದು ॥ ಮುಗುವುತನದಲಿ ಕೂಡೆ ಮೆರೆವುದು । ಜಗವದಲ್ಲದೆ ನಿಜವ ಬೆರಸುವ । ವಿಗಡರಿಗೆ ಪರಮಾತ್ಮ ಚಿನುಮ್ಮಯರೂಪು ತಾನೆಂದ ॥೫೭॥ ಬೀಸಿದೊಡೆ ಸಿಲುಕುವರು ಮಾಯಾ । ಪಾಶದಲಹಂಕಾರಿಗಳು ತ । ದ್ದೇಶಕಾಲಕ್ರಿಯೆಗಳಲಿ ನಿರ್ವಾಹವನು ಬೆದಕಿ । ಬೇಸರುವರಂತಿರಲಿ ಮಾಯಾ । ವ್ಯಸಿಕದ ಸಂಮೋಹನದ ಕಾ । ಳಾಸವರಿದವರೇನನರಿವರು ಪಾರ್ಥ ಕೇಳೆಂದ ॥೫೮॥ ಏಕನಾತ್ಮನನಂತನಜನ । ಶ್ಲೋಕನದ್ವಯನಮಲನಭವನ । ಲೋಕನಿಸ್ಪೃಹನಮಿತನ ಕ್ರಿಯನಮಿತನಬ್ರುವನು ॥ ಲೋಕತತಿಮಾಯಾವಿಲಾಸ ವಿ । ವೇಕಿಗಳಿಗಿವು ಬಯಲು ಫಲುಗುಣ । ಸಾಕು ಗರ್ವವ ಬೀಳುಕೊಡು ಸೆಣಸೇಳು ಹಿಡಿ ಧನುವ ॥೫೯॥ ಜಡನಲಾ ನರನೇಸುತಿಳುಹಲು । ಬಿಡ ವಿಕಾರವನೆಂದು ಖಾತಿಯು । ಹಿಡಿಯಲಾಗದು ಸಲುಗೆಗಂಜಿಕೆಯೇಕೆ ಬಿನ್ನಹವು ॥ ಬಿಡು ಜಗವು ನೀ ಕಂಡನಿಮ್ಮಡಿ । ಯೊಡಲೊಳೋರಣಲೋಕಗಡ ಮಿಗೆ । ನುಡಿಯುಲಮ್ಮೆನು ತತ್ಸ್ವರೂಪವ ತೋರಬೇಕೆಂದ ॥೬೦॥ ಈದಿವಿಜರೀಚಂದ್ರಸೂರಿಯು । ರೀದಿಶಾವಳಿಯಿಾಗಗನವೀ । ಮೇದಿನೀತಳವೀಸಮಿೀರಣವೀಜಲಾನಲರು ॥ ಈದನುಜರೀಭುಜಗನರರುಗ । ಳಾದಿಯಾಗಿಹಹರಹು ತನ್ನವಿ । ನೋದರೂಪಿನ ನಿರಿಗೆ ಬೇರಿನ್ನಾವರೂಪೆಂದ ॥೬೧॥ ಹರೆದು ಮೋಹಿಸು ನೀಚರಾಚರ । ನೆರೆದು ನಿಮ್ಮಯರೋಮಕೂಪದ । ಹೊರೆಯೊಳಗೆ ಹೊಳೆದಾಡುತಿಹುದೆಂಬಗ್ಗಳಿಕೆಗಳಿಗೆ ॥ ಹುರುಳೆನಿಪಹೇರಾಳದಂಗದ । ಸಿರಿಯ ತೋರ್ಸೆ ಸಾಕು ನಿರ್ಮಲ । ಪರಮತತ್ವವನೊಲ್ಲೆ ನಿನ್ನಯ ಭಕ್ತಿ ಸಾಕೆಂದ ॥೬೨॥ ದಾಸನಾನೆನಗಮಲಮೂರ್ತಿವಿ । ಲಾಸವನು ತೋರುವುದು ಸಲುಹುವು। ದೇಸರವನ್ನೈ ನಾನು ಸಮ್ಯಗ್ಜ್ಞಾನಭಾವನೆಗೆ ॥ ಮಿಾಸಲಳಿಯುದಮಿಕ್ಕಬಳಕೆನು । ಪಾಶ ತಾಗದನಿನ್ನ ಲೀಲಾ । ಭಾಸುರಶ್ರೀಮೂರ್ತಿಯನು ಮೈದೋರಬೇಕೆಂದ ॥೬೩॥ ಆದೊಡರ್ಜುನ ನೋಡೆನುತ ಕಮ । ಳೋದರನು ಕೈಕೊಂಡನಗ್ಗದ । ಸಾದಿಪುರುಷಶ್ರೀನಿಜವ ವಿಶ್ವಾತ್ಮಕಾಕೃತಿಯು ॥ ಸಾಧಿಸುವಷಡುತರ್ಕಗಿರ್ಕದ ಭೇದಕೊಳ್ಳದಸಕಲಲೋಕದ । ಬೀದಿವಿಸಟಂಬರಿವ ವಿಮಳವಿರಾಟ್ಸ್ವರೂಪವನು ॥೬೪॥ ಬಿಳಿದುಕರಿದೆಂಬಾರುಬಣ್ಣದ । ಹೊಲಬ ಹೊದ್ದದಸೂರ್ಯಕೋಟಿಯು । ಹೊಳವುನಖದೀಧಿತಿಯು ಹೋಲದ ನಿಜದ ಹೊಸಪರಿಯು ॥ ಅಳಿವಿನಳತೆಯು ಜನನವಾರ್ತೆಯು । ಸುಳಿವು ಸೋಂಕದಸಕಲಲೋಕ । ಪ್ರಳಯಕಾರಣ ತೆಗೆದನಗ್ಗದ ವಿಶ್ವರೂಪವನು ॥೬೫॥ ಕಾಣರುಳಿದವರೀತನೊಬ್ಬನ । ಕಾಣಿಕೆಗೆ ಕೌತುಕವ ಕರೆದನು । ಕ್ಷೋಣಿತಾಮಳಬಹಳತೇಜದ ಹೊದರ ಹೊಯ್ಲಿನಲಿ॥ ಕಾಣಲರಿಯುವನಂತವೇದ । ಶ್ರೇಣಿ ಶಿವಶಿವ ರಾಯಪಾರ್ಥನ । ಜಾಣತನವೆಂತುಟೊ ವಿರೂಪನ ರೂಪಸೆರೆಸಿದ ॥೬೬॥ ಉಬ್ಬಿದನು ಹರುಷದಲಿ ಕಂಗಳ । ಗಬ್ಬಮುರಿದುದು ಮುಸದನಿಗುರಿನ । ಹಬ್ಬುಗೆಯು ಹೊಲಬಳಿಯೆ ನಾಲಗೆಯುದುಗೆ ಹೆಡತಲೆಗೆ ॥ ಸಬ್ಬಗತನ್ನೈ ಶಿವಶಿವಾ ಬಲು । ಮೊಬ್ಬಿನಲಿ ಮುಂದುಯುದೆನ್ನಯ । ಕೂಬ್ಬನೇವಣ್ಣಿಸುವೆನೆಂದಡಿಗಡಿಗೆ ಬೆರ

ಗಾದ ॥೭೭॥ ಇದೆ ನಿರಂಜನತತ್ವಸಾಮ್ರಾ । ಜ್ಯದ ಸಗಾಡಿಕೆ ನಾವು ಕಡುಮೂ । ರ್ಖದಲಿ ಮೈಮರೆದೆವು ಶರೀರದ ಬಂಧುಕೃತ್ಯದಲಿ ॥ ಯದುಗಳನ್ವಯದಾತ ನಮಗೊ । ಳ್ಳಿದನು ಸೋದರಭಾವನೆಂದೇ । ಮದಮುಖನು ಕಡುಗೇಡ ಕೆಟ್ಟೆನು ಶಿವಶಿವಾಯೆಂದ ॥೭೮॥ ಪರುಸ ಕಲ್ಲೆಂದಿಡಿಕಿ ಸುರತರು । ಮರನು ತೆಗೆಯೆಂದಮರಧೇನುವ । ಪರರಮನೆಯಲಿ ಮಾರಿ ಚಿಂತಾಮಣಿಯ ಕೈದುಡುಕಿ ॥ ಹರಳುಟಿಕ್ಕೆಯಿದೆಂಬಪಾಪಿಗೆ । ಪರಮಗುರು ನಾಸಾದೆನ್ನೈ ಮುರ । ಹರನ ಮೈದುನನೆಂದು ಗರ್ವಿಸಿ ಕೆಟ್ಟೆನಾನೆಂದ ॥೭೯॥ ನೊರಜ ತಾನೆತ್ತಲು ಮಹತ್ವದ । ಗಿರಿಯದೆತ್ತಲು ಮಿಂಚುಬುಳುವಿನ । ಕಿರಣವೆತ್ತಲು ಹೊಳಹದೆತ್ತಲು ಕೋಟಿಸೂರಿಯರ ॥ ನರಮೃಗಾಧಮನೆತ್ತಲುನ್ನತ । ಪರಮತತ್ವವಿದೆತ್ತಲಕಟಾ । ಮರುಳು ತನ್ನವಗುಣವಸಾವುದ ಕಡೆಗೆ ಹಲುಬುವೆನು ॥೮೦॥ ಮೇಳಗಡ ನಮಗೀತನಲಿ ಭೂ । ಪಾಲಕರುಗಡ ಸಾವು ನಾಳೆ । ಯಾಳುಗಡ ದಿಟ ಸಾವು ವೀರರುಗಡ ವಿಚಿತ್ರವಲಾ ॥ ಮೇಲುಗಾಣದಪಾರ್ಥಸಂಬೇ । ಕಾಳುಮೂಳನ ವಿಧಿಯನೇ ಹರಿ । ಹೇಳುವನು ಶಿವಯೆನುತ ಕಂಗಳನೆವೆಗಳಲಿ ಬಿಗಿದ ॥೮೧॥ ಅಡಿಗಡಿಗೆ ಕಣ್ದೆರೆದು ಮುಚ್ಚುವ । ನಡಿಗಡಿಗೆ ಮೈಬಿದಿರಿ ಬೆರಗಹ । ನಡಿಗಡಿಗೆ ಮೈಯೊಲೆವಸುಬ್ಬಿದರೋಮಪುಳಕದಲಿ ॥ ಅಡಿಗಡಿಗೆ ನೆನೆನೆನೆದು ಹೊಂಗುವ । ನಡಿಗಡಿಗೆ ಭಯಗೊಂಡು ಕರಗುವ । ನೊಡಲನವನಿಗೆ ನೀಡಿ ನಿಡಿದೋಳುಗಳ ಹರಹಿದನು ॥೮೨॥ ಮುರಹರ ತ್ರಾಯಸ್ವ ಕರುಣಾ । ಕರ ಹರಿತ್ರಾಯಸ್ವ ಲಕ್ಷ್ಮೀ । ವರ ಪರಿತ್ರಾಯಸ್ವ ದನುಜಾಂತಕ ಪರಿತ್ರಾಹಿ ॥ ಚರಣಭಜಕಕುಟುಂಬಕನೆ ಘನ । ದುರಿತಕುಂಜರಕೇಸರಿಯೆ ಮುರ । ಹರ ನಿರೀಕ್ಷಿಸಿ ರಕ್ಷಿಸೆನ್ನನೆನುತ್ತ ಹೊರಳಿದನು ॥೮೩॥ ದೇವಭಕ್ತಜನಾರ್ತಪಾಲಕ । ದೇವ ಬಹಳಕೃಪಾಮಹಾರ್ಣವ । ದೇವ ಸರ್ವೇಶ್ವರ ಸದಾತ್ಮಕ ಸಕಲನಿಷ್ಕಳನ ॥ ಸೇವಕರಲಾರಯ್ದುವಧೇ ಸುಗು । ಣಾವಗುಣವನು ನಿಮ್ಮಭೃತ್ಯನ । ಭಾವ ಬೆಚ್ಚಿತು ವಿಶ್ವರೂಪವ ಬೀಳುಕೊಡಿಯೆಂದ ॥೮೪॥ ಸೋಕಲರಿಯುವನಂತವೇದವು । ಮೂಕವಾದವು ಜೀಯ ಜಡನವಿ । ವೇಕಮಾನವ ಮಸಕವೇನಿನ್ನಳವಿಗೈದುವೊಡೆ ॥ ಸಾಕಿಕೊಳ್ಳೈ ಕೃಷ್ಣ ನೋಡಲು । ನೂಕದನ್ನವೆ ಸೀವುಶಿವ ಕರುಣಾಕರನೆ ಕೈ ಮರೆಯದೇ ಕೃಪೆಮಾಡಬೇಕೆಂದ॥೮೫॥ ಎಳನಗೆಯ ಸಿರಿಮೊಗದ ಮಿಂಚಿನ । ಹೊಳೆಹೊಳೆವನಿಟ್ಟೆಸಳುಗಂಗಳ । ತೊಳಪಕದಪಿನ ಮುಖದ ಕಾಂತಿಯ ಮಕರಕುಂಡಲದ ॥ ಲಲಿತಕಂಠದಕೌಸ್ತುಭೋರು । ಸ್ಥಳದ ನಿಡಿದೋಳುಗಳ ಕೋಮಲ । ವಲಯಪೀತಾಂಬರದ ಮುನ್ನಿನ ರೂಪತೋರೆಂದ ॥ ಪರಮಚಿನುಮಯ ನೀನು ಕರ್ಮದ । ಕರಣ ನಿನ್ನದು ನೀ ಚರಾಚರ । ಭರಿತ ಭಾರಿಯವಿಶ್ವಮಯನವ್ಯಕ್ತನದ್ವಯನು ॥ ನರನ ಮತಿಯಿದು ಮಂದಮತಿಗೇ । ಚಲಸಲರಿವುದೆ ಜೀಯಮುರಹರ । ಕರುಣಿಸೈಮೈದೋರು ತನ್ನೊಡನಾಡಿತನ ಸದನುವ ॥೮೬॥ ಅಳಕನಿಚಯದ ಕುಂಭಿ ನೊಸಲಿಸ । ತಳಿತವೆಯ ನಿಡುಹುಬ್ಬುಗಳ ಕೋ । ಮಲಸುಮುಕ್ತಾಫಲಕೆ ಸೆಣಸುವದಂತಪಙ್ಕ್ತಿಗಳ ॥ ಲಲಿತಚುಬುಕದ ಚಾರುತರಮಂ । ಡಲದ ಸುಳಿನಾಭಿಯ ಸುವೃತ್ತದ । ವಿಲಸಿತೂರುಯುಗದ ಮುನ್ನಿನ ರೂಪ ತೋರೆಂದ ॥೮೭॥ ನಳಿನನಾಭ ಮುಕುಂದ ಮಂಗಳ । ನಿಳಯ ಭಕ್ತವ್ಯಸನಿ ದೈತ್ಯ । ಪ್ರಳಯಪಾವಕ ಭಕ್ತವತ್ಸಲ ಭಕ್ತಸುರಧೇನು ॥ ಲಲಿತ ಮೇಘಶ್ಯಾಮ್ಮ ಸೇವಕ । ಸುಲಭ ಶೀಲ ಮುರಾರಿ ಭಕ್ತಾ । ವಳಿಕುಟುಂಬಕ ಕೃಷ್ಣಕೇಶವ ಕರುಣಿಸುವು

ದೆಂದ ॥೭೯॥ ಪರಮಪುಣ್ಯಶ್ಲೋಕಪಾವನ । ಚರಿತ ಚಾರುವಿಲಾಸನಿರ್ಮಲ । ವರಕಥನಲೀಲಾವಿನೋದ ಪ್ರಕಟಭುವನೇಶ ॥ ನಿರವಯವ ನಿರ್ದ್ವಂದ್ವ ನಿಸ್ಪೃಹ। ನಿರುಪಮಿತ ನಿರ್ಮಾಯ ಕರುಣಾಕರ ಮಹಾತ್ಮ ಮನೋಜನಿಗ್ರಹ ಕರುಣಿಸುವುದೆಂದ ॥೮೦॥ ದೇವ ಲಕ್ಷ್ಮೀಕಾಂತ ಸಿತರಾ। ಜೀವಲೋಚನ ಭೂತಭಾವನ। ರಾವಣಾಂತಕ ಗೋಪವೇಷವಿಲಾಸ ಜಯವಾಸ ॥ ದೇವಕೀನಂದನ ಯಶೋದಾ। ದೇವಿಯುನ್ನತಪುಣ್ಯಫಲ ತಲೆ । ಗಾವುದೈ ತರುವಲಿಗೆ ತೋರ್ಪೈ ಮುನ್ನಿನಾಕೃತಿಯ॥೮೧॥ ನಿಗಮನಿಕರವ ಸೆಳೆವತಿರುಗುವ । ನಗಕೆ ಬೆನ್ನನುಕೊಡುವ ಜಲಧಿಯ । ಹೊಗುವವಮಹಿಯನು ಮೊಗೆವಮಗುವಿನನುಡಿಗೆವ್ಯಗುಡುವ ॥ ಗಗನಕಂಘ್ರಿಯ ನಿಡುವತಾಯ । ಕ್ಕಗಳಿಗಕ್ಕೆಯತೋರ್ಪರಾಣಿಯ । ಸೊಗಸ ಸಲಿಸುವ ಬಗೆಯನೆನ್ನಲಿ ಕೃಪೆಯಮಾಡೆಂದ ॥೮೨॥ ಮರೆದುಫಾಲಿಗೆಗೊನೆಗೆ ಸಾಮದ । ನಿರಿಗೆ ನೆಲೆಗೊಳೆ ನಿನ್ನನೇ ಸಲೆ। ತೆರುವಬಿರುದನು ಬಲ್ಲೆ ನೊರಲಿದು ನಿನ್ನ ಹಲುಬಿದೊಡೆ॥ಉರುವಹೆಂಗುಸಿಗುನ್ನತಿಕೆಯಲಿ । ಸೆರಗುಬೆಳದುದ ಬಲ್ಲೆನ್ನೈ ನ್ಯೆ । ಗೆಪ್ರುದೈ ಕಾರುಣ್ಯವರುಷವನೆನ್ನಮೇಲೆಂದ ॥೮೩॥ ಹಸುಳೆಗಮರಾಚಲದ ಹೊರೆ ಸೈರಿಸುವುದೇ ಮರಿಹುಲ್ಲೆ ಸಿಂಹದ । ಮಸಕಕಿದಿರೇಯೊಳೆಲತೆಯ ಕುಡಿವಾಳಿಗೆಗೆ ತೊಲೆಯೆ ॥ ಸಸಿದರಳೆ ಸಿಡಿಲೆರಗಿದೊಡೆಜೀ । ವಿಸುವುದೇ ನಿಮ್ಮಡಿಯ ವಿಶ್ವ । ಪ್ರಸರರೂಪಿಂಗಾನುಲಕ್ಷ್ಯವೆ ದೇವ ಹೇಳೆಂದ ॥೮೪॥ ಅಣಲೊಳಷ್ಟಾದಶಮಹಾಕ್ಷೋ । ಹಿಣಿಗಳಡಗಿದವೆಂಬುದಿದು ಭೂ । ಷಣವೆ ಜೀಯ ಮುರಾರಿನಿಮ್ಮಯ ರೋಮಕೂಪದಲಿ ॥ ಗಣನೆಗೆಟ್ಟಜರುದ್ರಸುರಸಂ। ದಣಿಗಳಿವೆ ಜಠರದಜಗಂಗಳ । ಗಣಿಸಬಲ್ಲಸದಾರು ಸಾಕೆನ್ನೆನ್ನಸಲಹೆಂದ ॥೮೫॥ ವಿಶ್ವ ನಿನ್ನಯ ಮಾಯೆ ನಿರ್ಮಲ । ವಿಶ್ವರೂಪನು ನೀನು ಬಗೆದೊಡೆ । ವಿಶ್ವ ನಿನ್ನೊಳು ಸುಳಿವುದಳಿವುದು ನಿನ್ನಲೀಲೆಯಲಿ ॥ ವಿಶ್ವವಲ್ಲಭ ನೀನು ನಿನ್ನದು । ವಿಶ್ವಪಾಲಕ ವಿಶ್ವಚೇಷ್ಟಕ । ವಿಶ್ವದಾಧಾರನೆ ಜಡಾತ್ಮನ ಸಲಹಬೇಕೆಂದ ॥೮೬॥ ವೀರ ದೈತ್ಯಕುಠಾರ ಗಳಿತವಿ । ಕಾರ ಗೋಪೀಜಾರ ನಿಗಮವಿ। ದೂರ ಸುಖಸಾಕಾರ ನಿರ್ಗತಪಾಪಮಮಕಾರ ॥ ಧೀರ ಜಗದಾಧಾರ ಲಸದಾ । ಚಾರಕಮಲಾಗಾರ ಭುವನಾ । ಧಾರನಿರ್ಜಿತಮಾರ ಮುರಹರ ಸಲಹಬೇಕೆಂದ ॥೮೭॥ ಭಯದ ಬಿಗುಹಿನ ಭಾವ ಭಕ್ತಿಯ । ನಯದ ಬಿನ್ನಹದೋಜೆಯನು ಚಿನು । ಮಯನು ಕೇಳಿದುಮೆಚ್ಚಿ ಡಿಂಗರಿಗಂಗೆ ನಗುತೆಂದ ॥ ನಿಯತವೇ ನೀನಲ್ಲಲೇ ಸೇ। ನೆಯನು ಕೊಲುವವ ಕಾವವನು ನಿ। ಶ್ಚಯವ ನಿನ್ನಲಿ ನೋಡಿ ಬಿನ್ನಹಮಾಡು ಬಳಿಕೆಂದ ॥೮೮॥ ಎನಿತು ಗಜವಡಗಿದವು ಕೌರವ । ರೆನಿಬರಿದರೊಳಗಡಗಿಹರು ಧ । ರ್ಮನತನಯಭೀಮಾರ್ಜುನರು ಭೀಷ್ಮಷ್ಮದ್ರೋಣಮೊದಲಾಗಿ ॥ ಇನಿಬರಡಗಿತು ನೋಡು ಬಾಂಧವ । ಹನನ ನಿನಗುಂಟಾದೊಡೀಗಳೆ । ನೆನೆದು ಬಿನ್ನಹಮಾಡೆನುತ ಪಾರ್ಥಂಗೆ ಹರಿ ನುಡಿದ ॥೮೯॥ ಗುರುಗಳಿಗೆ ನಾತಪ್ಪೆನೆಂದೊಡ । ಮುರಿದೊಡೆಮಗದು ಖ್ಯಾತಿ ಭೀಷ್ಮನು । ವರಪಿತಾಮಹನೆಂದು ಪೇಳ್ದೊಡೆ ಬಳಿಕಸಹ್ಯವದು ॥ ಅರಿಬಲವು ಮುನ್ನಳಿವುದೋ ನೀ । ನಿಂದೆಯೋ ಲೇಸಾಗಿ ಭಾವಿಸಿ । ನರ ನಿರೀಕ್ಷಿಸೆನುತ್ತ ನುಡಿದನು ಕೃಷ್ಣನರ್ಜುನನ ॥೯೦॥ ನೆನೆದೊಡಜಕೋಟಿಗಳು ನಿನ್ನಯ । ಮನದೊಳಗೆ ಜನಿಸುವರುಪೇಕ್ಷೆಯೊ । ಳನಿತುಕಮಲಜರಳಿವರೆಂದೊಡೆ ನಿನ್ನಮಹಿಮೆಯನು ॥ ನೆನೆಯಲಳವೇ ದೇವಸಾಕಿ । ನ್ನನುವರದೊಳೆನಗೇನ ಬೆಸಸಿದೊ। ಡನಿತುವನು ಮುಖದಿರುಹಿದೊಡೆ ಡಿಂಗರಿಗನಲ್ಲೆಂದ ॥೯೧॥ ಮರಳಿ ಫಾನ್ನಿನರೊ

ಪನಂಗೀ । ಕರಿಸಿ ವಾಘೆಯ ಕೊಂಡು ತುರಗಾ । ವಳಿಯುಬ್ಬಿಳಿವಡೆಯುತ್ತ ಪಾರ್ಥಗೆ ಮಾಯೆಯನು ಬೀಸಿ ॥ ಶರಧನುವಕೊಳ್ಳೇಳು ಕೈಕೋ । ಪರಬಲದ ತೋಟಿಯನು ತೋರ್ಕೈ । ಬಿರುದಘಾತಕತನವನೆಂದನು ನಗುತ ಮುರವೈರಿ ॥೯೨॥ ಮೋಹ ಮಿಗೆ ಪಾಂಡವ ಮಮ । ಪ್ರಾಣಾಹಿಯೆಂಬೀಬಿರುದ ಸಲಹಲು । ಗಾಹಿನಲಿ ಮೇದಿನಿಯು ತಿಣ್ಣಿನ ತಿದ್ದ ಲೋಸುಗವೆ ॥ಆಹವದಲರ್ಜುನನ ರಥದಲಿ । ವಾಹಕನು ತಾನಾಗಿಶರಣ । ಸ್ನೇಹಸಂಸಾರಾನುರಾಗನು ಸುಳಿಸಿದನು ರಥವ ... ॥೯೩॥

ಅಂತು ಸಂಧಿ ೩ ಕ್ಕಂ ಪದ ೧೯೬ ಕ್ಕಂ ಮಂಗಳಮಸ್ತು.



## ನಾಲ್ಕನೆಯ ಸಂಧಿ.

ಸೂಚನೆ॥ ಕವಿದು ಹಳಚಿತ್ತುಭಯಬಲ ಶಿವ । ಶಿವಮಹಾದೇವಮಮ ಪದರಜ । ರವಿಯ ತಿವಿದುದು ದಿವವನೆಳಿದುದು ಕುಸಿದನಹಿರಾಯ ॥

ಪದ॥ ಅವಧರಿಸು ಧೃತರಾಷ್ಟ್ರ ಗಂಗಾ ।ಭವನ ಸುಯ್ಯೋಧಾನದಲಿ ಕೌರವ । ನಿವಹ ಧೃಷ್ಟದ್ಯುಮ್ನನಾರ್ಕೆಯಲಿ ರಿಪುಸೇನೆ ॥ ಸವತಳಿಸಿ ಮೋಹರಿಸಿ ಕೈವೀ । ಸುವಮಹೀಶರ ನೀಕ್ಷಿಸುವದಾ। ಹವಮಹೋದ್ಯೋಗದಲಿ ಬೆರಗಾಯಿತ್ತು ಸುರಕಟಕ ॥೧॥ ಎರಡುಬಲ ಕೈಲಾಗನೀಕ್ಷಿಸು । ತಿರೆ ಕೃತಾಂತನ ಪುರಕೆ ವಾಹಿನಿ । ಸರುವುದೆಂಬಂದದಲಿ ಕೈವೀಸಿದರು ಭೂಭುಜರು ॥ ಅರರೆ ಮೂಡಣಶರಧಿ ಘಡುವಣ । ಶರಧಿಗಾಂತುದೊ ರಣಚಮತ್ಕೃತಿ । ಸುರರನಯನಾಂಗಣಕೆ ಕವಿಸಿತು ಕೌತುಕಾಂಬುಧಿಯ ॥೨॥ ಎಲೆಲೆ ಕವಿಕವಿ ಬೆರಸುಬೆರಸಿ। ಟ್ಟೆಳೆಸು ತಿವಿತಿವಿ ಭಲರೆಭಲರತಿ । ಬಲರು ಹಿಂಚದಿರಿನ್ನು ಹೊಯ್ಹೊಯ್ಯ ಚೂಣಿಗರನೆನುತ ॥ ಬಲಜಲಧಿ ಬೊಬ್ಬಿರಿದು ದಳವೆ । ಗ್ಗಳಿಸಿ ಹಳಚಿತು ಗಿರಿಯ ಬೆಸುಗೆಯು । ಕಳಚಿತಹಿಪನ ಕೊರಳು ಕುಸಿದುದು ಕಮಠನೆದೆ ಬಿರಿಯೆ ॥೩॥ ಒದರಿ ಜರೆದುರೆ ಹಳಚಿದೊಡೆ ನೆಲ । ನದಿರಿತಪ್ಪಳಿಸಿದೊಡೆ ದಿಕ್ಕರಿ । ಮದವಡಗಿದವು ಕುಣಿದರ ಮೆಟ್ಟಿದೊಡಹಿಪನೆದೆಯೊಡೆಯೆ ॥ ಹೊದರು ಮಿಗೆ ಹೊಕ್ಕಾಳಿ ಬೆರಳಿನ । ತುದಿಯ ಬೊಬ್ಬೆಯುರವದೊಳಗೆ ಜಗ । ವದಿರೆ ದಳವುಳಿಸಿತ್ತು ಕೌರವ ಪಾಂಡುಸುತಸೇನೆ ॥೪॥ ರಣದೊಳಾದುದು ಬೋನವಾರೋ । ಗಣೆಗೆ ಬಿಜಯಂಗೈವುದೈ ಚರ। ಗಣಸಹಿತವೆಂದತಿಬಲರು ಕಾಲಂಗೆ ದೂತರನು । ಅಣಿಯೊಳಟ್ಟಿದರೆನಲು ಪಡೆಯುರೆ । ವಣೆಯ ಪದಹತಿಧೂಳಿ ಗಗನಾಂ । ಗಣಕೆ ಕವಿದುದು ತೀವಿತಬುಜಭವಾಂಡಮಂಡಲವ ॥೫॥ ಚಲನದಿಂದು ದಯಿಸಿದಶೂದ್ರತೆ । ಗಲಸಿ ಸುರಗಂಗೆಯಲಿ ಮಿಂದು । ಚ್ಚಳಿಸಿ ರಜತಾದ್ರಿಯಲಿ ಶೂಲಿಯ ಪದಯುಗವ ಭಜಿಸಿ ॥ ಬಳಿಕ ನಾಕವನೈದಿ ಸುಮನೋ । ಲಲನೆಯರ ಕುಂತಳಕೆ ಹಾಯ್ದುದು । ಬಲದಪದಹತಧೂಳಿಗೆಲಿದುದು ವಾಜಪೇಯಿಗಳ ॥೬॥ ಹರಿಗೆ ಕೆಂಪಿನಸುಳಿಗೆ ಸುರಾಂಗನೆ । ಯರಿಗೆ ಸುಭಟವ್ರಜಕೆ ಕುಂಟಣಿ । ವರದಿಶಾಂಗನೆಯರಿಗೆ ಬೈತಲೆಗೆಸವ ಸಿಂದೂರ ॥ ಸುರಪನನಿಮಿಷತನಕೆ ರಿಪುವೆನ। ಲುರವಣಿಸಿ ಕೆಂಧೂಳಿ ನಭಕು । ಪ್ಪರಿಸ ಹೊಯ್ದಾಡಿದುದು ಪರಚತುರಂಗಬಲ ಹಳಚಿ ॥೭॥ ಬಿಡದೆ ಕಡಿ

ದಾಡಿದುದು ಸೇನಾ। ಕಡಲು ರಕುತದಕಡಲನುಗುಳಿತು। ಬಿಡದೆ ಸುಂಟುರೆಗಾಳಿ ವಿಲಯುದ ಮಳೆಯುಪಡೆ
ದಂತೆ॥ ಬಿಡದೆರಡು ಥಟ್ಟುಗಳಕೈವೆಡ್ಡು। ವಿಡಿದು ಹರಿವರುಣಾಂಬುಜಲದಲಿ। ಕಡಿತುಗಳು ಬೆಂಡೇಳೆ ದಂತಿ
ಗಳಟ್ಟೆ ಕೊಡೆ ನೆಗೆಯೆ ॥೮॥ ಲಗ್ಗೆ ಮಸಗಿದಸೂಳುವೊಯ್ಲಿನ।ಸೆಗ್ಗಿಸಲಿ ಮುಂಕೊಂಡು ಮೋಹರ।ವೊ
ಗ್ಗೊಡೆದು ಹೆಣಗಿದುದು ಕೇಶಾಕೇಶಿಯುದ್ಧದಲಿ॥ ಮೊಗ್ಗರವ ಕೆದರಿದರು ಹೊಯ್ದಾಡಿ। ಮುಗ್ಗಿದರು
ಕಡಲಿಡುವರಕುತದ । ಸುಗ್ಗಿ ಶಾಕಿನಿಯರಿಗೆ ಸೇರಿತು ಭೂಪ ಕೇಳೆಂದ ॥೯॥ ತೆಗೆದುದುಬ್ಬಿದಚೂಣಿ ಹೆಣ
ಸಾ। ಲುಗಳು ಹರಿದವು ರಕುತದರೆವೊನ। ಲುಗಳು ಹರಿದವು ಹೊರದವಂತಕನುರುಪರಿಗ್ರಹವ॥ ಅಗಿದು
ಬಿದ್ದುದುಚೂಣಿ ಬಲುಗಾ। ಳಗವನೊಯ್ಯಾರಿಸುತ ರಾಯರು। ತೆಗಸಿದರು ಸೇನೆಯನು ನೂಕಿದರೆಂದು
ಬಿಲ್ಲವರ ॥೧೦॥ ಜಡಿವಕೈದುಗಳುಲಿಯೆ ಲೋಹವ। ನಡಸಿಕಾರಿದವಂದು ಖಣಿಖಟಿ। ಲಿಡುವದನಿ ತೀವಿ
ದುದು ನಳಿನಭವಾಂಡ ಮಂಡಲವ ॥ ಕಡುಗಿ ಹೊಯ್ದಾಡಿದರು ದಾವಣಿ । ವಿಡಿದು ಬೋಲುವಕರು
ಳ ಹಿಣಿಲೊಳು । ತೊಡಗಿ ತೋಟಿಯ ಭಟರು ಹಾರಿದರಂತಕನಪುರಿಗೆ ॥೧೧॥ ಪುಲಿದೊಗಲ ಸೀಸ
ಕದ ಕಿಗ್ಗ । ಟೊಪ್ಪಲೆವಸುರಗಿಯ ಕಾಂಚನದೊಳತಿ । ಬಲಿದಬಿಲ್ಲಿನ ಬಿಗಿದತಿರುವಿನ ಬೆರಳಹೊಯ್ಲು
ಗಳ ॥ ಬಲಿದಮುಂಗೈಹೊಡೆಯ ಬಿರುದಿನೊ । ಳುಲಿವ ಘಂಟೆಯ ಬೆನ್ನಗಿವ ಬತ್ತಳಿಕೆಗಳಲೈದಿದ
ರು ಬಿಲ್ಲಾಳುಭಯಸೇನೆಯಲಿ ॥೧೨॥ ಬೊಬ್ಬಿರಿದು ಮೊಣಕಾಲನೂರಿದ । ರಬ್ಬರದಿನಿವಿರಾಂತು ಕಾ
ಲನ । ಹೆಬ್ಬೆಳಸು ಘನವಾಯ್ತು ಬರಹೇಳೆಂಬವೋಲೊದರಿ ॥ ಹಬ್ಬುಗೆಯ ಬಿಲ್ಲುಗಳ ಜೇವಡೆ । ಮ
ಬ್ಬುವೊಗರಿನಕಣೆಯ ಬಿರುದಿನ । ಕೊಬ್ಬಿದಾಳೆಚ್ಚಾಡಿತಿಕ್ಕಿದಮುಂದಿಚಂಡಿಸದೆ ॥ ಬೆರಳಶರಸಂಧಾನದೃ
ಷ್ಟಿಯ । ಮುರಿಯ ಮುಷ್ಟಿಯ ಮೂರಲೆಯ ಕಿವಿ । ವರೆಯತೆಗಹಿನ ತೋಟಿಕಾರರು ತುಳುಕಿದರು
ಕಣೆಯ ॥ ಆರರೆ ಕವಿಕವಿಯಂಬತೊಡುತೊಡು । ಕರುಳನುಗಿಯೆಂದೆಸಲು ಹೆಣಗಳು । ಹೊರಳಿದ
ವು ಹೊಡಕರಿಸಿದವು ಹೊಕ್ಕೆಸೆವಚೂಣಿಗರ ॥೧೪॥ ಕಣೆಕಣೆಯಹಳಚಿದವು ಮಾರ್ಗಣೆ । ಕಣೆಯ ಕಡಿ
ದವು ಕವಿವಕಣೆ ಕಿರು । ಗಣೆಯ ಮುಕ್ಕುಳಿಸಿದವು ಹೆಕ್ಕಳಿಸಿದವು ಹಂದೆಗಳ ॥ ಖಣಿಕಟಿಲು ಘಳಿಘಳಿ
ಲು ಧೊಪ್ಪನೆ । ಘಣಿಲು ಘುರಿಘುರಿಕೊಯ್ಯುಸೀಳುವ । ಹೆಣಗೆಡಹುವಬ್ಬರಣೆ ಮಿಗಿಲೊದಗಿದರು ಬಿ
ಲ್ಲವರು ॥೧೫॥ ಉರಗಬಲದುರವಣೆಯೊ ವಾರಿಜ । ತರುಗಳುಪಶಾಖೆಗಳೊ ಕಾಲನ । ಹರವರಿಯ
ಹೆಬ್ಬೆಳಸ ಮುತ್ತುವವಿಹಗ ಸಂತತಿಯ॥ ತರಣಿ ತಲ್ಲಣಿಸಿದನು ಹೊಗರಲ । ಗುರಿಗೆದರಿ ಹೊಗರೆದ್ದು
ಹಿಳುಕ । ಬ್ಬರಿಸಿಗಬ್ಬರಿಸಿದವು ದಿಗುತಟವನು ಶರವ್ರಾತ ॥೧೬॥ ಹೆಣಗಿಹಿಣಿಲಿರಿದಭ್ರದಲಿ ಸಂ। ದಣಿಸಿ
ಕಣೆ ಕೈಕೊಂಡುದಂಬರ । ಮಣಿಯನಣೆದುದು ತಿಮಿರರಾಜನದಂಡು ಸಂದಣಿಸಿ ॥ ಮಣಿಮಕುಟದೆ
ಲೆಗೊಯ್ಲು ನೆಲದಾ। ವಣಿಯೊ ಗಗನಾರ್ಣವದ ವಾಡಬ। ಕಣವೊ ಕೌತುಕವೆನಿಸವೆಚ್ಚಾಡಿದರು ಬಿಲ್ಲವ
ರು ॥೧೭॥ ರೇಣುಹತ್ತಿದರವಿಯ ಮಸೆಯೊಲು । ಸಾಣೆಯಿಕ್ಕಿದ ಭಗಣರತ್ನವ । ಸಾಣೆಗೆಳೆಯಲು
ಕಮಲಭವಸೃಜಿಸಿದಸಲಾಕೆಗಳೊ ॥ ಕಾಣೆನಭ್ರವನಮುಖ ದಿಕ್ಕುಗ । ಳೇಣುಮುರಿದುದು ಹೊಕ್ಕೆಸುವ
ಬಿಲು ।ಜಾಣರುರವಣೆ ಯಾಚಿಸಿತು ಲೋಕದ ಧನುರ್ಧರರ ॥೧೮॥ ವೀರಧಣುಧಣು ಪೂತುರೇ ಬಿಲು ।
ಗಾರ ಮಝ ಭಾಪ ಚಾಪತಂತ್ರವಿ । ಶಾರದಾ ಯೆನುತೊಬ್ಬರೊಬ್ಬರಬಿರುದ ಮೂದಲಿಸಿ॥ ಓರಣಾವಕಣೆ
ಗಳಲಿತಲೆಗಳ।ತೋರಣವ ಕಟ್ಟಿದರು ಸೇನಾ। ಮಾರಣವ ಬೇಳಿದರು ಅರುಣಜಲಾಜ್ಯದಾಹುತಿಯ ॥೧೯॥

ಪ್ರಳಯದಿವಸದ ಪಟುಪವನನೀ । ಹಿಳುಕುಗಾಳಿಯೊಳುದಿಸಿದನೊ ಬಿಡೆ । ಮೊಳಗಿವೋದುವ ಸಿಡಿಲುವಂಬಿನ ಮನೆಯೊಳುದಿಸಿದವೊ॥ ಜಲಧಿಯನು ಜಂಗುಳಿಸಿತುವರಕೆ।ಕುಲಿಶಘೀಶಿಯ ಬಿರುಬುಗೆಣೆಬಳಿ । ಸಲಿಸಿ ಹುಪಾಡಿದರು ಸುಭಟರ ಗೋಣಗುಂವಾಡಿ ॥೨೦॥ ಕುಣಿದೆಸುವಕೂಕಿರಿವಬಿರುದರ । ನಣಿಕಿಸುವಬಲುಬಿಲ್ಲೊದಬ ಕೈ । ದಾಪಿಯೆ ಕಣುಸೆಟ್ಟ್ಯಾಲಿಗೊಳೆತಳವುಂಡ ಮರಸಾಗೆ ॥ ಹೆಣಗಿದರು ರಣರೌಕಿಗರು ಬಿರು । ಗಣೆಯಲೆಚ್ಚಾಡಿದರುಸಂ । ದಣಿಸಿದರು ಕಿಗ್ಗಟ್ಟು ಸುರಗಿಯನುಗಿದು ಹಳಚಿದರು ॥೨೧॥ ಅಹಿತನಾಲಿಗೆ ಮೃತ್ಯುವಿನ ಹಲು । ಗಹಳೆಗಳ ಕಳದಂತೆ ಸಿಡಿಲಿನ । ಬಸಳದಾರಿ ತೆಗೆದಂತೆ ಕುಲಿಶದ ತಿರುಳ ಮಸದಂತೆ ॥ ಮಹಿಯುದಿರಲಿಬರಾಗಿ ಸುರಗಿಯ । ಲಹವಿನದಟರು ತಿರುತಿರುಗಿಜರೆ । ಅಹಿತರುಪಾಡಿದರು ಪಡೆದರು ರೌದ್ರರಂಜನೆಯ ॥೨೨॥ ವಿರಾರಿ ತಳಸಂಚದಲಿ ಮೊನೆಯನು । ತೋರಿ ತಿರುಪಿನೊಳಣೆದು ಕಳಚುವ । ಠೇರುಗಾಣಿಸಿ ಮಧ್ಯಸಂಚಕೆ ನಿಲುಕಿ ಕೈಮಾಡಿ ॥ ಜಾರಿಸುರಗಿಯಲಣೆವರಳುಕದೆ । ವಿರಾರಲುಪ್ಪರಸಂಚದಲಿ ಕೈ । ದೋರಿ ದಂಡೆಯಲೊತ್ತಿ ಕಾದಿತು ಸುರಗಿಯತಿಬಲರು ॥೨೩॥ ಅಣೆದೊಡೌಕುವ ನೂಕಿ ಕವಿದೊಡೆ। ಹೆಣನ ತೋರುವ ಹಜ್ಜೆ ದೆಗದರೆ। ಜಣುಗಲೀಯದೆ ಮೇಲೆ ಕವಿಸುವವಿರಾರಿ ಕೈಮಾಡಿ ॥ ಕೆಣಕಿದರೆ ಬಂಕಿಸುವ ಧಟ್ಟಿಸಿ । ಹೆಣಗಿ ಮೊನೆಗೊಡೆ ದಂಡೆಯಲಿ ಬಲು । ಗಣೆಗಳೊದಗಿದವುವು ಮೆರೆದರು ಸುರಗಿಯತಿಬಳರು ॥೨೪॥ ಬೀಯವಾದರು ಬಿಲ್ಲವರು ಖಡು । ಗಾಯುಧರು ಕೈಕೊಳಲಿ ವಿಜಯ । ಶ್ರೀಯು ತಪ್ಪದು ಸಮರವುಖದಲಿ ಮಡಿದವಹಿಮಲಿಗೆ ॥ ರಾಯ ಮೆಚ್ಚಲು ರಣದೊಳೊದಗುವ । ರಾಯತಿಕೆಯೆಂತೆನುತ ಸೇನಾ । ನಾಯಕರು ನೂಕಿದರು ಖಂಡೆಯಕಾರಪೋಹರವ ॥೨೫॥ ತಾಟಿಸಿದರೊಡರೊಡನೆ ಕುಲಗಿರಿ । ದೂಟಿ ಬಿದ್ದವು ಚಿತ್ರವೆನೆ ನಡೆ । ಗೋಟೆಯೆನೆ ಮಂಡಳಿಸಿ ಬಲಿದರು ತೆಕ್ಕೆವರಿಗೆಗಳ ॥ ನೋಟಕಾರಿಗಾಲಿಗಳಿಗಲ್ಲಾಟ ಮಿಗೆ ಪರಿಚಿತ್ರಗತಿಗಳ । ತೋಟಿಕಾರರು ಹೊಕ್ಕು ತಾಗಿದರುಭಯಸೇನೆಯಲಿ ॥೨೬॥ ಬಲಸಮುದ್ರದ ಬುದಬುದಂಗಳೊ । ತಿಳಿಯಲರಿದೆನೆ ಹರಿಗೆ ಮುಸುಕಿದ । ಬಿಳಿಯಚೌರಿಯ ಲುಲಿವಘಂಟೆಯ ಬಿರುದಿನತಿಬಲರು ॥ ತಳಪಟದೊಳೌಕಿದರುತೊಡೆಸಂ । ಕಲೆಯತೊಲಗದಕಂಭದಪ್ರತಿ। ಬಲರು ಹಾಹಾಹಾಣಿಯಲಿ ಹೊಯ್ದಾಡಿದರು ಕಡುಗಿ ॥೨೭॥ ಸಿಡಿಲುಸೋಲ್ತುದೊ ಜಡಿವನಿಸ್ವನ। ಕಡುವೊಗರುಬೆಸಲಾಯ್ತೊ ನಭವನು । ಹೊಡಗುಳಿನೊಳುಚ್ಚಳಿಪಕಿಡಿ ವಡಬಾನಳನಪಿತನೊ॥ ಕುಡಿಮೊನೆಯ ಲಹಿಪತಿಯ ನಾಲಗೆ । ಗಡಣವುದಿಸಿದವೆನೆ ಕೃಪಾಣದ । ಕಡುಹು ಕೌತುಕವಾಯ್ತು ಖಂಡೆಯಕಾರ ಮೋಹರವ ॥೨೮॥ ಕರೆಕರೆದು ಮೂದಲಿಸಿ ಬಿರುದಿನ । ದುರುಳರುಬ್ಬಿನಮೇಲೆ ಹೊಕ್ಕು । ಬ್ಬರಿಸಿ ಹೊಯ್ದರು ಕಾದುಕರೆದರು ಕಾಲಕಿಂಕರರ॥ ಕರುಳುಗಿಯೆ ತಲೆ ಸಿಡಿಯೆ ನಿಟ್ಟೆಲು। ಮುರಿಯೆ ಮೂಳೆಗಳುದಿರೆ ಶೋಣಿತ । ಸುರಿಯೆ ಕಾಳಿಜ ಕೆದರೆ ತುಂಡಿಸಿ ಖಂಡ ಬೆಂಡೇಳೆ ॥೨೯॥ ಅಡಗಿ ಕಿಡಿಗಾರಿದವು ಲೋಹದ । ಕಡಿಕು ಸಿಡಿಲುಬ್ಬರದಲಣವನು। ಹೊಡೆದು ಕೈಬಂದುಗೆಯ ಕೀಲಣವಿಕ್ಕಡಿಸಿ ಬೀಳೆ। ಘಡ ಸುಗಾಯವ ಬಿಸುಟವೋ ಮೊನೆ । ಗೊಡದಿರುಪ್ಪರದಲ್ಲಿ ಕೈಯಲಿ । ತುಡುಕಿರೋ ಮಿಡುಕದಿರಿ ಮುಂಡಿಯನೆನುತ ಹಳಚಿದರು ॥೩೦॥ ಕಾಲು ಖಂಡಿಸಿ ಬೀಳೆ ಕರುಳಿನ । ಮಾಲೆಯಲಿ ತೊಡಕಿದರು ಹಣಿದದ । ಭಾಳೆಯಂತಿರಲುಡಿಯೆ ತೊಡೆನಡು ಕಡಿದು ಕಿಡಿಯೇಳೆ ॥ ತೋಳ ಕೊರೆವವು ನೆಲಕೆ ತ

ಲೆಯನು। ಕೀಲಿಸಿದರೆರಡಾಗಿ ತನುವನು। ಸೀಳಹೊಯ್ದರು ಬೈದು ತಾಗಿತು ಹರಿಗೆಯತಿಬಲರು ॥೩೧॥ ನೆಲಕೆ ಹೊಯ್ದುಬ್ಬರಿಸಿ ಬಾಗಿದ। ತಲೆವರಿಗೆ ತೆರಳದೆ ಸುಗಾಯದ। ಬಲದ ಬೆಳಸಿರಿವಂತರಹಿತರ ಕರೆದು ಮೂದಲಿಸಿ ॥ ಛಳಿಛಟಿಲು ಛಟಛಟಲು ಖಣಿಖಣಿ। ಖಳಿಲೆನಲು ಮಿಗೆ ಮೆರೆವರಿಪುಗಳ । ಕೊಲುವೆನೆಂದುರವಣಿಸಿ ಹೊಯ್ದಾಡಿದರು ಖಡ್ಗಿಗರು ॥೩೨॥ ನಿಲುಕ ಲಿಟ್ಟೆಡೆಯಾವ ಹೆಣನೊ। ಟ್ಟಿಲನೆ ಸವರುತ ಕುಣಿವಮುಂಡವ। ನೆಳದು ರುಧಿರದೊಳಿಕ್ಕಿ ಮೆಟ್ಟುವ ಮುಂದೆ ನಡೆನಡೆದು ॥ ತಲೆಮಿದುಳ ಜೋರಿನಲಿ ಜಾರುವ। ಕಲಹದಾತುರದಲ್ಲಿ ಭಟರ। ಪ್ಪಳಿಸಿ ಗಾಯಂಬಡೆದು ಕೆಕೆದುದು ಉಭಯ ಸೇನೆಯಲಿ ॥೩೩॥ ಉರುಳಿ ಬೀಳುವ ತಮ್ಮ ತಲೆಗಳ। ತಿರುಹಿ ರಿಪುಗಳನಿಡುವ ಸಿಡಿಲಿದ। ಶಿರವನರಿಯದೆ ಮುಂಡವಿದಿರಲಿ ಬೀದಿವರಿವರಿದು ॥ ಹರಿಗೆ ಹೊಳ್ಳಿಸೆ ಖಡುಗ ಖಂಡಿಸೆ । ಕೊರಳರಿಯಲಿಕ್ಕಿಸದೆ ಸೇನೆಯ। ಉರುವಣಿಸಿ ತಿವಿದರು ಕಬಂಧದಲತುಳಭುಜಬಲರು ॥೩೪॥ ನೆಲಕೆ ನಿಗುರಿದಗಂಗೆವಾಳದ। ಬಿಳಿಯ ಚೌರಿಯಲುಲಿವ ಘಂಟೆಯ । ತೊಳಪಬದ್ದುಗೆದಾರಕಾಂಚನಮಯದ ಗೊಂಡೆಯದ ॥ ಉಲಿವಗೆಜ್ಜೆಯ ಚಲ್ಲಣದ ಹೊಂ। ಬಳಿದಹರಿಗೆಯ ಹೊಳವಕಡಿತಲೆ। ಗಳ ವಿಲಾಸರು ಬಂದು ಹೊಕ್ಕರು ಕುಳವಪಡೆಕಡುಗಿ ॥೩೫॥ ಉರುಬಿದೊಡೆ ವಡಬಾನಲನ ಮುಖ। ದಿರುಹಿ ಮೈದೋರಿದೊಡೆ ಭುಜಗನ। ಬಿರುಬು ನಾಲಗೆಯುಬ್ಬಿ ಹೊಯ್ದೊಡೆಸಿಡಿಲಿನಬ್ಬರಣೆ ॥ ಮೆರವಹಜ್ಜೆಯ ದಂಡೆವಲಗೆಯ । ಮೆರೆಯಮೊಗದಂಡೆಗಳ ಜುಣುಗಿಸಿ । ತರುಬಿನಿಂದರು ಸಂದಕಡಿತಲೆಗಾರರೋಜೆಯಲಿ ॥೩೬॥ ಹಳಚಿದರು ತಗರಂತೆ ಗಜದವೊ। ಲೊಲೆದು ಕವಿದರು ಹಾವಿನಂತಿರೆ। ನಿಲುಕಿದರು ಸೂಕರನವೋಲ್ ಹೊಯ್ದೆತ್ತಿ ಹಾಯ್ಕಿದರು ॥ ಬಲಿದು ಚರಣಾಯುಧನವೋಲ್ಪರರಳವನೀಕ್ಷಿಸಿ ಕಪಿಯವೋಲುಮ್ಮೈ। ಲಾಳಿವಡೆದು ಹತ್ತಿದರು ಕಡಿತಲೆಗಾರರುರವಣಿಸಿ ॥೩೭॥ ಕಡಿತಲೆಯ ಮಿಂಚುಗಳ ಹೊಯ್ಲಿನ। ಸಿಡಿಲುಗಳ ರಕ್ತಪ್ರವಾಹದ। ಕಡುವಳೆಯ ನೃತ್ಯದ ಕಬಂಧದ ಸೋಗೆನವಿಲುಗಳ ॥ ಬಿಡುಮಿದುಳ ಹೊರಳಿಗಳ ಹಂಸೆಯ। ನಡಹುಗಳ ನವಖಂಡದಲಿ ಹೆಣ। ನಡಪಿತಳಿತಿಳಿ ಸುರಿದುದೈ ಸಂಗ್ರಾಮಕಾರ್ಗಾಲ ॥೩೮॥ ಪಡಿತಳವಬೀಸಿದೊಡೆಕಾಲಿ। ಕ್ಕಡಿ ನಡುವೆತಾಗಿದರೆ ಯಂಡಲೆ। ಗಡಿದು ಬಿದ್ದುದು ನಿಲುಕಿನುಪ್ಪರತಿರವ ಮನ್ನಿಸದೆ ॥ ಮಡವ ಮೀರುವಕಚ್ಚಿಮುಂಡಿಯ। ಮಡಿದೊಡೆಯ ತಲೆವೊರೆಯುಹಲಗೆಯ। ಕಡಿತಲೆಯ ಕಡಿತುಳುವಪಡೆ ಹೊಯ್ದಾಡಿತಿಳೆ ಹಿಳಿಯೆ ॥೩೯॥ ಖಡುಗತೋಮರಪರಶುಗಳ ಕ। ಕ್ಕಡೆಯ ಕೊಂತದ ಭಿಂಡಿವಾಳದ । ಕಡುಗಲಿಗಳುರೆ ಮಸಗಿದರು ಹಿಗ್ಗಿದುದು ಯಮಲೋಕ ॥ ಬಿಡದೆ ನಾಯಕವಾಡಿಚೂಣಿಯ। ಹಿಡಿದು ಕಾದಿಸುವುಭಯರಾಯರು । ದಡಿಯವರ ಕೈಯಿಂದ ಕವಿಸಿದರಂದುಸಬಳಿಗರ ॥೪೦॥ ಕುಣಿವತೊಡರಿನಹಿಂಡೆಯದ ಡೊಂ । ಕಣಿಯ ಬಿರುದರು ನೂಕುನೂಕಣಿ। ಹಿಣಿಲ ಬಾವುಲಿಕಾರರಾವೆಡೆ ಭಾಷೆಯತಿಬಳರು ॥ ಹೊಣಕೆಯಿಂದವೆ ಹೆಂಡಿರಿದಿರೊಳ। ಗಣಕಿಸುವಮಾತಲ್ಲ ದಿವಿಜರ। ಗಣಿಕೆಯರ ಬಯಸುವರು ನೂಕಲಿಯೆನುತ ಸಾರಿದರು ॥ ॥೪೧॥ ತಲೆಯಗಡಣೆಗೆಯಸುರರಂಭದ। ಪಳಿಯಸೀರೆಯ ಭಾಳಭೂತಿಯ। ಬಿಳಿಯಚೌರಿಯ ಝುಗೆಯ ಸಬಳದ ಕಾಲತೊಡರುಗಳ ॥ ಉಲಿವಬಿರುದಿನ ಕಹಳೆಗಳ ಕಳ। ಕಳಿಕೆ ಮಿಗೆ ನಿಶ್ಶಂಕಮಲ್ಲರು। ದಳದೊಳಗೆ ತಲೆದೋರಿದರು ಡೊಂಕಣಿಯ ಪಟುಭಟರು ॥೪೨॥ ನಡೆವಡವಿಯೋ ಬಲುಬುಜ

ರವಂ । ಗಡವೊ ಸಬಳವೊ ತಿವಿತಿವಾ ಬಹು । ವಡಬವಹ್ನಿ ಜ್ವಾಲೆಗಳೊ ಸೇನಾಮಹಾಂಬುಧಿಯೊ ॥ ಪಡೆಯುಪದಧೂಳಿಯಲಿ ಸವೆಯಲು । ಪೊಡವಿ ಪಾತಾಳದ ಫಣಿವ್ರಜ । ವಡರುವವೊರ ವಿಬಿಂಬಕನಲಾಯ್ತಾ ಕುತೂಹಳಿಕೆ ॥೪೩॥ ಮಿಕ್ಕು ಚೂರಿಸಲಹಿಯುಸಾಲಗೆ । ಜಕ್ಕುಲಿಸಿದಂತಾಯ್ತು ಮೊನೆಗಳ । ತೆಕ್ಕೆಯಲಿ ಕುಡಿಗೊಂಡು ಸುರಿದವು ರಕ್ತಧಾರೆಗಳು ॥ ಹೊಕ್ಕವರು ಹೆಣಗಿದರೆ ನಿರಿಗರು । ಳೊಕ್ಕವಡಗುದಿರಿದವು ಮೋಹರ । ಹಕ್ಕಲಾದುದು ಹರಿದು ಸಬಳಿಗರಿರಿದು ತೋರಿದರು ॥೪೪॥ ಬವರದಲಿ ಪ್ರಸರಿಸಿಪರಗಾ । ಯುವನು ವಂಚಿಸಿ ಭಟರು ಕೊಂದೆ । ತ್ತುವರು ಕೈಮಾಡಿದೊಡೆ ತಿವಿವರು ಕೋಡಕೈಯ್ಯುವರು॥ ಕವಿದೊಡಗೌಕುವರೌಕಿದೊಡೆ ತಗ್ಗುವರು ತಗ್ಗಿದೊಡೆಡನೊಡನೆ ಜಾರುವರು ಜಾರಿದೊಡೆದ್ದು ತಿವಿವಾಡುವರು ಸಬಳಿಗರು॥೪೫॥ ಹೆಣನ ಹೋಳಿನ ಸಿಡಿದಡಗು ಡೆಂ। ಕಣಿಯಲೆಸದುದು ಕಾಲಸಾರೋ । ಗಣಗೆ ಮಿಗೆ ಪಡಿಸಣವ ನೋಡದೆ ಮಾಣನೆಂಬಂತೆ ॥ ಕುಣಿವಕುಂತಾಗ್ರದಲಿ ಜೋಲುವ । ಹಿಣಿಲುಗರುಳೊಪ್ಪಿದವು ಜವನೀ । ರಣಕೆ ಬರೆ ಕಟ್ಟಿದ ಗುಡಿತೋರಣವನೆಂಬಂತೆ ॥೪೬॥ ದೆಸೆದೆಸೆಗೆ ತನಿವಡೆದು ಜೋಡಿಸಿ । ಮಸಗಿ ಬಾಣದಗೊರೆದು ಕೆಡಹುವ । ವಿಷಮವೀರರು ಝಾಡಿಸಿತ್ತು ಡೊಂಕಣಿಯ ತುದಿಗಳಲಿ ॥ ಬಸಿವ ಹೊಸರುಧಿರಕ್ಕೆ ಜೋಲುವ । ಕುಸುರಿಗರುಳಿಂದುದಿರುವಡಗಿನ । ವಸೆಗೆ ಬಂದೆರಗಿದವುಲೂಕಧ್ವಾಂತಸಂದೋಹ ॥ ಧುರದೊಳಗೆ ಬಿಲುಗಾರರೊಗ್ಗಿನ । ಹರಿಗೆಕಾರರು ಹಲಗೆಯವರು ಬ್ಬಗದಡೊಂಕಣಿಕಾರರಾಂತು ಕೃತಾಂತಮಂದಿರವ॥ ತರತರದಿ ತೀವಿದರು ರುಧಿರದ । ಹರಹು ಹೇರಾಳಿಸಿತು ಚೂಣಿಯ । ಲೆರಡು ಬಲದ ಪದಾತಿಸವೆದುದು ಹೇಳಲೇನೆಂದ ॥೪೮॥ ಧುರವನವಸಾಧಿಸಿದರೇರಲಿ । ತುರಗವಾವೆಡೆ ಪಟ್ಟಸಹಣದ । ಹಿರಿಯಸಹಣದ ವಿಮಲಸಹಣಿಗಳವರ ಕರೆಯೆನುತ ॥ ಧುರಧುರಂಧರರೊರಲಿದರು ಮೋ। ಹರಮಹಾಂಬೋನಿಧಿಯ ತೆರೆಯವೊ। ಲುರುವಣಿಸಿದವು ಕುದುರೆತಾರಕಿಯುದಿರೆ ನಲನದಿರೆ॥೪೯॥ ಬರಿಗಡಗತೆಳುಗಬ್ಬಿದುಕ್ಕಡಿ।ಯುರಗಕಡಿಯಣ ಮೊಗವಡಂಗಳ ।ತುರುಗ ವದನದಲೊಪ್ಪಿ ಬಿಗಿದಾವಣಿಯನಳವಡಿಸಿ॥ ಕೊರಳದಂಡೆಯಪಾರ್ಶ್ವಗಳಿಂಚೆಯ।ವೆರಡುಕಡೆಯಲಿ ಸುತ್ತುಝಲ್ಲರಿ । ಪರಿಪರಿಯಹಕ್ಕರಿಕೆಯಲಿ ಬೀಸಿದರು ಚೌರಿಗಳ ॥೫೦॥ ಹಳದಿಪಾರಿಯಪಚ್ಚೆಜೋನೆಗ । ಪಳಿಸುವರ್ಣಾವಳಿಯ ಸಂಧ್ಯಾ । ವಳಿಯುದಯರಾಗದಲಿ ರಚಿಸಿದಹಕ್ಕರಿಕ್ಕೆಗಳ ॥ ಕೆಲಬಲದ ಕುಣಿಕೆಗಳ ಕಳಚಿದೊ । ಡುಲಿವಘಂಟೆಯ ಮೊಗದಕನ್ನಡಿ । ಗಳ ವಿಲಾಸದಲಂದಲಂಕರಿಸಿದರು ಥಟ್ಟುಗಳ ॥೫೧॥ ಸವಗವೊಚ್ಚೆಯ ಬಾಹುರೆಕ್ಕೆಯ । ವಿವಿಧವಜ್ರಾಂಗಿಗಳ ಸೀಸಕ । ಕವಚವನು ತೊಟ್ಟುತುಳಬಲರೇರಿದರು ವಾಜಿಗಳ ॥ ಹವಣಿಸಿದವಾಘೆಗಳ ವಾಘೆಯ । ಸವೆಯಸರಿಸದಭಾರದಾಡೆಯ ! ಗವಿಯುಗರುವರು ನೂಕಿದರು ಸಂಗರಕೆ ತೇಜಿಗಳ ॥೫೨॥ ತರುಣಿಯರನೊಸಲಂತೆ ತಿಲಕದ । ಸರಿಸವದು ವೈವಾಹಗೇಹದ । ಸಿರಿಯವೊಲ್ ಮಂಗಳಮಯುವು ಮಲಯಾಚಲದ ಜನಪದದ ॥ ಅರಸಿನಂತಿರೆ ತಾರಮಯವೆನ । ಲುರವಣಿಸಿ ಮಾಡಿದೊಡೆ ನಿಡುವ । ಕ್ಕರಿಕೆಗಳ ಪರಿಪರಿಯೊಳಾಂತುದು ಜವಗವಾಜಿಗಳು ॥೫೩॥ ನಿಲುಕಿ ಹೊತೆದವು ಕೀಲಸಡಲಿಸಿ । ಕುಲಗಿರಿಯ ಹೆಡತಲೆಯ ಮುಡಿದಾ । ವಳಿಕ ಸನ್ನೆಗೆಸನ್ನೆಗಭ್ರವ ತುಡುಕಲೊಡರಿಚುವ ॥ ದಳವುಳಿಸಿದವು ತಾಟಿಸಿದತೊಡೆ । ದುಳಿದವಖಿಳಾವನಿಯನೆನೆ ಮನ । ಲುಳಿಯ ಮನವೇಗಾಯ್ಲುವಾಜಿಯ ಥಟ್ಟ ನೂಕಿದರು ॥೫೪॥ ಖುರಪುಟದ ಕೆಂಧೂಳಿ

ಬಂಧಿಸೆ । ತರಣಿಯನು ಪವಮಾನಮಾರ್ಗವ । ನರರೆ ಕಟ್ಟಿತು ತೂಳಿತಿಂದ್ರನ ಸಾವಿರಾಲಿದಳ ॥ ಹ ರಿಸಬಾಧ ತಮಗಲ್ಲದಿಂತೀ । ತರಣಿವಾಯುಸುರೇಂದ್ರರಿಗೆ ಸಂ । ಚರಿಸಬೇಡೆಂಬಂತೆ ನಡೆದುದು ಘೋಟಕವ್ರಾತ ॥೫೫॥ ಖುರದಹೊಯ್ಲಲಿ ನಡುಗಿತಿಳೆ ಫಣಿ । ವರನ ಹೆಡೆಗಳು ನೊಂದವಂಬುಧಿ । ಹೊರಳಿದುವು ಹೋಗಾಡಿದುವು ಕುಲಗಿರಿಗಳಚಲತೆಯ ॥ ಅರರೆ ಸೂಠಿಯೊಳಟ್ಟಿದೊಡೆ ದಿ । ಕ್ಕರಿಯ ಸೊಕ್ಕಡಗಿದವು ನಿಗುರುವ । ತುರಗದಳ ವೊಡವೆರಸಿದವು ಕುರುಪಾಂಡು ಸೇನೆಯಲಿ ॥೫೬॥ ಹಿಡಿಯೆ ಜವನಿಕೆ ಸಮರವಾನದ । ಬಿಡುವಲೆಯ ಬಿರುದಾವಳಿಗಳು । ಗ್ಗಡಣೆಗಳನಾಲಿಸುತ ಸಮ್ಮನ್ವಯವ ಪಾಲಿಸುತ ॥ ಜಡಿದುದೂಹತ್ತಿಗಳ ಹಾಯಿಕಿ । ಹಿಡಿವಲೌಡಿಯ ಹತ್ತಳದತನಿ । ಗಡಣಿಗರು ಮೂದಲಿಸಿ ಕವಿದರು ರಾಯರಾವುತರು ॥೫೭॥ ನೂಲಹರಿಗೆಯ ಹೆಗಲಭಾರಿಯ । ತೋಳತೋಮರಲೌಡಿಗಳ ಕರ । ವಾಳತಳಪದ ವಿಂಚುಗಳ ತನುಮನದಕೆಚ್ಚುಗಳ ॥ ಸಾಲುಪಾವಣಿವಲೆಯ ಗಂಡರ। ಬಾಲಕತ್ತರಿಗರಗಸದ ಬಿರು। ದಾಳಿಗಳ ಛಲದಂಕರಾವುತರೊಗ್ಗಿ ನೂಕಿದರು ॥೫೮॥ ಹೊಡೆದು ಚಂಮಟಿಕೆಯಲಿ ದೊರೆಗಳ । ಹಿಡಿವಸಮ್ಮುಖದಲಿ ಕಠಾರಿಯ । ಲಡಸಿ ತಿವಿವಕೃಪಾಣದಲಿ ಕಡಿಸಾಲ್ಕತೋರಿಸುವ ॥ ಅಡವರದೊಳವನಿಪರ ತಹಮುಂ। ಗುಡಿಯಮುರಿವ ವಿಘಾತಿಯಲಿ ಥ । ಟ್ಟೊಡೆದುಹೊಯ್ವತಿಭಾಷೆಗಳ ಬಿರುಪಾಂಕಸ್ತೈದಿದರು ॥೫೯॥ ಉಲಿವಕೈವಾರಿಗಳ ಲಗ್ಗೆಯ । ಬಲಿವತಂಬಟಕೋಟಿಗಳ ಭುಜ । ಬಲದಬಿರುದಿನ ಹೊಯ್ಲುಗಳ ನಿಸ್ಸಾಳನಿಸ್ವನದ ॥ ಘುಳಿಘುಳಿಪ ಬೊಗ್ಗುಗಳ ರಿಪುಗಳ । ಹಳಚಿಸುವಕಹಳೆಗಳ ತುರಗಾ । ವಳಿ ಗಜರುವಬ್ಬರಣೆ ಮಿಗೆಕೈಕೊಂಡರತಿಬಳರು ॥೬೦॥ ಹೊಡೆದು ದೂಹತ್ತಿಗಳ ಗಾಯದ । ಲೊಡೆದುಸಿಡಿದವು ಲೋಹಸೀಸಕ । ವಡಸಿ ಬಲ್ಲೆಹ ಬಗಿದು ನಟ್ಟವು ಸರವಳಿಯನುಗಿದು ॥ ಹೊಡೆದಲೌಡಿಗಳೊತ್ತಿ ನೆತ್ತಿಯ । ಬಿಡುಮಿದಳ ಕೆದರಿದವು ರಕುತದ । ಕಡಲು ಕಡಲನುತೀವೆ ತಿವಿದಾಡಿದರು ರಾವುತರು ॥೬೧॥ ಜರೆದು ಸರಿಸದಲೇರಿದೊಡೆ ಸಿಡಿ । ಲುರವಣಿಸಿದಂತಾಯ್ತುಗಾಯವ। ನರುಹಿದೊಡೆ ದೂಹತ್ತಿರಾವುತಮಸ್ತಕಕ್ಕಳಿದು ॥ಕೊರೆದುದಿಳೆಯನು ಹೊಳೆದು ನೂಕಿದೊ। ಡೊರಲಿದರು ತಳಕಮುಠಕತ್ತರಿ। ದರಿದು ಹೊಯ್ದಾಡಿದರು ಗುಜ್ಜರರಾಯರಾವುತರು ॥೬೨॥ ಎಡನ ಹೊಯ್ದರು ಬಲದವರನಡ । ಗೆಡಹಿದರು ಮುಂಮೊಕದನೃಪರನು । ಸಿಡಿಲಪಡಿಯೆನಲೆರಗಿದರು ಸೂರಿಯಲಿ ಸೈವರಿದು ॥ ಅಡಗುದರಿದರು ಮೋಹರವನೊ । ಗ್ಗೊಡೆದು ಚೂಣಿಯಬಲದಗೋಣಲಿ। ಖಡುಗ ವರ್ತಿಸಲೊದಗಿದರು ಮಾಳವದರಾವುತರು ॥೬೩॥ ಬೀಸುನೇಣಿನ ಸೆಳೆವನೆಗ್ಗುವ । ಸೂಸುಗಣೆಗಳ ಕಡಿವ ಕೊಡಲಿಯ । ಕೈಸುರಗಿ ಸೂನಿಗೆಯ ನಾನಾಯುಧದ ಗಡಣೆಗಳ ॥ ಓಸರಣೆಗೆಡದತಿಬಳರು ದಿನ । ವಾಸಿಕಾರರು ವೈರಿಬಲವನು । ಗಾಸಿಮಾಡಿದರೊಗ್ಗಿನಲಿ ಹಂಮಿರರಾವುತರು ॥೬೪॥ ಅರರೆ ಕವಿಕವಿ ಕದಳಿಯೊಳು ಮದ । ಕರಿಯು ತೊತ್ತಳದುಳಿದವೊಲು ದಿಂ । ಡುರುಳಿದವು ಹಯಕೋಟಿಯನು ಶತಕೋಟಿಯಂದದಲಿ ॥ ಸಿರವೊಡೆಯೆ ನಡು ಕಡಿಯೆ ಕೈಕ। ತ್ತರಿಸೆ ಕೋಳಾಹಳಮಹಾಸಂ । ಗರದೊಳಗೆ ಹೊಯ್ದಾಡಿದರು ಕಾಶ್ಮೀರರಾವುತರು ॥೬೫॥ ಕವಿದು ಮುಂದಲೆವಿಡಿದು ರಾವ್ತರ ॥ ತಿವಿದು ಜೀವವ ಕಳಚಿ ಕೆಲಬಲ । ದವರ ಹೊಯ್ದುವರವರ ಗಾಯವನೋಡದೊಳಹೊಯ್ದು । ಸವಗಖಂಡಿಸೆ ಜೋಡು ತುಂಡಿಸೆ ॥ ನವರುಧಿರದೊರೆಯೊಳಗೆಮುಹದಾ । ಹವದಲಂದೊದಗಿದರು ಗೌಳ

ನೃಪಾಲರಾವುತರು ॥೬೬॥ ಅಳವನರಿಯದೆ ಕೆಣಕಿ ತಹವಮ್ಮಂ । ಕೊಳಿಸಿ ಕವಿದರ ಕೋಡಕೈಯಲಿ । ಯೊಳದೆಗೆದು ಮೋಹಿದೊ ಸಿಡಿಮಿಡಿಗೊಂಡು ಕೆಲಸಿಡಿವಡೆ ಗೆಲಿದೊಡುತ್ಸಾಹಿಸುವ ಸಿಲುಕಿದೊ ಡಳುವ ಕಟಿಟ್ಟೋಡಿದೊಡೆರದಲಿ । ನಿಲುವನಿರುಪಮವೀರರೊದಗಿತುತಿಗುಳರಾವುತರು ॥೬೭॥ಬವರಸವೆಯದೆ ತೇಜಿಗಳ ಬಲು । ಜವವು ಜಾರದೆ ಬಿಡುವತಿವಿದೊಡೆ । ಸವಗವನು ಸರಳಿಸುವಕವಿಡೆಡೆ ಕಾಲಯಮನಂತೆ ॥ ಕವಿವರವ ಗೆಡಿಸಿದೊಡೆ ಹಿಮ್ಮೆ । ಟ್ಟುವರು ಭೂಮಾನದೊಳುಪಾಯದ । ವಿವರದೋಜೆಯ ಲೊದಗಿದರು ಕರ್ಣಾಟನಾಯಕರು ॥೬೮॥ ಉರುಬಿ ಹೊಯ್ದರು ಕೈದಣಿಯೆ ಹೊ । ಕ್ಕರಗದರು ನಿಪ್ಪಸರದಲಿ ಹೊ । ಕ್ಕುರುಬಿದರು ತಲೆಮಿದುಳ ಜೋರಿನಲೊರೆವರೆಕುತದಲಿ ॥ ಸೆರೆಯಬಿಟ್ಟರು ಖಗನಿಕರಕಾ । ಬಿರಿದು ಕಾಲನ ಬಲಕೆ ರುಧಿರದಕೆರೆಯ ತೊಬೆತ್ತಿದರು ಸಿಹ್ಮಳರಾಯರಾವುತರು ॥೬೯॥ ರಾವುತೋಮುಝುಪೂತು ರಾವುತು । ದೇವುರಾವುತು ಭಲರೆಭಲರೇ । ರಾವುತೋ ನಿಶ್ಶಂಕರಾವುತುಮಲ್ಲರೇಯೆನುತ ॥ ರಾವುರಾವುತು ಭಾಪುರಾವುತು । ಭಾವುರಾವುತು ರಾವುತೋಯೆನು । ತೋಪಿ ಹೊಯ್ದಾಡಿದರು ರಣದಲಿ ಲಾಳರಾವುತರು ॥೭೦॥ ಗೌಳವಂಗಕಳಿಂಗವರನೇ । ಪಾಳಕದರಾವುತರು ವರಭೋ । ತಾಳಗಣದೊಳಗಡಿಸಿದರು ಕುರುಪಾಂಡವರ ದಳದ ॥ ಹೇಳಲಳವಲ್ಲುಭಯದಲಿ ಹೇ । ರಾಳಕಾಳಗ ಕಿರಿದು ಕೆಡೆದುದು । ಕೇಳುವುದು ಬವರಕ್ಕೆ ಬಂದುದು ಮತ್ತಗಜಸೇನೆ ॥೭೧॥ ನೇಪಥ್ಯದು ವಿಂಧ್ಯಗಿರಿಯಂ । ಜನಗಿರಿಯ ಮಲಯಾದ್ರಿಯಲಿ ಸಂ । ಜನಿಸಿದಾನೆಯ ಸೇನೆಯಲಿ ಬೀಸಿದರು ಚೌಂಗಳ ॥ ಕನಕಘಂಟೆಗಳುಲಿಯೆ ಹೊರಜೆಯ । ತನತನಗೆ ಹಿಡಿದಡರಿ ಪೊರ್ವಾ । ಸನವ ವಂತಣಿಸಿದುದು ಗಜವಾರೋಹಕವ್ರಾತ ॥೭೨॥ ಭಾದಿಸಂಕಲೆ ಪಕ್ಕಘಂಟೆಯು । ಚಾರುಚಮರಿಯ ಕೊಡತಿಗಳ ಕೈ । ಯಾರ ಕೊರಂಕುಶದ ಬಿರುದರು ಹೊದ್ದಿದರು ಗಜವ ॥ ಬಾರದೂಹತ್ತಿಗಳ ಗುಂಡಿನ । ತೋರಲೌಡಿಯ ತೊಟ್ಟ ಬಲುಮದ ।ವಾರಣದ ಮೋಹರವ ನೂಕಿದರುಭಯಸೇನೆಯಲಿ ॥೭೩॥ ಕಾಲನುಬ್ಬೆಗೆ ಕೊಡುವಸೀತಳ । ದಾಲವಟ್ಟವೊ ಮೇಣುವಿಲಯದ । ಗಾಳಿಯೋ ಮೇಣ್ಕನಕತಾಳವೊ ಕಿವಿಯ ಕೌತುಕವೋ ॥ ಕಾಲುವೆರಸಿದನೀಲಗಿರಿಗಳ । ಧಾಳಿಯೋ ಮೇಣಂಜನಾದ್ರಿಯ । ಬಾಳಗವೊ ಬಂಕೈಗಳೋ ನೂಕಿದರು ದಂತಿಗಳ ॥೭೪॥ ಕಡೆಯಣಿಂದುವಿನಿರುಳುಗಳ ಮಂ । ಗುಡಿಯೊ ಮುಸುಕಿದಕಟಕದುಂಬಿಯೊ । ಬಿಡುಮದದವಾರಿಗಳೊ ಹೊಸನಾರಾಸಿಗಳೊ ಮೇಣು ॥ ಅಡಸಿ ಪದಹತಧೂಳಿ ಧುರವನು। ಕುಡಿಮುದಾಮದವಾರಿ ರೇಣುವ । ನಡಗಿಸಲು ಮದದಂತಿಗಳು ಹೆಣಗಿದವು ತಮ್ಮೊಳಗೆ ॥೭೫॥ ಪಡೆಯೋಹೀನೇಂದುವಿನಿರುಳೊ ಮಂ । ಗುಡಿಯುಮುಗಿಲೋ ಕವಿವತುಂಬಿಯೊ। ಬಿಡುಮದದಧಾರೆಗಳೊ ಹೊಸವಾರಾಸಿಯೋ ಮೇಣು ॥ ಅಡಸಿ ಪದಹತಧೂಳಿ ಮದವನು । ಕುಡಿದುದಾಮದಧಾರೆ ರೇಣುವ। ನುಡುಗಿಸಲು ಪದಧೂಳಿಗಳು ಹೆಣಗಿದವು ತಮ್ಮೊಳಗೆ ॥೭೬॥ ಕುಲಗಿರಿಗಳಗ್ರದಲಿಕೈಗಳ । ನಿಳುಹಿದನೊರವಿಯೆನಲು ಹೊಳೆಹೊಳೆ । ಹೊಳೆವಕೊರಂಕುಸದಬಿರುದರು ಹೊದ್ದಿದರು ಗಜವ ॥ ಉಲಿವವಿದಿರಲಿ ಲೌಡೆಬಿರುದಾ । ವಳಿಯ ಕಹಳೆಗಳೊದದುವುನೆಲ । ಮೊಳಗಿದಂತಿರಲೊದರುದವುನಿಸ್ಸಾಳಕೋಟಿಗಳು ॥೭೭॥ ಹೊಕ್ಕರಾನೆಯಲೆರಡುಸೇನೆಯೊ । ಳೊಕ್ಕಲಿಕ್ಕಿದರೆಸೆವ ಜೋದರ । ತೆಕ್ಕೆಗೋಲಿನಮೇಲೆ ಮುಕ್ಕುಳಿಸಿದವು ದಿಗುತಟವ ॥ ಉಕ್ಕಿನುರುಳ್ಗಳನಿಡುವಖಂಡೆಯ । ದಿಕ್ಕಡಿಯಲುಳಿಗಾರಪಟ್ಟೆಯ ।

ದಕ್ಕಜದಹೊಯ್ಲಿ ಸೆಯೆ ಹೆಣಗಿದವಾನೆಗಾನೆಗಳು ॥೭೮॥ ತಿವಿವಕಳಚಾವಕಳಚಲೊತ್ತುವ । ಕವಿದೊ ಡಾನುವನಿಂದೊಡೆಯೊತ್ತುವ । ಸವೆಯೆ ತುಡುಕುವವಿಡುಕು ಮಿಗೆ ಕೈಕ್ರಿಯಾಜೋಡಿಸುವ ॥ ಭುವನಭ ಯವೊಳಗೊದರಿವುರವಣಿ । ಸುವವಿಘಾತಿಸಿತೂಳ್ದು ಸೀಳುವ । ನವವುದೇಭದ ಸಮರ ಸೋಲಿಸಿತಮ ರರಾಲಿಗಳ ॥೭೯॥ ತಿರುಗಿಬಿಸುಟವು ಕಾಲುಗಾಹಿನ । ತುರಗಗಳ ಮುಂದಾರೋಹರ ಶಿರವನ್ಶೈದಾರೆಗ ಳನಡಸಿವವಣಲುಹೊಳಲಿನಲಿ । ಅರರೆ ಪಟ್ಟೆಯಲೌಡೆಖಂಡೆಯ । ಮಾಗವಸೆಯ ಹೊಯ್ಲಿನಲಿ ಛಿದ್ರ ಗಿ । ಪುರುಳಿದವು ತೆರಳಿದವು ಜೋದರಜೀವವಂಬರಕೆ ॥೮೦॥ ಮುಟ್ಟೆ ಸೀಳಿದುಹಾಯ್ಕಿ ದಾಡೆಯೊ । ಳೊಟ್ಟೆ ಮೋರೆಯೊಳೊಲೆವ ಹರಿದರೆ । ಯಟ್ಟೆಹಿರಿದಪ್ಪಳಿಸಿ ಜೋದವನಂಘ್ರಿಯೊಳು ಮೆಟ್ಟಿ ॥ ಇ ಟ್ಟುಕೆಡಹುವ ಹೆಣನನೊಟ್ಟಿಲೊ । ಳೊಟ್ಟೆವುಸಗಿತು ತುರಗನರರಥ । ಡಿಟ್ಟೆತೆಯ ಸಲಿಸಿವವು ದಂತಿ ವ್ರಾತವುಭಯದಲಿ ॥೮೧॥ ಕುತ್ತಿ ಹಿಂಗುವಭಟರದಾಡೆಯೊ । ಳೊತ್ತಿ ನೆಗೆಹಿದನರರ ರಕುತಕೆ । ಮುತ್ತಿಬಾಯ್ಗಳನೊಡ್ಡಿ ಕುಡಿದವು ಶಾಕಿನೀನಿಹವ ॥ ನೃತ್ಯವಿನ ಗಣವಿಭವವಾಡೆಯ । ಸುತ್ತಿ ಪೋಲುವಹಿಣಲುಗರುಳನು । ತುತ್ತಿಡಲು ತವ್ಮೊಳಗೆ ವುಸಗಿದರಸಮಸಮರದಲಿ ॥೮೨॥ ಆದರೆ ವೃತ್ಯವಿನೆರವಿಗೌಷಧ । ವರೆದವೆನೆಗಜಗಜವನಸಿಯ । ಟ್ಟರದವ್ರೋ ಬಸ್ತಿಯ ಬಾಯಲಾಳನಿಂ ದಿಗೆವು ॥ ಸಂಸಗುಂಡಿನಲೊಂದನೊಂದಿ । ಟ್ಟೊರಸಿದವು ಕೊಡಹಿದವು ಸೀಳಿದುಹೊರಳಿಸಿವವೆರಗಿವ ವು ನಾನಾವಿಧದ ಕೊಲೆಗಳಲಿ ॥೮೩॥ ವ್ರಣದಬಂಧದ ಬಿಗಿಯುಪಾಡಿಗೆ । ಕುಣಿದು ಕವಿವವಿಹಂಗತ ತಿಗಳ । ನಣಲೊಳಾಡುವತಲೆಗೆ ಕೈಗುತ್ತುವನಿಶಾಚರರ ॥ ಹೆಣನ ಬಿಸುಡುವಕ್ಕೆಗಳಲಿ ಸಂ । ದಣಿಸಿ ದಂಕುಶದಿಂ ಕಪೋಲಕೆ । ಕೆಣಕುವವರಿಂ ಚಂಡಿಯಾದವು ಸೊಕ್ಕಿದಾನೆಗಳು ॥೮೪॥ ಅಡಸಿ ಸೇನೆ ಯುಮೇಲೆ ತಲೆಗಳ । ನಿಡುವಬಸುರನು ಬಗಿದು ಕರುಳ್ಗಳ । ತೊಡಹಿ ಸೂಸುವವಿದುಳಸೊಗದೆ ಣ್ಡಸೆಗೆಸಾಲಿಡುವ ॥ ಅಡಗನಾಯಿದು ಕೆದರಿ ರಕುತವ । ತುಡುಕಿ ಚೆಲ್ಲುವಕರಿಯ ಬರಿಕ್ಕೆ । ಬಡಿಸಿದ ವುಹುಟ್ಟಾಗಿ ಯುವುರಾಜನ ಪರಿಗ್ರಹಕೆ ॥೮೫॥ ಕಾಲುಗಳಲೊಡೆದುಳಿದು ಮೋರೆಯ । ತೋಳಿನಲಿಬೀ ಸಿಡುವರಥದಲಿ । ಹೋಳಿಸುವಕಾಲಡಿಯಲಿರುಕುವಹಲವುಕೊಲೆಗಳಲಿ ॥ ಕಾಲನೊಗಡಿಸಿ ಕೊಲುವ ಮಡಿವಗಜಾಳಿಗಳಲಾರೋಹಕರು ಕೆಂ । ಗೋಲ ಮಳೆಗರೆದಾಲಿದರು ನೃಪಸೈನ್ಯವೆರಡರಲಿ ॥೮೬॥ ನೀಲಗಿರಿಗಳ ನೆಮ್ಮಿ ಕರೆದವೊ । ಕಾಲಮೇಘಾವಳಿಗಳನೆ ಬಿರು । ಗೋಲಮಳೆಗಳ ಕರೆದರುಭಯದ ಜೋದದರವಗಡಿಸಿ ॥ ಮೇಲೆತೊಳಲುವಖಚರನಿ ಚಯದ । ಮಾಲೆಗೊಂಡವು ಧರೆಗೆ ಹಬ್ಬುಗೆ । ನಾಲಗೆಯ ಪಸರಿಸಿತು ಜೋದರ ರೋಷಶರಜಾಲ ॥೮೭॥ ಎಲೆಲೆ ವಿಂಧ್ಯಾಚಲದ ಹರಿಬಕೆ । ಕಳನ ಹೊಕ್ಕವೊ ಕಣೆಗಳೆನುತಾ । ನಳಿನಸಖನಂಜಿದನು ಕೋಪಾಟೋಪಕಭ್ರದಲಿ ॥ ಅಲಗುಗಣೆಗಳೊ ಮೋ ಘತರುವಿಲಿ । ತಳಿತಹೊಂಗೊಂಬುಗಳೊ ಬೀಳುವ। ತಲೆಗಳೋ ತತ್ಫಲಸಮೂಹವೊ ಚಿತ್ರವಾಯ್ತೆಂದ ॥೮೮॥ ಸರಳಸರಳಲಿಕಡಿವಕರಿಗಳ । ಕೊರಳವುುರಿಯೆಸುವೋರಣದವೊಗ । ವರಿಗೆಗಳ ಖಂಡಿಸು ವವೋರೆಯ ಕರವ ತುಂಡಿಸುವ ॥ ಸರಳುವದನವತಾಗಿಪೇಚಕ । ಕುರವಣಿಸಿ ತೆಗೆದೆಸುವಜೋದರ । ಧುರಚಮತ್ಕೃತಿ ಬೆರಗ ಸಲಿಸಿತು ದಿವಿಜಸಂತತಿಗೆ ॥೮೯॥ ವೀರಜೋದರು ಮೇಲುವಾಯಲು । ವೀ ರಸಿರಿಬಿಗಿಯುಪ್ಪಿ ಮುತ್ತಿನ । ಹಾರ ಹರಿಯಲು ಕೆದರಿದವುದೆಸೆದೆಸೆಯುಮುತ್ತುಗಳು । ವಾರಣದ

ಕುಂಭಸ್ಥಳಂಗಳ । ತಾರುಮುಕ್ತಿಕನಿಕರವೋ ಮೇಣ್ । ಭಾರತಾಹವಕೌತುಕೋದಯುರಸಕೆನೆಲೆಯಾಯು್ತ ॥೯೦॥ ಘುರಿದ ಬಯಿಸಿರಿ ವೀರಭಟರಿಗೆ । ಸುರಿವಲಾಜಾಕ್ಷತೆಯ ಧಾರಾ । ವರುಷದಂತಿರಲೆ ಸಮುದಭ್ರವಿಮಾನಭಾಗದಲಿ ॥ ಸರಿಸದಲಿ ಮುಕ್ತಾಳಿಯೊಪ್ಪಿದ । ವರವಿಜಯರೊಡಗೂಡಿ ಜಯುವಧು । ವಿರದೆ ಪುಳಕಿತೆಯಾದಳೆನೆ ಚಲುವಾದುದಾಕ್ಷಣಕೆ ॥೯೧॥ ವಿಗ್ರಹದೊಳಿದಿರಾದಕರಿಗಳ । ವಿಗ್ರಹಂಗಳು ಕೆಡೆದವಿಳೆಗ । ವ್ಯಗ್ರವೀರರು ಕಾದಿಕೊಂಡರು ಸುರರಕೋಟಿಗಳ ॥ ಉಗ್ರದಾಹವಭೂತಬಲಕೆಸ । ಮಗ್ರವಾಯಾ್ತಹಾರಸಂಗಡ । ದಗ್ರಿಮರು ಕೈವೀಸಿದರು ತೇರುಗಳತಿಂತಿಣಿಯ ॥೯೨॥ ನೊಗನ ಬಿಗುಹಿನ ಕಂಧರದವಾ । ಜಿಗಳು ಕುಣಿದವುಪಲ್ಲವದಸೆರ । ಗಗಿಯೆ ಠೆಕ್ಕೆಯವೆತ್ತಿದವುವುಂಮೊನೆಯುಸೂನಗೆಯ ॥ ಹೊಗರುಗಳ ತೀಡಿದರು ಕೀಲ । ಚ್ಚುಗಳ ಮೇಳೈಸಿದರು ಬಲುಗಂ । ಬುಗೆಯ ಬದ್ಧರದೊಳಗೆ ತುಂಬಿದರಸ್ತ್ರಸಂತತಿಯ ॥೯೩॥ ಹಯನಿಕರ ಖುರಗಡಿಯವಜ್ರಾಂ । ಗಿಯನು ಹೊತ್ತವು ಜಡಿವಹೊಂಗಂ । ಟೆಯವಿಡಾಯ ವರೂಥವನು ಕವಿಸಿದವುಚೀತ್ಕೃತಿಯ ॥ ಜಯರಭಸವಳ್ಳಿರಿಯೆ ಸೂತ್ರಾ । ಶ್ರಯದಲತಿರಥನಿಕರ ರಥಸಂ । ಚಯವ ವೆಂಠಣಿಸಿದರು ತುಡುಕಿದರಖಿಳಕಾರ್ಮುಕವ ॥೯೪॥ ಪೂತು ಸಾರಥಿ ಭಾಪುಮಝುರೇ । ಸೂತ ಧಿರುಧಿರುಯೆನುತ ರಥಿಕ । ವ್ರಾತಸಲೆ ಬೋಳೈಸಿ ಕೊಂಡರು ಹಯದವಾಘೆಗಳ ॥ ಅತುರಂಗದ ಖುರಪುಟವಸಾ । ಶಾತಕುಂಭದ ಗಾಲಿಯುರುಬೆಯ । ಸಾತತಕ್ಷಣವಾ ರಥಂಗಳು ಕವಿದುದುಭಯದಲಿ ॥೯೫॥ ಹರಿವರಥ ದುರವಣೆಗೆ ನೆರೆಯದು । ಧರಣಿಯುಂದಂಭೋಜಭವನೀ । ಧರೆಯನಿಮ್ಮಡಿಸಿದನೊ ಬಗೆಯನೆ ಬಹಳಸಮರದಲಿ ॥ ಹರಿವರಥಹತಧೂಳಿ ಮುಕರಾ । ಕರವ ಕುಡಿದುದುಚೀತ್ಕೃತಿಯ ಚ ॥ ಪ್ಪರಣೆ ಮಿಗಿಲುರುಬಿದವು ರಥವಾಘೆಯದರಿಸದಲಿ ॥೯೬॥ ಘನರಥದಚೀತ್ಕಾರಗಜರುವ । ಧನುವಿನಬ್ಬರಹಯದಹೇಷಾ । ನಿನದ ರಥಿಕರ ಬೊಬ್ಬೆ ಸೂತರಬಹಳಚಪ್ಪರಣೆ ॥ ಅನುವರದೊಳೊದಗಿತ್ತುವಿಳೆಯೊಳ್ । ಸ್ತನಿತಮೇಘಧ್ವಾಂತದನಿಸಂ । ಜನಿಸಿತೆನೆಹಳಚಿದವು ರಥರಥವೆರಡುಸೇನೆಯಲಿ ॥೯೭॥ ತೆಗೆತೆಗೆದುತಲೆವೆಟ್ಟುಕಾರರು । ಬಿಗಿವಬಿಲಗಳ ನತಿರಥರು ಕಂ । ಬುಗೆಯ ಮುಂದರು ಹಯವ ತರಿದರು ಸಾರಥಿಯ ಕೆಡಹಿ ॥ ಹಗಲ ಹೊಳಿದರಮ ಮಬಾಣಾ । ಬಗಳಲಸಮಮಹಾರಥರು ಕಾ । ಳಗದೊಳಹುದೆನಿಸಿದರು ಕಾಲನ ಪುರಪರಿಗ್ರಹವ ॥೯೮॥ ತಿರುಗೆತಿರಿಗಿದರೆಚೊ್ಚಡಚ್ಚರು । ಮರಳೆ ಮರಳಿದ ತಾಕಲೌಕಿದ । ರುರುವಣಿಸಲುರವಣಿಸಿದರು ಮಾರ್ತಾಗೆತಾಗಿದರು ॥ ಸರಳಿಗಂಬನು ಸೂತವಾಜಿಯ । ಶಿರಕೆ ಶಿರವನುರಥಕೆ ರಥವನು ।ಸರಿಯೆನಿಸಿ ಕಾದಿದರು ಸಮರಥಘನಮಹಾರಥರು ॥೯೯॥ ರಥವದೊಂದೆಸೆ ಹಯವದೊಂದೆಸೆ । ರಥಿಕರೊಂದೆಸೆ ಚಾಪರಣಸಾ । ರಥಿಗಳೊಂದೆಸೆಯಾಗಿ ಕೊಂದರು ಕಳನೊಳರಿಭಟರ ॥ ರಥಿಕರುರುವಣೆಯುಭಯಬಲದಲಿ । ವ್ಯಥಿತವಾಯಾ್ತಹವದೊಳತಿಮಹ । ರಥರು ಹೊಕ್ಕರು ಕೇಳು ಜನಮೇಜಯಮಹೀಪಾಲ ॥೧೦೦॥ ಅಳಿದುದೆರಡರ ಚೂಣಿಮುಂಗುಡಿ । ಯಳುಕೆ ಹೊನಲಾಯು್ತರುಣಜಲ ದೊರೆ । ಗಳಿಗೆ ಹರಿವಿನ್ನಾಗಲೇನಹುದೆಂದು ಸುರರುಲಿಯೆ ॥ ದಳದಹೆಣನೊಟ್ಟಿಲಲಿ ಮೊಗಸುವೊ । ಡಳುಕಿದರು ಮನ್ನೆಯರು ಬಳಿಕತಿ । ನೆಲೆಗಳಲಿ ಸೂಳವಿಸಿದವು ನಿಸ್ಸಾಳಕೋಟಿಗಳು ॥೧೦೧॥ ನರನ ರಥಕುಣಿದುದು ಯುಧಿಷ್ಠಿರ । ವರವರೂಥ ಸಘಾಡದಲಿ ಚೀ । ತ್ಕರಿಸಿತನಿಲಾತ್ಮಜನ ಸಿಂಧವು ಮುಂದುವರಿವುತಿ

ರೆ ॥ ಭರದಿ ಮಾದ್ರೀಸುತರ ತೇರುಗ । ಳುರವಣಿಸಿ ಯಭಿಮನ್ಯುಸಾತ್ಯಕಿ । ಯುರರೆ ಕೈಕೊಳಲಿತ್ತಲಾ ದುದು ಸಮರದುದ್ಯೋಗ ॥೧೦೨॥ ಇನನಮಗ ಗಜಬಜಿಸೆ ದುರಿಯೋ । ಧನನು ಬಿಲುಗೊಳಲಾತ ನನುಜರು । ಧನುವ ತುಡುಕೆ ಸುಶರ್ಮಶಲ್ಯರು ಸರಳಹೊದೆಗೆದರೆ ॥ ಮೊನೆಗಣೆಯನಳವಡಿಸೆ ಗುರು ಗುರು ತನುಜನಸ್ತ್ರವ ತಿರುಹಿಸೇನಾ । ವನಧಿಗರ್ಜಿಸಲಾಯ್ತು ಸಂಕುಳಸಮರವುಭಯದಲಿ ॥೧೦೩॥ ಶಕುನಿ ಸಹದೇವನಲಿ ಶಲ್ಯನು । ನಕುಲನಲಿ ದುಶ್ಶಾಸನನು ಸಾ । ತ್ಯಕಿಯೊಡನೆ ಸೈಂಧವನು ಕುಂತೀಭೋಜಭೂಪನಲಿ ॥ ಸಕಲನಾಯಕರೆಂದು ಯುದ್ಧೋ। ದ್ಯಕುತರಾದರು ಕೇಳುನೃಪಪಾ। ಲಕ ರ ಕೌಂತೇಯರ ಸವಿಗ್ರಹದುಗ್ರಸಮರಂಗ ॥೧೦೪॥ ಕಣೆಗೆದರಿ ದ್ರುಪದಾಂಕ ಗುರುವನು । ಕೆಣಕಿದನು ತತ್ತನುಜ ಭೀಷ್ಮನ । ಸೆಣಸಿದನು ಮೊದಲಿಸಿದನು ಲಕ್ಷಣನನಭಿಮನ್ಯು ॥ ರಣಕೆ ಕರೆದನು ಕೌರವಾ ನುಜ । ಗಣವನನಿಲತನೂಜನಿತ್ತಲು । ಕೆಣಕಿದನು ಭಗದತ್ತಭೀಮಕುಮಾರನುರವಣಿಸಿ ॥೧೦೫॥ ಕ ಲಹದಲಿ ಕರಿಘಟೆಯಹೊಯ್ಯೊಯ್ದು । ಯ್ದಲಸಿ ಕೌರವರನುಜರನು ಮುಂ । ಕೊಳಿಸಿ ಕೊಳ್ಳದೆ ಕಳುಹಿ ಬೇಸರದನಿಲಸುತ ಮಸಗಿ ॥ ನೆಲನಲುಬ್ಧನಬುದ್ಧಿಮರಣಕೆ । ಫಲಿಸಬೇಹುದು ಕರೆ ಸುಯೋ ಧನ ನಿಲಲಿ ಬವರಕ್ಕೆನುತ ಗದೆಯನು ತಿರುಹಿದನು ಭೀಮ ॥೧೦೬॥ ನಡೆದರಾಹವಕನಿಲನಂದನ । ನೊಡನೆ ಸಾತ್ಯಕಿನಕುಲದ್ರುಪದರು । ತುಡುಕಿದರು ಬಿಲುಗೋಲಲೈದಿತು ಪವನಜನ ಚೂಣಿ ॥ ಗಡಣಿ ಸುವಮುಂಮುಖದ ಕೌರವ । ಪಡೆಯಹೇರಡವಿಯನು ಸವರಲು । ಕಡಿತಕಾರರು ಮುಂದೆ ಹೊಕ್ಕ ರು ನಕುಲಪಾರ್ಥಜರು ॥ ಕಡಿದರರಿಭಟಪಾದಪವನೆಡೆ । ಕೆಡಹಿದರು ಗಜಗಿರಿಗಳನು ರಥ । ದೆಡೆಗೆಡೆ ಯ ತೂರಿದರು ತುರಗವ್ರಜದ ಬಲುಮಳೆಯ ॥ ಕಡಿದು ಹರಹಿದರನಿಲಸುತಕಾ । ಲಿಡಲು ತೆರಹಿಲ್ಲ ಹಿತವಿಪಿನದ । ಕಡಿತ ತೀರಿತು ಹೊಕ್ಕನೆರನೆಲೆಗಾಗಿ ಕಲಿಭೀಮ ॥೧೦೭॥ ಎಲೆಲೆಯಿಳೆಯಕೃತಾಂತ ನೋ ನಂ । ಮಳಪಿಕೊಳ್ಳದು ಬೆಂಕೊಳಲಿ ಮುಂ । ಕೊಳಿಸದಿರಿ ಮರುಳಾಗದಿರಿ ಹುರುಳಾಗಿ ಹೆಂಡ ರಿಗೆ ॥ ಕೊಲೆಗಡಿಗನೋ ಭೀಮನೋ ರಿಪು । ಜಲಧಿಬಡಬಾನಳನೊ ತೊಲತೊಲ । ತೊಲಗಿಯೆಂ ದೋಡಿದುದು ಅರನೆಲೆಕೌರವನಮರೆಗೆ ॥೧೦೮॥ ಅದಟನಡ್ಡೈಸಿದೊಡೆ ಹೊದ್ದಿಹ । ಮದವ ತೊಡೆವೆ ನುಬಾಯಹೊಯ್ಯೊಯ್ದು। ಕದನದಲಿ ನಡುಗಿಸುವನಾಯಕವಾಡಿಗಳನೆನುತ ॥ ಬೆದರದಿದಿರಾದನು ಜಯ ಸ್ತ್ರೀ । ಮದನಕಾಮನು ಕಪಟದಾಯನು।ವಿದಿತಮಾಯನು ರಣವಿಜೇಯನು ಕೌರವರರಾಯ॥೧೧೦॥ ನಶೆವಸೇತಬಲಪಂಕವಲಿ ಮುಂ । ಗುಡಿಯವರು ಮೊದಲಿಸಿ ಕರದರು । ಬಿಡದೆ ಹಳಚಿತು ಕೋಡ ಕೈಯಡಬಲಜರಾವುತರು ॥ ಒಡೆಯನಿದಿರಲಿ ಕಾದಿ ಸುಭಟರು । ಮಡಿವುತಿರ್ದುದು ಕೌರವನು ಬಿಲು ದುಡುಕಿ ಕೈಕೊಂಡನಿಲಸುತಯಂದಸುತ ಮಾರಾಂತ ॥೧೧೧॥ ಭುಜವನೊದರಿಸಿ ಸಿಹ್ಮರವದಲಿ । ಗಜ ರಿ ಗದೆಯನು ತಿರುಹಿ ಕುರುಭೂ । ಭುಜನನಟ್ಟಿದನಳವಿಗೊಂಡರೆ ಕೊಂದನತಿಬಳರ ॥ ತ್ರಿಜಗ ಮೆಚ ಭಾಪೆನಲು ಪವಮಾ । ನಜನು ರಿಪುಸೇನಾಂಬುಧಿಗೆ ಕುಂ । ಭಜನ ಕೈಪಲ್ಲಟವೊ ಕೇಳ್ ಜನಮೇಜ ಯಕ್ಷಿತಿಪ ॥೧೧೨॥ ಎಲವೊಮಾರುತಿ ನಿಮ್ಮಾಳಗೆ-ಕೋ । ಮಳೆಯ ಹುದುವನು ಮೆಚ್ಚಿ ನಮ್ಮಲಿ । ನೆಲನ ಹುದುವನು ಬಯಸಿದಾಛಲದಂಕನೆಂದರಿಯ ॥ ನೆಲನ ಬೇಟವ ಬಿಸುಟು ಜೀವದಿ । ನುಳಿದು ತೊಲಗೆನೆ ಪವನಸುತ ಕಳೆ । ಕಳಿಸಿದನು ಕೌರವಮಹೀಪತಿಗೆಂದನುತ್ತರವ ॥೧೧೩॥ ಕೆಡಹಿ ದುಶ್ಶಾಸ

ನನ ರಕುತವ । ಕುಡಿದು ನಿನ್ನಯ ತೋರತೊಡೆಗಳ । ನುಡಿದುಕೊಂಬೆನು ಧರೆಯನಲ್ಲದೆಹುದುವ ಬ
ಯಸುವೆನೆ॥ ಪೊಡವಿದ್ರುಪದನತನುಜೆ ನಮ್ಮಯ।ಮಡದಿಯಲ್ಲವೆ ಲೋಗರಳುಪಿದೊ। ಡಡಗತರಿವೆನುತ್ತ
ಹೊಕ್ಕನು ಭೀಮನುರವಣಿಸಿ ॥೧೧೪॥ ಗಾಳಿಯುರುಬೆಗೆ ಮಲೆತ ಮೇಘದ । ತೋಳುವನಲನಗಡಯ
ಲಾಕುರು। ಪಾಲನೆತ್ತಲು ಭೀಮನತ್ತಲುತಿವತಿವಾಯೆನುತ॥ ಮೆಲಣಮರರ ಮಂದಿ ನಗನೃಪ। ಜಾಲ
ಜವಗೆ ಖಾತಿಯಲಿ ಕಾಟ್ಟಾಳು ಹೊಕ್ಕನು ಭೀಮಸೇನನುರಥವ ಮುರಿಯಸುತ ॥೧೧೫॥ ಎಲೆಲೆ ಫಡ
ಫಡ ದೊರೆಗೆವಹಿಲದ । ಕೆಲಸವಾದುದು ಭೀಮಕೌರವ । ರೊಳಗೆ ರಣವೆಂಬಳಲಿಗರುಹಿಂಟಕ್ಕ ಭೂಪ
ತಿಯ ॥ ಕಲಿವಿವಿಂಶತಿಚಿತ್ರಸೇನರು । ಬಿಲುದುಡಿಕ ನಡೆತಂದುದನಿಬರ । ದಳವೃಕೋದರನಂದ ಕಂ
ಡುದು ಕಾಲನರಮನೆಯ ॥೧೧೬॥ ಕೋಲುಗರೆದರು ತೆಕ್ಕೆಯಲಿ ಬಿ । ಲ್ಲಾಳುಖಂಡೆಯದವರು ಹೂ
ಣಿಸಿ । ಹೋಳುಗರೆದರು ಭೀಮಸೇನನ ಬಳಿಯಪಟುಭಟರ ॥ ಮೇಲುಗಳಿದುದು ತುರಗಗಜದನು ।
ಜಾಳಿ ಹೋದುದುವಾಗಲತಿರಥ । ಜಾಳಜೀಮೂತದಲಿ ಕಾಣಿಸಲಾಯ್ತು ಶರವರುಷ ॥೧೧೭॥ ಅಳ
ಲು ಮೀರಲು ಬಪುಚತುರ್ಬಲ । ದಳವುದೋರಲು ಕಂಡು ಭಾರಿಯ । ಕಳದುಕೊಂಡನುಬೇಗ ಹೇ
ಳಿದ ಕಾಲನರಮನೆಗೆ ॥ ಅಳಪಿಗೊಂಡುರವಣಿಸಿ ಪರಬಲ । ದಳವ ಹೊಯ್ದನು ಕುದುರೆಕಾರರ । ತ
ಲೆಯ ಮಿದುಳೊಟ್ಟಿದನು ಕೊಂದನು ಮಕುಟವರ್ಧನರ ॥೧೧೮॥ ಬಿಲುದುಡುಕಿ ಕೈಕೊಂಡುಸುಭಟಾ
ವಳಿಯ ಗೋಣಡಪಿಯನು ಭೀಮಾ । ನಲನಬಿಲಿನಕೇಣ ಕಾಣಕಾಣಿಸಲಾಯ್ತು ನಿಮಿಷದಲಿ ॥ ಇಳೆ
ಯೊಳೀಪವಮಾನನಂದನ । ನುಳಿಯೆ ಯಮರಾಜಂಗೆ ಬೆಸಕೈ । ವಳಪಿ ಹಲಬಂಗಾಗಲೆಂದುದು ಸಮು
ಮರಭೂತಗಣ ॥೧೧೯॥ ಪವನಜನ ಕೈಘಾತಿಗಗ್ಗದ । ಬಮಂಗರನೀಕ್ಷಿಸುತ ರಥದನು । ಕನಿಸಿದನು ಕೈ
ವೀಸಿ ಮೋಹರಕಭಯವನು ಕೊಡುತ ॥ ಹವಣಿಸ್ಯೆ ಹೇರಾಳದಾಟೋ । ಪವನು ಮಾಣಾ
ಜವದಬವರಕೆ । ತವಕಿಸ್ಯೆ ತಪ್ಪೇನೆನುತ್ತುರವಣಿಸಿದನು ಭೀಷ್ಮ ॥೧೨೦॥ ಎಲೆ ಪಿತಾಮಹ ನೀವು ಕರು
ಣಿಸಿ । ದಳವ ನಿಮಗೊಪ್ಪಿಸುವೆಜಯವೆಮ । ಗುಳಿವು ಬೇರಂತೆನುತ ಕೊಂಡನು ಪವನಸುತ ಧನುವ ॥
ಚಳಕದಲಿ ತೆಗೆದೆಸೆಯಲಾತನ । ಹಿಳುಕಸೀಳಿದುಬಿಸುಟು ಭೀಮನ । ಗೆಲಿದನಂಟಂಬಿನಲಿ ಗಂಗಾಸೂ
ನು ನಿಮಿಷದಲಿ ॥೧೨೧॥ ಮೇಲೆ ಹೇಳಿಕೆಯಾಯ್ತುವರಪಾಂ । ಚಾಲಂಗೆ ಕೈಕೇಯಮತ್ಸ್ಯನೃ । ಪಾ
ಲವೈರಾಟನ ಸಮಗ್ರಕ್ಷೋಹಿಣೀ ಬಲಕೆ ॥ ಸೂಳು ಮಿಗೆಗರ್ಜಿಸುವಘನನಿ । ಸ್ಸಾಳಕೋಟಿಯ ಗಡಣ
ದಲಿ ಕೆಂ । ಗೋಲಸರಮಳೆಗರೆದು ಗಂಗಾಸುತನ ಕೆಣಕಿದರು ॥೧೨೨॥ ಪೂತು ಮಝುಪಾಂಡವರ ಸು
ಭಟ । ವ್ರಾತ ಕವಿದುದುಕವಿದದುದೋ ಮ್ಮು । ಯ್ಯಾತುದೋ ಬೆಸಗೊಳ್ಳಿವೈವಸ್ವತನಪರಿವಾರ ॥ ಘಾತಿ
ಸುವೆನಿದನೆನುತ ತೊಡಚಿದ । ನೂತನಾಸ್ತ್ರಂಗಳಲಿ ಸುಭಟ । ವ್ರಾತವನು ಕಡಿಯೆಚ್ಚು ಪಲ್ಲಟಿಸಿದನು
ಕಡಿಕಡಿದು ॥೧೨೩॥ ಕಾಳಗಕ್ಕೆದಿರಾದಭೀಷ್ಮನ। ಕೋಲಹತಿಯಲಿ ಮಡಿದರಿಪುಭೂ । ಪಾಳಿ ಹಂದುದು
ಸುರರಹೆಂಡಿರ ಮುಡಿಯ ಮುಂದಲೆಗೆ ॥ ಮೇಲೆ ಮೇಲೈತಪ್ಪವೀರಭ । ಟಾಳಿಯೊಡ್ಡಿನಲಿದ್ದಸು
ಭಟರು ॥ ಸೂಳೆಬಂಟಿಕೆಯಿಂದ ಖಾಡಾಖಾಡಿಗೈದಿದರು ॥೧೨೪॥ ಮುಡುಹುಗಳಲೊಡೆಹಾಯ್ದು
ಕಾಲಲಿ । ಮಡವ ಮೆಟ್ಟುತ ತಂಬುಲಂಗಳ । ಲಿಡುತಲಿರಕಂದೊರೆಯಕಟ್ಟುತ ನಾಯಕರ
ಹೆಸರಿಡುವ ॥ ತೊಡರನಿಕ್ಕುವಬೈದು ಸುಭಟರ । ಬಿಡುವಕಾದುವವೀರಭಟರಿಂ । ದಡಿಮುದ

ಮರಾವತಿಯ ಸೊಂಪಿನಸೂಳೆಗೇರಿಯಲಿ ||೧೨೫|| ಸುರಂಗಿತ್ತವ ಗಜಬಜವ ಪರಿ | ಹರಿಸಲರಿಯದೆ ವೀರಭೀಷ್ಮನ| ಧುರವವೀಕ್ಷಿಸಲಿತ್ತಲೆಳವಡದೇನನುಸುರುವೆನು|| ಅರರೆ ಅಂಬರಸರಸಿಗೀಭೂ| ಪರ ಸಿರದ ಪಂಕೇಜವನ ವಿಸ್ತರಿಸಲಾವುದೆನಲ್ಕೆ ಗಂಗಾಸೂನು ಕೈಕೊಂಡ ||೧೨೬|| ಬಳಸಿ ತಾರೆಗಳೆಸೆಯೆ ಚಂದ್ರರು | ಹಲಬರಾದರೊ ನಭದೊಳೆನೆ ಹೊಳೆ | ಹೊಳೆವ ಮಣಿಮೌಳಿಗಳು ಸಂದಣಿಸಿದವು ಗಗನದಲಿ || ಗೆಲಿದನಹಿತನಿಕಾಯವನು ರಿಪು | ಬಲದಿಶಾಪಟಭೀಷ್ಮನಿತ್ತಲು | ಕಲಿಯುಧಿಷ್ಠಿರನೃಪನ ವಿರಥನ ಮಾಡಿದನು ಶಲ್ಯ ||೧೨೭|| ಅರಸನನು ಹಿಂದಿಕ್ಕಿ ನಡೆದು | ತ್ತರನು ಶಲ್ಯನಸಾಂತು ನಿಂದನು ಸರಳಸೈವಳೆಗರೆಯೆ ಕವಿದನು ಶಲ್ಯಭೂಪಾಲ || ಧುರದಿಶಾಪಟನಹೆ ವಿರಾಟನ | ಹಿರಿಯಮಗ ನೀನಮ್ಮಗೋಕುಲ | ಹರಣದಲಿ ಕಲಿಯಾಗಿ ಕಾದಿದೆಯೆನುತ ತೆಗೆದೆಚ್ಚ ||೧೨೮|| ಎಸಲು ಶಲ್ಯನ ಶರವ ಖಂಡಿಸಿ | ನಿಶಿತಬಾಣದಲುತ್ತರನು ತೆಗೆ | ದೆಸಲು ಕನಲಿದು ಶಲ್ಯನಭಿಮಂತ್ರಿಸಿ ಮಹಾಶರವ || ಅಸಮಬಲನೀಕರ್ಣಪೂರದಿ | ನೆಸೆವಿರಾಟಕುಮಾರನಸು ಲಂ| ಘಿಸಿತು ಕಾಯವನೊದೆದು ಖಚರೀಜನದ ತೋಳಿನಲಿ ||೧೨೯|| ವೀರಶಲ್ಯದ್ರೋಣಕೃಪಭಾ | ಗೀರಥೀನಂದನನು ಪಾಂಡುಕು | ಮಾರಕರ ಸೇನೆಯಲಿ ಗೆಲಿದರು ಮುರಿದರಂಭಟರ || ವೀರಸುಭಟರ ರಕುತಧಾರಾ | ಸಾರಲೋಹಿತಬಿಂಬವನಕೂ | ಪಾರದಲಿ ತೊಳವಂತೆ ಪಶ್ಚಿಮಬಲಧಿಗಿನನಿಳಿದ ||೧೩೦|| ಸೂಳವಿಸಿದವು ಸಂತವಿಸಿ ನಿ | ಸ್ಸಾಳಸೇನೆಯ ತೆಗಸಿದರು ಹೆ | ಗ್ಗಾಳೆ ಮೊಳಗಿದವಾನೆವರೆ ಗಜರಿದವು ಡೌಡೆಗಳು || ಪಾಳೆಯಕ ತಿರುಗಿದರಖಿಳ ಭೂ | ಪಾಲಕರು ಗಂಗಾಸುತನ ಪಾಂ | ಚಾಲಕನ ನೇಮದಲಿ ಕೌರವ ಪಾಂಡುನಂದನರು ||೧೩೧|| ಇತ್ತಲೀ ಸಂಗ್ರಾಮಮಹಿಯಲಿ | ಮೃತ್ಯುವಿನ ಭಾಗ್ಯೋದಯವು ಕೈ | ವರ್ತಿಸಿತು ವೈವಸ್ವತಾಭಿಪ್ರಾಯ ಸಿದ್ಧಿಸಿತು || ಮುತ್ತಿಗೆಯ ಜಂಬುಕಖಗಾಳಿಯ | ಚಿತ್ತ ನಿಶ್ಚಲವಾಯ್ತು ಸಲೆ ಮನ| ವೃತ್ತರೋತ್ತರವಾಯ್ತು ಶಾಕಿನಿ ಡಾಕಿನೀಜನಕೆ ||೧೩೨|| ಹೆಗಲಪಕ್ಖಲೆಗಳನು ಕವಿದುದು | ವಿಗಡಪ್ರೇತನಿವೃಂದ ಜೀಕೊಳ | ವಿಗಳ ಕೈರಾಟಳದಲ್ಲೈದಿತು ಶಾಕಿನೀನಿಕರ || ತೊಗಲ ಕುನಿಕಿಲ ಭಂಡಿಗಳಲಾ | ರ್ದಗಿದು ಪೊಕ್ಕರು ರಕ್ಕಸರು ಬಾ | ಯ್ದೆಗೆದು ಜಂಬುಕಘೂಕಕಾಕವ್ಯೂಹವೈದಿದವು ||೧೩೩|| ಕರುಳನಣಲೊಳಗಡಸಿ ನಲಿದವು | ಮರುಳಬಳಗ ಕಪಾಲಪಾತ್ರೆಯ | ನೆರೆನೆಗಹಿ ಕೊಂಕಿನಲಿ ಕುಣಿದರು ಮುಕ್ತಕೇಶಿಯರು || ಮೊರೆವೆಣನನೊಡಮೆಲುತೆ ಹಾಡುತ | ಧುರದದಾನವನಿಕರ ಪಾಂಡವ | ಕುರುನೃಪರ ಹರಿಸಿದರು ಕೈಪರೆಗುಟ್ಟಿ ಭೂತಗಣ ||೧೩೪|| ಸಿಡಿದಕಣ್ಣಾಲಿಗಳನಾಯಿದು | ಕುಡುಕುಗೊಂಡವು ಕಾಗೆಗಳು ಹಿಂ | ಮಿಡಿಯನರವನು ಕಚ್ಚಿ ಸೆಳೆದವು ಜಂಬುಕಾದಿಗಳು || ಅಡಗಕದುಕಿರಿದೊರಲಿ ಕರೆದವು | ಗಡಣದಲಿ ಗೂಗೆಗಳು ರಕುತದ | ಕಡಲಲೋಕುಳಿಯಾಡಿದರು ಭೇತಾಳಕಾಳಿಯರು ||೧೩೫|| ತಳಿತತಲೆಯೋಡಿನಲಿ ಶೋಣಿತ | ಜಲವ ಕಾಸಿದರೆಳೆಯಕರುಳನು | ಹಿಡಿದು ಹಿಂಡಿದರಿಕ್ಕಿದರು ಕುಸುಕಿದರು ಮೂಳೆಗಳ || ತೆಳುದೊಗಲ ಚಕ್ಕಣದ ಕೈಚ | ಟ್ಟಳೆಯಮರು ಹಂತಿಯಲಿ ಕುಡಿದರು| ಕೆಳೆಯರಿಗೆ ಸವಿದೋರೆ ಪ್ರೇತನಿಕರಗಣಡದಲಿ||೧೩೬|| ತೆಳುಪುದೊಗಲಿನ ಸೋಗೆಯುಡುಗೆಯ | ನೆಳೆಗರುಳಸಿಂಗಾರದುರುಬಿನ | ಕೆಳದಿಯರ ಕೈನೇಣಕಿರುದೊಟ್ಟಲಿನ ಬೊಂಬೆಗಳ || ಎಳೆಮಿದುಳಕಜ್ಜಾಯ ಮೂಳೆಯ | ಹಳುಕುಕಾಳಿಜದಟ್ಟುಗುಳಿಗಳ | ಕಳೆಗಳಲಿ ಕೊಡಗೂಸುಪ್ರೇತನಿಕರವೊ

ಪ್ಪಿದವು ||೧೩೭|| ತೋಳಬರೆ ಕುಣಿದವು ಕಬಂಧದ | ಜಾಲದೊಡನೆ ಪಿಶಾಚಗಣ ಭೇ | ತಾಳಗಣಕ್ಕೆ ವರೆಯ ಬಡಿದವು ಶಾಕಿನೀನಿಕರ || ಸಾಲುವಿಗೆಸೊಗಸಿದುದು ರಣಭೂ | ತಾಳಿಯೆಲ್ಲಿಂದಿತ್ತ ಕೇಳ್ವುದು | ಪಾಳೆಯಂಗಳೊಳೆರಡರಲಿ ಸಿಂಗರವುಹೋದ್ಯೋಗ || ಹಿಥ್ಥಿದಲೋಹದಸೀಸ ಕಂಗಳ| ಬಲಿಸಿದರು ಹೊಳ್ಳಾದಕವಚವ | ಹಲಿಸಿದರು ಹಕ್ಕರಿಕೆಸವಗದಬಿರುಕ ಬಿಗಿಸಿದರು || ಕಳಚಿದಾಯತದಾಯುಧವ ಕೀ | ಲ್ಹೊಳಿಸಿದರು ಖಡುಗಕ್ಕೆ ಕುಂತವ | ಕಳಚಿಕಾವನು ತೊಡಿಸುತಿರ್ದುದು ಸೇನೆಯೆರಡರಲಿ ||೧೪೯|| ದಡಿಯುಬಲಿಸುವ ಗುಳವರೆಂಜೆಯು | ಗಡಣಿಸುವ ಹಕ್ಕರಿಕೆಗಳನಳ | ವಡಿಪ ವರಕಡಿಯಣದಕಂಬಿಯು ಕೊಂಡಿಗಳ ಬಲಿನ || ವುಡಿದೆದೂಹತ್ತಿಗಳಕೀಲ್ಗಳ | ನಡಸಿಬೆಟ್ಟುವ ಲೋಹದಚ್ಚನು | ತೊಡಿಸುತಿರಲಾಯ್ತೆರಡುಬಲವಲಿ ನಿದ್ರೆಗವಹಾನ ||೧೫೦|| ಅಸಿಯುಮಸಸುವವುರಿದಲೌಡಿಯು | ಬೆಸುವಕೊಂತಕತಾರಿಗಳ ತಾ | ಳಿಸುವನೆರೆಸೊಪ್ಪಾದಹಿಳುಕಿನ ಗರಿಯು ಕೀಲಿಸುವ || ಹೊಸತಿರುವಕಟ್ಟುವಅಡಾಯುಧ | ಮಸೆವ ಹರಿಗೆಯುಬಲಿವ ಸುರಗಿಯು | ಬೆಸುವ ಬೆಳಗುವವೀರಭಟರೊಪ್ಪಿದರು ಕಟಕದಲಿ ||೧೫೧|| ಹರಿದಕೂರಳನು ಬಿಗಿವಭುಜದಲಿ | ಮುರಿದಬಾಣವ ಕೀಳ್ವಹೊಟ್ಟೆಯು | ಹರಿಗರುಳನಣೆದೊತ್ತಿ ಹೊಲಿಸುವ ಮದ್ದುಗಳಗಿಡಿವ || ಉರುವಶಾಕವನಸ್ಯದಲಿಹದ | ನರಿದುದಗ್ದದೆ ವೈದ್ಯತತಿಯು | ಚ್ಚರಿಕೆಯಲಿ ಸಂತವಿಸುತಿರ್ದುದು ವಾರುವಂಗಳನು ||೧೫೨|| ಒಡಲೊಳಗೆ ಪೊಕಿಟ್ಟಸಬಳವ | ನುಡಿಯಲೀಯದೆ ಕೀಳ್ವಮದ್ದನು | ಗಿಡಿವಜೇವಣಿಗೆಯಲಿಸತ್ಪ್ರಾಣಿಸುವುದಾವ್ರಣವ|| ತೊಡೆದುಕಟ್ಟುವಹಸ್ತಿವೈದ್ಯರ | ಗಢಣವುಭಯದಲೆಸೆದುದೊರೆಲುವ | ಕಡಲ ರಭಸಕೆತೊಡರನಿಕ್ಕಿದುದುಭಯಸೇನೆಯಲಿ ||೧೫೩|| ಬಾದಣಿಸಿವೇರುಗಳ ಬಾಯಲಿ | ಕಾದಹಾರಂಗಿಗಳನಳತೆಗೆ | ಕೋದುಕೊಂಡರುವುಲಿಯ ಹೊಳಕದೆ ಹಿಡಿದಗಾಯವನು || ಅದವ್ಯಗಂಡಿಗಳ ರಕುತವ | ಸೋದಿಸುತ ಹಳೆದುಪ್ಪವನುತೊಡೆ | ದಾದರಿಸಿದರು ವೈದ್ಯಸಂತತಿ ವೀರಭಟರುಗಳ ||೧೫೪|| ಖಡುಗದಡಹೊಯ್ಲುಗಳೊಳಗೆ ಮು | ದ್ದಡಸಿದರು ಸೂಕರನ ತುಪ್ಪವ | ತೊತೆದರಿರಿದೇರಿನಲಿ ಬಿಟ್ಟರು ತೈಲಪಾರೆಗಳಾ || ಕುಡಿಸಿದರು ಮಂತ್ರೋದಕವನೊಳ | ಗಡಸಿ ಕರುಳನು ಮುಚ್ಚಿ ಮಂತ್ರಿಸಿ | ತೊಡೆದರಖಿಳೌಷಧಿಗಳನು ನೃಪಸೇನೆಯೆರಡರಲಿ ... ... ||೧೫೫||

ಅಂತು ಸಂಧಿ ೪೫ಕ್ಕಂ ಪದ ೩೪೧೧ಕ್ಕಂ ಮಂಗಳಂ.



ಐದನೆಯ ಸಂಧಿ,

ಸೂಚನೆ|| ರಾಯನನುಜಘಟೋತ್ಕಚನಂಫೋ | ಜಾಯುತಾಕ್ಷನ ಖಾತಿಯನು ಗಾಂ | ಗೇಯಭೀಷ್ಮನುಶಕ್ತಿಯಲಿ ಗೆಲಿದನು ವರಸುವರ್ಣನವ ||

ಪದ|| ಕೇಳು ಜನಮೇಜಯಧರಿತ್ರೀ | ಪಾಲ ದಿನಕರನುದಯದಲಿ ಮುಂ | ಗಾಳಗದ ಗಾಢಪ್ರತಿಜ್ಞರು ಬಂದು ಕಳನೊಳಗೆ || ಮೇಲನರಿದಂತಖಿಳ ಕುರುಭೂ | ಪಾಲನವರೊಡ್ಡಿದರು ಲಕ್ಷ್ಮೀ |

ಲೋಲನಾಜ್ಞೆಯೊಳಿವರು ಬಲಿದರು ತಮ್ಮ ಮೋಹರವ ||೧|| ದಳವೆರಡುದಳವಾಯ್ತು ಳಿಬ್ಬರ | ಬಳಿಯ ಚೌರಿಯ ಸನ್ನೆಯಲಿ ಬಿಡೆ | ಹಳಚಿದರು ಹೊಯ್ದಾಡುತಿರ್ದುದು ಪಾಯದಳವಂದು || ತುಳಿದು ಹೊಕ್ಕವು ದಂತಿಘಟೆ ದಳ | ವುಳಿಸಿ ಹರಿದುವು ತೇರುಗಳು ಕೈ | ಬಳಸಿತಿವಿದರು ರಾಯವರಾವ್ತರು ಸಮರ ಸಮ್ಮುಖದಲಿ ||೨|| ಏನ ಹೇಳುವೆನುಭಯಬಲದಲ | ನೂನಪತಿತಾಶ್ವಗಳ ಸಪೆನೆಡ | ಹಾನೆಗಳ ಹೊದರೆದ್ದು ಮುಗ್ಗಿದ ರಥದವಾಜಿಗಳ || ಮಾನವರ ಕಡಿಖಂಡದೊಂಡೆಯ | ನೂನಭುಜಜಂಘೆಗಳ ರುಧಿರಾಂ | ಭೋನಿಧಿಯ ಹಳಹುಗಳ ಹೂರದವಿಗಡ ವಿಗ್ರಹದ ||೩|| ಅಳಿದುದೆರಡರ ಚೂಣಿದೊರೆಗಳ | ಬಲಕೆ ಹೇಳಿಕೆಯಾಯ್ತು ಘನಸಂ | ಕುಲಸುವಿಗ್ರಹ ಸಾಧಕರು ಕೈಮಾಡಿ ಕಡಿವಡೆಯೆ || ದಳವುಳಿಸಿದನು ಭೀಮ ಕೌರವ | ಬಲವ ತರುಬಿದನಡ್ಡಬಿದ್ದರ | ಬಲದವಸುಭಟರಿಗಿತ್ತ ಸಮರಾವತಿಯ ಸಂಪದವ ||೪|| ಮುರಿದು ಬಹನಿಜಸೇನೆಗಭಯವ | ಸೆರಗುದೋರಿದು ಭೀಮಸೇನನ | ತರುಬಿದನು ಕಲಿಭೀಷ್ಮ ಬಿಗಿದನು ಸರಳನಂಬರವ || ತೆರಹುಗೊಡದಂಬುಗಳ ಭೀಮಗೆ | ಬೆರಗು ಬಲಿದುದು ಹೊಕ್ಕು ಸಾತ್ಯಕಿ | ಯಿರಿದು ಭೀಷ್ಮನ ಬಲದಲೂಡಿದನಖಿಳಖಗಕುಲವ ||೫|| ಬಳಿಕ ಸಾತ್ಯಕಿಭೀಷ್ಮರಿಗೆ ಬಲು | ಗಲಹಬಿದ್ದುದು ವಿಲಯರುದ್ರನ | ನಿಲವನೊಚ್ಚತಗೊಂಡ ಪರಬಲದೊಳಗೆ ಗಾಂಗೇಯ || ತಳಪಟವ ಮಾಡಿದನು ಭೂಷೆಯ | ಬಳಿಗೆ ಕೊಂಡನು ಹತ್ತುಸಾವಿರ | ನೆಲನವಲ್ಲಭರನು ಯುಧಿಷ್ಠಿರರಾಜಸೇನೆಯಲಿ ||೬|| ಬೀಳಲವನೀಪತಿಗಳಲಿ ಹೀ | ಹಾಳಿಯಲಿ ಸಾತ್ಯಕಿ ಮುಳಿದು ಬಲು | ಗೋಲಿನಲಿ ಗಂಗಾತನೂಜನ ಸಾರಥಿಯನೆಸಲು || ಮೇಲುಗಾಳಗವವರಸೇರಿತು | ಸೋಲ ಕುರುಪತಿಗಾಯ್ತು ಕಿರಣದ | ಗೂಳೆಯವುಪಡವಣಸಮುದ್ರಕೆ ತೆಗೆಯ ರವಿ ಸರಿದ ||೭|| ದಿನವೆರಡ ಹಿಂದಾದುದಿದುಮೂ | ರನೆಯ ದಿವಸದ ಬಹಳ ವಿಗ್ರಹ | ದನುವಸಾಲಿಸು ರಾಯಜನಮೇಜಯ ಮಹೀಪಾಲ || ದಿನಪ್ರನುದಯಾಚಲದಚಾವಡಿ | ವನೆಗೆ ಬರೆ ಬಲವೆರಡುಗಳ ಗ | ರ್ಜನೆಗಳಲಿ ಬಂದೊಡ್ಡಿದರು ಕಣನೊಳಗೆ ಬಿಗುಹಿನಲಿ ||೮|| ಸೂಳು ಮಿಗಲಳ್ಳಿರಿವನಿಸ್ಸಾಳೋಳಿಗಳ ತಂಬಟದಕೊಂಬಿನ| ಗಾಳುಗೌರಿನ ಕಹಳೆಗಳ ಕಳಕಳದ ಬೊಬ್ಬೆಗಳ || ಮೇಲವಣಿಭುಗಿಲಿಡಲು ಬೊಬ್ಬೆಯ | ಗೋಳುಘೋಷದ ಘಾತಿದೆಸೆಗಳ | ಸೀಳಿ ಸಿಡಿಲೆದ್ದೆರಡು ಬಲವೊಡೆಬೆರಸಿ ಹಳಚಿದುವು ||೯|| ಜೋಳವಾಳಿಯೊಳುಂಡು ಮಾಡಿವ | ಸಾಲವನು ತಲೆಗಳಲಿ ತಿದ್ದಿದ | ರಾಳತರುಬುವಪತಿಗೆ ಹರುಷವ ಮಾಡಿ ತಮತಮಗೆ || ಕಾಲನೂರ್ಕೆದದು ಸುರಸ್ತ್ರೀ | ಜಾಲ ನೆರೆಯದು ಗಗನ ಸುಭಟರ | ಸಾಲೊಳಡಗಿತು ಚಿತ್ರವೆನೆ ಹೊಯ್ದಾಡಿತುಭಯಬಲ ||೧೦|| ಬರಿಲಿ ಸಮರಕೆ ಭೀಮ ಸಾತ್ಯಕಿ | ಕರೆಯೆನುತ ಬಿಲುದುಡುಕಿ ರಥದಲಿ| ಸುಸತಾಳಧ್ವಜವನೆತ್ತಿಸಿ ಸಮರಥರ ನೆರಹಿ || ಸರಳದೂಗುತ ಮಾರುಬಲವನು | ತರುಬಿನಿಂದನು ಭೀಷ್ಮನಗ್ಗದ | ಬಿರುದ ಸಂಭಾವಿಸುವ ಪಾತಕಕೋಟಿ ಗಜಬಜಿಸೆ ||೧೧|| ಕಾಲಯಮನೋ ಭೀಷ್ಮನೋ ಘಡ | ಮೇಳವೇ ಮಝ ಭಾಪುಮಾರಿಯ | ತಾಳಿಗೆಗೆ ತುತ್ತಾದರೋ ತಡವೇಕೆ ತೆಗೆಯೆನುತ || ಆಳು ಮುರಿದುದು ಮೋಹರದಭೂ | ಪಾಲಕರು ಹುರಿಯೊಡೆದು ದೊರೆಗಳ ಮೇಲೆ ಬಿಸುಟರು ವೀರಗಂಗಾತನುಜನುಪಟಳವ ||೧೨|| ಸೋಲ ಮಿಗಲೊಳಸರಿದಸುಭಟರ | ಕೇಳಗಡಹಿಸಿ ಕಪಿಯಹಳವಿಗೆ | ಗೋಲನೆತ್ತಿಸಿ ಕೆಲಬಲದ ಮನ್ನೆಯರ ಮೂದಲಿಸಿ || ಆಲಿಯಲಿ ಕಿಡಿಸೂಸೆ ಮಿಸೆಯ | ಮೇಲುದಿ

ರುಹಿದನೌಡುಗಚ್ಚಿ ಕ । ರಾಳರೋಷಮಹೋಗ್ರಧೀರನು ಪಾರ್ಥನಿದಿರಾದ ॥೧೩॥ ತೊಲತೊಲಗು ಕ ಲಿಭೀಷ್ಮ ವೃದ್ಧರಿ । ಗೆಳೆ ಭಟರಕೂಡಾವುದಂತರ । ವಳಿಬಲವ ಹೆದಱಿಸಿದಹೆಕ್ಕಳವೇಕೆ ಸಾಕೆನುತ ॥ ತು ಳುಕಿದನು ಕೆಂಗೋಲಮಳೆಯನು । ನೆಲನೆಪಾವುದು ದಿಕ್ಕದಾವುದು ಸಲೆ ನಭೋಮಂಡಲವದಾವುದೆನ ಲ್ಕೆ ನರನೆಚ್ಚ ॥೧೪॥ ಪೂತುರೇ ಕಲಿಪಾರ್ಥ ವಿಶಿಖ । ವ್ರಾತಮಯುವಾಯ್ತವನಿ ಕಾರ್ಮುಕ । ಭೂತ ನಾಥನಗುರುಡಿಯಲ್ಲಾ ಕಲಿತವನೆ ನಿನಗೆ ॥ ಆತುಕೊಳ್ಳಾದೊಡೆ ಯೆನುತ ಕಪಿಕೇತನನ ಶರಹತಿಯನಂ ತಾ । ಮಾತು ಹಿಂಚಿತು ಕಡಿದು ಬಿಸುಟನು ಕೃಷ್ಣಬೆರಗಾಗೆ ॥೧೫॥ ಆ ಸಮಯದಲಿ ರಣದಲೌಕಿದ। ರಾಸುಯೋಧನಶಲ್ಯ ಸಲೆ ದುಃಶ್ಶಾಸನನು ಕೃಪಶಕುನಿ ಗುರುಸುತರಾದಿಯಾದವರು॥ಸೂಸಿದರು ಸರಳು ಗಳನರ್ಜನ ಗಾಸಿಯಾದನು ವಿಲಯಮೇಘದ। ಮೀಸಲಿನಮಳೆಗಾಲವೆನೆ ಮೋಹಿದವು ಶರಜಾಲ ॥೧೬॥ ಕುದುರೆ ಕಂಗೆಟ್ಟುವು ಮುರಾರಿಯ । ಹೃದಯ ಚಂಚಲವಾಯ್ತು ಗಾಲಿಗ । ಳದುರಿದವು ಗರುವಾ ಯಿಗೆಟ್ಟನು ಮೇಲೆ ಹನುಮಂತ॥ ಹೆದರಿದರು ಸಾಯಕರು ಪಾಂಡವ । ರದಟು ಮುರಿದುದು ಸುರ ರು ಚಿಂತಿಸಿ ಕುದಿದರರ್ಜನಪಕ್ಷಪಾತ ವ್ಯರ್ಥವಾಯ್ತೆನುತ ॥೧೭॥ ತೆರಳುವನೆ ಬಿಲುಗಾರರಿಗೆ ವರ । ಗುರುವಲಾ ಕಲಿಪಾರ್ಥನಿನಿಬರ । ಸರಳ ಕಡಿದನು ಕೃಪನನೆಚ್ಚನು ಗುರುಸುತನ ರಥವ ॥ ಹೊರಳಿಗಡಿ ದನು ಶಲ್ಯನನು ಹೇವಿಸಲೆಚ್ಚನು ಕೌರವನಹೇ । ರುರದಲಂಬನು ಹೂಳಿದನು ಸೀಳಿದನು ಸಮರಥ ರ ॥೧೮॥ ಏರುವಡೆವನು ಶಲ್ಯರಕುತವ। ಕಾರಿದನು ದುಶ್ಶಾಸನನು ಕೈ। ಮೀರಿ ಕೈಕೊಂಡೆಚ್ಚು ಕೊಂ ದನು ಮತ್ತೆ ಗುರುಸುತನ ॥ ಹೇರಿದುದು ಹಿಳುಕುಗಳು ಮೈಯಲಿ । ಜೋರು ಮಸಗಲು ಭೀಷ್ಮ ಕ ಡುಕಾ । ಹೇರಿದನು ರೋಷಾಗ್ನಿವಿಷಮಜ್ವಾಲ ಮುಖನಾಗಿ ॥೧೯॥ ಮೊಗದಹೊಗರವಗಡಿಸಿ ಸುಯ್ಲ ಲಿ । ಹೊಗೆಯ ಹೊದರಂಕುರಿಸೆ ಬಿಡುಗ । ಣ್ಣಗಳೊಳೊಕ್ಕುದು ಕೆಂಪು ಸೊಂಪಡಗಿತು ಮಹಾ ದೇವ ॥ ತೆಗೆವೆನರ್ಜನನಸುವನೆನುತಾ । ಳುಗಳದೇವನು ಭೀಷ್ಮನಡಿಗಡಿ । ಗೊಗುಮಿಗೆಯ ಕೋಪದ ಲಿ ತೋದನು ಕಣೆಗಳಲಿ ನರನ ॥೨೦॥ ನೊಂದು ಸೈರಿಸಿ ಮತ್ತೆಸರಳಿನ । ಸಂದಣಿಯ ಸೈಗರೆದನರ್ಜ ನ । ನಿಂದುಧರ ಮುಖಭಾಷೆನಲು ಪಸರಿಸಿದನಂಬುಗಳ । ಮುಂದೆ ನಿಲಲರಿಯದೆ ವಿಟಾಳಿಸಿ । ಮಂ ದಗತಿಯಲಿ ಕೆಲಸಿಡಿದು ಹರಿ। ನಂದನನ ತೆಗೆದೆಸುತ ಬಂದನು ಭೀಷ್ಮ ಮುಳಿಸಿನಲಿ ॥೨೧॥ ಎತ್ತಲೊಲೆ ದನದೆತ್ತಸಿರಿದನ । ದೆತ್ತಚಾರಿದನೆತ್ತಲಡಗಿದ । ನೆತ್ತಹಿಂಗಿದನೆತ್ತಲುರುಬಿದನೆತ್ತಲವುಕಿದನು ॥ ಅತ್ತ ಲತ್ತಲು ಹಯರಥವ ಬಿಡ । ದೊತ್ತಿ ಬೀದಿಗೆ ನೂಕಿ ಪಾರ್ಥನ । ಮುತ್ತಯನ ಸಂಮುಖಕೆ ಬಿಡದೌ ಕಿದನು ಮುರವೈರಿ ॥೨೨॥ ಕೆರಳಿದನು ಕಲಿಭೀಷ್ಮನರ್ಜನ । ನುರವಣೆಯ ಗೆಲುವೊಡೆ ಮುರಾರಿಯ । ಭರವಸವ ನಿಲಿಸಿದೊಡೆ ಸೋಲುವುದೆನುತ ನಸುನಗುತ ॥ ಹರಿಯ ಸಿರಿವೊಡಲಿನಲಿ ಸರಳಿನ । ಸರಿವಳೆ ಯ ಸೈಗರಿಯೆ ಜೋಡಿನ । ಸ್ಮರಪಣಿಯುಲಕ್ಕಾಡಿ ಹಾಯ್ದುವು ಭೀಷ್ಮನಂಬುಗಳು ॥೨೩॥ ಮತ್ತೆ ರಥ ವನು ಹರಿಸಿ ಭೀಷ್ಮನು । ಹತ್ತೆಬರೆ ಕಟ್ಟಳವಿಯಲಿ ಹಾ । ಮುತ್ತಯನು ಸಿಲುಕಿದನು ಶಿವಶಿವಯೆ ನುತ ಬಲ ಬೆದರೆ ॥ ಹತ್ತುಶರವಲಿ ಕೃಷ್ಣರಾಯನ । ಮತ್ತೆ ಮುಸುಕಿದ ಬಹಳ ಭಾರ್ಗವ । ದತ್ತ ಬಾಣವ ತೊಡಚಿ ಕೃಷ್ಣನ ನೊಸಲ ಕೀಲಿಸಿದ ॥೨೪॥ ಕೆಂಗರಿಯ ಮರಿದುಂಬಿ ತಾವರೆ । ಗಂಗವಿಸಿದ ವೊಲಸುರರಿಪುವಿನ । ಮಂಗಳಾನನಕಮಲದಲಿ ಶರಜಾಲವಿನಿಡುಗರಿಯ ॥ ತುಂಗವಿಕ್ರಮನಂಬಕಿತ್ತು ಶ।

ದಂಗರಕುತಭಿಷೇಕರೌದ್ರಾ । ಲಿಂಗಿತನು ಬಲುಖತಿಯು ಹಿಡಿಪನು ಭೀಷ್ಮನು ಪಟಳಕೆ ॥ ಕೆಂಪಕಾರಿದ ವಾಲಿಗಳು ಪ್ಪೆ । ಕಂಪಿಸಿದುದಡಿಗಡಿಗೆ ರೋಷದ। ಪೆಂಪಿನಲಿ ತಗ್ಗಿದನು ಗಂಟಿಕ್ಕಿದವು ಹುಬ್ಬುಗಳು ॥ ಸೊಂಪುಗೆಟ್ಟುದು ಸಿರಿವದನ ಮನ । ದಿಂಪು ಬೀತುದು ಭಕ್ತವ್ಯೋಹವ । ಲಂಪು ಮಸಗಿತು ಬಿಸುಟು ಕಳೆದನು ಹಯದ ವಾಘೆಗಳ ॥೨೬॥ ಕೆಂಡವಾಗಲಿ ಲೋಕ ದಿವಿಜರ। ಹೆಂಡಿರೋಲೆಯು ಕಳೆದು ಹೋಗಲಿ । ದಿಂಡುಗೆಡೆಯಲಿ ಮೇರು ಮೇದಿನಿ ನಿಲಲಿ ವಿತಳದಲಿ ॥ ಗಂಡು ಗೆಡಿಸಿದರಿಲ್ಲ ದಾನವ ದಿಂಡೆಯರು ಹಲರೆಮ್ಮೊಡನೆ ಮಾ । ಕೊಂಡವರು ಮಾಮಾಪ್ರತಿಜ್ಞೆಯು ತೊಡಕಬೇಡೆಂದ ॥೨೭॥ ಸಕಲ ಜಗದಳಿವಿನಲಿ ರುದ್ರಾ । ತ್ಮಕನು ವಿಷ್ಣುವೆಯೆಂಬನುಡಿ ಸ ।ವ್ಯಕುತವಾಗಲು ತೋರಿದನು ಘನರೋಷ ತಾಮಸವ ॥ ಚಕಿತವದನದ ಕೆಂಪಿನಬುಜಾಂ । ಬಕಯುಗಳನೊಲೆದೊಲೆದು ರೋಷ । ಪ್ರಕಟಪಾವಕ ವಿಸ್ಫುಲಿಂಗಿತಸಾದನಡಿಗಡಿಗೆ ॥೨೮॥ ಎಲೆಲೆಯೆತ್ತಣಧರಣಿಯೆತ್ತಣ । ಕುಲಗಿರಿಗಳೆತ್ತಣದಿಶಾಗಜ । ಕುಲವಿದೆತ್ತಣಸುರರಿದೆತ್ತಣಹರಚತುರ್ಮುಖರು ॥ ಸಲಹು ವಯ್ಯನು ಮುಳಿದು ಲೋಕದ । ಕೊಲೆಗೆಲಸಕಂಘೈಸಿದನು ಹಾ । ಪ್ರಳಯವಾದುದ ಕಾಲದಲಿಯೆಂದಮರರೆದೆಯಾರೆ ॥೨೯॥ ನಳಿನ ಪತ್ರೋದಕದವೊಲು ಮಾ । ರೊಲೆದುದಬುಜಭವಾಂಡವಂಬುಧಿ । ಇಳಿದು ಗುಲ್ಫದ್ವಯಸವಾದುದು ಕಮಠನೆದೆಯೊಡೆಯೆ ॥ ನೆಲನಿದನು ಹಿಂದಿಕ್ಕಿ ಕೊಂಬ । ಗ್ಗಳೆಯರಾರೋ ಶಿವಶಿವಾ ಜಗ । ದಳಿವು ಜೋಡಿಸಿತೆನುತ ಕಡುಗಿದನಬುಜಭವನಂದು ॥೩೦॥ ಮುರಮಥನ ಕೆಲ್ಲೈಸಿ ನೋಡಿದ । ನುರುಭಯಂಕರಚಕ್ರವನು ದು । ರ್ದರುಸಧಾರಾಲೂಯಮಾನನಿಶಾಟಚಕ್ರವನು । ತರಳತರಣಿಯ ಚಕ್ರವನು ಸಂಗರವಿನಿರ್ಜಿತ ಚಕ್ರವನು ಭಯ । ಭರಿತನಿರ್ಜರಚಕ್ರವನು ಕಡುಗೋಪ ಕಿಡಿಯಿಡಲು ॥೩೧॥ ನಿಶಿತಧಾರೆಯು ಹೊಳಹು ಸೂರ್ಯನ। ಮುಸುಕಿದುದು ಪರಿಲೂನದೈತ್ಯ । ಪ್ರಸರಗಳ ನಾಳಗಳ ವಿಶ್ರುತರುಧಿರ ಬಂಧಗಳ ॥ ವಿಸುಪಮೊನೆಗಳ ಮುರಿವುಗಳ ನೆಣ । ವಸೆಯು ತೊರಳೆಯು ತೊಂಗಲಿನಲಂ । ದೆಸೆವಚಕ್ರವ ನೋಡಿದನು ದೈತ್ಯಾರಿ ಕೋಪದಲಿ ॥೩೨॥ ಹರಿದುಪಬ್ಬುವಬಳ್ಳಿವೆಳಗಿನ । ಮುರಿವು ಮಂಡಳಿಸಿದುದು ಶತಸಾ । ವಿರದಿವಾಕರಬಿಂಬವೆಸೆದುದು ಜಳದ ಹೊಯ್ಲಿನಲಿ ॥ ಸುರನರೋರಗಜನದ ಕಂಗಳ। ತೆರಹು ಕೆತ್ತುದು ಬತ್ತಿದುದಧಿಯೊ । ಳುರಿಮಳಲು ಮಾಣಿಕವು ಹುರಿದುದು ಚಕ್ರದೂಷ್ಮಯಲಿ॥೩೩॥ ನರನ ತೇರಿನ ಕುದುರೆಗಳು ಡಾ । ವರಿಸಿತತಿಥಗೆಸೆಗಳಿಗೆಯು ದ । ಳ್ಳುರಿಯ ಸಸಿಯಂತಾದನರ್ಜುನದೇವ ನಿಮಿಷದಲಿ ॥ ಕರಗಿ ಕೊರಗಿತು ಲೋಕ ಕೌರವ । ಧರಣಿಪಾಲರದೆತ್ತಣಾಯಿಯೋ । ಹರನ ಕಣ್ಗಿಚ್ಚಲ್ಲಲೇ ಹಾಯೆನುತ ಹಲುಬಿದರು ॥೩೪॥ ತುಡುಕಿದನು ಚಕ್ರವನು ರಥದಿಂ। ಪೊಡವಿಯಲಿ ಧುಮ್ಮಿಕ್ಕಿದನು ಮು । ತ್ತೊಡನೆ ಬಳಿವರಿದೈದಲೊಡೆಬಿದ್ದವರನೊಡೆತುಳಿದು ॥ ಸುಡುವೆನಹಿತಾನ್ವಯವ ಭೀಷ್ಮನ । ಕಡಿದು ಭೂತಗಣಕ್ಕೆ ಬೋನವ । ಹಡೆವೆ ನೋಡೆನ್ನಲ್ಲಿ ಮೇಳವೆಯೆನುತ ಸೈವರಿದ ॥೩೫॥ ಶಿವಶಿವೆಂದುದು ನಿಖಿಳಜನ ಕೌ । ರವರು ಕಂಪಿಸೆ ಥಟ್ಟುಗೆಡೆದುದು । ಭುವನದಲಿ ಭಾರಿಸಿತು ಜಯಜಯಜಯಮಹಾಧ್ವಾನ । ತವತವಗೆ ತವಕದಲಿ ಪಾಂಡವ । ರವರು ನಡುಗಿತು ಪಾರ್ಥ ಬಲಗುರ । ವವಚಿದಂತಿರೆ ಮೂಗನಾದನು ಬೆರಳಮೂಗಿನಲಿ ॥೩೬॥ ಹರಿಮುಕುಂದ ಮುರಾರಿಲಕ್ಷ್ಮೀ । ವರನೆ ಕೇಶವ ಯೆನುತ ಚಾಪವ । ಶರವನವನಿಗೆ ಬಿಸುಟು ಮೈಯಿಕ್ಕಿದನು ಕಲಿಭೀಷ್ಮ ॥ ಕರಯುಗವ ಮುಗಿದೆ

ದ್ದು ಮುರಹರ । ಸರಸಿಜಾಂಬಕ ರಾಮ ರಕ್ಷಿಸು । ತರಳನಲಿ ಗುಣದೋಷದೆರಕೆಯೆ ದೇವ ಹೇಳೆಂದ ॥೩೭॥ ದೇವನಿಮ್ಮಯಖ್ಯಾತಿಪರಿಯಂ । ತಾವು ಲಕ್ಷ್ಯವೆ ನಾನು ನೊರಜಿನ । ದೇವಗಿರಿಯಂತರದ ಸಂಭಾವನೆಯೆ ನಿನ್ನೊಳಗೆ ॥ ದೇವಮುನಿಗಳ ನಗೆಯ ನೋಡದಿ । ದಾವುದುಚಿತವ ಮಾಡಿದಿರಿ ಮಹಿ । ನಾವಲಂಬವ ಮರೆದುದಕೆ ನಗೆ ಬಂದುದೆನಗೆಂದ ॥೩೮॥ ಆಲಸಿಕೆಯಲ್ಲಿ ನೂರುಸಾವಿರ । ನಳಿನಭವರೆಡಗಿದರು ಯೆಂಬ । ಗ್ಗಳಿಕೆಯೆತ್ತಲು ಹುಲುಮಜರಾವೆತ್ತಲಿದಿರಾಗಿ ॥ ಇಳಿದು ಹರಿತಹುದೆತ್ತಲಿದು ನಂ । ಮಳತೆಗೈದುವುದಲ್ಲ ಲಜ್ಜೆಗೆ । ನೆಲೆಯ ಮಾಡಿದೆ ಹೂಡಿದೈ ದುರಿಶಯವ ತನಗೆಂದ ॥೩೯॥ ರೋಮರೋಮದೊಳಖಿಳಭುವನ । ಸ್ತೋಮ ನಲಿದಾಡುವುದು ಗಡ ನಿ । ಸ್ಸೀಮತನಗಡ ನಾವು ವೈರಿಗಳೆಂದು ಕೋಪಿಸುವ ॥ ಈ ಮರುಳುತನವೆತ್ತವೀರಣ । ತಾಮಸಿಕೆ ತಾನರಿಯದದೆ ರಘು । ರಾಮ ರಕ್ಷಿಸು ಬಯಲಿನಾಡಂಬರವಿದೇನೆಂದ ॥೪೦॥ ನೀನು ಖತಿಯನು ಹಿಡಿಯೆನಿನ್ನಸ । ಘಾನತನವನು ಬಲ್ಲ ಯೋಗಿಗ । ಳೇನನೆನ್ನರು ತಮ್ಮೊಳಗೆ ಕೈಯೊಯ್ದು ಮಿಗೆ ನಗುತ ॥ ಮಾನವರು ಕಡುಮೂರ್ಖರೆಂದೇ । ಮಾನಗರ್ವವ ತಡೆದೆ ಸಾಕಿ । ನ್ನೇನ ಪೇಳುವೆ ನಿನ್ನ ತಕ್ಕನು ಬಲ್ಲೆ ಹೋಗೆಂದ ॥೪೧॥ ಶತಪಿತಾಮಹರಡಗರೇ ನಿ । ಮತಿಮುರಿಯೆ ಮೇಣ್ ಭೂವಿಲಾಸ । ಸ್ಥಿತಿಯೊಳೇನು ತ್ವನ್ನವಾಗವೆ ಬೊಮ್ಮಕೋಟಿಗಳು ॥ ಅತಿಶಯದ ಮಹಿಮಾಸ್ಪದನು ನೀ । ನತಿಗಹನವೆಂಬಳತೆಗಿಂತಿದು । ಕೃತಕವಲ್ಲಾ ದೇವ ಹೇಳೆನ್ನಾಣೆ ಹೇಳೆಂದ ॥೪೨॥ ದೇವ ನೀ ಧಿಟ ಕೊಲುವೊಡೆಯು ತಾ । ಸಾವೆನೇ ತಾಸಾವನೆಂಬುದ । ದೇವರರಿಯಿರಲಾ ವೃಥಾಸಂಭಿನ್ನರೋಷದಲಿ ॥ ದೇವಸಾಮದ ಜೋಡು ತನ್ನನು । ಕಾವುದೈಮುನಿದೊಡೆಯು ನಿಮ್ಮಗೆ । ನಾವು ಹೆದರೆವು ಸಾಮಥಾರಕರೆತ್ರುಳಬಲರೆಂದ ॥೪೩॥ ಭಂಗವಲ್ಲಿದು ನಿನ್ನ ಘನತೆಗೆ । ಡಿಂಗರಿಗರೇ ಮಿಗಿಲು ನಿನಗೆಯು । ಡಿಂಗರಿಗರೇ ಬಲ್ಲಿದರು ದಾಕ್ಷಿಣ್ಯವೇನಿದಕೆ ॥ ಮಂಗಳಾತ್ಮಕ ಕೇಳು ನಿನ್ನಯ । ಹಂಗನೊಲ್ಲೆವು ಮುಕುತಿಪಥದೊಳ । ಭಂಗಮೆಂಡೆಯದಾಳಲ್ಲೈ ನಿಂಮಡಿಯ ಸಿರಿನಾಮ ॥೪೪॥ ಕಳುಹಿಕಳೆವುದು ಖ್ಯಾತಿಯನು ನೀ । ನುಳುಹಿಕೊಂಬುದು ತೇಜವನು ಧಿಟ । ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ ॥ ಅಳುಕಿ ರೋಮವು ಹುದುದಾದೊಡೆ । ಬಳಿಕತಾಡಿಂಗರಿಗನೇ ಯಿಾ । ಕಳಕಳಿಕೆಗಾನಂಜುವವನೇ ದೇವ ಹೇಳೆಂದ ॥೪೫॥ ನಚ್ಚಿಸಾಳಿನ ಬಿನ್ನಹಕೆ ಹರಿ । ಮೆಚ್ಚಿಮನದೊಳು ನಾಚಿ ಚಕ್ರವ । ಮುಚ್ಚಿದನು ಮುರಿದನು ಕಿರೀಟಿಯ ರಥದಹೊರಗಾಗಿ । ಬೆಚ್ಚಿಬೆದರುವ ಸೇನೆಗಭಯವ ಹಚ್ಚಿಕೊಟ್ಟನು ರಾಯಭೀಷ್ಮನ । ನಿಚ್ಚಟದಭಕ್ತಿಯನು ನೆನನೆನೆದೊಪೆದನಡಿಗಡಿಗೆ ॥ ಹೋದುದೊಂದಪಮೃತ್ಯು ಲೋಕಕೆ । ತೀದುದಿಲ್ಲಾಯುಷ್ಯ ಮಹದಪ । ವಾದದೇವಂಗಾಗಿ ತಪ್ಪಿತು ಮುಚ್ಚುಮರೆಯೇಕೆ ॥ ಕಾದುಕೊಂಡನು ಭೀಷ್ಮನೀಕವ । ಲೋವರನಕರಳಿಚಿದಭಕತಿಯೊ । ಳಾದರಿಸುವುದು ಪುಣ್ಯವೆಂದನು ಕಮಲಭವ ನಗುತ ॥೪೭॥ ನಡುಗುವರ್ಜುನ ದೇವನನು ತೆಗೆ । ದಡಿಗಡಿಗೆ ತಕ್ಕೈಸಿ ಭೀತಿಯ । ಬಿಡಿಸಿ ವಾಘೆಯ ಕೊಂಡುತುರಗವನೆಡಬಲಕೆ ತಿರುಹಿ ॥ ನಡಸಿದನು ಕಾಳಗಕೆ ಬಳಿಕವ । ಗಡಮುರಾಂತಕ ರಥವಚಕ್ರವ । ತ್ರುಡುಕನೆಂದಸ್ತಮಯಗಿರಿಯನು ದಿನಪ ಮರೆಗೊಂಡ ॥ ... ... ॥೪೮॥

ಅಂತು ಸಂಧಿ ೫ ಕ್ಕೆ ಪದ ೩೯೯ ಕ್ಕಂ ಮಂಗಳಮಸ್ತು.



ಆರನೇಸಂಧಿ.

||ಸೂಚನೆ|| ರಾಯಕಟಕದೊಳಿರಲು ಭೀಷ್ಮನ | ಸಾಯಬೇಕೆಂದೊಡಬಡಿಸಿ ಕವು | ಲಾಯತಾಂಬಕ ಸಹಿತ ಪಾಳೆಯಕರಸ ನಡೆತಂದ ||

||ಪದ|| ಕೇಳು ಜನಮೇಜಯಧರಿತ್ರೀ| ಪಾಲ ದಿನಮೂರಾಯ್ತು ಭೀಷ್ಮನ| ಕಾಳಗದೊಳಲ್ಲಿಂದ ಮೇಲಣವರಕಥಾಮೃತವ|| ಆಲಿಸುವುದೈ ಮೂಡಣಾದ್ರಿಯ| ಮೇಲೆ ಕೆಂಪೆಸೆಯಿತ್ತು ಘನನಿ| ಸ್ಸಾಳವೊಡೆಬಿರಿದವು ನೃಪಾಲರ ಕಟಕವೆರಡರಲಿ ||೧|| ಹಲ್ಲಣಿಸಿ ಹರಿತಂದು ಮೋಹರ| ವಲ್ಲಿಗಲ್ಲಿಗೆ ನಿಂದುದೆರಡರ| ಘುಲ್ಲಣೆಯಗಾಯದ ಗಡಾವಣೆ ಮೀರಿಗಾಡಿಸಿತು|| ಕೆಲ್ಲೆಗೆಡೆದವು ಕರಿಗಳಸುಗಳ| ಚೆಲ್ಲತಳಿತವು ತೇಜಿಗಳು ರಥ | ವೆಲ್ಲ ಹುಡಿಹುಡಿಯಾಯ್ತು ದಳ ನಿಸ್ಸಾರವಾಯ್ತೆಂದ||೨|| ಅಳಿವುದಾದಿವಸದಲಿ ಪಾಂಡವ | ಬಲದೊಳಗಣಿತಸೇನೆ ಭೀಷ್ಮರು | ಫಲುಗುಣರು ಕಾದಿದರು ದಿನಕರನಪರಜಲನಿಧಿಗೆ || ಇಳಿಯೆ ತೆಗದವು ಬಲವೆರಡು ಘೂ | ಡಲುಮುಗುಳೆ ತಾ ಕೆಂಪೆಸೆಯೆ ಕದನವ | ಕಳನ ತುಂಬಿತು ಮತ್ತೆ ಕೌರವಪಾಂಡವರಸೇನೆ ||೩|| ಬಿದ್ದುದಗಣಿತಸೇನೆ ಪಡುವಲು | ಪೊದ್ದಿದನು ರವಿ ಮತ್ತೆ ಮೂಡಣ | ಗದ್ದುಗೆಯ ವೆಂಠಣಿಸಿದನು ಕುಮುದಾಳಿ ಟೆಂಠಣಿಸೆ || ಎದ್ದುದಮುಬುತರಣಿ ಕೃತಾಂತಗೆ | ಬಿದ್ದನಿಕ್ಕಿದರಥಟರಬುಧಿಯೊ | ಳದ್ದು ಸೂರ್ಯನಬಿಂಬವೆಸೆವುದು ಮೂಡಣಾದ್ರಿಯಲಿ ||೪|| ಏಳನೆಯ ದಿನವೀಮಹಾರಥ | ರೂಳಿಗವೆ ಬಲುಹಾಯ್ತು ಕುರುಭೂ | ಪಾಲಕನ ತಮ್ಮಂದಿರಳಿವುದು ದಿವಸವೆಂಟರಲಿ || ಕೋಲವೊನೆಯಲಿ ಕೃಷ್ಣರಾಯನ | ನೋಲಗಿಸಿ ಮೆಚ್ಚಿಸಿದನಾಕ | ಟ್ಟಾಳುಭೀಷ್ಮನ ದಿವಸವೊಂಭತ್ತಾಯ್ತು ಸಮರದಲಿ ||೫|| ಇರುಳು ಕೃಷ್ಣನಮನೆಗೆ ಬಂದನು | ಧರಣಿಪತಿ ಮಗುಡದಲಿ ನಿಜಸೋ | ದರರುಸಹಿತ ಮುರಾರಿಗಾನತನಾಗಿ ಕೈಮುಗಿದು || ಸುರನದೀಸುತನಖಿಳಸೇನೆಯ | ನೊರಸಿದನು ನಮ್ಮಲ್ಲಿ ಖಾತಿಯ | ಧರಿಸಿದನು ಜಯವಧುವ ವರಿಸಿದ ದೇವ ಕೇಳೆಂದ ||೬|| ನೆರವಣಿಗೆಗುಂದಿತ್ತು ಬಲ ಕೈ | ಮರೆದರದಟರು ಬಿರುದಭಟರಿಗೆ | ಬೆರಗು ಪೊಕ್ಕುದು ಹೂಣಿಗರ ಹೋರಟೆಗಳಳುಕಿದವು || ನೆರೆಹಸಿದಹುಲಿಯಂತೆ ಸಲೆ ಕೈ | ಪರಿದದಿಗ್ಗಜದಂತೆ ಚಿತ್ರದ | ಉರುವಕೇಸರಿಯಂತೆ ಮೆರೆದಿದೆ ನಮ್ಮ ಬಲವೆಂದ ||೭|| ಹಾರಿದವು ಹೆಸರುಗಳಭಂಗದ | ಸೂರೆಗಳ ಕಟ್ಟೆದರು ತಲೆಗಳ ಮಾರುಗಳು ಮರಳಿದವು ರಣರಾಣಿಯರ ತಡೆಯೆಂದು || ದೂರಲರಿಯನು ಸುಭಟರಿಗೆ ಮನ | ಬೇರೆ ನುಡಿಬೇರಾಯ್ತು ಕದನದೊ | ಳೇರಿತಿಂಗುರಿಗೊಂಡು ತಣಿತುದು ನಮ್ಮ ಬಲವೆಂದ ||೮|| ಬಲುಶಿಳೀಮುಖರವಕೆ ಪಟುಭಟ | ರಳುಕಿದರು ವಿರಹಿಗಳವೊಲು ಸಂ | ಮಿಳಿತಶಾಸ್ತ್ರಧ್ವನಿಗೆ ಸೆಡೆದರು ಮೂರ್ಖರಂದದಲಿ || ತಳಿತಬಲಶತಕೋಟಿಗಿದಿರಾ | ಗಳಿದರದ್ರಿಗಳಂತೆ ಹರಿಪದ | ವಳಯವಿದಳಿತವಾಯ್ತು ಮೇಘವ್ರಾತದಂದದಲಿ ||೯|| ರಣರಹಸ್ಯಜ್ಞಾನಿಗಳು ಮನ | ದಣಿದರಿಂದ್ರಿಯವಶಕೆ ರಿಪುಭಟ | ಗಣವಿದಾರಣಕರ್ತವಿದ್ಯಾವೀತರಾಗಿಗಳು || ಸೆಣಸಿನಲಿ ಸಮದರ್ಶಿಗಳು ಧಾ | ರುಣಿಯಪತಿಗಳುರಾಜಸೇವಾ | ಪ್ರಳಯಮೀಮಾಂಸಾಧಿ ಮೂಢರು ನಮ್ಮ ಭಟರೆಂದ ||೧೦|| ಹರಿದರಿಂದಿನದಿನಕೆ ಶತಸಾ | ವಿರಮಹೀಶರು ಯಮನ ನಗರಿಗೆ| ಸರಿದುದುಳಿದರ ವೀರತನ ಗಾಂಗೇಯನುಪಟಳಕೆ || ಅರಿ

ಪಯೋನಿಧಿವಡಬನನು ಗೆಲ । ಲರಿದು ಜೀಯ ಮುಕುಂದ ನೀನೇ । ಕರುಣಿಸೈ ವನವಾಸವೋ ನಮ ಗೇನುಗತಿಯೆಂದ ॥೧೧॥ ಮುಗುಳುನಗೆ ನಸುಳೊಳೆಯೆ ಭೀಮಾ । ದಿಗಳಿಗೆಂದನು ಕೃಷ್ಣನರಸನ । ಸೊಗಸು ಬನದಲಿ ಬರಿಯುಮುನಿಕದನಕೇಳಿಯಲಿ ॥ ವಿಗಡತನವಂತಿರಲಿ ಭೀಷ್ಮನ । ಬೆಗಡುಗೊಳಿಸ ಲು ಪರನಹವಣ । ಲ್ಲಿಗಣಿತನ ಸಾಮದಲಿ ಮುರಿಯಲುಬೇಕು ನಮಗೆಂದ ॥೧೨॥ ದಂಡನಾಯಕತರು ಬೆ ರಣದಲಿ । ಖಂಡಿಸುವುಬಟರಾದರಿಪುಗಳ । ದಿಂಡುಗೆಡಹುತ ತೋರಿಮಣಿದೊಡೆ ಜೈಸಿ ಬದುಕುವೆ ವು ॥ ಚಂಡಬಲನೀಭೀಷ್ಮ ಮುನಿದೊಡೆ । ಖಂಡಪರಶುವಗಣಿಸನೆನೆ ಕರ । ದಂಡನಾಭನ ಮತಕೆ ನೃ ಪತಿ ಹಸಾದವೆನುತಿರ್ದ ॥೧೩॥ ಇರುಳುಗುಪ್ತದಲವನಿಪತಿ ಸೋ । ದರರುಮುರರಿಪುಸಹಿತ ಬಂದನು। ಸುರನದೀನಂದನನ ಮಂದಿರಕಾಗಿ ವಹಿಲದಲಿ॥ ಕರೆದು ಪಡಿಹಾರರಿಗೆ ಬಂದುದ। ನರುಹಲವದಿರು ಹೊ ಕ್ಕು ಸಮಯವ । ನರಿದು ಭೀಷ್ಮಂಗೀಹದನ ಬಿನ್ನಹವ ಮಾಡಿದರು ॥೧೪॥ ಬಂದನೇ ಧರ್ಮಜನು ಕ ಟಕಟ । ಕೊಂದನೇ ಕೌರವನನಿನ್ನೇ । ನೆಂದು ಮನದಲಿ ಮರುಗಿ ಮೌನದೊಳಿದ್ದ ನಿಮಿಷದಲಿ ॥ ಮಂದಿಯನು ಹೊರಗಿರಿಸಿ ಬರಹೇ । ಳೆಂದೊಡಾಗಲೆ ಕೃಷ್ಣಕುಂತೀ । ನಂದನರು ಬರಲಿದಿರುವಂದ ನು ಭೀಷ್ಮವಿನಯದಲಿ ॥೧೫॥ ಅರಸಿ ಬರಲಾಪಾಯನಿಕರಕೆ । ತೆರಹುಗುಡದನಿಜಸ್ವರೂಪನು । ಕುರು ಹುಗೊಂಡೊಡೆ ಮಂದಿವಾಳವೆ ದೇವ ನೀನೊಲಿದು ॥ ಅರಸಿಕೊಂಡೈತರಲು ನಾನೇ। ಸರವಸಾಗಲಿ ನಿ ಮ್ಮಭೃತ್ಯರ । ಮೆರೆವಪರಿಯಿದು ಕೃಷ್ಣ ಜಯಜಯಯೆನುತ ನಿಡುಗೆಡೆದ॥೧೬॥ ನಗುತ ಹರಿ ಗಂಗಾ ಕುಮಾರನ । ನೆಗಹಿದನು ಬಳಿಕಿವರು ರತುನಾ । ಳಿಗಳ ಕಾಣಿಕೆಯಿತ್ತು ಮೈಯಿಕ್ಕಿದರು ವಿನಯದಲಿ ॥ ತೆಗೆದು ಬಿಗಿಯಪ್ಪಿದನು ಯಮಜಾ । ದಿಗಳ ಮನ್ನಿಸಿ ವೀಳೆಯವನಿ । ತ್ತೊಗುಮಿಗೆಯ ಹರುಷದ ಲಿ ಹೊಂಪುಳಿವೋದನಾಭೀಷ್ಮ ॥೧೭॥ ಅರಿಯ ಬೀಡಿದು ರಾಯನನುಜನು । ದುರುಳ ರುಚಿತಾನುಚಿ ತಗೇಡಿಗ । ಳಿರುಳು ದೊರೆಗಳು ನೀವು ಕಾಲೋಚಿತದಲೈತಹರೆ ॥ ಹರಿಯ ಬಲುಹುಂಟಾದೊಡೆಯು ಧಿ । ಕ್ಕರಿಸಲಾಗದು ರಾಜಮಂತ್ರವ । ನರಸ ಸಾಕಿನ್ನೇನು ಬಿನ್ನಹಮಾಡು ನಿಜಮತವ ॥೧೮॥ಅರಿಯ ನುಚಿತವ ನಮ್ಮಭಾರದ। ಹೊರಿಗೆ ನಿಮ್ಮದು ಕೃಷ್ಣನದು ನಾ । ವರಿದೊಡೆಯು ಮೈಮುರಿದೊಡೆಯು ರಕ್ಷಕರು ನೀವೆಮಗೆ ॥ ಅರಿಯನೇನುವನೆಂದು ಸಲಹಲು । ಮರೆವಳೇ ಬಾಲಕನ ತಾಯ್ತಾ । ವುರುವ ವಜ್ರದ ಜೋಡು ನೀವಿರಲಂಜಲೇಕೆಂದ ॥೧೯॥ ಎಮಗೆ ಜಯವೆಂತಹುದು ರಾಜ್ಯ । ಭ್ರಮೆಯ ರಾಜ ಸಬುದ್ಧಿಗಳ ವಿ । ಕ್ರಮವಿಹೀನರು ನಾವು ನೀವ್ ತ್ರೈಲೋಕ್ಯವಿಜಯಿಗಳು ॥ ಸಮರ ಸೋತುದು ನ ಮ್ಮ ಸುಭಟರು । ಯಮನಸೇವಕರಾಯ್ತು ಕೃಪೆಯಿಂ । ದೆಮಗೆ ನಿಮ್ಮಭಿಮತವ ಬೆಸಸುವುದೆಂದನಾ ಭೂಪ ॥೨೦॥ ಆಕೆವಾಳರು ಭೀಮಪಾರ್ಥರು। ನೂಕದಾಹವ ವುಳಿದಸೇನಾ। ನೀಕದಿಂ ನಿಮ್ಮಿಂದಸವೆದು ದು ರಾಜಕುಲಸಹಿತ ॥ ಸಾಕುವೊಡೆ ಮೇಣ್ಕೊನಿದುಕೊಲುವೊಡೆ । ಬೇಕುಬೇಡೆಂಬವರದಾರೆನೆ। ಕಾಕನಾ ಡೆನು ಬೆಸಸು ನಿಮ್ಮಭಿಮತವನೆನಗೆಂದ ॥೨೧॥ ತೀದುದೆಮ್ಮಯ ಸೇನೆ ನಸುಸೊ । ಪ್ಪಾದುದಿಲ್ಲರಿಸೇ ನೆ ನಿಮ್ಮನು । ಕಾದಿಕೊಲುವೊಡೆ ಮೊಲೆಯನೂಡಿದತಾಯಿ ಜಾಹ್ನವಿಯೆ॥ ಕಾದಿದೆವು ಕಟ್ಟಿದೆವು ಗೆಲಿದೆ ವು। ಮೇದಿನಿಯನಿನ್ನೇನು ಮುನ್ನಿನ। ಹೋದವನವಾಸಕ್ಕೆ ನೇಮವ ಕೊಟ್ಟು ಕಳುಹೆಂದ ॥೨೨॥ ಮನ್ನಿ ಸ ವೊಡೀವುಭಯರಾಯರು। ನಿನ್ನ ಮೊಮ್ಮಂದಿರುಗಳಿದರೊಳು।ನಿನ್ನ ಕುಣಿಕೆಯಲಿಹುದು ಕುಂತೀಸುತರ

ಜೀವನವು॥ ನಿನ್ನನೇ ನಂಬಿಹರು ನೀನೇ। ಮುನ್ನಶಿಶುತನದಿಂದ ಸಲಹಿದ। ಮುನ್ನಣೆಯು ನೀ ಬಲ್ಲೆಯೆಂ ದನು ದಾನವಧ್ವಂಸಿ ॥೨೩॥ ಎನಲು ಮೊಮ್ಮಂದಿರುಗಳೆಳಲಿನ । ಘನತೆಯನು ಕಿವಿಗೊಟ್ಟು ಕೇಳಿದ್ದು। ನನೆದುದಂತಃಕರಣ ಕಂಬನಿದುಂಬಿ ದುಗುಡದಲಿ ॥ ತನಗೆ ಸಾವು ಸಮೀಪ ಮಗನೇ । ನಿನಗೆ ಭಯಬೇ ಡಿನ್ನು ಕುರುಪತಿ । ದನುಜವೈರಿಗೆ ತಪ್ಪಿದಂದೇ ನಿಮಗೆ ಜಯವೆಂದ ॥೨೪॥ ಕೊಂದೆನಗಣಿತರಾಯರ ನು ತಾ। ಮುಂದಿಯನು ನಿಮಗಾವು ಮುನಿಯೆವು। ಬಂದು ಪಾರ್ಥನ ರಥವ ತಡೆದೊಡೆ ನೀವು ಧೃತಿಗೆ ಡದೆ ॥ ಇಂದಿನುದಯದಲಾತಿ ಖಂಡಿಯ । ತಂದು ನಿಲಿಸಿದೊಡೆಮ್ಮ ತನುವನು । ಹಿಂದುಗಳೆಯದೆ ನಿಮಗೆ ತೆರುವೆನು ಕಂದ ಕೇಳೆಂದ ॥೨೫॥ ಗಂಡುತನ ತಾನೆರವು ನಿಮ್ಮ ತಿ। ಖಂಡಿಯನು ಮುಂದಿರಿಸ ಲಾತನ । ಕಂಡುನಾನಾಕ್ಕಳಗವವಮಾಡೆನು ಕೈದುಗಳ ಬಿಸುಟು ॥ ಚಂಡಿತನವನು ಮಾಡು ಮಿಗೆ ಕೈ । ಕೊಂಡು ಫಲುಗುಣನೆಸಲು ತನುವನು । ದಿಂಡುಗೆಡಹಲು ಬಳಿಕ ಗೆಲುವಿರಿ ಕೌರವೇಶ್ವರನ॥೨೬॥ಎನ ಲು ಶಿವಶಿವಶಿವ ಮಹಾದೇ । ವೆನುತ ಕಿವಿಗಳ ಮುಚ್ಚಿದನು ಕಂ । ಬನಿಯ ಬೆರಳಲಿ ಮಿಡಿದು ನೊಂ ದನು ಪಾರ್ಥ ಹೃದಯದಲಿ ॥ ಎನಗೆ ಜಯವಾಯ್ತಿದು ಕೃತಾರ್ಥರು । ಜನದಲೆಮ್ಮವೊಲಾರು ಬಳಿ ಕೇ । ನೆನಗೆ ನಿಂಮವೊಲಾರು ಹಗೆಗಳು ಜಗದೊಳುಂಟೆಂದ ॥೨೭॥ ಅಳಿವನಡಪಿಯೊಳಯ್ಯನೆಲ್ಲಿಂ । ಬಳಿಕ ಭೀಷ್ಮನ ತೊಡೆಯತೊಟ್ಟಲಿ । ನೊಳಗೆ ಬೆಳೆದೆವು ಸಲಹಿದನು ಧೂಳಾಟವೊದಲಾಗಿ ॥ ಬಳಿಯ ಲೆರಕೆಗಳೆಮಗೆ ಭಾವಿಸಿ । ನೆಲನ ಕೊಟ್ಟನು ಭೀಷ್ಮನೀತನ । ಕೊಲೆಗೆ ಬಯಸುವಮನವಿದೆಂತುಟೊ ಕೃಷ್ಣ ಹೇಳೆಂದ ॥೨೮॥ ಈತನನು ಕೊಲಲಾವು ಭುವನ । ಖ್ಯಾತರಹೆವೈ ಯಿಾಗ ಸುಡುಸುಡು ಭೂತ ಳವನೀಬೊಡ್ಡಿಗೋಸುಗ ಸುಟ್ಟು ಸುಕೃತವನು ॥ ಘಾತಕರು ಪಾತಕರು ತೆಗೆತೆಗೆ । ಯೀತರವದಿರು ಪಾಂಡುತನಯರ । ಮಾತನಾಡದಿರೆಂಬಕೀರ್ತಿಯ ನೋಂತುದಿಲ್ಲೆಂದ ॥೨೯॥ ನಿಲ್ಲು ಫಲುಗುಣ ಕೇ ಳು ಹೊಲ್ಲೆಹ । ವಲ್ಲ ಸಕಲಕ್ಷಾತ್ರಧರ್ಮವ । ಬಲ್ಲೆ ನೀನೇನಜ್ಞನೇ ನೃಪನೀತಿಬಾಹಿರನೆ ॥ ಎಲ್ಲಿಯಪ ಕೀರ್ತಿಗಳು ಕೀರ್ತಿಗ । ಳೆಲ್ಲ ವಿಧಿವಶ ನಿಂನಕಾರಣ । ವಿಲ್ಲ ನೀಕೊಲಲೇಸರಾತನು ಪಾರ್ಥ ಹೇಳೆಂದ ॥೩೦॥ ಯಂತ್ರಿ ಮಿಡಿದೊಡೆ ಕಾದಿ ಬೀಳ್ವವು । ಯಂತ್ರಮಯರೂಹುಗಳು ವಧೆಯಾ । ಯಂತ್ರಿಗೋ ಹಾಹೆಗಳಿಗೋ ನೀ ಹೇಳು ನಿಶ್ಚಯವ ॥ ಯಂತ್ರಿ ಕೃಷ್ಣನು ಸಾವು ನೀವೀ । ತಂತ್ರಸಕಲ ಚರಾಚರಂ ಗಳು । ಯಂತ್ರರೂಹುಗಳಲ್ಲಿ ಕಾರಣವಿಲ್ಲ ಕೇಳೆಂದ॥೩೧॥ಬಂದು ಮುಖದಲಿಜಗವ ಹೂಡುವ। ನೊಂ ದುಹೆಸರಲಿ ಜಗವ ಸಲಹುವ । ನೊಂದು ಪರಿಯ ಯುರುಹುವನುನಯನಾಗ್ನಿಯಲಿ ಜಗವ ॥ ಕೊಂದ ಹಗೆಯಲ್ಲೀತ ಸಲಹಿದ। ನೆಂದು ಮೋಹಿತನಲ್ಲ ಪರಮಾ। ನಂದಹಮಯನಿದಕೆ ಕಾರಣವಿಲ್ಲ ನಿನಗೆಂದ ॥೩೨॥ ಕಾವೊಡೀತನ ಕರುಣ ಮುನಿದೊಡೆ। ಸಾವೆವೀತನ ಕೈಯಬಾಯಲಿ । ನೀವು ತಾವೀಮತ್ತ ಕಲ ಬರು ಮುನಿದೊಡಂಜುವೆನೆ ॥ ನಾವು ಹೇಳಿದಮಾತು ನಿನಗಿ । ನ್ನಾವಭಯವಿಲ್ಲಿನ್ನು ಚಿತ್ತದ। ಭಾವಶು ದ್ಧಿಯೊಳೆಮ್ಮ ನಂಬಿರಿ ಹೋಗಿ ನೀವೆಂದ॥೩೩॥ ಹರುಷ ಬಲಿದುದು ಮನದಸಂಶಯ ಹರೆದುದಾಹವ ವಿಜಯವಾರ್ತೆ । ಹರಹಿನಲಿ ಹೊರೆಯೇರಿ ಹೊಂಪುಳಿವೋದನಡಿಗಡಿಗೆ ॥ ಸುರನದೀನಂದನನು ಹರ ಸಿದ । ಹರಕೆಯನು ಕೈಕೊಂಡು ಬೀಳ್ಕೊಂ । ಡರಸ ಮುರರಿಪುಸಹಿತ ಬಂದರುತಮ್ಮಪಾಳಯಕೆ॥೩೪॥

ಅಂತು ಸಂಧಿ ೬ಕ್ಕಂ ಪದ ೪೦೩ಕ್ಕಂ ಮಂಗಳಮಸ್ತು.

## ಏಳನೆಯ ಸಂಧಿ.

||ಸೂಚನೆ|| ಬೆಗಡುಗೊಂಡರು ದ್ರೋಣಶಲ್ಯಾ | ದಿಗಳು ಪಾರ್ಥನ ವಿಕ್ರಮಾನಳ| ಹೊಗೆದು ಸುರಿದುದು ರಾಯಕೌರವಸೈನ್ಯಸಾಗರವ ||

||ಪದ|| ಸೂಳು ಪಿಂಗಲ್ಕೈರಿವಘನನಿ | ಸ್ಸಾಳತತಿ ಮುಂಜಾವದಲಿ ಹೆ | ಗ್ಗಾಳೆ ಮೊರೆದವು ಕುಣಿದು ಗಜಬಿದವಾನೆಕುದುರೆಗಳು || ತೂಳುವರಿಗಳಭಟರ ಹಾಳಾ| ಹಾಳಿ ದೆಸೆಗಳ ಬಗಿಯೆ ಮೂಡಣ | ಶೈಲಮಂಚದಲುಪ್ಪವಡಿಸಿದ ಸಬುಜಿನೀರಮಣ ||೧|| ಉಳಿವುಸಗಿ ತರಹರಿಸಿ ಖುರದಲಿ | ನೆಲನ ಕೆರೆದವು ಕಡುಗುದುರೆ ಹಿಂ | ದೊಲೆದು ಕಂಭವ ಮುರಿದು ಬಿಕ್ಕವು ಸೊಕ್ಕಿದಾನೆಗಳು || ಹೊಳೆಹೊಳೆವಹೊಂದೇರು ನೆರೆದವು | ತಳಪಟಕೆ ಹೊದರೆದ್ದು ಗಗನದ | ಹೊಲಿಗೆ ಬಿಡೆ ಬೊಬ್ಬಿರಿದು ಕವಿದುದು ವಿಗಡಪಾಯದಳ ||೨|| ಲಲಿತಮಂಗಳಪಾಠಕರ ಕಳ | ಕಳದಲುಪ್ಪವಡಿಸಿದನವನಿಪ | ತಿಲಕನನುಜರುಸಹಿತ ವೈದಿಕಕ್ರಿಯೆಯನನುಕರಿಸಿ || ನಳಿನನಾಭನ ಮಧುರವಾಣಿಯು | ಲುಳಿತಪರಮಾಶೀರ್ವಚನಪಂ | ಕಲಿತಕವಚಿತಕಾಯ ಪಾಂಡವರಾಯ ಹೊರವಂಟ ||೩|| ಗಗನಸರಸಿಯ ಪುಂಡರೀಕಾ | ಳಿಗಳೊ ವಿಮಲಚ್ಛತ್ರಪಙ್ತಿಯೊ | ಗಗನಗಂಗಾನದಿಯ ಕಾಲುವೆಯೋ ಪತಾಕೆಗಳೋ || ಗಗನಕುಂಭಿಯುಗುಳದಕೆಲಚೌ| ರಿಗಳೊ ಸೀಗುರಿಗಳೊ ಕೃಪಾಣವೊ | ಗಗನಪೀವರತಾಳಪತ್ರಾವಳಿಯೊ ಹೊಸತಾಯ್ತು ||೪|| ಕುಬ್ಬಿಡುವ ಬೊಬ್ಬೆಗಳು ಬಿಲುದನಿ | ಗಬ್ಬರಿಸಿದವು ನಭವ ಗಜಹಯ | ದಬ್ಬರಣೆ ಗರುವಾಯಿಗೆಡಿಸಿತು ಸಿಡಿಲಸಡಗರವ || ಉಬ್ಬಿ ಬಿರಿದುದು ನಿಖಿಲವಾದ್ಯದ| ನಿಬ್ಬರದ ನಿಡುದನಿಗೆ ಜಲನಿಧಿ| ಗಬ್ಬವಿಕ್ಕಿತು ಸೈನ್ಯಜಲಧಿಯ ಬಹಳ ಗರ್ಜನೆಗೆ ||೫|| ಕುಣಿದು ಮುಂಚಿತು ಸೇನೆ ಸಮರಾಂ | ಗಣದ ಕೇಣಿಯಬಾಲಕರು ಸಂ | ದಣಿಸಿ ಹೊಕ್ಕರು ಜಯವಧೂಟೀವಿರಹಕಾತುರರು || ಗಣನೆಯಿಲ್ಲದಗಜಹಯದ ಭಾ| ರಣೆಯ ಭಾರಿಯಭಟರೊಡನೆ ಧ | ಟ್ಟಣೆಯಮೇಲೆ ಮಹೀಶ ಪೊಕ್ಕನು ಕಾಳಗದ ಕಳನ ||೬|| ಉದಯವಾಗದಮುನ್ನ ಕಳನೊಳು | ಹೊದರುಗಟ್ಟಿದವೈರಿಸೇನೆಯ | ಹದನಿವರಪಾಳಯಕೆ ಬಂದುದು ದಳದಕಳಕಳಿಕೆ || ಸದೆದುದನಿಬರ ಕಿವಿಯನೊಡೆತುಂ | ಬಿದವು ನಿಸ್ಸಾಳೌಘ ದಿಕ್ಕಿನ | ತುದಿಯ ತಿವಿದವು ಮೀರಿ ಗಳಹುವ ಗೌರುಗಹಳೆಗಳು||೭|| ಅರಸನುಪ್ಪವಡಿಸಿದನವನೀ| ಶ್ವರವಿಹಿತಸಂಧ್ಯಾಭಿಧಾನದಿ | ವರಮಹೀಸುರವರ್ಗಸತ್ಕಾರವನು ನೆರೆಮಾಡಿ || ಸುರನದೀಜನ ಮನೆಗೆ ಬ್ಬರೆಲಂ | ದಿರುಳ ಕಡೆಯಲಿ ನೃಪಮತವ ವಿಸ್ತರಿಸಿ ವಿರಚಿಸಿ ಜೋಡತೊಟ್ಟನು ರಥಕೆ ಮಂಡಿಸಿದ ||೮|| ಇಂದಲೇ ಪಾಂಡವರ ಪರಮಾ | ನಂದ ಚಿತ್ತಕೆ ಧೂಮದರ್ಶನ | ವಿಂದಲೇಕೌಂತೇಯರಿಗೆ ಸುರಪುರದವ್ಯಾಹಾಳಿ || ಇಂದಲೇ ಪವನಜನ ಪಾರ್ಥನ | ಸಂದವಿಕ್ರಮವಿಷಕೆ ಗಾರುಡ | ವಿಂದೆನುತ ಬೊಬ್ಬಿರಿದು ನೆರೆದುದು ಸಕಲಕುರುಸೇನೆ ||೯|| ತರುಣರವಿಗಳ ಪಙ್ತಿಗಳ ಸಂ | ವರಿಸದಿರರೆನೆ ಮಾಣಿಕಂಗಳ ತ | ರತರದಕೀಲಣದ ಹೊಂಗೆಲಸದ ಸುರೇಖೆಗಳ || ಕೊರಳಹಾರಾವಳಿಯ ರಶ್ಮಿಯ | ಹೊರಳಿಗಳ ಹೊದಕೆಗಳ ಕವಚದ | ಲರಿದಿಶಾಪಟಭೀಷ್ಮ ಮೆರೆದನು ರಥದಮಧ್ಯದಲಿ ||೧೦|| ವೀರಸೇನಾಪತಿಯ ಸನ್ನೆಗೆ | ಭೂರಿಬಲ ಹಬ್ಬಿದುದು ದಿಕ್ಕುಗ | ಳೋರಣದಿ ಹಿಗ್ಗಿದವು ತಗ್ಗಿದರಹಿಪಕೂರುಮರು || ಚಾರುಚಮರದ

ಸಿಂಧಸತ್ತಿಗೆ । ಯೋರಣದ ಕಲ್ಪಾಂತಮೇಘದ । ಭಾರಣೆಯನೊಡ್ಡೈಸಿ ದಟ್ಟೈಸಿತ್ತು ಕುರುಸೇನೆ ॥೧೧॥ ಭುವನಗರ್ಭಿತವಾಯ್ತು ತಲೆ ಮಾ । ಧವನ ಜಠರದವೊಲು ನೆರೆಭಾ । ಗವತರಂತಿರೆ ವಿಷ್ಣುಪದ ಸಂತಪ್ತತನುವಾಯ್ತು ॥ ರವಿಯವೊಲು ಶತಪತ್ರಸಂಘಾ । ತವನು ಪಾದದಲಣೆದು ಕೆಂದೂ । ಳವಗಡಿಸೆ ಕುರುಸೇನೆ ಕೈಕೊಂಡುದು ರಣಾಂಗಣವ ॥೧೨॥ ಹೊಗರೊಗುವಝಳಪಿಸುವಡಾಯುಧ । ನೆಗಹಿತೂಗುವಲೌಡಿಗಳ ಮೊನೆ । ಝುಗಝುಗಿಸೆಝಾಡಿಸುವಸಬಳದ ತಿರುಹುವಂಕುಶವ ॥ ತೆಗೆದೊಗುವಬಿಲ್ಲುಗಳ ತಿರುವಿನೊ । ಳುಗಿವಕೂರಂಬುಗಳ ಸುಭಟಾ । ಳಿಗಳೊಡನೆ ಗಾಂಗೇಯ ಪೊಕ್ಕನು ಕಾಳಗದ ಕಣನ ॥೧೩॥ ವಿತತವಾಜಿವ್ರಜದ ಘನಹೇ । ಷಿತದ ಘುಲ್ಲಣೆ ಗಜದಳದ ಬೃಂ । ಹಿತದ ಬಹಳಿಕೆ ರಥಪಯದಚಿತ್ಕೃತಿಯ ಚೆಪ್ಪರಣೆ ॥ ನುತಪದಾತಿಯ ಗರ್ಜನೆಯಗಾ । ಢತೆ ಧನುರ್ಧರರವದರೌದ್ರಾ ಹತಚಟಾಳಿಸಲೊಡ್ಡಿದರು ಮಂಡಳಿಸಿ ಮೋಹರವ ॥೧೪॥ ಚೂಣಿ ತಲೆಯೆತ್ತಿದವು ಹರಣದ । ವಾಣಿಕೇಣಿಯ ಕುಹಕವಿಲ್ಲದೆ । ಗೋಣುಮಾರಿಗಳೋಲಗದ ಹಣರುಣವನೀಗಿದರು ॥ ಹೂಣಿಗರು ಹುರಿಬಲಿದುಹಾಣಾ । ಹಾಣಿಯಲಿ ಹೊಯ್ದಾಡಿದರು ಘನ । ಶೋಣಸಲಿಲದಹೊನಲು ಹೊಯ್ದುದ್ದು ಹೊಗುವತವಕಿಗರ ॥೧೫॥ ಕೋಡಕೈಗಳು ಭಟರಲಂದೆಡೆ । ಯಾಡಿದವು ಹೆಗಲೆದ್ದವರಿಗೆಯ ನೀಡಿವೈಮಣಿದೌಂಕಿ ತಿವಿದಾಡಿದರು ಸಬಳಿಗರು ॥ ಕೂಡೆ ತಲೆವರಿಗೆಗಳಲುರೆ ಕೈ । ಮಾಡಿದರು ಖಡ್ಗಿಗರು ಧಟ್ಟಿನ । ಜೋಡುಜರಿಯಲು ಪೊಕ್ಕು ಬೆರಸಿದವಾನೆಕುದುರೆಗಳು ॥೧೬॥ ಹರಿದು ಮೊನೆಕುತ್ತಿನಲಿ ನೆತ್ತರು । ಸುರಿದವರೆವೊಯ್ಲಿನಲಿ ಖಂಡದ । ಹೊರಳಿತಳಿತುದು ಕಾಯವಜಿಗಿಜಿಯಾಯ್ತು ಲೌಡಿಯಲಿ ॥ ಸರಳಸೈಧಾರೆಯಲಿ ಹಾಯ್ದವು । ಕರುಳು ಕಬ್ಬುನಕೋಲಿನಲಿ ಕ । ತ್ತರಿಸಿದವು ಕಾಲುಗಳು ಕೌತುಕವಾಯ್ತು ಸಂಗ್ರಾಮ॥೧೭॥ ಕಡಿದು ಚಿಂಮಿದಬೆರಳುಗಳ ಹಿಂ । ಮಡಿಯಗಾಯದ ನಾಳ ಹರಿದೊಡೆ । ಮಡಿದಗೋಣಿನಬೆಸುಗೆ ಬಿರಿದಕಪಾಲದೋಡುಗಳ॥ಉಡಿದತೊಡೆಗಳ ಹರಿದಹೊಟ್ಟೆಯ। ಹೊಡೆಮುರಳಿದಾಲಿಗಳ ತೋಳಿನ । ಕಡಿಕುಗಳ ರಣಮಹಿ ಭಯಾನಕರಸಕೆ ಗುರುತಾಯ್ತು ॥೧೮॥ ಕೊರಳ ತೆತ್ತುದು ಚೂಣಿ ರಣಮು । ಖ್ಯರಿಗೆ ಹೇಳಿಕೆಯಾಯ್ತು ಮೋಹರ । ವೆರಡರರಲಿ ಹೆಸರುಳ್ಳ ನಾಯಕವಾಡಿ ನಲವಿನಲಿ ॥ ಕರಿತುರಗರಥಪಾಯಿದಳದಲಿ । ಹೊರಳಿಗಟ್ಟಿತು ಬಹಳಲಗ್ಗಿಯ । ಧರಧುರದದೆಖ್ಖಾಳ ಮಿಗೆ ನೂಕಿದರು ಸಂಗರಕೆ ॥೧೯॥ ತಳಿತಸತ್ತಿಗೆಗಳ ಪತಾಕಾ । ವಳಿಯ ಪಡಪಿನ ಬಿರಿದಿನುಬ್ಬಟೆ । ಗಳ ವಿಡಾಯಿಯ ಸಿಂಧಸೀಗುರಿಸೆಳೆಯಸುರಿವುಗಳ ॥ ಕಳಕಳಿಕೆ ಕಡುಹೇರಿ ತಳಪಟದೊಳಗೆ ತಲೆದೋರಿದರು ಫಡಫಡ। ಫಲುಗುಣನ ಬರಹೇಳೆನುತ ದ್ರೋಣಾದಿನಾಯಕರು॥೨೦॥ ದೊದ್ದೆತಗೆಯಲಿ ಪಾರ್ಥಪವನಜ। ರಿದ್ದರಾದೊಡೆ ಬರಲಿ ಸಮರವ। ಹೊದ್ದಲಾಪಡೆ ಹೊಗಲಿ ಹರಿ ತೋರಲಿ ಸಹಾಯಿಕೆಯ ॥ ಇದ್ದಡೆಯ ರಣವಿಜಯವನಿತೆಗೆ। ಬಿದ್ದಿನರು ದ್ರುಪದಾದಿರಾಯರ । ಹೊದ್ದಿಸಲು ಬೇಡವರಿಗಂಜವೆವೆನುತ ನೂಕಿದರು॥೨೧॥ ಗುರುತನುಜವೃಷಕೇತುಮಾದ್ರೇ। ಶ್ವರಜಯದ್ರಥಶಕುನಿದುಸ್ಸಹ। ಗುರುಸುಶರ್ಮವಿಕರ್ಣಭೂರಿಶ್ರವಜಯದ್ರಥರು ॥ ಧರಣಿಪತಿಭಗದತ್ತಯವನೀ । ಶ್ವರಕಳಿಂಗಸುಕೇತುದುರ್ಜಯ।ದುರುಳದುಶ್ಶಾಸನರುಲಂಬಕರೈದಿದರು ರಣವ॥೨೨॥ಗೆದ್ದೊಡೆಯುಗೆಲವಿಲ್ಲಹಾರುವ। ರುದ್ದುರುಟತನಕೇನನೆಂಬೆನು।ಗದ್ದುಗೆಯ ಹೊರಗರಸು ಕರೆದೊಡೆ ಭವವ ಮರೆದಿರಲಾ॥ ಹದ್ದುಕಾಗೆಯ ಮನೆ

ಯಬಾಣಸಿ । ವಿದ್ಯೆಯೆಮ್ಮದು ಯಮುನನಿಳಯಕೆ । ಬಿದ್ದಿನರು ನೀವೆಂದೆನುತ ವೈರಾಟ ಹೊರವಂಟ ॥೨೩॥ ನಕುಲಕುಂತೀಭೋಜಸುತಸೋ । ಮಕಘಟೋತ್ಕಚದ್ರುಪದಶತವಿಂ ।ಧ್ಯಕಶತಾನೀಕಾಭಿಮನ್ಯುಯುಯುತ್ಸುಸೃಂಜಯರು ॥ ಸಕಲನಾಯಕರಂದು ಯುದ್ಧೋ। ದ್ಯಕುತರಾದರು ಚಕಿತಚಾಪದಿ। ಮುಕುತಶಸ್ತ್ರಾವಳಿಯ ಮಳೆಗಾಲವನು ನಿರ್ಮಿಸುತ ॥೨೪॥ ಒಡಿದನಶ್ವತ್ಥಾಮ ದ್ರುಪದನ । ಪಡೆಯೊಡನೆ ಬವರವನು ಕೃಪ ಮುಂಗುಡಿಯೊಳಗೆ ಹೊಕ್ಕಿರಿದು ತಡೆದನು ಸಾತ್ಯಕಿಯ ರಥವ ॥ ಕಡುಹ ಮಿಗೆ ಮೈದೋರಿ ಪವನಜ । ನೊಡನೆ ಗುರು ಕಾದಿದನು ರಾಯನ । ನುಡಿಸಿ ಕೌರವರಾಯ ತಾಗಿದನಾಹವಾಗ್ರದಲಿ ॥೨೫॥ ಸೆಣಸು ಮಿಗಿಲಭಿಮನ್ಯುಭೀಷ್ಮರ । ಕೆಣಕಿದನು ದುಶ್ಶಾಸನನು ಫಲು । ಗುಣನ ತರುಬಿದನಾಘಟೋತ್ಕಚನೊಡನೆ ಭಗದತ್ತ ॥ ಕಣೆಗೆದರಿ ಸಹದೇವ ನಾರಾ । ಯಣನ ಬಲವನು ಬೆರಸಿ ಮತ್ಸ್ಯನ। ಹೊಣಕೆಗೈದಿ ಸುಶರ್ಮ ಕಾದಿದನಾವಿರಾಟನಲಿ ॥೨೬॥ ಬೆರಸಿ ಹೊಯ್ದರು ತಿವಿದರೆಚ್ಚರು । ಹರೆಗಡಿದರರೆಗಡಿದರೌಂಕಿದ । ರೆರೆದರಿರ್ರ್ಬೊರಟಿಸಿದರು ತರಿದರು ತುಳುಕಿತೂರಿದರು॥ ಸರಳು ಸವೆಯಲು ಚೋಡು ಹರಿಯಲು । ತುರಗ ಧೂಪಿಸಿ ಸಾರಥಿಯ ಕೈ । ಮುರಿಯೆ ಕಾದಿತು ರಾಯನಾಯಕರುಭಯಸೇನೆಯಲಿ ॥ ಕೆಲಬರಾಯುಧ ಮುರಿದು ಸಾರಥಿ । ಯಳಿದು ಕೆಲಬರು ರಥ ವಿಸಂಚಿಸಿ । ಕೆಲರು ಕೆಲಬರು ಬಳಲಿದರು ಘೋರಾಯುಗಾಯದಲಿ ॥ ಕೆಲರು ಜಱುಗಿತು ಕಂಡವುಖದಲಿ । ಕೆಲರು ಹರೆದುದು ಕಲುಮನದ ಕಡು । ಗಲಿಗಳಚ್ಚಾಳಾಗಿ ನಿಂದರು ಕೆಲರು ಕಾಳಗಕೆ॥೨೮॥ ಬಿರಸೂರೆಯ ಕಟ್ಟಿ ಹಿಂಗುವ । ಗಾರುತನ ತಾನೇನು ಸುಡು ಮುಂ । ಮೊರಿಗಳ ಮಾತೆತ್ತಲಡಗಿತು ಬಿರುದಸೈನಿಕರ ॥ ಹಾರಿಹೋಯಿತು ವೀರರಸ ತಲೆ । ದೋರಹೆಳ್ಳೆ ರಣಕೆನುತ ಕೈ । ಮಿಾರಿ ಕವಿದುದು ದ್ರುಪದಕೈಕೆಯಮತ್ಸ್ಯಸೃಂಜಯರು ॥೨೯॥ ಕಡುಹು ಮುರಿದುದು ಕೌರವೇಂದ್ರನ ।ಪಡೆಯ ತರಹರತಕ್ಕುಗೆಟ್ಟುದು । ಮದಮುರಿಯದಂಘೈಸಿದರು ದುಶ್ಶಾಸನಾದಿಗಳು ॥ ಕಡಲು ಮೈದೆಗೆದಂತೆ ಬಹಬಲು । ಪಡೆಯ ಕಂಡನು ದ್ರೋಣ ಸಡಿಫಡ । ಪಡೆಯ ತೆಗೆದೊಡೆ ರಾಯನಾಣೆಯೆನುತ್ತ ಮಾರಾಂತ ॥೩೦॥ ಸಾಹಸಿಕರೈ ದ್ರುಪದರಿವದಿರ। ಜೋಹದೋಲೆಯಕಾರತನ ಮನ । ಗಾಹಿನಲಿ ಹೆಮ್ಮಕ್ಕಳವದಿರು ಶಿವಶಿವಿವದಿರಿಗೆ ॥ ಆಹವದಲೋಸರಿಸಿದೊಡೆ ಭಟ। ಸಾಹಸಿಕೆ ತಲೆಯೊಡ್ಡದೇ ಸುಡು। ದೇಹವೇತಕೆ ದೆಸೆಯೆಸಾಕೆನುತೈದಿದನು ದ್ರೋಣ॥೩೧॥ಆವುದಂತರವನಗಕಳಭಕ್ಕೆ । ರಾವತಕೆ ಮರುಭಾಪು ದ್ರೋಣನ ಡಾವರಕೆ ಪಾಂಚಾಲನೇ ಸೈರಣೆಗೆ ಸೇರುವನೆ ॥ನಾವು ದ್ರುಪದನಕಾಣೆವಾವೆಡೆ। ಗಾವಿರಾಟನು ಸರಿದನೆತ್ತಲು। ತೀವಿದರು ಸೃಂಜಯನೃಪರು ನಾವರಿಯೆವಿದನೆಂದ ॥೩೨॥ ಒಗ್ಗೊಡೆದುದರಿಸೇನೆ ಸರಿದುದು । ತಗ್ಗಿದುಬ್ಬಾಳುಗಳ ನುಡಿಮನ । ನೆಗ್ಗಿದವು ಮಂಡಳಿಕರಿಗೆ ತಲೆಮುಸುಕು ಪಸರಿಸಿತು ॥ ಲಗ್ಗೆವರಿಗಳಿಗಕಟ ಮೌನದ । ಸುಗ್ಗಿಯಾಯಿತು ಬಿರುದ ಬೈಚಿಡು । ವಗ್ಗಳೆಯರೊಳಸರಿಯೆ ಕಂಡನುಪಾರ್ಥ ಖತಿಗೊಂಡ ॥೩೩॥ ರಣಕೆ ತವಕಿಸಿ ಬಳಿಕ ತಾಗುವ । ಕಣೆಯಧಾಳಿಗೆ ದಳ್ಳುಬಾರುವ । ಗುಣವಿದೆಂತುಟೊ ಭಂಡರಿವದಿರು ಸಾರಹೇಳೆನುತ ॥ ಕೆಣಕಿದರು ಬಿಲುದಿರುವಿನುರುಮಾ । ರ್ಗಣದ ಹೊದೆಗಳ ಕೆದರಿ ಸಮರಾಂ । ಗಣಕೆ ಸಮ್ಮುಖವಾದನರ್ಜನ ಸಿಂಹನಾದದಲಿ ॥೩೪॥ ಸಾರಬೇಹುದು ದ್ರುಪದನಾನ । ಲ್ಲಾರಯಿದು ಕಾರುವುದು ಚಾಪದ । ಚಾರುವಿದ್ಯೆಯ ನಿಮ್ಮಲರಿದುದ ನಿಮಗೆ ತೋ

ರುವೆನು ॥ ಸೈರಿಸುವುದೀಬಾಲಭಾಷೆಗೆ । ವೈರಬಂಧವ ಬಿಡುವುದೆನುತಾ । ಚಾರಿಯನ ರಥಹಯುವ ಹೊದಿಸಿದನಸ್ತ್ರನಿಕರದಲಿ॥೩೫॥ ಕವಿವಕಣೆಗಳ ಥಟ್ಟುಗಳನೊಡೆ। ತಿವಿದು ತುಳುಕಿದನಂಬಿನಬುಧಿಯ ನವಿರಳಾಸ್ತ್ರಾನೀಕವಾವರಿಸಿದವು ದಿಗುತಟವ ॥ ಅವನಿಯೋ ದಿಕ್ಕುಗಳೊ ಪಾರ್ಥನೊ। ರವಿಯು ಕಾಣೆನು ಭಾಪು ಕಲಶೋ । ದ್ಭವನ ಕೈವೈಯೆನುತ ಬೆರಗಿನೊಳಿದ್ದುದುಭಯುಬಲ ॥೩೬॥ ಈತನಸ್ತ್ರವ ಕಡಿದು ಬಾಣ । ವ್ರಾತವನು ಕೆರಳಿಚಿದನರ್ಜುನ । ಸೇತುವಾದವು ಸರಳು ವೈಹಾಯಸಮಹಾರ್ಣವಕೆ ॥ ಕೇತುವಾದವು ರವಿರಥಕೆ·ಪುರು । ಹೂತನಾದವು ಗಿರಿಕುಲಕೆ ಕೈ । ಸೋತುದಿವ ತರಿದೊಟ್ಟಿ ಬಳಲಿದು ನಿಂದನಾದ್ರೋಣ ॥೩೭॥ ತ್ರಾಣ ಕೋಮಲವಾಯ್ತು ತೆಗೆಯಲಿ । ದ್ರೋಣನಾವೆಡೆ ಪಾಯಿದಳ ಬಿಡು। ಹೂಣಿಗರ ಬರಹೇಳು ಬಾಣದಭಂಡಿಸಾಸಿರವ॥ ಶೋಣಿತದ ಸಾಗರವನವನಿಗೆ। ಕಾಣೆ ಒಳಲು ಪಾದರಜದಲಿ । ಕೇಣಿಕೊಟ್ಟನು ವೈರಿಸೇನೆಯುನಮುವು ಕಲಿಪಾರ್ಥ ॥೩೮॥ ನರನೆ ಪೊಕ್ಕವನಾದಡಯ್ಯನ । ಹರಿಬವೆಂದೆನಗೆನುತ ಬಿಲುದಿರು । ಮೊರೆಯೆ ಪ್ರೋಹರಗಡಲ ಕವಿಸಿದನಂದು ಗುರುಸೂನು ॥ ಗುರುಸುತನ ಬಳಿವಿಡಿದ ಕಡುಹಿನ । ಲುರುವಣಿಸಿದರು ಶಕುನಿಯುವನೇ। ಶ್ವರಕಳಿಂಗಸುಕೇತುಭೂರಿಶ್ರವರು ಬಿಗುಹಿನಲಿ ॥೩೯॥ ಸಾಲಮಕುಟದವರ್ಣಿಕದ ಮಣಿ। ಮಾಲಿಕೆಯುರಶ್ಮಿಗಳು ಸೂರ್ಯನ । ಸೋಲಿಸಲು ಸಮರವನು ಹೊಕ್ಕರು ಕುರುಹಿನತಿಬಲರು ॥ ಕೋಲ ತೆಗಹಿನ ಕಿವಿಗಡಿಯುಕ । ಣ್ಣಾಲಿಗಳ ಕೆಂಪುಗಳ ಹೊಗರು । ಛಡಾಳಿಸಿದಬಲುಮುಖದ ಸುಭಟರು ಹಳಚಿತರ್ಜುನನ ॥೪೦॥ ಏನಪೇಳುವೆನ ರಸ ಶರಸಂ । ಧಾನವನು ಕಲಿಪಾರ್ಥನನುಸಂ । ಧಾನವನು ಕೈಯೊಡನೆಯುನಿಬರ ಕಣೆಯು ಖಂಡಿಸಿದ ॥ ದಾನವಾಮರರೊಳಗೆ ಸುಭಟನಿ । ಧಾನವನು ಪಡಿಗಟ್ಟಬಾರದು । ಮಾನವರ ಮಾತೇತ್ತಲೆಂದನು ಸಂಜಯನು ನಗುತ ॥೪೧॥ ಹಿಳುಕು ಹಿಳುಕಿನೊಳೊರಸಿ ದೆಸೆಕ। ತ್ತಲಿಸಿ ಕೈಕೊಂಡವು ಪತಾಕಾ । ವಳಿಯು ಪವನನ ಹೊಯ್ಲಿನಲಿ ಬಾಯ್ದೆರೆ ಕಿಡಿಯೇಳೆ ॥ ಬಲುಸರಳ ಬಲ್ಲಾಳದಡ್ಡಿಯು । ಬಲುಹು ತರುಬಿತು ಪಡಿಮುಖದ ಮಂ । ಡಳಿಕರೆಸುಗೆಯುನಮುವು ಸಮತಳಿಸಿತ್ತುರಣಕೇಳಿ ॥೪೨॥ ಎಸುವವನೊಬ್ಬನೆ ಪಾರ್ಥನನಿತುವ । ಕುಸುಬಪವರು ಗುರುಸುತಾದಿಗ । ಳೆಸುವರನಿಬರು ತರಿವನನಿತುವನಿವು ರಪತಿಸೂನು ॥ ಎಸುವರಿವರರ್ಜುನನ ವೈರಿಯುಲಿ । ಮಸೆಯು ಕಾಣೆನು ಪಾರ್ಥನನಿಬರ । ವಿಶಿಖವನು ನೆರೆಕಡಿದು ಮೆತ್ತಿದನೊಡಲೊಳಾಂಬುಗಳ ॥೪೩॥ ಕೋಲ ಕೋಲಾಹಳಕೆ ಸೈರಿಸ । ದಾಳುನಾಯಕ ವಾಡಿ ಹರಿಗೆಯು । ಹೇಳಿಗೆಯು ಚಾಚಿದರು ಬಲುಬದ್ಧರಪಭಂಡಿಗಳ ॥ ಹೂಳಿ ಬಿಗಿಸಿದಗುಳದ ಕರಿಗಳ । ಮೇಳವಿಸಿದರು ಮುರಿದೊಡಾಸಗೆ । ಮೇಲೆತಾವಿಹೆವೆಂದು ನುಡಿವರು ಗುರುಸುತಾದಿಗಳು ॥೪೪॥ ಹರಿಬಪಾಪವವೆಂಬರಾವೆಡೆ । ಗುರುಸುತ ದ್ರೋಣಾದಿಗಳು ನುಡಿ । ಯುರಿಯುಹೊರುವುದು ಗಾಯುವ ತಿಶೀತಳವು ಮಹದೇವ ॥ ಅರಮನೆಯುಲಿದ್ದಾಳುಕುದುರೆಯು । ಹರೆದರೇನದು ತಮಗೆ ನಷ್ಟಿಯೆ । ಗರುವಸ್ಥೆ ಗುರುಸೂನುವೆನುತ್ತೈದಿದನು ಕಲಿಪಾರ್ಥ ॥೪೫॥ ಒಗ್ಗಿ ಕವಿತಹತುರಗಸೇನೆಯು । ನಗ್ಗ ಡದೊಳಿಕ್ಕಿದನು ಕರಿಗಳ । ಮೊಗ್ಗರವ ಮೆದೆಗೆಡಹಿದನು ಹುಡಿಮಾಡಿದನು ರಥವ ॥ ಮುಗ್ಗಿ ಬೀಳುವಪಾಯುದಳವನು । ನುಗ್ಗುನುಸಿಮಾಡಿದನು ರಕುತದ । ಸುಗ್ಗಿ ಶಾಕಿನಿಯುರಿಗೆ ಸೇರಿತು ಕಳನಚೌಕದಲಿ ॥೪೬॥ ಜೋಡುಸಹಿತುಗಿದಂಬು ಧರಣಿಯೊ । ಳಾಡಿದವು ಗುಳಸಹಿತ ಕರಿಗಳ । ತೋಡಿ ಹಾಯ್ದುವು

ಬದ್ಧರಂಗಳಬಾದಣವ ಕೊರೆದು ॥ ಈಡಿರಿದವದ್ರಿಯನು ಸುಭಟರ । ಜೋಡುಗಳ ಜರುಹಿದವು ತಳಪಟ । ಮಾಡಿದವು ಚತುರಂಗಬಲವನು ಪಾರ್ಥನಂಬುಗಳು ॥೪೭॥ ತಾರುಥಟ್ಟಿಗೆಹಾಯ್ದವಾನೆಗ । ಳಾರುಸಾವಿರ ತುರಗದಳದಸು । ಸೂರೆವೋದುದು ಸಮರದಲಿಹದಿನಾರುಸಾವಿರವು ॥ ಕಾರಿದರು ಕರುಳನು ಪದಾತಿಯೊ ಳಾರುಲಕ್ಷವು ಮೊದಲಲಗ್ಗಿಗೆ । ಮೂರುಸಾವಿರ ರಥವು ನೆಗ್ಗಿದುದೊಂದುನಿಮಿಷದಲಿ ॥೪೮॥ ಹೆಣನ ತುಳಿದೊತ್ತೊತ್ತೆಯಲಿ ಸಂ । ದಣಿಸಿ ಕವಿದುದು ಮತ್ತೆ ದಳ ಭಾ । ರಣೆಯ್ಬಿಂಕವನೇನನೆಂಬೆನು ಬಲಿದಲಗ್ಗಿಯಲಿ ॥ ಕೆಣಕಿದವು ಕರಿಘಟೆಗಳೊಂದೆಸೆ । ಯಣಕಿಸುತ ಹಯರಥವದೊಂದೆಸೆ ಕಣೆಗೆದರೆ ಕಾಲಾಳದೊಂದೆಸೆ ಮುಸುಕಿತರ್ಜುನನ ॥೪೯॥ ಸವೆದು ಸವೆಯರುಪೂತುಮರುಳು ಕೌ । ರವನ ಸೇನಾಜಲಧಿನಾಯಕ । ನಿವಹವಿನಿತುವನೂಕಿಸವೆಯುವು ಗುರುಸುತಾದಿಗಳು ॥ ಕವಿಯಲೀಬಲ ಮತ್ತೆ ಸಂದಣಿ । ತವಕಿಸಲಿ ತಾವಿನಿಬರೂಮುಗು । ಳವಗಡಿಸಿನೋಡಲಿ ವಿನೋದವನೆನುತ ತೆಗೆದೆಚ್ಚ ॥೫೦॥ ಅಗಲದಲಿ ದಿಗುವಳೆಯ ವಿಧಿಯಂ । ಬುಗಳನೀದುದೋ ಮೇಣು ಬಾಣದ । ಮುಗಿಲುಮಾಲೆಯ ಕೊಯ್ದರೊ ಜರುಹಿದರೋ ಶರನಿಧಿಯ ॥ ಝಗಝಗಿಸಿ ಹೊಳೆಹೊಳೆವ ಬಾಯ್ಧಾ । ರೆಗಳ ಹೊಳಹಿನಧಾರೆ ಬಿಂಕವ । ಮೊಗದರ್ಜುನನಂಬುಗಳು ಚತುರಂಗ ಮೋಹರ॥೫೧॥ ಮತ್ತೆ ಮುರಿದನು ಹತ್ತು ಸಾವಿರ । ಮತ್ತಗಜವನು ರಥಚಯವನು । ಗ್ಗೊತ್ತಿದನು ಹನ್ನೆರಡು ಸಾವಿರವನು ರಣಾಗ್ರದಲಿ ॥ ಹೊತ್ತಿತೀತನ ವಿಕ್ರಮಾಗ್ನಿಗೆ । ಹತ್ತುಕೋಟಿಪದಾತಿರಾವ್ತರು। ಸತ್ತುದಕೆ ಕಡೆಯಿಲ್ಲ ಕೌರವರಾಯಸೇನೆಯಲಿ ॥೫೨॥ ತೀರಿತಡವಿಯಕಡಿತ ಗಿಂಗಳ । ಹೋರಟೆಗೆಹೊಗಬೇಕು ಸೇನೆಯ । ಪಾರುಖಾಣೆಯ ಕೊಟ್ಟರಾವೆಡೆ ಗುರುಸುತಾದಿಗಳು ॥ ಭಾರಣೆಗೆ ಕೊಡಬೇಕು ಸಮಯವ । ನಾರುಭಟೆಯಲಿ ಮಲವುದ್ಯೈ ಕೈ । ವಾರವೇಕೈ ಕಾಯದಲಿ ಕಕ್ಕುಲಿತೆ ಬೇಡೆಂದ ॥೫೩॥ ಜೇನುಹುಟ್ಟಿಯ ಹುಳುವಬಡಿದಸ । ಘಾಡತನ ತಾನೇನು ಚೋಣಿಯ । ಸೇನೆಗೀನೆಯ ಸವರಲಾಯಿತೆ ಶೌರ್ಯಸಿರಿ ನಿಮಗೆ ॥ ತಾನದಾರೆಂದರಿಯಲಾ ಗುರು । ಸೂನುವಲ್ಲಾ ವೈರಿತಿಮಿರಕೆ । ಭಾನು ಬಗೆಯಾಯನುತ ಪೊಕ್ಕನು ದ್ರೋಣನಂದನನು ॥೫೪॥ ಬಳಿಯಲೊಡಗವಿಯಿತ್ತು ಚಾತು । ರ್ಬಲ ಸಹಿತ ದ್ರೋಣಾದಿಗಳು ತೋ । ರಳವ ಹಿಡಿಹಿಡಿಧನುವ ಸುರಿಸುರಿ ಸರಳಸರವಳೆಯ ॥ ಚಳೆಯದಲಿ ಕೈದೋರುದಾನವ । ಕುಲದಿಶಾಪಟಕೃಷ್ಣಸಹಿತವೆ । ಕಳಿಯದಿರು ಕಾಲವನೆನುತ ತೆಗೆದೆಚ್ಚರತಿರಥರು ॥೫೫॥ ಗುರುಸುತನ ಕೂರಂಬು ದ್ರೋಣನ । ಸರಳಸಾಗರ ಶಲ್ಯನಂಬಿನ । ಹೊರಳಿ ಶಕುನಿಯ ಬಾಣಪಂಜರ ಕೃಪನ ಶರಮೇಘ ॥ ಕುರುಪತಿಯ ನಾರಾಚದಾದು । ರ್ಧರವರುಷ ಸೈಂಧವನು ಕೃತವ । ರ್ಮರಶರಾವಳಿ ಹೂಳಿದವು ದೇವಾ ಮಹೀತಳವ ॥೫೬॥ ಉರಿಯರಾಜ್ಯವ ಸೂರೆಗೊಳಲೆಂ। ದರಗುಹರಿದವೊಲಾಯ್ತು ಮೇಘದ । ನೆರನಿ ಗಾಳಿಯಮನೆಗೆ ಬಿದ್ದಿನ ಬಂದತೆರನಾಯ್ತು ॥ ಗಿರಿಯಮಕ್ಕಳು ನಗುತ ವಜ್ರದ । ಕರವ ಹೊಯ್ದಂತಾಯ್ತು ಪಾರ್ಥನ । ಸರಳಸೀಮೆಯ ಬೆರಸಿದವು ರಿಪು ಸುಭಟರಂಬುಗಳು ॥೫೭॥ ಸಹಜಕೀತನು ಚಾಪವಿದ್ಯಾ । ರುಹನು ಗುರುಗಳ ಮಗನಿವನು ಗುರು । ವಹನು ನೋಳ್ಪೊಡೆ ಶಿವಶಿವಾ ಕಲಿಶಲ್ಯ ಮಾವನಲೆ ॥ ಮಹಿಮರಿವರೆನ್ನೊಡನೆಯೊಂದಿದ । ರಹುದುನಾವಿನ್ನಾರ ಕಳೆವೆವು । ಸಹಸ ಲೇಸೆನುತೆಚ್ಚನವರವರಸ್ತ್ರಧನು ರಥವ ॥೫೮॥ ಮತ್ತೆ

ಹೊಸರಥ ಸೂತನಾಸ್ತ್ರವ । ನುತ್ತಮಪ್ರತ್ಯಗ್ರಚಾಪದ । ಲಿತ್ತಡಸಿ ಕವಿದರು ಕಿರೀಟಿಯು ರಥವ ಮುರಿದೆಸುತ ॥ ಮತ್ತೆಕಡಿದರು ರಥವ ಚಾಪವ । ಮತ್ತೆ ಹೊಸ ಹೂಟಿಯಲಿ ಹೊಕ್ಕರು । ತೆತ್ತುಸ ವೆಯರು ಶೌರ್ಯದಭಿಮಾನವನು ರಿಪು ಭಟರು ॥೫೯॥ ಸರಳ ಕವಿಸಿದರಿವರು ಮತ್ತವ । ಪರಿಹರಿಸಿದನು ಪಾರ್ಥನಾತನ । ಸರಳುಗಳ ಸಂವರಿಸಿ ಮುಸುಕಿದರರ್ಜುನನ ರಥವ ॥ ತೆರಳೆಗಡಿದನು ಮತ್ತೆ ದ್ರೋಣನ । ಗುರುಸುತನ ಸೈಂಧವನ ಮಾದ್ರೇಶ್ವರನ ಚಾಪವ ಕಡಿದು ಹೂಡಿದನೊಡಲೊಳಂಬುಗಳ ॥೬೦॥ ಗಾಯವಡೆದರು ಸುರಿವ ಸರಳಿಗೆ । ನಾಯಕರು ಬಳಲಿದರು ಪೌರುಷ । ಮಾಯವಾದುದು ತನು ನಡುಗಲಡಿಗೆ ಡೆಂಡಣಿಸಿ ॥ ಕಾಯಗಟ್ಟಿತು ಭೀತಿಬಿರುದಿನ । ಬಾಯೊಣಿಕೆ ಬಯಲಾಯ್ತು ತನುವಿನ । ಬೀಯಕವರಂಜಿದರು ನೆನದರು ಮನೆಯ ರಮಣಿಯರ ॥೬೧॥ ದಿಟ್ಟತನ ಹಳುವಾಯ್ತು ಶೌರ್ಯದ । ಘುಟ್ಟಿ ಕರಗಿತು ಸುಭಟಧರ್ಮವ । ಬಟ್ಟೆಯನು ಹೂಳಿದರು ಹಂಗಿಗರಾದರಿಹಪರಕೆ ॥ ಬೆಟ್ಟವಾಯಿತು ಭಂಗಭಯದಲಿ । ಬಿಟ್ಟುಕೊಂಡರು ರಾಯದಳಜಗ । ಜಟ್ಟಿಗಳು ಭಗದತ್ತ ಸೈಂಧವಗುರುಸುತಾದಿಗಳು॥೬೨॥ಉಲಿವಭಟ್ಟರ ಬಾಯಹೊಯ್ ರಥ । ದೊಳಗೆ ಕೆಡಹಲಿ ಧ್ವಜದಕಂಭವ । ಸುಲುಕದಂತಿರೆ ರಥವ ಹರಿಸಲಿ ಸೂತಕುನ್ನಿಗಳು ॥ ತಲೆಮುಸುಕಿನಲಿ ಛತ್ರಚಮರವ । ನೆಲಕೆ ಬಿಸುಡಲಿ ಹೆಸರುಗೊಂಡರ । ನುಳುಹಲಾಗದು ಬೀಳಗುತ್ತುವುದೆನುತ ತಿರುಗಿದರು ॥೬೩॥ ಒಟ್ಟಿದವು ಕೈದುಗಳು ಸತ್ತಿಗೆ । ಬೆಟ್ಟವಾದವು ಸಿಂಧಸಳೆಗಳು । ನಟ್ಟಡವಿಪವಡಿಸಿದವೊಲಾಯ್ತಾಹವಾಗ್ರದಲಿ ॥ ಧಟ್ಟು ಮುರಿದುದು ಸೇನೆತೆರೆ ಸಾ । ಲಿಟ್ಟಸಾಗರದಂತೆ ರಾಯಘು । ರಟ್ಟ ಕಂಡನು ಕೌರವೇಶ್ವರನ ಖಿಳಮೋಹರವ ॥೬೪॥ ಹೊರಳಿಯೊಡೆದು ಮಹಾಪ್ರಧಾನರು । ಮರಳಿದರಲಾ ಪೊತುಮುಝಧರ । ದುರವ ಮಾಡಿದರೇಕೆ ಕರೆಕರೆ ಬಿರುದಬೆಸಗೊಂಬ ॥ ಗುರುತನಯನೋ ಚಾಪವಿದ್ಯಾ । ಧರನೊ ಶಲ್ಯನೊ ಶಕುನಿಯೋ ಕೃಪ । ವರಮಹಾರಥರಿದ್ದರೋಡುವರಲ್ಲ ದಿಟವೆಂದ ॥೬೫॥ ಹೊರೆದಪತಿ ಕಾರ್ಯಾರ್ಥಲಾಭವ । ಸರಕುಮಾಡರು ಜಯವಧುವನೆ । ದ್ದರಗಿ ನೋಡರು ವಾರ್ತೆಗೈಯರು ಮುಕುತಿ ರಾಜ್ಯವನು ॥ ಧರೆಯುಪರಮಖ್ಯಾತಿ ಪೂಜೆಯು । ಸಿರಿಯು ಗಣಿಸರು ಶಿವಶಿವಾಸಂ । ಗರಕೆ ದ್ರೋಣಾದಿಗಳವೋಲು ವಿರಕ್ತರಾರೆಂದ ॥೬೬॥ ಆನೆಗಳು ಮರಳಿದವು ಸುಭಟನಿ । ಧಾನರೋಸರಿಸಿದರು ಘಡಸುರ । ಧೇನುಗಳಲಾಕರೆಯಿರ್ಕೆ ಕರೆಬಲಕೆವಾಂಛಿತವ ॥ ಈನಪುಂಸಕರುಗಳನಂಬಿದ । ತಾನು ನೀತಿಜ್ಞನೆ ಮಹಾದೇ । ವೇನಪೇಳುವೆನೆನುತ ಭೀಷ್ಮನ ಹೊರೆಗೆ ನಡೆತಂದ ... ॥೬೭॥

ಅಂತು ಸಂಧಿ ೭ಕ್ಕಂ ಪದ ४೫೦ ಕ್ಕಂ ಮಂಗಳಮಸ್ತು.



## ಎಂಟನೆಯ ಸಂಧಿ.

॥ಸೂಚನೆ॥ ಗಂಡುಗಲಿಗಾಂಗೇಯ ರಣದು । ದ್ದಂಡಕ್ಷತ್ರಿಯಕುಲವ ತರಿದು । ದ್ದಂಡಭೀಷ್ಮ ಶಿಖಂಡಿಯಿದಿರಲಿ ಬಿಲ್ಲನಿಳುಹಿದನು ॥

॥ಪದ॥ ಜೀಯ ಚಿತ್ತೈಸುವದು ಸೇನಾ । ನಾಯಕರ ಮೋರೆಗಳು ಮುಸುಕುಗ । ಳಾಯಿತವ

ನೀಹೊತ್ತು ಮುನ್ನಿನ ಬಿರುದಿನುಬ್ಬಟೆಯ ॥ ಕಾಯಿದರೆ ಧರ್ಮವನು ಜಪ್ಪರಪ । ರಾಯಣದ ಪರಿಣತಿಯಲಾದಪ । ಲಾಯನದ ಹೆಚ್ಚುಗೆಯ ನೋಡೆನೆ ಭೀಷ್ಮನಿಂತೆಂದ ॥೧॥ ಅರಸ ಹೊಲ್ಲಹವೇನು ಪಾರ್ಥನ । ಸರಿಸವಲಿ ನಿಲುವೆದೆಯ ಕೆಚ್ಚು । ಳ್ಳರನು ದೇವಾಸುರರೊಳರಿಯೆನು ಮನುಜರೇನಹರು ॥ ತಿರುಗಬೇಕವಗಡಿಸಿದೊಡೆಸಂ । ಗರವ ಪೊಗುವುದು ಸದರಗಿದರವ । ನರಿದು ಕಾದುವುದಿದರಲಾವುದು ಭಂಗ ಹೇಳೆಂದ ॥೨॥ ನುಡಿಯಲಾವು ಸಮರ್ಥರೆಂದುದೆ । ಕಡುನಿಧಾನವು ಸುಭಟರೋಟವೆ । ಕಡೆಗೆ ಪರರಹಧರ್ಮಪಾರ್ಥನು ಜಗದೊಳಗ್ಗಳನೆ॥ ನಡುಹೊಳೆಯ ಹರಿಗೋಲಮೂಲೆಯ। ಕಡಿವರಾದೊಡೆ ನಮ್ಮ ಪುಣ್ಯದ । ಬಿಡುಗಡೆಯ ಕಾಲವು ಶಿವಾಯೆಂದರಸ ಬಿಸುಸುಯ್ದ ॥೩॥ ಖತಿಯಮಾಡಿದೆನಮ್ಮನುಡಿಯನು । ಚಿತಪರಾಯಣವೆಂದುನಿಮ್ಮಯ । ಮತಿಗೆತೋರಿತೆಮಾಣಲದುನೋಡಾದಡಾಹವವ ॥ ಕ್ಷಿತಿಯಹೊರೆಕಾರರಿಗೆಸೌಖ್ಯದ । ಗತಿಯಮಾಡುವೆನಿನ್ನು ಕುರುಭೂ । ಪತಿವಿರೋಧಿಯ ದಳವನಿಂದೇ ನೋಡುನೀನೆಂದ ॥೪॥ ತರಿಸಿದನು ಹದಿನೆಂಟುಸಾವಿರ । ಸರಳಹೊದೆಗಳ ಭಂಡಿಯನು ಹಂ । ನೆರಡು ಸಾವಿರಧನುವ ತರಿಸಿದನಖಿಳಕೈದುಗಳ ॥ ಕರಸಿದನು ಸೈಂಧವನ ಶಲ್ಯನ । ಗುರುಸುತನ ಕೃತವರ್ಮಭಗದ । ತ್ತರಶಕುನಿದುಶ್ಶಾಸನರ ಕೃಪದ್ರೋಣಾದಿನಾಯಕರ ॥೫॥ ಒತ್ತಿಗೊಡುವರೆ ಹಗೆಗೆ ಹಜ್ಜೆಯ । ನಿತ್ತು ತೆಗೆವರೆ ಪಾರ್ಥ ಪರಬಲ । ಮೃತ್ಯುವೇ ಸಾಕಿನ್ನು ಹೋಗಲಿಯೆಂದು ಫಲವೇನು ॥ ಮತ್ತೆ ಕೆಣಕುವದರ್ಜನನ ನಂ । ಮತ್ತ ಬಿಡದಿರಿ ವೈರಿಬಲವನು ಕಿತ್ತುಬಿಸುಡುವೆ ಯಮಪುರಕೆ ಮೋಹರಿಸಿ ನೀವೆಂದ ॥೬॥ ವಿಗಡರಿನಿಬರ ಮತ್ತೆ ಪಾರ್ಥನ । ತೆಗೆವರೆತ್ತಲು ಭೀಷ್ಮನಿತ್ತಲು । ಹೊಗೆದನಂತ್ಯದ ರುದ್ರನಗ್ನದಕಣ್ಣಕಿಡಿಯಂತೆ ॥ ಬಿಗಿದಹೆದೆಗಳ ಹರಿದು ಬಿಲ್ಲಿಂ । ದುಗುಳಿಸಿದರಂಬುಗಳನೆಳವಿಗೆ । ತೆಗೆದು ಪಾಂಡವಬಲವ ಬೆಂಬತ್ತಿದನು ಖಾತಿಯಲಿ ॥೭॥ ಕೊಂಡುಬಹಬಲು ನಾಯಕರ ಕೈ । ಕೊಂಡು ಕಡೆಯಲಿ ಹೊಯ್ಸೆ ಸೇನೆಯ । ಹಿಂಡೊಡೆಯದೋಜೆಯಲಿ ಹುರಿಯೇರಿಸಿ ಮಹೀಶ್ವರರ॥ ಗಂಡುಗಲಿಯಭಿಮನ್ಯುಸಾತ್ಯಕಿ । ಚಂಡಬಲಹೈಡಿಂಬರನು ಸಮ । ದಂಡಿಯಲಿ ಸಂವರಿಸಿ ಸಮರಕೆ ನಡೆದನಾಭೀಷ್ಮ ॥೮॥ ತಳಿತಸೇನಾಜಲಧಿಲಗ್ಗೆಯ । ಮೊಳಗಿನಲಿ ಮೊನೆದೋರಿ ಭೀಷ್ಮನ । ಹಳಚಿದರು ಹರಹಿನಲಿಕವಿದರು ತೋದಕೈಗಳಲಿ ॥ ಎಲೆಲೆ ಪಾಂಡವಸೈನ್ಯಸಾಗರ । ಮಲೆತುದೋ ಬರಹೇಳು ಮಾರಿಯ । ಬಳಗವನು ಹೆಣದಿಂವಿಕಾರರ ಕರಯ ರಕ್ಕಸರ ॥೯॥ ಸೂಸಿವರು ಸರಳುಗಳನಗಲಕೆ । ಹಾಸಿಹಬ್ಬಿದವಿಶ್ವನಿಕರಕೆ । ಕಾಸಿದವು ಕೀಲಿಸಿದವಾನೆಗಳುದರದೆಲುವಿನಲಿ ॥ ಬೀಸೀ ಬಿಸುಟವು ಪಾಯದಳ ರಥ । ರಾಸಿಗಳ ಜರುಹಿದವು ಬಲವಾ । ರಾಶಿಯಲಿ ತಾಯ್ಮಳಲ ಮೊಗೆದವು ಭೀಷ್ಮನಂಬುಗಳು ॥೧೦॥ ಅಡಸಿ ತುಂಬಿತು ಗಗನ ತಲೆಗಳ । ಗಡಣವಲಿ ದೆಸೆಯೆಲ್ಲ ಬಾಣದ । ಕಿಡಿಯಲುಂಮಹವಾಯ್ತು ಹೆಣಮಯವಾಯ್ತು ರಣಭೂಮಿ ॥ ಕಡುಗಲಿಯ ಕೈಚಳಕದಂಬಿಂ । ಗೊಡಲ ತೆತ್ತುದು ವೈರಿಬಲ ಬಿಡೆ । ಜಡಿದುದಂತಕನಗರವದ್ಭುತವಾಯ್ತು ಸಂಗ್ರಾಮ ॥೧೧॥ ಹೊಡೆಗೆಡೆದವಾನೆಗಳು ಧಟ್ಟೆಗೆ । ಕೆಡೆದುದಗ್ಗದತುರಗದಳ ಮೈ । ಗಡತವಲಿ ಮುಂಗಡದು ಹೊರಳಿತು ಕೂಡೆ ಪಾಯದಳ ॥ ಮುಡಮುರಿದು ನುಗ್ಗಾಯ್ತು ರಥ ಬೆಳು ।ಗೊಡೆಪತಾಕಾದಂಡಚೌರಿಗ । ಳುಡಿದು ಕೆಡೆದವು ಕೇಣವಿಲ್ಲದೆ ತರಿದನತಿಬಲರ ॥ ದುಂಡಿಸಿತು ನೊರೆರಕುತಕರುಳಿನ। ಜೊಂಡು ಮಸಗಿತು ಕಡಿದಖಂಡವ। ದಿಂಡು ತ

ಳಿತುದು ತೊಗಲಕದಳಿಯು ಮುರಿದವುಮೂಳೆಗಳ ॥ ದೊಂಡೆಗರುಳಿವುಳನಜರಿವವಿುದುಳಿನ। ಗೊಂಡೆಯು ದತೊರಳೆಗಳ ಕೊರಳಿನ । ತುಂಡುಗಳ ಕಾಲಾಂತಕನ ಹೆಬ್ಬೆಳಸು ಹುಲುಸಾಯ್ತು ॥೧೩॥ ಆಗಹೂಡಿ ದನಾಗಬಾಣವ । ತೂಗಿ ಬರಸೆಳೆದೆಚ್ಚ ಸಹಿತರ । ನಾಗತಾಗಿದವಂಬು ಬಲ್ಲವರಾರು ಕೈಲುಳಿಯು ॥ ಬಾಗಿಹುದು ಬಲುಬಿಲ್ಲು ಕಿವಿವರೆ । ಗಾಗಿ ರಿಪುಗಳ ನಿಮಿಷನಿಮಿಷಕೆ । ನೀಗಿಹುದು ನಿಟ್ಟುಸುರನೆಲೆ ಭೂಪಾಲ ಕೇಳೆಂದ॥೧೪॥ಬೀಳುತಿರ್ದುದು ಭಟರು ಮತ್ತೆ ಚ। ಡಾಳಿಸಿತು ತಲೆಮಾರಿಗಳು ಹೆಣ। ಸಾಲನೆಡಹಿದರರುಣವಾರಿಯಕೆರೆಯು ನೆನಸಿದರು ॥ ಆಳುಪೊಕ್ಕುದು ದಂತಿಘಟೆಗಳು । ತೂಳಿದವು ಕಡಿಕೆದ್ದು ತುರಗದ । ಮೇಲುರಾವುತರಳಿಪಿಗೊಟ್ಟುದು ತೇರಕಾಹಿನಲಿ ॥೧೫॥ ಆಳುಕುದುರೆಯು ಬೀಯವಾಡಿ ನೃ । ಪಾಲವಾಡುವುದೇನು ದೊರೆಗಳು । ಕಾಳಗಕೆ ತಲೆದೋರಬಾರದೆ ಭೀಷ್ಮಫಲುಗುಣರು ॥ ಜಾಳನೊಕಿಸಿ ಹೊತ್ತುಗಳೆವರೆ । ಹೇಳಿ ಫಲವೇನಿನ್ನು ರಣಹೀ । ಹಾಳ ತವುಗಿಲ್ಲೆಂದು ಗಪಗಹಿಸಿವನು ಕಲಿಭೀಷ್ಮ ॥೧೬॥ ದಿವಿಜನಗರಿಯ ಸೂಳೆಗೇರಿಗೆ । ಕವಿವಮನವೇ ಮುಂದೆ ಹಜ್ಜೆಗೆ । ತವಕಿಸುವ ದಿಲ್ಲಾದುದೇ ಕೈತಪ್ಪಮಾಡಿಸೆನು ॥ ಕವಿಯಿರ್ದೈ ಕಾಲಾಳುರಾವುತ । ರವಗಡಿಸಿರ್ದೈ ಜೋವರೆಸೆಯಿರಿ । ನವಮಹಾರಥರಂಬಕರೆಯಿಯೆನುತ್ತ ತೆಗದೆಚ್ಚ ॥೧೭॥ ಕಡಿದು ಬಿಸುಟನು ತುರುಗದಳವನು । ಕೆಡಹಿದನು ಹೇರಾನೆಗಳ ತಡೆ । ಗಡಿ ದನೊಗ್ಗಿನರಥವ ನೆರೆಕೊಚ್ಚಿದನು ಕಾಲಾಳ ॥ ಹೊಡಕರಿಸಿ ಹೊದರೆದ್ದು ಮುಂದಕೆ । ನಡೆನಡೆದು ಕೈಮಾಡಿ ಕಾಯುದ । ತೊಡಕನಲ್ಲದೆ ತೆಕ್ಕೆಗಟ್ಟಿತು ಭಟರು ನಾಕದಲಿ ॥೧೮॥ ಆಳು ಮುರಿದುದು ಮೇಲೆ ಹೊಕ್ಕ ನೃ । ಪಾಲಕರು ಬೊಬ್ಬಿರಿದು ಭೀಷ್ಮನ । ಕೋಲ ಕೊಳ್ಳದೆ ಕೊಂಡುಹರಿದುದು ರಥದಹೊರೆಗಾಗಿ ॥ ಆಳುತನದಂಗವಣೆಯೊಳ್ಳಿತು । ಮೇಳವೇ ಬಳಿಕೇನು ಪೃಥ್ವೀ । ಪಾಲಕರಲಾ ಫೊತುರೇಯನುತೆಚ್ಚನಾಭೀಷ್ಮ ॥೧೯॥ ಅಂಗವಿಸಿ ಮರಿಹುಲ್ಲೆ ಖುರದಲಿ । ಸಿಂಗವನು ಹೊಯ್ವಂತೆ ನೃಪರು । ತುಂಗಸಹಸಿಯುಮೇಲೆ ಕೈಮಾಡಿದರು ಖಡ್ಗದಲಿ ॥ ಅಂಗವಣೆಯನು ಪೊಗಳುತವೆ ದಿವಿ । ಜಾಂಗನಾಕಾಮುಕರ ಮಾಡಿಯೆ । ಭಂಗವಿಲ್ಲದೆ ಭೀಷ್ಮಮೆರೆದನು ಬಾಹುವಿಕ್ರಮವ ॥೨೦॥ ಧರಣಿಪತಿಗಳು ಹತ್ತುಸಾವಿರ । ವುರುಳಿತಾದಿವಸದಲಿ ಹಿಂದಣ । ಕೊರತೆಯುಳಿ ಲೆಕ್ಕಕ್ಕೆ ಕೊಂದನು ಹತ್ತುಸಾವಿರವ ॥ ಮರಳಿಮೂರ್ಸಾವಿರವ ಮತ್ತಂ । ತೆರಡುಸಾವಿರಮತ್ತೆಯೈ ಸಾ। ವಿರವಸವರಿದನಹಿತಬಲದಲಿ ಭೂಪ ಕೇಳೆಂದ ॥೨೧॥ ಭುವನನೆಲೆಹೊಗುವೆಂದು ಹಳಚಿದ । ಶಿವನಖತಿ ಮೈದೋರಿತೆನೆ ರಿಪು । ನಿವಹದಲಿ ನೆಲೆಗೊಂಡುದೀತನ ಖತಿಯಕೋಪಶಿಖಿ ॥ ಜವನಪುರ ವಿಂಬಿಲ್ಲ ಕೊಂಡೊ । ಯ್ಯುವರು ಕೈಗುಂದಿದರು ಗಂಗಾ । ಭವನು ಖಾತಿಯಬಿಡನಿದೇನೆನುತಿರ್ದುದವಮರಗಣ ॥೨೨॥ ಬಲವನದ ಹೊದರಲ್ಲಿ ಸೇನಾ । ಜಲನಿಧಿಯ ಸುಳಿವೆಲ್ಲ ಸುಭಟರ । ಕಳಕಳದ ಕಡುಹೆಲ್ಲಿ ಕರೆಯಿರೆ ರಥಿಕರವರೆಲ್ಲಿ ॥ ಹೊಳೆದು ಮೊಳಗಿದನಲ್ಲಿ ಬಾಣದ। ಬಲೆಯ ಬೀಸಿದನಲ್ಲ ರಕುತದ। ಹೊಳೆಯ ಹರಿಸಿದನಲ್ಲಿ ಗಂಗಾಸೂನು ಖಾತಿಯಲಿ ॥೨೩॥ ಕಡುಹು ಹಿರಿದೋ ಕಾಲರುದ್ರನ । ಪಡೆಯುನಾನುವನೀತನೊಳು ಮೈ । ಗುಡದಿರೀಬಲ ಹೊರಳಿಯೊಡೆಯಲಿ ಹೋಗಿ ದೆಸೆದೆಸೆಗೆ ॥ ತಡೆಯುಲರಿದೋ ತಡವಮಾಡದಿ । ರೊಡಲಬದುಕಿಸಿಕೊಳ್ಳಿ ನೋಡುವ । ಫೊಡಯುನನು ಬಳಿಕೆನುತ ಮುರಿದುದು ಪಾಂಡು ಸುತಸೇನೆ ॥೨೪॥ ಜರಿದುದಲ್ಲಿಯದಲ್ಲಿ ಹಿಂದಕೆ । ಮುರಿದುದಲ್ಲಿಯುದಲ್ಲಿ ಭಯುದಲಿ । ತೆರಳಿತಲ್ಲಿ

ಯುದಲ್ಲಿ ರಾಯನ ಕಣ್ಣ್ಗೆಸನ್ನೆಯಲಿ ॥ ತಿರುಗಿತಲ್ಲಿಯದಲ್ಲಿ ಭಟರೆದೆ । ಬಿರಿದುದಲ್ಲಿಯದಲ್ಲಿ ಭೀಷ್ಮನ । ಸರಳಘಾತಿಗೆ ಬೆಸುಗೆಯೊಡೆದುದು ವೈರಿಬಲ ಹೆದರಿ ॥೨೫॥ ಬಲವನಿಲಿಸಲು ನೂಕದನಿಲಜ । ನಳುಕಿದನು ಸಹದೇವ ಹಿಂದಣಿ । ಗೊಲೆದ ಧೃಷ್ಟದ್ಯುಮ್ನನಕುಲರು ನೆನೆದರನುಚಿತವ ॥ ಕಲಿಘಟೋತ್ಕಚನಥಮಧರ್ಮಜವ । ಬಳಸಿದನು ಪಾಂಚಾಲಮತ್ಸ್ಯರು। ಹಲರುನಡದುದೆ ಮಾರ್ಗವೆಂದರು ಮುರುಹಿದರು ಮುಖವ ॥೨೬॥ ಹದುಳವಿಡುವವರಿಲ್ಲಿ ಸೇನೆಯ । ಮೊದಲಿಗರು ಮುನ್ನೋಟವಿಕ್ಕಿತು । ಕದನದಲಿ ಕೈಸೂರೆಗೊಟ್ಟರು ಜಯುವ ತಮತಮಗೆ ॥ ಎದೆಯನೀವಿದನಹಿತನೃಪನ । ಭ್ಯುದಯುವೆರಡೆಲೆಯಾಯ್ತು ಸಾಹಸಿ । ಸದೆದನೋ ಕಲಿಭೀಷ್ಮನೆಂದುದು ಮೇಲೆ ಸುರಕಟಕ ॥೨೭॥ ಸಕಲದೆಸೆಯಲಿ ಮುರಿದು ಬಹಸಾ । ಯಕರ ಕಂಡನು ಪಾರ್ಥನಸುರಾಂ । ತಕಗೆ ತೋರಿದನಕಟ ನೋಡ್ಯೆನಮ್ಮವರ ವಿಧಿಯ ॥ ನಕುಲನಿಲ್ಲಾ ಭೀಮನೋ ಸಾ । ತ್ಯಕಿಯೊ ಸೇನಾಪತಿಯೊ ಕಟಕಟ । ವಿಕಳರೋಡಿದರೈ ಮುರಾಂತಕ ರಥವ ತಿರುಹೆಂದ ॥೨೮॥ ಮಾತು ಹಿಂಚಿತು ತೇರು ಸೇನಾ । ವ್ರಾತವನು ಹಿಂದಿಕ್ಕಿ ಗಂಗಾ । ಜಾತಗಿಟರಲಿ ನಿಂದುದೇನೆಂಬೆನು ಮಹಾದ್ಭುತವ॥ ಸೋತುಚೆಲ್ಲಿದ ಸೇನೆ ಮಗೌನದೊ। ಳಾತು ನಿಂದುದು ಮತ್ತೆ ಭಂಡರ। ಮಾತದೇತಕೆ ಕೇಳು ಜನಮೇಜಯುಮಹೀಪಾಲ ॥೨೯॥ಬಲವನಾಯಕವೇ ವೃಥಾಹುಲು । ದಳದೊಳಗೆ ನಿಮ್ಮಗ್ಗಳಿಕೆ ಕೈ । ಯಳವ ಮನದಳಲುಗಳ ನೀಬಿಲುಗಾರತನದನುವ ॥ ಬಲಿಯರೈ ನಮ್ಮೊಡನೆ ಮೆಚ್ಚಿಸಿ । ಬಳಿಕ ಪಡೆಯಿರೆ ಬಿರುದನೆನುತವೆ । ಫಲುಗುಣನು ಕೈಯಿಕ್ಕಿದನು ಗಂಗಾಕುಮಾರನಲಿ ॥೩೦॥ ನಾವು ವೃದ್ಧರು ಬಿರಿದು ಗಿರಿದಿನ । ಲಾವಣಿಗೆ ನಮಗೇಕೆ ಹೇಳೈ । ನೀವಲೇ ಜವ್ವನದಭಂಟರು ರಣದ ಧರಧುರಕೆ ॥ ನೀವಿರಲು ನಿರ್ಣಾಯಕವೆ ಸೇ ।ನಾವಳಿಯ ಮಹದೇವ ಮೊದಲೆ । ಗಾವುಲಕ್ಕ್ಯವೆ ಕೇಳು ಫಲುಗುಣಯೆಂದನಾಭೀಷ್ಮ ॥೩೧॥ ಕಟಕಿಯೇತಕೆ ಪರಶುರಾಮನ । ಪಟುತರಕೆ ಮದ್ದರೆವನೆಂಬೀ । ನಿಟಿಲನೇತ್ರನ ಭುಜದೊಳಗೆ ಸಮಜೋಳಿಗಡ ನಿಮಗೆ ॥ ಕುಟಿಲಭಣಿತೆಯನರಿವುದಿದನೊಳು । ಭಟರು ನೀವಹಿರೆನ್ದ ಶರಸಂ । ಘಟನೆಯನು ಚಿತ್ತೈಸಿಯೆಂದನು ಪಾರ್ಥನಸುನಗುತ ॥೩೨॥ ಅವರುಪೂರ್ವದಪರಶುರಾಮನ । ಪ್ರವರವನು ಮೆಚ್ಚಿಸಿದರೀಗಳಿ । ನವರು ಕಮಜಾಸ್ತ್ರಾಯ್ಲರೆಂದುಸುರೇಖರೆಂದಿಹರು ॥ ಅವರಮೆಚ್ಚಿಸಬಹುದುನೀವಾ । ಹವಸುವಿದ್ಯಾದುರ್ವಿದಗ್ಧರು । ನಿವಗೆ ಸಾಮಿಯಿಸಾಗಬಲ್ಲೆವೆ ಯೆಂದನಾಭೀಷ್ಮ॥೩೩॥ಬರಿಯಮಾತೋ ಚಾಪವಿದ್ಯದ। ಲರಿತವುಂಟೋ ಹೊತ್ತುಗಳೆಯದೆ। ಹೆರಿಸಿರೇ ಸಾರಿಯನು ನಿಮ್ಮಯ ಬಾಣಗರ್ಭಿಣಿಯ ॥ ಅರಿಯಲಹುದೆನಲಹುದಹುದು ಕೈ । ಮರೆಯದಿರು ಕೈಕೊಳ್ಳೆನುತ ಬೊ। ಬ್ಬಿರಿದು ಪಾರ್ಥನನೆದ್ದಿದನು ಬಾಣಾಂಬುರಾಶಿಯಲಿ ॥೩೪॥ ಒಳ್ಳಿತಿದು ಕೈಚಳಕವಾವನ । ಲಿಲ್ಲ ಹರಹರ ಪರಶುರಾಮನ । ನಲ್ಲಿ ಮೆಚ್ಚಿಸಿದಂದವನಿತೋ ಮತ್ತೆಬೇರಹುದೊ ॥ ಬಿಳ್ಳೆಗರಸೋಡಿಸಿದಸಹಸವ । ನಿಲ್ಲಿ ತೋರಲು ನೆನೆದಿರೇ ತ । ಪಲ್ಲತಪ್ಪಲ್ಲೆನುತ ಕಣೆಗಳಕವಿದನಾಪಾರ್ಥ ॥೩೫॥ ಬೋಡಿಮಾಡದಿರೆಲೆಕಿರೀಟಿ ವಿ । ಭಾಡಿಸುವುದರಿದೇ ದೊಠಾರಿಸಿ । ಮಾಡುವುದು ಘೊರೆಗುಚಿತವೇ ಗರುವಾಯಿಗಂಗವಿದೆ ॥ ನೋಡು ನೋಡಾದೊಡೆ ಕಪರ್ದಿಯ । ಕೂಪೆನೀ ಪೊಯ್ಯಾ ಟ್ಟಿ ಬಿಲ್ಲಸ ।ಘಾಡನಹೆ ಧಿಟಕಾಯ್ದು ಕೊಳ್ಳೆನುತೆಚ್ಚನಾಭೀಷ್ಮ॥೩೬॥ ಇದು ಹೊಸತು ಬಾಣಾಬ್ಧಿವೇಲೆಯ । ನೋಡಿದು ಹಾಯ್ದುದು ಭುವನವಳಿವಂ ।ದುದಯಿಸಿದವುಳೆಗಾ

ಲವ್ರೋವಮಾ ಶರಾವಳಿಯೊ॥ಹೊದರೆಡಸಿಕಿಡಿಯೆದ್ದು ದೆಸೆಗಳ।ಹೊದಿಸಿಹೊಳೆಹೊಳೆದರ್ಜುನನಮು। ತ್ತಿದವು ಕೆತ್ತಿದವರಿಯುಸೀಸಕ ಜೋಡುಮೊಚ್ಚೆಯುವ॥೩೭॥ ಹನುಮ ಮುಸೆಗಂಡನು ಮುರಾಂತಕ । ಕ ನಲಿದನು ಕಡುನೊಂದು ಪಾರ್ಥನ । ತನುವಿನಲಿ ಹೆಬ್ಬಟ್ಟೆಯಾದುದು ಬಾಣಪಥಕರಿಗೆ ॥ ಮೊನೆಗಣೆ ಯ ಮುಖದೋರೆ ರಥವನು । ತನುಗೊಡಹಿ ತರಹರಿಸಿ ತೇಜಿಗ । ಳನುವರಕೆ ಮುಖವಿರುಹಿದವು ಕಲಿ ಭೀಷ್ಮನುಪಟಳಕೆ ॥೩೮॥ ಬಸಿವರಕುತವ ಬಳಿದು ಖಾತಿಯು । ಮುಸಕದಲಿ ಮೈಮರೆದು ಮಿಗೆ ಝಳ ಪಿಸುತ ಹೊಗಂಡುತೌಡುಗಚ್ಚುತ ಹುಬ್ಬುಗಳ ಬಿಗಿದು ॥ ಹೊಸಮುಸೆಯ ಬಾಯಧ್ಧಾರೆಗಳ ಶರ । ವಿ ಸರವನು ತೊಡಚಿದನು ಭೀಷ್ಮನ । ಮುಸುಕಿದನುಮುಗುಳೆಚ್ಚು ಪುನರಪಿಕರೆದನಂಬುಗಳ ॥೩೯॥ ಮುತ್ತಿ ದವು ನರನಂಬುಕಣೆಗಳು । ಹುತ್ತಹೊಗುವಂದದಲಿ ಖಂಡವ । ತುತ್ತಿಹಾಯ್ದುವು ಕೆಲವುಕೆಲವೌಕಿದವು ಕಿಬ್ಬದಿಯ ॥ ಮುತ್ತಿದವು ಮೈಗಳಲಿ ತಲೆಯನು । ಕುತ್ತಿದವು ವಜ್ರಾಂಗಿಯಲಿ ಭಟ । ನತ್ತಲಿತ್ತ ಲೆನಲ್ಕೆ ಬಳಲಿಸಿದನು ನದೀಸುತನ ॥೪೦॥ ಜೋಡುಹರಿದುದು ತಾಳಹಳವಿಗೆ । ನೀಡಿ ಕೆಡೆದುದು ಸಾರ ಥಿಯ ಅಸು । ಕೂಡಿತಂತಕಪುರಿಗೆ ತೇಜಿಗಳುಸುರ ಕಾರಿದವು ॥ ಗೂಡುಗೊಂಡುದು ವಿಕ್ರಮಾನಳ । ನಾಡಬಾರದು ಭೀಷ್ಮನನು ಕೈ । ಮಾಡಿ ಕವಿಯಲಿ ದ್ರೋಣಗುರುಸುತರೆಂದುದಖಿಳಜನ ॥೪೧॥ ಸಾ ರು ಫಡ ಕೆಲಬಲದಹಂಗಿನ ।ವೀರತನವೇ ಭೀಷ್ಮಮುನಿದೊಡೆ । ಹೋರಟೆಗೆ ಬರಹೇಳು ಭಾರ್ಗವನಿವ ರಪಾಡೇನು ॥ ಸೈರಿಸಿದೆನಾಮಕ್ಕಳೆಂದೇ । ವೈರವನು ಕೈಕೊಳ್ಳೆನಿವನಿರೆ । ಧೀರತನವನು ನೋಡೆನುತ ಮುನಿದೆಚ್ಚನಾಭೀಷ್ಮ ॥೪೨॥ ಎಸಲು ಕಡಿದನು ಪಾರ್ಥಸಾತನ । ವಿಶಿಖವನು ಕಡಿದಿವರು ಕಿಡಿಸ । ಳ್ಳಿ ಸುವಧಾರೆಯು ಭೂರಿಬಾಣದ ಬಲೆಯು ಬೀಸಿದನು ॥ ಕುಸುರಿದರಿದನು ಮತ್ತೆ ನರನೋ । ಡಿಸಿದನಿವ ರಂಬುಗಳನವನಿಗೆ । ಹಸುಗೆಮಾಡಿದನಾತನೀತನ ಸಮರ ಸಮತಳಿಸಿ ॥೪೩॥ ಉರಗಬಾಣವನೀತ ಕರೆ ದನು । ಗರುಡಬಾಣವನಾತ ಕವಿಸಿದ । ನುರಿಯವಿಶಿಖವನವರು ಸಂಧಿಸಿದರು ಜಲಾಸ್ತ್ರದಲಿ ॥ ಗಿರಿ ಶಿಲೀಮುಖಕವರು ವಜ್ರವ । ಹರಿಸಿದರು ತಿಮಿರಾಸ್ತ್ರವೆದ್ದೊಡೆ । ತರಣಿಮಾರ್ಗಣದಿಂದ ಕಡಿದನು ಭೀಷ್ಮವಹಿಲದಲಿ ॥೪೪॥ ಆವವಿಧದಲಿ ಪಾರ್ಥನೆಸುವನ । ದಾವಬೇಗದಿ ಮುರಿವನೀತನ । ದಾವಚಾಪ ರಹಸ್ಯವಿದ್ಯೆಗಳೊಳಗೆ ಬಳಸಿದವೊ ॥ ಆವಿಧದಲಾಪಟುಯೆಲಾಸಂ । ಭಾವನೆಯಲಾಲುಳಿಯಲಾನಾ । ನಾವಿಧಾನದಲೊದಗಿ ಸರಿಮಿಗಿಲೆನಿಸಿದನು ಪಾರ್ಥ ॥೪೫॥ ಎರಡು ಶರದಲಿ ನರನು ಭೀಷ್ಮನ । ಕರದ ಕಾರ್ಮುಕದಂಡವನು ಕ । ತ್ತರಿಸಿದನು ಕೈಯೊಡನೆ ಕೊಂಡನು ಮತ್ತೆ ಹೊಸಧನುವ ॥ ಸರಳಸೂಠಿ ಯ ತೋರಿಸಿದನ । ಬ್ಬರಿಸಿ ಫಲುಗುಣನೈದುಬಾಣದ । ಲರಿಭಟನ ಚಾಪವನು ಕೆಡಿಮೂರಾಗಿ ಖಂಡಿ ಸಿದ ॥೪೬॥ ಮತ್ತೆ ಹೊಸಚಾಪದಲಿ ಭೀಷ್ಮನು । ಮೃತ್ಯು ಖತಿಗೊಂಡಂತೆ ಶರದಲಿ । ಕೆತ್ತನಾಕಾಶ ವನು ಕಡಿದನು ಪಾರ್ಥ ನಿಮಿಷದಲಿ ॥ ಮುತ್ತಯನಕರತಳದಧನುವನು । ಮತ್ತೆ ಕತ್ತರಿಸಿದನು ರಣದ ಲಿ । ಹತ್ತುಸಾವಿರಬಿಲ್ಲು ಸವೆದವು ಕುರುಪಿತಾಮಹನ ॥೪೭॥ ಉಲಿವಕಿರುಘಂಟೆಗಳ ಹೊಳೆಹೊಳೆ । ಹೊಳೆವಶಕುತಿಯ ತುಡುಕಿ ಭೀಷ್ಮನು । ಫಲುಗುಣನನಿಡೆ ಕಡಿದು ಬಿಸುಟನು ಮೂರುಬಾಣದಲಿ ॥ ಸೆಳೆದು ಫಲುಗುಣ ದಿವ್ಯಶಕ್ತಿಯ।ನೊಲಿದು ಮಂತ್ರಿಸಿ ಹೊನ್ನ ಘಂಟೆಗ। ಳುಲಿಯೆ ಕಡುಖತಿಯಿಂದ ಲಿಡೆ ಖಂಡಿಸಿದನಾಭೀಷ್ಮ ॥೪೮॥ ಆವಚಾಪವ ತುಡುಕಿ ಕೆನ್ನೆಗೆ । ತೀವಿಯೆಸೆಯುದಮುನ್ನ ಫಲುಗು

೧೮ । ನೋವದೆಸುವನು ಕಡಿದು ಬಿಸುಡುವನವನ ಬಿಲ್ಲುಗಳ ॥ ಅವದಿವ್ಯಾಸ್ತ್ರವನು ಕುಂತಿಯು । ಮಾವ ತೊಟ್ಟನು ತೊಡವವುನ್ನ ಶ । ರಾವಳಿಯು ಮುಂಕೊಂಡು ಖಂಡಿಸಿ ಪಾರ್ಥನೆಸುತಿರ್ದ ॥೪೯॥ ಮೇಲೆ ಹೇಳಿಕೆಯಾಯ್ತು ಕೌರವ । ರಾಳಿನಲಿ ದುಶ್ಶಾಸನಂಗೆ ಕ । ರಾಳ ಭೂರಿಶ್ರವಜಯದ್ರಥಗುರು ಕೃಪಾದ್ಯರಿಗೆ ॥ ಕೋಲಹೊದೆಗಳ ಭಂಡಿಯಲಿ ನಿ । ಸ್ಸಾಳ ಸೂಳಿನ ಲಗ್ಗೆಯಲಿ ಹೇ । ರಾಳದೊತ್ತ ವಣೆಯಲಿ ಪಡಿಬಲ ಕವಿದುದುರವಣಿಸಿ ॥೫೦॥ ನರನ ಬೆಂಬಲವಾಗಿ ಪಾಂಚಾ । ಲರನು ಮತ್ಸ್ಯನ ಭೀಮಸೇನನ । ವರ ನಕುಲ ಸಹದೇವ ಧೃಷ್ಟದ್ಯುಮ್ನ ಸಾತ್ಯಕಿಯು ॥ ಅರಸನಟ್ಟಿದನಿತ್ತಲಂಬಿನ । ತಿರುಹುವೆರಳಿನ ಮೊರೆವಬಿಲ್ಲಿನ । ವರರಥದ ದೂವಾಳಿ ಮೆರೆಯೆ ಶಿಖಂಡಿ ನಡೆತಂದ ॥ ಕಂಡನರ್ಜುನ ನೌಕಿ ಕವಿವತಿ । ಖಂಡಿಯನು ಮರುಘೂತುಪಾಯಕು । ಗಂಡುಗಲಿಯಹೆಜಾಗು ತೊಟ್ಟೆಸು ಭೀಷ್ಮ ನವೆಯುವವ ॥ ಕೊಂಡುನಡೆ ನೀನಂಜದಿರು ಕೈ । ಕೊಂಡು ನಿಲುವೆನೆನುತ್ತ ಫಲುಗುಣ । ಮಂಡಿಸಿದ ನಾಲಿದನು ಸೆಳೆದನು ಬೋಳೆಯಂಬುಗಳ ॥೫೨॥ ಒದರಿ ಜೇವಡೆಗೈದು ಬಾಣವ । ಕೆದರಿದನು ಧ ಟ್ಟೈಸಿ ಚಾಪವ । ನೊದೆದು ಹಾಯ್ದವು ತೋದವಂಬುಗಳರಿಯರಕುತದಲಿ ॥ ಇದಿರೊಳುಲಿದು ಶಿ ಖಂಡಿ ಶರಸಂ । ಗದಲಿ ಹೂಡಿದನಾಗ ಭೀಷ್ಮನ । ಹೃದಯದಲಿ ವೈರಾಗ್ಯವುನೆಗಟ್ಟಿದುದು ನಿಮಿಷದ ಲಿ ॥೫೩॥ ಎಲೆಮಹಾದೇವೀನಪುಂಸಕ । ನಲಿ ನಿರಂತರ ನಮಗೆ ಸಮರವೆ । ಗೆಲವಿದೊಳ್ಳಿತು ಸುಡುತಿ ಖಾಡಿಯಕೂಡೆ ಬಿಲುವಿಡಿದು ॥ ಅಳುಕದಚ್ಚನಲಾ ದುರಾತ್ಮನ। ನಿಲವ ತೆಗೆತೆಗೆಯೆನುತ ಚಾಪವ। ನಿ ಳುಹಿದನು ರಥದೊಳಗೆ ಗಂಗಾಸೂನು ತವಕದಲಿ ॥ ... ॥೫೪॥

ಅಂತು ಸಂಧಿ ೮ ಕ್ಕಂ ಪದ ೫೪೫ ಕ್ಕಂ ಮಂಗಳಮಸ್ತು.



## ಒಂಭತ್ತನೆಯ ಸಂಧಿ.

ಸೂಚನೆ॥ ಮಲೆತಕುರುಪಾಂಡವವಮಹೀಮಂ । ಡಲದ ಬುಧರಾಹವಧರಿತ್ರೀ । ನಿಳಯದಲಿ ರಂಜಿಸಿ ತು ಗಂಗಾಸುತನ ಶರಶಯನ ॥

ಪದ॥ ನರನ ಸರಳಿಗೆ ಮೈಯ ಕೊಟ್ಟನು । ಮುರಿದು ರಥವನು ನೆಮ್ಮಿ ನಿಜಮೋ । ಹರವ ನೋಡಿದ ಶಲ್ಯಗುರುಕೃಪಕೌರವಾನುಜರ ॥ ಕರೆದು ನುಡಿದನು ಪಾರ್ಥನಂಬಿನ । ಹೊರಳಿ ಹೊಳ್ಳಿಸು ತಿದೆ ಮದಂತಃ । ಕರಣ ಕಂದಿತು ಕಾಯಲಾಪೊಡೆ ಬನ್ನಿ ನೀವೆಂದ ॥೧॥ ಇವು ಶಿಖಂಡಿಯಬಾಣವೇ ಪಾ । ಸವನ ಮಗನಂಬುಗಳು ಪಿಲಯದ । ಶಿವನ ಶೂಲದ ಗಾಯಕಿವು ಮಿಗಿಲೇನನುಸುರುವೆನು ॥ ಇ ವನು ಸೈರಸಲಾರನಿಂದ್ರನ । ಪವಿಯ ಹೊಯ್ಲನು ಹೊಗುವೆನಂತ್ಯದ । ಜವನ ಲೌಡಿಯ ಹತಿಗೆ ಹೆ ದರೆನು ಕೇಳಿ ನೀವೆಂದ ॥೨॥ ಪರಶುರಾಮನ ಕೊಡಲಿಗಡಿತವ । ಧರಿಸಲಾಪೆನು ವಿಲಯಭೈರವ । ನಿರಿ ದೊಡಂಜನು ಸಿಡಿಲು ಹೊಯ್ದೊಡೆ ರೋಮ ಕಂಪಿಸದು॥ ಹರನ ಪಾಶುಪತಾಸ್ತ್ರಬಾಣವು । ಕೊರೆ ದೊಡೆಯು ಲೆಕ್ಕಿಸೆನು ಪಾರ್ಥನ । ಸರಳಬಾಧೆಗೆ ಸಿಲುಕಿದೆನು ಪರಿಹರಿಸಿ ನೀವೆಂದ ॥೩॥ ಹರಿಯ ಕಾ

ಮೋದಕಿಯ ಹೊಯ್ಲನು । ಬೆರಳಲಾನುವೆನಖಿಳಕುಲಗಿರಿ । ಬಿರಿದು ಬೀಳುವೊಡಾನಲಾಪೆನುನಖದ
ಕೊನೆಯಿಂದ ॥ ಧುರದೊಳಾದಿವರಾಹದಾಡೆಯ। ಲಿರಿದೊಡೆಯು ನರಸಿಂಹನಖದಲಿ । ಕೆರದ್ದೊಡೆಯು
ಸೈರಿಸುವೆ ನಂಜುವೆನರ್ಜುನನ ಶರಕೆ ॥೪॥ ಒಡಲನೊಚ್ಚತಗೊಂಡವಂಬಿನ । ಕುಟಿಗೆ ನೆರೆಯದು ರಕ್
ತ ಜಲವು । ಗ್ಗಡದಲುಗಿದಂಬುಗಳು ಬಂಬಲುಗರುಳ ಸೇದಿದವು ॥ ಉಡಿದವೆಲು ಬಾಣಂಗಳೆಲುವಾ
ಗಡಸಿದುವು ತನಿರಕ್ತಬಾಣವ । ನುಡುಗಿದವು ಶರವಿವು ಶಿಖಂಡಿಯ ಬಾಣವಲ್ಲೆಂದ ॥೫॥ ಚೇಳು ಬೆ
ನ್ನಿನಲೊಡೆದುಮೂಡುವ । ಬಾಲವೃಶ್ಚಿಕನಂತೆ ಮಸಗಿನ । ಬೋಳೆಯಂಬುಗಳೊಡೆದು ಕಣೆದೋರಿದ
ವು ಬೆನ್ನಿನಲಿ ॥ ಕೋಲುಪಾರ್ಥನವಿವು ಶಿಖಂಡಿಯ। ಕೋಲುಗಳು ತೃಣನ್ನ ನಿಂದುದು । ಕಾಳಗವು ತಮ
ಗೆನುತ ಮೆಲ್ಲನೆ ಮಲಗಿದನು ಭೀಷ್ಮ ॥೬॥ ವೀರಭಟಭಾಳಾಕ್ಷಭೀಷ್ಮನು । ಸಾರಿದನು ಧಾರುಣಿಯನಕ
ಟಾ । ಕೌರವನ ಸಿರಿ ಸೂರೆವೋಯಿತು ಹಗಗೆ ಗೆಲುವಾಯ್ತು ॥ ಆರನಾವಂಗದಲಿ ಬರಿಸದು । ಘೋ
ರವಿಧಿ ಶಿವಶಿವಯೆನುತಲಾ । ಸಾರಥಿ ಮಹಾಖೇದದಲಿ ತುಂಬಿದನು ಕಂಬನಿಯ ॥೭॥ ಹೂಳಿಹೋ
ಯಿತು ಬಾಣದಲಿ ಮೈ । ತೋಳು ತೊಡೆತುಂಡೆದ್ದು ರಕ್ತದ । ಸಾಲು ತೊರಳೆಯ ಕರುಳ ಕುಸು
ರಿಯ ಬಸಿವನೆಣವಸೆಯ ॥ ಮೂಳೆಯೊಟ್ಟಿಲ ನೆಲನ ಮುರಿದೆಲು । ಜಾಳಿಯಲಿಹೊಗರೊಗುವಕೆಂ
ಗರಿ । ಗೋಲ ಮಂಚದಮೇಲೆ ರಣದಲಿ ಭೀಷ್ಮಪವಡಿಸಿದ ॥೮॥ ಒರಲಿಕಡೆದರು ಹಡಪಿಗರು ಸೀ । ಗು
ರಿಯಚಾಮರದವರು ತನ್ನಯ । ಅರಮನೆಯ ವಿಶ್ವಾಸಿಗಳು ಬಿಲುಸರಳ ಹಿಡಿವವರು ॥ ಗುರುವಲಾ
ಮುತ್ತ್ಯಯ ನಮ್ಮನು । ಹೊರೆದದಾತಾರಂಗೆ ತಪ್ಪಿದ । ರುರುನರಕಿ ಪಾಪಿಗಳು ಪಾಂಡವರೆಂದು
ಹೊರಳಿದರು ॥೯॥ ಬೆದರು ತವನಿಧಿಯಾಯ್ತು ಪಟುಭಟ । ರೆದೆಗಳಿಬ್ಬಗಿಯಾಯ್ತು ನೃಪನ । ಭ್ಯು
ದಯ ಕೈಸೆರೆವೋಯ್ತು ಸುಕ್ಕಿತು ಮನದ ಸುಂಮಾನ ॥ ಹೊದರೊಡೆದು ಕುರುಸೇನೆ ತೆಗೆದೋ। ಡಿದು
ದು ಭಯಜಲಧಿಯಲಿ ತೇಕಾ । ಡಿದರು ಕೌರವಜನಪರಾಭೀಷ್ಮಾವಸಾನದಲಿ ॥೧೦॥ ಭೀತಿಬೀತುದು ಹ
ರುಷವಲ್ಲರಿ । ಹೂತುದವರಿಗ ವಿಜಯಕಾಮಿನಿ । ದೂತಿಯರ ಕಳುಹಿದಳು ತನಿಹೊಗರೇರಿತುತ್ಸಾಹ ॥
ಸೋತುದಾಹವ ಚಿಂತೆ ಸರಿದುದು । ಕಾತುರತೆಗೆಡೆಗುಡದನುಡಿಭಾ । ವಾತಿಶಯವೊಂದಾಯ್ತು ಪಾಂ
ಡವಬಲದ ಸುಭಟರಿಗೆ ॥೧೧॥ ಮಲಗಿದನು ಕಲಿಭೀಷ್ಮನೆನೆ ಕಳ । ವಳಿಸಿದನು ಕುರುರಾಯನುದರ
ದೊ । ಳಿಳಿದುದಾಯುಧವೆಂಬತೆರದಲಿ ತಳ್ಳಬಾರದನು ॥ ಬಲಿದುಸುರ ಬಿಸುಸುಯ್ಲ ಕಾಯದ । ಕಳಕ
ಳದ ಕಂಬನಿಯ ಕಂಗಳ । ಲಿಳಿವಕದಪಿನ ಹೊತ್ತದುಗುಡದ ಮೊಗದಲೈತಂದ ॥೧೨॥ ಎಡೆಮುರಿದು
ದೈಶ್ವರ್ಯವಿನ್ನೇ । ನೊಡೆದಭಿತ್ತಿಯ ಚಿತ್ರದೆಡೆಯನು । ಕಡೆಗೆ ಬಂದುದು ಕೌರವಾನ್ವಯಶಿವಮಹಾ
ದೇವ ॥ ಹಿಡಿದದುಗುಡದ ಕವಿದಮುಸುಕಿನ । ಗಡಣದಲಿ ಗುರುಕೃಪಜಯದ್ರಥ । ರೊಡನೊಡನೆ ಬ
ರುತಿರ್ದುದಖಿಳಮಹೀಶಪರಿವಾರ ॥೧೩॥ ಕುದುರೆ ಕಂಬನಿಯಿಕ್ಕಿದವು ಮೈ । ಬಿದಿರಿದವು ದಂತಿಗಳು
ಕಾಲಾ। ಳೊದುರುತಿರ್ದರು ಕುಂದಿತೇ ಕೌರವನ ಕಡುಹೆನುತ ॥ ಬದರ ಬಂದಿಗೆ ಸಿಲುಕಿತವನಿಪ। ರದ
ಟು ವಿಕ್ರಮವಹ್ನಿ ತಂಪೇ । ರಿದುದು ಕಡುದುಂಮಾನಕೇಣಿಯ ಪಿಡಿದುದರಿಸೇನೆ ॥೧೪॥ ಬಂದು ಭೀ
ಷ್ಮನ ಚರಣಕಮಲದ । ಲಂದು ಕಾಯುವ ಕೆಡಹಿ ವಿಗತಾ । ನಂದಭೂಪತಿ ಹೊರಳಿದನು ಹೇರಾಳ
ಶೋಕದಲಿ ॥ ಒಂದು ಮಗ್ಗುಲ ಕೆಲದಲಿವರ್ಸ್ತ । ತಂದು ನಿಂದರು ಗುರುಕೃಪಾದಿಗ। ಳೊಂದುಮಗ್ಗು

ಲಕೆಲನ ಸಾಂತ್ವ ಕೃಷ್ಣ ಸಹಿತಿವರು ॥ ಕವಿದವುಸುಕಿನ ಕಂದಿದಾನನ । ದವನಿಪತಿಯುಮಸೂನುಗಂಗಾ । ಭವನ ಮಗ್ಗುಲಿಗೈದುತಿರ್ದನು ಬಹಳ ಶೋಕದಲಿ ॥ ಪವನಸುತಸಹದೇವಸಾತ್ಯಕಿ । ದಿವಿಜಪತಿಸುತರಾದಿಯಾದವ । ರವಿರಳದಶೋಕಾಗ್ನಿ ತಪ್ತರು ಹಂತಿಗಟ್ಟಿದರು ॥೧೬॥ ಏನನೆನೆದಾವುದನೊಡರ್ಚಿದೆ । ನೇನ ಹೇಳುವೆನೆನ್ನ ಪುಣ್ಯದ । ಹಾನಿಯನು ಕೈತಪ್ಪನೆನೆದೆನು ನಿಮ್ಮ ಸಿರಿಪದಕೆ ॥ ತಾನದಾವುದೊ ಧರ್ಮತತ್ವನಿ । ಧಾನವೆಂದರಿಯದೆ ಕೃತಾಂತಂ । ಗಾನುಹಂಗಿಗನಾದೆನೆಂದೊರಲಿದನು ಯಮಸೂನು ॥೧೭॥ ಭೇದವೇಕೆಲೆಮಗನೆ ನಿನ್ನೊ । ಪಾದಿಯಲಿ ಚರಿತಾರ್ಥನಾವೆನು । ಮೇದಿನಿಯೊಳಾವಮಾತು ಸಾಕ್ಷಿಕ್ಷಾತ್ರಧರ್ಮವನು ॥ ಆದರಿಸುವುದೆ ಧರ್ಮ ನಿಮಗಪ । ರಾಧಪಾತಕವಿಲ್ಲ ಸುಕೃತ । ಕ್ಷೀದಯಾಂಬುಧಿಕೃಷ್ಣ ಹೊಣೆ ನಿಮಗಂಜಲೇಕೆಂದ ॥೧೮॥ ಮಗನೆ ನಿಂದಿರು ಪಾರ್ಥ ಕೂರಂ । ಬುಗಳ ಹಾಸಿಕೆಯಿಂದವಾಯಿತು । ಹೊಗರಲಗತಲಗಿಂಬರಚಿಸೆನೆ ಪಾರ್ಥ ಕೈಕೊಂಡು ॥ ಬಿಗಿದಬಿಲುಗೊಂಡೆದ್ದು ಮಂಡಿಸಿ । ಹೊಗರ ಕವಲಂಬೈದನೆಚ್ಚನು । ನೆಗಹಿದನುಮಸ್ತಕವಸಾಕ್ಷಣ ಕೇಳು ಧೃತರಾಷ್ಟ್ರ ॥ ಹೊಳೆವಕಣೆಗಳ ಮಂಚ ತಲೆಗಿಂ । ಬಳವಡಿಕೆಯಲಿ ಭೀಷ್ಮಸುಖದಲಿ । ಮಲಗಿದನು ಬಹಿರಂಗಭುವನವ್ಯಾಪ್ತಿಯನು ಮರೆದು ॥ ನಳಿನನಾಭನ ದಿವ್ಯನಿಜವನು । ಬಲಿದು ಮನದಲಿ ಹಿಡಿದನೋವಿನ । ಕಳಕಳಕೆ ಧೃತಿಗೆಡದೆ ಮೆರೆದೆನು ಶಸ್ತ್ರಶಯನದಲಿ ॥೨೦॥ ಒಡಲ ಜಡಿದವು ರೋಮರೋಮದೊ । ಳಡಸಿದಂಬುಗಳಂಗವೇದನೆ । ತೊಡರುತುಬ್ಬರಿಸಿತ್ತು ಧಗೆ ಗೋನಾಳಿನೀರ್ದಗೆಯೆ ॥ ನುಡಿಯಲಾರೆನು ಮಕ್ಕಳಿರ ನೀ । ರಡಸಿದೆನು ಪಿರಿದಾಗಿಯೆನೆ ನಡ । ನಡುಗ ದುರಿಯೋಧನನು ದೂತರ ಕರೆದು ನೇಮಿಸಿದ ॥೨೧॥ ತಳಿಸಿದನು ಹಿಮರುಚಿಯ ಹಿಂಡಿದ । ಪರಮ ಶೀತೋದಕವು ತಾನೆನೆ । ಸುರಭಿಪರಿಮಳಪಾನವನು ಪರಿಪರಿಯಕುಡಿನೀರ ॥ ಸರಸಬಹುವಿಧಭಕ್ಷ್ಯಭೋಜ್ಯವ । ನೆರಹಿದನು ಕುಡಿನೀರಗಿಂಡಿಯ ನರಸನೀಡಲು ಕಂಡು ನಕ್ಕನು ಭೀಷ್ಮನಿಂತೆಂದ ॥೨೨॥ ಪರನೋವಿನಲಾದತೃಷ್ಣೆಯ । ನಾರಿಸಲು ಯಿವರಳವೆಸಾಕಿವ । ತೋರದಿರು ತೆಗೆ ತೊಲಗು ಮೂಢರಪರಮಗುರ್ಬು ನೀನು ॥ ಆರಿತೈ ಗೋನಾಳಿ ಫಲುಗುಣ । ತೋರು ನಿನ್ನರಿಕೆಯನು ಸಲಿಲವ । ಬೀರು ಬೇಗದಲೆನಲು ಬಿಲುಗೊಂಡೆದ್ದನಾಪಾರ್ಥ ॥೨೩॥ ಜಲದಬಾಣದಲಮಳಗಂಗಾ । ಜಲವ ತೆಗೆದನು ತಪ್ತಲೋಹದ । ಬೆಳಕಿನಂತಿರೆ ಹೊಳೆವಸುಲಲಿತಬಹಳಧಾರೆಯನು ॥ ಇಳುಹಿದನು ಸರಳಿಂದ ವದನದ । ಬಳಿಗೆ ಬಲುತೃಷ್ಣೆಯನು ಭೀಷ್ಮಗೆ । ತೊಲಗಿಸಿದನಾತಾಪ ಮಡಗಿತು ಜಲದಧಾರೆಯಲಿ ॥೨೪॥ ಸಾಕುಸಾಕೈ ತಂದೆ ತನ್ನನು। ಸಾಕಿಕೊಂಡೈ ಪಾರ್ಥ ಘನತೃ । ಷ್ಣಾಕುಲತೆಬೀಳ್ಕೊಂಡುದತಿಶಯತುಷ್ಟಿ ತನಗಾಯ್ತು ॥ ಸಾಕೆನುತ ಫಲುಗುಣನ ಪರಮವಿ । ವೇಕವನು ಪತಿಕರಿಸಿ ನೆರೆಚಿಂತಾ । ಕುಳನ ಮಾಡಿದನು ಕೌರವರಾಯನನು ಭೀಷ್ಮ ॥೨೫॥ ತಂದೆ ಕಂಡೈ ಕೌರವೇಶ ಪು । ರಂದರಾತ್ಮಜನಳಬಳವನೇ । ನೆಂದು ಕಾಣಲು ಬೇಹುದೈ ಹಲವಂಗದಲಿ ನರನ ॥ ಹಿಂದಣೆಡೆಯಲಿ ದ್ರೋಣಕೃಪಗುರು । ನಂದನಾದಿಗಳೆಲ್ಲ ಬಲ್ಲರು । ಮಂದಮತಿಯನು ಬಿಡುವುದರಸ ಕೃಪಾಳುವಾಗೆಂದ ॥೨೬॥ ಆಳಿದರೊಡಹುಟ್ಟಿದರು ಹಲಬರು । ನೆಲನರಾಯರು ಸವೆದುದತಿಬಲ । ರಳುಕುವರು ನರನೆಂದೊಡೀದ್ರೋಣಾದಿನಾಯಕರು ॥ ಅಲಗಿನಂಬಿನ ಹಕ್ಕೆ ನಮಗಾ । ಯ್ತೊಳಜಗಳ ಸಾಕಿನ್ನು ಸೋದರ। ರೊಳಗೆ ಸಂಪ್ರತಿಯಾಗಿ ಬದುಕುವುದೆಂದನಾಭೀಷ್ಮ ॥೨೭॥ ನಿನಗೆ

ರೋಚಕ ನಮ್ಮಮಾತುಗ । ಳಿನಿಬರಿಗೆ ರುಚಿಸುವವು ಪಾಂಡವ । ರನುಮತವು ಬೇರಿಲ್ಲ ನಿನ್ನನುಮತ್ತ ವ ಬಯಸುವರು ॥ ತನುಜ ಕದನದ ಕಷ್ಟತನ ಬೇ । ಡೆನಗೆ ಉಪಕಾರವು ವೃಥಾಕುರು । ವನಕೆ ವ್ಯಾ ಯ ಬಿತ್ತಬೇಡೆಕಟೆಂದ ನಾಭೀಷ್ಮ ॥೨೮॥ ಮಾತುಕಿವಿವೊಗದಾನುಸವರ । ಕ್ಯಾತುರದ ಛಲದಂಕನಂ ಬೀ । ಮಾತ ಮರೆವವನಲ್ಲ ಕೇಳ್ ರಾಜ್ಯಾಭಿಲಾಷೆಯಲಿ ॥ ಸೋತಮನದವನಲ್ಲ ಭುವನ । ಖ್ಯಾತನೆನಿ ಪೊಂದಾನುಡಿಯೆ ಧಿಟ । ನೀತಿಗಳೆದರೆ ಬಳಿಕ ನಿಮ್ಮಯ ಮೊಮ್ಮನಲ್ಲೆಂದ ॥೨೯॥ ಮೊದಲೊಳೆಂ ದಿರಿ ನೀವು ಬಳಿಕೀ । ಯದುಕುಲಾಧಿಪಕೃಷ್ಣನುರೆಹೇ । ಳಿದನು ಋಷಿಗಳು ಬೊಪ್ಪನವರೀಹದನ ಹೇ ಳಿದರು ॥ ವಿದುರ ಹೇಳಿದನೆಲ್ಲರಿಗೆ ತಾ । ನಿದುವೆ ನಿಶ್ಚಯವೆನ್ನಮತನೀ । ಗದಿದು ಬುದ್ಧಿಯ ಹೇಳಬೇ ಡೆಂದೆರಗಿದನು ಪದಕೆ ॥೩೦॥ ಒಂದುಮತವೆಮಗೊಂದುನುಡಿ ಮನ । ವೊಂದು ಮತೊ್ತಂದಿಲ್ಲ ಸಾಕಿ ದ । ನೆಂದ ಫಲವೇನಿನ್ನು ಸಂಧಿಯ ಪಾಂಡುತನಯರಿಗೆ ॥ ಇಂದು ನಿಮಗೀಹದನಸಾನ್ನೆ । ತಂದು ಬ ಳಿಕಿನ್ನೊಡಲ ಸಲಹುವೆ। ಚಂದವೊಳ್ಳಿತು ತಪ್ಪನಾಡಿದರೆಂದು ನೃಪ ನುಡಿದ ॥೩೧॥ ಕಾಯದಲಿ ಕಕ್ಕುಲಿ ತೆಯೆನಗದ । ರಾಯಸವು ತನಗೇಸುದಿನಕೆ । ಲ್ಪಾಯುಗಳಿಗೊಳಗಾಗಿ ಕಾಲನ ರಾಜಕಾರಿಯವು ॥ ಹೇ ಯಸದಸಿರಿಯಿದರವ್ಯಿವಶ । ದಾಯತದ ಮನದಲ್ಲಿ ಪಾಂಡವ । ರಾಯಮಸ್ತಕಶೂಲನೆಂಬೀಬಿರುದ ಬಿಡೆನೆಂದ ॥೩೨॥ ಎಲವೊ ಭೀಷ್ಮನಮಾತುಗಳ ನೀ। ನೊಲುವೊಡೆಯು ಸಂಧಾನದಲಿ ನೀ । ನಿಲುವೊ ಡೆಯು ದೇಹಾಭಿಲಾಷೆಗೆ ಬಲಿವೊಡೆಯು ಮನವ ॥ ಒಲಿವೆನೇ ತಾಭೀಮಸಂಧಿಯ । ಕಳಚಿನಿನ್ನೊಡ ಹುಟ್ಟಿದಾತನ । ತಿಳಿರಕುತವನು ಕುಡಿದೊಡಲ್ಲದೆ ಬರಿದೆಬಿಡೆನೆಂದ ॥೩೩॥ ಹಾನುಡಿಯದಿರು ಕುರುಪಿ ತಾಮಹ । ನೇನಬೆಸಸಿದುದಕೆ ಹಸಾದವು । ನೀನು ನಡೆ ಪಾಳಯಕೆ ಮಿಡುಗಲಿತನವ ಮಾಣೆಯಲಾ ॥ ಮೌನಮುದ್ರೆಯ ಹಿಡಿಯೆನಲು ಪವ। ಮಾನನಂದನ ಖಾತಿಯಲಿ ಯಮ। ಸೂನುವನು ನೋಡುತ್ತಲಿ ದ್ದುದು ಸರಿದನಲ್ಲಿಂದ ॥೩೪॥ ಬೀಳುಕೊಡಿರೇ ಸಾಕು ಭೀಮನು । ಬಾಲಭಾಷಿತನಾದನೀಭೂ । ಪಾಲ ಕೌರವನೆಂಬವನು ಮೊದಲಿಗನು ಮೂರ್ಖರಿಗೆ ॥ ಕಾಳಗದೊಳೊಡೆಹಾಯ್ದು ಸಾಯಲಿ। ಬಾಳಲೊಲಿ ದಂತಾಗಿ ಹೋಗಲಿ । ಹೇಳಿದಿರಿ ನಿಮ್ಮಿಂದ ತಪ್ಪಿಲ್ಲೆಂದನಸುರಾರಿ ॥೩೫॥ ಮುರಹರನ ಮತವಹುದು ಸಾಕಿ । ನ್ನುರಸ ಧರ್ಮಜ ಹೋಗು ದ್ರುಪದಾ। ಧ್ಯರಿಗೆ ನೇಮವುಪಾರ್ಥ ಮರಳ್ಳೈ ತಂದೆ ಪಾಳಯಕೆ ॥ ಧರೆಯಲೋಲುಪ್ತಿಯಲಿ ನಮ್ಮನು । ಧುರದೊಳಗೆ ನೋಯಿಸಿದೆವೆಂಬೀ । ಧರಧುರವ ನೆನೆಯದಿರಿ ವಿ ಜಯಿಗಳಾಗಿ ಹೋಗೆಂದ ॥೩೬॥ ಇವರು ಕಳುಹಿಸಿಕೊಂಡರೀಮಾ । ಧವನ ಮೆಲ್ಲಡಿಗಳನು ಹೃದಯ ದ । ಲವುಚಿ ಕಂಗಳಮುಚ್ಚಿ ದೇವನಮೂರ್ತಿಯನು ನೋಡಿ ॥ ಸವೆಯದಚಲಾನಂದಬಹಳಾ । ರ್ಣವ ದೊಳಗೆ ಮುಳುಗಾಡಿ ಲಕ್ಷ್ಮೀ । ಧನನನ ಕಳುಹಿದ ನಿತ್ತಬೀಳ್ಕೊಟ್ಟನು ಸುಯೋಧನನ ॥೩೭॥ ಭು ವನದೊಳಗೌಚಿತ್ಯಪರಿಪಾ । ಕವನು ಬಲ್ಲಿರಿ ಕೌರವನ ಪಾಂ । ಡವರ ವೃತ್ತಾಂತದ ರಹಸ್ಯದ ನೆಲೆಯ ನುಡಿಹಿರಿ ॥ ನಿಮಗೆ ಬೇರೊಂದಿಲ್ಲ ನಾವ್ಹೇ । ಳುವುದು ಕೃಷ್ಣನು ನೇಮಿಸಿದ ಮಾ । ಡುವುದೆನುತ ದ್ರೋಣಾದಿಗಳ ಕಳುಹಿದನು ಕಲಿಭೀಷ್ಮ ॥೩೮॥ ಬೀಳುಕೊಂಡರು ರಾಯರಿಬ್ಬರು । ಪಾಳೆಯಂಗಳಿಗಿ ತ್ತ ಪಡುವಣ। ಶೈಲನಿಗಳಸ್ತಂಭದೀಪಿಕೆಯಂತೆ ರವಿ ಮೆರೆದ॥ ಮೇಲುಮುಸುಕಿನ ಹೊತ್ತದುಗುಡದ। ಕಾಳಗದ ದುಮ್ಮಾನಜಲಧಿಯ ಕಾಲುವೆಗಳೆನೆ ಕೌರವನು ಹೊಕ್ಕನು ನಿಜಾಲಯವ ॥೩೯॥ ಇವರು ಭೀ

ಷ್ಮನ ಬೀಳುಕೊಂಡು । ತ್ಸಹದಿ ಹರುಷದಲೊಮ್ಮೆಗಂಗಾ । ಭವಗೆ ತಪ್ಪಿದದುಗುಡ ಭಾರದಲೊಮ್ಮೆ ಚಿಂತಿಸುತ ॥ ಕವಲುಮನದಲಿ ಕಂಪಿಸುತ ಶಿಬಿ । ರವನು ಹೊಕ್ಕರು ಭೀಮಸೇನಾ । ನಿವಹಸಹಿತೀ ವೀರನಾರಾಯಣನ ಕರುಣದಲಿ ॥ ... ... ॥೪೦॥

ಅಂತು ಸಂಧಿ ೯ ಕ್ಕಂ ಪದ ೫೧೫ ಕ್ಕಂ ಮಂಗಳಮಸ್ತು.



ಇತಿ ಶ್ರೀಮದಚಿಂತ್ಯಮಹಿಮ ಗದುಗು ವೀರನಾರಾಯಣ ಚರಣಾರವಿಂದ ಮಕರಂದ ಮಧುಪಾಯಮಾನ ಪುಷ್ಟವಚಃ ಪಟ್ಟದಿನಿಕಾಯ ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ನಾಟ ಭಾರತ ಕಥಾಮಂಜರಿಯೊಳ್ ಭೀಷ್ಮಪರ್ವಂ ಸಮಾಪ್ತ ಮಾದುದು.



ಶ್ರೀರಸ್ತು

ಶ್ರೀ ವೇದವ್ಯಾಸಾಯನಮಃ.



# ಕನ್ನಡ ಮಹಾಭಾರತ ದ್ರೋಣಪರ್ವ.



## ಮೊದಲನೆಯ ಸಂಧಿ.

॥ಸೂಚನೆ॥ ರಾಯಕಟಕಪಿತಾಮಹನತರು । ನಾಯಲಭಿಷೇಕವನು ಕೌರವ । ರಾಯ ಮಾಡಿಸಿ ಪತಿ ಕರಿಸಿದನು ಕುಂಭಸಂಭವನ ॥

॥ಪದ॥ ಸೋಸಿಲಿತ ಕರ್ಣಾಮೃತದ ಮಳೆ । ಗಾಲನಿಮ್ಮಯ ಕಿವಿಗಳನು ನೆರೆ । ಕೇಳಿದ್ಯೆಕೌರವನ ಕದನದ ಬಾಲಕೇಳಿಗಳ ॥ ಹೇಳುವುದು ತಾನೇನು ಕೆಂಗರಿ ಗೋಲಮಂಚದ ಮಹಿಮನಿರವನು। ಮೇಲು ಪೋಗಿನಕಥೆಯನವಧಾನದಲಿ ಕೇಳೆಂದ ॥೧॥ ಬತ್ತಿತಂಬುಧಿನಿನ್ನಮಗ ಹೊಗು । ವತ್ತ ಕಾದುದು ನೆಲನು ನೃಪತಲೆ ಗುತ್ತಿಹೊಗಲೊಳಕೊಳ್ಳದಂಬರವೇನನುಸುರುವೆನು ॥ ಮೃತ್ಯುನಿನಗೂಲಿದಿಹಳುಬಳಿಕಿ ನ್ನುತ್ತರೋತ್ತರವೆಲ್ಲಿಯದು ನೆರೆ । ಚಿತ್ತಯಿಸುವುದುಜೀಯ ದ್ರೋಣರಂಗಾಯ್ತು ಹರಿವೆಂದ ॥೨॥

ಅಯ್ದುದಿವಸದೊಳಹಿತಬಲವನು । ಹೊಯ್ದುಹೊಯ್ದುಕಟ್ಟಾಡಿ ರಿಪುಗಳೊ । ಳಾಯ್ದು ದೊರೆಗಳನಿರಿದು ಮೆರೆದನು ಭುಜಮಹೋನ್ನತಿಯ ॥ ಕಯ್ದುಕಾರರಗುರು ವಿಭಾಡಿಸಿ । ಮೆಯ್ದೆಗದು ನಿರ್ಜರರ ನಗರಿಗೆ। ಹಾಯ್ದನೆನಲುರಿ ಜಠರದಲಿಮೋಹರಿಸಿತವನಿಪನ ॥೩॥ ಶಿವಶಿವಾ ಭೀಷ್ಮಾವಸಾನ । ಶ್ರವಣವಿಷವಿದೆ ಮತ್ತೆ ಕಲಶೋ । ದ್ಭವನದೇಹವ್ಯಥೆಯಕೇಳ್ದೆನೆ ಘೂತುವಿಧಿಯೆನುತ ॥ ಅವನಿಪತಿದುಗುಡದಲಿ ಮೋರೆಯೊ । ಳವಚಿದನು ಕರತಳವ ಚಿತ್ತದ । ಹವಣಿಗೆಯ ಭಾರಣೆಯ ಕಡುಶೋಕದಲಿ ಮೈಮರೆದ ॥೪॥ ಶೋಕವೇತಕೆ ಜೀಯ ನೀನವಿ । ವೇಕಿತನದಲಿ ಮಗನ ಹೆಚ್ಚಿಸಿ । ಸಾಕಿ ಕಲಿಸಿದೆ ಕುಟಿಲತನವನು ಖುಲ್ಲವಿದ್ಯೆಗಳ ॥ ಆಕೆವಾಳರು ಹೊರಿಗೆಯುಳ್ಳವಿ । ವೇಕಿಗಳು ನಿಮ್ಮಲ್ಲಿ ಸಲ್ಲರು । ಸಾಕದೇತಕೆ ಸೈರಿಸೆಂದನು ಸಂಜಯನು ನೃಪಗೆ ॥೫॥ ಆರು ಕುಹಕಿಗಳಾರುದುರ್ಜನ । ರಾರು ಖುಲ್ಲರುನೀತಿಬಾಹಿರ । ರಾರು ದುರ್ಬಲರವರು ನಿನ್ನರಮನೆಯ ಮಂತ್ರಿಗಳು ॥ ಆರು ಹಿತವರು ನೀತಿಕೋವಿದ । ರಾರುಸಜ್ಜನಬಹುಪರಾಕ್ರಮ । ರಾರಿವರಹೊರಬೀಸಿ ಕಾಬುದು ನಿನ್ನಮತವೆಂದ ॥೬॥ ಹರಿದುದೈಕುರುಸೇನೆ ಬತ್ತಿದ । ಕೆರೆಯೊಳಗೆ ಬಲೆಯಾಕಹಗೆಹೊ । ಕ್ಕಿರಿದರಿನ್ನಾರಡ್ಡಬೀಳ್ವರು ನಿನ್ನ ಮಕ್ಕಳಿಗೆ॥ ಬರಿದೆಮನನೋಯದಿರುಸಾಕೆಚ್ಚರುವುದೆನ ತನ್ನೊಳಗೆ ಹದುಳಿಸಿ। ಸರಿಹೃದಯನೀಮಾತನೆಂದನು ಮತ್ತೆ ಸಂಜಯನು ॥೭॥ ಗಾಸಿಯಾದೆನು ಮಗನ ಮೇಲಿ । ನ್ನಾಸೆ ಬೀತುದು ಬೆಂದಹುಣ್ಣಿಲಿ । ಸಾಸವೆಯ ಬಳಿಯದಿರು ಸಂಜಯ ನಿನಗೆದಯವಿಲ್ಲ ॥ ಏಸುಬಲುಹುಂಟಾದೊಡೆಯು ಹಗೆ । ವಾಸುದೇವನಹರಿಬವೆಂದಾ । ನೇಸನೊರಲಿದೆನೇನು ಮಾಡುವೆನೆಂದನವನೀಶ ॥೮॥ ಬೇಡಮಗನೇ ಪಾಂಡುಸುತರಲಿ । ಮಾಡು ಸಂಧಿಯ ನಸುರವೈರಿಯ । ಕೂಡೆ ವಿಗ್ರಹವೊಳ್ಳಿತೇ ಹಗೆಹೊಲ್ಲದೇವರಲಿ ॥ ಪಾಡುತಪ್ಪಿದಬಳಿಕ ವಿನಯವ । ಮಾಡಿಮೆರೆವುದು ಬಂಧುವರ್ಗದ । ಕೂಡೆವಾಸಿಗಳೇಕೆಕೆಮ್ಮನೆನಿನ್ನ ಮನವರಿಯೆ ॥೯॥ ಹೋಗಲಿನ್ನಾಮಾತುಖೂಳರು । ತಾಗಿಬಾಗರು ಸುಕೃತದುಷ್ಕೃತ । ಭೋಗವದು ಮಾಡಿದರಿಗಪ್ಪುದು ಭೇದ ನಮಗೇಕೆ ॥ ಈಗಳಿನ ಕದನದಲಿ ವಜ್ರಕೆ । ಬೇಗಡೆಯ ಮಾಡಿದನದಾವನು । ತಾಗಿದ್ರೋಣನ ಮುರಿದಪರಿಯನು ರಚಿಸಿಹೇಳೆಂದ ॥ ಚಿತ್ತವಿಸು ಧೃತರಾಷ್ಟ್ರಮಲಗಿದ । ಮುತ್ತಯನ ಬೀಳ್ಕೊಂಡು ಕೌರವ । ರಿತ್ತಸರಿದರು ಪಾಂಡುನಂದನರತ್ತ ತಿರುಗಿದರು ॥ ಹೊತ್ತವೌನದ ವಿವಿಧವಾದ್ಯದ । ಕೆತ್ತಬಾಯ್ಗಳ ಪಾಠಕರತಲೆ । ಗುತ್ತುಗೆಯಮೋರೆಯಮಹಿಪತಿ ಪೊಕ್ಕನರಮನೆಯ ॥೧೧॥ ಗಾಹುಕೊಳ್ಳದು ಭೀಮಪಾರ್ಥರ । ಸಾಹಸವನೆಣಿಸುತ ಕಠಾರಿಯ। ಮೋಹಳದಮೇಲಿಟ್ಟಗಲ್ಲದ ಮಕುಟದೊಲಹುಗಳ ॥ ಊಹೆದೆಗಹಿನ ಕಂಬನಿಯೆ ತನಿ । ಮೋಹರದ ಘನಶೋಕವನ[illegible]ು । ಮೇಹುಗಾಡಿನ ಮನದ ಕೌರವನಿತ್ತನೋಲಗವ ॥೧೨॥ ಗುರುತನುಜವೃಷಸೇನಮಾದ್ರೇ । ಶ್ವರವಿಕರ್ಣಕಳಿಂಗಸೈಂಧವ । ದುರುಳಶಕುನಿಸುಕೇತುಭೂರಿಶ್ರವಜಯದ್ರಥರು ॥ ವರಸುಲೋಚನವಿಂಧ್ಯಯವನೇ । ಶ್ವರರು ಕೃಪಕೃತವರ್ಮಭಗದ। ತ್ತರು ಮಹಾಮಂತ್ರಿಗಳು ಬಂದರು ರಾಯನೋಲಗಕೆ ॥೧೩॥ ತೊಡರಝಣಝಣರವದ ಹೆಗಲಲಿ । ಜಡಿವಹಿರಿಯುಬ್ಬಣದಹೆಚ್ಚಿದ । ಮುಡುಹುಗಳ ಮಿಗೆ ಹೊಳೆವಹೀರಾವಳಿಯ ಕೊರಳುಗಳ ॥ ಕಡುಮನದ ಕಲಿರಾಜಪುತ್ರರ । ನಡುವೆ ಮೈಪರಿಮಳದ ದೆಸೆಕಂ। ಪಿಡುತ ಭಾರವಣೆಯಲಿ ಬಂದನುಕರ್ಣನೊಲವಿನಲಿ ॥೧೪॥ ಇತ್ತಬಾರ್ದೈಕರ್ಣಕು

ರುಕುಲ । ಮತ್ತೆವಾರಣ ಕುಳ್ಳಿರ್ದ್ದೆ ಬಾ । ಯಿತ್ತ ಬಾತನ್ನಾಣೆಯೆನುತವೆ ಸೆರಗ ಹಿಡಿದೆಳೆದು ॥ ಹ ತ್ತಿರಾತನ ನಿಲಿಸಿ ಬಟ್ಟಲ । ಲಿತ್ತವೀಳೆಯುವನು ಸುಯೋಧನ । ಕೆತ್ತು ಕೊಂಡಿರೆ ನುಡಿಸಿದನು ಕಲಿ ಕರ್ಣನವನಿಪನ ॥೧೫॥ ಜೀಯ ದುಗುಡವಿದೇಕೆ ಬಿಡುಗಾಂ । ಗೇಯನಳುಕಿದೊಡೇನು ಕಾಣಿಯು । ಬೀ ಯುದಲಿ ಬಡವಹುದೆ ಕನಕಾಚಲ ನಿಧಾನಿಸಲು ॥ ರಾಯಜಗಜಟ್ಟಿಗಳು ರಣದೊಳ । ಜೇಯರಿದೆ ಪ ರಿವಾರವನು ನಿ । ರ್ದಾಯದಲಿ ತಣಿಸುವೆನು ರಿಪುಗಳ ಸಿರಿಯ ಸೂರೆಯಲಿ ॥೧೬॥ ಕರ್ಣಕರ್ಕಶಘೋ ರಸಾಹಸ । ನಿರ್ಣಯವೆ ಪರಸೈನ್ಯಸುಭಟವ । ಹಾರ್ಣವಕೆ ಬಿಡು ನಿನ್ನ ವಿಕ್ರಮವಾಡಬಾನಳನ ॥ ಪೂರ್ಣಕಾಮನು ನೀನು ಕುರುಕುಲ । ಕರ್ಣಧಾರನು ನೀನು ವಿಶ್ವವಿ । ಕರ್ಣ ನೀನೇ ರಕ್ಷಿಸೆಂದುದು ನಿಖಿಳಪರಿವಾರ ॥೧೭॥ ಕಾದುವೆನು ರಿಪುಭಟರ ಜೀವವ । ಸೇದುವೆನು ರಣರಂಗಭೂಮಿಯು । ನಾದು ವೆನು ನೆಣಗೊಬ್ಬಿನಹಿತರ ಗೋಣರಕುತದಲಿ ॥ ಹೋದದಿವಸಂಗಳಲಿ ಕಾಳಗ । ಮಾದುದಂದಿನ ಭೀ ಷ್ಮರೊಡನೆ ವಿ । ವಾದಕಾರಣ ಬೇಡಿಕೊಳಬೇಹುದು ನದೀಸುತನ ॥೧೮॥ ಎಂದು ನೃಪತಿಯು ಬೀಳು ಕೊಂಡಿನ । ನಂದನನು ಬೊಂಬಾಳದೀಪದ। ಸಂದಣಿಗಳೊಳು ಸೆಳೆದಡಾಯುಧಭಟರ ತಿಂಥಿಣಿಯು ॥ ಮುಂದೆ ಪಾಯವಧಾರು ರಿಪುನೃಪ । ಬಂದಿಕಾರವಧಾರು ದಿರುಪಯ । ನೆಂದು ಕಳಕಳಗಜರು ಮಿ ಗೆ ಕುರುಭೂಮಿಗೈತಂದ ॥೧೯॥ ಹಾಯಿದ್ದವು ನರಿನಾಯಿಗಳು ಕಟ । ವಾಯಲೆಳೆದವುಕರುಳುಗಳಬ ಸಿ । ವಾಯರಕ್ತದಲೋಡಿದವು ರಣಭೂತ ದೆಸೆದೆಸೆಗೆ ॥ ಆಯುಧದ ತಿಂತಿಣಿಯ ತಲೆಗಳ । ಡೋ ಯಿಸೆಯ ಕಡಿಖಂಡಮಯದಲ । ಸಾಯುತದಕಳನೊಳಗೆ ಬಂದನು ಭೀಷ್ಮನಿದ್ದೆಡೆಗೆ ॥೨೦॥ ಸರಳಮಂ ಚವ ಹೊದ್ದಿ ಭೀಷ್ಮನ । ಚರಣಕಮಲವ ಪಿಡಿದು ನೊಸಲಿನೊ । ಳೊರಸಿಕೊಂಡನು ನಾದಿದನು ಕಂ ಬನಿಯೊಳಂಘ್ರಿಗಳ ॥ ಕರುಣಿಸೈ ಗಾಂಗೇಯ ಕರುಣಾ । ಶರಧಿಯೇ ಖಳತಿಲಕಕರ್ಣನ । ದುರುಳ ತನವನು ಮರೆದು ಮೆರವುದು ನಿಮ್ಮ ಸದ್ಗುಣವ ॥೨೧॥ ಎನಲು ಹೃದಯಾಂಬುಜದ ಪೀಠ ದ । ವನಜನಾಭಧ್ಯಾನಸುಧೆಯಲಿ । ನನೆದು ಹೊಂಗಿದಕರಣ ಹೊರೆಯೇರಿದುದು ನಿಮಿಷದಲಿ॥ ತನು ಪುಳಕ ತಲೆದೋರೆ ರೋಮಾಂ । ಚನದ ಬಿಗುಹಡಗಿತ್ತು ಕಂಗಳ । ನನೆಗಳರಳಿದವಾಯ್ತು ಭೀಷ್ಮಂ ಗಿತ್ತಲವಧಾನ ॥೨೨॥ ಅಳಲದಿರು ಬಾಮಗನೆ ಕುರುಕುಲ । ತಿಲಕನವಸರದಾನೆ ರಿಪುಮಂ । ಡಳಿಕ ಮಸ್ತಕಶೂಲಬಾರೈಕರ್ಣಬಾರೆನುತ ॥ ತುಳಿಕಿದನು ಕಂಬನಿಗಳನು ಕೋ । ಮಲನು ಕೈದಡಹಿದನು ಕೌರವ । ನುಳಿವು ನಿನ್ನದು ಕಂದಕದನವ ಜೈಸು ಹೋಗೆಂದ ॥೨೩॥ ಗಾರುಗೆಡೆದೆನು ನಿಮ್ಮ ನೋಲೆ ಯು । ಕಾರತನದುಬ್ಬಿನಲಿತನಿಮುದ । ವೇರಿ ನಿಮ್ಮಲಿ ತೊಡಕಿದೆನು ಸೇನಾಧಿಪತ್ಯದಲಿ ॥ ದೂರಹೊತ್ತೆ ನು ರಣದ ಮಿಸಲಿ । ನೇರು ತಪ್ಪಿತು ನೀಲಮಣಿ ತಲೆ । ಗೇರಿಸಿದ ತೃಣವದಕೆ ಸರಿಯೇ ಭೀಷ್ಮಹೇ ಳೆಂದ ॥೨೪॥ ತನುಜ ತಪ್ಪೇನಿದಕೆ ಕಾಳಗ । ವೆನಗೆ ತನಗೆನಬೇಕು ವೀರರು । ಮನದಕಲಿತನದುಬ್ಬ ಗೊಬ್ಬಿನಲೆಂಬರಿದಕೇನು ॥ ಮನದೊಳಗೆ ಖತಿಯಿಲ್ಲ ದುರಿಯೋ । ಧನನೃಪತಿಯೋಪಾದಿ ನೀ ಬೇ। ರೆನಗೆ ಲೋಗನೆ ಕಂದ ಕದನವ ಜಯಿಸು ಹೋಗೆಂದ ॥೨೫॥ ಅಳುತನದ ದೊತಾರತನ ಸರಿ । ಯಾ ಳಿನಲಿ ಸೆಣಸಾದೊಡೊಳ್ಳಿತು । ಮೇಳವೇ ಗುರುದೈವದಲಿ ಕಟ್ಟುವರೆ ತೊಡರುಗಳ ॥ ಹಾಳಿಪಸುಗೆ ಯನರಿಯದಾಹೀ । ಹಾಳಿಗೆಡಿಸಿದೆನಂದು ಸಭೆಯಲಿ । ಖೂಳನವಗುಣಶತವ ನೋಡದೆ ನಿಮ್ಮ ಮರೆ

ಯೆಂದ ॥೨೬॥ನೋವುಮನದೊಳಗುಳ್ಳೊಡಾರಾ ಜೀವಲೋಚನನಾಣೆ ಮಗನೇ। ಜೀವಕೌರವನಲ್ಲಿ ಕರಗುವುದೇನು ಹೇಳುವೆನು ॥ ಆವನಾತಗೆ ಬಂಧುಮಾತನು । ಜೀವವೆನಗೀದೆಸೆಯ ಭಯಬೇ । ಡಾವಪರಿಯಿಂದವನ ಸುಳುಹುವಹದನ ನೋಡೆಂದ ॥೨೭॥ ಎನ್ನ ಹವಣೇ ಹಗೆಯ ಗೆಲುವೊಡೆ । ನಿನ್ನ ವಂದಿಗರಿದ್ದು ನೂಕದು । ತನ್ನ ಸಾಹಸವೆಲ್ಲಿಪರಿಯಂತಹುದು ಕದನದಲಿ ॥ ಗನ್ನಗಾರನು ಕೃಷ್ಣನವರಿಗೆ । ತನ್ನನೊಚ್ಚತಗೊಟ್ಟನಹಿತರ । ನಿನ್ನಗೆಲುರವರಾರು ಜಯವೆಲ್ಲಿಯದು ತಮಗೆಂದ ॥೨೮॥ ಆಲವಟ್ಟದಗಾಳಿಯಲಿ ಮೇ । ಘಾಳಿ ಮುರವುದೆ ಮಿಂಚುಬುಳುವಿಗೆ । ಸೋಲುವುದೆ ಕತ್ತಲೆಯಕಟಕವು ಜೀಯ ಚಿತ್ತೈಸು ॥ ಸೀಳಬಹುದೇ ಸೀಸದುಳಿಯಲಿ । ಶೈಲವನು ಹರಿಯೊಲಿದಮನುಜರ । ಮೇಲೆ ಮುನಿದೇಗುವರು ಕೆಲಬರು ಭೀಷ್ಮ ಹೇಳೆಂದ ॥೨೯॥ ಲೇಸನಾಡಿದೆ ಮಗನೆ ನೀ ಧಿಟ । ನೀಸು ಸಮ್ಯಜ್ಞಾನಿಯೆಂಬುದ । ನೀಸುದಿನಪಾವರಿಯೆವೈ ನೀ ಸತ್ಕುಲೀನನಲಾ॥ ಆಸುಯೋಧನಗರುಹಿ ಸಂಧಿಯ ನೀಸಮಯದಲಿ ಘಟಿಸು ನೇನನ । ಲೈಸಮಾರನು ಪಾಂಡವರ ಸಂಪ್ರೀತಿಯ ಮಾಡೆಂದ ॥೩೦॥ ಚಿತ್ತೈಯ ಮಂತ್ರದಮಾತು ರಾವುತ । ಪಾಯಕರಿಗೊಪ್ಪುವುದೆ ಅವರನ । ರಾಯತವಲೋಲೈಸಬೇಹ.ದು ಮೀರೆಮಾರ್ಗದಲಿ ॥ ರಾಯನೊಲಿದುದ ಹಿಡಿವೆನೊಲ್ಲದ । ಡಾಯವನು ಬಿಡುವೆನು ನಿಜಾಭಿ । ಪ್ರಾಯವಿದು ಸಂಪ್ರತಿಯ ನುಡಿ ತನಗಂಗವಲ್ಲೆಂದ ॥೩೧॥ ಭಾನುಸನ್ನಿಭ ಮರಳು ಭೂಪನ । ಹಾನಿವೃದ್ಧಿಗಳೆಲ್ಲ ನಿನ್ನದು । ನೀನು ಪಂತದಜಾಣನಲ್ಲಾ ವಿಜಯನಾಗೆನಲು । ಅನದೀಸುತನೆಡಿಗೆರಗಿ ರವಿಸೂನು ಕಳುಹಿಸಿಕೊಂಡು ಬಹಳಮ । ನೋನುರಾಗದಲೈದಿದನು ಕುರುರಾಯನೋಲಗವ ॥೩೨॥ ಭಾನುಸುತ ಕುಳ್ಳಿರು ನದೀಸುತ । ನೇನನೆಂದನು ತನ್ನ ಚಿತ್ತಜ್ಞಾ । ನವನು ಬಿಸುಟೇನುನುಡಿದನು ಭಾವಶುದ್ಧಿಯಲಿ ॥ ಏನನೆಂಬೆನು ಜೀಯ ಬಹಳಕೃ । ಪಾನಿಧಿಯಲಾ ಭೀಷ್ಮನೆನ್ನುಸಂ । ಧಾನವಿಲ್ಲದೆ ಬೆಸಸಿ ಕಳುಹಿದನೆಂದನಾಕರ್ಣ ॥೩೩॥ ಇನ್ನು ದಳಪತಿತನವದಾರಿಗೆ । ನಿನ್ನ ಮತವೇನು ದಯವಾಗದ। ಮುನ್ನ ಬವರವ ಹಿಡಿಯಬೇಹುದು ವೈರಿರಾಯರಲಿ ॥ ಎನ್ನು ನಿನ್ನಭಿಮತವ ನೆನೆ ಸಂ । ಪನ್ನಭುಜಬಲದ್ರೋಣನಿರುತಿರ । ಲಿನ್ನು ಸೇನಾಪತಿಗಳಾರೈ ಭೂಪ ಹೇಳೆಂದ ॥೩೪॥ ಪ್ರಭೆಯದಾರಿಗೆ ಸೂರ್ಯನಿದಿರಿನೊ । ಳಭವನಿರೆ ತಾನಾರು ಲೋಕಕೆ । ವಿಭುಗಳೈ ವೈಕುಂಠನಿದ್ದಿರಲೊಳಾವ ದೇವತೆಯೊ ॥ ವಿಭವ ನದಿಗಳಿಗುಂಟೆ ಜಲಧಿಯ । ರಭಸದಿದಿರಲಿ ನಿನ್ನ ಬಲದಲಿ । ಸುಭಟನಾರೈ ದ್ರೋಣನಿರುತಿರಲೆಂದನಾಕರ್ಣ ॥೩೫॥ ಜಾಗುಜಾಗೆಲೆಕರ್ಣ ಪರರ ಗು । ಣಾಗಮವ ಪತಿಕರಿಸಿ ನುಡಿವವ । ನೀಗಳಿನಯುಗದಾತನೇ ಮರುಳು ಭಾಪುಭಾಪೆನುತ ॥ ತೂಗುವೆರಳಿನ ಮಕುಟದೊಲಹಿನೊ । ಳಾಗರುವಭಟರುಲಿಯ ಲಹರಿಯ । ಸಾಗರದ ಸೌರಂಭದಂತಿರೆ ಮಸಗಿತಾಸ್ಥಾನ ॥೩೬॥ ನುಡಿಸು ನಿಸ್ಸಾಳವನು ಕರೆಹೊಂ । ಗೊಡನ ಹಿಡಿದೈತರಲಿ ಸಾರಿಯ । ರೆಡಬಲನು ತೆರಹಾಗಲಿಕ್ಕಲಿ ಸಿಂಹಪೀಠವನು ॥ ತಡವುಬೇಡೆನೆ ಕೌರವೇಂದ್ರನ । ನುಡಿಗೆಮುನ್ನನುವಾಯ್ತು ವಿಪ್ರರ । ಗಢಣ ಬಂದುದು ರಚಿಸಿದರು ಮೂರ್ಧಾಭಿಷೇಚನವ ॥೩೭॥ ಸಕಲಸಾಮಂತರು ಮಹೀಪಾ । ಲಕರು ಬಂದುದು ಚರಣದಲಿ ಕಾ । ಣಿಕೆಯನಿಕ್ಕಿತು ಕೈಯ ಮುಗಿದುದು ನಿಖಿಲಪರಿವಾರ ॥ ಮಕುಟರತ್ನದ ಲಹರಿ ಖಡ್ಗದ । ವಿಕಟಧಾರಾರಶ್ಮಿದೀ । ಪ್ರಕರದಲಿ ಥಳಥಳಿಸೆ ರಪಿಯವೊಲೆಸೆದನಾದ್ರೋಣ ॥೩೮॥ ಅರಸ ಬೇಡೈ ವರವನೆ

ನ್ನನು। ಕರೆದು ಪತಿಕರಿಸಿದಬಳಿಕ ನಾ। ಬರಿದೆ ಹೋಹೆನೆ ಮೆಚ್ಚಿದುದ ನುಡಿಯೆಡತನವೇಕೆ ॥ ಹೊರೆ ಹೊಗದೆ ಹೇಳೆನಲು ನಗೆಮೊಗ। ವರಳಿ ಹೊಂಪುಳಿವೊಗಿ ಕೌರವ। ರರಸ ನುಡಿದನು ಕಟ್ಟಿಕೊಡಿ ಧರ್ಮಜನ ತನಗೆಂದ ॥ ಮರಣಮಂತ್ರಾನುಗ್ರಹವನಿದ। ಧರಿಸಬಹುದೇ ಮಗನೆ ಪಾರ್ಥನ। ಪರಿಯನರಿಯಾ ಹಿಡಿಯಲೀವನೆ ಧರ್ಮನಂದನನ ॥ ಬರಿದೆ ಬೇಡಿದೆ ತನಗೆ ನೂಕದ। ವರವ ವಚನಿಸಿ ಮಾಡದಿಹಬಾ। ಹಿರರು ಸಾವಲ್ಲೆನಲು ಕೌರವರಾಯನಿಂತೆಂದ ॥೪೦॥ ಕೊಡುವುದಿದುವರವಲ್ಲದಿದ್ದೊಡೆ। ನುಡಿಗೆ ಮೊಳೆ ಹೊಮ್ಮುವಡೆ ನಿಮ್ಮಯ। ತೊಡಕನೊಲುವವನಲ್ಲ ನೀವೇಬಲ್ಲಿರೆನೆ ನಗುತ॥ ಹಿಡಿದು ಬಿಗಿವೆನು ಧರ್ಮಜನ ಕೆಲ। ಕಡೆಗೆ ತೊಲಗಿಸು ಪಾರ್ಥನನು ನಾ। ನುಡಿಯುತಪ್ಪೆನು ಪ್ರಾಜ್ಞ್ಯದಳತೆಯನರಿಯಬಹುದೆಂದ ॥೪೧॥ ಸಾಕಿದೆಲ್ಲಿತು ಚಾಪತಂತ್ರಸಿ। ನಾಕಿಯೇರಿಸಿ ನುಡಿದನುಡಿಯಿದು। ಕಾಕಹುದೆ ಕೈಕೊಂಡನೆನುತವನೀಶ ಹರುಷದಲಿ ॥ ಆಕೃಪಾದಿಮಹಾಪ್ರಧಾನಾ। ನೀಕವನು ಕಳುಹಿದನು ಮನೆಗೆ ದಿ। ವಾಕರನ ಹೆಡತಲೆಗೆಹಗುಕ್ಕಿದನು ಚಂದ್ರಮನ ॥೪೨॥ ಜಗವರಾಜಿಕವಾಯ್ತು ಕುಮುದಾಳಿಗಳ ಬಾಗಲು ಹೂಡಿದವು ಸೂ। ರೆಗರು ಕವಿದ್ದವು ತುಂಬಿಗಳು ಸಿರಿವಂತಮನೆಗಳಿಗೆ ॥ ಉಗಿದವಂಬರವನು ಮಯೂಖಾ। ಳಿಗಳು ಭುವನದ ಜನದ ಕಂಗಳ। ತಗಹು ತೆಗೆದುದು ಸೆರೆಯಬಿಟ್ಟರು ಜಕ್ಕವಕ್ಕಿಗಳ ॥೪೩॥ ಮೂಡಣಾಚಲದೊಳಗೆ ಕೆಂಪಿನ। ಬೀಡು ಬಿಟ್ಟುದು ಕಮಲಪಙ್ತಿಯೊ। ಳಾಡಿದವು ತುಂಬಿಗಳು ಝೇಂಕರಿಸುತ್ತ ಮುಸುಕಿದವು ॥ ಕೂಡಿದವು ಚಕ್ರಾಂಗಯುಗ ಥಗೆ। ಯೂಡಿದವು ಘುಚಕೋರಯುಗಳವ। ಮೂಡಿದ್ದವು ಕೆದರಿದ್ದವು ಕಿರಣಾವರಣ ಗಗನದಲಿ॥೪೪॥ ಬೆಳಗು ಬಳಸಿದ ಗಗನಮಂಡಲ। ದುಳಿವುತಿಮಿರನಸತಿಯುವ್ರೋಲೆಯು। ಕಳಚಿದುದು ಕಮಲಂಗೆ ಹೇಷಿತವಾಯ್ತು ದಿನರಾತ್ರಿ ॥ ಜಲಜ ನಗುತಿರ್ದುದು ಪಯೋನಿಧಿ। ಕಳಕಳವ ತುಂಬಿತು ರಥಾಂಗಾ। ವಳಿ ಮನೋಹರನಡರ್ದನಂದು ದಯಾಚಲಕೆದಿನಪ ... ... ॥೪೫॥

ಅಂತು ಸಂಧಿ ೪೧ ಕ್ಕೆ ಪದ ೪೫ ಕ್ಕಂ ಮಂಗಳಂ.



## ಎರಡನೆಯ ಸಂಧಿ.

ಸೂಚನೆ॥ ಕಡುಗಿಬರೆದ್ರುಪದಜನ ರಥವನು। ಕಡಿದು ಸಮರಥರುಗಳ ಕೆಡಹಿದ। ಕೊಡನ ಮಗಧರ್ಮಜನ ತುಡುಕಲು ತಡೆದನಾಪಾರ್ಥ ॥

ಪದ॥ ಸೂಳವಿಸಿದ್ದವು ಲಗ್ಗೆಯಲಿ ನಿ। ಸ್ಸಾಳಚಯುವದ್ರಿಗಳ ಹೆಡತಲೆ। ಸೀಳೆ ಸಿಡಿದೇಳಿಗೆಯೊಳೆದ್ದವು ವಿವಿಧವಾದ್ಯರವ ॥ ಆಳು ನೆರೆದುದು ನೆಲ ಕುಸಿಯೆ ರಥ। ಜಾಲಜಡಿದುದು ಹಣ್ಣಿದಾನೆಯು। ಸಾಲು ಮೆರೆದ್ದವು ಕುಣಿವುತಿರ್ದ್ದುವುಕೂಡೆ ವಾಜಿಗಳು ॥ ತಳಿತಝಲ್ಲರಿಗಳಿಗೆ ಗಗನದ। ಮಯ ವೈದದು ನೆರೆದಸೇನೆಗೆ। ನೆಲನಗಲ ನೆರೆಯುದು ನಿರೂಢಿಯು ಭಟರವಿಕ್ರಮಕೆ ॥ ಅಳವು ಉದರಿರಾಯರಿಗೆ ದಿಗು। ವಳಯ ಬಿಟ್ಟೊಡೆ ಹಯರಥದದಳ। ವುಳಕನಲು ಕುರುಸೇನೆ ನಡೆದುದು ದೊರೆಯ

ನೇಮದಲಿ ॥೨॥ ಹರಿಗೆ ಹರಿದವು ಮುಂದೆ ಬಿಲ್ಲವ । ರುರವಣಿಸಿದರು ನೊರೆವ ಮುರಜದಿ । ನುರುಬಿದರು ಸಬಳಿಗರು ಮುಂಚಿತು ರಣಕೆ ಖಡ್ಗಿಗರು ॥ ತುರುಗ ಕವಿದವು ದಂತಿಘಟೆಗಳು ತುರುಗಿದವು ರಥನಾಜಿ ಮುಂಗುಡಿ । ವರಿದುದವನೀಪತಿಯು ಚೋಣಿಯು ನೃಪರು ಜೋಡಿಯಲಿ ॥೩॥ ಸಿಡಿಲ ಕುಡುಹುಗಳಿಂದ ಕಮಲಜ । ಹೊಡೆಯಲಬುಜಭವಾಂಡ ಭೇರಿಯು । ಕಡುದನಿಗಳೆನಲೊರಿದವು ನಿಸ್ಸಾಳ ಕೋಟಿಗಳು ॥ ತುಡುಗಿದವು ತಂಬಟದ ಧ್ವನಿ ಜಗ । ದಡಕಿಲನು ಘಡ ಕೌರವೇಂದ್ರನ । ತೊಡಕು ಬೇಡೆಂದೊದರಿದವು ನಿಜಗೌರುಗಹಳೆಗಳು ॥ ಬಿಗಿದರುಲ್ಲಿರಿ ಮುಗಿಲ ಹೊಸಕ್ಕೆ । ದುಗಳ ಮಿಂಚಿನ ಮಣಿಮಕುಟಕಾಂ । ತಿಗಳ ಸುರಧನುವಿನ ಚತುರ್ಬಲರವದ ಸಿಡಿಲುಗಳ ॥ ವಿಗಡಕುಂಭಜಮೋಘರುತು ತನಿ । ಹೊಗರಿರಿದು ಪರಬಲದ ಬಲುಬೇ । ಸಗೆಗೆ ಕವಿದುದು ರಾಜಹಂಸಪ್ರಭೆಗಳೊಳಸರಿಯೆ ॥೪॥ ಕಳನಗೆಲಿದುದು ಬಂದು ಕೌರವ । ಬಲಯುಧಿಷ್ಠಿರರಾಯದಳ ಮುಂ । ಕೊಳಿಸಿ ಹೊಕ್ಕದು ಜಯದ ಸುಮ್ಮಾನದ ಸಗಾಡದಲಿ ॥ ಬಲಿದರೊಡ್ಡನು ಮಂಡಲಾಕೃತಿ । ಗೊಳಿಸಿ ಕೌರವರಿವರು ಘಟ್ಟನು । ನಿಲಿಸಿದರು ಚಂದ್ರಾರ್ಧಸದೃಶದಲಖಿಳ ಮೋಹರವ ॥೬॥ ಚೌರಿಗಳ ಬಲವೆರಡರೊಳಗೊ । ಯ್ಯಾರದಲಿ ತೂಗಿದರು ಚೋಣಿಯು । ವೀರರುರುವಣೆಮಿಗಲು ಹೊಯ್ದುದು ಪೊಕ್ಕು ಪಾಯದಳ ॥ ವಾರಿ ಮೊಗವಡದೆರೆದವೊಲು ಜ । ಜ್ಝಾರಮಾಸಾಳುಗಳು ನಿಜದಾತಾರನವಸರಕೊದಗಿ ಹೂಣವಿನ ರುಣವ ನೀಗಿದರು ॥೭॥ ಬಿಟ್ಟಸೂಠಿಯೊಳಡಸಿ ಕುದುರೆಗ । ಳಟ್ಟಿದವು ಕಿವಿಗೌಕಿದುಂಗುಟ । ವಟ್ಟಸನ್ನೆಯೊಳೊಲಿದು ಕವಿದವು ಸೊಕ್ಕಿದಾನೆಗಳು ॥ ನಿಟ್ಟುವರಿಯಲು ಕೂಡೆ ರಥ ಸಾ । ಲಿಟ್ಟು ಹರಿದವು ತೇರು ಸುಭಟರ । ಮುಟ್ಟಿ ಮೂದಲಿಸಿದರು ಹೊಯಿದರು ಹೊಕ್ಕು ಪರಬಲವ ॥೮॥ ಏರುವಡೆದರುಪೊಕ್ಕವರು ಕೈದೋರಿ ಕಳವಳಕಾರರಸುಗಳ । ಕಾರಿದರು ಕೈ ಮಾಡಿ ಕೊಂದರು ಕವಿವದೊದ್ದಗರ ॥ ತಾರುತಟ್ಟಿನೊಳಟ್ಟಿ ಮೈಮುಸೆ । ಸೂರೆಕಾರರು ಮಿದುಳಜೋರಿನ । ಜಾರುಗಳ ಬೀರಿದರು ಭೇತಾಳರಿಗೆ ಭಟನಿಕರ ॥೯॥ ತೆಗೆದು ದೊದ್ದೆಯನುರವಣಿಸಿದರು । ವಿಗಡಸುಭಟರು ಸಾಹಸದ ತನಿ । ಹೊಗರಿನಾಗತಳೆಲ್ಲಿ ಭೀಮಾರ್ಜುನರ ಬರಹೇಳು ॥ ಹೊಗುವಬಿನುಗನು ಹೊಯ್ಯದಿರಿ ತೆಗೆ । ತೆಗೆಯೆನುತ ಸಾವಿರಮಹಾರಥ । ರಲಗದಲಿ ಬರಲುರುಬಿಪೊಕ್ಕನು ದ್ರೋಣ ಪರಬಲವ ॥೧೦॥ ಸಾರಿರೈ ಸಾಹಸಿಗಳಿರ ಕೆಲ । ಸಾರಿರೈ ಪಾಂಚಾಲಮತ್ಸ್ಯರು ವೀರರಹಿರಲ್ಲೆಂಬೆವೇಶಿವಶಿವಮಹಾದೇವ ॥ ಸಾರಿರೈ ನಮ್ಮೊಡನೆ ಕೈಮನ । ವಾರೆ ಕಾದುವಬಳಿಕ ಮೊದಲೊಳ । ಗಾರು ಭೀಮಾರ್ಜುನರ ನೋಡುವೆನೆನುತ ಕೈಕೊಂಡ ॥೧೧॥ ಬಿನುಗುಹಾರುವ ನಿನಗೆ ಭೀಮಾ । ರ್ಜುನರ ಪರಿಯಂತೇಕೆ ಯಂಬಿನ । ಮೊನೆಯಲುಣಲಿಕ್ಕುವೆವು ರಣಭೂತಕ್ಕೆ ನಿನ್ನೊಡಲ ॥ ಎನುತ ದೃಷ್ಟದ್ಯುಮ್ನನಿದಿರಾ । ದನು ಶರೌಘದ ಸೋನೆಯಲಿ ಮುಂ । ಮೊನೆಯಲಧಿಕರ ಮುರಿದು ದ್ರೋಣನ ರಥಕೆ ಮಾರಾಂತ ॥೧೨॥ ಕಡುಗಿದೊಡೆ ಕೋದಂಡರುದ್ರನ । ತೊಡಕಿ ಬದುಕುವರಾರು ಸಾಕಿ । ನ್ನೊಡನೊಡನೆ ನಾರಾಚಜಾಲದೊಳಿರಿಭಟನ ಬಿಗಿದು ॥ ಕಡಿದು ಬಿಸುಟನು ದ್ರುಪದತನಯನ । ಹಿಡಿದಬಿಲ್ಲನು ಸಾರಥಿಯನಡ । ಗೆಡಹಿದನು ಚಂದ್ರಾರ್ಧಶರದ ಆಸಲನೊಡೆಯೆಚ್ಚ ॥೧೩॥ ಘಸಲು ದೃಷ್ಟದ್ಯುಮ್ನ ದ್ರೋಣನ । ವಿಶಿಖತತಿಯಲಿ ನೊಂದು ರಥದಲಿ । ಒವಳಿಯೆಬಳಿಸಲಿಸಿದರು ಪಾಂಚಾಲನಾಯಕರು ॥ ಮುಸುಡಪಿಗುಹಿನಸೆಳೆದಡಾಯುಧ ।

ಹೊಸಪರಿಯ ಬಿರುದುಗಳ ಗಜರಥ । ವಿಸರಮಧ್ಯದೊಳೆಂಟುಸಾವಿರ ರಥಿಕರೌಂಕಿದರು ॥೧೪॥ ರಾಯರೊಳು ಪಾಂಚಾಲರುಬ್ಬಟೆ । ಕಾಯಗಟ್ಟಿತು ಪೂತು ಮಝುಕುರು । ರಾಯನಾಡಿದು ದಿಟವೆನುತ ಹೊಗರಂಬ ಹೊದೆಗೆದರಿ ॥ ನೋಯಿಸಿದನುರುವಣಿಸಿ ಕವಿತಹ । ನಾಯಕರನುಬ್ಬಾಳಿ ಬಿರುದರ । ಬೀಯಮಾಡಿದನಹಿತರಥಿಕರನೆಂಟುಸಾವಿರವ ॥೧೫॥ ಆಳುತನವುಳ್ಳವರ ಕರೆ ಪಾಂ । ಚಾಲರೊಳ್ಳೆಗರಿವದಿರಂಬಿನ । ಕೋಲಕಾವದವುನ್ನ ಹವ್ಮ್ಕ್ರಸುವರು ಹುರಿಯೊಡೆದು ॥ ಖೂಳರಿವರಂತಿರಲಿ ದೊರೆಕಟ್ಟಾಳುಗಳ ಕರೆ ಧರ್ಮಪುತ್ರನ । ತೋಳ ಬಲುಹನು ನೋಡಬೇಕೆನುತುರುಬ್ಬಿದನು ದ್ರೋಣ॥೧೬॥ ಸವರಿ ಪೊಕ್ಕನು ಕೆಲಬಲದ ಪಾಂ । ಡವಮಹಾರಥರನು ವಿಭಾಡಿಸಿ। ಪವನಜನ ಮುರಿಯೆಚ್ಚು ನಕುಲನ ರಥವ ಹುಡಿಮಾಡಿ ॥ ಕವಲುಗೋಲಲಿ ಮತ್ಸ್ಯದ್ರುಪದರ । ನವಗಡಿಸಿ ಹೈಡಿಂಬನಭಿಮನ್ಯುವನು ಮಸೆಗಾಣಿಸಿ ಮಹೀಶನ ರಥಕೆ ಮಾರಾಂತ ॥೧೭॥ ಅರಸಫಡ ಹೋಗದಿರು ಸಾಮದ । ಸರಸಕೊಳ್ಳದು ಬಿಲ್ಲ ಹಿಡಿಹಿಡಿ । ಹರನ ಮರೆವೊಗು ನಿನ್ನ ಪಿಡಿವೆನು ಹೋಗು ಹೋಗೆನುತ ॥ ಸರಳಮುಷ್ಟಿಯು ಕೆನ್ನೆಯೋರೆಯು । ಗುರು ಚಡಾಳಿಸೆ ಧನುವನೊದರಿಸಿ । ಧರಣಿಪತಿ ಮಿಗೆ ಹಳಚಿ ಹೂಳಿದನಂಬಿನಲಿ ನಭವ ॥೧೮॥ ಶಿವಶಿವಾಭಳ್ಳುದಿಂಗಳಲಿ ಮೈ । ಬೆವರುವುದೆ ಕಲಿಧರ್ಮಪುತ್ರನ । ಬವರದಲಿ ಬೆಂಡಹರೆ ವೀರರು ಕಂಡೆವದುಭುತವ ॥ ನಿವಗಿದೆತ್ತಣಕ್ರಮೆ ಕೋಲ್ಗಳ । ಕವಿಸುವಂದವಿದೊಳ್ಳಿತಿರಲೇ। ನೆವಗಭೀಷ್ಟವೆನುತ್ತ ಕಟ್ಟಳವಿಯಲಿ ಕೈಕೊಂಡ ॥೧೯॥ ಎಲೆಲೆದೊರೆ ಸಿಕ್ಕಿದನಕರೆಪಡಿ। ತಳಿಸಹೇಳೋಸ್ವಾಮಿದ್ರೋಹರು । ದಳದೊಳಿದ್ದವರೆತ್ತ ಹೋದರು ನಾಯಕಿತ್ತಿಯರು ॥ ಕಳವಳಿಸೆ ಸಾತ್ಯಕಿ ಘಟೋತ್ಕಚ । ರುಲಿದು ಹಂತರೆ ಕೇಳಿದಾಕ್ಷಣ । ದಲಿ ಮುರಾಂತಕ ಸಹಿತ ವಹಿಲದಿ ಬಂದನಾಪಾರ್ಥ ॥೨೦॥ ಕಾಳಕೂಟದ ಬಹಳ ಧಾಳಿಗೆ । ಶೂಲಿಯಡ್ಡೈಸಿದವೊಲವನೀ। ಪಾಲಕನ ಹಿಂದಿಕ್ಕಿ ತಡೆದನು ಕಲಶಜನ ರಥವ ॥ ಆಲಿಯಾಳಿಕಿತು ತಿರುಹಿದಂಬಿನ । ಕೋಲಝುಳಪಿಸಿ ಪೂತುಮಝು ಮೇ । ಲಾಳು ಬಂದುದೆಯಕಟೆನುತ ಹಲುಮೊರೆದನಾದ್ರೋಣ ॥೨೧॥ ಮಂದಭಾಗ್ಯನು ಕೌರವನು ನಾ । ವೆಂದು ಮಾಡುವುದೇನು ರಣದೊಳು । ನಿಂದನಾದೊಡೆಹಿಡಿವೆನೀಗಳೆ ಧರ್ಮನಂದನನ ॥ ಬಂದು ಫಲುಗುಣನಡ್ಡವಿಸಲಿ । ನ್ನಿಂದುಧರ ಮುನಿದೇನು ಮಾಡುವ । ನೆಂದು ಖಾತಿಯ ಹಿಡಿದು ರಥವನು ತಿರುಹಿದನು ದ್ರೋಣ ॥೨೨॥ ಎರಡು ಬಲದಲಿ ವೀರನಿವಮಡೆ । ಮುರಿಯಲಿವ ನೇಸರವನಂಧಾ ॥ ಸುರನೊತಾರಕನೋ ಹಿರಣ್ಯಾಸುರನೊ ಕೈಟಭನೊ ॥ ಗುರುಗಳತಿಥೀವತಿಗಳ್ಕೆ ಸಾ। ಕಿರಲಿ ಮೂದಲೆಯೋಕೆನುತ ಬಿಲು । ಟಿರುವ ಮಿಡಿದೈದಿದರು ನಾಲ್ಸಾವಿರಮಹಾರಥರು ॥ ಫಡಫಡೆಲವೋಪಾರ್ಥಭೀಷ್ಮನ । ಕೆಡಹಿದುಬ್ಬಟನಮ್ಮಕೂಡಳ । ವಡದುತೆಗೆತೆಗೆಯೆನುತ ತುಳುಕಿದರಂಬಿನಂಬುಧಿಯ । ಗಡಣವೊಳ್ಳಿತು ಗಾಢದಲಿ ಬಿಲು । ವಿಡಿಯಬಲ್ಲಿರಿ ಸಮರದಲಿ ಅಳ । ವಡುವುದಳವಡದಿಹುದು ತಪ್ಪೇನೆನುತ ನರನೆಚ್ಚ ॥೨೩॥ ಜೋಡು ಜರಿಯದೆ ಹುರುಳುಗೆಡದೆ । ಚ್ಚಾಡಿದರು ಫಲುಗುಣನ ರಥದಲಿ । ಹೂಡಿದರು ಹೊಗರಂಬುಗಳನುಬ್ಬೆದ್ದು ತಮತಮಗೆ ॥ ನೋಡಿದನು ಸಾಕಿವದಿರನು ಕೊಂ । ಡಾಡಲೇಕೆನುತ ನಿಬರಸುವನು । ತೋಡಿದನು ಕೂರಂಬಿನಲಿ ಸಾವಿರಮಹಾರಥರ ॥೨೪॥ ಮಡಿದು ಕೆಲಬರು ಕರುಳೊಳಸುಗಳ । ವಿಡಿದು ಕೆಲಬರು ಗಾಯವಡೆದೆಲು। ವಡೆದು ಕೆಲಬರು ಕೈದುರಥವನು ಬಿಸುಟು ಕೆಲಕೆ

ಲರು ॥ ಹೊಡೆದ ಬಿರುಗಾಳಿಯಲಿ ಮುಗಿಲೊ । ಡ್ಡೊಡೆದ ವೊಲು ಪ್ರೈಮಾರಿಗಳು ಹಿಂ । ಡೊಡೆದುದ್ಧೈ ಹೇರಾಳ ದಳದಲಿ ಯೆಚ್ಚಸಾಪಾರ್ಥ ॥೨೬॥ ನಿಮಗೆ ಸದರವೆ ಪಾರ್ಥನೆಲೆ ವಿ । ಕ್ರಮದರಿದ್ರರಿರಾ ವಿಲಾಸ । ಭ್ರಮಿಂತರಿರ ಭಂಡಾಟವೇತಕೆ ರಣವ ಹರೆತೆಗೆಯಿ ॥ ಸಮರವಿಜಯತ್ಯಾಗಿಯೋತಾ । ಸಮರಪತಿ ನಂದನನು ಸಾಕೀ ॥ ಕುಮತಿಗಳು ತಡೆಯದಿರಿ ಹೋಗಲಿಯೆಂದಸಾದ್ರೋಣ ॥೨೭॥ಸೋಲದಲಿ ಕೌರವನ ಸೇನಾ। ಜಾಲ ಚೆಲ್ಲಿತು ವೀರಪಾರ್ಥನ। ಕೋಲು ಕಾಲನ ತಣಿಸಿದವು ಚತುರಂಗಸೇನೆಯಲಿ ॥ ಕಾಲುಧರಿಸಿದವೆರಕೆಗಳ ನೆರೆ । ಜಾಳಿಸಿತು ಘಡ ರವಿಯ ರಶ್ಮಿಯ । ಗೂಳೆಯವು ತೆಗೆಯಿತ್ತು ಪಡುವೊಡೆ ಪಶ್ಚಿಮಾಂಬುಧಿಗೆ ॥೨೮॥ ಬಂದುಬಿಡಿಸಿದ ದೊರೆಯನರ್ಜುನ । ನೆಂದು ದ್ರೋಣನು ಬೆರಗಿನಲಿ ಮನ । ಗುಂದೆ ತಿರುಗಿದ ನೆರಡುಬಲ ನಿಜಪಾಳಯಂಗಳಿಗೆ । ಸಂದ ರವಿಯಸ್ತಾದ್ರಿಗೆನುತಾ । ಮಂದಭಾಗ್ಯನು ಕೌರವನು ನಾ । ವೆಂದು ಫಲವೇನೆನುತ ಬಂದನು ರಾಯನೋಲಗಕೆ ... ... ... ... ॥೨೯॥

ಅಂತು ಸಂಧಿ ೨ ಕ್ಕೆ ಪದ ೭೪ ಕ್ಕಂ ಮಂಗಳಂ.



ಮೂರನೆಯ ಸಂಧಿ.

॥ಸೂಚನೆ॥ ಉಭಯಕಟಕಾಚಾರ್ಯಪಾಂಡವ । ವಿಭುವ ಹಿಡಿತಹೆನೆಂದುಕೌರವ । ಸಭೆಗೆಭಾಷೆಯ ಕೊಟ್ಟು ಸಮರಕೆ ದ್ರೋಣನನುವಾದ ॥

॥ಪದ॥ ಕೇಳುಜನಮೇಜಯ ಧರಿತ್ರೀ । ಪಾಲ ತೆಗೆದವು ಬಲವೆರಡು ನಿಜ । ಪಾಳೆಯಂಗಳಿಗಿರುಳು ಕೌರವನಿತ್ತನೋಲಗವ ॥ ಹೇಳು ಕರ್ಣ ದ್ರೋಣರಿಪು ಭೂ । ಪಾಲಕನ ನರೆಯಟ್ಟಿದನುಗಡ ಕಾಳಗದ ಹದನೇನೆನುತ ಕುರುರಾಯ ಬೆಸಗೊಂಡ॥೧॥ ಏನ ಹೇಳಲುಬಹುದು ಜೀಯ ಕೃಶಾನು ವಡವಿಯೊಳಾಡಿದಂದದೊ। ಳಾನಿರೂಥಿಯ ಭಟರಮುರಿದನು ಮುರಿದಮಾರ್ಗದಲಿ ॥ ಸೇನೆ ಕಲಕಿತು ಬತ್ತಿದಬುದಿಯ । ಮೀನಿನಂದದಿ ಮರುಗಿದರು ಭಟ । ರಾನರೇಂದ್ರನ ನಳವಿಯಲಿ ಬೆಂಬತ್ತಿದನು ದ್ರೋಣ ॥೨॥ ಅಳವಿಗೊಟ್ಟನು ನೃಪತಿ ಗುರು ಕೈಚಳಕದಲಿ ತೆಗೆದೆಸುತ ನಡುವಿ । ಟ್ಟಳಿಸಿ ಹಿಡಿಹಿಂಗೊಳಗುಮಾಡಿ ವಿಘಾತಿಯಲಿ ತಡೆಯೆ ॥ ಎಲೆಲೆ ದೊರೆಸಿಲುಕಿದನು ಸಿಲುಕಿದ । ನಳಿದುದೋ ದ್ರೌಪದಿಯ ಸಿರಿಯೆಂ । ಬುಲುಹಕೇಳಿದು ಪಾರ್ಥಬಂದನು ಬಿಟ್ಟ ಸೂಟಿಯಲಿ ॥೩॥ ವೀರರಿದ್ದೇಗುವರು ದೈವದ । ಕೂರುಮೆಯ ಬಗೆಬೇರೆ ನಮಗೊಲಿ । ದಾರು ಮಾಡುವದೇನೆನುತ ಕಲಿಕರ್ಣ ಬಿಸುಸುಯ್ಯೆ ॥ ಭೂರಿ ಭೂಪರ ವಿಸ್ತರದ ಗಂ । ಭೀರಸಾಗರದಂತಿರಲು ರಣ । ಧೀರರಿದ್ದರು ಮರತ್ರಿಗರ್ತರು ರಾಜಸಭೆಯೊಳಗೆ ॥೪॥ ಕೇಳು ಸೇನಾನಾಥ ಕುರುಪತಿ । ಕೇಳು ಕೇಳೈ ಕರ್ಣಸುಭಟರು । ಕೇಳಿರೈ ದೇಶಾಧಿನಾಥರು ವೀರಪರಿವಾರ ॥ ನಾಳೆ ಮೊದಲಾಗರ್ಜುನನನೀ । ಕಾಳಗಕೆ ಬರಲೀಯೆವೆಮ್ಮಯ । ಕಾಳಗದೊಳೇ ಸವೆಯ ಬೇಹುದು ಪಾರ್ಥನಂಬುಗಳು ॥೫॥ ಹಿಂದೆ ನೀಹಿಡಿ ಮೇಣುಬಿಡು

ಯುವು । ನಂದನನನೊಲಿದಂತೆಮಾಡಿ । ಲ್ಲಿಂದ ಹೇಳರ್ಜುನನ ಭಯ ನಿನಗಿಲ್ಲ ನಂಬುವುದು ॥ ಎಂದು ಶಪಥಕೆ ತಮ್ಮಿನಿಬರ್ರೈ । ತಂದುವಿಪ್ರರ ಕರೆದುವೈದಿಕ । ವಿಂದ ರಚಿಸಿದರಗ್ನಿಯಲಿ ಮಾಡಿದರು ಭಾಷೆಗಳ॥೬॥ ನರನ ಬಿಡಲಾಗದು ಮಹಾಸಂ। ಗರದೊಳೊಬ್ಬರ ನೊಬ್ಬರೊಪ್ಪಿಸಿ। ತೆರಳಲಾಗದು ಮುರಿಯಲಾಗದು ಕೊಂಡ ಹಜ್ಜೆಗಳ ॥ ಹೊರಳಿ ಹೆಣನನು ಮೆಟ್ಟಿ ಮುಂದಣಿ । ಗುರವಣಿಸುವುದು ತಪ್ಪಿದ ವರಿಗೆ । ನರಕ ಮಿಾಪಾತಕದಗತಿ ತಮಗೆಂದು ಸಾರಿದರು ॥೭॥ ನುಡಿದ ನುಡಿಗೇಡುಗನ ವಿಪ್ರನ । ಮಹಿದಾತನನಮಲಗರುವಿನ । ಮಡದಿಯರಿಗಳುಪಿದನ ಸಾಕಿದಪತಿಗೆ ತಪ್ಪಿದನ ॥ ಹಿಡಿದ ಶರಣಾಗತರ ಕಾಯದೆ । ಬಿಡುವವನ ನಾಸ್ತಿಕನ ವಿಪ್ರರ । ಜಡಿದುನುಡಿದನ ನರಕವಾಗಲಿ ರಣದೊಳೋಡಿದೊಡೆ ॥೮॥ ಎಂದು ಸಂಶಪ್ತಕರು ತಮ್ಮೊಳ । ಗಂದು ಶಪಥವ ಮಾಡಿ ವಿಪ್ರರ । ವಂದೆಗಿತ್ತರು ಗೋಹಿರಣ್ಯಫಲಾದಿವಸ್ತುಗಳ ॥ ಅಂದು ರವಿಜಲ ವಹ್ನಿಯನಿಲಪು । ರಂದರಾದಿಸುರೌಘ ಸಾಕ್ಷಿಗ । ಳೆಂದು ಸೂಳೈಸಿದರು ಭುಜವನು ಸಿಡಿಲತನ ಹೆದರೆ ॥೯॥ ಇವರ ಮೊದಲಿಗಸತ್ಯ ರಥನಿಂ । ತಿವನ ಬಳಿ ರಥಹತ್ತುಸಾವಿರ । ವಿದನೊಡನೆ ಸೇರುವೆಯ ರಥಮೂವತ್ತು ಸಾವಿರವು ॥ ಭುವನವೀರಸುಶರ್ಮವಾಳವ । ಯುವನರಥವಿದು ಹತ್ತುಸಾವಿರ । ಬವರಕಿಂತ್ರೈವತ್ತುಸಾವಿರರಧಿಕರೊಂದಾಯ್ತು ॥೧೦॥ ಸಭೆ ಬೆದರೆ ಕಲ್ಪಾಂತವಹ್ನಿಯ । ರಭಸವಲ್ಲಿಗೆ ಕೇಳಲಾಯಿತು । ಸುಭಟರಹಿರೋ ಜಾಗುಜಾಗೆನುತೊಲೆದನಾದ್ರೋಣ ॥ ಅಭವನಡಹಾಯ್ದಿರಲಿ ಪಾಂಡವ। ವಿಭುವ ಹಿಡಿವೆನು ಪಾರ್ಥನೊಬ್ಬನ। ಪ್ರಭೆಗೆ ಹೆದರುವೆನುಳಿದವೀರರ ಬಗೆವನಲ್ಲೆಂದ ॥೧೧॥ ನಯವಿದನು ಹೊಂಬಟ್ಟಲಲಿ ವೀ । ಳೆಯವನನಿಬರಿಗಿತ್ತು ಕುರುಸೇ । ನೆಯಲಿ ಮರೆನಾತೇಕೆ ನೀವೇ ವಿಜಯವುಳ್ಳವರು ॥ ಜಯವನಿನ್ನಾಹವದೊಳಗೆ ನಿ । ರ್ಣಯಿಸಬಹುದೆಮಗೆನುತ ಗುರು ಪಾ । ಳೆಯಕೆ ನೇಮವ ಕೊಟ್ಟನೋಲಗ ಹರೆದುದಾಕ್ಷಣಕೆ ॥೧೨॥ ಶಶಿ ವರುಣದಿಗ್ವಧುವನಾಲಿಂ । ಗಿಸಲು ಕುಮುದಿನಿ ಖತಿಯ ಹಿಡಿದಳು । ಮುಸುಳಿದುವು ತಾರೆಗಳು ರಜನೀನಾರಿ ಬಂಗಿದಳು ॥ ಒಸೆದು ಕಮಲಿನಿ ನಗಲು ಮಿಗೆ ಹುರು । ಡಿಸುತಪೂರ್ವದಿಶಾನಿತಂಬಿನಿ । ನಿಶಿತಕೋಪದಿ ಕಿಡಿಯನುಗುಳಿದಳೆನಲು ರವಿಮೆರೆದ ॥೧೩॥ಜೋಡುಮಾಡಿತು ನೃಪರು ನಿಮಿಷಕೆ । ಹೂಡಿದವು ತೇರುಗಳು ಹಯತತಿ । ಕೂಡೆ ಹಲ್ಲಣಿಸಿದವು ಗುಳದಲಿ ಜಡಿದವಾನೆಗಳು ॥ ಕೂಡೆ ಘುಮ್ಮಿಡೆ ದೆಸೆದೆಸೆಗಳ । ಲ್ಲಾಡಿದವು ಗಿರಿನಿಕರ ಬಿರುದನಿ । ಗೋಡಿದವು ನಿಸ್ಸಾಳಶತಸೇನಾಸಮುದ್ರದಲಿ ॥೧೪॥ ಉದಯವಾಗದಮುನ್ನ ಕಳದಲಿ । ಹೊದರುಗಟ್ಟಿದರಾತ್ರಿಗರ್ತರು । ಕದನಕೆಮ್ಮೊಡನಳವಿಗೊಡುವುದು ಬೇಗ ಬಹುದೆಂದು ॥ ಮದವಡರಿ ಭಟಭೈರವಂಗ । ಟ್ಟಿದರರಾಭಟರವರು ಬಂದೊದ । ರಿದರು ಪಾರ್ಥನ ಮುಂದೆ ಸಂಶಪ್ತಕರ ಬಿರುದುಗಳ ॥೧೫॥ ಏಳು ಫಲುಗುಣ ಕೃಷ್ಣ ನೀ ಗೋ । ಪಾಲನೇಸರಮಾನಿಸನು ಬರ । ಹೇಳಲಾಪರೆ ಕರೆ ಸಹಾಯಕೆ ಭಾಳಲೋಚನನ॥ ಏಳು ಜಂಜಡವೇಕೆ ಜೊತ್ತಿನ । ಕಾಳಗವೆ ಕಲಿಯಾಗು ನಡೆಯೆನೆ। ಕೇಳುತರ್ಜುನನಿತ್ತನವರಿಗೆ ನಗುತ ವೀಳೆಯವ ॥೧೬॥ ನಡೆಯಿನೀವಾಹವಕೆ ಮೆಚ್ಚಿಸಿ । ಕೊಡುವೆನಿದೆ ಬಹೆನೆಂದು ಮುರಹರ । ನೊಡನೆ ಮುದದಲಿ ರಥಕೆ ಬಂದನು ಬಿಲ್ಲನೊದರಿಸುತ ॥ ನುಡಿದನಂತಕಸೂನು ಕಲಶಜ । ಹಿಡಿಯಲೆಂದೇರಿಸಿವನುಡಿ ತ । ನ್ನೊಡನೆ ಸಿಂದಾಹವವ ಕಾದುವಪಾರ್ಥ ಹೇಳೆಂದ ॥೧೭॥ ಕರಸಿದೊಡೆ ಕಾಳಗದೊಳೆ

ತಗೆಡೆ । ಮುರಿಯಬಾರದು ನಿಮ್ಮಮೇಲಣ । ಧುರದ ಕಾಹಿಂಗಿರಲಿ ತಾಸಾತ್ಯಕಿಶತಾನೀಕ ॥ ವರಘು ತೋತ್ಕಚದ್ರುಪದ ಕೈಕಯ । ರಿರಲಿ ಪವನಜನಕುಲಸಹದೇ । ವರಿಗೆ ದ್ರೋಣನ ಬವರವಾಗಲಿಯೆಂದನಾಪಾರ್ಥ ॥೧೮॥ ಎಂದುಸಂಶಪ್ತಕರ ಮೋಹರ । ಕಂಡು ತಿರುಗಿದ ಪಾರ್ಥನಿತ್ತಲು । ಸಂದಣಿಸಿ ಕೌರಾಯದಳ ಜಲರಾಶಿ ಜರಿವಂತೆ ॥ ಮುಂದೆ ತವಕಿಗಭಟರ ತೆರಳಿಕೆ । ಯಿಂದ ಮೊರೆವಗಭೀರಭೇರಿಯು । ಮಂದರದ ಮುರಿಗಡಲ ಗಜರಿನೊಳೊದರಿತರಿಸೇನೆ ॥೧೯॥ ಬಳಿಯುಸುಮಹಾರಥರ ರಾಜಾವಳಿಯ ಚಮರಚ್ಛತ್ರಪಙ್ತಿಯ । ಸೆಳೆದಡಾಯುಧಹೆಗಲತೆಕ್ಕೆಯ ರಾಯರಾವುತರ ॥ ಹೊಳೆವಹೇಮದ ರಥಕೆ ಹೂಡಿದ । ಚೆಲುವಕುದುರೆಯ ನೆಗಹಿ ನಿಮಿರುವ । ಕಲಶಸಿಂಧದ ದ್ರೋಣ ಪೊಕ್ಕನು ಕಾಳಗದಕಳನ ॥೨೦॥ ಗರುಡನಾಕಾರದಲಿ ಬಲವನು । ಸರಿಸ ಮಿಗೆ ಮೋಹಿದನು ವಿಹಗನ । ಶಿರಕೆ ಕೃಪಕುರುರಾಜದುಶ್ಶಾಸನನ ನಿಲಿಸಿದನು ॥ ಕರಸಿ ಭೂರಿಶ್ರವನ ಮಾದ್ರೇ । ಶ್ವರನ ಭಗದತ್ತನ ಸುಬಾಹುವ । ನಿರಿಸಿದನು ಬಲದೆರಕೆ ಯೊಳಗಕ್ಷೋಹಿಣೀಬಲವ ॥೨೧॥ ವಿಂದನಶ್ವತ್ಥಾಮಕರ್ಣ್ನನ । ನಂದನನು ಕಾಂಬೋಜಶಕುನಿಯ । ನಿಂದರೊಡನಕ್ಷೋಹಿಣಿಯ ತಂದೆಡದಪಕ್ಕದಲಿ ॥ ನಿಂದುದಾಮೋಹರದ ಜೋಕೆಯ । ಹಿಂದೆ ಲಕ್ಕಕಳಿಂಗಘಟೆಗಳು । ಸಂದಣಿಸಿದವು ದ್ರೋಣ ನಿಂದನು ಬಲದಕಾಹಿನಲಿ ॥೨೨॥ ಆರಿ ಬೊಬ್ಬಿರಿತತುಳಭಾರಿಯ । ಭೂರಿಭಟರಗ್ರದಲಿ ಕಟಕಾ । ಚಾರಿಯನು ಕೈಪೀಸಿದನು ಬರಹೇಳು ಪವನಜನ॥ ವೀರರಾದೊಡೆ ದೊರೆಯ ಬರಹೇ। ಳಾರುತಡೆವರೆ ತಡೆಯ ಹಿಡಿವೆನು। ಕೌರವನ ಮೇಲಾಣೆಯೆನುತವೆ ದ್ರೋಣ ಬೊಬ್ಬಿರಿದ॥೨೩॥ ಕರೆದು ಧೃಷ್ಟದ್ಯುಮ್ನನಿಜಮೋ। ಹರವರಚಿಸಿದನರ್ಧಚಂದ್ರಾ । ಕರದಿ ವಿಲಸದೊಳಳ್ಳಿರಿವನಿಸ್ಸಾಳಕೋಟಿಗಳ॥ ಧುರಕೆ ನಿಗುರುವಭಟರತೂಳುವ ।ಕರಿಘಟೆಯ ಕೆಲಬಲಕೆಸೂಸುವ । ತುರುಗರಾಜಿಯ ತೇರಗಮನದ ಗಜರು ಘಾಡಿಸಿತು॥೨೪॥ಒದೆದುದಬುಧಿಯನಬುಧಿಯೆನೆಪೊ। ಕ್ಕದು ಚತುರ್ಬಲ ಹೊಯ್ದು ತಲೆಯೊ।ತ್ತಿದರು ಕೇಶಾಕೇಶಿಖಡ್ಗಾಖಡ್ಗಿಯಲಿ ಭಟರು ॥ ಕೆದರಿತರಿಬಲ ಮತ್ತೆ ಹೊದರೆ। ದ್ದುದು ವಿಘಾತಿಯಲುಲಿದು ಹುರಿಗೊಂ। ಡೊದಗಿ ಹಾಹಾಹಾಣಿಯಲಿ ಹೊಯ್ದಾಡಿತುಭಯಬಲ ॥೨೫॥ ಹೆಳಚುವಸಿಗಳ ಖಣಿಕಟಿಲಕಳ । ಕಳಿಕೆ ಮಿಗೆ ಹೊಯ್ದಾಡಲುರುಳುವ । ತಲೆಯ ಬೀಳುವಹೆಣನ ಧಾರಿಡುವರುಣವಾರಿಗಳ ॥ ತಳಿತಖಂಡದಹರಿದ ಕರುಳಿನ। ಕಳಿಚಿದೆಲುವಿನ ಕುಣಿವಮುಂಡದ। ಕೊಳುಗಳದ ಹೆಬ್ಬೆಳಸು ಹೆಚ್ಚಿಸಿತಂತಕನ ಪುರವ॥೨೬॥ ಉಲಿದು ಸೂಠಿಯೊಳೆರಗಿದರು ಪೆ । ಗ್ಗಳೆಯರಾವ್ತರು ಗಜರಿ ಮಸ್ತಕ । ವಿಳಿಯಲಂಕುಶವಿಕ್ಕಿ ಬಿಟ್ಟರು ಸೊಕ್ಕಿದಾನೆಗಳ ॥ ತಳಪಟವ ತುಂಬಿದವು ತೇರುಗ । ಳೆಳೆ ಜಡಿಯೆ ಕಾಲಾಳು ಹೊಕ್ಕಡ । ಗಬಸಿ ಹೊಯ್ದುದು ಚೂಣಿಯಲಿ ರಥ ಕಳವ ಚೌಕದಲಿ ॥೨೭॥ ಇತ್ತಲರ್ಜುನನಾತ್ರಿಗರ್ತರಿ । ಗಿತ್ತವಸರವನು ಕೃತಾಂತನ । ತೆತ್ತಿಗರಿಗೌತಣವ ಹೇಳಿಸಿದನು ಶರೌಘದಲಿ ॥ ತುತ್ತಿದವು ಕೂರಂಬುಮೊರೆಗಳ । ನೆತ್ತಿ ಬಿಸುಟಾವೈರಿಬಲದೊಳು। ಬತ್ತಿಸಿದನಂದಹಿತ ಸುಭಟರ ವೀರಶರನಿಧಿಯ ॥೨೮॥ ನಪೇಳುವೆನಿತ್ತಲಾದುದು । ದಾನವಾಮರರದುಭುತಾಹವ । ವಾನಿರಂತರವಿಕ್ರಮೋನ್ನತ ಭಟರ ಬರದಲಿ ॥ ಆನಲಾರಿಗೆ ನೂಕುವುದು ತವ । ಸೂನುವಿನ ಸುಭಟರು ಪರಾಕ್ರಮ । ಹೀನರೇ ಧೃತರಾಷ್ಟ್ರ ಕೇಳೈ ದ್ರೋಣಸಂಗರವ ॥೨೯॥ ಬಿಲ್ಲನೊದರಿಸಿ ಕೆಲಬಲದಭಟ । ರೆಲ್ಲರಿಗೆ ಕೈವೀಸಿ ಚೌಪಟ ।

ಯವು । ನಂದನನನೊಲಿದಂತೆಮಾಡಿ । ಲ್ಲಿಂದ ಹೇಳರ್ಜನನ ಭಯ ನಿನಗಿಲ್ಲ ನಂಬುವುದು ॥ ಎಂದು ಶಪಥಕೆ ತಮ್ಮಿನಿಬರ್ರ್ಯ । ತಂದುವಿಪ್ರರ ಕರೆದುವೈದಿಕ । ದಿಂದ ರಚಿಸಿದರಗ್ನಿಯಲಿ ಮಾಡಿದರು ಭಾಷೆಗಳ॥೬॥ ನರನ ಬಿಡಲಾಗದು ಮಹಾಸಂ। ಗರದೊಳೊಬ್ಬರ ನೊಬ್ಬರೊಪ್ಪಿಸಿ। ತೆರಳಲಾಗದು ಮುರಿಯಲಾಗದು ಕೊಂಡ ಹಜ್ಜೆಗಳ ॥ ಹೊರಳಿ ಹೆಣನನು ಮೆಟ್ಟಿ ಮುಂದಣಿ । ಗುರವಣಿಸುವುದು ತಪ್ಪಿದವರಿಗೆ । ನರಕ ವೀಪಾತಕದಗತಿ ತಮಗೆಂದು ಸಾರಿದರು ॥೭॥ ನುಡಿದ ನುಡಿಗೇಡುಗನ ವಿಪ್ರನ । ಮಡುಹಿದಾತನನವುಲಗರುವಿನ । ಮಡದಿಯರಿಗೆಳುಪಿದನ ಸಾಕಿದಪತಿಗೆ ತಪ್ಪಿದನ ॥ ಹಿಡಿವ ಶರಣಾಗತರ ಕಾಯದೆ । ಬಿಡುವವನ ನಾಸ್ತಿಕನ ವಿಪ್ರರ । ಜಡಿದುನುಡಿದನ ನರಕವಾಗಲಿ ರಣದೊಳೋಡಿದೊಡೆ ॥೮॥ ಎಂದು ಸಂಶಪ್ತಕರು ತಮ್ಮೊಳ । ಗಂದು ಶಪಥವ ಮಾಡಿ ವಿಪ್ರರ । ಮಂದೆಗಿತ್ತರು ಗೋಹಿರಣ್ಯಫಲಾದಿವಸ್ತುಗಳ ॥ ಅಂದು ರವಿಜಲ ವಹ್ನಿಯನಿಲವು । ರಂದರಾದಿಸುರೌಘ ಸಾಕ್ಷಿಗಳೆಂದು ಸೂಳೈಸಿದರು ಭುಜವನು ಸಿಡಿಲತನ ಹೆದರೆ ॥೯॥ ಇವರ ಮೊದಲಿಗಸತ್ಯ ರಥನಿಂ । ತಿವನ ಬಳಿ ರಥಹತ್ತುಸಾವಿರ । ವಿದನೊಡನೆ ಸೇರುವೆಯ ರಥಮೂವತ್ತು ಸಾವಿರವು ॥ ಭುವನವೀರಸುಶರ್ಮವಾಳವ । ಯವನರಥವಿದು ಹತ್ತುಸಾವಿರ । ಬವರಕಿಂತೈವತ್ತುಸಾವಿರರಧಿಕರೊಂದಾಯ್ತು ॥೧೦॥ ಸಭೆ ಬೆದರೆ ಕಲ್ಪಾಂತವಹ್ನಿಯ । ರಭಸವಲ್ಲಿಗೆ ಕೇಳಲಾಯಿತು । ಸುಭಟರಹಿರೋ ಜಾಗುಜಾಗೆನುತೊಲೆದನಾದ್ರೋಣ ॥ ಅಭವನಡಹಾಯ್ದಿರಲಿ ಪಾಂಡವ। ವಿಭುವ ಹಿಡಿವೆನು ಪಾರ್ಥನೊಬ್ಬನ। ಪ್ರಭೆಗೆ ಹೆದರುವೆನುಳಿದವೀರರ ಬಗೆವನಲ್ಲೆಂದ ॥೧೧॥ ನಯವಿದನು ಹೊಂಬಟ್ಟಲಲಿ ವೀ । ಳೆಯವನನಿಬರಿಗಿತ್ತು ಕುರುಸೇ । ನೆಯಲಿ ಮರೆಪುತೇಕೆ ನೀವೇ ವಿಜಯವುಳ್ಳವರು ॥ ಜಯವನಿನ್ನಾಹವದೊಳಗೆ ನಿ । ರ್ಣಯಿಸಬಹುದೆಮಗೆನುತ ಗುರು ಪಾ । ಳೆಯಕೆ ನೇಮವ ಕೊಟ್ಟನೋಲಗ ಹರೆದುದಾಕ್ಷಣಕೆ ॥೧೨॥ ಶಶಿ ವರುಣದಿಗ್ವಧುವನಾಲಿಂ । ಗಿಸಲು ಕುಮುದಿನಿ ಖತಿಯ ಹಿಡಿದಳು । ಮಸುಳಿದುವು ತಾರೆಗಳು ರಜನೀನಾರಿ ಬಂಗಿದಳು ॥ ಒಸೆದು ಕಮಲಿನಿ ನಗಲು ಮಿಗೆ ಹುರು । ಡಿಸುತಪೂರ್ವದಿಶಾನಿತಂಬಿನಿ । ನಿಶಿತಕೋಪದಿ ಕಿಡಿಯನುಗುಳಿದಳೆನಲು ರವಿಮೆರೆದ ॥೧೩॥ಜೋಡುಮಾಡಿತು ನೃಪರು ನಿಮಿಷಕೆ । ಹೂಡಿದವು ತೇರುಗಳು ಹಯತತಿ । ಕೂಡೆ ಹಲ್ಲಣಿಸಿದವು ಗುಳದಲಿ ಜಡಿದವಾನೆಗಳು ॥ ಕೂಡೆ ಘುಮ್ಮಿಡೆ ದೆಸೆದೆಸೆಗಳ । ಲ್ಲಾಡಿದವು ಗರಿನಿಕರ ಬಿರುದನಿ । ಗೋಡಿದವು ನಿಸ್ಸಾಳಶತಸೇನಾಸಮುದ್ರದಲಿ ॥೧೪॥ ಉದಯವಾಗದಮುನ್ನ ಕಳದಲಿ । ಹೊದರುಗಟ್ಟಿದರಾತ್ರಿಗರ್ತರು । ಕದನಕೆಮ್ಮೊಡನಳವಿಗೊಡುವುದು ಬೇಗ ಬಹುದೆಂದು ॥ ಮದವಡರಿ ಭಟಭೈರವಂಗ । ಟ್ಟಿದರರಾಭಟರವರು ಬಂದೊದ । ರಿದರು ಪಾರ್ಥನ ಮುಂದೆ ಸಂಶಪ್ತಕರ ಬಿರುದುಗಳ ॥೧೫॥ ಏಳು ಫಲುಗುಣ ಕೃಷ್ಣ ನೀ ಗೋ । ಪಾಲನೇಸರವಾನಿಸನು ಬರ । ಹೇಳಲಾಪರೆ ಕರೆ ಸಹಾಯಕೆ ಭಾಳಲೋಚನನ॥ ಖಳು ಜಂಜಡವೇಕೆ ಜೊತ್ತಿನ । ಕಾಳಗವೆ ಕಲಿಯಾಗು ನಡೆಯೆನೆ। ಕೇಳುತರ್ಜನನಿತ್ತನವರಿಗೆ ನಗುತ ವೀಳೆಯವ ॥೧೬॥ ನಡೆಯಿನೀವಾಹವಕೆ ಮೆಚ್ಚಿಸಿ । ಕೊಡುವೆನಿದೆ ಬಹೆನೆಂದು ಮುರಹರ । ನೊಡನೆ ಮುದದಲಿ ರಥಕೆ ಬಂದನು ಬಿಲ್ಲನೊದರಿಸುತ ॥ ನುಡಿದನಂತಕಸೂನು ಕಲಶಜ । ಹಿಡಿಯಲೆಂದೇರಿಸಿ ದನುಡಿ ತ । ನ್ನೊಡನೆ ನಿಂದಾಹವವ ಕಾದುವಪಾರ್ಥ ಹೇಳೆಂದ ॥೧೭॥ ಕರಸಿದೊಡೆ ಕಾಳಗದೊಳೆ

ನಗೆಡೆ । ಮುರಿಯಬಾರದು ನಿಮ್ಮಮೇಲಣ । ಧುರದ ಕಾಹಿಂಗಿರಲಿ ತಾಸಾತ್ಯಕಿಶತಾನೀಕ ॥ ವರಘಟೋತ್ಕಚದ್ರುಪದ ಕೈಕಯ । ರಿರಲಿ ಪವನಜನಕುಲಸಹದೇ । ವರಿಗೆ ದ್ರೋಣನ ಬವರವಾಗಲಿಯೆಂದನಾಪಾರ್ಥ ॥೧೮॥ ಎಂದುಸಂಶಪ್ತಕರ ಮೋಹರ । ಕಂಡು ತಿರುಗಿದ ಪಾರ್ಥನಿತ್ತಲು । ಸಂದಣಿಸಿತೀರಾಯುದಳ ಜಲರಾಶಿ ಜರಿವಂತೆ ॥ ಮುಂದೆ ತವಕಿಗಭಟರ ತೆರಳಿಕೆ । ಯಿಂದ ಮೊರೆವಗಭೀರಭೇರಿಯು । ಮಂದರದ ಮುರಿಗಡಲ ಗಜರಿನೊಳೊದರಿತರಿಸೇನೆ ॥೧೯॥ ಬಳಿಯುಸುಮಹಾರಥರ ರಾಜಾವಳಿಯು ಚಮರಚ್ಛತ್ರಪಙ್ಕ್ತಿಯು । ಸೆಳೆದಡಾಯುಧಹೆಗಲತೆಕ್ಕೆಯ ರಾಯರಾವುತರ ॥ ಹೊಳೆವಹೇಮದ ರಥಕೆ ಹೂಡಿದ । ಚೆಲುವಕುದುರೆಯ ನೆಗಹಿ ನಿಮಿರುವ । ಕಲಶಸಿಂಧದ ದ್ರೋಣ ಪೊಕ್ಕನು ಕಾಳಗದಕಳನ ॥೨೦॥ ಗರುಡನಾಕಾರದಲಿ ಬಲವನು । ಸರಿಸ ಮಿಗೆ ಮೋಹಿದನು ವಿಹಗನ । ಶಿರಕೆ ಕೃಪಕುರುರಾಜದುಶ್ಶಾಸನನ ನಿಲಿಸಿದನು ॥ ಕರಸಿ ಭೂರಿಶ್ರವನ ಮಾದ್ರೇ । ಶ್ವರನ ಭಗದತ್ತನ ಸುಬಾಹುವ । ನಿರಿಸಿದನು ಬಲದೆರಕೆ ಯೊಳಗಕ್ಷೋಹಿಣೀಬಲವ ॥೨೧॥ ವಿಂದನಶ್ವತ್ಥಾಮಕರ್ಣ್ಣನ । ನಂದನನು ಕಾಂಬೋಜಶಕುನಿಯು । ನಿಂದರೊಡನಕ್ಷೋಹಿಣಿಯ ತಂದೆಡದಪಕ್ಕದಲಿ ॥ ನಿಂದುದಾಮೋಹರದ ಜೋಕೆಯು । ಹಿಂದೆ ಲಕ್ಕಕಳಿಂಗಘಟೆಗಳು । ಸಂದಣಿಸಿದವು ದ್ರೋಣ ನಿಂದನು ಬಲದಕಾಹಿನಲಿ ॥೨೨॥ ಆರಿ ಬೊಬ್ಬಿರಿತತುಳಭಾರಿಯ । ಭೂರಿಭಟರಗ್ರದಲಿ ಕಟಕಾ । ಚಾರಿಯನು ಕೈವೀಸಿದನು ಬರಹೇಳು ಪವನಜನ॥ ವೀರರಾದೊಡೆ ದೊರೆಯು ಬರಹೇ। ಳಾರುತಡೆವರೆ ತಡೆಯೆ ಹಿಡಿವೆನು। ಕೌರವನ ಮೇಲಾಣೆಯೆನುತವೆ ದ್ರೋಣ ಬೊಬ್ಬಿರಿದ॥೨೩॥ ಕರೆದು ಧೃಷ್ಟದ್ಯುಮ್ನನಿಜಮೋ । ಹರವರಚಿಸಿದನರ್ಧಚಂದ್ರಾ । ಕರದಿ ವಿಲಸದೊಳಳ್ಳಿರಿವನಿಸ್ಸಾಳಕೋಟಿಗಳ॥ ಧುರಕೆ ನಿಗುರುವಭಟರತೂಳುವ ।ಕರಿಘಟೆಯ ಕೆಲಬಲಕೆಸೂಸುವ । ತುರುಗರಾಜಿಯ ತೇರಗಮನದ ಗಜರು ಘಾಡಿಸಿತು॥೨೪॥ಬದೆದುದಬುಧಿಯುನಬುಧಿಯೆನೆಪೊ। ಕ್ಕುದು ಚತುರ್ಬಲ ಹೊಯ್ದು ತಲೆಯೊ।ತ್ತಿದರು ಕೇಶಾಕೇಶಿಖಡ್ಗಾಖಡ್ಗಿಯ ಭಟರು ॥ ಕೆದರಿತರಿಬಲ ಮತ್ತೆ ಹೊದರೆ। ದ್ದುದು ವಿಘಾತಿಯುಲುಲಿದು ಹುರಿಗೊಂ। ಡೊದಗಿ ಹಾಹಾಹಾಣಿಯಲಿ ಹೊಯ್ದಾಡಿತುಭಯಬಲ ॥೨೫॥ ಹೆಳಚುವಸಿಗಳ ಖಣಿಕಟಿಲಕಳ । ಕಳಿಕೆ ಮಿಗೆ ಹೊಯ್ದಾಡಲುರುಳುವ । ತಲೆಯ ಬೀಳುವಹೆಣನ ಧಾರಿಡುವರುಣವಾರಿಗಳ ॥ ತಳಿತಖಂಡದಹರಿದ ಕರುಳಿನ। ಕಳಿಚಿದೆಲುವಿನ ಕುಣಿವಮುಂಡದ। ಕೊಳುಗಳದ ಹೆಬ್ಬೆಳಸು ಹೆಚ್ಚಿಸಿತಂತಕನ ಪುರವ॥೨೬॥ ಲಿದು ಸೂಠಿಯೊಳೆರಗಿದರು ವೆ । ಗ್ಗಳೆಯರಾವುತರು ಗಜರಿ ಮಸ್ತಕ । ವಿಳಿಯಲಂಕುಶವಿಕ್ಕಿ ಬಿಟ್ಟರು ಸೊಕ್ಕಿದಾನೆಗಳ ॥ ತಳಪಟವ ತುಂಬಿದವು ತೇರುಗ । ಳಿಳೆ ಜಡಿಯೆ ಕಾಲಾಳು ಹೊಕ್ಕಡ । ಗಸಿ ಹೊಯ್ದುದು ಚೂಣಿಯಲಿ ರಥ ಕಳವ[illegible]ಕದಲಿ ॥೨೭॥ ಇತ್ತಲರ್ಜುನನಾತ್ರಿಗರ್ತರಿ । ಗಿತ್ತವಸರವನು ಕೃತಾಂತನ । ತೆತ್ತಿಗರಿಗೌ[illegible]ವ ಹೇಳಿಸಿದನು ಶರೌಘದಲಿ ॥ ತುತ್ತಿದವು ಕೂರಂಬುಓರೆಗಳ । ನೆತ್ತಿ ಬಿಸುಟಾವೈರಿಬಲದೊಳು। ಬತ್ತಿಸಿದನಂದಹಿತ ಸುಭಟರ ವೀರಶರನಿಧಿಯ ॥೨೮॥ ನಪೇಳುವೆನಿತ್ತಲಾದುದು । ದಾನವಾಮರರದ್ಭುತಾಹವ । ಮಾನಿರಂತರವಿಕ್ರಮೋನ್ನತ ಭಟರ ಬರದಲಿ ॥ ಆನಲಾರಿಗೆ ನೂಕುವುದು ತವ । ಸೂನುವಿನ ಸುಭಟರು ಪರಾಕ್ರಮ । ಹೀನರೇ ಧೃತರಾಷ್ಟ್ರ ಕೇಳೈ ದ್ರೋಣಸಂಗರವ ॥೨೯॥ ಬಿಲ್ಲನೊದರಿಸಿ ಕೆಲಬಲದಭಟ । ರೆಲ್ಲರಿಗೆ ಕೈವೀಸಿ ಚೌಪಟ ।

ಮಲ್ಲ ನುಡಿದನು ತನ್ನ ಸಾರಥಿಗಿತ್ತು ಮೀಳೆಯುವ ॥ ಖುಲ್ಲರಿಪುಗಳ ಬಿಸುಟು ಹೊವರಿನ । ಹೊಳ್ಳು
ಗರನಡಹಾಯ್ಸಿ ಧರ್ಮಜ । ನೆಲ್ಲಿ ಮೋಹರದೆಗೆದನತ್ತಲು ರಥವ ಹರಿಸೆಂದ ॥೩೦॥ ರಥವ ಬಿಟ್ಟನು
ಸೂಠಿಯಲಿ ನಿ । ರ್ಮಥಿತರಿಪುಬಲನಟ್ಟಿದನು ಭುಜ । ಶಿಥಿಲಸಾಹಸರೇನ ನಿಲುವರು ದ್ರೋಣನುರವ
ಣೆಗೆ ॥ ಪೃಥುವಿ ನೆಗ್ಗಿತು ಹೊತ್ತ ಕಮಠ। ವ್ಯಥೆಯ ನಾರುಸುರುವರು ಸುಮಹಾ । ರಥರ ಹೊದರಲಿ
ಹೊಕ್ಕನುರಿಬಲುಮಳೆಯ ಹೊಗುವಂತೆ॥೩೧॥ಆಳ ಹೊಗಿಸಾದ್ರೋಣರಥ ದೂ। ವಾಳಿಯಲಿ ಬರುತದೆ
ಕೃತಾಂತನ । ಥಾಳಿಗೆತ್ತಣಧೀರವೋ ನೆಗ್ಗಿದವು ನೆನಹುಗಳು ॥ ಕಾಲುಗೆಡದಿರಿ ಭಟರು ಕೈಕೊಳ। ಹೇ
ಳಿ ಕೈತಪ್ಪಾಗದಿರದು ನೃ । ಪಾಲಕಂಗೊದವಿದರು ಧರ್ಮಜನವರಮಂತ್ರಿಗಳು ॥೩೨॥ ಘಡಘಡಾನಿ
ರುತಿರಲು ರಾಯನ । ಹಿಡಿವವನ ಹೆಸರೇನು ರಿಪುಭಟ । ನೊಡಲ ಹೊಳ್ಳಿಸಿ ನೆಣನನುಣ್ಣಲಿಕ್ಕುವನು
ದೈತ್ಯರಿಗೆ ॥ ಬಿಡು ರಥವನಾದ್ರೋಣನಿದಿರಲಿ । ತಡೆಯೆನುತ ಸಾರಥಿಗೆ ಸೂಚಿಸಿ । ತುಡುಕಿದನು ಬ
ಲುಬಿಲ್ಲ ದೃಷ್ಟದ್ಯುಮ್ನನಿದಿರಾದ ॥೩೩॥ ಬಲ್ಲೆನೀತನ ಬಲುಹ ಸಾಕಿ । ನ್ನೊಳ್ಳೆಗರ ನೊಡೆಯಿಕ್ಕಿ ಹಾ
ಯಿಸಿ । ಕೆಲ್ಲೆಯಲಿ ಮುರಿನೂಕು ನಡೆ ಭೂಪತಿಯ ಸಂಮುಖಕೆ ॥ ನಿಲ್ಲದೊಟ್ಟೈಸೆನುತ ಸಾಹಸ ।
ಮಲ್ಲ ಸಾರಥಿಗರುಹಿ ಭಟರ । ಲ್ಲಲ್ಲಿ ಭಯಗೊಳೆ ದ್ರೋಣ ಪೊಕ್ಕನು ರಾಯ ಮೋಹರವ ॥೩೪॥
ಶಿವಶಿವಾ ಸಿಕ್ಕಿದನು ಸಿಕ್ಕದ । ನವನಿಪತಿಯೆನಲೌಕಿದನು ಗಜ। ನಿವಹವಗಿದಬ್ಬರಿಸಿ ಮುಕ್ಕುರಿಕಿದವು ಕು
ದುರೆಗಳು ॥ ತವಕದಲಿ ಬದ್ದರದಬಂಡಿಗ । ಳವಚಿದವು ತಲೆವರಿಗೆಗಳಲಾ । ಹವಕೆ ಹೊಕ್ಕುದು ಪಾ
ಯದಳದಲಿ ದ್ರೋಣನಿದಿರಿನಲಿ ॥೩೫॥ ಪಟುಗಳೋ ಮರುಳುವ್ರೊತು ಪಾಂಡವ। ಭಟರು ಕರೆಯರಲಾ
ಯುಧಿಷ್ಠಿರ । ನಟಮಟಿಸಿ ತಾಚುಕ್ಕನಿಕ್ಕುವಲೆಕ್ಕ ಲೇಸಾಯ್ತು॥ ಕುಟಿಲತನದಲಿ ಗೆಲುವನೇ ಹುಲು ।
ಕುಟಿಕರಿವದಿರ ಹೊಯ್ದು ತನ್ನನು। ನಿಟಿಲಲೋಚನನಡ್ಡಹಾಯ್ದೊಡೆ ಹಿಡಿವೆನೆನುತೆಚ್ಚ ॥೩೬॥ ನೂಕಿಬ
ಹ ತೇಜಿಗಳ ಖುರಗಳ। ನಾಕಖಂಡಿಸಿ ಕವಿವನಾಗಾ। ನೀಕವನು ದಸಕೆಡಹಿ ತೇರಿನ ಹೊವೆರ ಹರೆಗಡಿದು॥
ನೂಕಿ ತಲೆವರಿಗೆಯಲಿ ಹರಿತಹ । ನೇಕಸುಭಟರ ಸೀಳಿ ಜಯರ । ತ್ನಾಕರನು ತುಳುಕಿದನು ಪಾಂಡವ
ಸೈನ್ಯಸಾಗರವ ॥೩೭॥ ಬಲವ ಬರಿಕೈದೆವು ಯುಧಿಷ್ಠಿರ । ಬಿಲುದುಡುಕು ಸಾಕೋಡಿ ಬದುಕುವ । ಹು
ಲುಪರೆಯತನ ಹೆಮ್ಮೆಯೇ ಕ್ಷತ್ರಿಯರ ಮಕ್ಕಳಿಗೆ ॥ ಅಳಿದೊಡಮರರಿಗೊಡೆಯನಹೆ ಹೇ। ಳುಳಿದೊಡ
ವನೀಪಾಲ ನೀನಹೆ । ಕಲಹವಿಹಪರಕೊಳ್ಳಿತೆನುತುರವಣಿಸಿದನು ದ್ರೋಣ ॥೩೮॥ ಘಡಘಡುರವಣೆ ಬೇ
ಡ ತೆಗೆ ಬಾ । ಯ್ಬಡಿಕತನವಿದು ಗರುವರಂಗವೆ । ಕಡುಹ ನಾಲಿಗೆಯರಿಯಬೇಹುದೆ ಕೈಯ ಧ
ನುನಿಲ್ಲ ॥ ಒಡನೆ ತಾನಿರುತಿರಲು ರಾಯರ । ಹಿಡಿವಭಟನೇ ನೀನೆನುತ ಬಿಲು । ದುಡುಕಿ ಮುಂದೆ ಶಿ
ಖಂಡಿದ್ರೋಣನ ರಥಕೆ ಮಾರಾಂತ ॥೩೯॥ ಅಕಟ ಸಿಂಹಕೆ ಮಲೆತುದೋ ಜಂ । ಬುಕನು ನೋಡೈ
ಸೂತ ಭೀಷ್ಮರ । ಶಕುತಿಗಂದಿದಿರಾದಮದದಲಿ ಮುಂದುಗಾಣನಿವ ॥ ಚಕಿತಚಾಪಶಿಖಂಡಿ ನಿಲು ಸಾ ।
ಯಕದ ಸೂಠಿಯ ಮಾತನಾಡುವ। ದುಕುತಿಚಾಪಲವೇಕೆನುತ ಕಣೆಗೆದರಿದನು ದ್ರೋಣ ॥೪೦॥ ಗುರು
ವಿನಂಬಿನ ಬಂಬಲನು ಕ । ತ್ತರಿಸಿ ಕೈಯೊಡನೆಚ್ಚು ದಿಗುತಟ । ಬಿರಿಯಲದ್ಭುತವಾದವಂಬುಗಳೇನ
ನುಸುರುವೆನು ॥ ಅರಿಶಿಖಂಡಿಯ ಕೈಚಳಕ ಕಾ । ಹುರವಲಾ ಲೇಸಾಯ್ತು ಬಿಲ್ಲಿನ । ಭರವಸವು ಲೇ
ಸೆನುತ ಕೈಕೊಂಡೆಚ್ಚನಾದ್ರೋಣ ॥೪೧॥ ಸಾಕು ಷಂಡನಕೂಡೆ ಕಾದುವ । ದೇಕೆ ತಿದುವೆನೆನುತ ರ

ಥವನು । ನಾಕುಶರದಲಿ ಮುರಿದು ಸೂತನ ತಲೆಯನೆರಡರಲಿ ॥ ನೂಕಿ ಧನುವನು ಮೂರುಬಾಣದ । ಲೌಕಿ ಖಂಡಿಸಿ ಹೋಗುಹೋಗಿ । ನ್ನಾಕೆವಾಳರ ಕರೆದು ತಾಯೆನುತೈದಿದನುದ್ರೋಣ ॥೪೨॥ ಎಲೆ ಯುಧಿಷ್ಠಿರ ಬಿಲ್ಲಹಿಡಿ ನರ । ಹುಳುಗಳೆವದಿರ ಕವಿಸಿ ಕಾಲವ। ಕಳಿವುದೇ ಸಾಕಿನ್ನು ಕೈವಶವಾದೆ ನಿಲ್ಲೆನುತ ॥ ಅಳವಿಗಿಟ್ಟಳಿಸಲು ಶರಾಳಿಯು । ತುಳುಕಿ ಹೊಕ್ಕನು ಸತ್ಯಜಿತು ದಳ । ಉಳಿಸಿದರು ಚಿತ್ರಿಕಶತಾನೀಕಾದಿನಾಯಕರು ॥೪೩॥ ಬರಿಯ ಕಾರ್ಪಣ್ಯದಲಿ ಮೇಘದ । ಮರೆಯ ಹೊಕ್ಕೊಡೆ ರಾಹು ಬಿನುವನೆ। ಉರುವರವಿಮಂಡಲವನೆಲೆ ಕುಂತೀಕುಮಾರಕನೆ॥ ಇರಿದು ಮೆರೆವುದು ಮಹಿಮೆಯನು ಕೈ। ಾರೆಯುದಿರು ವೈಮಾರಿಗಳು ಮು।ಕ್ಕುರಿಕಿದೆವದಿರೆಸಿದ್ಧಿಬಹನೆಂದೆನುತ ತೆಗೆದೆಚ್ಚ॥೪೪॥ಏನ ತರಹರಿಸುವುದು ತಿಮಿರವು । ಭಾನುರಶ್ಮಿಯು ಮುಂದೆ ದ್ರೋಣನ । ನೂನಶರವರುಷದಲಿ ನನೆದವು ಸುಭಟರೊಡಲುಗಳು ॥ ಆನಿರಂತರನಿಶಿತಶರ ಸಂ । ಧಾನಕವದಿರುಲಕ್ಷ್ಯವೇ ನಿ । ನ್ನಾನೆಗಳಿಗಿದಿರಾವನೈಧೃತರಾಷ್ಟ್ರಕೇಳೆಂದ ॥೪೫॥ ಕೋಲಿಗೊಬ್ಬರಕಡಿದನಾಪಾಂ । ಚಾಲಬಲದಲಿ ಸತ್ಯಜಿತುವನು ಮೇಲಣಾತನ ಸೌಶತಾನೀಕಕ್ಷಿತೀಶ್ವರನ ॥ ಸೀಳಿದನು ಮಿಡುಕುವ ಮಹಾರಥ । ರೇಳುನೂರನು ತುರಗಗಜಕಾ । ಲಾಳ ನಳಿದುದನಾವನೆಣಿಸುವನಹಿತಸೇನೆಯಲಿ ॥೪೬॥ ಹೊಳ್ಳುಗಳ ತೂರಿದೆವು ಹಿಡಿಹಿಡಿ । ಬಿಲ್ಲ ಸುರಿಸುರಿ ಸರಳ ಕಟ್ಟಿ। ನ್ನಲ್ಲಿ ಹೊಗುವೈ ಕಂದಕುಂತಿಯ ಜಠರವಲ್ಲವಲಾ॥ ನಿಲ್ಲುನಿಲ್ಲೆನುತೈದಿ ಬರಲ । ಲ್ಲಲ್ಲಿ ಮುರುಗಿತು ಸೇನೆ ಸಾಹಸ । ಮಲ್ಲನಡಹಾಯಿದನು ದ್ರುಪದನು ಧನುವನೊದರಿಸುತ ॥೪೭॥ ರಾಯನಾಪತ್ತಿಂದ ಮುನ್ನವೆ । ಸಾಯಬೇಹುದು ತನಗೆನುತ್ತಡ । ಹಾಯಿದನು ಕಲಿಮತ್ಸ್ಯನೃಪ ನಿಜಬಾಂಧವರು ಸಹಿತ ॥ ನೋಯಬೇಹುದು ಮುನ್ನತಾಯೆನು । ತಾಯತಿಕೆಯಲಿ ಪಂಚಕೈಕೆಯ । ರಾಯುಧದ ಬೆಳಕಳ್ಳಿರಿಯೆ ನೂಕಿದರು ತೇರುಗಳ॥೪೮॥ ತಲೆಗೆ ಕೊಂಡೆವು ಹಣವನಿದನಿ।ನ್ನುಳುಹಿಕೊಂಡಿರಲಾಗದೆಂದಿ । ಟ್ಟಳಿಸಿ ಪೊಕ್ಕರು ಯವನಸಂವೀರರು ಸುಷೇಣಕರು ॥ ಅಳವಿಗರು ಕೂಡಾಳುತನದ । ಗ್ಗಳಿಕೆ ತಾನಲ್ಲೆನುತ ಮನ ಮುಂ । ಕೊಳಿಸಿ ಕುಂತೀಭೋಜ ಪೊಕ್ಕನು ಸಕಲದಳಸಹಿತ ॥೪೯॥ ಹರೆದಬಲ ವೊಗ್ಗಾಯ್ತು ರಾಯನ । ನುರವಣಿಸಲೀಯದೆ ನೃಪಾಲಕ । ರುರುಬಿದರು ತರುಬಿದರು ಪರಬಲವನದವಾನಳನ ॥ ಹೊರಳಿ ಹೊಡೆಯದೆ ಭಾರಣೆಯಲೊ । ತ್ತರಿಸಿ ಕಲ್ಪದ ಕಡಲ ಕಡೆಯಲಿ। ಗರುಪಿಕೆಯ ಗಾಢದಲಿ ನಡೆದುದು ತಡೆದುದರಿಭಟನ॥೫೦॥ ತೊಲಗು ವಿಪ್ರಾಧಮಸುಯೋಧನ । ಬಲದೊಳಗೆ ಬಲುಭಾಷೆತನದಲಿ । ಗಳಹಿ ಬಂದೊಡೆ ಹಿಡಿಯಲೀವನೆ ಧರ್ಮನಂದನನ ॥ ಗಳದ ಸತ್ವವನರಿಯದದ್ರಿಗೆ । ತಲೆಯನೊಡ್ಡುವರೇ ವೃಥಾಕಳ । ವೆಳಿಸಿ ನುಡಿವರೆ ಮಾನ್ಯರೆನುತಿದಿರಾದ ನಾದ್ರುಪದ ॥೫೧॥ ಧಿಟ್ಟನಹೆಯೋ ದ್ರುಪದ ಹಾ ಜಗ । ಜಟ್ಟಿಗಳಿಗುಪಹಾಸವೇ ಗರಿ । ಗಟ್ಟಿದಿರಿನೀವ್ ಹಿಡಿಯಲೀವಿರೆ ಧರ್ಮನಂದನನ॥ ತೊಟ್ಟಜೋಹಕೆ ತಕ್ಕನುಡಿಗಳ । ಕೊಟ್ಟೆವಲ್ಲದೆ ನಿಮ್ಮ ರಾಯನ । ಕಟ್ಟಬಲ್ಲೆವೆಯೆನುತ ಕರೆದನು ಸರಳ ಸರಿವಳೆಯ ॥೫೨॥ ದಪ್ಪದಾಭರಣಕ್ಕೆ ಸೂಸಿದ । ವಪ್ಪಸಲುಗೆಗಳೆನಲು ಗರಿಗಳು । ಚಪ್ಪರಿಸಿ ನೂಕಿದವು ಶರ ಸೇನಾಸಮುದ್ರದಲಿ ॥ ಕುಪ್ಪೆಗರ ಹರೆಗಡಿದು ಹೊಗರಲು।ಗೊಪ್ಪಿದವು ನಿರಿಗರುಳ ನಿಮಿಷದೊ। ಳೊಪ್ಪಗೆಡಿಸಿದವರಿಕದಂಬವನೀತನಂಬುಗಳು ॥೫೩॥ ಮುರುಳ ಮುಂಜಿನ ಮಳೆಗೆ ಕುಲಗಿರಿ । ಕರಗುವುದೆ ನೀನೆಚ್ಚ ಶರಪಂ । ಜರಕೆ ಹೆದರುವವೀರರೇ ಪಾ

ಡವಮಹಾರಥರು ॥ ಕೊರಳ ರಕ್ಷಿಸಿ ಕೊಳ್ಳೆನುತ ಚ । ಪ್ಪರಿಸಿ ದ್ರುಪದವಿರಾಟರೆಚ್ಚರು ಸರಳರಶ್ಮಿಯ
ಮಾಲೆ ಮುಕ್ಕುರಿಕಿದವು ದಿಗುತಟವ ॥೫೪॥ ಗಿರಿಯಮಕ್ಕಳು ಕರೆದು ವಜ್ರವ । ಸರಸವಾಡುವಕಾಲ
ವಾಯಿತೆ । ಹರಹರಾ ವಿಸ್ಮಿತವೆನುತ ಹೊಗರೇರಿ ಖತಿಮಸಗಿ ॥ ತಿರುವ ಕಾರಿಸಿದನು ಕಠೋರದ ।
ಮೊರಹುಗಳ ಬಾಯ್ಧಾರೆಗಳ ಕಿಡಿ । ವರಳೆಗಳ ಹೊಗರಂಬು ಹೊಕ್ಕವು ಪಾಂಡು ಸೇನೆಯಲಿ ॥೫೫॥
ನೊರೆರಕುತ ಸುಳಿಮಸಗಿ ಮಿದುಳಿನ । ಹೊರಳಿಗಳ ದುರ್ವ್ರಣದ ನೆಣವಿನ । ತೊರಳೆಗಳ ಕಡುಕುಗಳ
ಮಾಲೆಯ ಬಸಿವವಜಿಗಜಿಯ ॥ ಕರುಳ ಬಂಧದ ಕಂಡದಿಂಡೆಯ । ತುರುಗಿದೆಲುವಿನ ತಳಿತಚರ್ಮದ ।
ಶಿರದ ಕಡಿಗಳಲಡಸಿ ಹರಿದುದು ವೈರಿಸೈನ್ಯದಲಿ॥೫೬॥ ನರರ ಕಡಿಯಾನೆಗಳ ಕಡಿಯಲಿ । ಬೆರಸಿದವು ತ್ತೇ
ಜಿಗಳ ಕರುಳಲಿ । ಕರಿಘಟೆಯ ಕರುಳುಗಳು ತೊಡಕಿದವುಡಿದತೇರುಗಳ॥ ಜರಿದಜೋಡಿನ ಲೊಂದಿದ
ವು ಕ । ತ್ತರಿಸಿದಾಯುಧಕಡಿದಸಿಂಧದ । ಹೊರಳಿಯಲಿ ಹೂಳಿದವು ನಿಮಿಷಕೆ ಪಾಂಡು ಸೈನ್ಯದಲಿ
॥೫೭॥ ಕೂಡೆ ತಳಪಟವಾಯ್ತು ಸುಭಟರ । ಜೋಡುಜರಿದುದು ಕೌರವೇಂದ್ರಗೆ । ಖೋಡಿಯುಂಟೇ
ದ್ರೋಣಕೇಣವಬಿಟ್ಟುಕಾದುವರೆ ॥ ಖೇಡತನ ಮಿಗಿಲಾಯ್ತು ವೈರಿಯಲಿ । ಹೂಡಿದವು ಹೊಗರಂಬು
ಗಳ ತೆಗೆ । ದೋಡಿದುದು ತೆಕ್ಕೆಯಲಿ ಪಾಂಡವವರಮಹಾರಥರು ॥೫೮॥ ಗಾಯವಡೆದನು ಮತ್ಸ್ಯ
ದ್ರುಪದನ । ಬಾಯಲೊಕ್ಕುದು ರಕುತ ಕೈಕೆಯ। ರಾಯುಧಂಗಳನೊಪ್ಪಿಸಿದರಳಿದೋಡಿದರು ರಥವ ॥
ಸಾಯಲಾರದೆ ಧೃಷ್ಟಕೇತುವಿ । ಡಾಯಿಗೆಟ್ಟನು ದ್ರೋಣನಿತ್ತಲು । ರಾಯನಲ್ಲಿಗೆ ರಥವ ದುವ್ವಾಳಿ
ಸಿದನುರವಣಿಸಿ ॥೫೯॥ ತೀರಿತಿನ್ನೇನರಿನೃಪನ ಸಂ । ಸಾರವಿನ್ನರೆಗಳಿಗೆಯಲಿ ಗಾಂ । ಧಾರಿ ನರೆ
ನೋಂಪಿಯಲಿ ಪಡೆದಳು ಕೌರವೇಶ್ವರನ ॥ ಸಾರಹೇಳೋ ಸಾಹಸಿಕರಂ । ದಾರುತಿರೆ ಬರಲಿತ್ತಲಾ
ಹವ । ಧೀರಸಾತ್ಯಕಿ ಭೀಮಪಾರ್ಥಕುಮಾರರನುವಾಯ್ತು ॥೬೦॥ ಗೆಲಿದನೈ ಮಝುಭಾಪು ದ್ರೋ
ಣನ। ಬಲುಹು ಭರ್ಗನ ಸರಿ ಯುಧಿಷ್ಠಿರ । ಸಿಲುಕಿದನಲಾ ಶಿವಶಿವಾ ಕಲಿಕರ್ಣ ನೋಡೆನುತ ॥ ಉಲಿ
ವೆದುರಿಯೋಧನನನೀಕ್ಷಿಸು । ತಲಘುಭುಜಬಲಭಾನುನಂದನ । ನಳುಕದೀಮಾತುಗಳನೆಂದನು ನೀ
ತಿಸಮ್ಮತವ ॥೬೧॥ ಗೆಲವು ನಮಗೆಲ್ಲಿಯದು ಧರ್ಮಜ । ಸಿಲುಕುವದು ತಾನಿಲ್ಲ ಕೃಷ್ಣನ। ನೆಳಲು ಧಿಟ
ವುಂಟಾದೊಡೊಳಗಾಗರು ವಿರೋಧಿಗಳು ॥ ನೆಲನ ತಿಣ್ಣವ ತಿದ್ದಲ್ಯೋಸುಗ । ಸುಳಿವನರಿಯಾ ಕೃ
ಷ್ಣನಾತನ । ಬಲದವರಿಗುಂಟಹುದೆ ಬಾಧೆಗಳೆಂದನಾಕರ್ಣ ॥೬೨॥ ಗಿರಿಯಕೊರಳಿಗೆ ವಜ್ರಮಣಿ
ಯಾ । ಭರಣವೇ ದಕ್ಷರಿಯ ಜೋಡುಗ । ಳರಗಿನೋಲೆಯಕಾರರಿಗೆ ಸುಯ್ಯಾನವೇ ನೃಪತಿ ॥ ಮರತಿ
ಮಿರರಾಜಂಗೆ ಮಂಗಳ । ಕರವೆಯಾರತಿ ಕೃಷ್ಣಭಕ್ತರ । ಪರಿಭವವು ಜೀವರಿಗೆ ಪಥ್ಯವೆಯೆಂದನಾಕ
ರ್ಣ ॥೬೩॥ ಇರಲಿಮ್ಮೇಣ್ದೂರದಲಿ ಹತ್ತಿರೆ । ವಿರಲಿ ತನ್ನವರೆಂದೊಡತ್ತಲೆ । ಹರಹಿಕೊಂಬನು
ಕೃಷ್ಣನಿದು ತನಗೇರಿಸಿದ ಬಿರುದು ॥ ಹರಿ ಸಮೀಪದೊಳಿಲ್ಲ ದ್ರೋಣಂ । ಗರಸಸಿಲುಕಿದನೆಂದು ಬ
ಗೆದೈ । ಮರುಳೆ ಮುರವೈರಿಯ ಕಟಾಕ್ಷದ ಕಾಹು ಬಲುಹೆಂದ ॥೬೪॥ ಆಹದನದಂತಿರಲಿ ನಪ್ಮಾ ।
ಯಾಹವಕೆ ಕಲಿಭೀಮಸಾತ್ಯಕಿ । ರೂಹುದೋರಿದರದೆ ಘಟೋತ್ಕಚಪಾರ್ಥಸುತರೊಡನೆ ॥ ಸಾಹಸಿಕ
ರೊಗ್ಗಾಯ್ತು ದ್ರೋಣಂ। ಗೀಹದನು ಭಾರಂಕವೀಗಳೆ । ಬೇಹಸುಭಟರ ಕಳುಹು ಕಾಳಗಕೆಂದನಾ
ಕರ್ಣ ॥೬೫॥ ಎನಲುನೂಕಿದನರಸ ದುಶ್ಶಾ । ಸನನು ಭರದಲಿ ಗುರುಜಕೃಪಶ । ಲ್ಯನನು ಭಗದತ್ತಾ

ದಿನೃಪಪರಿವಾರಗಳುಸಹಿತ ॥ ತನತನಗೆ ನಾಯಕರು ದ್ರೋಣನ । ಮೊನೆಯು ಬಲಿದರು ಹಿಡಿಯುಧಿಷ್ಠಿರ । ಜನಪತಿಯನೆಂದುರುಬಿದರು ತರುಬಿದರು ಪರಬಲವ ॥೬೬॥ ಘಡಘಡಾರೋ ಧರ್ಮಪುತ್ರನ । ಹಿಡಿವವರು ಬಾಯ್ಬಡಿಕರಿವದಿರು । ಗೆಡೆದಡೇನಾಯ್ತೆನುತ ಪೊಕ್ಕನು ಭೀಮನುರವಣಿಸಿ ॥ ಕಡಲ ಕಡುಹಿನ ಬಹಳಲಹರಿಯು । ನೊಡೆಮುರಿವಮುಂದರದವ್ರೋಲವ । ಗಡಿಸಿ ಪೊಕ್ಕನು ಗದೆಯು ಗಾಢದ ಹೊಯಿಲ ಹೊದರಿನಲಿ ॥೬೭॥ ಗದೆಯ ಘಾರಾಘಾರಿಕಾರನ । ನಿದಿರುಗೊಂಡುದು ತನತನಗೆ ಹೆಚ್ಚಿದುದು ಬಲ ನಡೆಗೊಂಡು ಬಲುಭಾರಣೆಯುಪಾತಕರು ॥ ಮದಗಜದ ನಿಡುವರಿಯು ತೇರಿನ । ಕುದುರೆಕಾರರ ಕಾಹಿನಲಿ ಕೊ । ಬ್ಬಿದುದು ನಿಬ್ಬರವಾಗಿ ಬಹುವಿಧವಾದ್ಯ ರಭಸದಲಿ ॥೬೮॥ ತೆತ್ತಿಗರ ಬರಹೇಳು ಭೀಮಂ । ಗೆತ್ತಣದು ಜಯುವೆನುತ ಸುಭಟರು । ಮುತ್ತಿಕೊಂಡರು ಮುರಿದವೀತನ ಮೈಯೊಳಂಬುಗಳು ॥ ಕತ್ತಲೆಯ ಹೇರಾಳು ಸೂರ್ಯನ । ಮುತ್ತುತಿಹದಿನವಾಯ್ತಲಾಯು। ತ್ತತ್ತಲಿತ್ತಲು ಹರಿದು ತಳಪಟಮಾಡಿದನು ಭೀಮ ॥೬೯॥ ಒಂದುಕಡೆಯಲಿ ಭೀಮ ಸವರಿದ । ನೊಂದುಕಡೆಯಲಿ ಸಾತ್ಯಕಿಯು ಸರ । ಳೊಂದುಕಡೆಯಲಿ ಪಾರ್ಥನಂದನಭೀಮನಂದನರು ॥ ಒಂದು ಕಡೆಯಲಿ ನಕುಲ ಪಾಂಡವ । ನಂದನರು ಮತ್ತೊಂದು ಕಡೆಯಲಿ । ಮುಂದುವರಿದರು ಮುರಿದರರಿಗಳ ಹೊದರ ಹೊಸಮಳೆಯು ॥೭೦॥ ಘಟ್ಟನುಗ್ಗಾದುದು ವಿರೋಧಿಗ । ಳಿಟ್ಟಣಿಸುತಿದೆ ದ್ರೋಣ ನೊಬ್ಬನ । ಬಿಟ್ಟುನೋಡುವದುಚಿತವಲ್ಲೆನುತೆಡಬಲನ ನೋಡಿ॥ ದಿಟ್ಟಸಾಹಸಕಹಿತಬಲ ಜಗ। ಜಟ್ಟಿಕೌರವರಾಯ ರಥವನು । ಹೊಟ್ಟುಗಳ ತೆಗೆ ಹೋಗು ಹೇಳೆನುತೆಚ್ಚ ತಿರಥರ ॥೭೧॥ ಮಗನ ತೆಗೆಯೋ ಸಾತ್ಯಕಿಯ ಹೆರ । ತೆಗೆಯ ಹೇಳೋ ಬೇಡ ನಕುಲಾ । ದಿಗಳನೂಕಭಿಮನ್ಯುವನು ಹಿಂಮೆಟ್ಟ ಹೇಳೆನುತ ॥ ಮೊಗದಹೊಗರಿನ ಕೆಂಪನುಗುಳ್ವಾ । ಲಿಗಳ ದಂತದೊಳೌಡುಗಚ್ಚಿನ । ಬಿಗಿದಹುಬ್ಬಿನ ಭೀಮಹೊಕ್ಕನು ಗದೆಯ ತಿರುಹಿಸುತ ॥೭೨॥ ಸಿಲುಕಿದನು ಶಿವ ಸ್ವಾಮಿದ್ರೋಹನು। ಗಳದರಕುತವ ಕುಡಿಯೊ ಧಿಟವೆಂ। ದಳವಿಯಲಿ ಹೊಕ್ಕೊಕ್ಕಲಿಕ್ಕಿದನಾಳು ಕುದುರೆಗಳ ॥ ಎಲೆ ದುರಾತ್ಮಕ ದ್ಯೂತಕೇಳೀ ಕಲಹಲಂಪಟ ನಿಲ್ಲುನಿಲ್ಲೆನು । ತೊಳಮರಿದನಪ್ಪಳಿಸಿದನು ದುರಿಯೋಧನನ ರಥವ ॥೭೩॥ ತೋಳನಳವಿಗೆ ಸಿಲುಕಿತೋ ಮೃಗ । ಜಾಲ ಶಿವಶಿವ ದಿವಿಜವಧುಗಳ । ತೋಳ ತೆಕ್ಕೆಗೆ ತೆತ್ತನೊಡಲನು ರಾಯನಕಟೆನುತ ॥ ಆಳ್ವಿಗೆ ಕಳವಳಿಸಿ ಕುರುಭೂ । ಪಾಲಕನ ಹಿಂದಿಕ್ಕಿ ಕಿವಿಗಡಿ । ಗೋಲ ತೆಗಹಿನಲೊದರಿದರು ದುಶ್ಶಾಸನಾದಿಗಳು ॥೭೪॥ ವರವಿಕರ್ಣಸುಲೋಚನರು ದು । ರ್ಮರುಷಣರು ದುಶ್ಶೀಲಕರು ಸಂ । ಗರವ ಕಣಕಿದರನಿಲಸುತನೊಳು ನೃಪನ ಹರಿಬದಲಿ ॥ ನೆರೆದನುಸಿಗಳು ಸಿರಿಯುಕಾಡುವ । ಪರಿಯ ನೋಡೈ ಪೂತುರೆನುತು । ಬ್ಬರಿಸಿ ಕೈದೋರಿದನು ಕಲಿಪವಮಾನನಂದನನು ॥೭೫॥ ಎಚ್ಚ ಶರವನು ಗದೆಯಲಣೆದಡ। ಗೊಚ್ಚಿ ಪೊಕ್ಕನು ಹೊಯ್ದುರಥವನು । ಬಿಚ್ಚಿ ಬಿಸುಟನು ಸಾರಥಿಯನಾಹವವನಾಯುಧವ ॥ ಕೊಚ್ಚಿದನು ಕೊಲೆಗಡಿಗನಿದಿರಲಿ । ಕೆಚ್ಚುಮನದವರಾರು ಸೋಲುವಿ । ದೊಚ್ಚತವಲಾ ನಿಮ್ಮ ಸೇನೆಗೆ ಭೂಪ ಕೇಳೆಂದ ॥೭೬॥ ಸರಿದರೀನಾಲುವರು ರಾಯನ । ಮರಳಲೀಯದೆ ಮತ್ತೆ ಮೂರುತಿ । ಹುರಿಸ್ಸಿದನು ನಿಜರಥವನತಿರಥರೊಡ್ಡು ಲಟಕಟಿಸೆ ॥ ದೊರೆಯ ತೆಗೆಯೋ ನೂಕುನೂಕಲಿ । ಕರಿಘಟೆಯನೆನೆ ಮುಗಿಲಮೋಹರ । ವರಿಗೆ ತಿರುಗಿದವೆನಲು ಜೋಡಿಸಿದರು ಗಜವ್ರಜವ ॥೭೭॥ ರಾ

ಯನನು ಹಿಡಿಯೆಂಬ ಕೌರವ । ರಾಯಭಂಗಿತನಾಗಿ ಮರಳಿದು। ರಾಯ ನಡುಗುತ ಭೀಮಸೇನನ ವೀರನೋಲಗಕೆ ॥ ಕಾಯಬೇಕೆನುತಿತ್ತ ಕೃಷ್ಣನು । ರಾಯಪಾಂಡವರವರ ಕರುಣಾ । ಮಾಯೆ ಹಿರಿದೆನಲಂದುಕಾಯ್ದನು ವೀರನಾರಯಣ ... ... ॥೭೮॥

ಅಂತು ಸಂಧಿ ೪ಕ್ಕಂ ಪದ ೧೫೦ ಕ್ಕಂ ಮಂಗಳಮಸ್ತು



## ನಾಲ್ಕನೆಯ ಸಂಧಿ.

ಸೂಚನೆ॥ ಹನುಮನನುಜನ ಬಾಹುಬಲರಿಪು । ವನಧಿಯನು ತುಳುಕಿದನು ಭಗದ । ತ್ತನನು ಮರ್ದಿಸಿ ಮುರಿದನರ್ಜುನ ಸುಪ್ರತೀಕವನು.

ಪದ॥ ವಂಗನಂಬಷ್ಠನುವರಾಳಕ । ಳಿಂಗಬರ್ಬರರಾನೆಗಳ ಥ । ಟ್ಟಂಗೆ ಕೈವೀಸಿದರು ಕೊಂಡರು ನಾಳವಿಲ್ಲುಗಳ ॥ ವಂಗಡದಲೆಂಭತ್ತುಸಾವಿರ । ತುಂಗಗಜಘಟೆ ಕವಿದವಿದಕೆ । ನ್ನಂಗವಿಸುವವರಾರೆನುತ ಗಜಬಜಿಸಿತರಿಸೇನೆ ॥೧॥ ಆಳ ಹೆದರಿಸಿ ನುಡಿವನಾಯ್ಗಳ । ಬೀಳಬಡಿ ವಡಬಾಗ್ನಿ ನೊರಜಿನ । ಥಾಳಿಗಳುಕುವುದಂತೆ ಘಡಘಡಯೆನುತ ಬೊಬ್ಬಿರಿದು ॥ ಕಾಲದಂಡವ ತಿರುಹಿ ಭುವನದೊಳೂಳಿಗವ ಮಾಡುವಕೃತಾಂತನ । ಹೋಲುವೆಯ ಹೊಸಬಿಗನು ಹೊಕ್ಕನು ಭೀಮನುರವಣಿಸಿ ॥೨॥ ಗದೆಯಲಪ್ಪಳಿಸಿದನು ಕೋದಂ । ಡದಲಿ ಕಾದಿದಮುದ್ಗರದಲೊರ । ಸಿದನು ಲೌಡಿಯಲರೆದನುರೆ ಕಡಿದನು ಕೃಪಾಣದಲಿ ॥ ಒದೆದು ಕೆಲವನು ಮುಷ್ಟಿಯಲಿ ಮೋ । ದಿದನು ಕೆಲವನು ನಿಖಿಳಶಸ್ತ್ರಾ । ಸ್ತ್ರದಲಿ ಕಾದಿದನನಿಲಸುತ ಗಜಬಲವ ಬರಿಕೈದ ॥೩॥ ಗಿಳಿಯ ಹಿಂಡುಗಳೆತ್ತ ಗಿಡುಗನ । ದಳದುಳವು ತಾನೆತ್ತ ಭೀಮನ । ಸುಳಿವುಗಡ ಕಾಲೂರುವವೆ ಕರಿಘಟೆಗಳೊಗ್ಗಿನಲಿ ॥ ತಳಿದಹೂವಿನತೊಡಬೆಯೋ ರಿಪು। ಬಲವೊ ಬಿರುಗಾಳಿಯೊ ವೃಕೋದರ । ನೆಳವಬಲ್ಲವನಾವನೈ ಧೃತರಾಷ್ಟ್ರ ಕೇಳೆಂದ ॥೪॥ ಹೋಯಿತಾವಮಾತೇಕೆಗಜಘಟೆ । ಮಾಯವಾಯಿತುವಂಗಭೂಪನ । ಬಾಯೊಳಗೆ ಬೆಟ್ಟಿದನು ಗದೆಯನು ಮಿಕ್ಕನಾಲ್ವರನು ॥ ಸಾಯಬಡಿದನು ಮುಂದೆ ಕೌರವ । ರಾಯನನು ತಾಗಿದನು ಭೀಮನ । ದಾಯ ಬಂದುದು ಸಕಲರಿಪುತಳತಂತ್ರ ತಲ್ಲಣಿಸೆ ॥೫॥ ಗುರುಗಳಾಡಿದಭಾಷೆ ಪರಬಲ । ದರಸಕಟ್ಟುವದದು ನಿಲಲಿ ನ । ಮ್ಮರಸ ಸಿಲುಕಿದಭೀಮಗಜಗಟ್ಟಿದುದು ಬೀದಿಗಳ ॥ ತಿರುಹಲಾಪಡೆ ಸಮಯವಿದು ಸಂ । ಗರಸಮರ್ಥನು ಬರಲಿ ಎಂಬಬ್ಬರದೊಳಗೆ ಭಗದತ್ತ ಮೇಳೈಸಿದನು ಮದಗಜವ॥೬॥ಮಳುವೊರಜಿಯೊಡೆಯೊರಜ ಬೆನ್ನಿನ । ಮಿಳಿಯ ಜಾಳಿಗೆ ವೊರಜಿಗಳ ಸಂ। ಕಲೆಯ ತೊಡರಂಕಣಿಯ ಕೊಂಡಿಯ ಪಕ್ಕಘಂಟೆಗಳ ॥ ಹಿಳುಕಿದನು ಗಡಣೆಗಳ ಕೊರಳಿನ । ಬಲುವೊರಜಿಗಳ ಭಾರಸಂಗಲೆ । ಗಳನು ಬಿಗಿದರು ಜೋಡಿಸಿದರಬ್ಬರದ ಮದಗಜವ ॥೭॥ ಬಿಗಿದು ದಳವತ್ತಿಗೆಯವರ ಸ । ತ್ತಿಗೆಯ ಕೈಯೊತ್ತಿಗೆಯ ಘನಮುಂ । ಡಿಗೆಯಲೌಡಿಯಲಗುಡಪಾಣಿಯ ಕೈಯಪಟ್ಟಿಯದ ॥ ಅಗಿವಬಡಿಗೆಯಲಂಕುಶದ ಕ । ಟ್ಟಿಗೆಯ ಧಾರೆಯ ಕಮಲದಳಕೊಡ । ತಿಗಳ ಕೈಹಾರೆಗಳನಳವಡಿಸಿದರು ನಿಮಿಷದಲಿ॥೮॥ ಮುಗಿದಹೊದರಿನಹೊಳೆವರವಿರ । ಶ್ಮಿಗಳ ಪಸರಿಸುವಂತೆ ಸುತ್ತಲು। ಬಿಗಿದಗುಳದಲಿ ಹೊಳೆವ ಹೊಂ

ಗೆಲಸದಸುರೇಖೆಗಳ ‖ ಗಗನಗಂಗಾನದಿಯ ಕಾಲುವೆ । ದೆಗೆದುದೆನೆ ಟೆಕ್ಕೆಯದ ಪಲ್ಲವ । ವಗಿಯೆ ಮೆರೆದವು ಬಿಗಿದವೊಗರಂಬದವಿಲಾಸದಲಿ ‖೯‖ ಗಗನತಳವನು ಬಿಗಿದು ಬಲುರೆಂ । ಚೆಗಳ ತುಂಬಿದಹೊದೆಯ ಕಣೆಗಳ । ಬಿಗಿದನಾಳಿಯ ಬಿಲ್ಲುಗಳ ತೆತ್ತಿಸಿದಸೂನಗಿಯ ‖ ಉಗಿವಸರಿನೇಣುಗಳ ಕೈಗುಂ। ಡಗಳ ಕವಣೆಯಲೌಡಿಕರವಾ । ಳುಗಳ ಮೋಹಿಸಿ ಜೋದರಂದಡರಿದರು ಬೊಬ್ಬಿರಿದು ‖೧೦‖ ಸುತ್ತ ಮೆರೆದವು ಮೇಲೆ ಪಲ್ಲವ । ಸತ್ತಿಗೆಯ ಸಾಲುಗಳು ಬಿರುದಿನ। ಕತ್ತರಿಯ ಹೀಲಿಗಳ ಝುಲ್ಲರಿ ಮುಸುಕಿದವು ಗಜವ ‖ ಒತ್ತಿಕಿವಿಗಳನೊದೆದು ತಿರದಲಿ । ತೆತ್ತಿಸಿದರಂಕುಶವನಾಭಗ । ದತ್ತದಂತಿಯನೇರಿದನು ಜಯರವದ ರಭಸದಲಿ ‖೧೧‖ ಕಾಲುಗಾಹಿನ ಕುದುರೆಗಳ ಕಾ ‖ ಲಾಳ ಕೈಹಾರೆಗಳ ಸಬಳದ । ಸೂಲಿಗೆಯ ತೇರುಗಳ ಹರಹಿನ ಹೊಂತಕಾರಿಗಳ ‖ ಆಳಬಲುಬೊಬ್ಬೆಯಲಿ ಘನನಿ । ಸ್ಸಾಳತತಿ ಮೊಳಗಿದವು ಡೌಡೆಯ।ತೂಳುವರೆಗಳು ಗಜರಿದವು ತಂಬಟದ ಲಗ್ಗೆಯಲಿ‖೧೨‖ಸುರಪನಿದಿರಿಲಿ ಕೆರಳಿ ಕುಲಗಿರಿ । ಯುರಿಯ ನೆಗಳಿದರೆನಲು ದಾಡೆಗ । ಳರುಣಮಯರಶ್ಮಿಗಳ ಪಸರದೊಳೆಸೆದುದಿಭಪತಿಯ ೨ ಧರಣಿಯಳತೆಯ ಹರಿಯ ನೆಗಹಿದ । ಚರಣದಗ್ರದೊಳಿಳಿವಘನನಿ । ಝುರದವೊಲು ಮದಧಾರೆ ಮೆರೆದುದು ಕರಿಕಪೋಲದಲಿ ‖೧೩‖ ಜಗದ ನಿಡುನಿದ್ರೆಯಲಿ ಮೋಹರ । ದೆಗೆದುದೋ ಮೇಣಖಿಳಕುಲಗಿರಿ । ದಿಗಿಭವೆಂಟೊಂದಾಗಿ ಕೈಕಾಲ್ಮೂಡಿತೋ ಜಗಕೆ ‖ ಅಗಿದು ಮೆಟ್ಟಿದೊಡವನಿ ಪಡುವಲು । ನೆಗೆದುದಡರುತು ಮುಂದೆ ಮೆಟ್ಟಲು । ಚಿಗಿದುದಿಳೆ ಮೂಡಲು ಮಹಾಗಜವೈದಿತಾಹವಕೆ ‖೧೪‖ ಪವನಬಲಪರಿದಳಿತಕದಳೀ । ನಿವಹದಲಿ ನಭ ಥಾತುಗೆಟ್ಟುದು । ರವಿಗೆ ಕಾಪಥವಾಯ್ತು ಹೊಗಳುವೆನೇನನದ್ಭುತವ ‖ ಭುವನಕೋಶದೊಳಾದವಿಪಿನೋ । ದ್ಭವವೊ ಭಾರಿಯದಂತಿಬಹಳಾ । ಹವದೊಳಳಿದುದು ಕೃಷ್ಣನೊಲಿದರಿಗಾವುದರಿದೆಂದ ‖೧೫‖ ಹಿಡಿವಬಿಡುಬೊಬ್ಬುಳಿಕೆ ತಹಬಲ । ನೆಡಕೆ ಹಾಯ್ಕುವಸುತ್ತನೆತ್ತುವ । ತಡೆವನಡಸುವಸೆಳೆವತಿರುಹುವ ಹರಿವ ಜೋಕೆಯಲಿ ‖ ಗಡಣಿಸುವಮುಸೆದಿಭಪತಿಯನವಗಡಿಸಿ ನೂಕಿದನಡೆಯೆದಿಕ್ಕರಿ । ನಡುವೆ ಚೌಕದಕಳನ ತುಳಿದುದು ಸುಪ್ರತೀಕಗಜ ‖೧೬‖ ಇದುಗಜಾಸುರನಿದು ಮಹಾದೇ । ವಿದುದೆ ಮಹಿಷಾಸುರನೊ ಮಾಯಾ । ದ್ಭುತದರಜನಿಯೊ ದಿಟವು ಗೆಲುವರು ಭೀಮ ಫಲುಗುಣರು ‖ ತ್ರಿದಶರಿಪುಗಳ ಗಂಡನಿದು ಕಾ । ದಿದೆವು ನಾವಿನ್ನೆನುತ ಸುಭಟರು । ಕದಡಿ ಹರಿದುದು ಸೂರೆಗೊಂಡುದು ಬಲಪಲಾಯನವ ‖೧೭‖ ಮೊಗದಜವನಿಕೆದೆಗೆದು ನೆತ್ತಿಯ । ಬಿಗಿದು ಕೂರಂಕುಶದೊಳಾನೆಯ । ಬೆಗಡುಗೊಳಿಸಲು ಬೀದಿವರಿದುದು ಸುಭಟರೆದೆವೊಡೆಯೆ ‖ ಹಗೆಯ ಬಲದಲಿ ಸುಭಟರೆದೆಗಳ । ತೆಗೆಯಬೇಹುದು ಸುಂಡಿಲಲಿ ಮುಗಿ । ಲಗಲದಲಿ ಮೋಹಿಸಿತು ದಿಕ್ಕರಿ ಪೊಕ್ಕುದಾಹವವ ‖೧೮‖ ನೆಳಲು ಸುಳಿಯಲು ದಂತಿಯೆಂದ। ಪ್ಪಳಿಸೆ ವಾಸುಗಿನೊಂದನಂಬುಧಿ । ತುಳುಕಿದುದು ಸತ್ವಾತಿಶಯುವೇನೆಂಬೆನದ್ಭುತವ ‖ ಬಲದೊಳಗೆ ಹೆಸರುಳ್ಳಸುಭಟರ । ತಲೆಯ ಸೆಳೆದದು ಸುಂಡಿಲಲಿ ವೆ ।ಗ್ಗಳೆಯ ಮದಕರಿ ಕೇಣಿಗೊಂಡುದು ವೈರಿಮೋಹರವ‖೧೯‖ ಸೀಳಿಹರಹಿತು ಕರಿಗಳನು ನೇ । ಪಾಳಕುದುರೆಯ ಥಟ್ಟುಗಳ ಹಿಂ । ಗಾಲ ತಿರುಹಿತು ರಥವನೈದಾರೇಳ ನೊಂದಾಗಿ ‖ ತೋಳೊಳಗೆ ನುಗ್ಗಾಗಿ ಮಿಗೆ ಕಾ । ಲಾಳ ತೊತ್ತಳದುಳಿದು ಕಾಲನ । ಪಾಳೆಯಕ್ಕುಪಕಾರಿಯಾದುದು ಸುಪ್ರತೀಕಗಜ‖೨೦‖ದ್ವಿಗುಣತ್ರಿಗುಣದೊಳಣವ ಜೋಡಿಸಿ। ಬಿಗಿದು ಹತ್ತುವೆಮೆಟ್ಟಿಸೀಳು

ವ। ತೆಗೆದುಧಟ್ಟುವತಿರುಹಿನೂಕುವಡ್ಡಗೆಯಡಾವರಕೆ ॥ ಉಗುರೊಳೌಕುವನಿಗ್ಗವದೊಳಿ । ಬ್ಬಗೆಯ ಮಾಡುವ ಕಾಲುಗೊಲೆಯಲಿ । ವಿಗಡಕರಿತುಳಿದಾಡಿ ತಿದಿರಿದಿರಾದರಿಪುಬಲವ ॥೨೧॥ ಅರೆದುದೋ ಪರಬಲವ ಕಾಲವ । ಹೊರೆದುದೋ ಮಾರಣದ ಮಂತ್ರವ। ಬರೆದುದೋ ಬವರಕ್ಕೆ ಬಲುಗೈಗಳನು ಕೈನೆಗಹಿ ॥ ಕರೆದುದೋ ಬಲವೆಲ್ಲ ನೀರಲಿ । ನೆರೆದುದೋ ಮಾರ್ಬಲದವೀರರು । ಹರೆದುದೋ ಹವಣಿಲ್ಲ ದಂತಿಯ ಸಮರ ಸೌರಂಭ ॥೨೨॥ ಮುರಿದು ಮಂದರಗಿರಿಪಯೋಧಿಯ । ತೆರೆಗಳನು ತುಳಿವಂತೆ ರಿಪುಮೋ । ಹರವನರೆದುದು ನುಗ್ಗುನುಸಿಯಾಯ್ತುಹಿತಚತುರಂಗ ॥ ತೆರಳಿದರು ರಾವುತರು ರಥಿಕರು। ಹೊರಳಿ ಯೊಡೆದುದು ಗಜದಗಾವಳಿ । ಜರಿದುದಳಿದುದನಾರುಬಲ್ಲರು ಭೂಪ ಕೇಳೆಂದ ॥೨೩॥ ಮುರಿದುಕೊಂದುದು ದಂತಿಗುರುವಿ । ನ್ನುರುಬಿರಾಯನ ಹಿಡಿಯದಿರೆ ನೀ । ತರುಬಲಾಪೊಡೆ ಬರಲಿ ಸಾತ್ಯಕಿನಕುಲಪವನಜರು ॥ ಇರಿತಕವರಂಜಿದೊಡೆ ಪಾರ್ಥ೦ । ಗರುಹಿ ಬೇಗದೊಳೆಂದು ನಾಯಕ । ರೊರಲುತಿರಲನುವಾದುದಿತ್ತಲು ದೊರೆಗಳೊಗ್ಗಿನಲಿ ॥೨೪॥ ಅಳ್ಳಿದೆಯ ಮನ್ನೆಯರವೊಗ್ಗಿನ । ವೊಳ್ಳೆಗರ ಕಟವಾಯ ಕೊಯ್ಯಲಿ । ಕಳ್ಳರಿವದಿರು ತರಿಚುಗೆಡವರೆ ಹೋಗಹೇಳೆನುತ ॥ ಬಿಲ್ಲಗೊಲೆಗೇರಿಸುತ ಚೌಪಟ । ಮಲ್ಲ ಪೊಕ್ಕನು ಭೀಮಬರಲ । ಲ್ಲಲ್ಲಿ ಕವಿದುದು ದ್ರುಪದನಕುಲಯುಧಿಷ್ಠಿರಾದಿಗಳ ॥೨೫॥ ಕರಿ ಬಲುಹು ಕಲಿಭೀಮಸೇನನು । ದುರುಳನಿನ್ನೆಂತೆನುತ ಬಲಮೋ । ಹರಿಸಿ ಕವಿದುದುಮತ್ಸ್ಯಸೃಂಜಯಕೈಕಯಾದಿಗಳು ॥ ತಿರುವಿಗಂಬನು ತೊಡಚಿ ಸಾತ್ಯಕಿ । ನರನ ಮಗಹೈಡಿಂಬಯವನೀ । ಶ್ವರತೆ ದೃಷ್ಟದ್ಯುಮ್ನಮೊದಲಾಗೈದಿದರು ಗಜವ ॥೨೬॥ ಗಿರಿಯುತರಿವರೆ ಶಕ್ರನಲ್ಲದೆ । ನೆರೆದದಿವಿಜಸರೂಹವಾಡುವ । ಭರವಸಿಕೆ ತಾನೆನುತ ಮುತ್ತಿದರವರು ದಿಗ್ಗಜವ ॥ ಸರಳು ಬಲುಮಳೆಗಾಲವಹಿಮ। ದ್ವಿರದಗಿರಿಯಲಿ ಕಾಣಲಾಯಿತು। ಮರಳಿ ಕರಿಕೈಕೊಂಡುದರೆಯಟ್ಟಿತು ಮಹಾರಥರ॥೨೭॥ಚೆಲ್ಲಿದು ದೆಸೆದೆಸೆಗೆ ಚೌಪಟ । ಮಲ್ಲಗಿಲ್ಲರ ಪಾಡೆ ನಮ್ಮದು । ಬಲ್ಲಿತಹುದ್ಯ[illegible]ದೊಡಲಿನ ಚೆಲುವುಫಲವೇನು ॥ ಅಲ್ಲಿದೈವದನೆನಹು ಘನ ಬಲು ಹೊಲ್ಲೆಯದು ನಮಗಿನ್ನು ಸ[illegible] । ನ್ನೆಲ್ಲಮೇತಕೆ ಚಿತ್ತವಿಸು ಚೌದಂತ ಸಾಹಸವ ॥೨೮॥ ಸೆಳೆವಿಡಿದು ತುರುಗಾಹಿಪಶುಸಂ । ಕುಲವ ತೆವರುವವೋಲು ವಾಯಸ । ಕುಲವನೊಂದೇಗೂಗೆ ಹೊಯ್ದುರೆಯಟ್ಟುವಂದದಲಿ ॥ ಬಲುಕಣೆಗಳಿನಿಬರನು ಕರಿ ಮುಂ । ಕೊಳಿಸಿ ಕೆದರಿತು ಯವನಕೌಶಲ । ಬಲದಕೇಕಯ ಸೇರುವೆಯರನು ಸೀಳಿಹಾಯಿಕುತ ॥ ೨೯ ॥ ಹಿಡಿಹಿಡಿಯಲೋಡಿದನು ದ್ರುಪದನು । ಸಿಡಿದು ಕೆಲಸಾರಿದನು ಪವನಜ । ನೊಡಲ ಸುರಸಂಬಂಧವಿದ್ದುದು ಸಿಲುಕಿದನಿಬರಿಗೆ ॥ ಒಡೆಮುರಿದು ಸಾತ್ಯಕಿಯರಥವನು । ಕೊಡಹಿಹಾಯ್ಕಿತು ಭೀಮತನಯನ । ತುಡುಕಿ ಬಿಸುಟುದು ಕೊರಿದುದಗಣಿತ ಕರಿತುತಂಗಮವ ॥೩೦॥ ಮರಳಿ ಮತ್ತೆ ಮಹಾರಥರು ಸಂ । ವರಿಸಿಕೊಂಡರು ಸರಳಮಳೆಗಳ । ಸುರಿದರಾನೆಯಮೇಲೆ ಜೋದರ ಕೋಲಮನ್ನಿಸದೆ ॥ ಗಿರಿಯ ಮುತ್ತಿದಮಿಂಚುಬುಳುವಿನ । ಹೊರಳಿಯಂತಿರೆ ಹೊನ್ನಬಣ್ಣದ । ಸರಳು ಮೆರೆದುದು ಕರೆದರದುಬುತಸರಳ ಸರಿವಳೆಯ ॥೩೧॥ ಬಾಲರೆಸುಗೆಯ ಮಿಟ್ಟೆಯಂಬಿಗೆ । ಸೋಲುವುದೆ ಗಿರಿವೈರಿಸುಭಟರ । ಕೋಲಕೊಂಬುದೆ ಧೀರಕುಂಜರ ಮತ್ತೆ ಮೊಗ ನೆಗಹಿ ॥ ಆಳೊಳಗೆ ಬೆರಸಿತು ಮಹಾರಥ । ರೋಳಿ ಮುರಿದುದು ಕುರಿಯ ಹಿಂಡಿನ । ತೋಳನೋ ನಿನ್ನಾಣೆ ಸವರಿತು ಮತ್ತೆ ಮಾ

ರ್ಬಲವ ॥೩೨॥ ಹಡಗುಜಲಧಿಯಲೋಡಿ ಗಿರಿಗಳ । ನಡಹಿ ನುಗ್ಗಾದಂತೆ ಸುಭಟರ । ಗಡಣ ಗಜವನು ತಾಗಿತಾಗಿ ವಿಘಾತಿಯಲಿ ನೊಂದು ॥ ಒಡಲಮೇಲೆಳ್ಳನಿತು ಮೋಹವ । ಹಿಡಿಯದವರೌಕಿದರು ಹಾವಿನ । ಕೊಡನು ದೋಷಿಗೆಸುಲಭವೇ ಧೃತರಾಷ್ಟ್ರ ಕೇಳೆಂದ ॥೩೩॥ ಇರಿವು ಮೋದಿತು ಸಮ್ಮುಖದೊಳಿ । ಟ್ಟೊರಸಿತೆಡದಲಿ ಹೊಯ್ದು ಸೀಳಿದು । ಹರಹಿತಪಸವ್ಯದಲಿ ಮೆದೆಗೆಡಹಿತು ಮಹಾರಥರ ॥ ಹೊರೆದರಕುತದದಾಡೆಗಳ ತುದಿ । ಕರದೊಳುರುಳುವ ತಲೆಯೊಳಂಘ್ರಿಯೊ । ಳರೆದನೆಣವಡಗಿನ ಮಹಾಗಜ ಮೊಗೆದುದರಿಬಲವ ॥೩೪॥ ಹಿಂದೆಸೆಳೆವರು ಮುರಿದರೆಡದಲಿ । ಸಂದಣಿಸುವರು ತಿರುಗಿದೊಡೆಬಲ । ದಿಂದ ಕೈಮಾಡುವರು ಕವಿದೊಡೆ ಸಿಡಿವರೆಡಬಲಕೆ ॥ ಮುಂದೆ ಕಟ್ಟುವರಟ್ಟಿದೊಡೆ ಭಯ । ದಿಂದ ಜಾರುವರೈ ಮಹಾರಥ । ವೃಂದ ಕಾದಿತು ಬೇಸರದೆ ಮದಕರಿಯ ಬಳಲಿಸುತ ॥೩೫॥ ಕರಿಯ ಕೋಲಾಹಲವ ನಾಜೋ । ದರಶರೌಘವಸೈರಿಸುತ ಮು । ಕ್ಕುರಿಕಿಕೊಂಡರು ನಕುಲಸಾತ್ಯಕಿಭೀಮನಂದನರು ॥ ಸರಳಸಾರವ ಕಟ್ಟಿದರು ಮಿಗೆ । ಕೆರಳಿದನು ಭಗದತ್ತನನಿಬರ । ಹರೆಗಡಿದು ಹೊಗರಂಬ ಸುರಿದನು ಸರಿದರತಿರಥರು ॥೩೬॥ ಹತ್ತುಶರದಲಿ ಧರ್ಮಜನನಿ । ಪ್ಪತ್ತರಿಂದಭಿಮನ್ಯುವನು ತೊಂ । ಭತ್ತುಶರದಲಿ ನಕುಲಸಾತ್ಯಕಿ ದ್ರುಪದಕೈಕೆಯರ ॥ ಕೆತ್ತಿದನು ಹದಿನೈದುಬಾಣದ । ಲಿತ್ತು ಭೀಮಾದಿಗಳ ನೂರೈ । ವತ್ತುಶರದಲಿ ಸಕಲರಥಿಕರ ಮುರಿದು ಬೊಬ್ಬಿರಿದ ॥೩೭॥ ಬಿನುಗುಗಳ ತೆಗೆ ಭೀಮಸೇನನ । ಮೊನೆಗೆ ಬಿಡುಬಿಡು ಗಜವನೆಂದು । ಬ್ಬಿನಲಿ ತಿರುಹಿದನಾನೆಯನು ಪವನಜನ ಸಂಮುಖಕೆ ॥ ಧನುವ ಬಿಸುಟನು ಗದೆಯ ತಿರುಹಿದ । ನೆನುವರದೊಳಡ್ಡೈಸಿ ದಂತಿಯ । ಕನಲಿಸಿದನೊಳಹೊಕ್ಕು ಹೊಯ್ದನು ಸಿಂಹನಾದದಲಿ ॥೩೮॥ ಭುಜದ ಸಾಹಸ ಹತ್ತುಸಾವಿರ । ಗಜದ ಘಾಡಿಕೆ ಸಿಂಹನಾದದ । ವಿಜಯವಿಗ್ರಹವೀರ ಹಳಚಿದನಮಮ ಮದಕರಿಯ ॥ ತ್ರಿಜಗ ತಲೆಕೆಳಗಾಯ್ತು ದಿವಿಜ । ವ್ರಜ ಭಯಗಳೊಳಪೊಕ್ಕು ಸುರಪನ । ಗಜದ ಹೊಯ್ಕೈಯಾನೆ ಹೆಣಗಿತು ಭೀಮಸೇನನಲಿ ॥೩೯॥ ಚಿಗಿದು ಹರಿಸುವಹಳಚಿದೊಡೆ ಕುಲ । ದಿಗಿಭವೆದೆಯೊಡೆದವು ನಗಂಗಳ । ಬಿಗುಹು ಸಡಿಲಿತು ಧರಣಿ ನೆಗ್ಗಿತು ಚರಣಹತಿಗಳಲಿ ॥ ಚಿಗಿದರುಧಿರದ ಗದೆಯ ಬಿರುವೊಯ್ಲು । ಗಳೊಳಗೆ ಕಿಡಿ ಮಸಗಿ ಕಾರ್ಬೊಗೆ । ನೆಗೆಯೆ ಲಂಘಿಸಿ ಭೀಮ ಹೊಯ್ದನು ಗಜದ ಮಸ್ತಕವ ॥೪೦॥ ಹೊಯ್ದುಹಿಂಗದಮುನ್ನ ಭೀಮನ । ಕೈದುಡುಕಿದೊಡೆಮುರಿದು ಹಿಂದಕೆ । ಹಾಯ್ದುದೊಡೆ ಮುರಿಯಿತ್ತು ಕುಸಿದೊಡೆ ಕಾಲಲೊಡೆಯವುಚಿ ॥ ಮೈದೆಗೆದೊಡಿಟ್ಟಣಿಸಿ ಘೂತ್ಕೃತಿ । ಗೈದು ಸುಭಟನಸಿಂಹನಾದಕೆ । ಕೈದೆಗೆದು ಕರಿ ಕಾದುತಿರ್ದುದು ಪವನಸುತನೊಡನೆ ॥೪೧॥ ನೆಲನಗಂಡಪ್ಪಳಿಸುವುದು ಸುಂ । ಡಿಲನು ತೂಗಾಡುವದು ಹೋರಿದು । ಬಳಲುವದು ತಲೆನೆಗಹಿಭೀಮನ ದನಿಯನಾಲಿಪುದು ॥ ಅಳಿಯ ಮುತ್ತಿಗೆಗಳನು ಬೀಸದೆ । ನೆಲಕೆ ಕಿವಿಯನು ಜೋಲಬಿಡುವುದು । ಬಿಲುಗಣೆಯಹಿಡುಹಿಂಗೆ.ಲಾಗಿಸುತಿರ್ದುದಾದಂತಿ ॥೪೨॥ ಭೀಮ ನಿನ್ನರಗಳಿಗೆಯಲಿ ನಿ । ರ್ನಾಮನೋ ತಳುವಿಲ್ಲದಂತಿಯ । ತಾಮಸಕೆ ಘನತೆಗೆಸು ತಮ್ಮನನೆನುತ ಕಳವಳಿಸಿ ॥ ಭೂಮಿಪತಿ ಕೈಕೊಂಡನೊಡನೆಸ । ನಾಮರೈದಿತು ನಕುಲಸಾತ್ಯಕಿ । ಭೀಮಸುತನಭಿಮನ್ಯುದ್ರುಪದಶಿಖಂಡಿಸೃಂಜಯರು ॥೪೩॥ ಮತ್ತೆ ರಥವರ ವತ್ತುಸಾವಿರ । ಮುತ್ತಿಕೊಂಡುದು ಗಜವನಾಭಗ । ದತ್ತ ಬಳಲದನವಧಿಯಿಲ್ಲದಶರವ ನೆರೆ ತುಳುಕಿ ॥ ಮುತ್ತಿದವು ಶರವಿಭದವೈಯಲಿ । ಬೆತ್ತಬೆಳೆದದ್ರಿಯವೊಲಿರ್ದುದು ।

ಮತ್ತ ಗಜ ನೋವರಿಯದನಿಬರ ಬಾಣಹತಿಗಳಲಿ ॥೪೪॥ ಕರಿ ವಿನೋದದಿ ಕುಡಿದಜಲವನು । ಕರಣಿಯಲಿ ತೆಗೆತೆಗೆದು ರಿಪುಮೋ । ಹರಕೆ ಚೆಲ್ಲಿತು ಕಲ್ಪಮೇಘದ ಬಸುರ ಬಗಿವಂತೆ ॥ ಕರಿತುಷಾರದ ಲವರು ಮೋರೆಯು । ತಿರುಹಿ ನನೆದವು ಬಾಹಿರಕೆ ಹ । ಕ್ಕರಿಕೆಹಲ್ಲಣ ಜೋಡುಸೀಸಕ ಛತ್ರಚಮರಿಗಳು ॥೪೫॥ ಸಾಕು ಬಳಲಿದರಕಟಕಟ ನಿಮ । ಗೇಕೆ ಸಂಗರವಾನೆಯೊಡನೆ ಪಿ । ನಾಕಿಶರದೊಳಗಳಿವಮೈಸಿರಿ ನಿಮ್ಮೊಳೇನಹುದು ॥ ಆಕಿರೀಟಿಯು ಕರಸಿಕೊಳ್ಳಿ ವಿ । ವೇಕವುಳ್ಳೊಡೆ ತೊಲಗಿಯೆನುತವೆ । ನೂಕಿದನು ಭಗದತ್ತನನಿಬರಮೇಲೆ ದಿಗ್ಗಜವ॥೪೬॥ ಮಿಗೆ ತಿಮಿಂಗಿಲನೊಡನೆ ಹುಲುಮೀ । ನುಗಳು ಮಾಡುವುದೇನು ಹೊರಕಾ । ಲುಗಳ ಹೋರಟೆ ಕಾಣಲಾದುದು ಪರರ ಥಟ್ಟಿನಲಿ ॥ ತೆಗೆಯೆ ರಿಪುಬಲ ಕೊಲುತ ಬಂದುದು । ದಿಗಿಭವಿದರೊಡನೈದಿ ದ್ರೋಣಾ । ದಿಗಳು ಹೊಕ್ಕರು ಧರ್ಮಪುತ್ರನ ಹಿಡಿವತವಕದಲಿ ॥೪೭॥ ತಿದ್ದಿತೋ ಕಲಿಪಾರ್ಥನಿದ್ದೊಡೆ। ಹೊದ್ದಹೇಳೋ ರಾಯದಳವಡ। ಗಿದ್ದುದೋ ಬಿದ್ದುದೊ ಭಯಾಂಬುಧಿಯೊಳಗೆ ಭಟನಿಕರ ॥ ಹದ್ದುಕಾಗೆಯ ಮನೆಗೆ ಬಾಣಸ । ವಿದ್ದುದೋ ಗಜವೆನುತ ಬೊಬ್ಬಿಡು । ತಿದ್ದುದರಿಬಲವಿತ್ತ ಹರಿ ಕೇಳಿದನು ಕಳಕಳವ ॥೪೮॥ ಮರುಳುಫಲುಗುಣ ಸುಪ್ರತೀಕದ ।ಖುರಪುಟವ ನೋಡಿತ್ತಲಗ್ಗದ । ಪರಶುರಾಮನ ಖಾತಿಗಂಬುಧಿ ನೆಲನ ಬಿಡುವಂತೆ ॥ ತೆರಳುತದೆ ನೃಪಸೇನೆ ದಿಕ್ಕರಿ। ಹರಹಿಕೊಳುತದೆ ಮಾತಿಗಿಲ್ಲವ। ಸರವೆನುತ ಕರಯತ್ತ ತಿರುಹಿದನಸುರರಿಪು ರಥವ ॥೪೯॥ ಬೆದರದಿರು ನರ ಹೋಗದಿರು ಹೋ। ಗದಿರು ಕೊಡುಕೊಡು ಕಾಳಗವನೆಂ । ದಥಟರಟ್ಟಿತು ವೀರಸಂಶಪ್ತಕರು ಸೂಟಿಯಲಿ ॥ ಇದಿರೊಳಿನಸುತಶಲ್ಯರಡಗ । ಟ್ಟಿದರು ಖತಿಯಲಿ ಪಾರ್ಥನನಿಬರ । ಸದೆದು ಮಹಿಲದೊಳೈದಿದನು ದಿಕ್ಕರಿಯ ಸಮ್ಮುಖಕೆ ॥೫೦॥ ಬಲುಬಿಸಿಲೊಳುರೆನೊಂದನೈದಿಲು । ಗೊಳಕೆ ಚಂದ್ರಿಕೆ ದೈತ್ಯರರುಬೆಗೆ । ಸಿಲುಕಿದಮರರಿಗಸುರಹರನ ಕಟಾಕ್ಷವಿಕ್ಷೇಪ ॥ ಲುಳಿತತಾಪತ್ರಯದೊಳೊ ಳಗೋ । ಟಲೆಯ ಜೀವಿಗೆ ಸುಪ್ರಬೋಧದ । ತಿಳಿವಿನಂತಿರೆ ಪಾರ್ಥ ತಲೆದೋರಿದನು ನಿಜಬಲಕೆ ॥೫೧॥ ಕೆದರಿತೀಬಲ ಬೆರಳಬಾಯ್ಗ್ಗಳ । ಲೊದರಿತಾಬಲ ತಾಪಶಿಖಿಯಲಿ। ಕುದಿದುದೀಬಲ ಭೀತಿಕಂಚುಕಿಗಳೆದುದಾಬಲಕೆ ॥ ಕದಡಿತೀಬಲವಕಟ ಹೊದರನು । ಕೆದರಿತಾಬಲ ಹಿಂಡೊಡೆದು ನೆರೆ । ಕದುಬಿತೀಬಲ ನೆರೆದುದಾಬಲ, ನರನ ರಥದೊಡನೆ ॥೫೧॥ ಗಿರಿಯ ವಿಸಟಂಬರಿಯಲವರೇ । ಶ್ವರನು ತಡೆವವೊಲಳ್ಳಿರಿವದಿ । ಕ್ಕರಿಯನಡಗಟ್ಟಿದನು ಕಾಯದೊಳೊಟ್ಟಿದನು ಶರವ॥ ಕೆರಳಿದನು ಭಗದತ್ತನಿವನೇ । ನರನು ಫಡಫಡ ನಿಲ್ಲುನಿಲ್ಲೆನು । ತರಿಶರೌಘವ ಕಡಿದು ಮತ್ತಿದನತಿರಥನ ರಥವ ॥೫೩॥ ಘೂತುರೇ ಭಗಧತ್ತ ಬಿಲುವಿ । ದ್ಯಾತಿಶಯ ಕಿರಿದುಂಟಲಾ ಶರ । ಜಾತವಿನಿತಿಲ್ಲದೊಡೆ ಹೊಳ್ಳಿಸಬಹುದೆ ನೃಪಧನುವ ॥ ನೂತನದ್ವಿಪದಿಂದ ವೈರಿ । ವ್ರಾತವನು ಸೋಲಿಸಿದಗರ್ವದ। ರೀತಿಗಿದು ಠಾವಲ್ಲೆನುತ ತೆಗೆದೆಚ್ಚನಾಪಾರ್ಥ ॥೫೪॥ ನರನ ಶರಜಾಲವನು ಖಂಡಿಸಿ । ಸುರಿದನಂಬನು ಕೃಷ್ಣರಾಯನ । ಸಿರಿಯೊಡಲ ಸೋಂಕಿದವು ನೂಕಿದವಂಬು ಗರಿಸಹಿತ ॥ ನರನ ಕುದುರೆಯಮೇಲೆಸಿಂಧದ। ಹರಿಯತನುವಿನ ಮೇಲೆ ತಳಿತವು। ಶರನಿಕರ ಬಿಡದೆಚ್ಚನಾಭಗದತ್ತನರ್ಜನನ॥೫೫॥ ಸೆಳೆದು ಬಾಣತ್ರಯದೊಳೆಚ್ಚನು। ಫಲುಗುಣನ ಮಕುಟವನು ಮುರಿದುದು । ಕೆಲಕೆ ಸಡಿಲುವ ಮಣಿಗಳೇಕಾವಳಿಯನೋಸರಿಸಿ ॥ ಬಳಿದು ಸಸಿನವಮಾಡಿ ಖಾತಿಯ । ತಳೆದು ಕೂರಂಬಿನಲಿ ಹೊರಳಿದ। ನಳವಿಯ

ಲಿ ಮದಗಜವನಾಭಗದತ್ತನವಯುವವ ||೫೬|| ಇಳುಹಿದನು ಬಲುಗುಳವ ಖಂಡಿಸಿ | ಕಳಚಿದನು ಮೊಗರಂಬವನು ಹೊಂ | ಮಿ ಳಿಯು ಕುಣಿಕೆಯು ಮುರಿದು ತರಿದನು ಸುತ್ತರಂಚೆಗಳ || ಹಳವಿಗೆಯನಾ ಛತ್ರಚಮರಾ | ವಳಿಯ ಸೀಳಿದು ಬಿಸುಟನಾಗಜ | ತಿಲಕ ಮುಂಡಾಸನದೊಳಿರ್ದುದು ಭೂಪ ಕೇಳೆಂದ ||೫೭|| ಮತ್ತೆ ಖಾತಿಯೊಳಂಕುಶವನೊಡ | ಯೊತ್ತಿ ಬಿಟ್ಟನು ಗಜಪನರ್ಜನ | ಸತ್ತಲಿಭತೂಳಿದೊಡೆ ತಿರುಹಿದನಸುರರಿಪು ರಥವ || ಇತ್ತಲೊಲೆದೊಡೆ ಬಲಕೆ ಪೊಗಪಿಡ | ಲತ್ತಲೆಡದಲಿ ಮರಳಲಲ್ಲಿಂ | ದತ್ತ ತಿರುಗಿಸಿ ಬಳಲಿಸಿದನಸುರಾರಿ ಮದಗಜವ ||೫೮|| ಸಾರಥಿಯು ಕೊಂದಲ್ಲದರ್ಜನ | ತೀರುಗುವನಲ್ಲೆನುತ ದಳ್ಳುರಿ | ಥಾರಯ್ಕೆದಂಬಿನಲಿ ದೇವನನೆಸಲು ಮಧ್ಯವಲಿ || ಹಾರಿಸಿದನೈ ಪಾರ್ಥನಿವನೆಡೆ | ಗೋರಿದನಲಾ ಯೆನುತ ಕಿಡಿಯೆಂ | ಪಾರ ಸುರಿದನು ನೂರುಬಾಣವನರ್ಜನನಮೇಲೆ ||೫೯|| ಅನಿತುಶರವನು ಕಡಿದು ಭಗದ | ತ್ತನ ಧನುವ ಖಂಡಿಸಲು ಕಂಗನೆ | ಕನಲಿದನು ಗವಸಣಿಗೆಯಿಂದುಗಿದನು ನಿಜಾಯುಧವ || ಟನಪಕೋಟಿಯು ರಶ್ಮಿಯನು ತುಟ | ವೊನೆಯಲುಗುಳುವಬಾಯಿಧಾರೆಯು|ತನಿಯುರಿಯು ತೆಕ್ಕೆಯಲಿ ಥಳಥಳಿಸುವಮಹಾಂಕುಶವ||೬೦||ತೈಲಲೇಪವ ನಯಪಹೊಗಲುನ| ಜಾಳಿಗೆಯು ಗಹಗಹಿಕೆಗಳ ಪೂ | ನಾಲೆಗಳ ಸಿಂಪಿಸಿದಗಂಧದ ಬಂಧದಕ್ಷತೆಯು || ಕೀಲಣದ ಮಣಿಪೆಳಗುಗಳ ಹರಿ | ಧಾಳಿಯಲಿ ಕಾಳೋರಗವ ಕುಡಿ | ನಾಲಗೆಯೊಳೆಸಲೆಸೆವುದಂಕುಶ ಭಟನ ಮುಷ್ಟಿಯಲಿ ||೬೧|| ಕುಡಿ ಕಿರೀಟಿಯುರಕುತವನು ಹಗೆ | ಕಿಡಲಿಕೌರವರಾಯನಾಳಲಿ | ಪೊಡವಿಯನು ಪರಿತೋಷವಾಗಲಿ ನೃಪನಮಿತ್ರರಿಗೆ || ತಡೆದು ಹಲಕಾಲದೊಳು ಪಾಸಂ| ಬಡಿಸಿದ್ದನದು ದೋಷ ಖಾತಿಯು | ಹಿಡಿಯದಿರು ನೀನೆನುತ ತಿರುಹಿಟ್ಟನು ಮಹಾಂಕುಶವ || ತೀಂತಿನ್ನೇನಕಟ ಪಾಂಡವ | ವೀರರುಬ್ಬಟೆ ಹಾರಿತೋ ತ್ರಿಪುರಾರಿಯುರಿಗಣ್ಣಿಂಗೆ ಸೋಲದಕೈದು ಬಂದುದಲಾ || ಧಾರುಣಿಯನಿನ್ನುಣಲಿ ಧರ್ಮಕು | ಮಾರನಿದನಿನ್ನಾರು ಕಾವವ | ರಾರೆನುತ ತಲ್ಲಣಿಸುತಿರ್ದುದು ಮೇಲೆ ಸುರಕಟಕ ||೬೩|| ಹಾ ಯುಧಿಷ್ಠಿರರಾಯ ಶಿವಶಿವ | ವಾಯುಸುತ ಹಾ ಪಾರ್ಥಸುತ ಮಾ | ದ್ರೇಯರಿರ ಹಾ ಯೆನುತ ಹರೆದುದು ಸೇನೆ ದೆಸೆದೆಸೆಗೆ || ಬಾಯ ಬಿಟ್ಟುದು ಟವಿಟಕುಲ ನಿ | ರ್ಪಾಯದಲಿ ಗೆಲವಾಯ್ತುಲಾ ಕುರು | ರಾಯಗೆನುತಿರ್ದುದು ಜಗತ್ತ್ರಯವೊಂದುನಿಮಿಷದಲಿ || ಇದರಪಾಡೇನೆಸಪಾಯವ | ನೊದೆದು ಕಳೆಯರು ಕೃಷ್ಣ ಭಕುತರು | ಸದರವೇ ಪುರಿಗೆಂಡವೂರಲೆಯು ಬಾಯ್ಗೆ ಭಾವಿಸಲು || ಹೊದರುಕಿಡಿಗಳ ಹೊಗೆಯ ಹೇರಾ | ಳದಲಿ ಬಹದಿವ್ಯಾಯುಧಕೆ ಚಾ | ಚಿದನು ವಕ್ಷಸ್ಥಳವನಸುರಾರಾತಿ ಯಡಹಾಯ್ದು ||೬೫|| ಪೆರೆದುದುರದಲಿ ಕೌಸ್ತುಭದಮಣಿ | ಮರೆಯನಿಳುಹಿದವೋಲು ಬೆಳಗಿನ | ತುರುಗಲಲಿ ತೂಗಾಡುತಿರ್ದುದು ಕೈದುತೊಡವಾಗಿ || ಮುರಿದುದಗ್ಗದಭೀತಿ ಹರುಷದ | ಸೆರೆಗೆ ಬಿಡುಗೊಡೆಯಾಯ್ತು ಬಲುಬೊ | ಬ್ಬಿರಿವುತಿರ್ದುದು ವೈರಿಕಟಕದೊಳರಸ ಕೇಳೆಂದ ||೬೬|| ಕೌತುಕವನಿದಕಂಡು ಫಲುಗುಣ | ಕಾತರಿಸಿ ನುಡಿದನು ಮುರಾಂತಕ | ಸೂತತನಕಲಸಿದೊಡೆ ಕಾದಲಿ ಕೌರವನಕೂಡೆ || ಸೂತತನವೇ ಸಾಕು ತನಗೇನು | ತಾತತುಕ್ಷಣ ಧನುವ ಬಿಸುಟು ವಿ | ಧೂತರಿಪುಬಲಪಾರ್ಥನಿದ್ದನು ಹೊತ್ತದುಗುಡದಲಿ || ೬೭ || ತಿರುಗಿ ಕಂಡನು ಕೃಷ್ಣನೀತನ | ಪರಿಯನರಿದನು ಮನದೊಳಿವನು | ತ್ತರವ ನೋಡುವೆವೆನುತ ಪಾರ್ಥನ ನುಡಿಸಿದನು ನಗುತ || ಉರವಣಿಸು

ತಿದೆ ವ್ರುತ್ತ್ತ ಗಜನಿಜ ।ಕರದೊಳಾಯುಧವಿಲ್ಲ ಘನಸಂ । ಗರಕೆ ಬೇಸರುದೋರಿತೇ ತನ್ನಾಣೆ ಹೇಳೆಂದ ॥೧೮॥ ಕಾದುವಾತನು ನೀನು ವೈರಿಯು । ಕೈದುವನು ನೀಗೆಲಿದೆಯಿನ್ನುರೆ । ಕಾದುವವರಾವಲ್ಲ ಸಾರಥಿತನವೆ ಸಾಕೆಮಗೆ ॥ ಕೈದುವಿದಕೋ ಕೃಷ್ಣ ನೀನೇ।ಕಾದುವಾಘೆಯ ತಾಯೆನಲು ಮರು। ಳಾದನೈ ನರನೆನುತ ನೆಗುತ ಮುರಾರಿಯಿಂತೆಂದ॥೧೯॥ಅಡಬಾರದು ತೋರಿನುಡಿದೊಡೆ। ಖೋಡಿ ನಿನಗಹುದೆಲೆಮರುಳೆ ನೀ । ನೋಡಲೆವೆ ಸೀವುಸುಕಣಾ ನಿನ್ನಳವಿನಾಯುಧವೆ ॥ ಹೂಡಲಾಪುದು ಜಗವನಂತಕ । ಗೂಡಲಾಪುದು ಮುನಿದೊಡಿದು ಕೈ । ಮಾಡಿದೊಡೆ ನಿಲಬಾರದಜರುದ್ರಾಮರೇಂದ್ರರಿಗೆ॥೨೦॥ವಿಲಸದುಪನಿಷದಾರಹಸ್ಯವ । ತಿಳುಹಿದೆವು ನಿನಗೊಮ್ಮೆ ಮತ್ತೆಯು । ತಿಳಿದುದಿಲ್ಲಾ ಕ್ಷಾತ್ರತಾಮಸ ಬಿಡದು ಬುದ್ಧಿಯಲಿ ॥ ಸುಲಭವಂತಿರೆ ನಿಷ್ಕಳಂಗೆ ನಿ । ಷ್ಕಳನಿರೂಪನನಂತನಿಜನಿ । ರ್ಮಲವೆನಿಪಪರಮಾತ್ಮಚಿನ್ಮಯರೂಪ ತಾನೆಂದ ॥೨೧॥ ಸಂಗವಿಲ್ಲದವಿಮಲಪರಮಾ । ತ್ಮಂಗೆ ಲೀಲೆಯೊಳಾಯ್ತು ಮಾಯಾ । ಸಂಗವದರಿಂದಾಯ್ತು ನಾಲುಕುಮೂರ್ತಿಗಳು ತಮಗೆ ॥ ಅಂಗಿಯಂಗವಿಭಾಗವಲ್ಲದ। ಭಂಗಸನ್ಮಾತ್ರಂಗೆ ಭಾವಿಸ । ಲಂಗಕಲ್ಪನೆ ಮಿಥ್ಯವಲ್ಲಾ ಪಾರ್ಥ ಕೇಳೆಂದ ॥೨೨॥ ಇಂದು ಕಮಲಭವಪ್ರಜೇಶ್ವರ । ರೊಂದು ಮೂರುತಿ ವಿಷ್ಣುಮುನಿಗಳು । ಸಂದಪಾರ್ಥಿವಲೋಕಪಾಲಕರೊಂದುಮೂರ್ತಿಯಿದು ॥ ಇಂದುಶೇಖರನಗ್ನಿಯಮನರ ॥ ವಿಂದಸಖಕಾಲಾದಿಮೂರ್ತಿಯಿ । ದೊಂದುಮೂರುತಿ ವಿಶ್ವದಲಿ ತನಗಿನಿತು ಬಲವೆಂದ ॥೨೩॥ ಇದುವೆ ಮತ ಕೆಲಬರಿಗೆ ಕೆಲಬರಿ। ಗದುಮತವು ವಿವಿಧಾವತಾರದ । ಲುದಿಸಿಹುದು ಮತ್ತೊಂದುಮೂರುತಿ ಹರಿವಿನೋದದಲಿ ॥ ಉದಧಿಯಲಿ ವರಯೋಗನಿದ್ರಾ। ಸ್ಪದದೊಳೊಂದಿಹುದೊಂದಖಿಳ ವಿ । ಶ್ವದ ಸುಕೃತದುಷ್ಕೃತವನೀಕ್ಷಿಸುತಿಹುದು ಕೇಳೆಂದ ॥೨೪॥ ಕೆಲರು ಧರ್ಮಾರ್ಥಾದಿನಾಲ್ಕರ । ಲಲಿತಮೂರ್ತಿಗಳೆಂಬರಿದರೊಳು । ಕೆಲರು ಜಾಗರಣಾದ್ಯವಸ್ಥೆಗಳೆಂಬ ಮೂರ್ತಿಗಳು ॥ ತಿಳಿಯೆ ಲೋಕತ್ರಯದೊಳಗೆ ನಿ। ಷ್ಕಳದ ಸಕಳವೆಯಾಗಿ ವಿಶ್ವದೊ। ಳೊಳಗುಹೊರಗಾನಲ್ಲದಿಲ್ಲೆಲೆ ಪಾರ್ಥ ಕೇಳೆಂದ ॥೨೫॥ ಉದಧಿಶಯನನ ಮೂರ್ತಿ ಕಲ್ಪಾಂ । ತದಲಿ ಕರಗಿದಧರೆಯನುದ್ಧರಿ । ಸಿದೆನು ಯಂತ್ರವರಾಹರೂಪಿನೊಳಂದು ಕರುಣದಲಿ ॥ ಪದವಭಜಿಸಿಯೆ ಭೂಮಿ ತಾಬೇ । ಡಿದಳು ಪುತ್ರನನಾಕೆಯಲಿ ಹುಟ್ಟಿದನು ನರಕಾಸುರನು ವಂಧ್ಯನು ಸಕಲದೈತ್ಯರಿಗೆ ॥೨೬॥ ಇದು ವರಾಹನದಾಡೆಯಿದನಾ । ತ್ರಿದಶವೈರಿಗೆ ಕೊಟ್ಟೆನವನಿಂ । ದಿದುವೆ ಭಗದತ್ತಂಗೆ ಬಂದುದು ವೈಷ್ಣವಾಸ್ತ್ರವಿದು ॥ ಇದು ಹರಬ್ರಹ್ಮಾದಿಗಳ ಗೆಲು । ವುದು ಕಣಾ ನಿಮಿಷದಲಿ ತಾನಿಂ । ತಿದುವೆ ತನಗಲ್ಲದೆ ಮಹಾಂಕುಶ ಮಣಿವುದಲ್ಲೆಂದ ॥೨೭॥ ತೀರಿತಾತನ ಶಕ್ತಿಚಾಪದ । ನಾರಿ ಬೆಸಲಾಗಲಿ ಮಹಾಸ್ತ್ರವ । ನಾರುಭಟೆಯಲಿಗಜವಮುರಿಕೆಡೆಯೆಸು ಮಹಾಸುರನ ॥ ಹೋರದಿರು ಹೊಗು ಬವರಕೆನಲಸು । ರಾರಿಯಂಘ್ರಿಯೊಳೆರಗಿಕರುಣಾ । ವಾರಿಧಿಯೊಳಭಯವನು ಪಡೆದನು ತುಡುಕಿದನು ಧನುವ ॥೨೮॥ ಎಲವೆಲವೊ ಭಗದತ್ತ ಕಲಿತನ । ದುಳಿವ ತೋರಿನ್ನೆನುತಕೆರಳಿದು । ಹೊಳೆವ ಕೂರಂಬಿನಲಿ ಕಡಿದನು ಗಜದ ಮಸ್ತಕವ॥ ನಿಲುಕಿ ನೆತ್ತಿಯನೊಡೆದುಗಿದು ಪ। ಚ್ಚಳಕೆ ಹಾಯ್ದುದು ಬಾಣ ದಿಕ್ಕರಿ । ನೆಲಕೆ ದಾಡೆಯನೂರಿ ಕೆಡೆದುದು ಭೂಪ ಕೇಳೆಂದ ॥೨೯॥ ಸುತ್ತಿದುರಗನ ಮಂದರಾಚಲ । ಕಿತ್ತು ಬೀಳ್ವಂದದಲಿ ಭರಿಕೈ । ಸುತ್ತಿ ಮಗ್ಗುಲವಡರಿ ಕೆಡೆದುದು ಸುಪ್ರತೀಕಗಜ ॥ ಇತ್ತ

ಲರ್ಜುನ ಹಾಯ್ದುವುಗಿದನು । ಬತ್ತಳಿಕೆಯಲಿ ದಿವ್ಯ ಶರವನು ತೆತ್ತಿಸಿದನವನೆದೆಯನಿಬ್ಬಗಿಯಾದುದರಿದೇಹ ॥೮೦॥ ಗಿರಿಯ ಶಿಖರದಹೂತಕಕ್ಕೆಯ । ಮರ ಮುರಿದುಬೀಳ್ವಂತೆ ವಿಮಳಾ । ಭರಣಕಾಂತಿಯ ಕಡಲ ಕೋಮಲಕಾಯ ಭಗದತ್ತ ॥ ಉರುಳಿದನು ಗಜದಿಂದ ಕುರುಬಲ । ಸುರಿಯೆ ಸುರಕುಲ ಕುಸುಮವರುಷವ । ಸುರಿಯೆ ನಿಜಸೇನೆಯಲಿ ಹರುಷದ ಹೊನಲು ಬಿರುವಾಯ್ತೆ ॥೮೧॥ ಹರಿದುದಗ್ಗದಸುಪ್ರತೀಕ । ಟ್ವರದ ಭಗದತ್ತಾತ್ಮಕನವನಿಯ । ಉರುಳಿದನು ಬಲ ಮುರಿದು ಸೈನ್ಯೇನೆನುತ ತಮತಮಗೆ ॥ ನರನತಡೆದರು ಸುಬಲಸುತರಿ । ವರ್ಗರು ಕುಮಾರಕರೆಲ್ಲರೈನೂ । ರುರು ಬಿದರು ಗಾಂಧಾರರಾಜರು ಶಕುನಿಯೊಡಗೂಡಿ ॥೮೨॥ ಕೊಂದನಿಬ್ಬರಸೌಬಲರ ನೃಪ । ವೃಂದವಲಿ ಗಾಂಧಾರರೊಂದೆರ । ಡೆಂದು ಸಲುಗೆಗೆಸಲಿಸಿ ಬಂದೈನೂರು ಬಲಕೈದು॥ ಬಂದುದ್ರೋಣನ ಹಳಚಿ ಭಂಗಕೆ । ತಂದನಹಿತವ್ರಜವನಿತ್ತಲು । ಸಂದಣಿಸಿದರು ಕೌರವರು ಪವಮಾನಸುತನೊಡನೆ ॥೮೩॥ ಗುರುತನುಜರಪಿಸೂನುಮಾದ್ರೇ । ಶ್ವರಜಯದ್ರಥಕೌರವಾಟಗ । ಳರಿಗದಾಘಾತಂಗಳಲಿ ಕೃದಣಿದು ಮನದಣಿದು ॥ ಕೆರಳಿದನು ಬಳಿಕವರ ಜಲಧಿಯೊ । ಳುರಿವ ವಡಬಾಧಿಪನ ಶಿರದ । ಲ್ಲಿರಗುವಂತೆ ಪತಂಗಮಂಡಲವಳಿದುದಂಬರವ ॥೮೪॥ ತಿರುಗಿದರು ಕೌರವರು ದ್ರೋಣನ। ಬೆರಳ ಸನ್ನೆಗೆ ಸನ್ನಗಹಳೆಗ। ಳುರವಣಿಸಿತೆನೆ ತಂಬಟದ ನಿಸ್ಸಾಳರಭಸದಲಿ ॥ ಮುರಿವರವವಳ್ಳಿರವಭೇರಿಯ । ಧರಧುರವಕಹಳೆಗಳ ಭೇರಿಯ । ಭರಿತರವದಲಿ ವೀರನಾರಾಯಣನ ಕಿಂಕರರು ॥೮೫॥ ಕೇಳು ಜನಮೇಜಯಧರಿತ್ರೀ । ಪಾಲ ಕುರುಪಾಂಡವರ ಬಲ ನಿಜ । ಪಾಳಯಕೆ ತಿರುಗಿತು ನದೀಜಕೃತಾಹವೊನ್ನತಿಯ । ಕೇಳಿ ದುರಿಯೋಧನನು ದುಗುಡದ । ಮೇಳದೊಳ ಗಂದರಲು ಪಟುಭಟ । ಮೌಳಿಮಂಡಿತಚರಣಕಲಶಜನಲ್ಲಿಗೈತಂದ ॥೮೬॥ ಉರುಳಿದನು ಭಗದತ್ತವೀರನು । ಕರಿಯ ಸಹಿತ ಕಳಿಂಗರಾಯನ । ಕಂಗಳಿಂದಿನ ಬವರದಲಿ ನೀವಿರಲು ಸೇನೆಯಲಿ ॥ ಹರಿಯ ಬಿರುಗಾಳಿಯಲಿ ವಿರಚಿಸು । ವುರಿಯಭೀಮಾರ್ಜುನರ ಶಿಖಿ ಬಂ । ದುರುಹಿತಗಣಿತ ಬಲವನೆಂದನು ಕೌರವರರಾಯ ॥೮೭॥ ಅನದೀನಂದನನ ಶರಸಂ । ಧಾನದಲಿ ಸೆಡೆಯದೆ ವಿರೋಧಿಯ । ನಾನನಂ ಮುರಿದಿರಲು ಬಗೆಯದೆ ರಣಪರಾಜಯವ ॥ ನೀವಿರಲು ಸಮರದಲಿ ಸೇನಾ । ಹಾನಿಯಾದುದು ಪೌರುಷೋದಯ । ದೇನನೆಂಬುದು ಜೀಯ ಲಜ್ಜಿಸಲೇಕೆ ನಿಮ್ಮವನು ॥೮೮॥ ಹಲವು ಮಾತೇನರಸ ನಾಳಿನ । ದಳದೊಳಬುಜವ್ಯೂಹವನು ಮಂಡಳಿಸಿ । ರಚಿಸುಲಿಸವೆ ಹಿಡಿವೆನು ಧರ್ಮನಂದನನ ॥ ಕೆಲಕೆ ಸಿಡಿಯಲು ಪಾರ್ಥನತ್ತಲು । ತೊಲಗಲೆಮ್ಮಯ ಪುಣ್ಯವಿದಿಯು । ವ್ಮಳಿಗೆಯುಚಿತವಯೆನುತ ಕೊಟ್ಟನು ಬಲದ ನಂಬಗೆಯ ॥೮೯॥ ನಸುನಗುತ ಶಶಿಕಾಂತ ತಿಮಿರವ। ಮುಸುಕಿಸಲು ನುಡಿದನು ಸುಯೋಧನ । ವಸುಮತೀಶಂಗಂದು ಕೋದಂಡಾಗಮಾಚಾರ್ಯ ॥ ಉಸುರಲಮ್ಮೆನು ಮಗನೆ ಧಿಟ ಬಾ।ವಿಸಲು ಕೃಷ್ಣಸಹಾಯನಂಗಳ।ದೆಸಕವನು ನಾಳಿನಲಿ ನಿಲಿಸುವೆನೆಂದನಾದ್ರೋಣ॥೯೦॥ ಎನೆ ಹಸಾದವಹಾಯ್ಕಿ ಕೌರವ । ಜನಪ ಕಳುಹಿಸಿಕೊಂಡನಿತ್ತಲು । ಮನವನಿಳುಹಿದನಿಂದು ಪಡುವಣ ಕಡಲತಡಿಗಾಗಿ ॥ ಎನಗೆತಪ್ಪಿದನೆಂದುಪ್ರಜ್ವಲ ॥ ವನಿತೆಯುಗುಳಿದಕೋಪವಹ್ನಿಯಿ । ದೆನಲು ಬೆಳಗಿನ ಜ್ಯೋತಿ ಝಳಪಿಸಿ ಸೂರ್ಯನನುವಾದ ॥ ... ... ... ॥ ೯೧ ॥

ಅಂತು ಸಂಧಿ ೪ಕ್ಕೆ ಪದ ೨೮೪ಕ್ಕಂ ಮಂಗಳಂ.

## ಐದನೆಯಸಂಧಿ.

||ಸೂಚನೆ|| ರಾಯಕಟಕಾಚಾರ್ಯನುರುಚಾ | ಪಾಯಧಾಗ್ರಣಿ ಮೋಹಿದನು ಪ | ದ್ಮಾಯುತವ್ಯೂಹ ವನು ಸೈನ್ಯದ ಜಾಣನಾದ್ರೋಣ ||

|| ಪದ || ನೀನು ಮಾಡಿದಸುಕೃತಫಲವೇದ | ನೇನಹೇಳುವೆನಿತ್ತಲುಗ್ಗಡ |ಮಾನೆ ಬಿದ್ದುದು ಕಾಟ ನಸುಸೊಪ್ಪಾವುದಲಿಸೇನೆ || ಧ್ಯಾನವಿತ್ತಲು ರಾಗವತ್ತಲು | ಮೌನವಿತ್ತಲು ರಭಸವತ್ತಲು | ಹಾನಿ ಯಿತ್ತಲು ವೃದ್ಧಿಯತ್ತಲು ಭೂಪ ಕೇಳೆಂದ ||೧|| ಎತ್ತಲೊದವುದು ಧರ್ಮಬಲ ತಾ | ನತ್ತಲೊಲೆ ವುದು ದೈವ ದೈವವ | ದೆತ್ತಲೊಲೆದಿಹುದತ್ತ ವಿಜಯಾಶ್ರಯವು ಕುಡಿನೋಟ || ಹೆತ್ತನಿನ್ನೊಡಲಿಂಗೆ ತಂಪಿನ ತೆತ್ತಿಗನೊ ಮೇಣ್ ಬಹಳತಾಪದ | ಹತ್ತಿಗನೊ ಕುರುರಾಯನೆಲೆಧೃತರಾಷ್ಟ್ರ ಕೇಳೆಂದ ||೨|| ಸಾಕು ಸಂಜಯ ನುಡಿಯ ಖಡ್ಗದ | ಲೇಕೆ ಗಂಟಲ ಕೊಯ್ವೆ ತಾನಿವಿ | ವೇಕದಲುಪಾರ್ಜಿಸಿ ದದುಷ್ಕೃತವೆನಗುಪಾರ್ಜಿಸಿತು || ಸಾಕದಂತಿರಲಿನ್ನು ದೇಹ ವಿ | ಶೋಕಿಸುವೆನಲ್ಲಿಂದಮೇಲು | ದ್ರೋ ಕಿಕೌರವನೇನನೆಗಳಿದ ಹದನ ಹೇಳೆಂದ ||೩|| ಚಿತ್ತವಿಸು ಧೃತರಾಷ್ಟ್ರ ಕೌರವ | ನಿತ್ತನಿರುಳೋಲಗ ವಮಂಜಿನ | ಮುತ್ತಿಗೆಯ ನಭದಂತೆ ಹೊಗೆದುದು ರಾಯನಾಸ್ಥಾನ|| ನೆತ್ತಿಮುಸುಕಿನ ಕೈಯಗಲ್ಲದ | ಕುತ್ತುದಲೆನಟ್ಟಾಲಿಗಳ ಚಲ | ಚಿತ್ತರಿದ್ದುದು ಸಕಲನಾಯಕಮಾಡಿ ದುಗುಡದಲಿ ||೪|| ದುಗುಡವೇ ಕೈ ನಿಮಗೆ ಕರ್ಣಾ | ದಿಗಳ ನೀವಕ್ಕಾಡಿ ಬಲುಗಾ | ಳಗದೊಳಗೆ ಕೈಮಾಡಿ ನೊಂದಿರಿ ಕೊಂದಿರರಿಭ ಟರ || ಹಗೆಯ ಕಟ್ಟಲು ಕೊಟ್ಟ ಭಾಷೆಗೆ | ಬಿಗುಹು ಬೀತುದು ಗುರುಗಳಲಿ ನಂ | ಬುಗೆ ನಿರರ್ಥಕ ವಾಯ್ತೆನುತ ಕುರುರಾಯ ಬಿಸುಸುಯ್ದ ||೫|| ದ್ರೋಣಮನಗೊಂಡಿರಿದೊಡಂಬುಜ | ಪಾಣಿಯುದಿರೇ ನಮ್ಮಭಾಗ್ಯದ| ಬಾಣಸಿಗಸ್ಥಿಭ ವಿಷವ ಬೆರಸುವೊಡಾರು ಕಾಯ್ವವರು || ಹೂಣೆಹೊಕ್ಕನು ಹಿಡಿದು ವೈ ರಿ | ಕ್ಷೋಣಿಪನ ಕಳುಹಿದನು ನಾವ | ಕ್ಷೀಣದುರಿತರು ಹಲುಬಿ ಮಾಡುವುದಾವುದುಂಟೆಂದ ||೬|| ಬ ಲದೊಳಗೆ ಹೆಸರುಳ್ಳವರು ಮುಂ | ಮುಳಿತವಾಯಿತ್ತಾನೆಕುದುರೆಗ | ಳಳಿದುದಕೆ ಕಡೆಯಿಲ್ಲ ಪವನಜ ಪಾರ್ಥರುಬ್ಬಟೆಯ || ನಿಲಿಸುವಾಪತ್ತಿಗರು ನಮಗಿ | ಲ್ಲೆಳಲಿ ಮಾಡುವದೇನೆನುತ ನೃಪ | ತಿಲಕ ಬೇಸ ರ ನುಡಿಯೆ ಬಳಿಕಿಂತೆಂದನಾದ್ರೋಣ ||೭|| ಪರಮಗರುಡೋದ್ಗಾರಮಣಿಯನು | ಗರಳ ಸುಡುವುದೆ ಕೃಷ್ಣರಾಯನ | ಕರುಣಕವಚವನೊಡೆಯಲಾಪವೆ ನಮ್ಮಕೈದುಗಳು || ಅರಸ ಮರುಳೌ ಧರ್ಮಪುತ್ರ ನ | ಬೆರಸಿ ತುಡುಕಲು ತಡೆದನರಿಯಾ | ಮುರಹರನ ಮೈದುನನು ಬಳಿಕೆಮ್ಮಳವೆ ಹೇಳೆಂದ ||೮|| ನಾಳೆ ಫಲುಗುಣ ತಪ್ಪಿದೊಡೆ ಭೂ | ಪಾಲಕನ ಕಟ್ಟುವೆನು ರಣದಲಿ | ಶೂಲಿಯುದ್ದೈಸಿದೊಡೆ ಹಿಡಿ ವೆನು ಚಿಂತೆ ಬೇಡಿದಕೆ || ಕೇಳು ಪದ್ಮವ್ಯೂಹದಲಿ ಹೊಕ್ಕಾಳು ಮರಳಿದೊಡಿಸ್ತ್ರವಿದ್ಯಾ | ಭಾಳಲೋ ಚನನೆಂಬಬಿರುದನು ಬಿಟ್ಟೆಸಾನೆಂದ ||೯|| ಒಳ್ಳಿತಿದು ಕಡುಭಾಷೆ ನಾಳಿನ | ಗೆಲ್ಲವೇಗೆಲವರ್ಜನನುಹೊ ಕ್ಕಲ್ಲಿಪೊಗುವೆವು ತರುಬಿ ಕಾದುವೆವೆಮ್ಮ ಕಳನೊಳಗೆ || ಅಲ್ಲಿನೀನೊಲಿದಂತೆಮಾಡ | ನ್ನೆಲ್ಲವೇತಕ್ಕೆನುತ ಸಾಹಸ | ಮಲ್ಲರಭರದು ವೀರಸಮಸಪ್ತಕರುಗರ್ಜಿಸುತ || ೧೦ || ಪೊತು ಪಾಯಕು ತತ್ತಹೊತ್ತಿ ನೊ | ಳಾತುಕೊಂಬುವರಾರು ಪಾರ್ಥಿವ | ಜಾತಿಯಲಿರಣಧಿಟ್ಟಗೆಂಟೇ ನಿಮ್ಮ ಹೋಲಿಸಲು|| ಸೋ

ತುದೆರಿಬಲ ಹೋಗೆನಲುವುು । ಯ್ಯಾಂತು ಮನ್ನಿಸಿ ಹೊನ್ನ ಬಟ್ಟಲೊ । ಳಾತಗಳಿಗೊಲಿದಿತ್ತನೈ ಕರ್ಪುರದ ವೀಳೆಯವ ॥ ೧೧ ॥ ಹರೆದುದೋಲಗವಿತ್ತ ಭುವನದೊ । ಳಿರುಳಡವಿಗಡಿತಕ್ಕೆ ಹರಿದವು । ಕರಣತತಿ ದಿವಭ್ರದಲಿ ತಾರಕಿಯತೇರುಗಳ ॥ ಹರಿವಮಂಜಿನ ನದಿಯ ಹೂಳ್ದವು । ಸರಸನಾಯಿತು ಗಗನತಳತಾ । ವರೆಯಸಖನಿಜರಥವ ನೂಕಿದನುದಯಪರ್ವತಕೆ॥೧೨॥ ಕೆದರಿದವು ನಿಸ್ಸಾಳ ಬರಸಿಡಿ । ಲದುಭಯತಧ್ವನಿಯಲಿ ನಿರಂತರ । ವೊದಂಬ್ಬೆದವು ಕಹಳೆ ಬಿರುದಾವಳಿಯಲತಿರಥರ ॥ ಕದುಬಿದವು ತಂಬಟದದನಿ ಬಿಗು । ವದನವನು ಬಲುಬೊಬ್ಬೆಯಲಿ ನೆಲ! ನದಿರೆ ನಡೆದುದು ಸೇನೆ ಕಲಶೋದ್ಭವನ ಸನ್ನೆಯಲಿ ॥ ೧೩ ॥ ಉಲಿದು ಸಮಸಪ್ತಕರು ತಮ್ಮಯ । ಕಳನ ಗೆಲಿದರು ಚಾತುರಂಗದ । ದಳದತೆರಳಿಕೆ ತೆಕ್ಕೆಮಿಗೆ ಕುರುಭೂಮಿಗೈತಂದು ॥ ಕಳನ ವೆಂತಣಿಸಿದವು ರಾಯನ । ಕೆಲಬಲದ ಸುಯ್ಯೋಧನದ ರಿಪು । ವೆಳಯಧೂಳೀಪಟಲ ಪೊಕ್ಕನು ರಣವಸಾದ್ರೋಣ । ೧೪ ॥ ನೆರೆದನಿಜಸೇನಾಧಪರಸಂ । ವರಣೆಗಳ ನೋಡಿದನು ನೀಡಿದ । ನರಿಬಿರುದಮಂಡಳಿಕರಿಗೆ ಕಾಳಗದ ವೀಳೆಯವ॥ ಹರಿಗೆಹಲಗೆ ಕೃಪಾಣತೋಮರ । ಪರಶುಕಕ್ಕಡಕುಂತಮುದ್ಗರ । ಸುರಗಿಯತಿಬಳನಾಯಕರ ನಿಲಿಸಿದನು ವಳಯದಲಿ ॥ ೧೫ ॥ ಎಸಳೆಸಳುಮಿಗೆ ಸರಸದಲಿ ಜೋ । ಡಿಸಿದವವನೀಪಾಲರನು ತ । ದ್ವಿಸಟಕರ್ಣಿಕೆಯೊಳ್ಡನಲಿ ಬಲಿದನು ಸುಯೋಧನನ ॥ ಪಸರಿಸಿತು ಕೌರವಕುಮಾರರ । ವ್ಯಸರ ಕೇಸರವಾಗಿ ವ್ಯುತ್ಯ್ಯಪಿ । ನೊಸಗೆಗೆತ್ತಿದಗುಡಿಯೆನಲುತ್ತಳಶವ್ರಪತಾಕೆಗಳು ॥ ೧೬ ॥ ನಿಲಿಸಿದನು ರಾವುತರಸಾಹೊರ । ವಳಯದಲಿ ರಾವುತರು ಮುಂದೊಡೆ । ನಿಲುವುದೊಗ್ಗಿನದಂತಿಘಟೆ ನಿಜಸೇನೆಗಡಹಾಗ । ತೊಲಗಿದೊಡೆ ತೇರುಗಳು ತೇರಿನ । ವಳಿಕೆ ತಾಸೊತ್ತಾಗಿ ರಣದ । ಗ್ಗಳೆಯರಿದ್ದುದು ರಾಯನೊಡಹುಟ್ಟಿದರು ಸಂವರಿಸಿ ॥ ೧೭ ॥ ಅರನೆಲೆಯ ಸುಯ್ಯೋಧನ ಬಾಹ್ಲಿಕ । ತರಣಿಸುತಗುರುಸೂನು ಕೃತವ । ರ್ಮರಿಗೆ ಕೃಪದುಶ್ಶಾಸನಾದ್ಯರಿಗಿರಿಸಾರ್ತ್ಯಕೆ ॥ ಎರಡುಕೆಲದಲಿ ಶಲ್ಯಶಕುನಿಗಳಿರಲು ಸೇನೆಯ ಸುತ್ತುವಳಯದ । ಭರದಿ ಕೈಕೊಂಡೊಪ್ಪ ಮೆರೆದನು ಗರುಡಿಯಾಚಾರ್ಯ ॥೧೮॥ ಹಿಳುಕ ತಿರುಹುತ ಸಂಮುಖದ ಬಲವಳಯದಲಿ ಗಿರಿಯಂತೆ ಸೈಂಧವ । ಬಿಲುದುಡುಕವೋಹಂಸಿದರು ಭೂರಿಶ್ರವಾದಿಗಳು ॥ ದಳದ ಬಲವೆಸಳಿಗೆ ನೃಪನು । ರಿಬಲ ನಿಲಿಸಿದನೆನೆಮಹಾಕಾಲನ! ಬಳಗಕೌತಣವಾಯ್ತು ಚಕ್ರವ್ಯೂಹರಚನೆಯಲಿ ॥ ೧೯ ॥ ಏನ ಹೇಳುವೆಯಂಥನೃಪತಿಯ । ಸೂನುವಿನ ಮೋಹರವ ನಳ್ಳಿರಿ । ವಾನೆಗಳನವ್ವಳಿಸಿ ಗಗನಕೆ ನೊಗೆವ ಕುದುರೆಗಳ ॥ ಆನೃಪರ ರಥವಾಜಿಗಳ ಗರಿ । ಸಾನು ಸಡಿಲಲು ಜಡಿವಭೇರೀ । ಧ್ವಾನ ... ಮಂಪದಳಪಸುಭಟರಸಿಂಹಗರ್ಜನೆಯ॥ ೨೦ ॥ ಜವನಪೊಲು ವ್ಯತ್ಯುವಿನ ತಾಳಿಗೆ । ಬವರ ... ಕಂಧ್ರೀ । ರವನ ದಾಡೆಗಳಿರುಬು ಭುಜಗನನಾಲಿಗೆಯಬಿರುಬು ॥ ಹವಣ ಹೊಗಳುವೊ ... ಸಿತು । ಲವನಿಗಳಿದುದೊ ನಡಬವಹ್ನಿಯ । ಜವಳಿಕೆಯೊ ... ಸತೆನಲು ಚಕ್ರವ್ಯೂಹರಂಜಿ ... ೨೧ ॥ ಭಟರ ಬಿಲುಝೇಂಕಾರ ಹೊಯ್ಲಿನ । ಪಟಹದಬ್ಬರ ಲಗ್ಗೆಸೂಳಿನ । ಚಟುಳತರ ... ತಂಬಟವಕಹುದನಿಯ ॥ ಪಟುಭಟರ ಬೊಬ್ಬೆಗಳವುಬ್ಬರ । ಕಟಕದಬ್ಬರ ತಡೆಯಲಾದು ... । ನಿಮಿಲನಯುನನ ದಿನದಲೊದಗುವಕಡಲ ನಡಗಿಸಿತು ॥ ೨೨ ॥ ಕಾಲರುದ್ರನ ಕೈಯಶೂಲವೊ । ... ಲಭ್ಯರದ ಹಿಡಿವಬಲುಕರ । ವಾಳವೊಲಯಾಂತಕನ ಕೋಣನ ಕೋಡಹೊಯ್ಲುಗಳೋ ॥ ವಳಿಸು

ವೊಡೆದು ಮೃತ್ಯುವಿನಗೋನಾಳಿಹೊಗುವೊಡೆ ಕಡಲ ನಡುವುಳಿ। ಕಾಲಮೇಘವ ಮೊತ್ತವೆನಲಂಜಿಸಿತು
ಬಿರುದರನು ॥ ೨೩ ॥ ಮೊಳಗಿದವು ನಿಸ್ಸಾಳ ಕಡಲು । ವ್ವಳಿಸಿದಂತಿರೆ ಸಿಡಿಲ ಹೊಯ್ಲಿನ । ಬಳಗ
ದಂತಿರೆ ಕೂಡೆ ಬಿರುದಿನ ಭಟರು ಬೊಬ್ಬಿಡಲು ॥ ಉಳಿವತೇಜಿಯ ಝಂಕೆಗಳ ಗೊಂ । ದಳದ
ಕರಿಘಟೆಗಳುರುಗಳ ವೆ । ಗ್ಗಳದರವದವ್ವಳಿತವು ಕೌರವಸೈನ್ಯಶರಧಿಯಲಿ ॥೨೪॥ ಪೇಳವದೊಳೆಸ್ನಾ
ನೆಗಳ ಬರ । ಹೇಳು ಸುಭಟರೊಳಗ್ಗಳರ ಬರ । ಹೇಳು ಬಿಂಕಕೆ ಬೆರೆವಭೀಮಾರ್ಜುನರ ಬರಹೇಳು ॥
ಲೋಲುಪತಿಯುವನಿಯಲಿ ಹುಬರೆ । ಹೇಳುಯುಮುಸಂದವನವನಿಂದಿನ । ಕಾಳಗಕ್ಕೆಂಬತ್ತು ಭಟ್ಟರನಟ್ಟಿ
ದನು ದ್ರೋಣ ॥೨೫॥ ತುರಗ ಹಲ್ಲಣಿಸಿದವು ಸದನುಳ । ಧುರದ ಸೌರಂಭದಲಿ ಮುಸುಕಿದ ತುರುಗ
ದಲಿ ಹೂಡಿದವು ರಥಕಾಲಾಳ ಮುಂಕೊಂಡು ॥ ಅರಸನನುಚರುಸಹಿತ ಕೃಷ್ಣನ । ಬೆರಳಸನ್ನೆಗ ತ್ರಿ
ವಿ ಬಿಡೆ ಮೋ । ಹರಿಸಿ ನಿಂದರು ಮುರಿದಮಕರವ್ಯೂಹರಚನೆಯಲಿ ॥೨೬॥ ನಡೆದು ಸಂಶಪ್ತಕರು
ಬವರವ । ಬೆಡಗಿನಲಿ ಮೋಹರಿಸಿ ಮುರಿವನು । ಗಡಣಿಸಿದರರ್ಜುನನ ಬರಲಟ್ಟಿದರು ಭಟ್ಟರನು ॥
ಸಿಡಿಲ ತಾಳಿಗೆಯೆನಲು ದೂತರು । ಗಡಬಡಿಸಿ ಪಾರ್ಥನನು ಕಾಳಗ । ದೆಡೆಗೆ ಕರೆಯಲು ಮಹಿಲ ಪಿ
ಗಲ್ಯೆತಂದರಾಕ್ಷಣಕೆ ॥೨೭॥ ಬಂದು ಸಂಶಪ್ತಕರ ದೂತರು । ನಿಂದರರ್ಜುನನಿದಿರಿನಲಿ ನೀ । ನಂದ
ಗೋಪನ ಮಗನ ಬಿಡು ನೆರಪಿಂಗೆ ಕರೆ ಹರನ ॥ ಇಂದು ರಣದಲಿ ಬದುಕಿದೊಡೆ ನೀ । ನೆಂದಿಗೆಯು
ಬದುಕಿದವನೆಂದರು । ನಿಂದರೆಂದವಗಡಿಸಿ ಹಿಡಿದರು ಫಲುಗುಣನ ಸೆರಗ ॥೨೮॥ ಖರೆಯರವರಿಂ
ದುಂಟು ನೆರವನು । ಕರಸಿಕೊಡಿ ಬಹೆನೆನುತಲರಿಗಳ । ಚರರ ಕಳುಹಲು ದ್ರೋಣನಟ್ಟಿದ ಭಟ್ಟರೈ
ತಂದು ॥ ಕರೆದರರ್ಜುನನನು ವೃಕೋದರ । ಧರಣಿಪತಿ ಮಾದ್ರೇಯರೈದಿಂ । ಬರಿಗೆ ನೋಡದು ಪಾ
ರ್ಥಪದುಮವ್ಯೂಹದಿಂದಿನಲಿ ॥೨೯॥ ಶಿವನ ಬೇಡಿದಶರವ ತೆಗೆ ಗಾಂ । ಡಿವದ ಬಿಗಿ ನಿನ್ನಿಷ್ಟದೈವದ
ತವಕದಲಿ ನೀ ಬೇಡಿಕೊಂಬುದು ಪರಮಸದ್ಗತಿಯ ॥ ಅವರವರ ಹವಣಲ್ಲ ಗುರು ಮುನಿ । ದವಗದಿ
ಸಿದೊಡ ನಿಲುವನಾವನು ಬವರಕೇಳೆಂದು ಜರೆದರು ದೂತರರ್ಜುನನ ॥೩೦॥ ಚರರ ಕಳುಹಿದನಸು
ರರಿಪುವಿಗೆ । ಕರೆವ ಮುಗಿದನು ಪಾರ್ಥ ನೀ ಸಂ । ಗರದೊಳಗೆ ನಿಮ್ಮಡಿಯ ಚಿತ್ತದೊಳಾವಘಟ್ಟನ
ಲಿ ॥ ಬೆರಸುವವು ಸಾವಿಂದಿನೀಮೋ । ಹರದ ಮುರಿವಸದಳಸಿಘಾನಿಸ । ಬರಿದೆನಲು ಮನದೊಳಗೆ ಸಿ
ಷ್ಟೈಸಿದನು ಮುರವೈರಿ ॥೩೧॥ ಅಳಿಯ ನೀಮೋಹರದೊಳಲ್ಲದೆ ಫಲುಗುಣನ ಮಗನಿವನು ಬಲುಗೈ
ವುಳುಹಬಾರದು ಕಾಯಿದೊಡೆ ಕಲಿಯುಗಕೆ ಗತಿಯಿಲ್ಲ ॥ ಫಲುಗುಣನಸಾವಿತ್ತಲೊಯ್ದೊವೆ । ಬಳಿಕ
ನಿರ್ಣಯವೆಂದು ಮನದಲಿ । ತಿಳಿದು ಪಾರ್ಥಂಗೆಂದನಸುರಾರಾತಿ ನಸುನಗುತ ॥೩೨॥ ಗುಣಕೆ ಹಿ
ರಿಯೇ ನಿನ್ನ ಮಗನೀ । ರಣಕೆ ಬಗೆವನೆ ಸೂರ್ಯನಾರೋ । ಗಣೆಗೆ ನೋಡರೇ ಸಾಕದೇತಕೆ ಬಯಲ
ಭಂಡತನ ॥ ಕೆಣಕು ನಡೆ ಸಂಶಪ್ತಕರನೀ । ಬಣಗುಗಳ ಕೊಂಬನೆ ಕುಮಾರನ । ನಣಕವಲ್ಲೆಂದಸುರ
ರಿಪು ತಿರುಹಿದನು ನಿಜರಥವ ॥೩೩॥ ಹರಿಸಹಿತ ಕಲಿಪಾರ್ಥನತ್ತಲು । ತಿರುಗಿದನು ಬಳಿಕತ್ತಲೀಮೋ ।
ಹರಮಹಾಂಭೋನಿಧಿಗೆ ಮೊಗಸಿತು ಪರ್ವತೋಪಮರು ॥ ಮೊರೆವಪಟಹಮೃದಂಗ ಘನನಿ । ಸ್ಸಾ
ರಿತವೇ ನಿಸ್ಸಾಳರವದ । ಬ್ಬರಣೆಗಬ್ಬರಿಸಿದುದು ಕಮಲಭವಾಂಡಖರ್ಪರವ ॥೩೪॥ ಅರರೆ ಗುಜರಿ
ಕಹಳೆಗಳ ಜೊ । ಬ್ಬರವನಿಸ್ಸಾಳದಲಿ ಗರುಡಿಯ । ಗುರುವಿನೊಡ್ಡಣೆಗಾಗಿ ತಿರುಗಿತು ಪಾಂಡುಸುತ

ಸೇನೆ ॥ ಮುರಿದುವಗ್ಗದ ಚೂಣಿ ನಾಯಕ । ರಿರಿಯಲಾತುದು ಮತ್ಸ್ಯಕೈಕೆಯ । ರುರುಬಿದರು ತೆಗ
ಸಿದರು ಕೌರವಬಲದ ಮುಂಗುಡಿಯ ॥೩೫॥ ಬಲಿದು ಚಕ್ರವ್ಯೂಹದೊಡ್ಡನು । ನೆಲೆಯ ಭೇದವನರಿಯ
ಲಾರಿಪು । ಬಲವ ಕೆಡಿಸಲು ಹಾಯ್ದು ಹೊಗಿಸಿದೊಡನಿಲಜನು ರಥವ ॥ ಎಲೆಲೆ ತಿವಿ ತಿವಿ ಸ್ವಾಮಿ
ದ್ರೋಹರ । ತಲೆಯ ತೆಗೆ ತೆಗೆಯೆನುತ ಬಿಲ್ಗೈ । ಚಳಕದಲಿ ಬೀರಿದನು ಬಾಣವನತಿರಥರಮೇಲೆ
॥೩೬॥ ಅನಿಲಜನ ಸರದುರವಣೆಯನಂ । ಬಿನಲಿ ತಳಿತವು ಸೈಂಧವಾದಿಗ । ಳನುವರದೊಳುರವಣಿಸಿ
ಗೆಲಿದರು ವೈರಿನಾಯಕರು ॥ ವಿನುತ ಚಕ್ರವ್ಯೂಹದಾಹವ । ದನುವನರಿಯದೆ ಸಮರಭೀಕರ । ವನಧಿ
ಯವಗಾಹದಲಿ ಮುರಿದರು ಸಾಹಸೋನ್ನತಿಯ ॥೩೭॥ ಅಲುಗಿದರು ಮಾರ್ಬಲದವರು ಮನ । ವಿ
ಘಟಿದರು ಭೀಮಾದಿಗಳು ಕಳ । ವಳಿಸಿದರು ಸಾತ್ಯಕಿವಿರಾಟದ್ರುಪದಸೃಂಜಯರು ॥ ಉಲುಕಲಮ್ಮದೆ
ಪಂಚಪಾಂಡವ । ರಳುಕಿದರು ರಣಹೂಣಿಗರು ತ । ಲ್ಲಳಿಸಿದರು ದ್ರೋಣನಲಿ ಗುರುವಣೆಯರ ಸು
ಮೋಹರಕೆ ॥೩೮॥ ಬಗೆಯಲಾದುದು ಹಾನಿ ಸಮರವ । ಹೊಗಲು ಮೊಗಸುವರಿಲ್ಲಲಾ ಬಲು । ಜಗ
ಳಕದುಹುಳ್ಳಿತಿರಥರು ಬೆಂಗೊಟ್ಟು ಮೊಗಟರುಹೆ ॥ ತೆಗೆವುತಿದೆ ನಿಜಸೇನೆಯಲಿ ಖರ । ಪೊಗುವನಾ
ವವನೆನುತ ನೃಪತಿಗೆ । ದುಗುಡವನು ಬಿತ್ತಿದರು ಸಹದೇವಾದಿನಾಯಕರು ॥೩೯॥ ಉರವಣಿಸಿದರು ನ
ಕುಲಸಾತ್ಯಕಿ । ವರವಿರಾಟದ್ರುಪದಕೈಕೆಯ । ಬಿರುದದೃಷ್ಟದ್ಯುಮ್ನಕುಂತೀಭೋಜ ಮೊದಲಾದ ॥
ಧರಣಿಪರ ಥಟ್ಟೈಸಿ ರಿಪುಮೋಹರಕೆ ಕವಿದರು ಕಾದಿ ದುರ್ಗವ। ಮುರಿಯಲರಿಯದೆ ಮುರಿವುತಿರ್ದು
ದು ಬಸಿವಮೈಗಳಲಿ॥೪೦॥ಸುಳಿದು ಸವಿಮೋಖಲೆಯ ಮೋಹರ ।ದೊಳಗೆ ಮುಳುಗಿದರೈ ಮಹಾಮಂ ।
ಡಳಿಕರಿರ ಘಡ ಹೋಗಿಹೋಗಿಯೆನುತ್ತ ಖಾತಿಯಲಿ॥ ಬಿಲುದುಡುಕಿ ಪವಮಾನನಂದನ । ನಳವಿಗೊ
ಟ್ಟನು ಹಾಣೆಹೊಕ್ಕತಿ । ಬಳವನಿದನು ಗಾಯವಡೆದನು ಘೋರಸಮರದಲಿ ॥೪೧॥ ಕಾದಲೆನ್ನಳವ
ಲ್ಲ ಬಲದು । ಭೇದವಿದು ಶಿತಿವಯೆನುತ್ತ ವೃ । ಕೋದರನು ಬೆರಗಾಗಿ ದುಗುಡವ ಕೆತ್ತು ನಿಜಮು
ಖಕೆ ॥ ಕೈದೆಗೆಯೆ ರಿಪುಬಲದ ಸುಭಟರು । ಕಾದಿದನು ಕಲಿಭೀಮ ಗೆಲಿದನು । ಹೋದನೆಂದುದು
ಕೂಡೆಕೈಗಳ ಹೊಯ್ದು ತಮತಮಗೆ ॥೪೨॥ ಆ ಮಹಾಮೋಹರವನೊಡೆಯಲು । ಸೋಮಕುಲಜರು
ಭೀತರಾದರು । ಹಾ ಮಹಾದೇವೆನುತ ಧರ್ಮಜ ನೋಡಿ ತಲೆದೂಗಿ ॥ ರಾಮನರಿವನು ಕೃಷ್ಣನರಿವನು
ಸೀಮೆಯಲಿ ಕಲಿಪಾರ್ಥನರಿವನು । ಭೂಮಿಪತಿಗಳೊಳುಳಿದಭಟರಿಗೆ ಹರಿವುದಲ್ಲೆಂದ ॥೪೩॥ ಹೊಗ
ಲುಬಲ್ಲನು ಹೊಕ್ಕವೊಲು ಸೆರೆ । ದೆಗೆಯಲರಿಯನು ರಾಯಪಾರ್ಥನ। ಮಗನು ಮತ್ತೆ ತೃದನೆಯುಮಹಿ
ಮರ ಕಾಣೆನಾನೆನುತ ॥ ಅಗವಚಿಂತೆಯೊಳರಸವದನದ । ದುಗುಡಭಾರದಲಿರಲು ಮುಂಗೈ । ನಿಗಳವ
ನು ತಿರುಹುತ್ತ ನಸುನಗುತೆಂದನಭಿಮನ್ಯು ॥೪೪॥ ಜನಪನಂಘ್ರಿಗೆ ಮಣಿದು ಕೈಮುಗಿ । ದೆನಗೆ ಬೆಸ
ಸೈಬೊಪ್ಪನಾಬಲ್ಲೆನು ಮಹಾಹವದೊಳಗೆ ಚಕ್ರವ್ಯೂಹಭೇದನವ ॥ ಅನುವರವ ಗೆಲುವೆನು ಕೃತಾಂತ
ನ । ಮನೆಗೆ ಕಳುಹುವೆನಹಿತರನು ನೀ । ವಿನಿತು ಚಿಂತಿಸಲೇಕೆ ಕಾಳಗಕೆನ್ನ ಕಳುಹೆಂದ ॥೪೫॥ ಹಸು
ಳೆಯಭಟನ ನುಡಿಯ ಕೇಳಿದು । ನಸುನಗುತ ಧರ್ಮಜನು ಘನಸಾ । ರುಷವು ನಿನಗುಂಟೆನುತ ತನ
ಯನ ತೆಗೆದು ಬಿಗಿಯಪ್ಪಿ ॥ ಶಿಶುವು ನೀನೆಲೆ ಮಗನೆ ಕಾದುವ । ರಸಮಬಲರು ಕಣಾ ಮಹಾರಥ । ರೆ
ಸುಗೆಗಳ ನೀನೆಂತು ಸೈರಿಸಲಾಪೆ ಹೇಳೆಂದ ॥೪೬॥ ಜವನ ಜಕ್ಕಲಿಸುವರನೇಕರು । ಶಿವನ ಸಮಗೈವೀ

ರರಹರದು । ನವಗೆ ಸಹಿತಳವಲ್ಲ ನೀನೆಂತೆಲ್ಲ ಪಟುಭಟರ ॥ ತಿವಿದು ಹೋಗುವೈ ಮಗನೆ ನಿನ್ನು । ತ್ಸವದ ನುಡಿಯೇ ಸಾಕೆನುತ ತ । ಕ್ಕವಿಸಿ ಮೋಹದಕಡಲೊಳವನಿಪ ಮೂಡಿ ಮುಳುಗಿಪನು ॥೪೭॥ ಇವರ ಗೆಲುವೆನು ನಿಂದರಿಪ್ರವನು ॥ ಜವಗೆ ಬೋನವವಾಡಪರ್ದೊಡೆ । ಬವರವನು ಕಲಕದೆ ಮ ಹಾರಥರೆನಿಪನಾಯಕರ ॥ ಅವನಿಯೊಗ್ಗೊರಗಿಸದೆ ಮಾರಾಂ । ತರನು ನುಂಗದೊಡಾಬಳಿಕ ನಿಂ । ಮವಗೆಯರ್ಜುನಗೆಂತು ಜನಿಸಿದೆನೆನಗೆಬೆಸಸೆಂದ ॥೪೮॥ ಮಗನೆ ರಾಯರ ವಳಕೆ ನಿನ್ನನು । ಮಗುವ ನರಿದರಿದೆಂತು ಕಳುಹುವ । ಬಗೆಯ ತಹನೈ ಭೀಮ ಪೇಳ್ ತಿಶುವಿಂಗೆ ಬುದ್ಧಿಯನು ॥ ಅಗಣಿತದ ರಿಪುಕಟಕವೋರೆಯು । ಪಿಗಡರಿದಿರಿಗೆ ಕಳುಹಲಾರೆನು । ಮಗೆಯ ಗೆಲುವುದು ನಿಲಲಿ ಧರಣಿಯುನೊಲ್ಲೆ ನಾನೆಂದ ॥೪೯॥ ಏಕೆ ನಿಮಗಿದಿರಾವವೈರಿಯು । ನೂಕುವೆನು ವೀಳೆಯುವ ಕೊಡು ನೀ । ಕಾಕಬಳಸುವ ಹಿರಿದ ಗಳಹುವೊಡೆಮಗೆ ತಾನೆನುತ ॥ ನೂಕಿನೋಡುವುದನುತ ಕರಿ ಕಮು । ಲಾಕರವ ಕಲಕುವವೊ ಲೀಗಳು । ಲೋಕವನು ಬೆದರಿಸುವಭಾಷೆಯ ಬರಸಿ ಕಳುಹೆಂದ ॥೫೦॥ ಬೇಡ ಮಗನೇ ವೈರಿನಾಯಕ। ವಾಡಿಗಳು ವೆಗ್ಗಳರು ನಿನ್ನನು । ಬೇಡಿಕೊಂಬೆನು ಕಳುಹಲಾರೆನು ನಿನಗೆ ತೀರುವುದೆ ॥ ನೋಡ ನೋಡಲು ಕೊಲುವವಾರಿಯು । ಕೇಡನಾನಿದ ಕಾಣಲಾರೆನು । ಕಾಡದಿಹುದೈಕಂದ ನೀನೆನುತಿರ್ದನಾ ಭೀಮ ॥೫೧॥ ಮುಡಿಯ ಸಂತೈಸುತ್ತ ಪಾರ್ಥನ । ಮಡದಿ ಹರಿತಂದಳು ಕುಮಾರನ । ಹಿಡಿದು ಬಿ ಗಿಯಪ್ಪಿದಳು ಮರಣವ ನೆನೆವರೇ ಮಗನೆ ॥ ಮಿಡುಕಲಮ್ಮರು ಹಿರಿಯತಂದೆಯು । ರೆಡಬಳಿಗವೋಹ ರಕೆ ಬಯಸದೆ । ಕಡುಮನದ ಕಾತರಿಗತನ ಬೇಡೆಂದಳಾಜನನಿ ॥೫೨॥ ತಡೆಯಲಹುದೇ ತಾಯೆ ರಿಪು ಗಳ । ತಡೆಗಡಿದು ಸುಖಿಯಾಗು ರಣದ । ಗಳೆಯ ಸುಭಟರ ಜೈಸು ಕಾಳಗದೊಳಗೆ ನೀನೆಂದು । ಹಿಡಿದಛಲವನು ಗೆಲಿದು ಜಯಸಿರಿ । ಗೊಡೆಯನಾಗೆಂದೆನ್ನ ಹರಸದೆ । ಯೆಡೆಯೊಗುವರೇ ತಾಯೆ ನೀನೆನುತಿರ್ದನಭಿಮನ್ಯು ॥೫೩॥ ಕಲಕುವೆನು ಭಟಸಾಗರವನಂ । ಡಲೆವೆನಹಿತಕುಮಾರಶತಕದ । ತಲೆ ಯನರಿವೆನು ಸುರರುಘೋಯೆನೆ ಬೀದಿವರಿವರಿದು ॥ ಗೆಲವಸೂರೆಯ ಕೊಂಬೆನಿಂದಿನ । ಬಲವ ನಾ ಮ ನ್ನಿಸಿದೆನಾದೊಡೆ । ಫಲುಗುಣಂಗೆ ನಿಮಗೆಂತು ಜನಿಸಿದೆ ತಾನು ಹೇಳೆಂದ ॥೫೪॥ ತುಡುಕಿ ವಜ್ರವ ವಾಸವನು ತನ್ನೊಡನೆ ಸಮರಕೆ ಬರಲಿ ಮೇಣ್ ಕೆಂ। ಗೊಡಲಿಗೊರೆವನು ಖಾತಿಯಲಿ ಯಿದಿರಾಗಿ ಹ ರಿತರಲಿ ॥ ಕಡಲೊಳೊರಗುವಕೃಷ್ಣನರ್ಜುನ । ನೊಡನೆ ಸಮರಕೆ ಬರಲಿ ಗೆಲುವೆನು । ಹಡೆಯದಿ ರ್ದೊಡೆ ನಿನ್ನ ಮಗನೇ ತನ್ನ ಕಳುಹೆಂದ ॥೫೫॥ ಸುಳಿಯಬಹುದಂಬುಧಿಯ ನಡುವಣ । ಸುಳಿಯೊಳೇ ಸಂವರ್ತಕನ ಕಣ । ನೊಳಗೆ ಸುಳಿಯಲು ಬಹುದು ಮೃತ್ಯುವಿನಣಲ ಹೊಳಲೊಳಗೆ ॥ ಹೊಳಕಬ ಹುದಹಿಪತಿಯ ಮಣಿವಂ । ಡಲದೊಳಾನಲು ಒಹುದು ಕಾಣೆನು । ಗೆಲುವಹದನನು ನಮಗೆ ಪದ್ಮ ವ್ಯೂಹಭೇದನವ ॥೫೬॥ ಬಿಡು ಮರೀಚಿಯತೊರೆಗೆ ಹರುಗೋ । ಲಿಡುವರುಂಟೇ ಲೆಪ್ಪದುರಗನ । ಹಿ ಡಿವರೇ ಕೈಗರುಡಮತ ಮತಿಚಪಳನೆನ್ನದಿರು ॥ ಕೊಡನಮಗನ ಕುಮಂತ್ರದೊಡ್ಡಿನ । ಕಡಿತಕಾನಂ ಜವೆನೆ ವೆಗ್ಗಳ । ನುಡಿಯಲೊಮ್ಮೆನು ತನ್ನನೀಗಳೆ ಬಿಟ್ಟು ನೋಡೆಂದ ॥೫೭॥ ಕಂದವೈರಿಯವ್ಯೂಹ ಸಮದಳ । ವೆಂದುದಲ್ಲದರೊಳಗೆ ಕೃಪಗುರು । ನಂದನರು ರಾಧೇಯ ಭೂರಿಶ್ರವಜಯದ್ರಥರು ॥ ಇಂದುಧರನಡಹಾಯ್ದೊಡ್ಡೊಮಗೆ । ಹಿಂನುಮುಂದೆನಿಸುವರ ನೀ ಗೆಲು । ವಂದವೇನೈ ಸಮರವಿ

ದು ಸಾಮಾನ್ಯವಲ್ಲೆಂದ ॥೩೮॥ ಗಾಳಿಬೆಮರುವವುಂಟೆ ವಹ್ನಿ । ಜ್ವಾಲೆ ಹಿಮಕಂಜುವುದೆ ಮಂಜಿಗೆ । ಮೇಲುಗಾಳಗವುಂಟೆ ಬಲುಬೇಸಗೆಯ ಬಿಸಿಲೊಳಗೆ ॥ ಬಾಲನಿವನೇನೆಂದವಜ್ಞೆಯ । ತಾಳಲಾಗದು ಬೊಪ್ಪ ನಿಮ್ಮಡಿ । ಯಾಲಿಗೌತಣವಿಕ್ಕಿ ತೋರುವೆನೊರೆಸಿ ರಿಪುಬಲಪ ॥೩೯॥ ಅಹುದು ಮಗನೆ ಸಮಗ್ರಬಲ ನೀ । ನಹೆ ನಿಧಾನಿಸಲಿಂದು ಪವನಜ । ನಹಮ ಮುರಿದರು ಕಾಯ್ದು ಬಿಟ್ಟರು ನಕುಲಸಾತ್ಯಕಿಯ ॥ ಸಹಸಿದ್ರುಪದವಿರಾಟರುಗಳು । ವ್ಯೂಹವಮುರಿದರು ವಿಜಯಗರ್ವಿತ। ರಿಹಬಲವ ನೀನೊಬ್ಬನೇ ಸಾಧಿಸುವುದರಿದೆಂದ ॥೪೦॥ ಧರಣಿಪತಿ ಕೇಳುಳಿದ ಪುಷ್ಪದ । ಪರಿಮಳವು ಫಲಿಸಿದೊಡೆ ಸಂಪಗೆ । ಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ ॥ ಅರಿಭಟರು ಭೀಮಾದಿಗಳ ಗೆಲಿ । ದ್ದಿರಲಿ ಹೊಲ್ಲೆಯವೇನು ಘನಸಂ । ಗರದೊಳಗೆ ನಮ್ಮೊಡನೆ ತೊಡಕಿದೊಡರಿಯಬಹುದೆಂದ ॥೪೧॥ ಕಯ್ದುಕಾರರ ಬಿಗುಹು ಘನನೀ । ಹೊಯ್ದುವೊದಲಲಿ ಬಿಡಿಸು ಬಳಿಕಾ । ಮೆಯ್ದಿ ನಿನ್ನನು ಕೂಡಿಕೊಂಬೆವು ಹೊಕ್ಕು ಬಳಿಸಲಿಸಿ ॥ ಎಯ್ದಿಹೊರೆಯಲಿ ಹೂಣೆಹೊಗದಿರು । ಮೆಯ್ದೆಗೆದು ಕಾದುವುದು ಜಯಸಿರಿ । ಗಯ್ದಿತನ ನಿನ್ನಿಂದ ಮೆರೆವುದು ಮಗನೆ ಕೇಳೆಂದ ॥ ಕೆತ್ತುಕೊಂಡರೆ ಬಿಸುಡುವೆನು ರಥವೆತ್ತಲುರುಬಿದೊಡತ್ತ ಕೊಳನಲಿ । ಮತ್ತಗಜ ತುಳಿವಂತೆ ಕದಡುವೆ ವೈರಿವಾಹಿನಿಯ ॥ ಹೊತ್ತಿಹೊಗುವಪರಾಕ್ರಮಾಗ್ನಿಯ । ತುತ್ತು ಪದ್ಮವ್ಯೂಹ ದೇವರು । ಚಿತ್ತವಿಸುವುದು ಹೊತ್ತು ನೂಕದೆ ತನ್ನ ಕಳುಹೆಂದ ॥೪೨॥ ಶರನಿಧಿಯ ವಡಬಾನಳನ ದ । ಳ್ಳುರಿಯ ವರ್ಮವ ತಿವಿವತುಂಬಿಯ । ಮರಳುದಲೆಯುಂಟಾದೊಡದು ಭವಭವದ ಪುಣ್ಯಫಲಾ ॥ ಅರಿಬಲವನೀಖಂಡಿಗಳೆ ಮೋ । ಹರಸಹಿತ ತಾ ಬಹೆನು ನಡೆಯೆಂ । ದರಸನಭಿಮನ್ಯುವಿಗೆ ನೇಮವ ಕೊಟ್ಟನಾಹವಕೆ ॥೪೩॥ ಇಂದುಹರಸಿಯೆಕಳುಹುವುದು ಬೇ। ಡೆಂದೊಡೆಯು ರಿಪುಬಲದಸುಭಟರ। ಕೊಂದೊಡಲ್ಲದೆ ಮಾಣೆನಾದೊಡೆ ನಿನ್ನ ಮೇಲಾಣೆ ॥ ಎಂದು ಪಾದಕ್ಕೆರಗಿ ಭೀಮನ । ವಂದಿಸುತ ಸಹದೇವನಕುಲರಿ । ಗಿಂದುಮುಖಿಯರಿಗೆರಗಿ ನೇಮವ ಕೊಂಡು ತಾ ನಿಂದ ॥೪೪॥ ಶಿವಶಿವಾ ಶಿಶುವಿವನು ರಿಪುಗಳು । ಜವನ ಜೂಜೆನಿಸುವಮಹಾರಥ । ನಿವಹಕೊಬ್ಬಗೆಗಡ ಸಮಾಹಿತವಲ್ಲ ಸಮರಂಗ ॥ ಅವನಿಪತಿ ನಿರ್ದಯನಲಾ ಕಂ । ಡೆವೆಕುಮಾರನನಿಕ್ಕಿ ಬಹರಾ । ಜ್ಯವನು ಸುಡುಸುಡುದೇತಕೆಂದುದು ನಿಖಿಳಪರಿವಾರ ॥೪೫॥ ಲಲಿತಚಂದ್ರಕೆಯೊಡನೆ ದಾವಾ । ನಳನ ಖಾಡಾಖಾಡಿಸುರಲತೆ । ಯೆಳೆಯ ಕುಡಿಮುರಿದೊತ್ತಲಾಪುವವಜ್ರಧಾರೆಯಲಿ ॥ ನಳಿನನಾಳವು ಗಜದ ಕೈಯೊಡ । ನಳವಿಗೊಡಲಂತರವೆ ಪಾಪಿಗ । ಳೆಳೆಮಗನ ಕಳುಹಿದರು ಕಾಳಗಕೆಂದುದಮರಗಣ ॥೪೬॥ ಬಿಗಿದು ಗಂಡುಡಿಗೆಯನು ಹೊನ್ನಾ । ಯುಗದೆ ಹೊಳೆವಕಠಾರಿಯನು ಮೊನೆ। ಮಗುಚಿಸಾಧುಜವಾಜಿಕತ್ತುರಿಗಂದಲೇಪದಲಿ ॥ ಮುಖಮುಖಿಪಹೊಂದೊಡರಹೀರಾ । ಳಿಗಳನೊಪ್ಪಂಬಡೆದುಕಿರುನಗೆ । ಮೊಗದಸೊಂಪಿನೊಳಾಹವಕ್ಕನುವಾದನಭಿಮನ್ಯು ॥೪೭॥ ಉಲಿವಘಂಟೆಯ ಕುಣಿವತುರಗಾ । ವಳಿಯ ಗಗನದಲಗಿವಬಿರುದಿನ । ಪಳಹರದ ತೆತ್ತಿಸಿದಕನಕದ ಚೌಕಸತ್ತಿಗೆಯ ॥ ಘುಳುಘುಳಿಪಚೀತ್ಕಾರಕೋಳಾ । ಹಳದ ಸೂತನ ರೇಖೆಯಲಿ ಭಟ । ಕುಲಲಲಾಮನ ತೇರು ಬಂದುದು ತೀವಿದಸ್ತ್ರದಲಿ ॥೪೮॥ ತುರುಗತತಿಗಭಿನಮಿಸಿ ರಥವನು । ತಿರುಗಿ ಬಲವಂದೇರಿ ಚಾಪಕೆ । ಕರವನೊಸಲನುಚಾಚಿ ಭಾರಿಯಭುಜವನೊದವಿಸುತ ॥ ಅರಸನನು ವಂದಿಸುತ ಭೀಮನ

ಹರಕೆಯನು ಕೈಕೊಳುತ ನಕುಲಾ । ಧ್ಯರಿಗೆ ಪೊಡವಂಟೇರಿದನು ನವರತ್ನಮಯರಥವ ॥೨೦॥ ಸೂಳವಿಸಿದವುಲಗ್ಗೆಯಲಿನಿ । ಸ್ಸಾಳತತಿ ಸಿಡಿಲೊದರುವವೊಲು । ಬ್ಬಾಳುಗಳು ಕೈನೆಗಹಿ ಕೈವಾರಿಸುತ ಗಮಕಿಗಳು ॥ ಕಾಲಹೆಗ್ಗಾಳೆಗಳು ರಿಪುಭೂ । ಪಾಲಕರ ಬೈಬೈದು ಗಜರಿದ । ವಾಳುತನದಾಳಾಪ ಬೀರಿತು ಬೆಗಡನಹಿತರಿಗೆ ॥೨೧॥ ಒಡನೆ ಕಳುಹುತ ಬಂದ ತಾನೆಲ । ದೊಡೆಯನನುಜರುಸಹಿತ ತನಯನ । ಬಿಡುವನಿಯಸಾಲಿನಲಿ ನನೆವುತ ಬಂದು ಕಿರಿದೆಡೆಯ ॥ ನಡೆ ವಿಜಯನಾಗೆಂದು ತನುವನು ತಡವಿದನು ಕಡುಮೋಹದೆಡೆಯಲಿ । ಘುಡಿಘುಡಿಸಿ ಶಿಶು ಬೀಳುಕೊಂಡನು ಪಿತೃಚತುಷ್ಟಯವ ॥೨೨॥ ಎಲೆಕುಮಾರಕ ಹರಕುಮಾರಂ । ಗಳವಿಯಲಿ ನಿಲಲರಿದು ಕೊರಳಿನ । ಬಲುಹನರಿಯದೆ ಗರಿಯ ಹೊರಲಂಘೈಸುವರೆ ಭಟರು ॥ ಬಲುಗಡಿಯನೀದ್ರೋಣನೀಕೃಪ । ನಲಘುಭುಜಬಲಭಾನುಸುತನ । ಗ್ಗಳೆಯಸ್ಯೆಂಧವನೆಂದು ಸಾರಥಿ ತೂಗಿದನು ಶಿರವ ॥೨೩॥ ಮರುಳುಸಾರಥಿ ನಮ್ಮನಾವುಪ। ಚರಿಸಕೊಳಲಾಗದುಕಣಾ ನೀ । ನರಿಯೆ ನಂಮಂತರವನಾವಿನ್ನೆಂದು ಫಲವೇನು ॥ ಗುರುತನುಜನೇ ಕೃಪನೆ ದ್ರೋಣನೆ । ತರಣಿಸುತನೇ ಸ್ಯೆಂಧವನೆ ಹುಲು । ನರರು ಗಣ್ಯಾವೆ ಕೇಳು ಭಾಷೆಯನೆಂದನಭಿಮನ್ಯು ॥೨೪॥ ಬವರವಾದೊಡೆ ಹರನ ವದನಕೆ । ಬೆವರ ತಹೆನವಗಡಿಸಿದೊಡೆವಾ । ಸವನ ಸದೆವೆನು ಹೊಕ್ಕೊಡಹುದೆನಿಸುವೆನು ಭಾರ್ಗವನ ॥ ಜವನ ಜವಗೆಡಿಸುವೆನು ಸಾಕಿ । ನ್ನವರಿವರಲೇನರ್ಜುನನುಮಾ । ಧವನು ಮಲೆತೊಡೆ ಗೆಲುವೆನಂಜದೆ ರಥವ ಹರಿಸೆಂದ ॥೨೫॥ ಬಾಲನೆನ್ನದಿರೆನುತ ರಿಪುಭಟ । ಭಾಳಲೋಚನನೆನಿಸುವರ್ಜುನ । ಬಾಳುಗೆನುತುದ್ದಂಡಕೋದಂಡವನು ಜೇವಡೆಯೆ ॥ ಮೇಲುಗಜವಲ್ಲಾಡಿದವು ಕೊರ । ಳೋಳಿಗೆದರಲು ಕುಸಿದನಹಿ ಪಾ । ತಾಳ ಗೂಳೆಯದೆಗೆಯಲಳ್ಳಿರಿಯಿತ್ತುಬಿಲುರಭಸ ॥೨೬॥ ಎನಲು ಸಾರಥಿ ಹಿಗ್ಗಿ ವಿಜಯನ । ತನಯನನು ಕೊಂಡಾಡಿ ನಿನ್ನಯ ಮನವ ನೋಡಲು ನುಡಿದೆನಲ್ಲದೆ ಮೂರುಲೋಕದಲಿ ॥ ನಿನಗೆ ಸರಿಯಹವೀರನಾವವ । ನೆನುತ ರಥವನು ನಡಿಸೆ ನರನಂ । ದನನು ಚಾಪಕೆ ನಮಿಸಿ ನೆಗಹಿದು ತಿರುವನೇರಿಸಿದ ॥೨೭॥ ಸುರನದಿಗೆ ಶಿವನಾಯ್ತು ಮಕರಾ । ಕರಕೆ ಕಲಶಜನಾಯ್ತು ತರಣಿಗೆ । ಅರಿವಿಧುಂತುದವಾಯ್ತುರಥಪದ ತಳಿತುದವನಿಯಲಿ ॥ ಅರರೆ ಸತ್ವರಜಸ್ತಮಂಗಳೊ । ಳೆರಡುಗುಣವಡಗಿತು ರಜೋಗುಣ । ದುರುಳಿಯಾದುದು ಲೋಕವನೆ ಗಾಧಿಸಿತು ಘನಧೂಳಿ ॥೨೮॥ ಆರರಥವಿದು ಸ್ಯೆನ್ಯಪಾರಾ । ವಾರವಿದಕಂಘೈಸುವವ ತ್ರಿಪು । ರಾರಿಯೋ ವೇಣಾತ್ರಿವಿಕ್ರಮನೋ ಸುರೇಶ್ವರನೋ॥ ಧೀರನಹನೋ ಪೂತು ರಣದದೊ। ತಾರನಿವನಾರೆನುತ ತಿರುಗಿತು । ತೋರಹತ್ತರು ತಾಗಿದರು ಸೌಬಲಜಯದ್ರಥರು ॥೨೯॥ ಫಡಜಯದ್ರಥ ಹೋಗು ಹೋಗಳ । ವಡಿಕೆಯಲ್ಲಿದುಸಾರು ಸೌಬಲ । ಮಿಡುಕಿದೊಡೆ ಮರುಳಹಿರ ಲೇಸಲ್ಲೆಮ್ಮೊಳತಿಮಥನ ॥ ತುಡುಕಿದೊಡೆ ಕೈಬೇವುವೀಬಲು । ಗಡಿಯತನ ಬಯಲಹುದೆನುತ ತಡೆ । ಗಡಿದು ಬಿಸುಟನು ಭಟನ ಠೆಕ್ಕೆಯ ಧನುವ ಸಾರಥಿಯ ॥೩೦॥ ರಥ ಮುರಿಯೆ ಮನನೊಂದು ಸುಮಹಾ । ರಥರು ಹಿಮ್ಮೆಟ್ಟಿದರು ಬಳಿಕತಿ । ರಥಭಯಂಕರನೊಡೆದು ಪೊಕ್ಕನು ವೈರಿಮೋಹರವ ॥ ಮಥನದಲಿ ಮುರಿದೊದೆವಶೈಲ । ವ್ಯಥಿತಸಾಗರದಂತೆ ಬಿರಿದುವು । ರಥನಿಕರ ಕಾಲಾಳುಕುದುರೆಗಳೊಂದುನಿಮಿಷದಲಿ ॥೩೧॥ ರಾಯಕುವರನಿಭಾಡ ಬಂದನು । ರಾಯಕಟಕಾರಣ್ಯದಾವನು । ರಾಯಸೇನಾಂಭೋಧಿವಡಬಹ್ನಿ

ಲನಿದೆಬಂದ ॥ ರಾಯರಣುಗರು ತುಳಿವಕೌರವ । ರಾಯಜೀವಘರಟ್ಟ ಬಂದನು । ಸಾಯದಿರಿ ಸಾರೆಂದು ಸಾರಿದವಹಿತಕಹಳೆಗಳು ॥೮೨॥ ಹಾಳಿಹಸುಗೆಯನರಿಯದದಟನು । ಹೇಳುವೊಡೆ ಹದಿನಾಲ್ಕು ವರುಷದ। ಬಾಲನೈದಿದನೆಸರ್ವಚಕ್ರವ್ಯೂಹವೋಹರವ ॥ ಜಾಳಿಸಿತು ರಿಪುಕಟಕ ಸುಮನೋ। ಭಾಳಲೋಚನನೆನಿಸುವರ್ಜನ । ಬಾಳುಗೆನುತುದ್ದಂಡಕೋದಂಡವನು ಜೇವಡೆದ ॥೮೩॥ ಒಡೆದುದವನಿಯೆಜಾಂಡಮಂಡಲ । ಗಡಗಡನೆ ನಡುಗಿತ್ತು ಬಿಲುಜೇ । ವಡೆಯೆ ದನಿ ಹಬ್ಬಿದುದು ಮಾರ್ಬಲದವರ ಕಿವಿಗಡಲು ॥ ಅಡಸಿ ಕಣೆಗಳ ಕವಿಸಿದನು ಮುಂ । ಗುಡಿಯ ಮುರಿವಿನೊಳರಿಸಮೂಹವ । ಕಡಿದು ಹರಹಿದ ಕಲಕಿ ಹೊಕ್ಕನು ಮೊದಲವಳಯವನು ॥೮೪॥ ಬಾಗಿಲಲಿ ಸೈಂಧವನ ಸೇನಾ । ಸಾಗರವ ಮುಕ್ಕುಳಿಸಿ ತಾಕ್ಕೆ । ಲಾಗು ಮಿಗೆ ಸರಳೆರಡರಿಂದೆಚ್ಚನು ಜಯದ್ರಥನ ॥ ತೂಗಿ ತೆಗೆತೆಗೆದೆಚ್ಚು ಗರುಡಿಯ । ಲಾಗುಕಾರನ ರಥವ ಮುರಿದನು । ಮೇಗಣಮರರು ಪಾಯ್ಕೆನಲು ಕಲಕಿದನು ಪರಬಲವ ॥೮೫॥

ಅಂತು ಸಂಧಿ ೫ ಕ್ಕಂ ಪದ ೩೭೮ ಕ್ಕಂ ಮಂಗಳಂ.



## ಆರನೆಯ ಸಂಧಿ.

॥ ಸೂಚನೆ ॥ ವೀರರಿಪುಕೋಲಾಹಳನು ಮದ । ವಾರಣನು ಫಲುಗುಣನ ತನಯನು । ದಾರಚಕ್ರವ್ಯೂಹದಲಿ ಗೆಲಿದನು ಕುಮಾರಕರ॥

॥ ಪದ ॥ ಅವಧರಿಸು ಧೃತರಾಷ್ಟ್ರನೃಪ ಸೈಂ । ಧವನ ಗೆಲಿದಾವ್ಯೂಹಭೇದಾ । ಹವವಿಜಯ ವಿಜಯಾತ್ಮಕನ ಕೌತುಕರಣೋದಯವ ॥ ತಿವಿದು ತರುಬುವರಥಪದಾತಿಯ । ಗವಿಯ ಗರುವತುರಂಗಗಳ ಬಲು ಜವದ ಗಜರಥಕೂಟಕೋಟಿಯ ಹೊದರ ಹೊಸಮಳೆಯ ॥೧॥ ಹರಿಯಚಕ್ರವರೂಥಚಕ್ರದೊ । ಳುರುವಣಿಪತೇಜಿಗಳ ಕಡುಹಿನ । ಖುರದಹೊಯ್ಲಿನಲಿಳೆಯಪವನನ ಗರಿಯ ಗಾಳಿಯಲಿ ॥ ಹರನ ನಯನಜ್ವಾಲೆ ಪಾರ್ಥನ । ಸರಳಕಿಡಿ ಪಲ್ಲಟಿಸಿತೆನೆ ಸಂ । ಗರದೊಳಗೆ ಸೈವರಿದು ಸದೆದನು ಸಕಲಸೈನಿಕವ ॥೨॥ ಮಿಕ್ಕು ನೂಕಿತು ಕುದುರೆಕಾರರ । ತೆಕ್ಕೆ ಕೆಡೆದುದು ಸಂದಣಿಸಿ ಕೈ । ಯಿಕ್ಕಿದಾನೆಯನೇನನೆಂಬೆನು ಕಾಣೆನಳವಿಯಲಿ ॥ ಹೊಕ್ಕು ಹೊಗಿಸುವರಥತುರಗ ಸಾ । ಲಕ್ಕಜವನಿಲಿಸಿದನು ವೀರನ । ಮಕ್ಕಳಾಟಿಕೆ ಮಾರಿಯಾದುದು ವೈರಿರಾಯರಿಗೆ ॥೩॥ ಕದಳಿಯೊಳು ಮದದಾನೆ ಹೊಕ್ಕಂ । ದದಲಿ ಹೆಚ್ಚಿದಚಾತುರಂಗದ । ಮೆದೆಯಮೆಟ್ಟಿದುಹೂಣೆಹೊಕ್ಕನುಥಟ್ಟನೊಡೆಹಾಯ್ದು ॥ ಇದಿರಲೆಚ್ಚನುಸಂಮುಖದಲಿಹ । ಕದನಗಲಿಗಳಸೀಳಿದನು ಕಾ । ಳಗವು ಕಾಲನ ಲೀಲೆಯಾಯಿತು ವಿಷಮುಸಮರಂಗ ॥೪॥ ಜೋಡೊಡೆದು ಥಟ್ಟುಗಿದು ಬೆನ್ನಿಲಿ । ಮೂಡಲದಟರ ಸೀಳಿದನು ಖುರ । ಜೋಡುಹುಡಿಹುಡಿಯಾಗೆ ತೇಜಿಯ ಥಟ್ಟು ಖಂಡಿಸಿದ ॥ ನೋಡಲಮ್ಮುವರಿಲ್ಲ ಮಿಗೆ ಕೈ । ಮಾಡಲಮ್ಮುವರಿಲ್ಲ ಬಲವ । ಲ್ಲಾಡಿತೊಬ್ಬನೆ ಹಸುಳೆ ಹೊಕ್ಕನು ವೈರಿವೋಹರವ ॥೫॥ ಆವವಹಿಲದೊಳಂಬ ತೊಡಚುವ । ನಾವಬೇಗದಲಿದಿರನೆಸುವನ । ದಾವನಿರುತದಲೊಡ್ಡುವನೊ ಕೊರಳಿಂಗೆ ಕೋಲುಗಳ ॥ ಆವ

ಧೃಢತೆಯ ದೃಷ್ಟಿಪಾಳಿವಿ । ದಾವಗರುಡಿಯಶ್ರಮವೆನುತ ದಿಪಿ । ಜಾವಳಿಗಳುಲಿಯಲು ವಿಭಾಡಿಸಿದನು ರಿಪುವ್ರಜವ ॥೬॥ ಅಕಟ ಶಿಶುವೋ ನಿಲ್ಲಿ ನೀವ್ನಾ । ಯಕರು ತೆಗೆಯಲಿ ಧರ್ಮಗಾಳಗ । ಸುಕರ ಸುಕುಮಾರಕರ ಬಿಡುಬಿಡು ಲಕ್ಷಣಾದಿಗಳ ॥ ಸಕಲಕುವರರ ಕಪಿಸೆನಲು ಮಾ । ಣಿಕದ ಮಕುಟದ ತಲೆಯ ಗರುವರು । ವಿಕಳರ್ಕ್ಕೆದರೆತ್ತಲನುವಾಗೆನುತ ಮೂದಲಿಸಿ ॥೭॥ ಮಣಿವಮೋಹರ ಸಂಮುಖಕೆ ಸಂ । ದಣಿಸಿ ಬಿಟ್ಟುದು ರಾಯಕುವರರ । ಹಣಿದವನುತಾಹೊಯ್ದನರೆಯಟ್ಟಿದ ಮಹಾರಥರ ॥ ಸೆಣಸು ಸವಿಯಾಯ್ತೆನುತ ಹಗೆಯರು । ಕೆಣಕಲಮ್ಮುವರಿಲ್ಲ ಬಿರುದರ । ಹೆಣನ ರಿಂಗಣಗುಣಿಸಿದನು ರಿಪುಬಲಭಯಂಕರನು ॥೮॥ ಎಡದಲೌಕುವರಾವೃತರ ಸಂ । ಗಡವನೆಚ್ಚನು ಸಂಮುಖದಲವ । ಗಡಿಸಿದಿಭಕೋಟಿಗಳ ಕೊಂದನು ಸರಳಸಾರದಲಿ ॥ ಕಡುಗ ಬಲದಲಿ ಹರಿವರಥಿಕರ । ಕೆಡಹಿದನು ಕಾಲಾಳುತೇರಿನ । ಗಡಣ ಹುಡಿಹುಡಿಯೆನಲು ಸಂವರಿಸಿದನು ಪರಬಲವ ॥೯॥ ಕೊಡೆನೆಗೆದವಟ್ಟಿಗಳು ರಕುತದ । ಕಡರೊಳರೆಜೀವದಭಟರು ಬಾ । ಯ್ಬಿಡುತ ತೇಕಾಡಿದುದು ಮುಂಡದ ಹಿಂಡು ಮುಳುಗಾಡೆ ॥ ಅಡಸಿ ನೆಗೆವಾನೆಗಳ ತಲೆಗಳ । ಗಡಣ ಮೆರೆದವು ಮಿಗುವತೇಜಿಯ । ಕಡಿಕುಗಳು ಕುಣಿದಾಡಿದವುಕೆಗ್ಗಡಲ ರಕುತದಲಿ ॥೧೦॥ ಉರವಣಿಸಿದನು ಪಾರ್ಥಭಟನ । ಬ್ಬರಿಸಿ ಖತಿಯಲಿ ನಿಖಿಳಮನ್ಯಂ । ತರದ ಕಡೆಯಲಿ ನೆಲನನದ್ದುವಕಡಲ ಕಡುಹೆನಲಿ ॥ ಸರಳ ಕವಿದವುಸತ್ತಿಸೆಲ್ಲಹ । ಪರಶು ಸುಳಿದವು ಕುಂತಮುದ್ಗರ । ಸುರಗಿಹೊಳೆದವು ಕೈದು ಹೇರಿದವಖಿಳದಿಗುತಟವ ॥೧೧॥ ಮೂದಲಿಸಿ ಮುಂಚಿದವು ಸುಂಟಗೆ । ಗೋಯ್ದು ಹರಿದವುಕರಗಳೇರಿನ । ಬಾದಣಂಗಳನುಸುಳಿದವು ಸಮಜೋಡನೊಡಸೀಳಿ ॥ ತೋದು ನೆತ್ತರ ನೊರೆಯ ಸುಳಿಯೊಳು । ಸಾದು ನಲಿಪಾಡಿದವು ಕಳನೊಳು । ಬೀದಿವರಿದವು ಬಿಲ್ಲುಬಿಲ್ಲಿಗೆ ಬೋಳೆಯಂಬುಗಳು ॥ ತೊಲಗಿ ಕಾಲಾಳು ಮೇಲಾ । ಳಳವಿಗುಡಲಿ ಮಹಾರಥರು ಕೈ । ಕೊಳಲಿ ಜೋಧರು ದಿಟ್ಟರಾದೊಡೆ ಕಪಿಸಿ ಕರಿಘಟೆಯ ॥ ಕೆಲದದೊರೆಗಳು ಬರಲಿ ಮಾರಿದ । ತಲೆಯಭಂಡರು ಹೊತ್ತಿರದೆ ಕೈ । ಕೊಳಲಿ ಕರ್ಣಾದಿಗಳೆನುತ ತೆಗೆದೆಚ್ಚನಭಿಮನ್ಯು ॥೧೨॥ ಕಾರಗಲಿಸಿದ ಪಮವು ರಾಯಕು । ಮಾರಕಂಠೀರವನು ರಿಪುಪರಿ । ವಾರವನು ನಡೆಗೊಳಿಸಿದನು ಯಮರಾಜನಾಲಯಕೆ ॥ ಮಾರಮೊಗದಡದೆರೆದಳೋ ಕೈ । ವಾರವೇ ತರುವಲಿಗೆದೆತ್ತಣ । ವೀರವೋ ಶಿವಶಿವಯೆನುತ ಬೆರಗಾದುದಮರಗಣ ॥೧೩॥ ಕಲಿಗಳೆಯ್ದಿದರೊಡನೆ ತೊಡೆಸಂ । ಕಲೆಯ ತೊಲಗದ ಕಂಭದುಗ್ಗಡ । ಲಳಿಯಗಜದಲ್ಲಣದ ಶರಭನ ವೃಷಭಮೊದಲಾದ ॥ ಹುಲಿಯಕೇರಿತಿಮುಖದ ವ್ಯಾಘ್ರನ । ಬಿಳಿಯಚೌರಿಯ ಬಿರುದುಗಳ ಮುಂ । ದಲೆಯ ಸುಭಟರು ಬಂದು ತಾಗಿತು ಪಾರ್ಥನಂದನನ ॥೧೪॥ ದೊರೆಯ ಸುಕುಮಾರಕನು ಹಲಬರ । ಶಿರವನರಿದನು ಪಾಯದಳವನು । ಸರಳ ಮೊನೆಯಲಿ ಸವರಿದನು ಮುಂಕೊಂಡಹೂಣಿಗರ ॥ ಒರಸಿದನು ಮಾಸಾಳಮೊತ್ತವ । ಕೊರಳನರಿದನು ರಣದಭಾಷೆಯ । ಬಿರುದರನು ಮುಂಕೊಂಡು ಕೊಂದನು ರಣದೊಳಭಿಮನ್ಯು ॥ ೧೫ ॥ ಕರಿಘಟೆಯ ಕೆದರಿದನು ಹಯಮೋ । ಹರವ ಜರಹಿದರಣಕೆ ಹರಿತಹ । ವರರಥವ ಹುಡಿಗುಟ್ಟಿದನು ಕೆಡಹಿದನು ಕಾಲಾಳ ॥ ಹುರಿಯೊಡೆದು ಮೈದೆಗೆದು ಸಲೆ ಕೈ । ಮರೆದು ಕೈದುವನಿಳುಹಿ ಪಡೆ ಮುಖದಿರುಹಲೆಚ್ಚನು ಕೊಚ್ಚಿದನು ಕೌರವಚತುರ್ಬಲವ ॥೧೬॥ ತಳಿತಹೊಗರಿನ ಬಾಯಧಾರೆಯ । ಹೊಳಹುಗಳ ಹೊಸ

ಮನೆಯ ತಳಪದ ಬೆಳಗುಗಳ ಬಿಟ್ಟೇರಧಾರೆಯ ಬಳ್ಳಿಮಿಂಚುಗಳ ॥ ಉಳಿಯಹಂಗನ ಗರಿಯ ಬಿಗು ಹಿನ । ಹಿಳುಕುಗಳ ಹೊಗರಂಬು ತಿವಿದವು । ತುಳಿಕಿದವು ತೂರಿದವು ಕೆದರಿದವಹಿತಬಲದಸುವ ॥೧೮॥ ಆಳವಿಗೆಡೆ ಧುಂಮಿಕ್ಕಿ ರಥದವ । ರಿಳಿಯಬಿದ್ದರು ಭಯದಿ ತೇಜಿಯ । ನಿಳಿದು ರಾವ್ತರು ಕರವ ಮು ಗಿದರು ಕೊರಳ ಸಲಹೆನುತ ॥ ಗುಳವ ಸಡಿಲಿಸಿ ಹಾಯ್ದು ಜೋಡಾ । ವಳಿಗಳಿಳಿದುದು ಕೈಯ ಕೈದು ವ । ನಿಳುಹಿಬಾಯಲಿ ಬೆರಳನಿಟ್ಟರು ನಿಖಿಳಪರಿವಾರ ॥೧೯॥ ಎಸಳೆಸಳ ಮೋಹರದ ಸಂದಣಿ । ಯುಸುರನುಳಿದುದು ಕೇಸರಾಕೃತಿ । ಯಸುರ ಸುಭಟರು ಪಥಿಕರಾಯಿತು ಗಗನಮಾರ್ಗದಲಿ ॥ ನು ಸುಳಿದರು ಕರ್ಣಿಕೆಯಕಾಹಿನ । ವಸುಮತೀಶರು ರಾಯನರನೆಲೆ । ದೆಸೆಗೆಡಲು ಮೊಳಗಿದನುಪಾ ರ್ಥಕುಮಾರನಳವಿಯಲಿ ॥ ೨೦ ॥ ಜರಿದುದಬುಜವ್ಯೂಹ ನೂಕಿದ । ಕರಿತುರಗಕಾಳಾಳು ರಥಿಕರೆ । ಮರಳುದಲೆ ತಾನಿಲ್ಲ ನೆರೆ ನುಗ್ಗಾಯ್ತು ಕುರುಸೇನೆ ॥ ದೊರೆಗಳಹದ್ರೋಣಾದಿಗಳು ಕೈ । ಮ ರೆದು ಕಳೆದರುಪಾರ್ಥತನಯನ । ಸರಿದೊರೆಗೆ ಪಡಿಯಾವನೆಂದನು ಕೌರವರರಾಯ ॥ ೨೧ ॥ ತಂ ದೆ ಹಡೆಯನೆ ಮಗನನಹುದೋ । ಕಂದಕಲ್ಪಸಹಸ್ರ ನ್ನೊಂತಳು । ಇಂದುಧರನನು ನಿಮ್ಮತಾಯಿ ಸುಭದ್ರೆಯಲ್ಲದೊಡೆ ॥ ಇಂದಿನೀಬಲ ವಿಷಮರಣಜಯ । ದಂದವೀಸೌರಂಭವೀಸರ । ಳಂದವೀ ತೆರಳಿಕೆಯದಾವಂಗೆಂದನವನೀಶ ॥ ೨೨ ॥ ಹುರುಳ ಮರೆದೆನು ಮಗನೆ ಸಾಲದೆ । ಭರತಕುಲದಲಿ ನಿನ್ನ ಬೆಳವಿಗೆ । ಎರಡುಕವಲನ್ವಯಕೆ ಕೊಡದೇ ಸುಗತಿಸಂಪದವ ॥ ಕಿರುಳು ಬೀಳವೆ ತನ್ನ ಬಸು ರಿಂ । ದುರುಳಿದವರಿಂದೇನುಫಲ ಮ । ತ್ಸರವೆ ಪಾರ್ಥ ಕೃತಾರ್ಥನೆಂದನು ಕೌರವರರಾಯ ॥ ೨೩ ॥ ಎನುತ ಬಿಲುದುಡುಕಿದನು ಸೇನಾ । ವನಧಿಗಭಯವನಿತ್ತು ಮರಳುವ । ಜನಪರನು ಜರೆದೆಡಬಲದ ಮನ್ನೆಯರ ಮೂದಲಿಸಿ ॥ ಮೊನೆಗಣೆಯ ತೂಗುತ್ತ ನರನಂ । ದನನ ರಥವನು ತುರುಬಿ ನಿನ್ನ ಯ । ತನಯನಡ್ಡೈಸಿದನು ಕೌರವರಾಯ ಖಾತಿಯಲಿ ॥೨೪॥ ಮಗುವು ನೀ ಕೆಡಬೇಡ ಹೋಗೆನು । ತೆಗಣೆತಾಸ್ತ್ರವ ಸುರಿವುತ್ತೈತರೆ । ನಗುತ ನಿಂದಭಿಮನ್ಯು ನುಡಿದನು ಕೌರವೇಶ್ವರನ ॥ ಮಗುವು ತಾ ನಹೆ ತನ್ನ ಬಾಣಕೆ । ಮಗುವುತನವೇರಿಲ್ಲ ವರೆಅರು । ಹುಗಳ ನಿಮಿಷವು ನಿಂದು ನೋಡೆಂದೆಚ್ಚನಭಿ ಮನ್ಯು ॥೨೫॥ ಎಸಲು ಕಣೆ ಮುಕ್ಕುರಿಕಿದವು ಹೊಸ । ಮಸೆಯ ಧಾರೆಯ ತೋರಕಿಡಿಯಲಿ । ಮು ಸುಕಿತರಸನ ತೇರು ತಳಿತವು ಮೈಯೊಳಂಬುಗಳು ॥ ಬಸಿವರಕುತದ ಜರಿವಜೋಡಿನ । ನಸಿದಗರ್ವದ ನಗ್ಗಿದಾನನ । ದೆಸಕದೊಣಗಿಲಬಾಯ ಭೂಪನ ಕಂಡನಾದ್ರೋಣ ॥೨೬॥ ರಾಯ ಸಿಲ್ಕಿದನಕಟಕಟ ರಾ । ಧೇಯ ನಡೆ ಕೃಪ ಹೋಗು ಮಗನೆ ನಿ । ಜಾಯುಧವ ಹಿಡಿ ಶಲ್ಯ ತಡೆಯದಿರೇಳು ಕೃತವರ್ಮ ॥ ರಾಯನನುಜರು ಕೈದುಗೊಳಿ ರಣ । ದಾಯ ತಪ್ಪಿತು ನೃಪತಿ ಮಾರಿಯ। ಬಾಯ ತುತ್ತಾದನು ಶಿವಾ ಯೆಂದೊರಲಿದನು ದ್ರೋಣ ॥೨೭॥ ಮಾತು ಹಿಂಚಿತು ಮುಂಚಿ ಸುಭಟ। ವ್ರಾತ ಹೊಕ್ಕುದು ಸಿಕ್ಕಿ ದರಸನ । ಭೀತಿಯನು ಬಿಡಿಸಿದರು ಬೀರಿದರಂಬುಗಳಮಳೆಯ ॥ ಸೋತೆವಾವ್ನೀಗೆಲಿದೆ ಕರೆ ನಿ । ಮ್ಮಾತಗಳನೀಭ್ರೂಣಹತ್ಯಾ। ಪಾತಕಕ್ಕಂಜುವೆವೆನುತ ಕೈಕೊಂಡನಾದ್ರೋಣ ॥೨೮॥ ರಾಯನನು ತೊ ಲಗಿಸಿದರಾಕ । ರ್ಣಾಯತಾಸ್ತ್ರರು ರಾಹುವಿನಕಟ । ವಾಯು ಚಂದ್ರನ ಸೆಳವವೋಲರದಾಯ್ತು ಸುಭಟರಿಗೆ ॥ ಸಾಯಕವ ಕೈಕೊಳಿಸಿದನು ವ । ಜ್ರಾಯುಧನ ಮೊಮ್ಮನ ರಥವನಿ। ದಾರ್ಯದಲಿ ಮು

ಧೃಢತೆಯ ದೃಷ್ಟಿಪಾಳೆವಿ । ದಾವೆಗರುಡಿಯಶ್ರಮವೆಸುತ ದಿಪಿ । ಜಾವಳಿಗಳುಲಿಯಲು ವಿಘಾಡಿಸಿದನು ರಿಪುವ್ರಜವ ॥೬॥ ಅಕಟ ಶಿಶುವೋ ನಿಲ್ಲಿ ನೀವ್ರಾ । ಯುಕರು ತೆಗೆಯಲಿ ಧರ್ಮಗಾಳಗ । ಸುಕರ ಸುಕುಮಾರಕರ ಬಿಡುಬಿಡು ಲಕ್ಷಣಾದಿಗಳ ॥ ಸಕಲಕುವರರ ಕಪಿಸೆನಲು ಮಾ । ಣಿಕದ ಮಕುಟದ ತಲೆಯು ಗರುವರು । ವಿಕಳರ್ಕ್ಕಿದರಿತ್ತಲನುವಾಗೆನುತ ಮೂದಲಿಸಿ ॥೭॥ ಮಣಿವಮೋಹರ ಸಂಮುಖಕೆ ಸಂ । ದಣಿಸಿ ಬಿಟ್ಟುದು ರಾಯಕುವರರ । ಹಣಿದವನುತಾಹೊಯ್ದನರೆಯಟ್ಟಿದ ಮಹಾರಥರ ॥ ಸೆಣಸು ಸವಿಯಾಯ್ತೆನುತ ಹಗೆಯರು । ಕೆಣಕಲಮ್ಮುವರಿಲ್ಲ ಬಿರುದರ । ಹೆಣನ ರಿಂಗಣಗುಣಿಸಿದನು ರಿಪುಬಲಭಯಂಕರನು ॥೮॥ ಎಡದಲೌಕುವರಾವುತರ ಪಂ । ಗಡವನೆಚ್ಚನು ಸಂಮುಖದಲವ । ಗಡಿಸಿದಿಭಕೋಟಿಗಳ ಕೊಂದನು ಸರಳಸಾರದಲಿ ॥ ಕಡುಗಿ ಬಲದಲಿ ಹರಿವರಥಿಕರ । ಕೆಡಹಿದನು ಕಾಲಾಳುತೇರಿನ । ಗಡಣ ಹುಡಿಹುಡಿಯೆನಲು ಸಂವರಿಸಿದನು ಪರಬಲವ ॥೯॥ ಕೊಡೆನೆಗೆದವಟ್ಟಿಗಳು ರಕುತದ । ಕಡರೊಳರೆಜೀವದಭಟರು ಬಾ | ಯ್ಬಿಡುತ ತೇಕಾಡಿದುದು ಮುಂಡದ ಹಿಂಡು ಮುಳುಗಾಡೆ ॥ ಆಡಸಿ ನೆಗೆವಾನೆಗಳ ತಲೆಗಳ । ಗಡಣ ಮೆರೆದವು ಮಿಗುವತೇಜಿಯ । ಕಡಿಕುಗಳು ಕುಣಿದಾಡಿದವುಕಿಗ್ಗಡಲ ರಕುತದಲಿ ॥೧೦॥ ಉರವಣಿಸಿದನು ಮತ್ತೆ ಭಟನ । ಬ್ಬರಿಸಿ ಖತಿಯಲಿ ನಿಖಿಳಮನ್ನೆಂ । ತರೆದ ಕಡೆಯಲಿ ನೆಲನನದ್ದುವಕಡಲ ಕಡುಓನಲಿ ॥ ಸರಳ ಕವಿದವುಸತ್ತಿಸೆಲ್ಲಹ । ಪರಶು ಸುಳಿದವು ಕುಂತಮುದ್ಗರ । ಸುರಗಿಹೊಳೆದವು ಕೈದು ಹೇರಿದವಖಿಳದಿಗುತಟವ ॥೧೧॥ ಮೂದಲಿಸಿ ಮುಂಚಿದವು ಸುಂಟಗೆ । ಗೊಯ್ದು ಹರಿದವುಕರಿಗಳೇರಿನ । ಬಾದಣಂಗಳನುಸುಳಿದವು ಸಮಜೋಡ ನೊಡಸೀಳಿ ॥ ತೋದು ನೆತ್ತರ ನೊರೆಯ ಸುಳಿಯೊಳು । ಸಾದು ನಲಿದಾಡಿದವು ಕಳನೊಳು । ಬೀದಿವಡಿದವು ಬಿಲ್ಲುಬಿಲ್ಲಿಗೆ ಬೋಳೆಯಂಬುಗಳು ॥ ತೊಲಗಿತ್ತು ಕಾಲಾಳು ಮೇಲಾ । ಳೆಳವಿಗುಡಲಿ ಮಹಾರಥರು ಕೈ । ಕೊಳಲಿ ಜೋಧರು ಟಟ್ಟರಾದೊಡೆ ಕಪಿಸಿ ಕರಿಘಟೆಯ ॥ ಕೆಲದದೊರೆಗಳು ಬರಲಿ ಮಾಲದ । ತಲೆಯುಭಂಡರು ಹೊತ್ತಿರದೆ ಕೈ । ಕೊಳಲಿ ಕರ್ಣಾದಿಗಳೆನುತ ತೆಗೆದೆಚ್ಚನಭಿಮನ್ಯು॥೧೩॥ ಕಾರಗಲಸಿಪ್ಪಮಮ ರಾಯಕು । ಮಾರಕಂಠೀರವನು ರಿಪುಪರಿ । ವಾರವನು ನಡೆಗೊಳಿಸಿದನು ಯಮರಾಜನಾಲಯಕೆ ॥ ಮಾರಿಮೊಗದಡದೆರೆದಳೋ ಕೈ । ವಾರವೇ ತರುವಲಿಗಿದೆತ್ತಣ । ವೀರವೋ ಶಿವಶಿವಯೆನುತ ಬೆರಗಾದುದಮರಗಣ ॥೧೪॥ ಕಲಿಗಳೆಯ್ದಿದರೊಡನೆ ತೊಡೆಸಂ । ಕಲೆಯ ತೊಲಗದ ಕಂಭದುಗ್ಗಡ । ಅಳಿಯಗಜದಲ್ಲಣದ ಶರಭನ ವೃಷಭಮೊದಲಾದ ॥ ಹುಲಿಯಕೇರಿತಿಮುಖದ ವ್ಯಾಘ್ರನ । ಬಿಳಿಯಚೌರಿಯ ಬಿರುದುಗಳ ಮುಂ । ದಲೆಯ ಸುಭಟರು ಬಂದು ತಾಗಿತು ಪಾರ್ಥನಂದನನ ॥೧೫॥ ದೊರೆಯ ಸುಕುಮಾರಕನು ಹಲಬರ । ಶಿರವನರಿದನು ಪಾಯದಳವನು । ಸರಳ ಮೊನೆಯಲಿ ಸವರಿದನು ಮುಂಕೊಂಡಹೂಣಿಗರ ॥ ಒರಸಿದನು ಮಾಸಾಳಮೊತ್ತವ । ಕೊರಳನರಿದನು ರಣದಘಾಪಯ । ಬಿರುದರನು ಮುಂಕೊಂಡು ಕೊಂದನು ರಣದೊಳಭಿಮನ್ಯು ॥ ೧೬ ॥ ಕರಿಘಟೆಯ ಕೆದರಿದನು ಹಯಮೋ । ಹರವ ಜರಹಿದರಣಕೆ ಹರಿತಹ । ವರರಥವ ಹುಡಿಗುಟ್ಟಿದನು ಕೆಡಹಿದನು ಕಾಲಾಳ ॥ ಹುರಿಯೊಡೆದು ಮೈದೆಗೆದು ಸಲೆ ಕೈ । ಮರೆದು ಕೈದುವನಿಳುಹಿ ಪಡೆ ಮುಖದಿರುಹಲೆಚ್ಚನು ಕೊಚ್ಚಿದನು ಕೌರವಚತುರ್ಬಲವ ॥೧೭॥ ತಳಿತಹೊಗರಿನ ಬಾಯಧಾರೆಯ । ಹೊಳಹುಗಳ ಹೊಸ

ಮನೆಯ ತಳಪದ ಬೆಳಗುಗಳ ಬಿಟ್ಟೇರಧಾರೆಯ ಬಳ್ಳಿಮಿಂಚುಗಳ ॥ ಲುಳಿಯಹಂಗನ ಗರಿಯ ಬಿಗು ಹಿನ । ಹಿಳುಕುಗಳ ಹೊಗರಂಬು ತಿವಿದವು । ತುಳಿಕಿದವು ತೂರಿದವು ಕೆದರಿದವಹಿತಬಲದಸುವ ॥೧೮॥ ಅಳವಿಗೆಡೆ ಧುಂಮಿಕ್ಕಿ ರಥದವ । ರಿಳಿಯಬಿದ್ದರು ಭಯದಿ ತೇಜಿಯ । ನಿಳಿದು ರಾವ್ತರು ಕರವ ಮು ಗಿದರು ಕೊರಳ ಸಲಹೆನುತ ॥ ಗುಳವ ಸಡಿಲಿಸಿ ಹಾಯ್ದು ಜೋದಾ । ವಳಿಗಳಿಳಿದುದು ಕೈಯ ಕೈದು ವ । ನಿಳುಹಿಬಾಯಲಿ ಬೆರಳನಿಟ್ಟರು ನಿಖಿಳಪರಿವಾರ ॥೧೯॥ ಎಸಳೆಸಳ ಮೋಹರದ ಸಂದಣಿ । ಯುಸುರನುಳಿದುದು ಕೇಸರಾಕೃತಿ । ಯಸುರ ಸುಭಟರು ಪಥಿಕರಾಯಿತು ಗಗನಮಾರ್ಗದಲಿ ॥ ನು ಸುಳಿದರು ಕರ್ಣಿಕೆಯಕಾಹಿನ । ವಸುಮತೀಶರು ರಾಯನರನೆಲೆ । ದೆಸೆಗೆಡಲು ಮೊಳಗಿದನುಪಾ ರ್ಥಕುಮಾರನಳವಿಯಲಿ ॥ ೨೦ ॥ ಜರಿದುದಬುಜವ್ಯೂಹ ನೂಕಿದ । ಕರಿತುರಗಕಾಳಾಳು ರಥಿಕರ । ಮರಳುವಲೆ ತಾನಿಲ್ಲ ನೆರೆ ನುಗ್ಗಾಯ್ತು ಕುರುಸೇನೆ ॥ ದೊರೆಗಳಹದ್ರೋಣಾದಿಗಳು ಕೈ । ಮ ರೆದು ಕಳೆದರುಪಾರ್ಥತನಯನ । ಸರಿದೊರೆಗೆ ಪಡಿಯಾವನೆಂದನು ಕೌರವರರಾಯ ॥ ೨೧ ॥ ತಂ ದೆ ಹಡೆಯನೆ ಮಗನನಹುದೋ । ಕಂದಕಲ್ಪಸಹಸ್ರ ನೋಂತಳು । ಇಂದುಧರನನು ನಿಮ್ಮತಾಯಿ ಸುಭದ್ರೆಯಲ್ಲದೊಡೆ ॥ ಇಂದಿನೀಬಲ ವಿಷಮರಣಜಯ । ದಂದವೀಸೌರಂಭವೀಸರ । ಳಂದವೀ ತೆರಳಿಕೆಯದಾವಂಗೆಂದನವನೀಶ ॥ ೨೨ ॥ ಹುರುಳ ಮರೆದೆನು ಮಗನೆ ಸಾಲದೆ । ಭರತಕುಲದಲಿ ನಿನ್ನ ಬೆಳವಿಗೆ । ಎರಡುಕವಲನ್ವಯಕೆ ಕೊಡದೇ ಸುಗತಿಸಂಪದವ ॥ ಕಿರುಳು ಬೀಳವೆ ತನ್ನ ಬಸು ರಿಂ । ದುರುಳಿದವರಿಂದೇನುಫಲ ಮ । ತ್ಸರವೆ ಪಾರ್ಥ ಕೃತಾರ್ಥನೆಂದನು ಕೌರವರರಾಯ ॥ ೨೩ ॥ ಎನುತ ಬಿಲುದುಡುಕಿದನು ಸೇನಾ । ವನಧಿಗಭಯವನಿತ್ತು ಮರಳುವ । ಜನಪರನು ಜರೆದೆಡಬಲದ ಮನ್ನೆಯರೆ ಮೂದಲಿಸಿ ॥ ಮೊನೆಗಣೆಯ ತೂಗುತ್ತ ನರನಂ । ದನನ ರಥವನು ತರುಬಿ ನಿನ್ನ ಯ । ತನಯನಡ್ಡೈಸಿದನು ಕೌರವರಾಯ ಖಾತಿಯಲಿ ॥೨೪॥ ಮಗುವು ನೀ ಕೆಡಬೇಡ ಹೋಗೆನು । ತೆಗಣಿತಾಸ್ತ್ರವ ಸುರಿವುತ್ಕೃತರೆ । ನಗುತ ನಿಂದಭಿಮನ್ಯು ನುಡಿದನು ಕೌರವೇಶ್ವರನ ॥ ಮಗುವು ತ್ರಾ ನಹೆ ತನ್ನ ಬಾಣಕೆ । ಮಗುವುತನಬೇರಿಲ್ಲ ವರೆಅರು । ಹುಗಳ ನಿಮಿಷವು ನಿಂದು ನೋಡೆಂದೆಚ್ಚನಭಿ ಮನ್ಯು ॥೨೫॥ ಎಸಲು ಕಣೆ ಮುಕ್ಕುರಿಕಿದವು ಹೊಸ । ಮಸೆಯ ಧಾರೆಯ ತೋರಕಿಡಿಯಲಿ । ಮು ಸುಕಿತರಸನ ತೇರು ತಳಿತವು ಮೈಯೊಳಂಬುಗಳು ॥ ಬಸಿವರಕುತದ ಜರಿವಜೋಡಿನ । ನಸಿದಗರ್ವದ ನೆಗ್ಗಿದಾನನ । ದೆಸಕದೊಣಗಿಲಬಾಯ ಭೂಪನ ಕಂಡನಾದ್ರೋಣ ॥೨೬॥ ರಾಯ ಸಿಲ್ಕುಕಿದನಕಟಕಟ ರಾ । ಧೇಯ ನಡೆ ಕೃಪ ಹೋಗು ಮಗನೆ ನಿ । ಜಾಯುಧವ ಹಿಡಿ ಶಲ್ಯ ತಡೆಯದಿರೇಳು ಕೃತವರ್ಮ ॥ ರಾಯನನುಜರು ಕೈದುಗೊಳಿ ರಣ । ದಾಯ ತಪ್ಪಿತು ನೃಪತಿ ಮಾರಿಯ। ಬಾಯ ತುತ್ತಾದನು ಶಿವಾ ಯೆಂದೊರಲಿದನು ದ್ರೋಣ ॥೨೭॥ ಮಾತು ಹಿಂಚಿತು ಮುಂಚಿ ಸುಭಟ। ವ್ರಾತ ಹೊಕ್ಕುದು ಸಿಕ್ಕಿ ದರಸನ । ಭೀತಿಯನು ಬಿಡಿಸಿದರು ಬೀರಿದರಂಬುಗಳಮಳೆಯ ॥ ಸೋತೆವಾಪ್ನೀಗೆಲಿದೆ ಕರೆ ನಿ । ವ್ಮಾತಗಳನೇಭ್ರೂಣಹತ್ಯಾ। ಪಾತಕಕ್ಕಂಜವೆವೆನುತ ಕೈಕೊಂಡನಾದ್ರೋಣ ॥೨೮॥ ರಾಯನನು ತೊ ಲಗಿಸಿದರಾಕ । ರ್ಣಾಯತಾಸ್ತ್ರರು ರಾಹುವಿನಕಟ । ವಾಯು ಚಂದ್ರನ ಸೆಳವವೋಲರಿದಾಯ್ತು ಸುಭಟರಿಗೆ ॥ ಸಾಯಕವ ಕೈಕೊಳಿಸಿದನು ವ । ಜ್ರಾಯುಧನ ಮೊಮ್ಮನ ರಥವನಿ। ರ್ದಾಯದಲಿ ಮು

ತ್ತಿದರು ಕೌರವಸೇನೆಯತಿಬಳರು ॥೨೯॥ ಹಸುಳೆತನದಲಿ ಹರನ ಮಗನಾ । ವಿಷಮದೈತ್ಯನ ತರಿದು
ಬಿಸುಡನೆ । ಶಿಶುವಲಾ ಪ್ರದ್ಯುಮ್ನ ಮುರಿಯನೆ ಶಂಬರಾಸುರನ ॥ ಶಿಶುವೆ ನೋಡಭಿಮನ್ಯು ಸುಭಟ।
ಪ್ರಸರವಿನಿಬರನೊಂದುಗಾಯದ । ಲುಸುರ ತೆಗೆಬಗೆಮಾಡಿದನು ಧೃತರಾಷ್ಟ್ರ ಕೇಳೆಂದ ॥೩೦॥ ಗುರು
ಸುತನ ನೋಯಿಸಿದ ಶಲ್ಯನ । ಭರವಸವ ನಿಲಿಸಿದನು ಕೃಪನು । ಬ್ಬರದ ಗರ್ವವ ತೊಡೆದು ಕೃತವ
ರ್ಮಕನನೊಡೆ ಯೆಚ್ಚು ॥ ಅರಸನನುಜರ ಸದೆದು ಸೌಬಲ । ದುರುಳಬಾಹ್ಲಿಕಸೋಮದತ್ತರ ।
ಹುರುಳಗೆಡಿಸಿದನೊಬ್ಬ ಶಿಶು ಗೆಲಿದನು ಮಹಾರಥರ ॥೩೧॥ ಮುಳುಗಿತಂಬಿನ ಮರುಮೊನೆಯು ಮೈ ।
ಗಳ ಮಹಾರಥರಾಜಕದ ನವ । ನೆಲೆಯ ಬಿಡೆ ಖತಿಗೊಂಡು ಮುರಿದೋಡುವರ ಮೂದಲಿಸಿ ॥ ಬಿಲು
ದುಡುಕಿ ಸಾರಥಿಗೆ ಸೂಚಿಸಿ । ಮಲೆತನೆಲವೋ ಮಗನೆ ಫಡಫಡ । ತೊಲಗುತೊಲಗೆಂದೆನುತ ರಿಪುವ
ನು ತರುಬಿದನು ಕರ್ಣ ॥೩೨॥ ಗಾರುಗೆಡೆದೊಡೆ ಮರವುದೋಲೆಯ । ಕಾರತನ ನೀ ನೆಮ್ಮೊಡನೆ ಮೈ ।
ದೋರಿ ಮಡಮುರಿಯಿಲ್ಲದೆಚ್ಚಾಡಿದೊಡೆಸಫಲವದು ॥ ತೋರುವೆನು ಕೈಗುಣವನೆನುತ್ತೆ ।ದಾರುಶರ
ದಲಿ ಕರ್ಣನೆದೆಯನು । ಡೋರುಗಳೆಯಲು ಬಳಲಿದನು ಘೂರಾಯಗಾಯದಲಿ ॥೩೩॥ ಬೆದರಿ ಭೂಕಂ
ಪದಲಿ ಕುಲಗಿರಿ । ಯದಿರುವಂತಿರೆ ಚಲಿಸಿ ಕಾಯವು। ಬಿದಿರಿ ಮರಳುವಕಂಗಳಲಿ ಕಲಿಕರ್ಣ ನಮ್ಮೆಮರೆ
ಯೆ ॥ ಹೆದರಿತೀಬಲವಕಟ ಕರ್ಣನ । ಸದೆದನೋ ಸಾಹಸಿಕಶಿಶು ಕಾ । ದಿದೆವು ನಾವಿನ್ನೆನಲ ಕೆಡುಗ
ಲಿಶಲ್ಯನಿದಿರಾದ ॥೩೪॥ ಬಾಲಕನೆ ಹಿಮ್ಮೆಟ್ಟು ಹಿಮ್ಮೆ । ಟ್ಟಾಳುತನ ನಮ್ಮೊಡನೆಯೋ ಮರು । ಳೇಳಿ
ಗೆಯೊಳುಬ್ಬೆದ್ದ ಕರ್ಣನ ಸದೆದಗರ್ವದಲಿ ॥ ಮೇಲನರಿಯಾ ಶಲ್ಯನೊಡನೆಯ । ಕಾಳಗವೆ ನಿಮ್ಮೆ ತ್ರಿಯ
ಗಳಿಗಂ । ದೂಳಿಗವ ತಹುದೆನುತ ಸುರಿದನು ಸರಳ ಸರಿವಳೆಯ ॥ ೩೫ ॥ ಬಾಲತನವೇ ಮಾಣೆಯುವೆ
ಕ । ಟ್ಟಾಳುತನವಾಭರಣವವನೀ । ಪಾಲಸುತರಿಗೆ ವಿದ್ಯೆಯೇ ವಿಪ್ರರಿಗಲಂಕಾರ॥ ಆಳಿನಂಗವನೆತ್ತಬ
ಲ್ಲೆ ಶ । ರಾಳಿಯಲಿ ನಿನ್ನಂಗವಣೆಯ ಛ । ಡಾಳತನವನು ಮುದ್ರಿಸುವೆನೆನುತೆಚ್ಚನಭಿಮನ್ಯು ॥೩೬॥
ಸರಳ ಸರಳಲಿ ಕಡಿದು ಸವೆಯದೆ । ಸರಿಮಿಗಿಲಕಾದಿದೊಡೆ ಶಲ್ಯನ । ಧರಧುರದೆ ದಟ್ಟಾಳತನವನು
ಕಂಡು ಖಾತಿಯಲಿ ॥ ಸರಳುಹದಿನೆಂಟರಲಿ ಶಲ್ಯನ । ಬರಿಯಕೆತ್ತಿದನೈದು ಬಾಣದ । ಲುರವ ತೋ
ಡಿದನೊಂದುನಿಮಿಷಕೆ ಶಲ್ಯ ಸೈಗೆಡದ ॥೩೭॥ ತಲೆತಿರುಗಿ ತುಟಿಯೊಣಗಿ ಕಂಗಳ । ಬಳೆ ಮರಳಿ ಬ
ಸವಳಿಯೆ ಸಾರಥಿ । ತೊಲಗಿಸಿದನಾಶಲ್ಯನೊಡಹುಟ್ಟಿದನು ವೇದನೆಯ ॥ ನಿಲುಕಿ ಕಂಡನು ಶಲ್ಯನನು
ಜನು । ಹಳುಕುಹಿಳುಕಿನ ಮೇಲೆ ಸಂಧಿಸಿ। ಮುಳಿದೆಸುತ ತಾಗಿದನು ಖತಿಯಲಿಪಾರ್ಥನಂದನನ॥೩೮॥
ಘೂತು ಶಲ್ಯನ ತಮ್ಮನೇ ಮಾ । ರಾಂತನಣ್ಣನ ಹರಿಬವನು ಧಿಟ। ಸೂತ ನೋಡೈ ಸಾಹಸಿಗತನ ಲೇ
ಸುಲೇಸೆನುತ ॥ ಆತನಂ ಬೈದಾರ ಮನ್ನಿಸಿ। ಸೋತವೊಲು ಮನಗೆಲವ ಮಾಡಿ ನಿ । ಶಾತಶರದಿಂದಿಳು
ಹಿದನು ಶಲ್ಯಾನುಜನ ಶಿರವ ॥೩೯॥ ದೊರೆ ಮಡಿಯೆ ಮಾದ್ರಾಧಿಪನ ಬಲ । ತಿರುಗಿತಭಿಮನ್ಯುವಿನ
ಹೊಯ್ಲಲಿ । ಹುರುಳುಗೆಟ್ಟುದು ಹೆಸರನಾಯಕವಾಡಿ ದುಗುಡದಲಿ ॥ ತರಹರವನಾಕಾಣೆ ನೀ ಮೋ।
ಹರಕೆ ಗತಿಯೆಂತೆನುತ ಭಯದಲಿ । ಕರೆದು ತೋರಿದನಾಕೃಪಾಚಾರ್ಯಂಗೆ ಕಲಿದ್ರೋಣ ॥೪೦॥ ಮಗು
ವೆ ನೋಡಭಿಮನ್ಯು ನಮಗಿದು।ಹೊಗುವೊಡಳವೇ ಕಾಲರುದ್ರನ। ತಗಹು ಬಿಟ್ಟಂತಿವೆ ಕುಮಾರನ ಕೋ
ಪದಾಟೋಪ ॥ ಮೊಗಸಲರಿದುಭುಜಪ್ರತಾಪದ । ಹೊಗರು ಹೊಸಪರಿಯೆಂದು ರಿಪುವನು । ಹೊಗ

ಳುತಿರೆ ಕೇಳಿದನು ಕೌರವರಾಯ ವೀನುಡಿಯ ||೪೧|| ಕೇಳ್ತತಿರ್ದ್ಯ ಕರ್ಣ ಸಲೆ ನ | ಮ್ಮಾಳ ಹೆದರಿಸಿ ರಿಪುಭಟನನಾ | ಳೇಳಿಸುವಬಾಹಿರತನವನಾನೇನ ಹೇಳುವೆನು || ಖೂಳರೆಂಬೆವೆ ಗುರುಗಳಿಂದುವಿ | ಶಾಲಮತಿಗಳು ನಮ್ಮ ಭಾಗ್ಯದ | ಮೇಲೆ ದೈವವ ಬೈದು ಫಲವೇನೆಂದು ಬಿಸುಸುಯ್ದ ||೪೨|| ಎನಲು ದುಶ್ಶಾಸನನು ರಾಯನ | ಕನಲಿದನು ಖತಿಯೇಕೆ ಜೀಯೆಂ | ದೆನಗೆ ಬೆಸಸಾ ಸಾಕು ಭಂಡರಬೈದು ಫಲವೇನು || ದಿನಪ ದೀವಿಗೆಯಾಗಲುಳಿದೀ | ಬಿನುಗುವೆಳಗಿನ ಹಂಗು ಬೇಹುದೆ | ದನುಜ ದಿವಿಜರ ದಳಕೆ ತನ್ನನು ಬಿಟ್ಟುನೋಡೆಂದ ||೪೩|| ವೀರರಂಗವನೆತ್ತ ಬಲ್ಲರು | ಹಾರುವರು ಬೆಳದಿಂಗಳಿನ ಬಿರಿ | ಸಾರ ಸುಡುವುದು ಕೈದುವಿಡಿದೊಡೆ ಕಲಿಗಳೇ ದ್ವಿಜರು|| ವೈರಿಭಟನಿವ ಮುಗುವಲೇವುನ | ವಾರೆ ಕಾದಲು ಲೆಕ್ಕವಲ್ಲೀ|ಯೂರುಗರ ಬೈದೇನು ಫಲವೆಂದೆನುತ ಹೊರವಂಟ ||೪೪|| ತಳಿತುದೆಡಬಲವಂಕದಲಿ ಹೆ | ಬ್ಬಲ ಛಡಾಳಿಸಿ ಮೊರೆವಭೇರಿಯು | ಘುಳುಘುಳುಧ್ವನಿ ನೆಗೆಯೆ ಬಿರಿದುದು ಕಮಲಜಾಂಡಘುಟ || ಹಳವಿಗೆಯು ಸೀಗುರಿಯು ಚಮರಾ | ವಳಿಯು ವಿಮಲಚ್ಛತ್ರಸಂಖ್ಯೆಯು | ವಳಯದಲಿ ನಭಮುತ್ತಿ ಮುಸುಕಿತು ಸೇನೆ ರಿಪುಭಟನ ||೪೫|| ತಿರುಹಿ ತೇಜಿಯನೆತ್ತಲವದಿರ | ನೊರಸಿ ದುಶ್ಶಾಸನನ ಬೆನ್ನಲಿ | ಕರುಳ ತೆಗೆವೆನು ನೋಡು ಸಾರಥಿ ಬೆಚ್ಚಬೇಡೆನುತ || ಅರಗಿನರಸನು ನಿಲುವನೇ ದ | ಕ್ಷುರಿಯ ಮನೆಯಲಿ ಹೊಕ್ಕು ನಿಮಿಷದೊಳರಸಿದನು ಚತುರಂಗಬಲವನು ಕೌರವಾನುಜರ ||೪೬|| ಎಲವೊ ಕೌರವನನುಜ ನರಿ ಹೆ | ಬ್ಬುಲಿಯ ಶಿಶುವನು ಬೇಡುವಂದದ | ಲೆಳವನರಿಯದೆಯಧಮರಥಿಕನ ಕೂಡೆ ತೊಡಕುವುದೇ || ಮಲೆತು ನಿಂದೆಚ್ಚಾಡಿ ರಣದಲಿ | ತಲೆವೆರಸಿ ಮರಳಿದೊಡೆ ಕೈದುವ| ನಿಳುಹುವೆನು ಬಳಿಕೇನು ಶರಸನ್ಯಾಸ ತನಗೆಂದ ||೪೭|| ಸಾಕು ತರುವಲಿತನದ ಮಾತುಗ | ಳೇಕೆ ತೆಗೆ ರಣದೊಳಗೆ ನಿನಗಿವಿ | ವೇಕತನದಲಿ ವೈಮರೆದು ನೆರೆಹೊಯ್ದೆ ಹೊಳ್ಳಿಗರ || ಆಕಿರೀಟವೃಕೋದರರ ಕೈ | ಸೋಕಿದೊಡೆ ಸಂತೋಷ ನೀನಿವಿ | ವೇಕಿಬಾಲಕನೇನಮಾಡುವೆನೆಂದನವ ನಗುತ ||೪೮|| ಕೊಳಚೆನೀರೊಳು ದಾಂಟಲರಿಯದೆ | ಜಲಧಿಕಾಲ್ವೊಳೆಯಂಬಭಂಡರ | ಮುಳಿದು ಮಾಡುವುದೇನು ಮೊದಲಲಿ ನಮ್ಮ ನೀ ಗೆಲಿದು || ಬಳಿಕ ಭೀಮಾರ್ಜುನರ ಬಯಸುವು | ದೆಲೆ ಮರುಳೆ ನಿನ್ನೊಡಲ ಹೊಳ್ಳಿಸಿ ತಿಳಿರಕುತದಲಿ ತಾಯ ತುರುಬನು ನಾದಿಸುವೆನೆಂದ ||೪೯|| ಕಾತರಿಸದಿರು ಬಾಲಭಾಷೆಗ | ಳೇತಕವು ನೀ ಕಲಿತಬಲುವಿ | ದ್ಯಾತಿಶಯವುಂಟಾದೊಡದತೋರುಳಿದಮಾತೇನು || ಭೀತಭಟರನು ಹೊಳ್ಳುಗಳೆದವೈ | ಘಾತಿರೇಕಕೆ ಠಾವಿದಲ್ಲೆಂ | ದೀತ ನೆಚ್ಚನು ನೂರುಬಾಣದಲೆಂದ್ರಸುತಸುತನ ||೫೦|| ಬಿಲ್ಲಹಿಡಿಯಲು ಕೌರವಾನುಜ|ಬಲ್ಲ ನೋಡೈ ಸೂತ ಮಿಗೆ ತ | ಪ್ಪಲ್ಲತಪ್ಪಲ್ಲಂಬು ಬಿದ್ದುವು ಗುರಿಯಸರಿಸದಲಿ|| ನಿಲ್ಲುನಿಲ್ಲಾದೊಡೆಯೆನುತ ಬಲು| ಬಿಲ್ಲ ನೇವರಿಸಿದಶರೌಘವ | ದೆಲ್ಲಿನೆಲ ನಭವೆತ್ತಲೆನೆ ಗಾಢಿಸಿದವಂಬುಗಳು || ಅವನಕೂರಂಬುಗಳ ಕಡಿದವ | ನವಯವವ ಕೀಲಿಸಿದು ಕೆಲಬಲ | ವವನಿಯಲಿ ಕೆಡೆಬಿಳ್ದುವುಗಿದವುಭಟನಕಿಬ್ಬದಿಯ || ಅವಗಡಿಸಿ ಖಾತಿಯಲಿ ಖಳ ಶರ | ನಿವಹವನು ತುಡುಕಿದನು ಕೆದರಿದ | ಲವನನಿಮಿಷದಲರ್ಜನಾತ್ಮಜನಗಣಿತಾಸ್ತ್ರದಲಿ ||೫೧|| ತಾಯ ತುರುಬಿಗೆ ಹಾಯ್ದುಪಾತಕ | ನಾಯ ಕೊಂಡಾಡುವುದೆ ಕೊಬ್ಬಿದ | ಕಾಯವನು ಕಡಿಕಿರಿದು ನೆತ್ತರ ನೊರೆಯ ಬಾಸಣಿಸಿ || ತಾಯ ಕರೆಸುವೆನೆನುತ ಕಮಲದ | ಳಾಯತಾಂಬಕನಳಿಯನನುಪಮ | ಸಾಯಕವ ಹೂಡಿದನು ನೋಡಿದನಂ

ದು ಚಿತ್ತದಲಿ ||೫೩|| ಇವನಕೊಂದೊಡೆ ತಂದೆ ಮಿಗೆ ಮೆ| ಚ್ಚುವನೊ ಮುನಿವನೊ ತನ್ನನುಡಿ ಸಂ| ಭವಿಸಿ ನುಡಿವನೊ ಭೀಮಸೇನನ ಭಾಷೆಗಂಜುವೆನು || ಇವನ ತೊಡಕೇ ಬೇಡ ಕದನದೊ | ಳಿವನ ತಾ ನೇ ಕೊಲಲಿ ಸಾಕಿ | ನ್ನಿವನ ಭಂಗಿಸಿಬಿಡುವೆನೆಂದನು ತನ್ನ ಮನದೊಳಗೆ ||೫೪|| ಕಾಯ್ದು ಕೊಳ್ಳೈ ಕೌರವಾನುಜ | ಹೊಯ್ದು ಹೋಗಲುಬಹುದು ಹರನೆಡ | ಹಾಯ್ದರೆಯು ಗೆಲುವೆನು ಕಣಾನಿಲ್ಲೆ ನುತ ತೆಗೆದೆಸಲು || ಬಾಯ್ದೆಗೆದು ಕೇಸುರಿಯು ಕಾರುತ | ಕೈದುವೆದೆಯಲಿಕೊಂಡು ಬೆನ್ನಿಗೆ | ಹಾ ಯ್ದೊಡವನೊರ್ಗುಡಿಸಿದನು ಕುರುಸೇನೆ ಕಳವಳಿಸೆ ||೫೫|| ಅಹಹ ಕೈತಪ್ಪಾಯ್ತು ರಾಯನ | ಸಹ ಭವನು ನೊಂದನು ಶಿವಾಯೆನು | ತಹಿತಬಲ ಮುರಿದೋಡೆ ಸಾರಥಿ ತಿರುಹಿದನು ರಥವ || ಬಹಳ ಬಲ ನುಗ್ಗಾಯ್ತು ಶಿಶುವಿನ | ಸಹಸ ಕುಸಿಯದೆನುತ್ತ ಖತಿಯಲಿ | ಮಿಹಿರಸುತನಡಹಾಯ್ದು ತಡೆದ ನುವಾತ್ತೆ ಬಾಲಕನ || ೫೬ || ಸಾರುಸಾರಭಿಮನ್ಯು ಫಡಯಿ | ನ್ನಾರಬಸುರನು ಹೊಗುವೆ ನಿನ್ನನ | ರಾರಸಂತತಿಮಾಡಿಕೊಡಲಿ ಭವದ್ವಿಯೋಗದಲಿ || ಭೂರಿಬಲವನು ಸದೆದಗರ್ವವಿ | ದಾರ ಕೊಡೆ ಧ ನುರ್ಧರಾಗ್ರಣಿ | ವೀರಕರ್ಣ ಕಣಾ ಯೆನುತ ತೆಗೆದೆಚ್ಚನತಿರಥನ ||೫೭|| ಬಲ್ಲೆನುಂಟುಂಟಖಿಳವೀ ರರೊ | ಳಿಲ್ಲ ಸರಿದೊರೆ ನಿನಗೆ ಬಾಯಲಿ | ಬಲ್ಲಿದನು ನೀನಹೆ ಭಟಾಂಗದವಾತದಂತಿರಲಿ || ಬಳ್ಳಿ ಗಡ ಪಾವುಡವವಾಸುಗಿ | ಯಲ್ಲಿಗಟ್ಟಿತುಗಡ ಮಹಾಹವ| ಮಲ್ಲ ಮಡಮುರಿಯದಿರೆನುತ ತೆಗೆದೆಚ್ಚ ನ ಭಿಮನ್ಯು || ೫೮ || ಇರುಳು ರಾಯನಮನೆಗೆ ಕಪ್ಪವ | ತೆರುವುದೇ ಹಗಲೆಲವೊ ಕೆಲಬರ | ಮುರಿದ ಗರ್ವವಿದಾರೊಡನೆ ಫಡ ಮರುಳುಮರುಳೆನುತ || ಸರಳ ಸರಿವಳೆಯಿಂದ ಸುಭಟನ | ಸರಳ ಕಡಿಸಿದ ನೇನನೆಂಬೆನು | ಗಿರಿಯಮುತ್ತಿದಮಿಂಚುಬುಳುವಿನ ಮಿನುಗಿನಂದದಲಿ ||೫೯|| ಮೂಳೆಗೆವೊಗದಿರು ಹುವ್ವುದೆವಡಬಾ | ನಳನೆಲವೊ ನಿನ್ನಂಬು ತಾಗಿದೊ | ಡಳುಕುವೆನೆ ತಾನೆನುತ ರವಿಸುತನೆಚ್ಚನತಿರಥ ನ || ಹಿಳುಕುಗಳು ಮುಗುಳಂಬುಗಳ ಸಲೆ | ತೆಳಿತವಭಿಮನ್ಯುವಿನ ಮೈಯಲಿ | ಬಳಿಕ ಮುರಿದವು ಹೇಳು ಕೆಂದಾವರೆಗೆ ಕವಿದಂತೆ ||೬೦|| ಸುರಪನಂಕುಶನುಸುಳಿದೊಡೆ ಮೈ | ಯರಿವುದೈರಾವತಕೆ ಕಬ್ಬಿನ|ಲಿರಿದೊಡಂಜಿಕೆಯುಂಟೆ ನಿನ್ನಯ ಕಣೆಗಳಾಕಿದೊಡೆ|| ತೆರಳುವೆನೆಯಭಿಮನ್ಯುವೆನುತ | ಬ್ಬರಿಸಿ ಕರ್ಣನ ಕಾಯವನು ಹೊಗ | ಲಿರಿದನೆಂಟಂಬಿನಲಿ ತೋದುದು ತೇರು ರಕುತದಲಿ ||೬೧|| ಹೂಣಿಗರು ಕೆಲರಿವದಿರಿವದಿರ | ಗೋಣನರಿವೆನು ಯಿವರ ಜೀವದ | ಕೇಣಿಕಾರರು ಖಾತಿಗೊಂಬರು ಭೀಮಫಲು ಗುಣರು || ಮಾಣಲಿವದಿರು ಮತ್ತೆ ರಣವನು | ಕಾಣೆನಗಕಿನ್ನೇನೆನುತ್ತ | ಕ್ಷೀಣಭುಜಬಲನೆಚ್ಚು ಕರ್ಣ ನ ಧನುವ ಖಂಡಿಸಿದ ||೬೨|| ಕೈದು ಮುರಿಯಲು ಮುಂದುನೂಕದೆ | ಹಾಯ್ದುನೀರವಿಸೂನು ಬಳಿ ಕಡ| ಹಾಯ್ದು ಬವರವ ಹಿಡಿದನಾಕರ್ಣಾತ್ಮಜನು ಕಡುಗಿ || ಐದುಬಾಣದಲವನ ಕೊರಳನು | ಕೊ ಯ್ದನರ್ಜುನಸೂನು ನಿಮಿಷದೊ | ಳೊಯ್ದುರಂತಕದೂತರದ್ಭುತವಾಯ್ತು ಸಮರಂಗ ||೬೩|| ಗಾ ಯವಡೆದನು ಶಲ್ಯನೀಕುರು| ರಾಯ ಕೈದುವ ಬಿಸುಟನಾಕುರು | ರಾಯನನುಜರು ಬದುಕುವರೆ ಮೈ ಯೆಲ್ಲ ಬಾಣಮಯು || ಸಾಯದುಳಿದವರಿಲ್ಲ ಮಿಕ್ಕಿನ | ನಾಯಕರೊಳಿಂದಕಟ ಕುರುಬಲ | ಬಾಯಬಿ ಟ್ಟುದು ಶಲ್ಯಸುತನಿದಿರಾದ ಸಾಹವಕೆ ||೬೪|| ಆ ಕುಮಾರನ ಸೇನೆ ಗರ್ಜಿಸಿ | ನೂಕಿತುರುವಣಿಸಿತು ಮಹಾರಥ | ಜೋಕೆಯಿಭತತಿ ತೂಳಿದುವು ತುಡುಕಿದವು ರಥನಿಚಯ || ತೋರಿದವು ಕೈದುಗಳು ಸಮು

ರಣ । ದಾಕೆವಾಳರ ಸನ್ನೆಯಲಿ ಸಮ । ರಾಕುಳರು ಕೆಣಕಿದರು ರಿಪುಕಲ್ಪಾಂತ ಭೈರವನ ॥೬೫॥ ಭ
ಟ ಛಡಾಳಿಸಿದನು ಘೃತಾಹುತಿ। ಘಟಿಸಿದಗ್ನಿಯವೋಲು ರಣಾಚೌ । ಪಟಚತುರ್ಬಲದೊಳಗೆ ಹೊಕ್ಕ
ನು ಸಿಂಹನಾದದಲಿ ॥ ನಿಟಿಲನೇತ್ರನ ಕೋಪನಿಖಿ ಲಟ । ಲಟಿಸಿದಂತಿರೆ ಹೆಚ್ಚಿದರಿಬಲ । ದಟವಿಯ
ಯನು ಸವರಿದನು ಸುರಿದನು ಸರಳಶೋಣಿತವ ॥೬೬॥ ಧರೆ ಬಿರಿಯೆ ಬೊಬ್ಬೆಯಲಿ ಬಲದ । ಬ್ಬರಣೆ
ದೆಕ್ಕಾದೆಕ್ಕಿಯಾಗಲು ಧರಣಿಪತಿ ಹಲುಬಿದನು ಮಗನೇನಾದನಕಟೆನುತ ॥ ಕರೆದು ಭೀಮನ ನಕುಲನನು
ಸಂ । ಗರಕೆ ದೃಷ್ಟದ್ಯುಮ್ನದ್ರುಪದರ । ಧುರಕೆ ಪರುಠವಿಸಿದನು ಸೌಭದ್ರಂಗೆ ಪಡಿಬಲವ ॥೬೭॥ ಗ
ದೆಯ ತಿರುಹುತ ಸಿಂಹನಾದದ । ಲೊದರಿ ಮಗನಾವೆಡೆಯೆನುತನೂ । ಕಿದನು ರಥವನು ತನ್ನ ಸೇನೆಗೆ
ಚೌರಿಯನು ಬೀಸಿ ॥ ಅದಟರೈತರೆ ಹೋಗಲೀಯದೆ । ಮೊದಲ ಬಾಗಿಲ ಕಟ್ಟಿ ಕೊಂಡೆ । ಗ್ಗದಜ
ಯದ್ರಥ ಭೀಮನಲಿ ಬಲುಗಾಳಗವ ಹಿಡಿದ ॥೬೮॥ ತೆರಹುಗುಡುಗುಡುಯೆಲೆಜಯದ್ರಥ। ಹೆರದೆಗೆದು
ಮರಳೆನುತ ಹೂಣಿಗ। ನುರುಬಿದೊಡೆ ಮಾರಾಂತು ಭೀಮನ ಕಡುಹ ನಿಲಿಸಿದನು ॥ ಮರೆದು ಕಳೆಯ
ಭಿಮನ್ಯುವನು ಕೈ । ಮರೆಯದೆನ್ನಲಿ ಕಾದುನೀನೆನು । ತುರುಬಿ ಸೈಂಧವನೈದಿದನು ಕೈಗೋಲವಳೆಗ
ರೆದು ॥೬೯॥ ಬವರದಲಿ ಕಲಿಪಾರ್ಥನಲ್ಲದೆ । ಪವನತನಯಾದಿಗಳು ಗೆಲುವರೆ । ಶಿವನ ವರವೆನಗುಂಟು
ಮುನ್ನೆನುತಾಜಯದ್ರಥನು॥ಕವಲುಗೋಲಲಿ ಭೀಮನನು ಪರಿ । ಭವಿಸಿದನು ಸಹದೇವನನು ಕೆಡೆ । ತಿ
ವಿದು ನಕುಲನ ರಥವ ಕಡಿಪಲ್ಲಟವ ಮಾಡಿದನು ॥೭೦॥ ಹೊಗುವಧೃಷ್ಟದ್ಯುಮ್ನನನು ಮೈ । ದೆಗೆ
ಯಲೆಚ್ಚನು ದ್ರುಪದಮೊದಲಾ । ದೆಗಣಿತರ ನೋಯಿಸಿದ ನರಥನುಚಾತುರಂಗವನು ॥ ಹೊಗುವಭರ
ದಲಿ ಮತ್ತೆ ಬಿಲ್ಲನು । ಬಿಗಿದಮುಷ್ಟಾಮುಷ್ಟಿಯಲಿ ಕೋ । ಲುಗಳ ಕವಿಸಿದ ಭೀಮನೊಡನೆವಗಡಿಸಿ
ಕಾದಿದನು ॥೭೧॥ ಮರಳುಮರಳೆಲೆಭೀಮ ಮುನಿದೊಡೆ । ಕೊರಳ ಕೊಯ್ವೆನು ನಿನ್ನಹವಣೇ । ಹರ
ನಕಾರುಣ್ಯಾವಲೋಕನ ತನಗೆ ಹಿರಿದೆನುತ ॥ ಸರಳಮಳೆಗಳ ಕರೆದು ಭೀಮನ । ತುರಗವನು ಸೀಳಿದ
ನು ರಣದಲಿ । ವಿರಥನನು ಮಾಡಿದನು ಫಲುಗುಣನೆಳಿಯೆ ಪಾಂಡವರ ॥೭೨॥ ಪಡಿಬಲವ ಬರಲೀ
ಯದನಿಲಜ । ನೊಡನೆ ಸೈಂಧವ ಕಾದುತಿರಲಿ । ಮ್ಮಡಿಸಿತಾಹವವಿತ್ತ ಮೋಹರಮಧ್ಯರಂಗದಲಿ॥ ತೊ
ಡಚಿಕೆಂಗೋಲಿನಲಿ ವೀರರ । ಕಿಡಿಯಲವನೀಪಾಲರುರುಬೆಗೆ । ಮಿಡುಕಲಮ್ಮದೆ ಮಗ್ನರಾದರು ವೀರ
ನುಪಟಲಕೆ ॥೭೩॥ ತೊಡಚಿ ಕೆಂಗೋಲುಗಳ ಮಳೆಯನು । ಕೆಡಹುತೈತರಲವನಿಪಾಲರು । ಮಿಡುಕ
ಲಂಮದೆ ಮನವನೆಳುಹಿಕುಮಾರನುಪಟಳಕೆ ॥ ಅಡಗಿದರು ಬಳಿಕೀಕುಮಾರನ। ಕಡುಹುಘನವಾಯ್ತೋ
ನನೆಂಬೆನು । ಪಡೆಯ ತಳಪಟಮಾಡಿದನು ಸುರಕಟಕ ಬೆರಗಾಗೆ ॥೭೪॥ ಒರಸಿದನು ಹದಿನೆಂಟುಸಾವಿ
ರ । ಕರಿಘಟೆಯನೈವತ್ತುಸಾವಿರ । ತುರಗವನು ಮೂವತ್ತುಸಾವಿರ ವರಮಹಾರಥರ ॥ ಧುರದಲಕ್ಷ
ಪದಾತಿಯನು ಸಂ । ಹರಿಸಿ ಶಲ್ಯಕುಮಾರಕನ ಕ । ತ್ತರಿಸಿದನು ಗೋನಾಳಿಯನು ದಿವ್ಯಾಸ್ತ್ರಧಾರೆ
ಯಲಿ॥೭೫॥ ಮಡಿದನಕಟಾ ನಮ್ಮಸಖನೆಂ। ದುಡಿಸಿದಳಲಿನೊಳದ್ದು ಕೋಪದ।ಕಡುಜಲಧಿಕಾಲಾಗ್ನಿರು
ದ್ರನ ಕಣ್ಣಹೋಲುವೆಯ॥ ಸಿಡಿದಮಿಸೆಯ ಬಿಗಿದಹುಬ್ಬಿನ। ಜಡಿದರೋಮಾಂಚನದ ಖಾತಿಯ। ಕಡು
ಹುಕಾರರು ಮಸಗಿದರು ದುರ್ಯೋಧನಾತ್ಮಜರು ॥೭೬॥ ಚಂಡಭುಜಬಲನೊಡನೆ ಮಕ್ಕಳ । ತಂಡವೆ
ದ್ದುದು ಬಿಗಿದಬಿಲ್ಲಿನ। ದಂಡೆವಲಗೆಮುಸುಂಡಿಮುದ್ಗರಪರಶುವುಬ್ಬಣದ ॥ ಗಂಡುಗಲಿಗಳು ಕವಿದರ

ದಿರ । ಖಂಡೆಯದ ಮುಡುಹುಗಳ ಗಂಧದ । ಮಂಡನದ ವೈಸಾರಪರಿಮಳಪೂರರೊಗ್ಗಿನಲಿ ೭೭॥ ತಳಿತಸತ್ತಿಗೆಗಳ ವಿಡಾಯಿಯ । ಲೊಲೆವಚೌರಿಯ ವಜ್ರಮಕುಟದ । ಹೊಳಹುಗಳ ಹೊಸ ಮಿಸುನಿಯಿಕ್ಕಿದಬಿರಿದಿನುಬ್ಬಟೆಯ ॥ ಕೆಲಬಲದ ಮೇಳಾಯತರ ವೆ। ಗ್ಗಳೆಯರಾವ್ತರು ಗಗನ ಸಾಲಗೆ ದಳೆದುದೆನೆಹೊಳೆಹೊಳೆವಡಾಯುಧಭಟರು ನೋಕಿದರು ॥೭೮॥ ಭಾಪುರೇ ಕೌರವಕುಮಾರಾ । ಟೋಪವೊಳ್ಳಿತು ಬಂದಬರವಿನ। ಚಾಪಳದೊಳೊದಗಿದೊಡೆ ಲೇಸಲ್ಲದೊಡೆ ಫಲವೇನು॥ ಕಾಪುರುಷರೈಕಾಣ ಬಹುದೆಂ । ದಾಪುರಂಪರಸುತನಸುತ ನಿಜ । ಚಾಪವನು ನೇವರಿಸುತಿದ್ದನು ಬಗೆಯದರಿಬಲವ ॥೭೯॥ ಉಗುಳುಗುಳು ಶಲ್ಯಾತ್ಮಜನಸೀ । ನುಗುಳದಿದಿರ್ದೊಡೆ ಸೀಳಿ ಬಸುರಲಿ । ತೆಗೆವೆವೆಮ್ಮಯ ಸಖನನೆನು ತವೆ ಲಕ್ಷಣಾದಿಗಳು ॥ ತೆಗೆದೆಸುತವೇಲಿಕ್ಕಿದರು ತಾರೆಗಳು ನೆಣಗೊಬ್ಬಿನಲಿ ರಾಹುವ । ತೆಗೆದುಜೀವಿಸಬಲ್ಲವೇ ಧೃತರಾಷ್ಟ್ರಕೇಳೆಂದ ॥೮೦॥ ದಿಟ್ಟರಹಿರೋ ಲಕ್ಷಣರು ಜಗ । ಜಟ್ಟಿಗಳಲಾ ರಾಜಪುತ್ರರು । ಹುಟ್ಟರೇ ಕೆಲರೀಸುಚಪಳತೆಯಾರಿಗುಂಟೆನುತ ॥ ಕಟ್ಟಿದನು ಕಣೆಗಳನು ಸುತ್ತಲಿ । ತಟ್ಟುವಲೆಯಲಿ ಸೋಹಿದನು ಶರ । ದೊಟ್ಟಿ ಪಾರ್ಥಕುಮಾರನೆಚ್ಚನು ವೈರಿಮೃಗಕುಲವ ॥೮೧॥ ಘಡ ವಿಕಾರವೆ ದೊಡ್ಡಗರ ಸದೆ । ಬಡಿದಗರ್ವಿತತನವಕಟ ನ । ಮ್ಮೊಡನೆಯೇ ನೋಡಿಲ್ಲಿ ಮೇಳವೆಯೆನುತ ತೆಗೆದೆಸಲು ॥ ಒಡನೊಡನೆ ನಾರಾಚನಿಚಯವ । ಗಡಣಿಸಿದ ರೇನೆಂಬೆನವರು। ಗ್ಗಡದ ಬಿಲುವಿದ್ಯಾತಿಶಯವನು ಸಮರಭೂಮಿಯಲಿ ॥ ೮೨ ॥ ಆಸುಯೋಧನಸುತರ ಸರಳವಿ । ಲಾಸವನು ಖಂಡಿಸಿದನಾತನ। ಬೀಸರಕೆ ಬಂದಡ್ಡಬೀಳುವಭಟರ ಕೆಡೆಯೆಚ್ಚ ॥ ರೋಷವಹ್ನಿಯ ಕೆದರಿಸುರಿವಮ। ಹೀಶರನು ಮಾಣಿಸಿದನವನಾ। ವಾಸವನ ಮೊಮ್ಮೊಗನುದಾರಸಮಗ್ರಸಮರದಲಿ ॥೮೩॥ ಸರಳ ಮೊನೆಯಲಿ ವೈರಿಸುಭಟರ। ಕೊರಳಸೆಳೆದನು ರಣದೊಳಾಡುವ । ಮರುಳುಬಳಗವ ತಣಿಸಿದನು ಕಡಲಾದುದರುಣಜಲ ॥ ತರಳನರೆಯುಟ್ಟಿದನು ರಣದಲಿ । ದುರುಳದುರಿಯೋಧನನ ಮಕ್ಕಳ । ಮರಳಲೀಯದೆ ಭಟರ ಕೇಣಿಯ ಕೊಂಡನಭಿಮನ್ಯು ॥೮೪॥ ಉರಗನಿಕ್ಕಡಿಗಾರಹುತ್ತಿನ । ಸರವಿಗಂಜುವುದುಂಟೆ ಕರ್ಣಾ । ದ್ಯರನು ಕಡ್ಡಿಗೆ ಬಗೆಯನೀಹಾಹೆಗಳ ಗಣಿಸುವನೇ॥ ಎರಡು ಶರದಲಿ ಲಕ್ಷಣನ ಕಾತ್ತರಿಸಿದನು ಹದಿನೆಂಟುಬಾಣದ। ಲರಿದನುಳಿದಕುಮಾರಕರನಭಿಮನ್ಯು ನಿಮಿಷದಲಿ॥೮೫॥ ತಳಿತಚೂತದ ಸಸಿಗಳವನಿಗೆ।ಮಲಗುವಂತಿರೆ ರಾಜಪುತ್ರರು । ಹೊಳೆವಪದಕದ ತೋಳತಲೆಗಿಂಬಾದಕೈದುಗಳ ॥ ಬಳಿರಕುತದಲಿ ನನೆದಸೀರೆಯ। ತಳಿತಖಂಡದ ಬಿಗಿಯಹುಬ್ಬಿನ । ಹೊಳೆವದಂಷ್ಟ್ರಾವಳಿಯೊಳೆಸೆದರು ಸಾಲಶಯನದಲಿ ॥೮೬॥ ಇಕ್ಕಿದಿರಲಾ ರಾಜಪುತ್ರರ। ನಕ್ಕಟಕಟಾ ಸ್ವಾಮಿದ್ರೋಹರು । ಹೊಕ್ಕುಮನೆಹಾಳಹುದಲಾ ದ್ರೋಣಾದಿನಾಯಕರು ॥ ಹಕ್ಕಲಾಯಿತು ನಮ್ಮಬಲ ಶಿಶು । ಸಿಕ್ಕನೇನ್ನೈ ಪಾಂಡವರಪು । ಣ್ಯಕ್ಕೆ ಸರಿಯಿಲ್ಲೆಂದು ಕೌರವರಾಯ ಖತಿಗೊಂಡ ॥ ಕುಲವನೋಡಿದರಿಲ್ಲ ತನ್ನಯ । ಬಲುಹನೋಡಿದರಿಲ್ಲ ಕದನದೊ । ಳುಳಿವ ನೋಡಿದೊಡಿಲ್ಲಲಾ ಪರಿಯೆಂಬ ಪಾತಕಿಯ ॥ ಇಳೆಯೊಳೋಲೆಯಕಾರರೆಂಬರ । ತಲೆಗೆ ತಂದನು ತೃಣವನೆನುತ । ಗ್ಗಳೆಯರನು ಮೂದಲಿಸಿ ಬೈದನು ಸುಯ್ದು ಕುರುರಾಯ ॥೮೮॥ ಕೈಗೊರಳ ಕೋಳಾಹಳದ ಮುಂ । ಗೈಗಳೇರಿನ ಬಾದಣಂಗಳ । ಸುಯ್ಗಳರಮುರಳ್ದಾಲಿಗಳ ಬಿಡುಮಿದುಳ ಮೋರೆಗಳ ॥ ಸುಯ್ಗಳಲಿ ಜೀವವ ಬಿಡುವಬಲು । ಗೈಗಳಾಹವಜವನ ಕೈಯಲಿ। ಸಾಗಲರು

ಹುಲುಸಾಯ್ತೆನಲು ರಂಜಿಸಿತು ರಣಭೂಮಿ ॥ ೪೯ ॥ ಕೇಳುತಿದ್ದರು ಪತಿಯು ಮೊದಲೆ।ಗಾಳಿಯಲಿ ದಳ್ಳಿಸುವಧೈರ್ಯ । ಜ್ವಾಲೆ ತಳಿತುದು ಖಾತಿಯಲಿ ಹೊಗೆಯೇರಿದಾನನದ ॥ ಆಳುತನಕುಬ್ಬೇರಿ ಕಡುಹೇ। ಹಾಳಿಕಾರರು ಕೈದುಗೊಂಡರುಬಾಲಕನ ತರುಬಿದರುದೊರೆಗಳು ಕೇಳು ಧೃತರಾಷ್ಟ್ರ ॥೫೦॥

ಅಂತು ಸಂಧಿ ೬ಕ್ಕೆ ಪದ ೪೧೯ಕ್ಕಂ ಮಂಗಳಂ.



## ಏಳನೆಯ ಸಂಧಿ.

॥ಸೂಚನೆ॥ ರಿಪುಕುಮಾರಕವನಕುಠಾರನು । ಚಪಳನೃಪಸಂಹಾರ ಕಾಲನು । ವಿಪುಳಸಂಗ್ರಾಮದಲಿ ಮಡಿದನು ಫಲುಗುಣನ ತನಯ ॥

॥ಪದ॥ ಬಾಲಬಾಲರ ಕೊಂದನರಸಿನ । ಮೇಲೆಬಿದ್ದುದು ಬವರ ಕೌರವ । ಗೋಳಿಡುತ ಸುಕುಮಾರಕರ ಸಾವಿಂಗೆ ಹಲುಬುತಿರೆ ॥ ಆಳಿದನು ದುಮ್ಮಾನವನು ಕ । ಟ್ಟಾಳುಗಳ ಕಂಡರು ಮಹಾರಥ । ರೋಳಿಯಲಿ ನೂಕಿದರು ಸರಿಸದರಥದಗಡಣದಲಿ ॥೧॥ ಮೇರೆತಪ್ಪಿತು ಕೌರವನ ಪರಿ। ವಾರದಲಿ ಬೇಹವರು ಮಕುಟದ।ಧಾರಿಯಾಳುಗಳಾಂತು ಕೊಂಡರು ಪಾರ್ಥನಂದನನ॥ ಸೂರಿಯನ ಸುತ ಶಲ್ಯಗೌತಮ । ಕೌರವಾನುಜನುಭಯಕಟಕಾ। ಚಾರ್ಯನಶ್ವತ್ಥಾಮ ನಿವರೊಗ್ಗಾಯ್ತು ಷಡುರಥರು ॥೨॥ ಹೊಳೆವಸಿಂಧದ ಜಡಿವಕಹಳಾ । ವಳಿಯ ಲಗ್ಗೆಯ ವಿವಿಧವಾದ್ಯದ । ಕಳಕಳದ ಕಾಲಾಳಬೊಬ್ಬೆಯ ಬಹಳ ರಭಸದಲಿ ॥ ಕಳಸಪಲ್ಲವಚೌಕದಲಿ ಮಂ । ಡಳಿಸಿದವು ಸತ್ತಿಗೆಗಳೊದರುವ । ಕೆಲಬಲದಸಂಭಾಳಿಯಲಿ ಸಂದಣಿಸಿತತಿರಥರು ॥೩॥ ಧೃತಿಗೆ ಚಿತ್ತವ ತೆತ್ತರೆನಲಂ । ದತಿಶಯರು ಮಝುಭಾಪುಭಾಪೆನು । ತತಿಪರಾಕ್ರಮನುತಪಯೋಧಿಯ ಕಡೆಯ ಕಾಣಿಸುತ ॥ ನುತಗಜಾರೋಹಕವರೂಥಪ್ರತತಿಪರಿಣತರಳವಿಗೊಟ್ಟುದು । ಮತಿಪ್ರಕಾಶರು ಬಂದು ಮುತ್ತಿತು ಮತ್ತೆ ಚೂಣಿಯಲಿ ॥೪॥ ಅಳವಿಗೊಟ್ಟುದು ಮತ್ತೆ ಕೌರವ। ಬಲಪಯೋನಿಧಿ ವೈರಿವಡಬನ। ಬಲುಸರಳ ಬಿಡುಗಿಡಿಯಲೌಕಿತು ಘನತುರಂಗದಲಿ॥ಸಲುವುದೋ ನಿನಗೆನುತ ಕರದಲಿ । ಬಲದನಾಯಕವಾಡಿ ಬಿಲ್ಲಿನ । ಬಲುಸರಳ ಬಿರುಗಿಡಿಯಲೌಕಿತು ಘನತುರಂಗದಲಿ ॥೫॥ ಎಸಲು ತಲೆವರಿಗೆಯಲಿ ಕವಿದುದು। ದೆಸೆಯ ಹಳುವಿಂಗಳುಕುವತಿಬಲ । ರುಸುರುಮಾರಿಗಳೇರಿ ಪೊಯ್ದರು ರಾಯರಾವುತರು ॥ ನುಸುಳುಗಳ ನಾಚಿಕೆಯಲಾತನ । ವಿಶಿಖಜಲದಲಿ ತೊಳೆದರತಿಬಲ । ರಸಮಸಂಗರವಾಯ್ತು ಮತ್ತಭಿಮನ್ಯುವಿದಿರಿನಲಿ ॥೬॥ ಕೆಡೆದರಥವರ ಕಾಂಚನಾದ್ರಿಗೆ । ನಡಿಸಿದವುನಾಚಿಕೆಯನಭ್ರದೊ । ಳಿಡಿದತಲೆ ಬೀರಿದವು ಭಂಗವನನುಪಮಾಂಬರಕೆ ॥ ಕಡಲುವರಿದರುಣಾಂಬುಜಲದಲಿ । ಬಿಡಿಸಿದವು ಬಿಂಕವನು ಶಿವಶಿವ । ನುಡಿವಕವಿಯಾರಿನ್ನು ಪಾರ್ಥಕುಮಾರನಾಹವವ ॥೭॥ ಹಳಚಿ ಮುರಿದುದು ಮತ್ತೆ ಕರ್ಣನ । ಬಲಕೃಪಾಚಾರಿಯನ ಸೇನೆಗೆ । ತಲೆಯುಯಿಣಸಂಬಂಧ ಸವೆದುದು ಕಾತರಿಸಿ ಕವಿವ ॥ ಬಲದಬಿರುದರಿಗಮರನಾರಿಯ। ರೊಳಗೆ ಸೇರುವೆಯಾಯ್ತು ಶಲ್ಯನ । ದಳದಡಗು ಸವಿಯಾಯ್ತು ಜಂಬುಕಕಾಕಸಂತತಿಗೆ ॥೮॥ ಪಡೆ

ಯ ತೆಗೆ ತರುವಲಿಯ ಕೊಲ್ಲದೆ । ಹಿಡಿಯೆನುತ ಬಲುಸರಳ ತಿರುವಿಂ । ಗಡಸಿ ಸೂತಗೆಯರುಹಿ ಕೆಲಬಲದರ್ಗೆ ಕೈವೀಸಿ ॥ ಕಡುಮನದ ಕೆಚ್ಚಾಳುಗಳು ಮುಂ । ಗುಡಿಯಲ್ಕೈತರೆ ರವಿಸುತಾದಿಗ । ಳೊಡನೊಡನೆ ಕೈಕೊಂಡರಿಂದ್ರಕುಮಾರನಂದನನ ॥ ೯ ॥ ಶಿಶುತನದ ಸಾಮರ್ಥ್ಯಸಾಕಿ । ನ್ನೆಸೆಯದಿರು ನೀತೊಲಗು ತೊಲಗೆಂ । ದಸಮಬಲರೈದಿದರು ಷಡುರಥರೊಂದುಮುಖವಾಗಿ ॥ ಎಸುವುದದು ನೀವೆಂದು ನಿದ್ರೆಯ । ಮುಸುಕಿನಲಿ ಗೋಗ್ರಹಣದಲಿ ಜೀವಿಸಿದಜಾಣರು ನೀವೆನುತ ತೆಗೆದೆಚ್ಚನಭಿಮನ್ಯು ॥೧೦॥ ತರಳತನದಲಿ ನುಡಿಯದಿರು ಸಂ । ಗರಕೆ ಕರೆನಿಮ್ಮಯ್ಯನನು ಹೊಸ । ಸರಳು ನಾಚುವವಲ್ಲ ಶಿಶುವಧೆಯೆಂಬುದಪವಾದ ॥ ಮರಳುವದು ಲೇಸೆನುತ ಪಟುಭಟ । ರುರವಣಿಸಿದರು ತೆಗೆದ ಮುಷ್ಟಿಯ । ಗರುಡಿಕಾರನ ಸನ್ನೆಯಲಿ ನೂಕಿದುದು ಪರಿವಾರ ॥ ೧೧ ॥ ಪಾರ್ಥಪರಿಯಂತೇಕೆ ರಣದಲಿ । ವ್ಯರ್ಥಜೀವರು ನೀವು ಕೌರವ । ನರ್ಥವನು ಸಲೆ ತಿಂಬುದಲ್ಲದೆ ಸಮರನಿಮಗೇಕೆ ॥ ಸ್ವಾರ್ಥಲೋಲುಪುತಿಯಲಿ ನಿಲುವೆಸ।ವರ್ಥರಾದೊಡೆ ಖಡ್ಗಧಾರಾ।ತೀರ್ಥದೊಳಗೋಲಾಡಿಸುವೆನೆನುತೆಚ್ಚನಭಿಮನ್ಯು ॥೧೨॥ ಮನದ ಕೆಚ್ಚುಳ್ಳದಟನಹೆ ಮಾ।ತಿನ ಸಘಾಡಿಕೆ ಲೇಸುಪಾರ್ಥನ। ತನಯನಲ್ಲಾ ಘೂತು ಪಾಯಕುಯೆನುತ ಷಡುರಥರು ॥ ತನತನಗೆ ಕೆಂಗೋಲಿನಲಿ ಮು । ಮ್ಮೊನೆಯ ಬೋಳೆಯಸರಳಿನಲಿ ಸಾ । ಧನಸಮಗ್ರರು ಶಿಶುವನೆಚ್ಚರು ದೆಸೆದೆಸೆಗೆ ಕವಿದು ॥೧೩॥ ಮಸಗಿ ಮದದಾನೆಗಳು ಸಿಂಹದ । ಶಿಶುವ ಮೃತ್ಯುವವೋಲು ಕವಿಕವಿ । ದೆಸುತ ಬಂದರು ಮಕುಟವರ್ಧನರಸಮಬಾಲಕನ ॥ ಮುಸುಳದವರವರಸ್ತ್ರವನು ಖಂ । ಡಿಸುತ ಸೇನೆಯನೊರೆಸಿ ಘನಪೌ । ರುಷದೊಳಿರಿದಾಡಿದನು ಹಲಬರಕೂಡೆ ಸುಕುಮಾರ ॥೧೪॥ ಪೂತುಮಝುಬಿಲ್ಲಾಳುತನವದು। ಭೂತನಾಥನೊಳಿಲ್ಲ ಸುಭಟ। ವ್ರಾತವೀಕ್ಷಿಸೆನುತ್ತ ಕಣೆಗಳ ಕರೆದನಾದ್ರೋಣ ॥ ಏತಕಿದು ಹಿಮ್ಮೆಟ್ಟು ನೀ ದಿಟ। ಸೋತೊಡೆಯು ಗೆಲುವಿಲ್ಲ ಮಗೆ ಮೃಗ । ಪೋತನನು ಹರಿ ಹೊಯ್ವುದುಚಿತವೆ ಮಗನೆ ಹೇಳೆಂದ ॥೧೫॥ ವಿನಯವೇಕಿದು ನಿಮ್ಮ ಭುಜಬಲ । ದನುವ ಬಲ್ಲೆನು ನಿಮ್ಮ ಮೈಲಿಗೆ । ಮನದ ಹವಣನು ಬಲ್ಲೆ ನಮ್ಮೊಳು ತೊಡಕಿ ಜಯಸಿದೊಡೆ ॥ ಧನುವ ಹಿಡಿಯೆನು ಸಾಕು ಡೊಂಬಿನ।ಬಿನುಗುನುಡಿಯಂತಿರಲಿ ಬಲ್ಲೊಡೆ। ಮೊನೆಗಣೆಯಲೀಮಾತನೊಡೆನುತೆಚ್ಚನಭಿಮನ್ಯು ॥ ೧೬ ॥ ಎಡದಲೌಕುವಕೃಪನನೆಚ್ಚನು । ಕಡೆಯಲಶ್ವತ್ಥಾಮನನು ರಥ । ಕೆಡಿಯಲೆಚ್ಚನು ಕೋಡ ಕೈಯಲಿ ಕೌರವಾನುಜನ ॥ ಮಿಡುಕದೆಚ್ಚನು ಹಿಂದೆಮುಂದವ । ಗಡಿಸಿಯೆಸುತಿಹಕರ್ಣಶಲ್ಯರ । ಒಡಲೊಳಂಬನು ಹೂಳಿದನು ಸೀಳಿದನು ರಿಪುಬಲವ ॥೧೭॥ ಅಡಸಿಹೊಕ್ಕಡೆ ಕೃಪನ ರಥವನು । ಕಡಿದುಬಿಸುಟನು ಸಾರಥಿಯನಡಿ । ಮಿಡುಕಲೀಯದೆ ಬಿಗಿದು ಕರ್ಣನ ಧನುವ ಖಂಡಿಸಿದ ॥ ಕೆಡಹಿದನು ಕೌರವನ ರಥವನು । ತುಡುಕಲೀಯದೆ ದ್ರೋಣನನು ಜವಗೆಡಿಸಿದನು ಜೋಡಿಸಿದಷಡುರಥರೊಗ್ಗನೊಡೆಹಾಯ್ದು ॥ ೧೮ ॥ ಮುರಿಮುರಿದು ಹೀಹಾಳಿಯಲಿ ಮಿಗೆ ಉರವಣಿಸಿ ಗರಿಗಟ್ಟಿಕವಿದುದು । ಹರಿಬಿಡದೆ ಬಿಗುಹಿನಲಿ ಬಾಷೆಯಮಾಡಿ ತಮ್ಮೊಳಗೆ ॥ ಸರಳೆಸೂಸಿದರೆಡಬಲದಲ । ಬ್ಬರವ ಮಾಡಿದುಮಾಡಿದರು ಹಗೆ । ಯರುಣಜಲದಲಿ ಬಾಣಧಾರೆಯನಾಮಹಾರಥರು ॥ ೧೯ ॥ ವಡಬಗೌತಣವಿಕ್ಕುವೊಡೆ ಕಡ । ಲೊಡೆಯಗಹುದು ಸಮರ್ಥನಲ್ಲಾ। ಬಿಡು ಸರಳ ಬೀರುವೊಡೆ ಕಟಕಾಚಾರ್ಯನೆಂದೆನುತ ॥ ಕುಡಿಮೊನೆಯ ಕೂರಂಬುಗಳ ಮಿಗೆ । ಗಡಣಿಸಿ

ದರೊಗ್ಗೊಡೆದು ಷಡುರಥ । ರೊಡಲೊಳಂಬನು ಹೂಳಿದನು ಕಾರಿಸಿದಶೋಣಿತವ ॥ ೨೦ ॥ ಹೊಸಕದ ಶೌರಿಯದ ಬಾಳಿಕೆ । ಯೇಸುದಿನವೀಕರ್ಣಕೃಪದು । ಶ್ಯಾಸನರಕ್ಕೆಕೊಂಬಕುವರನೆ ಸುರರಿಗಲಗಣಸು ಗಾಸಿಯಾದರು ಗಾಯವಡೆದು ವಿ । ಳಾಸವಳಿದರು ರಿಪುಭಟನ ಗೆಲು । ವಾಸೆ ಬೀತುದು ಘಾತುಗೆಟ್ಟುದು ಸಕಲಪರಿವಾರ ॥ ೨೧ ॥ ವಿರಥನಾದನು ಕರ್ಣನಸ್ತ್ರವ । ತಿರುಹಿ ತಿರುವಿಗೆ ತೊಟ್ಟನಾಗುರು । ಗುರುತನೂಜನು ತನ್ನ ಸೂತನ ಸಿರವ ಹರಿಯೆಚ್ಚ ॥ ಸುರಗಿಯನು ಬಿಸುಟೊರೆಯು ತಿರುಹಿದ । ನರಸನನುಜನು ಕೃಪನು ಶಲ್ಯನು । ಕೊರಳಲಸುವನು ಹಿಡಿದು ಹಂಗಿಗರಾದರೊಡೆಯಂಗೆ ॥ ೨೨ ॥ ಗನ್ನದಲಿ ಗುರು ಜಾರಿದನು ಕೃಪ ಮುನ್ನವೇ ಹಿಂಗಿದನು ಕರ್ಣನ । ನಿನ್ನ ಕಾಬವರಾರು ಮೂರ್ಛೆಗೆ ಮೂರುಬಾರಿಯಿದು ॥ ಬೆನ್ನಿತೆತ್ತರು ಬಿರುದರಾತನ । ಕೆನ್ನೆಗಡಿದುಗಿದಂಬುರಣದಲಿ । ನಿನ್ನ ಮಗನರನೆಲೆಗೆ ಮುರಿದನು ಭೂಪ ಕೇಳೆಂದ ॥೨೩॥ ಕೊಂಡು ಬರುತಿರೆ ಭಟರು ಮನ್ನೆಯ । ಗಂಡನಾಗ್ರೆ ಜೀಯ ಯೆನೆ ಖತಿ । ಗೊಂಡು ಕುರುಪತಿ ನೋಡಿದನು ಮೂಗಿನಲಿ ಬೆರಳಿಡುತ ॥ ಭಂಡರೆಂಬೆವೆ ಜಗದ ಗುರುಗಳು । ಗಂಡುಗಲಿಗಳು ವೈರಿಭಟರಿಗೆ । ಹೆಂಡಿರಾಗಿಯೆ ಹೋಗರ್ಕೆ ಘಡ ಹೋಗಿ ನೀವೆಂದ ॥ ೨೪ ॥ ಕಾಲವಹಿಲವ ಕಳೆಯಲೋಸುಗ । ಕೋಲಗುರು ಜಾರಿ ದನು ಶಲ್ಯನ । ಮೇಲುಮುಸುಕನುವಾಯ್ತು ಬಿರುದೇನಾಯ್ತು ಗುರುಸುತನ ॥ ಆಳುವಾಸಿಯ ಕಡುಹು ಕರ್ಣನ । ಬೀಳುಕೊಂಡುದು ಫೂತು ಮಝರೇ । ಬಾಲ ಯೆಂದವನೀಶ ಮೂದಲಿಸಿದನು ತನ್ನವರ ॥ ೨೫ ॥ ಇದಿರೊಳೀಶನ ಫಾಳನಯನದ । ಕದವು ತೆಗೆದಿದೆ ಹಿಂದೆ ಮರಳುವೊ । ಡಿದೆ ಕೃತಾಂತನ ಕೊಂತವರಸಿನ ಮೂದಲೆಯುವಚನ ॥ ಅದಟು ಕೊಳ್ಳದು ರಾಜಸೇವೆಯು । ಪದವಿಪಾತಕವೆಂದೆನುತ ಹೊದ । ರೆದೆಯ ಹೂಣಿಗರೈದೆ ಹೊಕ್ಕರು ಮತ್ತೆ ಸಂಗಡಿಸಿ ॥ ೨೬ ॥ ರಸದ ಬಂಧದ ಬಿಗುಹು ವಹ್ನಿಯ । ಮುಸುಕುನುಗಿದುಳಿವುದೆ ಕುಮಾರನ । ಮುಸುಡಮುಂದಕೆ ಬಿದ್ದು ಬದುಕುವರೇ ಮಹಾರಥರು ॥ ಎಸುತ ಹೊಗುವರು ಭಟನಗಾಯಕೆ । ಮುಸುಡ ತಿರುಹುವರೆಡಿಗಡಿಗೆ ಸಾ । ಹಸದ ಸುಗ್ಗಿಗನೊಡನೆ ತಲೆಯೊತ್ತಿದರು ಅತಿಬಲರು ॥ ೨೭ ॥ ಹರಿದು ಬಿದ್ದವು ಜೋಡು ಮೈಯಲಿ । ಮುರಿದು ಬಿದ್ದವು ಬಾಣವೇರಿನೊ । ಳೊರವರಕುತದ ಧಾರೆ ನಾದಿತು ರಥದ ಹಲಗೆಗಳ ॥ ಹರಿವುದೆಗೆದೆಪಕೀರ್ತಿನಾರಿಯು । ಸೆರಗಹಿಡಿದರು ಹೇಳಲೇನದ । ನೆರಿಯಲೇಕಾಂತದಲಿ ಕರ್ಣನ ಕರೆದನಾದ್ರೋಣ ॥ ೨೮ ॥ ಇದಿರೊಳಾನುವೊಡರಿದು ಹಸುಳೆಯ । ಕದನ ಹಂಗಿಗರಾದೆವಾಳ್ದನ । ವದನಕಮಲಕೆ ನಮ್ಮ ಪೌರುಷವಿಂದು ಹಿಮವಾಯ್ತು ॥ ಇದಿರೊಳಾನಿಹೆ ಶಲ್ಯನೆಡವಂ । ಕದಲಿ ಕೃಪ ಬಲನಪರಭಾಗದೊ । ಳೊದವಿನೀಬಂದೆಸು ಕುಮಾರನ ಕರದ ಕಾರ್ಮುಕವ ॥ ೨೯ ॥ ಚಾಪವೀತನ ಕೈಯೊಳಿರ್ದೊಡೆ । ಯಾಪಿನಾಕಿಗೆ ಗೆಲವು ನೂಕದು । ವೈಪರೀತ್ಯಕೆ ಬೆದರವಾಗದು ಸ್ವಾಮಿಕಾರ್ಯವಿದು ॥ ರೂಪುದೋರದೆ ಬಂದು ರಿಪುವಿನ । ಚಾಪವನು ಖಂಡಿಸುವುದಿದು ಕುರು । ಭೂಪನುಳಿವೆಂದಿನಸುತನ ನೊಡಬಡಿಸಿದನು ದ್ರೋಣ ॥ ೩೦ ॥ ಹಿಂದಣಿಗೆ ತಿರುಗಿದನು ಭಾಸ್ಕರ । ನಂದನನುಕೃಪಮಾದ್ರಪತಿಗುರು । ನಂದನನು ವಾಮದಲಿ ಮಿಗೆಸಂಮುಖದೊಳಾಚಾರ್ಯ ॥ ನಿಂದು ಕದನವ ಕೆಣಕಿದರು ರಿಪು। ಬಂದಿಕಾರನೊಳೇರಸೂರೆಗೆ । ಬಂದು ಬಸಿವುತ ಹೋದರಿನಿಬರು ಬೈದು ರವಿಸುತನ ॥ ೩೧ ॥ ದೆಳವು

ದಳದುಳವಾಯ್ತು ಕೇಸರ । ದೊಳಗೆ ವಿಸಟಂಬರಿದು ಕರ್ಣಿಕೆ । ಯೊಳಗೆ ರಿಂಗಣಗುಣಿದು ಸಂಗರ ಜಯದ ವಧುವಿನಲಿ ॥ ಸಲೆ ಸೊಗಸಿ ತನು ಸೊಕ್ಕಿ ದೆಸೆಪಟ । ದುಳಿವು ಸೌಭದ್ರಾದಿತನಯನ । ಬಿಲು ದನಿಯ ರವವಂಜಿಸಿತು ಜಯಯುವತಿವಿರಹಿಗಳ ॥ ೩೨ ॥ ಸೂರಸುತ ಮಗನೆನಿಸುವೀಮಮ । ಕಾರ ವೀಗಳು ಪೊಳೆತೊಡಾದಾ । ತಾರನುಳಿಪೆನ್ನಿಂದ ತಪ್ಪುವುದೆನುತ ಮನದೊಳಗೆ ॥ ಕೂರಲಗನಾಕರ್ಣ ಬರಸೆಳೆ । ದಾರಿ ಹಿಂದಣಿನೆಚ್ಚ ಪಾರ್ಥಕು । ಮಾರಕನ ಚಾಪವನು ಮುಕ್ಕಡಿಯಾಗಿ ಖಂಡಿಸಿದ ॥ ೩೩ ॥ ಉರವ ಜಯವಧುವೊಕ್ಕತನದಲಿ । ಮುರಿದಕಡ್ಡಿಯಿಡೆನಲು ಕರದಿಂ । ಮುರಿದು ಬಿದ್ದುದು ಚಾಪವಿಂದ್ರಕುಮಾರನಂದನನ ॥ ಬೆರಗಿನಲಿ ಮುಖದಿರುಹಿ ಹಿಂದಣಿ । ಗಿರಿದ ಕರ್ಣನ ನೋಡಿ ಮುಖದಲಿ। ಕಿರುನಗೆಯ ಕೇವಣಿಸಿ ನುಡಿದನು ಬೆರಳನೊಲೆದೊಲೆದು ॥೩೪॥ ಆವಶರಸಂಧಾನವಚ್ಚರಿ। ಯಾವಸರಳವಿಲಾಸ ಭಾಪು ವಿ । ದಾವಪರಿ ಮೆರೆಖುವೂತು ಧಣುಧಣು ದೇವಬಿಲ್ಲಾಳೆ ॥ ಈವಿವೇಕವ ನಾರುಬಲ್ಲರು । ಭಾವನಹುದ್ಯೆ ಹಿಂದೆ ಬಂದೆಸು। ವೀವಿಗಡತನ ನಿನಗೆ ಸಲುವುದು ಕರ್ಣಕೇಳೆಂದ ॥ ೩೫ ॥ಎನಲು ಲಜ್ಜಿತನಾಗಿ ತಿರುಗಿದ । ನನುವರದೊಳಾಕರ್ಣನೀತನ । ಧನು ಮುರಿಯೆ ಕೈಕೊಂಡರೀದ್ರೋಣಾದಿನಾಯಕರು ॥ ಕನಕರಥವನು ದ್ರೋಣನಾಗುರು। ತನುಜ ಸಾರಥಿಯನು ಕೃಪಾಚಾ। ರ್ಯನು ತುರಂಗವ ಶಲ್ಯ ಕಡಿದನು ಭಟನ ಟೆಕ್ಕೆಯವ ॥ ೩೬ ॥ ತುಡುಕುವೊಡೆ ಧನುವಿಲ್ಲ ಮುಂದಡಿ। ಯಿಡಲು ಸಾರಥಿಯಿಲ್ಲ ರಥಕಡಿ । ವಡೆದುದಿನ್ನೆಂತೊದಗುವನೊ ಸುಕುಮಾರ ತಾನೆನುತ ॥ ಪಡೆ ಬಿಡದೆ ಬೊಬ್ಬಿಡಲು ಬೆದರದೆ । ಕಡುಗಿ ಖಡುಗವ ಕೊಂಡು ರಿಪುಗಳ । ಕಡಿದು ಹರಹುತ ಬೀದಿವರಿದನು ಬಲದಮಧ್ಯದಲಿ ॥ ೩೭ ॥ ಈತನಿರೆ ಕಲ್ಪಾಂತರುದ್ರನ । ಮಾತು ಜಗಕೇಕೆನಲು ವೈರಿ । ವ್ರಾತವನು ಮುಂಕೊಂಡು ಹಾಯ್ದನು ನಿಶಿತಖಡ್ಗದಲಿ ॥ ಸೂತನೇ ಶಿಶು ಷಡುರಥರ ಕರೆ । ಈತನಾರ್ಕೈ ಹೇಳಿ ಭಯವಿ । ನ್ನೇತಕೆಂದವನೀಶ ಮೂದಲಿಸಿದನು ತನ್ನವರ ॥ ೩೮ ॥ ಗೆಲಿದರಭಿಮನ್ಯುವನು ತನ್ನವರೆಲವೊ ತಾವೀಳೆಯುವನನುತವೆ । ಮೆಲುನಗೆಯರಿಕೆಶಿರಥರ ಜರೆದನು ಕೌರವರಾಯ ॥ ಬಳಿಕ ಬಲನಡವಂಕದಲಿ ಮಂ । ಡಳಿಸಿತತಿಪೋಹರಿಸಿದುದು ರಿಪು । ಜಲಧಿವಡಬನೊಳಾಂತು ತಾಗಿದರಂದು ವೈರಿಗಳು ॥ ೩೯ ॥ ತುಡುಕಿದವು ತೇಜಿಗಳು ವಾಘೆಯ । ಗಡಣದಲಿ ತೇರುಗಳು ಮುಂಚಿದ । ವೆಡಬಲದ ಬವರಿಯಲಿ ಮುತ್ತಿದವಖಿಳಗಜನಿವಹ ॥ ಕಡುಮನದ ಕಾಲಾಳು ಕರೆದುದು । ಕಡುಗಧಾರೆಯನೀತನಳವಿಯ । ಕೆಡಿಸಿ ತಲೆಯೊತ್ತಿದರು ಭೂಪನ ಮೊನೆಯ ನಾಯಕರು ॥ ೪೦॥ ವಿಷದ ಹುಟ್ಟಿಯೊಳ್ದಗಿ ನೊಣ ಜೀ । ವಿಸುವವೇ ಶಿವಶಿವ ಕುಮಾರನ। ಮುಸುಡ ಮುಂದಕೆ ಬಿದ್ದು ಬದುಕುವರುಂಟೆ ಭಟನಿಕರ ॥ ಕುಸುರಿದರಿದನು ಕರಿರಥವ ನಿ । ಪ್ಪಸರದಲಿ ಕಾಲಾಳುಕುದುರೆಗ । ಳಸುವ ಸೂರೆಯಬಿಟ್ಟನಂತಕದೂತಸಂತತಿಗೆ ॥ ೪೧ ॥ ಅರಿಭಟರ ಬೊಬ್ಬೆಗಳ ಮೊಳಗಿನ । ಲರುಣಜಲವರುಷದಲಿ ಸುಭಟರ । ಕೊರಳವನದಲಿ ಕುಣಿದುದೀತನ ಖಡ್ಗವನಕೇಕಿ ॥ ಸುರಿವಖಡ್ಗದ ಮೊನೆಯ ರಕುತಕೆ । ತರತರದಿ ಬಾಯೊಡ್ಡಿ ಶಾಕಿನಿ । ಯರ ಸಮೂಹವು ಬಳಿಯಲೈದಿತು ಪಾರ್ಥನಂದನನ ॥ ೪೨ ॥ ಕರುಳ ಹೂಗೊಂಚಲಿನ ಮೂಳೆಯ । ಬಿರಿವಮುಗುಳ ನವಖಂಡದಿಂಡೆಯ । ತರತರದ ತಳಿರೆಲೆಯ ಕಡಿದೋಳುಗಳಕೊಂಬುಗಳ ॥ ಬೆರಳಕಳಿಕೆಯ ತಲೆಯಪಲಬಂ । ಧುರದ ಘಾತದಕ್ಷನವಮಧು । ಕರಭರಣವೆ

ನಲೆಸೆದುದಾತನಖಡ್ಗಚೈತ್ರದಲಿ ॥ ೪೩ ॥ ವೈರಿಸುಭಟರಿಗಮರಲೋಕದ । ನಾರಿಯರಿಗೆ ವಿವಾಹವನು ವಿ । ಸ್ತಾರಿಸಿದಸಮಯದೊಳಗಾಡಸಿತಾಕ್ಷತಾವಳಿಯು ॥ ತಾರಕೆಗಳೆಸೆದನಭದೋಲ್ ರಿಪು। ವಾರಣದ ಮಸ್ತಕದ ಮುತ್ತುಗ । ಳೋರಣಿಸಲೊಪ್ಪಿದವು ಖಡ್ಗಸುರೇಂದ್ರಸುತಸುತನ ॥ ೪೪ ॥ ಶಾಕಿನಿಯರೋಕುಳಿಯಧಾರೆಯು । ಜೀಕೊಳವಿಯೋಜನವ ಜಲಜಂ । ತ್ರಾಕರುಷಣವೊ ರಕುತಲತೆಗಳ ಕಡಿಯಕೊಂಕುಗಳೋ॥ ನೂಕಿಕ್ಕೊಯ್ಯೊರಳುಗಳೊ ಮುಂಡದ।ಮೊಕಿನಲಿ ಬಗಿದೊಗುವನೆತ್ತರು। ನಾಕವನು ನಾದಿತ್ತಸಲು ಸವರಿದನು ಪರಬಲವ ॥ ೪೫ ॥ ಕೆಟ್ಟು ಬಿಟ್ಟೋಡಿದರು ಭಟನರೆ । ಯಟ್ಟಿದನು ಬಲದೊಳಗೆ ರಾಯಘು । ರಟ್ಟಪಾರ್ಥನ ತನಯನೆಲೆಧೃತರಾಷ್ಟ್ರ ಕೇಳೆಂದ ॥೪೬॥ ಸೀದದನು ಸೌಬಲರೊಳಿಪ್ಪ । ತ್ತೇಳನಾಕ್ಕೈಕೆಯರೊಳಗೆ ಹದಿ।ನೇಳನಗ್ಗದ ರವಿಸುತನ ಮಂತ್ರಿಗಳೊಳೈವರನು॥ ಮೇಲೆ ಕೈಕಯರೊಳಗೆ ಹತ್ತುನೃ । ಪಾಲರನು ಕೌಸಲೆಯವರನೇ।ಪಾಳಬರ್ಬರರೊಳಗೆ ಕೊಂಳಿನು ಹತ್ತುಸಾವಿರವ॥೪೭॥ ಧನು ಮುರಿದಬಳಿಕಿಮ್ಮಡಿಸಿತೀ। ತನಪರಾಕ್ರಮವೆನುತ ಸೇನಾ।ವನಧಿ ಜರಿದುದು ಭಟರು ಹರಿದುದು ಬಿಟ್ಟಮಂಡೆಯಲಿ॥ ಜನಪತಿಯು ಕಟ್ಟಳವಿಯಲಿ ಕವಿ।ದಿನನಸುತನಡ್ಡೈಸಿದನು ಹೋ।ಗೆನುತ ನಾರಾಚಲದಲಿ ಮುಸುಕಿದನರ್ಜನಾತ್ಮಜನ॥೪೮॥ ಎಳೆಯರವಿರಶ್ಮಿಗಳು ರಕ್ತೋತ್ಪಲದೊಳಗೆ ಕವಿದಂತೆ ಹೊನ್ನರೆ । ಬಳಿದಹಿಳುಕನೆ ಕಾಣಲಾಯಿತು ಭಟನ ಕಾಯದಲಿ ॥ ಹೊಳೆದು ಹೊಂಮಿಗ ಹೊಯ್ಯುವೋಲ । ವ್ವಳಿಸಿ ಕರ್ಣನ ರಥಹಯವನ । ಪ್ಪಳಿಸಿ ಮರಳುತ ಲಾಗಿನಲಿ ಖಂಡೆಯವ ಖಂಡಿಸಿದ ॥ ೪೯ ॥ ಕರದ ಕರವಾಳುಡಿಯೆ ಬೆದರದೆ । ಹರಿದು ಧುರದೊಳು ಗದೆಯ ಕೊಂಡ । ಬ್ಬರದ ರೋಷದೊಳುಲಿದು ಹರಿಗೆಯನಣೆದು ಮುಂದಣಿಗೆ ॥ ಅರರೆ ಸಂಮುಖವಾಗೆನುತ ಸಂಗರದೊಳುರವಣಿಸಿದನು ಕರ್ಣನ । ತೆರಳಿಚಿದನೈ ನೂರುಹೆಜ್ಜೆಯನಿಂದ್ರಸುತಸುತನ ॥ ೫೦ ॥ಗುರುಸುತನ ಸಾರಥಿಯು ಮಾದ್ರೇ । ಶ್ವರನ ರಥವನು ಕೃಪನ ತೇರಿನ । ತುರಗವನು ಕೆಡೆಹೊಯ್ದು ದ್ರೋಣನರಥವ ಹುಡಿಮಾಡಿ ॥ ಅರಸನೇರಿದಕರಿಗೆ ಹಾಯ್ದನು। ಮರಳಿ ದುಶ್ಶಾಸನನ ಮುಖವನು। ಚರಣತಳದಿಂದೊದೆದು ಹೊಯ್ದನು ಮತ್ತೆ ರವಿಸುತನ ॥೫೧॥ ಗದೆಯು ಹೊಯ್ಲಲಿನೊಂದು ರೋಷದೊ । ಳದಿರಥಗೆ ಸೈನೆಗೆದರೋಮದ। ಹೊದರುಗಳ ಬಿಡುಗಣ್ಣ ಕೆಂಪಿನಕುಣಿವಮೀಸೆಗಳ॥ ಕುದಿದ ಹೃದಯದಕಾದದೇಹದ। ಕದನದಲಿ ರವಿ ಸೂನು ಮೇಲಿಕ್ಕಿದನು ಹೋಗದಿರೆಲವೊ ಹೋಗದಿರೆನುತ ತೆಗೆದೆಚ್ಚ ॥ ೫೨ ॥ ಸರಳಮಯಸರ್ವಾಂಗವಿನ್ನೀ । ಸರಳ ನಡೆ ವಿಂಬಿಲ್ಲಮೈ ಮಗು । ಳರಿಯನದನಭಿಮನ್ಯು ಕರ್ಣನಮೇಲುಮಾಯಿದನು ॥ ತರಹರಿಸಿ ಕೆಲಸಿಡಿದುರಿಪುಭಟ । ನುರವನುದರವನೆಡಬಲನ ಕಿ । ಬ್ಬರಿಯನೆಚ್ಚನು ಕರ್ಣನರುವತ್ತೈದುಬಾಣದಲಿ ॥ ೫೩ ॥ ಸರಳು ನಡಲುಬ್ಬೆದ್ದು ಬೊಬ್ಬಿರಿ । ದುರವಣಿಸಿಬರೆ ದಿವ್ಯಶರದಲಿ । ಕರವೆರಡ ಹರಿಯೆಚ್ಚೊಡಾಗಲೆ ಕೆಡೆದುದವನಿಯಲಿ ॥ ಇರದೆಗಹಗಹಿಸಿದನು ಭಟನೆಲೆ । ಮರುಳಸೂತಜ ಕೈಮುರಿಯೆ ಸಂ । ಗರದಸಿರಿ ಹಿಂಗುವುದೆ ತನ್ನನೆನುತ್ತ ಗರ್ಜಿಸಿದ ॥೫೪॥ ಸುರಿವರುಧಿರದಸರಿಯ ಸೆರಗಿನೊ । ಳೊರಸಿ ರಥದಚಕ್ರಗಳನೊದೆದನು । ತಿರುಹಿ ಗಾಲಿಯ ಕೊಂಡು ಮುಂಗೈಗೊಂಡು ನಡೆನಡೆದು ॥ ಅರಿಬಲವನಿಡೆ ಮುಗ್ಗಿ ಕೆಡೆದವು । ತುರಗವಜಗಿಜಿಯಾದವಿಭರಥ । ಹೊರಳಿದವು ಪುರುಳಿದವು ಹೂಣಿಗರಟ್ಟಿ ಸಮರದಲಿ॥ ಹರಿಯು ಚಕ್ರದ ಸತ್ವವೀತನ

ಘುರದೊಳಾಯ್ತೆನೆ ರಥದ ಚಕ್ರದೊ । ಳರಿಬಲವನಿಡೆ ಮುಗ್ಗಿ ಕೆಡೆದವು ಬಹಳತಳತಂತ್ರ ॥ ಬಿರುದಪೊಗಳಿಸಿಕೊಂಬಪಟುಭಟ । ರುರವಣಿಸಿ ಹಿಂದಾಯ್ತು ರಾಯರ । ಗುರುವಕಂಡವರಿಲ್ಲೆನುತ ಕುರುರಾಯಬಿಸುಸುಯ್ದ ॥೫೭॥ ಮನದಖತಿ ಬಿಗುಹೇರಿ ದುಶ್ಯಾ । ಸನನ ಸುತನಿದಿರಾಂತು ಖಡುಗದ। ಮೊನೆಯು ಚೂರಿಸಿ ದಂಡೆವಲಗೆಯು ಗತಿಗಳೊದರಿಸುತ ॥ ತನಗೆ ಮೃತ್ಯುವ ಕರೆವವೊಲು ಪಾ । ರ್ಥನಕುಮಾರನ ಕರೆದು ಹಳಚಿದ । ನೆನಿಮಿಷಾವಳಿ ಘೂತುಪಾಯ್ಕೆನೆ ಮೊಳಗಿದರು ಭಟರು ॥೫೭॥ ಸೇನೆ ಮುರಿದುದು ಮಕುಟವರ್ಧನ । ರಾನಲಾಪುವರಿಲ್ಲ ಪಾರ್ಥನ । ಸೂನು ರಣದಲಿ ಬೀದಿವರಿದನು ಗದೆಯು ತಿರುಹಿಸುತ ॥ ಮಾನನಿಧಿಗಳು ಮುಂದುಗೆಟ್ಟರ್ । ದೇನುಸಾಹಸವಿವಗೆನುತ ಮದ। ದಾನೆಗಳ ಹಟನೆಂಟು ಸಾವಿರಘುಟೆಯು ನೂಕಿದರು ॥೫೮॥ ಮದಕರಿಗಳುರವಣೆಗೆ ಮೇಟನಿ । ಯದಿರಿತೆನೆ ನಡೆದುದು ಮಹಾದೇ । ವದಟರುರುವಣಿಸಿದರು ಬಲುಗಜಘುಟೆಯುನಾಯಕರು ॥ ಪದಹತಿಯು ಕೆಂಧೂಳಿಯುಮರರ । ಬೆದರಿಸಿತ್ತು ಕುರುಬಲದ ಜೋದರು । ಕದನದಲಿ ಬಲುಸರಳಮಳೆಗರೆದಾಂಕಿದರು ಭಟನ ॥೫೯॥ ಭುಜವ ಹೊಯ್ದನು ಮೇಲನಮರ । ವ್ರಜವುಘೇಯೆನೆ ಸಿಂಹನಾದದಿ । ನಿಜಗಡೆಯಲೊಳಪೊಕ್ಕು ಹೊಯ್ದನು ಗಜದಮಸ್ತಕವ ॥ ಗಜದಗಾವಳಿ ಕೋಡನೂರಿದ । ವಜಿತವೈರಿವ್ರಾತಮಿಗೆ ಗಜ । ಬಜಿಸೆ ಕೊಂದನು ಕರಿಘುಟೆಯು ಹದಿನೆಂಟುಸಾವಿರವ ॥೬೦॥ ಗಾಲಿ ತೀರಿದವೆಂದುಬಗೆದನೆ । ಕಾಳಗಕೆ ತಪ್ಪೇನೆನುತ ಕರ । ವಾಳವಾತನಬಗೆಯದೊಳಪೊಕ್ಕರಗಿದನುತಿರವ ॥ ಮೇಲುವಲಗೆಯುಲಣೆದುಹೊಯ್ದನು । ಬಾಲಕನಗಾಯುವನುನಸುನಗು । ತೇಳಿಸುತದಂಡೆಯಲಿ ಕಳೆದನು ತಿವಿದನವನುರವ ॥೬೧॥ ಕರಹತಿಗೆ ಧಡಧಡಿಸಿ ತಿರ್ರನೆ । ತಿರುಗಿಬೀಳುತ ಧೈರ್ಯವನು ಹೊಡ । ಕರಿಸಿಹೊಲಬಿನೊಳೆದ್ದು ತಿವಿದನು ಪಾರ್ಥನಂದನ ॥ ಅರಿಕೃಪಾಣದ ಗಾಯದಲಿ ತರ । ಹರಿಸಲಾರದೆ ಕೆಡಹುತಹಿತನ । ನೆರಗಿದನು ಬಳಿಕವನಿಗೊರಗಿದರಾಕುಮಾರಕರು ॥೬೨॥ ಕಾಳುಗಿಚ್ಚೆದ್ದಡವಿಯನು ಕುಡಿ । ನಾಲಿಗೆಯೊಳಳವಡಿಸಿ ದಳ್ಳುರಿ । ಜಾಲ ತಗ್ಗಿದವೋಲು ಗಗನದ ಮುಗಿಲವೋಹರದ ॥ ಧಾಳಿಯಲಿ ಯರೆಯಟ್ಟಿ ಬಿಸುಡುವ । ಗಾಳಿಯುರವಣೆ ನಿಂದವೊಲು ಸುರ । ಪಾಲತನಯನತನಯನಸ್ತಮಿಸಿದನು ರಣದೊಳಗೆ ॥೬೩॥ ತೋಳತಲೆಗಿಂಬಿನಲಿ ಕೈದುಗ । ಳೋಳಿಗಳ ಹಾಸಿನಲಿ ತನ್ನಯ । ಕಾಲದೆಸೆಯಲಿ ಕೆಡೆದ ಕೌರವಸುತರು ನೂರ್ವರಲಿ ॥ ಬಾಲಕನು ಬಳಲಿದನು ಸಮರದ । ಲೀಲೆಯಲಿ ಕ್ಷಣಿದಾಡಿ ಬಸವಳಿ । ದಾಳುಗಳ ದೇವನು ಮಹಾಹವದೊಳಗೆ ಪವಡಿಸಿದ ॥ ೬೪ ॥ ಸಸಿಯಬಿಂಬವಬಗೆಯದದಟನ । ಮುಸುಡು ಮುರಿಯದು ಮೈಯದೀಧಿತಿ। ಮಸುಳಿಸದು ಕಣ್ಣಾಲಿ ಕರಗದು ಕಾಯಜವಗೆಡದು ॥ ಎಸಕ ಮಸುಳದು ಸಮರದಲಿ ಪೌ । ರುಷವಮಾಡಿ ವಿರೋಧಿರಾಯರ । ಕುಸುರಿದಡೆಗೆಡಹಿದನು ಪಾರ್ಥನಸೂನು ರಂಜಿಸಿದ ॥ ೬೫ ॥ ಬಿಗಿದಹುಬ್ಬಿನಬಿಟ್ಟಕಂಗಳ । ಹೊಗರುಮೋರೆಯ ಹಿಣಿಲಮಂಡೆಯ । ಬಿಗಿಯಮೊತ್ತರಜೋರಿನೊಡಲಿನತುರುಗಿದಂಬುಗಳ ॥ ಹೆಗಲಕೊಯ್ಲಿನತಗ್ಗಿನಲಿ ಸೈ । ನೆಗೆದರೋಮದ ವಿಕ್ರಮಾಗ್ನಿಯು। ತಗಹುಬಿಡದಭಿಮನ್ಯುವೆಸೆದನು ಶಸ್ತ್ರಶಯನದಲಿ ॥೬೬॥ ಸಾವಹರೆಯವೆ ಯೆಂದುಗಗನದ । ದೇವತತಿ ಮರುಗಿದುದು ಶಕ್ರನ । ಸಾವಿರಾಲಿಗಳೊರತೆ ಮಸಗಿತು ಪೌತ್ರಶೋಕದಲಿ ॥ ತಾವುಷಡುರಥರೊಬ್ಬಹಸುಳೆಯ । ಹೇವವಿಲ್ಲದೆ ಕೊಂದರೋ ಸುಡ । ಲಾವವೀರ

ರು ಕೌರವಾದಿಗಳೆಂದುದಮರಗಣ ||೬೭|| ಮಗುವು ವೇಷವಧರಿಸಿ ಧುರದೊಳ | ಗಗಲಿ ಹೋದೊಡೆ ತನ್ನ ಚಿತ್ತಕೆ | ಡಗೆಯ ಡಾವರವಾಯ್ತು ತನಗೊಳಗಾಯ್ತು ಪರಿತಾಪ || ಮಗನ ಮರಣದೊಳೆಂತು ಜೀವಿಸಿ | ಬಗೆವಳಕಟ ಸುಭದ್ರೆಯನುತವೆ | ಮೃಗುಜಲವ ಬೆರಳಿಂದ ಮಿಡಿದರು ಗೌರಿದೇವಿಯರು ||೬೮|| ಧುರದಪ್ರಳಯಕೃತಾಂತನನು ಪರಿ | ಹರಿಸಿದೆವು ಮೃತ್ಯುವಿನ ಪಾಶದ | ಕೊರಳ ಬಳಚಿದೆವೆನುತ ಕೌರವಬಲದ ನಾಯಕರು || ಶಿರವ ತಡಹುತ ತಮ್ಮ ಶಿಬಿರಕೆ | ತಿರುಗಿದರು ಬಾಲಕನನೀಕ್ಷಿಸ | ಲರಿದು ತನಗೆಂಬಂತೆ ರವಿಜಾರಿದನು ಪಶ್ಚಿಮಕೆ ||೬೯|| ಹಲವುಗಜವೊಂದಾಗಿ ಸಿಂಹದ | ಮೊಲೆಮರಿಯ ಕೊಂಬಂತೆ ಹಾವಿನ | ಬಳಗ ಗರುಡನಮರಿಯನಿರಿದವೊಲಾಯಿತಕಟೆನುತ|| ಅಳಲಿದುದು ಸುರಕಟಕವವನಿಗೆ | ಯಿಳಿದರಪ್ಸರಗಣಿಕೆಯರು ಕೋ | ಮಲನ ತಂದರು ವಾಸವನ ಸಿಂಹಾಸನದ ಹೊರೆಗೆ ||೭೦|| ಸೋಲವರಿಗಳಿಗೆಂದು ಹರುಷವ | ತಾಳದಿರು ಧೃತರಾಷ್ಟ್ರ ಕೃಷ್ಣನ | ಸೋಲವದು ಪಾಂಡವರು ಸೋತವರಲ್ಲ ನಂಬುವದು || ಸೋಲವಿದು ನಾಳಿನಲಿ ಪ್ರಳಯದ | ಕಾಲ ಕೌರವಕುಲಕೆ ದಿಟವಿದು | ಸೋಲವುಂಟೇ ವೀರನಾರಾಯಣನ ಭಕ್ತರಿಗೆ || ... ||೭೧||

ಅಂತು ಸಂಧಿ ೭ಕ್ಕೆ ಪದ ೪೮೯ ಕ್ಕಂ ಮಂಗಳಂ.



## ಎಂಟನೆಯ ಸಂಧಿ.

||ಸೂಚನೆ|| ಅರಿಮಹೀಶಕುಮಾರಧೀರನು | ವರಕಿರೀಟಿಕುಮಾರ ರಣದಲಿ | ಸುರರನಗರಿಗೆ ನಡೆಯೆ ಹಲುಬಿದನಂದು ಯಮಸೂನು ||

|| ಪದ || ತೆಗೆದುದೀಪರಿವಾರ ಕಹಳಾದಿಗಳ ಸನ್ನೆಯಲುಭಯಬಲ ಕಾ | ಳಗವನುಳಿದರು ಬಂಕು ಹೊಕ್ಕರು ತಮ್ಮಪಾಳಯವ || ಮಗನು ರಣದಲಿ ಮಡಿದಹದ ಬೀದಿ | ಗಳೊಳಾದುದು ವಾರ್ತೆ ದೂತರು| ದುಗುಡಭಯದಲಿ ಬಂದು ಹೊಕ್ಕರು ರಾಜಮಂದಿರವ||೧|| ಅವನಿಪನ ಖಂಡೆಯವ ನಕುಲನ | ಪವನಸುತನ ಕಠಾರಿಯನು ನೃಪ | ನಿವಹದಾಯುಧತರೆಯನೊಯ್ಯನೆ ತೆಗೆದು ಬೈಚಿಟ್ಟು || ಬವರದಲಿ ಸುತನಳಿದನೋ ಕೌರವನ ಕೈಯೊಳಗಾದನೋ ಸಂ | ಭವಿಸಿದಾಹದನೆಂಬನೃಪತಿಯ ಕಂಡರವರಂದು ||೨|| ಅವನಿಪಾಲಕುಮಾರ ಕಂಠೀ| ರವನು ರಣದಲಿ ಬೀದಿವರಿದು | ತ್ರಿವಿದೊಳಹಿತರನಿರಿದು ಕೌರವರಾಯನಂದನರ || ಜವನನಗರಿಗೆ ಕಳುಹಿ ತಾ ವಾ | ಸವನ ಸಿಂಹಾಸನದ ಬಯಕೆಗೆ | ತವಕದಲಿ ಜಾರಿದನೆನಲು ಶಿವಯೆನುತ ಬಸವಳಿದ || ೩ || ಕುಲಿಶಹತಿಯಲಿ ಕುಲಶಿಲೋಚ್ಚಯ | ವಿಳಿಗೆಕೆಡೆವಂದದಲಿ ನಿಜಸುತ | ನಳಿದವಾರ್ತಾವಚನದುಪಟಳಕವನಿಪಾಲಕನು || ಮಲಗಿದನು ಮೈಮರೆದು ದುಮ್ಮಹಿಮಂ| ಡಲಿಕರೊಳು ಗುಜುಗುಜನಲಿರೆ ಕಳ | ವಳಿಕೆ ಮೊಳೆತುದು ಕಟಕದಲಿ ದುಮ್ಮಾನವಮಯವಾಗೆ ||೪|| ಅರಮನೆಯ ಗಜಬಜದ ಹವಣಾರಿ | ದರಸನಪಗತನೆಂದು ಪಾಳಯ | ವಿರುಳು ನಡುಗಿತು

ಕೈಯಸೂರೆಗೆ ಹೊಕ್ಕು ಕೆಲಕಡೆಯ ॥ ನೆರವಿ ಮಸಗಿತು ಕೆತ್ತವಂಗಡಿ । ದುರುಳರುಬ್ಬರಿಸಿದರು ಮು
ಸುಕಿನ । ಸುರಗಿ ತೆತ್ತವು ಮಂದಿ ದಳವುಳವಾಯ್ತು ಧನಿಕರಿಗೆ ॥೫॥ ಹೊಳಲು ತಲೆಕೆಳಕಾಯ್ತು ಹು
ಯ್ಯಲು । ತಳಿತುದೊಳತೋಟಿಯಲಿ ಕೆತ್ತವು । ನಿಳಯನಿಳಯದಕದನದುದ್ರೇಕದಲಿ ಮಯವಾಯ್ತು॥
ಎಲೆಲೆ ಕೆಟ್ಟುದು ಕಟಕವೆನುತು । ಮ್ಮಳಿಸಿದರು ಸಚಿವರು ಮಹೀಪತಿ । ಯಳಿವನರಿಯಲು ಸಾಸಿಕವ
ಲಾರೈದರುಸುರುಗಳ ॥೬॥ ಉರಿಯ ಚೂಣಿಯವುಸುರವು । ಗನೊಳುರುವಣಿಸುತಿದೆ ಧರಣಿಪತಿ ಸು।
ಸ್ಥಿರನು ಹೊಯ್ ಹೊಯ್ ಹೊಳಲ ಬೆದರಿಸಿ ಸುಲಿವಬಣಗುಗಳ॥ ಹರಿಯೆನಲು ಹೊರವಂಟು ಹೊ
ಯ್ದರು । ತುರಗಗಜರಥ ಬೀದಿವಿಡಿದವು । ನೆರವಿದೊಳಸಿನ ಮನ್ನೆಯರನೆಳಸಿದರು ಶೂಲದಲಿ ॥ ೭ ॥
ಪಾಳೆಯದೊಳೇನೈಯ ಗಜಬಜ । ವೇಳು ಹೋಗೈ ಭೀಮ ಸಾಯ್ಗಳ । ಸೀಳು ತಡವೇಕೆನುತ ಧರ್ಮ
ಜ ನೇಮವನು ಕೊಡಲು ॥ ಮೇಳವಿಸಿ ಯೊಳಸುಳಿವನಾಯ್ಗಳ । ಸೀಳಿಸಿದನೊಳತೋಟಿಗುರುವಣೆ।
ಯಾಳುಗಳ ಕೊಲಿಸಿದನು ಸಂತೈಸಿದನು ಪಾಳಯವ ॥ ೮ ॥ ಹೊಳಲ ಗಜಬಜವಡಗಿತರಸನನ। ಹೊ
ಳಲೊಳಗೆ ಪಸರಿಸಿತು ಶೋಕಾ । ನಲನು ಭೂಪಾಲಕನ ಸ್ಮರಣೆಗಾಯ್ತು ಮಹನವಮಿ ॥ ಒಳಗುರಿ
ವಹಸಿಮರದ ತುದಿಯಲಿ । ಜಲವೊಗುವವೊಲು ಹೃದಯಶಿಖಿಯುರೆ । ತಳಿತು ಲೋಚನವಾರಿ ತುಳು
ಕಿದುದನಿಲಜಾದಿಗಳ ॥ ೯ ॥ ಮರವುತೆಚ್ಚರುತವನಿಪತಿ ಕರೆ । ತರಳನಾವೆಡೆ ತಾರೆನುತ ಕೇ । ಸರಿಯ
ದಾವೆಡೆ ಕಂದ ಬಾರೆನುತಪ್ಪುವನು ಬಯಲ ॥ ಹೊರಳಿದನು ಹೆದರಿದನು ಸಲೆ ಕಾ । ತರಿಸಿದನು ಮೋ
ಹಾಂಧಕಾರದ । ಕರುಣವನು ಕೈಸೂರೆಗೊಂಡನು ಮನದೊಳೆಚ್ಚರುತ ॥ ೧೧ ॥ ಶಿಶುವವನು ಹದಿ
ನಾಲ್ಕುವರುಷಕೆ । ಹಸುಳೆಯನು ರಿಪುಬಲಕೆ ಕೊಲ್ಲಿಂ । ದಸಿಯಧಾರೆಯ ಮೊನೆಗೆ ನೂಕುತನಾನೆ
ಕೊಲಿಸಿದೆನು॥ ವಸುಮತಿಯನಿದನೊಲ್ಲೆ ಪಲ್ಲವ । ವಸನನಹೆ ನೀನಾಗು ಸ್ವೈರಿಸ। ಲಸದಳವು ತನಗೆಂದು
ಶೋಕೋದ್ರೇಕಮನಸಾದ ॥ ೧೧ ॥ ಬಂದು ಫಲುಗುಣನೆನ್ನ ಮೋಹದ । ಕಂದನಾವೆಡೆಯೆಂದೊಡಾ
ವೇ । ನೆಂದು ಮರುತ್ತರವ ಕೊಡುವೆನು ವೈರಿಸಾಯಕರು ॥ ಕೊಂದರೆಂಬೆನೊ ಶಿವಮಹಾದೇ । ವೆಂ
ದು ಪುತ್ರಸ್ನೇಹ ಮಿಗೆ ಸಂ । ಬಂಧದಲಿ ಹಂಬಲಿಸಿ ಹಲುಬಿದನಂದು ಯಮಸೂನು ॥ ೧೨ ॥ ಸೋ
ಮವಂಶಕುಲಾಬ್ಧಿಚಂದ್ರ ಸ । ನಾಮ ಸದ್ಗುಣಧಾಮ ರಿಪುನಿ । ಸ್ಸೀಮ ಹಾಯೆನ್ನಗಲಿದೊಡೆನಾನೆಂ
ತು ತಾಳುವೆನು ॥ ನಾ ಮರೆವಬಗೆಯೆಂತೊ ಕಂದನ । ಪ್ರೇಮಘನವೆನ್ನೊಡಲ ಶೋಕಕೆ । ಭೀಮ
ತೆರನೇನೆಂದು ಕಂಬನಿದುಂಬಿದನು ನೃಪತಿ ॥ ೧೩ ॥ ಅಡವಿಯಲಿ ಜನಿಸಿದೆವು ಯೈವರು । ಪೊಡವಿಪತಿ
ಪಾಂಡವನನಗಲಿಯೆ । ಒಡಲಹೊರದೆವು ಕಾಡಿನೊಳಗೋಲಾಡ್ಯಿನಾವಿನ್ನು ॥ ನುಡಿದಭಾಷೆಯ ಸಲಿ
ಸಿದೆವು ಮಗ । ನೊಡನೆ ಮಡಿವುದೆ ಲೇಸು ನಮಗಿ। ನ್ನೊಡಲು ಹೊರೆಯಲುಬೇಕೆ ಸಾಕೆಂದೆನುತ ಮೈ
ಮರೆದ ॥ ೧೪॥ ಅಸಮಚಕ್ರವ್ಯೂಹವದು ನೀ । ಶಿಶುವು ನಿನಗಸದಳವು ಯೆಂದೊಡೆ । ನಸುನಗುತ ಕೈ
ಕೊಂಡೆ ರಣದಲಿ ನಲಿದು ರಿಪುಗಳನು ॥ ಕುಸುರಿದರಿದಂದವರ ಮರ್ದಿಸಿ । ಯಸುವಕಡೆಯಲಿ ಕಳಚಿ
ನಮಗೀ । ಬಸುರಲಿಕ್ಕಿದೆ ಕಚ್ಚ ಹಾಯೆಂದೊರಲಿದನು ಭೀಮ ॥೧೫॥ ಹಾಕುಮಾರಕ ನಿನ್ನನಾವವಿ ।
ವೇಕತನದಲಿ ನೂಕಿ ಕೊಲಿಸಿದೆ । ವೇಕೆ ಯಿವದಿರ ಮುಖವ ತಾ ನೋಡುವೆನೆಯೆಂದೆನುತ ॥ ಶೋಕತ
ರದಿಯೊಳಮ್ಮು ಮುಳುಗಿಸಿ । ಯಿಾಕದನಗಲಿಗಳನು ಮೆಚ್ಚಿಸಿ । ಯೇಕೆಮರಳದೆ ಪೋದೆಯೆಂದಳಲಿ

ದರು ಮಾದ್ರೆಯರು ‖ ೧೬ ‖ ಅರಮನೆಯ ಗಜಬಜವ ಕೇಳಿದು । ದೊರೆಗಳೊಳಗಿಂದಳಿದರಾರೆಂ । ದರಸಿಯರು ಬೆಸಗೊಳಲು ದ್ರೌಪದಿಗರುಹಿದರು ಹದನ ‖ ಉರಿಯ ಡಾವರವೆಳೆಯಬಾಳೆಯು । ಬೆರಸುವಂತಿರೆ ರಾಯ ಕುವರನ । ಮರಣವಾರ್ತೆಯನಾಸುಭದ್ರಾದೇವಿ ಕೇಳಿದಳು ‖ ೧೭ ‖ ತೆಳುವಸಿರ ಬಿರುಹೊಯ್ಲು ಮುರಜದ । ಬಳಲುಮುಡಿ ನಿಟ್ಟೆಸಳುಗಂಗಳ । ಉಳಿರವದ ಮುತ್ತಿಗೆಯ ಹಾಹಾರ ವದ ಗಾಯದಲಿ ಲಲನೆ ಬರೆ ಚಲುವಾಯ್ತು ಧರ್ಮಜ । ನಳಲು ಮಿಗೆ ಹಿರಿದಾಯ್ತು ನಾಟ್ಯದ । ಕಳನ ಹೊಗರಿಡೆಯೆನಲು ಬಂದಳು ದ್ರೌಪದೀದೇವಿ ‖೧೮‖ ಅಳಲುಕಸಿಕಿಯಲಿ ಬಾಡಿದಾನನ। ಜಲಪ ರುಹದ ಕಡುವೇದನೆಯ ಕಳ । ಕಳದ ಹಾಹಾರವದ ರೌದ್ರ ಸುಭದ್ರೆ ನಡೆತಂದು ‖ ನೆಲಕೆ ಧೊಪ್ಪನೆ ಕಡೆದು ಸಭೆಯಲಿ । ಹಲುಬಿದಳು ಕೊಳುಗುಳಕೆ ಕಂದನ । ಕಳುಹಿದವರಿಗೆ ಸಂದುದೇ ಪರಿಣಾಮವೆಂ ದೆನುತ ‖ ೧೯ ‖ ಎಲೆಯುಧಿಷ್ಠಿರದೇವ ಸಾಲದೆ । ಕೆಲನ ಮೆಚ್ಚಿಸುವಳಲು ಲೋಚನ । ಜಲವ ತೊಡೆಯೈಭೀಮ ಬಲ್ಲೆನು ನಿಮ್ಮ ನೆನಹುಗಳ ‖ ಅಳದಿರೈ ಸಹದೇವನಕುಲರು । ನಿಲಿಸಿರೈ ನಿಮ್ಮಿಷ್ಟಸಿದ್ಧಿಯ । ಬೆಳಸುಫಲವಾಯ್ತೇಕೆನೋವಿನ್ನೆಂದಳಿಂದುಮುಖಿ ‖ ೨೦ ‖ ಮಗನು ಪಂಚದ್ರೌಪದೇಯರ ಬಗೆಯನೆಂದೀರಾಜ್ಯವೆಲ್ಲವ । ಹೊಗಸಲುಗೆಯಿಲ್ಲೆಂದು ಕಳುಹಿದಿರೆನ್ನ ಕಂದನನು ‖ ಹಗೆ ಹರಿದುದಿಂದಿನಲಿ ದ್ರೌಪದಿ । ಮಗಗೆ ರಾಜ್ಯವನಿತ್ತು ಪಟ್ಟವ । ಬಿಗಿಸಿ ಸುಖಸಾಮ್ರಾಜ್ಯವಾಳಿರೆ ಯೆನುತ ಹಲುಬಿದಳು ‖ ೨೧ ‖ ಅಕಟ ಮಗನೇ ಬಹಳಪಾಪಾ । ತ್ಮಕನ ಬಸುರಲಿ ಬಹುದಕಿಂದವೆ । ನಕುಲನುದರದೊಳಾಗಲೀಧರ್ಮಜನಜಠರದಲಿ ‖ ಸುಕೃತದುಷ್ಕೃತವುದಯಿಸಿದೆ ಕಂ । ಟಕಿಗಳಾದರು ಸಾಕು ಕಡುಪಾ । ತಕಿಯಲಾನಿಮ್ಮೈಯ್ಯನೆಂದು ಸುಭದ್ರೆ ಹಲುಬಿದಳು ‖ ೨೨ ‖ ಧುರವ ಹೊಗತಕ್ಕವನೆ ಚಿಕ್ಕವ । ನಿರಿಯಲಾಪನೆ ಬಹನೆ ಮರಳಿದು । ಧರೆಯ ವೈಭವಕಾಗಿ ಕಳುಹಿದರೆನ್ನ ಕಂದನನು ‖ ವರಯುಧಿಷ್ಠಿರನೃಪತಿ ಲೋಕದ । ಕರುಣಿಯೆಂಬರು ನಿನ್ನ ಮುನಿಗಳು । ಕೊರಳುಗೊಯಿಕನನರಿಯರೆಂದಳು ಫಲುಗುಣನರಾಣಿ ‖ ೨೩ ‖ ಕಾಳಗದ ಮಾತೇನು ಹಸುಳೆಯ । ಬೀಳುಕೊಡಲೇಕೈಯ ಮಗನನು । ಬೇಳುವಾಡಿಟರಯ್ಯ ನಿಮಗಿನ್ನಾವುದಪರಾಧ ‖ ಕೇಳಿ ಫಲುಗುಣನಲ್ಲಿ ಮಡಿದೊಡೆ । ಹಾಳಿವುಳಿವುದು ನಿಮಗೆ ರಾಜ್ಯದ । ಮೇಲೆ ರಾಜ್ಯವನಾಳಿ ನೋವಿಲ್ಲೆಂದಳಿಂದುಮುಖಿ ‖ ೨೪ ‖ ಬೇಡ ಮಗನೆ ರಥಕೆ ತೇಜಿಯ । ಹೂಡದಿರು ಹರಣವನು ನೀಹೋ । ಗಾಡದಿರು ಪಾರ್ಥಂಗೆ ಮೋಹದಪುತ್ರ ಶೋಕವನು ‖ ಮಾಡದಿರು ರಣದೊಳಗೆಯಸುವೀ । ಡಾಡದಿರು ದಿವಿಜಾಂಗನೆಯರೊಡ । ಗೂಡಬೇಡೆಂದೆನಲು ಕೇಳದೆ ಮಡಿದೆ ಕದನದಲಿ ‖ ೨೫ ‖ ತಳಿತಛತ್ರದ ನೆಳಲಿನಲಿ ಥಳ । ಥಳಿಪಮಕುಟದ ಮುಖದಕಾಂತಿಯ । ತಿಳಿಯನೋಡೆನು ದೃಷ್ಟಿತಾಕೀತೆಂದು ನಾ ನಿನ್ನ ‖ ಅಳುಕಿನೋಡುವೆನೋರೆಗಣ್ಣಿಲಿ । ಕೊಳುಗುಳಕೆಕೊಟ್ಟೆನ್ನ ಕಂದನ । ನುಳಿಯಬೇಕೇ ಶಿವಶಿವಾಯೆಂದಬಲೆ ಮರುಗಿದಳು ‖೨೬‖ ಕಂದ ನಿನ್ನ ನುಕಾಣದಿರಲೆನ । ಗೊಂದುದಿನ ಯುಗವಾಗಿಹುದು ಮಗ । ನೆಂದುಭಾವಿಸಿ ಯಾರನೋಡುವೆ ಯಾರಿಗುಸುರುವೆನು ‖ ಕಂದ ಬಾರೆಂದಾರ ಕರೆವೆನು । ಬಂದುಅಮ್ಮಾಯೆಂಬತನಯನು । ಸಂದನೇ ಹಾಯೆನುತ ಹಮ್ಮೈಸಿದಳು ನಿಜಜನನಿ ‖ ೨೭ ‖ ನೀಲಮೇಘಶ್ಯಾಮನಳಿಯನೆ । ಪಾಲದಕ್ಷರತೊಡೆದುದೇ ಕಡೆ । ಗಾಲವಾದುದೆ ಯುತ -ರೆಗೆ ಹರಳೋಲೆ ಕಳಚಿತಳೆ ‖ ಓಲೆಬಂದುದೆ ವಾಸವನವೊ । ಡ್ಡೋಲಗ

ಕೆ ಬರಹೇಳಿ ರಣದಲಿ । ಕಾಲವಾದುದೆ ಕಂದಗೆಂದುರುಳಿದಳು ಹುಡಿಯೊಳಗೆ ॥ ೨೮ ॥ ಅಣ್ಣನಿನ್ನಂಗವನು ನೋಡುವ । ಕಣ್ಣಿನಲಿ ಕಂಬನಿಯು ತುಂಬಿದೆ । ಬಣ್ಣಿಸಿಯೆಯಭಿಮನ್ಯು ಬಾರೋಯೆಂಬಬಾಯೊಳಗೆ ॥ ಮಣ್ಣು ತುಂಬಿದೆ ಮಗನೆ ನಿನ್ನಯ । ಬಣ್ಣಗುಂದಿತೆ ದೇಹ ರಣದಲಿ । ಹಣ್ಣಚಿಂಸಾಭಿನ್ನವಾದೆ ಯೆನುತ್ತ ಮರುಗಿದಳು ॥ ೨೯ ॥ ಅಗಡುಕೌರವರೆಮಗೆ ಹಗೆಗಳು । ಮಗನೆ ಹೊಗಬೇಡೆಂದೆನಾಗಳೆ । ನಗುತ ಚರಣದೊಳೆರಗಿ ಕಂಗಳ ಲೊಗುವಕಂಬನಿಯು ॥ ತೆಗೆದುಸೆರಗಿನೊಳೊರಸಿ ರಿಪುಗಳ । ಬಗೆದುರಣಬಲಿಗೊಟ್ಟು ಬಹೆನೆಂ । ದಗಲುವರೆ ಬಾ ಕಂದ ಬಾಯೆಂದಪ್ಪುವಳು ಬಯಲ ॥ ೩೦ ॥ ಕಾಣಿರೇ ಕಮಲಾಕ್ಷನಳಿಯನ । ಕಾಣಿರೇ ಕಮಲಾಪ್ತತೇಜನ । ಕಾಣಿರೇ ಕಮಲಾರಿವದನನ ಕಾಣಿರೇ ನೀವು ॥ ಕಾಣಿರೇ ಕಾರುಣ್ಯನಿಧಿಯನು । ಕಾಣಿರೇ ಕದನಪ್ರಚಂಡನ । ಕಾಣಿರೇಯಭಿಮನ್ಯುವಾವೆಡೆಯೆಂದು ಹಲುಬಿದಳು ॥ ೩೧ ॥ ಅಳಿದನಿಂದಭಿಮನ್ಯುವೆನೆ ಕೋ । ಮಲೆ ಮಹಾದೇವಿ ನುತ ವುತ್ತರೆ । ಯುಲುಗುಗೊಂಡವೊಲಬಲೆ ಬಸವಳಿದೆವನಿಗೊರಗಿದಳು ॥ ಅಳಲ ಕಡಲೊಳು ಮೂಡಿ ಮುಳುಗಿದ । ಬಲುಸೆರೆಯು ಕಂಬನಿಯೊಳಗೆ ಧೃತಿ । ಬಳಲಿ ಕಂದಿದತಾಪಮಿಗೆ ಪ್ರಜ್ವಲಿಸೆ ಹೊರಳಿದಳು ॥ ೩೨ ॥ ಶೋಕವಿಮ್ಮಡಿಸಿತ್ತು ಚಿಂತಾ । ವ್ಯಾಕುಲಿತೆ ಸತಿ ನುಡಿದನುಡಿಗಳ । ನೇಕಸಾಸೆಯಸರಳು ಮುರಿದವು ನೃಪನ ಹೃದಯದಲಿ ॥ ಈಕುಮಾರನ ಶೋಕವಹ್ನಿಗೆ । ಯಿಾಕೆಯಳಲು ಸಮಿಾರಪಾಯವಿ । ವೇಕಶರಸಂಮೋಳವೇ ಪುರುಷಾರ್ಥ ತನಗೆಂದ ॥ ೩೩ ॥ ತಾಯೆ ಸೈರಿಸುಸೈರಿಸಕಟಾ । ಮಾಯವಾದನು ಮಗನು ರಣದಲಿ । ಸಾಯಲಟ್ಟಿದೆ ಯೆನಗೆ ಯಿಹಪರಗತಿಯದೆಲ್ಲಿಯದು ॥ ಬಾಯಬಿಡಲೇಕಿನ್ನು ರಣದಲಿ। ಸಾಯಬೇಕೇ ಮಗನನಗಲಿದ । ಕಾಯವಿದನುಳುಹಿದೆನೆನುತೆ ಯಮಸೂನು ಶೋಕದಲಿ ॥ ೩೪ ॥ ಎಲೆವೃಕೋದರ ನಕುಲಸಾತ್ಯಕಿ । ನಿಲಿಸಿರೈ ತಂಗಿಯನು ತನ್ನಯ । ಕೊಲೆಗೆ ಮಗನಳಲೊಂದು ಸಾಲದೆ ತನ್ನನುಡಿ ಬೇಕೇ॥ ನಳಿನನಾಭನ ಕರುಣದೊಣಗಿಲು। ಕಳೆದರಾರೇಗುವರು ಶಿವಶಿವ। ನೆಲದೊಳೆನ್ನವೊಲಾರು ಪಾಪಿಗಳೆನುತ ಬಿಸುಸುಯ್ದ ॥ ಧರಣಿಪತಿ ಶೋಕಾತಿಶಯವನು । ಪರಸಮಾಧಿಯೊಳರಿದು ಮುನಿಪತಿ । ಕರುಣದಲಿ ಕಡುನೊಂದು ಹೊರವಂಟನು ನಿಜಾಶ್ರಮವ ॥ ಪರರುಗಳ ಸುಖದುಃಖದಲಿ ಘನ। ಹರುಷಭೇದವ ಹಿಡಿದುದೆಂಬುದು। ಹಿರಿಯರಿಗೆ ಗುಣವಲ್ಲವೆಸುತವೆ ಮುನಿಯು ಹೊರವಂಟ ॥೩೬॥ ಬಂದು ವೇದವ್ಯಾಸಮುನಿ ನಿಜ।ಮಂದಿರವ ಹೊಗಲಂದು ಪದದೊಳು।ಸಂದಣಿಸಿ ಚಾಚಿದನು ಮಕುಟವನವನಿಪಾಲಕನು॥ನೊಂದು ವರಸತ್ಸಂಗತಿಯಲಾ। ನಂದವಡಗುವದೆನುತ ಮುನಿಪತಿ । ಕಂದುಮೋರೆಯ ಮಹಿಪರನು ನೆಗಹಿದನು ಕರುಣದಲಿ ॥೩೭॥ ಎಲೆಯುಧಿಷ್ಠಿರನೃಪತಿ ಪುತ್ರನ । ಪ್ರಳಯದಾಪತ್ತಾಯ್ತು ಭೀಮನ। ನಲವಿಗೂಣೆಯವಾಯ್ತು ಸಹದೇವಗೆ ಮನೋವ್ಯಥೆಯೇ ॥ ಬಲುದುಗುಡ ನಕುಲಾಂತಕನಿಗೆಸಂ । ಗಳಿಸಿತೇ ದ್ರೌಪದಿಸುಭದ್ರಾ। ಲಲನೆಯರಿಗನುಚಿತವು ಘಟಿಸಿತೆ ಯೆಂದು ಮುನಿ ನುಡಿದ ॥ ೩೮ ॥ ಅಡಸಿದಾಪತ್ತಿನಲಿ ಧೈರ್ಯವ । ಹಿಡಿವುದೇ ಸುಪ್ರೌಢಿ ಸಾಕಿ । ನ್ನೊಡಲು ಕರಗಿದೊಡೇಳಬಲ್ಲನೆ ಹಿಂಗಿದಭಿಮನ್ಯು ॥ ಒಡನೆ ಬಂದೈದುವದು ಭವದಲಿ। ತೊಡಕಿ ಸುಕೃತವು ದುಷ್ಕೃತಂಗಳು । ಕಡೆಗೆ ತಿಳಿವಿನೊಳಲ್ಲದಿಹಪರಸೌಖ್ಯವಿಲ್ಲೆಂದ ॥ ೩೯ ॥ ಎಲ್ಲರೋಪಾದಿಯಕುಮಾರಕ । ನಲ್ಲ ಗುಣನಲಿ ವೀರವಿತರಣ । ದಲ್ಲಿ ಛಲಬಲದಲ್ಲಿ ನಯನಾನಾಗುಣಂಗಳಲಿ ॥ ಇಲ್ಲ ಸುಕುಮಾ

ರಂಗೆ ಸರಿ ಮನ। ವಿಲ್ಲದೇಗುವೆನಕಟ ವಚನದ । ಸೆಲ್ಲೆ ಹದಲಿರಿಯದಿರಿ ಸಾಕಿನ್ನೆಂದನಾಭೂಪ ॥ ೪೦ ॥ ಜನನವೇ ಲಯಬೀಜ ಮರಣವು । ಜನನಬೀಜವು ತೋರಿತೀತನು । ತನುವಿನೆಭಿರಂಜನೆಗೆ ಸೌಖ್ಯಕೆ ಮಾರದಿರು ಮನವ ॥ ಘನಪರಂಜ್ಯೋತಿಸ್ವರೂಪನ । ನೆನಹ ಮರೆದೀಮೋಹವುಯಬಂ । ಧನದೊಳಗೆ ಮರುಳಹರೆ ಮಗನೇ ನಿನ್ನನರಿಯೆಂದ ॥೪೧॥ ಹರನೊಡನೆ ಹೊಯ್ದಾಡಿದಗ್ಗದ। ನರನು ತಂದೆ ಸಮರ್ಥ ಭುವನೇ । ಶ್ವರನಲಾ ಮುರವೈರಿ ಮಾವನು ನಿನ್ನತನುಜಂಗೆ ॥ ಧುರದೊಳೀಹದನಾಯ್ತು ಕಾಲನ । ನರಸ ಮೀರುವರಾರು ಕಾಲನು । ಹರಿಹರಬ್ರಹ್ಮಾದಿಗಳ ಕೈಕೊಂಬನಲ್ಲೆಂದ ॥೪೨॥ ದೇಹತಾನಭಿಮನ್ಯುವೋ ಮೇ । ಣ್ದೇಹಿತಾನಭಿಮನ್ಯುವೋ ಬಿಡ । ದೇಹಿತಾನಭಿಮನ್ಯುವೆಂದೊಡೆ ಕೆಟ್ಟಡೇನಾಯ್ತು ॥ ದೇಹವೆಂಬುದನಿತ್ಯವೋ ನಿ । ನ್ನಾಹವದೊಳಳಿದವರ ಬಿಡು ಸಂ । ದೇಹವುಮತೆಗಳನ್ನು ಬೀಳ್ಕೊಟ್ಟಿನ್ನುನೋಡೆಂದ ॥ ೪೩ ॥ ಎನ್ನದಾನೆಂಬೆರಡದಿಂದವೆ । ಬನ್ನಬಡುವನು ಜೀವನಲ್ಲದೆ। ಮುನ್ನವೆಲ್ಲಿಂಬಿಲ್ಲ ನೋಡಾತ್ಮಂಗೆ ಭವಬಂಧ ॥ ನಿನ್ನ ನೀನರಿ ಸಾಕು ಮಾಯದ । ಗನ್ನಗತಕವ ಗೆಲುವೆ ಕನಸಿನ। ಹೊನ್ನಕಾಣದೆ ಶೋಕಬಡುವರೆ ಭೂಪ ಕೇಳೆಂದ ॥೪೪॥ ಇರುಳುಹಗಲಿನ ಬೀಜನೆರವಿಯು। ಕರೆವುದೇ ಮೊದಲುನ್ನತೋನ್ನತ । ಮರುಳ ಕೇಡಿನ ತ್ರಾಣಕೂಟವೆ ವಿರಹನಿರ್ವಾಹ ॥ ಸಿರಿದರಿದ್ರತೆಯೆರಡು ಜನನದ । ಮರಣಫಲವಿದನರಿದುಬುಧರಾ। ಚರಿಸುವದಕೇಳೆಂದುವೇದವ್ಯಾಸಮುನಿನುಡಿದ ॥೪೫॥ ಉರಗನರದಿವಿಜಾದಿಗಳಿಗಿದು । ಪರಿಹರಿಸಲಳವಲ್ಲ ದೈವದ । ಪರುಠವಣೆಮುನ್ನಾದಿಯಲಿ ನೇಮಿಸಿದ ಮೃತ್ಯುವನು ॥ ಅರಸನಾಗಲಿ ಧನಿಕನಾಗಲಿ । ಹಿರಿಯನಾಗಲಿ ಗರುವನಾಗಲಿ । ಮರಣ ಜನಿಸಿದಬಳಿಕ ತಪ್ಪದು ಮಗನೆ ಕೇಳೆಂದ ॥ ೪೬॥ ಎಲೆಯುಧಿಷ್ಠಿರ ಕೇಳು ಕೃತಯುಗ । ದೊಳಗೆ ಕಂಪನನೆಂಬಭೂಪಗೆ । ಕುಲತಿಲಕಹರಿಯೆಂಬಮಗನಾತನಿಗೆ ಜನಿಸಿದನು॥ಬಳಿಕ ನವಯೌವನನು ಪರಮಂ। ಡಲಕೆ ನಡೆದನು ವೈರಿರಾಯರ।ವಳಿತವನು ತಾನೊತ್ತಿ ಕಾದಿದನಮಿತಸೇನೆಯಲಿ॥೪೭॥ ಮಗುಳೆ ಕಂಪನನೆಂಬ ಭೂಪನ।ಮಗನು ಮತ್ತೊಮ್ಮಿನಲಿ ಬಲುಗಾ।ಳಗವ ಮಾಡಿದನಹಿತಸೇನೆಯೊಳಾನೆವರಿವರಿದು ॥ ಬಗೆಯೆ ನಿಮ್ಮಭಿಮನ್ಯುವಿನವೋ।ಲಗಣಿತರನೆಸಿಯುರೆದು ಸುರಪನ।ನಗರಿಗೈದಿದನೆನಲು ಕಂಪನು ಕೇಳ್ದು ಬಸವಳಿದ ॥೪೮॥ ನಿನಗೆ ಬಂದಾಪತ್ತಿನಂತಿರೆ । ಲನಿತು ಬಂದುದು ಕಂಪನೆಂಬಾ। ತನನು ಸಂತವಿಸಲ್ಕೆ ನಾರದನಲ್ಲಿಗೈತಂದು॥ ಜನಪತಿಯ ಸಂತೈಸಿದನು ಕಾ। ಲನನುಮೀರುವರಿಲ್ಲವಾತನ।ಘನಕೃತಕವದು ಮೃತ್ಯುವನು ಮಿಗೆ ಗೆಲುವರಾರೆಂದ ॥ ೪೯ ॥ ಮೃತ್ಯುವಾರೆಂದವನಿಪತಿ ಮುನಿ। ಪೋತ್ತಮನ ಬೆಸಗೊಳಲು ಬೊಮ್ಮನ ಕಿತ್ತಡದ ಕೋಪದಲಿ ಜನಿಸಿದರುದ್ರನಿಂ ಬಳಿಕ ॥ ಮೃತ್ಯುವೆಂದವಳಾದಳೌಸತಿ। ಯತ್ತಕಂಬನಿರುಚೆಗಳಾದವು । ತೆತ್ತಿಗಳ ಷಡುವರ್ಗಕಾಮಕ್ರೋಧಮೊದಲಾಗ ॥ ೫೦ ॥ ಜನದ ಕೊಲೆಗೆಲಸದನಿರೂಪಕೆ । ಮನನ ತಂದಳು ಮೃತ್ಯು ನಿಜಸಾ । ಧನವಕೈಕೊಂಡಬಲೆ ಕೆಲಸವನಾಗುಮಾಡುವಳು ॥ ಜನಪದೃಶ್ಯಂನಷ್ಟವೆಂಬುದ । ನೆನುಕರಿಸಿ ಮೂರ್ತಿತ್ರಯಂಗಳ । ನನುವರವ ಮಾಡಿದಳು ಚಿತ್ತೈಸೆಂದನಾಮುನಿಪ ॥ ೫೧ ॥ ಆದೊಡಾಮೃತ್ಯುವಿನ ಕೈವಶ । ವಾದವರನೆನಗರುಹಬೇಹುದು ಮೇದಿನೀಶರೊಳೊಂದುಬಿನ್ನಹಮಾಡಿದನು ನೃಪತಿ ॥ ಆದಯಾಳುಗಳರಸನಾಶೋ । ಕೋದಧಿಗೆವಡಬಾಗ್ನಿಸಮವೆನಿ। ಪಾದಿಯಲಿ ಷೋಡಶಮಹೀಶರ ಕಥೆಯ ವಿವರಿಸಿದ ॥ ೫೨ ॥ ಭರತಪೃಥುಪೌರವಭಗೀರಥ । ವರಯು

ಯಾತಿಮರುತ್ತನಹುಷೇ । ಶ್ವರಪುರೂರವರಂತಿದೇವಗಯಾಂ ಬರೀಷಕರು ॥ ಪರಶುರಾಮದಿಳೀಪ ಮಾಂಧಾ । ತರು ಹರಿಶ್ಚಂದ್ರಾದಿಪೃಥ್ವೀ । ಶ್ವರರನಂತರು ಮೃತ್ಯುವಶವಾದವರುಕೇಳೆಂದ ॥ ೫೩ ॥ ಎಂದು ಷೋಡಶರಾಜರಾಕಥೆ । ಯಿಂದ ನೃಪತಿಯ ಸಂತವಿಟ್ಟನು । ಇಂದುಧರ್ಮಜನೆರಗಿದನು ಮುನಿನಾಥನಂಘ್ರಿಯುಲಿ ॥ ಅಂದು ವೇದವ್ಯಾಸಪಾಳಯುದಿಂದ । ಕಳುಹಿಸಿಕೊಂಡನಿತ್ತಮು । ಕುಂದನಭಿಮನ್ಯುವಿನ ಮರಣವನರಿದಮನದೊಳಗೆ ॥ ... ... . ॥೫೪॥

ಅಂತು ಸಂಧಿ ೪೮ಕ್ಕಂ ಪದ ೫೪೩೩ಕ್ಕಂ ಮಂಗಳಮಸ್ತು.



## ಒಂಬತ್ತನೆಯ ಸಂಧಿ.

ಸೂಚನೆ ॥ ಹಾಮಗನೆ ರಣರಂಗಧೀರನೆ । ಹಾಮಗನೆ ನೃಪಕುಲಲಲಾಮನೆ । ಹಾಮಗನೆ ಮುಖದೋರೆನುತ ಹಲುಬಿದನು ಕಲಿಪಾರ್ಥ ॥

ಪದ ॥ ಕೇಳು ಜನಮೇಜಯಧರಿತ್ರೀ । ಪಾಲ ಸಂಶಪ್ತಕರ ಬಲ ನಿಜ । ಪಾಳೆಯಕೆ ತಿರುಗಿದುದು ತಿರುಗಿತು ತರಣಿಯಾಟೋಪ ॥ ಕಾಳಗವ ತೆಗಸಿದರು ಕೌರವ । ರೇಳುಫಲುಗುಣಯೆನುತ್ತಲಕ್ಷ್ಮೀ। ಲೋಲ ವಾಘೆಯ ಮರಳಿಚಿದನಾಹಯವ ಬೋಳೈಸಿ ॥೧॥ ಹರಿಕಿರೀಟಿಗಳಿತ್ತಶಿಬಿರಕೆ । ತಿರುಗಲಾಸುತಶೋಕಸೂಚನೆ । ನರನ ಚಿತ್ತದೊಳಾಗೆ ವೆಂಠಣಿಸಿತ್ತು ಪರಿತಾಪ ॥ ಕೊರಳ ಸೆರೆಹಿಗ್ಗಿದವು ಕಂಬನಿ । ಸುರಿಯಲಾಯ್ತುರಿ ಮಸಗಿ ಜಠರದೊ । ಳುರುವಣಿಸಿದಾಕಸ್ಮಿಕದ ಭಯವಾಯ್ತು ಪಾರ್ಥಂಗೆ ॥೨॥ ದೆಸೆದೆಸೆಯ ನೋಡಿದೊಡೆ ಕತ್ತಲೆ । ಮಸಗುವುದು ಪರಿತಾಪ ತನು । ಮುಸುಕುವುದು ಮನ ಮರುಗುವುದು ಕಳವಳಿಸುವುದು ಧೈರ್ಯ ॥ ಮಸೆದಶರವೊಡಲೊಳಗೆ ಮುರಿದವೊ । ಉಸುರಿಗುಬ್ಬಸವಾಯ್ತು ಬಲ್ಲೊಡೆ । ಬೆಸಸು ಮುರಹರ ಹರಿದು ಬಳಲಿಸಬೇಡ ಹೇಳೆಂದ ॥೩॥ ಅಳಿಯನಳಿವನು ಹೇಳಬಾರದು । ತಿಳಿಯಲುಬದೆಂದೆನುತ ಚಿಂತಿಸಿ । ನಳಿನಲೋಚನ ಬರುತ ಕಂಡನು ಘನಸರೋವರವ ॥ ಇಳಿದು ರಥವನು ರಣಪರಿಶ್ರಮ । ಗಳೆವೆನೆನುತ ಕಿರೀಟಿಸಹಿತಾ । ಕೊಳನ ಹೊಕ್ಕನು ಜಗದುದರಲೀಲಾವತಾರಕನು ॥೪॥ ಧುರದ ಕೋಳಾಹಲದ ಧಗೆ ಡಾ । ವರಿಸಿ ಬಳಲಿ ಧನಂಜಯನು ನಿಜ । ಸರಸಿಯೊಳು ಹೊಕ್ಕಿರಲು ಹರಿ ನೆನೆದೊಂದುಪಾಯದಲಿ ॥ ನರನೊಳಿನ್ನುರುಹುವೆನು ನಿಜಮೋ । ಹರದೊಳಗೆ ಮಡಿದಾಕುಮಾರನ । ಮರಣವಾರ್ತೆಯನೆಂದು ಮನದಲಿ ನೆನೆವುತಿಂತೆಂದ ॥೫॥ ಎಲೆಸುರೇಂದ್ರಕುಮಾರ ಕೇ । ಳ್ನಿನ್ನೊಲುಮೆಯಣುಗನು ರಣದೊಳಗೆ ರಿಪು । ಬಲವ ತೊತ್ತಳದುಳಿದು ಕೌರವಸುತರನೊಕ್ಕಿರನು ॥ ತಲೆಯನರಿದೀಡಾಡಿತೊಸುರ । ಲಲನೆಯರ ಚೆಲುವಿಂಗೆ ತಾ ಮನ । ವೊಲಿದು ಹಾಯ್ದನೆನುತ್ತ ಹರಿ ನರಗೆರುಹಿ ಮುಳುಗಿದನು ॥೬॥ ಆಸ್ತುತನ ಶೋಕದಲಿ ಕಿವಿಗಾ । ಕಾಶವ ಚನದೊಳಾಯ್ತು ಶಿವಶಿವ । ವಾಸುದೇವಾಯೆನುತ ಫಲುಗುಣ ಜಲವ ಬಗಿದೆದ್ದು ॥ ಗಾಸಿಯಾದನು ಮಗನಕಟ ಸಂ। ತೋಷವೆಲ್ಲಿಯದೆನುತ ಮಾಯಾ । ವೇಷಿಯನು ಕರೆದನು ವಿಲೋಚನ ವಾರಿಪೂರ

ದಲಿ ||೭|| ಎನಲು ಭೀಮ್ಮನೆ ಕೊಳನೊಳಗೆ ನಿಂ | ದನು ಮುಕುಂದನು ಸುರಪಸುತನಾ | ನನವ ನೋಡಿ ಯಿದೇನೆನಲು ನರ ಬಿಕ್ಕಿಬಿರಿದಳುತ || ತನಯುನಳಿಯುದೆ ಮಾಣ ಗಗನ | ಧ್ವನಿಯೊಳಾದುದು ವೇತನ ಕರ್ಣಕೆ | ಮೊನೆಯು ಸರಳೆನೆ ಬಾರೆನುತ ರಥವೇರಿಸಿದ ನರನ ||೮|| ಹಗೆಯು ಪದ್ಮವ್ಯೂಹವೆನ್ನಯ ಮಗನ ಸಲಿಕೆಗೆ ಬಾಧೆ ಮೋಹಿದು | ದುಗುಡವೇ ಸುತಮರಣ ನಿಶ್ಚಯುವೆನ್ನ ಚಿತ್ತದಲಿ || ಹಗೆಯು ಹೊದರಿನ ನಿರುಗೆಯಿದುವೇ | ಮಗಗೆ ನಿಶ್ಚಯುವೆಂಬವೊಲು ಮಿಗೆ | ಮಗನ ಮರಣದಲಾಯ್ತು ಯೆನಗೆ ಕೃಶಾನು ಹೊಗರೆಂದ ||೯|| ತೆಗೆವುತಿವೆ ಕಣ್ಣಿನಲಿ ಕಂಬನಿ | ಹೊಗವುತಿದೆ ಶೋಕಾಗ್ನಿ ಜಠರದಿ | ಬಗೆವುತಿದೆ ಬಾಲಕನ ಮೋಹದ ಕಲಿಯು ನೆನೆನೆನೆದು || ಮಗನ ಕಾಂಬೆನೊ ಕಾಣೆನೋ ಸಂ | ಪಗೆಯೆಸಳ ನಾಸಿಕದ ಕಂದನ | ನಗಲುವೆನೊ ನಾನರಿಯೆನಭಿಮನ್ಯುವನು ಹೇಳೆಂದ ||೧೦|| ತಂದೆ ಧೃತಿಗೆಡಬೇಡ ನಡೆ ನಿಜ | ನಂದನನಸಾರ್ಕವೆನುತ್ತೆ | ತಂದು ತೋಟಿಯು ಕಳಿದು ಬಂದರು ರಾಜಬೀದಿಯಲಿ|| ಕಂದನಿರವನು ಕಾಣಲಾಪೆನೊ | ಕೊಂದರೆಂಬುದ ಕೇಳ್ವೆನೋ ಯೆನ | ಗಿಂದು ಗತಿಯೇನೆನುತ ಬಂದನು ರಾಜಮಂದಿರಕೆ ||೧೧|| ತಲೆಯು ಮುಸುಕಿನ ವೀರಸುಭಟರು | ತೊಲಗಿದರು ಬೆಸಗೊಳಲು ನಂದನ | ನೆಳಿವುಹಲಬರ ಮನವ ಮೆಚ್ಚಿಸಿ ಹೆಚ್ಚಿತತಿಮೋಹ || ಎಲೆಮುರಾಂತಕ ಕಾಣಲಾಪೆನೊ | ಹೊಳಲೊಳಭಿಮನ್ಯುವನೆನುತ ದೃಗು | ಜಲಕೆ ಕಾಯುವ ತೆರುತ ಬಂದನು ಬಹಳಶೋಕದಲಿ ||೧೨|| ತರಣಿ ತೊಲಗಿದಗಗನವೋ ಪಂ | ಕರುಹವಿಲ್ಲದಸರಸಿಯೊ ಕೇ | ಸರಿಯು ವೀರಾಳಾಪವಿಲ್ಲದಬಹಳಕಾನನವೋ || ಪರಮತತ್ವನಿಧಾನವರಿಯುದ | ನರನ ವಿದ್ಯಾರಚನೆಯೋ ನಿ | ರ್ಭರಭಯಂಕರವಾಯ್ತು ಪಾಳೆಯುವೆನುತ ನಡೆತಂದ ||೧೩|| ಸುರನಗರಿ ನಡುಗಿತು ಸುರೇಶ್ವರ | ಹರನ ನೆನೆದನು ಯಮುನ ಪಟ್ಟಣ | ಸರಕುದೆಗೆದುದು ಮೃತ್ಯು ಮರೆಹೊಕ್ಕಳು ಮಹೇಶ್ವರನ || ಬಿರುದರಂಜಿದರಖಿಳದೆಸೆಗಳ | ಧರಣಿಪತಿಗಳು ಮಾಯುವಾದರು | ನರನ ಕಡುದುಮ್ಮಾನನೆರೆಯುಂಜಿಸಿತು ಮೂಜಗವ || ವೀರರಿದಿರುಗ್ಗಡಣೆಗಳ ಕೈ | ವಾರಿಗಳ ಮಾಣಿಸಿದನ್ಯೆ ತಹ | ನಾರಿಯರ ರತುನಾರತಿಯ ತಳಿಗೆಗಳ ನೂಕಿಸುತ || ಸಾರೆ ಕೈಗೊಡುವೆದಟರನು ಕಣ್ನೋರೆಯಲಿ ಕೋಪಿಸುತ ತನ್ನಯ | ತೇರನಿಳಿದನು ಪಾರ್ಥನಸುರಾಂತಕನ ನೇಮದಲಿ ||೧೪|| ಹರಿರಥವನಿಳಿದಂತೆ ಪಾರ್ಥನ | ಭರದಕೋಪವ ಕಂಡು ನಿಜಮು| ಂದಿರಕೆ ಮೆಲ್ಲನೆ ಜಣುಗಿದನು ಯಾದವರ ಗಡಣದಲಿ || ವರಧನುವಶಸ್ತ್ರಾಸ್ತ್ರಕವಚವ | ನಿರಿಸಿ ಕೈಗೊಡುವಗೆಕನಲುತ | ಅರಮನೆಯ ಪೊಕ್ಕನು ಯುಧಿಷ್ಠಿರರಾಯನೋಲಗವ ||೧೬|| ಧರಣಿಪನ ನಿರಿಕೆಯಲಿ ಕಂದನ | ಮರಣವನು ನಿಶ್ಚೈಸಿ ಪ್ರಳಯುದ| ಹರನ ಕೋಪವ ಕೇಣಿಗೊಂಡನು ತನ್ನ ಚಿತ್ತದಲಿ|| ಸುರಿವನಯುನಜಲಾಬ್ಧಿಗಾದುದು ವರುಷದುರವಣಿ ವಡಬನೆನೆ ಮುರ | ಹರನ ಮೈದುನನೊಯ್ಯನೈದಿದನವನಿಪಾಲಕನ ||೧೭|| ಉಕ್ಕಿ ಶೋಕದ ಕಡಲು ಪಾರ್ಥನ | ಮುಕ್ಕುಳಿಸಿತಾಶೋಕಶರಧಿಯ | ಹೊಕ್ಕು ಬೆಳೆದುದು ಕೋಪಶಿಖಿ ಕಾಲಾಗ್ನಿಯಂದದಲಿ || ಮಕ್ಕಳೊಳು ನೋಡಿದನು ಕಂದನ | ನಿಕ್ಕಿದರೆಲಾ ಲೇಸು ಮಾಡಿದಿ | ರೆಕ್ಕತುಳದಾಳುಗಳೆನುತ ಭೂಪತಿಗೆ ಪೊಡವಂಟ ||೧೮|| ತಲೆಯು ಮುಸುಕಿನ ಕಂಗಳೊರತೆಯ ಜಲದ ದುಗುಡದ ಧರಣಿಪಾಲಕ | ಫಲುಗುಣನನೆತ್ತಿದನು ತಲೆಗುತ್ತಿದನು ಭೀತಿಯಲಿ || ಮಲಗಿದನು ವರಭೀಮಸೇನನು | ಸಲಿ ನರನು ತಾ ಬಂದನೆನೆ ಬಸ | ವಳಿದು ಬಂದು ಸುಭದ್ರೆ

ಪತಿಯಂಘ್ರಿಯಲಿ ಹೊರಳಿದಳು ॥೧೯॥ ಕಂದನಾವೆಡೆ ತನ್ನ ಬಿರುದಿನ । ಸಿಂಧವಾವೆಡೆ ತನುಜ ನವ
ಪೂ । ರ್ಣೆಂದುವಾವೆಡೆ ಹೇಳೆನುತ ತೊದಳಿಸುತ ಫಲುಗುಣನು ॥ ಕಂದಿದನು ಕಡುಮೋಹದಲಿ ಮ
ನ । ನೊಂದು ಸುತಶೋಕದಲಿ ಬೆದಬೆದ । ಬೆಂದು ಯಮರಾಜನ ಕುಮಾರನ ಮೊಗವನೋಡಿದನು
॥೨೦॥ ಪತಿಯಳಿದಸತಿಯಿರವೊ ನಾಯಕ । ರತುನವಿಲ್ಲದಪದಕ ದೈವ । ಸ್ತುತಿಗಳಿಲ್ಲದಕಾವ್ಯರಚನಾಸು
ಪ್ರಬಂಧದೋಲು॥ ಕೃತಕವಲ್ಲ ಭಿಮನ್ಯುವಿಲ್ಲದೆ। ಕ್ಷಿತಪ ನಿಸ್ಸಾನಸ್ಥಾನ ಮೆರೆಯದು । ಸುತನ ಸುದ್ದಿಯಿ
ದೇನು ಮರುಗಿಸಬೇಡ ಹೇಳೆಂದ ॥೨೧॥ ಬರಲು ಬಹನಿದಿರಾಗಿ ರಥವನು । ಹರಿದು ಬಂದೇರುವನು
ನಿಜಕರ । ಕರತಳದಿ ಮೈದಡವಿ ಗಾಯವ ನೋಡಿ ಮರುಗುವನು॥ ತರಳನಿದಿರೈತರಲು ಯೆನ್ನಯ ।
ಧುರದ ಬಳಲಿಕೆ ಹಿಂಗುವುದು ಕೇ । ಳರಸ ಕಂದನ ಸುಳುಹ ಕಾಣೆನು ಕರಸಿ ತೋರೆಂದ ॥೨೨॥ ಮಗ
ನ ಮಣಿರಥವೆಲ್ಲಿ ಹೂಡಿದ । ವಿಗಡತೇಜಿಗಳೆಲ್ಲಿ ಮಣಿವೆಳ । ಗುಗಳ ಛತ್ರವದೆಲ್ಲಿ . ಚಾಮರವೆಲ್ಲಿ ಧನು
ವೆಲ್ಲಿ ॥ ಹಗೆಯರಲಿ ಹತವಾದನೇ ಹಾ । ಸುಗುಣನಿಲ್ಲಿಗೆ ಬಾರನೇ ತಾ । ಮೊಗವ ಕಾಣದೆ ಹೋದೆ
ನೇ ಯೆನಗೇನುಗತಿಯೆಂದ ॥೨೩॥ ಕಂದ ಬಾರೋ ಯೆನ್ನ ಮನಕಾ। ನಂದಬಾರೋ ಬಾಲಕರ ಪೂ
ರ್ಣೇಂದುಬಾರೋ ರಿಪುಕುಲಾಂತಕ ನಿಪುಣ ಮುಖದೋರೋ ॥ ತಂದೆ ನಿನಗೆನ್ನಲ್ಲಿ ರುಣಸಂ । ಬಂ
ಧ ಸವೆದುದೆ ಶಿವಶಿವಾ ತಾ । ಮಂದಭಾಗ್ಯಂಗೆಣೆಗ ದಕ್ಕುವನಲ್ಲ ಯೆನಗೆಂದ ॥೨೪॥ ಅಸಮಚಕ್ರ
ವ್ಯೂಹವನು ಭೇ । ದಿಸುವನಾವವನೆನಲು ಕೇಳಿದ್ದು । ಶಿಶುತನದ ಸಾಹಸದಿ ನಡೆದನು ನಾವು ಬೇಡೆನ
ಲು ॥ ಕುಸುರಿದರಿದನು ವೈರಿಸೇನಾ । ಪ್ರಸರವನು ಸಂವರ್ತರುದ್ರನು । ಹೊಸಬನಿವನಾರೆನಲು ಸವ
ರಿದನಹಿತಸೇನೆಯನು ॥೨೫॥ ಅರಿನೃಪಾಲರ ನೂರಮಕ್ಕಳ । ಶಿರವನರಿದನು ಷಡುರಥರ ಸಂ । ಹರಿಸಿ
ದನು ರಿಪುಬಲದೊಳಡಹಾಯ್ದಾನೆವರಿವರಿದು ॥ ಧುರಕೆ ಹೊರದೆಗೆದೆವ್ಮನಾಲ್ವರ । ಸರಿದು ಹೋದ
ಭಿಮಾನವನು ಕಾ । ಯ್ದುರವಣಿಸಿ ಮಗನೇರಿದನು ವಾಸವನ ಗದ್ದುಗೆಯ ॥೨೬॥ ಈನಕುಲನೀಭಿಮ
ನೀಪಾಂಚಾಲರೀಸಹದೇವನೀಭೂ। ಪಾಲನೀಸಾತ್ಯಕಿಯುಧಾಮನ್ಯೂತ್ತಮೌಂಜಸರು॥ ಕಾಳಗದೊಳಂ
ಗೈಸಲಮ್ಮದೆ। ಬಾಲಕನ ನೂಕಿದಿರೆಲಾ ನಿ । ಮ್ಮಾಳುತನವನು ತೋರಿದಿರಿ ನೀವೆನ್ನ ಮೇಲೆಂದ ॥೨೭॥
ವೀರರಿನಿಬರು ನೆರೆದು ರಿಪುಪರಿ । ವಾರವನು ಹೊಗಲಂಜಿ ಹೊರಗಣ । ಮಾರಿಹೊರಗೇ ಯೆಂಬ
ಪೋಲ್ನಂದನನ ನಿಕ್ಕಿದಿರಿ ॥ ಆರನಂಬಲುಬಹುದು ನಿಮಿಷವು। ದೂರ ತಾ ತೊಲಗಿದೊಡೆ ತನ್ನ ಕು ।
ಮಾರನಿದ್ದರೆ ಹರಿವನೆನೆದಿರಿ ಹೊಲ್ಲೆಹೇನೆಂದ ॥೨೮॥ ಕೆಡೆನುಡಿದು ಫಲವೇನು ಸಾಕಿ । ನ್ನೊಡೆಯ
ನಿಲ್ಲದವಸ್ತುವಾದೆನು । ನುಡಿ ಯುಧಿಷ್ಠಿರ ಹೇಳು ಕೊಂದವರಾರು ನಂದನನ ॥ ಕಡುಹಗೆಯದಾರ
ವನ ಬಲದಲಿ । ನುಡಿನಿಧಾನವನವನ ಜೀವಕೆ । ಹಿಡಿ ಮಹೀಪತಿ ಸಂಚಕಾರವನೆಂದನಾಪಾರ್ಥ ॥೨೯॥
ಹೇಳಿ ಫಲವೇನಿನ್ನು ವಹ್ನಿ । ಜ್ವಾಲೆಯಿಂದಿನಮೋಹರವು ರಿಪು । ಜಾಲವನು ನೀಖಂಡಿಗಳೆ ಬಹೆವಾ
ವು ಬಳಿಸಲಿಸಿ ॥ ಕಾಳಗವ ಜಯಿಸುವೆವು ನಡೆ ಯೆನೆ । ಬಾಲನುರವಣಿಸುತ್ತ ಮಸಗಿದ । ಕಾಲರುದ್ರ
ನ ರೂಪುದಾಳ್ದನು ವೈರಿಸೇನೆಯಲಿ ॥೩೦॥ ಅರಸಮಕ್ಕಳ ಕೊಂದನೈ ನೂ । ರ್ವರನುಮೂರಕ್ಷೋಣಿ
ಸೇನೆಯ । ನೊರಸಿದನು ಮಸೆಗಾಣಿಸಿದನಗ್ಗದಮಹಾರಥರ ॥ ಧುರವ ಗೆಲಿದನು ಪಡಿತಳಿಸಿ ನಾ । ವು
ರವಣಿಸಲಡಹಾಯ್ದು ನಮ್ಮನು । ಹರನ ವರವುಂಟೆಂದು ಗೆಲಿದನು ಸಿಂಧುಭೂಪಾಲ ॥೩೧॥ ವಿರಥ

ಸಾದನು ಭೀಮ ನಕುಲನು । ತಿರುಗಿದನು ಸಹದೇವ ಕೊರಳಲಿ । ಹರಣವಿರೆ ಹಿಂಮೆಟ್ಟಿದರು ದ್ರುಪದಾದಿನಾಯಕರು ॥ ಧುರದೊಳೋಸರಿಸಿದರು ಸೈಂಧವ । ಹರನವರದಿ ನಮ್ಮ ಗೆಲಿದನು । ಮರಣವನು ಕಂದಂಗೆ ತಂದವನವನು ಕೇಳೆಂದ॥೩೨॥ ಇನ್ನು ಹೇಳುವುದೇನೆನುತ ಕೈ। ಸನ್ನೆಯಲಿ ಮಾತಾಡಿ ಭೂಪತಿ । ಬೆನ್ನ ತೆತ್ತನು ಭೀಮಸೇನನ ವಿಪುಳವಕ್ಷದಲಿ ॥ ತನ್ನ ಮರೆದನು ನಯನಧಾರಾ । ಭಿನ್ನವಾದೊಡೆ ಮಸುಡ ಮಿಗೆ ಸಂ । ಪೂರ್ಣಶೋಕಾಗ್ನಿಯಲಿ ಬೆಂದುದು ಧರ್ಮಜನ ಹೃದಯ ॥೩೩॥ ಮುಚ್ಚಿದನು ಕಂಗಳನಸ್ಥೈರ್ಯದ । ಕಿಚ್ಚಿನೆದೆ ಕರಗಿದುದು ಶೋಕದ । ಕಿಚ್ಚುಗೊಂಡುದು ಮನವನಖಿಳೇಂದ್ರಿಯದ ಸುಳುವಡಗಿ ॥ ಎಚ್ಚರಡಗಿತು ನೆಲಕೆ ಕೈಗಳ । ಬಿಚ್ಚಿ ಬಿದ್ದನು ಪುತ್ರಶೋಕದ । ಹೆಚ್ಚುಗೆಯ ತಾಪವನು ಹೆಸರಿಡಲರಿಯೆನರ್ಜುನನ ॥೩೪॥ ಘನವಿಕರ್ಮದ ವಿಲಗದಲಿ ನಿಜ । ತನುಜ ಶೋಕದ ತಗಹು ಬಿಡಲ । ರ್ಜುನನ ಧೃತಿಗೈದುದ್ಯ ನಾದವನೇನಹೇಳುವೆನು ॥ ಮನಮರುಗಿ ಮೈಬಳಲಿ ತಾಪದ । ಕನಸ ಕಂಡನು ಝಡಿತೆ ಮಿಗೆ ಝುಂ । ಮಿನಸುಷುಪ್ತಿಯೊಳಿರ್ದನಿಮಿಷದೊಳೆದ್ದು ಕಣ್ದೆರದ ॥೩೫॥ ಅಳಲಮುಕ್ಕುಳಿಸಿದನು ರೋಷದ । ಬೆಳವಿಗೆಯ ಗವಸಣಿಸಿದನು ಕಳ । ವಳಿಕೆ ಹಿಂಗಿದುದಶ್ರುಜಲವನು ಕಣ್ಣಿನಲಿ ಕುಡಿದು ॥ ಪ್ರಳಯರುದ್ರನ ಕೋಪಶಿಖಿ ಕಳ । ವಳಿಸಿತೆನೆ ಕಂಗಳಲಿ ಕಿಡಿಗಳು । ತುಳುಕಿದವು ರೌದ್ರಾನುಭಾವದ ಕೋಪಕಿಡಿಯಿಡಲು ॥೩೬॥ ಹೇಳುಹೇಳಿನ್ನೊಮ್ಮೆ ಮಾರಿಯ ಮೇಳವಾಡಿದನೇ ಜಯದ್ರಥ । ನಾಳುತನವನು ಸಮರದಲಿ ನಮ್ಮೊಡನೆ ತೋರಿದನೆ ॥ ನಾಳೆ ಬೈಗಿಂದೊಳಗೆ ರಿಪುವನು । ಸೀಳುವೆನು ಸೀಳದೊಡೆ ಧರ್ಮಜ । ಕೇಳು ಭಾಷೆಯನೆನುತ ಮಿಗೆ ಗರ್ಜಿಸಿದನಾ ಪಾರ್ಥ ॥೩೭॥ ಹರನ ದುರ್ಗದೊಳಿರಲಿ ಮೇಣೀ । ಹರಿಯ ಕಡೆಲೊಳಗಿರಲಿ ಬ್ರಹ್ಮನ । ಕರಕಮಂಡಲದೊಳಗೆ ಹುದುಗಲಿ ರವಿಯ ಮರೆವೊಗಲಿ ॥ ಉರಗಭವನದೊಳಿರಲಿ ಮೇಣ್ಸಾ । ಗರದ ಮುಳುಗಲಿ ನಾಳೆ ಪಡುವಣ । ತರಣಿ ತೊಲಗದಮುನ್ನ ಕೊಲುವೆನು ವೈರಿಸೈಂಧವನ ॥೩೮॥ ಗುರುವಿಘಾತಿಯ ವಧೆಯನಿಂದಾ । ಪರನ ಪರದಾರಾಭಿಗಾಮಿಯ । ಹರಮುರಾಂತಕಭೇದವಾದಿಯ ವಿಪ್ರನಿಂದಕನ ॥ ಪರಗುಣಾಸೂಯಕನ ಹಿಂಸಾ । ಪರನ ಪಿಸುಣನ ಕೃಪಣಚರಿತನ । ನರಕವಾಗಲಿ ಕೊಲ್ಲದಿರ್ದೊಡೆ ನಾಳೆ ಸೈಂಧವನ ॥೪೦॥ ಕುರುಬಲವಬಿಟ್ಟೊಡೆಯುಧಿಷ್ಠಿರ । ನರಮನೆಯ ಹೊಕ್ಕೊಡೆ ಮುರಾರಿಯ। ಶರಣುಹೊಕ್ಕೊಡೆ ಸರ್ವಥಾಕೊಲುವೆನು ಜಯದ್ರಥನ॥ ಧುರದೊಳಿಳಿದಂತಿಂದ್ರಯಮಭಾ । ಸ್ಕರವಿರಿಂಚಿಗಳಡ್ಡಬಿದ್ದೊಡೆ । ಶಿರವನರಿವೆನು ನಾಳೆ ಬೈಗಿಂದೊಳಗೆ ಸೈಂಧವನ ॥೪೧॥ ಖಳನ ಧೂರ್ತನ ನಾಸ್ತಿಕನ ಚಂ । ಚಲನ ಪರನಿಕ್ಷೇಪಹಾರಿಯ । ದಳಿತಮರಿಯಾದನ ಕೃತಘ್ನನ ಭ್ರಾತೃನಿಂದಕನ॥ ಸ್ಖಲಿತವಚನನ ಯೋಗಿನಿಂದಾ । ಕುಲನ ವಿಕಳವ್ರತನಲೋಕಾ । ವಳಿಗಳಾಗಲಿ ಕೊಲ್ಲದಿರ್ದೊಡೆ ನಾಳೆ ಸೈಂಧವನ ॥೪೨॥ ನಾಳೆ ಖಚರೀಜನದ ಕುಚಯುಗ । ತೂಳಲವನಸು ಪೊರಗದಿರ್ದೊಡೆ । ಕಾಳಗದೊಳೆನ್ನೊಡಲ ಬಿಡುವೆನು ಅಗ್ನಿಗುಂಡದಲಿ॥ ಕೇಳು ಧರ್ಮಜಯೆಂಬನುಡಿಯನು । ಕಾಳಗದ ಸೊಗಸಾಗಿ ಲಕ್ಷ್ಮೀ । ಲೋಲನೈತಂದರ್ಜನನ ಹೊಗಳಿದನು ಪತಿಕರಿಸಿ ॥೪೩॥ ತೀರಿತಿನ್ನೇನರಿನೃಪನ ಸಂ। ಸಾರ ನೀನೇರಿಸಿದನುಡಿಗಳ । ನಾರು ಕಳಚಲುಬಲ್ಲರಗ್ಗದದೇವದೈತ್ಯರಲಿ ॥ ವೀರರಾಮನ ನುಡಿಗೆ ರಾಮನು। ದಾರಬಾಣಕೆ ನಿನ್ನ ನುಡಿಗಳು। ಕಾಳಗಕೆ ಸಮಜೋಳಿ ಜನದೊಳಗೆಂದನಸುರಾರಿ॥೪೪॥ ನಳಿನ

ನಾಭನು ಪಾಂಚಜನ್ಯವ । ಮೊಳಗಿದನು ನಿಜದೇವದತ್ತವ । ಫಲುಗುಣನು ನುಡಿಸಿದನು ನಿಜಗಾಂಡಿವ ವನೊದರಿಸಲು ॥ ಪ್ರಳಯದಿನದಲಿ ತಿವಿದಸಿಡಿಲ । ಪ್ಪಳಸಿದಂತಿರೆ ರೌದ್ರರಸಘುಳು । ಘುಳಿಸಿ ತಲ್ಲಣಿಸಿತ್ತು ಕೌರವನೃಪನ ಪರಿವಾರ ॥೪೪॥ ಏನಿದೆತ್ತಣ ರಭಸತ್ರೈಲೋ । ಕ್ಯಾನುಕಂಪನವಾಯ್ತು ಶಿವ ಯೆನು । ಶೀನರೇಂದ್ರರ ಕಾಯ ನಡುಗಿತು ಕೌರವಾದಿಗಳ ॥ ಸೇನೆ ತಲೆಕೆಳಕಾಯ್ತು ಪಾರ್ಥನ । ಸೂನು ವಿನ ಮರಣದಲಿ ಮಂತ್ರ । ಧ್ಯಾನ ತಮಗಾಯ್ತೆನುತ ತಲ್ಲಣಿಸಿದುದು ನೃಪಕಟಕ ॥೪೫॥ ಎಲೆಲೆ ಕವಿಕವಿ ಕಳರುಗಳಿದೆ।ಕ್ಕೊಲೆಗೆಡುಗರಿಪುನೃಪರು ಮಗವಡಿ॥ ದಳಲುವಿಗಲನ್ಯಾಯಕಳುಪಿದನೇ ಯುಧಿಷ್ಠಿರನು ॥ ಬಲವ ಕರೆಕರೆಯೆನುತ ಕಾಹಿನ । ತೊಳಲಿಕೆಯನಾಯಕರು ಗಜರಲು । ಬೆಳಗಿದವು ಬಂಬಾಳದೀವಿಗೆ ನೆರೆದುದತಿರಥರು ॥೪೬॥ ಹೊಳಲು ವಿಗೆ ಗಜಬಜಿಸಿ ತೊಳಲಿಕೆ । ಯೊಳಗೆ ನೆರೆದುದು ಕೋರಡಿಯಮುಳು । ವೆಲಿಯಗಾಂತುದು ಬೇಹಹರಿಸಿದರಖಿಳದೆಸೆದೆಸೆಗೆ ॥ ಬಲುಗುದುರೆಯೊದಗಿದವು ವಿಗೆ ಹೆ । ಕ್ಕಳಿಸಿದರು ಭೂಪಾಲಕರು ಹು । ಯ್ಯಲಲಿ ಕಳವಳಗೊಂಡು ತಲ್ಲಣಿಸಿತ್ತು ನೃಪಕಟಕ ॥೪೭॥ ಕಡಿಯಣವನಾನೆಗಳ ಮೋರೆಗೆ । ತೊಡಿಸಿದರು ತೇಜಿಗಳ ಕೊರಳಲಿ । ನಿಡುನೊಗನ ಕಟ್ಟಿದರು ಕಿವಿಯಲಿ ಕೀಲುಗಳ ನಿಲಿಸಿ॥ ಜಡಿಪಗುಳವನು ಹಯಕೆ ಬಿಗಿಸಿದ । ರೊಡನೊಡನೆ ಹಕ್ಕರಿಕೆಜೋಡಿನೊ । ಳೊಡಸಿ ಗಾಲಿಯ ಬಿಗಿದು ಗಜಬಜಿಸಿದುದು ನೃಪಕಟಕ ॥೪೮॥ ತಿರೆದೊಳಾಂತರು ಮೋಚಯವೆನಾ । ಚರಣದಲಿ ಸೀಸಕವ ಕೊರಳಲಿ । ಬಲಿಯಕವಚವ ಕಟ್ಟಿದರು ಬೆನ್ನಿನಲಿ ಕೈಹೊದೆಯ ॥ ಸುರಗಿಗಳ ನೀಡಾಡಿ ತಿರುಹಿದ । ದೊರೆಗಳನು ಬತ್ತಳಿಕೆಗಳ ಬಿಲು । ದಿರುವಿನಲಿ ಮೋಹಿದರು ಕಳವಳಗೊಂಡುದರಿಸೇನೆ ॥೪೯॥ ಕರಿಗಳನು ರಾವುತರು ಜೋದರು । ತುರಗವನು ಕಾಲಾಳು ರಥವನು । ವರಮಹಾರಥರೇಟಿಸಬಳಕತಾರಿಯುಬ್ಬಣವ ॥ ಧುರದಭರವಿಗೆ ಕೊಂಡು ಹೊದರ । ಳ್ಳಿರಿವಬೆರಗಿನ ಬಳಿಯಲ್ಲೈದಿದ । ರರರೆಹೊಯ್ದಾಡಿದರು ಪಾಂಡವರೆನುತ ತಮ್ಮೊಳಗೆ ॥೫೦॥ ಪವನಸುತನಿವ ವಾಸವನ ಮಗ । ನಿವನು ಧರ್ಮಜನೀತ ನಕುಲನು । ಇವನು ಸಾತ್ಯಕಿ ದ್ರುಪದ ಧೃಷ್ಟದ್ಯುಮ್ನನಿವನೀಗ ॥ ಇವನು ಸಹದೇವನು ವಿರಾಟನು । ಇವರು ಪಾಂಚಾಲರು ಘಟೋತ್ಕಚ । ರಿವರೆನುತ ಹೊಯ್ದಾಡಿದರುಮೊದಲಿಸಿ ತಮ್ಮೊಳಗೆ ॥೫೧॥ ಇರುಳು ಬೇಹಿನಚರರು ಪಾಂಡವ । ರರಮನೆಯ ಹೊಕ್ಕರಿದು ವೈರರಳಿದು । ಬರುತ ಕಟಕ ದಗಜಬಜವ ಮಾಣಿಸಿದರಲ್ಲಲ್ಲಿ ॥ ನೆರವಿ ನಗೆಗೆಡೆಯಾಗಿ ಮುಸುಕಿನ । ಮುರಿವಿನಲಿ ಪಾಳೆಯವ ಹೊಕ್ಕರು । ಗರುವಮನ್ನೆಯಮಂಡಲೀಕರು ಕೇಳ್ದರೀಹದನ ॥೫೨॥ ರವಿತನಯ ಗುರುಸೂನು ಭೂರಿ । ಶ್ರವ ಸುಲೋಚನ ಶಲ್ಯ ಕೃಪ ಸೈಂ । ಧವ ವಿವಿಂಶತಿ ಚಿತ್ರಸೇನನು ಕರ್ಣನಂದನರು ॥ ತವತವಗೆ ಬೆದರಿದರು ಕೌರವ । ಭವನಕೈದಿದರಂದಿನಾಹವ । ರವದ ರೌದ್ರದ ರಾಜಕಾರ್ಯವ ತಿಳಿವತವಕದಲಿ ॥೫೩॥ ಹರಿದು ಚರರಾಪಾರ್ಥನಾಡಿದ । ನಿರುಪಮಿತಗಾಢಪ್ರತಿಜ್ಞೆಯ । ಚರಿತವನು ಕೌರವನ ಸಭೆಯಲಿ ತಂದು ಹರಹಿದರು॥ ಮರಣಸೈಂಧವಗಲ್ಲದಿರ್ದೊಡೆ । ಮರಣಪಾರ್ಥಂಗಲ್ಲದಿನ್ನಿದ । ಪರಿಹರಿಸುವುದ ಕಾಣೆನೆಂದರು ನಾಳಿನದ್ಭುತವ ॥೫೪॥ ಲೇಸುಲೇಸಭಿಮನ್ಯುವೀದು। ಶ್ಶಾಸನನ ಮಗನಿಂದ ರಣದಲಿ । ಗಾಸಿಯಾದನು ನಾವು ಮಾಡಿದುದೇನು ಪಾರ್ಥಂಗೆ ॥ ಈಸನೇರಿಸಿ ನುಭದಪಾರ್ಥನ । ಬಾಸೆಹೊಳ್ಳಾಗದು ಸುಯೋಧನ । ದೇಶವನು ಬೀಳ್ಕೊಂಬೆನೆಂದನು ಸೈಂಧವನು ಸಭೆ

ಗೆ ॥೫೫॥ ಅಳಲಿದಾತನು ಕಾಲುಗೆಡೆದೊಡೆ । ಫಲವಹುದೆ ನಿಜಸತಿಯು ಹಿಡಿದಾ । ನೆಳೆದುಪೊಯ್ಯಲು ಭೀಮನಾಡಿದಭಾಷೆಯೇನಾಯ್ತು ॥ ಆಳುಕದಿರಿ ಪರಿವಾರವಿವೆ ಕೋಳ್ । ಗುಳಕೆ ವಜ್ರದಪೋಡು ನೃಪರಿದೆ । ಬಲವಿಹೀನನೆ ನೀನದೇನೆಂದವನಿಪತಿ ನುಡಿದ ॥೫೬॥ ಅವನೋಲೆಯಕಾರತನ ಗಾಂಡೀವಧರನಲಿ ಫಲಿಸುವುದೆ ಮೇ ।ಣಾವನದ್ಭುತಮಂತ್ರಶಕ್ತಿಗೆ ಮಣಿವನಸುರಾರಿ ॥ ಕಾವನಿಲ್ಲರ್ಜುನನ ಕೈಯಲಿ । ಸಾವವನು ತಾನೆನಲು ಮಿಗೆ ರಣ । ಧೀವಶನು ಕುರುರಾಯ ನುಡಿದನು ಮತ್ತೆ ಸೈಂಧವಗೆ ॥೫೭॥ ಗರುಡನೂರವರೆರೆವರೇ ನಾ । ಗರಿಗೆ ತನಿಯನು ನಮ್ಮ ಬಲದಲಿ । ಗುರುವಲಾ ಪಾಲಕನು ಕೈಕೊಂಬನೆ ಧನಂಜಯನ ॥ ನರನ ನುಡಿಗಳ ಹೊಳ್ಳುಗಳೆವೊಡೆ । ಚರಣದಲಿ ಬೀಳುವೆವು ನಡೆ ಯೆಂ । ದಿರುಳು ದ್ರೋಣನ ಮನೆಗೆ ಬಂದನು ಕೌರವರರಾಯ ॥೫೮॥ ನೆಗಳಿದವು ಕೈದೀವಿಗೆಯ ಸಾ। ಲುಗಳು ಹೊಂದಂಡಿಗೆಯವರು ರವ । ಮಿಗಲು ವೆಂಟಣಿಸಿದರು ಸೀಗುರಿ ಮೊಗಕೆ ಮೋಹಿದವು ॥ ಅಗಿವಕಡಿತಲೆಮುಸುಕಿದವು ಚೌ । ರಿಗಳಗೊಂದಣತೂಗಿದವುಮೌ । ಳಿಗಳಮಸ್ತಕದವರುನೆಲನುಕ್ಕಡಿಸಲೈತಂದ ॥೫೯॥ ಗರುಡಿಯೊಡೆಯನ ಪಾಳೆಯಕೆ ಕಡು । ಭರದೊಳೈತರೆ ಕೌರವೇಂದ್ರನ । ಬರವಿದೇನೆಂದೆನುತ ಬಂದನು ದ್ರೋಣನಿದಿರಾಗಿ ॥ ಧರಣಿಪನ ತಕ್ಕೈಸಿ ನೆಲೆಯು । ಪ್ಪರಿಗೆಗೈದಿದನುಸುಳುಗಂಡಿಯು । ಲುರವಣಿಸಿದರುಕರ್ಣಕೃಪಮೊದಲಾದಬೇಹವರು ॥೬೦॥ ವೀಳೆಯವಕರ್ಪೂರವನಿತ್ತುನೃ । ಪಾಲಕರ್ಣಾದಿಗಳಸ ಭಟರ। ಸಾಲ ಮನ್ನಿಸಿ ದ್ರೋಣ ಬೆಸಗೊಂಡನು ಸುಯೋಧನನ ॥ ಕಾಳಗವ ಕೈಕೊಂಡ ಸಿರಿಮೊಗ । ವೇಳುತಿದೆ ಖತಿಯೇನು ನಿನ್ನಿನ । ಕಾಳಗವು ಜಯ ನಮ್ಮದೀದುಮ್ಮಾನವೇಕೆಂದ ॥೬೧॥ ಏನ ಹೇಳುವೆನರ್ಜುನನು ನಿಜ । ಸೂನು ಮಡಿಯೆ ದುರಾಭಿಘಾತದೊ । ಳೇನನೆಂದನು ಹೇಳಿರೈ ಕರ್ಣಾದಿನಾಯಕರು ॥ ತಾನುಗಡ ಸೈಂಧವನ ತಿರವನು । ಭಾನುವಡಗದಮುನ್ನ ತೆಗೆವೆನು । ಹೀನವಾದೊಡೆ ಹೊಗುವೆನೆಂದನು ಹವ್ಯವಾಹನನ॥೬೨॥ ಕೊಂದವನು ದುಶ್ಶಾಸನನ ಮಗ । ಬಂದುದಪವಾದವು ಜಯದ್ರಥ । ಗಿಂದಿವನ ಪತಿಕರಿಸಬೇಹುದು ರಣದಲರ್ಜುನನ ॥ ಮುಂದುಗೆಡಿಸಲುಬೇಕು ಭೀಷ್ಮರು । ಸಂದಬಳಿಕೆಮಗಾಪ್ತಹಿತವರು । ತಂದೆ ನೀವೆಂದೆರಗಿದನು ನೃಪ ಗುರುವಿನಂಘ್ರಿಯಲಿ ॥೬೩॥ ಮಕುಟವನು ನೆಗಹಿದನು ಭೂಪಾ । ಲಕಶಿರೋಮಣಿ ಶಶಿಯಕುಲವರ । ನಿಕರವಿತ್ತಂಡಕ್ಕೆ ಸರಿಯೆನಬೇಡ ಬುದ್ಧಿಗಳ ॥ ಯುಕುತಿಗದಕಿನ್ನಿಲ್ಲಪಾರ್ಥನ । ಸಕುತ್ತಿಘುನವೀರಾಚಕಾರ್ಯಾದಿ । ಚಕಿತನಾದೆನು ರಾಯಚಿತ್ತೈಸೆಂದನಾದ್ರೋಣ ॥೬೪॥ ಕಾವೊಡೆನ್ನಳವಲ್ಲ ಮೇಣ್ಸಾ೦ । ಡಿವಿ ಕೊಲುವವನಲ್ಲ ಕೃಷ್ಣನು । ಕಾವೆಡೆಯು ಕೊಲುವೆಡೆ ಸಮರ್ಥನು ವೇದಸಿದ್ಧವಿದು ॥ ಜೀವಜಾತ ಕ್ಕೊಡೆಯನಾರಾ । ಜೀವನಾಭನು ಬರಿಯಹಂಕಾ । ರಾವಲಂಬನದಿಂದ ಕೆಡುತಿಹುದಖಿಳಜಗವೆಂದ ॥೬೫॥ ಇದು ಮುರಾರಿಯ ಲೀಲೆಗೋಸುಗ । ವುದಯಿಸಿದಜಗವಿದರೊಳೊಬ್ಬನ । ಸದೆದು ಬಿಡುವನು ಹಿಡಿವನೊಬ್ಬನ ಸಲಹಿ ನಡಸುವನು ॥ ಇದರೊಳಾಗಿಂತಲ್ಲ ಕರುಣಾ । ಸ್ಪದದ ಭೂಜಂತ್ರದಲಿ ಯೊಜಗ । ದುದರವಾತನ ಕಡೆಯಲಾದುದು ಭುವನಗತಿಯೆಂದ॥೬೬॥ ನರನ ನುಡಿಯೆಂದಿರದಿರಾ ಮುರ । ಹರನ ನುಡಿಗಳು ಗಿರಿಗುಹಾಗ । ಹ್ವರದ ನುಡಿಯೋ ಜಂಗಮಧ್ವನಿಯೋ ವಿಚಾರಿಸಲು ॥ ನರನ ನುಡಿ ಹೊಳ್ಳಾಗದಾಮುರ। ಹರನ ಬಲುಹುಳ್ಳನ್ನಬರಹನ। ಲಗಸನಾಲಿಸಿ ಕೇಳುತಿರ್ದನು ಕೈಯುಗಲ್ಲದಲಿ ॥೬೭॥ಕೇಳುತಿರ್ದ್ದ ಕರ್ಣ

ಬೊಮ್ಮವ । ಹೇಳಬಲ್ಲೆವೆ ನಾವು ನಾಳಿನ । ಕಾಳಗವು ಜಯವಾಗಲೋಸುಗ ಬಂದೊಡಿಂದೀಗ ॥ ಹೇಳುತಿರ್ದನ ಸಂಗತಿಯನಿದು । ಹೋಲುವೆಯಲಾ ಮುನಿಕುಮಾರರು । ಕಾಳಗದೊಳೇಗುವರು ಬಳಿಕೇನೆಂದನಾಭೂಪ ॥೬೮॥ ಕಟಕಿಯೋಕಿದು ವಿಪ್ರರಾವು । ತ್ಕಟದಸಾಹಸವಿಲ್ಲ ನಾನ್ದಿಟ । ಘಟಿಸದೆಂದೊಡಖ್ಯಾತಿಯಾಯಿತೆ ನಿಮ್ಮ ಚಿತ್ತದಲಿ ॥ ನಿಟಿಲಲೋಚನ ನೋಡುವರೆ ಸಂ । ಕಟವು ವಿಷಮೋಹರದ ಬಲುಸಂ । ಘಟನೆಯನು ತೋರುವೆನು ಚಿಂತಿಸಬೇಡ ಹೋಗೆಂದ ॥೬೯॥ ವ್ಯೂಹವನು ರಚಿಸುವೆನು ನಾಳಿನ । ಲಾಹವಕೆ ತಳತಂತ್ರವೊಂದೇ । ಮೋಹರಕೆ ನಡೆತರಲಿ ಷಡುರಥರಾದಿನಾಯಕರು ॥ ಸಾಹಸವನುದಯದಲಿ ತೋರುವೆ । ಬಾಹುಬಲ ಮಿಗೆ ಸೈಂಧವನ ಮೈ। ಗಾಹ ಬಲಿವೆನು ರಾಯ ಚಿತ್ತೈಸೆಂದನಾದ್ರೋಣ ॥೭೦॥ ಸಾಕು ನೀಚಿಂತಿಸಲುಬೇಡ ಪಿ । ನಾಕಧರನಡಹಾಯ್ದೊಡೆಯು ನಾ । ವಾಕೆವಾಳರು ರಣಕೆ ಕೃಷ್ಣಾರ್ಜುನರ ಪಾಡೇನು ॥ ನೂಕಿ ನೋಡಲಿ ಸೈಂಧವನ ಲೋ । ಕೈಕವೀರರು ಕಾವೆವೆಂದು । ದ್ರೇಕ ಮಿಗೆ ಗರ್ಜಿಸುತ ಕರ್ಣಾದಿಗಳು ತಮತಮಗೆ ॥೭೧॥ ಬೀಳುಕೊಂಡುದು ರಾಜಸಬೆ ತ। ಮ್ಮಾಲಯಕೆ ಸೈಂಧವನು ಚಿಂತಾ ॥ ಲೋಲನಿದ್ದನು ಮರಣಜೀವಜ್ಞಾನಸಂಶಯನು ॥ ಕೋಲಗುರುವಿನ ಮಧುರವಚನವ । ಕೇಳಿದನು ನಸುನಗುತ ಪಾರ್ಥಗೆ । ಹೇಳಿದನು ಕರುಣದಲಿ ಗದುಗಿನ ವೀರನಾರಾಯಣ ... ... ... ... ॥೭೨॥

ಅಂತು ಸಂಧಿ ೯ ಕ್ಕೆ ಪದ ೬೧೫ ಕ್ಕಂ ಮಂಗಳಂ.

## ಹತ್ತನೆಯ ಸಂಧಿ.

॥ಸೂಚನೆ॥ ಜಯಸಮರಸಂರಂಭನಾಹವ । ಭಯಬಹಿರ್ಮುಖ ಶಸ್ತ್ರವಿದ್ಯಾ । ನಿಯತಮತಿ ಮೋಹಿದನು ಸಮರಕೆದ್ರೋಣನೆನುವಾದ ॥

ಪದ ॥ ಕೇಳು ಜನಮೇಜಯಧರಿತ್ರೀ । ಪಾಲ ಫಲುಗುಣ ಹೊಕ್ಕನಾಯುಧ । ಶಾಲೆಯಲಿ ತೆಗೆಸಿದನು ಧನುಮೊದಲಾದಕೈದುಗಳ ॥ ಸಾಲರಿದು ನಿಲಿಸಿದನು ನಿಶಿತಶ । ರಾಳಿಚಾಪಕೃಪಾಣ ಪರಶುತ್ರಿ । ಶೂಲಮುದ್ಗರಶಕ್ತಿತೋಮರ ಚಕ್ರಮೊದಲಾದ ॥ ಸವಗಮೋಚೆಯಜೋಡುಸೀಸಕ । ವಿವಿಧಕವಚವ ಬಾಹುರಕ್ಷೆಗ । ಳವನು ಮಿಗೆ ನಿಲಿಸಿದರು ಪುಷ್ಪಸುಗಂಧಧೂಪದಲಿ ॥ ವಿವಿಧಸತ್ಕಾರದಲಿ ದುರ್ಗಾ । ಸ್ತವಗಳದರನುಹೇಳಿಭಜಿಸಿದ । ನವರುಧಿರಮಾಂಸೋಪಹಾರಂಗಳಲಿಪೂಜಿಸಿದ ॥೨॥ ಒಡನೆ ಗಜರುಮವಾದ್ಯದಲಿಕೆಂ । ಪಿಡಿದವೋದನಸಹಿತ ಭೂತಕೆ। ಬಡಿಸಿದರು ಮಂತ್ರಿಗಳು ಪಡೆವೆರಸಿದರು ದೆಸೆದೆಸೆಗೆ॥ ಸೊಡರುವಸನಾದಿಗಳಲೊಪ್ಪಂ । ಬಡೆದುದೆಲ್ಲವ ಹರಿಯೊಳರ್ಪಿಸಿ । ನಡುವಿರುಳು ಕಲಿಪಾರ್ಥನರ್ಚಿಸಿದನು ನಿಜಾಯುಧವ ॥ ೩ ॥ ಇರುಳಿನದ್ಭುತರಭಸವಾಲಿಸಿ । ಮುರಹರನು ಫಲುಗುಣನ ಘನಸಂ । ಗರಜಯಧ್ವನಿ ಮಂತ್ರವೆಂದನು ದಾರುಕನಕರೆದು ॥ ಹರ ಮಹಾದೇವಾದಿಗಳು ಗೆಲ। ಲರಿದು ನಾಳಿನಬವರವಿನ್ನೀ । ನರನ ಜಯವೆಂತೆನುತ ಚಿಂತಿಸುತಲ್ಲಿಗೈತಂದ ॥೪॥ ರಚನೆಚೆಲುವದು ನಾಳಿನಾಹವ । ಖಚರಕಿಂಪುರುಷರಿಗೆಯಸದಳ । ವಚಲಬಲಗಾಡಿಕೆಯಹರಿಯದು ರಾಜಕಾರ್ಯವಿದು॥ ಉಚಿತದಲಿ ಕೊಂ

ಡೊಯ್ಯುದ್ರುದ್ರನ | ವಚನವನು ತಿಳುಹಿಸುವೆನೆಂದಾ | ಶಚಿಯ ಗಂಡನಮಗನನೀಶನಪದವ ಕಾಣಿಸಿದ ॥೫॥ ಶಿವನ ಕರುಣಾಲಾಭ ಪುಣ್ಯ | ಪ್ರವರ ಪಾರ್ಥನ ಮುನ್ನಿನಂದದ | ಲೆವನಿಗಿಳುಹಿದ ನಿಖಿಲದಿವ್ಯಾಯುಧದ ವೇದಿಕೆಗೆ ॥ ಸವೆದುದಿಂದಿರುಳುತ್ಪಲಂಗಳ|ನಿವಹ ಬಲಿದುದು ಚಕ್ರವಾಕದ | ತವಕ ಮುರಿದುದು ತರಣಿಯುಡರಿದನುದಯಪರ್ವತವ ॥೬॥ ವಿಮಲದರ್ಭಾಂಕುರದ ಶಯನದ | ಲಮರಪತಿಸುತ ಪವಡಿಸಿದನನು | ಪಮವಿಲಾಸದ ಕನಸ ಕಂಡೆನೆನುತ್ತ ಕಣ್ದೆರೆದು ॥ ಸಮರವಿಜಯಕೆ ಶಿವನಕೃಪೆ ಸಂಕ್ರಮಿಸಿತೆನಗೆಂದೆನಲು ಮುಂದಣ | ಕಮಲನಾಭನ ಕಂಡು ಬಿನ್ನಹ ಮಾಡಿದನು ನಗುತ ॥೭॥ ದೇವನಿಮ್ಮಡಿಸಹಿತ ಕಂಡೆನು | ದೇವದೇವನಚರಣವನು ಸಂ | ಭಾವಿಸುವ ನಮ್ಮಿಬ್ಬರನು ದಕ್ಷಾಧ್ವರಧ್ವಂಸಿ॥ ನಾವು ಬಂದುದನಂದು ವರರಾ | ಜೀವಸರಸಿಗೆ ಕಳುಹಿದನು ಗಾಂ | ಡೀವನಿಜಚಾಪವನು ಕಂಡೆನು ಕೊಳನಮಧ್ಯದಲಿ ॥೮॥ ಬಳಿಕ ತಿರುವಿಟ್ಟವರೊಳಸ್ತ್ರವ | ಸೆಳೆದು ಬಿಲುವಿದ್ಯಾಸಮಗ್ರದ | ನೆಲೆಯ ತೋರಿದೊಡಾಗಳೀಶನ ಹೊರೆಗೆ ತಾನೈದಿ॥ ಬಳಿಕ ದಿವ್ಯಾಸ್ತ್ರಪ್ರಯೋಗವ|ಬಲುಹನೀಕ್ಷಿಸಿ ತೆಗೆವ ದಡಗನು| ನಿಲಿಸಿ ಪಾಶುಪತಾಸ್ತ್ರವಾಯ್ತೆನಗಲ್ಲಿ ವಶವರ್ತಿ ॥೯॥ ಕನಸನೀಹದನಾಗಿ ಕಂಡೆನು| ದನುಜಹರಬೆಸಸಿದರ ಫಲವನು | ನನಗೆನಲು ನಸುನಗುತ ನುಡಿದನು ದಾನವಧ್ವಂಸಿ ॥ ನಿನಗೆ ಶೂಲಿಯು ಕರುಣವಾಯ್ತಿಂ | ದಿನಲಿ ಪಾಶುಪತಾಸ್ತ್ರ ನಿನ್ನದು | ದಿನದೊಳಗೆ ಸೈಂಧವವಧವ್ಯಾಪಾರ ವಹುದೆಂದ ॥೧೦॥ ಎನೆ ಹಸಾದವೆನುತ್ತ ನಿಜಕರ | ವನಜಮುಕುಳಿತ ನಿರಲು ಸೇನಾ | ವನಧಿ ಗರ್ಜಿಸಿದವು ದಿನಾಧಿಪನುದಯಸಮಯದಲಿ ॥ ವನರುಹಾಕ್ಷನ ನೇಮದಲಿ ಸು|ದಣಿಸಿ ಶಂಖನಿನಾದ ಭೂಪರ| ಮನೆಯೊಳರದೆಖ್ಖಾಳಜಯದಲಿ ಘಟನೆಯೊಗ್ಗಿದವು ॥ ೧೧ ॥ ಉಲಿವಮಂಗಳಪಾಠಕರ ಕಳ | ಕಳದಲುಪ್ಪವಡಿಸಿದನವನಿಪ | ತಿಲಕಮಾಡಿದನಮಲಸಂಧ್ಯಾವಂದನಾದಿಗಳ ॥ ನಳಿನನಾಭನ ಪಾದಕಮಲಕೆ | ನಲವಿನಿಂದಭಿನಮಿಸಿ ಸುಭಟಾ | ವಳಿಗೆ ನೇಮವ ಕೊಟ್ಟನಂತಕಸೂನು ಸಂಗರಕೆ ॥೧೨॥ ನಡೆದುದುರು ಸನ್ನಾಹನಲಿ ಸೂ | ಳಡಸಿ ಮೆರೆವಗಭೀರಭೇರಿಯ | ಕಡುರವವು ರಿಪುಭಟರ ಬೈಗುಳ ಬಿರುಬುಗಹಳೆಗಳ ॥ ಎಡಬಲಕೆ ಮಿಗೆ ಹೊಳೆವ ತೇಜಿಯ | ಕಡುಮನದ ಕರಿಘಟೆಯ ತೇರಿನ | ಗಡಣದಲಿ ಕಾಲಾಳು ಕಳಕಳವಾಯ್ತು ರಣದೊಳಗೆ ॥೧೩॥ ಎದ್ದುದೀಕಟಕದಲಿ ಬಲ ಮಿಂ | ಡೆದ್ದ ಸುಭಟರು ಸಮರ ಭೂಮಿಯ | ಹೊದ್ದಿದರು ಝಳಪಿಸುತಲಾಯ್ದುದಹೊಗರ ಹೊಳಹುಗಳ ॥ ಅದ್ದುದದ್ಭುತರವದ ನೆರೆ ಹೊದ | ರೆದ್ದು ನಡೆದುದು ದಂತಿಘಟೆ ಬರು | ತಿರ್ದುದಗಣಿತರಥಪದಾತಿಗಳಾಹವಾಂಗಣಕೆ ॥ ೧೪ ॥ ವಿನುತಸಂಧ್ಯಾವಂದನಾದಿಯ | ನನುಕರಿಸಿ ಹರಿಪದಪಯೋಜವ | ನೆನೆದು ವಿರಚಿತವೇದವಿಪ್ರಾನಲಸಮಾರ್ಚಿತನು ॥ ಕನಕಕವಚವ ತೊಟ್ಟು ಗಡ್ಡದ | ಘನತೆಯನು ಗಂಟಿಕ್ಕಿ ವರಕಾಂ | ಚನಮಯದ ಯಜ್ಞೋಪವೀತವನಿಕ್ಕಿದನು ದ್ರೋಣ ॥ ೧೫ ॥ ನೆರೆಯುಡಿಯಲಾಮಲ್ಲಗಂಟಿನ| ಸೆರಗ ಮೋಹಿಸಿ ಬಿಗಿದು ದರ್ಭೆಯ | ಹರಿದು ಬಿಸುಟನು ಕವಚಸೀಸಕಬಾಹುರಕ್ಷೆಗಳ ॥ ಮುರುಹಿ ಬಿಗಿದನು ನಿಖಿಳಭೂಸುರ | ವರರ ಮಂತ್ರಾಕ್ಷತೆಯ ಕೊಳುತ | ಳ್ಳಿರಿವಜಯರವದೊಡನೆ ರಥವೇರಿದನು॥ಕಲಿದ್ರೋಣ ॥ ೧೬ ॥ ಸೂಳವಿಸಿದವು ಸನ್ನೆಯಲಿ ನಿ | ಸ್ಸಾಳಕೋಟಿಗಳುರವಣಿಸಿ ಹ | ಗ್ಗಾಳೆಗಳು ಸಾರಿದವು ಸುಭಟರವೀರವಿತರಣದ ॥ ಸಾಲಝಲ್ಲರಿಗಳ ಪತಾಕಾ | ಜಾಲಸಬಲದ ಹೊ

ದರುಗಳ ಬಿರು । ಗೋಲ ತೂಗಾಟದಲಿ ಸಮರಕೆ ದ್ರೋಣನನುವಾದ ॥ ೧೭ ॥ ನೆಗಹಿ ಬೀಸುವಚೌರಿಗಳ ಸ। ನ್ನೆಗಳ ಚಾತುರ್ಬಲವ ದ್ರೋಣನ । ದೃಗುನಿರೀಕ್ಷೆಯೊಳೇರಿದರು ತವಮ್ಮೆಳುಕುದುರೆಗಳ ॥ ತೆಗೆದು ಯೋಜನವಾರರಲಿ ಕಾ। ಳಗಕೆ ಶಕಟವ್ಯೂಹದಲಿ ಚೂ । ಣಿಗಳ ಬಗೆದನು ಕೌರವೇಂದ್ರಾನುಜನ ಗಡಣದಲಿ ॥ ೧೮ ॥ ಇದಿರುಶಕಟವ್ಯೂಹವದರ । ಗ್ರದಲಿ ದುಶ್ಯಾಸನನ ಬಲ ಕೆಲ । ವದರಬಲದಲಿ ಬಾಹ್ಲಿಕನು ಸೌಬಲನು ಮಾಗಧರು ॥ ಅದರಹಿಂದಣ ವ್ಯೆಯಲ್ಯೆಗಾ । ವುದದ ನೀಳದಲೆರಡುವರೆಗಾ । ವುದದ ವಿಸ್ತಾರದಲಿ ಮಕರವ್ಯೂಹವನುಬಲಿದ ॥ ೧೯ ॥ ಹಿಂದೆಯೋಜನವ್ಯೆದರಳವಿಯೊ । ಳೊಂದುಚಕ್ರವ್ಯೂಹವನು ನಲ । ವಿಂದ ಬಲಿದನು ನಿಲಿಸಿದನು ಕಾಂಭೋಜಭೂಪತಿಯು ॥ ವಿಂದನನು ವಿಂದಾನುವಿಂದನ। ನಂದು ಸಂಶಪ್ತಕರ ಬಲವನು । ಸಂದಣಿಸಿದರು ಹತ್ತುಸಾವಿರನೃಪರ ಗಡಣವಲಿ॥೨೦॥ ತುರಗವರುವತ್ತಾರುಕೋಟಿಯು । ವರಮದೇಭವನೆಂಟುಲಕ್ಷವ । ವರರಥವನ್ಯೆವತ್ತುಸಾವಿರವನು ಸಗಾಢದಲಿ ॥ ಧುರದಕಾಲಾಳಗಣಿತವ ಮೋ । ಹರಿಸಿ ಹಂಸವ್ಯೂಹವನು ಸಡ । ಗರಿಸಿದನು ನಿಯುತಾಯುವೊದಲಾದವರ ಕಾಹಿನಲಿ ॥ ೨೧ ॥ ಕೆಲಬಲದ ಸಬಳಿಗರು ಸಬಳದ । ವಳಯುದಲಿ ಹರಿಗೆಗಳು ಹರಿಗೆಯು । ಮಲೆತಬಿಲ್ಲಾಳದರ ಮರೆಯುಲಿ ವಾಜಿಗಜರಥವ ॥ ನಿಲಸಿ ಗರ್ಭವ್ಯೂಹವನು ಮಂ । ಡಳಿಸಿದನು ಸಂವೀರನನು ಸಿಂ । ಹಳರ ನಿಲಿಸಿದ ಹತ್ತುಸಾವಿರಮಂಡಲೇಶ್ವರರ ॥೨೨॥ ಅಪರ ಭಾಗದಲಳವಿಯುಲಿ ಭೂ । ಮಿಪನು ಭೂರಿಶ್ರವನು ಶಲ್ಯನು। ಕೃಪನು ವೃಷಸೇನನು ಸುಲೋಚನ ದೀರ್ಘಬಾಹುಕನು ॥ ನೃಪತಿಗಳನೆಂಬತ್ತುಸಾವಿರ । ಚಪಳಗಜಹದಿನೆಂಟುಲಕ್ಷವ। ನೆಪರಿಮಿತ ತೇಜಿಯುಲಿ ಶಕಟವ್ಯೂಹವನು ಬಲಿದ ॥ ೨೩ ॥ ಆಮಹಾಮೋಹರದ ಬಳಿಯುಲಿ । ಸೋಮದತ್ತನ ದಂಡಧರನನು । ತಾಮರಸಬಂಧುವಿನ ಸುತನನು ಕ್ಷೇಮಧೂರ್ತಕನ ॥ ಆಮಹಾಬಾಹ್ಲಿಕನನಶ್ವ । ತ್ಥಾಮನನು ಕೃತವರ್ಮರನಿಪಸ । ನಾಮರನು ನಿಲಿಸಿದನು ಸೂಚಿವ್ಯೂಹವಳಯದಲಿ ॥ ೨೪ ॥ ಪದುಮಸೂಚಿವ್ಯೂಹಮಧ್ಯದೊ । ಳಧಟರನು ನಿಲಿಸಿದನು ಸಮರಂ । ಗದಸಮರ್ಥರನಾಪ್ತರನು ಬಾಂಧವರುಗಳ ನಿಲಸಿ ॥ ಕದನದಲಿ ಸ್ಯೆಂಧವನನಾಮ । ಧ್ಯದಲಿ ನಿಲಿಸಿದನಮಮ ಸಮರಕೆ । ಮದನಮದಹರ ಮೊಗಸಲಸದಳವೆನಿಸಿ ರಂಜಿಸಿತು ॥ ೨೫ ॥ ಕವಿವ ಸಿಡಿಲೊಬ್ಬುಳಿಯೊ ಪ್ರಳಯುದ । ಜವನನೆರವಿಯೊ ಕಾಳಕೂಟಾ। ರ್ಣವದ ಸೀಮಾಲಂಘನೆವೊ ಮೃತ್ಯುವಿನ ಪಾಳೆಯವೋ॥ ಅವನಿಕುಸಿದುದು ನೆರೆದಸೇನೆಯ। ಹವಣನೀಶ್ವರ ಬಲ್ಲನ್ಯೆ ಸ್ಯೆಂ। ಧವನ ಕಾಹಿನ ಮೋಹರಂಗಳು ಕಿಡಿಯನುಗುಳಿದವು॥೨೬॥ ಜಡಿವಮದದಾನೆಗಳ ಗಗನವ । ನಡರ್ವಬಲುಗುದುರೆಗಳ ಸೂಠಿಯೊ । ಳೆಡಬಲಕೆ ಬಿರುಮರಿವತೇರಿನ ಸೂತರೋಜೆಗಳ ॥ ಖಡುಗಕುಂತವ ನಭಕೆ ಹಾಯಿಕಿ । ಹಿಡಿವಸುಭಟವ್ರಜವ ಹೊಯ್ಲಿನ । ಕಡುಮನದ ರಣಪವಕಿಗರ ಸಂರಂಭ ರಂಜಿಸಿತು ॥ ೨೭ ॥ ಮೊಳಗಿದವು ನಿಸ್ಸಾಳಕೋಳಾ । ಹಳಿಸಿದವು ಕಹಳೆಗಳು ಪರ್ವತ । ಹುಳಿಯೆಮೆಚ್ಚಿದವಾದ್ಯಪಟಹಮೃದಂಗಡಿಂಡಿಮದ ॥ ಉಲಿವಕಹಳೆಯ ಹೇಷಿತದ ವೆ। ಗ್ಗಳೆಯ ಕರಿಗಳ ಬೃಂಹಿತದ ಗೊಂ । ದಳದ ಗಳಗರ್ಜನೆಯುಲಾಯಿತು ಕೌರವನ ಬಲದಿ ॥ ೨೮ ॥ ಮುಂದೆ ಶಕಟವ್ಯೂಹದಲಿ ನಡೆ। ತಂದು ನಿಂದನು ದ್ರೋಣನೀಬಲ । ಸಂದಣಿಯನೆರೆ ನೋಡಿ ಮಕುಟವ ತೂಗಿ ನಲವಿನಲಿ॥ ಇಂದು ಗೆಲಿದೊಡೆ ಧರ್ಮಸುತನೆವ। ರಿಂದುಕುಲದಗ್ಗಳರು ಬರಹೇ । ಳೆಂ

ದು ಭಟ್ಟರನಟ್ಟಿದನು ಪಾಂಡವರಪಾಳೆಯಕೆ ॥ ೨೯ ॥ ಕೇಳು ಧೃತರಾಷ್ಟ್ರಾವನಿಪಸಿರಿ । ಲೋಲಸಹಿತ ಯುಧಿಷ್ಠಿರಾದಿಗ । ಳಾಳ ಮೇಳೈಸಿದರು ಹೊಕ್ಕರು ಕಾಳಗದ ಕಳನ ॥ ಸಾಲರಿದು ನಿಜಸೇನೆಯನು ಪಾಂ। ಚಾಲ ಮೋಹರಿಸಿದನು ಪದಕಂ। ಧೂಳಿ ಮಾಣಿಸಿತೆನಿಮಿಷತ್ವವನೆಮಚರಸಂತತಿಯ ॥೩೦॥ ವರವಿರಾಟಕುಮಾರಮತ್ಸ್ಯರು । ಬಿರುದ ಕೈಕಯಚೈದ್ಯಕೇರಳ । ಮರುತಯವನರು ಸಂಧಿಕೌಶಲ ಪಾಂಡ್ಯಮಾಗಧರು ॥ ಧರಣಿಪನ ಬಲದಲ್ಲಿ ಸೃಂಜಯ। ವರರು ಪಾಂಚಾಲಕರು ಚೋಣಿಯೊ । ಳುರ ವಣಿಸಿದರು ನಕುಲಸಾತ್ಯಕಿಭೀಮನಂದನರು ॥ ೩೧ ॥ ನರಮುರಾಂತಕರೊಂದುಕಡೆಯಲಿ । ಮುರಿಯೆ ಕಂಡನು ನೃಪತಿ ಕೃಷ್ಣನ । ಹೊರೆಗೆ ಬಂದನು ನೆಮ್ಮಿ ಬಿನ್ನಹಮಾಡಿದನು ನಗುತ ॥ ನರನಿವನು ಮುಂದಿದಿರುಗಾಣದೆ । ಹಿರಿದನೇರಿಸಿ ನುಡಿದನೆದಪತಿ । ಕಂಸಬೇಹುದು ನಿಮ್ಮ ಕರುಣಾದಿ ಹರಣವೆನಗೆಂದ ॥ ೩೨ ॥ ಹಗೆಯ ತಲೆಹೋಗದೊಡೆ ವಹ್ನಿಯ । ಹೊಗುವನುಡಿ ತಮ್ಮಂಗೆ ಬಳಿಕಾ । ಸೆಗಳಿಕೆಯ ನುಡಿದೆಮ್ಮನಾಲ್ವರ ದೇಹನಿಕ್ಷೇಪ ॥ ಬಗೆಯಲೈವರ । ಜೀವನದಜೀ । ವಿಗಳು ನೀನೆಂದರಸ ಕರುಣಾ । ಳುಗಳ ದೇವನ ಬೇಡಿಕೊಂಡನು ಕೇಳುಧೃತರಾಷ್ಟ್ರ ॥ ೩೩ ॥ ಪಡೆಕಡಲು ಕುಡಿನೀರುನೆರೆನೀ । ರಡಗಹುದು ಪಾರ್ಥನ ಶರಾವಳಿ । ವಡಬನಿದಿರೊಳು ಕೆಲಬಲದ ಹಂಗೇಕೆ ಕದನದಲಿ ॥ ಕಡುಹಿನಲಿ ಸೈಂಧವನ ತಲೆಯನು। ಹೊಡೆದು ನಿನ್ನಯ ಕಾಲು ದೆಸೆಯಲಿ । ಕೆಡಹುವನು ನಿಮಿಷದಲಿ ಫಲುಗುಣಎಂದನಸುರಾರಿ ॥೩೪॥ ಕರೆದು ಸಾತ್ಯಕಿಭೀಮರಿಗೆ ನೃಪ । ವರನು ಸುಯ್ಧಾನವನು ಹೇಳಿದ । ನರಿಬಲಕೆ ನೂಕಿದನು ಕೈಕಯ ಚೈದ್ಯಸೃಂಜಯರ ॥ ಮುರಮಥನನೊಡಗೂಡಿ ನಿಜಮೋ । ಹರಸಹಿತ ನೈನೂರಬಿಲ್ಲಂ । ತರಕೆ ತೊಲಗಿ ಮಹಾಸ್ತ್ರಮಂತ್ರವ ಜಪಿಸಿದನು ಪಾರ್ಥ ॥೩೫॥ ಇಳಿದು ರಥವನು ಮುರಹರನ ಪದ । ತಳಿತಧೂಳಿಯ ಕೊಂಡನತಿನಿ । ರ್ಮಳಸಮಾಧಾನದಲಿ ಕೃಷ್ಣನ ಚರಣ ಕರಗಿದೊಡೆ ॥ ತಲೆಯ ಹಿಡಿದೆತ್ತಿದನು ಹಂಕೋ । ಮಲಕರಾಂಬುಜದಂದ ಪಾರ್ಥನ । ನೂಲಿದು ಮೈದಡವಿದನು ಗೆಲು ನೀನೆಂದು ಹರಸಿದನು ॥೩೬॥ ಖುರಕೆ ರತುನವ ಸುರಿದು ತೇರಿನ । ತುರಗವನು ವಂದಿಸಿದನಪ್ಪಳ । ಹರೆದ ಹನುಮಂಗೆರಗಿದನು ಸುರಕುಲಕೆ ಕೈಮುಗಿದು ॥ ವರರಥಕೆ ಬಲವಂದು ಕವಚವ । ಬರಿಗೆ ಬಿಗಿದನು ಕೈಗೆ ವಜ್ರದ । ತಿರುವಿಗೆಯನವಚಿದನು ರಥವೇರಿದನು ಕಲಿಪಾರ್ಥ ॥೩೭॥ ದೇವದತ್ತವ ಮೊಳಗಿದನು ಗಾಂ।ಡೀವಿ ಚಾಪವ ಮಿಡಿದು ನಿಷ್ಠುರ।ತೀವಿದುದು ಜರುಹಿದುದು ಅಡಿಕಿಲಜಗದಜೋಡಿಗಳ ॥ ರಾವು ಫಲುಗುಣಯೆನುತ ಪಾರ್ಥನ । ಭಾವಕುಡಿಚಮ್ಮಟಿಕೆಯಲಿ ತುರ । ಗಾವಳಿಯ ನಡಸಿದನು ಸುಳಿಸಿದ ಸಾಹಸಕೆ ರಥವ ॥೩೮॥ ಸುರರಿಗಸದಳವಿದು ಮಹಾಮೋ । ಹರದ ತೆರಳಿಕೆ ತನಗೆ ಬಗೆಯದು । ತರಳನಲಿ ತೀರುವುದೆಯಕಟಾಚಾರ್ಯನೊಡ್ಡವಣೆ ॥ ಧರಣಿ ನೆರೆಯದು ಪದಹತಿಗೆ ಹರಹರ ಯಿದೆತ್ತಣದಳವೊ ಮಾರಿಯ । ಕೆರಳಿಯೋ ಮುಝಭಾಪೆನುತ ಹೊಗಳಿದನು ಕಲಿಪಾರ್ಥ ॥೩೯॥ ಅರೆನೆಲೆಯ ಕೆಲಸಿಡಿದು ಫಲುಗುಣ । ಹರಿಸಹಿತ ಹೊರವಂಟು ಭೀಮನ । ಕರೆದು ಸಾತ್ಯಕಿಸಹಿತ ಕೊಟ್ಟನು ಕಾಹನವನಿಪಗೆ ॥ ಬರುತ ಧೃಷ್ಟದ್ಯುಮ್ನ ನಕುಲಾ । ದ್ಯರನು ಚೋಣಿಗೆ ಕಳುಹಿ ರಿಪುಬಲ । ಸುರನದಿಗೆ ಸುರನಾಥಸುತನಿದಿರಾಗಲನುವಾದ ॥೪೦॥ ಕುರುಬಲದ ಬೆಳವಿಗೆಯ ಬೆಳಸಿನ । ಹರವ ನೀಕ್ಷಿಸಿ ಶಕ್ರತನಯನು । ಸರಳ ಬಿಡಲೋಲೈಸಲೆಳ

ಸಿತು ಯಮುನ ಪರಿವಾರ ॥ ಸುರನಗರಿಯಲಿ ಯಮುನ ಪುರದಲಿ । ಥರಥರದ ಹೊರಕೇರಿ ಕಟ್ಟಿತು । ಉರವಣಿಸಿ ಸಂಗರಕೆ ಸಂಮುಖವಾದನಾಪಾರ್ಥ ॥೪೧॥ ವರಯುಧಾಮನ್ಯೂತ್ತ ಮೌಂಜಸ। ರೆರಡು ಕಡೆಯಲಿ ಬರೆ ಮುರಾರಿಯ । ಪರಮಕಾರುಣ್ಯದಲಿ ಸಾಹಸಮಲ್ಲನುರವಣಿಸೆ ॥ ಅರಿಬಲಕೆ ನೋಡಿದನು ಪಾರ್ಥನ । ಬರವನೀಕ್ಷಿಸಿ ತನ್ನ ಭಟರಿಗೆ । ಬೆರಳ ಚೌರಿಯ ಬೀಸಿದುಶ್ಶಾಸನನು ಮಾರಾಂತ ॥೪೨॥ ಫಡಫಡೆಲೆ ಕೌರವಕ್ಕೃತಾಂತನ । ಪಡೆಗೆ ಪಾರಣೆಯಾಗದೀಗಳೆ । ನಡೆಸುವೆನು ನಾಕಕ್ಕೆ ನೆರೆದಮಹಾರಥಾವಳಿಯ ॥ ಬಿಡು ಮದವಸದಿರಾಗದಿರು ಕೊಡು । ಕೊಡು ಪಥವ ನಿನ್ನುದರರಕುತವ । ಕುಡಿವಭಟಬೇರೆನ್ನ ಕಾಡದಿರೆನುತ ನರನೆಚ್ಚ ॥೪೩॥ ತರಹರಿಸಿ ಸರಳೈದರಲಿ ರಿಪು । ವರನನೆಚ್ಚನು ಕೌರವಾನುಜ । ನೆರಡುಶರದಲಿ ಪಾರ್ಥನೆಚ್ಚನು ವೈರಿಯಂಬುಗಳ ॥ ಸರಳು ತೀರಲು ಕಿತ್ತು ಸುರಗಿಯ । ಉರವಣಿಸಿ ಹಾಯಿದನು ಮುಮ್ಮೊನೆ । ಸುರಗಿಯನು ಖಂಡಿಸಿದನರ್ಜುನದೇವ ಸಮರದಲಿ ॥೪೪॥ ಇವನ ಕೊಂದೊಡೆ ಮುನ್ನ ಮಾಡಿದ । ಪವನತನಯನ ಭಾಷೆಗೂಣಯ । ಯಿವನ ಕೊಲ್ಲದೆ ಗೆಲುವಹವಣೇನೆಂದು ಮನದೊಳಗೆ ॥ ಕವಲುಗೋಲಲಿ ಯರಿಭಟನ ಚಾ । ಪವನು ಸೂತನ ರಥವನಾಕವ । ಚವನು ಖಂಡಿಸಿ ಬಿಸುಡಲವ ಜಾರಿದನು ದುಗುಡದಲಿ ॥೪೫॥ ಉರಿವ ಭಂಡಿಯ ಹಿಡಿದು ಹೆಚ್ಚಿದ । ದೊರೆಯಲೇ ವಿಟಪಾದರಸವೆಲೆ । ಯರಸ ನಿನ್ನ ಕುಮಾರನೇಸರಪಾಡು ಪಾರ್ಥಂಗೆ ॥ ತೆರಳಿದನು ನಿಸ್ಸಾತ ಸೂಟಿಯೊ । ಳುರವಣಿಸಿತಾತೇರು ನರನೈ ॥ ತರುತ ಕಂಡನು ಶಸ್ತ್ರವಿದ್ಯಾಭಾಳಲೋಚನನ ॥೪೬॥ ಅರುಣಮಯರಥವಾಜಿಗಳ ವಿಸ್ತರಿಪಹೇಮದ ಕಳಸಸಿಂಧದ । ಸರಳುತೀವಿದಭಂಡಿಬಳಿಯಲಿ ಲಕ್ಷಸಂಖ್ಯೆಗಳ ॥ ತರಣಿಯನು ಸೋಲಿಸುವರತ್ನಾ । ಭರಣಕಾಂತಿಯ ದೊಗೆಯ ಕಟಕದ । ಗುರುವ ಕಂಡನು ಪಾರ್ಥ ಶಕಟವ್ಯೂಹದಗ್ರದಲಿ ॥೪೭॥ ಆರಿವನು ಕಲಿಪಾರ್ಥನೇ ತ್ರಿಪು । ರಾರಿಹಿಡಿವಂಬಾಯಿತೆಂಬದೊ । ತಾರನೇ ದೈತ್ಯಾರಿಸಾರಥಿಯೆಂಬಗರ್ವಿತನೇ ॥ ಹಾರುವರು ನಾವ್ಯಸ್ತ್ರವಿದ್ಯಾ । ಪಾರಗರು ನಾವಲ್ಲ ರಣದು । ಧ್ಧಾರತನವನು ನೋಡೆನುತಲಡಹಾಯ್ದನಾದ್ರೋಣ ॥೪೮॥ ನಾಳೆ ಹಗೆವನ ಹೊಯ್ವೆನೆಂಬು । ಬ್ಬಾಳುತನವಿನ್ನೊಮ್ಮೆ ಭೂಪತಿ । ಯೋಲೆಗಾತಿಯರಿಬಿತೊಳಾಡಿದಭಾಷೆಯಿನ್ನೊಮ್ಮೆ ॥ ಆಳುನೆರೆದಿದೆ ಚೂಣಿಯೊಳಗೊಂ । ದಾಳ ಹೊಯ್ದೊಡೆ ಗೆಲವುನಿನ್ನದು । ಕಾಳಕೂಟದ ಕಮಲತುಂಬಿಗೆ ಪಥ್ಯವಲ್ಲೆಂದ ॥ ೪೯ ॥ ಎಂಬೊಡಿದುವುತ್ತರವಲೇ ಗರ । ಳಾಂಬುಜದ ಪರಿಮಳಕೆ ಗರುಡನು । ತುಂಬಿಯಾದರೆ ತಿದ್ದುವದಲೇ ಸಾಕದಂತಿರಲಿ ॥ ಅಂಬುಗಳಿಗೆಡೆದೆರಹ ಕೊಡಿ ನೀ । ವೆಂಬನುಡಿಗಂಜುವೆನು ಸೈಂಧವ । ನೆಂಬವನ ತೋರಿಸಿರೆಯೆಂದನು ನಗುತ ಕಲಿಪಾರ್ಥ ॥೫೦॥ ಎಲೆಮರುಳೆ ಮುಂದಿರ್ದನವಿಪ್ರಾ । ವಿಲಗವನು ಪರಿಹರಿಸಿ ಸೈಂಧವ । ನಳಿವುಪಾಯವ ನೋಡು ಗರುವರು ನುಡಿದು ಕೆಡಿಸುವರೆ ॥ ಅಳವಿಗೊಡು ಕೊಳ್ಳೆಂಬನೆನುತ । ಗ್ಗಳೆಯನೆಚ್ಚನು ನರನ ಮೈಯಲಿ । ತಳಿತವಂಬುಗಳೇನನೆಂಬೆನು ವಿಗಡವಿಗ್ರಹವ ॥೫೧॥ ಅವರಪಾದಾಂಬುಜಕೆ ಫಲುಗುಣ । ಕವಿಸಿದನು ಸರಳುಗಳ ಲೆಕ್ಕಸ । ದವಗಡಿಸಿ ಗುರುವೆಚ್ಚ ಕಡಿದನು ಗಾಂಡಿವದ ತಿರುವ ॥ ಸವತಳಿಸಿ ಮಾರ್ದಿರುವಿನಲಿ ಸಂ । ತವಿಸಿಕೊಂಡರ್ಜುನನು ದ್ರೋಣನ । ನವಿರಳಾಸ್ತ್ರವ ಕಡಿದು ಹರಹಿದನೊಂದುನಿಮಿಷದಲಿ ॥೫೨॥ ಸರಳ ಸವರಿ ಮಹಾಸ್ತ್ರಶರದಲಿ । ನರನನೆಚ್ಚನು ತ

ನ್ನ ಲಾಗಿನ । ಧುರವ ತಾನಿದು ನಿನ್ನ ವಿಕ್ರಮ ಪಾರ್ಥ ಲೇಸೆಂದ ॥ ಸರಳು ಸುರಿಯಲು ಕೃಷ್ಣಪಾ
ರ್ಥನ । ಕೆರಳಿದನು ಫಡ ಮರುಳೆ ಗುಣವಲಿ । ಗುರುವ ಗೆಲುವುದ ಮಾಡುಗೆಲುವಾಕಾದಿನೀನೆಂದ
॥ ೫೩ ॥ ಧುರದೊಳರಿಗಳ ಶರಕೆ ಮನವಳು । ಕಿರಿಯರುಲಾರದೆ ಶರಣುಹೊಗುವರೆ । ಅರಸುಗ
ಳಿಗಿದು ನೀತಿಯೋ ಮುರಹರನ ಹೇಳೆನಲು॥ ಮರುಳು ಫಲುಗುಣ ಕೇಳು ಗುರು ಶಿಷ್ಯರಿಗೆ ಪಿತನೋ
ಪಾದಿ ಸಾಕಂ । ತಿರಲಿ ವಂದಿಸು ಗುರುಗಳೆಡೆಯಲಿ ದೋಷನಿಲ್ಲೆಂದ ॥ ೫೪ ॥ ಇಳುಹಿದನು ಗಾಂ
ಡಿವವನುರುಬ । ತ್ತಳಿಕೆಯನು ಕಳಚಿದನು ರಥದಿಂ । ಬಳಿಸು ವೈಯಿಕ್ಕಿದನು ದ್ರೋಣನ ಚರಣ
ಕಮಲದಲಿ ॥ ತಿಳಿಯದೆಮ್ಮಕ್ರಮರಿಗೆ ಜೀವನ । ದುಳಿವು ನಿಮ್ಮದು ನಿಮ್ಮ ಮಕ್ಕಳ । ಸಲಹು ಮೇಣ್ಕೊ
ಳಿಯೆಂದು ನುಡಿದನು ವಿನಯ ಪರನಾಗಿ ॥೫೫॥ ಆರಿಸುತ್ವದೊಳೆಮ್ಮ ಬೊಪ್ಪನು । ವಾಸವನ ಪುರಿಗೈ
ದಿದನು ನಿ ।ಮ್ಮಾಶ್ರಯಲಿ ಗಾಂಗೇಯರಿಂದವೆ ಬದುಕಿದೆವು ನಾವು ॥ ಗಾಸಿಯಾದೆವು ಜೂಜಿನಲಿ ವನ ।
ವಾಸವನು ಮಾಡಿದೆವು ವೈರಿಮರೆ । ದೇಸನೇರಿಸಿ ನುಡಿದನುಡಿಗಳ ಕಾಯಬೇಕೆಂದ ॥೫೬॥ ನೀವು ಹೂ
ಣಿಗರಾಗಿ ರಿಪುಗಳ । ಕಾವೊಡಿತ್ತಲೆ ತಿರುಗುವೆನು ಕರು । ಣಾವಲೋಕನವೆನ್ನ ಮೇಲುಂಟಾದೊಡಿದಿ
ರಹೆನು ॥ ಅವುದನುನಯ ನಮ್ಮ ನೀವ್ನಲೆ । ಗಾವಮಿತ್ರೋ ನಿಮ್ಮ ಚಿತ್ತದೊ । ಳಾವಹದನೆನೆ ಮು
ಗುಳುನಗೆಯಲಿ ದ್ರೋಣನಿಂತೆಂದ ॥ ೫೭ ॥ ಕಂದನಶ್ವತ್ಥಾಮ ಹುಸಿಯೆನ । ಗಿಂದು ದೇಹಕುಮಾರ
ಕನು ನಿ । ನ್ನಿಂದಲೆಮ್ಮಯ ಕೀರ್ತಿಮೆರೆವುದು ಮೂರು ಲೋಕದಲಿ ॥ ತಂದೆ ನಿನಗಾವುನಿಯಲಾ
ಪನೆ । ಸಂದುವಾಡಿವ ಭಾಷೆ ನೀ ಹೋ । ಗೆಂದು ಗುಣದಲಿ ಬೀಳುಕೊಟ್ಟನು ದ್ರೋಣನರ್ಜುನನ
॥೫೮॥ ಬಲದೊಳಧಿಕರು ಭಟರೊಳತಿವೆ । ಗ್ಗಳರು ಹೆಸರುಳ್ಳವರು ವಿದ್ಯಾ । ಕುಲತಪೋಧರ್ಮಾದಿ
ಗುಣಿಗಳು ಧೈರ್ಯಸಂಯುತರು ॥ ಹಲಬರಿಹುದುಸುರಿಲ್ಲದೊಡಲಿನ । ಚೆಲುವಿನಂತಿದೆ ನಮ್ಮ ಬಲ
ಹು । ಯೊಲವಿನವರಭ್ಯುದಯವನು ಧೃತರಾಷ್ಟ್ರ ಕೇಳೆಂದ ॥೫೯॥ ಎನಲು ಭುಜವನು ಹೊಯ್ದು
ಚಿತ್ತದ । ವಿನಯದಲಿ ಸಲೆ ಮಾರುಗೊಂಡನು । ಮನವ ಹರುಷದೊಳಡರದನು ನಿಜರಥವ ನಾಪಾ
ರ್ಥ ॥ ಧನುವ ಕೊಂಡನು ಕಳಶತನಯನ । ಘನಕೆ ಕೆಲಬಲ ಕೊತ್ತಿದನು ಮು । ವ್ಮೊನೆಯ ಹಂಸ
ವ್ಯೂಹದಲಿ ಕೆಣಕಿದನು ಕಾಳಗವ ॥೬೦॥ ನರನು ಕಳುಹಿಸಿಕೊಂಡು ಗುರುಮೋ । ಹರವನಪಸವ್ಯದಲಿ
ವಂಚಿಸಿ । ಮುರುಹಿದನು ಮುರವೈರಿ ರಥವನು ಮುಂದನೊಡ್ಡಿಂಗೆ ॥ ಅರರೆ ನರನೋ ನೂಕು ನೂ
ಕಲಿ । ಬಿರುದರಾವೆಡೆ ಪೂತುಮಝಯೆನು । ತುರುವಣಿಸಿದನು ಮುರಿದು ಮಕರವ್ಯೂಹದತಿರಥರು
॥೬೧॥ ನೂಕಿತಕ್ಷಿಚತುರಂಗಬಲ ನೆಲ । ನೋಕರಿಸಿತೋ ಪ್ರಳಯ ಜಲಧಿಯ । ನೂಕುತೆರೆಗಳಲಹರಿ
ಯೋ ನಿಲುವಾತನಾರಿದಕೆ ॥ ಸಾಕು ಕಡೆಯಲಿ ಕವಿದು ದಳ ಮಿಗೆ । ನೂಕುನೂಕಾಯಿತ್ತು ನರನ
ವ್ಯಾಕುಲತೆಯಲಿ ಸಮರ ತೊಡಗಿದನಹಿತಭಟನವನ ॥೬೨॥ ಕುಸುರಿದರಿದನು ಜೋಡುವಜ್ರದ । ರಸು
ಮೆಗಳು ಹಾರಿದವು ರಿಪುಗಳ। ಯೆಸವಸೀಸಕಕವಚವನು ಸೀಳಿದನು ಕೋಲಿನಲಿ । ನೊಸಲ ಭೂಷಣ
ನುಗ್ಗುನುಸಿಬಂ । ಧಿಸಿದಸರಪಳಿ ಹಿಳಿದವರಿಬಲ । ವೆಸಕ ನಿಂದುದು ಪಾರ್ಥನೆಚ್ಚನು ಥಟ್ಟನೊಡೆಹೊ
ಯ್ದು ॥೬೩॥ ತುಳುಕುವೆಳಗಿಡಿಗಳಿಗೆ ಧರಣಿಯು । ಹೊಳಹಿನಲಿ ಹೊದರೆದ್ದು ಗಗನದಿ । ಬಲುಗಿಡಿ
ಯಲುರಿ ಮಸಗ ಬರಹದ ಬಣ್ಣರೇಖೆಗಳು ॥ ಹಿಳುಕುಬೊಬ್ಬಿಡೆ ಹೊದರಡಸಿ ಕಣ । ಗಿಲೆಯ ಕೋ

ಉಳಿಯಂಬು ಕವಲಂ । ಬಲಗಿಸಂಬೀಜಾಡಿದವು ಪರಸೈನ್ಯಸಾಗರವ ॥೬೪॥ ಕರ್ಣನ ಬಲವದರೊಳಗೆ ತಲೆಗಳು । ಕುಣಿದವರ್ಜುನ ನಂಬಿನುರುಬೆಗೆ । ಹೆಣನ ದಾವಣಿ ಹಾಸಿದವು ರಿಪುಬಲದಿ ದೊಂಡೆಗಳು॥ ದಣಿದರಂಕನವರು ರಣದಲಿ । ಕುಣಿದವಟ್ಟೆಗಳೈದೆ ರಿಂಗಣ । ಗುಣಿಯೆ ರೌರವರೌದ್ರವಾದುದು ಕಳನಚೌಕದಲಿ ॥೬೫॥ ಪರುಗಳು ಬುದುಬುದಿಸಿ ರಕುತವ । ಕಾರಿಕಾಳಿಜ ಖಂಡನೆಣಚಿಗ । ದೋರಿ ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು ॥ ಕಾರಿದವು ಕಡಿವಡೆದವೈವೊಗ । ದೋರೆಗಳ ಪೂರಾಯಗಾಯದ । ತಾರುಥಟ್ಟಿನ ಹೆಣಮೆದೆಯು ಹೇರಾಳ ರಂಜಿಸಿತು ॥೬೬॥ ಎಲೆಲೆ ಪ್ರಳಯದ ರುದ್ರನನು ತಲೆ । ಬಳಚಿ ಬಿಟ್ಟನು ಪಾಪಿದ್ರೋಣನು । ನೆಲನೊಡೆಯಗಪಜಯವ ನೆನೆದನು ಸ್ವಾಮಿ ದ್ರೋಹಿಕೆಯ ॥ ಕೊಲುವವನು ಫಲುಗುಣನೊ ದ್ರೋಣನೊ । ಕೊಲೆಗೆಡುಕನೋ ಕೊಂದವನು ಕುರು । ಕುಲತಿಲಕ ನೆರೆ ಪಾಪಿಯೆಂದುದು ನಿಖಿಳಪರಿವಾರ ॥೬೭॥ ಅದೆ ಕಿರೀಟಿಯ ಸಿಂಹಗರ್ಜನೆ । ಯದೆಸಿತಾಶ್ವನ ಬಿಲ್ಲಘೋಷ। ಯದೆ ಮುರಾರಿಯ ಮನಕೆ ಮುಚ್ಚುವಹಯದಖುರನಿನದ॥ ಇದೆ ವಿಜಯನಸ್ತ್ರಾಘುವಿತ್ತಲು । ಕದನಕಾಲಾನಲನ ತೀವ್ರಕೆ । ಯಿದೆಯೆನುತ ಹೆರರೆದೆಯ ಬಿರುದರು ಬಿಸುಟರುತ್ಸಹವ ॥೬೮॥ ಈತನರ್ಜುನನಿತ್ತಲದೆಪುರು । ಹೂತಸುತನ ವರೂಥವಿದೆ ಕಪಿ । ಕೇತನನ ಬೊಬ್ಬಾಟವಿದೆ ಫಲುಗುಣನ ಶರಜಾಲ ॥ ಆತಪಾರ್ಥನು ಹೊಕ್ಕನಿತ್ತಲು । ಶ್ವೇತಹಯನಿತ್ತಲು ಧನಂಜಯ । ನೀತನೆನೆ ಫಲುಗುಣನಮಯವಾಯ್ತಖಿಳತಳತಂತ್ರ ॥೬೯॥ ಬಂದನಿದೆ ಫಲುಗುಣನು ಬಿರುದನ । ಸಿಂಘವಲ್ಲದೆ ಬಿಡದೆ ಹತ್ತಿದ । ಕೊಂದಭೂರಿಶ್ರವನ ಬಲವಲಿ ಕಲಕಿ ಕರಘುಟೆಯ ॥ ಬಂದನಿಲ್ಲಿಗೆ ಶಲ್ಯ ಹೆದರೆ ಮು । ಕುಂದ ತಿರುಹಿದನಿತ್ತ ತೇಜಿಯ । ಹಿಂದುಮುಂದಾಯ್ತಖಿಳನೃಪರೆಂದುದು ಭಟಸ್ತೋಮ ॥೭೦॥ ಉಡಿದು ಕುಪ್ಪಳಿಸಿದವು ರಥಕಪಿ । ವಡೆದುದಗ್ಗದಸಾರಥಿಗಳೆಡೆ । ಗೆಡೆವರ ತಿರಥಸಮರಥಾರ್ಧಮಹಾರಥಾದಿಗಳು ॥ ಹೊಡೆಗೆಡೆದು ದಂತಿಗಳು ನತ್ತರ । ಕಡಲೊಳೀಜಾಡಿದವು ತೇಜಿಯ। ಕಡಿಕುವರಿದುದು ಹೊರೆದನಂತಕನುರುಪರಿಗ್ರಹವ ॥೭೧॥ ಸರಳು ಸೇನೆಯ ತಾಗಿರಿಪುಗಳ । ಕೊರಳನರಿಯದಮುನ್ನ ಘನಸಂ । ಗರವ ಹಿಂದಿಕ್ಕುವುದು ರಥವತಿಜವದ ಜೋಕೆಯಲಿ ॥ ಹೊರಳಿದವು ಭಟರಟ್ಟೆಶೋಣಿತ । ಶರಧಿ ಮಸಗಿತು ಮಕುಟಬದ್ಧರ । ಹರಣದನಿಲಸಮೂಹ ಬೀಸಿತು ನಭಕೆ ಬಿರಿಸಿನಲಿ ॥೭೨॥ ಮುರಿವಡೆದು ಚತುರಂಗವರ್ಜುನನುರುಬೆಗಾರದೆ ಬರೆಶ್ರುತಾಯುಧ । ನಿರಿಯಲುತ್ಸಾಹಿಸುತನಿದಿರಾದನು ಧನಂಜಯನ ॥ ಮುರಿಯೆಸುತ ಮುಂಕೊಂಡು ಪಾರ್ಥನ । ತರುಬಿದೊಡೆ ಕಲಿಪಾರ್ಥನಾತನ । ನೆರವಣಿಗೆ ಲೇಸೆನುತ ಕೆದರಿದನಂಬಿನಂಬುಧಿಯ ॥೭೩॥ ನರನ ಬಾಣದ ನಿಕರವನು ಕ । ತ್ತರಿಸಿದನು ನಿಜಗದೆಯೊಳಾತನ । ಧುರಚಮತ್ಕಾರವನು ನೋಡುತ ಪಾರ್ಥಬೆರಗಾಗೆ ॥ ಕೆರಳಿವಾಳಯ ಕೊಂಡು ರಥವನು । ಧುರಕೆ ದುವ್ವಾಳಿಸಿದ ಮುರಹರ। ನುರವಣೆಗೆ ಕನಲುತ ಶ್ರುತಾಯುಧಹೊಯ್ದನಚ್ಯುತನ ॥೭೪॥ ವರುಣನಿತ್ತುಪದೇಶಬರಿಗೈ । ಯರನು ಹೊಯ್ದೊಡೆ ತನ್ನ ಕೊಲುವುದು । ನಿರುತವಂಬುದ ಮರೆದು ಹೊಯ್ದನು ಹರಿಯ ಮಸ್ತಕವ ॥ ಧುರದಿ ಗದೆ ಮುರಹರನ ಮುಟ್ಟದೆ । ಮರಳಿ ತನ್ನನು ಕೊಂದುದೇನ। ಚ್ಚರಿಯೊದ್ಯೆವದ್ರೋಹಿಗೆತ್ತಣಲೇಸುಬಹುದೆಂದ॥೭೫॥ ಅಶ್ರುತಾಯುಧ ಮಡಿದನಲ್ಲಿ ಮಹಾಸುರದ ರಣವಾಯ್ತು ಕಾಂಭೋಜೇಶಕೈದುಡುಕಿದನು ಕದನವನಿಂ

ದ್ರಸುತನೊಡನೆ॥ ಸೂಸಿದನು ಸರಳುಗಳನಾತನ। ವಾಸಿಯನು ಮನ್ನಿಸುತ ಫಲುಗುಣ। ಬೇಸರದೆಕೊಂಡಾಡಿ ಕಾದಿದನೊಂದುನಿಮಿಷದಲಿ ॥ ೭೬ ॥ ಸರಳು ಸವೆಯಲು ಶಕ್ತಿಯಲಿ ಕಾ । ತರಿಸಿದೊಡೆ ಕಾಂಭೋಜಭೂಪನ । ಪುರುವಶಕುತಿಯ ಕತ್ತರಿಸಿದನು ಮಕುಟಮಸ್ತಕವ॥ ಕೊರಳ ತೊಲಗಿಸಿ ಮುಂದೆ ನೂಕುವ । ಪರಶ್ರುತಾಯುಧನೊಡನೆಘನಸಂ । ಗರವ ತೆಗೆದನು ಕಳುಹಿದನು ಕಾಂಭೋಜಭೂಪತಿಯ ॥ ೭೭ ॥ ಹರಬದ್ಧೈಕಾಯುಧನು ಮಗುಳಿ । ಬ್ಬರಸುತರ ನಿಯುತಾಯುಧನ ಸಂ । ಗರದ ದೀರ್ಘಾಯುವನು ಕಳುಹಿದನಮರಮಂದಿರಕೆ ॥ ಧುರಕೆ ನೂಕುವವಂಗರಾಜನ । ವರರಥಗಳೆಂಭತ್ತುಸಾವಿರ । ದರಿಭಟರ ಸಂದೋಹ ಮುತ್ತಿತು ಮತ್ತೆ ಫಲುಗುಣನ ॥ ೭೮ ॥ ತೂಳಿದವು ಭರಿಕೈಗಳಲಿ ಕರ । ವಾಳುಪಟ್ಟಸಲೌಡಿಯಲಿ ಸಾ । ವಾಳು ನಡೆದುದು ತಡೆದರರ್ಜುನನುರವಣೆಯ ರಥವ ॥ ಮೇಲೆ ಕೈಕೊಂಡೆಸೆವಜೋದರ । ಸಾಳಿವಿಲು ಕೆದರಿದವು ಬಲುಸರ । ಗೋಲಿನದ್ಭುತಸಮರವಾಯಿತು ಮತ್ತೆಪಾರ್ಥನಲಿ ॥ ೭೯ ॥ ಆಳವಿದಪ್ಪದೆ ದಂತಿಘಟೆಗಳ । ನಳುಕದೆಚ್ಚನು ಶಿರವ ತಾಗಿದ । ಹಿಳುಕು ಹೆಚ್ಚುತ ಕಂದಿ ಬಿದ್ದವು ಕರಿಗಳೆಡೆಗೆಡೆಗೆ॥ ತುಳುಕುವರಿಗೆಯ ಗುಳದ ವಜ್ರದ । ಮೊಲಕುಹರಿಯೊಡೆಯೆಚ್ಚು ಜೋದರ । ತಲೆಗಳನು ತುಂಬಿದನು ನಭವನು ಹೊಕ್ಕು ಬೀದಿಯಲಿ ॥ ೮೦ ॥ ಕರಿಯನಂಭೋಟಕನಭೂಪನ । ಶಿರವನೆಚ್ಚನು ಪಾರಸೀಕರ । ತುರಗ ಕವಿಯಲು ಕುಸುರಿದರಿದನು ಕೋಟಿಸಂಖ್ಯೆಗಳ ॥ ಬಿರುದ ಹೊಗಳಿಸಿಕೊಂಡು ನೆರದಾ । ಕುರರ ಹಣವನು ತಿಂದು ಹೆಚ್ಚಿದ । ಹಿರಿಯದೊಳ್ಳಿನ ರಾವುತರ ಕೆಡಹಿದನು ನಿಮಿಷದಲಿ ॥೮೧॥ ಇರಿದು ಚಕ್ರವ್ಯೂಹವನು ಕುರಿ । ದರಿಯ ಮಾಡಿ ಕಿರೀಟಿಯದರಿಂ । ಹೊರಗೆ ಹಂಸವ್ಯೂಹದಲಿ ಕೆಣಕಿದನು ಕಾಳಗವ॥ ತುರುಗಿದವು ಕೂರಂಬು ತಲೆಗಳ। ತರಿದು ಬಿಸುಟವು ಘುಂಮುಘುಳಿಲೆನೆ । ನೆರೆನಿಳಿಲುನಿಳಿಲೆಂದು ಜರುಹಿತು ಪಾರ್ಥಶರಜಾಲ ॥೮೨॥ ಬಿಲುರವದ ಮೊಳಗಿನಲಿ ಕೃಷ್ಣನ । ಫಲುಗುಣನ ಮೈಕಾಂತಿ ಮೇಘಾ । ವಳಿಗಳಲಿ ಹೊಂಗರಿಯ ಗಾಳಿಯ ಸರಳ ಸೋನೆಯಲಿ ॥ ನಿಲುವಹಂಸವ್ಯೂಹವೆಲ್ಲಿಯು । ದೆಲೆಮಹೀಪತಿ ಕೇಳು ನಿನ್ನ । ಗ್ಗಳೆಯ ಸುಭಟರ ವಿಧಿಯನೆಂದನು ಸಂಜಯನು ನಗುತ ॥ ಅಳಿದುವೈನೂರರಸುಗಳು ಮುಂ । ಮುಳಿತವಾಯ್ತೈವತ್ತುಸಾವಿರ । ಬಲುಗುದುರೆ ನುಗ್ಗಾದುದೊಂಬೈನೂರುಭದ್ರಗಜ ॥ ಅಳಿದುದಕೆ ಕೊಲಿಕುತ್ತುವಡೆದ । ಗ್ಗಳಪದಾತಿಗೆ ಗಣನೆಯಿಲ್ಲೀ । ದಳದಲರ್ಬುದ ನರನಕೈಯಲಿ ಕೆಲಸ ಹೊಸತೆಂದ॥೮೪॥ ಕೆಡಹಿದನು ವಿಂದಾನುವಿಂದರ । ನಡಗದರಿಯಾಯ್ತಖಿಳ ಬಲದು । ಗ್ಗಡದವೀರರು ಕಾದಿ ಬಿದ್ದರು ಕಾಯಮಾರಿಗಳು ॥ ನಡುಹಗಲುಪರಿಯಂತ ಕಾಳಗ । ಬಿಡದೆ ಬಲುಹಾಯ್ತಧಿಕವೇಗದಿ । ಕಡುಗುದುರೆ ಬಳಲಿದವು ಬಗೆಯದೆ ಹರಿಯ ಗರ್ಜನೆಗೆ ॥ ೮೫ ॥ ಕಡಿಯಣವ ಕವರಿದವು ಕಂದವ । ನಡಿಗಡಿಗೆ ಹಾಯ್ಕಿದವು ಸುರಿದವು । ಕುಡಿನೊರೆಯ ಕಟವಾಯಿಲೋಳೆಯ ಮುರಿದವೈದಡಿಯ ॥ ಬಿಡುವನಿಯ ಬಲುಬೆವರ ಘುಳುಘುಳು । ಗೊಡುವನಾಸಾಪುಟದ ಲಹರಿಯ । ಕಡುಗುದುರೆ ಬೆಮರಿದವು ಬಗೆಯದೆ ಹರಿಯಗರ್ಜನೆಗೆ ॥ ೮೬ ॥ ಭಾರಿಸಿತು ಮೈಮುಷ್ಟಿಯಲಿ ಲುಳಿ । ಸಾರತನ ಲಂಬಿಸಿತು ತಾಪದ । ಕೂರಲಗು ಗರಿದೋರಿದವು ರಿಪುಭಟನ ಕಾಯದಲಿ ॥ ಹಾರಿದರ್ಜುನನರಿದನಾದ್ಯ । ತ್ಯಾರಿ [illegible]ನು ದೇವ ಚಿನ್ನಹ । ಪಾರುವಂಗಳ ವಹಿಲತೆಯ ಚಿತ್ತೈಸಿದಿರೆಯೆಂದ ॥ ೮೭ ॥ ಗಮನ ತಟ್ಟ

ಯುವಾಯ್ತು ವೇಗ । ಭ್ರಮಣ ಜಡವಾಯ್ತುಡಿಗಡಿಗೆ ನಿ । ರ್ಗಮದೊಳಗೆ ತಡವಾದವೇ ಭಾರವಣೆ ಭರವಸದ ॥ ಸಮತೆ ನಿಂದುದು ಸಾಹಸಿಗರು । ಭ್ರಮಿಸುತಿದೆ ಭಟಜಲಧಿ ತುರಗ । ಶ್ರಮವ ಮಿಗೆ ಪರಿಹರಿಸಿದಲ್ಲದೆ ಕಾದಲರಿದೆಂದ ॥ ೮೮ ॥ ಉಂಟುಹೊಲ್ಲಹವಲ್ಲ ರಣದೊಳ । ಗೆಂಟುಮಡಿ ಬಳಲಿದವು ತೇಜಿಗ । ಳೆಂಟುವೊಡೆ ನೀರಿಲ್ಲ ಮುರಿವೊಡೆ ಹಿಂದೆಬಿಡರವರು ॥ ಎಂಟರಲಿ ನಮ್ಮೊಡನೆ ಸುತ್ತಲು । ವೆಂಟಣಿಸಿ ಕುರುಸೇನೆಯಿದಕೇನುಂಟುಮಾಡುವುಪಾಯವೆಂದನು ನಗುತ ಮುರವೈರಿ ॥ ೮೯ ॥ ದೇವ ವಾಘೆಯ ಹಿಡಿ ತುರಂಗಕೆ । ಜೀವನವನೀಕಳೆನೊಳಗೆ ಸಂ । ಭಾವಿಸುವೆ ನೋಡೆನುತ ಧುಮ್ಮಿಕ್ಕಿದನು ಧಾರಿಣಿಗೆ ॥ ತೀವಿ ತೆಗೆದನು ವಜ್ರಶರದಲಿ । ಡಾವರಿಸಿದನು ಕೊಳದೊಳುದಕವ । ಶ್ರೀವಳೆಯಸೆರೆಯಳಿದು ಚೌಕಕೆ ಸೀಳಿದನು ನೆಲನ ॥ ೯೦ ॥ ನೋಡು ನರನುದ್ದಂಡತನವನು । ತೋಡುತೈದನೆತುರಗನಿಕರಕೆ । ಕ್ರೀಡಿ ಕುಳಿಯನು ಶೌರ್ಯಗರ್ವಿತನೈ ಮಹಾದೇವ ॥ ಕೂಡೆ ಮಸಗಿತು ರಿಪುಚತುರ್ಬಲ । ಜೋಡುಮಾಡಿತು ಕಲಹಕಮರರು । ಹೂಡಿದದ್ರಿಯನಂಬುಧಿಯ ತೆರೆಮಸಗಿ ಕವಿವಂತೆ ॥ ೯೧ ॥ ಬಂದರು ಮೇಲಿಕ್ಕಿದರು ನಿಸ್ಸಾ । ಳದ ನಿರಂತರಸೂಳುಹೊಯ್ಲಿನ । ಹೊದರುಗಳ ಹೊಸಮಸೆಯಡಾಯುಧಸಾಲ ಸಂದಣಿಯ ॥ ಸದರವಲ್ಲೀಹೊತ್ತುಗೆಲವಿನ । ಹೊದರುಗಳ ಹೂಣಿಗರ ಕಾಣುತ । ಗದಗದಿಸಿ ಮುರವೈರಿ ಚಾಚಿದನರ್ಜುನನ ರಥವ ॥ ೯೨ ॥ ಆಲಿಕಲುಗಳ ಕಡಿವಡುಕ್ಕಿನ । ಚೀಲಣದ ಹಂಗೇಕೆ ನಿಮ್ಮಡಿ ಮೇಲುನೋಟಗಳಿರಲು ರಥಪರಿಯಂತ ಕಾಳಗವೇ ॥ ಹೋಳುಗರೆವೆನು ಹುಗ್ಗಿಗರನೆನು । ತಾಳೊಳಗೆ ಬೆರಸಿದನು ಬರಿಕಾ । ಲಾಳುತನದಲಿ ಕಾದಿ ಕೊಂದನು ಕೋಟಿಸಂಖ್ಯೆಗಳ ॥ ೯೩ ॥ ವರುಣಬಾಣವಲುದಕವನು ತ । ತ್ಸರಸಿಯಲಿ ತುಂಬಿದನು ತವಗವ । ಸರವಿದೆಂದಾಶಿದಮಹೇಶ್ವರ ಮತ್ತೆ ಸವರಿದನು ॥ ಕರಿರಥಾಶ್ವವರೂಥವನು ಸಂ । ಗರವಿಪತ್ತಿನೊಳೊಬ್ಬನೇ ಸಂ । ಹರಿಸಿದನು ಗುಣಶತವನೊಂದೇಲೋಭ ಗೆಲುವಂತೆ ॥ ೯೪ ॥ ಕೊಳನ ಕೆಲದಲಿ ಹೂಡಿದನು ಸಾನಿಳೆಯವನು ಚಪ್ಪರವನಾತನ । ಬಲುಹ ಕಂಡಸುರಾರಿ ಮೆಚ್ಚಿದನಡಿಗಡಿಗೆ ಹೊಗಳಿ ॥ ಕಳೆದು ನೊಗವನು ತೆಗೆದು ಕಂಬಿಯ । ನಿಳುಹಿ ವಾಘೆಯ ಸಡಿಲು ತೇಜಿಯತೊಲಗಿ ಹಿಡಿಯಲು ಪಾರ್ಥನೈದಿಪ ಪದೆಳೆದೆಡಬಲಕೆ ॥ ೯೫ ॥ ಮುರುಹಿ ನಿಂದವು ಕೊಡಹಿದವು । ಕೇ ಸರವನಸ್ವಶ್ರಮವಡಗೆ ಪರಿ । ಹರಿಸಿ ನೀರೊಳು ಹೊಗಿಸಿದನು ಹರಿಹಯಚತುಷ್ಟಯವ ॥ ಸರಸಿಯಲಿ ನೊಗವಿಟ್ಟು ಪೊಗೆದವು । ವರಜಲವನೆರಡಳ್ಳೆ ಹಿಗ್ಗಲು । ಮುರಹಿದವು ಮುಖವನು ಮುರಾಂತಕ ತಡಿಯನೇರಿಪ ॥ ೯೬ ॥ ಕರತಳದಿ ಮೈದಡವಿ ಗಾಯವ । ಸರಳ ಕಿತ್ತೌಷಧಿಯ ಲೇಪವ । ನೊರೆಸಿದನು ಕರುಣದಲಿ ಚಪ್ಪರಿಸಿದನು ಕಂಪರವ ॥ ಹರುಷದಲಿ ಕೊರಳೆತ್ತಿ ನಯದಲಿ । ತಿರುಗಿ ದೇವನ ನೋಡುತಿರ್ದವು । ತುರಗನಾಲ್ಕರ ಪುಣ್ಯ ಸನಕಾದಿಗಳಿಗಿಲ್ಲೆಂದ ॥ ೯೭ ॥ ನೊಗಕೆ ಕವಣವ ಕಟ್ಟಿ ನೆಳಲಿಗೆ । ತೆಗೆದು ಫಲುಗುಣಸಹಿತ ಕೊಳನನು । ನಗುತ ಹೊಕ್ಕನು ನೋಡುತಿರ್ದುದು ಕೂಡೆ ಕುರುಸೇನೆ ॥ ಬಿಗಿದಪತ್ತಲೆ ದೂರದಲಿ ಬೀ । ದಿಗೆಯ ಸುತ್ತಲು ಕಡೆಗೆನಿಂದವೊ । ಲಗಣಿತನ ತ್ರಿಸಿಭಟರಿದ್ದುದು ನರನ ಕೆಳಸಿನಲಿ ॥ ೯೮ ॥ ಚರಣವದನವ ತೊಳೆದು ನಿರ್ಮಲ । ಪರಿಮಳಪನೀರಿಂದಿದನು ನಿರುಪಮ । ನರ ದರುಶನವನು ಶ್ರಮಸಹಿತ ಸರಸಿಯಲಿ ॥ ಪರಿಹೃತಶ್ರಮರಾಗಿ ಹರುಷೋ । ತ್ಕರುಷಯಲಿ ಹರಿ ತಳೆದು ಕೊಂಡನು । ನರಗೆ ಕೊಟ್ಟನುರಾಗೋಳಿಸಿದಕ

ಗೆ ॥೫೫॥ ಅಳಲಿದಾತನು ಕಾಲುಗೆಡೆದೊಡೆ । ಫಲವಹುದೆ ನಿಜಸತಿಯು ಹಿಡಿದಾ । ನೆಳೆದುವೊಯ್ಯಲು ಭೀಮನಾಡಿದಭಾಷೆಯೇನಾಯ್ತು ॥ ಆಳುಕದಿರಿ ಪರಿವಾರವಿವ ಕೋಳು । ಗುಳಕೆ ವಜ್ರದಪೋಡು ನೃಪರಿದೆ । ಬಲವಿಹೀನನೆ ನೀನದೇನೆಂದವನಿಪತಿ ನುಡಿದ ॥೫೬॥ ಆವನೋಲೆಯಕಾರತನ ಗಾಂಡೀವಧರನಲಿ ಫಲಿಸುವುದೆ ಮೇ । ಣಾವನದ್ಭುತಮಂತ್ರಶಕ್ತಿಗೆ ಮಣಿವನಸುರಾರಿ ॥ ಕಾವನಿಲ್ಲರ್ಜುನನ ಕೈಯಲಿ । ಸಾವವನು ತಾನೆನಲು ಮಿಗೆ ರಣ । ಧೀವಶನು ಕುರುರಾಯ ನುಡಿದನು ಮತ್ತೆ ಸೈಂಧವಗೆ ॥೫೭॥ ಗರುಡನೂರವರೆರೆವರೇ ನಾ । ಗರಿಗೆ ತನಿಯನು ನಮ್ಮ ಬಲದಲಿ । ಗುರುವಲಾ ಪಾಲಕನು ಕೈಕೊಂಬನೆ ಧನಂಜಯನ ॥ ನರನ ನುಡಿಗಳ ಹೊಳ್ಳುಗಳೆವೊಡೆ । ಚರಣದಲಿ ಬೀಳುವೆವು ನಡೆ ಯೆಂ । ದಿರುಳು ದ್ರೋಣನ ಮನೆಗೆ ಬಂದನು ಕೌರವರರಾಯ ॥೫೮॥ ನೆಗಳಿದವು ಕೈದೀವಿಗೆಯ ಸಾ। ಲುಗಳು ಹೊಂದಂಡಿಗೆಯವರು ರವ । ಮಿಗಲು ವೆಂಟಣಿಸಿದರು ಸೀಗುರಿ ಮೊಗಕೆ ಮೋಹಿದವು ॥ ಆಗಿವಕಡಿತಲೆಮು ಸುಕಿದವು ಚೌ । ರಿಗಳಗೊಂದಣತೂಗಿದವುಮೌ । ಳಿಗಳಮಸ್ತಕದವರುನೆಲನುಕ್ಕಡಿಸಲ್ಕೆತಂದ ॥೫೯॥ ಗರುಡಿಯೊಡೆಯನ ಪಾಳೆಯಕೆ ಕಡು । ಭರದೊಳ್ಕೆತರೆ ಕೌರವೇಂದ್ರನ । ಬರವಿದೇನೆಂದೆನುತ ಬಂದನು ದ್ರೋಣನಿದಿರಾಗಿ ॥ ಧರಣಿಪನ ತಕ್ಕೈಸಿ ನೆಲೆಯು । ಪ್ಪರಿಗೆಗೈದಿದನುಸುಳುಗಂಡಿಯು । ಉರವಣಿಸಿದರುಕರ್ಣಕೃಪಮೊದಲಾದಬೇಹವರು ॥೬೦॥ ಮೀಳೆಯುವಕರ್ಪೂರವನಿತ್ತುನೃ । ಪಾಲಕರ್ಣಾದಿಗಳ ಸ ಭಟರ। ಸಾಲ ಮನ್ನಿಸಿ ದ್ರೋಣ ಬೆಸಗೊಂಡನು ಸುಯೋಧನನ ॥ ಕಾಳಗವ ಕೈಕೊಂಡ ಸಿರಿಮೊಗ । ಹೇಳುತಿದೆ ಖತಿಯೇನು ನಿನ್ನಿನ । ಕಾಳಗವು ಜಯ ನಮ್ಮದೀದುಮ್ಮಾನವೇಕೆಂದ ॥೬೧॥ ಏನ ಹೇಳುವೆನರ್ಜುನನು ನಿಜ । ಸೂನು ಮಡಿಯೆ ದುರಾಭಿಘಾತದೊ । ಳೇನನೆಂದನು ಹೇಳಿರೈ ಕರ್ಣಾದಿ ನಾಯಕರು ॥ ತಾನುಗಡ ಸೈಂಧವನ ತಿರವನು । ಭಾನುಪಡಗದಮುನ್ನ ತೆಗೆಪೆನು । ಹೀನವಾದೊಡೆ ಹೊಗುವೆನೆಂದನು ಹವ್ಯವಾಹನನ॥೬೨॥ ಕೊಂದವನು ದುಶ್ಶಾಸನನ ಮಗ । ಬಂದುದಪವಾದವು ಜಯದ್ರಥ । ಗಿಂದಿವನ ಪತಿಕರಿಸಬೇಹುದು ರಣದಲರ್ಜುನನ ॥ ಮುಂದುಗೆಡಿಸಲುಬೇಕು ಭೀಷ್ಮರು । ಸಂದಬಳಿಕೆಮಗಾಪ್ತಹಿತವರು । ತಂದೆ ನೀವೆಂದೆರಗಿದನು ನೃಪ ಗುರುವಿನಂಘ್ರಿಯಲಿ ॥೬೩॥ ಮುಕುಟವನು ನೆಗಹಿದನು ಭೂಪಾ । ಲಕಶಿರೋಮಣಿ ಶಶಿಯಕುಲವರ । ನಿಕರವಿತ್ತಂಡಕ್ಕೆ ಸರಿಯೆನಬೇಡ ಬುದ್ಧಿಗಳ ॥ ಯುಕುತಿಗಿದಕಿನ್ನಿಲ್ಲಪಾರ್ಥನ । ಸಕುತ್ತಿಘುನವೀರಾಜಕಾರ್ಯಾದಿ । ಚಕಿತನಾದೆನು ರಾಯ ಚಿತ್ತೈಸೆಂದನಾದ್ರೋಣ ॥೬೪॥ ಕಾವೊಡೆನ್ನಳವಲ್ಲ ಮೇಣಾ೦ । ಡೀವಿ ಕೊಲುವವನಲ್ಲ ಕೃಷ್ಣನು । ಕಾವೆಡೆಯು ಕೊಲುವೆಡೆ ಸಮರ್ಥನು ವೇದಸಿದ್ಧವಿದು ॥ ಜೀವಜಾತ ಕ್ಕೊಡೆಯನಾತಾ । ಜೀವನಾಥನು ಬರಿಯಹಂಕಾ । ರಾವಲಂಬನದಿಂದ ಕೆಡುತಿಹುದಖಿಳಜಗವೆಂದ ॥೬೫॥ ಇದು ಮುರಾರಿಯ ಲೀಲೆಗೋಸುಗ । ವುದಯಿಸಿದಜಗವಿವರೊಳೊಬ್ಬನ । ಸದೆದು ಬಿಡುವನು ಹಿಡಿವನೊಬ್ಬನ ಸಲಹಿ ನಡಸುವನು ॥ ಇದರೊಳಾಗಿಂತಲ್ಲ ಕರುಣಾ । ಸ್ಪದದ ಭೂಜಂತ್ರದಲಿ ಯಿಾಜಗ । ದುದರವಾತನ ಕಡೆಯಲಾದುದು ಭುವನಗತಿಯೆಂದ॥೬೬॥ ನರನ ನುಡಿಯೆಂದಿರದಿರಾ ಮುರ । ಹರನ ನುಡಿಗಳು ಗಿರಿಗುಹಾಗ । ಹ್ವರದ ನುಡಿಯೋ ಜಂಗಮಧ್ವನಿಯೋ ವಿಚಾರಿಸಲು ॥ ನರನ ನುಡಿ ಹೊಳ್ಳಾಗದಾಮುರ। ಹರನ ಬಲುಹುಳ್ಳನ್ನ ಬರನೆಸ। ಲಗಸನಾಲಿಸಿ ಕೇಳುತಿರ್ದನು ಕೈಮುಗಿಲ್ಲದಂ ॥೬೭॥ ಕೇಳುತಿರ್ದ್ದ ಕರ್ಣ

ರೆಯುದು । ಗೆಲಲುಬಂದೆನು ಕೊಳ್ಳು ಹಾಸಂಗಿಗಳನೆನುತೆಚ್ಚ ॥೧೧೧॥ ದುಗನು ಯಿತ್ತಿಗೆ ಬಾರವೆಂದೇ । ವೊಗೆವ ಪಾತಿಗೆಯುಲ್ಲ ನಿನಗಿದು। ಸೊಗಸುದೋರದು ಸಾಕು ಸಾರ್ಕೆ ಸಮರ ನಿನಗೇಕೆ ॥ ವಿಗಡ ಭೀಮನು ನಿನ್ನ ಕರುಳನು । ಬಗಿದು ನೆತ್ತರೆಗುಡಿವನಲ್ಲದೆ । ಬಗಿವ ಫಲುಗುಣವೆಲ್ಲವೆನುತೆಚ್ಚನು ನೃಪಾಲಕನ ॥ ೧೧೨ ॥ ಎಸಲು ಪಾರ್ಥನ ಸರಳುಗಳ ಖಂ । ಡಿಸಿದನೆಲವೋ ತಮ್ಮ ನಿಸಗೀ । ಯಸುರೆರಪು ತೆತ್ತಿಗನಲಾ ತ್ರುಡು ಕಲಿಸುದರ್ಶನವ ॥ ನುಸಿಗಳಾಂಕಿದೊಡೆಕಟ ದಿಗ್ಗಜ । ಗಸಣಿಗೊಂಬುದೆ ನಿನ್ನ ಬಾಣ । ಪ್ರಸರಕಾಸಂಜುವೆನೆ ಫಡ ಹೋಗೆನುತ ನೃಪನೆಚ್ಚ ॥ ೧೧೩ ॥ ಎಲೆಕಿರೀಟಿ ವೃಥಾಮನೆದ ಹೆ । ಕ್ಕಳಪದೇತಕೆ ನಿನ್ನ ಮಗನೆಳೆ । ದಳಲತಿಖಿಯುಲಿ ಬೆಂದು ನೀ ಮರಣವನು ಯಿಕ್ಕಿಸದೆ ॥ ಗಳಹದಿರ್ಸ್ವಗರುವಾಯಿವೃಳ್ಳೊಡೆ । ವುಳಿವರೇ ನಿನ್ನಂತೆ ನಿನ್ನವ। ರೆಳವನರಿ ಕೊಳ್ಳೆನುತ ಕೌರವನೆಚ್ಚನರ್ಜನನ ॥ ೧೧೪ ॥ ಹುಯುಸೆಚ್ಚನು ಪವನಜನ ತನು । ಬಿರಿಯಲೆಚ್ಚನು ಶರವನಾತನ । ತುರಗದೊಡಲಲಿ ಹೂಳಿದನು ಹೇರಾಳಬಾಬುಗಳ ॥ ವರಕಪೀಂದ್ರನ ಗಾಸಿಮಾಡಿದ । ನುರವಣಿಸಿ ಕವಿದೆಸುವ ಭೂಪನ । ಭರವಸದಬಿಲುಗಾರತನವನು ಪಾರ್ಥ ಹೊಗಳಿದನು ॥ ೧೧೫ ॥ ಕಾಲುಹೊಳೆಗೇಕವನಿಪತಿ ಹರಿ । ಗೋಲು ನೀ ನಿನ್ನ ಯೆದಿದಿರ್ದೊಡೆ । ಹೇಳೆವಾತ್ಮಸ್ತುತಿಯು ಮಾಡೆನು ಸಾಕದಂತಿರಲಿ ॥ ಮೇಲುಕವಚವ ನಂಬಿ ನಮ್ಮೊಳು । ಕಾಳಗವ ನೀ ಬಯುಸಿ ಬಂದೆ ನೃ । ಪಾಲ ಜೋಡಿನ ಬಲದೊಳೆಮ್ಮನು ಜಯುಸದಿರನೆಂದ ॥ ೧೧೬ ॥ ಎಲವೊ ದ್ರೋಣನ ಕವಚಗವಚವ । ಬಲುಹ ನಂಬದೆ ನಮ್ಮ ಬಾಣಕೆ । ತಲೆಯು ತೆರಬಿರು ಭೀಮಸೇನನ ಗದೆಯು ನೀಘಟಿಸು ॥ ತೊಲಗೆನುತ ನಿಶಿತಾಸ್ತ್ರದಲಿ ನೃಪ । ತಿಲಕನೆಚ್ಚನು ಮುಸುಕಿ ಪಾರ್ಥನ । ಹಿಳುಕು ಹುಡಿಹುಡಿಯಾಗಿ ಕಡಿದುದು ಕವಚವನು ತಾಗಿ ॥೧೧೭ ॥ ಆರಿ ದೀಪನಚೂರ್ಣ್ಣಬಲದಲಿ । ವೀರರುದ್ರನು ಜಗವ ನುಂಗಿದ । ನೋರೆಗೆಡೆಯುದಿರೆಂಬ ಸುರಿಸುಬ ಹೊಳ್ಳುನುಡಿಯೇಕೆ ॥ ಸಾರು ನೀ ಬರಹೇಳು ಕೀಚಕ। ವೈರಿಯನು ಪಡಿಸಣವ ನೋಡಲು। ಭೂರಿಬಾಣದ ಸವಿಯುನೆಂದನು ನಗುತ ಕುರುರಾಯ ॥ ೧೧೮ ॥ ಗರುಡನಾರೋಗಣೆಯ ಬೋನಕೆ । ಮರುಳೆ ಪಡಿಸಣವುಂಟೆ ಮಾತಿನ।ಮುರುವುಗಳು ಗೆಲವಲ್ಲ ನೀನಿದ ನೋಡು ಕೈಗುಣವ॥ ಅರಸ ನಿನ್ನಯು ಕೊರಳ ಕಡಿತಕೆ । ಸರಳು ತ್ವರಿತದಲೆನಗೆ ತನಗೆಂ । ದೊರಲುತಿದೆ ನಿನಗಿಂದಿನಲಿ ಸಾವಿಲ್ಲ ಹೋಗೆಂದ ॥ ೧೧೯ ॥ ಎನುತ ಕೂರಂಬಿನಲಿ ದುರಿಯೋ । ಧನನನೆಚ್ಚನು ವಜ್ರಕವಚದೊ । ಳನಿತುಶರ ವಕ್ಕಾಡಿದವು ಸರ್ವಾಂಗರೋಮಗಳು ॥ ಅನಲಗಿರಿವಜ್ರಾಸ್ತ್ರದಲಿ ಫಲು । ಗುಣನು ಬೊಬ್ಬಿರಿದೆಚ್ಚನೆಚ್ಚಂ । ಬನಿತು ಮುರಿದುದು ಮುಸೆಯು ಕಾಣದು ಮೈ ಮಹೀಪತಿಯ॥ ೧೨೦ ॥ ಕವಚವಿದೆ ಸರ್ವಾಂಗದಲಿ ನೃಪ । ನವಯುವಕೆ ಕೇಡಿಲ್ಲ ಕೆಲಬಲ । ದವರು ನೆರೆ ಕೈಮಾಡುತಿರೆ ಕರ್ಣಾದಿನಾಯುಕರು ॥ ರವಿಯು ಕಿರಣವನಸ್ತಗಿರಿಯಾ । ನುವವೊಳಿದೆ ಮುನಿದಿವನ ಕೊಂದೊಡೆ । ಪವನಜನ ಕೊಂದವನು ಹದನೇನೆನುತ ಚಿಂತಿಸಿದ ॥ ೧೨೧ ॥ ಎನುತ ಕೂರಂಬಿನಲಿ ರಾಯುನ । ಧನುವ ಖಂಡಿಸಿ ಮತ್ತೆ ಮೂರಂ । ಬಿನಲಿ ನೃಪನಸ್ತ್ರೈ[illegible] ಬಾಣ ಥಟ್ಟುಗಿಯೆ॥ ಜನಪನೊಂದನು ಬಳಿಕ ಕೃತವ । ರ್ಮನುಕೃಪಾಚಾರಿಯುನು ನಿನ್ನಯು । ತನಯುನನು ತೊಲಗಿಸಿದರ್ ಧೃತರಾಷ್ಟ್ರಕೇಳೆಂದ ॥ ೧೨೨ ॥ ರಾಯು ನೊಂದನು ಪರಿಬವಿಲ್ಲಾ । ನಾಯುಕರ ಸುಡು ಹೊಟ್ಟೆಹೊರಕರ। ನೋಯುದಿವದಿರ ಸಂತವಿ

ಟ್ಟನು ಸ್ವಾಮಿದ್ರೋಹಿಗಳ ॥ ಆಯುಧವ ಹಿಡಿದಕಟ ರಣದಲಿ । ಸಾಯಲಮ್ಮರು ಬಿರುದ ಹೊಗಳು ವ । ಬಾಯ ನೋಡೆನುತಿರ್ದುದಾದುಶ್ಶಾಸನಾದಿಗಳು ॥ ೧೨೩ ॥ ಕದಡಿತರಿಬಲಜಲಧಿ ಸುಭಟರು । ಹೊದರುಗಟ್ಟಿತು ಹೊಳೆವಡಾಯುಧ । ಹೊದಕೆಗಳ ಸತ್ತಿಗೆಯ ಬೀಸುವಚಮರಸೀಗುರಿಯ ॥ ತು ವಿವೆರಳ ಕಿರುದನಿಯ ಕೆಂಪಿನ। ಕದಡುಗಂಗಳ ಕುಣಿವವಿೂಸೆಯ । ಕದನಗಲಿಗಳು ಕವಿದರೈ ಕರ್ಣಾದಿ ನಾಯಕರು ॥ ೧೨೪ ॥ ಧರಣಿಪತಿಯೋಸರಿಸಲಾಹದ । ನರಿದು ಕರ್ಣಾದಿಗಳು ತಮ್ಮಯ। ಬಿರುದು ಗಳಟೆಕ್ಕೆಯವನೆತ್ತಿಸಿದರು ರಥಾಗ್ರದಲಿ ॥ ಕರಿಯಕಕ್ಷಧ ಸಿಂಧ ನೆಗಹಿತು । ತರಣಿಸುತನಲಿ ಗುರುಸು ತನುಕೇ । ಸರಿಯ ಕೇತನ ವೃಷಭಪಳಹರ ಕೃಪನತೇರಿನಲಿ ॥ ೧೨೫ ॥ ನಲಿವಸಿಂಧದೊಳಾನೆ ಶಲ್ಯಗೆ । ಹುಲಿಯಟೆಕ್ಕೆಯ ಮೃಗದಪಳಹರ। ಯುಲಿಯೆ ಭೂರಿಶ್ರವನು ರಥದಲಿ ರಣವ ಮುಂಕೊಂಡು ॥ ಕ ಲಿಸುಯೋಧನನೀಸುಲೋಚನ। ನಲಿ ವರಾಹಧ್ವಜವಮಯೂರದ । ಹಳವಿಗೆಯ ವೃಷಸೇನರಿವರೊಗ್ಗಾ ದರಾಹವಕೆ ॥೧೨೬॥ ಆಮಹಾರಥನಿಕರ ಸುಭಟ।ಸ್ತೋಮ ಕೆದರಿತು ನೃಪರು ಭಟರು । ದ್ದಾಮಭೀ ತಿಯ ಬಿಡಿಸಿದರು ಕರ್ಣಾದಿನಾಯಕರು ॥ ಈಮಹಾರಥನಿಕರ ಪಾರ್ಥನ । ಸೀಮೆಯಲಿ ಕೆಣಕಿದರು ಬಲುಸಂ। ಗ್ರಾಮವನು ದನುಜಾರಿಗಿತ್ತನು ಬೆರೆಗನಹಿತರಿಗೆ ॥ ೧೨೭ ॥ ಮುತ್ತಿದರು ಮುಂದೆಡಬಲ ನ ಸಮ । ತೆತ್ತಿಗರು ಹಿಂದೆತ್ತಲೀಕ್ಷಿಸ । ಲೆತ್ತರಾಯರ ಸರಳು ಕವಿದುದು ತುರಗಗಜರಥವು ॥ ಮು ತ್ತಿದುದು ಫಲುಗುಣನ ತೇರಿನ । ಸುತ್ತುವಳಯವನಾಶರೌಘದ । ಕತ್ತಲೆಗೆ ಹದನೇನೆನುತ ದೈತ್ಯಾರಿ ಚಿಂತಿಸಿದ ॥ ೧೨೮ ॥ ಕ್ರೂತರೇ ಕಲಿಪಾರ್ಥ ದೇವ । ವ್ರಾತಕಚ್ಚರಿ।ನಿನ್ನ ಬಲುಮೆಮ । ಹೀತಳಕೆ ಹೆಸರಹುದು ನೀವಿದ್ಯಾಕುತೂಹಳಿಕೆ ॥ ಆತುಕೊಳ್ಳೈ ತೊಲಗಿ ನೀವೇ। ಕೈತವದಕಲಿಗಳು ಸಮಗ್ರಭ । ಟಾತಿಶಯರಾವೆನುತ ಕವಿದೆಚ್ಚರು ಮಹಾರಥರು ॥೧೨೯॥ ಅರಿಭಟರು ಕಟ್ಟಳೆವಿಯಲಿ ಮು । ಕ್ಕು ರಿಕೆ ಮುರರಿಪು ಪಾಂಚಜನ್ಯವ । ನಿರದೆಮೊಳಗಿದಹನುಮ ಗರ್ಜಿಸಿದನು ಪತಾಕೆಯಲಿ ॥ ಸುರರ ದೈ ತ್ಯರ ಸಮರ ಸರಿ ವಿ । ಸ್ತರಿಸಿತಿತ್ತಲು ದ್ರೋಣನತ್ತಲು । ಕೆರಳಿಚಿದನೈ ಪಾಂಡುಪುತ್ರರ ಸೈನ್ಯಸಾಗ ರವ॥ ೧೩೦ ॥ ನಕುಲನನು ಮೊನೆಗಾಣಿಸಿದ ಸಾ । ತ್ಯಕಿಯ ವಿರಥನ ಮಾಡಿ ಪಾಂಚಾ । ಲಕರನೋ ಡಿಸಿ ಮತ್ಸ್ಯಕೈಕೆಯಬಲವ ಬರಿಕೈದು ॥ ಸಕಲಸಂದಣಿಸಹಿತ ಚೈದ್ಯ।ಪ್ರಕರವನು ನೆರೆ ಕೊಂದು ಭೂ ಪಾ । ಲಕನ ಬೆಂಬತ್ತಿದನು ಭೀಮಘಟೋತ್ಕಚರಗೆಲಿದ ॥ ೧೩೧ ॥ ವಿರಥನಾದನು ಧರ್ಮಸುತ ಸಂ । ಗರಕೆ ಮೊಗದಿರುಹಿದನು ದ್ರುಪದನು ।ಮರಳಿದನು ಸಹದೇವನೋಡಿದ ನಕುಲ ಓಮೆಟ್ಟ ॥ ತಿ ರುಗಿದನು ಹೈಡಿಂಬಿ ಭೀಮನು । ಸರಿದು ಹೋದನು ವೀರರಂತಿನಿ । ಬರನು ಪರಿಭವಮಾಡಿ ಮಿಗೆ ಕ ಳಶಜನು ಕಾದಿದನು ॥ ೧೩೨ ॥ ದಾನವರು ಬಲುಗೈಗಳಪ್ರತಿ। ಮಾನವರ ಪಾಡೇನು ಸಮರದೊ। ಳಾ ನಲಪಜಯವಸುರರಿಗೆ ಸಂಗ್ರಾಮದಭ್ಯುದಯ ॥ ಏನಹೇಳುವೆ ನಿಲ್ಲಿ ಸುಭಟನಿ।ಧಾನಸವೆದುದು ಪಾಂ ಡವರೊಳವ । ಧಾನಗುಂದದು ರಾಯಗದುಗಿನ ವೀರನಾರಯಣ ॥ ... ॥ ೧೩೩ ॥

ಅಂತು ಸಂಧಿ ೧೦ಕ್ಕೆ ಪದ ೭೪೦ಕ್ಕಂ ಮಂಗಳ.



*

## ಹನ್ನೊಂದನೆಯ ಸಂಧಿ.

॥ಸೂಚನೆ॥ ವಿಜಯವಿಗ್ರಹಧೀರನಾಧ । ರ್ಮಜನನೇಮದಲಂದು ವೈರಿ । ವ್ರಜವ ಕೊತ್ತಳದುಳಿದು ಸಾತ್ಯಕಿ ಕಂಡನರ್ಜುನನ ॥

॥ಪದ॥ ಬವರದೊಳು ಹರಿಪಾಂಚಜನ್ಯದ । ರವ ಭಯಂಕರವಾಯ್ತು ಬಹಳಾ । ಹವದೊಳಗೆ ಪಾರ್ಥಂಗೆ ಬಿದ್ದುದು ಬಹಳಭಾರಾಂಕ ॥ ಅವನಿ ಬಿರಿದುದು ಧರ್ಮಪುತ್ರನ। ಕಿವಿಗೆ ಗೋಚರವಾಯ್ತು ರಣರವ । ರವದೊಳರ್ಜುನದೇವನಳಿಯದೆ ಮಾಣನಕಟೆಂದ ॥೧॥ ತಂದೆ ಸಾತ್ಯಕಿ ಹೋಗು ಫಲುಗುಣ । ನೊಂದನೋ ಬಳಲಿದನೊ ಸುರಕುಲ । ವೃಂದವನು ಸೇರಿದನೊ ಮೋಹೆಂಬೀನಿಧಾನವನು॥ ತಂದು ನೀನೆನಗರುಹು ಪಾರ್ಥನ । ಹಿಂದೆ ಬದುಕಿಲ್ಲವನಿಯೊಳು ತನ । ಗೆಂದು ಮುಗುಡವ ಹಿಡಿದು ಸಾತ್ಯಕಿಗರಸ ನೇಮಿಸಿದ ॥೨॥ ಮೊಲನ ಬಲೆಯೊಳು ವನದಮದಕರಿ।ಸಿಲುಕಲರಿವುದೆ ಶಿವಶಿವಾ ನರ। ನಳವನರಿಯದೆ ಕೃಷ್ಣಸಾರೆಂದರಸ ಮರೆದೆಯಲಾ ॥ ಕೊಳುಗುಳವನಾರೈದು ಬಾರೆನೆ । ನಿಲುವುದನುಚಿತವರ್ಜುನನ ನೆಲೆ। ಗೊಳಿಸಿ ಬಹೆನೆಂದಾಯುಧವ ಕೊಂಡಡರಿದನು ರಥವ ॥೩॥ ವಾರುವನ ಬೋಳೈಸಿ ರಥದಲು । ದಾರಸಾತ್ಯಕಿಭೀಮಸೇನಗೆ । ಧಾರುಣೀಶನ ಕಾಪುಕೊಟ್ಟನು ಭೂರಿಭಟಗಣದ ॥ ಭಾರಣೆಯೊಳ್ಳುತರುತ ನಿಜಪರಿ ।ವಾರವನು ಕೈವೀಸಿ ನಿಸ್ಸಾ। ಳಾರವದ ಥಟ್ಟಣೆಯೊಳಿದಿರಾದನು ರಿಪುವ್ರಜಕೆ ॥೪॥ ತಳತಬೆಳುಗೊಡೆಗಳಲಿ ದೆಸೆ ಕ । ತ್ತಲಿಸೆ ಕರಿರಥತುರಗಭಟರು । ಚ್ಚಳಿಸೆ ದೂಳಿಯ ದಂಡು ನಡೆದುದು ಭಾನು ಮಂಡಲಕೆ ॥ ಮೊಳಗಿದವು ಬರಸಿಡಿಲ ಕೇಣಿಯು । ಕಳಚಿದಂತಿರೆ ಕಡುಗಚಯವರಿ । ಬಲಕೆ ನಡೆದನು ಧೀರಸಾತ್ಯಕಿ ಸಕಲದಳಸಹಿತ ॥೫॥ ಬರಬರಲು ಮುಂದುಭಯರಾಯರ । ಗರುಡಿಯಧಿಪತಿ ಕಂಡನೆಲೆಸಂ। ಗರದ ಸಾಹಸಮಗ್ನ ಸಾತ್ಯಕಿ ಗಮನವಾವೆಡೆಗೆ॥ ಧುರದಬಡವರ ನಮ್ಮವಂಟಿಸಿ । ಮರಳು ಮೇಣ್ಬಲುಸರಳ ಮೊನೆಯಲಿ । ಪರಿಹರಿಸಿ ಹೋಗೆನುತ ಗುರು ಚಾಚಿದನು ನಿಜರಥವ॥ ನಿಂದು ಕಾದುವಮನವೊ ಮೇಣುಪು । ರಂದರಾತ್ಮಜನಂತೆ ಭಯದಲಿ । ವಂದಿಸಿಯೆ ಬೀಳ್ಕೊಂಬಮನವೋ ಹೇಳು ನಿಶ್ಚಯವ ॥ ಎಂದೊಡಾಲಿಸಿ ನಗುತ ಸಾತ್ಯಕಿ । ಎಂದನವಧರಿಸ್ಯೆ ಗುರೋರಪಿ। ಯಿಂದು ನೀಗುರುವೆನುತ ತಲೆವಾಗಿದನು ವಿನಯದಲಿ ॥೭॥ ಇತ್ತಲೀತನ ಕೂಡೆ ಕಾದುವೊ । ಡತ್ತಲರ್ಜುನನಿರವ ಕಾಣೆನು । ಚಿತ್ತದೊಳು ಖತಿಗೊಂಬನವನೀಪಾಲನೆಂದೆನುತ ॥ ಮತ್ತೆ ಸಾತ್ಯಕಿ ಬಿಲ್ಲನಿಳುಹಿದ । ನುತ್ತಮಾಂಗಕೆ ಕರಯುಗವ ಚಾ । ಚುತ್ತ ವಿನಯಾನಮಿತನಾದನು ನಮಿಸಿ ಗುರುವಿಂಗೆ ॥೮॥ ಕಳುಹಿದನು ಯಮಸೂನು ಪಾರ್ಥನ । ಬಳಿಗೆ ನೀ ಕೃಪೆಮಾಡಿ ತನ್ನನು । ಕಳುಹಬೇಹುದು ನಿಮ್ಮೊಳಿದಿರೇ ರಣಕೆ ತಾನೆನುತ ॥ ಸೆಳೆದಬಾಣವನಿಳುಹಿದನು ಗುರು । ತೊಲಗಿ ಕೊಟ್ಟನು ಪಥವನಹಿತಾ । ವಳಿಯ ಸಾತ್ಯಕಿ ಮೊಳಗಿದನು ಕಳಶಜನ ನೇಮದಲಿ ॥೯॥ ಪಾರಸಿಕನೇಪಾಳಸಿಂಹಳ । ವೀರಬಾಹ್ಲಿಕಯವನಕೌಸಲ । ಪಾರಿಯಾತ್ರರು ತುರುಕಬರ್ಬರವಂಗಮಾಗಧರು ॥ ಕೌರವೇಂದ್ರನ ಮನ್ನಣೆಯ ಪರಿ । ವಾರವೀತನ ಕೆಣಕಿದರು ಸರಳೋರಣವ ಸೈಗರೆದನದ್ಭುತವಾಯ್ತು ಸಂಗ್ರಾಮ ॥೧೦॥ ವ ಭೋಟಕರಾಳಕೇಶಿಸು । ಜೀನಖುರಸಾರಂಗದೇಶದ।ಮಾನನಿಧಿಗಳು ಕವಿದು ಮುತ್ತಿತು ಕೈಯ

ಕೋಲ್ಗಳಲಿ ॥ ಏನನೆಂಬೆನು ಸಮರದನುಸಂ । ಧಾನವನು ನೋಡುವೆನೆನುತ ಸು । ಜ್ಞಾನನಿಧಿ ಸಾತ್ಯಕಿಯು ಸವರುತ ಹೊಕ್ಕನಾಹವವ॥೧೧॥ಅಸಮಸಮರದೊಳಖಿಳಭೂಭುಜ। ರಸುವ ಬಿಡಿಸಿದ ತೇರುಕಲಿಗಳ । ಕುಸುರಿದರಿದನು ಹಯವ ಕೊಂದನು ಸರಳ ಸಾರದಲಿ॥ ನುಸುಳಲನಿಲಂಗೆರಿದೆನಲು ಪಸ । ರಿಸಿದನಹಿತರ ತಲೆಯನಭ್ರಕೆ । ಯಸವಬಲ ಕಾದಿದನು ಕಟ್ಟಾಳುಗಳು ದೆಸೆಗೆಡಲು ॥ ಕಡಿವನನಿಬರ ಕೈಯ ಕೋಲ್ಗಳ । ನಡಗುದುಳಿದನು ಮೇಲೆ ಭೂಪರ । ಗಡಣವನು ಗಾಢಿಸಿಪನಂಬಿನ ಸರಿಯನುರವಣಿಸಿ ॥ ಕಡುಗಿ ಸಾತ್ಯಕಿಯೊಡನೆ ಬವರವ । ಹಿಡಿದು ಸಮರಥರೈದೆ ಹೊಕ್ಕುದು । ಬಿಡದೆ ಸಾತ್ಯಕಿ ಕೊಂದನೆಗಣಿತವೈರಿಮೋಹರವ ॥ ೧೩ ॥ ಹರಿದುದರುಣಜಲೌಘವಭ್ರಕೆ । ತಿರದ ಸಂದಣಿಯಾಯ್ತು ಸಾತ್ಯಕಿ । ನರವೃಕೋದರರಿಂದವೆಗ್ಗಳನೆನುತ ಬಲಬೆದರೆ ॥ ಉರವಣಿಸಿ ಜಲಸಂಧನೆಂಬವ । ಬಿರುದನಿಭಸೇನೆಯನು ನೂಕಿದ । ಸರಳಮಳೆಗಳ ಕರೆದು ತಡೆದನು ಸಾತ್ಯಕಿಯ ರಥವ ॥ ೧೪ ॥ ಎಡಬಲಕೆ ತೂಳುವಮದೇಭವ । ಕಡಿದು ಹರಸಿದನೌಕಿ ಚೂರಿಸಿ। ಗಡಣಿಸುವರಥಿಕರಿಗೆ ಮಾಡಿದಸಮರಪದವಿಗಳ॥ ಕಡಿದು ಬಿಸುಟನು ಕೇಣವಿಲ್ಲದೆ। ಕಡುಗಲಿಗಳನು ವೈರಿಸೇನೆಯ । ಲಡಗುದರಿದ ಕೆಡಹಿದನು ಜಲಸಂಧಭೂಪತಿಯ ॥೧೫॥ ಒಂದುಕಡೆಯಲಿ ಪಾರ್ಥಸವರಿದ । ನೊಂದ [illegible] ಸಾತ್ಯಕಿಯು ಸರ। ಳಿಂದ ಸವೆದುದು ಸೇನೆಯೆನೆ ಕೃತವರ್ಮನಿದಿರಾದ ॥ ನಿಂದನೆಲವೋ [illegible] ಳು ಮೀರಿದೊ । ಡಿಂದುಧರನಡ ಹಾಯ್ದಡೆಯು ತಾ । ಕೊಂದೊಡಲ್ಲದೆ ಬಿಡೆನೆನುತ ಮೂರ್[illegible]ತ್ಯತಂದ ॥೧೬॥ ನರನ ವೈಗಂಡೀತನಲಿ ಸಂ । ಗರವನಾದರಿಸುವೆನೆನುತ ಮಿಗೆ। ಭರದಿಕೃತ[illegible]ಕನ ರಥವನು ಧನುವ ಸಾರಥಿಯ ॥ ಸರಳುಮೂರರೊಳೆಚ್ಚುರಿಪುವನು । ಧುರದಿ ಹಿಂಗಿಸಿ [illegible]ಸಮಯವೋ । ಹರದೊಳಗೆ ಮೊಳಗಿದನು ಸಾತ್ಯಕಿಯತಿರಥಾವಳಿಯ ॥ ೧೭ ॥ ಹೊಗಿಸದಿರಿ [illegible]ಾತ್ಯಕಿಯ ಹಿಂದಕೆ । ತೆಗಸಿ ಫಲುಗುಣನೆಂಬವಗೆ ತೆ । ತ್ತಿಗನಿವನು ಹೊಯ್ ಹೊಯ್ಯೆನುತ ಹೊ[illegible]ವಂಟರತಿರಥರು ॥ ಬಿಗಿದಬಿಲುಗಳು ತುದಿವೆರಳಬೊ । ಬ್ಬೆಗಳ ಕಿವಿಯಂಬುಗಳಿಗುಗಿದಾ। ಳುಗ[illegible] ದೇವನ ತರುಬಿಗರು ಕೌರವಸಹೋದರರು ॥ ೧೮ ॥ ಅವರಿಗೆಡಬಲವಂಕದಲಿ ಸೈಂ । ಧವನ ಮನ್ನೆಯರೌಂಕಿದರು ಕೌ । ರವನ ಬಳಿಯಲಿ ಸಂದಣಿಸಿದರು ಕರ್ಣನಂದನರು ॥ ಬವರವಸದಳವಾಯ್ತು ರಿಪುಭಟ । ನಿವಹಮಧ್ಯದೊಳಿತ್ತು ಸಿಲುಕಿದ । ನವಿರಾಳಾಸ್ತ್ರವನೆಚ್ಚು ಕಾಣನು ಹಗೆಗೆ ಹರಿವುಗಳ ॥ ೧೯ ॥ ಕವಿದವಾನೆಗಳಲ್ಲಿ ರಾವ್ತರು । ತಿವಿದರಂಬಿನ ಸರಿಯಸಾರದೊ । ಳವಗಡಿಸಿದರು ತೇರ ಸಂಗಡಿಸಿದರು ಸಬಳಿಗರು॥ ಸವಗ ಖಂಡಸಲೊದಗಿದರು ಬಿ। ಲ್ಲವರು ಬಿಟ್ಟರೆಗಾರರಾತನ । ಜವಗೆಡಿಸಿದರು ನಾಲ್ಕುದೆಸೆಯಲಿ ಮುಸುಕಿತರಿಸೇನೆ ॥ ೨೦ ॥ ಎಲೆಲೆ ಸಂದಣಿಸಿದುದು ಕೌರವ । ಬಲಪಯೋನಿಧಿ ಘೂರ್ಣಿತ ಮಥುಯೆಂ । ದುಲಿದು ಸಾತ್ಯಕಿ ಕವಿದಚಾತುರ್ಬಲವನೊಡೆಹೊಯ್ದು ॥ ಕಲಕಿ ರಥಗಳನೊಡೆದು ಮಿಗೆ ಮಾರ್ಮಲೆತವರ ವೈಗಳಲಿ ಬಾಣವ। ಸಿಲುಕಿಸಿದ ಹಯಗಳಿಗೆ ಅಸುವೀಡಾಡಿತರಿಸೇನೆ॥ ಅಡಗುದರಿದನು ಬಲದಲೆಡದಲಿ । ಗಡಣಿಸುವಸುಭಟರನು ಗಗನಕೆ। ಹೊಡಸಿದನು ಪ್ರಾಣಿಗಳ ಹೊಳಕಿದ ನೃಪರ ತಲೆಚಂಡ ॥ ಮಿಡುಕಿದೊಡೆ ಮೋಹಿದನು ರಕುತದ । ಕಡಲ ಹರಹಿದನಹಿತಸೇನೆಯ । ಕೆಡಹಿ ಯಿಟ್ಟಣಿಸಿದನು ಸಾತ್ಯಕಿಯಸಮರದಲಿ ॥ ೨೨ ॥ ಅರಿಬಲವ ಸಂಹರಿಸಿ ಸಾತ್ಯಕಿ । ಮುರಿದನಿತ್ತಲು ಹಂಸಮಯಮೋ । ಹರದೊಳಗೆ ಭಯಗೊಳಿಸಿದ

ನು ರಿಪುರಾಜವರ್ಗದಲಿ ॥ ದುರುಳಚೈದ್ಯರಲತ್ತ ಮತ್ಸ್ಯರ। ಗುರು ವಿಭಾಡಿಸಿ ಹೊಕ್ಕ ಪಾಂಚಾ । ರರಿ ನಿಷ್ಪಾಪಿಸಿನಬಲವನು ಸೂರೆಗೊಳುತಿರ್ದ ॥ ೨೩ ॥ ಇತ್ತಸಾತ್ಯಕಿಗಾಯ್ತು ಕಾಳಗ । ದೊತ್ತಮೇಪರವುಸ್ಸರಂಗದೊ । ಳತ್ತಲರ್ಜನಸಾಹಸವನೇನೆಂಬೆನದ್ಭುತವ ॥ ಮತ್ತೆ ಕೃಷ್ಣನ ಶಂಖನಿದವ । ನತ್ತ ನೃಪನಿಗ್ರಾಲಕೇಳಿದ। ಚಿತ್ತಕದಡಿಮದಡಿಗಡಿಗೆ ಮನನೊಂದು ಬಿಸುಸುಯ್ದ॥ ॥ ೨೪

ಅಂತು ಸಂಧಿ ೧೧ಕ್ಕೆ ಪದ ೬೭೦ಕ್ಕಂ ಮಂಗಳಂ.

---

## ಹನ್ನೆರಡನೆಯ ಸಂಧಿ.

॥ ಸೂಚನ ॥ ರಾಯಸೇನಾಸೂರೆಗಾರನ । ಜೀಯಮಾರುತಸುತನು ಕೌರವ। ರಾಯನನುಜರ ಸೀ ದನು ಕಳಶಜನ ಪರಿಭವಿಸಿ ॥

ಪದ ॥ ದ್ಯು [illegible] ಗವು ನೀರೇರಿದವು ಸೆರೆ । ಬಿಗಿದು ಹಲುಬಿದನಕಟ ಕಡುದೇ । ಸಿಗನು ತಾನ್ನೊಡನೆ ಫಲುಗ್ಗ [illegible] ದಳ್ಳೊ ॥ ಹಗೆಯ ಹರಹಿಂಗೊಪ್ಪುಗೊಟ್ಟನು । ಮಗನಳಲು ಮಿ ಹೂಣೆಹೊಕ್ಕನು । ಮಗನಳಲ [illegible] ಶಮ್ಮನೆನುತವನೀಶ ಚಿಂತಿಸಿದ ॥ ೧ ॥ ಕಳುಹಲತ್ತಲೆ ಹೋದ ಸಾತ್ಯಕಿ । ತಿಳಿವು ಮರಳಿದ [illegible] ದಿಲ್ಲ [illegible] । ನಳಿದನೋ ಮೇಣುಳಿದನೋ ಶರಹತಿಗೆ ಬಳಲಿನೋ ॥ ತಿಳಿದು ಹೇಳುವರಾರು ಪಟುಭ [illegible] ಳಗೆ ಮಕುಟದ ಮಹಿಮರೆನುತಳ । ವಳಿದು ಭೀಮನ ವದನವನು ನೋಡಿದನು ಭೂಪಾಲ ॥ ೨ ॥ ಎಲೆವೃಕೋದರ ವೈರಿಮೋಹರ । ದೊಳಗೆ ಸಿಲುಕಿನೋ ಕಿರೀಟಿಗೆ । ನೆಲನ ಋಣಸಂಬಂಧ ಸವೆದು [illegible] ಮೇಣು ಸಮರದಲಿ ॥ ತಿಳಿಯಲಟ್ಟಿದಸಾತ್ಯಗೆ ಕೊಳುಗುಳದ ಭಾರಣೆಯಾಯ್ತು ಫಲುಗುಣ [illegible] ನಳಬಳವನರಿದಲ್ಲನೆನ್ನಸು ಸೈರಿಸದು ತನುವ ॥೩ ಮುರರಿಪುರೋಧಿಯ ಪಾಂಚಜನ್ಯದ । ಪರಮರವ ಪಾರ್ಥನ ಪತಾಕೆಯ । ವರಕಪೀಂದ್ರನ ರಭಸ ತುಂಬಿತು ಜಗತ್ರಯವ॥ ನರನ ಧನುವಿನ ದನಿಯ ಕೇಳೆನು । ಕರಗಿತಂತಃಕರಣವರ್ಜನ । ನಿರವಕಾ ಸಿ ಬಾರೆನಲು ಕೈಕೊಂಡನಾಭೀಮ ॥ ೪ ॥ ವಿದಿತವರ್ಜನನಿರವು ನಮಗ । ಭ್ಯುದಯವಾತನ ಮರಣವ । ಭ್ಯುದಯವೇನಾಯ್ತೆಂಬುದನು ನೀನರುಹು ಯೆನಗೆನಲು ॥ ಮದವದರಿ ಭಟಭಟರವಂಗಾ ಕದನದುತ್ಸಹವಾಯ್ತು ಭೂಪನ। ಪದಕೆರಗಿ ಕೈಕೊಂಡನಣ್ಣನ ನಿರುಪಮಾಜ್ಞೆಯಲಿ॥ ೫ ॥ ಅರೆನೆಯ ಸುಯ್ಧಾನ ಪಾಂಚಾ । ಲರಿಗೆ ನೇಮಿಸುತನಿಲತನಯನ । ಬೆರಳ ಸನ್ನೆಗೆ ತೀವಿದಂಬಿನ ತೇರ ಚಚಿವನು ॥ ಕರೆದು ತನ್ನವಿಶೋಕಗಖಿಳಾ । ಭರಣವನು ಕೊಟ್ಟನು ವರೂಥದ । ಹರಿಗೆ ಪೊಡವಂ ರಿದನು ವರರತುನಮಯರಥವ ॥ ೬ ॥ ದೇವಕೌರವರಾಯಕಾನನ । ದಾವಶಿಖಿ ನಿಶ್ಶಂಕಘನಸಮರ ಮಜಿತಚೌಪಟ ವಿರೋಧಿಮನೋಜಲಯರುದ್ರ ॥ ದೇವಕುಲಸಂಭಾವಿಭೂಭುಜ । ರಾವು ಜಗಜಟ್ಟಿ ಳು ಸುಸ್ಥಿರ । ಜೀವಿ ಜಯಎಂದೊರಲುತಿರ್ದುದು ಭಟ್ಟಸಂದೋಹ ॥ ೭ ॥ ವೀರನೋ ಕೌರವವ ಶೀಶಕ । ಠಾರನೋ ಕುರುವಂಶದಡವಿಯ । ದಾರಣನೊ ಕೌರವದಿಶಾಪಟನಹಿತಗಜರಹಿಯೋ

ಕೌರವಾಂಬುಧಿವಡಬನೋ ಕುರುಧಾರುಣೀಶಕೃತಾಂತನೋ ಕೈ । ವಾರವೇ ನೆರೆ ಕಾಣಲಾದುದು ರಿಪುಭಟಸ್ತೋಮ ॥೮॥ ಸೂಳವಿಗಲಳ್ಳಿರಿವವುರುನಿ । ಸ್ಸಾಳತತಿ ಬಿರುದನಿಗಳೊಳು ಕ್ರೆ । ಮೇಳವಿಸಿದವು ತಂಬಟಧ್ವನಿಜಡಿವಕಹಳೆಗಳ ॥ ಕೇಳ ಬಗೆಯದೆ ತೆರಳಿಹೊಯ್ದವು । ಕಾಲಲಿಳೆಯನು ಕುದುರೆ ಮೋರೆಯು । ತೋಳಿನಲಿ ಮೋಹಿದವು ಮಹಿಯನು ಸೊಕ್ಕಿದಾನೆಗಳು ॥ ೯ ॥ ಒದಗಿತೆಡಬಲವಂಕ ವೈಯಾ । ರದಲಿ ರಾವ್ತರು ಮುಂದೆ ತಲೆದೋ । ರಿದರು ಮುಂಗುಡಿಯವರು ಚೂಣಿಯಹೊಂತಕಾರಿಗಳು ॥ ಅಟರ್ವಕಡುಗದ ಕಾಂತಿ ಸೂರ್ಯನ । ಹೊದಿಸಿದುದು ಹೊದರೆದ್ದ ಕುಂತದ । ತುದಿಗಳಿತ್ತವು ರಾಹುಭಯವನು ರವಿಯಮಂಡಲಕೆ ॥ ೧೦ ॥ ಕೆಲಕೆ ಹೊಳೆದವು ಕಡುಗುದುರೆ ನೆಲ । ನಳುಕೆ ನಡೆದುದು ದಂತಿ ದೆಸೆಗಳ । ಹೊಲಿಗೆ ಹರಿಯದೆ ಮಾಣದೆನೆ ಹೊಕ್ಕವು ರಥಾನೀಕ ॥ ತಳಪಟವ ತುಂಬಿದವು ತೇರುಗ । ಳಿಳೆ ಜರಿಯೆ ಕಾಲಾಳುಗಳ ಕಳ । ಕಳಿಕೆ ಮಿಗೆ ಕೈಗೊಂಡುದನಿಲಕುಮಾರಕನ ಸೇನೆ ॥೧೧॥ ಮುಸುಕಿದನು ರವಿ ಧೂಳಿಯಲಿ ಮೋ । ಹಿಸಿದಮುಸಲಮುಸುಂಡಿಕುಂತ । ಪ್ರಸರಕಾಂತಿಯಲುಳುಹಿದವು ಖದ್ಯೋತವೀಧಿಯಲಿ ॥ ಬಿಸಜಸಖನಡಗಿದೊಡೆ ನಭದಲಿ । ಮಸಗಿದವು ತಾರಕೆಗಳೆನೆ ಶೋ । ಭಿಸಿದುದವನೀಪಾಲಮೌಳಿಸುರತ್ನರಾಜಿಗಳು॥೧೨॥ಎಲೆಲೆ ರಿಪುಸವ ... ಯಲಿಕೊಳು।ಗುಳವನರ್ಚಿಸಲರಿದೆನ

ಲು ಕಳ । ವಳಿಸಿ ತೆತ್ತುದು ಮನವನವನೀಪಾಲಸಂದೊ ... ಸುಲಭರಿದಕಂಜದಿರಿ ಮಿಗೆ ನಿಜ । ಗಳ

ದ ಹಸುಗೆಯು ಹಾರದಿರಿಯತಿ। ಬಲರು ಮಿಗೆ ... ಹೊಕ್ಕುದು ಕಳಶಜನ ಹೊರೆಗೆ ॥೧೩॥

ಬಗಿ ವಿರೋಧಿಯ ಕರುಳನುಗಿ ಕು । ನ್ನಿಗೇ ... ಟಂ । ನಿಗಳ ಹೊಯ್‌ಹೊಯ್‌ರ

ಣಕೆ ಹೆದರುವ ಕೌರವಾನುಜರ ॥ ಹಗೆಯ ... ನೆ ಭೇತಾಳಭೂತಾ । ದಿಗಳ

ನೆನುತ ಸುಧೈರ್ಯ ನಡೆದನು ಗರುಡಿಯಾಚಾ ... ನ । ಮಾನಸುತ ಫ

ಡ ಮರುಳು ನಿನ್ನನು।ಮಾನವಾವುದು ಗ ... ಳ್ಳದುರು

ಬುವ । ದಾನವಾಮರರೊಳಗೆ ನಿನ್ನಳ। ...

ಎಲೆಮರುಳೆ ಗುರುವೆಮಗೆ ನೀವ್ ಹೆ ।

ನೀವ್ಸಂಗ್ರಾಮಸಂರಂಭ ॥ ಕಲಿಗಳೆ

ಫಲುಗುಣನ ತಹೆನಣ್ಣದೇವನ ನೇ

ಯಲಿ ಗಮಿಸುವೊಡೆ ಸಾತ್ಯಕಿ । ?

ಡೊಪ್ಪುವದಲ್ಲದೀಬಿರಿ।ಸಾದೊಡಹ

ನನಿಲಜನ ॥ ೧೭ ॥ ತರಳರರ್ಜು

ದಿಸುವವಂದನೆಯುಂಟೆ ಸಮರದಲಿ

ತ್ತದ । ಹುರುಳ ಬಲ್ಲೆನು ಪಥವ ೭

ಗ । ಳೊಡನೆ ಸರಿಗಂಡೆಮ್ಮ ಬಗೇ

ತೆರುವೆನು ವಿನಯಿಗಳಿಗವ । ಗಡಿ?

ತೆಚ್ಚನನಿಲಜನ ॥ ೧೮ ॥ ಈತನೆ

ಎನುತಿದಿರ ಸೂಚಿಸಿ ತುಡುಕಿದನು ಗದೆಯ ॥ ಆತನಸ್ತ್ರಕೆ ದಂಡೆಯೊಡ್ಡಿ ವ ಮ । ಹಾತಿಬಲ ಕವಿದನು ವಿರೋಧಿಯ।ಸೂತನನು ಕೆಡೆಹೊಯ್ದು ಕೊಂದನು ರಥದಕುದುರೆಗಳ॥೨೦॥ಇದು ನಿಮಗೆ ವಂದನೆಯೆನುತ ನಿಜ | ಗದೆಯಲಾತನ ರಥವ ಹುಡಿಗು। ಟ್ಟಿದನು ಸುರಗಿಯನುಗಿದೊಡಪ್ಪಳಿಸಿದನು ವೋಹರವ ॥ ಇದಿರೊಳಿರಲಳವಡದೆ ಗುರು ಹಿಂ । ಗಿದನು ಶಕಟವ್ಯೂಹವನು ಮ । ಧ್ಯದಲಿ ಥಟ್ಟುಗಿದುರವಣಿಸಿ ಪವಮಾನಸುತ ನಡೆದ ॥ ೨೧ ॥ ಹರಿಯ ಕುಲಿಶದ ಧಾಳಿಯಲಿ ಕುಲ । ಗಿರಿಗಳಿಬ್ಬಗಿಯಾದವೊಲು ವಂ। ದರದ ಧಾರಾಧಾರಿಯಲಿ ಬಾಯ್ಬಿಡುವಕಡಲಂತೆ ॥ ಅರಿವರೂಥಿನಿ ಕೆದರಿ ತುಳಿದವು । ತುರಗಕರಿರಥಪಾಯದಳಬಲ । ಹೊರಳಿಯೊಡೆದುದು ಹೊದರು ತಗ್ಗಿತು ಹೂಣಿಗರ ಮನದ ॥ ೨೨ ॥ ಹೊಸರಥವ ತಾನೇರಿ ನೆರೆ ಸಂ । ಧಿಸುವೆನೆನ್ನನಿಲಜನ ಕುಂತಿಯ । ಬಸುರ ಹೊಕ್ಕೊಡೆ ಬಿಡುವೆನೆನುತಾದ್ರೋಣ ಗಜಬಜಿಸಿ ॥ ಕುಸುರಿದರಿದನು ಮುಂದೆ ವೈರಿ । ಪ್ರಸರವನು ಸಂವರ್ತರುದ್ರನು । ಹೊಸಬನಿವನಾರೆನುತ ತಲ್ಲಣಿಸಿತ್ತು ನೃಪಸೇನೆ ॥ ೨೩ ॥ ಮೊದಲಲರ್ಜುನಸಾತ್ಯಕಿಯ ಕದ । ನದಲಿ ಬೆಂಡಾಯಿತ್ತು ನಾಯಕ । ರದಟು ನೆಲ್ಲಿತಪ್ಪಭೀಮನನಾರು ಹಳಚುವರು ॥ ಇದು ಮಹಾದ್ಭುತಪದ್ಮವ್ಯೂಹದೊ । ಳಧಿಕವಾದುದು ಛ ಮಿಗೆ ಕಂ । ಡುದು ಸುಯೋಧನನುಜಸೈನಿಕವನಿಲನಂದನನ ॥ ೨೪ ॥ ಕಣೆಯ ಕರೆದರು ಬಿಲ್ಲ ೧೦ ' ಣಿಯವರು ಡಾವರಿಸಿದರು ಮುಂ । ದಣಿಯುವರುಕೈವೀಸಿ ಕವಿದುದು ಹರಿಗೆಹಲಗೆ ಹೊಕ್ಕುದು ಕುದುರೆ ಮದವಾ। ರಣದಘಟೆ ತೂಳಿದವು ರಥಸಂ । ದಣಿಸೆ ಕಾಲಾ ತನಿಲಜನ ॥ ೨೫ ॥ ಎಚ್ಚನುಚ್ಚಳಿಸುವತು ರಂಗವ । ನೊಚ್ಚತವ ಕ ಕಡಿದನು ಖಂಡಿಸಿದ ಪಕಾಲಾಳ ॥ ಕೆಚ್ಚುಗಿಡಿಕೆದರುವ ಸುಗಳ । ಗೆಚ್ಚರಿಯ ತನು ಸೂರೆಬಿಟ್ಟನು ಭೀಮ ಗರ । ವೆನಗೆ ತನಗೆಂದಖಿಳಸೇನಾ । ವನ ಲಗಿನೆಂಬುಗಳು ಬಿರುದರ। ತನುವ ಹೊ ಮಹಾರಥರು ॥ ೨೬ ॥ ಸಿಡಿದಕಣ್ಣಾಳ ರಾಜಿಗಳ ರಚನೆಯ ರಾಜಹಂಸೆ । ನಡುವೆ ನಲಿನಲಿದಾಡುತಿರ್ದು ಪ್ರಕರದಲಿ ಛಟಛಟಿಸಿ ತುರಗ । ಭೂಜರಾಜಾ । ಧಿಕರೊಳಗೆ ಘು ಗ್ಗಿ ॥ ೨೭ ॥ ಕಲಕಿ ಚಕ್ರವ್ಯೂ ರಹರವಾಯ್ತು ಪದ್ಮದಲಿ ॥ ಬಳಿಕ ಳಗುಳವ ಕೈಕೊಂಡರಾಕರ್ಣಾದಿಲು ನಮ್ಮ ಸರಳದು। ಗೆಲವು ನಿನಗಿಯಲಿ । ಮೊಳಗಿದವು ನಿಸ್ಸಾಳ ಸಾಲಗೋವಳಿಗಟ್ಟುಗೆಯ ಕುಂ

ತಾಳಿಗಳ ತೂಗಾಟ ಮಿಗೆ ದು । ವ್ವಾಳಿಯಲಿ ದೆಕ್ಕಾಳದಲಿ ಗಜತುರಗಸೇನೆಯಲಿ ॥ ಮೇಲೆ ಹೇಳಿಕೆಯಾಗಿ ಕವಿವನ್ನ । ಪಾಲರೀಭೀಮಂಗೆ ಹರಣದ । ಸಾಲಿಗರು ಸಂದಣಿಸಿತಬುಜವ್ಯೂಹದಗ್ರದಲಿ ॥೩೨॥ ದುರುಳರುರವಣಿಸಿದರು ಜೌವನ । ದುರುಮದದ ಭರತಾನ್ವಯದ ದು । ರ್ಧರಮದದ ಘನಭುಜಮದದ ದಿವ್ಯಾಸ್ತ್ರದರಕೆಗಳ ॥ ಉರುಮದದ ಕರ್ಕಶವಿಲಾಸದ । ಧುರರಚಿತಪರಿಹಾಸರಭಿಜನ । ಕುರುವಿನಾಶರ ಶತಕವನು ಧೃತರಾಷ್ಟ್ರಕೇಳೆಂದ ॥ ೩೩ ॥ ಎಳೆಯಬಾಳೆಯ ಸುಳಿಗೆ ಸೀಗೆಯ । ಮೆಳೆಯೊಳಗೆ ಸರಸವೆ ಕುಮಾರರ । ಬಲುಹ ನೋಡು ವಿಶೋಕ ತೊಡಕಿದರೆಮ್ಮೊಡನೆ ರಣವ ॥ ಕಲಹದಲಿ ವೈದೋರಿದಿವದಿರ । ತಲೆಗಳಿವು ವಾರಕವಲೇ ! ಅರೆ । ಗಳಿಗೆಯಲಿ ತಾ ಕೊಂಬೆನೆಂದನು ನಗುತ ಕಲಿಭೀಮ ॥ ೩೪ ॥ ಬಿಲುದೆಗೆದು ಆಕರ್ಣಪೂರದಿ । ಹಿಳುಕಿನನಿಲಜನಿರಲು ಸಿಂಹದ । ಹೊಲನ ಹೊಗುವವೊಲಾಗ ಹೊಕ್ಕುದು ಕೌರವಾನೀಕ ॥ ತೊಲಗದಿರಿ ತಮ್ಮದಿರು ಕೌರವ । ಕುಲಲಲಾಮರು ಜಗದೊಳತಿವೆ । ಗ್ಗಳೆಯಸುಭಟರು ನೀವೆನುತ ತೆಗೆದೆಚ್ಚನಾಭೀಮ ॥ ೩೫ ॥ ಸರಳ ಸೊಂಪಿನ ಸೋಹಿನಲಿ ನೆರಿ । ಗರುಳ ದಾವಣಿತಲೆಗಳಲಿ ಸಂ । ಗರದ ಸುಭಟವ[illegible]ದ ಮುದ್ದಿದ ಗೂಡುವಲೆಗಳಲಿ ॥ ಉರುಗದೆಯ ದಡಿವಲೆಯಲಸಿಮು । ದ್ಗರದ ಸಿಡಿವಲೆಗಳಲಿ [illegible] ದ । ಲರಿಮೃಗವ್ರಾತವನು ಭೀಮಕಿರಾತ ಕೈಕೊಂಡ ॥೩೬॥ ಕೊಂದನನುವಿಂದನನು ಚಿತ್ರ [illegible] ನ ಚಿತ್ರಾಂಗದನ ನೃಪ। ನಂದನನ ದುಶ್ಯಂಕುಕರ್ಣನ ದೀರ್ಘಬಾಹುಕನ ॥ ನಂದಚಿ[illegible] । ನಂದನನು ಬರಿಕೈದು ಭಾಸ್ಕರ ನಂದನಾ ಶ್ವತ್ಥಾಮರನು ಮೊದಲಿಸಿ ತಾಗಿದ [illegible] ಕೇಣವಿಲ್ಲದೆ ।ತೊಡಕಿದಾಹವದೊಳಗೆ ಕೊಂದನ । ಕೊಡನಮಗನೇ ದೂರ [illegible] ನುಡಿದು ಫಲವೇನಿನ್ನು ಭೀಮನ। ಬಿಡದೆ ಸುಭಟರು ನೂಕಿಯೆಂಬೀ। [illegible] ಱಲಿದ್ರೋಣ॥ ೩೭॥

ಅಂತು ಸ

ಸೂಚನೆ ॥ ಗಂಡುಗಲಿ ಕೊ
ಗೆಲಿದು ರಣದ

ಪದ ॥ ಕೇಳು ಜನಮೇ
ನಿಜವೋಹರವ ಹಿ
ಲ ಕೋಲಾಹಳವನಿ
ವರೂಥಚಯವಿ
ಹಣ । ಮೆ
ಉರವಣಿಪ ಕೆಡೆ
ಡದೆ

ದು ಸಮರಭೂಮಿಯಲಿ ॥ ವರರತ್ನಲೋಭದಲಿ ನೀರೊಳು ।ಭರದಿ ಮುಳುಗಿ ಕೃತಾಂತನಗರದಿ। ಹ
ರಹರಿಕೆ ಮೊಗಸರವಮೌಕ್ತಿಕವಾದುದೆಂಬಂತೆ ॥ ೩ ॥ ಕಡಿದಖಂಡದ ಕುಸುರಿಗಳ ಚಿನ । ಕಡಿಯಹೀ
ರಾವಳಿಯ ಮುಕುಟವ । ನಡಕಿದನುಪಮರತ್ನರಾತಿಯ ಮುರಿದಕಂಕಣದ ॥ ಕಡುಕು ಪಸರಿಸೆ ಕೌರ
ವಾನುಜ । ರೆಡೆದೆಗೆದವರಕಾಂಚನಾದ್ರಿಯ । ಸಿಡಿಲಕಾಳಗದಂತೆ ಮೆರೆದಿರೆ ಕಂಡನಾದ್ರೋಣ ॥ ೪ ॥
ಉಡಿದಬೆಳುಗೊಡೆಯಬುಜಪಟ್ಟೆಯ । ಸಿಡಿದಚಮರಿಯಹಾವಸೆಯ ಕೆಸ । ರಿಡುವರಕುತಾಂಬುಗ
ಳ ನರವಿನ ಕಡಿದನಾಲಿಗೆಯ ॥ ಕಡುಮನದ ಕಾಡಾನೆ ಹೊಕ್ಕೊಡ । ನೊಡನೆ ಕದಡಿದಕೊಳನವೋಲ್ಭ
ಯ । ಪಡಿಸುತಿದೆ ಪವಮಾನಜನ ಪಥವೆನುತ ನಡೆತಂದ ॥ ೫ ॥ ಧುರದೊಳಗೆ ವಹಿಲದಲಿ ಗುರುವೈ।
...ಾದುದು। ಹಂಸುತನ ಹಂನಾದ ತೇಜಿಯ ರಥದ ನಿಷ್ಠುರವ ॥ ತಿರುವಿನಬ್ಬರವಂ
...ಪ್ರಾಂತಮಯಸಾ । ಗರದ ಮೋಹರವಹಿಯೆತ್ತು ಭೀಮನ ಸಮರದಾಟೋ
... ಕಳಕಳ । ವತ್ತುಹರಿಸ್ಯೆ ರಥವ ಬೇಗನ । ನುತ್ತು ಭೀಮನಸ್ಯೆದಿದನು
... ಭೀಮ ಬಣಗುಗ । ಳತ್ತುಲೇಕ್ಯೆ ಶೌರ್ಯವಿದು ನ । ವ್ಮ
... ೭ ॥ ತಿರುಗಿನೋಡಿದನಸ್ತ್ರವಿದ್ಯಾ । ಗುರುವ ಕಂಡ
... ವಿನಯಪರನಾಗಿ ॥ ಗುರುವೆ ಬಿಜಯಂಗೈದಹ
...ನಿದ್ದೆನೆಂದನು ನಗುತ ಕಲಿಭೀಮ ॥ ೮ ॥
ಕೌರವ । ನನುಜರನು ಕೆಡೆಹೊಯ್ದು ಗರ್ವ
...ನಲಿ ಕವಿದೆಸುತಿರೆ ವೃಕೋದರ । ನಿತು
ಮಿಗೆ ನೀನೆಮಗೆ ವರಡಿಂ । ಗಂಗಳಾವಿ
...ರಾಗಿಹರು ॥ ನರಯುಧಿಷ್ಠಿರನಕುಲ
ಹೊಸಪು ಬೇಡ ಮರಳೆಂದ ॥೧೦॥
ಗ । ಳಲಿ ಬಲವನಂಜಿಸಿವಕೊಬ್ಬಿಗ
ಗಳೊಡನೆಂದಿರ್ದನತಿವೆ । ಗ್ಗಳ
ಜ ತಪ್ಪಿದವರಾ । ವಲ್ಲ ಫಲುಗುಣ
...॥ ಬಿಲ್ಲಗುರುವಿನ ಬಿಂಕ ಬಯ
ದನು ಮುಂಗೈಯ್ಯ್ಗೊ ಮರೆಗೊಂ
...ಸೊಕ್ಕರಿ । ವಿಜಯನಿ
...ನು ಮುಂಗೈಗೊಂ
...ಲುವುದನುಚಿತವೆಂ
...ಥಸೂತಗುರು
...ನೋ ರಿಪು
...ರಣಿಗೆ ಹಾ

ಯ್ದು ಬೀಳಲು । ನಗುತ ಕರಣವ ಹಾಯ್ಕಿ ಮಂಡಿಯೊಳಿರ್ದನಾದ್ರೋಣ ॥ ಜಗದೊಳಾವಭ್ಯಾಸಿ ಯೋ ತಾ । ಳಿಗೆಯುದಲ್ಲಣದೊಳಗೆ ನೆನಹಿನ । ಸುಗುಣಸಾಹಸಿಯೆಂದು ಮಿಗೆ ಕೊಂಡಾಡಿತಮರಗಣ ॥ ೧೫॥ ತೂಗಿ ಕೆಡೆದನು ತೇರು ಹುಡಿಹುಡಿ । ಯಾಗಿ ಹೋದುದು ದ್ರೋಣ ಮನದನು । ರಾಗ ಮಿಗೆ ಮತ್ತೊಂದು ಹೊಸರಥದೊಳಗೆ ವೆಂಟಣಿಸಿ ॥ ಹೋಗಬಿಡೆ ಸಾಸನಿಲಜನ ತಲೆ । ದೂಗಿಸುವೆ ನೆಂದೆನುತ ಕಟಕದ। ಬಾಗಿಲಲಿ ಗಿರಿಯಂತೆ ನಿಂದನು ಸಮರಕನುವಾಗಿ ॥ ೧೬ ॥ ನಿಜವರೂಥದೊಳಂದು ಕೌರವ । ವಿಜಯಮಾರುತಿ ಹೊಕ್ಕು ರಿಪುಭೂ। ಭುಜರನರೆಯಟ್ಟಿದನು ಬಹಳಿತಸಿಂಹನಾದದಲಿ॥ ತ್ರಿಜಗ ತಲ್ಲಣಿಸಿದುದು ವರವಾ । ರಿಜಸುಲೋಚನ ಕೇಳಿದನು ಪವ । ನಜನ ಪಡಿಬಲ ಬಂದುದೆಂದರುಹಿದನು ಪಾರ್ಥಂಗೆ ॥ ೧೭॥ ಭಕತಮುಖದರ್ಪಣನು ಬಹಸಾ । ತ್ಯಕಿಯ ಕಂಡನು ಭೀಮಸೇನನ । ವಿಕಟಸಿಂಹಧ್ವನಿಯ ನಾಲಿಸಿ ಹಿಗ್ಗಿದನು ಪಾರ್ಥ ॥ ವಿಕಳತನವನು ಮರೆದು ಧರ್ಮಜ । ಸುಕರಪರಿತೋಷದೊಳಿರಲು ರಿಪು। ನಿಕರ ಮುರಿದುದು ಪವನಪುತ್ರನ ರಥದ ಖುರಪುಟಕೆ ॥ ೧೮ ॥ ಅರಿಭಟರು ಪವನಜನನರಸುತ । ಮರಳುತುಬ್ಬರಬವರವನು ತಂ । ದರೆನೆಲೆಗೆ ಹಾಯ್ಕಿದರು ಕರ್ಣಾದಿಗಳ ಮುಂಬಿನಲಿ ॥ ಜರಿದುದೀಬಲರಾ ... ಹಾಯ್ದುದು ಭೂಮಿಪಾಲರು । ಬಿರುದ ಮುದ್ರಿಸಿದರು ಸಮೀರಕುಮಾರನು ... ನು ಗರುವಾಯಿಯೇ ಭಯ । ಬೇಡ ಭೂಮಿಪರೆನ್ನತೇರಿನ । ಕೂಡೆ ಗ ... ಗವ ॥ ನೋಡಿ ನಿಮಿಷಕೆ ಭೀಮನಡಗಿನ । ಲೂಡುವೆನು ರಣಭ ... ನುರುಬಿದನು ಕಲಿಕರ್ಣ ॥ ೨ ...

ಬಿಗಿದಹುಬ್ಬಿನ ಬಿಲ್ಲದೆಗ ... ನ ... ಯೋರೆಯ ಬಾಗಿದವಂಬ್ಬನೆ । ಬಗೆಯಬಲುಗ್ಗೆ ಹಂ । ಕಾರವೇತಕೆ ನು ... ಬಿನಲಿ ಪವನಕು । ... ನ ॥ ೨೨ ॥ ದೇವ ... ಸಮರ್ಥರು ಕರ್ಣ ... ವೆನುತ ಹದಿನೈದು ... ನೂರಂಬಿನಲಿ ರವಿ ... ಹತ್ತುತ್ತರದಲಿ । ... ಷ್ಟ ... ॥ ೨೪॥ ಮೊಗೆವೆನರುಣಾ ... ದಾನೆಯನು ಹಿ ... ಳವನಿಗೆ । ಕೆಡೆಯೆ ಕಾಲ ... ದು ಬಿಸುಡದೆ ಕರುಣಿಸಿದೊಡಿ ...

ನುವ ಖಂಡಿಸಿದ ॥ ೨೭ ॥ ಕರದ ಬಿಲು ಕಳಚಿದೊಡೆ ಖಾತಿಯೊ । ಳಿರದೆ ಹೊಸಹೊಂದೇರ ತರಿಸ
ಲು । ತಿರುಗಿದನು ವೋ(ಹರಕೆ ದುಗುಡವ ತೆತ್ತು ನಿಜಮುಖವ ॥ ತೆರಹುಗೊಡದೆ ವಿಶೋಕಕರ್ಣನ ।
ಹರಿಬವೆಂದನು ನೂಕುನೂಕೆಂ । ದುರವಣಿಸಿದುದು ಮತ್ತೆ ಕೌರವನನುಜರವಗಡಿಸಿ ॥ ೨೭ ॥ ಎಲ
ವೊ ಕರ್ಣನ ಗೆಲಿದಗರ್ವವ। ಕಲಕುವೆವು ಫಡ ನಿಲ್ಲೆನುತ ಕೈ । ಚಳಕಿಗಳು ಘೂರಾಯುಚಾಪದ ಬೆರಳ
ಕಿವಿಗಡೆಯ ॥ ಬಲುಗಿಡಿಯ ಸರಿವಳೆಯ ಸಹಸಿಗ । ಳುಲಿದು ಕವಿದೆಸುತ್ತೈದಿ ಬರೆ ಕಂ । ಡೆಲೆಮಿಡುಕ
ನೀಭೀಮ ಮೂಗಿನ ಬೆರಳ ಬೆರಗಿನಲಿ ॥ ೨೮ ॥ ರಾಯನೊಡಹುಟ್ಟಿದರಲಾ ಪ್ಪೂ । ರಾಯುವಿವದಿರ
ಲ್ವೈ ಮಹಾದೇ । ವಾಯುಧದಮಳೆಗರೆದರ್ರೈ ನಿಲಲರಿದು ನಮಗೆನುತ ॥ ವಾಯುಸುತನಬ್ಬರಿಸಿ ಗೋ
ಳಿಡೆ । ವಾಯು ಮೇಘದಮೇಲೆ ಬಿದ್ದಂ।ತಾಯಿತೇನೆಂಬೆನು ಕುಮಾರರ ಹೊಯ್ಲ ಬೆಳೆಸಿರಿಯ ॥೨೯॥
ಬಲ್ಲೊಡಗ್ನಿಸ್ತಂಭವನು ಸಿಡಿಲಲ್ಲಿ ಮೇಳವೆ ಬಿನುಗುಗಳ ಗೆಲ। ಬಲ್ಲೊಡಿವರಿಗೆ ಭೀಮ ಸದರವೆ ಹೇ
ಳಲೇನದನು ॥ ಚೆಲ್ಲಿದನು ಬಳಿವಿಡಿದು ಚೌಪಟ । ಮಲ್ಲ ಹೊಕ್ಕನು ಹೊಯ್ದು ಗದೆಯಲಿ । ಘಲ್ಲಿಸಿ
ದನಸಿಯರೆದು ಕೊಂದನು ಕೌರವಾನುಜರ ॥ ೩೦ ॥ ವರಸುಲೋ[illegible]ಚಿತ್ರಭುಜದು । ರ್ಮರುಷಣನು
ಶತನೀಕನೀಲಾಂ । ಬರವಿವಿಂಶತಿವಜ್ರಬಾಹುಕದೀರ್ಘ[illegible]ಲಿ ಕೈಗೈದು ಭೀಮನ [illegible] ತಿರುಗಿ ಸುಯೋಧನನ
ಮೋ । ಹರಕೆ ಮೊಳಗಲು ಮತ್ತೆ ಬಿಲುಸಂ'ಶಾಕಿನಿಯರಿಗೆ ಯುಣಲಿಕೆ । ಬ[illegible] ತರುಬಿದನು ಕರ್ಣ ॥೩೧॥
ಫಡ ತೊಲಗು ಪವಮಾನಸುತ ನಿ।ನ್ನೊಚ್ಚಿದೆನಿನ್ನು ಹಿಂದಕೆ । ಮಿಡುಕದವ[illegible]ಡಿಸುವೆನು ಬದುಕುವೊಡೆ
[illegible]ಕ್ಕೆನುತಸಂದಣಿಸಿ ॥ ನುಡಿಗೆ [illegible] ಗಹಗಹಿಸಿ ॥೩೨॥ ತಗರು ತೊಲಗಿದೊ[illegible]ಕೆ ಕರ್ಣನೀತನ । ಕಡು
[illegible] ಸ್ಥಿರಿಸಲರಿಯೆ ಕಲಿತನದಂಗ ನಿನಗೇಕೆ॥ಉಗಿ[illegible]ಡೇನು ಬಲುಕಾಳಗದ
[illegible]ತ ತನಿ।ಹೊಗರುಗಣೆಗಳ ಸೂಸಿದನು ರವಿಸೂ[illegible] ಸರಳ ಬಿಲುಗಾರನಾ
[illegible] ಯೆಚ್ಚೊಡೆ ಪರಿಹರಿಸಿ ಮಗುಳೆಚ್ಚೊಡಾಕಿದ । ನುರವಣಿ[illegible]ನು ಮೊದಲಿಸಿ॥೩೩॥
[illegible]ರ್ಣಸುತ ॥ ತಿರುಗೆ ತಿರುಗಿದನೊತ್ತಲಗಿದೊ । ತ್ತರಿಸಿದನು ಭುಜಬ[illegible]ಸಿದನು ಸಿಂಹಗರ್ಜ
[illegible]ಲೆಚ್ಚಾಡಿದರು ಕಲಿಕರ್ಣಪವನಜರು ॥ ೩೪ ॥ ಬಳಲಿದವು ರಥವಾಜಿ ಸಾರ[illegible]ಲಕೆ ಭುಜಬ[illegible] ಸರಿ
ಶರಹತಿಗೆ ಭೀಮನ। ಬಲುಪತಾಕೆತನುತ್ರರಥ ಕರ್ಣಾಸ್ತ್ರಮಯವಾಯ್ತು ॥ ಹಿಳುಕ[illegible]ಥಿ । ಯ[illegible]ದನು
ನೆಸೆಯಲಿ । ನಿಲುಕಲರಿಯದೆ ನಿಮಿಷಮಾತ್ರಕೆ । ಕಳಚಿ ಕಳೆದನು ಮತ್ತೆ ಕೊಟ್ಟನು [illegible]ಹೊಗಿಸಿದವಖಿಳ
ಣೆಯ ॥ ೩೫ ॥ ಉಳಿಯಲೊಲೆದಿದಿರಾಗಿ ತಾಗಿದ । ಬಲುಗಣೆಯ ಕರವಾಳನಿಕ್ಕಡಿ [illegible] ಭೀಮ ಮಾರ್ಗ
ಯನೆಂಟುಕಡಿಮಾಡಿದನು ಕಲಿಭೀಮ ॥ ತೊಲಗು ಬಾಹಿರ ಮತ್ತೆ ಸಾರಥಿ । ಬಲ[illegible] । ಗಳೆದು ಹಲಗೆ
ಡು ಪಾರ್ಥಗೆ । ಕಳೆದವಿಾಸಲು ಕೊಲ್ಲೆನೆಲವೋಕರ್ಣಹೋಗೆಂದ ॥ ೩೬ ॥ ತೇರ ಚಾ[illegible]ನು[illegible]ರಥವನಣಿ ಮಾ
ಲುಗ್ಗೆ । ಸಾರಥಿಯು ಬರಹೇಳು ಹಿಂದಣ । ಸಾರಥಿಯದೆಸೆಯಿಂದ ಬಂದುದು ಕರ್ಣನ[illegible]ಚಲಿ ಬೇಗ ಬ
ವೀರರಾವೆಡೆ ಶೌರ್ಯಪಾರಾ । ವಾರರಾವೆಡೆಯೆನುತ ಕೌರವ । ಧಾರಿಣೀಪತಿ ಬ[illegible]ಳಲುವೆನೆ ॥
ದುರ್ಜಯಗೆ ॥ ೩೭ ॥ ಬಿಲುಮುಡುಕಿ ಪಟುಭಟರೊಳಗೆ ಮುಂ। ಕೊಳಿಸಿ- [illegible] ತನ್ನನುಜ
ಟ್ಟಲವೊಪವನಜ ಬಂದೊಡರಿವೆನು ನಿನ್ನೊಡಲನೆನುತ ॥ಬಳಿಕ ವೊಡ[illegible]ನು ಹಿಮ್ಮೆ।
[illegible]ಮು। ಸಲಿಸ

ವೊಡೆ ನಾವಲ್ಲವೇ ಕುರು । ಕುಲಲಲಾಮರು ತಪ್ಪಿ ನಡೆಯರೆನುತ್ತ ಮಂಡಿಸಿದ ॥ ೩೮ ॥ ಕೀಲಿಸಿದನೆಂ ಟಂಬಿನಲಿ ತುರ । ಗಾಳಿಯನುಸಾರಥಿಯನಾತನ । ಕೋಲಖಂಡಿಸಿದನು ತನುತ್ರವ ಮೂರುಬಾಣದಲಿ॥ ಹೋಳುಗಳೆದನು ಭಟನ ನಿಟ್ಟೆಲು।ಮೂಳೆಯುವ ಮುಂಕೊಂಡು ಬಿರುದರ । ಹೂಳಿದನು ಕರೆ ಮತ್ತೆ ಕರ್ಣನನೆನುತ ಗರ್ಜಿಸಿದ ॥ ೩೯ ॥ ರಥವ ಮೇಳೈಸಿದನು ಹೊಸಸಾ। ರಥಿಯ ಕರಸಿದನಾಹವದೊಳತಿ। ರಥಭಯಂಕರನೈದಿದನು ಬಲುಬಿಲ್ಲನೊದರಿಸುತ ॥ ಪೃಥವಿ ನೆಗ್ಗಲು ಸುಭಟಸಾಗರ । ಮಥನಕರ್ಣನು ಭೀಮಸೇನನ । ರಥವನರಸುತ ಬಂದು ಪುನರಪಿ ಕಾಳಗವ ಹಿಡಿದ ॥ ೪೦ ॥ ಗೆಲಿದು ಹೋಗದಿರಿನ್ನು ಕರುಳನು । ಕಲಕುವೆನು ನಿಲ್ಲೆನುತ ರವಿಸುತ।ಸೆಳೆದು ಮುಷ್ಟಿಯು ಕೆನ್ನೆಗಡಿಯಂಬಿನಲಿ ಬರೆ ಕಂಡು ॥ ಎಲವೊಲೋಕದಭಂಡ ನಿನ್ನೊಡ।ನುಲಿವವರು ನಾವಲ್ಲ ಮುನಿದೊಡೆ । ತಲೆಯುಕಾಯಿದು ಬಿಡುವೆನಲ್ಲದೆ ಕೊಲ್ಲೆ ಹೋಗೆಂದ ॥ ೪೧ ॥ ಸರಳ ಸರಿಸೋನೆಯಲಿ ಪವನಜ । ಗಿರಿಗೆ ಕರೆದುದು ಕರ್ಣಮೇಘದ। ಹೊರಳಿಯೇನೆಂಬೆನು ಮಹಾ ಸಂಗ್ರಾಮಸಂಭ್ರಮವ ॥ ಸರಳಿನಲಿ ಧನುವಿನಲಿ ಗದೆಯಲಿ। ಕರಹತಿಯಲಹಿತಾಸ್ತ್ರವನು ಸಂ । ವರಸಿ ಬೀಸಿತು ಭೀಮಮಾರುತ ಕರ್ಣಮೇಘದಲಿ ॥ ೪೨ ॥ ಧನುವನಿಕ್ಕಡಿಗಳೆದು ರಿಪುಕ್ಷ । ತನ ಕೊರಳ ಹರಿಯಿಸಲು ಸಾರಥಿ । ತನವತಾನೇ ಮಾಡುತಿದಿರಾದನು ಕೃಪಾಣದಲಿ ॥ ಕನಲಿ ಖಡುಗವ ಮುರಿಯೆಸಲುಮುಂ। ಮೊನೆಯ ಶೂಲದಲಿಟ್ಟನಂತದ । ಲನಿಲಸುತ ಖಂಡಿಸಿದ ಮುರಿದನು ಮೌನದಲಿ ಕರ್ಣ ॥೪೩॥ ಪವನಜನ ಬಡಿಹೋರಿ ಹೋದನು । ರವಿಸುತನು ಹೋಗಲಿ ವೃಕೋದರ।ನವಯುವಕೆ ಕೇಣಿಯನು ಕೊಟ್ಟನು ಬಾಣತತಿಗೆನುತ ॥ ತವೆ ಕುಮಾರರು ಮತ್ತೆ ಬಹಳಾ । ಹವವ ಹೊಕ್ಕರು ಹಕ್ಕಲಾದವ । ರವಗಡಿಸಿ ಕೆಣಕಿದರು ರಿಪುಕಲ್ಪಾಂತಭೈರವನ ॥೪೪॥ ವೀರರೆಂದೆನಿಸುವರು ತೊಡಹದ । ಶೌರಿಯುದಸಿರಿವಂತರರಸುಕು । ಮಾರಕರು ನಿನ್ನವರು ಕೋಮಲ ಧೈರ್ಯರಾಹವಕೆ ॥ ಮಾರಿ ಮೊಗವೆಡದೆರೆದವೊಲು ನಿ । ಸ್ಸಾರಹೃದಯನು ಭೀಮನವನೊಳು। ಹೋರಿದವರೇನಹರು ಕೇಳೈ ನಿನ್ನವರ ವಿಧಿಯ ॥ ೪೫ ॥ ಒಳಗೊಳಗೆ ತಮ್ಮಾಣೆ ಘೋಷಣೆ । ಸಲುವುದಲ್ಲವೆ ಸೊಪರು ಬೀಥಿಗೆ । ಸುಳಿದರೆಲ್ಲಿಯುಚಳಕು ತನ್ನುಳಿಪಿಂಗೆ ಹೊಣೆಯಾರು ॥ ಕೆಲಬಲರ ಮನ್ನೆಯರ ಹೋ[illegible] ಕೊಂಬುದೆ ಭೀಮನಲಿ ಕೈ । ಹೊಲಸುಗಾರನು ಹಿಂಡಿದನು ಕೌರವಸಹೋದರರ ॥ ೪೬ ॥ ದ್ರುಮವಿಕರ್ಣಸುಷೇಣಚಾರು । ಕ್ರಮುವಿವಿಂಶತಿವಜ್ರಬಾಹುಕ । ದಮನದೀರ್ಘೋದರಮಹೋದರಕುಂಡದಾರುಕನ ॥ ಯಮನಕ್ಕೆಲೆಡೆಗೊಟ್ಟು ಘನವಿ । ಕ್ರಮದಸಿರಿಹೊದರೇಳೆ ಜಯುವಿ । ಕ್ರಮದೊಳಬ್ಬರಿಸಿದನು ನಿಷ್ಠುರಸಿಂಹನಾದದಲಿ ॥ ೪೭ ॥ ಇದು ಸಮೀರಕುಮಾರಕನ ಜಯ । ಮದದ ಸಿಂಹಧ್ವನಿಯೆನುತ ಹಿ । ಗ್ಗಿದನು ಧರ್ಮಜನೊದರಿದವು ಗಂಭೀರಭೇರಿಗಳು ॥ ಕದನಲಗ್ಗೆಯಕಹಳೆ ಬಲುವಾ । ದ್ಯದ ಮಹಾದ್ಭುತರಭಸ ಮಿಗೆ ಹೂ । ಡಿದನು ಸನ್ನಾಹದಲಿ ಹೊಕ್ಕನು ಮತ್ತೆ ಕಲಿಕರ್ಣ ॥ ೪೮ ॥ ನವವರೂಥತುರಂಗಸಾರಥಿ । ನವಗಬಾಹಕ್ಕರಿಕೆಬಹಳಾ । ಹವವ ನೆರೆ ಮುಂಕೊಂಡು ಭೀಮನ ಹಳಚಿದನು ಕರ್ಣ ॥ ತವಕಮಿಗಲೆಚ್ಚಾಡಿ ಪುನರಪಿ । ಪವನಜನ ಗಾಸಿಯಲಿ ಸೋಲಿದು । ಬವರಮುಖದಲಿ ಹಿಂಗಿದನು ಹದಿನೆಂಟುಸೂಳಿನಲಿ ॥ ೪೯ ॥ ಮುಳಿದು ಮಿಸೆಯ ಮುರುಹಿ ಹುಬ್ಬನು । ಬಲಿದು ದಳ್ಳುರಿದಿರುಳ ನಕ್ಕಿಗ । ಳೊಳಗೆ [illegible]

ಸಿ ರೋಮಾಳಿ ತನಿಗೆದರೆ ॥ ಹಲುಮೊರೆದು ಹೊಗರಿಡುವಮೋರೆಯು । ಲಿಳಿದಬೆಮರನು ಬೆರಳಕೊನೆಯಲಿ । ಬಲಿದು ಭಾರ್ಗವದತ್ತಬಾಣಕೆ ನೀಡಿದನು ಕರವ ॥೩೦॥ ಎಲವೆಲವೊ ಕಲಿಯಾಗು ಮಾರುತಿ। ಗೆಲಿದೆನೆಂದಿರಬೇಡ ಸೋಲವು । ಗೆಲವು ಮಾಯುಮುಹೂರ್ತವಶ ಮೈಗೊಡದೆ ತಾಡುವುದು ॥ ಛಲವ ಬಿಡದೆಚ್ಚಾಡಿ ರಣದಲಿ । ತಲೆನೆರೆಸಿ ಬದುಕಿದೊಡೆ ಕೈ೯ಮವ । ನಿಳುಹುವೆನು ಬಳಿಕಿನ್ನು ಶಸ್ತ್ರತ್ಯಾಗ ತನಗೆಂದ ॥೩೧॥ ಉಂಟು ಶಿವಶಿವ ಹುಸಿಯನುಡಿ ನಿನ।ಗುಂಟೆಬಲ್ಲೆನು ಗೆಲುವಶೌರ್ಯವ।ಗಂಟುಬಸಳೆವಕಂಡುಬಲ್ಲೆನು ಹಲವುಭಾರಿಯಲಿ ॥ ಸುಂಟಿಗೆಯಸಾಯ್ವೆನುಕಣಾ ಬಲು । ಕಂಟಕದಲೇ ಸರಸನುಡಿ ನೀ। ನೆಂಟುಮಡಿ ಗಳಹಿದರೆ ತಪ್ಪೇನೆಂದನಾಭೀಮ॥೩೨॥ಆದೊಡೆಲವೊದುರಾತ್ಮ ಮಾತಿನ । ವಾದದಲಿ ಫಲವಿಲ್ಲ ಬಲ್ಲೊಡೆ । ಕಾದುಕೊಳ್ಳಾಸಾಕು ಕಡುಸಾಹಸಿಗಗಡ ನೀನು ॥ ಹೋದೆ ಹೋಗಿನ್ನೆಸುತ ಕಣೆಹದಿ । ನೈದರಲಿ ಕೆಡಹಿದನು ತುರಗವ । ನೈದು ಬಾಣದೊಳೆಚ್ಚು ಕಡಿಮಾಡಿದನು ರಥದನುವ ॥೩೩॥ ಎರಡುಶರದಲಿ ಸಾರಥಿಯ ಹೇ । ರುರುವನೆಸೆಯಲು ಗಾಯದಲಿ ನಿಲ । ಲರಿಯದವ ಹಾಯ್ದನು ಯುಧಾ[illegible]ವಿನ ಹೊರೆಗಾಗಿ ॥ ಮರಳಿಹತ್ತಂಬಿನಲಿ ಭೀಮನ। ಶರಳಿಚಿದನಾರಂಬಿನಲಿಹ। ನ್ನೆರಡರಲಿ ಹದಿನೆಂ[illegible]ಲಿ ಮಗುಳೆಚ್ಚುಬೊಬ್ಬಿರಿದ ॥೩೪॥ ಶರಹತಿಗೆ ಸೆಡೆಯದೆ ವೃಕೋದರ।ನೆರಡುಕವಲಂಬಿನಲಿ ಕರ್ಣನ। ಶಿರವನೆಚ್ಚೊಡೆ ತರಿದನೆಡೆಯಲಿ ಭಾನುಸುತ ನಗುತ॥ ಶಿರುಹಿ ಶಕ್ತಿಯಲಿಟ್ಟೊಡೆಡೆಯಲಿ। ತರಿದು ಭೀಮನ ಕರದ ಚಾಪವ।ನೆರಡು ಕಡಿಮಾಡಿದನು ಬಳಿಯಲಿ ನೊಸಲನೊಡೆಯೆಚ್ಚ ॥೩೫॥ ವಾಯುಸುತ ಖಾತಿಯಲಿ ಹಲಗೆಯ । ಡಾಯುಧವ ಕೊಂಡರಿಭಟನ ಮೇ । ಲಾಯಿದೊಡೆ ಸಮ್ಮುಖವ ಬಿಟ್ಟನು ಧ್ವಜದ ಕಂಭದಲಿ ॥ ಆಯುಧವ ಕೊಂಡಡರಿದೊಡೆ ಹಗೆ । ಮಾಯವಾದನು ಘೊತುರೆನುತ ಗ।ದಾಯುಧನು ಮರಳಿದೊಡೆ ಕೈಯೊಡನೆಚ್ಚನಾಕರ್ಣ॥೩೬॥ಆರಿ ಬೊಬ್ಬಿರಿದೆಚ್ಚನನಿಲಕು । ಮಾರಕನ ಖಂಡೆಯವನೆರಡೇ । ಕೂರಲಗಿನಲಿ ತರಿದು ಬಿಸುಟನು ಹಲಗೆಬಂದುಗೆಯ ॥ ಆರುಭಟೆಯಲಿ ಭೀಮ ಕಾಯ್ದುವ। ರಾರು ಕರೆಯಾ ಕರ್ಣ ಕೊಲುವೊಡ। ದಾರು ಮಿಗೆ ಹಿಂದಿಕ್ಕಿ ಕೊಂಬುವನೆನುತ ಗರ್ಜಿಸಿದ ॥೩೭॥ ಮಡಿದಕರಿಗಳ ಕಾಯವನು ನಿ । ಟ್ಟೊಡಲತುರಗಂಗಳನು ಮುಗ್ಗಿದ । ಕೆಡೆದತೇರಿನ ಗಾಲಿಗಳ ತಿರುಹಿಟ್ಟನಾಭೀಮ ॥ ಎಡೆಯೊಳಾಕಲಿಯೊಡಲನಾಹಯ । [illegible]ದೊಡಲನಾರಥಛತ್ರವನು ಹುಡಿ । ಹುಡಿಯ ಮಾಡಿದು ಕಡಿದು ಕಟ್ಟಳವಿಯಲಿ ಕಲಿಕರ್ಣ ॥೩೮॥ ಕೈದುಗಳು ತೀರಿದೊಡೆಹಣಾನೇ । ಕೈದುವಾದವು ಪರಬಲಾಂತಕ।ಕೈದುಕಾರರ ಕೈಯಬಾಯಲಿ ಭೀಮ ಸಿಲುಕಿದೆಲಾ ॥ ಕಾಯ್ದುಕೊಳ್ಳನೆ ಕೃಷ್ಣ ನಿನ್ನಯ । ಪೈಸುದನನುಗಡ ಮರೆಯಹೊಗು ಹೋ। ಗೈದೆಯಹಳೋ ವಿಧವೆಯೋ ಪಾಂಚಾಲಸುತೆಯೆಂದ ॥೩೯॥ ಬಿಲ್ಲ ಕೊಪ್ಪಿನೊಳಿರಿದು ಭೀಮನ । ಘುಲ್ಲಿಸಿದನೆಲವೆಲವೊ ಮಾರುತಿ । ಯುಳ್ಳಗಡ್ಡದ ಹರಿದಲೆಯ ರಣಮೂಢ ಸಿಲುಕಿದೆಲಾ॥ ಎಲ್ಲಿ ನಿನ್ನಾಟೋಪವಂದಿನ । ಹೊಳ್ಳುನುಡಿಹಾರಿದವೆ ಕೌರವ । ರೆಲ್ಲರನು ಸವರಿದೆಯಲಾ ಸಂದೇಹವೇನೆಂದ ॥೪೦॥ ಒಡೆಯದುಯೋಧನನ ತೊಡೆಗಳ । ನುಡಿವೆ ದುಶ್ಶಾಸನನ ನರಕುತವ । ಕುಡಿವೆನೆಂದುಬ್ಬಟೆಯ ಭಾಷೆಯಲ್ಯೆ ಮಹಾದೇವ ॥ ನುಡಿದನುಡಿ ಬಳಿಸಂದುದೇ ಸಂ । ಮುಡಿಗಳಿರೆ ಕಲಿಭೀಮ ದುಗುಡವ । ಬಿಡು [illegible]ನಾಕರ್ಣ ॥೪೧॥ ಎಲ್ಲಿ ಷಡುರಸಮಧುರಭೋಜನ । ವೆಲ್ಲಿ ಮಧುರ

ಫಲೌಘದುಬ್ಬರ । ಪೆಲ್ಲಿ ನಾನಾಭಕ್ಷ್ಯಗಿರಿಗಳು ಘೃತದ ಕತಲುಗಳು ॥ ಅಲ್ಲಿ ನಿನ್ನುರವಣೆಗಳೊಪ್ಪ ವು । ದ್ವಲ್ಲದೀಸಂಗ್ರಾಮಮುಖದಲಿ । ಬಿಲ್ಲ ಹಬ್ಬದತುಷ್ಟಿ ನಿನಗೇಕೆಂದ ನಾ ಕರ್ಣ ॥ ತಾಯ ಮಾತ ನು ಮಿಾರಿ ನಿನ್ನನು । ನೋಯಿಸಿದೆನಿದೆ ಸಾಕು ಜೀವವ । ಕಾಯ್ದು ಬಿಟ್ಟೆನು ಯೆಲೆಪ್ರೊಸಾರಥಿ ಹೋಗು ಹೋಗೆನಲು ॥ ವಾಯುಸುತ ಸಿಲುಕಿದನಲಾ ಕಾ । ಳಾಯ್ತೆನುತಲೆಸದಾರಿ ರಥವನು । ಹಾಯಿಸಲು ಮುರಿಯೆಚ್ಚು ಕರ್ಣನ ತೆಗಸಿದನು ಪಾರ್ಥ ॥೬೩॥ ಖೂಳ ಸೂತನ ನಗೆಸೆ ಬಲುಗೈ ಯಾಳಲಾ ಮರೆ ಮರೆಯಲಿಪರೇ । ಮೇಲುಗೆಲುವೇ ನಿನಗೆ ಸೋಲವೆ ಪವನತನಯಂಗೆ ॥ ಕಾಳಗೆತ್ತ ದಿರು ನಿನ್ನಬಾಯನು । ಸೀಳುವೆನು ನಿಲ್ಲೆನುತ ಫಲುಗುಣ । ಬೋಳೆಯಂಬೆದರಲಿ ಕರ್ಣನ ಕದಪ ನೊಡೆಯೆಚ್ಚ ॥೬೪॥ ತೇರ ತರಿದನು ರಥಕೆ ಹೂಡಿದ । ವಾರುವಂಗಳ ಕಡಿದು ಬಿಸುಟನು । ಸಾರಥಿ ಯ ತುಡುಕಿದನು ಮುಕ್ಕಡಿಗಳೆದು ನಿಜಧನುವ ॥ ಕೂರಲಗಿನಂಬಿನಲಿ ಕರ್ಣನ । ಪೇರುರವ ತೋಡಿ ದನು ನಿಮಿಷಕೆ । ಕಾರಿದನು ರಕುತವನು ಕಳವಳಿಸಿದನು ಕಲಿಕರ್ಣ ॥೬೫ ॥ಮುಂಗುಡಿಯ ಮುರಿ ದೋಟ್ಟ ಕರ್ಣನ । ಭಂಗಿಸಿದ ನಡಿಗಡಿಗೆ ರಣದಲಿ। ಹಿಂಗಿ ಹಿಂಸಲೆಗೋಡಿ ದುಗುಪಕೆ ತೆತ್ತ ನಿಜಮು ಖವ ॥ ತುಂಗವಿಕ್ರಮ ವಿಜಯಸಾರಣಿ । ರಂಗಧೀರನು ಪಾರ್ಥನಿದಕಿಂ । ನಂಗಪಿಸುವವರುಂಟೆ ನಾ ರಾಯಣನ ಕರುಣದಲಿ ॥ ... ... ॥೬೬॥

ಅಂತು ಸಂಧಿ ೧೩ ಕ್ಕೆ ಪದ ೮೩೬ ಕ್ಕಂ ಮಂಗಳಂ.



## ಹದಿನಾಲ್ಕನೆಯಸಂಧಿ.

॥ಸೂಚನೆ॥ ಸಂಗರದೊಳಂದಹಿತಭಟವಾ । ತಂಗಕಂಠೀರವನು ರಣದಲಿ । ಭಂಗಮುರಿದನು ಪಾ ರ್ಥನಾರಿಪುರಾಯ ಸೈಂಧವನ॥

॥ಪದ॥ ಚಿತ್ತವಿಸು ಧೃತರಾಷ್ಟ್ರ ರವಿಸುತ । ನಿತ್ತ ತಿರುಗಿದಸಾತ್ಯಕಿಯ ರಥ । ದತ್ತ ತಿರುಗಿ ದನನಿಲಸುತ ಭಾರಣೆಯದುಗುಡದಲಿ ॥ ಇತ್ತ ಭೂರಿಶ್ರವನು ಭಾರಿಯ । ಹತ್ತು ಸಾವಿರರಥಸಹಿತ ಕೈ । ಯೊತ್ತಿದನು ರಣವಿಜಯಲಕ್ಷ್ಮಿಯ ಲಲಿತಕಬರಿಯಲಿ ॥೧॥ ಒಂದುಮುಖದಲಿ ಕರ್ಣಗುರುಸು ತ । ರೊಂದು ಕಡೆಯಲಿ ಶಲ್ಯಶಕುನಿಗ । ಳೊಂದುಕಡೆಯಲಿ ಭೂರಿಕೃತವರ್ಮಕಸುಯೋಧನರು ॥ ಮುಂದುಗೆಡಿಸಿದರರ್ಜುನನ ಕಾ। ಬಂದು ಭೂರಿಶ್ರವನ ನಿಲಿಸುವೆ । ನೆಂದು ಸಾತ್ಯಕಿ ಬಿಟ್ಟನಾತನ ಹೊ ರಗೆ ನಿಜರಥವ ॥೨॥ ಎಲವೆಲವೊ ಭೂರಿಶ್ರವನೆ ಫಡ । ಗೆಲಿದು ಹೋಗದಿರೆಲ್ಲಿ ಹೊಗುವೈ । ತಲೆವೆರ ಸಿ ಬದುಕಿದೊಡೆ ಬಿಡುವೆನೆಯೆನುತ ಮೂದಲಿಸೆ ॥ ಎಲವೊ ಸಾತ್ಯಕಿ ಸುಭಟಬಾಹಿರ। ಗಳಹದಿರು ದಿ ಟ।ವೀರನೇ ಕೂರಲಗಿನಲಿ ಮಾತಾಡು ಬರಿನುಡಿ ಭಂಡತನವೆಂದ ॥೩॥ ಆದೊಡಿದ ಕೊಳ್ಳೆನುತ ಸಾತ್ಯ ಕಿ । ಕೋದನಭ್ರುವನಂಬಿನಲಿ ಬಲು । ಹಾದನ್ಯೆ ಮುಝುಯೆನುತ ಕಡಿದನು ಸೋಮದತ್ತಸುತ ॥ ಕಾ

ದುಕೊಳ್ಳೆನುತೆಚ್ಚನಂಬಿನ। ಬೀದಿವರೆ ಬಲುಹಾಯ್ತು ಸುಭಟರು। ಕೈದುಕಾರರು ಮೆಚ್ಚಿಸಿದರವ ರಾಸುರಾವಳಿಯು ॥೪॥ ದೂರದಲಿ ನಿಂದೊಬ್ಬರೊಬ್ಬರ। ನಾರುವೂಡುವದೇನು ಸಾತ್ಯಕಿ। ಕೂರಲ ಗ ನೀ ಬಿಸುಟುಕಳೆ ಕೋದಂಡಮಾರ್ಗಣವ॥ ವೀರನಹೆ ಯಿದಿರಾಗೆನುತ ಬಲು। ಭಾರಣೆಯ ಚೌ ಪಟದ ಖಡುಗದ। ತೋರಹತ್ತರೆ ಹೊಕ್ಕು ಹೊಯ್ದನು ಖಾತಿಯಲಿ ನಡುಗಿ॥೫॥ ನೆಲನ ತಗ್ಗಿನಲು ಪ್ಪರದ ಪ್ಯೆ। ಯೊಲವಿನಲಿ ಪೌರುಷದ ಬವರಿಯು। ಸುಳಿವಿನಲಿ ಚಂಮಟದ ಪಯಸಂಚನೆಯುಲಾ ಜವದ॥ ಬಲಿದದಂಡೆಯು ಮಸೆಯು ಬಯಕೆಯು। ಉಳಿಯುಮ್ಮೆಗಳಲವಣಿಕಾರರು। ಕೊಳುಗಿಡಿಯ ಖಂಡೆಯುದ ಕಣಿಖಟಿಲೆಸೆಯೆ ಕಾದಿದರು॥೬॥ ತಳಿತಮಿಂಚಿನ ಮುರಿವುಗಳ ತನಿ। ಹೊಳಹುಗಳೊ ಖಂಡೆಯುದ ಧಾರೆಯು। ಕೊಳುಗಿಡಿಯೊ ಖದ್ಯೋತರಾತಿಯೊ ಹೇಳಲೇನದನು॥ ನೆಳಿನೆಟಿಲಬಿರಿಹೊ ಯ್ಲೊ ಸಿಡಿಲಿನ। ಸುಳಿವೊ ಪ್ಮೊಮಸೆಯುರುಣಧಾರೆಯೊ। ಮಳೆಗಳಿಲ್ಲದಹೊನಲೊ ರಣದಲಿ ಚಿತ್ರ ವಾಯ್ತೆಂದ॥೭॥ ಬಳಿಯುಪಯಪಾಡುಗಳೊ ಬವರಿಯು। ಸುಳಿವುಗಳೊ ಜಾರುಗಳ ಗಾಯುದ। ಕಳವುಗಳ ಕ್ರಮೇಳಗಳ ಮೋಡಾಮೋಡಿಯುಬ್ಬಣದ॥ ಲಲಿತ ಚಿತ್ರದ ಚತುರಭಟರುಗ। ಳುಲಿದು ಹೊಯ್ದಾಡಿದರು ನೋಟಕ। ರುಲಿದುದಿಬ್ಬರ ವೀರಶೌರ್ಯವನೇನಹೇಳುವೆನು॥೮॥ ಮಸೆಯುಮ್ಮೆಗ ಳೊಳೊರವುತಿರ್ದವು। ಬಿಸಿರಕುತಮೊನೆಗುತ್ತುಗಳ ಕಿ। ಬ್ಬಸುರಿನಲಿ ಜೋರಿದವು ಕರುಳುಗಳಾಹವ ದ ಭಟರ॥ ಮಸಕಮಸುಳದು ಮನದ ಖಾತಿಯು। ಮುಸುಡು ಮುರಿಯುದು ಬಿಗಿದಹುಬ್ಬಿನ। ಬೆಸುಗೆ ಸಡಿಲದು ಭೂಪಭೂರಿಶ್ರವನ ರಿಪುವರನ॥೯॥ ಬರಬರಲು ರಿಪುಭಟನ ಹೊಯ್ಗಳ। ಧುರಕೆ ರಿಪುಸಾ ತ್ಯಕಿಗೆ ಮಿಗೆ ತರ। ಹರಣೆ ತಗ್ಗಿತು ಮಹಿಮೆ ಮುಗ್ಗಿತು ಮುರಿದುದಗ್ಗಳಿಕೆ॥ ಉರವಣಿಸಿ ಭೂರಿ ಶ್ರವನು ರಿಪು। ವರನ ಖಡ್ಗವ ಮುರಿಯಹೊಯ್ದು। ಬ್ಬರಿಸಿ ತಡೆಗಾಲಿಕ್ಕಿ ಹೊಯ್ದನು ಹಾಯ್ದು ಮುಂದಲೆಗೆ॥೧೦॥ ಕೆಡಹಿ ಕುಸುರಿದರೌಂಕಿ ಬಳಿಹಿಂ। ಮಡದಲುರೆ ಘಟ್ಟಿಸಿ ಕೃಪಾಣವ। ನುಡಿದು ಗಂಟಲ ಬಳಿಗೆ ಹೂಡಿದನರಿವಸಮಯದಲಿ॥ ತೊಡು ಮಹಾಸ್ತ್ರವನಿನ್ನ ಶಿಷ್ಯನ। ಕಡುನಿರೋಧವ ನೋಡು ಫಲುಗುಣ। ನುಡಿಗೆ ತೆರಹಿಲ್ಲೆಂದು ಜರೆದನು ಕೃಷ್ಣನರ್ಜುನನ॥ ದೇವ ನಿಮ್ಮದು ಧರ್ಮ ಯುದ್ಧದೊ। ಳಾವಹದನನು ಬೆಸಸಿದಿರಿ ತಲೆ। ಗಾವುದೇನರಿದಲ್ಲ ಮೊದಲಲಿ ನುಡಿದಭಾಷೆಯನು॥ ಭಾವಿಸುವುದೆನೆ ಮುಗುಳುನಗೆಯಲಿ। ರಾವಣಾಂತಕನೆಂದನೆಲೆಮರು। ಳಾವನಿರತದ ಧರ್ಮವಿದ್ದುದು ಕೌರವೇಂದ್ರನಲಿ॥೧೨॥ ನೆರೆದಷಡುರಥರೊಬ್ಬ ಹಸುಳೆಯು। ಕೊರಳನರಿದಂದಾಗ ಧರ್ಮದ। ನಿರುತವ ನು ನೀಕಂಡೆಯೆನಲುರಿ ಮಸಗಿ ಜಠರದಲಿ॥ ಸರಳ ಕೆನ್ನೆಗೆ ಸೇದಿದನು ಸಂಗರದಿ ಭೂರಿಶ್ರವನ ಖ ಡುಗದ। ಕರವ ಕತ್ತರಿಸಿದನು ತಲೆಗಾಯಿದನು ಸಾತ್ಯಕಿಯು॥೧೩॥ ಭರದೊಳೆತ್ತಿದತೋಳು ಕಡಿವಡೆ। ದುರುಳಿತವನಿಗೆ ಸುರಿವರಕುತವ। ಸೆರಗಿನಲಿ ನೆರೆ ನನದು ಭೂರಿಶ್ರವನು ನಸುನಗುತ॥ ಮುರಿದುಪಾ ರ್ಥನ ನೋಡಿ ವಾಮದ। ಬೆರಳನೊಲೆದನು ಲೇಸುಲೇಸ। ಬ್ಬರದ ಬಿರುದಿನ ಧರ್ಮನಿಷ್ಠರು ಪಾಂಡು ಸುತರೆಂದ ॥೧೪॥ ಆರು ಕೊಟ್ಟರು ಶರವನಿದ ಮದ। ನಾರಿಯೋ ನಿಮ್ಮಯ್ಯನಹಜಂ। ಭಾರಿ ಯೋ ಮುಣ್ದಿರಿಯೊ ದ್ರೋಣನೊ ಹೇಳು ನಿಶ್ಚಯವ॥ ವೀರನಹೆಯೋ ಪಾರ್ಥ ನಿನ್ನವೊ। ಲಾ ರು ಬಿಲುಗಾರರು ಮಹಾಸ್ತ್ರವಿದಾರು ಕಲಿಸಿದವಿದ್ಯೆಯುಪಯೋಗಿಸಿತು ನಿನಗೆಂದ॥೧೫॥ ಆರಿದೆ

ನೀವಿದ್ಯೆಯನು ಕೃಷ್ಣನೊ । ಳರಿದೆಯಾಗಲುಬೇಕು ಕಪಟದ । ನೆರವಣಿಗೆಗಳನರಿಯರಿಂದ್ರದ್ರೋಣ ಶಂಕರರು ॥ ಮರೆಮರೆಯಲಿರಿಗಾರನರಿದನ । ಸುರರನೆಂಬರು ಕುಹಕತಂತ್ರದ । ಹೊರಿಗೆವಾಳನ ಸಂಗದಲಿ ನೀವ್ಕೆಟ್ಟಿರಕಟೆಂದ ॥ ೧೬ ॥ ಓಡಿ ಕೊಂದನು ಕಾಲಯವನನು । ಬೇಡಿಕೊಂದನು ಕೈಟಭನ ಕೈ । ಮಾಡಿ ಕೊಲಿಸಿದ ಮಾಗಧನನಭಿಮಾನಗೇಡುಗನ ॥ ಕೂಡಿಕೊಂಡಿರಿ ಮೂರುಲೋಕದ । ಭೀಡರೇತರಬಾಹಿರರು ಹರಿ । ಯಾಡಿದಾಟವನಾಡಿ ಕೆಟ್ಟಿರಿಯಕಟ ನೀವೆಂದ ॥ ೧೭ ॥ ಪೊಡವಿಯಲಿ ಯಾದವರು ಕ್ಷತ್ರಿಯ । ಗೆಡುಗುಂದರಲಿ ಹುಟ್ಟಿದನು ಕೊಲೆ । ಗೆಡುಗ ಹಾವಿನ ಹುತ್ತದಲಿ ಹಾವ್ಮೆಕ್ಕೆ ಬೆಳದಂತೆ ॥ ನಡವಳಿಯ ನೋಡುವರೆ ಲೋಗರ । ಮಡದಿಯರು ತನ್ನವರು ತಕ್ಕಿನ । ಕಡಲು ಕೃಷ್ಣನ ನಂಬಿದರಿಗಿಹಪರಗಳಿಲ್ಲೆಂದ ॥ ೧೮ ॥ ಎಂದೊಡೆನ್ನನು ಪಾರ್ಥನೆಲವೋ । ಮಂದಮತಿ ನೀನೆಂದರಹುದೆ ಮು । ಕುಂದನನು ಭಜಿಸಿದರಿಗಿಹಪರ ಜನ್ಮಭಯವಿಲ್ಲ ॥ ಇಂದು ಸಾವ್ಮಾಡಿದುದು ಹೊಲ್ಲೆಹ । ವೆಂದು ನೀನದನರಿಯ ಶಿಷ್ಯನ । ಕುಂದುಹೆಚ್ಚುಗಳಾರದೆಂಬುದ ನೋಡು ನೀನೆಂದ ॥ ೧೯ ॥ ಎನಗೆ ಸಾತ್ಯಕಿ ಕೋಲವುಗಸಾ । ತನ ವಧೆಯ ನಾವ್ಕಾಣಲಾಗದು । ಮನಕೆ ಮತವೇ ನಮ್ಮ ಹರಿಬಕೆ ಬಂದು ಕಾದುವನ ॥ ನಿನಗೆ ಬಿಡುವೆನೆ ನಮ್ಮ ಧರ್ಮವ । ಜನವರಿಯದೇ ಹೋಗು ಹೋಗೆನೆ । ಮನದೊಳಗೆ ನಗುತಿರ್ದನಾಭೂರಿಶ್ರವಕ್ಷಿತಿಪ ॥ ೨೦ ॥ ಎಲವೊ ಸಾತ್ಯಕಿ ಬದುಕಿದೈ ನರ । ನುಳುಹಿಕೊಂಡನು ಹೋಗೆನುತ ಹೆಡ । ತಲೆಯನೊದೆದನು ನಿಂದಭರಿಕ್ಕೈಮುರಿದಗಜದಂತೆ ॥ ಬಲೆವುತ್ತೈತಂದುತ್ತ ರಣಮಂ । ಡಲದೊಳಗೆ ಪದ್ಮಾಸನವನನು । ಕೊಳಿಸಿ ಯೋಗಾರೂಢನಾದನು ವರಸಮಾಧಿಯಲಿ ॥೨೧॥ ತರಣಿಮಂಡಲದಲ್ಲಿ ದೃಷ್ಟಿಯ । ನಿರಿಸಿ ಬಹಿರಿಂದ್ರಿಯದ ಬಯಕೆಯ । ನುಳಿದು ವೇದಾಂತದರಹಸ್ಯದ ವಸ್ತು ತಾನಾಗಿ॥ ಇರಲು ಸಾತ್ಯಕಿ ಕಂಡು ಖತಿಯಲಿ । ತಿರುಗಿ ಖಡ್ಗವ ಕಿತ್ತು ಭರದಲಿ । ಉರವಣಿಸಿ ಭೂರಿಶ್ರವನ ತುರುಬಿಂಗೆ ಲಾಗಿಸಿದ ॥೨೨॥ ಆಗದಾಗದು ಕಪಟವಿದು ತೆಗೆ। ಬೇಗವೆನಲರ್ಜುನನು ಕೃಷ್ಣನ । ನಾಗಲವ ಕೈಕೊಳ್ಳಲರಿದನು ಗೋಣನಾನೃಪನ ॥ ಹೋಗುಹೋಗೆಲೆಪಾಪಿ ಸುಕೃತವ ನೀಗಿ ಹುಟ್ಟಿದರಾಜಋಷಿಯವ । ನೀಗಿದನು ನಿನಗೆನುತ ಬೈದುದು ನಿಖಿಳಪರಿವಾರ ॥ ೨೩ ॥ ಒಡಲನೊಡೆದಾಜ್ಯೋತಿ ಗಗನಕೆ । ನಡೆದುದಿತ್ತಲು ಸುರರು ಮರ್ತ್ಯರು। ಮಿಡುಕಿ ಬೈದರು ಸಾತ್ಯಕಿಯ ದುಷ್ಕರ್ಮವಾಸನೆಗೆ ॥ ಹಿಡಿದಮಗುಡದಲರ್ಜುನನು ಮನ । ಮಿಡುಕಿದನು ಕುರುನೃಪರ ಶೋಕದ । ಕಡಲೊಳದ್ದರು ಬಯ್ವುತಿರ್ದುದು ಕೃಷ್ಣಫಲುಗುಣರ ॥೨೪॥ ಇತ್ತ ರವಿರಶ್ಮಿಗಳು ನೆರೆ ಕೆಂ । ಪೊತ್ತಿರಲು ಸೈಂಧವನ ನೀರಣ। ದೊತ್ತಿಯಲಿ ನೆರೆ ಕಾಣಬಾರದು ಸಾಕು ದುಮ್ಮಾನ ॥ ಇತ್ತ ಮುರಿಭಾಷೆಗೆ ಪರಾಭವ । ಹತ್ತಿರಾಯಿತು ನರ ನಿಧಾನಿಸೆ । ನುತ್ತ ಮುರಂಪು ರಥವ ಬಿಟ್ಟನು ಕಡೆಯ ಮೋಹರಕೆ ॥ ೨೫ ॥ ಕಾದಿರೈ ಸಮರಥರು ನೃಪತಿಗೆ । ಕಾಯ್ದುಕೊಡಿರೈ ಸೈಂಧವನ ನೀ । ವ್ಕೈದುಕಾರರದಾರು ಸಾಹಸಿಕರಿಗೆ ಸಮಯವಿದು ॥ ಮೂದಲೆಗಳಿವು ಮುಟ್ಟು ಘಡ ಮುನಿ । ಸಾದೊಡೊಳ್ಳಿತೆಯೆನುತ ಶರದಲಿ । ಕಾದುವಿರಲೈ ಕಾಣಲೆಂದೊದರಿದನು ಕಲಿಪಾರ್ಥ ॥ ೨೬ ॥ ಜರಿದುದೀಬಲರಾಶಿಗಾಳಿಯ । ಹೊರಳಿಗೋಡಿದಹೊಟ್ಟುಹಾರಿದೊ । ಲಿರದೆ ಗಿರಿಗಳು ನೆಲನ ಬಿಟ್ಟುದನೇನಹೇಳುವೆನು ॥ ಗುರುತನುಜಕೃಪಕರ್ಣಮಾದ್ರೇ । ಶ್ವರಸುಯೋಧನಚಿತ್ರಸೇನರು । ಮುರಿದು ತರಹರಿಸಿದರು ಸೂಚಿ

ವ್ಯೂಹಪಾರ್ಶ್ವದಲಿ ॥ ೨೭ ॥ ಹರಿಯ ಬೊಬ್ಬೆ ರಥಾಶ್ವದಬ್ಬರ। ನರನ ಬಿಲುಝೇಂಕಾರ ತೇರಿನ । ಧ ರಧುರದ ಚೀತ್ಕಾರ ಹನುಮನ ಸಿಂಹನಿರ್ಘೋಷ॥ ಅರಿಬಲವ ತಿವಿದುದು ಚತುರ್ಬಲ।ಹೊರಳಿ ಯೊ ಡೆದುದು ಸುಭಟರೆದೆ ಜ । ರ್ಝರಿತವಾಗಲು ಪಾರ್ಥ ಹೊಕ್ಕನು ಸೈಂಧವನ ದಳವ ॥ ೨೮ ॥ ಅ ಳವಿಗೊಂಡು ಮಹಾರಥರು ಕೈ । ಕೊಳಲಿ ಮಿಗೆ ಸೈಂಧವನನೊಂದರೆ । ಗಳಿಗೆ ಕಾಯ್ದರೆ ಸಾಕು ನೀವ್ಕೊಂದವರು ಫಲುಗುಣನ ॥ ಹೊಳಹು ಕಳಿದುದು ಕಾಲವಿನ್ನರೆ । ಗಳಿಗೆ ಸ್ಮರಿಸಿ ಶಿವಶಿವಾಯೆಂ ದೊಳಗೆ ಮೂದಲಿಸುತಿರ್ದುದು ಭಟರು ತಮ್ಮೊಳಗೆ ॥ ೨೯ ॥ ಮೀಟೆನಿಸುವತಿರಥರು ಕವಿದರು । ಕೋಟಿಫಲುಗುಣಗಡರಿಪನ್ನಡೆ । ಗೋಟಿಯೋ ರಥಕೋಡುಕಲ್ಗಳೊ ಹಾಮಹಾದೇವ ॥ ದಾಟುವ ವರಾರೆನುತ ಗಗ್ಗವದ । ನ್ಯೋಟಕರು ಬೊಬ್ಬಿಡಲು ಸಮರದ। ಸಾಟಕವನಭಿವರ್ಣಿಸುವೊಡಂದನರಸ ಕೇ ಳೆಂದ ॥ ೩೦ ॥ ಧನುವನೊದರಿಸಿ ಸಕಲಸುಭಟರು । ಮನವ ಬಲಿದೊಗ್ಗಾಗಿ ಸರಳಿನ । ಜಿನುಗುಮಳೆ ಯಲಿ ನಾದಿದರು ನಾರಾಯಣಾರ್ಜನರ ॥ ಅನಿಬರಂಬನು ಕಡಿದು ಗುರುನಂ। ದನನ ಕರ್ಣನ ಕೃಪನ ದುರಿಯೋ । ಧನನ ಮೈಯಲಿ ಮೆತ್ತಿದನು ಮುಂಮೊನೆಯವಿಶಿಖಗಳ ॥ ೩೧ ॥ ಫಡಫಡರ್ಜುನ ಹೋಗುಹೋಗೆಳ । ವಡದು ಸೈಂಧವದಳದ ಭಾಷೆಯ । ನಡಸಬಲ್ಲರೆ ಬೇಗ ಬೆಳಗಸು ಹವ್ಯವಾಹನನ॥ ಕಡಲ ಮಧ್ಯದ ಗಂಗೆ ಸುರಪತಿ । ಕಡುಗಿ ಮಾಡುವುದೇನೆನುತ ಕೈ । ಗಡಿಯಬಿಲ್ಲಾಳುಗಳು ಬಿಗಿದರು ಸರಳೊಳಂಬರವ ॥ ೩೨ ॥ ಒಂದುಸಾಲಿನಲೈದೆ ಹಂತಹು । ದೊಂದುಕೋಟಿಶರೌಘದಿದಿರಿಲಿ । ನಿಂ ದು ಕಾದುವಘಟ್ಟಸಾವನು ದೇವದೈತ್ಯರಲಿ ॥ ಒಂದಕಿಮ್ಮಡಿನೂರುಮಡಿಶರದಿಂದ ಕೆದರಿದನೀಮಹಾರ ಥ । ವೃಂದವನು ಹೊಗಿಸಿದನು ಹೊದರೆದ್ದುದು ಶರವ್ರಾತ ॥ ೩೩ ॥ ಅಂಬಿನಂಬುಧಿ ಜರಿದುದೋ ಮೇ । ಣಂಬ ಬೆಸನಾಯಿತೊ ಕಣೆಗಳ । ನಂಬುಗುದುದಂಬರವನೊತ್ತರಿಸಿತೊ ಶರಾಳಿಗಳು ॥ ಅಂ ಬುಜೋದರ ತನ್ನ ಸೃಷ್ಟಿಕ । ಳಂಬಮಯವಾಯ್ತಲ್ಲಿ ಆವರಿದ । ತುಂಬಿದನೊ ಶರನಿಧಿಯನೆಂಬಂತೆ ಚ್ಚನಾಪಾರ್ಥ ॥ ೩೪ ॥ ಕಾಲುವಾಳೊಬ್ಬಂಗೆ ನಾಲುಕು । ಬೋಳೆಯಂಬುಗಳೆಂಟು ತುರಗಕೆ । ಕೋ ಲುನೂರೊಂದಾನೆಗೈನೂರಸ್ತ್ರ ಪದಹತಿಗೆ ॥ ಕೇಳು ಜನಮೇಜಯಧರಿತ್ರೀ । ಪಾಲ ಭಾರ್ಗವಸ್ವಾತಿಗ ತವಹ । ಕಾಲದಂದಿನ ಕಥೆಯ ಪೋಲ್ದವು ನರನ ಶರಜಾಲ ॥ ೩೫ ॥ ಈನೆಲನು ಆಕಾಶದಿಗ್ದೆಶೆ । ಭಾ ನುಮಂಡಲವಡಗಿತಂಬಿನ। ಸೋನೆ ಸುರಿದುದು ವರುಣಜಲ ರಣಭೂಮಿಯಗಲದಲಿ ॥ ಆನರಾಧಿಪನು ಬ್ಬಿ ಬೊಬ್ಬಿಡೆ।ದಾನವಾಂತಕ ರಥವ ನೂಕಿದ । ನೇನಬಣ್ಣಿಪೆನರಸ ಸಮರಾಂಗಣದ ರೌದ್ರತೆಯ ॥೩೬॥ ಹೆಣಗಳೊಟ್ಟಿಲ ಗಜದ ಘಾಟದ । ಕಣೆಗಳೊಟ್ಟಿಲ ಬೀದಿಯಲಿ ರಿಂ। ಗಣಗುಣಿದು ಹೊಗರೆಸವಹೊ ಸರುಧಿರಾಂಬುಗಳನದಿಯು ॥ ಗಣನೆಗೆಟ್ಟುದುದರಿಮೃಗಂಗಳು । ಕುಣಿದು ಕೂಗಟ್ಟಿಸುವ ಶಬರರ । ಗಣವಟೇಪನವಂತೆಯೆಚ್ಚನು ರಿಪುಮೃಗಾವಳಿಯ ॥ ೩೭ ॥ ಬೀಳುತಿರ್ದರು ಭಟರು ಸಂಕೆಯ । ಹೇ ಳಲೆಸ್ನಳವಲ್ಲ ಕಂತುರು । ಗಾಳಿಯುನೆ ನೆರೆ ಸೀಳಿಬಿಸುಟನು ಪದ್ಮಸಂಖ್ಯೆಯಲಿ॥ಕಾಳುಗಿಚ್ಚರೆಯಟ್ಟಿ ಶೈ ಲವ । ನಾಳಿಗಳ ಸುಡುವಂತೆ ಕವಿದೆಸು । ವಾಳ ತತ್ತರದರಿದನಕ್ಷೋಹಿಣಿಯ ನಿಮಿಷದಲಿ ॥೩೮॥ ಹರ ನ ಭಾರಣೆಯದಟು ಅಂಧಾ । ಸುರನ ಹಮ್ಮಾಷಣ್ಮುಖನ ಧಿ । ಕ್ಕರಣೆ ತಾರಕಹರನ ಧೃತಿ ರಾವಣನ ಝೇಂಕಾರ ॥ ವರರಘುಕ್ಷಿತಿಪಾಲಲಕ್ಷ್ಮಣ । ನೆರೆಲಘುವು ಸಂಧಾನ ದೇವಾ । ಸುರರ ಚೇತನಬಹಳ

ಯುಡವಳವಟ್ಟದರ್ಜುನಗೆ ॥ ೩೯ ॥ ಎಂದು ಮುರರಿಪು ಹೇಳುತಿರೆ ಕಪಿ । ತಂದುಬನಜನ ಕೃಪನ ಗುರುಗುರು । ಸಂಪಸಾಟಮಹಾರಥರ ಶರನೊಂದನೊಂದುಗಿಡು ॥ ಸಂಪುಣಪುಮಾಣಗಳ ಖಂಡಿಸಿ । ಹಿಂದುಮುಂದೆಡಬಲದ ಶೈಲದಲೊಂದಿದಿದಿಳರೊತ್ತಿನಲಿ ತುಂಬವು ನರನ ಶರಜಾಲ ॥ ೪೦ ॥ ಬಳಲಿದವು ರಥವಾಜಿ ಹನುಮನು । ಬಲದೊಳಗೆ ಶ್ರಮದೋರಿ ತನ್ನಯ । ಬಲದಡದ ತೋಳುಗಳು ಮರವಿಟ್ಟವು ನಿಧಾನಿಸಲು ॥ ಬಳಲಿದನೆ ನರನಳವಳಿಯಿಮಿಗೆ । ಬಲಿದು ಕಾದುವವಾರು ಯಿಳೆಯೊಳು । ಬಲುಭಟರ ಸರಿಗಾಣೆನೆಂದಸುರಾರಿ ಹೊಗಳಿದನು ॥ ೪೧ ॥ ದ್ಯುಮಣಿಯೊದೆಪಡೆ ತರಹರಿಸುವುದೆ। ತಿಮಿರರಾಜನ ದೇಹ ವರವಿ । ಕ್ರಮದರಿದ್ರರಿಗಳುಕಿದೊಡೆ ಬಳಿಕವ ಘನಂಜಯನೆ ॥ ಸಮತಳಿಸಿ ಶರವಳಯಕರವು । ಭ್ರಮಿಮಹಾರಥಭಟರ ವಿಜಯದ । ಮಮತೆಗಳ ಮಾಣಿಸಿದನಂಪವಾಳಾಸ್ತ್ರಬಾಧೆಯಲಿ ॥ ೪೨ ॥ ನೊಂದನಾಕೃಪನಖಿಳಮೋಹರ । ವಂದು ಅಳಿದುದು ಬಿಲ್ಲಗುರುವಿನ । ನಂದನನು ಮುಸೆಗಂಡನಶ್ವತ್ಥಾಮ ಮೈಮರೆದ ॥ ನಿಂದು ಬಾಣದ ಮೊನೆಗೆ ತೆರಳದ । ಮಂದಕರ್ಣನನೆರಡುಬಾಣದೊ । ಳಂದು ಗರುವಿಕೆಗೆಡಿಸಿದನು ನಿಮಿಷದಲಿ ಕಲಿಪಾರ್ಥ ॥ ೪೩ ॥ ನೊಂದು ಮುಗಳದೆ ಮುಸಗಿ ಸೂರ್ಯನ । ನಂದನನು ತಾಗಿದನು ಗುರುಸುತ । ಮುಂದುವರಿದನು ತರಹರಿಸದಿರಿಯಟ್ಟಿ ಕವಿಯೆನುತ ॥ ಇಂದಿನಲಿ ಮಹನವಮಿ ತಲೆಗಳಿ । ಗೆಂದು ಕವಿದುದು ಸಕಲಭಟರರ । ವಿಂದಸಖ ಹೊದ್ದಿದನು ಮೆಲ್ಲನೆ ಪಶ್ಚಿಮಾಂಬುಧಿಯ ॥ ೪೪ ॥ ಮೇಲೆ ಬಿದ್ದುದು ಸೇನೆ ಸವೆಯದು । ಸಾಳೆಪರಿಯಂತರಗಳಿಗೆಯಿನ । ನಾಳುವನು ಜಲಧಿಯಲಿ ಕಾಣೆವು ಸೈಂಸ್ಯಂಧವನ ॥ ಹೇಳಿ ಫಲವೇನಿನ್ನುವಪ್ಪಿ । ಜ್ವಾಲೆ ಕೊಳ್ಳಲಿ ದೇಹವನು ಸಾ। ಕೇಳು ಮುರಹರ ತೇರ ತಿರುಹಿಹೆನ್ನೆಂದಸಾಪಾರ್ಥ ॥ ೪೫ ॥ ಸಲಿಸಬೇಹುದು ಭಕತಸಾಡಿದ । ಛಲದಭಾಷೆಯನೆನುತ ರವಿಮಂ । ಡಲಕೆ ಮರೆಮಾಡಿದನು ಮುರರಿಪು ವರಸುದರುಶನವ ॥ ಕಳನೊಳಗೆ ಕತ್ತರಿಸುವಹಿತನ । ತಲೆಗೆ ಕಾವಳ ಮುಸುಗದವೊಲರೆ । ಗಳಿಗೆಯಲಿ ಸುಮ್ಮಾನವುಕ್ಕಿತು ಸಕಲಕುರುಬಲಕೆ ॥ ೪೬ ॥ ಸೆರಗ ಬೀಸಿದರಾಲಿಪರು ಬೊ । ಬ್ಬಿರಿದು ವರಗಂಭೀರಭೇರಿಯ । ಬಿರುದದನಿಯಬ್ಬರಿಸಿದವು ಗಬ್ಬರಿಸಿದವು ನಭವ ॥ ತೆರಹುಗೊಡುಗೊಡು ಭಾಷಗಾರನು । ಮರೆದು ಹೋಗಲಿ ವಹ್ನಿಕುಂಡದೊ । ಳೊರಗುವದ ನೋಡುವೆವೆನುತ ತನಿಗೆದರಂತರಸೇನೆ ॥ ೪೭ ॥ ಹೊಲಬುದಪ್ಪಿದತಳಪಟದ ಹೆ। ಬ್ಬುಲಿಯವೊಲು ನಿನ್ನಾತ ಸಿಲುಕಿದ। ಸಿಲುಕಿ ನೋಡಿದನೆಲ್ಲಿ ತೋರರ್ಜುನನ ತನಗೆನುತ ॥ ಉಲಿಯೆ ಸೈಂಧವನಿತ್ತ ಪಾರ್ಥನ । ಮುಳಿದು ಜರೆದನು ಕೃಷ್ಣನಹಿತನ । ತಲೆಗೆ ಹರಹಿಡಿವಂಬ ತೊಡುತೊಡು ಬೇಗ ನೀನೆಂದ ॥ ೪೮ ॥ ದೇವ ರವಿಯಸ್ತಮಿಸಿದನು ನೀ । ವಾವುದುಚಿತವ ಕಂಡಿರೆನ್ನಿನ । ಗಾವಭಯಬೇಡಾತಬಾರದು ತೊಡು ಮಹಾಶರವ ॥ ಈವಿರೋಧಿಯ ಕೆಡಹು ಸೂರ್ಯನ । ನಾವು ತೋರಿಸಿಕೊಡುವೆನೆನೆ ಗಾಂ। ಡೀವದಲಿ ಹೂಡಿದನು ಫಲುಗುಣ ಪಾಶುಪತಶರವ ॥ ೪೯ ॥ ತೆಗೆಯೆ ಜಗ ಕಂಪಿಸಿತು ತಾರೆಯ । ನೊಗಡಿಸಿತು ನಭ ಜಲಧಿ ರತ್ನಾ । ಳಿಗಳ ನೋಕರಿಸಿತು ಕುಲಾದ್ರಿಗಳೊಲೆವವೆಡಬಲಕೆ ॥ ದಿಗಿಭತತಿ ನಡನಡುಗಿತಲೆವಾ । ಸುಗಿ ಫಣಾಳಿಯ ಸೆಳೆಯೆ ಬಲುಸರ । ಳುಗಿದು ದಳ್ಳುರಿದಿರುಳುಕಾರಿತು ಬೆಸಸುಬೆಸಸೆನುತ ॥ ೫೦ ॥ ಕೆರಳಿ ದಳ್ಳುರಿ ಮುಸಗಿ ಹೊಗೆ ಭೋ । ರ್ಗರೆದುದಂಬರವೀಧಿಯಲಿ ವೈ । ಮರೆದರಜರಿಂದ್ರಾದಿದಿಕ್ಪಾಲಕರು ಕಳವಳಿಸಿ ॥

ಸುರರು ಕಂಗೆಟ್ಟರು ಮಹಾದ್ಭುತ । ಶರದೊಳಾಯ್ತರಿಸೇನೆ ಮಿಗೆ ತರ । ಹರಿಸಲರಿಯದೆ ಹರನ ನೆ
ನೆದನು ಧರ್ಮನಂದನನು ॥ ೫೧ ॥ ಬಲಿದು ಮುಷ್ಟಿಯೊಳೌಕಿ ಕೆನ್ನೆಗೆ । ಸೆಳೆದು ಬಿಟ್ಟನು ಪಾರ್ಥ
ನಹಿತನ । ತಲೆಯನೆಚ್ಚನು ಗೋಣ ಕಡಿದುದು ಪಾಶುಪತಬಾಣ ॥ ಹೊಳೆವಮಕುಟದವದನ ಗಗನದ।
ನೆಲೆಗೆ ಚಿಮ್ಮಿತು ರಕುತಧಾರಾ। ವಳಿಯ ರಿಂಗಣವಾಯ್ತು ಮುಂಡದ ತಲೆಯ ಮಧ್ಯದಲಿ ॥ ೫೨ ॥
ಬೀಳುಬೀಳಭಿಮನ್ಯುವಿನ ವಧೆ । ಬಾಳಲೀವುದೆ ನಿನ್ನನೆನುತು । ಬ್ಬಾಳುತನದಲಿ ಪಾರ್ಥ ಬೊಬ್ಬಿಡೆ
ಕೃಷ್ಣ ಖಾತಿಯಲಿ ॥ ಖೂಳನಿವ ನೀ ಕೇಳು ತಲೆಯನು। ಸೀಳಿದವನ ಕಪಾಲಸಾವಿರ ॥ ಹೋಳಹುದು
ತೊಡು ಪಾಪಿ ಬೇಗದೊಳಂಬ ಕಳುಹೆಂದ ॥ ೫೩ ॥ ಇವನ ತಂದೆಯ ಶಾಪವನು ತಲೆ । ಯವನಿ
ಯೊಳು ಬೀಳ್ಕೆಡಹಿದಾತನು । ಭುವನದಲಿ ತಲೆಬಿರಿದು ಬೀಳಲಿಯೆಂಬುದೀಶವರ ॥ ಇವನ ತಂದೆಯ
ಕೈಯೊಳಗೆ ಬೀ । ಳುವವುಪಾಯವ ಮಾಡು ನೀನೆನೆ । ದಿವಿಜಪತಿಸುತನಾಮಹಾಸ್ತ್ರಕೆ ಬೆಸಸಿದನು
ಹದನ ॥ ೫೪ ॥ ತುಡುಕಿ ಖಂಡವ ಕಚ್ಚಿ ನಭದೊಳು । ಗಿಡಗಹಾಯ್ವಂದದಲಿ ತಲೆಯನು । ಹಿಡಿದು
ಹಾಯ್ದುದು ಬಾಣ ವೃದ್ಧಕ್ಷತ್ರನಿದ್ದೆಡೆಗೆ ॥ ಕುಡಿತೆಯೆರಡರೊಳರ್ಘ್ಯಜಲವನು । ಹಿಡಿದು ಕೊಡುತಿ
ಹಸಮಯದಲಿ ತಲೆ । ನಡುವೆ ಬಿದ್ದುದು ಅರ್ಘ್ಯಜಲ ನವರುಧಿರಮಯವಾಗೆ ॥೫೫॥ ಏನಿದದ್ಭುತವೆ
ನುತ ತಲೆಯನು।ತಾನೆ ಕೊಡಹಿದನಂಜುಳಿಯನೆದ । ನೇನನೆಂಬೆನು ಕೃಷ್ಣರಾಯನ ಮಂತ್ರಶಕ್ತಿಯನು॥
ಆನರೇಂದ್ರನ ತಲೆ ಸಹಸ್ರವಿ । ಧಾನದಲಿ ಬಿರಿದುದು ಸುಯೋಧನ । ಸೇನೆ ಹರೆದುದು ಜರಿದುದರಿಭ
ಟಧೈರ್ಯಗಿರಿನಿಕರ ॥ ೫೬ ॥ ನಡುಗಿ ಸಂಗರಭೀತಿಯಲಿ ಬೆಂ। ಗೊಡುವನಾಯಕವಾಡಿಗಳ ಮಂ । ಗ
ಡವ ನೋಡುತ ಮರೆಯಚಕ್ರವತೆಗೆದನೆಸುರಾರಿ॥ ಪಡುವಲಿಳಿಯದರವಿಯ ಬೈಯುತ। ನಡೆದನಾಕುರು
ರಾಯನಿತ್ತಲು । ಹಿಡಿದ ಚೌರಿಗಳಾಡಿದವು ಪಾಂಡವರ ಸೇನೆಯಲಿ ॥ ೫೭ ॥ ದೈವಪೌರುಷದೊಳಗೆ
ಶಿವಶಿವ। ದೈವಬಲವೇ ಬಲವಲಾ ನಿ । ರ್ದೈವರಂಗೈತಳಕೆ ಬಂದರೆ ಪರಶುಪಾಷಾಣ ॥ ದೈವದೂರರು
ಧರ್ಮಹೀನರು । ದೈವದೇಳ್ಗೆಗಳೆನುತ ಮಿಗೆ ಬಿಸು। ಸುಯ್ದುತಿರುಗಿತು ಕರ್ಣಗುರುಕೃಪಗುರುಸುತಾ
ದಿಗಳು ॥ ಕಡಲ ಮೊರೆಹಿನಲಹರಿಲಘುವಿನ । ಪೊಡೆಯನೊಡೆಯಲು ಯುಗಸಹಸ್ರದೊ । ಳೊಡೆಯ
ಬಹುದೇ ದ್ರೋಣ ರಚಿಸಿದವ್ಯೂಹಪರ್ವತವ ॥ ಒಡೆದು ಹೊಯ್ಕೈಯೊಡ್ಡು ಸೈಂಧವ । ನೊಡ್ಡಲ
ನೀಗಿತು ತಲೆಯನಕಟಾ । ತೊಡಗಿದೆವು ದೈವದಲಿ ಕಲಹವನೆಂದನಾಕರ್ಣ ॥೫೯॥ ಮುನಿದು ಮಾಡು
ವದೇನು ಕೃಷ್ಣನ । ನೆನಹು ನಮ್ಮಾಯರಸುತನಕಲಿ। ಜನಪತಿಗೆ ಮಾರಿದೆವು ಸಾಕೀಚಿಂತೆಯೇಕೆನುತ ॥
ಇನಸುತಾದಿಗಳದ್ದರಿತ್ತಲು । ಮನದ ಹರುಷದ ಹರಹಿನಲಿ ಪಾ । ರ್ಥನ ರಥವ ತಿರುಹಿದನು ಗದುಗಿನ
ವೀರನಾರಯಣ ॥ ... ... ... ... ... ॥ ೬೦ ॥

ಅಂತು ಸಂಧಿ ೧೪ಕ್ಕಂ ಪದ ೯೩೬ಕ್ಕಂ ಮಂಗಳಂ.



## ಹದಿನೈದನೆಯ ಸಂಧಿ.

॥ ಸೂಚನೆ ॥ ರಾಯಕಟಕಾಚಾರ್ಯನೊಡ್ಡಿದ । ರಾಯುಧಪ್ಪಿನೊಳಿರುಳು ಕೊಂದನು । ವಾಯುಸುತನುಜನತನುಜನಗ್ಗದದೈತ್ಯಕೋಟಿಗಳ ॥

ಪದ॥ ಕೇಳು ಜನಮೇಜಯಧರಿತ್ರೀ।ಪಾಲ ಕೃಷ್ಣಾರ್ಜುನರು ಬರೆ ಭೂ।ಪಾಲನೊಲಿದಿದಿರಾಗಿ ಬಂದನು ಸಕಲದಳಸಹಿತ ॥ ಹೇಳಲರಿಯನು ಹರುಷದುದಯವ । ನಾಲಿ ಹೂಳಿದವಶ್ರುಜಲದಲಿ । ಮೇಲುವಾಯ್ದಪ್ಪಿದನು ದೇವನ ಪಾದಪಂಜರವ ॥ ೧ ॥ ಮಾತುದೋರದು ಹೆಚ್ಚಿದಾನಂ । ದಾತಿರೇಕಕೆ ಹರುಷ ನರಯುವ । ಮಾತು ಹಿಗ್ಗುವ ಹರುಷರಾಶಿಗೆ ದೇಹ ಕಿರಿದೆನಲು ॥ ಕಾತರಿಸಿದನು ಮತ್ತೆಮತ್ತೆಮ । ಹೀತಳಾಧಿಪ ಮೈಮರೆಯೆ ತೆಗೆ । ದಾತನನು ತಕ್ಕೈಸಿದನು ಕಾರುಣ್ಯನಿಧಿ ನಗುತ ॥ ೨ ॥ ಫಲಿಸಿತರಸಾ ನಿನ್ನ ಭಾಗ್ಯದ । ಬೆಳಸು ನಿನ್ನೊಡಹುಟ್ಟಿದನ ನುಡಿ । ಕಳಸಗೊಂಡುದು ಕದನವಿದು ಭಾರಾಂಕವುಳಿವಂಗೆ ॥ ಕಳೆದುದೊಂದಪಮೃತ್ಯುವೆನೆ ನೃಪ। ತಿಲಕ ನುಡಿದನು ನಿನ್ನ ಭಾಷೆಯ । ಬಲಿದೆ ನಿನ್ನಯ ಬಿರುದ ಸಲಿಸಿದೆಸೆಮುಗಿದೇನೆಂದ॥೩॥ ತೆಗಸು ದಳವನು ಸಾಕು ಬರಿದೇ। ಹೊಗಳುತಿಹೆ ನೀನೆಮ್ಮ ಕಾಳಗ । ಮೊಗದೊಳಳಿವುದು ಹಗೆಯೊಳೇಳಕ್ಷೋಹಿಣೀಸೇನೆ ॥ ಬಗೆಯದಿರದರು ಭೀಮಪಾರ್ಥರು। ಜಗದೊಳದ್ಭುತಪೌರುಷವರೆಂ । ದಘಹರನು ಪತಿಕರಿಸಿ ನುಡಿದನು ಭೀಮಫಲುಗುಣರ ॥ ೪ ॥ ಇತ್ತದುಗುಡವ ಹಿಡಿದು ರಾಯನ । ಕೆತ್ತ ಮುಖವನು ಕಂಡು ಭಟರೆದೆ । ಹೊತ್ತಿದವುಹೊಗರೇರಿದವು ಮೋರೆಗಳು ಪಟುಭಟರ ॥ ಚಿತ್ತವಿಸು ಭೂಪಾಲ ಸೈಂಧವ । ನೆತ್ತಲಿಹನತ್ತಲು ಮುರಾರಿಯು । ತೆತ್ತಿಗರ ಕಳುಹಿಸುವನಂದನು ಖಾತಿಯಲಿ ಕರ್ಣ ॥೫॥ ಇನ್ನು ನೋಡಾದೊಡೆ ಕಿರೀಟಿಯ । ಬೆನ್ನನುಗಿವೆನು ಕರುಳನರ್ಜುನ। ಗನ್ನಗತಕದೊಳರಿಯಹೊಯ್ವೆನು ಹಾಯ್ಕು ವೀಳೆಯವ ॥ ನಿನ್ನಕಂಗಳ ಬರವ ಕಳವೆನು । ಬಸ್ನೂಳಿರು ನೃಪ ನೋಡು ಚಿತ್ತವ । ನಿನ್ನು ಪಡೆವೆನೆನುತ್ತ ಭಾಷೆಯನಿತ್ತ ನಾಕರ್ಣ ॥ ಉಂಟು ಗರುಡನನೊಳ್ಳೆ ತುಡುಕುವ । ದುಂಟಲೇ ಬಳಿಕೇನು ರಾಯನ । ನಂಟರಿಷ್ಟರೊಳಧಿಕನಲ್ಲಾ ಕರ್ಣಕರುಕುಳನೆ ॥ ಟಂಟಣಿಸಬೇಡಿನ್ನು ಭಾಷೆಗ । ಳುಂಟು ನಿನ್ನಲಿ ನಗುವರಾವ । ಲ್ಲಿಂಟುಕೋಟಿಯ ಸೂರಹು ನೀನೆಂದನು ಕೃಪಾಚಾರ್ಯ ॥ ೬ ॥ ಗರುವರನು ಮಾನ್ಯರನು ರಣಧೀ । ರರನು ದೂರವಲಿಸುವರು ಪು। ತ್ತರಕೆ ಕರವರು ಬಾಯಬಡಿಕರ ಜಗದಭಂಡರನು ॥ ಅರಸುಗಳು ದುರ್ವ್ಯಲರೆಂಬುದ । ಸುಯುದೇ ಜನವಕಟ ಟಿಕ್ಕೆಯು । ಹರಳು ಮಿಗೆ ಕೌಸ್ತುಭಕೆ ಸರಿಯೇ ಕರ್ಣ ಕೇಳೆಂದ ॥ ೮ ॥ ನೀವು ಮಾತುವದೇಸು ರಣವಲಿ। ಕಾವೆವೆಂದಿರಿ ಸೈಂಧವನ ನಾ । ನಾವಿಧದ ವ್ಯೂಹದಲಿ ನಮ್ಮಾದ್ರೋಣನಸಗಿದನು ॥ ತಾವು ಭಟರಾದರೆ ದೊರೆಕಾರಿಸಿ । ಹೇವಗೆಡಿಸುವುದುಚಿತ ಭಂಡರು । ನೀವು ಲೋಗರ ಚುನ್ನವಾಡುವಿರೆಂದನಾಕರ್ಣ ॥೯॥ ಬಲವೊ ಘಡ ನಮ್ಮನು ತುಟಾರಿಸಿ । ಗಳಹುತಿಹನಾಲಿಗಯ ಕೀಳುವೆ। ನಲೆಮುಹಲ್ಲಿಪಲ್ಲಿ ಮೇಳವೆಯೆನುತ ಖಂಡಯವ॥ ಸೆಳೆದು ಘೂರ್ಣಿಸಿ ಗುರುತನುಜನ । ವ್ಯಳಿಸಲುಗಿದನಡಾಯುಧವನ । ಗ್ಗಳೆಯರವಿಸುತ ಮೇಲುವಾಯ್ದನು ದ್ರೋಣನಂದನನ ॥ ೧೦ ॥ ಬೆಂದುದೊಳದೋಟಿಯಲಿ ಕೌರವ । ವೃಂದವಕಟಾ ಯೆನಲು ಜನವೈ । ತಂದು ನಿಂದನು ನಡುವೆ ಕೌರವರಾಯ ಖಾತಿಯಲಿ ॥ ಇಂದಿನಾಹವ ಲೇಸುಲೇಸಿದು । ಮಂದಭಾಗ್ಯನು

ತಾನು ಸಾಕಿ । ನ್ನೆಂದು ಮಾಡುವದೇನು ನಿಮ್ಮೊಳು ಕದನವೇಕೆಂದ ॥ ೧೧ ॥ ಹೇವವುಳ್ಳೊಡೆ ಭೀಮ
ಪಾರ್ಥರ । ನೀವು ಕೊಲುವುದು ಮೇಣು ರಣದಲಿ । ಸಾವುದಲ್ಲದೆ ಗರುವರೊಳತೋಟಿಯಲಿ ತೊಡಕು
ವರೆ ॥ ಕಾವೆವೆಂದಿರಿ ಸೈಂಧವನ ಸುಭ । ಟಾವಳಿಯ ಮುಂಗುಗಳನರ್ಜುನ । ದೇವ ಕೊಯ್ದನು ಸಾಕು
ಸಾಕೆಂದರಸ ಮಾಣಿಸಿದ ॥ ೧೨ ॥ ನೆರವಣಿಗೆಯುಳ್ಳೊಡೆ ವಿರೋಧಿಯ । ನೆರವಿರೋಲೆಯಕಾರತನ
ವನು । ಮೆರವುದುಚಿತವಿದೇಕೆ ಡೊಂಬಿನ ಶೌರ್ಯವೊಳಗೊಳಗೆ ॥ ಕಿರುಕುಳರು ನೀವಲ್ಲ ನಿಮ್ಮಲಿ ।
ಕೊರತೆಯಿಲ್ಲದು ನಮ್ಮಪುಣ್ಯದ । ಬರವಟಿಗ ನೀವೇನಮಾಡುವಿರೆಂದು ಬಿಸುಸುಯ್ದ ॥ ೧೩ ॥ ಖ್ಯಾತಿ
ಯೇಕೆ ಸೈಂಧವನ ಕಾ । ಯ್ವಾತನಾರ್ಕೈ ತ್ರಿಪುರದಹನದ । ಭೂತನಾಥನ ಬಾಣ ಬಂದುದು ನರನ
ಗಾಂಡಿವಕೆ ॥ ಆತನಚ್ಚನು ಪಾಶುಪತವದ । ನಾತುಕೊಂಬುವರಾರು ಬರಿದೆ ಭ । ಟಾತಿಶಯವನು
ಹುರುಳುಗೆಡಿಸುವಿರೆಂದನಾದ್ರೋಣ ॥ ೧೪ ॥ ಒಂದು ಹರಹಿಡಿವೆಂಬು ಶಕ್ರನ । ದೊಂದು ಕೌಬೇ
ರಾಗ್ನಿವಾಯುವ । ದೊಂದು ಪಾರ್ಥನ ಬತ್ತಳಿಕೆ ಬ್ರಹ್ಮಾಸ್ತ್ರ ತುಂಬಿಹುದು॥ಕೊಂದೊಡಲ್ಲದೆ ಮಾಣ
ದದು ನಾ । ಬಂದುಗೊಂಬುದು ಗುರು ನಿಧಾನಿಸ । ಲಿಂದು ನಮಗಳವಡದು ಜಯವೆಂತೆಂದನಾಭೂ
ಪ ॥ ೧೫ ॥ ಅರಸ ಮರುಳ್ಯೆ ಮೇಲೆ ಸುರರನು । ಸರಕುಮಾಡದು ಸಕಲದೈವದ । ದೊರೆಯಲೇ ಹ
ರನಾತನಸ್ತ್ರವನಾರು ತರುಬುವರು ॥ ಹರನ ಶರವಿನ್ನಿಲ್ಲ ಪಗೆಗಳ । ನಿರುಳು ರಣದಲಿ ಹಿಂಡುವೆನು
ಸಂ । ವರಿಸು ಕೈದೀವಿಗೆಯನೆಂದನು ದ್ರೋಣನರಸಂಗೆ ॥ ೧೬ ॥ ಗಾಯವಡೆದಾನೆಗಳ ಕೈಮೈ ।
ನೋಯೆ ಕಾದಿದರಾಜಪುತ್ರರ। ಸಾಯುಧದ ಮಳೆಗಳಲಿ ಬಗೆವಚ್ಚವಾಯ್ಲ ತೇಜಿಗಳ॥ ಸಾಯಕದ ಸೊ
ಪ್ಪಾದಶಕಟನಿ । ಕಾಯವನು ಘೂರಾಯತೇರಿಸ । ನಾಯಕರ ಕರೆಕರೆದು ಬವರಕೆ ಕಳುಹಿದನು ದ್ರೋ
ಣ ॥ ೧೭ ॥ ಜರಿದಜೋಡನು ನೆರೆ ಹಂದಹ । ಕ್ಕರಿಕೆಗಳ ನುಗ್ಗಾದಗುಳವನು । ಬಿರಿದಸೀಸಕಬಾಹು
ರಕ್ಷೆಯ ಮುರಿದಬಲ್ಲೆಹದ ॥ ಅರೆಗಡಿವಬಿಲ್ಲುಗಳ ನೆಗ್ಗಿದ । ಹರಿಗೆಗಳ ಮುಕ್ಕಾದಕೈದುವ ತರಿಸಿ ಕ
ಳುಹಿಸುತಿರ್ದನತಿರಭಸದಲಿ ಕಲಿದ್ರೋಣ ॥ ೧೮ ॥ ಬಣಿಸಲರಿಯದಭಂಡಿಗಳು ಸಂ । ದಣಿಸಿದವು
ಹಕ್ಕರಿಕೆಗಳಹ । ಲ್ಲಣದ ಕವಚದ । ಸೀಸಕದ ಜೋಡುಗಳ ರೆಂಚೆಗಳ ॥ ಮಣಿಮಯದ ಮೋಹಳದ
ಹಿರಿಯ । ಬ್ಬಣದ ಸಬಳದ ಸೂನಿಗೆಯ ಸಾ । ಕಣೆಯ ಹೊರೆ ಚಾಚಿದವು ಕಟಕಾಚಾರ್ಯನಿದಿರಿನ
ಲಿ ॥೧೯॥ ಕರೆಕರೆದು ರಥಿಕರಿಗೆ ಮಾವಂ । ತರಿಗೆ ಕಾಲಾಳಿಂಗೆ ವರರಾ । ವ್ತರಿಗೆ ಕೊಡಿಸಿದನೆವರ
ವರಿಗೆವರೆಂಗವಾಯುಧವ ॥ ತರಿಸಿ ನಾದುಜವಾದಿಯನು ಕ । ರ್ಪುರದ ವೀಳೆಯವುಡುಗರೆಗಳಲಿ । ಹಿರಿ
ದು ಪತಿಕರಿಸಿದನು ಪರಿವಾರವನು ಕಲಿದ್ರೋಣ ॥೨೦॥ ಉರವಣಿಸುವುದು ಕೊಂಡಹೆಚ್ಚುಗೆ । ಮುರಿ
ಯಲಾಗದು ಶಸ್ತ್ರಧಾರಾ। ಪರಮತೀರ್ಥಸ್ನಾನದಲಿ ತೊಳೆವುದು ಭವದ್ವಿಷವ ॥ ಹರಣದಲಿ ಕಕ್ಕುಲಿ
ತೆ ಬೇಡು । ದ್ಧರಿಸುವುದು ಸತ್ಕುಲಿತೆಯನು ಸಂ। ವರಿಸುವದು ಸದ್ಗತಿಯನೆಂದನು ದ್ರೋಣ ನಿಜಬಲ
ಕೆ ॥ ೨೧ ॥ ಲಟಕಟಿಸಿತಾಹವಕೆ ರಾಯನ ಕಟಕ ಸುಮ್ಮಾನದಲಿ ಮೊಳಗುವ । ಪಟಹಶಂಖವ್ರೈದಂ
ಗಘನಗಂಭೀರಭೇರಿಗಳ ॥ ಚಟುಳಕಹಳೆಯ ಗಜರು ಮಿಗೆಯೆ। ತ್ಕಟಿಸಿತಬುಜಭವಾಂಡನಿರ್ಮಿತ। ಘಟ
ಬಿರಿಯೆ ಬಲುಹಾಯ್ತು ದ್ರೋಣನ ಸಮರಸನ್ನಾಹ ॥ ೨೨ ॥ ಸರಿಸದಲಿ ಲಟಕಟಿಸಿ ದಳ ಮೋ ।
ಹರಿಸಿ ನಿಂದುದು ರಣಕೆ ರಜನೀ । ಚರರ ವೊಡ್ಡಣೆ ಘಾತುಗೆಡಿಸಿತು ದಿಟ್ಟರುಬ್ಬಟೆಯ ॥ ನರನ ಕರೆ

ವೊಡೆ ಸಿಂಧುರಾಜನ । ಹರಿಬ ನಮ್ಮದು ತಮ್ಮದೆಂದ । ಬ್ಬರಿಸಿ ಕವಿದುದು ಕದನಲಂಪಟರಾಗಿ ಪಟು ಭಟರು ॥ ೨೩ ॥ ಹಿಂದೆ ಸೆಡೆದುದು ವೈರಿಬಲ ಭಟ । ವೃಂದ ನಿಲಲು ಕಿರೀಟಭೀಮರ । ಕುಂದುಗಾ ಬುದು ಲೋಕ ನಮ್ಮನು ತೆಗೆದುಹಿಂಗದೊಡೆ ॥ ಬಂದಜಯ ದಕ್ಕುವುದು ರಜನಿಯ। ಕೊಂದೆವಾದೊ ಡೆ ನಮಗೆ ಸರಿಯಿ । ಲ್ಲೆಂದು ಧೃಷ್ಟದ್ಯುಮ್ನ ಕರೆಸಿದನಖಿಳನಾಯಕರ ॥ ೨೪ ॥ ಸೋತಬಲ ಸಂವ ರಿಸಿಕೊಂಡುದು । ಘಾತುರೇ ರಣವೆಂಬುದೆಮ್ಮಯ । ಘಾತುಕಲಿ ಮೊದಲಿಸಿ ಕರದೊಡೆ ರಾಜ್ಯಸಿರಿ ಯಹುದು ॥ ಭೀತಿ ಮನದಲಿ ಪೌರುಷಾಂಗದ । ಮಾತು ಮುಖದಲಿ ಮುರಿವು ಕಾಲಲಿ । ಬೂತುಗ ಳು ಕುರುಧೀರನೆನುತಿದಿರಾದುದರಿಸೇನೆ ॥ ೨೫ ॥ ಇಳಿದುದೀಕಳನೊಳಗೆ ದಿಗುವಂ। ಡಲದ ಸಂಧ್ಯಾ ರಾಗವೆನೆ ಪರಿ । ತಳಿತಚತುರಂಗದಲಿ ಮಸಗಿದುದೆರುಣಜಲರಾಶಿ ॥ ಕಲಿಗಳುಬ್ಬಿನ ರೋಷತಾಮಸ । ತುಳುಕಿತೆನೆ ದಿಗುವಳಯದಲಿ ತುಳು । ವೆಳಗು ಕುಡಿಕುಡಿದುಗುಳುತಿರ್ದುದು ತಿಮಿರಬಲಚಯ ವ ॥ ೨೬ ॥ ಒಡಿವಖುಡ್ಗುಗದ ಕಿಡಿಗಳಲಿ ಬೇ । ಗಡೆಗಳಾದ್ದವು ಮಕುಟಬದ್ಧರ।ಮುಡಿಯ ರತ್ನಪ್ರಭೆಗ ಳಲಿ ಜರ್ಝರಿತತನವಾಯ್ತು ॥ ಗಡಣದಂಬಿನ ಮಸೆಯ ಬೆಳಗಿನೊ । ಳೆಡಸಿದಾಕ್ಷಣ ಮತ್ತೆ ನಿಮಿಷ ಕೆ । ಹೊಡಕರಿಸಿ ಹಬ್ಬಿದುದು ಮಬ್ಬಿನ ಥಾಳಿ ದೆಸೆದೆಸೆಗೆ ॥ ೨೭ ॥ ಖಳರ ಹೃದಯದ ಗರುಡಿ ಘೂ ಕಾ । ವಳಿಯ ನಯನಾಂಜನ ಧರಿತ್ರಿಯ । ನಳಿನಕರಗಿದತುಂಬಿ ಸುಭಟಸ್ವಾಂತಶಶಿರಾಹು ॥ ಪ್ರಳಯ ತಿಮಿರದ ಬೀಜ ನೀಲಾ । ಚಲದ ಸಾಯುಜ್ಯವೊ ಸಭಾವಂ । ಡಲದೊಡನೆ ಹೇಳಿಕೆಯದೆನೆ ಮಸಗಿ ತು ಕುರುಸ್ತೋಮ ॥ ೨೮ ॥ ದಳದ ಬೊಬ್ಬೆಯ ಸಿಡಿಲ ಬಲುಗ । ತ್ತಲೆಯ ಝಾಡಿಯ ಮುಗಿಲು ಗಳೆ ಹೊಳೆ । ಹೊಳೆವಮಹಿಪರ ಮಕುಟರತ್ನದ ಬಳ್ಳಿಮಿಂಚುಗಳ ॥ ಬಿಲುಸರಳ ನಾರಾಚನಿಕರದ। ಮಳೆಯ ನೆತ್ತರ ಹೊಳೆಹುಗಳ ರತಿ। ಕುಳದಮಳೆಗಾಲದವೊಲುರೆ ಹೆಚ್ಚಿತು ಭಟಸ್ತೋಮ ॥೨೯॥ ಹೆಣಗಿ ಮಿಗೆ ತಲೆಯೊತ್ತಿ ಹಾಯ್ದರು । ಹಣಿದವನು ತಮ್ಮೊಳಗೆ ಮಿಗೆ ಸಂ । ದಣಿಗಳಲಿ ಸೈಗರೆದ ರಂಬಿನ ಸರಿಯನುರವಣಿಸಿ ॥ ರಣಮಹೀಶಂಗೀಸುಷುಪ್ತಿ । ಕ್ಷಣರು ದಿಗ್ಭ್ರಮೆಯಲಿ ಸ್ವಕೀರ್ತಿ। ಕ್ಷಣನವರು ರಚಿಸಿದರು ರೌರವವಾಯ್ತು ರಾತ್ರಿಯಲಿ ॥ ೩೦ ॥ ಆರ ವಂಗಡ ಥಾಳಿಯಿದೆ ಯಿವ । ನಾರು ಹೆಸರೇನೆಂದು ಬಳಿಕ ವಿ । ಚಾರಿಸುತ ಹೊಯ್ದಾಡಿದರು ಕರೆಕರೆದು ಮೊದಲಿಸಿ ॥ ಭಾರಿಸಿತು ಬಲುತಿಮಿರಬಲಸಂ । ಹಾರವನು ಹವಣಿಸುವನಾವನು । ಭೂರಿಭಟರಂಗವಣೆ ಬೀತುದು ನೃಪತಿ ಕೇಳೆಂದ ॥ ೩೧ ॥ ತೆಗೆಸು ಚೂಣಿಯ ದಳವ ದೀವಟಿ । ಗೆಗಳ ಕರೆಕರೆ ತೈಲಪೂರ್ಣದ। ತೊ ಗಲ ಕುಣಿಕಿಲ ಭಂಡಿ ಕುಣಿಯಲಿ ಕೋಟಿಸಂಖ್ಯೆಯಲಿ ॥ ಬಿಗಿದಮಳವೆಯ ಯೆಣ್ಣೆಗೊಪ್ಪರಿ । ಗೆಗ ಳೊಳದ್ದಲಿ ಗಳಿಗಳಲಿ ಸೀ । ರೆಗಳ ಸುತ್ತಲಿಯೆಂದು ಕೈವೀಸಿದನು ಕಲಿದ್ರೋಣ ॥ ೩೨ ॥ ಬೆಳಗಿ ದವು ಬೊಂಬಾಳದೀವಿಗೆ । ಬಲದೊಳಾನೆಗೆ ಹತ್ತು ರಥಿಕಾ । ವಳಿಗೆ ನಾಲ್ಕು ಹಯಕೆರಡು ಕಾಲಾ ಳಿಗೊಂದೊಂದು ॥ ಬಲಸಮುದ್ರದೊಳಧಿಕವಡಬಾ । ನಳನ ಝಳವೋ ಮೃತ್ಯುವಿನ ದೀ । ವಳಿಗೆ ಯಿರುಳೋ ತಿಳಿಯದರಿದೆನೆ ಚಿತ್ರವಾಯ್ತೆಂದ ॥೩೩॥ ಬಗೆಯಲರಿ ದಿಗುಭಾಗ ಬಿಲಯದೆ । ಹಗಲನೀ ದುದೊ ರಾತ್ರಿ ಕುಡಿಕುಡಿ । ದುಗುಳುತಿರ್ದುದು ತಿಮಿರವನು ಕರದೀಪಿಕಾಳಿಗಳು ॥ ಹೊಗರುಗಟ್ಟಿ ತು ಕುಮುದಕನಿಳದ । ಬಿಗಿದು ಬಿಟ್ಟುದು ಚಕ್ರವಾಕದ । ತಗಹು ಕೆಟ್ಟುದು ಹೇಳಸಲು ರಂಬಿಸಿ

ತು ದೀಪಾಳಿ ‖ ೩೪ ‖ ತಿಮಿರವಡಗಿತು ಮನದದೋಷದ । ತಿಮಿರವಡಗದಮುನ್ನ ಭುಜವಿ । ಕ್ರಮದ ಮನ್ನಣೆಯುಳ್ಳೊಡವಸರವಿದು ನೃಪಾಲರಿಗೆ ‖ ನಿಮನಿಮಗೆ ಮುಂಕೊಂಡು ವಂಶೋ । ತ್ತಮಸಮಾಗತಕೀರ್ತಿಸತಿಯಲಿ । ಮಮತೆಗಳ ನೆರೆ ಮಾಡಿಯೆಂದನು ದ್ರೋಣ ನಿಜಬಲಕೆ ‖ ೩೫ ‖ ಮತ್ತೆ ಹೊಕ್ಕರು ಭಟರಮಮ ದಿಗು । ಭಿತ್ತಿ ಜರಿಯಲು ಜರಿವಭೇರಿಯ। ಕಿತ್ತು ನೆಲ ಹೊಡೆಮರಳೆ ಮೊಳಗುವಪಟಹಡಿಂಡಿಮದ ‖ ಹತ್ತುಸಾವಿರನೃಪರು ರಿಪುಗಳ । ಮುತ್ತಿದರ ಮುರುಹಿದರ ವ್ಯೂಹದಲಿ । ಮೆತ್ತಿದರು ಮೊನೆಗಣೆಗಳನು ಪಾಂಡವರ ಬಲದೊಳಗೆ ‖೩೬‖ ಅಕಟ ಘಡ ಕುನ್ನಿಗಳೆಯಸುರಾಂ । ತಕನ ಕಪಟಕುಮಂತ್ರವೇ ಬಾ । ಧಕವಿದಲ್ಲದೆ ನಿಮಗೆ ಸೋಲುವುದುಂಟೆ ಕುರುಸೇನೆ ‖ ಸಕಲಸನ್ನಾಹದಲಿ ಯಾದವ । ನಿಕರಸಹಿತೀಯಿಕ್ಕೆಗಳು ರಣವನು । ಚಕಿತರಾದೊಡೆಜೋಡಿಸೆನುತಿದಿರಾದನಾದ್ರೋಣ ‖ ೩೭ ‖ ತವಕ ತಗ್ಗಿತು ಭಟರ ದಾಳಿಗೆ । ಜವಳಿ ತೆಗೆದುದು ಮನಕೆ ಭೀತಿಯು । ಗವಸಣಿಗೆ ತೊಡಿಸಿತ್ತು ಜಾಳಿಸಿತಧಟರಪಸರಣ ‖ ಸವೆದಶೌರ್ಯದಗಾಯಘಲ್ಲಿಸಿ । ದವಯವವ ಮಡಮುರಿಯ ನೋಡಿದ । ನವನಿಪತಿಗಳ ನಿಲವ ಕಂಡಸುರಾರಿ ಯಿಂತೆಂದ ‖ ೩೮ ‖ ನಿಲ್ಲು ಭಯಬೇಡಾವರಣವಿದು। ಸಲ್ಲವಕೆ ತರುವಾಯ ದೀವಿಗೆ। ಕೆಲ್ಲವಿಸಿದುದೊ ಪೊಳ್ಳಿತೇಭುಜಶೌರ್ಯಕುರುಬಲಕೆ‖ ಖುಲ್ಲರಾರೋ ಬಲವ ತಿರುಹಿದೊ।ಡಿಲ್ಲಿಯಂಜದಿರೆನುತ ಮಿಗೆ ಕರ।ಪಲ್ಲವವ ನೆಗಹಿದನು ಲಕ್ಷ್ಮೀಕಾಂತ ಕರುಣದಲಿ‖೩೯‖ ಆವನೊಬ್ಬನ ಮಧುರವಚನಕ್ಕೆ । ಪಾವಲೋಕನದಿಂದ ಸನ್ನಾ । ಸಾವಳಿಯ ಘನದುರಿತವಹ್ನಿಯಝಳಕೆಕಡೆಯೆನಲು ‖ ದೇವನೀತನು ಲಲಿತವಚನಸು । ಧಾವಿಶೇಷಕದಿಂದ ಸುಭಟರು । ಜೀವಿಸುವುದೇನರಿದು ಕೇಳ್ ಧೃತರಾಷ್ಟ್ರಭೂಪಾಲ ‖ ೪೦ ‖ ಹಿಂಗಿದುದು ಭಯಕಂಠದಸು ಸರ್ವಾಂಗದಲಿ ಪಸರಿಸಿತು ಕಾಳಗ । ದಂಗವಣೆ ಹೊಗರೇರಿದುದು ವಿಕ್ರಮ ಚಡಾಳಿಸಿತು ‖ ಹೊಂಗಿದರು ಹೊಂಪುಳಿಯ ಪುಳಕದ । ಮುಂಗುಡಿಯ ರೋಮಾಂಚನದ ರಣ । ರಂಗಧೀರರು ತರುಬಿ ನಿಂದರು ಮತ್ತೆಪರಬಲವ ‖ ೪೧ ‖ ಭಟರು ಬಳಲಿದಿರಿಂದು ರಣವು । ತ್ಕಟವು ಧೀವಸಿಗಳು ಮಹಾರಥ । ರಟಕಟಿಸುತಿದೆ ಮತ್ತೆ ಸಾವಿದನೇನ ಹೇಳುವೆವು ‖ ಕುಟಿಲಭಾರವ್ಯಾಜನಿವಸು । ಬ್ಬಟೆಗೆ ಮದ್ದರಿವೆಸು ನಿಶಾಪರೆ। ಯಟನಪಟುಗಳು ಬರಲಿ ಕಾಳಗಕೆಂದನಸುರಾರಿ ‖ ೪೨ ‖ ಕರೆಸು ಧರ್ಮಜಕಲಿಘಟೋತ್ಕಚ । ನಿರುಳು ಬವರಕೆ ನಿಲಲಿ ಸಾಕೀ । ನರವೃಕೋದರ ನಕುಲ ಸಹದೇವಾದಿಗಳಿಗರಿದು ‖ ಇರುಳು ರಣದಾಯತವನವನೇ। ಹಿರಿದುಬಲ್ಲನು ಕರಸೆನಲು ಮುರ। ಹರನ ನೇಮದಲನಿಲತನಯನತನಯನೈತಂದ‖೪೩‖ ಜಡಿವಹಿರಿಯುಬ್ಬಣವ ಹೆಚ್ಚಿದ । ಮುಡುಹುಗಳ ಮುರಿದತುಳಚರಣದ । ತೊಡರಬೆಳಗಿನ ಬಾವುಲಿಯ ಝಣಝಣದ ನಿಸ್ವನದ ‖ ನಿಡಿಯೊಡಲ ಮುರಿಮೀಸೆಗಳ ಕೆಂ । ಪಡರ್ದಕಂಗಳ ಹೊಳೆವದಾಡೆಯ । ದಡಿಗದಾನವ ಹಜ್ಜೆಯಲಿ ನೆಲ ನೆಗ್ಗಲೈತಂದ ‖ ೪೪ ‖ ಏನುಧರ್ಮಜ ಕರಸಿದೈ ಕುರು । ಸೇನೆ ಮಲೆತುದೆ ಬಿಡುಬಿಡಾ ತಡ। ವೇನು ತಾ ವೀಳೆಯವನೆನುತಂಗೈಯನರಳಿಚುತ‖ ದಾನವಾಮರರೊಳಗೆ ನಿನ್ನಯ । ಸೂನುವಿಗೆ ಸರಿಯಿಲ್ಲನಿಸಿ ಗೆಲ । ಲಾನು ಬಲ್ಲೆನು ನೋಡೆನುತ ಬಿದಿರಿದನು ಖಂಡೆಯವ ‖ ೪೫ ‖ ಜಡಿದು ಝೋಂಪಿಸಿ ವೀಳೆಯವ ಕೊಂ । ಡೆಡದಕೈಯಿಂದೆರಗಿ ಮದಮುಖ । ನೆಡಬಲನ ನೋಡಿದೊಡೆ ರಕ್ಕಸಕೋಟಿ ಜೀಯೆನಲು ।ಸಿಡಿಲಸರೆ ಬಿಟ್ಟಂತೆ ಭುಜವನು । ಹೊಡೆದು

ಮಿಂಚಿತು ದೈತ್ಯಬಲವ್ರಲಿ । ದಡಿಯಿಡಲು ಮೇಲುಸುರು ಮಸಗಿತು ಫಣಿಪಕಮಠರಿಗೆ ॥ ೪೬ ॥ ಕಾ
ಳರಾತ್ರಿಯ ಕಟಕವೋ ಮೇಣ್ ಕಾಲರುದ್ರನ ಪಡೆಯೊ ದಾನವ। ನಾಳಿನಗ್ಗಳಿಕೆಯಲಿ ತೊಳಲಿದಧನು
ಶರಂಗಳಲಿ ॥ ಮೇಲುಹೊಗರನು ಜರೆದು ಪಾಡೆಯ । ಥಾಳ ಮಿಗೆ ಗಜಗಲಿಸೆ ದಾನವ। ಕಾಳಗಕ್ಕನು
ವಾಗಿ ನಿಂದನು ಬಿಗಿದಪಿಲುದೆಗೆದು ॥ ೪೭॥ ಹಯಕೆ ಹಯ ರಥ ರಥಕೆ ಪಯದಳ । ಪಯದಳಕೆ ಗಜ
ಸೇನೆ ಗಜಸೇನೆಯಲಿ ಭಾರಿಯಭಟರು ಭಾರಿಯಭಟರ ಗರ್ಷಣದಲಿ॥ನಿಯತಚಾತುರ್ಬಲವೆರಡು ನಿರ್ಭ
ಯದಲೊದಗಿತು ಮಕುಟಮಸ್ತಕ।ಮಯಮಹೀತಳವೆನಲು ಹಳಚಿತು ಹೊಯ್ದುದುಭಯಬಲ ॥೪೮॥
ಕೌರವನ ತಳತಂತ್ರ ಕಟಕಾ । ಚಾರಿಯನ ಕಾಹಿನಲಿ ರಿಪುಪಂ । ವಾರ ನಿಂದುದು ಭೀಮಸೇನನ ಮಗ
ನ ಕಾಹಿನಲಿ ॥ ಅರಿದನು ಜಗ ನಡುಗೆ ಬೊಬ್ಬೆಯ । ಭಾರಿದೇಹನು ವೈರಿಬಲಸಂ । ಹಾರರುದ್ರನು
ಕಲಿಘಟೋತ್ಕಚನೈದಿದನು ರಣವ ॥೪೯॥ ಬೆಳೆದವೋ ಕೈಕಾಲು ನೀಲಾ । ಚಲಕೆ ಹೇಳೆನೆ ಮುಗಿಲು
ತುಡುಕುವ । ತಲೆಯ ಟೋಕೆಯ ತೋರಹತ್ತನ ಕಂಪು ಕುರುಸೇನೆ ॥ ಕಳವಳಿಸಿದರು ಕಾಯದಲಿ
ಕ । ಕ್ಕುಲಿತೆಕಾರರು ಕೈಮೆಗೆದರ । ಗ್ಗಳೆಯಸುರುಬೆಗೆ ಬೀಳುಕೊಟ್ಟರು ಭಟರು ಸ್ಥಿರಣೆಯ ॥೫೦॥
ಏನ ಹೇಳುವೆನವರ ರಣಸುಂ । ಮಾನವನು ನಮ್ಮವರವೊಗದು । ಮ್ಮಾನವನು ಪರದೇಶದೇಶದೊ
ಳಾದುದೀಹದನ ॥ ದಾನವರ ಥಟ್ಟಣೆಗೆ ನಿಲುವನಿ । ಥಾನರುಂಟೇ ಧಿಟ್ಟತನದಲಿ । ತಾನೆ ನಿಲುವೆನೆನು
ತ್ತ ಕುರುಭೂಪಾಲ ಬಲಸಹಿತ ॥೫೧॥ ಘಡ ನಿಶಾಚರ ಹೋಗುಹೋಗಳ । ವಡದು ಕರೆ ನಿಮ್ಮಯ
ನನು ಹೇಳ್ ರೊಡಲ ತೋರಿಸಿ ಬಲವ ಬೆದರಿಸಲಗ್ಗಳೆಯನಹುದೆ ॥ ಮಿಡುಕುವೊಡೆ ಕರೆ ನಿಮ್ಮತೆತ್ತಿಗ।
ನಡಗಲೇತಕೆ ಕೃಷ್ಣ ನಿಮಗಿಂ । ದೊಡಲ ಬಳಿನೆಳಲವಸಹಿತ ಬಾರೆಂದು ಗರ್ಜಿಸಿದ ॥೫೨॥ ಮರುಳೆ
ಕೌರವ ಜಂಗಮಸ್ಥಾ । ವರಕೆ ದೇಹದ ನೆಳಲಹುದು ದಿನ। ಕರನ ದೇಹದ ನೆಳಲು ಶ್ರುತವೋ ದೃಷ್ಟವೋ
ನಿನಗೆ ॥ ಸುರನಿಶಾಚರಮರ್ತ್ಯರೊಳು ತಾ । ನೆರವಬಯಸುವನಲ್ಲಿ ಹರಿಯಂ । ತಿರಲಿ ಚೈತನ್ಯಾತ್ಮ
ವಾತನ ಮಾತದೇಕೆಂದ ॥೫೩॥ ಹೆಣನನರಸುತ ರಕುತಪಾನಕೆ । ನೆಣಸಿ ಶಾಕಿನಿಪ್ರೂತಸಿಯರೊಳು ।
ಹೆಣಗಿ ಗೆಲುವುದೆಯಾಯ್ತು ದಾನವವಿದ್ಯೆ ಜಗವರಿಯೆ ॥ ರಣದೊಳಗ್ಗದಕೈದುಕಾರರು । ಕೆಣಕಿ ಗೆ
ಲುವುದ ಕೇಳಿದರಿಯೆವು । ಹೆಣವಿನಿಹಿಗಳು ಹೇವಮಾರಿಗಳೆಂದನಾಭೂಪ ॥೫೪॥ ಬಯ್ಯಲರದಿರು ಶ
ಕ್ತಿಶರದಲಿ । ಮೆಯ್ಯ ನೆಸುವೆಯೊ ಮೇಣು ಮಾರ್ಗಣೆ । ಕಯ್ಯಲುಂಟೇ ನಿನಗೆ ಸಂಬಳವೇನು ಸಮರ
ದಲಿ ॥ ಅಯ್ಯನನು ಕರೆಯೆಂಬಬಾಯನು । ಕೊಯ್ಯಬೇಡವೆ ಸಿಂಹಕೇಸರ । ದುಯ್ಯಲಾಡುವಗಜವ
ನೋಡೆಂದುರುಬಿದನು ನೃಪನ ॥೫೫॥ ಎಸುತ ಹೊಕ್ಕನು ಥಾಳಿಸುವಹೊಸ। ಮಸೆಯಕಣೆ ಮುಕ್ಕಿರಿಕಿ
ದವು ನಿ । ಪ್ಪಸರದಲಿ ನೃಪನೆಚ್ಚ ಕಾಣನು ಹಗೆಯ ಪರಿವುಗಳ ॥ ಕುಸುರಿದರಿದುದು ಜೋಡುಸೀಸಕ।
ಬೆಸುಗೆಯೊಡೆದುದು ಗಾಯದಲಿ ಮೈ।ಬಸಿಯೆ ನನೆದುದು ಶೌರ್ಯ ಬೀತುದು ಭೀತಿ ಭೂಪತಿಗೆ॥೫೬॥
ಅಕಟಕಟ ದೊರೆ ಸಿಲುಕಿದನು ಪಾ । ತಕರು ರಥಿಕರು ಕುರುಮಹೀಪಾ । ಲಕನನೊಪ್ಪಿಸಿಕೊಟ್ಟು
ಕೊಂದರು ದ್ರೋಣಕೃಪರೆನುತ ॥ ಚಕಿತಬಲದಲಿ ನೃಪನ ಸಾರಥಿ । ನಿಕರವೊರಲಲು ಕೇಳ್ದು ಬದ್ಧ ।
ಭ್ರುಕುಟಿಭೀಷಣಮುಖರು ಮಸಗಿತು ದೈತ್ಯಬಲಜಲಧಿ ॥೫೭॥ ಬಕನಮಕ್ಕಳು ಜಟನಕಿಂಮಿರಾ ।ರಕನ
ಸುತರು ಹಿಡಿಂಬತನುಜರು । ವೃಕಜಪಾಸಂಘಾತ್ಮಜರು ಶಿಶುಪಾಲನಂದನರು ॥ ಸಕಲಸನ್ನಾಹದಲಿ

ದೈತ್ಯ । ಪ್ರಕರ ಹೊಕ್ಕುದು ರಾಯರಥಪಾ । ಲಕರ ತರುಬಿಯೆ ತುಡುಕಿದರು ರಣವನು ಘುಟೋ ತ್ಕಚನ॥೫೮॥ ಕೆಣಕಿದರಲಾ ರಣವ ರಕ್ಕಸ। ಬಣಗುಗಳು ಮುಖುಪ್ರೊತು ಸಮರಾಂ। ಗಣದೊಳಗೆ ನಾವಾವಸದರವ್ರೊ ನೋಡಿರ್ದ್ರೆ ಭಟರು॥ ಸೇಸುಗಡ ನಮ್ಮೊಡನೆ ಸಲೆ ಟೆಂ । ಟಣಿಸುವರು ಮಾಮಾಯೆನುತ ನೆರ । ರಣಭಯಂಕರ ಹೊಯ್ದ್ದನಾಸಾರಥಿಯು ಕರೆ‌ತಳವ ॥೫೯॥ ಹೆಸರುಗೊಂಡೊಡೆ ಕಿವಿಗಳಿಗೆ ಕರ್ಕಶವು ರಕ್ಕಸರೆಂಬಹೆಸರಿನ । ನುಸಿಗಳೊಳಸ್ಸೆರಿಸುತ ಕೊಟ್ಟುದು ಶಿವಶಿವಾಯೆನುತ ॥ ಹೊಸಮಸೆಯ ಹೊಗರಂಬುಗಳನೆ । ಚ್ಚಿಸಿದನು ವಿರೋಧಿಗಳ ಕೈಪ್ಸ್ಕಿ । ಯೆಸಕದಲಿ ಭುಜಭಾರಿಯಂಕವ ಹೊಕ್ಕು ಕಾವಿದರು ೬೦॥ ಓಡಲೀಯದೆ ಸಮರಗೊಡುತ ನಿ । ಭಾಡಿಸುತ ಮೇಲಿಕ್ಕಿದೊಡೆ ಕೈ । ಮಾಡಿಸುತ ಶರಪತಿಗೆ ಪೇಷವ ಕೊಟ್ಟು ಮನ್ನಿಸುತ ॥ ಖೇಡತನವನು ಬಿಡಿಸಿ ತಾ ಕೊಂ । ಡಾಡಿ ಕಾದಿದನ ರಸುಜಾತಿಯೊ । ಕೋಟಿ ಪಬಭವ ತನ್ನದೆಂಬಪದಸ್ತನಾರೆಂದ ॥ ೬೧ ॥ ಎಸುಗೆಯೊಳ್ಳಿತು ವಿವನ ಶರ ಲಂ । ಬಿಸಿದುದ್ದೆ ತಪ್ಪಲ್ಲತಪ್ಪ । ಲ್ಲಸುರನಹೆಯೋ ಬಾರು ಕೆಂಮಿರಾತ್ಮಜಾಯೆನುತ ॥ ಅಸಿಪರಶುಪಟ್ಟಸಮುಸುಂಡಿ । ಪ್ರಸರಧಾರಾಪೂರದಲಿ ಪ್ಕ್ । ಬಸಿಯೆ ರಕುತದ ಸಾವೆಸಾಲಿಡೆ ಬಲದೊಳೊಡೆದುಳಿದ ॥೬೨॥ ಉಬ್ಬುಗಳಿನಬುಧಿಯಲಿ ಮಿಗೆ ಡಾ । ವರಸುವುದೆ ಹುಲುಮಿಾನವಂತರ । ದರಸು ಹೇಳುವುದೇನು ಪೊಗದನು ದೈತ್ಯಜಲನಿಧಿಯು ॥ ಹರಿವ ಕೊರಳಿನ ಬಸಿವಬಂಬಲು । ಗರುಳ ಜರಿದ ಕಪಾಲದುರನೆ । ತ್ತರಕಶಾವಳಿ ಕರೆವುತಿರ್ದುದು ರೌದ್ರಮಯರಭಸ ॥ ೬೩ ॥ ಜಾಗು ದೈತ್ಯರ ಹರಿಬವಲಿ ಲೇ । ಸಾಗಿ ಕಾದಿದರಸ್ನುವೀಶನ । ತಾಗಿ ಬದುಕಿನವರಾರು ಕೆಚ್ಚುಳ್ಳವರು ಕಲಿತನದ ॥ ಆಗಲಿನ್ನಾವುದು ಕಡೆಗೆ ಕೈ। ಲಾಗು ನಿಮ್ಮಸುಗಳು ಶರೀರವ । ನೀಗಕಳವೆನೆನುತ್ತ ಬೊಬ್ಬಿರಿದೆಚ್ಚರತಿಬಲನ ॥೬೪॥ ಸಿಡಿಲ ಸುಳಿವರೆ ಗಿರಿಗಳಂಜುವು। ನಡುಗುವನೆಗರುಡನುಫಣಿಗಿಕೆಡು। ನುಡಿಯನುಡಿದೊಡೆ ದಿಟ್ಟರೆಂಬರೆ ಗರುವರಾದವರು ॥ ಘಪಘಪೆನುತ ಬಕಾಸುರನ ಮಗ । ನಡಸಿದನು ಕೂರಂಬಸಾತನ । ಕಡುಪಹೊಗಳುತ ಬೀಸಿವನು ಬಿರುಗದೆಯಲಾಖಳನ॥೬೫॥ ರಥಚಯವ ನುಗ್ಗೊತ್ತಿದನು ಸಾರಥಿಗಳನ್ನು ಸೀಳಿವನು ಸುಮಹಾ । ರಥರ ಬಿಂಕದಬಿಗುಹ ಮುರಿದನು ಹೊಕ್ಕು ಬೀದಿಯಲಿ ॥ ಶಿಥಿಲವಾಯಿತ್ತು ವೈರಿಬಲವತಿ । ಮಥನವಾಯಿತು ದೈತ್ಯರೊಳಿಗ । ಪೃಥವಿ ಲಘುತರವಾಗಿ ಫಣಿಪನ ಕೊರಳು ಸೈಮಾರೆ ॥೬೬॥ ಒರಸಿದನು ರಣದಲಿ ಹಿಡಿಂಬಾ । ಸುರನ ಮಕ್ಕಳ ಚೈದ್ಯಮಾಗಧ। ನರಕ ಕಿಮ್ಮೀರಕಜಟಾಸುರಸೂನುಸಂತತಿಯ ॥ ಬರಲಿ ಕರ್ಣದ್ರೋಣಗುರುಗಳು । ಜರಡಜೋಡಿಸಬೇಡ ಭೀಮನ । ನರನಬಯಸುವರೆನ್ನೊಡನೆ ಕೈಮಾಡಬೇಕೆಂದ ॥೬೭॥ ಎನಲು ಕವಿದುದು ಸೇನೆ ಕಂಗನೆ। ಕನಲಿ ಕರ್ಣದ್ರೋಣರಿಗೆ ನೀ। ನೆನಿತರವ ಘಡ ಬಾಯಬಡಿಕನು ಭೀಮಸುತನೆನುತ ॥ತನತನಗೆ ಕಾಲಾಳು ಮೇಲಾ । ಳನುಪಮಿತರೌಕಿದರು ಚಾಪ । ಧ್ವನಿಯೊಳಗೆ ನೆರೆ ಮೊಳಗೆ ಬಹುವಿಧವಾದ್ಯಘೋಷದಲಿ ॥೬೮॥ ಆಳಪಿಪ ನಿಮಗಂಜಪೆನು ಕಾ । ಲಾಳ ಹೊಯ್ಕೈನು ಕುದುರೆಕಾರರು । ಮೇಲು ವಾಯಲಿ ರಥರಥಿಕರಡಹಾಯ್ಸಿತೇರುಗಳ॥ ತೂಳಿಸಲಿ ಗಜದಳವನಿವರಿಗೆ। ಕೋಲು ತೊಡಚುವನಲ್ಲ ನೆರೆಹೀ। ಯಾಳಿಯುಳ್ಳೊಡೆ ಬರಲಿ ಕರ್ಣದ್ರೋಣಕೃಪರೆಂದ ॥೬೯॥ ಹಲಬರಸುರರು ಮಡಿದರಿವನ । ಗ್ಗಳೆಯನಿರುಳಿನ ಬವರದಾಯತ । ಶಿಖಿಪ್ರದೀಪ್ತಂಗನುತಲಿರಲಾಗುರುಕೃಪಾದಿಗಳು॥ ಅಳುಕದಿರಿ ಬಳಿಕೆನುತ ಭಕತಿಯಿ। ನೊಲಿಸಿದರಲಾ ಪಾಂಡವರು ಯದು । ಕುಲಲಲಾಮನನಮಲಗದುಗಿನವೀರನಾರಯಣನ॥ ॥೭೦॥

ಅಂತು ಸಂಧಿ ೧೫೪ಕ್ಕೆ ಪದ ೧೦೦೬ ಕ್ಕಂ ಮಂಗಳಮಸ್ತು

## ಹದಿನಾರನೆಯ ಸಂಧಿ.

|| ಸೂಚನೆ || ಚಂಡಬಲಕುರುಪತಿಗೆ ಮಲೆವರ | ಗಂಡನಿರುಳಿನಕಾಳಗದೊಳು | ದ್ದಂಡಭಟ ಕಲಿಕರ್ಣ ಕೊಂದನು ಭೀಮನಂದನನ ||

||ಪದ|| ಕೇಳು ಧೃತರಾಷ್ಟ್ರಾವನಿಪ ದೊರೆ | ಯಾಳನರಸುತ ಬಿಟ್ಟಸೂಠಿಯೊ | ಳಾಳುಕುದುರೆ ಯದಳವನಿಬ್ಬಗಿಗಳೆದು ದಳವುಳಿಸಿ || ಕೋಲತೊಡಚಿರೆ ಕರ್ಣಕೃಪಭೂ | ಪಾಲ ಕೈದುವ ಹಿಡಿ ನೃಪಾದಿ ಗಳೇಳಿ ಸಮ್ಮುಖವಾಗೆನುತ ಕೈಮಾಡಿ ಬೊಬ್ಬಿರಿದ|| ಚೆಲ್ಲಿತೀಬಲಜಲಧಿ ಭಟರ| ಲ್ಲಲ್ಲಿ ಮುಕ್ಕುರಿಕಿದರು ಸಬಳದ | ಸೆಲ್ಲೆಹದ ತೋಮರದ ಚಿತ್ರದಸರಿಯಸ್ಕೈಗರೆದು || ಘಿಲ್ಲಿಸಿದವಾನೆಗಳು ತೇರಿನ | ಬಲ್ಲಿದರು ತುಡುಕಿದರು ಕಂಬುಗೆ | ಯಲ್ಲಿ ಖುರ ಕುಣಿದಾಡೆ ಹೊಕ್ಕರು ರಾಯರಾವುತರು ||೨|| ಎಡಬಲನ ಹಿಂದಿದಿರಿನಲಿ ಕೆಲ | ಕಡೆಯ ದಿಕ್ಕಿನೊಳೌಂಕಿದರು ಬಲು | ಕಡಲಮಧ್ಯದ ಗಿರಿಯ ನಡರುತ ತೆರೆಗಳೊದೆದಂತೆ|| ಕೊಡಹಿದೊಷ್ಷೆ ಕಟ್ಸಿರುಹೆಗಳು ಬೆಂ| ಬಿಡದೆ ಭುಜಗನನಳಲಿಸುವವ್ರೋ| ಳಡಸಿ ತಲೆಯೊತ್ತಿದರು ಬೀಳುವಹೆಣನನೊಡೆದುಳಿದು ||೩|| ಹೊಕ್ಕಸುಭಟರು ಮರಳಿಬಿಲ ಖಳ | ಸಿಕ್ಕಿದನು ಸಿಕ್ಕಿದನು ಚಲಿಸುವ | ಚುಕ್ಕಿಗಳ ಹೊಯಿಬ್ಬೆಳಗುತ್ತೆನುತಸುರರುರವಣಿಸೆ || ಹೊಕ್ಕು ನಿಂದರು ನೀಡು ಹರಿಗೆಯ | ನಿಕ್ಕಿ ನಿಂದರು ತಮತಮಗೆ ಮೇಲಿಕ್ಕಿದರು ಧರೆ ಮುರಿಯೆ ಬಳಿದೆರೆ ಮುಸುಕಿ ಮುರಿವಂತೆ||೪|| ಅಗಡುದಾನವನಿವನು ಕಡ್ಡಿಗೆ| ಬಗೆವನೇ ಸಾಗರವನರವ| ಟ್ಟಿಗೆಯನಿಟ್ಟೊಡೆವಡಬನಲ್ಲಾ ನೀರ ಕುಡಿವವನು || ಹೊಗೆದುದೈ ಹೆಚ್ಚಾಳುಗಳ ನಗೆ ಮೊಗದ ಮೋಡಾಮೋಡಿಯಲಿ ಕೈ | ಮುಗುಚಿ ಕಳೆದನು ನಿಮಿಷದಲಿ ಹೇರಾಳರಾಸೆಗಳ ||೫|| ಕೆಲರ ಮುಮುಂವಿನಲಿ ಕೊಂದನು | ಕೆಲಬರನು ಹೊರಗೈಯ ಹೊಯ್ಲಲಿ | ಕೆಲಬರನು ಧನುವಿನಲಿ ಗದೆಯಲಿ ಹೊಯ್ದು ಕೆಲಕೆಲರ || ಕಲಕಿದನು ಬಲಜಲಧಿಯನು ಮೇ | ಲುಲಿದು ಕವಿದುದು ಮತ್ತೆ ಹೆಣನನು | ತುಳಿದು ಮುಗ್ಗಿತು ಮೇಲೆ ಬಿದ್ದುದು ಮುಸುಕಿತರಿಭಟನ ||೬|| ಪೂತುರೇ ಕುರುಸೈನ್ಯಶರಧಿಯ | ಘಾತವೆಂಟಗೆ ಸವೆದುದೋ ಕೈ | ಸೋತವೇ ಮಿಗೆ ಕೊಲುವೆನೆನುತ ಮುರಾರಿ ಗರ್ಜಿಸಿದ || ಈತಗಳಿಗಿದು ಮದ್ದೆನುತ ಮಾ | ಯಾತಿಶಯಯುದ್ಧದಲಿ ಬಲಸಂ | ಘಾತವನು ಬೆದರಿಸಿದನೇವಣ್ಣಿಸುವೆನಾನೆಂದ ||೭|| ಮಾಯದಲಿ ಹುಲಿಯಾಗಿ ಗರ್ಜಿಸಿ | ಹಾಯಿದನು ಕಲಿಸಿಂಹವಾಗಿ ಗ | ದಾಯುಧದಲಪ್ಪಳಿಸಿದನು ಭೈರವನ ರೂಪಾಗಿ || ಬಾಯಲಡಸಿದನಹಿತರನು ಕಂ | ಪಾಯುಧದ ನಿಲವಿನಲಿ ಸುಭಟರ| ಪಾಯಗೆಡಿಸಿದನೊಂದುನಿಮಿಷದೊಳೊರಸಿದನು ಬಲವ ||೮|| ಬೀಳಹೊಯ್ದನು ಬಿರುದರನು ಬಿರು | ಗಾಳಿಯಾಗಿ ವರೂಥಹಯವನು | ಕಾಳುಗಿಚ್ಚಾಗುರುಹಿದನು ಫಣಿಯಾಗಿ ತುಡುಕಿದನು || ಮೇಲೆ ಕವಿದುದು ಜಲಧಿಯಾಗಿನ್ನ | ಪಾಲನಿಕರದೊಳುರುಹಿದನು ಗಿರಿ | ಜಾಲವಾಗಿ ಘಟೋತ್ಕಚನು ಘಿಲ್ಲಿಸಿದನರಿಬಲವ ||೯|| ಎರಗಿದನು ಸಿಡಿಲಾಗಿ ಕಂಗಳ | ಲುರುಕಿಸಿದ ಮಿಂಚಾಗಿ ಮಳೆಯನು | ಕರೆದು ನಾದಿದನಾತಪತ್ರತನುತ್ರಸೀಸಕವ || ತುರುಗಿದನು ಹಯವಾಗಿ ಮಿಗೆ ಬೊ | ಬ್ಬಿರಿದನೊಂದೆಡೆಯಲ್ಲಿ ಸುಭಟರ | ನೊರಸಿದನು ದೊಂದೆಡೆಯೊಳೇನೆಂಬೆನು ಮಹಾದ್ಭುತವ ||೧೦|| ಸುರಿದಕರುಳಿನ ಸಿಡಿದಹಲುಗಳ | ಜರಿದತಲೆಗ

ಳ ಹಾಯ್ದ ಮೂಳೆಯ । ಹರಿದನರವಿನ ಬಿಗಿದಹುಬ್ಬಿನ ಬಿಟ್ಟಕಣ್ಣುಗಳ ॥ ಮುರಿದಗೋಣಿನ ಬಸಿ ವತೊರಳೆಯ । ಹುಪರಕುತದ ತರಿದಖಂಡದ।ಬಿರಿದಬಸುರಿನ ರೌರವದ ರಣಭೂಮಿ ರಂಜಿಸಿತು॥೧೧॥ ಗರುಡನುಬ್ಬುಟೆಗಹಿನಿಕರ ಜ । ರ್ಝರಿತವಾದವೊಲಿವನ ಕಡುನಿ । ಬ್ಬರದ ಧಾಳಿಗೆ ಧೈರ್ಯಗೆಟ್ಟುದು ಕೂಡೆ ಕುರುಸೇನೆ ॥ ಹೊರಳಿಯೊಡೆದುದು ಭಟರುಡಿದು ಮಡ । ಮುರಿಯೆ ಜವಗುಂದಿದರು ಬಿರುದರು । ನೆರೆದುದ್ಯೆ ಪುಭವಪ ಸೂರೆಗೆ ರಾಯ ಕೇಳೆಂದ ॥ ೧೨ ॥ ಧಾತುಕೆಟ್ಟುದು ದೊದ್ದೆಯೆಂದೇ । ಭೂತಳಾಧಿಪ ಬಗೆದೆ ತೆಗೆಯಾ । ಮಾತು ಹುಸಿ ಮರಳಿಪರು ನಿನ್ನಯಪಟ್ಟದಾನೆಗಳು ॥ ಭೀತಿಗೊಂಡರು ದ್ರೋಣ ಸೋಲಕೆ । ಸೇತುವಾದನು ಶಲ್ಯನಪಜಯ । ಮಾತೃಕಾಕ್ಷರನಾದನಶ್ವತ್ಥಾಮನಿಂದಿನಲಿ ॥ ೧೩ ॥ ಇವನ ಧೈರ್ಯವನಿವನಧಾಳಿಯ । ನಿವನ ಹೂಣಿಗತನದ ಹೊರಿಗೆಯ । ನಿವನ ಖಾತಿಯುನಿವನವೆಗ್ಗಳತನದ ಸಾಹಸವ ॥ ದಿವಿಜರಾನಲು ನೋಕಟದು ಆ । ಮ್ಮವರ ಪಾಡೇನ್ಯೆ ಪಲಾಯನ । ತವನಿಧಿಯಲ್ಲೈ ನಮ್ಮಬಲ ಧೃತರಾಷ್ಟ್ರ ಕೇಳೆಂದ ॥ ೧೪ ॥ ಹೋಯೆನುತಬೊಬ್ಬಿಡುವ ಸುಭಟರ । ಬಾಯ ಹೊಯ್ಲೊಯ್ಯಡಬಡಿಸುತಿದೆ । ಆಯುಧವನೀಡಾಡಿ ಕೊಯ್ಕೊಯ್ಯೋಡಹರಿಗೆಗಳ ॥ ರಾಯ ಕೊಂದರು ಕೊಲಲಿ ಸುಕೃತವು । ಬೀಯವಾಗಲಿ ಸಾವು ರಕ್ಕಸ । ನಾಯಕ್ಕೆಯಲಿ ಸಾಯೆವೆನುತೊಡೆ ಮುರಿದುದತಿರಥರು ॥ ೧೫ ॥ ಇಳಿದು ಕುದುರೆಯ ಬಿಸುಟು ರಥಸಂ । ಕುಳಕೆ ಹಾಯ್ಕುವಕ್ಕೆದುಕಾರರ । ಬಳಚಿದಾಯುಧತತಿಗೆ ನೂಕುವಜೋಡು ಸೀಸಕಕೆ ॥ ಕಳಚಿದಾಭರಣಾತಪತ್ರಾ । ವಳಿಗೆ ತಾಣೆನು ಕಡೆಯನೀಪರ । ಕೊಲೆಗೆ ಭಂಗಕೆ ನಿನ್ನ ಬಿರುದರು ಬಂದುದಿಲ್ಲೆಂದ ॥ ೧೬ ॥ ಸಿಡಿದತಲೆಗಳ ಬಳಿವಡೆದಸಾ । ಲಿಡುವರಕುತದಲೆರಡುಬಲದಲಿ । ಹಿಡಿದದೀವಿಗೆ ನಂದಿದವು ಕುಂದಿದವು ಚತುರಂಗ ॥ ಮಡಮುರಿಯುಮುಯುಹಾಯ್ದು ಸುಭಟರ । ನಿಡುಮುಸುಕು ಮೋಹಿಸಿತು ಮುರುಹಿನ । ಕಡುಹುಕಾರರು ಕೇಣಿಗೊಂಡರು ಬಹಳದುಷ್ಕೃತವ ॥ ೧೭॥ ದ್ರೋಣನೆಂಬುವ ಮುನ್ನವೇ ನಿ । ರ್ವಾಣವೀಕ್ಷಿತನಾದನಾತನ । ಕಾಣೆನ್ಯೆ ಗುರುಸುತಗದೃಶ್ಯಾಂಜನವೆ ಸಿದ್ಧಿಸಿತು ॥ ಹೂಣಿಗರು ಮತ್ತಾರು ಶಲ್ಯ । ಕ್ಷೋಣಿಪತಿಕೃತವರ್ಮಕೃಪರತಿ । ಜಾಣರೋಟದವಿದ್ಯೆಗೆನುತಿರ್ದುದು ಭಟಸ್ತೋಮ ॥೧೮॥ ಏನಹೇಳುವೆನಂದು ಬಹಳಾಂ । ಭೋನಿಧಿಯಲೆದ್ದುರಿಯ ಧಾಳಿಗೆ । ದಾನವಾಮರರಿಂದುಮೌಳಿಯ ಮರೆಯಹೊಗುವಂತೆ ॥ ದಾನವಾಚಲಮಥಿತಸೇನಾಂ । ಭೋನಿಧಿಯ ಪರಿಭವದೊಳೆಸೆದುರಿ । ಗಾನರೇಂದ್ರರು ಬಂದು ಹೊಕ್ಕರು ರವಿಸುತನಮರೆಯ ॥ ೧೯ ॥ ಶರಣುಹೊಕ್ಕರು ಬಂದು ಮಕುಟದ । ಗರುವರವನೀಪಾಲಕರ ಮೋ । ಹರಕೆ ತೋರ್ಪಟ್ಟವರು ಭಾರಿಯಬಿರುದಿನತಿರಥರು ॥ ದುರುಳದೈತ್ಯನ ಬಾಧೆಗವಪರಿ । ಹರಿಸಲರಿಯೆವು ಕರ್ಣನೀನೇ । ಮರಳಿ ಸೇನೆಯ ರಕ್ಷಿಸೆಂದುದು ನಿಖಿಳಪರಿವಾರ ॥ ೨೦ ॥ ತಳಿತಮುಸುಕಿನ ಬೆರಳಮೂಗಿನ । ನೆಲನನೋಟದ ಮೈಯತೊಕದ । ಝಳದಸುಯ್ಲಿನ ಮೊಗದ ಮೌನದ ನಸಿದನೆನಹುಗಳ ॥ ತಳಿತಕಡುಹಿನ ಬೀತಬಿರುದಿನ । ಬಲಿದಭಂಗದ ನೃಪತಿಗಳನ । ಗ್ಗಳೆಯರವಿಸುತ ಕಂಡು ಹೊಗಳಿದನಾಘಟೋತ್ಕಚನ ॥ ೨೧ ॥ ಶಿವಶಿವಾ ಕೌರವನ ಸುಭಟರು । ದಿವಿಜರಿಗೆ ವೆಗ್ಗಳರು ನಿನಗಿಂ । ದಿವರುಸೋತರು ಧೂತು ಮಾನವ ನೀಕೃತಾರ್ಥನಲೆ॥ ಇವನ ಪಾಡಿನ ಸುಭಟರೇ ನ । ಮ ವರು ಗೆಲುವೇನಿವನದೇ ಮಾ । ದವನ ಸೂತ ಸುತಂತವಿರು ಜಗುವಾತನಸು

ಯೆಂದ ॥ ೨೨ ॥ ಸಾಕು ದೈತ್ಯನ ಕೆಡಹಿ ಸೇನೆಯು । ಸಾಕು ಸುಭಟರು ಬಾಯಬಿಡುತಿದೆ । ನೂಕು ನೂಕವುರಾಲಯಾನು ತಡೆ ತಡವಮಾಡಟರು ॥ ಆಕೆವಾಳರು ಪಿಗಡೀರುಪರ । ನೇಕಬಂದೆ ತಲ್ಲಣಾವ ತಗಹಿನ । ಲೇಕ ಕಾಲಕ್ಷೇಪವೆಂದನು ಕೌರವರಾಯ ॥೨೩॥ ದುಗುಡವ್ರೋ ಮ್ರೋವ್ವಕ್ರಮಾಗ್ನಿಯ । ಕಡುಹುಗಳ ತನಿಹೊಗೆಯೊ ರಾಯರ । ಮೊಗವ ನೋಡೈ ಕೀರ್ತಿಕಾಮಿನಿ ಕಪಿದಕತ್ತಲೆಯೊ ॥ ಬಿಗಿದಭೀತಿಯು ಮೋರೆಗಳ ಸೂ । ರೆಗಳೊ ಸವಿವಾತುಗಳ ಸೋನೆಯೊ । ಸೊಗಸುಕಾರರು ನಿಂದನಿಲವನು ಕರ್ಣನೋಡೆಂದ ॥ ೨೪ ॥ ವಿಗಡತನವನು ವಹಿಲದಲಿ ಕೈ । ಮುಗುಚಿ ಕಳೆದನು ಸೂಸಕದ ಹೂ । ಣಿಗತನವ ಸೊನ್ನಾರವಿದ್ಯೆಯ ಸಾಹಸೋನ್ನತಿಯ ॥ ಸೊಗಸುಮುಟ್ಟಿಸಿ ಸುಲಿವರಸ । ವಾಟಗಳನಿವರವಿಡಾಯಿಗಳ ನಂ । ಬುಗೆಯ ಕೇಣವ ಪಾಡುಕಾರರ ಕರ್ಣನೋಡೆಂದ ॥ ೨೫ ॥ ನಡೆಯು ತೆಡಹಿತ ಪಟ್ಟದಾನೆಯು । ಪಿಡಿಯು ಹೊಯ್ವರೆ ಜೀಯ ರಣವ । ಗಡವು ನವುಗಿದು ರಾತ್ರಿ ದೈತ್ಯರಿಗಿದುವೆ ನಡುಹಗಲು ॥ ಮೃಡನನೊಡನವಸರಕೆ ಬಗೆಯದ । ಕಡುಹುಕಾರರು ನಿನ್ನವರು ಕಡೆ । ನುಡಿದು ನೋಯಿಸಲೇತಕೆಂದನು ಕರ್ಣಕುರುಪತಿಗೆ ॥ ೨೬ ॥ ತಾಗಿ ವಜ್ರವು ಮುಕ್ಕುಗಳೆವಡೆ । ಸಾಗರವ ಹೊಗಲೇಕೆ ಗಿರಿಗಳು । ಹೋಗಲಿನ್ನಾವಮಾತು ಮಿಾಂದದೈತ್ಯನುಪಟಳವ ॥ ಈಗ ಮಾಣಿಸು ನಮ್ಮ ಸುಭಟರು । ಯೋಗಿಗಳವ್ರೋಲ್ದಂಡಹೀನರು । ಬೇಗವಮಾಡಿನ್ನುಮರೆವುವನು ತರದು ಬಿಸುಡೆಂದ ॥ ೨೭ ॥ ಕಳೆದಪಿಾಸಲು ಶಕ್ತಿಪಾರ್ಥನ । ತಲೆಗೆ ಬೈಚಿಟ್ಟಿಹುದು ಯಾಗಳೆ । ಕಳೆದನಾದೊಡೆ ಮುಂದೆ ಫಲುಗುಣನೆನ್ನಲೆಕ್ಕಿಸನು ॥ ಉಳಿದಬಾಣಂಗಳಲಿ ದೈತ್ಯನ । ಗೆಲುವುದುಬದಕಾವಹದನೋ । ತಿಳಿಯಲರಿಯನು ಜೀಯ ಯೆಂದನು ಕುರುಪತಿಗೆ ಕರ್ಣ ॥ ೨೮ ॥ ಈಗಲೀದಾನವನ ಬಲೆಯಲಿ । ತಾಗಿ ಸಿಲುಕಿತು ನಮ್ಮ ಮೋಹರ । ಮೇಲೆ ಫಲುಗುಣಸಾರು ಗೆಲುವರು ಮರಣ ತಮಗಾಗೆ ॥ ನೀಗಿ ಕಳೆ ಕೊಲೆಗಡಿಗನನು ಜಯ । ವಾಗಲೀಗಲು ಮುಂದೆ ನರನು । ದ್ಯೋಗಕಾರ್ಯವೆವು ಚಿಕಿತ್ಸೆಯನೆಂದನವನೀಶ ॥ ೨೯ ॥ ಆದೊಡಮರವಿರೋಧಿಯಸುವನು । ಸೇದುವೆನು ಸರಿಸದಲಿ ನಿಂದೊಡೆ । ನಾದುವೆನು ನಿಟ್ಟೊಡಲ ರಕುತದಲಖಿಳದಿಗುತಟವ ॥ ಕಾದುವರು ನಮ್ಮವರು ಕಳಚಿದ । ಕೈದುವನು ಕೈವಶವ ಮಾಡಿ ಪಿ । ನೋದವನು ನೀವ್ನೋಡಿಯೆಂದನು ಕರ್ಣನರಸಂಗೆ ॥ ೩೦ ॥ ಇತ್ತಲೈ ದನುಜೇಂದ್ರಕದನವ । ನಿತ್ತಲಿತ್ತಲು ಗರುವಸುಭಟರ । ಕತ್ತಲೆಯೊಳೋಡಿಸಿದಕಡುಹನು ತೋರು ನಮ್ಮೊಡನೆ॥ ಮೃತ್ಯು ನಿನಗಾನನ್ನೊಡನೆ ತಲೆ। ಯೆತ್ತಿ ನೋಡೆನ್ನನುತ ಬೊಬ್ಬಿರಿ । ಯುತ್ತ ದೈತ್ಯನ ತರುಬಿದನು ಬಲವೆಲ್ಲ ಬೆರಗಾಗೆ ॥ ೩೧ ॥ ಎಲವೊ ಗಂಡಸುವಹೆಕಣಾ ನೀ । ಮಲೆತು ನಿಂದುದು ಸಾಲದೇ ಸುರ । ರೊಳಗೆ ಮಲೆತರ ಸೀಳುವೆನು ಮಾನವರ ಪಾಡೇನು ॥ ಕಲಿತನಕೆ ಮೆಚ್ಚಿದೆನು ಅಳಿದರೆ । ಮೊಳೆಯದಿಹುದೇ ಕೀರ್ತಿ ಯಿಾಬಲ । ದೊಳಗೆ ದಿಟ್ಟನು ಕರ್ಣನೀನನುತಸುರಮಾರಾಂತ ॥ ೩೨ ॥ ತಾನೆತನ್ನನು ಹೊಗಳಿಕೊಂಬನೆ । ಮಾನನಿಧಿಯಾದವನು ಸಾಕೀ । ಮಾನವರ ಗರುವಾಯಿ ಭಾರಿಯಭಂಡವಿದ್ಯೆಗಳು ॥ ಏನುಹೊಸತೆಂತೆಂದು ಶರಸಂ । ಧಾನವುಳಿದಗ್ಗಳಿಕೆಗಳ ನೀ । ನಾನಬಲ್ಲೊಡೆ ಬಿಲ್ಲ ಹಿಡಿಹಿಡಿ ಕಾಣಲಹುದೆಂದ ॥ ೩೩ ॥ ಘಡ ತುಟಾಲಸಿ ನುಡಿವಜಿಹ್ವೆಯ । ಹೆಡತಲೆಯೊಳುಗಿವೆನುಕಣಾ ಕೇ । ಳೊಡಕಿ ತನ್ನಲಿ ಬದುಕುವವರಾಂದ್ರಯಮರೊಳಗೆ ॥ ಕಡು

ಹುಕಾರರ ಗರ್ವವಿಷಗಾ। ರುಡವನೆನ್ನಲಿ ನೋಡುನೋಡೆನು । ತೊಡನೊಡನೆ ಶರವಳೆಯ ಕರೆದನುಪ ವನಸುತಸೂನು॥೩೪॥ ದಾನವರ ಧಕ್ಕಡರು ಧೈರ್ಯದ । ದಾನಶೀಲರು ಗಾಯವನು ಗಿರಿ । ಯಾನಬಾರದು ಮುಷ್ಟಿಬಲಪೆಗ್ಗಳರು ಸತ್ವದಲಿ ॥ ಈನಿರಂತರಬಾಣರಚನೆಯ । ನೀನು ನೋಡಭ್ಯಾಸವಿದನಾ । ಯೇನಹೇಳುವೆಲೇಸೆನುತ ಕಲಿಕರ್ಣ ತೆಗೆದೆಚ್ಚ ॥ ೩೫ ॥ ಹಾರಿದವು ಗರಿಸಹಿತ ದೇಹದ । ಡೋರುಗಳೆದಂಬುಗಳು ನೆತ್ತರ । ಜೋರು ಮಸಗಿತು ಬೆಗಡಜವ್ವಗಿನ ಜಗಿಯ ರೌಕುಳದ ॥ ಏರೆಬಾಯ್ಗಳ ಖಂಡದಿಂಡೆಯ ಸೂರೆಗೊಂಡವು ಹಿಂದಣಂಬುಗ । ಳಾರೆನಭಿವರ್ಣಿಸಲು ಕರ್ಣಘಟೋತ್ಕಚಾಹವವ ॥ ೩೬ ॥ ತಾರಕನ ಕೈಟಭನ ಜಂಭನ । ವೀರಮಹಿಷನ ಕಾಲನೇಮಿಯ । ತಾರಕಾಕ್ಷನ ಕುಂಭಕರ್ಣನ ಗುಹನ ರಾವಣನ॥ ಆರುಭಟೆ ರಣದುಬ್ಬಟೆಯ ಜ । ಜ್ಝರತನವಿವನೊಬ್ಬನಲಿ ಕೈ । ವಾರವೇ ನೆರೆ ಕಾಣಲಾಯ್ತೆಂದುದು ಸುರಸ್ತೋಮ ॥ ೩೭ ॥ ನಿಲುವೊಡಸುರನ ಮುಂದೆ ಕರ್ಣನೆ। ನಿಲುಹಬೇಹುದು ಕರ್ಣನುರುಬೆಗೆ। ನಿಲುವೊಡೀಯಮುರಾರಿಗೊಪ್ಪುವುದೈ ಮಹಾದೇವ ॥ ಉಳಿದಭೂರಿಯುಬಣಗುಗಳು ವೆ । ಗ್ಗಳೆಯರೇ ಸಂಗ್ರಾಮದಲಿ ಕುರು । ಬಲದೊಳಗೆ ನೋಡಿದರೆ ಸರಿಯಹ ಸುಭಟರಿಲ್ಲೆಂದ ॥೩೮॥ ಎರಡುಬಲರಿವರಿಬ್ಬ ರಾಹವ । ದುರವಣೆಯನೇ ನೋಡುತಿರ್ದುದು । ಸರಿ ಮಿಗಿಲುಕಾದಿದರು ಶಿವಶಿವ ಭಾರಿಯಂಕವಲೆ ॥ ಸರಳು ತೀರಲು ಸುರಗಿತೋಮರ । ಪರಶುಹಿರಿಯುಬ್ಬಣದಲೀತನು । ಅರಿಯನಿಟ್ಟೊಡೆ ತರಿದು ಪರಿಘದೊಳಿಟ್ಟನಿನಸುತನ ॥೩೯॥ ಒಗುವಕಿಡಿಗಳ ಬಾಯಧಾರೆಯ । ಹೊಗರ ಹೊಗೆಗಳ ಸೆಗಳಿನುರಿನಾ । ಲಿಗೆಯ ಭೋಂಕಾರವದ ಮುಂಮೊನೆ ಶೂಲವೈತರಲು ॥ ನಗುತ ಮೂರಂಬಿನಲಿ ಕೈದುವ । ತೆಗಸಿದನು ನೆರೆಹತ್ತುಶರದಲಿ । ಹಗೆಯ ಹೇರುರದೊಳಗೆ ಹೂಳಿದು ಕರ್ಣಬೊಬ್ಬಿರಿದ ॥೪೦॥ ಪರಿಘದಲಿ ಕರನಾಳದಲಿ ಮಿಗೆ । ಬೆರಸಿದೊಡೆ ಗಿರಿ ತೆರಳಬಲ್ಲುದೆ । ಹರಮಹಾದೇವಾವಸತ್ವವೊ ದಾನವೇಶ್ವರನ ॥ ಅರಿಯೆ ಶರಹತಿಗೊಡಲು ನೆರೆಜ । ಜ್ಝರಿತವಾದುದು ನೊಂದುದೀಬಲ । ಬೆರಸಿ ಪರಿಘದಲಿಟ್ಟನಂಬುಜಬಂಧುನಂದನನ ॥೪೧॥ ತಿರುಗುತೈತಹಪರಿಘಕಾವೆಡೆ । ಗಿರಿಗಳಡಿಮೇಲಹವು ನಾವಿ । ನ್ನರಸ ಹೇಳುವುದೇನು ಕರ್ಣನಬಾಹುವಿಕ್ರಮವ ॥ ಪರಿಘವು ನೆಗೆ ವಾಯವಾದುದು । ಎರಡುಶರದಲಿ ಸಾರಥಿಯನಿ । ಟ್ಟೊರಸಿದನು ಹದಿನೈದುಶರದಲಿ ರಥದಕುದುರೆಗಳ ॥೪೨॥ ಸಮರಸಾಧನ ಸವೆಯೆ ಕೋಪದ। ತಿಮಿರ ಗರಿಗಟ್ಟಿತು ಮಹಾವಿ। ಕ್ರಮನ ಚಳಕವನೇನಹೇಳುವೆ ರಥದ ಬಳಸಿನಲಿ ॥ ಸಮತಳಿಸಿ ಕೈದುಗಳ ಮಳೆಯನು । ದ್ಯುಮಣಿತನಯನಮೇಲೆ ಕರೆದನು । ನಿಮಿಷದಲಿ ಪರಿಹರಿಸಿ ದೈತ್ಯನನೆಚ್ಚನಾಕರ್ಣ ॥೪೩॥ ತೂರಿದವನಿರೆಹೊಟ್ಟುಗಾಳಿಗೆ । ಹೋರಿದರೆ ಕುಲಗಿರಿಯ ಬಯಸಿಕೆ । ಜಾರುವುದೆ ನಿನ್ನೆಸುಗೆಗೆಮ್ಮಾಯ ಭಯ ಕಟಕದಲಿ ॥ ತೋರಲಿಲ್ಲೆಣೆ ಜಗದೊಳೀಲೆಯ । ಕಾರನೀನಹೆಯೆನುತ ರಿಪುಬಲ । ಸೂರೆಗಾರನು ಕವಿಸಿದನು ಕಲಿಕರ್ಣನಾಖಿಳನ ॥೪೪॥ ಘಡ ದೊಠಾರಿಸಿ ನಿಂದರೊಡಲಿ । ಕ್ಕಡಿಯ ಮಾಡುವೆನೆಲವೊ ನಿನ್ನಯ । ಗಡಣಿಗರ ಕರೆ ಕಾಯ್ದು ಕೊಳಲಿ ಸುಯೋಧನಾದಿಗಳ ॥ ಮಡಮುರಿದು ವೋಡಿದೊಡೆ ರಕುತವ । ಕುಡಿಸುವೆನು ಖಂಡೆಯಕೆನುತ ಕೊಲೆ । ಗಡಿಗನೌಕಿದೊಡದಿರಬಿಟ್ಟನು ಕರ್ಣ ಕೆಲಸಿಡಿದ॥೪೫॥ ಅಹಹ ಶಿವಶಿವ ದೈತ್ಯರಾಹು। ಗ್ರಹಣವಾಯಿತೆ ಕರ್ಣಸೂರ್ಯರ। ಮಹಿಮೆ ತಗ್ಗಿತು ಕಟಕ

ಟಾ ಯೆಂದೆನುತ ಬಲ ಬೆದರೆ ॥ ಅಹಿತನುಪಟಳಕೆಳುಕಿ ಕೆಲದಲಿ । ಮಿಹಿರನಂದನ ನಿಂದನೆಂಬಿನ । ಲ
ಹರಿ ಮಸುಗಿತು ಖಳನ ಕಡುಗವನಸೆಕ್ಷಣಕೆ ಕಡಿದ ॥೪೬॥ ಚಾಪವರಿದನು ದನುಜ ಮಡ್ಡುಕ । ತಾರಿ
ಯಲಿ ಕರ್ಣಾಸ್ತ್ರಧಾರಾ । ಸಾರದಲಿ ಮೈನನೆದು ಹೊಣಲಿಡುವರುಣವಾರಿಯಲಿ ॥ ಆರಿವನು ಹೈ
ಡಿಂಬಿ ನಿಶ್ಚಯ । ಚಾರುಭೀಮಜನೀತನಾರು ಬ । ಕಾರಿನಂದನನೆನಲು ಬಲಮಿರುಳಸುರಮಯಮಾ
ಯ್ತು ॥೪೭॥ ಅಣೆದನಶ್ವತ್ಥಾಮನನು ತತ್। ಕ್ಷಣದಲರಸನ ತಾಗಿ ದ್ರೋಣನ। ಕೆಣಕಿದನು ದುಶ್ಶಾಸ
ನನ ಮಸೆಗಾಣಿಸಿದ ಕೃಪನ ॥ ರಣದೊಳೋಡಿಸಿ ಮುರಿದು ಕರ್ಣನ । ಕೆಣಕಿ ನಿಂದನು ಮತ್ತೆ ಸಮ
ರಾಂ । ಗಣದ ಚೌಪಟಮಲ್ಲನಿತ್ತನು ಪಡೆಗೆ ತಲ್ಲಣವ ॥೪೮॥ ಬಿರಿಯಕಕ್ಕುಲಿತೆಯಲಿ ಕರ್ಣನ । ಮ
ರೆಯಹೊಕ್ಕವು ಕರ್ಣನೀತನ । ತರುಬಿದನಲಾ ಶಕುತಿಯಾವೆಡೆಯೆಂದು ಕೆಲಕೆಲರು ॥ ಕರುಬತನವೇ
ಕಕಟ ಪುಣ್ಯದ । ಕೊರತೆ ನಮ್ಮದು ಕರ್ಣನೇಗುವ । ಮಿರಿತಕಂಜುವುದಾನೆ ಬಾಹಿರರೆಂದರುಳಿದವರು ॥
॥೪೯॥ ಕಾರಿಸುವೆನೆವನೆಸುವ ಮಿಗೆ ಮೈ। ದೋರಿ ನಿಂದೊಡೆನಿಮಿಷ ಹಲುಬಾ। ಯಾರದಿರಿ ಕಳ್ಳೇರು
ಕಾರನ ಕಡಿವ ಹರಹುವೆನು ॥ ಜಾರದಿರಿ ಯೆನುತಭಯಹಸ್ತವ । ತೋರಿ ತುಡುಕಿದನುಗ್ರದಾಳಿ
ಯ। ತೂರುಗಿಡಿಗಳ ತುಡುಕಿದುರಿಯ ಮಹಾಸ್ತ್ರವನು ಕರ್ಣ ॥೫೦॥ ತಳಿತಕಿಡಿಗಳ ಕೈದುವಿನ ಮೈ।
ಜಳದ ದಾಳಿಯೊಳಭಯಬಲದ । ಗ್ಗಳದಹರುಷವಿಹಾರಶರಧಿಯ ಕಾಲುವೆಯೊಳಾಯ್ತು ॥ ಬಳೆ
ಯಚೌರಿಗಳೆಸೆಯೆರೌದ್ರಾ । ವಳಿಗಳಣಸಿನ ಹೊಗರನುಗುಳುವ । ಹೊಳೆವಧಾರೆಯ ಭಾರಿಯಸ್ತ್ರ
ವ ತೂಗಿದನು ಕರ್ಣ ॥೫೧॥ ಕಾಯಲಾಪೊಡೆ ದನುಜ ಕರೆ ಕಮ । ಲಾಯತಾಕ್ಷನನಿಂದು ಬದುಕುವ।
ಪಾಯವುಳ್ಳೊಡೆ ಬೇಗ ಬೆಸಗೊಳು ಭೀಮಫಲುಗುಣರ॥ ಆಯುಧಕೆ ಕರವಿಟ್ಟೆನೈ ನಿ । ನ್ನಾಯುಷವ
ಹಿಂದಿಕ್ಕಿಕೊಂಬನ । ತಾಯೆನುತ ಬೊಬ್ಬಿರಿದು ಶಕ್ತಿಯೊಳಿಟ್ಟನವನುರವ ॥೫೨॥ ಆರಿದನ, ಪರಿಹ
ರಿಸುವನು ಜಂ । ಭಾರಿ ಕೊಟ್ಟನು ಕಮಲಭವಕಾ । ಮಾರಿಗಳಿಗುಬ್ಬಸದಕೈದುವನೀಗಳಿಂದಿವನು ॥
ಧಾರೆಯಲಿ ದಳ್ಳಿಸುವಕಿಡಿಗಳ । ಭೂರಿಯಾಯುಧವಸುರನೆದೆಯನು । ಡೋರುಗಳೆದುದು ಹಾಯ್ದು
ಹೋದುದು ಅಸು ಕಳೇಬರವ ॥೫೩॥ ಆರಿ ಬೊಬ್ಬಿರಿವುದನು ಕಂಡುದು । ದಾರಕೆಕಣೆಯಮ ಅಸುರನ
ಸು ಬಲು । ಭಾರಿಯೊಡಲೊಳು ವುಡಿದು ಬಿದ್ದುದು ಬಿರಿದ ಗಿರಿಯಂತೆ ॥ ತೇರುತುರಗಪದಾತಿಕರಿ
ಘಟೆ । ವೈರಿಬಲದಲಿ ಯಸುರನಿಂದವೆ । ತೀರಿತೊಂದಕ್ಷೋಣಿಯಸುರನು ಬಿದ್ದಭಾರದಲಿ ॥೫೪॥ ತ
ರಣಿಯೌರಸಪುತ್ರನೀತನ । ಕರಿಯಿರುಳುಮಯನಾಮದೇವರ । ಕರುವಿನಂದದೊಳಸುರನಿದಿರೊಳಗಾ
ರಿಗವಮಾನ ॥ ಅರಸಚಿತ್ತೈಸೇನಹೇಳುವೆ । ನುರುತರದ ವಿಜಯಾಭ್ಯುದಯ ಮಿಗೆ । ಮೊರೆದುದಿದು
ಕಲ್ಪಾಂತಸಾಗರದಂತೆ ಕುರುಸೇನೆ ॥೫೫॥ ಕುರುಬಲದ ಕಳಕಳದ ಹವಣ । ಲ್ಲರಿಬಲದ ಸಂತೋಷವಿ
ದು ಮುರ । ಹರನ ಮಂತ್ರವು ಜೀಯ ಸೂಳೈಸಿದನು ಭುಜಯುಗವ ॥ ಗರಳವಿಲ್ಲದಕುಪಿತಫಣಿ ಹಲು।
ಮೊರೆದು ಮಾಡುವುದೇನು ಕರ್ಣನ । ನೊರಸಿದೆವು ಹೋಗೆನುತ ಸಂತೈಸಿದನು ಪಾಂಡವರ ॥ ೫೬ ॥
ಸಾರಿದನು ಶರಮಂಚವನು ಭಾ । ಗೀರಥೀನಂದನನು ಕರ್ಣನ । ಬೇರುಹರಿದದ್ರುಮದವೋಲ್ಗತಶೌರ್ಯ
ನಿನ್ನನುತ ॥ ಭಾರಿಯಾಳ್ಕೈ ದ್ರೋಣನಿಂತನು। ತೀರಿದನು ವರಪಾಂಡುಸುತರಿ । ನ್ನಾರ ಮುರಿಯರು
ವೀರನಾರಾಯಣನ ಕರುಣದಲಿ ... ... ॥೫೭॥

ಅಂತು ಸಂಧಿ ೧೬ ಕ್ಕೆ ಪದ ೧೦೬೩ ಕ್ಕಂ ಮಂಗಳಮಸ್ತು.

## ಹದಿನೇಳನೆಯ ಸಂಧಿ.

ಸೂಚನೆ || ಇರುಳಸಮಯದೊಳು ಭಯರಾಯರ | ಗುರುವಿರೋಧಿಮಹೀಶಸೇನಾ | ಶರಧಿಯ
ನು ಕಲಕಿದನು ಗೆಲಿದನು ಮಕುಟವರ್ಧನರ ||

ಪದ || ಕೇಳು ಧೃತರಾಷ್ಟ್ರಾವನಿಪ ನಿ | ಸ್ಸಾಳನವರಾಳನು ವಿಭಾಡಿಸಿ | ನೀಲಗಿರಿಯೊಡೆಯೊಕ್ಕುದೆನೆ ಖಳನೊಡಲು ನಿಡುಗೆಡೆಯೆ || ಕಾಳಗದ ಕೈಚಳಕದವರು | ಬ್ಬಾಳುತನವನು ಕೆಡಿಸಿ ತಿಮಿರದ | ಥಾಳಿತೆಗೆದುದು ಬಿಗಿದಕತ್ತಲೆವೊಗೆದುದಂಬರವ ||೧|| ಇನ್ನು ಬದುಕಿದೆವೆಮಮ ರಕ್ಕಸ | ಕುನ್ನಿಯಗೂಳಿಗವಡಗಿತೆಂದೇ | ನಿನ್ನವರ ಸುಮ್ಮಾನವುಕ್ಕಿತು ಸುಕ್ಕಿತತಥೀತಿ || ಇನ್ನು ಸಡಿ ಘಡ ಸೋಂತದನುಚರ | ಬೆನ್ನೊಳುಗವೆವು ಕರುಳಸಾಹವ | ಕೆನ್ನ ತನ್ನನು ಬಿಡಿಯೆನುತ ಗರ್ಜಿಸಿತುಪಂವಾರ ||
||೨|| ಅಂಗವಣೆ ಮನದಲ್ಲಿ ಪಯಣದ| ಮುಂಗುಡಿಯ ದುಮ್ಮಾಯ ಕೈಯಲಿ | ಸಿಂಗವಾಯಿತು ಸಮಯವೆರಡೊಡ್ಡಿನಲಿ ಸುಭಟರುಗೆ || ಕಂಗಳನು ಕಾಲರುಳರಕ್ಕಸಿ | ನುಂಗಿದಳು ಸಾವೇನನುಸುರುವೆ | ನಂಗಪಿಸಿ ಕಡುಗಲಿಗಳಿಂದಾಡಿದರು ತಮ್ಮೊಳಗೆ ||೩|| ಬಳಗೊಳಗೆ ಹೊಯ್ದಾಡಿ ಹೊರಳುವ | ಬಲುಭಟರನಗಿದೊಗುವಕತ್ತಲೆ | ಯಳುಕಸಿತು ಕೋಳಾಹಳದ ಭಯ ಚಾತುರಂಗದಲಿ || ಬಲಿದತೂಕಡಿಕೆಗಳು ನಸುಬೆದ | ರೊಲವು ಹೆಚ್ಚಿದಝಳವರ್ಝಂಪಿನ| ಬಲೆಗೆ ಸಿಲುಕಿದಬಲವನರ್ಜುನದೇವನೀಕ್ಷಿಸಿದ ||೪|| ಶಿವಶಿವಾ ಬಲುಬಳಲಿರೆಂದಾ | ಹವದೊಳಗೆ ಕಡುಗೈದು ನೂಕಿತು | ಬವರವುಬ್ಬಿದತಿಪುರವ
-ಳಯಲಿ ಸಾಕು ರಣವೆನುತ || ಟಪಿಜಪತಿಸುತನೆದ್ದು ಸೇನಾ | ನಿವಹದಲಿ ಸಾರಿದನು ಲಗ್ಗೆಯ | ರವವ ನಿಲಿಸಿದನಖಿಲ ಘನಗಂಭೀರನಾದದಲಿ ||೫|| ಬಳಲಿದರಿ ಹಗಲಿರುಳು ಕಾಳಗ | ದೊಳಗೆ ಕೈಮಾಡಿದರ ಕಗ್ಗ | ತ್ತಲೆಯ ಬಲುಬಂದಯಲಿ ಸಿಲುಕಿತು ಕಂಗಳಂಗವಣೆ || ನಳಿನರಿಪುವುದಯದಲಿ ಬೆಳುದಿಂ | ಗಳಲಿ ಕೈದುವ ಕೊಳ್ಳಿ ನಿದ್ರೆಯ | ನಿಳೆಯ ಬಿಡಬೇಡೆಂದು ಸೇನೆಗೆ ಸಾರಿದನು ಪಾರ್ಥ ||೬||
ನರನ ಮಾತಿಂ ಮುನ್ನ ನಿದ್ರಾ| ಭರದ ಭಾರಿಯ ಹೊರೆಯಲಿದ್ದರು | ಪೊರಗದರು ಸಡಲಿದವು ಧನು ಕೈದುಗಳು ಕೈಗಳಲಿ || ನೆರೆದು ಸುರಪ್ಮೆಹಾಳಿಗಳನಿ | ಬ್ಬರದ ಮೊರಹಿನ ಮುರಿದಗೋಣಿನ | ಕರದ ತಲೆಗಿಂಬುಗಳ ಕಾಲಾಳೊರಗಿತವನಿಯಲಿ ||೭|| ಬಲದು ಪೊಡಲನು ಮುರುಹಿ ಬರಿಕೈ | ಗಳನು ದಾಡೆಯೊಳಿಟ್ಟುಪಶ್ರುತಿ | ಬಲಿದನಾಸಾಪುಟದ ಜೋಲಿದಕರ್ಣಪಲ್ಲವದ || ತಳಿತನಿದ್ರಾರಸವ ನೆರೆ ಮುಕ್ಕುಳಿಸಿ ಥಟ್ಟನೊಳೆರಡು ಕಡೆಯಿಂ | ದುಲಿವತುಂಬಿಯಥರದದಂತಿಗಳೆಸೆದುವೊಗ್ಗಿನಲಿ ||೮|| ಬಾಯ ಲೊದಳಗಳಲಿಯೆ ಝುಗೆಹಳು | ವಾಯುಮಿಗೆ ತುದಿಖುರವನೂರಿ ನ | ವಾಯಿಗಳ ನೆರೆನೋಟದಾಲಿಯ ಮಿಡಿಕಿದವಯವದ || ಲಾಯದಲಿ ಲಂಬಿಸಿದವೋಲುವ | ನಾಯುಜದ ಸಾಲೆಸೆದುವೊರಗದ | ರಾಯರಾವುತರ ಮಕುಟಮಣಿ ಮರಗೋಡನೋಲೈಸೆ ||೯|| ಬಲಿದಕಾಂತೆಯಕೂಡೆ ಮನ್ಮಥ | ಕಲಹದಲಿ ಬೆಂಡಾದಕಾಂತೆಯ | ಕಲಶಕುಚಮಧ್ಯದಲಿ ಮಲಗುವವಿಟರ ರಚನೆಯಲಿ || ಬಲಿದಸಮರಶ್ರಮದಲಿರೆ ವೆ | ಗ್ಗಳಗಜಾರೋಹಕರು ಕುಂಭಸ್ಥಳದಮೇಲೊರಗಿದರು | ನಿದ್ರಾಲುಳಿತಲೋಚನರು
||೧೦|| ಕಲಹವನು ಕನಸಿನಲಿ ಕಂಡ | ವ್ವಳಿಸಿ ಹಳುಹಳು ಪೊಕು ಸಾಯಕು | ಬಲಿರೆ ಬಟ ಮಾಸಾ

ಳು ಜಾಗುಯೆನುತ್ತಲತಿರಥರು ॥ ತೊಲಗದಿರಿ ತಿನ್ನಡಗನಹಿತರ । ಕುಲದ ನೆತ್ತರ ಕುಡಿಯೆನುತ್ತ ಕಳ । ವಳಿಸಿ ಕೆಂದೊಕ್ಕಲಲಿ ಸುಭಟರು ನೃಪತಿ ಕೇಳೆಂದ ॥೧೧॥ ಖಳೆಯಿಸುತ ಕದೆರದೊಡ್ಡು ಲೇಪದ । ಬಲದವೊಲು ನಿವ್ರಾಸವುದ್ರುವಿ । ಮುಳುಗಿ ಝೊಂಪಿಸುವ ಘುಟತೆಯಲಿ ಝೊಂಪಿಸಿದುದರಿಜಾಲ॥ ತಳಿತ ಪುರುಷರು ಪಾಯದಲಿ ಕ । ಣ್ಣೊಳಗೆ ಕಪಿಸಗುರುತೂಪದೇಲಾ । ವಳಿಯವೊಲು ವೈದೋರಿದವು ಹಿಮರುಚಿಯರಶ್ಮಿಗಳು ॥೧೨॥ ದಣಿದುದತ್ತಲು ರಣವ ನಿದ್ರಾ । ಗಣಿಕೆಯರನರ್ಘಿಯಲಿ ರಿಂಗಣ । ಗುಣಿಸಿವನ ಹದುಳಿಸಿತು ತಿಳಿದುದು ಝೊಂಪಿಸುಂಪುಹವ ॥ ರಣವಸಾಗಳೆ ಕಾಣಬಹುದೆಂ । ಬಣಿಕಿಗರನೆಬ್ಬಿಸುವವೊಲು ಸುಳಿ । ದಣಿದು ಹೊಗರೆದ್ದುದು ಸಗಾಢದಲುಭಯಪಲವಾರ ॥೧೩॥ ಬಾಡಿದವು ತಾರೆಗಳು ಮಿಗೆ ತೆಗೆದೋಡಿದವು ನೈದಿಲೆಗಳೆಂಬುಧಿ। ಝಾಡಿಮಾಡಲು ಬೆರಸಿದವು ಝುಷಮಕರಕರ್ಕಟನ ॥ ಕೂಡಿ ಸಾಲಿಟ್ಟಖಿಳದೆಸೆಗಳ। ವೀಡಿಬಿದು ಕುಡಿಕುಡಿದು ಬೊಬ್ಬಿ । ಟ್ಟೋಡುತಿರ್ದುದು ಸಾಲ ಚಂದ್ರಿಕೆಯುಲಿ ಚಕೋರಿಗಳು ॥೧೪॥ ನಳಿನಗೊಳವೊಳಗೌಂಕದವು ನೈ । ದಿಲೆಗಳಲಿ ತನಿಮೋಹತುಂಬಿಯ । ಕಳಕಳಕೆ ಬೆಚ್ಚಿದವು ಬಿಗಿದುದು ಕೂಡೆ ತಿಳಿಗೊಳನ॥ ಝುಳಕೆ ಸೈಂಸದಲಲತೆಯ ನೆಳ। ಲೊಳಗೆ ನಿಂದವು ಬೇಗ ಬಲುಹಿಂ । ದೆಳಸಿ ಮುಂಮುಲಮುರುಗುತಿರ್ದವು ಜಕ್ಕವಕ್ಕಿಗಳು ॥೧೫॥ ವಿನುತ ಸುಕವಿಯ ಸೂಕ್ತಿ ತಾಗದ । ಮುನಿಯ ಮಂತಃಕರಣದಂತಿರೆ । ಹೊಸಲುವಲದವು ಚಂದ್ರಕಾಂತರಸಾಲತಿಲೆ ಕರಗಿ ॥ ಮನವ ಕತ್ತಲೆ ಗುರುವರನ ವಾ । ಕ್ಕಿನಲಿ ತೊಲಗುವವೋಲು ತುಂಬಿಯ । ತನತನಗೆ ನೂಕಿದವು ವಿಕಸಿತಕೈರವಾಟಿಗಳು ॥೧೬॥ ವಿರಹಿಜನದೆದೆಗಿಚ್ಚು ಮನ್ಮಥ । ನೆರಸುತನದಭಿಷೇಕಘಟತಾ । ವರೆಯ ಕಗ್ಗೊಲೆಕಾರನುತ್ಪಲವನವಿದೂಷಕನು ॥ ಹರನ ಹಗೆಯೊಡ್ಡಣ ವಿಲಾಸಿನಿ । ಯರ ಮನೋರಥಫಲವೆಸಲು ಮಿಗೆ । ಮೆರೆದನುದಯಾಚಲದ ಚಾವಡಿಯೊಳು ಸುಧಾಸೂತಿ ॥೧೭॥ ತಳಿತ ತಂಪಿನ ತಂಗದಿರ ತೊರೆ । ಯೊಳಗೆ ತೇಕಾಡಿದುದು ಬಲದ । ಗ್ಗಳದ ಬಳಲಿಕೆ ಬೀಳುಕೊಂಡುದು ಬಲಿದು ದಂಗವಣೆ ॥ ಬಲದು ಬರಿಕೈ ತೂಗಿ ಕಿವಿಗಳ । ನಿಲುಕಿದವು ಕರನಿಕರ ಹಯವಿ । ಲ್ಲಳವೆನಲು ಕೊಡಹಿದವು ವಳಯವನಖಿಳಹಯನಿಕರ ॥೧೮॥ ತುರುಬ ಬಲಿದೊಳಗೌಂಕಿ ಮೊನೆಮುಂ । ಜೆರಗನಳವಡೆಸೆಕ್ಕಿಸುತ್ತಿನೊ । ಳಿರುಕಿ ಬಿಗಿದು ಕಠಾರಿಧಾರದ ಗೊಂಡೆಯವ ಕೆದರಿ ॥ ಒರಗಿದೆಡಬಲದವರನೆಬ್ಬಿಸಿ । ಜರೆದು ವೀಳೆಯಗೊಂಡು ಕೈದುವ । ತಿರುಹುತಾಯುತವಾಯ್ತು ಪಡೆಯೆರಡರೊಳು ಪಾಯದಳ ॥೧೯॥ ಬಿಗುಹನೇರಿಸಿ ಮತ್ತೆ ತುರಗಾ । ಳಿಗಳನೆಲ್ಲವ ರಾಹುತರು ಹೊರ । ಜೆಗಳ ಜೋಡಿಸಿ ತಾಗಗಜದಲಿ ಜೋಧರವನುವಾಯ್ತು ॥ ಬಿಗಿದು ಕೀಲಚ್ಚುಗಳ ರಥಿಕಾ । ಳಿಗಳು ಮೇಳೈಸಿದರು ಕೈದುವ । ನೆಗಿದು ಕಾಲಾಳುರುಬಿ ನಿಂದುದು ಕದನಕನುವಾಗಿ ॥೨೦॥ ಚೂಣಿ ತೆಗೆಯಲಿ ಮಿಸುಕಿದೊಡೆ ನೃಪ । ನಾಣೆ ಬರಿದೇ ಕಾಳುಕುದುರೆಯ । ಗೋಣಿಸವರಂಗೆ ಮಾರದಿರಿ ಕೌರವನ ಥಟ್ಟಿನಲಿ ॥ ದ್ರೋಣನಲ್ಲಾ ರಕ್ಷಕನು ರಣ । ದಾಣಿಗರು ಕಲಿಭೀಮಪಾರ್ಥರು । ಕಾಣಬಹುದೋ ಕರೆಯೆನುತ ಗರ್ಜಿಸಿದನಾಚಾರ್ಯ॥೨೧॥ ಬಿದಿರಿದರು ಕೊಯ್ದಲೆಗಳನು ಕಾ । ರಿದರು ಕರುಳನು ಕುಸುರಿಖಂಡದ । ಕದಡುಗೈಗಳ ಚೂಣಿ ಮಸಗಿತು ತಾರುಥಟ್ಟಿನಲಿ॥ ಕದಡಿದವು ಬಲವೆರಡುಕಲ್ಪದೊ । ಳುದಧಿ ಮೆರೆವಂದದಲಿ ಮಾಸಾ । ಳೊದಗಿ ಕವಿದುದುಭಯಸೇನೆಯೊಳರಸ ಕೇಳೆಂದ ॥೨೨॥ ರಥವ ಸಂತೈಸಿದನು

ನಿಜಸಾ। ರಥಿಯ ಬೋಳೈಸಿದನು ಬಳಿಕತಿ। ರಥಮಹಾರಥರುಗಳಿಗಿತ್ತನು ರಣಕೆ ವೀಳೆಯವ ॥ ಪೃಥೆಯಮಕ್ಕಳ ಕರೆಯೆನುತ ನೃಪ । ಪ್ರಥಿತಬಲವನು ತನಿಗೆದರಿ ನಿ । ರ್ಮಥಿತರಿಪು ಪರಬಲವ ಹೊಕ್ಕನು ಬಿಟ್ಟಸೂಟಿಯಲಿ॥೨೩॥ ರಾಹುವೆತ್ತಲು ಬಲಿದತಾರಾ। ವ್ಯೂಹವೆತ್ತಲು ದಳ್ಳಿಸುವೊಡೆ ವ।ರಾಹವೆತ್ತಲು ತನಿರಸದ ತೃಣರಾಶಿ ತಾನೆತ್ತ ॥ ಗಾಹುಗತಕಪನುಳಿದುಕಾದುವೊ । ಡಾಹವವು ಗುರುಭೀಷ್ಮರಿಗೆ ಸರಿ । ಸಾಹಸಿಗಳಾರುಂಟು ಮುರಿದುದು ಪಾಂಡುಸುತಸೇನೆ ॥೨೪॥ ಉದಧಿಯುದರದೊಳಿಳಿವ ತೆರೆಗಳ । ನೊದೆವಮಂದರದಂತೆ ವನಕರಿ ॥ ಕದಳಿಯಲಿ ಕ್ರಮಮಾಡುವಂದದಿ ಪರರ ಥಟ್ಟಿನಲಿ ॥ ಹೊದರ ಹೊರೆಗಡಿವೌಕಿದವು ತೋ। ಕಿದವು ಸುಭಟರ ಜೀವವನು ಹಳೆ । ಬಿದಿರಮೆಳೆಯಲಿ ಮೊಳಗಿದುಬ್ಬಯ ವೊಲುರುಹಿದನು ದ್ರೋಣ ॥೨೫॥ ಹೊಕ್ಕಸಾಲರುಣಾಂಬುಮಯ ಕೈ । ಯಿಕ್ಕಿದತ್ತಲು ಖಂಡಮಯ ಮೊಗೆ । ದಿಕ್ಕಿದತ್ತಲು ಹೆಣನಮಯ ತಾನೇನ ಹೇಳುವೆನು ॥ ಮುಕ್ಕುರಿಯ ಬಸುರಚ್ಚುಗಳ ನರ ಸುಕ್ಕಿದೊಳ್ಳಾಸದ ಮಹಾಭಯ । ವೆಕ್ಕಸರದಲಿ ಕಾಣಲಾದುದು ವೈರಿಸೇನೆಯಲಿ ॥೨೬॥ ಹಸಿದ ಹೆಬ್ಬುಲಿ ಮಸಗಿದೊಡೆ ಮೃಗ । ವಿಸರವೇನಹವೆರಸ ಕೇಳ್ನ್ರಿ । ಪ್ರಸರದಲಿ ಪಾಳಿಸಿದವಂದಿನನುಗಿದನುಸುರುಗಳ ॥ ಕುಶಲರೇ ಭೀಮಾರ್ಜುನರು ಪಾ। ಲಿಸುವೆ ಬರಿದೇ ಕೃಷ್ಣನನುಹರಿ। ಹುಸಿತನವ ಬೆಸಗೊಂಬೆನೆಂದರೆಯಟ್ಟಿದನು ದ್ರೋಣ ॥೨೭॥ ಆರುಸಾವಿರತುರುಗವೊಂಬೈ । ನೂರುಗಜಘಟೆ ಸಾವಿರದ ಮುನ್ನೂರುರಥ ನುಗ್ಗಾಗೆ ಕೆಡೆದುದು ಲಕ್ಷಪಾಯದಳ ॥ ಏರುವಡೆದವರನು ಪಲಾಯನ । ಸೂರೆಗಾರನು ವೈರಿಬಲದಲಿ । ತೋರಿ ಹೇಳುವರೆನ್ನಳವೆ ಧೃತರಾಷ್ಟ್ರ ಕೇಳೆಂದ ॥೨೮॥ ಎಲೆಲೆದೊದ್ದೆಗರೇಕೆ ಕೊಬ್ಬಿದ । ರಳವನರಿಯದೆ ನುಗ್ಗುಮುರಿದೊಡೆ । ದಳದದ್ದೊರೆಗದು ಭಂಗವೇ ಬಾಹಿರರ ಹೊಯ್ಯೆನುತ ॥ ಬಳಸರಿವ ನಾಯಕರ ನೆರೆ ಮೂ । ದಲಿಸಿ ಲಗ್ಗೆಯಲಹರಿಯಲಿ ಪಡಿ । ತಳಿಸಿದನು ಪಾಂಚಾಲ ಸೃಂಜಯಮತ್ಸ್ಯಕೈಕೆಯರು ॥೨೯॥ ಬಲವ ಕಲಿಯೇರಿಸಿ ಚಡಾಳಿಸಿ । ಯುಲಿವಪಟಹಮೃದಂಗಕಹಳಾ । ವಳಿಗಳಲಿ ಬೊಬ್ಬಿರಿವಘನನಿಸ್ಸಾಳಕಹಳೆಗಳ ॥ ತಳಿತರುಝಲ್ಲರಿಗಳ ಪತಾಕಾ । ವಳಿಯ ಬಿರುದ ಪವಾಡಿಗಳ ಕಳ । ಕಳದ ಕೈವಾರದಲಿ ಕವಿದರು ದ್ರೋಣನಿದಿರಿನಲಿ ॥೩೦॥ ಅರಿಭಟರ ಥಟ್ಟಿನಲಿ ಬಿರಿಸಿನ । ಬರವನೀಕ್ಷಿಸಿ ಪೂತು ಪಾಂಚಾ । ಲರ ಸಗಾಡಿಕೆ ಲೇಸುಲೇಸ್ಸೆ ಶಿವಮಹಾದೇವ ॥ ದೊರೆಯುಲಾ ಬಳಿಕೇನು ಪಾಂಡವ। ರರಸಿಯುಯ್ಯನು ದ್ರುಪದನಲ್ಲಾ। ಹರಯೆನುತ ತಲೆದೂಗಿ ಗಹಗಹಿಸಿದನು ಕಲಿದ್ರೋಣ ॥೩೧॥ ಇರುಳುಗಳ್ಳನ ಕೂಡೆ ಸೇರಿದ । ಮರಳಿನಂತಿರೆ ನೀವೆ ರಣದಲಿ । ತರುಬಿಕೊಂಡಿರಿ ಹೊಯ್ವರಿವದಿರು ನಿಮ್ಮನಡೆಯೊಡ್ಡಿ ॥ ಮರಳಿಕೈಕೈಕೆಯರು ಮತ್ಸ್ಯರು । ಬಿರುದಸೃಂಜಯರಕಟಕಟ ಖೂ। ಳರು ವೃಥಾ ನಿಮಗೇಕೆ ಸಾರೆನುತಿರ್ದನಾದ್ರೋಣ ॥೩೨॥ ಬಿಲ್ಲಕೊಪ್ಪಿನ ಮೇಲೆ ಚಾಚಿದ । ಗಲ್ಲದುಪಹಾಸದಲಿ ನುಡಿಗಳ । ಘುಲ್ಲಣೆಯ ರೋಮಾಂಚನದ ಥಟ್ಟಣೆಯ ಚೌಕದಲಿ ॥ ಗೆಲ್ಲದಲಿ ಗಾಢಿಸಿದಚಿತ್ತದ । ಚಲ್ಲೆಗಂಗಳ ನಗೆಯ ಚೌಪಟ । ಮಲ್ಲನಿದ್ದನು ರಿಪುಬಲವ ಲೆಕ್ಕಿಸದೆ ಕಲಿದ್ರೋಣ ॥೩೩॥ ಕೆಣಕಿದರು ಪಾಂಚಾಲನಾಯಕ । ರಣಕಿಗರು ಕೈಕೊಳ್ಳದೀಸಂ । ದಣಿಸಿದರು ತಾವ್ಕಡುಹು ಮಿಗೆ ನೆರೆ ರಾಯರಾವುತರು ॥ ಕಣೆಗರೆದು ಹೊದ್ದಿದರು ಜೋದರು । ಕುಣಿದು ಕಾಲಾಳೌಕಿತೊಂದ್ದೇ । ಕ್ಷಣದಲನಿಬರನೊರಸಿದನು ಬೆರಸಿದನು ದೊರೆಗಳಲಿ ॥೩೪॥ ಅಡಸಿದರಿಚತುರಂಗಬಲವ

ನು । ಕಡಿದು ಹರಹ ವಿರಾಟನನು ಜವ । ಗೆಡಿಸಿ ದ್ರುಪದನ ಮುರಿದು ವಿರಥನಮಾಡಿ ಕೈಕೆಯರ ॥ ನಡೆದು ಬರೆಬರೆ ನಿಮಿಷದಲಿಯುವ । ಗಡಿಸಿ ಹೊಕ್ಕುದು ಬತ್ತಿದಂಬುಧಿ । ವಡಬನನು ಮೊಗೆವಂತೆ ಮುತ್ತಿತು ಕುಂಭಸಂಭವನ ॥೩೫॥ ಮತ್ತೆ ಮುರಿದನು ವೈರಿಬಲದಲಿ । ಹತ್ತುಸಾವಿರಕರಿಘಟೆಯು ನೈ । ವತ್ತುಸಾವಿರಹಯುವನಿಚ್ಛಾರ್ಸಿರಮಹಾರಥರ ॥ ಹತ್ತುಕೋಟಿಪದಾತಿಯನು ಕೈ । ವರ್ತಿಸಿದ ನಂತಕನವರಿಗಿವ । ರತ್ತ ಬಿಟ್ಟನು ರಥವನಾದ್ರುಪದಾದಿನಾಯಕರ ॥೩೬॥ ಆಳನೊಪ್ಪಿಸಿ ಜಾರದಿರಿ ಪಾಂ। ಚಾಲಪತಿ ಫಡ ನಿಲ್ಲೆನುತ ಕೆಂಗರಿ। ಗೋಲಿನಲಿ ಹೂಳಿದನು ದ್ರುಪದನ ಕೆಲದಬಲದವರ ॥ ಖೂಳ ಫಡ ಹಾರುವರು ಬರುಮಾ । ತಾಳಿಗಳು ನೀವೇಕೆ ನಮ್ಮೊಳ । ಗಾಳುತನ ನಿಮಗೆತ್ತಲೆನುತಿದಿರಾದನಾದ್ರುಪದ ॥೩೭॥ ಹಿಂದನರಿಯಾ ಖೂಳಮರ್ಮವ । ನಿಂದು ಮರೆದಾಸಾಕದಂತಿರ । ಲೊಂದನಲ್ಲದೆ ನಿನ್ನ ತಲೆಗೆರಡೆಂಬತೊಡಚಿದೊಡೆ॥ ಇಂದು ನಿನ್ನಯ ಬಾಯುತಂಬುಲ। ತಿಂಪವನು ನೋಡೆನುತ ಹೊದೆಯಂ । ಬಿಂದಲಿಕ್ಕಡಿಮಾಡಿದನು ಪಾಂಚಾಲಪತಿ ಶಿರವ ॥೩೮॥ ದೊರೆ ಮಾಡಿದನೋ ಸ್ವಾಮಿದ್ರೋಹರು । ತಿರಿಗಿಯೆನೆ ಪಾಂಚಾಲರಲಿ ಹ । ನ್ನೆರಡುಸಾವಿರರಾಜಪುತ್ರರು ಜರೆದು ಜೋಡಿಸಿತು॥ ಹರಿಬವೆಮ್ಮದು ಸಾರಿ ನೀವೆಂ । ದರಸುಮಕ್ಕಳ ನಿಲಿಸಿ ಬಿಲುಗೊಂ । ಡುರವಣಿಸಿ ತಡೆದನು ವಿರಾಟನು ಕಲಶಜನ ರಥವ ॥೩೯॥ ಅಡಸಿ ಗಿರಿಗಳ ನುಂಗುವನು ಬಾ । ಯ್ಬಿಡಿಯದೇ ಪಲ್ಲವನಕಟಾ । ಬಡವಿರಾಟನನಾರು ಬಲ್ಲರು ದ್ರೋಣನಿದಿರಿನಲಿ ॥ ನಡೆದುಬಂದುದ ಕಂಡೆವಾಗಳು । ಮಡಿದನೆಂಬುದನರಿದೆವೈ ಬಿಲು । ದುಡುಕಿ ಕುಂತೀಭೋಜ ಹೊಕ್ಕನು ಮಿಕ್ಕನವರುಗಳ ॥೪೦॥ ಅವರ ಹರಿಬವೆ ಬೇಡ ಸೃಂಜಯ । ರವಗಡಿಸಿ ಕೈಕೆಯರ ವರನೃಪ । ನಿವಹಯಾದವಚೈದ್ಯನಾಮಾಳವನು ಮಾಗಧನು ॥ ವಿವಿಧವೀರಾರವದ ಗಜಹಯ । ರವರಥಧ್ವನಿಜಂತ್ರವಿದುಮಿಗೆ । ಕವಿದು ಕೆವರಿ ವಿರೋಧಿಬಲ ಕೆಣಕಿದುದು ಕಲಶಜನ ॥ ೪೧ ॥ ಕೇಳಿದನು ರಭಸವನು ದಿಗುಕೆಂ । ಧೂಳಿಯನೆ ಕಂಡೆನು ವಿರೋಧಿಗ। ಳಾಳಕಾಣೆನು ಕಾಣೆನಿತ್ತಲು ಕಲಶಸಂಭವನ ॥ ಕೇಳು ನಿಮಿಷಾರ್ಧದಲಿ ನೆರೆ ಕೆಂ । ಧೂಳಿ ಕಾಣೆನು ಕಾಣೆನರಿಭೂ । ಪಾಲರನು ಕೇಳರಸ ಕಂಡೆನು ಕಾಲಧೂರ್ಜಟಿಯ ॥೪೨॥ ಅರಸುಮಕ್ಕಳು ಮತ್ಸ್ಯಪಾಂಚಾ । ಲರಲಿ ಕೈಕಯ ಚೈದ್ಯ ಮಾಗಧ । ತುರುಕ್ಕ ಬರ್ಬರ ಹೂಣ ಕೊಂಕಣ ಪಾರಿಯಾತ್ರರಲಿ ॥ ಉರುಳಿತೊಂದೇಲಕ್ಷ ವುಳಿದೀ । ಕರಿ ವರೂಥ ಪದಾತಿ ತುರಗವ । ನರಸಲೆಕ್ಕಿಸರಾರು ಬಲ್ಲರು ವೈರಿಸೇನೆಯಲಿ ॥೪೩॥ ಮುರಿದುದಾಬಲ ವಿಳೆಯೊಡೆಯೆಬೊಬ್ಬಿ । ರಿದುದೀಬಲವಪಜಯದ ಮಳೆ । ಕರೆದುದವರಿಗೆ ಹರೆದುದಿವರಿಗೆ ರಜ್ಜುಸರ್ಪಭಯ ॥ ತೆರಳಿತಾಚೆಯಘಟ್ಟು ಮುಂದಣಿ । ಗುರವಣಿಸಿ ತೀಯೊಡ್ಡು ಕೌರವ । ರರಸನುತ್ಸಾಹವನು ಬಣ್ಣಿಸಲರಿಯೆ ನಾನೆಂದ ॥೪೪॥ ಭೂರಿವಿರಹಾಗ್ನಿಯಲಿ ಲೋಚನ । ವಾರಿ ಹರುಷಾಳಿಗಳಲಿರೆ ರಿಪು । ಮಾರಣಾಧ್ವರವೆಸೆದುದಂದು ರಥಾಂಗದೀಕ್ಷಿತನ ॥ ತಾರಕಿಯು ತಳಿವುಗಳ ಕುಣಿವಸ । ಮೀರಣನ ಶತಿಯೆಡೆಗೆ ರಜನೀ । ನಾರಿ ತೊಲಗಲು ಹೊರಟನಂಬುಜಬಂಧು ನಲವಿನಲಿ ... ... ... ॥೪೫॥

ಅಂತು ಸಂಧಿ ೧೭ಕ್ಕಂ ಪದ ೧೧೦೮ಕ್ಕಂ ಮಂಗಳಮಸ್ತು.



## ಹದಿನೆಂಟನೆಯ ಸಂಧಿ.

ಸೂಚನೆ ॥ ರಿಪುಬಲವ ಗೆಲುವಲ್ಲಿ ಶಾಪಾ। ದಪಿಶರಾದಪಿಯೆಂಬ ಜಯುಲೋ। ಲುಪನು ಸಂಗ್ರಾಮದಲಿ ಮಡಿದನು ಪುತ್ರಮೋಹದಲಿ ॥

॥ ಪದ ॥ ಸಾಲದೇ ಸಮರಂಗವಿಂದಿನ । ಕಾಳೆಗದ ಜಯನಮ್ಮದರಿಭೂ । ಪಾಲಕನ ಧಟ್ಟಿನಲಿ ಮಡಿದುದು ಬೇಹಬೇಹವರು ॥ ಮೇಲುಗಾಳಗ ನಮ್ಮದೀಸರ । ಮೇಲೆತೆಗೆಸುವ್ರದಶಿಮಥನದಲಿ। ಕಾಳಹುದು ಕೇಳೆಂದು ನೃಪತಿಗೆ ನುಡಿದನಾಚಾರ್ಯ ॥ ೧ ॥ ಅವನಿಪಾಲರು ಕಂಗಳಿಂದವು । ಕಿವಿಗೆ ಕರಮೊಳ್ಳಿದರು ಕಂಡುದ । ನವನು ನಂಬರು ಕೊಂಡೆಯರ ನುಡಿಗೇಳಿ ನಂಬುವರು ॥ ನಿವಗೆ ಹೇಳಿದುದಲ್ಲ ಲೋಗರ। ಹವಣನೆಂಬೆವು ನಾವು ಪಾಂಡವ। ರವರು ನಿನ್ನವರೆಂಬುದನು ನೀನಿಂದು ನೋಡೆಂದ॥೨॥ ಬಿಲ್ಲನೊದರಿಸಿ ವೈರಿಭಟರಿಗೆ । ಚೆಲ್ಲಿದನು ಭೀತಿಯನು ಬರಸಿಡಿ । ಲಲ್ಲಿ ತುಡುಕುವರಾರು ಬಲ್ಲರು ದ್ರೋಣನುರವಣೆಯ ॥ ಘುಲ್ಲಣೆಯ ಖುರಪುಟದ ತುರಗದ । ಹಲ್ಲಣೆಯ ಹೇಷಿತದ ಹಗೆಯೆದೆ । ಝುಲ್ಲೆನಲು ಕಾಳಗಕೆ ಕವಿದವು ಕಟಕವೆರಡರಲಿ ॥ ೩ ॥ ಇಳೆಯೊಳದ್ಭುತವಿದು ಕೃತಾಂತನ । ಫಲಿತ ಶಾಲೀವನವ ಮುತ್ತಿದ। ಗಿಳಿಗಳೋ ಗಾಢಾಯ್ಲವಂಬುಗಳೋ ಮಹಾದೇವ ॥ ಸೆಳಿಸೆಳಲುದೊಗಲೆಂಬಛಟಛಟ । ಛಿಳಿಛಿಳಿಲುಖಣಿಖಣಿಲುಖಣಿಲೆಂ।ದುಲಿವಕಳಕಳದಂಬುಗಳ ರವ ತುಂಬಿತಂಬರವ ।೪॥ ಕಡಿದು ಬೀಳುವಕ್ಕೆದುಗಳ ನೆರೆ । ಕಡಿದು ಜೋಲುವಜೋಡುಗಳ ನೆರೆ। ಸಿಡಿಪುಹಾರುವಸೀಸಕದ ಸುಗ್ಗದಹಲಗೆಗಳ ॥ ಹಿಡಿದಸಿಂಧದ ನೆರಕೆ ಹರಹಿದ । ತೊಡೆಯಚಮರದ ತಾರಿಘಟ್ಟಿ । ಕೆಡದಚಾತುರ್ಬಲವನಭಿವರ್ಣಿಸುವರಾರೆಂದ ॥೫॥ ಅಳಿದವೈನೂರಾನೆ ಮುಗ್ಗುಲ । ನೆಲಕೆ ಕಲಿಸೀಡಿಗ್ಗಡವ್ವ ಬಲುಗುದುರೆ ಹದಿನೈದುಸಾವಿರದೇಳನೂರುರಥ ॥ ಮಲಗಿದುದು ಕಾಲಾಳು ಲಕ್ಷದ । ತಲೆಯತೊಡೆದರು ರಾಜ ಪುತ್ರರು । ಮಲೆತವರ ಹೊಯ್ದೊಯ್ದು ಹೊಕ್ಕರು ಸುರರ ಪಟ್ಟಣವ ॥ ೬ ॥ ಸಾಲುಮೇಘದ ಮಳೆಗಳಿಗೆ ಬಿರು । ಗಾಳಿ ಬಿದ್ದಿನವಾಗಿ ಬರಲವ । ರಾಳುಗಳ ಸಿರಿ ಮೆರವುದೇ ಧೃತರಾಷ್ಟ್ರ ಚಿತ್ತೈಸು ॥ ಸಾಲ ಹೊಯ್ದನು ಹೊಕ್ಕು ಭೂಮಿಪಾ । ಪಾಲನೆಯ ತಾನೊಲ್ಲೆನೆಂಬವೊ । ಲೂಳಿಗವ ಮಾಡಿದನು ಪರಬಲದೊಳಗೆ ಕಲಿದ್ರೋಣ ॥೭॥ ಮುರಿದು ಬರುತಿದೆ ದೇಸಿಗರ ಸಂ । ತರಿಸಲೈದಿದನಿಮ್ಮಮಾವನ । ತರಿದರಿಗೆ ಖತಿಗೊಂಡು ಕಾದಿವಿರಾಟಕೈಕೆಯರ ॥ ತುರುಗಿದನು ತೆತ್ತಿಸಿದರಲಿ ತೆಗೆ । ಮರೆಯಮಾತೇ ವಿಜಯಲಕ್ಷ್ಮಿಯ । ಸೆರಗ ಹಿಡಿದನು ದ್ರೋಣನೆಂದರು ಭಟರು ಭೂಪತಿಗೆ ॥ ೮ ॥ ಹೊಳೆಹೊಳೆದು ತಂಬುಲದ ರಸದಲಿ । ಮುಳುಗಿ ಮುಡುಪಡಗೈದ ದೇಹವ । ಪುಲುನಗೆಯ ಕಳಕಳದಲತಿಮುಕ್ಕಳಿಸಿದಾಲಿಗಳ ॥ ತಳಿತಛಲದಲಿ ರಾಯಧೈರ್ಯದ। ತಳಿತಭೀತಿಗೆ ಕಾಲುಹೊಳೆಯಾ । ದಳಿಮನವ ಮಾಡುವ ಮಹೀಶನ ಕಂಡನಾಪಾರ್ಥ ॥ ೯ ॥ ನಿಲ್ಲುಫಲುಗುಣ ನೀನು ಪರಿಯಂ । ತೆಲ್ಲಿಯದು ರಣವಕಟ ಹಾರುವ । ನಿಲ್ಲಿ ಕೆಲಬರ ಹೊಯ್ದು ಕೊಂದನು ಬಿನುಗುಬಿಚ್ಚಟಿಯ ॥ ಬಲ್ಲನಾತನ ಬಲುಹನೆರೆ ಗೆಲ । ಬಲ್ಲಹರಿಮೇಖಲೆಯನಾವಿನ್ನೆಲ್ಲವೇತಕೆ ಯೆನುತ ಧೃಷ್ಟದ್ಯುಮ್ನನೆನುವಾದ ॥ ೧೦ ॥ ನಾಯಿಗಳ ಹೊಯುಗ್ಗಾಕು ರಣದಲಿ । ಸಾಯಬೇಡಾ ಕ್ಷತ್ರಿಯರು ತ

ವಾಯುಧಂಗಳ ಹಿಡಿದರೋ ತಾವೇಕದಂಡಿಗಳೊ ॥ ಜೀಯ ಖಾತಿಯಿದೇಕೆ ಬೀಳಲಿ । ನಾಯಕರು ನಿಮಗೇನು ಹರನಡ । ಹಾಯಿದೊಡೆ ರಿಪುಬಲವನುರುಹುವೆನೆಂದನಾಪಾರ್ಥ ॥೧೧॥ ನೇಮವಾಯಿತು ಸಾತ್ಯಕಿಗೆಸುತ । ಸೋಮಕಾದಿಕುಮಾರರಿಗೆ ಸಂ । ಗ್ರಾಮಧೀರಶಿಖಂಡಿಸೃಂಜಯಚೇಕಿತಾನರಿಗೆ ॥ ಆ ಮಹಾರಥರೈರಿದರು ಘನ । ತೋಮರದ ಶಕ್ತಿಯಲಿ ತುರುಗಿದ । ತೋಮದಲಿ ಬಹುವಿಧದ ವಾದ್ಯದ ರವದ ರಭಸದಲಿ॥೧೨॥ ಸರಕಟಿಸಿ ನೂಕಿತು ಚತುರ್ಬಲ। ವರರೆ ಹಾರುವನೆಲ್ಲಿ ಯಾವೆಡೆ। ದೊರೆಸುಯೋಧನನೆಲ್ಲಿ ರಾಧಾಸುತನ ಬರಹೇಳು ॥ ಗುರುಸುತನ ಕರೆ ಬರಲಿ ದುಶ್ಶಾ । ಸರನು ಬರಹೇಳೆನುತ ಬಲವ। ಬ್ಬರಿಸಿ ಕವಿದುದು ಮೋಹರಿಸಿಯಾಚಾರ್ಯನಿದಿರಿನಲಿ॥೧೩॥ ಅಂಗವಣೆಯೊಳ್ಳಿತು ಮಹಾದೇ । ವಂಗೆಮೊಗಸುವೊಡರಿದು ಮೋಹರ। ಸಿಂಗದಾಯತವಂಬು ಸುಳಿದರೆ ಮೊಲನ ಮುಂಚುವಿರಿ ॥ ಭಂಗವಿಲ್ಲದೆ ಬಿದ್ದೆನಿಮ್ಮ । ಯ್ಯಂಗೆ ಹೊರದಿಹಹಳಿವ ಮಿಗೆಮನ । ದಂಗವಣೆಯುಂಟಾಗೆ ಮೆಚ್ಚುವೆನೆಂದನಾದ್ರೋಣ ॥೧೪॥ ಗಳಹತನ ನಿಮ್ಮಲ್ಲಿ ನೆರೆಯದು । ಕಲಿತನವಲೇ ಮಾತಿನಲಿನೀವ್ । ಗೆಲುವಿರದು ತಪ್ಪಲ್ಲಮುಖದಿಂ ದ್ವಿಜರು ಜನಿಸಿದಿರಿ ॥ ಗೆಲವು ತೋಳಿನೊಳೆರವು ಜನ್ಮ । ಸ್ಥಳವಲೇ ಭುಜವರಸುಗಳಿಗೆ। ನ್ನಳುಕದಿದಿರಲಿ ನಿಂದೆಯಾದೊಡೆ ಗೆಲವು ನಿನಗೆಂದ॥೧೫॥ ಎನ್ನುಮತ್ತೊಮ್ಮೆನ್ನುಯೆನ್ನಾ। ಣೆ ನ್ನುಗೆಲವೇ ನಮಗೆ ಬಳಿಕೀ। ನಿನ್ನ ಸಮ್ಮುಖದಲಿ ಮಹಾದೇವಹುದು ಮತ್ತೆನಲು ॥ ತನ್ನೊಳುಂಟೀ ಖುರೆಯುತ್ತನ ಬರಿ । ದೆನ್ನಲಿದೆ ಬಾ ಹಲವು ಮಾತಿನೊ । ಳಿನ್ನುಫಲವೇನೋಡು ನಿಮಿಷದೊಳೆಂದನಾದ್ರೋಣ ॥ ೧೬ ॥ ಈತ ಸೇನಾಪತಿಕಣಾ ತಾ । ನೀತನೈ ಮಿಗೆ ನರನ ಮೈದುನ । ನೀತ ವಿಖ್ಯಾತನು ಬಲಾನ್ವಿತ ದ್ರುಪದತನಯನಲಾ ॥ ಈತ ಸಾತ್ಯಕಿ ಯಾದವರ ಕುಲ । ದಾತನೀತ ಶಿಖಂಡಿ ಮೊದಲಾ। ಗೀತಗಳು ನೆರೆ ಖರೆಯರೆಂದನು ನಗುತ ಸಾರಥಿಗೆ॥ ೧೭ ॥ ನುಡಿಗೆ ಮುಂಚಿತು ಬಾಣಮಾರುತ। ನಡಸಿ ಬೀಸುವಲಾಗು ತಲೆಗಣೆ । ತೊಡಚಿಗಳಚುವನೇಗವನು ಬಣ್ಣಿಸುವೊಡೆನ್ನಳವೆ ॥ ಕಡಲ ಕಡುಹದಲುರಿವಗರಳವ । ನುಡುಗಿದವರಿಗೆ ನಿವರು ಶಿವಯೆಂ। ದೊಡನೊಡನೆ ಪಡೆ ನಡುಗಲೊರಸಿದನಾಮಹಾರಥರ ॥ ೧೮ ॥ ಕರಿಗಳೈಸಾವಿರ ತುರಂಗವು । ವೆರಡುಸಾವಿರವೆಂಟುಸಾವಿರ । ವರವರೂಥದಥಟ್ಟು ಮುರಿದುದು ಲಕ್ಷಪಾಯದಳ ॥ ಅರಸುಗಳನೈನೂರುಪುನರಪಿ । ಕರಿತುರಗರಥದಿಂದಮೂವ। ತ್ತೆರಡುಸಾವಿರವಳಿದುದೈ ಪಾಂಚಾಲಸೇನೆಯಲಿ॥೧೯॥ ಮತ್ತೆ ನಡೆದುದು ಹೆಣನ ತುಳಿದೊ। ತ್ತೊತ್ತೆಯಲಿ ರಿಪುಸೇನೆಮಂಜಿನ। ಮುತ್ತಿಗೆಯ ರವಿಯಂತೆಕಾಣೆನು ಕಳಶಜನ ರಥವ॥ ಮತ್ತೆನಿಮಿಷಾರ್ಧದಲಿ ಕಾಲನ । ತುತ್ತುಚೋಡಿಸಿತೇನನೆಂಬೆನು । ಹತ್ತುಕೋಟಿಯ ಕೆಡಹಿದನು ರಿಪುಚಾತುರಂಗದಲಿ ॥೨೦॥ ಗಾಸಿಯಾಯಿತು ಸೇನೆ ಸುಡಲೆನು । ತಾಸುಭಟರಿದಿರಾಗಿ ಕಾದಿದ । ರೈಸುಬಳಿಕಿನ್ನರಸ ಸರ್ವತ್ರಾಣವೆಲ್ಲರಿಗೆ ॥ ಸೂಸುಗಣೆಗಳ ಸೊಗಸು ಹೊಯ್ದುಪ। ಹಾಸಕೊಡಲಾದರುಮಹಾರಥ। ರೀಸುಭಂಗಕೆ ಬಂದುದಿಲ್ಲ ನೃಪಾಲ ಕೇಳೆಂದ ॥೨೧॥ ಕಂಡುದಿವರನು ರಾಯಮೋಹರ । ಕಂಡುಗೊಂಡುದು ಧೊರೆಗಳಿದು ಕೋ । ದಂಡರುದ್ರನ ರಣಕಣಾ ತಾವೇನನೊದಗುವರು ॥ ಉಂಡುಭಾಸಟದೇರುಮದ್ದಿನ । ಗಂಡನೋ ದ್ರೋಣಾಸ್ತ್ರವನು ಸವಿ । ಗಂಡನೇ ಸಾತ್ಯಕಿಯೆನುತ ಗರ್ಜಿಸಿದನಾಭೀಮ॥ ನುಡಿಯ ಭಂಗಿಸಲೇಕೆ ಸವರಣ । ಕೊಡುವುದಾದವರೊಳಗೆ ಮಗುಳವ । ಗಡಿಸುವುದು ವಿಕ್ರಮಕೆ ಕುಂದೇನದು ಮು

ಹೂರ್ತವಶ ॥ ಪಡೆ ಸವೆದುದಿನ್ನೇನೆನುತ ಬಿಲು । ದುಡುಕಿ ಹೊಕ್ಕನು ಪಾರ್ಥನನಿಲಜ । ನೊಡನೆ ಬಳಿ
ಸಂಧಿಸಿತು ಸನ್ನಾಹದಲಿ ಪರಿವಾರ ॥ ೨೩ ॥ ಭೀತಿ ಮಾಣಲಿ ಭೀಮಫಲುಗುಣ। ರಾತುಕೊಂಡರು ಬ
ವರವನು ನೆರೆ | ಸೋತವರು ಸಂವರಿಸಿಕೊಂಬುದು ಯೆನುತ ಚರರುಲಿಯೆ ॥ ಚಾತುರಂಗದ ತರಹ
ರಣನಿ । ಧೂರ್ತಧೂಳೀಮಯುವಖಿಳದಿಗು। ಜಾತವೆನೆ ಧಟ್ಟಣೆಯು ನೇರಿತು ಪಾಂಡು ಸುತಸೇನೆ॥೨೪॥
ಆಳಹಿರಿ ನೀವೆನ್ನಕೈಯಿಂ । ಪಾಳುಕುದುರೆಯು ಕೊಲಿಸುವುದು ನಿವು । ಗಾಳುತನವುಂಟೆಂದು ಗರ್ವವ
ನಿಲ್ಲಿ ತೋರಿದಿರಿ ॥ ಆಳು ನೋಡುತಲಿರಲಿ ನಿಮ್ಮಯು । ಕಾಳಗವನೆಲೆಪಾರ್ಥ ಪವನಜ । ಕೇಳೆನುತ
ಕೈವರ್ತಿಸಿದನಂಬುಗಳೊಳಿವರೊಡಲ ॥ ೨೫ ॥ ನರನನೆಚ್ಚನು ಪವನಜನ ತನು । ಬಿರಿಯಲೆಚ್ಚನು
ಸಾರಥಿಗಳಿ । ಬ್ಬರಲಿ ಹೊಳಿದನಂಬ ನೆರೆ ನೋಯಿಸಿದನಾರಥವ ॥ ನರನ ಕಣೆಯನು ಭೀಮನಂಬನು।
ಹರೆಗಡಿದು ಮಗುಳೆಚ್ಚನವರನು । ಸರಳು ಪುನರಪಿ ಸವರಿ ಸೆಕ್ಕಿದನೊಡಲೊಳಂಬುಗಳ ॥ ೨೬ ॥
ದೃಷ್ಟಿಮುಷ್ಟಿಯು ಸರಿಸದಲಿ ತಲೆ । ಮೆಟ್ಟುಗರೆದರು ಪಾರ್ಥಪವನಜ । ರಿಟ್ಟುಕೊಡಹಿದರಾರು ನಿ
ಲುವರು ದನುಜದಿವಿಜರಲಿ॥ ನೆಟ್ಟನೆಯು ಗುರು ಸಿಲುಕನವತರಿ । ದೊಟ್ಟಿದನು ದೆಕ್ಕಾಯೆಯುಲಿ ಗ
ರಿ । ಗಟ್ಟತೀತನ ಖ್ಯಾತಿ ಮೆರೆದುದು ಕೇಣಿವಿಲ್ಲೆಣಿಸಿ ॥ ೨೭ ॥ ಅಟ್ಟೆ ಜಗವನು ಮುಂದು ನುಂಗು
ವ । ಧಿಟ್ಟನಹಶಮನಂಗೆ ಸಮರದ । ಕಟ್ಟಳೆಯೊಳಾಯುತದ ಔತಣವನ್ನು ಹೇಳ್ವಂತೆ ॥ ಕಟ್ಟೆವಡೆ
ದಂಬುಧಿಯೊ ಮೇಣ್ಗ್ರಗ । ಜಟ್ಟಿ ಸುರಿವಂಬುಗಳೊ ನಿಮಿಷಕೆ । ಕೆಟ್ಟುದಾದೊಡೆಯುಬಲತರಹರ
ವರಸ ಕೇಳೆಂದ ॥ ರಾಯನನು ಬರಹೇಳು ನಾವ್ ಕೈ । ಗಾಯ್ದ್ದೊವೋ ಕಾದಿದೆವೊ ಕಾಣಲಿ । ಬಾಯಿ
ಬಡಿಕರು ಬಂದು ನೋಡಲಿ ಕರ್ಣಶಕುನಿಗಳು ॥ ಆಯುಧವ ಹಿಡಿದವರು ಮೇಣವ। ರಾಯತದಲೊ
ಡೆಬೆರಸಿ ನೋಡಲಿ।ರಾಯರಾಣೆಯೆನುತ್ತ ಮೊದಲಿಸಿದನು ತನ್ನವರ॥ ೨೯॥ ಬಾಲಸೂರ್ಯನವೋಲು
ತೀಕ್ಷ್ಣಣ । ದೇಳಿಗೆಯು ತೇಜದ ವಿಕಾರ ಛ । ಡಾಳಿಸಿತು ವಿಕ್ರಮದಜಳ ಜಗವಳುಕೆ ರ್ಶೋಂಪಿಸಿತು ॥
ಹೇಳಲೇನರ್ಜುನನ ಭೀಮನ । ಸೋಲುವುದು ತಾಮೃತ್ಯು ವಿಪರಿ । ಕಾಳಗವಸಾನರಿಯೆನಮರಾಸುರ
ರ ಸಮರದಲಿ ॥ ೩೦ ॥ ಸಾಕು ನಿಮಗಾಗದು ವೃಥಾನೀ । ವೇಕಹಂಕರಿಸುವಿರಿ ಸೇನಾ । ನೀಕಹೊ
ದ್ದಳಿ ಹೊಗಲಿ ದೃಷ್ಟದ್ಯುಮ್ನಮೊದಲಾದ ॥ ಆಕೆವಾಳರು ನಿಲಲಿ ಕುಪಿತಪಿ। ನಾಕಿಯುರಿಯಾ ದ್ರೋ
ಣನೆನುತ ವ । ರಾಕೃತಿಯುಪರಬೊಮ್ಮರೂಪನು ತಿರುಗಿಸಿದ ರಥವ ॥ ೩೧ ॥ ಮೇಲೆ ಬಿದ್ದುದು ಮು
ಳಿಸಿನಲಿ ಪಾಂ । ಚಾಲರಾಯನ ಥಟ್ಟು ನಿಶಿತಶ । ರಾಳಿಯುಲಿ ಹೊಳಿದನು ದೃಷ್ಟದ್ಯುಮ್ನನಂಬರವ ॥
ಬಾಲಕರ ಕರಖಡ್ಗಧಾರೆಯು । ಮೇಲೆ ನೋಡುವ ಮಧುರಸವಿಯಲಿ । ನಾಲಗೆಯುವವರೊಲ್ಲರೆಂದನು
ನಗುತ ಕಲಿದ್ರೋಣ ॥೩೨॥ ತೆರಹುಗೊಟ್ಟೊಳಹೊಗಿಸಿ ಸದೆದನು । ಬರಸಿಡಿಲು ಬಡಿವಂತೆ ರಿಪುಬ
ಲ। ವರಲಿ ತೆಗೆದುದು ಗಾಯುವಡೆದರು ಬೇಹನಾಯಕರು ॥ ದುರಿದುರಿಪತಲೆಮಿದುಳ ದಂಡೆಯು। ಹ
ರಿಗರುಳ ನೆಣವಸೆಯು ಮೂಳೆಯು । ಮುರುಕುಗಳ ಕಡಿಖಂಡಮಯುವಾಯ್ತಖಿಳತಳತಂತ್ರ ॥ ೩೩ ॥
ಬೆರಳ ಬಾಯ್ಗಳ ಬಿಸುಟಕೈದುಗ । ಳರೆಗಿರಿದಹಲ್ಲುಗಳ ಕೂಡಿದ । ಕರಪುಟದ ಬಿಡುದಲೆಯ ಬಸಿವೆರ
ಳುಗಳ ಶೋಣಿತದ ॥ ಸರಳಲಾರೋಹಕರ ರಾವ್ತರ । ವರಮಹಾರಥಪಾಯದಳದು । ಬ್ಬರದ ಬೇಗೆ
ಯನೇನನೆಂಬೆನು ವೈರಿಸೇನೆಯಲಿ ॥ ಮುಂದೆ ಹೊಗುವರಬಲರು ಹೋರಿತು । ಹಿಂದಣವರಾಸೆಯು

ಲಿ ನಿಂದುದು । ನಿಂದುದಾಬಲುಹುಯ್ಯ್ಲ ಪವನಜಪಾರ್ಥಪರಿಯಂತ ॥ ಅಂದು ಪಾರ್ಥನು ಕೃಷ್ಣಬ
ಲದಲಿ । ನಿಂದನೇವೇಳುವೆನು ನಿನ್ನವ । ರೆಂದು ಗೆಲ್ಲರು ಗಾಹುತದಕವನುಳಿದು ಕಾದುವೊಡೆ ॥ ೩೫ ॥
ಆರು ಸಾವಿರತೇರು ಗಜಹದಿ।ನಾರುಸಾವಿರ ಲಕ್ಷಕುದುರೆಗ। ಳಾರುಕೋಟಿಪದಾತಿ ಮುಗ್ಗಿತು ಮತ್ತೆ
ಸಂದಣಿಸಿ ॥ ಆರುಲಕ್ಷತುರಂಗ ನೃಪರ್ಕ್ಕೆ । ನೂರು ಗಜಘಟೆ ಲಕ್ಷ ರಥಹದಿ । ಮೂರುಸಾವಿರವಳಿದುದ
ಕೆ ಪರಿಗಣನೆಯಿಲ್ಲೆಂದ ॥ ೩೬ ॥ ಅಂಗವಿಸುವವರಿಲ್ಲ ಭಟರಿಗೆ । ಭಂಗವಿಕ್ಕಿತು ಕೌರವೇಂದ್ರಗೆ
ಸಂಗರದಸಿರಿ ಸಾಗಿತಾ ಕಡೆಗಣ್ಣಸೂಸಿದಳೋ ॥ ಮುಂಗುಡಿಯೊಳಿನ್ನಾರು ಸಮರಂಗಾ । ವಂಗದಲಿ ಗೆ
ಲವಹುದು ಹದನರ । ಸಂಗೆ ಬಿನ್ನಹವಾಡಿಯಾದರು ನಿಖಿಳ ಮಂತ್ರಿಗಳು ॥ ೩೭ ॥ ಕರೆಸಿದನು ಹ
ರಿ ಧರ್ಮಪುತ್ರನ । ನರಸ ಕೇಳಿಂದಿನಲಿ ಗುರುವನು । ಸರಳ ಮೊನೆಯಲಿ ಗೆಲುವು ನೂಕದು ಭೂತ
ನಾಥಂಗೆ ॥ ಧುರದಜಯುವಹುದೊಂದುಪರಿಯಲಿ । ನಿರುತವಲ್ಲದನುಡಿಯುನುಡಿದೊಡೆ । ಪರಿಹರಿಸಬ
ಹುದೆಂದನಸುರಾರಾತಿ ನಸುನಗುತ ॥ ೩೮ ॥ ಕಿವಿಯು ಮುಚ್ಚಿದನರ್ಜುನನು ಹರಿ । ಯವಗಡಿಸಿಕೊಂ
ಡರಸನನುಪಮ । ಪವನಸುತನಾಮಾತ ಕೊಂಡನು ಹೊಕ್ಕನಾಹವವ ॥ ತವಕದಲಿ ತೆಗೆದೆಸುತ ರಿಪುಶ
ರ । ನಿವಹವನು ಖಂಡಿಸುತಲಿಂದಿನ । ಬವರದಲಿ ಕಡಿವಡೆದುದಶ್ವತ್ಥಾಮಗಜವೆಂದ ॥ ಶಿವಶಿವಾ ಕ
ರ್ಣಜ್ವರಾಯುತ । ರವವಿದೆತ್ತಣದೋ ಕುಮಾರನ । ತಿವಿದರೇ ತಾನೇನಿದದ್ಭುತವೆನುತ ಮನದೊಳಗೆ॥
ತವಕಿಸುತ ತಿಳಿದನು ವೃಕೋದರ । ನಿವ ದುರಾತ್ಮನು ತನ್ನ ಮಗನಾ। ಶಿವನೊಡನೆ ಸಮಜೋಳಿ ಹುಸಿ
ಹೋಗೆಂದನಾದ್ರೋಣ ॥ ೪೦ ॥ ಮತ್ತೆ ಮಸಗಿತು ಖತಿಯು ಕರ್ಬೊಗೆ। ಸುತ್ತಿತುರಿಯಲಿಮಿಸೆಗ
ಡಿದೌ । ಡೊತ್ತಿಸೆಳೆದನು ಸರಳಲೆಚ್ಚನು ಪವನನಂದನನ ॥ ಹತ್ತೆಗಡಿದನು ಭೀಮಮರಳಿವ । ಸೊತ್ತಿ
ಹೊಕ್ಕೊಡೆಕ್ಕನೆರವ ಹಾ। ರುತ್ತ ಮುರಿದನು ಬಳಿಕ ದೃಷ್ಟದ್ಯುಮ್ನನಿದಿರಾದ ॥೪೧॥ ಎನಿತುಬಾರಿ
ಪಲಾಯನದ ಸಿರಿ । ನಿನಗೆ ನಿಲುಕದು ವೀರಭಂಡನೊ । ಳೆನಗೆ ನೂಕದು ಸಾರು ಧೃಷ್ಟದ್ಯುಮ್ನ ನಿ
ಲ್ಲೆನುತ ॥ ಅನಿಲಜವದಲಿ ರಥವ ಬಿಟ್ಟನು । ಜನಪತಿಯು ಸಮ್ಮುಖಕೆ ಕವಿದುದು । ತನತನಗೆ ರಾಯನ
ವಿಪತ್ತಿನೊಳೆಖಿಳಪರಿವಾರ ॥ ೪೨ ॥ ಒಲೆದು ಗಜವಿಟ್ಟಣಿಸಿದ್ದವು ಮಿಗೆ । ತಲೆವರಿಗೆಯಲಿ ಪಾಯದಳ
ಪಡಿ । ತಳಿಸುತೊಳಹೊಕ್ಕೌಕಿದವು ಬದ್ದರದ ಭಂಡಿಗಳು ॥ ಸೆಳೆದೊಡಾಯುಧರಾಹುತರು ಕೈ । ನಿ
ಲುಕಿನಿಂದರು ಮುತ್ತಿದರು ಮಂ । ಡಳಿಸಿ ಬೊಬ್ಬಿರಿದಾಲಿದರು ಸಿಲುಕಿದನು ಧೊರೆಯೆನುತ ॥ ೪೩ ॥
ಸಾರಥಿಯ ತುಡುಕಿದರು ತಿವಿದರು । ತೇರ ತೇಜಿಯ ನಿಭದ ಬರಿಕೈ । ತೇರ ಹಿಡಿದವು ಘುಲ್ಲಿಸಿತು
ಮಿಗೆ ಪರಶು ತೋಮರವ ॥ ಭಾರಿಸಿತು ಜನ ಮೇಲೆ ಬಿದ್ದವು। ವಾರುವಂಗಳ ಖುರನಿಕರಮಸೆ । ಧಾ
ರೆ ಮುಖದಲಿ ಮಿಂಚಿದವು ಮುತ್ತಿದವು ಕಲಶಜನ ॥೪೪॥ ದ್ರೋಹಿ ಸಿಲುಕಿದನೆನುತ ಜೀವ । ಗ್ರಾಹ
ವೋ ಗಹನವೊ ವಿಚಾರಿಸು । ಬೇಹವರನೆನುತೊದರಿ ದೃಷ್ಟದ್ಯುಮ್ನನುರವಣಿಸೆ ॥ ಸಾಹಸಿಗಳಳುಕಿ
ದೊಡೆ ಕೌರವ । ಮೋಹರದ ಮೊನೆಯಾಳುಗಳು ಸಂನಾ । ಹದಲಿ ಪಡಿತಳಿಸಿದರು ಕರ್ಣಾದಿ ನಾಯಕ
ರು ॥೪೫॥ ಗಾಳ ಗಂಟಲೊಳಿಳಿಯದೇ ಮ । ತ್ಯಾಳಿಗಳಿಗೀದೊದ್ದೆ ಕವಿದೊಡೆ । ಕೋಲುಗಾರು ಕಳವ
ಳಿಸುವನೆ ಬಯಸುವನೆ ಕೈನೆರವ ॥ ಮೇಲುಗಾಣದೆ ಕವಿದೊಡಿದಿರೇ । ಬಾಲಹರಿಣನ ಹಿಂಡು ಹೆಬ್ಬು
ಲಿ। ಗಾಳದತ್ತರ ತುಳಿದು ತಳಪಟ ಮಾಡಿದನು ದ್ರೋಣ ॥ ೪೬ ॥ ಆರನೆರವಿನೊಳಂಧಕಾರದ । ಭಾ

ರವನು ರವಿ ಗೆಲುವನಿನ್ನೀ। ವೈರಿಬಲ ಭಂಜನೆಗೆ ಗುರು ಹಿಂಗುವನೆ ಕೆಲಬಲಕೆ ॥ ಭೂರಿರಿಪು ಚತು ರಂಗಬಲ ಸಂ। ಹಾರದಲಿ ಬಿಗಿಯೆದ್ದು ರಕುತದ । ಪೂರದಲಿ ಮುಳುಗಿದರು ಕರ್ಣಕೃಪಾದಿ ನಾಯ ಕರು ॥೪೭॥ ಗಾಯವಾಯ್ತರ್ಜುನಗೆ ಮಿಗೆಭೂ । ರಾಯ ಗಾಯದೊಳೊದ್ದು ಕೊಂಡನು । ವಾಯು ಸುತನು ಶಿಖಂಡಿ ಕೈಕೆಯ ದ್ರುಪದನಂದನರು ॥ ಬಾಯಬಿಟ್ಟುದು ಭೀತಿಯಲಿ ಕೌಂ । ತೇಯಸುತರಿ ನ್ನುಳಿದ ಸುಭಟರ। ಸಾಯಕರೆ ಪಾಡೇನು ನಸಿದುದು ಪಾಂಡುಸುತಸೇನೆ॥೪೮॥ ಮೊದಲು ತಾಗಿದ ಚಾ ತುರಂಗವ । ಸದೆದನೊಂದೇ ಲಕ್ಷವನು ಮಿಗಿ । ರಿದೊಡೆ ಸೋದಿಸನೆಂಟುಲಕ್ಷವನೊಂದು ನಿಮಿಷದಲಿ॥ ಕದನದಲಿ ಭಾರಿಸಿದ ಘಟ್ಟಾನು । ಸದೆದು ಕೆಡಹಿದನೆಂಟು ಲಕ್ಷವ । ನೊದವಿಸಿದನಂತಕನ ಪುರಿಗವನೀಶ ಕೇಳೆಂದ ॥೪೯॥ ಧಾರುಣೀಶರು ಮಡಿದರೊಂದೇ । ಸೇರುವೆಯಲೈ ನೂರು ಮತ್ತೆ ಮಹಾರಥರು ಮುನ್ನೂರು ಪುನರಪಿ ನೂರು ಯಿನ್ನೂರು ॥ ಮಾರ್ಗಣೌಘಣವಾಯ್ತು ಯಮುನವ । ದಾರನೋಯ ಲು ನಾಕದಲಿಹೊರ । ಗೇರಗಟ್ಟಿದವೆನಲು ಕೊಂದನು ರಿಪುಚತುರ್ಬಲವ ॥೫೦॥ ಇಳಿದರಿತ್ತಲು ಗಗನ ದಿಂ ಹೊಳೆ । ಹೊಳೆವಧವಳದ ಜೋಡಿಯಲಿ ಜಗ । ಮುಳುಗೆ ಭಸ್ಮವಿಭೂಷಿತಾಂಗದ ಜಡಿವಜಡೆ ದಲೆಯ ॥ ಪುಲಿದೊಗಲ ಸುಲಿಪಲ್ಲ ಮುಕ್ತಾ । ವಳಿಯ ಜಪಮಾಲೆಗಳ ನಿರ್ಮಳ । ಬಲುತಪೋಧನ ರೈದಿದರು ಸಂಗ್ರಾಮ ಭೂಮಿಯಲಿ ॥೫೧॥ ಅತ್ರಿಭಾರದ್ವಾಜ ವಿಶ್ವಾ । ಮಿತ್ರ ಗೌತಮ ಕಣ್ವಕೌ ಶಿಕ । ಮೈತ್ರಸುತರು ವಸಿಷ್ಠ ಗಾರ್ಗ್ಯಾಂಗಿರಸ ಭಾರ್ಗವರು ॥ ಸತ್ರಿಗಳು ವಾಲ್ಮೀಕಿ ಭೃಗುವರ । ಚಿ ತ್ರಚರಿತರು ಬಂದರಲ್ಲಿಗೆ । ಮಿತ್ರಭಾವದಲಿವರಿಗಭಿವಂದಿಸಿದನಾದ್ರೋಣ ॥೫೨॥ ವರಮುನಿಗಳಿಕ್ಷಿಸಿನ ಯದಲಿ ಮೂ । ವರಿಗೆ ಗೋಚರವಾದರಿತ್ತಲು । ಮುರವಿರೋಧಿಗೆ ನರಗೆ ಕುರುಸೇನಾಧಿನಾಥಂಗೆ॥ ಅರಿಯರುಳಿದವರಿತ್ತ ಮಿಗೆ ಸಂ । ಸ್ಮರಿಸಿಕೊಂಡರು ನುಡಿದರಾಮುನಿ । ವರರು ಕಡಿದರು ಕೌರವೇಂ ದ್ರನ ಕಲ್ಪಭೂರುಹವ॥೫೩॥ ಪಾತಕವಲಾ ದ್ರೋಣ ನಿನಗಿದು । ಭೂತಹಿಂಸೆಯದೇಕೆ ಪಾರ್ಥಿವ। ಜಾ ತಿಯಲಿ ಜನಿಸಿದರು ಕೇಳ್ ನಿನ್ನಂತೆ ನಿರ್ದಯರೆ ॥ ಸೋತರೇನದು ಋಷಿಗಳಿಗಪ । ಖ್ಯಾತಿಯೇ ಶಸ್ತ್ರೋಪಜೀವನ । ವೇತಕಿದು ನಮಗೆಂದು ಭಾರದ್ವಾಜಮುನಿ ನುಡಿದ ॥೫೪॥ ಲೋಕವೆಂಬುದು ನ ಮ್ಮಧರ್ಮವ । ನೌಕಿ ನಡೆವುದು ಲೌಕಿಕಕೆ ನಾ । ವಾಕೆವಾಳರು ತಪ್ಪಿನಡೆದೊಡೆ ಬುಧರು ಭ್ರಮಿಸುವ ರು ॥ ಲೋಕನಮ್ಮನು ಜೋಡಿಗಳೆವುದು । ಕಾಕನೆರೆ ಬಳಸುವುದು ದುರಿಯಶ । ವೇಕೆ ನಮಗಿದು ವಿ ಹಿತಕರ್ಮಶ್ರುತಿಪರಿತ್ಯಾಗ ॥ ಶ್ರುತಿಪಠನವೋ ತರ್ಪಣವೊ ವೇ । ಣತಿಥಿ ಪೂಜೆಯೊ ಭೂತದಯೆ ಯೋ । ಹುತವಹಾರಾಧನೆಯೊ ರಣವಿನ್ನಿದರೊಳಾವಫಲ ॥ ಶ್ರುತಿಸಮಸ್ತಸ್ಮೃತಿಗಳೊಳು ಪಂ। ಡಿ ತರು ನವೆನ್ನುವ ವ್ಯೂಢ ಮೂರ್ಖನೆ । ಗತಿಯನನುಕರಿಸಿದೊಡೆ ಬಳಿಕ ವಿಶೇಷವಿಲ್ಲೆಂದ ॥ ೫೬ ॥ ತನುವನುವು ಜಪ ತಪವಿ ಫಲ । ವಾಪುರಾಣಶ್ರವಣಂಗಳಿನ್ನು ಗು । ರೂದಕದಲಿರೆ ಸೇತುಸಂದರ್ಭ ದಲಿ ಫಲವೇನು ॥ ಈಮಹಾಗ್ರಹ ನಿಲಲಿ ಹಾಯಿಕು । ಕೈದುವನು ಸುಸಮಾಧಿಯೋಗದೊ । ಳೈದು ವುದು ನಿಜದೇಹ ನಿಸ್ಪೃಹನಾಗು ನೀನೆಂದ ॥ ೫೭ ॥ ದೇಹವಿದು ಭೂತೇಂದ್ರಿಯಾದಿಯ । ಲಾಹವ ವು ಚಿತ ಕರ್ಮಬಲಸಂ । ದೋಹದಲಿ ತಿರುಗುವುವು ಸುರನರರಿರವ ಗಾಥೆಯಲಿ ॥ ಸ್ನೇಹಕೆತ್ತಣದೀ ಪ್ತಿ ಪಂಚವು । ದೈವವೆನಲುಳಿವಾತ್ಮನಲ್ಲಿಹ। ರೂಹ ನೋಡಾದಿತ್ಯನಲಿ ನೀನಿನ್ನು ನೋಡೆಂದ ॥೫೮॥

ನನೆದುದಂತಃಕರಣ ರೋಮಾಂ । ಚನದ ಪುಳಕದಲಶ್ರುಜಲದಲಿ । ತೊನೆದು ಹೊಂಪುಳಿವೋಗಿ ಕಣ್ಣೆವೆ ಮುಚ್ಚಿ ಹೊರೆಹೆಚ್ಚಿ ॥ ನೆನೆವ ನಿಮ್ಮನು ನಿಮ್ಮ ಪದವರು । ಶನದಿ ಧನ್ಯನು ಬಿಜಯಮಾಡುವುದೆನುತ ಕಂದೆರೆದೀಕ್ಷಿಸಿದ—ಸಭ್ಯುದಯಸ್ವೈನಿಕವ ॥೫೯॥ ತಿರುಗಿದುದು ಮುನಿನಿಕರವತ್ತಲು । ಮರಳಿತೀತನ ಬುದ್ಧಿಯಿತ್ತಲು । ತೆರಹುವಿಡಿದುದು ಮರವೆ ಸಮ್ಯಗ್ಜ್ಞಾನದೀಪ್ತಿಯನು ॥ ಅರಸನನು ಬೆಸಗೊಂಬ ತನುಜನ । ಮರಣವಿದವ್ರೋ ಪುಸಿಯೋ ಭೀಮನ । ಪರಿಯ ನಂಬೆನೆನುತ್ತ ರಾಯನನರಸುತ್ರೈತಂದ ॥ ೬೦ ॥ ಎಲೆಯುಧಿಷ್ಠಿರ ಯೆನ್ನಸುತನಿಂ । ದಳಿದನೇ ಹುಸಿಯಲ್ಲಲೇ ನಿ । ರ್ಮಳವ ಚೋನಿಧಿ ನೀನು ಹೇಳೆನಲಸುರಂಪು ನಗುತ ॥ ಎಲೆಲೆ ಸುಡಿಯಾ ಪಾಪಿ ಕದನದೊ । ಳಳಿದುದಶ್ವತ್ಥಾಮ್ನನೆಂಬ । ಗ ಳದ ಕರಿ ಮಾಳವರೊಳಳಿದುದು ಅಂಜಬೇಡೆಂದ ॥ ೬೧ ॥ ಆದೊಡಶ್ವತ್ಥಾಮಗಜವಿದಿ । ರಾದುದಳಿದುದು ನಿರುತವೆನೆ ಬಿಸು । ಸುಯ್ದು ನರಸನನುಡಿಯನಂಬಿದೆನಕಟವುಗನೆನುತ॥ ಕೈದು ಕೈಯ್ಯಲಿ ಝೋಂಪಿಸಿತು ಬಲು। ಖೇದದಲಿ ಕಾತರಿಸಿದಂತ।ಸ್ವೇದದಲಿ ಕಳವಳಿಸಿ ಕರೆದನು ರೋಷತಾಮಸವ ॥ ೬೨ ॥ ಬಿಲುದುಡುಕಿ ಬಲುಸರಳ ತಿರುವಾ।ಯೊ ಳಿಸಿ ಮಲೆತನು ಮ್ಯಾರ್ಬಲಕೆ ಬಲ। ಗಳಚಿದೊತೆ ಕೊಲ್ಗೆದ್ದುದಿರುಬಿನ ಕಾಳಿಯೊಳೆಂಬಾತೆ॥ ತಿಳುಹಿ ಹೋದರು ಮುನಿಗಳೀತನ । ತಿಳುವು ತೊಟ್ಟುದು ಮರವೆಯನು ಮುಂ । ಕೊಳಿಸಿ ಮೊಗೆದನು ಮತ್ತೆ ಪಾಂಡವಸೈನ್ಯಸಾಗರವ ॥ ೬೩ ॥ ತಿರುಗಿ ಭೀಮನನೆಚ್ಚನಿತ್ತಲು। ನರನ ಮುಸೆಗಾಣಿಸಿದನರಸನ। ಹೊರೆಯ ಬಿರುದರ ಮುರಿಯಲೆಚ್ಚನು ವಾಮದಕ್ಷಿಣವ ॥ ಮರಳಿ ಧೃಷ್ಟದ್ಯುಮ್ನಸಾತ್ಯಕಿ । ವರಯುಧಾಮನ್ಯೂತ್ತಮೌಂಜಸ । ರರಸುಮಕ್ಕಳ ಹಲಬರನು ಮುರಿಯೆಚ್ಚು ಬೊಬ್ಬಿರಿದ ॥ ೬೪ ॥ ಈಸುಭರದಲಿ ಭೂತಹಿಂಸಾ । ದೋಷವನು ನೆರೆ ಮಾಡಿ ಮಕ್ಕಳಿ । ಗೋಸುಗವಲೇ ಧನವು ನೆರೆಯಭಿಮಾನಸುತನಳಿಯೆ ॥ ಆಸೆಯಿದರೊಳಗೆಂದು ರಣದೊಳ। ಗಾಸೆಯಾದುದು ತಿವತಿವಾ ಸುತ।ನಾಶವನು ಬಗೆಗೊಳ್ಳೆನೆಂದನು ನಗುತ ಕಲಿಭೀಮ॥೬೫॥ ಕೇಳಿದನು ಕಡುನೊಂದ ನಡಿಗಡಿ । ಗಾಲಿನೀರ್ದೆರೆದವು ಕೈಯಲಿ। ಕೋಲು ಸಡಿಲಿದುದುಮುಳಿದುದೀತನ ಮನದ ಕಡುತವಕ ॥ ಮೇಲುದುಗುಡದ ಮುಖದಲವನೀ । ಪಾಲಕರ್ಣಕೃಪಾದಿಭಟರಿಗೆ । ಹೇಳಿದನು ಮಗನಳಿದಡಸ್ತ್ರತ್ಯಾಗ ತನಗೆಂದ ॥ ೬೬ ॥ ಎನುತ ರಥದಲಿ ರಚಿಸಿ ಪದುಮಾ । ಸನವನೆಂದ್ರಿಯ ಕರಣವೃತ್ತಿಯ । ನನಿತುವನು ತಡೆದೆತ್ತಿ ಮೂಲಾಧಾರಮಾರುತನ ॥ ಇನಶಶಿಗಳೊಂದಾಗೆ ನಾಡಿಗಳನು ಕೊಳಿಸಿ ಮಮಕಾರವಳಿದ । ಧ್ವನಿಕಳಾಪರಿಲುಳಿತನಿದ್ದನು ಪರಸಮಾಧಿಯಲಿ ॥ ೬೭ ॥ ನಾಸಿಕಾಗ್ರದೊಳಿಟ್ಟು ಕಂಗಳ। ಸೂಸದುಸುರಿನ ಶೇಷಕಿರಣಪಿ। ಯೂಷಪಾವನರೋಮಪುಳಕದ ಗುಡಿಯ ಬೀಡುಗಳ ॥ ಆಸುಷುಮ್ನಾನಾಡಿಯಲಿ ಮನವು ಕ । ಳಾಸಿಸಿದಪವನನಸಮಾಧಿಪಿ । ಲಾಸನೆಸೆದನು ಸೌಖ್ಯಭಾವದ ಜಡಿವಝೋಂಪಿನಲಿ ॥೬೮॥ ತನ್ನೊಳಿತರವನೆನೆವರೇ ತಾ। ತನ್ನೊಳೀಕ್ಷಿಸಿ ತಾನು ತಾನಿಂ । ದನ್ಯವೆರಡರೊಳೈಕ್ಯವೆಂಬಾಚಾರ್ಯಭಾವವನು ॥ ತನ್ನೊಳಗೆ ಹುಸಿಯೆಂದು ನಿತ್ಯಾ। ನನ್ಯನೆಮಲಜ್ಞಾನರೂಪವ । ತನ್ನನಿಲವೆಂಬರವು ತಾನಾಗಿರ್ದನಾದ್ರೋಣ ॥ ೬೯ ॥ ಒಡೆದುದೊಡಲಲಿ ಜ್ಯೋತಿ ತಡೆಯದೆ । ನಡುವೆಳಗು ಥಳಥಳಿಸಿದುದು ಮೇ । ಣ್ಮೊತ್ತಡುಕಿ ಭೂಲೋಕಾದಿಯಾಗಿರ್ದಖಿಳಲೋಕವನು॥ ಕುಡಿವೆಳಗನೆಸುರಾರಿಮುನಿಗಳ । ಗಡಣವರ್ಜುನನವರು ಕಂಡರು । ಪಡೆಯೊಳಗೆ ತಾನುಳಿಯೆ ಕಂಡ

ವರಿಲ್ಲ ಬಳಿಕೆಂದ ॥ ೭೦ ॥ ತೀರಿತೇ ಮಗನುಬ್ಬಟೆಯ ಜಾಜ್ವಲ್ಯತನವಿಂದಾರು ಯಾಪ್ತಿಗ । ರಾರು ದೊರೆಯಿನ್ನಾರು ಕಾವವರಾರು ಸಂಗರಕೆ ॥ ಆರು ನಿನಗಿಂದೇಗುವರು ರಣ । ಧೀರರಗ್ಗದ ದೈವವೇ ಮಸ । ವಾರೆ ನಂಬಿಹುವವರೆಸಿನ್ನೇನೆಲಸ ಕೇಳೆಂದ ॥ ... ... ॥ ೭೧ ॥

ಅಂತು ಸಂಧಿ ೧೮ಕ್ಕೆ ಪದ ೧೧೪೭ಕ್ಕಂ ಮಂಗಳಮಸ್ತು.



## ಹತ್ತೊಂಬತ್ತನೆಯ ಸಂಧಿ.

॥ಸೂಚನೆ ॥ ರಾಯಕಟಕವ ಜಗಿದ ಬಸಿದನಾ । ರಾಯಣಾಸ್ತ್ರದ ಬಾಧೆಯನು ಕಮ । ಲಾಯತಾಂಬಕ ನಿಲಿಸಿ ಸಂತೈಸಿದನು ಪಾಂಡವರ ॥

ಪದ ॥ ಕೇಳು ಧೃತರಾಷ್ಟ್ರಾವನಿಪ ಗುರು । ಬೀಳುಕೊಟ್ಟನು ದೇಹವನು ಸ । ಮ್ಮೇಳವಿಧಿಯೇನಪಜಯದ ತಪಸಿದ್ಧಿಯಲಿ ನಿಮಗೆ ॥ ಮೇಲೆ ಬಂದುದು ಕಷ್ಟವೆರಿಭೂ । ಪಾಲರಿಗೆ ಕೇಳಿದರು ಮಿಗೆ ಪಾಂ । ಚಾಲಸುತ ಕೈತಂದನಲ್ಲಿಗೆ ಜಡಿವ ಕಡುಗವಲಿ ॥೧॥ ಅಯ್ದಿ ಮುಂದಲೆವಿಡಿದು ಭಾಗಿಸಿ ಕೊಯ್ದ ನಾತನ ಕೊರಳ ಸೆಸವಲಿ । ಹಾಯ್ದು ಮುಂದಸು ಬದಿಯನಪ್ಪಳಿಸಿದನು ಬೆಸ್ಸಳುವ ॥ ಕಯ್ದುಣಿಯೇ ಕಟುಖಾತವಮಯನೆನೆ । ಹೊಯ್ದು ರಥದಲಿ ಕೆಡೆದು ಪುಜಡಿ । ವಾಯ್ದು ವನು ಕಡುಗೋಪದಲಿ ನೋಡಿದನು ಗುಪ್ತಿರವ ॥ ೨ ॥ ಎಲೆಲೆ ಪಾತಕ ಹೆಣನ ಹೊಯ್ದಡೆ । ಬಲುಗಡಿಯ ನೀನೆಂಬರೇ ಸುಡು । ಕೊಲೆಯನಿವಕಂಗೈಸುವರೆ ಕ್ಷಾತ್ರಾಜಪುತ್ರಗಡ ॥ ತಿಳಿದನಾದೊಡೆ ನಿನ್ನ ಭಾಗ್ಯವು । ವುಳಿದೊಡೀತನ ಮಗನು ನಿನ್ನಯ । ಕುಲದ ತಲೆಚೆಂಡಾಡಿವಲ್ಲದೆ ಬರದೆಬಿಡನೆಂದ ॥೩॥ ಎಂದಸೂತನ ಬಾಯ ಹೊರಗೈ । ಯಿಂತ ಹೊಯ್ದನು ತಡಹಿದವರೆನು । ಹಿಂದಣಾಪ್ತರನಖಿಳಚಮರಚ್ಛತ್ರಧಾರಿಗಳ ॥ ಮುಂದುವರಿದೊಡೆ ಮುರಿದು ತಿವಿದನು । ಮಂಪಮತಿ ಬಳಿಕಿವನ ಸುಡುಸುಡ । ಲೆಂದು ಧೃಷ್ಟದ್ಯುಮ್ನನನು ಸೆರೆ ಬೈದುಮಖಿಳಜನ ॥ ೪ ॥ ಕಡುಕುಗಳ ನಾಯ್ದಿರಿಸಿ ರಥದಲಿ । ಗುಡಿಯಸಿಂಧವನೆತ್ತಿ ಸಾರಥಿ । ತುಡುಕಿ ವಾಘೆಯ ಮುರುಹಿ ಮುರ್ಕಿಚಿ ರಥದಕುದುರೆಗಳ ॥ ತಡೆಯದಶ್ವತ್ಥಾಮನವನಿ । ದ್ದೆಡೆಗೆ ಬರುತಿರೆ ಕಂಡು ಮನದಲಿ । ಕಡುಪಿರೋಧವ । ಹಿಡಿದು ಚಿಂತಿಸುತಿರ್ದನಾ ದ್ರೋಣ ॥ ೫ ॥ ಏನಿದಚ್ಚರಿ ಕೌರವೇಂದ್ರನ । ಸೇನೆ ತಲೆಕೆಳಕಾಗುತಿದೆ ರಿಪು । ಸೇನೆ ಬೊಬ್ಬಿರಿದಾಡುತಿದೆ ಮಡಿದಾತ ನಾವವನೋ ॥ ಸೇನೆಗೊಡೆಯನು ಬೊಪ್ಪನಿದು ತಾ । ನೇನು ರಥವಿದು ಬರಿದೆ ಬರುತಿದೆ । ಹಾನಿ ಜನಕಂಗಾಗದಿರದೇ ಶಿವಶಿವಾಯೆಂದ ॥ ೬ ॥ ತಂದು ಸಾರಥಿ ರಥವನೀತನ । ಮುಂದೆನಿಲಿಸಿದ ಬಿದ್ದ ಸಂಕ್ಷೆಪ್ರಯೊ । ಳಂದು ಗೋಳಿಟ್ಟಳುತ ಕಳಶಜಸಾಪ್ತಪರಿಜನವ ॥ ತಂದೆಯೈದನೆ ಚಾಪವೇದ ಮು । ಕುಂದನೈದಿದ ನಿನ್ನ ಕಾಣಲು । ಬಂದನಯ್ಯನನಪ್ಪಿಕೊಳು ಮಾತಾಡು ನೀನೆಂದ ॥ ೭ ॥ ಕೂಡೆ ಹರಿಹಂಚಾದ ತಂದೆಯ । ಗೂಡ ನೋಡದ ಮುನ್ನ ಕಂಬನಿ । ಮೂಡಿ ಮುಳುಗಿದು ಮಾಲಿ ಕಾಣವು ಪಿತನ ಕಳೆವರನ ॥ ನೋಡಲೆಳಸದ ಮುನ್ನ ಕಿಡಿಗಳ । ಝಾಡಿಯನು ಕಣ್ಣುಗುಳಿದವು ಮಿಗೆ । ನೋಡುತ

ಶ್ವತ್ಥಾಮ ಕಾಣನು ಮುಂದೆ ಪರಬಲವ ॥ ೮ ॥ ಅದ್ದನೆಳಲಿನ ಜಲಧಿಯೊಳು ಮುಳು। ಗೆದ್ದಕೋ ಪಾನಳನ ಝಳದಲಿ।ಬಿದ್ದು ನನೆದನು ನಿರಿಸಿನಲಿ ಕಾಹೇರಿ ಕಿಚ್ಚಿನಲಿ॥ಗೆದ್ದುದುದಕವನನಲನನಲನ। ನದ್ದಿ ತುದಕವ ದೊಂದನೊಂದನು । ಕದ್ದವೆರಡರ ಹೋರಟೆಗೆ ಗುರಸೂನು ಬೆಂಡಾದ ॥೯॥ ಕೆದರಿ ಹೊರ ಳುವಸಾರಥಿಯುನೆ । ತ್ತಿದನು ರಣ ವೃತ್ತಾಂತವನು ಕೇ । ಳಿದನು ಕ್ಷಮೆಸ್ಥೈರಣಾವಿವೇಕವ ನೂಕಿದನು ಸೆರೆಗೆ ॥ ಒದೆದನೆಳಲನು ರೋಮಹರುಷವ । ನೊದೆದು ಹೊರೆಹೆಚ್ಚಿದನು ಕಾಹೇ । ರಿದನು ಕಲುಮನ ವಳುಕ ತಗ್ಗಿತು ರೋಷಭಾವದಲಿ ॥ ೧೦ ॥ ಚಟುಲಕೋಪಾಗ್ನಿಯಲಿ ಸಾಸಾ । ಪುಟವದಸುಯ್ಲಿನ ತಿವಿವಜಾತ । ಸ್ಫುಟಸಮಾಧಿಗಳಧಿಕದಲಿ ವಿಗ್ರಹಕಟಾಕ್ಷದಲಿ ॥ ಪಟುತರಣಬಾಹುಪ್ರತಾಪದ । ಘಟ ವನೆತ್ತಿದೆ ಮಾಣನೆನೆ ತೂ । ಕಟಿಸುತಿರ್ದುದು ರೌದ್ರವೀರಾದ್ಭುತದರಭಸದಲಿ॥ ನೊಂದಜವನೋ ಜ ಗವನುರುಹಲು। ಬಂದಶಿವನೋ ಕಂಭದಿಂದೊಡೆ।ತಂದರೌದ್ರಾಟೋಪಮಾನವರೂಪಕೇಸರಿಯೋ॥ತಂ ದೆಯುಳಲಿಗನಿರವು ವಿಶ್ವವ । ನೊಂದುನಿಮಿಷಕೆ ಸುಡುವುದೋ ಹಾ । ಯೆಂದುದೆಮರಾನೀಕವೆಲೆಭೂ ಪಾಲ ಕೇಳೆಂದ ॥ ೧೨ ॥ ಮುರುಹಿದನು ಮೀಸೆಯನು ಕಣ್ಣಿಗ । ಳರಳಿದವು ಹೊಗೆಸುತ್ತಿ ಸುಯ್ಲಿ ಲಿ । ಸುರಿದುದುರಿಹುಬ್ಬುಗಳು ಬಿಗಿದೌಡುಗಳನೊಡೆಯುಗಿದು ॥ ಬೆರಳ ತುದಿಯಲಿ ಬೊಬ್ಬಿರಿದು ಹರಿ । ಶರಕೆ ಕೈನೀಡಿದನು ಕಲ್ಪದ । ಹರನವೋಲ್ ರೂಪಾಗಿ ಹೊಂಗಿದನಧಿಕರೋಷದಲಿ ॥ ೧೩ ॥ ದನುಜಹರಮಂತ್ರವನು ಮನದಲಿ । ನೆನೆದು ಕೈನೀಡಿದನು ತುದಿಯಂ । ಬಿನಲಿ ತುರುಗದಕಿಡಿಯು ಬಿಡುಕೇಸರಿಯ ಧಾಳಿಗಳ ॥ ತನಿಹೊಗೆಯು ಬಲುಹೊಗರ ಹೊರಳಿಯು । ಕನಕರಸದೇಳಿಗೆಯ ವರಮ್ಯ। ಮಿನುಗುಗಳ ಹೊಂಗರಿಯುನಾರಾಯಣಮಹಾಶರವ ॥೧೪॥ ಪ್ರಳಯಮೇಘವನೊದೆದಕಲ್ಪದ । ಝ ಳದಧಾರಾರಶ್ಮಿಯೊಳು ಜಗ । ದೆಳಿವಿನಲಿ ಝೋಂಪಿಸುವಹರನುರಿಗಣ್ಣ ಬಲುವೆಳಗೋ ॥ ಮುಳಿದ ನರಕೇಸರಿಯ ದಾಡಯು । ಥಳಥಳಾಕಾರವೊ ಮಹಾಸ್ತ್ರದ । ಬೆಳಗು ಹೆಸರಿಡಲಾರುಬಲ್ಲರು ಭೂಪ ಕೇಳೆಂದ ॥೧೫॥ ಸರಳಚೂಣಿಯ ಝಳದೊಳಗೆ ಸಾ । ವಿರನಿದಾಘದ ಸೂರ್ಯರುಬ್ಬಿತೆ । ಕರಗಿಹೋ ಯಿತು ಬಾಯುಧಾರೆಯ ಕಿಡಿಯುಚೂಣಿಯಲಿ ॥ ಬರಸಿಡಿಲ ಶತಕೋಟಿ ಸಿಡಿದ್ದವು । ಗಿರಿಹೊಗರಕ ಬೊಗೆಯ ಕಿಡಿಯಲಿ । ಹೊರೆದವೆಂತ್ಯದಮೇಘವೆನೆ ಝಗಝಗಿಸಿತಮಳಾಸ್ತ್ರ ॥೧೬॥ ಒಳಗೆ ಜಲ ಚರವೊದಗಿ ಕುದಿದುದು । ಜಲಧಿ ಕಾದುದು ಧರಣಿ ಸೀದುದು । ಕುಲಗಿರಿಗಳುರೆ ಸಿಡಿದು ಸೀಕರಿವೋ ಯ್ತು ವನನಿಕರ ॥ ನೆಲಕೆ ದಾಡೆಯು ಕೊಟ್ಟು ಕುಂಭ । ಸ್ಥಳಕೆ ತೆಗೆದ್ದವು ದಿಗಿಭತತಿಹೆಡ । ತಲೆಯ ಮಣಿಗಳನಾಂತನೆವನಿಯನುರಗಪತಿಯೆಂದ ॥೧೭॥ ಗುಳವ ಕೊಯ್ದಿಳುಹಿದರು ಕರಿಸಂ । ಕುಳದಲಾ ರೋಹಕರು ಜೋಡನು । ಕಳಚಿ ಬಿಸುಟರು ರಾವುತರು ಯಿಳಿದೋಡಿದರು ಹಯುವ ॥ ಝಳದಝಾ ಡಿಗೆಬೇಗೆವರಿವಂ । ಚಲದ ಗಾಳಿಗೆ ಮೊಗವನೆತ್ತಿದ । ರಳುಕ ಕಣುಕೋರೈಸಿ ಮಂಮಲಮರುಗಿತು ಭಯಬಲ ॥೧೮॥ ಮೇಲುಜಗವಲ್ಲಾಡಿದ್ದವು ಧ್ರುವ । ನಾಲಯಕೆ ನೆಲೆತಪ್ಪಿದುದು ಗ್ರಹ । ಜಾಲತಾರಾ ರಾಶಿಜೋಯಿಸರಂದು ಹುಸಿಯಾಯ್ತು॥ ಜಾಳಿಸಿದಸೆಗಳಿಗೆಯು ತಳಪಾ । ತಾಳವೊದೆದುದು ಕಮಲ ಜಾಂಡದ । ಮೇಲಣಂತರವಾರಿ ಕುದಿದುದು ಹೇಳಲೇನೆಂದ ॥೧೯॥ ಒಡೆಯರಿಲ್ಲಾ ಜಗಕೆ ಲೋಗರು ಸುಡುವಿಗೊಪ್ಪಿಸಿಕೊಡುವರೇ ತಾ। ನೊಡೆಯು ಘಡ ತಾನೊಡೆಯರೆಂಬರು ಮೂವರೀಜಗಕೆ ॥ ನುಡಿವ

ರೀಹೊತ್ತಿನಲಿ ನಮಗಾ । ರೊಡೆಯನಾವಿನ್ನಾರ ಬಸುರೊಳಗಡ । ಗುವೆವು ಶಿವಶಿವಎನುತ ತವೆತಲ್ಲಣಿ ಸಿತಮರಗಣ ॥೨೦॥ ಕಪಿದಕೌರವಬಲದ ಸುಪ್ಪಾ । ನವನು ತಮ್ಮಂಜಕೆಯನಾವಿಗೆ । ಬವರಭಾರಿ ಯ ಸರಳ ಸೊಗಡಿಗೆ ಬೇವಮೂಬಗವ ॥ ಅವರು ಕಂಡರು ಖಾತಿಯಲಿ ಪಾಂ । ಡವರು ಧೃಷ್ಟದ್ಯು ಮ್ನನನು ತವ । ತವಗ ಬೈದರು ಪಾಪಿ ಲೋಕವ ಕೊಂದೆ ನೀನೆನುತ ॥೨೧॥ ಅಕಟ ಗುರುಹತ್ಯಾಮ ಹಾಪಾ । ತಕವನೇ ನೆರೆಮಾಡಿದಲ್ಲದೆ । ಸಕಲಲೋಕದ ಬೇರುಗೊಲೆಗೆಲೆಪಾಪಿ ನೀನಾದೈ ॥ ಪ್ರಕಟವಿ ಕ್ರಮವಿಸ್ಫುಲಿಂಗ । ಪ್ರಕರದಲಿ ಗದಗದಿಸುತಿದೆ ಸಾ । ಯಕವ ನಿಲಿಸಾ ನೀನೆನುತ ಭಂಗಿಸಿತು ಪರಿವಾ ರ ॥೨೨॥ ಆವನ ಗುರುತನವೇನು ವಿಪ್ರಾ । ಧವನಲಾ ಶಸ್ತ್ರೋಪಜೀವನ । ನಿವನು ಋಷಿಯೋ ದ್ರೋಣವಧೆಯನ್ಯಾಯವೇ ತನಗೆ ॥ ಇವನು ನಮ್ಮಯ್ಯನನು ನೆರೆ ಪರಿ । ಭವಿಸನೇ ಚಿಕ್ಕಂದು ನಿಮ ಗೇ । ನಿವನನಿಂದೊಡೆಖಾತಿಯೆಂದನು ದ್ರುಪದಸುತ ಮುಳಿದು ॥೨೩॥ ಆವಗಡಿಸಲೇಕಗ್ರಜನನ ।ಧ್ರು ವನೆಯಕಟಾಚಾರ್ಯನೆಲನಿ । ನ್ನವರವರ ನುಡಿಯಂತೆ ಸುಡಿವರೆ ಗುರುವಲಾ ನಿನಗೆ ॥ ಇವರಿಗೀನುಡಿ ಯುಚಿಸಿತೇನಿದು । ಶಿವಶಿವಾ ಗುರುನಿಂದೆಯನು ಕೇ । ಳ್ದವರು ನಾವಲ್ಲೆನುತ ಸಾತ್ಯಕಿ ಮುಚ್ಚಿದನು ಕಿವಿಯ ॥೨೪॥ ಗುರುವಿಘಾತಕರಾವು ನೀನತಿ । ಗುರುವಿನುಪದೇಶಿಕನು ತನ್ನನು । ಕರೆದರಾರಿದಕೆಂ ದು ಧೃಷ್ಟದ್ಯುಮ್ನನುಂದೇಳೆ ॥ ದುರುಳತನವಾರೊಡನೆಯೆಲೆಬಾ। ಹಿರ ಮಹಾಪಾತಕಿಯೆ ಥಡ ನಿ। ಟ್ಟೊರಸುವೆನು ತಾನೆನುತ ಸಾತ್ಯಕಿ ಖಂಡೆಯವ ಜಡಿದ ॥೨೫॥ ಎಲೆಲೆ ಹಿಡಿಹಿಡಿ ಸಾತ್ಯಕಿಯನೊಳ । ಗೊಳಗೆ ತೋಟಿಯೆ ಕೌರವೇಂದ್ರನ । ಬಲದ ಪರಬೂತಾಟವಾಯಿತೆ ನಮ್ಮ ಥಟ್ಟಿನಲಿ ॥ ನಿಲಿಸೆನುತ ನೃಪ ನುಡಿಯೆ ಕಪಿದೊಡ । ಗಲಸಿ ಹಿಡಿದನು ಭೀಮನೀತನ । ಬಲುಭುಜವನೌಚಿದನು ಕೊಂಡನು ಕರದ ಖಂಡೆಯವ ॥೨೬॥ ಸೆಳೆದನೊರೆಯಲಡಾಯುಧವನ । ವ್ವಳಿಸಿದನು ಪಾಂಚಾಲಸುತನೀ । ಗಳ ವನನು ಹಿಡಿ ಭೀಮ ಕೊಡು ಸಾತ್ಯಕಿಯ ಖಂಡೆಯವ ॥ ಎಲೆವೊ ಸಾತ್ಯಕಿ ಕೃಷ್ಣದೇವರಿ । ಗಳುಃ ಸ್ಕ್ರಿ ರಸಿದೊಡೆ ತುತಾರಿಸಿ। ಗೆಲನುಡಿವ ಹೆಡತಲೆಯೊಳುಗವನು ನಿನ್ನ ನಾಲಗೆಯ ॥೨೭॥ ತನ್ನೊಳಿರ್ದವ ಗುಣವ ನೋಡದೆ । ಚುನ್ನವಾಡುವರಬರಲೆಲವೋ। ನಿನ್ನ ಹೋಲುವರಾರು ಬಾಹಿರಭಂಡರವನಿಯ ಲಿ ॥ ತನ್ನ ಶಸ್ತ್ರಾಸ ಬಿಸುಟು ಯೋಗಪಿ । ಪನ್ನಮಾಯನನೇನಮಾಡಿದೆ । ನಿನ್ನ ನೋಡಿದು ಬಳಿಕ ಪರರನು ಹೇಳು ನೀನೆಂದ ॥೨೮॥ ಮಿಡುಕಿದನು ಸಾತ್ಯಕಿ ವೃಕೋದರ । ನೊಡೆಯವಂಚಿಸಬೇಡ ಪವ ನಜ । ಬಿಡು ನಿನಗೆ ನೃಪನಾಣೆ ಕುಡಿವೆನು ಖಳನ ಶೋಣಿತವ ॥ ಬಿಡುಬಿಡಕಟಾ ಭೀಮ ಸಾತ್ಯಕಿ । ಹಿ ಡಿಹಿಡಿಯ ಹಮ್ಮೈಸುವನು ಬಿಡು।ತೊಡಕಿ ನೋಡಲಿಯೆನುತ ಧೃಷ್ಟದ್ಯುಮ್ನನಳ್ಳಿರಿದ ॥೨೯॥ ಮು ಳಿದು ಯಾದವಸೇನೆ ಕೈದುವ । ಸೆಳೆದುದಾಪಾಂಚಾಲನಾಯಕ। ರುಲಿದು ನಿಂದುದ ಕಂಡನಸುರಧ್ವಂಸಿ ನಸುನಗುತ ॥ ಎಲೆಲೆಪಾಪಿಗಳಿರ ವೃಥಾತ । ಮ್ಮೊಳಗೆ ಕೋಟಿಶರಾಗ್ನಿಯಿತ್ತಲು । ವೊಳಗುತಿದೆ ಕೆ ಡೆ ಬೀಳಹೊಯ್ದೊಯ್ಯುಕ್ಕನ್ನಿಗಳನೆಂದ ॥೩೦॥ ಬೇರೆ ತನಗೊಂದಾಳುತನವೇ । ಸೂರೆಗೊಳುತಿದೆ ಜಗವ ನಿತ್ತಲು । ಕಾರಿಡುವಕಾಲಾಗ್ನಿಯದೆ ಕರ್ಬೊಗೆಯ ಕವಚದಲಿ ॥ ತೋರಲಾಪರೆ ಬಾಹುಸತ್ವವ । ತೋರಯಿದಿರಲಿ ಪಂತದೋಲೆಯ । ಕಾರರೆಂದೆನುತಸುರರಿಪು ನಿಲಿಸಿದನು ಗಜಬಜವ ॥೩೧॥ ಇತ್ತ ಲೋಕದ ಕಂಗಳೆವೆಗಳು । ಕೆತ್ತು ಥಳ್ಳುರವುರಿಯ ತಾಳಿಗೆ । ಮುತ್ತಿದವು ಹರಿದಶ್ವಶತವನು ಶಿವ

ಮಹಾದೇವ॥ಕಿತ್ತು ಶರವನು ತೂಗಿ ಬಿಲ್ಲಲಿ।ತೆತ್ತಿಸಿದನುರೆ ಸೇದಿ ತೋಂಸಿ। ಹತ್ತುನಿನಗಂಸೇನೆ ಹೋಗೆಂದೆಚ್ಚು ಬೊಬ್ಬಿರಿದ ॥೩೨॥ ಬಿಗಿದು ಹುಯ್ಯಲು ಬಡಿಯೆ ಭುಪನವ । ಲಗಡು ಕೌರವಸೇನೆ ಹರುಷದ । ಸೊಗಸಿನಲಿ ಹೊಮ್ಮಿರಿಯು ಮರೆಯುರಲಾ ಕೃಪಾಟಿಗಳು॥ ಹೊಗೆಯ ಹೊರಳಿಯ ಘಟ್ಟಿನಲಿ ಮಿಗೆ । ತೆಗೆದುಬಿಯುತೆಕ್ಕೆಯುಲಿ ಕಿಡಿ ಝಗ । ಝಗಿಸೆ ಥಾಳಿಟ್ಟುದು ಮಹಾಶರವಹಿತಮೋಹರಕೆ ॥೩೩॥ ಹಾ ಮುರಾಂತಕ ಹಾ ಯುಧಿಷ್ಠಿರ । ಹಾ ಮರುತಸುತ ಹಾ ಧನಂಜಯ । ಸೋಮವಂಶಸಮಾಪ್ತ ವಾಯ್ತೆಂದೆನಲಿ ಹಾಯೆನುತ ॥ ಭೂಮಿ ತೆರೆಯಳೆ ಬಾಯನಕಟಾ । ಸೋಮಧರನೇ ಬಲ್ಲನಾವಿ । ನ್ನೀಮಹಾಸ್ತ್ರಕೆ ಸಿಲುಕಿದೆವು ಯೆಂದೊರಲಿತಂಸೇನೆ ॥೩೪॥ ಕಳಕಳಿಸಿತಂಸೇನೆ ಚೂಣಿಯ ಬಲುಗಿಡಿಯು ಸೆಕೆ ತಾಕಿ ಸುಭಟಾ । ವಳಿಯು ಮಿಾಸೆಗಳುರಿಯೆ ಕುಟದವು ಭಟರ ಮೋರೆಗಳು ॥ ಒಲದ ಸುತ್ತಲು ಕಟ್ಟಿತುರಿ ಮಿಗೆ । ಬೆಳಗುಗುಡಿದವು ಕರ್ಬೊಗೆಯ ಸಂ । ಚಲದಬಾಣದ ಬಂದಿಯಲಿ ಸಿಲುಕಿದುದು ರಿಪುಸೇನೆ ॥೩೫॥ ಝಳಕೆ ಘೋಳಿಟ್ಟೊರಲಿದವು ಕರಿ । ಕುಲ ತುರಂಗದ ಥಟ್ಟುಖುರದಲಿ । ನೆಲನಹೊಯ್ದುಪ್ಪಳಿಸಿದವು ರಾವುತರನೀಡಾಡಿ ॥ ಬಲುರಥಗಳನು ಬಿಡಿದು ಸೂತರ । ನಿಳುಹಿ ಹಯವೋಡಿದವು ಮುಂಮಳ । ಗೊಳುತ ನಿಗುರಿತು ಪುರಿಯಕೋಟಲೆಗೊಂಡುದರಿಸೇನೆ ॥೩೬॥ ರಾಯರಂಜದಿರಂಜದಿರಿ ಮಿಗೆ । ಬಾಯ ಬಿಟ್ಟೊಡೆ ಹೋಹುದೇ ನಿ । ಮ್ಮಾಯತಿಕೆ ಹೊಣೆಗಾನು ಹೇಳಿದ ಮಾತ ಬೇಗದಲಿ ॥ ಆಯುಧಂಗಳ ಕಳೆದುಬಿಸುಡಿ ವ । ಸಾಯುಜಂಗಳನಿಳಿದು ಬದುಕುವು । ಪಾಯವೆಂದಸುರಾರಿ ಸಾರಿದನಂದು ನಿಜಬಲಕೆ ॥೩೭॥ ತಳಿತಹೂವಿನ ತೊಡಬೆಯೋ ಕಾಳಿ । ದಲೆಯ ತೀಟೆಯಭಾರವೋ ನಿ । ರ್ಮಳದಚಿತ್ತದ ಖಾತಿಯೋ ನವ್ಯಸನಿಯೊಡವೆಗಳೊ ॥ ನಳಿನನಾಭನ ಮಾತು ಹಿಂಚಿತು । ಕಳಚಿದವು ಕೈದುಗಳು ಪಾಯ್ದಳ । ವುಳಿದು ಜೋಕೆಯ ಜೋಡ ತೊಟ್ಟುದು ಪಾಂಡುಸುತಸೇನೆ ॥೩೮॥ ಆತನಾವೆಡೆ ಧರ್ಮಜನು ವಿ। ಖ್ಯಾತನಾಕಲಿಪಾರ್ಥ ಮಾದ್ರೀ। ಜಾತರೆಲ್ಲಿಹರುಳಿದ ಧರ್ಮಜನನುಜರೆಂದೆನುತ॥ಬೀತಕೈದುಗಳಲ್ಲಿ ಬಲಸಂ। ಘಾತವನು ಬಾಣಾಗ್ನಿ ಬೆರಸಿತು। ಘೂತು ಭಂಡರೆನುತ್ತ ಬಿಟ್ಟುದು ಬಾಣವರಿಭಟರ ॥೩೯॥ ಹರಿಯಿರದೆ ಭಾರಿಸಲು ವರನೃಪ । ನಿರೆ ನಿರಾಯುಧರಾದವಾದ್ರೇ । ಯರು ಶಿಖಂಡಿಯುಯುಧಾನ ಸಾತ್ಯಕಿ ಸೃಂಜಯಾದಿಗಳು ॥ ಕರದಕದಪಿನ ತಳಿತಮುಸುಕಿನ । ಹೊರೆದವುಗೌನದ ಮುಂದೆ ಹರಹಿದ । ತರದಕೈದುವ ಬಿಸುಟಬಿರುದರ ಕಂಡುದಮಳಾಸ್ತ್ರ ॥೪೦॥ ಏಕೆ ನಾಚಿಕೆ ಧರ್ಮಹಾನಿ । ವ್ಯಾಕುಲಿತೆ ಯಿಂದಿನಲಿ ನಿಮಗಿ । ನ್ನೇಕೆ ವೈದಿಕವೇಗುವೆವು ಜೀವಕ್ಕೆ ಕಲಿಯುಂಟೆ ॥ ಏಕೆ ಭಯ ನಿಮಗಿನ್ನು ಕೈದುವ । ನೂಕಿದವರನು ಭೀತಿಗೊಂಬರ ಸೋಕಿದೊಡೆ ಮುರಹರನಪದದಾಣೆಂದುದಮಳಾಸ್ತ್ರ ॥೪೧॥ ಇವರೊಳುಂಟೇ ಕೈದುವಿಡಿದವ । ರವರನರಸುವೆನೆನುತ ಬರಲಾ । ಪವನಜನು ಥಟ್ಟಿಸಲು ಕಂಡಸುರಾರಿ ತಾ ಮುಳಿದು ॥ ಅವನಿಗಳಿಬ್ಬಡಾಡಿದನು ಕೈದುವನು ತಾ ಮೊದಲಾಗಿ ನಿಂದಂ। ದವನು ನೋಡೆನಲನಿಲಸುತ ನಸುನಗುತಲಿಂತೆಂದ ॥೪೨॥ ದೇಹಕೀರ್ತಿಗಳೊಳಗೆ ನಿಲುವುದು । ದೇಹವೋ ಕೀರ್ತಿಯೊ ಮುರಾಂತಕ। ಬೇಹುದನು ಬೆಸಸಿದೊಡೆ ಮಾಡೆನು ಬಲ್ಲೆ ನಿನ್ನನುವ ॥ ಗಾಹುಗತಕದಲುಳಿವಧರ್ಮ । ದ್ರೋಹತನವೇ ಯಿನ್ನು ನೋಡಾ । ಸಾಹಸವ ನಿನ್ನೆನುತ ಮುರಿದನು ಸರಳ ಸಮ್ಮುಖಕೆ ॥೪೩॥ ಘೂತು ಪಾಯಕು ಭೀಮನೇ ಅತಿ । ಭೀತಬಲದಲಿ

ವೀರ ನೀನೇ । ಯಾತಕಿವದಿರು ಗಂಡುಬೋಹದ ಗರುವಸೂಳೆಯರು ॥ ಸೋತೊಡೆಯು ಜಯ ನಿನ್ನ ದೆನುತ ವಿ । ಭೂತಧೂಮದ ಝಾಡಿಕಿಡಿಗಳೊ । ಳೀತನನು ಮುಸುಕಿದುದು ತುಂಬಿಸಿತಂಬು ಪವನಜನ ॥೪೪॥ ಗರಿಯ ಮುತ್ತಿದಮುಗಿಲವೋಲ್ಮಿಗೆ । ಹೊರಳಿಗಟ್ಟಿತು ಮೇಲೆ ದಳ್ಳುರಿ । ಧರಧುರದಲೊಳಬೀಳುತಿರ್ದವು ಕಿಡಿಯುಚೂಣಿಗಳು ॥ ಉರಿಯೊಳದ್ದ್ರಿ ತಮ್ಮ ಹಾಯೆಂ । ದರಸುಗಳದಲಾದಖಿಳ ಭೂಪರು । ಕರೆದ ಬಿರುಹೊಯ್ಲುಗಳ ಬಾಯ್ವರೊರಲಿ ಹಲುಬಿದರು ॥೪೫॥ ವಾಯುಸುತ ಹಾಯೆನುತ ಫಲುಗುಣ । ಬಾಯ ಬಿಡೆ ಹರಿ ಜರೆದನೆಲೆರಣ । ದಾಯ ತಪ್ಪಿತು ಬೇಗ ತೊಡುತೊಡು ವರುಣಮಾರ್ಗಣವ ॥ ಸಾಯದಿರನೇ ಭೀಮನೆನೆ ನಾ । ರಾಯಣನ ನುಡಿಗಿಂದ ಮುನ್ನ ಜ । ಲಾಯತಾಸ್ತ್ರವನರ್ಜನನು ಗಾಂಡಿವದೊಳುಗುಳಿಸಿದ ॥೪೬॥ ಹೊಗೆಯನೊಡೆದೊಳಬಿದ್ದು ಕಿಡಿಗಳ । ನುಗಿದು ದಳ್ಳುರಿಯುರಿಗಳನು ತನು । ಒಗಿದು ಭೀಮನ ರಥದ ಸುತ್ತಲು ಸೂಸಿ ತೆರೆಮಸಗಿ ॥ ಹಗೆಯನೆನೆಗದಿರೊಡ್ಡಿ ಜಣುಗಲು । ಬಗೆದರೇ ಖಂಡೆಯದ ಮೊನೆಯಲಿ । ಮಗುಳಿಚುವರೇ ತನ್ನನೆನುತುರವಣಿಸಿ ತಮಳಾಸ್ತ್ರ ॥೪೭॥ ಉರುಬಿದವು ಕೇಸರಿಗಳುದಕವ । ಸುರಿದುದೊಣಗಿಲುಗಿಡಿಯಹಬ್ಬುಗೆ । ಹೊರಗೆ ಮಸಗಿತು ಉದಕಬಾಣವ ಹೀರಿ ಭೋರ್ಗರೆಯೆ ॥ ಒರತೆಯಾರಿತು ವರುಣಶರ ಬಾ । ಯೊರೆತು ನೀರಡಸಿದುದು ಭೀಮನ । ಸೆರಗ ಹಿಡಿದುದು ಮೃತ್ಯುವವನೀಪಾಲ ಕೇಳೆಂದ ॥೪೮॥ ಆವಶರವಿದ್ದೇಗುವದು ಮೃ । ಗಾವನಸುರಾಂತಕನಲ್ಕೆ ತಾ । ನಾವವಹಿಲದೊಲುರಿಯೊಲಡಹಾಯ್ದನಿಲಜನ ತೆಗೆದ ॥ ನಾವರಿಯೆವಾಪವನಜನ ಶ । ಸ್ತ್ರಾವಳಿಯನಾಫಲುಗುಣನ ಗಾಂ । ಡೀವವನು ಹರಿ ಸೆಳೆದುಕೊಂಡನು ಬಿಸುಟನವನಿಯಲಿ ॥೪೯॥ ಮುರಿಮುರಿದು ಕಬ್ಬೊಗೆಯ ಹೊದಳಸ । ಹೊರಳಿಯೊಡೆದುದು ಸೂಸುಗಿಡಿಗಳ । ನೆರವಿ ಸೀದುದು ನಿಮಿರ್ದಹೊಂಗರಿಯಂಬು ಹೊಳೆಹೊಳೆದು ॥ ಮುರಹರನ ಪಾವಾರವಿಂದದ । ಹೊರೆಯೊಳಡಗಿತು ಮತ್ತೆ ಜಯದು । ಬ್ಬರದೊಳಗೆ ಬೊಬ್ಬಿರಿದುವುರುನಿಸ್ಸಾಳಕೋಟಿಗಳು ॥ ೫೦ ॥ ಜಗದುಸುರು ಪಸರಿಸಿತು ಸುರುಷಕೆ । ಹೊಗರುಮಸಗಿತು ರಿಪುನೃಪರನಿಂ । ನಗಡುಮನದುತ್ಸಾಹವದ್ದುದು ಭೇದಪಂಕದಲಿ ॥ ಹೊಗರುಮೋರೆಯ ಕೈಯುಗಲ್ಲದ । ಬಿಗಿದಬೆರಗಿನ ಖತಿಯೊಳೊಸರುವ । ನಗೆಯೊಳಶ್ವತ್ಥಾಮನಿದ್ದನು ಮೊಗದಮೌನದಲಿ ॥೫೧॥ ಏನ ಮಾಡುವೆನಿನ್ನು ಭಾಗ್ಯವಿ । ಹೀನನಕಟಾ ಕೌರವನು ಸುರ । ಧೇನು ನೆರೆಗೊಡ್ಡಾಯ್ತು ಸುರತರು ಕಾಡಮರನಾಯ್ತು ॥ ಹಾನಿಯಾವದರಿಂಗಾಯ್ತು ದಾರಿ । ದ್ದೇನಹುದು ಪರದೈವವತ್ತಲು । ಕೋನವೇತಕೆ ಸುಡಲೆನುತ ತಿರುಗಿದನು ಪಾಳಯಕೆ ॥೫೨॥ ಬಂದು ವೇದವ್ಯಾಸಮುನಿ ಗುರು । ನಂದನಂಗರುಹಿದನು ಪಾರ್ಥಮು । ಕುಂದರೇಪೂರ್ವದಲಿ ನರನಾರಾಯಣಾಹ್ವಯದ ॥ ಸಂದಯುಷಿಗಳು ಭೂಮಿಭಾರವ । ನೊಂದುಪಾಯದಿ ಹರಿಸಲಿವರ್ಕ್ರೆ । ತಂದಹದನನು ತಿಳುಹಿ ಬಂದನು ಫಲುಗುಣನ ಹೊರಗೆ ॥೫೩॥ ನರನ ಚಿಂತಾಗ್ನಿಯನು ಮಿಗೆ ಪರಿ । ಹರಿಸಿದನು ಶೂಲದಲಿ ಮುಂಕೊಂ । ಡರಿಬಲವನಿರದಾತನಾರೆನಲಿಂದುಧರನೆಂದು ॥ ಹರನ ಕರುಣದ ಹದನನೀತಂ । ಗೊರೆದು ಶತರುದ್ರೀಯವನು ವಿ । ಸ್ತರಿಸಿ ಬಿಜಯಂಗೈದನಾಮುನಿಪತಿ ನಿಜಾಶ್ರಮಕೆ ॥೫೪॥ ಬಿಸುಟಕೈದುಗಳೆಲ್ಲವನು ಕೈ । ವಶವ ಮಾಡಿತು ಸೇನೆ ಲಜ್ಜಾ । ರಸಕೆ ಗುರಿಯಾಯ್ತೊಮ್ಮೆ ಮೊರಳಿತು ಹರುಷಮಯರಸಕೆ ॥ ಮುಸುಕುದಲೆಯಲಿ ಮುರಿಮುರಿದು ಮಧು । ರಸದ ರಹಿಯಲಿ

ತಿರುಗಿತದು ರವಿ । ಮುಸುಡತಿರುಹಿದರಾಗದಲಿ ಬೀಳ್ಕೊಟ್ಟನಂಬರವ ॥ ೫೫ ॥ ಆವಶರದಲಿ ಕೊರತೆ ನಿನ್ನವ। ರಾವಬಲದಲಿ ಕುಂದು ಭುವನದೊ । ಳಾವನ್ಕೆ ಸಮಜೋಳಿ ನಿನ್ನರಮನೆಯ ಸುಭಟರಿಗೆ ॥ ಆವನಿದ್ದೇಗುವನು ಜಗದಧಿ । ದೈವದಲಿ ಸೆಣಸಿದಿರಿ ಪಾಂಡವ । ಜೀವಿಯೆಂದರುಹಿದನು ಗದುಗಿನ ವೀರನಾರಯಣ ॥ ... ... ॥೫೬॥

ಅಂತು ಸಂಧಿ ೧೯ ಕ್ಕೆ ಪದ ೧೨೩೫ಕ್ಕಂ ಮಂಗಳಮಸ್ತು

ಇತಿ ಶ್ರೀಮದಚಿಂತ್ಯಮಹಿಮ ಗದಗುವೀರನಾರಾಯಣ ಚರಣಾರವಿಂದ ಮಕರಂದಮಧು
ಪಾನಪುಷ್ಟವಚಷ್ಷಟ್ಪದಿನಿಕಾಯ ಶ್ರೀಮತ್ಕುಮಾರವ್ಯಾಸಯೋಗೀಂದ್ರ
ವಿರಚಿತಮಪ್ಪ ಕರ್ನಾಟಭಾರತ ಕಥಾಮಂಜರಿಯೊಳ್
ದ್ರೋಣಪರ್ವಂ ಸಮಾಪ್ತಮಾದುದು.



॥ ಶ್ರೀರಸ್ತು ॥

ಶ್ರೀ ವೇದವ್ಯಾಸಾಯನಮಃ.

---

# ಕನ್ನಡ ಮಹಾಭಾರತ-ಕರ್ಣಪರ್ವ.



## ಮೊದಲನೆಯ ಸಂಧಿ.

॥ ಸೂಚನೆ ॥ ರಾಯಕಟಕಾಚಾರಿಯನ ತರು । ವಾಯಸೇನಾಪಟ್ಟವನು ರಾ । ಧೇಯನಲಿರಚಿಸಿ
ದನು ಮುದದಲಿ ಕೌರವರರಾಯ ॥

ಪದ ॥ ಕೇಳು ಜನಮೇಜಯಧರಿತ್ರೀ । ಪಾಲ ತೆಗೆದುದು ದಳವೆರಡು ನಿಜ । ಪಾಳೆಯಕೆ ಪರಿಖೇದತೋಷಸ್ಥಗಿತವಿಗ್ರಹರು ॥ ಕೋಲಗುರುವಿನ ಮರಣವಾರ್ತೆ । ಕಾಲಸರ್ಪನ ತಂದು ಸಂಜಯ । ಹೇಳಿಕೆಯನೀಡಾಡಿದನು ಧೃತರಾಷ್ಟ್ರ ಕೇಳೆಂದು ॥ ೧ ॥ ಬೆದರಿತಾಯಾಸ್ಥಾನ ಧಿಗಿಲೆಂ। ದುದು ಧರಾಧೀಶ್ವರನ ತಂದೆಯ । ಹೃದಯದಲಿ ಹುರುಳೇನು ಬಳಿಕುಳಿದವರ ಮೋರೆಗಳ ॥ ಕುದಿದುದಂತಃಕರಣವರಸನ । ಕದಪು ಕೈಯಲಿ ಕೀಲಿಸಿತು ಹೇ । ಳಿದನು ಸಂಜಯ ಮತ್ತೆ ಮೇಲಣಕದನಕೌತುಕವ ॥೨॥ ಗುಡಿಯ ಕಟ್ಟಿಸು ಜೀಯ ಬರೆತುದು । ಕಡಲು ಮುರಿದುದು ಮೇರು ಕರಗಿತು । ಸಿಡಿಲು ಬಿದ್ದುದು ಭಾನುಮಂಡಲವಹಹ ವಿತಳದಲಿ ॥ ಮಡಿದುದೈ ನಿಸ್ವಾನೆನಿನ್ನು । ಗ್ಗಡದಭಟ ಬೀಳ್ಕೊಂಡನೈ ಕಡಿ । ವಡೆದನೈ ಕಲಿಕರ್ಣನೇಳ್ಗೆಯ ಮಾಡಹೇಳೆಂದ ॥ ೩ ॥ ಮೊದಲೊಳಿರ್ದುದು ಜೀವಕಳೆ ಹೃದ । ಯದಲಿ ಹೃದಯವನೊದೆದು ಮಿಗೆ ಕಂ । ಠದಲಿ ಕವಿದುದು ಕೂಡೆ ಭಯದಲಿ

ಮರುಗಿ ಮಲಗಿದನು ॥ ಕೆದರಿತಲ್ಲಾಯುದಲಿ ರಾಯನ । ಹದನನರುಹಿದರೊಳಗೆ ಕೇಣಿಯೊ । ಳೊ
ದರಿದಂತಃಪುರದೊಳುಕ್ಕಿತು ಶೋಕರಸಜಲಧಿ ॥ ೪ ॥ ಬಾಯ ಬಸುರಿನ ನೊಸಲ ಹೊಯ್ಲ । ರಾ
ಯನರಸಿಯರತ್ತೆಯಿಟರಲಿ । ಹಾಯಿದರು ಭಿತ್ತಿಗಳನೊದರಿದರೊಡನೆ ದೆಸೆಯೊದರೆ॥ ರಾಯನಾವೆ
ಡೆಯಕಟ ಕಲಿರಾ । ಧೇಯನಾವೆಡೆ ನೂರುಮಕ್ಕಳು। ಬೀಯವಾದರೆ ಮಾವಯೆಂದರು ಸೊಸೆಯರಡೆ
ಗೆಡೆದು ॥ ೫ ॥ ರವ್ವಕುಳವನದನೇನ ಹೇಳುವೆ । ನವನಿಪತಿ ಕೇಳ್ಕರ್ಣಮೊದಲಾ । ದವರ ರಾಣೀವಾ
ಸ ಬಹಳಾಕ್ರಂದಸಧ್ವನಿಯ ॥ ಕವಿದರೊಳಸೂರೆಯಲಿ ತೋಟಿಯ । ತವಕಿಗರು ಗುಜುಗುಜಿಸೆ ಬಿಗಿದ
ವು । ಭವನಭವನಕವಾಟತತಿಗಳಲಾಯ್ತು ಗಜನಗರ ॥ ೬ ॥ ನೆರೆದುದಲ್ಲಿಯದಲ್ಲಿ ಸೂರೆಗೆ । ಹರಿದು
ದಲ್ಲಿಯದಲ್ಲಿ ಮನವು । ತ್ವರದ ಬಳವಿಗೆಸೂಳುಭಂಟರು ಹಾಯ್ದರೊಳಗೊಳಗೆ ॥ ಅರಮನೆಯಲಾ
ಬೊಬ್ಬೆ ಹಸ್ತಿನ । ಪುರದಲೀಬೊಬ್ಬಾಟವಿನ್ನುಳಿ । ದರಸುಗಳ ಪಾಡಾವುದೆಂದನು ಮುನಿ ನೃಪಾಲಂ
ಗೆ ॥ ೭ ॥ ಸೂರೆಪೋದುದು ನಗರಿ ಖಳರಿಗೆ । ಮಾರಿದರೆ ಪಟ್ಟಣವನಕಟಾ । ಕಾರುಮದ್ದಿನಲಾ
ಯ್ತಲಾ ಕೈಮಸಕವವನಿಪನ ॥ ನೂರುಮಕ್ಕಳನಿಕ್ಕಿ ಸಾಧಿಸಿ। ಲಾಗಿನ್ನೇ ಜಯಸಿ' ಯ..ೆಂದ.. । ವಿಾ
ರಿ ನುಡಿದರು ಮಂತ್ರಿಗಳು ಧೃತರಾಷ್ಟ್ರನಿದಿರಿನಲಿ ॥ ೮ ॥ ಎರಡುಗಲ್ಲದ ನಯನವಾಂಯ । ಹ
ರಿಕುಳಿಯ ಕೆಡಿಸಿದನು ಸಂಜಯ । ನರಸನನು ನೂಕೊಳಿಸಿ ಬೆಂಕಿಗೆ ನೂಕಿದನು ಮನಸ ॥ ಅರಸ ಹ
ದುಳಿಸು ನಿನ್ನ ಸೊಸೆಯರ । ಕರೆದು ಸಂತೈಸಕಟ ಹಸ್ತಿನ । ಪುರದ ಗಾವಳಿ ನಿಲಲಿ ಮಿಗೆ ಡಂಗುರ
ವ ಹೊಯ್ಸೆಂದ ॥ ೯ ॥ ಬೀದಿಬೀದಿಗಳೊಳಗೆ ಡಂಗುರ । ನಾದವೆಸೆದವು ಕೇರಿಕೇರಿಯ । ಕೈದುಕಾ
ರರು ನೆರೆದು ನಿಂದರು ಸೂರೆಗರ ಕೆಡಹಿ ॥ ಸುಯ್ದನಡಿಗಡಿಗೊಲೆದೊಲೆದು ಪರಿ । ಖೇದಶೋಕಜ್ವಲ
ನಜನಿತ । ಸ್ವೇದಸ್ತಿಮಿತದ ಕಾಯ ಚಿಂತಿಸಿ ರಾಯನಿಂತೆಂದ ॥ ೧೦ ॥ ಹೇಳು ಸಂಜಯ ನಮ್ಮಭಾ
ಗ್ಯದ । ಶಾಲಿವನ ಫಲವಾಯ್ತಲಾ ಕೈ। ಮೇಳವಿಸಿದನೆ ಕರ್ಣನಮರಸ್ತ್ರೀಕದಂಬದಲಿ॥ ಹೇಳುಹೇಳಿನ್ನಾ
ಸೆಮಾತಿನ|ಜಾಳಿಗೆಯ ಜಡ ಬೇಡ ಕುರುಪತಿ । ಕಾಳಗದೊಳಸ್ತಮಿಸಿದನೆ ನುಡಿಯೆಂಬಬೇಡೆಂದ ॥೧೧॥
ಸಾವೆ ತಾನೆಂದಂಜುವರು ಕ । ರ್ಣಾವಸಾನವ ಹೇಳು ತನ್ನಯ । ಜೀವವಿದೆಲಾ ದೇಹದಲಿ ಜೀವಿನ್ನು
ಕೆಲವರಲಿ॥ ಸಾವೆನೇ ತಾನಿನ್ನು ಕುರುಪತಿ.। ಜೀವಿಸಲಿ ಮೇಣಳಿದೊಡೆಯುಮಿ । ನ್ನಾವಭಯಮಿಲ್ಲಕಟ
ವಜ್ರಶರೀರಿ ತಾನೆಂದ ॥ ೧೨ ॥ ಗಾಯವಡೆದನು ಭೀಷ್ಮ ಬಳಿಕಿನೊ । ಳಾಯುಧದ ಗುರು ತೊಡಚಿ
ಕಳಚಿದ । ನೀಯವಸ್ಥೆಗೆ ತನ್ನ ತಂದನೆ ಭಾನುನಂದನನು ॥ ಸಾಯನೇ ಮಗನಿನ್ನು ಬಳಿಕಾ । ನಾಯ
ನುಡಿಯಿನ್ನೇಕೆ ಕರ್ಣನ । ಗಾಯಿತೇ ಕಡೆ ಸಾಕದನು ವಿಸ್ತರಿಸಿ ಹೇಳೆಂದ ॥೧೩॥ ಸರಳ ಕೊರತೆಯೊ
ಸಾರಥಿಯ ಮ । ತ್ಸರವೊ ರಥದವಿಘಾತಿಯೋ ದು। ರ್ಧರಧನುರ್ಭಂಗವೋ ಮಹಾಸ್ತ್ರವ್ಯಥೆಯೊ
ರವಿಸುತನ ॥ ಹುರುಳುಗೆಡಿಸಿದಿರೆಂತು ರಿಪುರಾ । ಯರಿಗೆ ನಾವ್ಯೋಚರವೆ ದುರಿತೋ । ತ್ಕರುಷವೈಸ
ಲೆ ನಮ್ಮ ಕೆಡಸಿತು ಶಿವಶಿವಾಯೆಂದ ॥ ೧೪ ॥ ಹರುಹುಗೆಟ್ಟವು ತೇರು ಸಾರಥಿ । ಹುರುಳುಗೆಡಿಸಿ
ಯೆ ನುಡಿದನಂಜಿನ । ಕೊರತೆ ತಾ ಮುನ್ನಾಯ್ತುದೈವದ್ರೋಹಿಗಳು ನಿಮಗೆ ॥ ಅರ್ಥಿಜಯವೆಲ್ಲಿಯ
ದು ನೀಮ್ಮನ। ಬರಡರ್ಕೆ ನಿಮ್ಮನ್ವಯವ ಸಂಹರಿಸಿದಿರಿ ಸಾಕೆಂದು ಸಂಜಯ ಮೂಗಿದನು ಶಿರವ॥೧೫॥
ಸುರನರೋರಗರಲಯಲಾವ್ಬಾ । ಹಿರರುಭಂಗಿಸಬೇಡ ಸಾಕಂ । ತಿರಲಿ ಕರ್ಣಾವಸಾನ ..ರ್ಣವೃತ

ವ ಸುರಿಯಿನ್ನು ॥ ಅರಿಗಳಭ್ಯುದಯವನು ನಮ್ಮನೃಪ । ಸರಣಿಯನು ಶಿವಿಯಾರ ಕೇಳುವೆ । ಪರಮ
ಸುಕೃತಿಗಳಾವು ನೀ ಹೇಳಂಜಬೇಡೆಂದ ॥ ೧೬ ॥ ಹೇಳಿದನು ಬಳಿಕೆರಡುಘಟ್ಟಿನೊ । ಳಾಳುಕುದುರೆಯ
ಗಜರಥವ ಭೂ । ಪಾಲರಳಿದುಳಿದವರಲೆಕ್ಕವನೈದೆ ವಿಸ್ತರಿಸಿ ॥ ಕೇಳು ನಿಸ್ತ್ರಾತನ ವಿನೋದವ । ಖೂಳ
ಬೋಳೆಯತನದ ತನ್ನದ । ಜಾಳಿಗೆಯ ಬೀಸರವನೆಂದನು ಸಂಜಯನು ನೃಪಗೆ ॥ ೧೭ ॥ ತೊಡರ ತೆ
ಗೆದರು ಕೈಯಲಾರುವ । ನುಡಿಸಲಮ್ಮರು ಹೊತ್ತದುಗುಡದ । ನಿಡುಮುಸುಕುಗಳ ಬಿಗಿದಹುಬ್ಬಿ
ನ ಬಿಟ್ಟಕಣ್ಣುಗಳ ॥ ಒಡೆಯನಿದಿರೊಳು ಕುಳ್ಳಿರದೆ ಕೆಲ । ಕಡೆಯಕೈಪಿಡಿಗೆಯವರ ಬಳಿ । ಹಿಡಿದು
ತೊಲಗಿತು ರಾಯನೋಲಗದೊಳಗೆ ಪರಿವಾರ ॥ ೧೮ ॥ ಸಾಲ ಕೈದೀವಿಗೆಯವರ ಹು । ದಾಳಿಗಳು
ಕಿಯ ನೃಪರ ಮೋರೆಗ । ಳೋಳಿಯನು ನೆರೆಹೊಯ್ದ ಕತ್ತಲೆ ನಿಂದುದಲ್ಲಲ್ಲಿ ॥ ಹೇಳಲೇನದ ಬಹಳ
ದುಗುಡದ । ಪಾಳೆಯವು ನಿಸ್ತ್ರಾತನೋಲಗ । ಶಾಲೆಯೋ ಸಾನರಿಯೆನೆಂದನು ಸಂಜಯನು ನೃಪ
ಗೆ ॥ ೧೯ ॥ ಎಲೆಮಡಿಕಪಾಸ್ಥಾನ ವೀಳೆಯ । ದೆಲೆಯ ಮಡಿಸುವರಭಸವಿಲ್ಲೊಳ । ಗೊಳಗೆ ಸನ್ನೆ
ಗರೋರೆಗೊರಳುಗಳೊಡಗಚ್ಚುಗಳ ॥ ಹಳಚಿದಗ್ಗಳಿಕೆಗಳ ಮಿಸಲು । ಗಳೆದಬಿರುದಿನ ಮಾನಭಂಗ
ದ । ಕಳಕಳದ ಕನಸುಗಳಲಿರ್ದುದು ರಾಯಸಾಸ್ಥಾನ ॥ ೨೦ ॥ ಕೆತ್ತುಕೊಂಡಿರಲೇಕೆ ನೀವಿ । ನ್ನುತ್ತ
ರಾಯಿಗಳೆಮ್ಮ ಭಾಗ್ಯದ । ಬಿತ್ತು ಹೊದೊಡೆ ವೀರಭಟರುದ್ದೇಶ ಮಾಡುವರು ॥ ಮುತ್ತಿದಂಬಿನಮ
ಯ್ಯಭೀಷ್ಮನು । ಹೊತ್ತುಕೈದುವ ಬಿಸುಟು ಕಳಶಜ । ನುತ್ತಮಿಕೆಗಳನೇನಹೇಳುವೆನೆಂದನಾಭೂಪ ॥೨೧॥
ಬಿಗಿದ ತಿಮಿರದ ಘಟ್ಟು ಸೂರ್ಯನ । ಸೊಗಡು ಹುಯಿದರೆ ಮುರಿಯದೇ ಕಾ । ಳಗಕೆ ಕರ್ಣನಕೈದು
ಭಂಡಾರಿಸಿದು ದಿನ್ನಬರ ॥ ತೆಗಸುವೆನು ಸಾಳಿನಲಿ ರಾಯರ । ಮೊಗದದುಗುಡದ ದಟ್ಟಿಯನು ಮೈ । ತೆ
ಗೆಯದಿರಿ ಕಲಿಯಾಗಿಯೆಂದನು ಕೌರವರರಾಯ ॥ ೨೨ ॥ ಜೀಯಸಂಶಯವಿಲ್ಲ ಗುರುಗಾಂ । ಗೇ
ಯರಳಿದೊಡದೇನು ಕಲಿರಾ । ಧೇಯನೇ ಪಟ್ಟಾಂಗಿಯಲ್ಲಾ ನಮ್ಮ ಮೋಹರಕೆ ॥ ರಾಯನೀತನ ಸತಿ
ಕಲಸು ಚ ಕ್ರಾಯುಧನ ಚಾತುರ್ಯ ಕೊಳ್ಳದು । ಜೀಯ ಕರ್ಣನ ಕೂಡೆಯೆಂದುದು ನಿಖಿಳಪರಿವಾ
ರ ॥ ೨೩ ॥ ಬೇರೆ ನಮಗಗ್ಗಳಿಕೆಯೋಲೆಯ । ಕಾರತನವೇ ರಾಯ ಮನದಲಿ ಯೋಚಿಸಿದರೇರುವುದು
ದೆಸೆ ಮನಮುರಿಯೆ ಕುಂದುವುದು ॥ ತೋರಿ ನುಡಿವರೆ ಭೀಷ್ಮಗುರುವನು । ಚಾರುಸಿದರಣಾಪಮಗೆ ಸ
ದರವೆ । ದೂರುವವರಾವಲ್ಲನೆಂದನು ಭಾನುನಂದನನು ॥ ೨೪ ॥ ಸಾಕದಂತಿರಲಿನ್ನು ಘಟ್ಟಿಂ । ಗಾಕೆ
ವಾಳರ ಮಾಡು ಸಾಕಾ । ಸ್ತೋಕಪುಣ್ಯರ ಮಾತದೇತಕೆ ಗುರುನದೀಸುತರ ॥ ಸಾಕಿ ಸಲಹಿದೆ ಕರ್ಣನ
ನು ಹುರು । ಳೀಕೆ ಗುಣದಲಿ ಕರ್ಣಸೇನಾ । ನೀಕಬಾರದಹೊರಿಗೆಗಹನೆಂದನು ಕೃಪಾಚಾರ್ಯ ॥೨೫॥
ಎಮ್ಮತೋರಿಸಬೇಡ ಸುಖದಲಿ । ನಿಮ್ಮ ಚಿತ್ತಕೆ ಬಹುದೆ ಮಾಡುವು । ದೊಮ್ಮೆ ದೇಹವ್ಯಥೆಯಸಾವಿ
ನ್ನೆಂದುಫಲವೇನು ॥ ಎಮ್ಮ ಪುಣ್ಯದ ಬೆಳೆಗಳೊಣಗಿದೊ । ಡಮ್ಮ ಮಾಡುವದೇನು ಕರ್ಣನು । ನ
ಮ್ಮದೆಳವೇನೆಂದನಶ್ವತ್ಥಾಮನರಸಂಗೆ ॥ ೨೬ ॥ ಮಹಾರಥಭೀಷ್ಮ ಮಿಗೆ ಸ್ವೇ । ಚ್ಛಾಮರಣಿ ಆ
ಚಾರ್ಯಚಾಪ । ವ್ಯೋಮಕೇಶರು ಹೊಕ್ಕು ಕಾಣರು ಹಗೆಗೆ ಹರಿವುಗಳ ॥ ಈಮಹಾನಾರಾಯಣಾಸ್ತ್ರ
ದ । ಸೀಮೆ ಸೀದುದು ಮಿಕ್ಕಭಟರು । ದ್ದಾಮರೇ ಸಾಕಿನ್ನು ಸೇನಾಪತಿಯ ಮಾಡೆಂದ ॥ ೨೭ ॥ ಕ
ರೆಸಿದನು ಭೂಸುರರಸಾದಂ । ಬರದ ಮಡಿವರ್ಗವನು ದೂರ್ವಾಂ । ಕುರಸಿತಾಕ್ಷತೆಧವಳಸರುಷಪವಾ

ಫಲಾವಳಿಯು ॥ ತರಿಸಿದನು ಹೊಂಗಲಸತತಿಯನು । ವರನದೀವಾರಿಗಳನಾಡಂ । ಬರದ ವಾದ್ಯದ ಲೊದಗಿದವು ನಿಸ್ಸಾಳಕೋಟಿಗಳು ॥ ೨೮ ॥ ವಿರಚಿಸಿತು ಪಟ್ಟಾಭಿಷೇಕೋ । ತ್ಕರುಷವಮಂತ್ರಾಕ್ಷತೆಯಮಳೆಗಳು । ಕರೆದವಮಳದ್ವಿಜರು ಜಯರವ ಮೇಘಘೋಷೆಯಲಿ ॥ ಗುರುಸುತಾದಿಮಹಾಪ್ರಧಾನರು। ದರುಶನವನೀಡಿದರು ಕರ್ಣನ। ಬಿರುದಿನುಬ್ಬಟೆ ಲಹರಿಮಸಗಿತು ವಂದಿಜಲಧಿಯಲಿ ॥೨೯॥ ಅರಳಿತ ರಸನವದನ ಶಕುನಿಗೆ। ಹರುಷಮಿಗೆ ದುಶ್ಶಾಸರುಲಿದು । ಬ್ಬರಿಸೆ ರೋಮಾವಳಿ ವಿಕರ್ಣಾದಿಗಳ ಮನವರಿಯೆ ॥ ಗುರುಜಕೃಪಕೃತವರ್ಮಶಲ್ಯಾ । ದ್ಯರಿಗೆ ಸೊಸಕ ಸೊಗಸು ಮಿಗಲಾ । ಯ್ತುರುಳು ಕರ್ಣನ ಪಟ್ಟವಾಯಿತು ನೃಪತಿ ಕೇಳೆಂದ ॥ ೩೦ ॥ ನಾರಿಯರು ಮಣಿರತ್ನತೊಡಿಗೆಯ । ಭಾರಿಯರು ಕಂದರ್ಪವನಸಹ । ಕಾರಗಳು ನೆರೆದಡಸಿ ಕೈಕೈಮುಟ್ಟಿ ತಮತಮಗೆ । ವೀರಸೇಸೆಯನಳವಡಿಸಿ ವಿಮ । ಲಾರತಿಯ ಸೂಸಿದರು ನಿಜಪರಿ । ವಾರವೋಲಾಡಿತ್ತು ಬಹಳಾನಂದಲಹರಿಯಲಿ ॥ ೩೧ ॥

ಅಂತು ಸಂಧಿ ೧ ಕ್ಕೆ ಪದ ೩೧ಕ್ಕಂ ಮಂಗಳಮಸ್ತು.

---

## ಎರಡನೆಯ ಸಂಧಿ.

॥ಸೂಚನೆ॥ ಭೀಮವಿಕ್ರಮ ಕುರುಬಲದೊಳು । ದ್ದಾಮಕರ್ಣಾಹವದೊಳಗ್ಗದ । ಕ್ಷೇಮಧೂರ್ತನೃಪಾಲಕನ ಕೆಡಹಿದನು ಕಲಿಭೀಮ ॥

॥ ಪದ ॥ ಮಗನು ದಳಪತಿಯಾದಗಡ ಕಾ । ಳಗವ ನೋಡುವೆನೆಂಬವೊಲು ಜಗ । ದಗಲದಲಿ ಕರಕಡಿತವಿಕ್ಕಿತು ತಿಮಿರವನದೊಳಗೆ ॥ ಹೊಗರು ಕುವಲಯಕಳಿಯೆ ಸೊಂಪಿನ । ನಗೆ ಸರೋರುಹಕಿಳಿಯೆ ವಿರಹದ । ಢಗೆ ರಥಾಂಗವ ತುಳಿಯಲಿನನುದಯಾಚಲಕೆ ಬಂದ ॥ ೧ ॥ಸೂಳು ಮಿಗಲಳ್ಳಿರಿದುವುರುನಿ । ಸ್ಸಾಳಕೋಟಿಗಳುದಯದಲಿ ದಿಗು । ಜಾಲ ಜಡಿಯಲು ಹೂಡಿಗೆದರುವಗೌರುಗಹಳೆಗಳ ॥ ತೂಳುವರೆಗಳ ರಾಯಗಿಡಿಗದ । ಗೋಳಘೋರದಘೋಷವವನಿಯ । ಸೀಳಿ ನಡೆದುದು ಸೇನೆ ರವಿನಂದನನ ಸನ್ನೆಯಲಿ ॥ ೨ ॥ ಮೋಹರಿಸಿತದು ನಡೆದು ಮಕರ । ವ್ಯೂಹದಲಿ ಬಳಿಕರ್ಧಚಂದ್ರ । ವ್ಯೂಹದಲಿ ನಡೆದೊಡ್ಡಿ ನಿಂದುದು ಪಾಂಡುಸುತಸೇನೆ ॥ ಮೋಹರಿಸಲೊಡೆವೆರಸಿ ಹೊಯ್ದರು । ಗಾಹುಗತಕವನುಳಿದು ಚೂಣಿಯ। ಸಾಹಸದ ಸನ್ನಾಹರ್ಕೈದಿದರೆರಡುಥಟ್ಟಿನಲಿ ॥೩॥ ಹೊಯ್ದು ಮುಗ್ಗಿತು ಭಟರು ವೆಗ್ಗಳ ಕೈದುಕಾರರು ತಲೆಗೆ ಸಂದರು। ಮೆಯ್ದೆಗೆಯದೊಡೆವೆರಸಿ ಹೊಕ್ಕರು ಬೇಹ ಬೇಹವರು ॥ ಕೊಯ್ದು ಕೊರಳಿನ ಪೊಡೆದ ಪೊಯ್ಲಿನ । ಹೊಯ್ದುಮೂಳೆಯ ಸುರಿದಕರುಳಿನ। ಲೆಯ್ದಿಪಡೆಗೇರಾಯ್ತು ಚೂಣಿಯ ಚಾತುರಂಗದಲಿ ॥೪॥ ಇಂದು ಬರಹೇಳರ್ಜುನನ ರಣ । ದಿಂದಲೇ ಭೀಮಂಗೆ ಭಾರಿಯ । ಕಂದುಕಸರಿಕೆ ಬೇಡ ಕಾದಲಿ ಧರ್ಮನಂದನನು ॥ ಹಿಂದೆ ನಮ್ಮಿಭೀಷ್ಮಗುರುಗಳ । ಕೊಂದಗೆಲವಿನಲುಬ್ಬ ಬೇಡೆಮ । ಗಿಂದು ದಳಪತಿಕರ್ಣನೆಂದುದು ನಿಖಿಳಪರಿವಾರ ॥೫॥ ತೇರು ಬಿಟ್ಟವು ಸೂಠಿಯಲಿ ಜ । ಜ್ಝರರಾವುತ್ತರು ವಾಘೆಸರಿಸದ । ಲೇರಿದರು ಕಾಮುರ್ಗಿಲ ಬಲವೆನೆ ಕವಿದ

ವಾನೆಗಳು ॥ ಅಂದೊಡೆ ನೆಲ ಬಿಂಯೆ ಬೆರಸಿತು । ಪಾರಕರು ಸಬಳಿಗರು ಬಿಲ್ಲಿನ । ಭೂರಿಭಟರಳ್ಳಿರಿದು ಕೆಣಕಿತು ಕೆದರಿ ರಿಪುಬಲವ ॥೬॥ ಮುರಿಯಲಹಿತರಥಟ್ಟ ನಮ್ಮನು । ತೆರಹುಗೊಡೆದೌಕಿದರು ದೂರೆಗಳು । ಹೊರಗೆ ಲಗ್ಗೆಯ ಮಾಡಿ ತೋರಿದರೊಡನೆ ಪಡಿಬಲವ ॥ ಉರುಬಿದರು ವೃಷಸೇನಸೌಬಲ । ಗುರುಜಕೃಪಕೃತವರ್ಮದುರ್ಮುಖ । ವರವಿಕರ್ಣಕ್ಷೇಮಧೂರ್ತಬೃಹದ್ರಥಾಟಗಳು ॥೭॥ ಸೂತಸುತದಳಪತಿಯೊ ಘಡ ಮು । ಯ್ಯಾತರೇ ಮುಂಬಿಗರು ಬಿರುದಿನ। ಭೂತಗಳ ಬೊಬ್ಬಾಟ ಬಿಡದೇ ಕಂಡು ಕಾಣೆವಲಾ ॥ ಸೋತಸವರದ ಕೇಣಿಕಾರರು । ಫೂತುರೇ ಜಯಸಿರಿಗೆ ಹೊಯ್ಯೊಯ್ಯಾ । ತಗಳನೆನುತೆದ್ದರಾಪಾಂಡವಮಹಾರಥರು ॥೮॥ ನೂಕಿತೊಂದೇವಾಘೆಯಲಿ ರಥ । ನಾಲ್ಕುಸಾವಿರ ಬಲುಗುದುರೆ ಹದಿ । ನಾಲ್ಕುಸಾವಿರ ನೂರುಕರಿಘಟೆ ಲಕ್ಷಪಾಯದಳ ॥ ಜೋಕೆ ಜವಸಿಕೆ ಮುರಿಯೊಡೆದು ಬಲ । ದಾಕೆವಾಳರು ಸಂಯೆ ಸೋಲದ । ನೂಕುನೂಕಾಯಿತ್ತು ಕೌರವರಾಯನಸೇನೆಯಲಿ ॥೯॥ ಸಡಿಫಡೆತ್ತಣಸ್ವಾಮಿದ್ರೋಹರು । ನೆಡದರೋ ನಿಜಕುಲದ ಬೇರನು । ಕಡಿದರೋ ಕುರುಬಲದ ಕಾಹಿನ ಪಟ್ಟದಾನೆಗಳು ॥ ಕೊಡನ ಘಣಿಯೋ ಪಾಂಡವರ ಬಲ । ತುಡುಕಲೀಯದೆ ಯೆನುತ ಸೇನೆಯ । ತಡೆದು ನಿಂದನು ಕ್ಷೇಮಧೂರ್ತ ಸಹಸ್ರಗಜಸಹಿತ ॥೧೦॥ ತರಿಸಿ ಲೋಹದ ಜಂತವಟ್ಟವ । ನಿರಿಸಿದರು ಸೂಲಿಗೆಯ ಭಂಡಿಯ । ಹರಿಸಿದರು ಕೆಲಬಲದ ಬೀದಿಯ ಸಬಳಿಗರ ನಿಲಿಸಿ ॥ ತುರಗಗಜಬಿಲ್ಲಾಳನೊತ್ತಾ। ಗಿರಿಸಿ ಲಗ್ಗೆಯಲಹರಿಯಲಿ ಮೋ। ಹರಿಸಿದರು ಪಾಂಚಾಲಕೈಕೆಯರವರ ಘಟ್ಟಿನಲಿ॥೧೧॥ ನೀಡಿ ಭರಿಕೈಗಳಲಿ ತೆಗೆದೀ । ಡಾಡಿದವು ಭಂಡಿಗಳನೌಕಿದ । ಕೋಡಕೈಗಳಸಬಳಿಗರ ಸೀಳಿದವು ದೆಸೆದೆಸೆಗೆ ॥ ಕೂಡೆ ಜಂತವ ಜಂತವಟ್ಟವ । ನಾಡಲೇತಕೆ ಹಿಂಡಿನೊಡ್ಡನು । ಝಾಡಿಸಿದವಾಕ್ಷೇಮಧೂರ್ತನೃಪಾಲನಾನೆಗಳು ॥೧೨॥ ರಾಯದಳ ಕಳವಳಿಸೆ ಕರಿಘಟೆ । ಗಾಯುಗಾಯಕೆ ನೆಲನ ಕೊಂಡವು । ಹಾಯಿದವು ರಥವುರುಬಿ ಹೊಕ್ಕವು ಹೊದರ ಹೊರೆಗಡಿದು ॥ ನಾಯಕರ ಕೆಡೆನುಡಿವಬೈಗುಳ । ಬಾಯಬೊಬ್ಬೆಯ ಕೈಯಹೊಯ್ಲುಗಳ । ದಾಯಿಗರಲೇ ಯೆನುತ ಮೂದಲಿಸಿದರು ತಮ್ಮೊಳಗೆ ॥೧೩॥ ಕೆದರಿ ತಲೆಗಳ ರಾಯದಳವನು । ಬೆದರಿಸಿದವಾನೆಗಳು ರಿಪುಗಳ ಮದಮುಖಕೆ ಮಾರೊಡ್ಡಿ ಮೆರೆದವು ಫೂತುರೇ ಯೆನುತ ॥ ತುದಿವೆರಳ ತುಟಿಯುಬ್ಬರಕೆ ಗಜ । ಬೆದರೆ ನಿಜಪಾತಕರು ಗರ್ಜಿಸೆ । ಗದೆಯ ತಿರುಹುತ ಹೊಕ್ಕನವರೊಡ್ಡಿನಲಿ ಕಲಿಭೀಮ ॥೧೪॥ ಗರುಡನೂರವರೆರೆವರೇ ನಾ । ಗರಿಗೆ ತನಿಯನು ಭೀಮಸೇನನ। ಬಿರುದಿನೋಲೆಯಕಾರರೇನಂಜುವರೆ ಮಾರ್ಬಲಕೆ ॥ ಕರಿಘಟೆಯ ಕೆಣಕಿದರು ಕೆದರಿದ । ಧುರವ ಬಗೆಯದೆ ಗಜದ ಕರುಳಲಿ । ಕರುಳ ತೊಡಕಲಿ ಬಿದ್ದುದೈ ಸಾವಿರಮಹಾರಥರು ॥೧೫॥ ಮುಂಗುಡಿಯ ಮುರಿದೌಂಕಿ ಭೀಮಂ । ಗಂಗವಿಸಿದನು ಕ್ಷೇಮಧೂರ್ತಮ । ತಂಗಜವನೋಲೆಸೆವಸರಿನಾರಾಚಸೋನೆಯಲಿ ॥ ಅಂಗವಣೆಯಹುದೋ ಮಹಾದೇ । ವಂಗೆ ನೂಕದು ಫೂತುಮಝುರೆಯ । ಭಂಗನೋ ನೀನೆನುತ ಹೊಯ್ದೊಡವೆರಸಿದನು ಭೀಮ ॥೧೬॥ ಮೇಲುವಾಯ್ದಾರೋಹಕರ ಹಿಂ । ಗಾಲ ಹಿಡಿದೀಡಾಡಿ ರಿಪುಗಜ । ಜಾಲದೊಳಗೊಂದಾನೆಯನು ತಾನೇರಿ ಬೊಬ್ಬಿರಿದು ॥ ಸೀಳಿಡಲು ಕರಿ ಬೆದರಲಂಕುಶ । ದಾಳನೆತ್ತಿಯನೊಡೆದು ದಂತಿಯ । ತೂಳಿಸಿದನಾಕ್ಷೇಮಧೂರ್ತನ ಗಜದ ಸಂಮುಖಕೆ ॥೧೭॥ ಇದು ವಿನೋದವಲಾ ಮದೀಯಾ । ಭ್ಯುದಯವೈಸಲೆ ನಮ್ಮಕೋಪವ ನಿದಿರುಗೊಂಡವ

ನಿವನೆಲೇ ಯೆನುತೆಚ್ಚನಾಭೀಮ ॥ ಸದಗನೋ ನೀನಾರು ಭಾರಿಯ। ಮದಗಜದ ಬಡಿಹೋರಿ ಹೋಗೆನು । ತೊದರಿ ಭೀಮನ ಮುಸುಕಿದನು ನಾರಾಚಸೋನೆಯಲಿ ॥೧೮॥ ಆಗಲಾನಾಲಿಗೆಯ ಸಾಲವ । ನೀಗ ಕೈಯಲಿ ತಿದ್ದುವೊಡೆ ನವ । ನಾಗಲೇ ತಪ್ಪೇನು ಹೇಳೆನುತೆಚ್ಚನಾಭೀಮ ॥ ಈಗಲಾವುದು ನೆಲನು ನಭದಿಗು | ಭಾಗವೆಲ್ಲಿಯದೆನಲು ಕಣೆಗಳು । ತೂಗಿ ತುರುಗಿದವರಿಭಟನ ಕರಿಘಟೆಯ ಮೈಗಳಲಿ ॥೧೯॥ ಸರಳ ಮಳೆಯಲಿ ನನೆದು ಕರಿಘಟೆಯುರುಳಿದವು ಕಲ್ಪಾಂತಪರುಷದೊ । ಳುರುಳುವದ್ರಿಗಳಂತೆ ಸವೆದವು ವೈರಿದಂತಿಗಳು ॥ ಎರಡುಸೀಳಾಯ್ತವನ ಕರಿ ಮೇ । ಲಿರದೆ ಧೊಪ್ಪನೆ ಹಾಯ್ದು ಖಾತಿಯ । ಲುರವಣಿಸಿದನು ಕ್ಷೇಮಧೂರ್ತಕ ಸೆಳೆದಡಾಯುಧದಿ॥೨೦॥ಕುಣಿದು ಘಟನೆಗೆ ಗಜವ ಹೊ। ಯ್ದುಣಿದು ಹಿಂಗದವುನ್ನ ತಲೆಸೋ । ಗಸೆಗೆ ಚಿಮ್ಮಿತು ಮುಂಡ ನಡೆದುದು ಮೂರುಹಜ್ಜೆಯನು ॥ ಬಣಗು ನೀನೇಕಕಟ ಭೀಮನ । ಕೇಳಿ ಮಾಡಿದೈಯೆನುತಲಪ್ಸರ।ಗಣಿಕೆಯರು ಬಂದವನ ಕೊಂಡೊಯ್ದರು ವಿಮಾನದಲಿ ... ... ... ॥೨೧॥

ಅಂತು ಸಂಧಿ ೨೦ ಕ್ಕೆ ಪದ ೫೨೦ ಕ್ಕಂ ಮಂಗಳಮಸ್ತು.

---

## ಮೂರನೆಯ ಸಂಧಿ.

ಸೂಚನೆ ॥ ಧುರದೊಳಗೆ ವಿಂದಾನುವಿಂದರ । ನೊರಸಿದನು ಸಾತ್ಯಕಿವೃಕೋದರ । ಗುರುಸುತರು ಬಲುಗಾಯದಲಿ ಬಸವಳಿದರುಭಯದಲಿ ॥

ಪದ ॥ ಬೀಳಲಗ್ಗದ ಕ್ಷೇಮಧೂರ್ತನ್ನ । ಪಾಲಕನ ಪರಿವಾರ ರೋಷಕ । ರಾಳಶಿಖಿಪರಿತಪ್ತಕಂಪಿತಖಡ್ಗಪಾಣಿಗಳು ॥ ಆಳಿದನ ಮರಣದಲಿ ಹಿಂದಣ । ಕೂಳಿನಾಸೆಯ ಕುನ್ನಿಗಳನೆನು । ತಾಳು ಕವಿದುದು ಭೀಮ ಘಡಘಡ ನಿಲ್ಲುನಿಲ್ಲೆನುತ ॥೧॥ ಕರೆದು ಮೂದಲಿಸಿದೊಡೆ ಹುಲ್ಲೆಯ । ಮರಿಗಳಿಗೆ ಖತಿಗೊಂಬುದೇ ಮದ । ಕರಿ ಕರೂಷದ ಕೊಬ್ಬಿದವದಿರು ಹಿಂದೆ ಮತ್ತಿರದೆ ॥ ಮರಳಬಲ್ಲನೆ ಭೀಮನಿವರಬ್ಬರಿಸಿ ಕವಿದರು ಹತ್ತುಸಾವಿರ । ತುರುಗಸರಿಸದಲೇರಿದರು ಪಡಿಮುಖದ ಬಲ ಬೆದರೆ ॥೨॥ ರಾವುತರು ಮತ್ತೊಂದುಹಂತಿಯ । ಸೊವಿ ಸಾಕಗಳೇರಿದರು ಪರಿ। ಭಾವಿಸಲು ಪದಧೂಳಿ ಮುಸುಕಿತು ತರಣಿಮಂಡಲವ ॥ ಆವೃಕೋದರಗದೆಯ ಕೊಂಡನು । ರಾವುತರ ದೃಢವಾಘೆವಾಘೆಯ । ಲಾವಣಿಗೆ ಲೇಸೆನುತ ಸಾತ್ಯಕಿ ತುಡುಕಿದನು ಧನುವ ॥೩॥ ಅರರೆ ರಾವುತ ಜಾಗು ಸ್ವಾಮಿಯ। ಹರಿಬಕೋಸುಗ ಹಗೆಯ ಹೊಯ್ಸಿರಿ । ಬಿರುದರಹಿರೋ ಎನುತ ಮೀರಿದಹಯವ ಮುರಿಯೆನುತ ॥ ಸರಳನೊಂದನೆತೊಡಚಿ ತುರಗದ । ಕೊರಳ ವಾಘೆಯ ಕರವರಾವ್ತರ । ಶಿರವನೆಚ್ಚನು ಕೊಂದನೀಪರಿಹತ್ತುಸಾವಿರವ॥

ಬಿದ್ದುದಗ್ಗದತುರಗದವಳ ಕೈ । ಮುದ್ದೆಗೊಂಡನು ಕಾಯದಸುಗಳ । ಲಿರ್ದವನನಾಕಾಶನವರೊಳು ತೊಡಕಿದವರೊಡನೆ । ಹದ್ದು ಕಾಗೆಗೆ ನಿನ್ನವರು ಸಾ । ಲಿರ್ದು ಜೋನವ ಸಲಿಸಿದರು ಬಲ । ವಿದ್ದು ಮಾಡುವುದೇಸು ನಿಮಗಿನ್ನರಸ ಕೇಳೆಂದ ॥ ೫ ॥ ಥಟ್ಟು ಮುರಿದುದು ನಮ್ಮ ಬಲವೆದು । ಬಿಟ್ಟು ಹಿಂಗಿತು ಕೊಂಡನೆಲನನು । ಮುಟ್ಟಿ ಕೈದೋರಿದನು ಸಾತ್ಯಕಿ ದೊರೆಗಳಿದಿರಿನಲಿ ॥ ದಿಟ್ಟನಿವನಾರೀ ಸುಮುಷ್ಟಾ । ಮುಷ್ಟಿಯಲಿ ಸುಳಿದವನೆನುತ ಜಗ । ಜಟ್ಟಿಗಳು ವಿಂದಾನುವಿಂದರು ನಿಂದರಿದಿರಾಗಿ ॥ ೬ ॥ ಕವಿದುದವದಿರ ಸೇನೆ ಸಾತ್ಯಕಿ । ಹವಣನರಿಯನು ಬಳಿಕ ಸಿಲುಕಿದ । ನಿವರೊಳಗೆ ಕಟ್ಟಿದವು ಸುತ್ತಲು ಸಾವಿರಾನೆಗಳು ॥ ನವಸಹಸ್ರತುರಂಗ ಕಾಲಾ । ಳವಗಡಿಸಿತ್ತೈವತ್ತುಸಾವಿರ । ವವನತಳ ನುಗ್ಗಾಗಿಯುತ್ತ ಪದಘಟ್ಟನೆಯ ಘಲ್ಲಣೆಗೆ ॥ ೭ ॥ ಕೆಣಕಿದುದು ಭುಗಿಲೆದ್ದುದಾತನ । ರಣಪರಾಕ್ರಮವಹ್ನಿ ಕರಡದ । ಬಣಬೆ ಸಿಕ್ಕಿತು ಕಾಳಗಿಚ್ಚಿನ ಬಾಯ ತುತ್ತಾಗೆ ॥ ಕಣೆಯ ಕಾಣೆನು ಸುತ್ತಲೊಟ್ಟವ । ಹೆಣನ ಕಂಡೆನಿದಾವಬಾಳೆಯ । ಹಣಿದವ್ರೋಲ್‌ನಿಸ್ಸಾಳುಕುದುರೆಗಳರಸ ಕೇಳೆಂದ ॥ ೮ ॥ ದೊರೆಗಳಿವದಿರು ತಮ್ಮ ಬಲಸಂ । ವರಣೆ ನೆಗ್ಗಿದಹೇವದಲಿ ಹೊಡ । ಕರಿಸಿ ಹೊಕ್ಕರು ಹೊಳಿದರು ಸಾತ್ಯಕಿಯನಂಬಿನಲಿ ॥ ಸರಳ ಸರಿವ್ರೊಳ್ಳಿತು ಮಹಾದೇ । ವರಸುಮಕ್ಕಳಲೇ ವಿರೋಧವೆ । ಹರಹರರೆ ಸಾಹಸಿಗರಹುದೋ ಯೆನುತ ತೆಗೆದೆಚ್ಚ ॥ ೯ ॥ ಏನನೆಂಬೆನು ಮೊದಲಲಗ್ಗಿಯ । ಲಾನಿಶಾಚರಯುಗಕೆ ತಾವಿಂ । ದಾನುವಿಂದರಜೀವ ಧುಂಮಿಕ್ಕಿದುದು ಯಮಪುರಿಗೆ ॥ ಚೀನಬೋಟಕರೂಷಖರ್ಪರ । ಮಾನಜೋನೆಗತುರುಕಬರ್ಬರ । ಸೇನೆ ತಾಗಿತು ತಾಗಿದಾಕ್ಷಣ ನೀಗಿದರು ತನುವ ॥ ೧೦ ॥ ಮುರಿದುದೈ ನಮ್ಮವರು ಸಾತ್ಯಕಿ । ಯುರುಬೆಗಾನುವರಿಲ್ಲ ದೊರೆಕೈ । ಮರೆದನೋ ಕಾಳಾಯ್ತೆನುತ ಕುರುಸೇನೆ ಕಳವಳಿಸೆ ॥ ಜರೆದು ಮೂದಲಿಸಿದನು ಮಾದ್ರೇ । ಶ್ವರನ ದುಶ್ಶಾಸನನ ಗೌತಮ । ಗುರುಜಕೃತವರ್ಮಾದಿಪರಿವಾರವನು ಕಲಿಕರ್ಣ ॥ ೧೧ ॥ ಯದುಕುಲದ ಜರಡಿನಲಿ ಜನಿಸಿದ । ಸದೆಗಸಾತ್ಯಕಿ ನಮ್ಮ ಸುಭಟರ । ಸದೆದನೇ ದುಷ್ಕಾಲವಿಂದೇನೀಗ ತೋರಿಸಿತೇ ॥ ಬೆದರಲೇತಕೆ ಕಾಣದುದುಕಂ । ಡುದು ಮಹಾದೇವೆನುತ ಬೆರಳಿನ । ತುದಿಯ ಮೀಸೆಗಳಲುಗೆ ತಲೆದೋರಿದನು ಕಲಿಕರ್ಣ ॥ ೧೨ ॥ ಪ್ರೊತುಮುರಿಯ ದಳಪತಿಯ ಚಿತ್ತದ । ಖಾತಿ ಹೆಚ್ಚಿತು ನಮ್ಮ ಭುಜಬಲ । ವೇತಕಿವು ತಾನೆನುತ ಸಾತ್ಯಕಿ ಸದರವೇ ನಮಗೆ ॥ ಭೂತನಾಥನ ಕಂಡು ಲೆಕ್ಕಿಸ । ದಾತರೆಲ್ಲಾ ತಾವೆನುತ ನಿಜ । ಸೂತರನು ಬೋಳೈಸಿ ನೂಕಿತು ಗುರುಸುತಾದಿಗಳು ॥ ೧೩ ॥ ಮುರಿದಬಲ ಗರಿಗಟ್ಟಿತೊಗ್ಗಿನ । ಲುರುಬಿದವು ನಿಸ್ಸಾಳಕಹಳೆಯ । ಬಿರುಸರದ ಬಹುವಿಧದವಾದ್ಯಧ್ವನಿಯ ಕಳಕಳದ। ತುರುಗಿತೊಳುವಸಿಂಧಸೆಳೆಮುಡ । ಲಿರಿದರುಗ್ಗಲಿಸಲ್ಲವದ ನಿಜ । ನಿರಿಯಧವಳಚ್ಛತ್ರಚಾಮರದೊದಗಿತತಿರಥರು ॥೧೪॥ ಮುಂಕೆಣಿಯವಿಟ್ಟಣಿಸಿದರು ಭಾ । ರಾಂಕದಲಿ ಭಟರೆಂಟುಸಾವಿರ । ಬಿಂಕದತಿರಥರೊಂದುಕೋಟಿ ತುರಂಗ ಪಾಯದಳ ॥ ಶಂಕಿಸುವನೇ ಬಳಿಕ ಯದುಕುಲ । ದಂತಕಾರನು ನಿಂದನನಿಬರ । ಗಂಕೆಝುಂಕೆಯ ನೇನಹೇಳುವೆ ಸಾತ್ಯಕಿಯ ಮನವ ॥ ೧೫ ॥ ಭಾರಿಯಾಹವವಾಯ್ತು ಖಳದಳ । ಭಾರ ಕವಿದುದು ಸಾತ್ಯಕಿಯ ಸುರ । ನಾರಿಯರ ತೋಳಿನಲಿ ಕಾಬುದು ನೆಲನರಿಣ ಹೋಯ್ತು ॥ ಹೋರಿದೊಡೆ ಹುರುಳಿಲ್ಲನುತ ಪರಿ।ವಾರವೊರಲಿತು ಪಾಂಡುಕೇಕಯ।ಕೇರಳರ ಮುಂದಿಕ್ಕಿ ಪಡಿಬಲವಾದನಾಪಾರ್ಥ ॥೧೬॥

ಮುಂದೆ ಹರಿದರು ಪಾಂಡುತನಯರ । ನಂದನರು ತಾರ್ಕ್ಷ್ಯವರಾತನ। ಹಿಂದುಳುಹಿ ಹಿಂಡಿದರು ಹೇರಾಳದ ಚತುರ್ಬಲವ ॥ ಕೊಂದನಗ್ಗದಚಿತ್ರಸೇನನ । ಚಂದ್ರಹರಿಭಟಚಿತ್ರರನು ಗುರು । ನಂದನನು ಬಳಿಕಿವರ ಬೆದರಿಸಿ ನೂಕಿದನು ರಥವ ॥ ೧೭ ॥ ಹೆರತೆಗಹಿ ಕೆಲಸಾರಿ ಮಕ್ಕಳು । ಮುಂಗಳಿಗೆ ರಣವೇಕೆ ಪಾಂಡವ । ರುರುವಸಂತತಿಯುಕಟಿನುತಲವರೊಡ್ಡನೊಡೆದುಳಿದು ॥ ಇರಿವಭಟನಹೆ ಯಾದವರ ಬಡ । ಕರುವೆ ನೀಬಾರೆಂದು ಚಿಟಕಿಸಿ। ಕರೆದು ಗುರುಸುತ ಕಾದಿದನು ಸಾತ್ಯಕಿಯು ನಗೆಮಾಡಿ ॥ ೧೮ ॥ ಸಾರು ನೀಸಾರೆಲೆವೊ ಭೀಮನ । ದೋರೆಗರುಳಿನ ದಂಡೆಯನು ಮನ। ವಾರೆ ಮೂರಿಗೆ ಮುಡಿಸುವೆನು ಫಡ ನಿಲ್ಲುನಿಲ್ಲೆನುತ ॥ ಆರಿದನು ಜಗ ನಡನಡುಗೆ ಜಂ । ಭಾರಿ ಜವಗೆಡೆ ಜೋಡಿಸಿದನು ವು । ದಾರದಲಿ ಭಾರವಣೆಯಂಬನು ಭೀಮಸೇನಂಗ ॥ ೧೯ ॥ ಗುರುತನೂಜಕಣಾ ವಿರೋಧಿ । ಸ್ಮರಕಪರ್ದಿಕಣಾ ವೃಕೋದರ । ಕರುಮೃಗೇಂದ್ರಕಣಾ ಶರಾಳಿಯು ಕಾಯ್ದುಬಾಳೆನುತ ॥ ಸರಳನೆಚ್ಚನು ಸರಳನಾಬಳಿ । ಸರಳು ಮುಂಚಿತು ಆಸರಳ ಬಳಿ । ಸರಳು ಹಿಂದಿಕ್ಕಿದುದು ಚಳಕವನರಿಯೆ ತಾನೆಂದ ॥ ೨೦ ॥ ತಿರುಗನಿಂದನು ಪವನಸುತನಲೆ । ಗುರುಜ ನಿನ್ನಗ್ಗಳಿಕಗಳ ಜಗ । ವರಿಯದೇ ಪಟುಭಟನದಾವನು ನಿನಗೆ ಸರಿಯೆನುತ ॥ ಸರಳ ಬಲುಸರಳುಗಳನಾಬಳಿ । ಸರಳ ಲೆಕ್ಕದಲೆಸೆವ ವೀರರ । ಪರಿವಿಡಿಯ ವೇಗಾಯ್ಲತನವನು ತೋರಿದನು ಭೀಮ ॥ ೨೧ ॥ ಜಾಗುಮುಝುರೇ ಭೀಮ ಬಲುಕೈ । ಲಾಗು ಮರೆಯದಲಾ ಶರೌಘ । ಪ್ರಾಗುಶಸ್ತ್ರಪ್ರಸರಬಂಧವ ಮತ್ತೆ ನೋಡೆನುತ॥ ಈಗಗನವೀಧರಣಿಯಿದಿಗು। ಭಾಗವಿದು ತಾನೆಂಬವಿವರವ । ನಾಗಳರಿಯೆನು ಗುರುತನೂಭವನೆಚ್ಚನನಿಲಜನ ॥ ೨೨ ॥ ಎಲೆಲೆಹಾರುವ ನಿನಗೆ ಹರವೋ । ಖಲೆಯ ಕೇಳಿಕೆಯೇಕೆ ಪಡಿವು। ದ್ದಳಿಯುಬಡಿಕರ ಬಿರುದವೋಳವರಿಲ್ಲಲಾನಿನಗೆ॥ ಹೊಲಬುಗೆಡುವನೆ ಭೀಮನೀಸರ । ಳೊಳಗೆ ಹುಸಿಯೆನುತೆಚ್ಚಬಾಣ। ವಳಿಯ ನಿಮಿಷಕೆ ಕಡಿದು ಗುರುಜನನಚ್ಚನಾಭೀಮ ॥ ೨೩ ॥ ರಥದಮೇಲಂಬುಗಳು ರಫುಸಾ । ರಥಿಯ ಮೈಯಲಿ ಬಾಣ ತುರಗವ್ಯಥೆಯನೇವೇಳುವನು ಟೆಕ್ಕಯುವೃದೆ ಬಾಣಮಯ॥ ಶಿಥಿಲವಾದವು ನಾಗಗಳು ಬಳಿ । ರಥಿಕರೀತನ ಬಿಸುಟುಹಾಯ್ದರು । ಪೃಥುಳಬಳನ್ನ ಭೀಮನೆಚ್ಚನು ಗುರುತನೂಭವನ ॥ ೨೪ ॥ ನೊಗನನೀಡಾಡಿದವು ಕುದುರಗ । ಳೊಗಡಿಸಲು ರಕುತವನು ಸಾರಥಿ । ಚಗದಹಿಳುಕಗಳೌಕಿದವು ತೇರಿನಲಿ ಸಿಂಧದಲಿ ॥ ಬಗುವನೆತ್ತರ ಸುರಿವಬಾಣಗ । ಳುಗುಳ್ಗುಗಂಡಿಯ ಮೈಯಭೀಮನ । ಬೆಗಡುಮೊಳೆತುದು ಗುರುತನೂಭವನಚ್ಚನನಿಲಜನ ॥ ೨೫ ॥ ಈತನೆಚ್ಚನು ಮತ್ತೆ ಶರಸೆಂ। ಘಾತವನು ಗುರುಸುತನ ತನುವೋ। ಹೂತಮುತ್ತಕ ತಳಿತಸವ ಕೆಂದಾವರೆಯುವನವೊ ॥ ಭೀತಿ ಮೊಳತುದು ದಿಟ್ಟತನವೇ । ಧಾತುಗುಂದಿತು ನೋಡಿ ಕಂಗಳು । ಸೋತು ಮರೆಳಿದನಿತ್ತಲಶ್ವತ್ಥಾಮ ಮೈಮರೆದ ॥ ೨೬ ॥ ನನೆದಜಾದಿನಗಿರಿಯೊ ಭೀಮನೆ । ತನುವೊ ಖಂಡಿತರಕ್ತಚಂದನ । ವನವೊ ರಥವೋ ತಳಿತಶೋಕೆಯಮರನೊ ಸಾರಥಿಯೋ ॥ ಮನಹಣುಗಿ ತುಟಿಯೊಣಗಿ ನೋಟದ। ಮನಮುರಿದು ಝೋಂಪಿಸುತ ಮುಂದಣಿ। ಗೊನದು ಬಿದ್ದನು ಭೀಮ ಪಾಂಡವಸೇನ ಕಳವಳಿಸೆ ॥ ೨೭ ॥ ಅಹಹ ವೈರಿಗೆ ಧರಣಿಪಾಣಿ । ಗ್ರಹಣವಾಯ್ತೀ ಪಾಂಡುಸುತರಿಗೆ । ಬಹುವಿಪತ್ತುಗಳಿಗೆ ಯಿದೊಂದೇಕಲಶನಿರ್ವಾಹ ॥ ಅಹಿತರಿಗೆ ಜಯವಾಯ್ತು ಸಮುಗಿ । ನ್ನಿಹುದು ಮತವಲ್ಲೆಂದು ಸಾರಥಿ । ಸಹಸಿಗನ ಸಂತೈಸಿ ತಂದನು ರಾಜಮೋಹರ

ಕೆ ॥ ೨೮ ॥ ತಂದೆಯುಳಿದಾಹೊತ್ತು ರಿಪುಗಳ । ಕೊಂದು ಸಾಯದೆ ದೇಹವೋಹಕೆ । ನಿಂದು ಸೇ ನಿಸ್ತೇಜನಾದ್ಯೆ ವೈರಿಶರಹತಿಗೆ ॥ ಎಂದು ಸಾರಥಿ ಶೋಕಿಸುತ ಗುರು । ನಂದನನ ಕೊಂಡೊಯ್ದನಿತ್ತಲು । ಸಂದಣಿಸಿತತಿರಥರು ಸೌಬಲಶಲ್ಯಮೊದಲಾಗಿ ॥ ೨೯ ॥ ದೊರೆಗಳಿಬ್ಬರ ಸೋಲವನು ವಿ । ಸ್ತರಿಸಿ ಹೊಕ್ಕರು ಮತ್ತೆ ಮಾದ್ರೇ । ಶ್ವರಶಕುನಿಕೃತವರ್ಮಕೃಪದುಶ್ಶಾಸನಾದಿಗಳು॥ ಅರಬಲದೊಳಾದ್ರೌಪದೇಯರು । ಹರಿಯನುಜಮಾದ್ರೇಯಕೈಕಯ । ವರಯುಧಾಮನ್ಯೂತ್ತಮೌಂಜಸಪಾಂಡ್ಯಸೃಂಜಯರು ॥ ೩೦ ॥ ಬಲಿದುದಾಹವ ಮತ್ತೆ ಚಾತು । ರ್ಬಲ ಛಡಾಳಿಸಿ ಕಾದುತಿರ್ದುದು । ಮುಳಿದು ಶಲ್ಯನಕೂಡೆ ಪಂಚದ್ರೌಪದೀಸುತರು ॥ ಅಳವಿಗೊಟ್ಟರು ಕಟಕಟಾ ಮ । ಕ್ಕಳುಗಳಿಗೆ ರಣವೇಕೆ ಪವನಜ । ಫಲುಗುಣನ ಬರಹೇಳೆನುತಲೆಚ್ಚನು ಮಹಾಸ್ತ್ರದಲಿ ॥ ೩೧ ॥ ಎಚ್ಚನೊಡನೊಡನವರು ಬಾಣವ । ಕೊಚ್ಚಿದರು ಕೊಡಹಿದರು ಶರದಲಿ । ಮುಚ್ಚಿದರು ರಥವಾಜಿಸೂತರ ನಿಮಿಷಮಾತ್ರದಲಿ ॥ ಬೆಚ್ಚಿದವು ರಥವಾಜಿ ಶರಹತಿ । ಬಿಚ್ಚಿದವು ಅಡಿಗಡಿಗೆ ಧೈರ್ಯದ। ಕೆಚ್ಚು ನವೆದುದು ತೊಲಗಿದರು ಪಾಂಡವಕುಮಾರಕರು ॥ ... ... ... ॥ ೩೨ ॥

ಅಂತು ಸಂಧಿ ೩ ಕ್ಕೆ ಪದ ೭೪ ಕ್ಕಂ ಮಂಗಳಮಸ್ತು.

## ನಾಲ್ಕನೆಯ ಸಂಧಿ.

॥ ಸೂಚನೆ ॥ ರಾಯದಳ ಮಝುಪ್ರೊತುರೆನೆ ರಿಪು । ರಾಯಸೇನೆಯ ಮುರಿದು ಪಾಂಡವ । ರಾಯಧರ್ಮಕುಮಾರ ಗೆಲಿದನು ಕೌರವೇಶ್ವರನ ॥

॥ಪದ॥ ಫಡಫಡೆಲವೋ ಶಲ್ಯ ಮಕ್ಕಳ।ಬಡಿದು ಬೆರತ್ತೆ ಬಾಹುಬಲದಲಿ।ತೊಡರು ನಿನಗೆಡಗಾಲಿಲಿದೆ ಯೆನುತೊದೆದು ನಿಜರಥವ॥ ಘುಡುಘುಡಿಸಿ ರೋಮಾಂಚನದಹೊರ।ಗುಡಿಯ ಝೋಂಪಿನ ಮೈಯ ಕಡುಗಲಿ । ತಡೆದನೇಕಾಂಗದಲಿ ಸಾತ್ಯಕಿ ಶಲ್ಯಭೂಪತಿಯ ॥ ೧ ॥ ಬಾಯಬಡಿಕರು ಯಾದವರುಗರು । ವಾಯಿ ನಿನಗಲ್ಲಿಯದು ಸುಭಟರ । ಗಾಯುಧವೆ ಶೃಂಗಾರವೋ ಮೇಲ್ಕಾಲನೇವುರವೋ॥ ಸಾಯಕವ ಹಿಡಿ ಸಾಕು ಸೋಲಕೆ । ತಾಯಿಮನೆ ನೀನೆರಗಿದೊಡೆ ನಿ। ನ್ನಾಯತವನಾನರಿಯೆನೆನುತೋರಂತೆ ತೆಗೆದೆಚ್ಚ ॥ ೨ ॥ ಎಲವೊ ಫಡ ಮಾದ್ರೇಶ ಲೋಕದ । ಗಳಹತನ ನಮ್ಮೊಡನೆಯೋ ತೊ। ಟ್ಟಳಿಸಿ ಕಡಿವೆನು ನಾಲಗೆಯ ಮಿಗೆ ಮಾಣುಮಾಣೆನುತ ॥ ಬಿಲುದಿರುವನುಗುಳಿಚಿದನಂಬಿನ । ಬೆಳೆಯ ನಾರಳವಡಿಸಿದರು ದಿಗು। ವಳಯ ನೆರೆಯದಿದೆತ್ತಣದು ಬಿಲುಗಾರತನವೆಂದ ॥ ೩ ॥ ಬಾಯಬಡಿಕರು ನಾವು ನೀಗರು। ವಾಯಿಕಾರನೆ ಬೈವಬಿರುದಿನ । ಬಾಯ ನೋಡಾಯೆನುತ ತೋಟಿಗೆ ತೆರಹುಗೊಡದೆಸಲು ॥ ಸಾಯಕದ ಹೊಡೆಹಲವುಶಲ್ಯಗೆ । ಬೀಯವಾವವು ಬಳಿಕ ಕೌರವ । ರಾಯನನುಜನು ತರುಬಿ ನಿಂದನು ಸಾತ್ಯಕಿಯ ರಥವ ॥ ೪ ॥ ಹಳಚಿದವು ರಥವೆರಡು ಬಲುಗೈ । ಗಳಿಗೆ ಬಲಿದುದು ಬವರ ಕೌರವ । ಬಲದ ಭಟರಲಿ ಹತ್ತುಸಾವಿರರಥಿಕರನುವಾಯ್ತು ॥ ಬಳಹೊಗಿಸಿ ಸಾತ್ಯಕಿಯ ಸಿಲುಕಿಸಿ ।

ಗೆಲುವತವಕವನರಿದು ಕೆಣಕಿದ। ರಳವಿಯಲಿ ಸಹದೇವನಕುಲರು ಕೌರವಾನುಜನ ॥ ೫ ॥ ತೆಗಸಿದರು ಸಾತ್ಯಕಿಯನೀತನ। ಬಿಗಿದನಂಬಿನಲಿವರ ಬಾಣಾ। ದಿಗಳ ಕಡಿದನು ಗಾಸಿಮಾಡಿದನವರ ರಥಹಯವ ॥ ಜಗುಳಿದನು ಕಲಿನಕುಲರಥವಾ। ಜಿಗಳ ಜೋಡಣೆಗೆಟ್ಟು ರಕುತವ। ನೊಗಡಿಸಲು ಸಹದೇವನೆಚ್ಚನು ನಿನ್ನನಂದನನ ॥ ೬ ॥ ಸರಳ ಸೈರಿಸಿ ನಿನ್ನ ಮಗನು। ಬ್ಬರಿಸಿ ಮಾದ್ರೀಸುತನನೆಚ್ಚನು। ತರಹರಿಸಿ ಮಗುಳೆಚ್ಚಸಾತನು ಕೌರವಾನುಜನ ॥ ಮರುಳು ನೀನಹೆ ಯಿಮಹಾಸಂ। ಗರಕೆ ಕಳುಹೈ ನಿನ್ನವರ ನೆನು।,ತುರವನೆಚ್ಚನು ಜರಿಯೆ ಜೋಡಿನ ಚಿಪ್ಪು ಶರಹತಿಗೆ ॥ ನೋವನೇ ಶರಘಾತದಲಿ ಸಹ। ದೇವ ನೆಲವೋ ನಿನ್ನಕೊಂದರೆ। ಪಾವಮಾನಿಗೆ ಪಂತತಪ್ಪುವುದೆನುತ ಖಾತಿಯಲಿ ॥ ಲಾವಕನ ಸಾರಥಿಯು ರಥತುರ। ಗಾವಳಿಯನಾಯುಧವ ಖಂಡಿಸಿ। ಜೀವಗಳ್ಳರದೇವ ಪ್ರೈಸರಿಸಿದಪಲಾಯನವ ॥ ೮ ॥ ರಾಯನನುಜರ ಹಲಬದಲಿ ರಾ। ಧೇಯಹೊಕ್ಕನು ಸ್ವಾಮಿದ್ರೋಹರ । ಕಾಯಿದರೆ ಕೈಕೊಳ್ಳದೌಷಧ ವಾವುದಿವದಿರಿಗೆ ॥ ನೋಯಿಸುವೆನೊಮ್ಮೆನುತ ತಿರುವಿನ। ಸಾಯಕವ ಕಿರಿಗಡಿಯ ನೆಗಹಿನ। ರಾಯ ದಳಪತಿ ತರುಬಿದನು ಮಾದ್ರೀಸುತನ ರಥವ ॥ ೯ ॥ ಸಾರು ನೀ ಸಹದೇವ ಜಗದವಿ। ಕಾರಿಯಲ್ಲಾಕ ರ್ಣಯಿವನ ತು। ಟಾಲಸುವನಾಲಗೆಯ ಶೂಲಿಗೆ ಶಸ್ತ್ರವಧೆಯೆಂದು ॥ ಸಾರಥಿಯು ಬೋಳೈಸಿ ಚಾಪದ। ಸಾರಿಯನು ದನಿಮಾಡಿ ನಕುಲನು। ದಾರಕರ್ಣನ ಮುಟ್ಟಬಂದನು ಚಾಚಿದನು ರಥವ ॥೧೦॥ ಆರಿವರು ನಕುಲಾಂಕರೇ ಜ। ಜ್ಝುರತನವೆಮ್ಮೊಡನೆಯೇ ನೀ । ವಾರು ಪಾಂಡುಕುಮಾರಕರೊ ಮಾದ್ರೀಕುಮಾರಕರೋ ॥ ಭಾರಿಯಾಹವದೊಳಗೆ ನಿಮ್ಮನ । ದಾರುಬಿಟ್ಟರು ಪಾಯದಲಿ ನಿಮ। ಗಾರು ಮುನಿಯರು ಶಿವಶಿವೆಂದನು ಕರ್ಣನಸುನಗುತ ॥ ೧೧ ॥ ತೊಲತೊಲಗು ತರುವಲಿಗೆ ರಣವಿದು। ಸುಲಭವೇ ಲೋಕೈಕವೀರರು। ಹಲಬರಿದರೊಳಹೊಕ್ಕು ಹೊದಕುಳಿಗೊಂಡುಹೋದರಲಾ ॥ ನಿಲುವನಂಬುದೆನಿನ್ನತಂದುದು। ತಲೆಗೆ ನೋಡಾಯೆನುತ ಮಿಗೆ ಕೈ । ಚಳಕದಲಿ ರಿಪುಶರವ ಖಂಡಿಸಿ ತುಳುಕಿದನು ಶರವ ॥ ೧೨ ॥ ಬಿಗಿದಬಾಣದ ದಡಿಯನುರೆ ತಳ। ಮಗುಚಿದನು ಕೂರಂಬಿನಲಿ ಯೋ। ಳಿಗೆಯ ಮುಚ್ಚಳತೆಗದಹಾವಿನವೋಲು ಝೋಂಪಿಸುತ ॥ ಹೊಗರನೀನುವ ಹೊಸಮಸೆಯ ಕೋ। ಲುಗಳ ಕವಿಸಿದನಕುಲನಂಬಿನ। ಝುಗೆಯಝುಳದಲಿ ಮುಳುಗಿ ಮೋನದೊಳಿರ್ದನಾಕರ್ಣ ॥ ೧೩ ॥ ಆಳು ನೀನಹುದೆಲವೊ ತಮ್ಮವಿ। ಶಾಲಬಲನಹೆ ಲೇಸುಮಾಡಿದೆ। ಬಾಲನಾದೊಡೆ ಭಂಗವೇ ಜೋವಳೆಯನಭಿಮನ್ಯು ॥ ಕೋಲ ಸೈರಿಸುಸ್ಸೈರಿಸಾದೊಡೆ। ಭಾಳಲಿಪಿಸಂಘರ್ಷವಿಪುಳಶ। ರಾಳಿಯಿದೆ ಕೊಳ್ಳೆನುತ ಮಕುಟವನೆಚ್ಚನಾಕರ್ಣ ॥ ೧೪ ॥ ತಾಗಿದವು ನಾಲ್ಕಂಬುದೇಹದ। ಬೇಗಡೆಯಲೆಂಟಂಬುನುಸುಳಿದೊ। ಡಾಗ ಹದಿನಾರಂಬು ಹಾಯ್ದವು ಮತ್ತೆ ಬಳಿಸಲಿಸಿ॥ ಸೀಗುರಿಸಿ ಝೋಂಪಿನಲಿ ರಥದಲಿ। ಜೋಗಬೋದನು ಸಾರಥಿಯು। ಕೈ ಲಾಗಿನಲಿ ತಿರುಗಿದನು ನಕುಲನು ರಾಜಮೋಹರಕೆ ॥ ೧೫ ॥ ಹರಿಬದಾಹವವೆಮಗೆ ತಮಗೆಂ। ದುರವಣಿಸಿದರು ಚೇಕಿತಾನಕ। ದುರುಳಧೃಷ್ಟದ್ಯುಮ್ನಪಾಂಡ್ಯ ಶಿಖಂಡಿಸೃಂಜಯರು ॥ ಬರಲಿ ಬವರಕೆ ಹೊಟ್ಟುತೂರುವೊ। ಡರಸುಮೋಹರವೇಕೆ ಸಾಕೆಂ। ದರಿಭಟರ ತರುಬಿದರು ಕೃಪಕೃತವರ್ಮಸೌಬಲರು ॥ ೧೬ ॥ ದಳಪತಿಯು ಹಿಂದಿಕ್ಕಿ ಪಾಂಡವ। ದಳಮಹಾರ ಥರುರವಣಿಸಿ ಮಾ। ದಲಿಸಿದರು ಮಿಗೆ ಕೊಂದರಿದಿರೇರಿದಚತುರ್ಬಲವ ॥ ಕೊಲೆಗೆ ಬೆಸಸಿದರಿವರು

ಸಾವುದ । ಕಳುಕದವದಿರು ಹೇಳುವೊಡೆ ನಾ। ನಲಸಿದೆನು ಧೃತರಾಷ್ಟ್ರಯೆಂದನು ಸಂಜಯನು ನಗು ತ ॥ ೧೭ ॥ ಧುರವ ಸಾಗಿಸಿ ಭಂಡಿಮೊದಲಾ । ದಲಿಭಟರು ಜಾರಿದರು ಸುಭಟರ । ನೊರಸಿಕೂಡೇರಿ ದರು ತೂಗಿದರವರು ರಿಪುಬಲವ ॥ ದೊರೆಗೆ ಹತ್ತಿರೆಯಾಯ್ತು ಕಾಳಗ । ವಲದೆನಲು ನಿಸ್ಸಾಳಸೂಳಿ ನ । ಧರಧುರದದೆಖ್ಖಾಳದಲಿ ತಲೆದೋರಿದನು ಪಾರ್ಥ ॥ ೧೮ ॥ ಭಟರ ತೆಗೆತಗೆ ಪಾರ್ಥನೋ ರಿಪು । ಕಟಕಭೈರವನೋ ವೃಥಾಸಂ । ಕಟದ ಸಂಸಾಹದಲಿ ಸುಭಟರ ಮುರೆಯಬೇಕೆನುತ ॥ ಲಟಕಟಿಸಿ ಬಲ ವೊದರಲಾಪ್ರತಿ । ಭಟರು ಬಳಿಕನುವಾಯ್ತು ಪಿಜಯೋ । ತ್ಕಟದೊಳೆಪ್ಪತ್ತೇಳುಸಾವಿರವರಮಹಾ ರಥರು ॥ ೧೯ ॥ ನೂಕಿದರು ಸಂಶಪ್ತಕರು ಬಲ । ದಾಕೆವಾಳರ ತೆಗಸಿದರು ಬಾ । ಹಾಕತೋರರ ಸಾಲ ಪರಿಕಂಪಿತಕುಲಾಚಲರು ॥ ತೋಕಿದರು ಶರವಳೆಯನರ್ಜುನ । ಸಾಕುಸಾಕಾ ನಿನ್ನ ಜೊತ್ತಿನ । ಜೋಕೆಯಾಹವ ಹುರಿತಲಿಪೆಯೆನುತೆಚ್ಚಬರಿದರಾಗ ॥೨೦ ॥ ಆರಿದಿಪ್ಪತ್ತೈದುಸಾವಿರ । ತೇರುಸರಿದವು ವಂದು ವಾಘೆಯು। ಲೇರಿದವು ನಿಪ್ಪಸರದಲಿ ನಿಲುವಾತನಾರಿದಕೆ॥ ಸಾರಿಗೆಗೆ ಮುರಿಮುರಿದು ಬಾಣಾ। ಸಾರವಿಪ್ಪತ್ತೈದುಸಾವಿರ । ವಾರು ಸೈರಿಸಿ ನಿಲುವರೆನುತಿರ್ದುದು ಭಟಸ್ತೋಮ ॥೨೧ ॥ ಸುರಿದು ದಶಿಮಳೆಯೆಂದು ಕುಲಗಿರಿ । ಕರಗುವುದೆ ಮೇಗರೆಯಸಿಲೆಗಳ । ಬೆರಳು ನನೆವುದೆ ನಾಡ ದಂತಿಯುಲ ಳುಕುವರ್ಜುನನೆ ॥ ವರಮಹಾರಥರನಿಬರೆಸುಗೆಯು । ಸರಳಸಂಖ್ಯಾತೀತವವನೊಂ । ದುರವಣಿಗೆ ಪೈ ಸರಿಸಿತಿಲ್ಲವನೀಶ ಕೇಳೆಂದ ॥ ೨೨ ॥ ಅವರಶರಸಂಘಾತವನು ಕಡಿ । ದವರ ಸಾರಥಿಗಳನು ರಥವಾ । ರುವನು ಧನುವನು ಸಿಂಧವನು ಸೀಗುರಿಯ ಝಲ್ಲರಿಯ ॥ ಅವರ ಪದಕಕಿರೀಟಿಕಂಕಣ । ವವರ ಕ ರ್ಣಾಭರಣಕೇಯೂ । ರವನು ಕಡಿಕಡಿದೊಟ್ಟಿದನು ಕಲಿಪಾರ್ಥ ನಿಮಿಷದಲಿ ॥ ೨೩ ॥ ಗಾಯುವಡೆದ ರು ಗಾಸಿಯಾದರು । ಬಾಯೊಳೊಕ್ಕುದು ರಕುತ ಮಕ್ಕಳು । ತಾಯಿಗಾಗದೆ ಹೋದರೆಂಬುದು ತ ಪ್ಪದಾಯ್ತಿಲ್ಲಿ ॥ ನಾಯಕರು ಹಲರಳಿದು ಹರಿದರು । ಹಾಯಿದರು ಹೂಣಿಗರು ಹರಿಹಂ । ಚಾಯಿತಿ ಪ್ಪತ್ತೈದುಸಾವಿರವರಮಹಾರಥರು ॥ ೨೪ ॥ ಎಲೆಲೆ ಸಂಶಪ್ತಕರ ಭಾರಿಯ । ಬಲ ಮುರಿದು ಬರು ತಿದೆ ವಿಘಾತಿಗೆ। ನಿಲುವರಿಲ್ಲಾ ಸೂರೆವೋದುದು ರಾಯನಭಿಮಾನ ॥ ಜಲಧಿ ಬರೆತುತುದು ರಾಜಕಾ ರ್ಯಕೆ। ನಿಲುವೊಡಿದು ಹೊತ್ತೆನುತ ಮಂತ್ರಿಗ । ಳುಲಿಯೆ ಕೌರರರಾಯ ಕಂಡನು ಪಾರ್ಥನುರವಣೆ ಯ ॥ ೨೫॥ ಕರವ ನೆಗಹಿದನರಸ ಹೋಹೋ। ಬಿರುದರಂಜದಿರಂಜದಿರಿ ನಂ । ಮರಿಭಟಗೆ ನಾಲ್ಕಿಲ್ಲ ಕೈ ಕಣ್ಣಿಲ್ಲ ನೊಸಲಿನಲಿ ॥ ದೊರೆಯು ಕೈಯನು ಕಂಡು ಬಳಿಕೋ । ಸರಿಸಿತ್ತೆ ಪರಿವಾರ ದೂರದ। ಲಿ ರೆ ವೃಥಾಭಯ ಬೇಡೆನುತ ಕುರುರಾಯನಿದಿರಾದ ॥೨೬॥ ಕೂಡೆ ಗರಿಗಟ್ಟಿತು ಚತುರ್ಬಲ। ಜೋಡು ಮಾಡಿತು ರಾಯನಿದಿರಲಿ। ಹೇಡಿಕರಿಯುಹನೆಂದೊಡವದಿರು ಹೇವಮಾರಿಗಳ॥ಝಾಡಿಸುವಝಲ್ಲರಿಯ ಮೋರೆಗೆ । ನೀಡಿ ಮುರಳುವಸೀಗುರಿಯಬಲ। ವೇಡಿಸಿತು ಕಲ್ಪಾಂತಮಂಡಿತಮೇಘಮಂಡಲವ ॥೨೭॥ ಸರಕಟಿಸಿ ಬಲ ಸರ್ವಲಗ್ಗೆಯ। ಉರವಣಿಸೆ ಯಮಸೂನು ಕಂಡನು । ನರನ ತೆಗೆತೆಗೆಯಿಂದಿನಾಹವ ನಮ್ಮಮೇಲೆನುತ ॥ ಅರಸ ನಡೆದನು ರಾಯಮೋಹರ।ಹೊರಳಿಗಟ್ಟಿತು ವಿಲಯಸಮರ । ಸ್ಫುರದಬಹ ಳಾರ್ಣವವ ಲಗ್ಗೆಯಲುಳಿಯ ಲಹರಿಯಲಿ॥೨೮॥ ಎರಡುಬಲ ಗಂಟಿಕ್ಕಿದುದು ನೆಲ। ಬಿರಿಯೆ ಬೆರಸಿತು ಹೊಯ್ದು ಮತ್ತೇ । ಳುವವುಬೀಳುವಭಟರ ಮೆದೆಗೆಡೆವಾನೆಕುದುರೆಗಳ ॥ ಪರಿವಿಡಿಯದಂತಿರಲಿ ದೊ

ರೆದೊರೆ । ಯುರವಣಿಸಿ ಹಳಚಿದರು ಪಾಂಡವ । ರರಸಕೌರವರಾಯರೆಚ್ಚಾಡಿದರು ಮೊದಲಿಸಿ ॥೨೯॥
ಅರಸರಿವರೇ ಶಿವಶಿವಾ ನಿ । ಷ್ಕರುಣರೆನೆ ತಾವೆಂಬವೊಲುಬಲು।ಸರಳುಮಾನ್ಯರನರವವೇ ನೀವೇಕೆ ರಣ
ವೇಕೆ॥ಬರಟರರ್ಜುನಭೀಮರತಿನಿ । ಷ್ಠುರರು ನಾವಡಮೇಲೆಬರುವೆವು । ಮರಳಿ ಬಿಜಯಂಗೈವುದೆಂದನು
ಕೌರವರರಾಯ ॥ ೩೦ ॥ ಕೋಲಬಲುಹುಂಟಾಗಿ ನಾಲಗೆ । ಹೋಲೆನುಡಿವುದು ಹೊಲ್ಲೆಯೇನಿದು ।
ಖೂಳಕಟಿಕಿಯಮಾತು ಬೇಡಂಬಿನಲಿ ಮಾತಾಡು ॥ ಆಳುತನವಾಭರಣವೇಮಾ।ಸಾಳು ಮೈದೋರರರಸ
ಲಹಿತರ।ಮೇಲೆಬಾ ಬಲುಬೇಗ ಸುಭಟರ ಹೊಗಳಬೇಕೆಂದ॥೩೧॥ಖರೆಯರೆಲ್ಲಾ ನೀವು ಕುಂತಿಯ।ವರಕು
ಮಾರರು ನಿಮ್ಮೊಡನೆ ಸಂ। ಗರಕೆ ಸರಿಸರೆ ನಾವು ಸಾತ್ತ್ವಿಸಾದೊಡೆನುತೆಸಲ॥ಸರಳುಗಗನವ ಹೊದಿಸಿ
ದವು ಹೊಂ । ಕರಿಸಿದವು ಹರೆಗಡಿದವರಿಮೋ । ಹರವ ಮುರಿದವು ಮುಸುಕಿದವು ಮೋದಿದವು ರಿಪುಶ
ರವ ॥೩೨॥ ಎಚ್ಚನೆಂಟಂಬಿನಲಿ ಕೌರವ । ನೆಚ್ಚಬಾಣವ ಕಡಿದು ನೂರರೊ । ಳೆಚ್ಚನೀತನ ಧನುವನದ
ಪರಿಹರಿಸಿ ಕುರುರಾಯ ॥ ಎಚ್ಚನರಸನನಾಸರಳ ಕಡಿ । ದೆಚ್ಚನವನಿಪನುಭಯರಾಯರ । ನಿಚ್ಚಟರು
ಮಝುಭೂತುರೆಂದುದು ಮೇಲೆ ಸುರಕಟಕ ॥ ೩೩ ॥ ದ್ಯುಮಣಿ ಪಡುವಣಗಿರಿಯ ಸಾರುವ।ಸಮಯ
ವಾಯಿತು ರಾಯರಿಬ್ಬರ। ಸಮರಸೌರಂಭಾತಿಶಯವಿಮ್ಮಡಿಸಿತಡಿಗಡಿಗೆ ॥ ಅಮಿತದೋಷಪಿದೂಷಪಾ
ಣಿ । ಭ್ರಮಿತಶರತತಿವಿಸ್ಫುಲಿಂಗಾ । ಕ್ರಮಿತಭುವನತ್ರಯರು ಕಾದಿದರರಸಕೇಳೆಂದ ॥ ೩೪ ॥ ನೆಲವು
ನಮಗಾಯ್ತೆಂದು ಕೌರವ।ರುಲಿದರೆಮಗಗ್ಗಳಿಕೆಯೆಂಬವ । ರುಲಿವುತಿರ್ದರು ಕಾದಿದರು ಸಮಜೋ
ಳಿಜೋಕೆಯಲಿ ॥ ಬಳಿಕ ಯಮನಂದನನಕೈವೆ । ಗ್ಗಳಿಸಿ ತಾಗಿತು ನಿನ್ನ ತನುಜನ । ಬಿಲುಸರಳುರಥ
ಸೂತವಾಜಿಗಳೊರಗಿದವು ಧರೆಗೆ ॥ ೩೫ ॥ ಸೆಳೆದುಹಿರಿಯುಬ್ಬಣವನವನಿಪ । ನೆಲಕೆ ಚಿಗಿದನು ಹಾವು
ಹಾದೇ । ವೆಲೆಲೆ ದೊರೆದೊರೆಹಗೆಗೆ ಸಿಲುಕಿದನೋ ಶಿವಾಯೆನುತ ॥ ಬಿಲುದುಡುಕಿ ಕೃತವರ್ಮಕೃಪ
ಸೌ । ಬಲನೃಪಾಲನು ಶಲ್ಯಗುರುಸುತ । ದಳಪತಿಗಳೈದದರು ರಾಯನ ಸುತ್ತ ಮುತ್ತಿದರು ॥೩೬॥
ದೊರೆಗೆ ಬಿದ್ದುದು ಭಾರಿಯಾಹವ । ನರನ ಬರಹೇಳೆನುತ ಕಪಿದರು । ಸರಳ ಹೊದೆಗಳ ಕೆದರಿ ಸಾ
ತ್ಯಕಿಭೀಮಕೈಕಯರು ॥ ಬಿರುದಧೃಷ್ಟದ್ಯುಮ್ನಮಾದ್ರೇ । ಯರು ಶಿಖಂಡಿಯುಯುಧಾಮನ್ಯುಸೃಂಜಯ।
ತರಳಪಂಚದ್ರೌಪದೇಯರು ಮುತ್ತಿದರು ನೃಪನ ॥ ೩೭ । ಬಳಿಕ ಸಂಕುಲಸಮರವತಿವೆ । ಗ್ಗಳಿಸಿತದ
ನೇನೆಂಬೆವಂಬುಧಿ । ಗಳಿದನಂಬುಜಮಿತ್ರಬೆನ್ನಲಿ ತಿಮಿರ ಬಳಿಸಲಿಸಿ ॥ ಗೆಲಿದು ಹೋಗದಿರೆನುತ ಕೌ
ರವ।ನಳವಿಗೊಟ್ಟನು ಮತ್ತೆ ಧರ್ಮಜ।ಬಿಲುದಿರುವ ನೇರಿಸಿಯೆ ನಿಂದನು ಸಮರಕನುವಾಗಿ ॥ ೩೮ ॥
ರಾಯರಿಬ್ಬರು ಮೆರೆಯೆ ತಿಪುರದ । ತಾಯುವನೆ ತಾನೆಂಬವೋಲ್ನಿ । ದಾಯದಲಿ ನುಂಗಿದುದು ಕ
ತ್ತಲೆ ನಿಮಿಷದಲಿ ಜಗವ ॥ ರಾಯಮೋಹರದೆಗೆದವೆರಡುನ । ವಾಯಿಯಲಿ ಬಹುವಿಧವವಾದ್ಯವಿ ।
ಡಾಯಿ ಮಿಗೆ ನಲವಿಂದ ಹೊಕ್ಕರು ಪಾಳಯಂಗಳನು. ... ... ॥೩೯॥

ಅಂತು ಸಂಧಿ ಕ್ಕ ಪದ ೧೨೩ಕ್ಕಂ ಮಂಗಳಮಸ್ತು.



## ಐದನೆಯ ಸಂಧಿ.

॥ ಸೂಚನೆ ॥ ವೈರಿವಿಜಯಕೆ ತ್ರಿಪುರವಿಜಯದ । ಚಾರುಕಥನವನೊರೆದು ಲ್ಯನ । ಸಾರಥಿಯ ಮಾಡಿದನು ಕರ್ಣಗೆ ಕೌರವರರಾಯ ॥

ಪದ ॥ ಕೇಳು ಜನಮೇಜಯಧರಿತ್ರೀ । ಪಾಲ ದಿನವೊಂದಾಯ್ತು ಕರ್ಣನ । ತಾಳಗದೊಳಗಿಲ್ಲಿಂದ ಮೇಲಣ ವರಕಥಾಮೃತವ ॥ ಕೇಳಿಚಿತ್ತೈಸಿದ ಗತಾಕ್ಷನೃ । ಪಾಲಕಗೆ ವಿಸ್ತರಿಸಿ ಸಂಜಯ । ಹೇಳಿದನು ಬಳಿಕೆರಡನೆಯ ಸಮರದ ಮಹಾರ್ಣವ ॥ ೧ ॥ ಹೊಗಳಿ ಕೆಲಬರು ಹೊಳ್ಳುಗಳೆವುತ । ನಗುತ ಕೆಲಬದವರವರೋಹರ । ದೆಗೆದು ಹೋದುದು ಬಲಿದುದಿದು ತಮತಮ್ಮ ಪಾಳಯಕೆ ॥ ಹೊಗಳ್ವ ಭಟ್ಟರ ಸಾಲಕೈದೀ । ವಿಗೆಯ ಕಹಳಾರವದ ಲಗ್ಗೆಯ । ಬಿಗುಹಿನಲಿ ಕುರುರಾಯ ಹೊಕ್ಕನು ರಾಜಮಂದಿರವ ॥ ೨ ॥ ಗುಳುವನಿಳುಹಿದವಾನೆಗಳು ಹ । ಲ್ಲಳವ ಬಿಡೆಭುಲ್ಲವಿಸಿದವು ಹಯ । ಕುಳವರೂಥವನಿಳಿದು ಸೂತರು ನಿಲಿಸಿದರು ರಥವ ॥ ಕಳಚಿ ಸೀಸಕಜೋಡುಕೈದುವ । ನಿಳುಹಿ ಸಮರಶ್ರಮವ ನಿಮಿಷಕೆ । ನಿಳಯವೇದಿಯೊಳಿರ್ದು ಕಳಿದುದು ಕೂಡೆ ಪರಿವಾರ ॥ ೩ ॥ ಗಾಯವಡೆದಾನೆಗಳು ಗುಳವನು । ಹಾಯ್ಕಿಯೆನೆ ನೆಲಕುರುಳಿದುವು ಮಿಗು । ವಾಯುಧಂಗಳ ಬಿಗುಹು ಬಿಡೆರ್ಯೊಂಮೆದ್ದುವಾಘೆಯಲಿ ॥ ಆಯದಲಿ ಮುರಿದಂಬನುಗಿದೊಡೆ । ಸಾಯದಿಹರೇ ಭಟರು ಗಜಹಯ । ರಾಯ ಹತ್ತೊಂಡಾಗಿ ಹೆಚ್ಚಿತು ಕೌರವೇಶ್ವರನ ॥ ೪ ॥ ಬಂದುದಿರುಳೋಲಗಕೆ ರಾಯನ । ಮಂದಿ ಮಳಪತಿಶಲ್ಯಕೃಪ ಗುರು । ನಂದನಾದಿಮಹಾಪ್ರಧಾನರು ದೊರೆಯ ನೇಮದಲಿ ॥ ಇಂದಿನಾಹವದೊಳಗೆ ಕುಂತೀ । ನಂದನರ ಬೊಬ್ಬಾಟ ಬಲುಹಾ । ಯ್ತೆಂದು ಮೆಲ್ಲನೆ ಮಾತು ತೆಗೆದನು ಕೌರವರರಾಯ ॥ ೫ ॥ ಬಲುಹಲೇ ಬಳಿಕೇನು ಹಗೆಯ । ಗ್ಗಳಿಕೆ ಮೆರೆಯದೆ ಮುರವಿರೋಧಿಯ । ಬಲುಹ ನೋಡಾ ಪಾರ್ಥನೆಂಬವನಾವಮಾನಿಸನು ॥ ಬಲುಹು ಸಾರಥಿಯಿಂದ ರಿಪುಗಳ । ಗೆಲವು ಸಾರಥಿಯಿಂದ ಸಾರಥಿ । ಯೊಲಿದಡೆನಗಹುದೆಂದು ಕರ್ಣನು ಕೌರವನೊಳೆಂದ ॥ ೬ ॥ ಭಾರಿಧನುವಿದ್ದೇನು ತೋಳಿನ । ತೋರಹದ ಫಲವೇನು ಕೈಮೈ । ತೋರಿಯೇ ಗರುವಾಯಿಗೆಡಿಸಿತು ನಮ್ಮಮೋಹರವ ॥ ತೋರಬಲುಮೆಯ ಗರೆಯಸಾರಥಿ । ಸೇರಿದೊಡೆ ರಣದೊಳಗೆ ನಾಳಿಗೆ । ವಾರಣದ ಲೌತಣವನಿಕ್ಕುವೆ ಕಾಕಸಂತತಿಗೆ ॥ ೭ ॥ ಲೇಸನಾಡಿದೆ ಕರ್ಣನಿನಗೇ । ನೈಸಲೇ ಸಾರಥಿಯ ಕೊರತೆ ಸು । ರಾಸುರರ ತಟ್ಟಿನಲಿ ತೊಡಕುವ ನಾವನಿನ್ನೊಡನೆ ॥ ಈ ಸಮಸ್ತ ನೃಪಾಲವರ್ಗದ । ಲಾಸೆಯಾರಲಿ ಸೂತಕರ್ಮಾ । ಭ್ಯಾಸಿಯನು ಜೋಡಿಸುವೆನೆಂದನು ಕೌರವರರಾಯ ॥ ಹಲವುಮಾತೇಕರಸ ನುಡಿದುದು । ಫಲಿಸಲರಿಯದು ದೈವಗತಿಯಲಿ । ಫಲಿಸಿತಾದರೆ ರಾಜ್ಯಲಕ್ಷ್ಮಿಗೆ ಸೂಳೆತನವಹುದೆ ॥ ಸುಲಭವಾದೊಡೆ ಮಾದ್ರರಾಜನ । ತಿಳುಹಿ ಸೇರಿಸು ರಿಪುಗಳೈವರ । ತಲೆಗೆ ನೀಹಿಡಿ ಸಂಚಕಾರವನೆಂದನಾಕರ್ಣ ॥ ೯ ॥ ಉಬ್ಬಿದನು ರೋಮಾಂಚ ಮೈಯಲಿ । ಹಬ್ಬಿದುದು ಹೊರೆಹೆಚ್ಚಿ ಮರೆವೆಯ । ಮುಬ್ಬು ಕವಿದುದು ಕರ್ಣನಾಡಿದಮಾತ ನೆನೆನೆದು ॥ ಟೆಬ್ಬರಿಸುವವಿಂದ್ರಿಯತುರಂಗದ । ಗಬ್ಬ ಕಳಚಿತು ಕೌರವೇಂದ್ರನು । ಸಬ್ಬಲಗ್ಗೆಯಹರುಷದಲಿ ಹೊರವಂಟನರಮನೆಯ ॥ ೧೦ ॥ ಹರಿದರರಸಾಳುಗಳು ರಾಯನ । ಬರವ

ನಾತಂಗರುಹಿದರು ಕಡು। ಹರುಷದಲಿ ಕಲಿಶಲ್ಯ ಹೊರವಂಟನು ನಿಜಾಲಯವ ॥ ಅರಸುಮಕ್ಕಳವಜ್ರ ಮಣಿಯಾ। ಭರಣಕಿರಣದಸೋಮದೀಪ್ತಿ। ಸ್ಫುರಿತ ಝಳಮಧ್ಯದಲಿ ಕಂಡನು ಕೌರವೇಶ್ವರನ॥೧೧॥ ಅಂದಳವನಿಳಿದರಸನಾತಗೆ।ವಂದಿಸಿದನಾಮಾದ್ರಪತಿ ಸಾ।ನಂದದಲಿ ತೆಗೆದಪ್ಪಿ ತಂದನು ರಾಜಮಂದಿರಕೆ॥ ಇಂದಿದೇನಿದ್ದಿರವು ನೀನೇ। ಬಂದ ಕಾರ್ಯವಿಶೇಷವೇನುಂ ।ದೆಂದು ಕೌರವರಾಯನನು ಬೆಸಗೊಂಡನಾಶಲ್ಯ ॥ ೧೨ ॥ ಏನ ಹೇಳುವೆನೆನ್ನ ಪುಣ್ಯದ। ಹಾನಿಯನು ಸುಗ್ರಾಯ್ಯು ಬಲಸುಂ । ಮಾನ ಬೀತುದು ಬಿರುದರಿಗೆ ಕಾಲೂರಿತವಮಾನ ॥ ಜ್ಞಾನದೀಕ್ಷೆಯ ಹಿಡಿದರೆನ್ನಸು। ಮಾನಸುಭಟರು ಜಯಸಿರಿಯ ಸಂ। ಥಾನ ಮುರಿದುದು ಮಾವ ನಿನ್ನಜ್ಞಾನವೇನೆಂದ ॥ ೧೩ ॥ ಸಮರಜಯಸಾಧಕರು ಮಂತ್ರ। ಭ್ರಮಿತರಾಯಪಜಯವಧೂವಿ। ಭ್ರಮ ಕಟಾಕ್ಷದಗಾಯದಲಿ ಕಳವಳಿಸದವರಾರು ॥ ಸಮತೆಯಾಯಿತು ತವಕಿಗಳಿಗು। ಭ್ರಮಿಗಳಿಗೆ ತಿಳಿವಾಯ್ತು ವಾಸಿಯ। ಮಮತೆಯವರು ವಿರಕ್ತರಾದರು ಮಾವ ಕೇಳೆಂದ ॥ ೧೪ ॥ ಮುರಿವಡೆದು ಕಲಿಭೀಷ್ಮಸರಳನು ಧರಿಸಿದನು ದ್ರೋಣಂಗೆ ಬಂದುದ। ನರುಹಲೇಕದ ಬಳಿಕ ಕರ್ಣನ ವೀರಪಟ್ಟದಲಿ ॥ ನೆರವಣಿಗೆಯುಂಟಾದೊಡೊಂದೇ। ಕೊರತೆಯಿದು ನಿಮ್ಮಿಂದ ಕಡೆಯಲಿ। ನೆರತೆಯಹುದೆನಗುತ್ತರೋತ್ತರಸಿದ್ಧಿಯಹುದೆಂದ ॥೧೫॥ ದ್ರೋಣ ಭೀಷ್ಮರವೋಲು ನೆಟ್ಟನೆ। ಹೂಣಿಗರು ರಾಧೇಯಮಾದ್ರ। ಕ್ಷೋಣಿಪತಿಯುಂಟೆಂಬನುಡಿಯಿನ್ನೆರಡು ಕಟಕದಲಿ ॥ ಕೇಣವಿಲ್ಲದರವಗತಿಯ ಬಿ। ನ್ನಾಣವನು ತೋರಿದೊಡೆ ತನ್ನಯ। ಗೋಣಿಗೌಕುವ ಕೈದುವನು ನೀವ್ ತೆಗಸಿದವರೆಂದ ॥೧೬॥ ಬರಿದೆಬೋಳೈಸಿದರು ಕಾರ್ಯದ। ಹೊರಗೆ ಯೇನದ ಹೇಳುಮೋಗರೆ। ಮೆರೆವವರು ನಾವಲ್ಲನುಡಿಯಾಬಯಲಡೊಂಬೇಕೆ ॥ ಅರುಹು ಕೇಳುವೆನೆನಲುಶಲ್ಯನ। ಬಿರುನುಡಿಗೆ ಬೆಚ್ಚದೆ ಮಹೀಪತಿ । ಸೊರಹುತಪ್ಪದೆ ಬಿನ್ನವಿಸಿದನು ಮಾದ್ರಭೂಪತಿಗೆ ॥ ಮಾವ ಸಾರಥಿಯಾಗಿ ಕರ್ಣನ। ನೀವು ಕೊಂಡಾಡಿದೊಡೆ ಫಲುಗುಣ। ನಾವಪಾಡು ಸುರಾಸುರರ ಕೈಕೊಂಬನೇ ಬಳಿಕ ॥ ಆವುದೆನಗಭ್ಯುದಯವದನೀ। ವಾವಪರಿಯಲಿ ಮನ್ನಿಸಿದೊಡರೆ । ಜೀವಿಕೌರವವಂಶ ನೆರೆ ಸತ್ಪ್ರಾಣಿಸುವುದೆಂದ ॥ ೧೭ ॥ ಖೂಳನೆಂಬೆನೆನೀನು ನಿಪುಣನು । ಬಾಲನೆಂಬೆನೆ ಸಕಲ ಪ್ರೌಢಿಕೆ। ಮೇಲೆಫಲಿತದಬೀಡು ಬಿಟ್ಟಿದೆ ಹಾ ಮಹಾದೇವ ॥ ಹೇಳುಹೇಳಿನ್ನೊಮ್ಮೆ ನುಡಿನುಡಿ । ಕೇಳುವೆನು ಕಿವಿಯಾರಕರ್ಣನ। ಕಾಳಗಕೆ ನಾವ್ ಸಾರಥಿಗಳೇ ಶಿವಶಿವಾಯೆಂದ ॥೧೮॥ ಖೂಳನನು ಹಿಡಿತಂದು ಧರಣೀ। ಪಾಲನನು ಮಾಡಿದೊಡೆ ರಾಜ್ಯದ । ಮೇಲೆ ನಿಲಿಸಿದಬಳಿಕ ಬಂದುದು ಖೂಳತನ ನಿನಗೆ ॥ ಕೀಳುಮೇಲಿನವಾಸಿನಿನ್ನಲಿ। ಬೀಳುಕೊಂಡುದುಸಾಕು ನಮಗೆ। ನ್ನಾಳುತನವೇಕೆನುತ ಮಡಮುರಿದೆದ್ದನಾಶಲ್ಯ ॥ ೨೦ ॥ ಒಡನೆ ನಿಂದನು ಸೆರಗಹಿಡಿದವ। ಗಡವಿದೇಕಿನ್ನೆನುತ ಗುಣದಲಿ । ನುಡಿದು ಕುಳ್ಳಿರಿಸಿದನು ಸಂತೈಸಿದನು ವಿನಯದಲಿ ॥ ನುಡಿಗೆ ಕೋಪಿಸಲೇಕೆ ಮನಕೊಡ। ಬಡುವದೇಕೈಕೊಂಬುದಲ್ಲದೆ। ಯೊಡೆಯರುಂಟೇ ನಮಗೆ ಯೆಂದನು ಕೌರವರರಾಯ ॥೨೧॥ ಅರುಣ ಸಾರಥಿಯಾಗಿ ತರಣಿಯ। ತುರಗಹಿಡಿಯನೆ ಕೃಷ್ಣನಲ್ಲಾ। ನರನಸಾರಥಿಯಾಗಿ ತೋರನೆ ತನ್ನ ಕೈಗುಣವ ॥ ಹರನ ಸಾರಥಿ ಕಮಲಸಂಭವ। ಸುರರ ಕಾರ್ಯಕ್ಕೊದಗನೇ ಸ। ತ್ಪುರುಷರೇ ಪರಕಾರ್ಯನಿಷ್ಠರು ಮಾವ ಕೇಳೆಂದ ॥ ೨೨ ॥ ಸವರಿದರು ಕುರುವಂಶವನು ಪಾಂ। ಡವರುಸಹಿತ ಮಹಾರಥರು ಸಲೆ। ಸವೆದು

ದಿಲ್ಲಿ ನದೀಸುತದ್ರೋಣಾದಿನಾಯಕರು ॥ ಅವರಲಳಿದವರಿಬ್ಬರೇ ನಂ । ಮವಸರಕೆ ಸಾಹಸಿಗರ್ಗೆ ನಿ ನ್ನವರಮೇಲನು ಮಾನವಿದ್ದೊಡೆ ಮಾತುಮಾಣೆಂದ ॥ ೨೩ ॥ ನಿನ್ನ ಕೈಯಲಿ ಯಿರಲಿ ಸತ್ತಿಗೆ । ಯೆನ್ನಕೈಯಲಿ ಹೊಡಿಸು ಭಂಡಿಯು । ನಿನ್ನತಮ್ಮನ ಹೆಗಲಲಾತನ ಹಡಪ ಹಾಯ್ಕಿರಲಿ ॥ ನಿನ್ನ ಬಂಧುಗಳವನ ಬೇಟೆಯು । ಕುನ್ನಿಗಳ ಹಿಡಿಯಲಿ ಸುಯೋಧನ । ನಿನ್ನ ಭಾಗ್ಯವನೊದೆದು ಕಳೆ ಕೇ ಡಾವುದೆನಗೆಂದ ॥ ೨೪ ॥ ಗೆಲಿದೆನಿವದಿರನೆಂಬಬಲುಕ । ಕ್ಕುಲಿತೆಯಲ್ಲದೆ ದ್ರೋಣಭೀಷ್ಮರಿ । ಗಳು ಕವರಿಭಟರಿವನ ಬಗೆವರೆ ಕಂಡು ಮರುಳಾದೆ ॥ ಬಲುಬಿದಿರನುಚ್ಚಳಿಸುವಳಿಮುಖ । ಕೆಳೆಯಕಬ್ಬಾನು ವುದೆ ಕೌರವ । ಕುಲವನದ್ದಿದೆ ಪಾಪಿಕಷ್ಟವನೆನೆದೆ ಹೋಗೆಂದ ॥ ೨೫ ॥ ಅರಿತಿರವ ಚಂಡಾಡಿತೆ ನ್ನೀ । ಕರವು ವಂದಿವ್ರಾತದೆಡರನು । ಪರಿಹರಿಸಿತೀ ಕರದಳವು ಹಿಂದಣಸುಕಾಲದಲಿ ॥ ಧರಣಿಪತಿ ನಿನ್ನಿಂದಕರ್ಣನ । ತುರಗಭಾರಿಯಚಮ್ಮಟಿಕೆಯಾ । ಕರವ ಹೊದ್ದುವುದಾಯ್ತು ಶಿವಶಿವ ಧನ್ಯರಾವೆಂ ದ ॥ ೨೬ ॥ ಜಾತಿ ಹೀನರಕರ್ಮವೃತ್ತಿಮ । ಜಾತಿಯುಲಿ ಕರ್ತವ್ಯತೀರಿವಿ । ಜಾತಿಗಳಲತಿಕರ್ಮವೃತ್ತಿ ಯಸೇರುವೆಯನರಿದು ॥ ಆತನಳವಡಿಸಿದನು ವಿಧಿನಿನ । ಗಾತಮಾಡಿದನಳಿವಸಾವು । ಧ್ಯಾತಿಶಯ ವುಂಟಾದೊಡೈಸಲೆಯೆಂದನಾಶಲ್ಯ ॥ ೨೭ ॥ ಆಸುರದ ಬೆರಗೇಕೆ ನಮ್ಮೊಡ । ನೀಸುಮಾತೇಕೆಮ್ಮ ರ ಕ್ಷಿಸು। ವಾಸೆಯುಂಟೀ ಮಾಡು ಮಾಣ್ಬುದುಕರುಣವಿಲ್ಲದೊಡೆ ॥ ವಾಸಿವಟ್ಟವ ನೋಡಿವನೆ ಲಕ್ಷ್ಮೀ ಶನವರಲಿಸೂತಕರ್ಮಾ । ಭ್ಯಾಸಿ ಯೀ ಮುರವೈರಿಯೆಂದನು ಕೌರವರಾಯ ॥ ೨೮ ॥ ಮುರಹರನ ಸಮಜೋಳಿ ನೀವಾ । ನರನ ಸಮಗೈಕರ್ಣನಿಂತಿ। ಬ್ಬರನು ನೀವಿಬ್ಬರು ವಿಭಾಡಿಸಿ ಗೆಲುವುದೇನರಿದು॥ ಸುರರ ಕಾರ್ಯದಲಂದುಸಾರಥಿ। ಸರಸಿಜೋದ್ಭವನಾಗನೇ ನಂ । ಮರಸುತನವಿಂತಳಿದುದಿದ ನೀನೊಲಿ ದು ವುಳುಹೆಂದ ॥ ೨೯ ॥ ಬಣಗುತಿದೆ ಕುರುವಂಶಪೀಢಲು । ಗುಣನ ಕೋಪಾನಲನನಾಲಗೆ । ಕೆಣ ಕುತಿದೆ ಕಕ್ಕುಲಿತೆ ಪಟ್ಟೊಡೆ ಕಾಣೆ ಕಾವವರ ॥ ಅಣಕಿಸದೆ ಕಾರುಣ್ಯವಗುಷವ । ನೊಣಗಿನಲಿ ಸುರಿ ಪಾಹಿಮಕ್ಕಳ । ಹೆಣನ ಕಾಣುತ ದುಃಖವಿಲ್ಲ ದುರಾತ್ಮನೀನೆಂದ ॥ ೩೦ ॥ ದೇವಕೀಸುತನೆಂದು ಭಂಡಿ ಯ । ಬೋವ ಕುಲದಲಿ ಹುಟ್ಟಿದನೊ ಮೇ । ಣಾವಿರಿಂಚಿಯುದಾರಸಾರಥಿತನದಪೀಳಿಗೆಯು ॥ ಕಾವುದಿದರೊಳಗೊಬ್ಬರೊಬ್ಬರ । ನಾವವಾಸಿ ಪರಿಪ್ರಯೋಜನ । ಭಾವಕರುಸತ್ಪುರುಷರಿದಕೆ ವಿಚಾ ರವೇಕೆಂದ ॥ ೩೧ ॥ ಗುರುಪಿತಾಮಹರಿಂದ ಮೇರೆಯು । ಮುರಿದವಿಜಯುವಧೂಕಟಾಕ್ಷವ । ತಿರುಹಿ ಹಾಯ್ಕುವವೀರನಾವನು ನೀವು ತಪ್ಪಿದೊಡೆ ॥ ಕುರುಕುಲೋಧ್ಧಾರಕನು ಮಾದ್ರೇ। ಶ್ವರನೆನಿಪವಿಖ್ಯಾ ತಿ ಬಂದುದು । ಪರಿಹರಿಸದಿರಿ ಮಾವ ಯೆಂದೆರಗಿದನು ಚರಣದಲಿ ॥ ೩೨ ॥ ಶಿವಶಿವಾ ನಿರ್ಬಂಧ ಮಿದು ಕೌ । ರವನೊಳಾಯ್ತೇ ಮದ್ಯಮಯುಗಂ । ದವಸವಿವಪರಿಯಾಯ್ತುಲಾ ತುಂಬೆಗಳ ಸೆರೆವಿ ಡಿದು ॥ ಅವನಿಪನ ದುಸ್ಸೇವೆಯಿದು। ಕಷ್ಟವೆಲೆ ಮೊದಲಲಿ ಬಳಿಕನಾವಿ। ನ್ನವ ಗಡಿಸಲೇನಹುದು ಸಾ ರಥಿಯಾದವೇಳೆಂದ ॥ ೩೩ ॥ ಆಯಿತೀ ಸಂತೋಷ ಕಮಲದ । ಳಾಯತಾಕ್ಷನ ನೋಡಿ ಬಂಡಿಯ । ಬೋಯಿಕೆಗೆ ವೀಳೆಯವ ಹಿಡಿದೆವು ಹಲವು ಮಾತೇನು॥ ದಾಯವಿಲ್ಲದೆ ವಿಟವಿದಾತ್ರಂ। ಗಾಯ್ತೆಮಿ ಗೆ ಸಾರಥ್ಯ ವಾದೊಡೆ । ರಾಯ ಹೇಳ್ಕೆ ತ್ರಿಪುರದಹನದ ಕಥೆಯನೆನಗೆಂದ ... ॥೩೪॥

ಅಂತು ಸಂಧಿ ೫ಕ್ಕೆ ಪದ ೧೫೭೪ಕ್ಕಂ ಮಂಗಳಮಸ್ತು.



## ಆರನೆಯ ಸಂಧಿ.

ಸೂಚನೆ|| ನಗರಮೂರರ ದೂರಕಾರರ | ದುಗುಡವನು ಪರಿಹರಿಸಿ ಕರುಣಾ | ಳುಗಳದೇವನು ಸಂತವಿಟ್ಟನು ಸುರಕದಂಬಕವ ||

ಪದ || ಕೇಳು ಜನಮೇಜಯಧರಿತ್ರೀ | ಪಾಲ ಕೌರವರಾಯ ಶಲ್ಯಗೆ | ಹೇಳಿದನು ಸಾರಥ್ಯಸಂಯೋಜಕಸಮಾಹಿತವ || ಲೋಲತಾಪಸಕರ್ಮತರುನಿ | ರ್ಮೂಲನೈಕಕ್ಷಮಸುಧಾಕರ | ಮೌಳಿಕೇಳೀಕಲಿತಕಮನೀಯಕಕಥಾಮೃತವ ||೧|| ತಾರಕನಮಕ್ಕಳುಗಳೆನಿಸುವ | ತಾರತಾಕ್ಷನು ಕಮಲಲೋಚನ | ವೀರವಿದ್ಯುನ್ಮಾಲಿಯೆಂಬೀ ಮೂವರತಿಬಲರು || ಘೋರತರತಪಸುಪ್ರಭಾವಿ | ಸ್ಸಾರಿಗಳ ಸಂಖ್ಯಾತಯುಗದಲಿ | ವಾರಿಜೋದ್ಭವನನು ವಶೀಕರಿಸಿದರು ಭಕ್ತಿಯಲಿ ||೨|| ಬಂದು ಕಮಲಜನವದಿರಿದಿರಲಿ | ನಿಂದನೆಲೆಋಷಿಗಳಿರ ನೀವಿ | ನ್ನೆಂದುಪರಿಯಂತರ ತಪೋನುಷ್ಠಾನದಾಯಾಸ || ನಿಂದು ಬೇಡುವುದೊಲಿದುದನು ನಾ | ವಿಂದು ಸಲಿಸುವೆವೆನಲು ನಿಮಿಷಕೆ | ಕಂದೆರೆದು ಕಮಲಾಸನನ ಭಜಿಸಿದರು ಭಕ್ತಿಯಲಿ ||೩|| ಎನಿತನೋದಿದೊಡೇನಹುದು ದು | ರ್ಜನರು ಪುರುಷಾರ್ಥಗಳ ಹಾವಿಂ | ಗೆನಿತುಹಾಲಾಹಾರವಾದೊಡೆ ಬಿಡುವುದೇವಿಷವ|| ದನುಜರದ್ಭುತತಪವ ಮಾಡಿದ | ರನಿಮಿಷಾವಳಿಬೇಟೆಯಾಡಲು | ನೆನೆದು ಬಿನ್ನೈಸಿದರು ಕಮಲಭವಂಗೆ ನಿಜಮತವ ||೪|| ರಚಿಸುವೆವು ಪುರಮೂರನಗ್ಗದ | ಖಚರಕಿನ್ನರಯಕ್ಷರಾಕ್ಷಸ | ನಿಚಯ ಬಂದೋಲೈಸಿ ಹೋಗಲಿ ಫಲವಮಾತೇನು || ಉಚಿತದಲಿ ನಿಮ್ಮಡಿಗಳನುನ್ನುಪ | ರಚಿಸಿದೆವು ವೋಲೈಸುವೆವು ದೃಢ | ವಚನ ನಿಮ್ಮದು ಕರುಣಿಸುವುದಮರತ್ವವನು ತಮಗೆ ||೫|| ಹಾಮಹಾದೇವಾ ಕುತಾರರ | ತಾಮಸದ ನೆನೆಹಿದ್ದಪರಿಯುಹು | ದೀಮಹಾನುಷ್ಠಾನವಿದರಲಿ ಶಾಂತಿ ಲವವಿಲ್ಲ || ಕಾಮಿತವನಿವದಿರಿಗೆ ಕೊಟ್ಟೊಡೆ | ಕಾಮಹರಕಮಲಾಕ್ಷರಿಗೆ ಸಂ | ಗ್ರಾಮಜಯವೆಲ್ಲಿಯದೆನುತ್ತ ಡಿಗಡಿಗೆಚಿಂತಿಸಿದ ||೬|| ಹುಲಿಗೆ ಧೈರ್ಯವನೆರಕೆಗಳನಹಿ | ಗಳಿಗೆ ಖಳರಿಗೆ ಲಕ್ಷ್ಮಿಯನು ಕ | ತ್ತಲೆಗೆ ಕಾಠಿಣ್ಯವನು ಚೈತನ್ಯವನು ಗಿರಿಗಳಿಗೆ || ಕೊಲೆಗಡಿಗರಿಗೆ ನಿತ್ಯದೇಹವ| ನೊಲಿದು ಕೊಟ್ಟರೆ ಲೇಸು ಬಳಿಕೇ|ನೆಲೆಮಹಾದೇವೇನನೆನೆದರೊ ಶಿವಶಿವಾಯೆಂದ||೭||ಪುರವ ವಿರಚಿಸಿ ದಿವ್ಯಸಾಸಿರ | ವರುಷಕವು ಕೂಡಿದೊಡೆ ಯೊಂದೇ | ಸರಳನಾವವನೆಚ್ಚನಾದೊಡೆ ನಿಮಗೆ ಕಡೆಹಾರ ಬರಲಿ ಬಳಿಕಿಂದ್ರಾದಿನಿರ್ಜರ | ನೊರಜಗಳ ನೀವ್ ಸದೆಯಿ ಹೋಗೆಂ | ದರಸ ಕೇಳೈ ಕೊಟ್ಟನವರಿಗೆ ಕಮಲಭವ ವರವ ||೮|| ಕರುಣವಿನಿತೇ ಸಾಕು ನಮಗಿ | ನ್ನುರದಲಾದವೆ ಮೊಲೆಗಳೆಮ್ಮಯ | ಪುರವನೊಂದಂಬಿನಲಿ ಗೆಲುವನ ತಾಯಿ ಹುಸಿಯೆನುತ|| ದುರುಳರಾತನ ಬೀಳುಕೊಂಡು | ಬ್ಬರದ ಹರುಷವ ಹೆಚ್ಚಿ ಮಯನನು | ಕರೆಸಿ ನಿರ್ಮಿಸಿದರು ಮಹಾವಿಭವದಲಿ ನಗರಿಗಳ ||೯|| ಕನಕದಲಿ ರಜತದಲಿ ಬಲುಗ | ಬ್ಬುನದಲೊಂದೊಂದಕ್ಕೆ ಶತಯೋ | ಜನದ ವಿಸ್ತಾರದಘನಪ್ರಾಕಾರತೋರಣದ || ವಿನುತನಗರಿಗಳಾದವಲ್ಲಿಯು | ದನುಜರೆಡೆಗಳ ಹಾಕಿ ಗಾಣದ | ಲನಿಮಿಷರನೀಡಾಡಿಕೊಂಡರು ದುರ್ಗವನು ಸುರರ ||೧೦|| ಸೂರೆಹೋಯಿತು ಸುರಪತಿಯ ಭಂ| ಡಾರ ಹೆಂಡಿರುಸಹಿತ ನಿರ್ಜರ | ನಾರಿಯರು ತೊತ್ತಾದರಮರಾರಿಗಳ ಮನೆಗಳಲಿ || ಮೂರುಜಗದೊಳಗವದಿರಾಣೆಯ | ಮೀರಿ ಬದುಕುವರಿ

ಲ್ಲ ಕಡೆಯಲಿ । ತಾರಕನಮಕ್ಕಳಿಗೆ ಕೈವರ್ತಿಸಿತು ಜಗವೆಂದ॥೧೧॥ನೆರೆದುದಮರರಳಿಳು ಹರಿಸಾ। ಗರದ ಕಡೆಯಲಿ ರೋಹುಗಳೆದು । ಟ್ಟರಿವೆಗಳ ಕಾಳಿಕೆಯಮೋರೆಯ ತಾರಿದೊಡಲುಗಳ ॥ ಹುರಿದಫೈರ್‍ಯದ ಲಳ್ಳೆಬಾರುವ । ತರಳಹೃದಯದ ದೇವರಿಂದ್ರನ । ನರಸಿ ಕಂಡರು ತಮ್ಮೊಳಾಲೋಚನೆಯ ಮಾಡಿದರು ॥ ೧೨ ॥ ತಾರಕನ ಮಕ್ಕಳುಗಳೇ ಮು । ನ್ನಾರ ಗೆಲಿದರು ತಪವಮಾಡಿ ವಿ । ಕಾರಗಳು ಬೊಮ್ಮಂಗೆ ಬಂದಿಯ ನಿಕ್ಕಿದರು ಬಳಿಕ ॥ ವಾರಿಜಾಸನ ಮೇಲನರಿಯ ಕ । ಠೋರನಾಯ್ತು ಳ ಹೆಚ್ಚಿಸಿದ ನಿದ । ಸಾರಿಗರುಹುವೆವೆನುತ ಸುಯ್ದುರು ಬೈದು ಕಮಲಜನ॥೧೩॥ ಆದೊಡೆಯು ಸಮಗಾತನೇಗತಿ । ಯಿಾದುರಾತ್ಮರಿಗೆಂದು ಹರಿತಂ । ದಾದರಿಸಿ ಕೇಳುವೆವೆನುತ ಕಮಲಜನ ಹೊರೆಗೈದಿ ॥ ಖೇದವನು ಸುರಿಯಲು ಪಿತಾಮಹ । ನಾದಿವಿಜಗಣಸಹಿತ ಬಂದನು । ವೇದಶುದ್ಧವಿಶುದ್ಧದೇವನ ಕಾಬತವಕದಲಿ ॥ ೧೪ ॥ ಬಂದು ಕೈಲಾಸಾದ್ರಿಗಾಗಿರಿ । ನಂದನಾವಕ್ತ್ರೋಜಘುಸೃಣ । ಸ್ಕಂದಚೇತಕನಯನರಂಜನಭೂತಿಪಂಜರನ ॥ ವಂದ್ಯಮಾನಸುರಾಸುರೋರಗ । ವೃಂದಮಕುಟಮಣಿಪ್ರಭಾನಿ । ಷ್ಪಂದಭೂಯಸ್ತ್ವಿಮಿತಕಾಯನ ಕಂಡನುಬುಜಭವ ॥ ೧೫ ॥ ಕೊರಳಕಪ್ಪಿನ ಚಾರುಚಂದ್ರಾ । ಭರಣದೂರ್ಧ್ವದಭಾಳನಯನದ । ಭರಿತಪರಿಮಳಗಂಧವಟ್ಟದ ಜಡಿವಕೆಂಜಡೆಯ ॥ ಕರಗಿಕಾಸಿದ ವಿದ್ಯೆಯನು ಬೇ । ರಿರಿಸಿಶುದ್ಧಬ್ರಹ್ಮವನು ಕಂ । ಡರಿಸಿದಂತಿರಲೆಸೆವಶಿವನನು ಕಂಡನಬುಜಭವ ॥ ೧೬ ॥ ವೇದವರಿಯದತರ್ಕವಿದ್ಯಾ । ವಾದ ನಿಲುಕದಬುಧರ ಮತಿಸಂ । ಪಾದನೆಗೆ ಮುಖುಗುಡದ ಯಮನಿಯಮಾದಿಯೋಗಗಳ ॥ ಹೋದಹೊಲಬಳವಡದ ಬ್ರಹ್ಮೇಂ । ದ್ರಾದಿಸುರರುಬ್ಬಟೆಗೆ ಸೋಲದ । ನಾದಿದೇವರದೇವಶಿವನನು ಕಂಡನಬುಜಭವ ॥ ೧೭ ॥ ಕಂತುಹರನನು ವಿಮಲನನು ವೇ । ದಾಂತವೇದ್ಯನನದ್ವಿತೀಯನ। ನಂತಮಹಿಮನ ಸಚ್ಚಿದಾನಂದೈಕರಸಮಯನ ॥ ಅಂತರಹಿತನಸಪ್ರಮೇಯನ। ನಂತರೂಪನ ನಂಘ್ರಿಭಜಕಭ।ವಾಂತಕನನುದ್ದಂಡದೇವನ ಕಂಡುದಮರಗಣ ॥೧೮॥ ಇದ್ದುದಗ್ಗದರುದ್ರಕೋಟಿಗ। ಳಿದ್ದುದಗ್ಗದವಿಷ್ಣುಕೋಟಿಗ। ಳಿದ್ದುದಂಬುಜಭವಸುರೇಂದ್ರಾದಿಗಳು ಶತಕೋಟಿ ॥ ಇದ್ದುದಖಿಳಾಮ್ನಾಯಕೋಟಿಗ। ಳಿದ್ದುದಗಣಿತಮಂತ್ರಮಧ್ಯದೊ । ಳಿದ್ದುನಿರ್ಮಳಖಂಡಪರಶುವ ಕಂಡುದಮರಗಣ ॥೧೯॥ ಪುಳಕಜಲವುಬ್ಬರಿಸೆ ಕುಸುಮಾಂ।ಜಲಿಯನಂಘ್ರಿದ್ವಯಕೆ ಹಾಯಿಕಿ। ನಳಿನಭವ ಮೈಯಿಕ್ಕಿದನು ಭಯಭರಿತಭಕ್ತಿಯಲಿ ॥ ಬಳಿಯಲಮರೇಂದ್ರಾದಿದಿವಿಜಾ। ವಳಿಗಳವನಿಗೆ ಮೈಯ ಚಾಚಿದ। ರುಲಿಯುತಿರ್ದುದು ಜಯಜಯಧ್ವಾನದಲಿ ಸುರಕಟಕ ॥೨೦॥ ಪರಮಕರುಣಕಟಾಕ್ಷರಸದಲಿ। ಹೊರೆದು ಕಮಲಾಸನನ ಹತ್ತಿರೆ । ಕರೆದು ಮನ್ನಿಸಿ ನಿಖಿಳನಿರ್ಜರಜನವ ಸಂತೈಸಿ ॥ ಬರವಿದೇನಿಂದಿನದು ವಿಶ್ವಾ। ಮರಕದಂಬಕಸಹಿತಯೆನುತಂ। ಬುರುಹಭವನನು ನಗುತ ನುಡಿದನು ತರಳಶಶಿಮೌಳಿ ॥೨೧॥ ತಾರಕನಮಕ್ಕಳುಗಳಿಗೆ ನೆರೆ । ಸೂರೆಹೋಯಿತು ರಾಜ್ಯಸಿರಿ ಮುಂ । ಮಾರುಹೋದರು ಸುರರಹೆಂಡಿರು ಖಳರ ಮನೆಗಳಿಗೆ ॥ ಚಾರುವೈದಿಕ ಹವ್ಯಕವ್ಯವಿ।ಹಾರವೃತ್ತಿಗಳಳಿದುವಿದ ನೀ । ವಾರಿಸುವುದೆಂದಬುಜಭವ ಮಾಡಿದನು ಬಿನ್ನಹವ ॥ ೨೨ ॥ ನಗೆಯಮೊನೆ ನಸುಹೊಳೆಯೆ ಬ್ರಹ್ಮನ । ಮೊಗವ ನೋಡಿದ ನಭವನೀಶನ । ಬಗೆಯ ಭಾವವನರಿದು ತಲೆಗುತ್ತಿದನು ಕಮಲಭವ ॥ ದುಗುಡವನು ಬಿಡಿನಿಖಿಳದಿವಿಜಾ । ಳಿಗಳು ಪಶುಗಳಲಾ ವಿರಂಚಿಯ । ವಿಗಡವರದಲಿ ಕೆಟ್ಟೆರಕಟಕಟಂಜಬೇಡೆಂದ ॥ ೨೩ ॥

ಪಶುಪತಿತ್ವವನೆಮಗೆ ಬಿಡಿನೀವ್ । ಪಶುಗಳಾಗಿರಿ ಪಾಶುಪತಶರ । ನಿಶಿತಸರಳಲಿ ದೈತ್ಯದುರ್ಗವನುರುಹಿ ತೋರುವೆನು ॥ ದೆಸೆದೆಸೆಗೆ ಹರೆದಖಿಳದೇವ । ಪ್ರಸರವನು ಮಿಗೆ ನೆರಹಿ ಮೇಲಿ । ನ್ನಸಮಸೆಗೆ ಹೆದರದಿರಿಯೆಂದನು ನಗುತ ಶಶಿಮೌಳಿ ॥ ೨೪ ॥ ಜಾರಿದುಬ್ಬಿನ ಹೊತ್ತುದುಗುಡದ । ಮೋರೆಗಳ ಮೋನದವಿಹಾರದ । ವಾರಿಜಾಸನಮುಖ್ಯ ಸಕಲಸುರೌಘವಿರೆ ಕಂಡು ॥ ಏರುವಡೆದುದೆ ಮನದವಿದ್ಯೆಯ । ಮಾರುವೋದಿರಲಾ ಯೆನುತ ಶಿವ । ತೋರಿ ನುಡಿದನು ಪಶುಪತಿತ್ವದ ಪರಮಸಂಗತಿಯ ॥ ೨೫ ॥ ಕರ್ಮಕಿಂಕರರಾಗಿ ಕೃತದು । ಷ್ಕರ್ಮವಾಸನೆ ವಿಡಿದು ತಾನೇ । ಕರ್ಮಕರ್ತನುಭೋಕ್ತೃ ತಾನೇದುಃಖಸುಖಿಯಾದ ॥ ನಿರ್ಮಳಾತ್ಮನೊಳೀಯಹಂಕೃತಿ । ಧರ್ಮವನು ನೇವರಿಸಿ ಬದುಕುವೆ । ದುರ್ಮತಿಯೆ ಪಶುವೀಪಶುತ್ವಕೆ ಭೇದವೇನೆಂದ ॥ ೨೬ ॥ ಪಂಚವಿಂಶತಿತತ್ವರೂಪದ । ಸಂಚವರಿಯದನೀತಿಮುಖದಿಂ । ದಂಚೆ ಗಾಣದಸುಗುಣಮಯನೀಹಾರದಲಿ ಮುಳುಗಿ ॥ ಮಿಂಚುವೆಳಗಿನ ಬಳಕೆಯನು ಮನ । ಮುಂಚಿ ಮೈಗೊಡಲಳುಕುವಾತುಮ । ವಂಚಕರ ನೀವ್ ಪಶುಗಳೆಂದೊಡೆಭೇದವೇಕೆಂದ ॥ ೨೭ ॥ ಆದಿಭೌತಿಕದಿಂದ ನೊಂದುವಿ । ರೋಧಿಷಡುವರ್ಗದಲಿ ಮೋಹ । ವ್ಯಾಧಿಯಲಿ ಬೆಂಡಾಗಿ ಭವಪಾಶದಲಿ ಬಿಗಿವಡೆದು ॥ ಬಾಧನಿಚಯದ ಬಲೆಗೆ ಸಿಲುಕಿ ನಿ । ರೋಧದೊಳುಬಿದ್ದಿಹರವಿದ್ಯಾ । ಸಾಧಕರ ನೀವ್ ಪಶುಗಳೆಂದೊಡೆ ಖೇದವೇಕೆಂದ ॥ ೨೮ ॥ ಪಶುಪತಿಯೆ ಪರಮಾತ್ಮರೂಪನು । ಪಶುಗಳೀಪರಿಜೀವಭಾವದ । ಲೆಸಗುವರು ನೀವ್ಪಶುಗಳದರಿಂ ನಿಮ್ಮ ಲಕ್ಷಣವ ॥ ಪಸರಿಸುವಪರಮಾತ್ಮ ತಾನಿರೆ । ಗಸಣಿ ನಿಮಗೇಕೆಂದುದೇವ । ಪ್ರಸರವನು ತಿಳುಹಿದನು ಕಾರುಣ್ಯಾದಲಿ ಕಾಮಾರಿ ॥ ೨೯ ॥ ಉಬ್ಬುಗೊಂಡುದು ವಿದ್ಯೆಯನುಸಲೆ । ಕೊಬ್ಬುಗರ ಗಂಡಿಗರಗಾಢದ ಗಬ್ಬವನು ಝಾಡಿಸಿತು ಗರಳಗ್ರೀವನುಪದೇಶ ॥ ಹಬ್ಬಿನಲಿಮಾತಾಡಿ ತಮ್ಮೊಳ । ಗೊಬ್ಬರೊಬ್ಬರು ತಿಳಿದು ಸಕಲಸು । ಸಬ್ಬಜನವೆರಗಿದುದು ಜಯಜಯಯೆನುತ ಪಶುಪತಿಗೆ ॥ ೩೦ ॥ ಜಗವುಘೋಯೆಂದುದು ಜಯಧ್ವನಿ । ಮುಗಿಲಝೋಂಪಿಸಿತೊಗ್ಗಿನಂಜುಳಿ । ಗಗನದಗಲಕೆ ಕುಣಿವುತಿರ್ದುದು ಸುರರು ಭಾಳದಲಿ ॥ ಬೆಡಗು ಬೀತುದು ಬೇಸರಿನ ಜಲು । ತಗಹು ಸೋತುದು ಶಿವಗೆ ರವಿಜಾ । ದಿಗಳು ಮುದದಲಿ ಮಾಡಿದರು ಮೂರ್ಧಾಭಿಷೇಚನವ ॥ ೩೧ ॥ ಪಾಶುಪತ್ಯದ ಪಟ್ಟವಾಯ್ತು ಮ । ಹೇಶನಲಿ ಬ್ರಹ್ಮಾದಿದೇವರು । ವಾಸಿವಟ್ಟವ ಬಿಟ್ಟರೋಲೈಸಿದರು ಪಶುಪತಿಯ ॥ ಪಾಶುಪತಸುವ್ರತವ ಧರಿಸಿದು । ದಾಸುಪರ್ವಸ್ತೋಮ ವಿಶ್ವಾ । ಧೀಶನೆಸೆದನು ಕೋಟಿಸೂರ್ಯನಿಭಪ್ರಕಾಶದಲಿ ॥ ೩೨ ॥ ರಚಿಸಿ ರಥವನು ಭೀತಿ ಬೇಡಿ । ನ್ನುಚಿತವೇನದ ಮಾಡಿ ದೈತ್ಯ । ಪ್ರಚಯವನು ಪರಿಹರಿಸಿಕೊಡುವೆವು ಪಾಶುಪತಶರದಿ ॥ ಕುಚಿತರಿನ್ನೇಗುವರು ಬಳಿಕಿ । ನ್ನಚಲಿತವಲೇ ನಿಮ್ಮಪದವೆನೆ । ನಿಚಿತಹರುಷರು ವಿಶ್ವಕರ್ಮಂಗರುಹಿದರು ಹದನ ॥ ೩೩ ॥ ಮಾವ ಕೇಳದ್ಭುತವನೀವಿ । ಶ್ವಾವನೀತಳವಾಯ್ತು ರಥ ತಾ । ರಾವಚಲವಿರಸಾಯ್ತು ಸತ್ತಿಗೆಯಾಯ್ತು ಕನಕಾದ್ರಿ ॥ ಆವುದಯಘನಶೈಲವಸ್ತ್ರ । ಗ್ರಾವಕೇತನಕಂಭರದಧಿ । ಷ್ಠಾವಲಂಬನದಿಂದ ರಚಿಸಿದನಾತ ನಿಮಿಷದಲಿ ॥ ೩೪ ॥ ಅಸುರವಲೇ ವಿಂಧ್ಯಹಿಮಗಿರಿ । ಹಾಸುಹಲಗೆಗಳಾದವಚ್ಚು ಮ । ಹಾಸಮುದ್ರವೆಯಾಯ್ತು ಗಾಲಿಗೆ ಬೇರೆ ತರಲೇಕೆ ॥ ಆಶತಿಯಸೂರಿಯನಮಂಡಲ । ವೈಸಲೇ ಗಂಗಾದಿಸಕಲಮ । ಹಾಸರಿತ್ಕುಲವಾಯ್ತು ಚಮರಗ್ರಾಹಿಣೀನಿವಹ ॥ ೩೫ ॥

ರಾಯ ಕೇಳ್ಕೆ ಪುತ್ಥ್ರಯಾಹವ । ನೀಯುಗಾರುಹಪತ್ಯವಕ್ಷಿಣಾ । ವಾಯುಸಖನಾದನು ತ್ರಿನೇತ್ರೇಶರ ರಥಾಗ್ರದಲಿ ॥ ಆಯಿತಲ್ಲಿವರೂಥನಕ್ಷ । ತ್ರಾಯುತವು ಬಳಿಕೇನು [illegible] । [illegible] ಯಾವವು ಮಾವಕೇಳೆಂದ ॥ ೩೭ ॥ ಆರಥಾಗ್ರವೆ ವೇಪಸಾಲುಕು । [illegible] ನೊಗವಾ । ಯಮ್ಮಾರದನಿ [illegible] ವೃತ್ತ್ರರ ವಕ್ಷಣಾಯನವು ॥ ನಾರಶೃತಿ [illegible] । ಘಾರವಾದವು ನೊಗನ [illegible] । ಚಾರುತರಫಣಿನಿಕರ ಹಯ ಬಂಧನದ ನೇಣುಗಳು ॥ ೩೮ ॥ [illegible]ವು ಶ್ರುತಿಸುವಾಪ್ಯಾ । ವಳಿಗಳವುಳ ಪ್ರಣವವಾದವು । [illegible] ವರಷಡಂಗಚಯ ॥ ನಿಲಿಸಲತುಳ ಕೃತುರಥಾಗ್ರ । ವಳಿಗಳಾದವು [illegible] । [illegible] ಪತಾಕೆಯಾದವು ರಥದಬಳಸಿನಲಿ ॥೩೯॥ ಕಲಿಲವಂಡದ [illegible]ದಂಡಕ । [illegible] । ಶಾಲ ವಿಮಲ ಬ್ರಹ್ಮದಂಡವ ಸಾಲು ಚೆಲುವಾಯ್ತು ॥ [illegible] ಕನಕಧ್ವಜದ ತುದಿಯಲಿ । ಮೇಳವಿಸಿದನು ವಿಶ್ವಕರ್ಮನು ವಿಮಲಸಾಕ್ಷರವ ॥೩೯॥ ಅರಸ ಕೇಳುರುತರದ ಸಂವ । ತ್ಸರವೆ ಧನು ತತ್ಕಾಳ ರಾತ್ರಿ ಯೆ । ತಿರುವಿದೇ ನಾಶ್ಚರ್ಯ[illegible] ಮಹಾದೇವ ॥ ಸರಳ ರಚನೆಗೆ ವಿಷ್ಣುವನು ಸಂ। ಸ್ಮರಿಸಿದನು ವೈಕುಂಠತೇಜಸ್ಸ್ಫುರಿತಮಾರ್ಗಣ [illegible] ಮುಮಾರ್ಗದಲಿ ॥೪೦ ॥ ಶ್ರುತವೆ ನಿಮಗದು ಮಾವ ಬಹುಳಾ । ದ್ಭುತವನವನೇನೆಂವೆ ದೇವ । ಪ್ರತತಿನೆರೆದುದು ಪರಚತುರ್ದಶಭುವನ ವಾಸಿಗಳು ॥ ಶತಮುಖಬ್ರಹ್ಮಾದಿಗಳುತ । ಮ್ಮತಿಶಯದ ತೇಜವನುಳಿದು ಪಶು। ಪತಿಯ ಪದಕೋಲೈಸಿದರು ಮಾದ್ರೇಶ ಕೇಳೆಂದ ॥೪೧॥ ಸೋಮಹಾಶಾಂಭವಸುಜೇಶ । ಸ್ತೋಮವೇನದು ಕೊರತೆಯೋ ಮ । ತ್ತೀಮಹೇಂದ್ರಬ್ರಹ್ಮಮುಖತೇಜಸ್ಸು [illegible] ॥ ಆಮಹಾದೇವನಲಿ ಸೇರಿದು । ದೀಮಹಾರಥಕಾಗಿ ವಿಮಲ । ವ್ಯೋಮಕೇಶನು ನಗುತ [illegible]ಗೆ ಯ್ಯಲನುವಾದ ॥ ೪೨ ॥ ಕಳಚಿ ತಲೆವಾಲೆಯನು ಕೊಟ್ಟನು । ಕೆಲದವರ ಕೈಯಲಿ [illegible] । ಗುಳಿಗೆಗಳ ನುಗ್ಗೊತ್ತಿ ಸರ್ವಾಂಗದಲಿ ಧೂಳಿಸಿದ ॥ ಹೊಳೆಹೊಳೆವ[illegible] । [illegible]ದನು ದಂತಿಚರ್ಮವ । ನೆಲಕೆ ಮುಂಜೆರಗೊಲೆಯಲುಟ್ಟನು ದೇಸಿ[illegible] ॥ ೪೩ ॥ [illegible]ಪಳಿ ತ್ತೋಳಬಂದಿಯ । ಹೆಡೆವಣಿಯ ಮರಿಹಾವುಗಳನಳ । ವಡಿಸಿದನು [illegible] ಟಗೆ ಮುರೆಯೆ ॥ ಜಡಿವಕಿರುಗೆಜ್ಜೆಗಳ ಬಿಗುಹಿನ । [illegible] । [illegible]ಗೊಂಡೆಯದ ಕಿಗ್ಗಟ್ಟಿಸೆಯೆ ಪಶುಪತಿಗೆ ॥ ೪೪ ॥ ನೆರೆದುದಭವನ ಕೆಲಬಲದಲಬ್ಬರದ [illegible] ಬಿಗಿದ ಬಿಲ್ಲಿನ । ಬೆರಳಚಕ್ರದ ಧವರಿಗಳ ಡಾವರಿಪಡಾಯುಧವ ॥ [illegible] ಕರ್ಕಶ।ಶರದ ಚರಿತದ ರೌದ್ರರಸದಲಿ। ವರಮಹಾಗಣನಿಕರ ನೆರೆದುದು ಮಾವ ಕೇಳೆಂದ ॥೪೫॥ [illegible] ನಿಸ್ಸಾಳಕೋಟಿಯ। ಮೊರಹು ಮುಳುಗಿತು ಬಿಲುದಿರುವಿನ। ಬ್ಬರೆದಲಾಧ್ವನಿಯಡಗಿತ[illegible]ದಲಿ॥ ಅರರೆ ವಂದಿಧ್ವನಿಯ ಗರ್ಭೀ।ಕರಿಸಿ ಹೆಚ್ಚಿತು ಜಯಜಯಧ್ವನಿ।ಯುರುಚತುರ್ದಶಜಗವ ಜಡಿದುದು ಹೇಳಲೇನೆಂದ॥೪೬॥ಮುರಿಯೆ ಬಲವಂಕದಲುಘೇಯೆಂ।ದೊರಲಿದವು ಶ್ರುತಿನಿಕರ ವಾಮದ।ಕೊರಳಕೊಂಕಿನ ಉಪನಿಷತ್ತುಗಳೊರಲಿದವು ಕೋಟಿ ॥ ತಿರುಗೆ ಬೆನ್ನಲಿ ಸಕಲಸಚರಾ । ಚರವುಘೇಯೆಂದುದು ಕಪರ್ದಿಯ । ಸರಿಸದಲಿ ಸಿಡಿಲಂತೆ ಮೊಳಗಿತು ವೀರಗಣನಿಕರ ॥ ೪೭ ॥ ನಡೆದು ರಥದಲಿ

ವಾಮಚರಣವ । ನಿಡುತ ಧೂರ್ಜಟಿ ದಿವಿಜನಿಕರಕೆ । ನುಡಿದನಾವವನಿಲ್ಲಿ ಸಾರಥಿ ಮಾಡಿದಿರಿ ರಥಕೆ॥ ಕಡೆಗೆ ಸಾರಥಿಯಿಲ್ಲದೀ ರಥ । ನಡೆವುದೇ ದಾನವರ ಧಟ್ಟಣೆ । ಯೊಡೆವುದೇ ಲೇಸಾಯ್ತೆನುತ ಶಿವ ನುಡಿದ ಸುರಪತಿಗೆ ॥ ೪೮ ॥ ಮಾವ ಕೇಳ್ಕೈ ಬಳಿಕ ಹರಿದುದು । ದೇವತತಿ ಪರಮೇಷ್ಠಿಯಲ್ಲಿಗೆ । ಭಾವವನು ಬಿನ್ನೈಸಿದರು ನಿಜರಾಜಕಾರಿಯವ ॥ ಆವಿಭುವನೊಡಬಡಿಸಿದರು । ದೇವಾವಳಿಗಳಂದಿನಲಿ ಕರ್ಣಗೆ । ನೀವು ಸಾರಥಿಯಾದೊಡಭಿಮತಸಿದ್ಧಿ ತನಗೆಂದ ॥ ೪೯ ॥ ಕೋಗಿಲೆಯದಾಯಕ್ಕೆ ಬಂದುದು । ಕಾಗೆ ಸಿಸ್ನಯನುಡಿಯುದಂತಿರ । ಲಾಗಲಂಬುಜಭವನು ಸಾರಥಿ ಬಳಿಕ ಲೇಸಾಯ್ತು ॥ ಹೋಗಲದು ಸಾರಥ್ಯಕಾಯತ । ವಾಗಿ ಬಂದು ವಿರಂಚಿ ಮಕುಟವ । ತೂಗಿದನು ಹೊಗಳಿದನು ತ್ರಿಪುರನಿವಾಸಿಗಳ ಬಲುಹ ... ... ॥ ೫೦ ॥

ಅಂತು ಸಂಧಿ ೬ ಕ್ಕೆ ಪದ ೨೦೭ ಕ್ಕಂ ಮಂಗಳಮಸ್ತು.



## ಏಳನೆಯ ಸಂಧಿ.

॥ ಸೂಚನೆ ॥ ಕಾಮುಕೋಲಾಹಲನು ದಕ್ಷನ । ಹೋಮದಳಿದುಳಕಾರ ಹರ ನಿ । ಸ್ಸೀಮದಲಿ ಪುರಮೂರ ಗೆಲಿದನು ಸಲಹಿದನು ಸುರರ ॥

। ಪದ ॥ ಹುಸಿಯು ಬಳಿಕದು ಸಕಲಜಗವೂಂ । ದೆಸೆ ಪುರತ್ರಯದೈತ್ಯಭಟರೊಂ । ದೆಸೆ ಮಹಾದೇವನುತ ಕಮಲಜನೇರಿದನು ರಥವ ॥ ಸಸಿನೆ ವಾಘೆಯ ತಿದ್ದಿ ತುರಗ । ಪ್ರಸರವನು ಬೋಳೈಸಿ ರಥವನು । ದೆಸೆದೆಸಗ ಸುಳಿಸಿದನು ಉಳಿವಡಸಿದನು ನಿಮಿಷದಲಿ ॥ ದೇವ ಬಿಜಯಂಗೈವುದನೆ ದಿವಿ । ಜಾವಳಿಗಳಬ್ಬರದ ಬೊಬ್ಬೆಯ । ಡಾವರದಲೇರಿದನು ಧೂರ್ಜಟಿ ವೇದಮಯರಥವ ॥ ಮಾವ ಕೇಳದ್ಭುತವನೀ ಪ । ಶ್ವಾವನೀತಳ ರಥರಥಾಂಗ । ಗ್ರಾವತತಿ ನುಗ್ಗಾಗಿ ಬಿದ್ದುದು ತೇರು ನಿಮಿಷದಲಿ ॥ ೨ ॥ ಕುದುರೆ ತಲೆಕೆಳಕಾದವಿಳೆಯ । ದ್ದುದು ರಸಾತಳಕದರಭಾರಕೆ । ಕೆದರಿದವು ಕುಲಗಿರಿಯ ಹೂಟದ ಸಂಚ ದಸೆದೆಸೆಗೆ ॥ ಕುಟದುದಮರವ್ರಾತ ಸಂತಾ । ಪದಲಿ ಪಿತಳಕೆ ಹಾಯ್ದು ನಿಮಿಷಾ । ರ್ಧದಲಿ ಹೆಗಲಿಂದೆತ್ತಿದನು ಹರ ವೃಷಭರೂಪದಲಿ ॥ ೩ ॥ ಅದ್ದರಥ ಹಲಯುರವಣೆಗೆ ಬಿಗಿ । ದೆದ್ದು ಸಮವಾಯಿತ್ತು ಹಯ ಮುರಿ । ದೆದ್ದುವಳಯುವ ಕೊಡಹಿದವು ವರವೇದವಾಜಿಗಳು ॥ ಎದ್ದುದೋ ರಥ ಖಳಮನೋರಥ । ವದ್ದುದೋ ಮಝುಪೂತರೆನುತು ಬ್ಬೆದ್ದುದಮರವ್ರಾತ ಭಾರಿಯ ಭುಜದ ಹೊಯ್ಲಿನಲಿ ॥ ೪ ॥ ಪ್ರಣವನಾದಾಹತಿಗೆ ಗತಿಯಲಿ । ಕುಣಿದವಗ್ಗದಮಂತ್ರಹಯ ಹ । ಲ್ಲಣಯಹೇಷಿತರವಕೆ ಕದಡಿತು ರಾಕ್ಷಸವ್ರಾತ ॥ ಗಣಸಮೂಹದ ಚೂಣೆಯಲಿ ಸುರ । ಗಣಸುರಾರಿಗಳೂರ ಮುತ್ತಿತ್ತು । ಕೆಣಕಿದರು ಕಾಳಗವನಮರರು ಮಾವ ಕೇಳೆಂದ ॥ ೫ ॥ ಭಟರು ವಿದ್ಯುನ್ಮಾಲಿಯರು ಸರ । ಕಟುಸಿ ನೂಕಿತು ತಾರಕಾಕ್ಷನ । ಚಟುಳಹಯ ಬಲಹೊಕ್ಕು ಹೊಯ್ದುದು ಟಿಟ್ಟಸೂಟಿಯಲಿ ॥ ಲಟಕಟಿಸಿ ಸುರಸೈನಿಕದ ಗಜ । ಘಟೆಗಳಾರಂಕಿತು ದೈತ್ಯಸುಭಟ । ಘಟಿತಸಮರವನೇನನೆಂಬೆನು ಮಾವ ಕೇಳೆಂದ ॥ ೬ ॥ ಹೊಯ್ದನಮರರನಸುರರಗ್ಗದ । ಕಯ್ದುಕಾರರು ಮತ್ತೆ ನೂಕಿ

ಯ್ದರಥವೇನಾಯ್ತು ನಾಳವ । ಕೊಯ್ದರೋ ನುಗ್ಗುಗಳನೆಂದೊರಲಿದರು ಸುರವರರು ॥ ೭ ॥ ಹೊಗ
ಲಿ ಸಮರಕೆ ಸ್ವಾಮಿದ್ರೋಹರ । ತೆಗೆಯಬೇಡವೊ ಬನ್ನಲಾಕಗೆ । ಜಗದೊಳಪಯಶನೋ ಫಡಫಡಂಜ
ದಿರಂಜದಿರ ಯೆನುತ ॥ ಉಗದಖಡುಗದ ತರುಹಿನಂಬಿನ । ಬಿಗಿದಬಲ್ಲಿನ ಸುರಪಸಿಟರೊಳ । ಗಗಣಿ
ತಾಮರಭಟರು ಹೊಕ್ಕದು ದೈತ್ಯಬಲದೊಡನೆ ॥ ೮ ॥ ಮೂಲಸಮು ಕೈಹೊಯ್ದು ನಕ್ಕದು । ಹು
ಲಿಯೊಡನೆಗಡ ಶಿವಶಿವಾ ವೆ । ಗ್ಗಳೆಯರನು ವಿಗ್ರಹದೊಳುಳಿಯದೆ ಕಂಡು ಕೈಗುಣವ ॥ ಹುಲುಪರಿ
ಯ ದೇವಾಳಿ ತ್ರಿಪುರದ । ನೆಲನ ಮೆಟ್ಟಿತು ನಾಯಿಗಳ ಮುಂ। ದಲೆಯ ಕೊಯ್ಕುಡಬೆರಳನೆಂದರು ಖ
ಳರು ತಮ್ಮೊಳಗೆ ॥ ೯ ॥ ಕಾದಲೋಹದಬಳೆಯವೊಲು ಕೆಂಪಾದವಸುರರ ಮೋರೆಗಳು ತಿದಿ । ಯೂ
ದುಗಿಚ್ಚಿನ ಹೊದರನಂದದಲುರಿದು ಭುಗಿಲಿಡುತ ॥ ಸೇದುವರಳಿನ ತಿರುಪಿನಂಬಿನ । ವಾದವೆಸುಗೆಯ
ಬಿರುದನಗ್ಗದ । ಕೈದುಕಾರರು ಕೆಣಕಿನಮರರಹೊಟ್ಟ ತೂರಿದರು ॥ ೧೦ ॥ ಮುರಿಯಿತಿದು ಕಲ್ಪಾಂ
ತವಹ್ನಿಯ । ಸೆರೆಯಬಿಟ್ಟರೊ ಶಿವಶಿವಾ ಖಳ । ರುರುಬೆಯೋ ಸಾವೇಕ ರಣವೇಕವರಕೂಡೆನುತ ॥ ಒ
ರಲುವಮರರ ಬಾಯ ಕೈಗಳ । ಮೊರೆಯ ತೆಗಸಿ ಮಹಾಗಣಂಗಳೊ । ಳುರುವ ನಂದೀಶ್ವರನು
ಹೊಕ್ಕನು ಹೊಯ್ದುದಾನವರ ॥ ೧೧ ॥ ದಂಡುದಂಡನು ದಾನವರ ಕಡಿ । ಖಂಡಮಯವಾಯ್ತನಿ
ರುಘರದ । ದೊಂಡೆಗೆಸಲನೊಳದ್ದದಗಣಿತಗಜರಥಾಶ್ವಚಯ ॥ ಹಿಂಡೊಡೆದು ಹೇರಾಳರಕ್ಕಸ । ದಿಂಡೆ
ಯರು ದಿಕ್ಕಿನಲಿ ಹಾಯ್ದರು । ಖಂಡಪರಶುವಿನಾಳು ಹೊಯ್ದುದು ಸಾಲಹೆಣ ಮೆರೆಯೆ ॥ ೧೨ ॥
ಅರಿನಲೆಯ ಮುರಿಟಿಟ್ಟಣಿಸಿ ತಲೆ । ವರಿಗೆಯಲಿ ಹೊಕ್ಕಂಕ ದುರ್ಗದ । ಹಿರಿಯಹುಲಿಮುಖದೊಳ
ಗೆ ಕೂಂದರು ಬೇಹಬ್ಬೇಹವರ ॥ ಅರಸಕೇಳ್ದೈತ್ಯರೊಂದ । ಚ್ಚರಿಯ ಮಾಡಿದರಳಿದವರನ । ಚ್ಚರಿ
ಸಿದರು ಮಯಪಿರಚಿತಾಮೃತಸಲಿಲಕೂಪದಲಿ ॥ ೧೩ ॥ ಮಯನ ಬಿನ್ನಾಣವನು ದೇವ । ತ್ರಯವರ
ದುದಿದು ತೀರಲಸುರರ । ಲಯವನುತ ಹರ ಧೇನು ತಾನಬ್ಜಜನು ಕರುವಾಗಿ ॥ ಭಯವಿಹೀನರು ಹೊ
ಕ್ಕರಾಭಾ । ವಿಯನು ಬತ್ತಿಸಿ ಬಳಿಕ ದೈತ್ಯರ । ಜಯವ ಮುರಿದನು ಮೋಹನದಬೌದ್ಧಾವತಾರದ
ಲಿ ॥ ೧೪ ॥ ಭವನಖ್ಯಾತಿಯ ಬಿಡಿಸಿದರು ಶಾಂ। ಭವನ ಸಿದ್ಧಾಂತವನು ಬೌದ್ಧರ । ವ್ಯವಹರಣೆ
ಗಳನಡಸಿದರ ಕೆಡಹಿದರು ಗುಪಿತದಲಿ ॥ ಯುವತಿಯರು ಪರಪುರುಷಯೋಗ । ಪ್ರವರದೀಕ್ಷಿತರಾ
ಯ್ತುಬೌದ್ಧರ। ವಿಪಥವಾಯ್ಗೆ ಮಾರುವೋದುದು ಮನ ಮಹಾಸುರರ ॥ ೧೫ ॥ ಹರಸರೋಜಾ
ಸನರು ಶೂಲಿಯ । ಹೊರಗೆ ಬಂದರು ದೇವದೈತ್ಯರ। ಪುರದ ಧರ್ಮದಬೇಟೆಯಾಯಿತು ನಯನಪಾವ
ಕನ ॥ ಕರೆದು ಬೆಸಸುವೊಡಿದು ಸಮಯವೀ । ಸುರರ ಸಾಕುವಚಿತ್ತವುಂಟೇ । ಕರುಣಿ ಬಿಜಯಂಗೈವು
ದೆಂದರು ಪಾರ್ವತೀಪತಿಗೆ ॥ ೧೬ ॥ ಬಿಲ್ಲತುಡುಕಿದನಭವನಡಬಲ । ದಲ್ಲಿ ಜಯಜಯಧ್ವನಿಭಡಾಳಿಸಿ ।
ಘಲ್ಲಣಿಸೆ ಯುಗಸಪ್ತಭುವನಶ್ರೇಣಿಬೇದಿಗಳ ॥ ಭುಲ್ಲವಿಸಿ ಹಯಪದಸಮೂಹವ । ಚೆಲ್ಲಿದವು ಪುರು
ಕ್ರಮದಪಾಳಿಯ । ಪಲ್ಲವಿಕ ಪವಡಿದುದಮಲಪ್ರಮಾಣಮಯವಾಗಿ ॥ ೧೭ ॥ ಅಡಿಗಡಿಗ ಚಮ್ಮಟಿ
ಕೆಯಿಂದಲಿ । ತುಡುಕ ಕುಣಿದವು ವೇದಹಯ ಬಲ । ನೆಡವ ಝೋಂಪಿಸಿ ಮದದ ಮುರುಹಿನ ಮಂ
ತ್ರಕೋಟಿಗಳ ॥ ನುಡಿಯಲಂದಾಕಾಶಸರಸಿಯೊ । ಳಿಡಿದತಾವರೆ ಮುಗುಳ್ದವೋ ಸುರಪಡೆಯೊಳೆತ್ತಿ
ದ ಮುಗಿದಕೈಗಳೊ ಚಿತ್ರವಾಯ್ತೆಂದ ॥ ಪರಮಶ್ರುತಿವೇದಾಂತಮಂತ್ರೋ । ತ್ಕರಧರಂತ್ರಿಕುಲಾದ್ರಿತ

ಶಿಭಾಸ್ಕರಸುರೋರಗಜಲಧಿನದಿನಕ್ಷತ್ರರಾಶಿಗಳು ॥ ಸರಸಿರುಹಭವವಿಷ್ಣುವಿವಿಧಾ । ಧ್ವರಮುನೀಂದ್ರ ಗ್ರಹವು ಸಚರಾ । ಚರವುಘೋಯೆಂದೊದರುತಿರ್ದುದು ಶಿವನ ಬಳಸಿನಲಿ ॥ ೧೯ ॥ ಒಪ್ಪಿತೇವಸ ಮಸ್ತ । ತ್ರಿದಶಸಚರಾಚರರು ತಮ್ಮ । ಗ್ಗದಲಿ ರಚಿಸಿದ ವಿಶ್ವಕರ್ಮನ ಕೃತಪಿಯೋಗದಲಿ ॥ ಇದು ಬಳಿಕ ನಿರ್ಜರಸಮೂಹಾ। ಭ್ಯುದಯವೈಸಲೆ ಧನುವ ಕೊಂಡನು । ಮದನರಿಪು ತಿರುಹಿದನು ಬಳಲಿ ಪಾಶುಪತಶರವ ॥ ೨೦ ॥ ಕೃತಕವೋ ಸಹಜವೊ ನಿರಂತರ। ಶ್ರುತಿಗಳಂಯವು ನಮ್ಮ ಪಿಡುಕುವ। ಮ ತಿಯ ಪಾಡೀನಿಮಿಷವಬುಜಭವಾಂಡಮಂಡಲವ ॥ ಸಿತಿಗತಿಯನಗ್ನಿಯನಯನಾ । ಹುತಿಯ ಮಾಡು ವನಾತ್ರಿಪುರಸಂ । ಗತಿಯ ಸಮಯವ ಹಾರಿದನು ಸುರವರುಷಸಾಸಿರವ ॥ ೨೧ ॥ ಕೂಡಿದವು ಪುಶ ಮೂರು ನಿಮಿಷದೊ । ಳೀಡಿಂದ ಭವ ನಯನವನ್ನಿಯ। ಕೂಡೆ ಹುರಿಗೊಂಡೌಂಕ ಹರಿದುದು ಪಾಶು ಪತಬಾಣ ॥ ರೂಢಿಹೊರಳಿಯಹೊಗೆಯ ಝಳದಲಿ । ನೀಡಿ ನಾಲಗೆ ಪುರದ ಸುತ್ತಲು । ಕೂಡೆ ವೇ ಡೆಯವಾಯ್ತು ಹರಹಿನ ಕಿಡಿಯಗಡಣದಲಿ ॥ ೨೨ ॥ ಕಟ್ಟಿತುರಿ ದೆಸೆಸಾಲ್ಕರಲಿ ದ । ನ್ನಟ್ಟ ಹಾ ಯ್ದುದು ಬಿನುಗುಗಳ ಜಗ । ಜಟ್ಟಿಗಳ ನೊರಸಿತ್ತು ಮರುಗಿಸಿತಸುರನಾರಿಯರ ॥ ಘಟ್ಟರುಬುದು ವೀರರಸುಗಳ । ಬಿಟ್ಟುದಭವದ್ರೋಹಿಗಳು ನೆರೆ । ಕೆಟ್ಟಕೇಡಿಂಗಾರು ಮರುಗುವರರಸಕೇಳೆಂದ॥೨೩॥ ಸರಳ ಮೊನೆಯಲಿ ಸಿಡಿದಕಿಡಿಯೊಂ । ದೆರಡರಲಿ ಬೆಂದವು ಪುರತ್ರಯ । ವರಸ ಕೇಳ್ಳೆ ಬಳಿಕ ಬಾಣ ದ ಬಾಯಧಾರೆಗಳ ॥ ಹರನ ನಯನಜ್ವಾಲೆ ಕಾಣದು। ಪುರವನಾಶೂಲಿಯಲಿ ಘಾತಿಸು । ತುರ ಮು ರಿದು ಸುಡತೊಡಗಿತಬುಜಭವಾಂಡಮಂಡಲವ ॥೨೪॥ ಎಲೆಚತುರ್ದಶಜಗವನುರಿಯಪ್ಪಳಿಸಿತೋ ಬಂ ದುದು ಸುರೌಘದ। ಗಲವುಕರೆಯಾ ಕಲ್ಪಮೇಘವನುರಿಯಮಾಣಿಸಲು॥ಬಲುಕಣೆಗಳಿಲ್ಲ ಜನಾರ್ದನ। ನಳಿನಭವರಾವೆಡೆಯನುತ ಕಳ। ವಳಿಸಿದುದು ಮೊರೆಯಿಟ್ಟುದಲ್ಲಿಯದಲ್ಲಿ ಸುರಕಟಕ ॥ ೨೫ ॥ ಪುರ ತ್ರಯ ದಹನವನು ಕರ್ಮ । ಸ್ಫುರಣವಸ್ಮತ್ಕಾರ್ಯವದು ಗೋ। ಚರಿಸಿತಲ್ಲಿಂಮೇಲಣುಚಿತಾನುಚಿತ ಕೃತ್ಯವನು ॥ ಕರುಣಿ ನೀನೇ ಬಲ್ಲೆ ಜನಸಂ । ಹರಣಕಾಲವೊಮೇಣುರಕ್ಷಣ । ಕರುಣಕಾಲವೊ ದೇವ ಯೆಂದುದು ಸಕಲಭುವನಜನ ॥ ೨೬ ॥ ತ್ರಾಹಿ ಮದನಾಂತಕ ಪುರತ್ರಯ । ದಾಹಕರಶಂಕರ ಮಹೇ ಶ । ತ್ರಾಹಿ ಮೃತ್ಯುಂಜಯ ಪುರತ್ರಯಸರ್ವಲೋಕೇಶ ॥ ದ್ರೋಹಿಗಳು ಧೂಳಾಯ್ತು ಬಳಿಕನೊ । ಳೀಹದನು ಬಂದಿದೆ ಜಗತ್ತ್ರಯ । ರೂಹುಗೆಡುತಿದೆ ದೇವಯೆಂದೊರಲಿದುದು ಭುವನಜನ ॥ ೨೭ ॥ ಕರುಣರಸದಲಿ ನನೆದು ನಯನವಂ । ಕುರಸಲಭಯದಹಸ್ತದಲಿ ಶಂ । ಕರನ ಹೂಂಕರಣೆಯಲಿ ತುಳಿ ತುರಿ ತಗ್ಗಿತಲ್ಲಲ್ಲಿ ॥ ಶಿರವ ತಡಹುತ ದೇವತತಿ ಪುರ। ಹರನಬೀಳ್ಕೊಂಡುದು ಮಹಾರಥ । ಹರೆದುನಿ ಜಸಂಸ್ಥಾನಸಂಗತವಾಯ್ತು ನಿಮಿಷದಲಿ ॥ ... ... ॥ ೨೮ ॥

ಅಂತು ಸಂಧಿ ೭೯ಕ್ಕೆ ಪದ ೨೩೩೫ಕ್ಕಂ ಮಂಗಳಮಸ್ತು.

## ಎಂಟನೆಯ ಸಂಧಿ.

॥ ಸೂಚನೆ ॥ ಪೃಥುವಿಪತಿ ಮಾದ್ರೇಶನನು ಸಾ । ರಥಿಯ ಮಾಡಿದನೊಲವಿನಿಂಗಲತಿ । ರಥಭಯಂಕರ ಭಾನುಸುತ ಹೊರವಂಟನಾಹವಕೆ ॥

ಪದ ॥ ಹರನ ಬೀಳ್ಕೊಟ್ಟಖಿಳದಿವಿಜರು । ಹರೆದುದೀಪರಿ ಕಮಲಸಂಭವ । ನಿರದೆ ಸಾರಥಿಯಾಗಿ ಸಾರಿದುದಮರರಭ್ಯುದಯ॥ ಹರಿಯ ಸಾರಥಿತನದಿ ಜಯವಂ। ಕುರಿಸಿತವರಿಗೆ ನಿಮ್ಮ ಕೃಪೆಯಲಿ । ಕುರುಬಲಕೆ ಜಯವಾದೊಡೊಳ್ಳಿತು ಮಾವ ಕೇಳೆಂದ ॥೧॥ ಹರನು ಬಿಲುವಿದ್ಯೆಯನು ಕೊಡುತವೆ । ಪರಶುರಾಮಗೆಂದನಥಮುರಿ । ಗೊರೆಯುಟರು ಸತ್ಪಾತ್ರಕಿದನಾದರಿಸಿ ಕಲಿಸೆಂದು ॥ ಸುರರಮೆಚ್ಚಿದರಾವುನೀತನ । ಕರೆದು ಗರುಡಿಯ ಹೊಗಿಸಿದನು ಕಡು । ಗರುವನೀರಾಧೇಯನಧಮನೆ ಮಾವ ಕೇಳೆಂದ ॥ ೨ ॥ ಸೂತಕುಲಸಂಭವನ ಭುವನಖ್ಯಾತಕರ್ಣನ ಸಾಕಿದಾತನು । ಸೂತನಾದೊಡೆ ಮಾವ ಕೇಳನ್ವಯಕೆ ಹಳಿವುಂಟೆ ॥ ಸ್ವಾತಿಯುದಕದಲಾದಮುಕ್ತಾ । ವ್ರಾತಕಾವನುಚಿತ್ಯನಿಮಗಿ । ನ್ನೇತಕೀಸಂದೇಹ ಸಾರಥಿಯಾಗಿ ಸಾಕೆಂದ ॥ ೩ ॥ ಈದುರಾಗ್ರಹನಿನ್ನ ಚಿತ್ತದೊ । ಳಾದುದೇ ತಪ್ಪೇನು ಕೋಗಿಲೆ । ಯಾದರಿಸಿದೊಡೆ ಬೇವುಮಾವಹುದಾದೊಡೆಮಗೇನು ॥ ಕಾದಿ ಗೆಲುವರೆ ಭಾರಿಗುರುಭೀಷ್ಮಾದಿಭಟರೇನಾದರೈ ತಾ । ನಾದುದಾಗಲಿ ನಾವು ಸಾರಥಿಯಾದೆವೇಳೆಂದ ॥ ೪ ॥ ನಿಮ್ಮ ವಿಜಯಶ್ರೀಯ ಕಡೆಗ । ಣ್ಣೊಮ್ಮೆ ನಿಮ್ಮಲಿ ಮುಖಮುಖವಾದೊಡೆ । ನಮ್ಮ ಕೊರತೆಯಿದೇಕೆ ಕರಸ್ಮೈ ಸೂತನಂದನನ ॥ ಎಮ್ಮ ಹೇಳಿಕೆಯಾವುದದನೀ । ತಮ್ಮ ಮೀರದೆ ನಡೆದನಾದೊಡೆ। ನಮ್ಮವಾಸಿಯ ಬೀಳುಕೊಡುವೆವು ರಾಯ ಕೇಳೆಂದ ॥ ೫ ॥ ಹೊತ್ತದುಗುಡವ ಬಿಟ್ಟುಕೈವಿಡಿ । ದೆತ್ತಿಕರ್ಣನ ಕೊಟ್ಟ ಮೈಗೆಳೊ । ಳೆತ್ತುಗುಡಿಗಳರೋಮಪುಳಕದ ಮಾನಹರುಷದಲಿ ॥ ಬತ್ತಿತಂತಸ್ತಾಪಜಲನಿಧಿ । ಚಿತ್ತದಲಿ ಸಂದೇಹತರುವಿನ । ಬಿತ್ತು ಕರಿಮೊಳೆಯಾಯ್ತು ನಿನ್ನಮಗಂಗೆ ಹರುಷದಲಿ ॥ ೬ ॥ ಬೀಳುಕೊಂಡನು ಶಲ್ಯನನು ಭೂ । ಪಾಲನಿತ್ತಲು ಕರ್ಣನಾಯುಧ । ಶಾಲೆಯಲಿ ಶುಚಿಯಾಗಿ ಶಸ್ತ್ರಾಸ್ತ್ರವನು ಪೂಜಿಸಿದ ॥ ಸಾಲದೀವಿಗೆಗಳನು ಶಸ್ತ್ರೀ । ಜಾಲಮಿಕ್ಕವು ತೀಕ್ಷ್ಣಧಾರಾ । ಭೀಳವಿಕ್ರಮವಿಸ್ಫುಲಿಂಗಿತವಾದವಡಿಗಡಿಗೆ ॥ ೭ ॥ ಕುರಿಯಹಣಿದದ ಕೋಳಿಕೋಣನ । ಮುರಿದತಲೆಯ ವಿಶಾಸಲಿನರಕುತದ । ದುರದುರಿಪದೊಂಡೆಯಲಿ ಕಲಸಿದ ಕೂಳಮುದ್ದೆಗಳ ॥ ಹೊರಗೆಬಡಿಸಿದಭೂತಬಲಿಬೊ । ಬ್ಬಿರಿದರೊಡನುಬ್ಬೇಳ್ವಲಗ್ಗೆಯ । ಹರಗಳಬ್ಬರವಾಯ್ತುಕರ್ಣನ ಶಸ್ತ್ರಪೂಜೆಯಲಿ ॥ ೮ ॥ ವಿರಚಿಸಿತು ಶಸ್ತ್ರಾಸ್ತ್ರಮಾಲಾ । ಪರಿಕಲಿತರವಿಸೂನುದರ್ಭಾಗಂ। ಕುರದ ಶಯನಸ್ಥಾನದಲಿ ಮಾಡಿದನು ಜಾಗರವ ॥ ಕುರುನೃಪಾಲನ ಪಾಳೆಯದಲಾ । ಯ್ತುರುಳು ಮನೆಮನೆಗಳಲಿ ಶಸ್ತ್ರೀ । ತ್ಕರಸಮಾರಾಧನೆಯುಳಿಸದಿದ್ದುದು ಮಹಾಕಟಕ ॥ ೯ ॥ ಸವೆದುದಿರುಳರುಣೋದಯದಲು । ತ್ಸವದಲದ್ಭುತರಭಸವಾದುದು। ವಿವಿಧಬಲುಭಾರಣೆಯ ಭುಲ್ಲವಣೆಯಚಡಾಳದಲಿ॥ ತವಕಿಸುತ ಬಿಗಿ ವಾರುವನುತಾ । ಸವಗವನು ಭಲ್ಲೆಯವ ತೊಡಿಸಲಿ । ಕವಚಗಳನೆಂಬಬ್ಬರಣೆ ರಂಜಿಸಿತು ರಾವ್ತರಲಿ ॥ ೧೦ ॥ ಬಿಡು ಗಜವೆ ಬಿಗಿರಂಚೆಗಳ ತಾ । ತಡಿಯಹಾಯಿಕು ಗುಳವ ತೆಗೆಮೊಗ । ವಡವ ಕೊಡುವಟ್ಟೆಯವ ಕೈಲಿ

ಬೀಸು ಚೌರಿಗಳ ॥ ತಡವಿದೇನ್ನೋ ಸಾಯಿಸಡಿಘಡ । ನಡೆಯೆನುತ ತಮ್ಮೊಬ್ಬರೊಬ್ಬರ । ಜಡಿಯುಲ ಬ್ಬರವಾದುದಾರೋಹಕರ ಕೇರಿಯಲಿ ॥ ೧೧ ॥ ಕೀಲತೆಗೆಯುಚ್ಚುಗಳ ಜಡಿ ಬಲು । ಗಾಲಿಗಳ ಜೋಡಿಸು ಪತಾಕಾ । ಜಾಲವನು ನಿಲಿಸಿರಲಿತೆಗೆ ಬಲುಮಿಳಿಯ ಬಿಗಿಯೆನುತ ॥ ಮೇಲುಮೇಲುಬ್ಬರದಘೋಳಾ । ಘೋಳಿ ಘುಲ್ಲಿಸೆ ದೆಸೆದೆಸೆಯ ರಥ । ಜಾಲ ನೂಕಿತು ನೆರೆದುದತಿರಥರುಗಳ ಕೇರಿಯಲಿ ॥೧೨॥ ನೀಡುಬಿಲುಬತ್ತಳಿಕೆಯನು ನಡೆ । ಜೋಡ ತೆಗೆ ತಾ ಸಬಳವನು ರಣ । ಹೇಡಿಯೇ ಘಡಗಾಯವನು ಬಿಗಿ ಮದ್ದ ತೊಡೆಯೆನುತ ॥ ಕೂಡೆ ತವೆತವೆಗಾಹವದ ಖಯ । ಖೋಡಿಯಿಲ್ಲದಸುಭಟರಬ್ಬರ । ಜೋಡುಕವಿದುದು ಕವನದಲಿ ಕಾವಾಳ ಕೇರಿಯಲಿ ॥ ೧೩ ॥ ಬಿರಿದುದಬುಜಭವಾಂಡವೆನೆ ಭೋಂ । ಕರಿಸಿದವು ನಿಸ್ಸಾಳತತಿ ನಿ । ಬ್ಬರದಬಿರುದನು ಬೀರುತಿರ್ದವು ಬಿರುಬುಗಹಳೆಗಳು ॥ ಎರಲು ಸುಳಿದುದು ದೀಪಶಿಖಿ ಪರಿ । ಹರಿಸಿದವು ಬಲದತಿರಥರ ನಿ । ಷ್ಠುರಕೆಯುಂಜದೆ ಮಾಣದೆನೆ ನೆರೆ ಹಿಂಗಿತಾರಜನಿ ॥ ೧೪ ॥ ಸರಸಿರುಹವರಳಿದವು ನೈದಲೆ । ಹರುಷ ಹಿಂಗಿತು ಚಕ್ರವಾಕದ । ನೆರವು ನಿಂದವು ಚಂದ್ರಕಾಂತದ ಹೊನಲು ಪೈಸರಿಸೆ ॥ ಕಿರಣತತಿತಲೆದೋರೆ ಮೂಡಣ । ಗಿರಿಯಶಿಖರದ ಯಾಮಿನೀಕವೆ । ತರಣಿ ಬೆನ್ನಟ್ಟುವೊಲು ಹೊಳಸಿದ ರತುನಮಯರಥವ ॥ ೧೫ ॥ ಉಲಿವಮಂಗಳಪಾಠಕರ ಕಳ । ಕಳಿಕೆಮೆರೆದುದು ಹೊಳೆವಹೊಂಬ । ಟ್ಟಲಲಿ ಸೂಸಿದನರ್ಘ್ಯಜಲವನು ಜನಕನಿದಿರಿನಲಿ ॥ ಲಲಿತಮಂತ್ರಾಕ್ಷತೆಗಳನು ಕರ । ತಳದೊಳಾಂತುಮಹೀಸುರರಿಗ । ಗ್ಗಳೆಯನಿತ್ತನು ಧೇನುಮಣಿಕನಕಾದಿವಸ್ತುಗಳ ॥ ೧೬ ॥ ವರನಿಖಾರಿಯಬಿಳಿದಿನಲಿ ಬಲ । ಮುರಿಯ ಬಲಿದನು ಪದಮುಖಕೆ ಮುಂ । ಜೆರಗ ಬಿಟ್ಟನು ಬಿಗಿದಬದ್ದುಗಥಾರಗೊಂಡೆಯವ ॥ ಕರಣಲಹುಂಯ ವಜ್ರಮಾಣಿಕ । ಪರಿರಚಿತಭುಜಕಂಠಕರ್ಣಾ । ಭರಣಚರಣದ ಕಡೆಯದಲಿ ರಂಜಿಸಿದನಾಕರ್ಣ ॥ ೧೭ ॥ ದಿನಗಣನೆ ಹದಿನೆಂಟುಕೋಟಿಯ ಕನಕವಂದಿನಟನಸ ಚೆಲ್ಲಿದ । ನನುಪಮಿತಧನಭಾರವನು ಭಂಡಾರವನು ತೆಗಸಿ ॥ ತನತನಗೆ ಯಾಚಕರು ಹೊತ್ತುದ। ನೆನಗೆಬಣ್ಣಿಸಲರಿದು ಕೇಳೈ । ಜನಪಕರ್ಣನು ಯೇನನಿಶ್ಚೈಸಿದನೊ ಮನದೊಳಗೆ ॥ ೧೮ ॥ ಹೊಳೆಹೊಳೆದ ವಾಭರಣ ತಾರಾ । ವಳಿಗಳಂತಿರೆ ಪೂರ್ಣಶಶಶಿಮಂ । ಡಲದವೊಲು ತನುಕಾಂತಿ ಮುಸುಕಿತು ಸಕಲದಿಗುತಟವ ॥ ತಳಿತಪಿಕ್ರಮಸುಪ್ರತಾಪೋ । ಜ್ವಲಿತ ಸೂರ್ಯಪ್ರಭೆ ಜಗತ್ತ್ರಯ।ದೊಳಗೆ ಝಳಪಿಸೆ ಕರ್ಣನೆದ್ದನು ದಿವ್ಯತೇಜದಲಿ ॥ ೧೯ ॥ ದೇವಗುರುವಿಪ್ರರಿಗೆ ಬಹುಸಂ। ಭಾವನೆಯ ಮಾಡಿದನು ಶಸ್ತ್ರಾ । ಸ್ತ್ರಾವಳಿಯ ತರಿಸಿದನು ತುಂಬಿಸಿದನು ವರೂಥದಲಿ ॥ ರಾವುತರಿಗಾರೋಹಕರಿಗೆ ಭ । ಟಾವಳಿಗೆ ರಥಿಕರಿಗೆ ಚೆಲ್ಲಿದ।ನಾವಿಧದಸೌಗಂಧಭಾವಿತಯಕ್ಷಕರ್ದಮವ॥೨೦॥ ನಡೆದು ಬರದನು ರಥಕೆ ದೆಸೆಕಂ। ಪಿಡುತ ನಡೆವ ಮಹಾಪ್ರಧಾನರ । ನಡುವೆ ಚಿಮ್ಮುವಚಾಮರಂಗಳ ಸುಳಿಯ ಸಂದಣಿಯ ॥ ಒಡನೆ ನೆಲನನಳ್ಳಿರಿವಾದ್ಯದ । ಗಡಣರಭಸದ ಪಾಠಕರ ಗತ । ಬಡಕಗಳರವ ಬಿಗಿದುದಬುಜಭವಾಂಡಮಂಡಲವ ॥ ೨೧ ॥ ಅತಿರಭಸವಿಂದಾಯ್ತು ಸೇನಾ । ಪತಿಯ ಪಯಣವಲಾಯೆನುತ ಗುರು । ಸುತಶಕುನಿಕೃತವರ್ಮಕೃಪದುಶ್ಶಾಸನಾದಿಗಳು ॥ ವಿತತಸನ್ನಾಹದಲಿ ಕುರುಭೂ । ಪತಿಸಹಿತ ಹೊರವಂಟು ಭಾಸ್ಕರ । ಸುತನ ಸನ್ನೆಯಮೇಲೆ ನಡೆದುದು ಮುಂದೆ ಸಂದಣಿಸಿ ॥ ೨೨ ॥ ಬಳಿಯ ನೆಲನುಗ್ಗಡಣೆಗಳ ವೆ । ಗ್ಗಳೆಯಸುಭಟರ ಮೇಳವಲಿ ಬಂ । ದಳಿದು ದಂಡಿ

ಗೆಯಿಂದ ನಸುನಗುತೇರಿದನು ರಥವ ॥ ಚಳಕದಲಿ ಹರಿಹಯ ಹಯಂಗಳ । ನಳವಡಿಸಿ ಬಲನೆಡಕೆ ತೇಜಿಯ । ಸುಳಿಸಿ ಸಾರಥಿತನವ ತೋರಿದನಂದು ಮಾದ್ರೇಶ ॥ ೨೩ ॥ ಬಳಿಯಪಾಂಗುವಧಾರುಗಳಕ ಳ । ಕಳದೊಳಗೆ ರಥವೇರಿದನು ನೆಲ । ಹಿಳಿಯೆ ಹೇರಾಳಿಸಿತು ಬಹುವಿಧವಾದ್ಯನಿರ್ಘೋಷ ॥ ತಳಿತ ವಮಲಚ್ಛತ್ರಚಮರಾ । ವಳಿಯಝಲ್ಲಿಯ ಚೌರಿಗಳನವ । ಪಳಹರಧ್ವಜದಂಡವೆತ್ತಿತು ವರರಥಾಗ್ರ ದಲಿ ॥ ೨೪ ॥ ಇಕ್ಕೆಲದ ರಾವುತರ ತೇರಿನ । ತೆಕ್ಕೆಗಳ ಗಜಘಟೆಯ ಕಾಲಾ । ಳಕ್ಕಜದ ನಿಸ್ಸಾಳದೊ ಳಗಿನ ಲಗ್ಗತಂಬಟದ ॥ ಉಕ್ಕಿ ಚಲಿಸಿದುದಬ್ಧಿಯೆನೆ ಸಾ । ಲಿಕ್ಕಿನಡೆದುದು ಸೇನೆ ರಾಯನ । ನುಕ್ಕಿ ನವಸರದಾನೆ ನಿಜಪಾಳೆಯವ ಬೀಳ್ಕೊಟ್ಟ ॥ ೨೫ ॥ ರಾಯ ಕೇಳ್ಳೆ ಬಳಿಕ ಕಲಿರಾ । ಧೇಯಬರುತಿರೆ ತೋರಿತುತ್ಪಾ । ತಾಯುತವನೇನೆಂಬೆನೈ ಶಿವಶಿವ ಮಹಾದೇವ ॥ ವಾಯುಸದಬಲ ಭೂಮಿಕಂಪ ನಿ । ಜಾಯುಧಂಗಳ ಕಡಿಗಳಶ್ವನಿ । ಕಾಯದಲಿ ನೆರೆಸುರಿವಕಂಬನಿ ಕಾಣಲಾಯ್ತೆಂದ ॥ ೨೬ ॥ ಒದರಿದ ವು ನರಿ ಮುಂದೆ ಕರ್ಣನ । ಕುದುರೆಗಳು ಮುಗ್ಗಿದವು ಪರಿವೇ । ಷದಲಿ ಸಪ್ತಗ್ರಹದ ವಕ್ರತೆ ಸೂರ್ಯ ನಿದಿರಿನಲಿ ॥ ಕದುಬಿತತಿಬಿರುಗಾಳಿ ಧೂಳಿಯ। ಕೆದರಿ ಬೀಸಿತ್ತಖಿಳಬಲವು । ಚ್ಚೆದುದು ಕಂಗಳನವನಿ ಪತಿ ಕಂಡನು ಮಹಾದ್ಭುತವ ॥ ೨೭ ॥ ತೃಣಕೆ ಕೊಂಬನೆ ಕರ್ಣನಿದನಾ । ರೆಣಿಸುವರು ದುಷ್ಕರ್ಮ ಪಾಶಾ । ರುಣನಿಬದ್ಧರು ಕಂಡು ಮಾಡುವದೇನು ಕೌರವರು ॥ ರಣಮುನೋರಾಗದಲಿ ದಳ ಸಂ । ದ ಣಿಯ ನಿಲಿಸಿದನತಿರಥರಲಾ । ವಣಿಗೆಕೊಂಡನು ಕರ್ಣಪರಿವಾರಕ್ಕೆ ಕೈಮುಗಿದು ॥ ೨೮ ॥ ನೊಂದವ ರು ನಿಲಿ ಸ್ವಾಮಿಕಾರ್ಯಕೆ । ಹಿಂದುಗಳೆವರು ಮರಳಿ ಮನೆಗಳ । ಮುಂದಣಾಶೆಯಹೇವಮಾರಿಗಳಿಗಿ ದೆ ಮಾನೌಮಿ ॥ ನಿಂದೊಡೊಳ್ಳಿತು ನೃಪನದೆಸೆಯಲಿ । ಕಂದುಕಳೆಯುಳ್ಳವರು ಕಾಳಗ । ವಿಂದುಬೀ ಳ್ಕೊಂಬುವದು ನಿಮಗೆಯು ಭೀತಿ ಬೇಡೆಂದ ॥ ೨೯ ॥ ಓಡಿ ನಾಚಿಸುವವರು ನಿಲಿ ರಣ । ಖೇಡರೀ ಗಳೆ ಹೋಗಿ ಮನವ। ಲ್ಲಾಡಿ ಮರುಗುವರೇಳಿ ಮರಣದಲಾವಫಲಸಿದ್ಧಿ ॥ ಕೂಡಗಲಿಗರು ನಿಲ್ಲಿ ಯಿ ಹಪರ । ಗೇಡಿಗಳು ಹೆರಸಾರಿ ಗುಣದಲಿ । ಬೇಡಿಕೊಂಡೆನು ಖಾತಿಗೊಳ್ಳೆನು ಮರಳಿ ಸಾಕೆಂದ ॥೩೦॥ ಸಂದಸುಭಟರು ಬನ್ನಿ ಸಗ್ಗದ । ಬಂದಿಕಾರರು ಬನ್ನಿಮನದಿಂ । ಮುಂದುಹೆಜ್ಜೆಯ ತವಕಿಗರು ಬ ಹುದೆಮ್ಮಸಂಗಾತ ॥ ನೊಂದೊಡುಬ್ಬುವರಿತ್ತ ಬನ್ನಿ ಪು । ರಂದರನಸ ಮೊಗದ್ದುಗೆಯಮನ । ಸಂದ ವರು ಹೊಗಿ ರಣವನೆಂದನು ಕರ್ಣ ಕೈಮುಗಿದು ॥೩೧॥ವೀರಭಟರಾಹವವ ಹೊಗಿ ಜ। ಜ್ಝಾರರಿತ್ತಲು ಮರಳಿ ಕದನಕು । ತಾರರೂಪರು ಮುಂದೆ ನಡಯಿ ಮಹಾರಥಾದಿಗಳು ॥ ಸಾರಿ ಬಲ್ಲರೆಸಮರಯ ಜ್ಝಾದ। ಸಾರವನು ಪಾಪಿಗಳುಯಕಟ ಶರೀರವನು ಕೊಡಿ ಪಡೆಯಿ ಮುಕ್ತಿಯನೆಂದನಾಕರ್ಣ॥೩೨॥ ರಾಯ ಕೇಳ್ಳೆ ಕರ್ಪುರದ ತವ। ಲಾಯಿಗಳನೊಡೆದೊಡೆದು ಭಟರಿಗೆ । ಹಾಯಿಕುತ್ತಂಜುಳಿಗಳಲಿ ಮೊ ಗೆಮೊಗೆದು ಬೇಸರದೆ ॥ ಸಾಯದಿಹರೇ ರಣದೊಳಗೆ ರಾ। ಧೇಯನಿಂ ಮನ್ನಣೆಗೆ ಬದುಕುವ। ನಾಯಿ ಗಿಹಪರವುಂಟೆಯೆಂದುದು ಕೂಡೆ ಕುರುಸೇನೆ ॥ ೩೩ ॥ ಕೇಳಿರೈ ಪರಿವಾರ ಯಿಂದಿನ । ಕಾಳಗವಲೇನ ಮಗೆ ಭೀಷ್ಮನ । ಕೋಲಗುರುವಿನ ಹರಿಬವನು ಮನವಾರೆ ಹೊತ್ತೆನಲಾ ॥ ಸೋಲವೋ ಕುರುಪತಿ ಯ ಭಾಗ್ಯದ। ಕಾಲವೋ ಹರಿಬಲ್ಲನೆನ್ನಯ।ತೋಳಬಲುಹನು ಹಗೆಗೆ ತೋರುವೆನೆಂದನಾಕರ್ಣ॥೩೪॥ ಆವತೋರಿಸಲಾವನರ್ಜುನ। ದೇವನನು ರಿಪುಬಲದೊಳಾತಂ । ಗೀವೆನೀಪದಕವನು ಕಡೆಯುವ ವಜ್ರವಾ

ಣಿಕದ ॥ ಆವನಾಫಲುಗುಣನ ತೇರಿನ । ತಾವದೇಯೆಂದವಗೆ ಯಿದೆವು । ಕ್ತಾವಳಿಯ ಲಂಕಾರವೆಂದನು ಕರ್ಣ ನಿಜಬಲಕೆ ॥ ೩೫ ॥ ನರನ ನೆಲೆಗಾಣಿಸಿದವಗೆ ಸಾ । ವಿರದಶ್ವಟ,ಣವರ್ಜುನನ ಮೋ । ಹರವದೇಯೆಂದವಗೆ ಕೊಡುವೆನು ಹತ್ತುಸಾವಿರವ ॥ ನರನ ಕೆರಳಚಿ ತಲ... ಗೆ ಗಜನೂರು ಹಯಸಾ । ವಿರದ ವಳಿತವ ಬರಸಿ ಕೊಡುವೆನು ರಾಯನಾಣೆಂದ ॥ ೩೬ ॥ ತೋರಿರ್ಕೆ ಫಲುಗುಣನನಿದಿರಲಿ । ತೋರಿರ್ಕೆ ಸಿತಹಯನನಕಟಾ । ತೋರಿರ್ಕೆ ವಿಜಯನನು ನಿಮಗಿದು ಸ್ವಾಮಿಕಾರ್ಯವಲಾ॥ ತೋರಿ ಪಾರ್ಥನ ನರನ ರಕುತದ। ಸೂರೆ ಶಾಕಿನಿಯರಿಗೆ ನಿಮಗುರೆ । ಸೂರೆಯೊ ಭಂಡಾರವೆಂದನು ಕರ್ಣನಿಜಬಲಕೆ ॥ ೩೭ ॥ ನರನ ಶರಹತಿಗೆನ್ನ ತನು ಜ । ರ್ಜರಿತವಾಗಲಿ ಯೆನ್ನ ಕಣೆಯಲಿ । ಬಿರಿಯಲಾತನ ದೇಹ ಖಾಡಾಖಾಡಿಯುದ್ಧದಲಿ ॥ ಕರುಳು ಕರುಳಲಿ ತೊಡಕಿ ನೊರೆನೆ । ತ್ತರಲಿ ನೆತ್ತರುಗೂಡಿ ಕಡಿಕಡಿ । ವೆರಸಿ ಮಿಗೆ ಪಲ್ಲಟಿಸಿ ಕಾದುವೆನಿಂದು ಹಗೆಯೊಡನೆ ॥ ೩೮ ॥ ಸರುಳುಸರಳಿಂಗೊಮ್ಮೆ ರೋಮಾಂ । ಕುರದ ಗುಡಿಯಲಿ ರಕ್ತಜಲದಲಿ । ಕರುಳ ಹೂಮಾಲೆಯಲಿ ವೀರರಣಾಭಿಷೇಕವನು ॥ ಧರಿಸಿದರೆ ಪ್ರತಿಗಾಯಗಾಯದೆ।ಧರೆಧುರಕೆ ಮೈಹೆಚ್ಚಿ ಮನದು। ಬ್ಬರದಲಿರಿದಾಡಿದೊಡೆಧಿಟ ಕೃತಕೃತ್ಯತಾನೆಂದ ॥ ೩೯ ॥ ಅವನ ಮುಂದಲೆ ತನ್ನ ಕೈಯಲಿ । ಅವನಕೈಯಲಿ ತನ್ನ ಮುಂದಲೆ । ಅವನ ಗಾಯವ ತನ್ನ ದೇಹದ ಗಾಯ ಚುಂಬಿಸುತ ॥ ಅವನ ಖಡುಗಕೆ ತನ್ನ ಮೈ ತಾ । ತಿವಿದಖಡುಗಕೆ ತನ್ನ ಮೈ ಲವ ! ಲವಿಸಲಡಿ ಮೇಲಾಗಿ ಹೊರಳ್ದೊಡೆ ಧನ್ಯ ತಾನೆಂದ ॥ ೪೦ ॥ ಕಯ್ದುಣಿಯೆಹೊಯ್ದುಣಿಯೆಸೀಳಿದು । ಬಾಯ್ದುಣಿಯೆ ಮೊದಲಿಸಿ ಹೆಚ್ಚಿದ । ಮೈಯ್ದುಣಿಯೆ ರಿಪುಭಟನ ಹೊಯ್ಲಲಿ ಗಾಯವನುಪಡೆದು ॥ ಹಾಯ್ದುಕರುಳಿನ ಮಿದುಳ ಜೋರಿನ । ತೊಯ್ದುರಕ್ತಾಂಬರದಲಾನಿರ । ಯ್ದೆ ಕುರುಪತಿ ಬಂದುಕಂಡೊಡೆ ಧನ್ಯ ತಾನೆಂದ ॥ ೪೧ ॥ ನರನ ರಕುತದ ಮದ್ಯಪಾನವ । ನೆರೆದು ಶಾಕಿನಿಯರಿಗೆ ಪಾರ್ಥನ । ಕರುಳದಂಡೆಯ ಕೊಳಮುದ್ದೆಯ ಬಡಿಸಿ ದೈತ್ಯರಿಗೆ ॥ ಅರಿಯ ಖಂಡವ ಹರಿಯಸುಂಟಿಗೆ । ವೆರಸಿ ಭೂತಾವಳಿಯ ತಣಿಸಿದೊ । ಡರಸುಕೌರವರಾಯ ಸಾಕಿದುದಕ್ಕೆ ಫಲವೆಂದ ॥ ... ... ॥೪೨॥

ಅಂತು ಸಂಧಿ ೪ಕ್ಕೆ ಪದ ೨೭೭ಕ್ಕಂ ಮಂಗಳಮಸ್ತು.

---

## ಒಂಭತ್ತನೆಯ ಸಂಧಿ.

॥ ಸೂಚನೆ ॥ ಸೇನಸುಮಿಗಿಲೊಳಗೊಳಗೆ ಖತಿಯಲಿ । ಕೇಣಕಿಚ್ಚೆದಾಡಿದರು ಸಮರಾಂ । ಗಣಭಯಂಕರಶಲ್ಯಭಾಸ್ಕರಸುತರು ತಮ್ಮೊಳಗೆ ॥

ಪದ ॥ ಕೇಳು ಧೃತರಾಷ್ಟ್ರಾವನಿಪ ನಿ । ಸ್ಸಾಳಹಂಕೃತಿ ನುಡಿಯನಾಲಿಸಿ । ಕೇಳಿದನು ಕಲಿಶಲ್ಯ ಕುದಿದನು ಕೋಪತಾಪದಲಿ ॥ ಹೇಳುಹೇಳೆನ್ನೊ ಮ್ಮೊಪಾರ್ಥನ । ಹೇಳಿ ತೋರಿಸಲೇನ ಕೊಡುವೆನೈ । ಪಾಲಕನ ಪದಪಾಣೆ ನುಡಿನುಡಿ ಕರ್ಣನುಡಿಯೆಂದ ॥ ಊರುಗಳ ಕೊಡಬೇಡ ಗಜಹಯ । ನಾರಿಯರ ಕೊಡಬೇಡ ಪಾರ್ಥನ । ತೋರಿಕೊಡುವೆನು ನನಗೆ ಹೇಳದೆ ಬರಿದೆ ಹಲುಗಿರಿದೈ ॥

ಸ್ಮರಿಸೀಗಳೆ ನಿನ್ನ ಕರುಳಿಸ।ತೋರಣವ ಬಾಗಿಲಲಿ ವಿಜಯ।ಶ್ರೀರಮಣಿತಹನೀಕಿರೀಟಿಯ ತೋರಿಸುವೆನೆಂದ॥೨॥ ಮೊಲನಕಾಹಿನ ಕಾಡಿನಲಿ ಹೆಬ್ಬುಲಿ ವಿಭಾಡಿಸುವಂತೆ ನರಿಗಳು।ಬಲಿದಬೇಲಿಯ ಕದಳಿಯಲಿ ಕಾಡಾನೆ ಹೊಗುವಂತೆ ॥ ದಳವ ಬಗಿದು ಮಹಾರಥರನೊಡೆ । ದುಳಿದು ನಿನ್ನಯ ನಾಲಗೆಯ ಹೆಡೆ । ದಲೆಯಲುಗಿವರ್ಜುನನನೀಗಳೆ ತೋರಿಸುವೆನೆಂದ ॥೩॥ ಹೊರಗೆ ಕೊಡುವವನಿತ್ತ ತಾನಾ । ನರನಿ ತಹೆನರ್ಜುನನನೇತಕೆ । ಬರಿದೆ ಭಟರಿಗೆ ಬಾಯ ಬಿಡುತಿಹೆ ಸಾರು ಖೂಳನಲಾ ॥ ಅರಸಲೇತಕೆ ಕಾಲಮೃತ್ಯುವ । ನರಸುವರೆ ಕಾಳಾಹಿಯನು ಧಿಟ। ವರಸಲೇತಕೆ ಯರ್ಜುನನನಿದೆ ತೋರಿಸುವೆನೆಂದ ॥ ೪ ॥ ಆವನೊಬ್ಬನ ಬಿಲ್ಲಬೊಬ್ಬೆಯ । ನಾವರದಿನೆದೆ ಬಿರಿವುದಹಿತರ। ದಾವನೊಬ್ಬನದನಿಗೆ ಜರಿವುದು ಧೈರ್ಯಗಿರಿಶಿಕರ ॥ ಆವನೊಬ್ಬನ ಕಂಬುದಲಗಳ । ಜೀವ ತಲೆಕೆಳಗಹುದು ಸುಭಟರ । ದೇವಸಾತನೆ ಪಾರ್ಥನೀಗಲೆ ತೋರಿಸುವೆನೆಂದ ॥೫॥ ಹಸಿದನಿದ್ರೆಯ ಹಾವ ಬಡಿದೆ । ಬ್ಬಿಸುವುದೇ ಕ್ಕೆ ಮುರಿದಮಾರಿಯ ಮುಸುಕುದನುಗಿವುದು ಬುದ್ಧಿಯೇ ಜೀವಾಭಿಲಾಷರಿಗೆ ॥ ನುಸಿಗಳುರಿಜಾಲಗಳೊಡನೆ ಲಂ । ಘಿಸುವುದೇಕೈ ಕರ್ಣಪಾರ್ಥನ । ಗಸಣಿಯೇಕೈ ನಿನಗೆ ಸ್ಮರಿಸು ತೋರಿಸುವೆನೆಂದ ॥೬॥ ಗರುಡನೆತ್ತಲು ಕೊಬ್ಬಿದೊಳ್ಳೆಯ । ಮೃಗಗಳೆತ್ತಲು ಸಿಂಹವೆತ್ತಲು । ನರಿಗಳೆತ್ತಲು ಹುಲಿಯುಸರಿಸಕೆ ಸಾಯುವುರಿ ಯೆತ್ತ ॥ ನರನೊಡನೆ ಸರಿಸಮವಿಯೇ ಜಗ । ವರಿಯದೇ ನಿನ್ನಾತನಬ್ಬರ । ತರವನರಿಟಾ ಕರ್ಣ ನುಡು ನೀ ಕಷ್ಟ ಹೋಗೆಂದ ॥೭॥ ಟಿಟಕೆ ಪಾರ್ಥನ ತೋರದೊಡೆ ಸಂ। ಕಟವ ಮಾಡದೆ ಮಾಣಲಕಟಾ। ಕಟ ಧನಂಜಯನೆಂದು ನೋತನು ಹಿಂದೆ ನಿನ್ನೊಡನೆ ॥ ಕುಟಿಲಮತಿ ಗೋಗ್ರಹಣದಲಿ ಲಟ । ಕಟಿಸಿದೆಯಲಾ ಮಹುಷಿಯೊಳಗು । ಬ್ಬಟದ ಬಿಲ್ಲಿನೊಳೊದೆಸಿಕೊಂಡವ ಪಾರ್ಥನೇ ಯೆಂದ ॥೮॥ ನರನ ತೋರಿದವಂಗೆ ಸತಸಾ । ವಿರದಪಟ್ಟಣವೀವೆಲಾನಿ । ನ್ನರಸನನು ಗಂಧರ್ವರೆಳೆದೊಯ್ವಂದು ಗಗನದಲಿ ॥ ಅರಸಿಯರು ಸಚಿವರು ಕುಮಾರರು । ಮೊರೆಯಿಡಲ್ಕಾಬೇಚರನ ಹೊ । ಯ್ದರಸನನು ಬಿಡಿಸಿದವ ನೀನೋ ಪಾರ್ಥನೋ ಯೆಂದ ॥೯॥ ಕಂಡು ಮಾಡುವುದೇನು ಭೀಷ್ಮರು । ಕಂಡುದಿಲ್ಲಾ ಚಾಪವಿದ್ಯಾ । ಖಂಡಪರಶುದ್ರೋಣನರ್ಜುನನನು ರಣಾಗ್ರದಲಿ ॥ ಕಂಡು ನೀನೇಗುವೆ ಸುಯೋಧನ । ಭಂಡನೋ ಸಾರಥಿತನದ ನಾ । ಭಂಡನೋ ನೀ ಭಂಡನೋ ತಾನರಿಯೆನಿದನೆಂದ ॥೧೦॥ ಕಡುಪರಾಕ್ರಮವಿದನು ನೆತ್ತಿಯ।ಪಿಡಿದು ನೀ ಗಳಹಿದೊಡೆ ನಿನ್ನಯ। ಹಡಪದವರೀಛತ್ರದವರೀಚಮರಧಾರಿಗಳು॥ ಒಡೆಯ ನೀನೆಂದಂಜಿ ನಿರುತವ । ನುಡಿಯಲಮ್ಮರು ತಮ್ಮ ಮನದೊಳ । ಗೊಡಬಡುವರೇ ಸದನಬಾಹಿರಕರ್ಣ ಹೋಗೆಂದ ॥೧೧॥ ಕೇಳುತಿರ್ದನು ಕರ್ಣನೀತನ । ಬೀಳುವಚನವನಧಿಕರೋಷ । ಜ್ವಾಲೆ ಝಳಪಿಸೆಕಡಿದನೌಡನು ತೂಗಿದನು ಶಿರವ ॥ ಖೂಳನಿವನನು ಹೊಯ್ದು ರೋಷದ । ಗಾಳುದೊಟ್ಟಿ ವಿಕಾರವಿಪ್ರನ।ಗಾಳುಶಾಪದ ಫಲವಲಾ ಸಂಪ್ರಾಪ್ತವಾಯ್ತೆಂದ ॥೧೨॥ ಈಸು ನೀನರ್ಜುನನ ಪಕ್ಷಾ । ವೇಶಿಯೇಶಿಪಿಪ ಮಹಾದೇ । ವೇಸುನಂಬಿಹನೋ ಸುಯೋಧನನೇನಮಾಡುವನೋ ॥ ಸೀಸನೇ ರವಿಕಾಂತವಾಗ ದಿ । ನೇಶನನು ಕಣಕಿದಪ್ರೊಲೀಗ ವ । ನೀಶನೀತನನಂಜಿ ಕಟ್ಟನು ಕೆಟ್ಟನೆಂದ ॥೧೩॥ ನೆಣಸು ಮೋಹನ್ನೊಡನೆಯೋ ಫಲು । ಗುಣನೊಡನೆಯೋ ಪೂಣು ನೃಪತಿಯ । ರಣವಿಜಯವಿದ್ವೇಷಿಯೋ ನಾವೆಂದು ಫಲವೇನು ॥ ಅಣಕವೇ ಕುರಿಗಾಹಿ ಗಾಜಿನ । ಮಣಿಯುಬಲ್ಲನುಗಡ ಕಿರೀಟಿಯ।

ಗುಣಪರಾಕ್ರಮತನವ ನೀನೇ ಬಲ್ಲೆ ದಿಟವೆಂದ ||೧೪|| ರೂಡಿಯೋಲೆಯುಕಾರನರ್ಜುನ| ನಾಡ ಪತಿಕರಿಸುವೊಡೆ ನೀನದ| ನೋಡಿ ಸಂತಸಬಡುವರಿಬ್ಬರುಕೃಪರುಗುರುಸುತರು || ಕೋಡಗದ ಮೊಗಸಿರಿಗೆ ಕಾವಲಿ | ಯೋಡು ಕನ್ನಡಿಯಹಾಯ್ತುಗಪ ಕೃಪೆ | ಗೇಡಿಗುಚಿತವನೇನುಮಾಡುವೆನೆಂದನಾಕರ್ಣ ||೧೫ ಹಗೆಯನೇ ಕೊಂಡಾಡಿ ಸ್ವಾಮಿಗೆ | ಬೆಗಡುಬೆರಸಿ ತದೀಯಸುಭಟರ | ನಗಡುಮಾಡಿ ನಿಜಾಪ್ತಬಲ ನಿಸ್ತೇಜರೆಂದೆನಿಸಿ | ಹೊಗಳಿಕೆಗೆ ಗುರಿಯಾದರೈವರು ವಿಗಡರವರೊಳಗಳಿದರಿಬ್ಬರು | ಹಗೆಗಳುಳಿದಿರಿ ಮೂವರೆಂದನುಭಾನುಸುತ ಮುಳಿದು ||೧೬|| ನಾವು ಭಂಡರು ಗರುವರಾಯರು| ನೀವಲಾ ಭುವನದಲಿ ಬಾಹಿರ| ನಾವು ನೀವತಿಸುಜನರಾದಿರಲಾ ಮಹಾದೇವ || ತಾವು ತಮ್ಮಯ ಹೆಚ್ಚುಕುಂದಿನ | ಜೀವಕಳೆಯುಭಯಪನಿರ್ಧಕ | ಜೀವಿಗಳ ಬಂಘಾಲತನಕೇನೆಂಬುದಿದಕೆಂದ ||೧೭|| ಮುನಿದೆನಾದೊಡೆ ಕೋಟಿಕೃಷ್ಣ | ರ್ಜುನರ ಕೊಂಬೆನೆ ರಣಕೆ ಮರ್ತ್ಯ | ಧನಗೆ ಮಲೆವರ ಮಾಂಪಾಂಡವಮೋಘಪವೆಮಾನ || ತನಗೆ ಸರಿಯಾರಿನ್ನು ನೀನಗೊ | ಬ್ಬಿನಲಿ ನುಡಿದೀನಿನ್ನ ಬಾಂಧವ | ಜನಸಹಿತ ಹಿಂಡುವೆನು ಹಿಂದಿಕ್ಕುವರ ತೋರೆಂದ ||೧೮|| ಸೂರಿಗಾವುದು ದೇಶವಾಸಂ| ಸ್ಕಾರವವರಿಗೆ ಬಿಡಿದು ಬುದ್ಧಿಗೆ| ಬೇರೆ ಬಗೆಯಿಲ್ಲ ಕುದೇಶ ಕುವಂಶಸಂಭೂತ || ಊರುಗರಲಾವ ಮಾದ್ರದೇಶದ | ಭೂರಚರಿತಕ್ಷತ್ರಮಿರವಿ | ಕಾರಗಳ ಜಾತಿಯಲಿ ಜನಿಸಿದ ಶಲ್ಯ ಕೇಳೆಂದ ||೧೯|| ಖೂಳರಿಗೆ ಸೌಜನ್ಯಭೂಮಿ ವಿ | ಟಾಳಚರಿತರ ತವರುಮನೆ ದು | ಶ್ಶೀಲರಿಗೆ ದರ್ಪಣ ವಿಕಾರಿಗಳಿಗೆ ವಿಹಾರವನ || ಹೇಳುವೊಡೆ ಪರಮಾಣು ಗುಣವಾ | ಬಾಲವೃದ್ಧರಿಗಿಲ್ಲ ತಕ್ಕಿನ| ಕಾಳುಕಾರರು ಮಾದ್ರಜವದಿರು ಶಲ್ಯ ಕೇಳೆಂದ ||೨೦|| ರಣದೊಳೊಡೆಯನ ಬಿಡಿಮ ಜಾರುವ | ಗುಣಸಮುದ್ರರು ಮಾದ್ರರವದಿರ| ಭಣಿತೆತಾನಿದು ಬೇರ ಧಿಟ್ಟರ ದಂಡಿಯದು ಬೇರೆ || ಗಣಿಕೆಯರ ಮಧ್ಯದಲಿ ಮದ್ಯದ | ತನುವಿನಲಿ ತನುಸೊಕ್ಕಿ ಬೆತ್ತಲೆ | ಕುಣಿವಭಂಗಿಯ ಭಂಡರೆಲವೋ ಶಲ್ಯ ಕೇಳೆಂದ ||೨೧|| ಗರುಡಮತದಲಿ ಸರ್ಪವಿಷ ಪರಿ | ಹರಿಸುವುದು ದುರ್ಜನವಚೋನಿ | ಷ್ಠುರಮಹಾವಿಷಕಾವಗಾರುಡವಾವಮಂತ್ರಮುಖ || ದುರುಳನೀ ದುರುದುಂಬಿತನದಲಿ | ಹುರುಳುಗೆಡಿಸಿದರೀಸರಲಿ ನೀ| ಗರುವನೇ ಬಾಹಿರನು ನೀನಾಶಲ್ಯ ಕೇಳೆಂದ ||೨೨|| ಈಸುಪರಿಯಲಿ ನುಡಿದು ನಮ್ಮಯ | ದೇಶವನು ನೀಹಳಿದೊಡೆಯುನೀ | ನೀಸುಪರಿಯಲಿ ಬೈದು ಭಂಗಿಸಿ ನಮ್ಮದೂರಿದೊಡೆ || ಆಸಿತಾಶ್ವನ ಬಿಲ್ಲನೊದೆದಾ | ಕಾಶಕವ್ವಳಿಸುವಶರೌಘಕೆ | ವಿಾಸಲರಿಯಾ ಕರ್ಣ ನಿನ್ನೊಡಲೆಂದನಾಶಲ್ಯ || ೨೩ || ಅರಳಿದಂಬುಜದೆಸಳಿನಲಿ ಕಡು | ದುರು ಲಸನ್ಮಧುಕರನವೋಲಾ | ಪರಿಮಳವನುಣಬಲ್ಲುದೇ ಕೇಳ್ ಕರ್ಣನಿನ್ನೊಡನೆ || ನರನ ಸರಿದೂಗುವರೆ ತೋರಿದ | ಪರಿಯಲೆಮ್ಮನು ಹೊಳ್ಳುಗಳೆ ಸಾ| ವಿರವನದರಲಿ ಖಾತಿಗೊಂಡೊಡೆ ರಾಯನಾಣೆಂದ ||೨೪|| ಕ್ಷಣದೊಳೀಗಲೆ ಭೀಮಪಾರ್ಥರ | ರಣದೊಳಗೆ ತೋರುವೆನು ಬಾಳೆಯ | ಹಣಿದವೋಲ್ನಿನ್ನಾಳುಕುದುರೆಯ ಕಾಣಲಹುದೀಗ || ಬಣಗುನೀಭಾರಾಂಕಭಟನೊಡ | ನಣಕಿಸುವೆ ಘಡ ಪಾಡನರಿಯದೆ | ಸೆಣಸಿದೊಡೆ ನೀ ಶೂರನೆಂಬರೆ ಕರ್ಣಕೇಳೆಂದ || ೨೫ || ಜಲಧಿಗಹನವೆ ನ್ನಿನೊಡನೆ ಹೆ | ಕ್ಕಳವಿಗೊದಗುವೆನೆಂದು ವಾಯಸ | ಕುಲ ನುಡಿದು ಹಾರಿದುದು ಹಂಸೆಯ ಕೂಡೆ ಗಗನದಲಿ || ಬಳಿಕ ತಲೆಕೆಳಕಾಗಿ ಸಾಗರ | ದೊಳಗೆ ಬಿದ್ದುದು ಹಂಸೆ ತಂದಿಳೆ | ಗಿಳಿದುದಾಪರಿ ಕಾಕಪೌರುಷಕರ್ಣನೀನೆಂದ || ೨೬ ||

ಆಡಲರಿಯದೆ ಬರಿದೆ ಸೇನೆಯು । ಹೂಡಿ ಹಲಬರಕೊಲಿಸಿ ಬಲವ । ಕ್ಕಾಡಿ ಕುರುಪತಿ ಕಟ್ಟುವಡೆಯು
ನೆ ಚೌಕಮಧ್ಯದಲಿ ॥ ಆಡಿದಾತನೆಗೆಲವನರಸಗೆ । ಮಾಡಿದಾತನೆ ಸಾಕು ಪಾರ್ಥನ । ಕೂಡೆ ನಿನಗಳ
ವಡದು ತೆಗೆ ಮರಳೆಂದನಾಶಲ್ಯ ॥ ೨೭ ॥ ಬರಿಯಪಕ್ಷಭ್ರಮೆಯನಾಡಿದ । ದುರುಪನುಡಿಯೇ ಶಲ್ಯ
ಪಾರ್ಥನ । ನರಿವೆನಾನೆಂದಂಗವಣೆಯನು ಬಲ್ಲನಾಪಾರ್ಥ ॥ ಸರಿಹೃದಯನಿಸ್ಕೂಡನೆ ಸರಿಗಾ । ನೊ
ರಲಲಾರೆನು ಭೀಮಪಾರ್ಥರ । ನೊರಲಿಸುವೆನೀಬಾಣದಲಿ ಮಾದ್ರೇಶ ಕೇಳೆಂದ ॥ ೨೮ ॥ ಝಳದ
ಜೋಡಿಗೆ ಹೆದರ ಸೂರ್ಯನ । ನುಳುಹುವನೆ ಕಲಿರಾಹು ಹಾಹಾ। ನಳನ ಪಕ್ಷಕೆ ಗಂಜುವುದೆ ಜೀಮೂ
ತಸಂದೋಹ ॥ ಫಲುಗುಣನ ಕಣೆಗಣೆಯ ಪವನಜ । ನಳಬಲವಕೈಕೊಂಬ ಕರ್ಣನೆ । ತಿಳಿಯಲಾಮಾ
ದ್ರೇಶ ತನ್ನಯ ಬೆಡೆಯ ಕೇಳೆಂದ ॥ ಪರಶುರಾಮನ ಕಂಡು ಹೊಕ್ಕೆನು । ಗರುಡಿಯನು ವಿಪ್ರಜನೆಂದು
ಕಲಿತೆನು । ವರಧನುರ್ವಿದ್ಯೆಯನು ಪಡೆದನು ದಿವ್ಯಮಾರ್ಗಣವ ॥ ಸುರಪತಿಯು ಬೇಳಂಬನನು ವಿ ।
ಸ್ತರಿಸಲೇತಕೆ ವಜ್ರಕೀಟದೋ । ತ್ಕರವ ಕಳುಹಿದೊಡೆನ್ನ ತೊಡೆಗಳನುಗಿದವಷ್ಟು ಬಳಿಕ ॥೩೦॥ ಅರುಣಜ
ಲವುಬ್ಬೆದ್ದು ಮಗ್ಗುಲ । ನುರವಣಿಸಲಾರಾಮನಿದ್ರಾ । ಭರದಲಿದ್ದವನೆದ್ದು ನೋಡಿದನೆನಗೆ ಕಡುಮು
ಳಿದು ॥ ಧರಣಿಸುರ ನೀನೆಂದು ತಕ್ಕಿಸಿ । ಶರನಬೇಡಿದೆ ಕಾಳಗದೊಳೀ । ಶರ ನಿರರ್ಥಕವಾಗಲೆಂದನು
ಶಾಪಹಸ್ತದಲಿ ॥ ೩೧ ॥ ಅದರನೀದಿವ್ಯಾಸ್ತ್ರಕಾಳಗ । ಕೊದಗಲರಿಯವು ಶಲ್ಯ ಪಾರ್ಥನ । ಸದೆವು
ದೇನರಿದಲ್ಲ ಕುರುಪತಿ ಪುಣ್ಯಹೀನನಲೆ॥ ಇದು ನಿಧಾನವು ಬಾಣ ಮತ್ತೆನ। ಗೊದಗುವವು ಬೇರುಂಟು
ನೃಪಗ । ಭ್ಯುದಯವುಳ್ಳೊಡೆ ಗೆಲುವನಹಿತರನೆಂದನಾಕರ್ಣ ॥ ೩೨ ॥ ಅರಸನಭ್ಯುದಯವನು ನೀನ
ಧಿ । ಕರಿಸಿ ಗೆಲುವೊಡೆ ನಿನ್ನ ಹಂಗೇ । ಕರಿಗಳನು ಜೈಸುವರು ನಿನ್ನಿಂಚಮರಧಾರಿಗಳು ॥ ಸೊರಹ
ರು ಸಾಕತ್ತ ಹಾಗಿತು । ಪರಶುರಾಮನ ಶಾಪಗಡ ಮರು । ಳರಸುಕೌರವ ನಿನ್ನ ಸಾಕಿದನೆಂದನಾಶಲ್ಯ॥
ಕುಲಕೆ ಸೇರುವಮಾತುಮಾತಿನ । ಬಳಿಗೆ ಹೊಲುವ ಬಾಹುಬಲಭುಜ । ಬಲದ ತೂಕದ ಕೀರ್ತಿಕೀರ್ತಿ
ಗೆಸರಿಯೆ ಪರಲೋಕ॥ ಇಳೆಯೊಳಗೆ ನಿನಗಲ್ಲದಾರಿಗೆ । ಫಲಿಸುವುದು ಘಡ ಸೂತಸುತ ನಿ । ರ್ಮಳವು
ರುಷ ನಿನ್ನಂಗದೇಶದ ವಿಧಿಯ ಕೇಳೆಂದ ॥ ೩೪॥ ವೇದಧರ್ಮವಿರೋಧಿಗಳು ಪರ । ವಾದಶೀಲರು ವ
ರ್ಣಜಾತಿವಿ । ಭೇದಹೀನರು ಸಾರಸಪ್ತವ್ಯಸನಸಂಗತರು ॥ ಕಾದುವರು ಬೆನ್ನಲ್ಲಿ ಗೆಲುವರು । ಪಾದದ
ಲಿಪರಬಲವನಿರಿವರು । ಬೀದಿಯಲಿ ನಿನ್ನಂಗದೇಶದ ವಿಧಿಯ ಕೇಳೆಂದ ॥ ೩೫ ॥ ನಿನಗೆಸಾರಥಿಯಾದ
ಬಾಹಿರ । ತನವೆ ಸಾಲದೆ ಬೇರೆ ಮತ್ತಿ । ನ್ನಿನಗೆ ತಲೆಗುತ್ತಾವುದೆನುತವೆ ಬಿಸುಟವಾಘೆಯನು ॥ ಮ
ನಕತದ ಮೋರೆಯಲಿ ತತ್ಸ್ಯಂ । ದನವನಿಳಿಯಲು ಭಂಡ ಘಡ ಹೋ । ಗೆನುತ ಕಮಗವ ಜಡಿದು ನು
ಡಿದನು ಭಾನುಸುತ ಮುಳಿದು ॥ ೩೬ ॥ ಒಡೆದು ತಲೆಯನು ನಿನ್ನರಕುತವ । ಕುಡಿಸುವೆನು ಕೂರಸಿಗೆ
ಪವನಜ । ನೊಡಲನೆತ್ತರ ತುಂಬುವೆನು ಪಾರ್ಥನಕಪಾಲದಲಿ ॥ ಮಿಡುಕಬಾರದಲೇ ಸುಯೋಧನ ।
ತೊಡಗಿದಗ್ಗದರಾಜಕಾರ್ಯವು । ಕೆಡುವುದೆಂದೇ ನಿನ್ನನುಳುಹಿದೆನೆಂದನಾಕರ್ಣ ॥ ೩೭ ॥ ಬಳಗೆ ಗ
ಜಬಜವಾಯ್ತು ಶಲ್ಯನ । ಬಲುಭಟರು ಮುಕ್ಕುರಿಕಿದರು ಕುರು । ಬಲದ ನೃಪಮುಖ್ಯಾಡಿತಲ್ಲಿಯದ
ಲ್ಲಿ ಗುಜುಗುಜಿಸಿ ॥ ಬಳಿಕ ಕೌರವರಾಯ ಹರಿತಂ । ದಿಳಿದುವಾರುವನಿಂದ ಗುಣವಲಿ । ತಿಳುಹಿ ಶಲ್ಯನ
ಬೇಡಿಕೊಂಡನು ರಥಕೆ ಮರಳಿಚಿದ ॥ ೩೮ ॥ ನುಡಿದು ಕರ್ಣನ ತಿಳುಹಿ ಶಲ್ಯನ । ನೊಡಬಡಿಸಿ ರವಿ

ಸುತನಂಘ್ರಿಗೆ । ಕೆಡಹಿ ಮಾದ್ರೇಶನ ಮನಸ್ತಾಪವನು ನೆರೆಬಿಡಿಸಿ॥ ಕಡೆಹದಂಬುಧಿಯಂತೆ ವಾದ್ಯದ । ಗಡಣ ಮೆರೆದುದು ವಿಳಯಸಮಯದ । ಸಿಡಿಲವೊಲು ಸೂಳೈಸಿದವು ನಿಸ್ಸಾಳಕೋಟಿಗಳು ॥ ೩೯ ॥

ಅಂತು ಸಂಧಿ ೯ಕ್ಕೆ ಪದ ೩೧೬ಕ್ಕಂ ಮಂಗಳಮಸ್ತು.



## ಹತ್ತನೆಯ ಸಂಧಿ.

ಸೂಚನೆ ॥ ರಾಯದಳ ಹಳಚಿದುದು ಕಲಿಕಾ । ಧೇಯನೊಳು ಸಂಕುಳದೊಳೊದಗಿದ।ವಾಯುಸುತ ಸಮರದಲಿ ಕೊಂದನು ಕರ್ಣನಂದನನ ॥

॥ ಪದ ॥ ಕೇಳು ಧೃತರಾಷ್ಟ್ರಾವನಿಪ ತ । ವ್ಮಾಳಮೇಳಾಪದಲಿ ಪಾಂಡುನೃ । ಪಾಲಕರ ದಳ ನಡೆದು ಬಂದುದು ಭೂರಿರಭಸದಲಿ ॥ ಆಳೊಳಗ್ಗಳೆಯರಿಗೆ ಕೊಟ್ಟನು । ವೀಳೆಯವ ಸಾತ್ಕರ್ಣನತಿರಥ ಬಾಲವನು ಕರೆಕರೆದು ನಿಲಿಸಿದನೆರಡುಪಕ್ಕದಲಿ ॥ ೧ ॥ ಗುರುಸುತನ ಕೂಡೆಂಟುಸಾವಿರ । ವರ ಮಹಾರಥರೈದುಸಾವಿರ । ಕರಿಘಟೆಯುದಿಪ್ಪತ್ತುಸಾವಿರತುರಗದತಿರಥರು ॥ ಧರಣಿಪತಿ ಕೃತವರ್ಮ ಕೃಪರು । ನ್ನೆರೆದುಸಾವಿರರಥಸಹಿತ ಮೋ। ಹರಿಸಿದರು ಬಲವಂಕದಲಿ ದಳಪತಿಯ ನೇಮದಲಿ ॥ ೨ ॥ ರಾಯಘಟ್ಟನಲೆರಡುಬಾಹೆಯು । ನಾಯಕರು ಸಂಶಪ್ತಕರು ವಿವಿ । ಧಾಯುಧದ ಕಾಂಭೋಜಬರ್ಬರೆಯವನಬೋಟಕರು॥ ನಾಯಕದ ಕಿವಿಪರೆಗೆ ತೆಗಹಿನ।ಲಾಯುಧವತೆಗೆವೆರಡುಬಾಹೆಯು। ರಾಯನನು ಜರು ರಂಚಿಸಿತು ದುಶ್ಶಾಸನಾದಿಗಳು ॥ ೩ ॥ ಘಟ್ಟನೆಡವಂಕದಲಿ ಹಗೆಗರ । ಗೆಟ್ಟನಿಂದರು ಕುರುಬಲದ ಜಗ । ಜಟ್ಟಿಗಳು ವೃಷಸೇನಚಿತ್ರಕಸೇನಶಕುನಿಗಳು ॥ ಬೆಟ್ಟಬೀಳಲುವೆರದಪೆನೆ ಕೈ । ಮುಟ್ಟಿ ಮುಯಿಯನ ನಂತಿಸುಟೆ ನಾ। ಲಿಟ್ಟುದೆತ್ತಣಸೇನೆಯೋ ನಾನರಿಯೆನಿದನೆಂದ ॥ ೪ ॥ ಅನಟೇನಂದನನ ಸಮರಟ । ಸೇನೆಸವೆದುದನಂತಬಳಿಕಿನ । ಸೇನೆ ಗುರುಸೋಂಪಿಲ್ಲದಿರ್ದುದು ದ್ರೋಣಯುದ್ಧದಲಿ ॥ ಏನನೆಂಬೆನು ಜೀಯ ಮತ್ತೀ । ಭಾನುತನಯನ ಕದನಕೊದಗಿದ । ಸೇನೆ ಸಂಖ್ಯಾತೀತವೆಂದನು ಸಂಜಯನು ನೃಪಗೆ ॥ ೫ ॥ ಒಡ್ಡಿತೀಬಲರಿಪುಭಟರು ಮಾ । ರೊಡ್ಡ ಮೆರೆದೆರು ತಮ್ಮ ನೆರವಿಯೊ । ಳೊಡ್ಡಿಗೊಬ್ಬರ ಕರೆದು ಪರುಠವಿಸಿದನು ಮುರವೈರಿ ॥ ಒಡ್ಡಿನೆಡದಲಿ ಭೀಮಸಾಬಲ । ದೊಡ್ಡಿನಲಿ ಕಲಿಪಾರ್ಥದಳಪತಿ। ಯೊಡ್ಡಿನಲಿ ನಿಂದಾಯುಧಿಷ್ಠಿರರಾಯ ದಳಸಹಿತ ॥೬॥ ಈಮಹಾಮೋಹರವ ನತಿನಿ । ಸ್ಸೀಮರಾಂತುದು ಮೂವರೇಬಳಿ । ಕಾಮಹಾರಥರಾಜಿಯಡಗಿತ್ತವರರಶ್ಮಿಯಲಿ ॥ ಸೋಮಸೂರ್ಯಾಗ್ನಿಗಳಳೋಚಾರು । ದ್ದಾಮತೇಜಸ್ಸುಗಳು ಕೆಲಬರು । ಭೂಮಿಪತಿ ಹೇಳೆಂದು ನುಡಿದನು ಸಂಜಯನು ನಗುತ ॥೭॥ ಎರಡು ಬಲವುಬ್ಬೆದ್ದುದದರೊಳು । ಮೊರೆವ ಭೇರಿಯ ಭಟರ ಬೊಬ್ಬೆಯ । ಕರಿಯಗರ್ಜನೆ ಹಯದ ಹೇಷಾರವದ ಹಲ್ಲಣೆಯ ॥ ಜರೆವಕಹಳೆಯ ರೂಢಿಸುವಚ । ಜ್ಜರದ ಡಿಂಡಿಮಪಟಹನಾಳನವ । ಘರಘುರವ ದನಿಧೈರ್ಯಗೆಡಿಸಿತು ಸಕಲಸಾಗರವ ॥ ೮ ॥ ಬೆರಸಿದವು ದಳ ನೆರೆನು ಮೊಕ್ಕವು । ಕರಿಘಟೆಗಳೇರಿದವು ಕುರುರೆಗ । ಳುರವಣಿಸಿ ತೇರುಗಳು ಕವಿದುದು ಹೊಂತ

ಕಾರಿಗಳು ॥ ಉರುಳ್ದತಲೆಗಳ ಬಸಿವಮಿದುಳಿನ । ಸುರಿವಕರುಳಿನ ಸೂಸಿದೆಲುವಿನ। ಹೊರಳಿ ಮುಂಡದ ರೌದ್ರರಸ ರಂಜಿಸಿತು ಚೂಣಿಯಲಿ ॥೯॥ ಜೋಡನೊಡೆದವಮುಖಪದಿ ರಕುತನ । ತೋಡಿದವು ಕೂರಂಬುಸಬಳದ । ನೀಡುಮೊನೆನಿಡುಗರುಳನೆಂಚಲಿಸಿದವು ಪಟುಭಟರ ॥ ಬೇಡರಸ ಬೆನ್ನೀಯನೆತ್ತಿಯ ಬೀಡಿ ಬಿರಿಯಲು ಬಿದ್ದಲೌಡಿಗ । ಕೀಡಿರಿದವೈ ಚಾತುರಂಗದ ಚಪಳಚೂಣಿಯಲಿ ॥೧೦॥ ತೆಗೆಯಹೇಳೋ ಕಾಳಗದಕಾ ॥ ತುಗವನೋಡುವೊಡಿತ್ತ ದೊರೆಗಳು । ಹೊಗಲಿ ದಳನಾಯಕರು ನುಗ್ಗಿನ ಗಾಯಕಳುಕರಲಾ ॥ ವಿಗಡ ಭೀಮಾರ್ಜುನರ ನೆತ್ತಿಯ । ನುಗಿ ಕರುಳನೆನುತುಬ್ಬರವಬೊ । ಬ್ಬೆಗಳ ಬಿರುದರು ಕೆಣಕಿದರು ಸಂಶಪ್ತಕರು ನರನ ॥೧೧॥ ರಾಯಸಾವೆಡೆ ಕೌರವೇಂದ್ರನ । ದಾಯಿಗಳ ಬರಹೇಳು ಭೇದೋ । ಪಾಯ ಕೊಳ್ಳದು ನಿಮ್ಮ ಭೀಷ್ಮದ್ರೋಣರಾವಲ್ಲ ॥ ಕಾಯುವೆನು ಕೈಮುಗಿದರಾದೊಡೆ। ಸಾಯಬಲ್ಲರೆ ತಿರುವನೊದೆಯಲಿ।ಸಾಯಕದ ಹಿಳುಕೆನುತ ಬಿಟ್ಟನು ರಾಯಮೋಹರಕೆ॥೧೨॥ ಬಿಟ್ಟಸೂಠಿಯಲಗಿವಕರ್ಣನ । ಥಟ್ಟಣೆಯ ಕಂಡನಿಲಸುತನಡ । ಗಟ್ಟಿದನು ಹದಿನೆಂಟುಸಾವಿರರಥಿಕರೊಗ್ಗಿನಲಿ ॥ ಇಟ್ಟಣಿಸಿ ಬರೆ ರವಿತಸುತನ ಕೈ । ಮುಟ್ಟಲೀಸದೆ ಕೌರವೇಂದ್ರನ। ಥಟ್ಟನಲಿ ಮೂವತ್ತುಸಾವಿರಕರಿಗಳೌಕಿದವು ॥ ೧೩ ॥ ಕರಿಘಟೆಯಲಾನಮ್ಮಪುಣ್ಯದ । ಪದಾತಿಯಲಾನಮ್ಮ ರಥಿಕರು । ಸರಳಸೂಸದೆ ಸೈರಸುವೊಡರೆಗಳಿಗೆಮಾತ್ರದಲಿ ॥ ಅರಿಹರಣ್ಯಾನ ಬಲಕೆ ನರಕೇ । ಸಂಯುಪಾಡೆನಿಸುವೆನು ಕಣ್ಣವೆ । ಮರೆಗೆಮುರಿವೆನೆನುತ್ತ ಹೊಕ್ಕನು ಭೀಮ ಗಜಬಲವ ॥ ೧೪ ॥ ಬಿಂದವೀತನಸಿಂಹನಾದಕೆ । ಕರಿಗಳೆದೆ ಬಲುಗದೆಯ ಗಾಯಕೆ । ತಿರುಗಿಕೋಡಡಿಯಾಗಿ ಕೆಡೆದವು ಮಡಿದವಾಕ್ಷಣಕೆ ॥ ಉರುಳಿದವು ಪರ್ವತದವಜ್ರದ । ಸರಿಸಹೋರಟೆ ಕಾಣಲಾದುದು। ಕರಿಘಟೆಯುಪವನಜನ ರಣದಲಿ ರಾಯಕೇಳೆಂದ ॥ ೧೫ ॥ ನೀಲಗಿರಿಗಳ ನೆಮ್ಮಿ ಘನವೋ । ಘಾಳಿ ಸುರಿಸುತ್ತಿಹ ಮಳೆಯನೆನೆ ಶರ। ಜಾಲ ಕವಿದವು ಗಜದ ಜೋದರ ಜಡಿವಜೋಡಿಯಲಿ॥ ಕೋಲುಕೊಂಬನೆ ಭೀಮ ಸಿಡಿಲುರಿ । ನಾಲಗೆಗೆ ನೀರೇರುವುದೆ ಮೇ । ಲಾಳ ಮುರಿದನು ವಿವಿಧಶಸ್ತ್ರಾಸ್ತ್ರಪ್ರಹಾರದಲಿ ॥ ೧೬ ॥ ಕರಿಯ ಭರಿಕೈಜೋದರೆಸುಗೆಯ । ಕರ ಮಹಾಂಕುಶದವರ ಕೈಕ । ತ್ತರಿಸಲೊಂದೇಸದಳನೆಚ್ಚನು ಮತ್ತೆ ಗದೆಗೊಂಡು ॥ ತಿರುಗಿ ಹೊಯ್ದೊಡೆಜೋದರುರವಾ । ಕರಿಯೊಡಲುಸವು ಸೀಳಸೀಳಿ । ತ್ತರಸ ಬಣ್ಣಿಸಲಾರು ಬಲ್ಲರು ಭೀಮನುರವಣೆಯ ॥ ೧೭ ॥ ಹಿಂಡೊಡೆದು ಗಜಸೇನೆ ಮುಂಮುಳಿ । ಗೊಂಡು ಮುರಿದುದು ಮುಳಿದು ಭೀಮನ । ಗಂಡುಗೆಡಿಸುವರಿಲ್ಲಲಾ ಕೌರವರ ವೀರರಲಿ ॥ ಅಂಡುಗೊಂಡೊಡೆ ವಿಗಡಬಿರುದಿನ । ಭಂಡರಕಟಾಯೆನುತ ನಿಜಕೋದಂಡವನು ಧ್ವನಿಮಾಡುತಶ್ವತ್ಥಾಮನಿದಿರಾದ ॥೧೮॥ ಎಲೆಲೆ ರಾಯನತಮ್ಮನೋ ಗಜ । ಬಲದೊಡನೆ ಬಳಲಿದನು ಗುರುಸುತ । ನಳವು ಹಿರಿದೋ ಸ್ವಾಮಿದ್ರೋಹರ ನೂಕುನೂಕೆನುತ ॥ ಉಲಿಯೆ ದೃಷ್ಟದ್ಯುಮ್ನನೆಯು ಪಡಿ । ತಳಿಸಿನೂಕಿತು ಭೀಮಸೇನನ । ನೆಲನ ಕೊಂದರು ಕಡುಹಿನಲಿ ಪಾಂಚಾಲನಾಯಕರು ॥ ೧೯ ॥ ಮರುಗದಿರಿ ಪಾಂಚಾಲರಾಯನ । ಮರಿಗಳಿ ರತಪ್ಪೇನು ಭೀಮಂ। ಗುರುವದೊರೆ ಸೊಂಪಾಗಲಾತಿರೆ ನೀವು ಕಾದುವರೆ॥ ಅರಿವೆವಾದೊಡೆಯನುತ ಬಾಣವ । ತಿರುವಲಾನಿಮಿಷದಲಿ ಸಂದನು । ಗುರುಸುತನ ಹಿಂದಿಕ್ಕಿ ಪಾಂಚಾಲರಲಿ ಕಲಿಕರ್ಣ ॥ ೨೦ ॥ ಕ್ಷಮಿಸುವುಯ ಗುರುಸೂನು ರಣದಲಿ । ನಿಮಿಷ ಚಿತ್ತೈಸುವುದು ಧೈರ್ಯ । ಭ್ರಮಿ

ತರಲಿ ಪಾಂಚಾಲರನು ಬರಿಕೈದುತೋರುವೆನು ॥ ದ್ಯುಮಣಿಪರಿಯಂತೇಕೆ ರಶ್ಮಿಗೆ । ತಿಮಿರವಿದಿರೇ ನೀವು ನೋಟಕೆ । ನಮಗೆ ರಣದೆಖ್ಖಾಳವೆಂದನು ಕರ್ಣ ಗುರುಸುತನ ॥ ೨೧ ॥ ಬಳಿಕ ಹೇಳುವುದೇನು ರಣದ। ಗ್ಗಳೆಯರೀತನ ಮುತ್ತಿದರು ಕೈ । ಚಳಕಿಗರು ಕಪಿದೆಚ್ಚರೀತನನೆಂಟುದೆಸೆಗಳಲಿ ॥ ಉಳಿತಜಲಧರಪಟಲಜಠರದೊ । ಳಿಳಿದರವಿಮಂಡಲದವೋಲರೆಗಳಿಗೆ ಕರ್ಣನ ಕಾಣೆನೈ ನರನಾಥ ಕೇಳೆಂದ ॥ ೨೨ ॥ ಗಾಳಿಯೆತ್ತಲು ಗಾಡಿಸಿದಮೇ । ಘಾಳಿಯೆತ್ತಲು ವೈರಿಸೇನೆಯು । ಲಾಳಗಡಿತರ ನೊರೆಯನೆತ್ತರು ನೂರುಕುದುರೆಗಳ ॥ ಏಳಿಗೆಯುಲಾಥತ್ರಚಮರದ । ಜಾಲನನೆದವು ಕರ್ಣನಂಬಿನ। ಕೋಲಕರೆದೊಡನೊಡನೆ ಕೊಂದನು ಕೋಟಿಸಂಖ್ಯೆಗಳ ॥ ೨೩ ॥ ಮೇಲೆ ಬಿದ್ದುದು ಮತ್ತೆರಿಪುಪಾಂ । ಚಾಲಬಲ ಸಾವುದಕೆ ಕಡೆಯಿ । ಲ್ಲಾಳಬರಹಿಗ್ಗರಿಹೆನಾನವಸಾನವನು ಮರಳೆ ॥ ಕೋಲುಗಳ ತೆಗೆದೆಸುವೆನೋ ಶರ । ಜಾಲವನು ಜಡಿಯೊಡೆವೆನೋ ಹಗೆ । ಯಾಳಬಿದ್ದುದಕಾಬೆನೆಸುಗೆಯು ಕಾಣೆ ತಾನೆಂದ ॥ ೨೪ ॥ ವೈರಿಪಾಂಚಾಲಕರೊಳೈವರು । ಧಾರಿಣೀಶ್ವರರಸುವ ಬಿಟ್ಟರು । ಚಾರುಚಾಪದ ಚಾತುರಂಗದ ಲಯದ ನಿರ್ಣಯವ॥ಆರು ಬಲ್ಲರು ಖಾತಿಯಲಿ ಜ । ಜ್ಝಾರರೆದ್ದುದು ಮತ್ತೆ ಸಕಲಮ। ಹಾರಥರು ನೂಕಿದರು ಲಗ್ಗೆಯ ಉಳಿಯ ಲಹರಿಯಲಿ ॥ ೨೫ ॥ ನಕುಲದೃಷ್ಟದ್ಯುಮ್ನಸುತಸೋ । ಮಕಶಿಖಂಡಿಯುಧಾಮನ್ಯೂತ್ತಮವರಸಾ। ತ್ಯಕಿಶತಾನೀಕಾದಿಪ್ರತಿವಿಂಧ್ಯಕರುಶ್ರುತಕೀರ್ತಿ ॥ ಸಕಲಬಲಕೈಕೇಯ ಪಾಂಡ್ಯರು । ಭ್ರುಕುಟಿಮುಖಭೀಷಣರು ಶಿಶುಪಾ । ಲಕಸುತರು ಸಹದೇವಮೊದಲಾಗೈದಿತೊಗ್ಗಿನಲಿ ॥ ೨೬ ॥ ಭೀಮಫಲುಗುಣಕೃಷ್ಣಧರ್ಮಜ । ರೀಮಹಾರಥರೆಲ್ಲರೀತನ । ಸೀಮೆಯುವಳಯಿಯ ಮೀರಿ ಕವಿದುದು ಕರ್ಣನಿದಿರಿನಲಿ ॥ ಆಮಹಾಮಹಿಮರು ಸಮಸ್ತಸ । ನಾಮರುದ್ಧರು ಕರ್ಣನೊ। ಬ್ಬನ । ಕಾಮಿಸಿದರೈ ಕದನ ಕ್ಷಿತಿಪಾಲ ಕೇಳೆಂದ ॥ ೨೭ ॥ ಉರಿಯುವೆಡೆಗಳಲೀಪತಂಗದ । ಸರಕು ಮಾರದೆಮಾಣ್ಬುದೇಬ । ಷ್ಟರದಲೈತಂದೀಮಹಾರಥರಾಜರವಿಸುತನ ॥ ಕೆರಳಿಚಿದರೈ ಕೇಣವಿಲ್ಲದೆ ಉರುಬಿದರು ಬೆರಸಿದರು ಮಿಗೆ ಹೊಡ।ಕರಿಸಿದರು ಹೊಯ್ದರು ವಿಭಾಡಿಸಿದರು ವಿಘಾತಿಯಲಿ॥೨೮॥ ತಮ್ಮಬಲುಮೆಯುನವರುತೋರಿದ । ಡೊಮ್ಮೆಮೊಗೆದನು ಬಳಿಕ ರಾಯನ । ಸೊಮ್ಮಿನವರಲಿ ಸೀಳಿದನು ಹದಿನೆಂಟುಸಾವಿರವ ॥ ಹಮ್ಮುಗೆಯು ಕೈಮನದ ಹೊಣಕೆಯು । ಹಮ್ಮಿದುಬ್ಬಟೆಯುಂದು ಪಾರ್ಥನ । ತಮ್ಮದಿರ ಸಾಹಸಿಕೆ ಸೇರಿದುದೈ ಪಲಾಯನವ ॥೨೯॥ ರಥ ಮುರಿದು ಬಲುಗಾಯದಲಿ ಸಾವ್ಯ ಥಿಕಸಾತ್ಯಕಿ ಹಿಂಗಿದನುಸಾ । ರಥಿಗಳಳವಿನಲೋಡಿದರು ಸುತಸೋಮಕಾದಿಗಳು॥ ಪೃಥಿವಿಗೊರಗಿತು ನಾಲ್ಕುಸಾವಿರ । ರಥಗಳುಳಿದಪದಾತಿಗಜಹಯ । ರಥವ ಕೆಡಹಿದನೆನಿತನೆಂಬುದನರಿಯೆನಾನೆಂದ॥೩೦॥ ಮುರಿದು ಮತ್ತೆ ಮಹಾರಥರು ಸಂ । ವರಿಸಿಕೊಂಡು ಶಿಖಂಡಿಸಾತ್ಯಕಿ । ವರನಕುಲಸಹದೇವದೃಷ್ಟದ್ಯುಮ್ನಸೃಂಜಯರು ॥ ಸರಳಬಿರುಬಿನಭಾಯಬೈಗುಳ। ಬಿರುದುಕಹಳೆಯ ವಾದ್ಯತತಿಯ । ಬ್ಬರಿಸಿ ಕವಿದುದು ಕರ್ಣನಾವೆಡೆ ತೋರುತೋರೆನುತ ॥ ೩೧ ॥ ನುಸಿಗಳಿರ ನಿಮಗೇಕೆ ಕರ್ಣನ । ಗಸಣಿ ಹೋಬೇ ನಿಮ್ಮ ನೆತ್ತಿಯ । ಮುಸಲವಲ್ಲಾ ಘಡ ನಕುಲ ಸಹದೇವ ನಿಲ್ಲೆನುತ ॥ ಮುಸುಡಹೊಗರಿನ ಕಣ್ಣಕೆಂಪಿನ । ವಿಷಮತುರಗದ ಕರ್ಣತನುಜರು । ಮಸಗಿ ಮುಂಚುವ ಮೋಹರವನಡಹಾಯ್ದು ತರುಬಿದರು ॥ ೩೨ ॥ ಏನ ಹೇಳುವೆನವರ ಶರಸಂ । ಧಾನಸೌರಂಭವನು ಕಲಿವೃಷ । ಸೇನವೀರಸು

ಷೇಣರೆಚ್ಚರು ವಿರಾಧಿದತಿರಥರ ॥ ಭಾನುಸುತನಿಂದೆಂಟುಮಡಿಯುಸ । ಘಾನಬಲರೋ ವೃಂತುಮುಯು ಯೆನು । ತಾನಿಖಿಳರಥಿಕಾಳಿ ಕವಿದುದು ಮತ್ತೆ ಸಂದಣಿಸಿ ॥ ೩೩ ॥ ಕಡಿದು ಬಿಸುಟರು ತೇರುಗಳನ ಡ । ಗೆಡಹಿದರು ಹೇರಾನೆಗಳ ಕೆಲ । ಕಡೆಯಲೌಕಿದರಾವುತರ ರಚಿಸಿದರು ರಕುತವಲಿ ॥ ತುಡುಕಿದರೆ ಕಾಲಾಳನಪ್ಪಿಯು ನುಡಿಯಲಲರಿಯನು ಕರ್ಣತನುಜರ। ಕಡುಹುನಕುಲಾದಿಗಳ ಬೆವರಿಸಿತರಸ ಕೇಳೆಂದ ॥ ೩೪ ॥ ತಿರುಗಿ ನೋಡಿದ ಭೀಮನೀತರು । ವರಿಗಳನು ಕೊಂಡಾಡಿ ಕಾದುವ । ದೊರೆಗಳಹನಕುಲಾದಿಗಳ ತೆಗೆ ಹೇಳುಹೇಳೆನುತ ॥ ಸರಳ ಕೆನ್ನಾಯ ಬಿಗಿದಹುಬ್ಬಿನ । ಮುರಿದಮಿಸೆಯಸೌಡುಗಚ್ಚಿನ । ಕುರುಕುಲಾಂತಕಭೀಮ ಹೊಕ್ಕನು ಬಿಟ್ಟಸೂಠಿಯಲಿ ॥ ೩೫ ॥ ರಾಯದಳದಲಿ ಸೇಣಸಲಿದು ಕ । ಜ್ಜಾಯಮೇ ಮಕ್ಕಳಿರ ಕರುಣಿಸಿ। ಕಾಯಿದೆನು ಬಳಿಕೇನು ನಿಮ್ಮಂಗವಣೆ ಲೇಸೆನುತ॥ ಸಾಯಲೊಲ್ಲದೆ ಹಿಂಗಿ ನಿಮ್ಮನು । ನೋಯಿಸುವರಾವಲ್ಲ ಸೇನಾ । ನಾಯಕನು ನಿಮ್ಮಯ್ಯನಾತನ ಕಳುಹಿ ಸಾಕೆಂದ ॥ ೩೬ ॥ ಮರುಳಲಾ ಪವಮಾನಸುತ ನಿ । ನ್ನೊರೆಗೆವರೆ ಸಂತೂಕತೂಕಕೆ । ಸರಿಸವಾವಿರೆ ಕರ್ಣ ಪರಿಯಂತೇಕೆ ಬಹುಮಾತು ॥ ತರಣಿಬಿಂಬದ ತತಿಗಳನು ಮಿಗೆ । ತುಸಿತೋರುವ ತಿಮಿರವುಂಟೇ । ಸರಳ ತೋರೈತೋರೆನುತ ತೆಗೆದೆಚ್ಚನನಿಲಜನ ॥ ೩೭ ॥ ಗಳಹತನವಿದು ನಿಮ್ಮತಂದೆಯು । ಗಳಿಸಿದ ರ್ಥವ ನಿಮ್ಮಬೀಯಕೆ । ಬಳಸುವಿರಿ ತಪ್ಪಾವುದೆನುತೆಚ್ಚಂಬಹರಿಗಡಿಮ ॥ ಹಿಳುಕ ಕವಿಸಿದನಾತ ನಾತನ । ಹಿಳುಕಮುರಿದೊಡನೊಡನೆ ಭೀಮನ । ಮುಳುಗಿಸಿದರೈಕರ್ಣನಂದನರರಸ ಕೇಳೆಂದ ॥೩೮॥ ಬಾಲರೆಂದಾಂಮನ್ನಿಸಿದೊಡೆ ಛ । ಡಾಳಿಸಿತೆ ಚಪಳತ್ವವಾಗಲಿ । ಖೂಳರಾವ್ರೆಸಲೆಯೆನುತ ನಾರಾಚ ನಿಕರದಲಿ ॥ ಬೀಳಲಚ್ಚನು ರಥವ ಗಜಹಯ । ಜಾಲವನು ಸಾರಥಿಗಳನು ಬಳಿ । ಗೋಲಿನಲಿ ಕರ್ಣಾತ್ಮಜನ ಕಡೆಯಚ್ಚ ಬೊಬ್ಬಿರಿದ ॥೩೯॥ ಕೆಡದ ವೀರಸುಷೇಣನವನಿಗೆ [illegible]ಸುಡಮುರಿದ ವೃಷಸೇನಸೇನಯ । ಗಡಣ ಬಿದ್ದುದು ಕಿರಿದುಕಿರಿದೊಡೆ ಮುರಿದು ತಮತಮಗೆ ॥ ಪೊಡವಿಪನ ಮುಂದೊದರಲ ತಿವಂ । ಗಡದಲೈದಿತು ವೀರಭಟರು । ಗ್ಗಡದಕಹಳಾರವದ ಲಗ್ಗೆಯಲಹು ತನಿಮಸಗ ॥ ೪೦ ॥ ತ್ರಿವಶಿನಂ ಕರ್ಣಾತ್ಮಜನು ಮಡಿ। ದವನೊ ದಳಪತಿಯುಳಿವನೋ ಕೌರವನ ಕೇಡೋ ಹಾಯೆನುತ ಕುರುಸೇನೆ ಕಳವಳಿಸೆ ॥ ಕವಿದುದಶ್ವತ್ಥಾಮಕೃಪಕೌ । ರವಶಕುನಿದುಶ್ಶಾಸನಾದಿಗ । ಳವಗಡಿಸಲನಿಬರನು ತೊಲಗಿಸಿ ಕರ್ಣನಿದಿರಾದ ॥೪೧॥ ಆತುಕೊಳ್ಳೈ ಭ್ರೂಣಹತ್ಯಾ । ಪಾತಕಿಯೆ ಪರಿಹಂಸು ವಿಶಿಖ। ವ್ರಾತವಿದೆ ಯೆನುತೆಚ್ಚ ರವಿಸುತನನಿಲನಂದನನ ॥ ಆತುಕೊಂಬರೆ ಸರಿಸನಲ್ಲ ಕು । ಜಾತಿ ನೀ ಪರಿಭವಿಸುವರೆ ಘಡ । ಸೂತನಂದನ ಯೆನುತ ಕರ್ಣನನೆಚ್ಚನಾಭೀಮ ॥೪೨॥ ಎಚ್ಚನೊಡನೊಡೆಯೆಚ್ಚರಡೆಯಲಿ ಕೊಚ್ಚಿದನು ಕಲಿಕರ್ಣನಾತನ । ನೆಚ್ಚನಂಬಿನಮೇಲೆ ಮೇಲಂಬುಗಳ ವಹಿಲದಲಿ ॥ ಎಚ್ಚ ಕವಿಸಿದೊದದನು ಪವನಜ।ನೆಚ್ಚೊಡದ ಪರಿಹಂಸಿ ರವಿಸುತ।ನೆಚ್ಚ ರಬ್ಬರು ಕಾದಿದರು ಕೈಮೈಯ ಮನ್ನಿಸದೆ ॥೪೩॥ ಭಾರಿಯಂಕವೊ ದಳಪತಿಗೆ ಪಡಿ । ಸಾರಿಕೆಯ ಭಟರಿಲ್ಲಲಾ ಪರಿ । ವಾರಕಿದು ಪಂಥವೆಯೆನುತ ಕುರುರಾಯ ಮೂದಲಿಸೆ ॥ ಕೂರಲಗನಂಬುಗಿಯೆ ಬಿಳಿಯಮ । ಹಾರಥರ ಕೈವೀಸಿ ರವಿಸುತ। ಸಾರೆನುತ ಕೆಣಕಿದನು ದುಶ್ಶಾಸನನು ಪವನಜನ ॥ ೪೪ ॥ ಎಲವೊ ಕರ್ಣಾತ್ಮಜನ ಹೊಯ್ದು । ಗಳಿಕೆಯಲಿ ಹೊರೆಯೇರದಿರು ಪಡಿ। ಬಲಕೆ ಕರೆಸಾಕೃಷ್ಣಪಾರ್ಥರ ನಿನ್ನೊಳೇನಹುದು॥ ಬಳಿಯ ಬಿ

ನುಗಿನ ಬಿಂಕ ನಿನ್ನಯ । ತಲೆಗೆ ತಹುದಾವರಿಯನೆನುತತಿ । ಬಳಸನೆಚ್ಚನು ನಿನ್ನನಂದನನರಸ ಕೇಳೆಂದ ॥೪೫॥ ಟಗರು ಮುರಿಪೆಳಿದೊಡೆ ತೋಳನು । ತೆಗೆದು ಜೀವಿಸಿ ನಿಲುವುದೇ ನಾ । ಲಗೆಯ ವೀರರು ನೀವು ಮೂಢರು ಸಾವು ಸುಡಿಗಳಲಿ ॥ ಉಗಿದಡಾಯುಧವೊನೆಯ ತುದಿಸಾ । ಲಗೆಗಳಲಿ ಮಾತಾಡಬಲ್ಲರೆ । ಸೊಗಸುವೆವು ಸಾಪೆನುತ ಪವನಜನಚ್ಚ ನಂನ್ನೃಪನ ॥ ೪೬ ॥ ಪವನಸುತನೆಚ್ಚಂಬನುರೆ ಕಡಿ । ದವಿರಳಾಸ್ತ್ರನೀತ ಕವಿಸಿದ । ನಿವನ ಬಳಿಯ ಮಹಾರಥರು ಸುರಿದರು ಶರಾವಳಿಯ ॥ ರವಿಯ ಮೈಮಂಜಿನ ತುಷಾರದ । ತಿವಿಗಳಿಗೆ ತೆರಳುವುದೆ ರಿಪುಶರ । ನಿವಹವನು ಕೆಡೆಯಚ್ಚು ಕೆದರಿದನಾಮಹಾರಥರ ॥ ೪೭ ॥ ಸಿಕ್ಕಿದರೆ ಬಳಿಕೇನು ತಾಯಿಗೆ । ಮಕ್ಕಳಾಗದೆ ನಿನ್ನ ತನುಜರ । ನಿಕ್ಕಿ ಹಾಯ್ದರು ಹಿಂದೊಡೆದು ನೀ ಸಾಕಿದವರುಗಳು॥ ಹೊಕ್ಕ ಬಳಿಕೊಂದೆರಡುಪಸರದ । ಲುಕ್ಕಡಿಯುಳಿಹೊದಗಿದನು ನಿನ್ನವ । ನೆಕ್ಕತುಳದಲಿ ಸುಮಿಗಿಲಕಾದಿದನು ಹಗೆಯೊಡನೆ ॥ ೪೮ ॥ ತೇರು ಹುಡಿಹುಡಿಯಾಗಿ ತನ್ನಯ । ಸಾರಥಿಯು ತಲೆಹೋಗಿ ಕಾಲಿನ । ಲಾರುಭಟೆಯಲಿ ನಿನ್ನಮಗನೆನುತಿರ್ದನನಿಲಜನ ॥ ಸಾರುಸಾರೆಂದನುತಕರ್ಣಕು । ಮಾರನಡಹಾಯಿದನು ಭೀಮನ। ಭೂರಿಬಾಣದ ಪಂಜರವ ಭಂಜಿಸಿತು ನಿಮಿಷದಲಿ ॥ ೪೯ ॥ ಎಲೆಲೆ ಕರ್ಣಕುಮಾರನೋ ಪಡಿ । ಬಲಕೆ ಹೇಳೋಬಾಲನೊಬ್ಬನೆ । ನಿಲುವುದರಿದೋ ಸ್ವಾಮಿದ್ರೋಹರ ನೂಕುನೂಕೆನುತ ॥ ಉಲಿಯೆ ಕೌರವರಾಯನುರೆ ಕಳ । ಕಳದ ಬಹುವಿಧವಾದ್ಯಕಹಳಾ । ವಳಿಯ ದೆಖ್ಖಾದೆಖ್ಖಿಯಲಿ ಕಲಿಕರ್ಣನಡೆತಂದ ॥ ॥೫೦॥

ಅಂತು ಸಂಧಿ ೧೦ಕ್ಕೆ ಪದ ೩೬೬ಕ್ಕಂ ಮಂಗಳಮಸ್ತು.



## ಹನ್ನೊಂದನೆಯ ಸಂಧಿ.

॥ ಸೂಚನೆ ॥ ರಾಯರಿಪುಶಿರಾಹುಹೀಂಡವ । ರಾಯಸೇನಾಜಲಧಿವಡಬನ । ಜೀಯನಹರವಿಸೂ ಗೆಲಿದನು ಧರ್ಮನಂದನನ ॥

ಪದ ॥ ಮಗನ ತೊಲಗಿಸಿ ಹೊಗುವಚೂಣಿಯು । ತೆಗಸಿ ಬಲವಂಕದ ಭಟಾಳಿಗೆ । ಮೊಗದಸನ್ನೆಯ ಮಾಡುತೆಡವಂಕದ ಕಟಾಕ್ಷದಲಿ ॥ ತೆಗೆದು ಕೂರಂಬಿನಲಿ ಭೀಮನ । ಬಿಗಿದನಾವೆಡೆಧರಣಿಯಾವೆಡೆ । ಗಗನವಾವೆಡೆ ದೆಸೆಗಳನು ತುರುಗಿದವು ಶರಜಾಲ ॥ ೧ ॥ ಭೀಮನೋ ನಿಮಷಾರ್ಧದಲಿನಿ । ರ್ನಾಮನೋತಳುವಿಲ್ಲ ರಿಪುವೇ । ಕಾಮನೋ ಕರ್ಣನೊ ಕಪರ್ದಿಯೊ ಪೂತುಮಝುಯೆನುತ ಈ ಮಹಾದಳ ಭುಜದಹೊಯ್ಲಲಿ । ಭೂಮಿಪನ ಮುಂದೊದರೆ ವೈರಿ । ಸ್ತೋಮ ಕಂಡುದು ಪವನತನಯನ ರಣದಭಾರಣೆಯ ॥೨॥ ಉಲಿವುತಿದೆ ಕೌರವನಸೇನಾ । ಜಲಧಿ ಹರುಷದಲಿತ್ತಲನಿಲಜ । ನಳುಕದೊಬ್ಬನೆ ಕಾದುತೈದನೆ ಕರ್ಣ ನೋಡೆನುತ ॥ ತಳಿತವಢಣಚ್ಛತ್ರಚಮರಾ । ವಳಿಯ ಮಧ್ಯದಲವನಿಪತಿ ನಿಜ । ಬಲಸಹಿತ ನೂಕಿದನು ಬಹುವಿಧವಾದ್ಯ ರಭಸದಲಿ ॥ ೩ ॥ ರಾಯದಳದುಳಿ ಯೆದ್ದು

ನು ॥ ರಾಯ ಕೌರವಸಹಿತ ನೀವ್ ನಿ । ಮ್ಮಾಯತದಲಿರಿಯೆನುತ ಬಹುವಿಧ । ಸಾಯಕದ ಸರಿವಳೆಯ ಕರೆದನು ಭಾನುಸುತ ಮುಳಿದು ॥ ೪ ॥ ಒಂದುಕಡೆಯಲಿ ಭೀಮಸಾತ್ಯಕಿ । ಯೊಂದು ಕಡೆಯಲಿ ನಕುಲನೃಪ್ಪರ । ರೊಂದುಕಡೆಯಲಿ ಚೇಕಿತಾನ ಶಿಖಂಡಿಸೃಂಜಯರು ॥ ಒಂದುಕಡೆ ಸಹದೇವನೀಪರಿಪಿಂ । ದೆಮುಂದೆಷವಂಕಬಲದಲಿ । ಸಂದಣಿಸಿ ಮುತ್ತಿದರು ಮುಕ್ಕುರಿಕಿದರು ರವಿಸುತನ ॥ ೫ ॥ ಧನುವಿನಲಿ ಸಾತ್ಯಕಿಯು ಮಾದ್ರೀ । ತನುಜರನು ತೇರಿನಲಿ ದ್ರುಪದನ । ತನಯನನು ಸಾರಥಿಗಳಲಿ ಜೋಡಿನಲಿ ಪವನಜನ ॥ ಬಿನುಗರವರವರಂಗದಲಿ ಕೈ । ಮನವ ಖಂಡಿಸಿ ಸಕಲರಿಪುಸಾ । ಧನವನೊಬ್ಬನೆ ಕರ್ಣ ಗೆಲಿದನು ಕೇಳು ಧೃತರಾಷ್ಟ್ರ ॥೬॥ ಮುಂದುಗೆಟ್ಟುದು ದೊರೆಗಳೆನೆರವಿ । ನಂದನನ ರಥಕಾಗಿ ಸೇನಾ । ವೃಂದ ಕವಿದುದು ಚೈದ್ಯಕೈಕೆಯಮತ್ಸ್ಯ ಸೃಂಜಯರು ॥ ಸಂದಣಿಸಿ ಪಾಂಚಾಲ ಕೇರಳ । ವೃಂದಮಗಧದ್ರವಿಳವಂಗಪು । ಳಿಂದಬರ್ಬರರೊತ್ತಿ ಮುತ್ತಿತು ಮತ್ತೆ ರವಿಸುತನ ॥ ೭ ॥ ಒದೆದಮಂದರವನು ತರಂಗದ । ಉದಧಿಹೊಯಿವಂದದಲಿ ಬಿಟ್ಟವು । ಕುದುರೆತೂಳಿದವಾನೆಹೊಕ್ಕವು ರಥಗಳೊಳಬಿದ್ದು ॥ ಕೆದರಿ ವಿವಿಧಾಯುಧವ ಕಾಲಾ । ಳೊದಗಿ ಕೈದೋರಿಸಿದನನಿಬರ । ಸದೆದನೊಬ್ಬನೆಕರ್ಣ ಕೆದರಿದರೀಮಹಾರಥರ ॥೮॥ ಬೀಳುವಂಬನಹೊಯ್ದು ಕಡುಗದ । ತೂಳುವೀಟಿಯನೊಕಿತಾಗುವ । ಶೂಲಿಗೆಯ ತುಂಡಿಸುವವಂಕಿಯನೆಡೆವಭಲ್ಲೆಯದ ॥ ಸೀಳುಕತ್ತಿಯ ಮುರಿವಪರಿಘದ । ಸಾಳಿಸುವಪರಿಶುವಿನ ಧಾಳಾ । ಧೂಳಿ ಮಸಗಿತು ಮತ್ತೆ ಕರ್ಣನ ರಥದ ಬಳಿಸಿನಲಿ ॥೯॥ ತುರಗರಾವುತರವರ ಖಡುಗಕೆ । ಕರಿಗೆ ಜೋಧರಿಗವರ ಶಸ್ತ್ರಕೆ । ವರರಥಕೆ ಸಾರಥಿಗೆ ರಥಿಕರ ಚಾಪಮಾರ್ಗಣಕೆ ॥ ಸರಳೆಗೊಂದೊಂದರಲಿ ನೆರೆ ಕಾತ್ತರಿಸಿದನು ಕಾಲಾಳವೂಂದೇ । ಶರದಲೈನೂರಳಿಯೆ ಕೊಂದನು ಕರ್ಣ ಪರಬಲವ ॥೧೦॥ ನಕುಲನನು ಹದಿನೈದರಲಿ ಸಾ । ತ್ಯಕಿಯನೈದಂಬಿನಲಿ ಸಹದೇ । ವಕನನೊಂಭತ್ತರಲಿ ಭೀಮನನೆಂಟುಬಾಣದಲಿ ॥ ಸಕಲರಥಿಕರನೈದೆ ಶತಸಹ । ಯಕದೊರಗಿಸಿ ಚೈದ್ಯ ಪಾಂಚಾ । ಲಕರೆಥಟ್ಟನೊಳೊಕ್ಕಲಿಕ್ಕಿದನರಸ ಕೇಳೆಂದ ॥೧೧॥ ಅದು ಬಳಿಕ ಹೇರಾಳಪಡೆಬೀ । ತುದು ಮಹಾರಥರೆಸುಗೆಯಲಿ ಹೂ । ಳಿದುದು ನಭ ನುಗ್ಗಾಯ್ತು ನೆಲ ಚತುರಂಗಪದಹತಿಗೆ ॥ ಕುದುರೆ ಕರಿ ತೇರಾಳಟಕ್ಕೆಯ । ಹೊದರಿನೊಳು ಮುಳುಗಿದನು ನಿನ್ನವ । ನದುಭುತವನೇವೇಳುವೆನು ಧೃತರಾಷ್ಟ್ರ ಕೇಳೆಂದ ॥೧೨॥ ತಾರಕನ ಥಟ್ಟಿನಲಿ ಹರನಕು । ಮಾರ ಹೊಗುವಂದದಲಿ ವೃತ್ರನ । ತಾರಕಾಕ್ಷನ ಜೋಡಿಯನು ಶಿವ ಭಾರಿ ಜಡಿವಂತೆ ॥ ಆರಿದೆಚ್ಚನು ಶಿವಶಿವಾ ಕಾ । ಮಾರಿಯೋ ಪಾಂಡವಬಲಕೆ ಹೆಂ । ಮಾರಿಯೋ ನಿಸ್ಸಾನೆ ಸವರಿತು ವೈರಿಭಟವನವ ॥ ೧೩ ॥ ವಾಘೆ ಸಡಿಸದರಾವುತರ ದೃಷ್ಟ । ವಾಘೆ ಪೋಷಿದತೇರುಗಳ ಕಾ । ರ್ಮೇಘದೊಡ್ಡಣೆ ಮೆರವ ಬಲುಗಜಘಟೆಯ ಸಂದಣಿಯ॥ ಲಾಘವದ ಲುಳಿ ಸಾರತರದ ಶ । ರೌಘರಚನೆಯ ನದಟಯುಥ । ಶ್ಲಾಘೆಯನು ನಾಕಾಣೆನೊಂದರೆಗಳಿಗೆ ಮಾತ್ರದಲಿ ॥ ೧೪ ॥ ಬೇರೆ ಲಗ್ಗೆಯಮಾಡಿಕೋ ಯೆಂ । ದೇರಿತೋರುವರಭಸ ಕಿವಿಗಳ । ಕೀರಿದವು ಮೊದಲಿಸಿ ಕರ್ಣನ ತಾಗಿದಾಕ್ಷಣಕೆ ॥ ತಾರುಥಟ್ಟಿಗೆ ಕೆಡೆದು ರೌದ್ರವ । ಹೇರಿದವು ಕಣ್ಣುಗಳು ರಿಪುಬಲ । ವಿಾರಿ ನಾಲಗೆ ಹೊಗಳಲಮ್ಮದು ನೃಪತಿ ಕೇಳೆಂದ ॥೧೫॥ ಆಳುಕೊಂದನು ಲಕ್ಷವನು ತುರಗಾಳಿಯನು ಸಾಲ್ಸಾಸಿರವ ಶುಂ । ಡಾಲಘಟೆಯನು ಖಂಡಿಸಿದನೊಂದೆರಡುಸಾಸಿರವ ॥ ಮುಳಿವು

ನುಗಿನ ಬಿಂಕ ನಿನ್ನಯ । ತಲೆಗೆ ತಹುದಾವರಿಯನೆನುತತಿ । ಬಳನನೆಚ್ಚನು ನಿನ್ನನಂದನನರಸ ಕೇಳೆಂದ ॥೪೫॥ ಬಗರು ಮುರಿಪೇಕಿದೊಡೆ ತೋಳನು । ತೆಗೆದು ಜೀವಿಸಿ ನಿಲುವುದೇ ನಾ । ಲಗೆಯ ವೀರರು ನೀವು ಮೂಢರು ಸಾವು ಸುಪಿಗಳಲಿ ॥ ಉಗಿದಡಾಯುಧಮೊನೆಯ ತುದಿಸಾ । ಲಗೆಗಳಲಿ ಮಾತಾಡಬಲ್ಲರೆ । ಸೊಗಸುವೆವು ಸಾಪೆನುತ ಪವನಜನಚ್ಚ ನಂನೃಪನ ॥ ೪೬ ॥ ಪವನಸುತನೆಚ್ಚಂಬನುರೆ ಕಡಿ । ದವಿರಳಾಸ್ತ್ರವನೀತ ಕವಿಸಿದ । ನಿವನ ಬಳಿಯ ಮಹಾರಥರು ಸುರಿದರು ಶರಾವಳಿಯ ॥ ರವಿಯ ಮೈಮಂಜಿನ ತುಷಾರದ । ತಿವಿಗಳಿಗೆ ತೆರಳುವುದೆ ರಿಪುಶರ । ನಿವಹವನು ಕಡಿಯಚ್ಚು ಕೆದರಿದನಾಮಹಾರಥರ ॥ ೪೭ ॥ ಸಿಕ್ಕಿದರೆ ಬಳಿಕೇನು ತಾಯಿಗೆ । ಮಕ್ಕಳಾಗದೆ ನಿನ್ನತನುಜರ । ನಿಕ್ಕಿಹಾಯ್ದರು ಹಿಂದೊಡೆದು ನೀ ಸಾಕಿದವರುಗಳು॥ ಹೊಕ್ಕಬಳಿಕೊಂದೆರಡುಪಸರದ । ಲುಕ್ಕಡಿಯಳೊದಗಿದನು ನಿನ್ನವ । ನೆಕ್ಕತುಳದಲಿ ಸುಮಿಗಿಲಕಾದಿದನು ಹಗೆಯೊಡನೆ ॥ ೪೮ ॥ ತೇರು ಹುಡಿಹುಡಿಯಾಗಿ ತನ್ನಯ । ಸಾರಥಿಯ ತಲೆಹೋಗಿ ಕಾಲಿನ । ಲಾರುಭಟೆಯಲಿ ನಿನ್ನಮಗನೆನುತಿರ್ದನನಿಲಜನ ॥ ಸಾರುಸಾರೆಂದನುತಕರ್ಣಕು । ಮಾರನಡಹಾಯಿದನು ಭೀಮನ। ಭೂರಿಬಾಣದ ಪಂಜರವ ಭಂಜಿಸಿತು ನಿಮಿಷದಲಿ ॥ ೪೯ ॥ ಎಲೆಲೆ ಕರ್ಣಕುಮಾರನೋ ಪಡಿ । ಬಲಕೆ ಹೇಳೋಬಾಲನೊಬ್ಬನೆ । ನಿಲುವುದರಿದೋ ಸ್ವಾಮಿದ್ರೋಹರ ನೂಕುನೂಕೆನುತ ॥ ಉಲಿಯೆ ಕೌರವರಾಯನುರೆ ಕಳ । ಕಳದ ಬಹುವಿಧವಾದ್ಯಕಹಳಾ । ವಳಿಯ ದೆಖ್ಖಾದೆಖ್ಖಿಯಲಿ ಕಲಿಕರ್ಣನಡೆತಂದ ॥ ॥೫೦॥

ಅಂತು ಸಂಧಿ ೧೦ಕ್ಕೆ ಪದ ೩೬೬ಕ್ಕಂ ಮಂಗಳಮಸ್ತು.



## ಹನ್ನೊಂದನೆಯ ಸಂಧಿ.

॥ ಸೂಚನೆ ॥ ರಾಯರಿಪುಶಿರಾಹುಹೊಂಡವ । ರಾಯಸೇನಾಜಲಧಿವಡಬನ । ಜೀಯನಹೆರವಿಸೂಗೆಲಿದನು ಧರ್ಮನಂದನನ ॥

ಪದ ॥ ಮಗನ ತೊಲಗಿಸಿ ಹೊಗುವಚೂಣಿಯ । ತೆಗಸಿ ಬಲವಂಕದ ಭಟಾಳಿಗೆ । ಮೊಗದಸನ್ನೆಯ ಮಾಡುತೆಡವಂಕದ ಕಟಾಕ್ಷದಲಿ ॥ ತೆಗೆದು ಕೂರಂಬಿನಲಿ ಭೀಮನ । ಬಿಗಿದನಾವೆಡೆಧರಣಿಯಾವೆಡೆ । ಗಗನವಾವೆಡೆ ದೆಸೆಗಳನು ತುರುಗಿದವು ಶರಜಾಲ ॥ ೧ ॥ ಭೀಮನೋ ನಿಮಷಾರ್ಥದಲಿನಿ । ರ್ನಾಮನೋತಳುವಿಲ್ಲ ರಿಪುವೇ । ಕಾಮನೋ ಕರ್ಣನೊ ಕಪರ್ದಿಯೊ ಪೂತುಮಝಯೆನುತ ಈ ಮಹಾದಳ ಭುಜದಹೊಯ್ಲಲಿ । ಭೂಮಿಪನ ಮುಂದೊದರೆ ವೈರಿ । ಸ್ತೋಮ ಕಂಡುದು ಪವನತನಯನ ರಣದಭಾರಣೆಯ ॥೨॥ ಉಲಿವುತಿದೆ ಕೌರವನಸೇನಾ । ಜಲಧಿ ಹರುಷದಲಿತ್ತಲನಿಲಜ । ನಳುಕದೊಬ್ಬನೆ ಕಾದುತೈದನೆ ಕರ್ಣ ನೋಡೆನುತ ॥ ತಳಿತವರುಣಚ್ಛತ್ರಚಮರಾ । ವಳಿಯ ಮಧ್ಯದಲವನಿಪತಿ ನಿಜ । ಬಲಸಹಿತ ನೂಕಿದನು ಬಹುವಿಧವಾದ್ಯ ರಭಸದಲಿ ॥ ೩ ॥ ರಾಯದಳದುಳಿ ಯೆದ್ದುದೊಬ್ಬನ । ಬೀಯಮಾಡುವೆನೆನುತ ನಿಮಿಷಕೆ । ವಾಯುಜನ ಘಾಡಣೆಯ ಗರ್ವಗ್ರಹವ ಕಳೆಚುವೆ

ನು ॥ ರಾಯ ಕೌರವಸಹಿತ ನೀವ್ ನಿ । ಮ್ಮಾಯತದಲಿಂಯೆನುತ ಬಹುವಿಧ । ಸಾಯಕದ ಸರಿವಳೆ ಯ ಕರೆದನು ಭಾನುಸುತ ಮುಳಿದು ॥ ೪ ॥ ಒಂದುಕಡೆಯಲಿ ಭೀಮಸಾತ್ಯಕಿ । ಯೊಂದು ಕಡೆಯಲಿ ನಕುಲಸಬ್ಬರೆ । ಯೊಂದುಕಡೆಯಲಿ ಚೇಕಿತಾನ ಶಿಖಂಡಿಸೃಂಜಯರು ॥ ಒಂದುಕಡೆ ಸಹದೇವನೀಪರಿ ಹಿಂ । ದೆಮುಂದೆಪಪಂಕ್ತಬಲದಲಿ । ಸಂದಣಿಸಿ ಮುತ್ತಿದರು ಮುಕ್ಕುರಿಕಿದರು ರವಿಸುತನ ॥ ೫ ॥ ಧನುವಿನಲಿ ಸಾತ್ಯಕಿಯ ಮಾದ್ರೀ । ತನುಜರನು ತೇರಿನಲಿ ದ್ರುಪದನ । ತನಯನನು ಸಾರಥಿಗಳಲಿ ಜೋಡಿನಲಿ ಪವನಜನ ॥ ಬಿನುಗರವರವರಂಗದಲಿ ಕೈ । ಮನವ ಖಂಡಿಸಿ ಸಕಲರಿಪುಸಾ । ಧನವನೊಬ್ಬನೆ ಕರ್ಣ ಗೆಲಿದನು ಕೇಳು ಧೃತರಾಷ್ಟ್ರ ॥೬॥ ಮುಂಮಗೆಟ್ಟದು ದೊರೆಗಳೆನೆರವಿ । ನಂದನನ ರಥಕಾಗಿ ಸೇನಾ । ವೃಂದ ಕವಿದುದು ಚೈದ್ಯಕೈಕೆಯಮತ್ಸ್ಯ ಸೃಂಜಯರು ॥ ಸಂದಣಿಸಿ ಪಾಂಚಾಲ ಕೇರಳ । ವೃಂದಮಗಧದ್ರಾವಿಳವಂಗವು । ಳಿಂದಬರ್ಬರರೊತ್ತಿ ಮುತ್ತಿತು ಮತ್ತೆ ರವಿಸುತನ ॥ ೭ ॥ ಒದೆದಮಂದರವನು ತರಂಗದ । ಉದಧಿಹೊಯಿವಂದದಲಿ ಬಿಟ್ಟವು । ಕುದುರೆತೂಳಿದವಾನೆಹೊಕ್ಕವು ರಥಗಳೊಳಬಿದ್ದು ॥ ಕೆದರಿ ವಿವಿಧಾಯುಧವ ಕಾಲಾ । ಳೊದಗ ಕೈದೋರಿಸಿದನನಿಬರ । ಸದೆದನೊಬ್ಬನೆಕರ್ಣ ಕೆದರಿದರೀಮಹಾರಥರ ॥೮॥ ಬೀಳುವಂಬನಹೊಯ್ದು ಕಡುಗದ । ತೂಳುವೀಟಿಯನೊಕಿ ತಾಗುವ । ಶೂಲಿಗೆಯ ತುಂಡಿಸುವವಂಕಿಯನೆಡೆವಭಲ್ಲೆಯದ ॥ ಸೀಳುಕತ್ತಿಯ ಮುರಿವಪರಿಘದ । ಪಾಳಿಸುವಪರಿಶುವಿನ ಧಾಳಾ । ಧೂಳಿ ಮಸಗಿತು ಮತ್ತೆ ಕರ್ಣನ ರಥದ ಬಳಿಸಿನಲಿ ॥೯॥ ತುರಗರಾವುತರವರ ಖಡುಗಕೆ । ಕರಿಗೆ ಜೋದರಗವರ ಶಸ್ತ್ರಕೆ । ವರರಥಕೆ ಸಾರಥಿಗೆ ರಥಿಕರ ಚಾಪಮಾರ್ಗಣಕೆ ॥ ಸರಳಿಗೊಂದೊಂದರಲಿ ನೆರೆ ಕಾತ್ತರಿಸಿದನು ಕಾಲಾಳವೊಂದೇ । ಶರದಲೈನೂರಳಿಯೆ ಕೊಂದನು ಕರ್ಣ ಪರಬಲವ ॥೧೦॥ ನಕುಲನನು ಹದಿನೈದರಲಿ ಸಾ । ತ್ಯಕಿಯನೈದಂಬಿನಲಿ ಸಹದೇ । ವಕನನೊಂಭತ್ತರಲಿ ಭೀಮನನೆಂಟುಬಾಣದಲಿ ॥ ಸಕಲರಥಿಕರನೈದೆ ಶತಸಾ । ಯಕದೊರಗಿಸಿ ಚೈದ್ಯಪಾಂಚಾ । ಲಕರಥಟ್ಟನೊಳೊಕ್ಕಲಿಕ್ಕಿದನರಸ ಕೇಳೆಂದ ॥೧೧॥ ಅದು ಬಳಿಕ ಹೇರಾಳಪಡೆಬೀ । ತುದುಮಹಾರಥರೆಸುಗೆಯಲಿ ಹೂ । ಳಿದುದು ನಭ ನುಗ್ಗಾಯ್ತು ನೆಲ ಚತುರಂಗಪದಹತಿಗೆ ॥ ಕುದುರೆ ಕರಿ ತೇರಾಳಟಕ್ಕೆಯ । ಹೊದರಿನೊಳು ಮುಳುಗಿದನು ನಿನ್ನವ । ನದುಭುತವನೇವೇಳುವೆನು ಧೃತರಾಷ್ಟ್ರ ಕೇಳೆಂದ ॥೧೨॥ ತಾರಕನ ಥಟ್ಟಿನಲಿ ಹರನಕು । ಮಾರ ಹೊಗುವಂದದಲಿ ವೃತ್ರನ । ತಾರಕಾಕ್ಷನ ಜೋಡಿಯನು ಜಂಭಾರಿ ಜಡಿವಂತೆ ॥ ಆರಿದೆಚ್ಚನು ಶಿವಶಿವಾ ಕಾ । ಮಾರಿಯೋ ಪಾಂಡವಬಲಕೆ ಹೆಂ । ಮಾರಿಯೋ ನಿಸ್ತ್ರಾಣೆ ಸವರಿತು ವೈರಿಭಟವನವ ॥ ೧೩ ॥ ವಾಘೆ ಸುಸದರಾವುತರ ಧೃತ । ವಾಘೆ ಪೋಟಿದತೇರುಗಳ ಕಾ । ರ್ಮೇಘದೊಡ್ಡಣೆ ಮೆರವ ಬಲುಗಜಘಟೆಯ ಸಂದಣಿಯ॥ ಲಾಘವದ ಲುಳಿ ಸಾರತರದ ಶ । ರೌಘರಚನೆಯ ನದಟಯೂಥ । ಶ್ಲಾಘೆಯನು ನಾಕಾಣೆನೊಂದರೆಗಳಿಗೆ ಮಾತ್ರದಲಿ ॥ ೧೪ ॥ ಬೇರೆ ಲಗ್ಗೆಯಮಾಡಿಕೋ ಯೆಂ । ದೇರಿತೋರುವರಭಸ ಕಿವಿಗಳ । ಕೀರಿದವು ಮೊದಲಿಸಿ ಕರ್ಣನ ತಾಗಿದಾಕ್ಷಣಕೆ ॥ ತಾರುಥಟ್ಟಿಗೆ ಕಡೆದು ರೌದ್ರವ । ಹೇರಿದವು ಕಣ್ಣುಗಳು ರಿಪುಬಲ । ವಿಾರಿ ನಾಲಗೆ ಹೊಗಳಲಮ್ಮದು ನೃಪತಿ ಕೇಳೆಂದ ॥೧೫॥ ಆಳುಕೊಂದನು ಲಕ್ಷವನು ತುರಗಾಳಿಯನು ನಾಲ್ಸಾಸಿರವ ಶುಂ । ಡಾಲಘಟೆಯನು ಖಂಡಿಸಿದನೊಂದೆರಡುಸಾಸಿರವ ॥ ಮುಳಿವು

ಣಿಯಲಿ ಹೊಳೆವರಥಿಕರ । ನೇಳುನೂರುಮಹಾರಥರ ನೆರೆ । ಸೀಳಿಬಿಟ್ಟನು ಚೈದ್ಯಪಾಂಚಾಲರಲಿ ಲಿಕ ಕರ್ಣ ॥ ತೆರಳಿದನು ಸಹದೇವಕನುಪ್ಸೆ । ಸರಿಸಿದನು ನಕುಲನು ಶಿಖಂಡಿಯು । ವರರಥವಸಾನಲ್ಲಿ ಕಾಣೆನು ಸಾತ್ಯಕಿಯ ರಥವ ॥ ಮುರಿವ ಕಂಡೆನು ಭೀಮ ದುಗುಡದ। ಭರದಲಿದ್ದನು ಮಿಕ್ಕವರು ಸಾ । ಲ್ಕೆರಡುಯೆರಡೊಂದೆನಲು ನಿಂದುದು ಚೋದ್ಯವಾಯ್ತೆಂದ ॥೧೭॥ ಇಟ್ಟಣಿಸಿಕೊಂಡೆತ್ತಿ ರಾಯನ । ಥಟ್ಟುಹೊಕ್ಕನು ಜರುಹಿದನು ಜಗ । ಜಟ್ಟಿಗಳನೊಡೆದುಳಿದನಂಗೈಸಿದಸಘಾಡಿಕೆಯು ॥ ಕಟ್ಟದಳವನಘಾಟದವರೊಳಗಿಟ್ಟುಕೊಳ್ಳಿರಿದೇಕೆ ರಾಯನ। ಮುಟ್ಟುತಿರಲಾರೌದ್ರರಣವೆನುತೆಚ್ಚ ಸಾಕರ್ಣ॥೧೮॥ ಕುರುಬಲದ ಸುಮಾನಗಹಳೆಯು । ಮೊರೆವನಿಸ್ಸಾಳದ ನೃಪಾಲರ । ಹರುಷಪುಳಕದ ಭುಜದ ಹೊಯ್ಲಿನ ಬಲಿದಬೊಬ್ಬೆಗಳ ॥ ಅರಿಬಲದೊಳಕಟಕಟ ವಿಧಿ ನಿ। ಷ್ಕರುಣಿ ಹಾಹಾ ಯೆಂಬರವದ । ಬ್ಬರದ ನಿಬ್ಬರ ಕೇಳಲಾದುದು ನೃಪತಿ ಕೇಳೆಂದ ॥ ೧೯ ॥ ಎಲೆಲೆ ರಾಯನಮೇಲೆ ಬಿದ್ದುದು । ಕಲಹವಕಟಾ ನೂಕುನೂಕಿ । ಟ್ಟಳಿಸಿದವ ಹಗೆ ನಮ್ಮ ಭೀಷ್ಮದ್ರೋಣನಿವನಲ್ಲ ॥ ಅಳುಕದಿರಿ ಕವಿಕವಿಯೆನುತಹೆ । ಬ್ಬಲಸಘಾಡವಲೌಕ ಕರ್ಣನ । ಹೊಲಬುಗೆಡಿಸಿದನಂಬುಗಳ ನಾರಾಚಸೋನೆಯಲಿ ॥ ೨೦ ॥ ಕೊಂಬನೇ ಬಳಿಕಾಮಹಾರಥ । ರಂಬುಗಿಂಬನು ನಿಮ್ಮ ಹಿರಿಯರ । ದೊಂಬಿನಾಹವವಲ್ಲಲೇ ತಮಗೇನು ತುಡುಕುವೂಡೆ ॥ ಅಂಬುನಿಧಿ ಮಕರಂದವಾದಡೆ । ತುಂಬಿಯಾಗನೆ ವಡಬನೀತನ । ನೆಂಬಸುಭಟರು ಖುಲ್ಲರೈ ಧೃತರಾಷ್ಟ್ರ ಕೇಳೆಂದ ॥೨೧॥ ರಾಯದಳದೊಳು ಮಡಿದಕರಿವಾ । ನಾಯುಜಕೆ ಕಡೆಯಿಲ್ಲ ರಥಿಕರು । ಪಾಯದಳವೆಂತಳಿದುದೋ ಸಾನರಿಯೆವದರೊಳಗೆ ॥ ಬಾಯಬಿಟ್ಟುದು ಸೇನೆ ಕಡಿಖಂ । ಡಾಯುತದ ಹೆಣದೊಟ್ಟಿನಲಿ ಮುರಿ । ದಾಯುಧದ ಸಂದಣಿಯ ನಿಲಿಸಿತು ಮತ್ತೆ ರವಿಸುತನ ॥ ೨೨ ॥ ತರಿದಹೇಸಕ್ಕಳೆಪುಯೊಳಗೆ ರಥ । ಹರಿಯಬಹುದೇ ಕರ್ಣನಾವಿಂ । ದರಿದೆವೈದಿಟ್ಟನ್ನನೋಲೆಯ್ಸುರನೆಂಬುದನೆ॥ ಇರಿತವಿದಕಾರಿದಿರಹರು ನಿ । ನ್ನುರವಣೆಯನಾರಾನುವರು ಮ । ತ್ಸರವ ಬಿಟ್ಟೆನು ಪೂತು ರವಿಸುತ ಯೆಂದನಾಶಲ್ಯ ॥ ೨೩ ॥ ಕಾಲಿಡಲು ದುರ್ಘಟವಿದೆನುತಾ । ಸಾಲಬಿಟ್ಟನು ದಕ್ಷಿಣಕೆ ದು । ವ್ವಾಳಿಸಿದನಾರಥವನವನೀಪತಿಯು ಮೋಹರಕೆ॥ ಏಳು ಕಲಿಯಾಗಿನ್ನು ಕೆಲಬಲ। ದಾಳ ಹಾರದಿರೆನುತ ರಾಯನ ।ಮೇಲೆ ಕರೆದನು ಕರ್ಣ ಖತಿಯಲಿ ಕಣೆಯ ಬಿರುವಳೆಯ॥೨೪॥ ಗಳಹದಿರು ಕೆಲಬಲನ ಹಂಗಿನ । ಬಳಕೆಯೇ ಫಡ ಸೂತಸುತ ಬಾ । ಳ್ಕೊಲೆಯ ಬಾಹೆಯ ಬಿನುಗಗಳ ಸದೆಬಡಿದಗರ್ವದಲಿ ॥ ಉಳುಕಿದರೆ ನಾಲಗೆಯ ತೊಡಬೆಯ। ಕಳಚುವೆನು ಮಿಗೆ ನಿಲ್ಲೆನುತಕುಂಡಲಿತಕಾರ್ಮುಕನೆಚ್ಚು ಕಡಿದನು ಕರ್ಣನಂಬುಗಳ ॥೨೫॥ ಸೋಲಿಕಲುಗಳು ಸಿಡಿಲಮರಿಗಳ । ಮೇಲುವಾಯ್ದುವುಗಡ ಯುಧಿಷ್ಠಿರ । ನಾಳುತನದಲಿ ನಮ್ಮ ಜರೆದವನುಶಲ್ಯನೋಡೆನುತ ॥ಬೋಳೆಯಂಬೈದರಲಿ ರಾಯನ । ತೋಳನೆಚ್ಚನು ಜಡಿವಜೋಡಿನ । ಮೇಲೆಮುರಿದವು ಬಾಣ ನೃಪ ಮಗುಳೆಚ್ಚ ರವಿಸುತನ ॥೨೬॥ ಬಲುಹುಕೈಗಳಲುಂಟೆ ತೋರುವು।ದುಲಿವಹೊತ್ತದು ಮತ್ತೆನುತ ಮುಂ । ಕೊಳಿಸಿ ಕರ್ಣನ ಧನುವ ಕಡಿದೀರೇಳುಬಾಣದಲಿ ॥ ಅಳುಕದೆಚ್ಚನು ತೇರು ತುರಗಾ । ವಳಿಯ ಧವಳಚ್ಛತ್ರ ಚಮರಿಯು । ನಿಳುಹಿದನು ಧ್ವಜದಂಡಸಹಿತೈವತ್ತುಬಾಣದಲಿ ॥ ೨೭ ॥ ಬೇಗೆವರಿ ಬೆಳುದಿಂಗಳಲಿ ನವು । ಗೀಗ ತೋರಿತಲಾಯೆನುತ ಮುಷು । ದಾಗಲೇ ಸಂಧಿಸಿದನಾತನು ರಥದ ಹಲಿಗೆಗಳ ॥ ಈಗಲ

ರಿಯಾದರೆಯೆನುತ ಕಿವಿ । ವಾಗೆತೆಗೆದನು ನಿಶಿತಬಾಣವ । ತೂಗಿಬಿಟ್ಟನುಬೀಳೆನುತ ಬೊಬ್ಬಿರಿದನಾಕರ್ಣ ॥ ೨೮ ॥ ಅರಸ ಕೇಳಾಶ್ಚರ್ಯವನು ರಿಪು । ಶರವನೆಡೆಯಲಿ ಕಡಿದು ರವಿಸುತ । ಸುರುವನೆಚ್ಚನು ಧರ್ಮನಂದನನೆಂಟುಬಾಣದಲಿ ॥ ಬಿರಿಯೆಬಲುವಜ್ರಾಂಗಿಹಾಯ್ದುವು । ಗರಿಸಹಿತಲುಚ್ಚಳಿಸಿ ನೆಲದಲಿ ಸರಳುನಟ್ಟವು ನನೆದುದಾಸರ್ವಾಂಗರಕುತದಲಿ ॥ ೨೯ ॥ ತೂಗುವೊಡಲರೆಮುಚ್ಚುಗಂಗಳ । ಜೋಗರಿಸುವಂಗದ ವಿಕಾರದ । ಮೂಗಿನುಸುರಿನ ಮೂರ್ಛೆಯಲಿ ರವಿಸೂನು ವ್ಯೋಮವೆವ ॥ ಸೋಗಲಂತಿರೆ ಹೋರೆಯುವರ ಕೈ । ಲಾಗುವುದ್ದಿನ ಕವಳಜಲವುಂ । ತ್ಯಾಗಮದಲೆಚ್ಚತ್ತನೊಂದರೆಗಳಿಗೆಯಲಿ ಕರ್ಣ ॥ ೩೦ ॥ ಬಸಿವರಕುತವ ತೊಳೆತೊಳೆದುಮುಂ । ತ್ರಿಸಿದಸಲಿಲವ ಮುಕ್ಕುಳಿಸಿ ಯುಗುಳ್ದಸಮ ಸಾಹಸಿ ಕೊಂಡ ವರಕರ್ಪೂರದವೀಳೆಯವ ॥ ಮುಸುಡದುಗುಡದ ತನ್ನ ಸೇನಾ । ಪ್ರಸರಕಭಯವನಿತ್ತು ಮಾರಿಯ । ಮುಸುಕನುಗಿದನ ತೋರೆನುತ ತಾಗಿದೆನು ಭೂಪತಿಯ ॥ ೩೧ ॥ ಮಂದಿಕವಿಯಲಿ ಗಾಯ ತಾಗಿದ । ಹಂದಿಯೋ ರಾಧೇಯನರಸನ । ಮುಂದುಗೆಡಿಸದೆ ಮಾಣನೋ ತೆಗೆ ನೂಕುನೂಕೆನುತ ॥ ಸಂದಣಿಸಿತತಿರಥರು ರಾಯನ । ಮುಂದೆ ತಲೆವರಿಗೆಯಲಿ ಸೇನಾ । ವೃಂದ ತೊಡಕಿತು ಕುಪಿತಕಾಳೋರಗನ ನಾಲಗೆಯ ॥ ೩೨ ॥ ರಾಯನಳವಿಗರಿವರು ಘಾಟದ । ನಾಯಕರು ಕಾಣಿರೆ ಸಮೀರನ । ಲಾಯದಲಿ ಲಂಬಿಸಿದವಕಟ ತುಷಾರತೇಜಿಗಳು॥ ಆಯಿತಿದು ತಪ್ಪೇನೆನುತ ಕ । ರ್ಣಾಯುತಾಸ್ತ್ರಾದಿ ಹರೆಗಡಿದು ರಿಪು।ರಾಯನಲ್ಲಿಗೆ ರಥವ ದುವ್ವಾಳಿಸಿದನಾಕರ್ಣ ॥ ೩೩ ॥ ಹೊಟ್ಟ ನೂಕಿವ್ಯೆ ಥಾಪ್ರರದ ಜಗ।ಜಟ್ಟಿ ನೀ ಹೆರಸಾರಿ ನಿಂದೊಡೆ । ಬಿಟ್ಟೆನೇ ನಾಕರ್ಣನ[illegible]ಯಾ ಕಾಯ್ದು ಕೊಳ್ಳೆನುತ ॥ ಕಟ್ಟಳವಿಯಲಿ ವೈರಿರಾಯನ । ನಿಟ್ಟಣಿಸಿ ಮುರಿಯೆಸುತ ಬರಲಡ । ಗಟ್ಟಿತಡೆದರು ಮತ್ತೆ ಸಕಲಮಹಾರಥರು ಭಟನ ॥ ೩೪ ॥ ನಿಲ್ಲುಸ್ಯೆರಿಸು ಸೂತಸುತ ಜವ।ನ[illegible]ಳವೆ[illegible]ವರಿಗೆ ಭೂ । ವಲ್ಲಭನ ಸಮಜೋಳಿಯೋ ನೀಸಾರು ಸಾರೆನುತ॥ಚೆಲ್ಲಿದರು ಕೂರಂಬುಗಳನೆಡ । ದಲ್ಲ[illegible]ಲದಲಿ ಹಿಂದುಮುಂದೆಸೆ । ಝಲ್ಲರಿಯ ಸಿಂಧದಮಹಾರಥರ್ಕೈದಿತಿನಸುತನ ॥ ೩೫ ॥ ತುರಗದಳವೊಂದೆಸೆಯಲೌಕಿತು। ಕರಿಘಟೆಗಳೊಂದೆಸೆಯುಲತಿರಥ। ರುರವಣೆಯುಪದಹತಿಯ ಧೂಳಿಯ ಮುಬ್ಬಿನಬ್ಬರದ॥ಧರಧುರವನೊಂದೆಸೆ ಪದಾತಿಯ । ಹೊರಳಿಗಳದೊಂದೆಸೆ ವಿಘಾತಿಸಿ । ತರಿಭಟನ ಮುಸುಕಿರ್ದದಮರಾಸುರರೆಣೋಪಮವ ॥ ೩೬ ॥ ಮುಸುಕುವುದು ಮುಗಿಲೆಮ್ಮೆಸೂರ್ಯನ । ಮಸಕಮಿಗಿಲಹುದೊಮ್ಮೆ ಮೇಘ । ಪ್ರಸರ ಹಿರಿದಹುದೊಮ್ಮೆರವಿ ತೋರುವನು ಮಗುಳೊಮ್ಮೆ ॥ ಅಸಮಸಮರದೊಳೀತನಾಪರಿ । ಮಸುಳುವನು ತೋರುವನು ತೊಡೆವನು । ದೆಸೆಗೆಡಿಸುವನು ಬಳಿಕ ಕವಿಕವಿತಹಮಹಾರಥರ ॥ ೩೭ ॥ ಬಿದ್ದುದೈನೂರಾನೆ ರುಧಿರದೊ । ಳದ್ದುದಿನ್ನೂರರಸುಮಕ್ಕಳು । ಕದ್ದನಂತಕನಾರುಸಾವಿರತುರಗದಸುವುಗಳ ॥ ಬಿದ್ದವರನೊಡೆದುಳಿದು ಮೇಲು । ಬೈದ್ದುಕವಿತಹರಿಪುಸಮೂಹದ । ಬಿದ್ದಿನಲಿ ಬೆದರಿಸಿದನಾಪಿತೃಪತಿಯ ಪರಿಜನವ ॥ ೩೮ ॥ ಆಳನೋಯಿಸಿ ನೋಡುತಿಹಹೀ । ಹಾಳಿ ತಾನೇಕಕಟಕಟ ದೊರೆ । ಯಾಳತೆಗಸಾರೆನುತ ಸಹದೇವಾದಿಗಳು ಜರೆದು ॥ ತೋಳು ಬೀಳಲು ತೆಗೆದೆಸುತ ಸಮ । ಜೋಳಿಯಲಿ ನೂಕಿದರುಕರ್ಣನ । ಮೇಲೆ ಸಾತ್ಯಕಿ ಭೀಮನವನೀಪಾಲನಿದಿರಿನಲಿ ॥ ೩೯ ॥ ಘೂತುಮಝುರೇ ಭೀಮಸಾತ್ಯಕಿ । ಯಾತರ್ಸೈತಮ್ಮೊಡೆಯನಿದಿರಲಿ । ಘಾತಕರ ಘುಟ್ಟಿಸುವೆನೀಗಳೆ ಶಲ್ಯನೋಡೆನುತ ॥ ಭೂತನಾ

ಥನ ಭಾಳನಯನೋ । ದ್ಧೂತಧೂಮಧ್ವಜಶಿಖಾಸಂ । ಘಾತವಿದೆಯೆನೆ ಕೆದರಿದನು ಮಾರ್ಗಣಾವ ಹೋದಘಿಯ ॥ ೪೦ ॥ ಪವನಸುತ ಮುಖದಿರುಹಿದನು ಯಾ । ದವನ ಕಂಡವರಾರು ಸೇನಾ । ನಿವಹ ಗಿವಹದ ಪಾಡೆ ಕರ್ಣನ ಖಾತಿಖೊಪ್ಪರಿಸೆ ॥ ಬವರ ಮುರಿದುದು ವಿಜಯಲಕ್ಷ್ಮಿಯ । ತವಕವಾರಿತು ಸುಭಟರಿಗೆ ಬಳಿ । ಕವನಿಪತಿಯೇ ತರುಬಿ ನಿಂದನು ಭಾನುನಂದನನ ॥ ೪೧ ॥ ಅಂಜಪೆವು ನಿಮಗರ ಸನೀವೆ । ಪಂಜರದಗಿಳಿ ವಿಪಾರಿ ಬಂದೀ । ಮಂಜರನ ಪಡಿಮುಖಕೆ ಮಲೆವುದು ನೀತಿಯೇ ನಿಮಗೆ ॥ ಭಂಜನೆಗೆ ಬಲುಹುಳ್ಳೊಡೆಯ್ಯನಿಮ । ಗಂಜವರು ಗುರುಭೀಷ್ಮರಾಪರಿ । ರಂಜಕರು ನಾವಲ್ಲೆನುತ ತಾಗಿದನು ಭೂಪತಿಯ ॥ ೪೨ ॥ ಕಲಿತನವೆ ಹೃದಯದಲಿ ಕಾರ್ಯದ । ಬಳಕೆ ಕೈಯಲಿ ಬಲುಹನಾಲಿಗೆ। ಯುಲಿದೊಡೇನಗ್ಗಳಿಕೆಯಹುದೋ ವೀರಸಿರಿಯಹುದೋ ॥ ಕಲಿಮನದ ಕೈತವಕದೆಸುಗೆಯ । ಸುಳಿ ವತೋರಾ ಸಾಕೆನುತ ನೃಪ । ತಿಲಕಬತ್ತಳಿಕೆಯಲಿ ತೆಗೆದನು ಹೂಡಿದನು ಸರಳ ॥ ೪೩ ॥ ರೂಪಿದೊ ಳ್ಳಿತು ರೇಖೆಯುಚಿತಕ । ಲಾಪವತಿಹೊಸತಾಯ್ತುಬಾಣ । ಸ್ಥಾಪನೆಗೆ ಮೆಚ್ಚಿದೆನು ಮೇಲಣ ತೂಕ ಥಾಳವನು॥ ಈಪರಿಯವೆಂದುಯೆನಹುದ್ಕೆ । ಭಾಪು ವಿದ್ಯಾಪಾತ್ರನಹುದವ । ನೀಪತಿಯಲಾವ್ರೊತು ಮಝಯೆಂದೆಚ್ಚನಾಕರ್ಣ ॥ ೪೪ ॥ ಗಂಡುಗರ್ವವನೆನ್ನೊಡನೆ ಕೋ । ದಂಡದಲಿಮೆರೆ ಸೋಕು ನಿನ್ನಯ । ಭಂಡವಿದ್ಯೆಯುಮೆರೆವೊಡಿದೆಲಾ ಕೌರವಾಸ್ಥಾನ ॥ ಬಂಡುದರಿವೆನು ಸ್ವೈರಿಸೆನುತವ। ಖಂಡಶ ರನಿಕರದಲಿ ರಿಪುವಮಾ । ರ್ತಾಂಡತನಯನನೆಚ್ಚು ಬೊಬ್ಬಿರಿದನು ಮಹೀಪಾಲ ॥ ೪೫ ॥ ಇರಿತಮುನ್ನ ವೊ ಸುಭಟರಿಗೆ ಬೊ । ಬ್ಬಿರಿತ ಮುನ್ನವೊ ನಿಮ್ಮನುಡಿಯಲಿ। ಮುರಿವಡೆದಿರ್ದ್ಕೆ ನೀವೆನುತ ನೃಪನಂಬ ಹರೆಗಡಿದು ॥ ತೆರಹುಗೊಡದೆಚ್ಚನು ನೃಪಾಸ್ತ್ರವ । ತರಿದು ಮಗುಳೆಚ್ಚನು ಶರಾಳಿಗ। ಳೆರಗಿದವು ತು ರುಗಿದವು ತೆತ್ತಿಸಿದವುರಥ್ಯಾಂಗ್ಗಳ್ಳ ॥ ೪೬ ॥ ಕಾಯಲಾಪರೆ ಕರೆದುಕೊಳ್ಳಾ । ವಾಯುತನುಜನನರ್ಜ ನನನಾನಾ । ಯಿ ಗೂಳಗ್ಗಳೆಯರಥಿರಥರೊಳು ಮಹಾರಥರ॥ ಸಾಯಲಂಜುವೊಡಿಳಹುಧನುವನು । ನೋಯಿಸೆನು ನುಡಿಸಿದೊಡೆ ಕೌರವ।ರಾಯನಾಣೆ ನೃಪಾಲ ಕೇಳೆಂದೆಚ್ಚನಾಕರ್ಣ ॥ ೪೭ ॥ ಅರಸ ಕೇ ಳ್ಕೆ ಕರ್ಣಶರವನು । ಪರಿಹರಿಸಿ ಮಗುಳೆಚ್ಚೊಡೀತನು । ಧರಣಿಪನನಿನಸೂನು ವೆಚ್ಚನು ಹಗೆಯ ರಥ ಹುಮುವ ॥ ಮರಳಿ ಶಲ್ಯನನೆಚ್ಚನಾತನ । ಹೊರೆಯವರನೆಚ್ಚನು ರಥಾಂಗವ । ಹುರುಳುಗೆಡಿಸಿ ಮಹೀ ಶನೆಚ್ಚನು ಭಾನುನಂದನನ ॥ ೪೮ ॥ ಅಕಟ ಚಂದ್ರಿಕೆ ಗೆದ್ದುದೋ ಪಾ। ವಕನ ಝಳವೀಧರ್ಮಪುತ್ರ ನ । ವಿಕಳಶರದಲಿ ಕರ್ಣನೊಂದನಲಾ ಮಹಾದೇವ॥ಅಕುಟಿಲರು ನೀವೆಮ್ಮವೊಲುಬಾ। ಧಕರೆ ಪರರಿಗೆ ಪರುಷತರಸಾ । ಯಕದ ಸವಿನೋಡಾದೊಡೆನುತೆಚ್ಚನು ಮಹೀಪತಿಯ ॥೪೯॥ ಏನಹೇಳುವೆನವನಿಪತಿ ನಿ । ನ್ನಾನೆಯಗ್ಗಳಿಕೆಯನು ಪಾಂಡವ। ಸೇನೆ ಮಗುಳಡ್ಡೈಸಿತವನೀಶನ ರಥಾಗ್ರದಲಿ ॥ ಆನೆ ಹೊಕ್ಕು ದು ಬದ್ದರದಬಲು । ಮಾನಿಸರು ಭಂಡಿಗಳನೋಡಿದ । ರಾನಿರಂತರಸರಳತಡೆದರು ತೆಕ್ಕೆವರಿಗೆಯ ಲಿ ॥ ೫೦ ॥ ಕಡಿದು ಬಿಸುಟನು ತೆಕ್ಕೆವರಿಗೆಯ। ಗಡಣವನು ಬದ್ದರದಭಂಡಿಗ। ಳಡಗಿದವು ನಿಜಸೇನೆಸ ಹಿತರುಣಾಂಬುಪೂರದಲಿ ॥ ಅಡಿಗಡಿಗೆ ಮುಕ್ಕುರಿಕಿ ತನ್ನನು । ತಡೆವರಿಪುಚತುರಂಗವಿಪಿನದ । ಕಡಿ ತಗೆದರಿತು ಮತ್ತೆ ರಾಯನ ಕೆಣಕಿದನು ಕರ್ಣ ॥ ೫೧ ॥ ಕಾವನಾರ್ಕೆ ಕರ್ಣ ಮುಳಿದರ । ಜೀವದಲಿ ಕ ಕ್ಕುಲಿತೆಯೇಕೆ ಶ। ರಾವಳಿಗಳಿವಲಾ ಕರಾಗ್ರದಲುಗ್ರಧನುವಿದೆಲಾ॥ ನಾವು ಸೂತನ ಮಕ್ಕಳೀಗಲು। ನೀ

ವಲಾ ಕ್ಷತ್ರಿಯರು ನಿಮಗೆನು । ಗಾವುದಂತರವತಿಬಳರು ನೀವೆನುತ್ತತೆಗೆದೆಚ್ಚ ॥ ೫೨ ॥ ಅರಿಯ ಶರ ಹತಿಗಳುಕಿ ಹರಿಗೆಯು । ನರಸನಭಿಮುಖಕೊಡ್ಡಿದನು ರಥ । ತುರಗವನು ಚಪ್ಪರಿಸಿ ಸಾರಥಿ ನೂಕಿದನು ರಥವ ॥ ಧರಣಿಪತಿ ಕೇಳ್ಳೆದುಶರದಲಿ ಹರಿಗೆಯನು ಮುರಿಯೆಚ್ಚು ಸೂತನ । ಶಿರವನಿಳುಹಿದನೊದೆದು ಕೊಂಡುದು ಮುಂಡ ಸಾರಥಿಯ ॥ ೫೩ ॥ ಕೆದರಿದನು ಮಾರ್ಗಣೆಯಲರಸನ । ಹೊದಿಸಿದನು ಹುಸಿಯೇಕೆ ರಾಯನ । ಹುದಿದಕವಚವ ಬಿಡಿಸಿದನು ಪೊಳಬಿದ್ದವಂಬುಗಳು ॥ ಎದೆಯ ಲೌಕಿದಬಾಣ ಬೆನ್ನಲಿ । ತುದಿಮೊನೆಯ ತೋರಿದವು ಬಲುಗಾ । ಯದಲಿ ಗಾಸಿಯುಲರಸ ಕಳವಳಿಸಿದನು ಕಂಪಿಸುತ ॥ ೫೪ ॥ ಅರೆಮರಳುವಾಲಿಗಳ ಹೆಗಲಲಿ । ಮುಂದಗೋಣಿನ ದುರಿದುಂಪನೆ । ತ್ತರದುಹಾರದ ಮೆಯ್ಯಸಡಲಿದಕ್ಕೈಯಬಿಲುಸರಳ ॥ ಅರಸನನು ಕಂಡಲ್ಲಿವರು ಹಾ । ಮರೆದ ಹಡಪದ ಛತ್ರದವರಾ । ಪ್ತರುವಿಘಾತಿಯುಲಂಬಕಿತ್ತರು ಬಹಳಶೋಕದಲಿ ॥ ೫೫ ॥ ಮಂತ್ರಜಲದಲಿ ತೊಳೆದು ಗಾಯವ। ಮಂತ್ರಿಸುತ ಕರ್ಪುರದ ಕವಳದ । ಯಂತ್ರರಕ್ಷೆಯ ಸಂತವಿಸಿ ಭೂಪತಿಯ ಮಲಗಿಸುತ ॥ ತಂತ್ರತಲ್ಲಣಿಸದಿರ ಜಿತಶರ । ತಂತ್ರನೋ ಭೂಪತಿವಿರೋಧಿಭ । ಟಾಂತ್ರಭಂಜನನೀಗಲೆಂದರು ರಾಯನಾಪ್ತಜನ ॥ ೫೬ ॥ ಸಿಕ್ಕಿದೆಯಲಾ ಸ್ವಾಮಿದ್ರೋಹಿಗ । ಳಿಕ್ಕಿ ಹೋದರೆ ಭೀಮಫಲುಗುಣ । ರೆಕ್ಕತುಳದಲಿ ಕಾದಿ ನೀಗಿಟರೈ ನಿಜೋನ್ನತಿಯ ॥ ಚುಕ್ಕಿಗಳು ನಿಮ್ಮವರು ಮಡುವಿನೊ । ಳಿಕ್ಕು ಕೌರವರಾಯನನು ಮರೆ । ಪೊಕ್ಕು ಬದುಕಾ ಧರ್ಮಸುತ ಬಾರೆಂದನಾಕರ್ಣ ॥ ೫೭ ॥ ಸಾಳುವನಕೂಡರೆಗಳಿಗೆ ಸಮಬೋಳಿಯೇ ಶಸ್ತ್ರಜ್ಞಗಾದೊಡೆ । ಸೋಲುವುದೆ ವರಶಸ್ತ್ರವಿದ್ಯಾಪೌಢಿಮದುಬೇರೆ ॥ ಆಳುತನದಭಿಮಾನವಿದು ಕರ । ವಾಳಧಾರಾಗಮನವಸರೆ । ಖೂಳರಾದಿರಿ ನೀವೆನುತ ಮೂದಲಿಸಿದನು ಕರ್ಣ ॥ ೫೮ ॥ ಕೃತಿರಹಸ್ಯವನರಿವಧರ್ಮ । ಸ್ಥಿತಿಗತಿಯನಾರೆ,ವಸ್ಥಾಂಗ । ಶ್ರುತಿಪುರಾಣದವರ್ತನಾಚಾರಾದಿಕರ್ಮದಲಿ ॥ ಚತುರಹರದರುಶನದ ತರ್ಕದ । ಮತಿನಿಧಾನವನುಪವಸ್ಥ ॥ ಡಿತರು ನಿಮಗೀಕದನಕರ್ಕಶವಿದ್ಯೆಯೇಕೆಂದ ॥ ೫೯ ॥ ವರನದಿಗಳಲಿ ಮುಳುಗಿ ಮಾಗಿನ । ಬೆರಳೊಳೂರ್ಧ್ವಶ್ವಾಸಪವನನ । ಧರಿಸಿ ಕಾಲತ್ರಯಜಪಾನುಷ್ಠಾನವಿಧಿಗಳಲಿ ॥ ಪರಮಋಷಿಮಧ್ಯದಲಿ ನೀವಾ । ಚರಿಸುವುದು ಬಿಸುಟಾಯುಧದ ನೆರೆ । ಹೊರಳಿಗಿಡಿಗಳ ಹೊದರಿನಲಿ ಮುಳುಗುವರೆ ನೀವೆಂದ ॥ ೬೦ ॥ ಕೊಲುವೆನವ್ವೆಗೆ ಕೊಟ್ಟಭಾಷೆಗೆ । ಅಳುಕಿದೆನು ನೀ ಹೋಗು ಸಮರಕೆ । ಮುಲೆವರಾದೊಡೆ ಕಳುಹು ಭೀಮಾರ್ಜುನರನಾಹವಕೆ ॥ ಉಲುಕಿದೊಡೆ ನಿನ್ನಾಣೆಯೆಂದವ । ಗಳಿಸಿ ನೃಪತಿಯ ಕೆಡೆನುಡಿದು ಪರಬಲವ ಬರಹೇಳೆನುತ ನಿಂದನು ನುಡಿಸಿ ನಿಜಧನುವ ॥ ... ... ॥೬೧॥

ಅಂತು ಸಂಧಿ ೧೧ ಕ್ಕೆ ಪದ ೬೨೭ ಕ್ಕಂ ಮಂಗಳಮಸ್ತು.

## ಹನ್ನೆರಡನೆಯ ಸಂಧಿ.

**ಸೂಚನೆ** ॥ ರಾಯದಳಪದುಳಕಾರಕೌರವ । ರಾಯಸೇನಾಸೂರೆಗಾರನ । ಜೀಯನೋ ಕಲಿಭೀಮ ಗೆಲಿದನು ಭಾನುನಂದನನ ॥

ಪದ ॥ ಏನನೆಂಬೆನು ಜೀಯ ಪಾಂಡವ । ಸೇನೆಗಾದವಿಪತ್ತು ಅರಸನ । ಹಾನಿಯನು ನಿನ್ನ

ವರ ಸುಂಮಾನದ ಸಘಾಡಿಕೆಯು ॥ ಭಾನುಸುತನೋ ಕೌರವನ ಮದ । ದಾನೆಯೋ ಕುರುಸೇನೆಸಳಿನೀ । ಭಾನು ಮೆರುಭಾಪೆಂದು ಹೊಗಳಿತು ವಂದಿಸಂದೋಹ ॥ ೧ ॥ ಇವರ ಹರುಷದಸಗೆಯಸಾಬಲ । ದವರ ಮೋರೆಯು ಹೊಗೆಯು ನಿಜಬಲ । ದವರದತಿಹೊಯ್ಲುಗಳಸಾದೆಸೆಯುವರ ಬಿಸುಸುಯ್ಲು ॥ ಇವರಮೊಗಕ್ಕೆಗ್ಗಡಿಯಸಾಬಲ । ದವರ ಸೋಲದ ನಗೆಗೆಡೆಯುಚಿ । ತ್ತವಿಸಿದ್ಧ್ಯೆ ಧೃತರಾಷ್ಟ್ರಯೆಂದನು ಸಂಜಯನು ನಗುತ ॥ ೨ ॥ ಅಳುವವನ ನಗಿಸುವುದು ನಗುವನ । ನಳಿಸುವುದು ಗೆಲಿದವನ ಸೋಲಿಸಿ । ಗೆಲಿಸುವುದು ಸೋತವನನಿದು ವಿಪರೀತವಿವಿಧಗತಿ॥ ಅಳಲದಿರು ಸುವ್ಯಾನದಲಿ ಮೆಗ್ಗಳಿಸದಿರು ನಿನ್ನವರು ನಿಮಿಷದೊ । ಳಳಲು ದೊರೆಯೊಳು ಮುಗಿವದಂದವ ನಿನ್ನ ಕೇಳೆಂದ ॥ ೩ ॥ ಲಳಿಯುಲಹರಿಯೊಳುಬ್ಬರದ ಕಳ । ಕಳದ ವಾದ್ಯದಮೇಳದಲಿ ಪರ । ಬಲವ ಹೊಕ್ಕನು ಮತ್ತೆ ಮೊದಲಿಸುತ್ತ ಮಹಿಪತಿಯು ॥ ಎಲೆಲೆ ರಾಯನರಣಕೆ ಮಾರಿಹ। ತಲೆಯಹೊತ್ತಿಹಕುನ್ನಿಗಳನೆನು ತೊಳಗೊಳಗೆ ಮಿಗೆ ಜರೆದು ಜೋಡಿಸಿ ನೂಕಿತರಿಸೇನೆ ॥ ೪ ॥ ಅಕಟ ರಾಯನ ಹರಿಬದಲಿ ಸೇ । ವಕರಿಗಾಯಿತೊ ಸೂರೆ ವೃಂದಾ । ರಕವಧೂವರ್ಗದಲಿ ತಾಳಿಸಬೇಡ ವಿಗ್ರಹಕೆ ॥ ಪಿಕಳಬಲನಿವನೇಸು ಭಾಳಾಂ । ಬಕನೊ ಬಿಲಿಭಂಜಕನೊ ಸುರಪಾ । ಲಕನೊ ಘಡಘಡಯೆನುತ ಕವಿದುದು ಕರ್ಣನಿದಿರಿನಲಿ ॥ ೫ ॥ ಅರಸ ಕೇಳಾಕ್ಷಣಕೆ ರುಧಿರದ । ಬಿರುವೊನಲ ಬಲುಗೆಸರ ನೆಣವಸೆ । ಯರೆತು ನೆಲದಲಿ ಧೂಳಿಯೆದ್ದುದುದಳದ ಪದಹತಿಗೆ॥ ಸರಕಟಿಸಿ ರಿಪುಸರ್ವದಳ ಸಂ । ವರಿಸಿ ನೂಕಿತು ಕಲ್ಪಮೇಘದ । ಬಿರುವಳೆಗೆ ಚಿಗುರೆದ್ದ ಕೊಬ್ಬಿದಕದವಿನಂದದಲಿ ॥ ೬ ॥ ನೊಂದನೇ ಧರ್ಮಜನು ಭಂಗಕೆ । ಬಂದೆವೇ ನಾವಕಟ ವಿಧಿ ಮುಳಿ। ಸಿಂದುನಮ್ಮಯಮೇಲೆ ಬಂದುದಲಾ ಮಹಾದೇವ ॥ ನೊಂದನೀಪರಿ ತನ್ನ ಕಂಗಳ । ಮುಂದೆ ನೃಪತಿ ಪಾರ್ಥನಿನ್ನೇ। ನೆಂದು ಮುನಿವನೊ ಶಿವಶಿವಾ ಯೆಂದಳಲಿದನು ಭೀಮ ॥ ೭ ॥ ಆಸ ಮುರಿವಡೆದಲ್ಲಿತೆಕ್ಕನೆ । ಬೆರಸಿದನೆ ಬವರವನೆನುತ ನ । ಮ್ಮರಸಿ ನಗಳೇ ಭಂತವದಿರ ಮಾತದೇಕೆನುತ ॥ ಅರಸ ತಾನಿನ್ನಾವಪರಿ ಕಾ । ತರಿಸುವನೊ ನಾಮುನ್ನ ಕರ್ಣನ । ಶರಹತಿಯುಲೇ ಕಳಿಯುದುಳಿದೆನೆನುತ್ತ ಚಿಂತಿಸಿದ ॥೮॥ ನರನ ಖಾತಿಗೆ ದ್ರೌಪದಿಯು ತೊ । ತ್ತಿರುಗಳುಪಹಾಸಕೆ ನೃಪಾಲನ । ಮರಣಸಾಧ್ಯಶ್ಯಪ್ರಹಾರವ್ಯಥೆಯು ಕಾಣಿಕೆಗೆ ॥ ನರಕಭಾಜನನಾದೆನೇ ಹರ । ಹರಮಹಾದೇವೆನುತ ಮಿಗೆ ತುದಿ। ವೆರಳಲಾಲಿಯುನೀರ ಮಿಡಿದಳಲಿದನು ಕಲಿಭೀಮ ॥೯॥ ಅರಸ ಕೇಳೈ ಶೋಕರಸಸಾ । ಗರದೊಳದ್ದುದು ವಡಬನೆನೆ ಕ । ಣ್ಣಾರಳಿದವು ಕುಡಿಮಿಸೆ ಕುಣಿದವು ಹೊಯ್ಲುಹೊಗೆಮಸಗೆ ॥ ಕರ ನಡುಗೆ ಮೈ ಬಿರಿಯೆ ಹುಬ್ಬುಗ । ಳುರೆ ಬಿಗಿಯೆ ಕಂಗಳಲಿ ತುಳುಗಿಡಿ । ಸುರಿಯೆ ವೀರಾವೇಶದಲಿ ಪಲ್ಲಟಿಸಿದನು ಭೀಮ ॥ ೧೦ ॥ ಧರಣಿಪನ ಸಂರಕ್ಷೆಗೈ ಸಾ । ವಿರರಥವನಿಪ್ಪತ್ತುಸ್ಸಾವಿರ । ತುರುಗವನು ಹದಿನಾರುಸಾವಿರಮತ್ತಗಜಘಟೆಯು ॥ ದೊರೆಗಳನು ಸಹದೇವಸಾತ್ಯಕಿ । ವರನಕುಲಸುತಸೋಮಪಾಂಚಾ । ಲರ ಕುಮಾರಾನೀಕವನು ಕರೆಕರೆದು ನೇಮಿಸಿದ ॥೧೧॥ ವೈರಿಕರ್ಣನ ಕಾಂತೆಯರ ದೃಗು । ವಾರಿಧಾರೆಯೊಳೆನ್ನ ಭಾರಿಯು । ಭೂರಿಕೋಪಾನಲನ ಲುಳಿಯುನು ತಗ್ಗಿಸುವೆನೆನುತ ॥ ಧಾರಿಣೀಪತಿಗೆರಗಿ ನಿಜಪರಿ । ವಾರವನು ಸುಯ್ದಾನವರಸೆನು । ತಾರುಭಟೆಯುಲಿ ಭೀಮ ಮೊಳಗಿದನಹಿತ ಮೋಹರಕೆ ॥೧೨॥ ಬೀಳಹೊಯ್ಯೊಡಯುದಲಿ ಹೊಕ್ಕಾಳು ಮರಳಲಿ ಥ

ವರ ಸುಂಮಾನದ ಸಘಾಡಿಕೆಯು ‖ ಭಾನುಸುತನೋ ಕೌರವನ ಮದ । ದಾನೆಯೋ ಕುರುಸೇನೆನಳಿ ನೀ । ಭಾನು ಮುಳುಗಿಹೋದ ಹೊಗಳಿತು ಮಂಡಿಸಿದೊ(ಹ ‖ ೧ ‖ ಇವರ ಹರುಷದಸಗಯು ಸಾಬ ಲ । ದವರ ಮೋರೆಯು ಹೊಗೆಯು ನಿಜಬಲ । ದವರದತಿಹೊಯ್ಲುಗಳಸಾದೆಸೆಯುವರ ಬಿಸುಸುಯ್ಲು ‖ ಇವರವೊಗಕ್ಕೆಗ್ಗಡಿಯುಸಾಬಲ । ದವರ ಸೋಲದ ನಗೆಗೆಡೆಯುಚಿ । ತ್ತವಿಸಿದ್ದೆ ಧೃತರಾಷ್ಟ್ರಯೆಂದ ನು ಸಂಜಯುನು ನಗುತ ‖ ೨ ‖ ಅಳುಪವನ ನಗಿಸುವುದು ನಗುವನ । ನಳಿಸುವುದು ಗೆಲಿದವನ ಸೋಲಿಸಿ । ಗೆಲಿಸುವುದು ಸೋತವನನಿದು ವಿಪರೀತವಿವಿಧಗತಿ‖ ಅಳಲದಿರು ಸುಮ್ಮಾನದಲಿ ಹಿಗ್ಗಳಿಸ ದಿರು ನಿನ್ನವರು ನಿಮಿಷದೊ । ಳಳಲು ದೊರೆಯೊಳು ಮುಗಿದದಂದವ ನಿನ್ನು ಕೇಳೆಂದ ‖ ೩ ‖ ಲಳಿಯುಲರ್ಹಯೊಳುಬ್ಬರದ ಕಳ । ಕಳದ ವಾದ್ಯದಮೇಳದಲಿ ಪರ । ಬಲವ ಹೊಕ್ಕನು ಮತ್ತೆ ಮೊದಲಿಸುತ್ತ ಮಹಿಪತಿಯು ‖ ಎಲೆಲೆ ರಾಯನರಣಕೆ ಮಾರಿಹ। ತಲೆಯಹೊತ್ತಿಹಕುನ್ನಿಗಳಸೆನು ತೊಳಗೊಳಗೆ ಮಿಗೆ ಜರೆದು ಜೋಡಿಸಿ ನೂಕಿತರಿಸೇನೆ ‖ ೪ ‖ ಅಕಟ ರಾಯನ ಹರಿಬದಲಿ ಸೇ । ವಕರಿಗಾಯಿತೊ ಸೂರೆ ವ್ಯಂದಾ । ರಕವಧೂವರ್ಗದಲಿ ತಾಳಿಸಬೇಡ ವಿಗ್ರಹಕೆ ‖ ಪಿಕಳಬಲನಿವನೇ ಸು ಭಾಳಾಂ । ಬಕನೊ ಬಿಲಿಭಂಜಕನೊ ಸುರಪಾ । ಲಕನೊ ಫಡಫಡಯೆನುತ ಕವಿದುದು ಕರ್ಣ ನಿದಿರಿನಲಿ ‖ ೫ ‖ ಅರಸ ಕೇಳಾಕ್ಷಣಕೆ ರುಧಿರದ । ಬಿರುವೊನಲ ಬಲುಗೆಸರ ನಣವಸೆ । ಯುರೆತು ನೆ ಲದಲಿ ಧೂಳಿಯೆದ್ದುದುದಳದ ಪದಹತಿಗೆ‖ ಸರಕಟಿಸಿ ರಿಪುಸರ್ವದಳ ಸಂ । ವುಸಿ ನೂಕಿತು ಕಲ್ಪಮೇ ಘುದ । ಬಿರುವಳೆಗೆ ಚಿಗುರೆದ್ದ ಕೊಬ್ಬಿದಕಡವಿನಂದದಲಿ ‖ ೬ ‖ ನೊಂದನೇ ಧರ್ಮಜನು ಭಂಗಕೆ । ಬಂದೆವೇ ಸಾವಕಟ ವಿಧಿ ಮುಳಿ। ಸಿಂದುನಮ್ಮಯಮೇಲೆ ಬಂದುದಲಾ ಮಹಾದೇವ ‖ ನೊಂದನೀಪ ಪರಿ ತನ್ನ ಕರಿಸಜ । ಮುಂದೆ ನಃ ಪತಿ ಪಾರ್ಥನಿನ್ನೇ। ನೆಂದು ಮುನಿಪನೊ ಶಿವಶಿವಾ ಯೆಂದಳಲಿದನು ಭೀಮು ‖ ೭ ‖ ಆಸ ಮುರಿವಡೆದಲ್ಲಿತೆಕ್ಕನೆ । ಬೆರಸಿದನೆ ಬವರವಸೆನುತ ನ । ವ್ಮರಸಿ ನಗಳೇ ಭಂತ ವದಿರ ಮಾತದೇಕೆನುತ ‖ ಅರಸ ತಾನಿನ್ನಾವಪರಿ ಕಾ । ತರಿಸುವನೊ ಸಾಮುನ್ನಕರ್ಣನ । ಶರಪ ತಿಯುಲೀ ಕಳಿಯುದುಳಿದೆನೆನುತ್ತ ಚಿಂತಿಸಿದ ‖೮‖ ನರನ ಖಾತಿಗೆ ದ್ರೌಪದಿಯು ತೊ । ತ್ತಿರುಗಳುಪ ಹಾಸಕೆ ನೃಪಾಲನ । ಮರಣಸಾದೃಶ್ಯಪ್ರಹಾರವ್ಯಥೆಯು ಕಾಣಿಕೆಗೆ ‖ ನರಕಭಾಜನಸಾದೆನೇ ಹರ । ಪ ರಮಹಾದೇವೆನುತ ಮಿಗೆ ತುದಿ। ವೆರಳಲಾಲಿಯುನೀರ ಮಿಡಿದಳಲಿದನು ಕಲಿಭೀಮು ‖೯‖ ಅರಸ ಕೇಳ್ಳೆ ಶೋಕರಸಸಾ । ಗರದೊಳದ್ದುದು ವಡಬನೆನೆ ಕ । ಣ್ಣಾರಳಿದವು ಕುಡಿಮಿಸೆ ಕುಣಿದವು ಹೊಯ್ಲುಹೊ ಗೆಮಸಗೆ ‖ ಕರ ನಡುಗೆ ಮೈ ಬಿರಿಯೆ ಹುಬ್ಬುಗ । ಳುರೆ ಬಿಗಿಯೆ ಕಂಗಳಲಿ ತುಳುಗಿಡಿ । ಸುರಿ ಯೆ ವೀರಾವೇಶದಲಿ ಪಲ್ಲಟಿಸಿದನು ಭೀಮು ‖ ೧೦ ‖ ಧರಣಿಪನ ಸಂರಕೆಗೈ ಸಾ । ವಿರರಥವನಿಪ್ಪತ್ತು ಸ್ಸಾವಿರ । ತುರುಗವನು ಹದಿನಾರುಸಾವಿರಮತ್ತಗಜಘಟೆಯು ‖ ದೊರೆಗಳನು ಸಹದೇವಸಾತ್ಯಕಿ । ವ ರನಕುಲಸುತಸೋಮಪಾಂಚಾ । ಲರ ಕುಮಾರಾನೀಕವನು ಕರೆಕರೆದು ನೇಮಿಸಿದ ‖೧೧‖ ವೈರಿಕರ್ಣ ನ ಕಾಂತೆಯುರ ದೃಗು । ವಾರಿಧಾರೆಯೊಳೆನ್ನ ಭಾರಿಯು । ಭೂರಿಕೋಪಾನಲನ ಉಳಿಯುನು ತಗ್ಗಿ ಸುವೆನೆನುತ ‖ ಧಾರಿಣೀಪತಿಗೆರಗಿ ನಿಜಪರಿ । ವಾರವನು ಸುಯ್ದಾನವರಸೆನು । ತಾರುಭಟೆಯಲಿ ಭೀ ಮ ಮೊಳಗಿದನಹಿತ ಮೋಹರಕೆ ‖೧೨‖ ಬೀಳಹೊಯ್ಯೊಡಯುದಲಿ ಹೊಕ್ಕಾಳು ಮರಳಲಿ ಥ

ರ್ಮಪುತ್ರನ । ಮೇಲುನೋಟದೊಳಿರಲಿ ನೋಡಲಿ ನಮ್ಮ ನಾಟಕವ ॥ ಆಳ ನಿಲಿಸೋ ನಿಲಿಸೆನುತ ಸಂ । ಪಾಳನೋದ್ಧತಚಾಪಸರಳಕ । ರಾಳವೌರ್ವೀನಾದಚಾಪಲನಾದನಾಭೀಮ ॥ ೧೩ ॥ ಪವನಸುತನಿಂಗಿತವ ಮನದಂ । ಗವಣೆಯನು ಮಹಾದ್ರೇಶ ಕಂಡನು । ರವಿಸುತನ ನೋಡಿದನು ಮುಖದಲಿ ಮುಗುದು ಶೋಧಿದನು ॥ ಇವನಬಲ್ಲಿ ಭೀಮನೋ ಭೈ । ರವನೊ ಭರ್ಗನೊ ಮನುಜಕಂಠೀ । ರವನೊ ಕಾಲಾಂತಕನೊ ಕೋಲಾಹಲವ ನೋಡೆಂದ ॥೧೪॥ ಉರಿಯ ಚೂಣಿಯಲುಸುರಹೊಗೆಯು । ಬ್ಬರಿಸಿದೊಡೆ ಕೆಂಪೇರಿದಕ್ಷಿಯು । ಎರಡು ಕೋಡಿಯಲೊಗುತಲಿದೆ ಕಿಡಿಗಳ ಸವಿಸಾರಚಯು ॥ ಸ್ಫುರದಹಂಕಾರಪ್ರತಾಪ । ಜ್ವರದಿ ನ್ಮೈ ಕಾಹೇರುತಿದೆ ನಿ । ಬ್ಬರದ ಬರವಿಂದಿನದು ನೀ ಕಲಿಕರ್ಣ ನೋಡೆಂದ ॥ ೧೫ ॥ ಕಾಯಲಳವೇ ಕರ್ಣಬರಿಯನ । ವಾಯೆಯಲಿ ಫಲವಿಲ್ಲ ದೇಹದ। ಜೀಯಕಿದು ಹೊತ್ತಲ್ಲ ಸಾಧನವಿದಕೆ ಬೇರುಂಟೆ ॥ ಪಾಯಲಡಸಿದಬಡತನಕ್ಕೆ ಪ । ಲಾಯನವೆ ನಿಕ್ಷೇಪವಿಧಿ ಬಯ । ಲಾಯಸವು ನಮಗೇತಕೆಂದನು ಶಲ್ಯನಿನಸುತನ ॥೧೬॥ ನೀ ಮರುಳಲ್ತೆ ಶಲ್ಯ ಫಡೆ ಸು । ತ್ರಾಮನೇ ಸಮವರ್ತಿಯೇ ಜಿತ। ಕಾಮನೇ ಪವನಜನವ್ಪರಬೆಗೆ ಬೇಡನಾದೆಯಲಾ ॥ ತಾಮಸನ ತಡೆಗಡಿದು ಭೂತ। ಸ್ತೋಮಕುಣಬಡಿಸುವೆನು ಜಯಸಂ। ಗ್ರಾಮರುದ್ರನು ಕರ್ಣ ತಾನೆಂದರಿಯೆ ನೀನೆಂದ ॥೧೭॥ ಅಕಟ ಬಲುಗೈಯಹೆ ಕಣಾ ಸಹ । ಸಿಕನು ನೀನ್ಪೈ ಯಿದಕೆ ಯಿಂದಿನ । ವಿಕಟಕೋಪಾಟೋಪ ಭೀಮನದಂಡಿಯದು ಬೇರೆ ॥ ತ್ರಿಕಟುಕದ ಕಜ್ಜಾಯವದು ಬಾ । ಲಕರ ಸೊಗಸೇ ಕರ್ಣ ಕೇಳ್ಕೌ । ತುಕದ ನುಡಿಯೇ ನಿನ್ನವೇಲಾಹೆಂದನಾಶಲ್ಯ ॥ ನುಡಿನುಡಿಗೆ ಭಂಗಿಸುವೆನು ನಿಂನೊಡ । ನೊಡನೆ ತಲೆಯೊತ್ತುವೆನೊ ನೀಯೆ । ನ್ನೊಡನೆ ತಲೆಯೆತ್ತುವೆನೊ ತಾ ಕೈತವದ ಕದನದಲಿ ॥ ಪಡಿಮುಖದಲೌಕಿದವಿರೋಧಿಯ । ಕಡುಹ ತಪ್ಪಿಸಿ ನಿನ್ನಮೆಚ್ಚಿಸಿ । ಕೊಡುವೆ ಇನ್ನರಗಳಿಗೆ ಸ್ಪೈರಿಸು ಯೆಂದನಾಕರ್ಣ ॥ ೧೮ ॥ ಇತ್ತಲೀಮಾತಿಂದ ಮುನ್ನವಿ । ಯತ್ತಲವನಳ್ಳಿರಿವಸಿಂಧದ। ಸುತ್ತ ರ್ರುಲ್ಲರಿಚವುರಿಗಳ ಘುಲ್ಲಣೆಯ ಘೆಂಡೆಗಳಾ ॥ ಹೊತ್ತಕೋಪದ ಹೊದರುಮುಖದೌ । ಡೊತ್ತುವಧರದ ವೈರಿಸೇನೆಯ । ಕುತ್ತಿ ತೇಗುವಮನದ ಮಾರುತಿ ಮೊಳಗಿದನು ಮುಂದೆ ॥ ೨೦ ॥ ಎಲೆಲೆಭೀಮನೊ ಶಿವಾಶಿವಾ ದಳ । ದುಳವ ಹಾಯ್ದನೊ ಧಿಟ್ಟರಾವೆಡೆ । ನಿಲಿಸಲಾಪವರಿಲ್ಲ ಲಾ ಕುರುರಾಯನಾನೆಗಳು ॥ ಕಳಕಳದ ಕಾಲಾಟ ರಾಯನ । ದಳಕೆದುರ್ಲಭವೆಂದೆನುತ ಮುಂ । ಕೊಳಿಸಿ ಭೀಮನ ತುಡುಕಿದುದು ರವಿಸುತನ ಪರಿವಾರ ॥ ೨೧ ॥ ನುಸಿಗಳಳವಿಗೆ ತಟ್ಟಿಯವ ತೋ । ರಿಸಿದರೋ ಬಲುಹಾಯ್ಸು ರಾಯನ । ಗಸಣಿಗಕಟ ವಿಶೋಕ ನೋಡ್ಯೆ ಪ್ರೂತು ವಿಧಿಯೆನುತ ॥ ಮಸಗಿ ಮೊಗೆದನು ಹೊಗುವಸೇನಾ । ಪ್ರಸರವನು ಕುಡಿತೆಯಲಿ ಚೆಲ್ಲಿದ । ನಸಮಬಲವನ ಹೊಯ್ದು ಕೊಂದನು ನೆಲನನಳವಿಯಲಿ ॥ ೨೨ ॥ ಎಲವೊ ಸೂತನ ಮಗನೆ ರಾಯನ । ಬಳಲಿಸಿದೆಲಾ ನಿನ್ನ ರಕುತವ । ತುಳುಕುವೆಸ್ಸು ಹಿಂದಿಕ್ಕಿಕೊಂಬನ ತೋರುತೋರೆನುತ ॥ ಬಲುಸರಿಯ ನಾರಾಚಲದಲಿ ಕ । ತ್ತಲಿಸೆ ದೆಸೆ ಕೈಚಳಕದೆಸುಗೆಯ । ಹೊಳಹ ಭೀಮನ ಕೆಣಕಿದಳತೆಯನರಿಯೆನಾನೆಂದ ॥ ೨೩ ॥ ಏನ ಹೇಳುವೆನವನಿಪತಿ ರವಿ । ಸೂನುವೇ ದುರ್ಬಲನೆ ಭೀಮನ। ನೂನಶರಸಂಘಾತವನು ಖಂಡಿಸಿದ ನಾಕ್ಷಣಕೆ ॥ ದೀನನೇ ಶರಣಿಕರದಲಿ ಪವ । ಮಾನಜನೊ ಪಾವಕನೊ ಮೇಣ್ಣುದ್ರ । ವೈನತೇಯನೊ ಭೀಮನೋ ನಾವರಿಯೆವಿದ

ಪೆರ ಸುಂಮಾನದ ಸಘಾಡಿಕೆಯು ‖ ಭಾನುಸುತನೋ ಕೌರವನ್ನ ಮದ । ದಾನೆಯೋ ಕುರುಸೇನೆನಳಿ ನೀ । ಭಾನು ಮುಳುಗಿಹನೆಂದು ಹೊಗಳಿತು ವಂದಿಸಂದೋಹ ‖ ೧ ‖ ಇವರ ಹರುಷದನಗೆಯುಸಾಬಲ । ದವರ ಮೋರೆಯು ಹೊಗೆಯು ನಿಜಬಲ । ದವರದತಿಹೊಯ್ಲುಗಳಸಾದೆಸೆಯವರ ಬಿಸುಸುಯ್ಲು ‖ ಇವರವೊಗಕ್ಕೆಗ್ಗುಡಿಯುಸಾಬಲ । ದವರ ಸೋಲದ ನಗೆಗೆಡೆಯುಚಿ । ತ್ತವಿಸಿದೈ ಧೃತರಾಷ್ಟ್ರಯೆಂದ ನು ಸಂಜಯನು ನಗುತ ‖ ೨ ‖ ಅಳುವವನ ನಗಿಸುವುದು ನಗುವನ । ನಳಿಸುವುದು ಗೆಲಿದವನ ಸೋಲಿಸಿ । ಗೆಲಿಸುವುದು ಸೋತವನನಿದು ವಿಪರೀತವಿವಿಧಗತಿ‖ ಅಳಲದಿರು ಸುಮ್ಮಾನದಲಿ ಮೆಗ್ಗಳಿಸ ದಿರು ನಿನ್ನವರು ನಿಮಿಷದೊ । ಳಳಲು ದೊರೆಯೊಳು ಮುಗಿದದಂದವ ನಿನ್ನು ಕೇಳೆಂದ ‖ ೩ ‖ ಲಳಿಯುಲಹರಿಯೊಳುಬ್ಬರದ ಕಳ । ಕಳದ ವಾದ್ಯದಮೇಳದಲಿ ಪರ । ಬಲವ ಹೊಕ್ಕನು ಮತ್ತೆ ಮೊದಲಿಸುತ್ತ ಮಹಿಪತಿಯು ‖ ಎಲೆಲೆ ರಾಯನರಣಕೆ ಮಾರಿಹ। ತಲೆಯಹೊತ್ತಿಹಕುನ್ನಿಗಳನೆನು ತೊಳಗೊಳಗೆ ಮಿಗೆ ಜರೆದು ಜೋಡಿಸಿ ನೂಕಿತರಿಸೇನೆ ‖ ೪ ‖ ಅಕಟ ರಾಯನ ಹರಿಬದಲಿ ಸೇ । ವಕರಿಗಾಯಿತೊ ಸೂರೆ ವ್ಯಂದಾ । ರಕವಧೂವರ್ಗದಲಿ ತಾಳಿಸಬೇಡ ವಿಗ್ರಹಕೆ ‖ ವಿಕಳಬಲನಿವನೇನು ಭಾಳಾಂ । ಬಕನೊ ಬಲಿಭಂಜಕನೊ ಸುರಪಾ । ಲಕನೊ ಫಡಫಡಯೆನುತ ಕವಿದುದು ಕರ್ಣನಿದಿರಿನಲಿ ‖ ೫ ‖ ಅರಸ ಕೇಳಾಕ್ಷಣಕೆ ರುಧಿರದ । ಬಿರುವೊನಲ ಬಲುಗೆಸರ ನೆಣವಸೆ । ಯರೆತು ನೆಲದಲಿ ಧೂಳಿಯೆದ್ದುದುದಳದ ಪದಹತಿಗೆ‖ ಸರಕಟಿಸಿ ರಿಪುಸರ್ವದಳ ಸಂ । ವರಿಸಿ ನೂಕಿತು ಕಲ್ಪಮೇಘದ । ಬಿರುವಳೆಗೆ ಚಿಗುರೆದ್ದ ಕೊಬ್ಬಿದಕಡವಿನಂದದಲಿ ‖ ೬ ‖ ನೊಂದನೇ ಧರ್ಮಜನು ಭಂಗಕೆ । ಬಂದೆವೇ ನಾವಕಟ ವಿಧಿ ಮುಳಿ। ಸಿಂದುನಮ್ಮಯಮೇಲೆ ಬಂದುದಲಾ ಮಹಾದೇವ ‖ ನೊಂದನೀಪರಿ ತನ್ನ ಕಂಸಜ । ಮುಂದೆ ನರಪತಿ ಪಾರ್ಥನಿನ್ನೇ। ನೆಂದು ಮುನಿವನೊ ಶಿವಶಿವಾಯೆಂದಳಲಿದನು ಭೀಮ ‖ ೭ ‖ ಆಸ ಮುರಿವಡೆದಲ್ಲಿತೆಕ್ಕನೆ । ಬೆರಸಿದನೆ ಬವರವನೆನುತ ನ । ಮ್ಮರಸಿ ನಗಳೇ ಭಂಡವದಿರ ಮಾತದೇಕೆನುತ ‖ ಅರಸ ತಾನಿನ್ನಾವಪರಿ ಕಾ । ತರಿಸುವನೊ ನಾಮುನ್ನ ಕರ್ಣನ । ಶರಹತಿಯುಲೀ ಕಳಿಯದುಳಿದೆನೆನುತ್ತ ಚಿಂತಿಸಿದ ‖೮‖ ನರನ ಖಾತಿಗೆ ದ್ರೌಪದಿಯು ತೊ । ತ್ತಿರುಗಳುಪಹಾಸಕೆ ನೃಪಾಲನ । ಮರಣಸಾಧ್ಯಶ್ಯೆಪ್ರಹಾರವ್ಯಥೆಯು ಕಾಣಿಕೆಗೆ ‖ ನರಕಭಾಜನನಾದೆನೇ ಹರ । ಹರಮಹಾದೇವೆನುತ ಮಿಗೆ ತುದಿ। ವೆರಳಲಾಲಿಯನೀರ ಮಿಡಿದಳಲಿದನು ಕಲಿಭೀಮ ‖೯‖ ಅರಸ ಕೇಳ್ಕೆ ಶೋಕರಸಸಾ । ಗರದೊಳದ್ದುದು ವಡಬನೆನೆ ಕ । ಣ್ಣಾರಳಿದವು ಕುಡಿಮಿಾಸೆ ಕುಣಿದವು ಹೊಯ್ಲುಹೊಗೆಮಸಗೆ ‖ ಕರ ನಡುಗೆ ಮೈ ಬಿರಿಯೆ ಹುಬ್ಬುಗ । ಳುರೆ ಬಿಗಿಯೆ ಕಂಗಳಲಿ ತುಳುಗಿಡಿ । ಸುರಿಯೆ ವೀರಾವೇಶದಲಿ ಪಲ್ಲಟಿಸಿದನು ಭೀಮ ‖ ೧೦ ‖ ಧರಣಿಪನ ಸಂರಕೆಗೈ ಸಾ । ವಿರರಥವನಿಪ್ಪತ್ತುಸಾವಿರ । ತುರುಗವನು ಹದಿನಾರುಸಾವಿರಮತ್ತಗಜಘಟೆಯು ‖ ದೊರೆಗಳನು ಸಹದೇವಸಾತ್ಯಕಿ । ವರನಕುಲಸುತಸೋಮಪಾಂಚಾ । ಲರ ಕುಮಾರಾನೀಕವನು ಕರೆಕರೆದು ನೇಮಿಸಿದ ‖೧೧‖ ವೈರಿಕರ್ಣನ ಕಾಂತೆಯರ ದೃಗು । ವಾರಿಧಾರೆಯೊಳೆನ್ನ ಭಾರಿಯು । ಭೂರಿಕೋಪಾನಲನ ಉಳಿಯನು ತಗ್ಗಿಸುವೆನೆನುತ ‖ ಧಾರಿಣೀಪತಿಗೆರಗಿ ನಿಜಪರಿ । ವಾರವನು ಸುಯ್ದಾನವರಸೆನು । ತಾರುಭಟೆಯಲಿ ಭೀಮ ಮೊಳಗಿದನಹಿತ ಮೋಹರಕೆ ‖೧೨‖ ಬೀಳಹೊಯ್ಪೊಡಯದಲಿ ಹೊಕ್ಕಾಳು ಮರಳಲಿ ಧ

ರ್ಮಪುತ್ರನ । ಮೇಲುನೋಟದೊಳಿರಲಿ ನೋಡಲಿ ನಮ್ಮ ನಾಟಕವ ॥ ಆಳ ನಿಲಿಸೋ ನಿಲಿಸೆನುತ ಸಂ । ಪಾಳನೋದ್ಧತಚಾಪಸರಳಕ । ರಾಳವಮೌರ್ವೀನಾದಚಾಪಲನಾದನಾಭೀಮ ॥ ೧೩ ॥ ಪವನಸು ತನಿಂಗಿತವ ಮನದಂ । ಗವಣೆಯನು ಮದ್ರೇಶ ಕಂಡನು । ರವಿಸುತನ ನೋಡಿದನು ಮುಖದಲಿ ಮುರಿದು ತೋರಿದನು ॥ ಇವನಬಲ್ಲೈ ಭೀಮನೋ ಭೈ । ರವನೊ ಭರ್ಗನೊ ಮನುಜಕಂಠೀ । ರ ವನೊ ಕಾಲಾಂತಕನೊ ಕೋಲಾಹಲವ ನೋಡೆಂದ ॥೧೪॥ ಉರಿಯ ಚೂಣಿಯಲಸುರಹೊಗೆಯು । ಬ್ಬರಿಸಿದೊಡೆ ಕೆಂಪೇರಿದಕ್ಷಿಯ । ಎರಡು ಕೋಡಿಯಲೊಗುತಲಿದೆ ಕಿಡಿಗಳ ಸಮಾರಚಯ ॥ ಸ್ಫುರದ ಹಂಕಾರಪ್ರತಾಪ । ಜ್ವರದಿ ಮೈ ಕಾಹೇರುತಿದೆ ನಿ । ಬ್ಬರದ ಬರವಿಂದಿನದು ನೀ ಕಲಿಕರ್ಣ ನೋಡೆಂ ದ ॥ ೧೫ ॥ ಕಾಯಲಳವೇ ಕರ್ಣಬರಿಯನ । ವಾಯೆಯಲಿ ಫಲವಿಲ್ಲ ದೇಹದ। ಬೀಯಕಿದು ಹೊತ್ತಲ್ಲ ಸಾಧನವಿದಕೆ ಬೇರುಂಟೆ ॥ ಪಾಯಲಡಸಿದಬಡತನಕ್ಕೆ ಪ । ಲಾಯನವೆ ನಿಕ್ಷೇಪವಿಧಿ ಬಯ । ಲಾಯಸವು ನಮಗೇತಕೆಂದನು ಶಲ್ಯನಿನಸುತನ ॥೧೬॥ ನೀ ಮರುಳಲೈ ಶಲ್ಯ ಫಡೆ ಸು । ತ್ರಾಮನೇ ಸಮವರ್ತಿಯೋ ಜಿತ। ಕಾಮನೇ ಪವನಜನವುರುಬೆಗೆ ಬೇಡನಾದೆಯಲಾ ॥ ತಾಮಸನ ತಡೆಗಡಿದು ಭೂತ। ಸ್ತೋಮಕುಣಬಡಿಸುವೆನು ಜಯಸಂ। ಗ್ರಾಮರುದ್ರನು ಕರ್ಣ ತಾನೆಂದರಿಯೆ ನೀನೆಂದ ॥೧೭॥ ಅಕಟ ಬಲುಗೈಯಹೆ ಕರ್ಣಾ ಸಹ । ಸಿಕನು ನೀನೈ ಯಿದಕೆ ಯಿಂದಿನ । ವಿಕಟಕೋಪಾಟೋಪ ಭೀಮನದಂಡಿಯದು ಬೇರೆ ॥ ತ್ರಿಕಟುಕದ ಕಷಾಯವದು ಬಾ । ಲಕರ ಸೊಗಸೇ ಕರ್ಣ ಕೇಳೈ । ತುಕದ ನುಡಿಯೋ ನಿನ್ನ ಮೇಲಾಣೆಂದನಾಶಲ್ಯ ॥ ನುಡಿನುಡಿಗೆ ಭಂಗಿಸುವೆನು ನಿಂನೊಡ । ನೊಡನೆ ತಲೆ ಯೊತ್ತುವೆನೊ ನೀಯೆ । ನ್ನೊಡನೆ ತಲೆಯೆತ್ತುವೆನೊ ತಾ ಕೈತವದ ಕದನದಲಿ ॥ ಪಡಿಮುಖದಲೌಕಿದವಿರೋಧಿಯ । ಕಡುಹ ತಪ್ಪಿಸಿ ನಿನ್ನ ಮೆಚ್ಚಿಸಿ । ಕೊಡುವೆ ಇನ್ನರಗಳಿಗೆ ಸೈರಿಸು ಯೆಂದನಾಕರ್ಣ ॥ ೧೮ ॥ ಇತ್ತಲೀಮಾತಿಂದ ಮುನ್ನವಿ । ಯತ್ತಳವನಳ್ಳಿರಿವಸಿಂಧದ। ಸುತ್ತ ರ್ಥೆಲ್ಲರಿಚವುರಿಗಳ ಘಲ್ಲಣೆಯ ಘುಂಡೆಗಳಾ ॥ ಹೊತ್ತಕೋಪದ ಹೊದರುಮುಖದೌ । ಡೊತ್ತುವಧರದ ವೈರಿಸೇನೆಯ । ಕುತ್ತಿ ತೇಗುವಮನದ ಮಾರುತಿ ಮೊಳಗಿದನು ಮುಂದೆ ॥ ೨೦ ॥ ಎಲೆಲೆಭೀಮನೊ ಶಿವಾಶಿವಾ ದಳ । ದುಳವ ಹಾಯ್ದನೊ ಧಿಟ್ಟರಾವೆಡೆ । ನಿಲಿಸಲಾಪವರಿಲ್ಲ ಲಾ ಕುರುರಾಯನಾನೆಗಳು ॥ ಕಳಕಳದ ಕಾಲಾಟ ರಾಯನ । ದಳಕೆದುರ್ಲಭವೆಂದೆನುತ ಮುಂ । ಕೊಳಿಸಿ ಭೀಮನ ತುಡುಕಿದುದು ರವಿಸುತನ ಪರಿವಾರ ॥ ೨೧ ॥ ನುಸಿಗಳಳವಿಗೆ ತಟ್ಟಿಯವ ತೋ । ರಿಸಿದರೋ ಬಲುಹಾಯ್ತು ರಾಯನ । ಗಸಣಿಗಕಟ ವಿಶೋಕ ನೋಡೈ ಘೂತು ವಿಧಿಯೆನುತ ॥ ಮಸಗಿ ಮೊಗೆದನು ಹೊಗುವಸೇನಾ । ಪ್ರಸರವನು ಕುಡಿತೆಯಲಿ ಚೆಲ್ಲಿದ । ನಸಮಬಲವನ ಹೊಯ್ದು ಕೊಂದನು ನೆಲನನಳವಿಯಲಿ ॥ ೨೨ ॥ ಎಲವೊ ಸೂತನ ಮಗನೆ ರಾಯನ । ಬಳಲಿಸಿದೆಲಾ ನಿನ್ನ ರಕುತವ । ತುಳುಕುವೆಳ ಹಿಂದಿಕ್ಕಿಕೊಂಬನ ತೋರುತೋರೆನುತ ॥ ಬಲುಸರಿಯ ನಾರಾಚಲದಲಿ ಕ । ತ್ತಲಿಸೆ ದೆಸೆ ಕೈಚಳಕದ ಸುಗೆಯ । ಹೊಳಹ ಭೀಮನ ಕೆಣಕಿದಳತೆಯನರಿಯೆನಾನೆಂದ ॥ ೨೩ ॥ ಏನ ಹೇಳುವೆನವನಿಪತಿ ರವಿ । ಸೂನುವೇ ದುರ್ಬಲನೆ ಭೀಮನ। ನೂನಶರಸಂಘಾತವನು ಖಂಡಿಸಿದ ನಾಕ್ಷಣಕೆ॥ ದೀನನೇ ಶರಣಿ ಕರದಲಿ ಪವ । ಮಾನಜನೊ ಪಾವಕನೊ ಮೇಣ್ಸು ರ । ವೈನತೇಯನೊ ಭೀಮನೋ ನಾವರಿಯೆವಿದ

ನೆಂದ ॥ ೨೪ ॥ ಅರಸ ಕೇಳಾಶ್ಚರ್ಯವನು ಟಿ । ಬ್ಬರಿಸುವನೆ ಕಲಿಭೀಮನುಬ್ಬಟಿ । ಅರಿಗಳಾಹವದಿಟ್ಟರಾದೊಡೆ ಘಾತುಗೆಡುವವನೆ॥ ಶರಧನುವ ಹಾಯ್ಕಿದನು ಥೊಪ್ಪನೆ । ಧರಣಿಯಲಿ ಧುಂಮಿಕ್ಕಿ ಖತುಗ ವೆತಡುಕಿ ಬೆರಸಿದನಳವಿಯಲಿ ಕುರುಸೇನೆ ಕಳವಳಿಸೆ ॥ ೨೫ ॥ ಹೊಡೆದು ತಲೆಯನು ಹಗೆಯ ರಕ್ತವ । ಕುಡಿವೆನಲ್ಲದೆ ಯವನಿಪಾಲನ । ಕೆಡೆನುಡಿದ ನಾಲಗೆಯ ಕೀಳುವೆನೆನುತ ಖತಿಗೊಂಡು ॥ ಸಿಡಿಲ ಕಿಡಿಗಳ ಕೋಪಶಿಖಿಯು। ಗ್ರಡದ ಮಾರುತಿ ಹೊಯ್ದು ಕರ್ಣನ। ಕೆಡಹಿದನು ಮುರಿಯೊದೆದನೆದೆಯನು ಹಾಯ್ದು ಮುಂದಲೆಯ ॥ ೨೬ ॥ ಬಾಯಬಿಟ್ಟುದು ಸೇನೆ ಕೌರವ । ರಾಯನಾನೆಡೆ ದಳಕೆ ಬಲುಗ್ಯೆ।ನಾಯಕರು ನೃಪಗುರುಸುತರು ಕೈಗೊಟ್ಟರೋ ಹಗೆಗೆ॥ವಾಯುಜನ ಕೈಗೊಳಸಿನಲಿ ಕುರುರಾಯರಾಜ್ಯಶ್ರೀಯ ಮುಂದಲೆ। ಹೋಯಿತೋ ಹಾಯೆನುತ ಮರುಗಿತು ಸಕಲ ಪರಿವಾರ ॥೨೭॥ ಥಟ್ಟುಗೆಡಹಿದೆ ಕರ್ಣನನು ಕೈ । ಮುಟ್ಟದಿರು ಹೆರಸಾರುಪಾರ್ಥನು । ತೊಟ್ಟಭಾಷೆಯ ಮರೆದಲಾ ಕೈತಪ್ಪ ಮಾಡದಿರು ॥ ಬಿಟ್ಟು ತೊಲೆಗೆಲೆಭೀಮ ಭೀತಿಯ ಬಿಟ್ಟು ಬೆರಸಿದೆ ಸಾಕು ಹರಿಬಕೆ । ಘಟ್ಟಿಸಿದೆಗೆಲುವಾಯ್ತು ನೀ ಮರಳೆಂದನಾಶಲ್ಯ ॥ ೨೮ ॥ ದುರುಳನಿವನಿಂದಣ್ಣದೇವನ । ಹುರುಳುಗೆಡೆ ನುಡಿದನು ವಿರೋಧಿಯ । ಶರಪತಿಗೆ ಬೆಂತಾಗನಿವನ ಮರುಕ್ಷಿಶರಪತಿಗೆ ॥ ಅರಸ ಬಳಲಿವನೇನವಾಡುವೆ । ದುರುಳಕರ್ಣನ ನಾಲಗೆಯ ಹೆಡ । ಹರೆಸಲಾಗವೆನು ಮಾವ ಸೈರಿಫುದೆಂದನಾಭೀಮ ॥೨೯॥ ಸಾಕು ಹೆರದೆಗೆ ಗಾಯವಡೆದವಿ । ವೇಕಿ ಮೈ ಮರೆವಿರ್ದಹೊತ್ತಿದು । ನೀಕುತಾರನಲಾ ಕಿರೀಟಿಯ ಭಾಷಿತದ್ರುಮಕೆ ॥ ಲೋಕಮಾನ್ಯನು ಕರ್ಣ ಕುರುಬಲ । ಪಾಕನಾಳನು ಭಂಗವಡೆವುದೆ । ಸಾಕು ಸಾರೆಂದೆನುತ ಭೀಮನ ನೂಕಿದನು ಸಲ್ಯ ॥ ೩೦ ॥ ರಥಕೆ ಮರಳಿದನಾತನೀವರ । ವ್ಯಥೆಯನೇನೆಂಬೆನು ಸುಯೋಧನ । ರಥಿಗಳುಬ್ಬಟೆ ಗರ್ವವಿಕ್ಕಿತು ಸೈನ್ಯಜಲಧಿಯಲಿ ॥ ರಥದೊಳಗೆ ಮಾದ್ರೇಶನೀಸಮರಥನ ಸಂತೈಸಿದನು ಕವಳ । ಪ್ರತತಿಮಂತ್ರೌಷಧಿಗಳಲಿ ಹುಮುಳಿಸಿದನಾಕರ್ಣ ॥ ೩೧ ॥ ಆತವು ಬೊಬ್ಬೆಯಲಿ ದುಗುಡದ । ಭಾರದಲಿ ತಲೆಗುತ್ತಿತವರು । ಬ್ಯಾರದಲಿ ಭುಲ್ಲೈಸಿ ತಿವಿದರು ಘಾತಿಯಿಂದವರು॥ ಘೂರಪಿಸಿತದು ಪುಳಕದಲಿ ದ್ಯುಗು । ವಾಂಧಾರೆಯಲವರಖಿಳದಳ । ಭಾರಪಿದ್ದುದು ಕೇಳು ಜನಮೇಜಯಮಹೀಪಾಲ ॥ ... ... ... ॥೩೨॥

ಅಂತು ಸಂಧಿ ೧೨ ಕ್ಕೆ ಪದ ೪೪೯ ಕ್ಕಂ ಮಂಗಳಮಸ್ತು.

---

## ಹದಿಮೂರನೆಯ ಸಂಧಿ.

॥ **ಸೂಚನೆ** ॥ **ಮಡಿದರಾಹವದೊಳಗೆ ಕೌರವ । ನೊಡನೆ ಹುಟ್ಟಿದರನಿಲಸುತನಿಂ । ದಡಿಗಡಿಗೆಯಮ ನಂದನನ ಹಳಚಿದನು ಕಲಿಕರ್ಣ** ॥

॥ಪದ॥ ಕೇಳು ಧೃತರಾಷ್ಟ್ರಾವನಿಪ ನಿ । ನ್ನಾಳಿನಗ್ಗಳಿಕೆಯವಿಘಾತಿಯ । ಗಾಳಿ ತೀಡಿತು ತಿರುಗಿದುದು ಬಳಿಕೀಸಮಸ್ತಬಲ ॥ ಕೋಲುತಪ್ಪಿದಫಣಿಯವೊಲು ಲಯ । ಕಾಲಕೊದರುವ ಸಿಡಿಲವೊಲು ಹೀ। ಹಾಳಿಸುತ ತಮ್ಮಮರ ಬೈದುದು ಕೊಡೆ ಕುರುಸೇನೆ ॥ ೧ ॥ ರಣದೊಳಿದ್ದೇನಾಯ್ತು ಕರ್ಣನ

ಗುಣವಹೇಳಿಸಿ ಮರೆದೆವೇ ಮ । ನ್ನಣೆಯ ಮೋಹವ ತೊರೆದೆವೇ ಕರ್ಪೂರದವೀಳೆಯವ ॥ ಗುಣಪಸಾಯದ ಕಾಣಿಕೆಯ ಹರಿ । ಯಣದ ಹಂತಿಯ ರಾಯನುಚಿತಕೆ। ರಿಣಗಳಾದೆವೆ ಶಿವಶಿವಾಯೆಂದಳಲಿತಖಿಳಜನ ॥ ೨ ॥ ಮೀಸೆಯೇಕಿದು ಸುಡಲಿ ಸುಭಟರ । ವೇಷವೇಕಿದು ಧರ್ಮವಧುಗಳು । ಹೇಸರೇ ನೆರೆ ತೊಲಗಿಹೋಗಳೆ ಚಂಡಿಕಾದೇವಿ ॥ ಭಾಷೆ ಬಾಯಲಿ ಕೈದು ಕೈಯಲಿ । ವಾಸಿಯನು ಬಿಸುಟಕಟ ಜೀವದೊ । ಳಾಸೆಮಾಡಿದೆವೆನುತ ಮರುಗಿತು ಕೂಡೆ ಕುರುಸೇನೆ ॥೩॥ ಬೈವಹೆಂಡಿರ ಚಿಂತೆಯಿಲ್ಲದೆ ಕೊಯ್ವಕೀರ್ತಿಯ ಹಂಬಲಿಲ್ಲದೆ । ದೈವನೆನಹಿನ ನರಕವಿಲ್ಲದೆ ಪತಿಯಸಮಯದಲಿ ॥ ಹಾಯ್ವವರೊಳೊಡೆಹಾಯ್ದು ಕೆಲದಲಿ। ಬೈವರಿಗೆ ಮೈಗೊಟ್ಟು ಬದುಕುವ। ದೈವದೂರರು ತಾವೆನುತ ಮರುಗಿದುದು ಪರಿವಾರ ॥೪॥ ನುಡಿಯಭಂಡರು ಕೆಲರು ಸಿಂಘದ । ಗುಡಿಯ ಭಂಡರು ಕೆಲರು ಹಳಹಿಯ । ತೊಡರ ಭಂಡರು ಕೆಲರು ಕೆಲರು ಕುಲಕ್ರಮಾಗತದ ॥ ಗಡಬಡೆಯ ಭಂಡರು ವಿಪತ್ತಿನೊ । ಳೊಡೆಯನಿರೆ ಕೈದುಗಳ ಹಾಯಿಕಿ। ಸಿಡಿವಬಟ್ಟೆಯಭಂಡರಾವೆಂದುದು ಭಟವ್ರಾತ ॥೫॥ ಮೀಸೆ ಸೀದವು ಭಟರಸುಯ್ಲಿನೊ । ಳಾಸೆ ಬೀತುದು ದೇಹದಲೆ ಬಲು। ವಾಸಿಯಲಿ ಮನ ಮುಳುಗಿತನಿಬರಿಗೇಕಮತವಾಗಿ॥ ಬೀಸಿದರು ಚೌರಿಗಳ ಬಲವಾ । ರಾಸಿ ಮಸಗಿತು ರಿಪುಗಳಸುರಿನ । ಮೀಸಲನು ತುಡುಕಿದುದು ಮನಕೌರವಮಹಾರಥರ ॥೬॥ ಕುದುರೆ ಕುದುರೆಯ ಮುಂಚಿದವು ಕರಿ । ಮದಕರಿಯ ಹಿಂದಿಕ್ಕಿದವು ರಥ । ವದರ ಮುಂಪೌಕಿದವು ಬಳಿಕ ಮಹಾರಥಾವಳಿಯ ॥ ಇದಿರೊಳೊಬ್ಬನನೊಬ್ಬನೊದರುವ । ಕದನಭರೆದ ಪದಾತಿ ಘೂರಾ । ಯದಲಿ ಕವಿದುದು ಜಡಿವಬಹುವಿಧವಾದ್ಯರಭಸದಲಿ ॥೭॥ ಘೂತುಮರುಘು ದಳಪತಿಯ ಹರಿಬದೊ । ಳಾತುದೈ ಕುರುಸೇನೆ ಸುಭಟ । ವ್ರಾತವಳವಿಗೆ ಬರುತಲಿದೆಕೊ ವಿಶೋಕ ನೋಡೆನುತ ॥ ಹೂತಸಂಪಗೆವನವನಳಿಸಂ। ಘಾತ ಮುತ್ತಿದೊಡೇನೆನುತ್ತಲ । ಭೀತನಿದ್ದನು ಭೀಮ ಸುಮ್ಮಾನದ ಸಘಾಡದಲಿ ॥೮॥ ಕವಿದುದಿದು ಗರಿಗಟ್ಟಿ ಕೌರವ । ನಿವಹ ಮೋಡಾಮೋಡಿಯಲಿ ರಣದವಕಿ ಕರ್ಣದ್ರೋಹಿಯಾವೆಡೆ ತೋರುತೋರೆನುತ ॥ ತಿವಿವಭಲ್ಲೆಹ ಬಿಡುವಚಕ್ರದ । ಕವಿವಬಾಣದ ಹೊಯ್ವಕಡುಗದ। ವಿವಿಧಬಲಜಡಿವೌಂಕಿಮುತ್ತಿತು ಪವನನಂದನನ ॥ ೯ ॥ ಸಿಕ್ಕಿದನು ರಿಪುಸ್ವಾಮಿದ್ರೋಹನು । ಚುಕ್ಕಿಯಾವೆಡೆ ಹೋಗಬಿಡದಿರಿ । ಹೊಕ್ಕುಳಲಿ ಮುಗುವುಂಟೆ ಹಣೆಯಲಿ ನೋಟವೇ ಹಗೆಗೆ ॥ ಹೊಕ್ಕು ಹೊಯ್ಸಿತ್ತರಿನೊಳೊಬ್ಬರಿ । ಗೊಕ್ಕಡಿತೆ ಸಾಕೆನುತ ಬಲ ನೆರೆ । ಮುಕ್ಕುರಿಕಿತಿದು ನಿಮಿಷಮಾತ್ರದೊಳನಿಲನಂದನನ ॥೧೦॥ ಹರಿಬದೋಲೆಯಕಾರರೋ ಮು । ಕ್ಕುರಿಕಿದರು ಪವನಜನು ಸಿಕ್ಕಿದ । ದೂರೆಯ ಬಿಡಿಸಾ ನೂಕೆನುತ ಪಾಂಚಾಲನಾಯಕರು ॥ ವರನಕುಲಸಹದೇವಸಾತ್ಯಕಿ । ತುರಕಬರ್ಬರಚೈದ್ಯಮಾಗಧ। ರುರುಪುಳಿಂದಾದಿಗಳು ಕವಿದುದು ನೃಪನ ನೇಮದಲಿ ॥೧೧॥ ಸರಕಟಿಸಿ ರಿಪುರಾಯಬಲಸಂ । ವರಿಸಿಕೊಂಡುದು ಸಿಕ್ಕಿದಹಿತನ । ಸೆರಗ ಬಿಡದಿರಿ ಬಿಡದಿರಂಜದಿರಂಜದಿರಿ ಯೆನುತ ॥ ಗುರುಜಕೃಪಕೃತವರ್ಮಯವನೇ । ಶ್ವರಕಳಿಂಗಕರೂಷಕೌರವ । ರರಸಮೊದಲಾದಖಿಳಬಲ ಜೋಡಿಸಿತು ಜಡಿತೆಯಲಿ ॥೧೨॥ ಏನ ಹೇಳುವೆನರಸ ಕರ್ಣನ । ಹಾನಿಹಂಬದ ಬವರವನು ಪವ । ಮಾನನಂದನನಗವನಾತನ ಜಡಿವುದೀಸೇನೆ ॥ ದಾನವಾಮರಯುದ್ಧರಂಗಸ । ಮಾನವೆನಿಸುವ ಕದನವ[illegible] ನಿಚಿ । ಸೇನೆ ಮುರಿವುದು ವೈರಿಸುಭಟನ ಧುರದ ಜೋಡಣೆಗೆ ॥೧೩॥ ಸಿಲುಕುವುದೆ ಮೃಗಪಕ್ಷಿಹೂ

ಡಿದ । ಬಲೆಗಳಲಿ ಕಾಡಾನೆ ಬೀಸಿದ । ಬಲೆಯು ಕೊಂಬುದೆ ನಿನ್ನಬಲ ಧಟ್ಟೈಸಿ ನೂಕಿದರೆ ॥ ಆಳುಕು
ವನೆ ಕಲಿಭೀಮನೆಡವಲಿ । ಕಲಕಿದನು ಬಲವಂಕದಲಿ ಕು । ಪ್ಪಳಿಸಿದನು ಪಶ್ಚಿಮಪುರೋಭಾಗವ ವಿಭಾ
ಡಿಸಿದ ॥೧೪॥ ಆಳವೆಳೆಯನು ಮುರಿದುದಾವಾ । ಸಾಳು ಮುಗ್ಗಿತು ಬಹಳಪರಿಬಲ । ದಾಳುಕೂ
ಡವಮುನ್ನ ಕೊಂದನು ಕೋಟಿಸಂಖ್ಯೆಗಳ ॥ ಮೇಲುಮೇಲೊಡಗವಿವಸೇನಾ । ಜಾಲವನು ಮುರಿ
ಯೆಚ್ಚ ನಿಮಿಷಕೆ । ಧೂಳಿಪಟಮಾಡಿದನು ಕರ್ಣನಮುನ್ನಣೆಯ ಭಟರ ॥ ೧೫ ॥ ಮತ್ತೆ ಕವಿದುದು
ಮೇಲೆಮೇಲೊಳಗೊತ್ತಿ ಹೊಕ್ಕುದು ಹೆಣನ ಬೆಟ್ಟವ । ಹತ್ತಿ ಹುಡಿಮಾಡಿದರು ಹಿಡಿದರು ರಥದ ಕು
ದುರೆಗಳ ॥ ಕುತ್ತಿದರು ಸಾರಥಿಯನಾತನ । ನೆತ್ತಿಸಿದರಂಬಿಯಲಿ ಭೀಮನ । ಮುತ್ತಿ ಕೈಮಾಡಿದ
ರು ರವಿಸುತಸಾಕಿದತಿರಥರು ॥೧೬॥ ಇಳಿದು ರಥವನು ಗದೆಯ ಕೊಂಡ । ಪ್ಪಳಿಸಿದನು ಹೊರಕೈಯಳ
ರದಿ । ಟ್ಟಳಿಸಿದರನೆಡಗಾಲಲೊದೆದನು ಹಾಯ್ದು ಮುಡುಹಿನಲಿ ॥ ಕಲಕಿದನು ಕೌರವಮಹಾಬಲ ॥
ಜಲಧಿಯನು ಸರ್ವಾಂಗಶೋಣಿತ । ಜಲದೊಳೆಸೆದನು ಸನವಪಾದಿನಗಿರಿಯವೊಲು ಭೀಮ ॥೧೭॥
ಸವರಿದನು ರವಿಸುತನ ಪರಿವಾ । ರವನು ಮಗುಳುಬ್ಬಿನಲಿ ಕೌರವ । ನಿವಹದಲಿ ಕಾದಿದನು ದುರ್ಯೋ
ಧನಸಹೋದರರ ॥ ತಿವಿದು ನಾಲ್ವರ ಕೊಂದನುಬ್ಬರಿ । ಸುವರ ಗರ್ವವ ಮುರಿದ ವಿಲಯದ । ಭವನ
ರೌದ್ರದ ವೋಲು ಭುಲ್ಲೈಸಿದನು ಕಲಿಭೀಮ ॥ ೧೮ ॥ ಶಿವಶಿವಾ ಕೌರವನ ತಮ್ಮದಿ । ರವಗಡಿಸಿ ನಂ
ದೋಪನಂದರು । ಜವಗೆ ಭಾಜನರಾದರೇ ಕಲಿಭೀಮನಿದಿರಿನಲಿ ॥ ತಿವಿವರಿನ್ನಾರೆನುತ ಗುರುಸಂ । ಭವ
ಕೃಪಾದಿಗಳೊತ್ತಿ ನಡೆತಹ । ರವವ ಕೇಳಿದು ಕುದಿದನವ ಮೌನದಲಿ ಕಲಿಕರ್ಣ ॥೧೯॥ ಪೂತು ದೈವವೆ
ಭೀಮಸೇನನ । ಘಾತಿಯಲಿ ಸೊಪ್ಪಾದೆನೇ ಸುಡ । ಲೇತಕೀ ಧನುವೇತಕೀ ದಿವ್ಯಾಸ್ತ್ರಧಾರೆಗಳು ॥ ಜಾತ
ನಾನೆಂದೆನ್ನನಂಗಿಸಿ । ಭೂತಳಾಧಿಪ ಸಾಕಿದನು ನಾನೇತರಿಂದುಪಕಾರಿಯೆಂದನು ಸುಯ್ದು ಕಲಿಕರ್ಣ
॥೨೦॥ ಎಲೆಮರುಳೆ ರಾಧೇಯ ಘಡ ಮನ । ವಿಳುಹದಿರು ತಪ್ಪೇನು ಸೋಲವು । ಗೆಲವು ದೈವಾಧೀನ
ನಿನ್ನಾಳ್ತನಕೆ ಕುಂದೇನು ॥ ಹಲಬರಮರಾಸುರರೊಳಗೆ ಹೆ । ಬ್ಬಲವೆ ದುರ್ಬಲವಹುದು ಕಾಳಗ । ಕ
ಳುಕುವರೆ ಹಿಡಿಧನುವನನುವಾಗೆಂದನಾಶಲ್ಯ ॥೨೧॥ ಖಾತಿ ಮೊಳೆತುದು ಮತ್ತೆ ಬಳಸಂ । ಘಾತಕ
ಭಯವನಿತ್ತು ಬಾಣ । ವ್ರಾತವನು ಹೊರಗೆದರಿ ಹೊಸಹೊಗರೆದ್ದ ನಡಿಗಡಿಗೆ । ಭೂತನಾಥನ ಮರೆ
ಯಲಿರಲಿ ಮ । ಹೀತಳೇಶನ ಹಿಡಿವೆನೆನುತ ವಿ । ಧೂತರಿಪುಬಲ ರಥವ ಬಿಟ್ಟನು ಧರ್ಮಜನ ಹೊರೆ
ಗೆ ॥ ೨೨ ॥ ಕಾಲಯಮನೋ ಕರ್ಣನೋ ಭೂ । ಪಾಲಕನ ಬೆಂಬತ್ತಿದನು ಪಾಂ । ಚಾಲೆಯೋಲೆ
ಯ ಕಾವರಿಲ್ಲಾಯೆನುತ ಬಲ ಬೆದರೆ ॥ ಕೇಳಿದನು ಕಳಕಳವ ವರಿಪು । ಜಾಲವದು ಬರಲಡ್ಡಹಾ
ಯ್ದನು । ಗಾಳಿಯಾತ್ಮಜ ವೀರನನುಪಮಸಿಂಹನಾದದಲಿ ॥ ೨೩ ॥ ಮತ್ತೆ ಕರ್ಣನ ಭೀಮಸಾಹವ
ಹೊತ್ತುತಿದೆ ಹಿಂದಾದಹೆಕ್ಕಳ । ಹತ್ತುಸಾವಿರಹಡೆಯದೇ ಘಡ ನೂಕುನೂಕೆನುತ ॥ ಮತ್ತೆ ಗಜಘ
ಟೆಯಾರುಸಾವಿರ । ಮುತ್ತಿದವು ಸೌಬಲನ ಧಟ್ಟಿನೊ । ಳೊತ್ತಿ ಕವಿದವು ನಾಲ್ಕುಸಾವಿರತುರಗ ರ
ಥಸಹಿತ ॥೨೪॥ ಸಂದಣಿಸಿ ದಳ ನೂಕಿಕೊಂಡೈ । ತಂದುದಿದು ರವಿಸುತನ ತೊಲಗಿಸಿ । ಮುಂದೆ ಮೋಹ
ರದೆಗೆದು ಮೂದಲಿಸಿದರು ಪವನಜನ ॥ ಬಂದುದೇ ಕರ್ಣಂಗೆ ಪಡಿಬಲ । ತಂದುದೇ ನಮಗೊಸಗೆಯ
ನು ಲೇ । ಸೆಂದು ಸುಭಟರದೇವ ಸುಮ್ಮಾನದಲಿ ಲಾಗಿಸಿದ ॥ ೨೫ ॥ ದಳದೊಳಗೆ ದಳದುಳಿಸಿದನು

ಕೆಲ । ಬಲವನೆಚ್ಚನು ಕೇಣವಿಲ್ಲದೆ । ಹಳಚಿದರಿಗಳು ಚಿಗಿದರಮರೀಜನದ ತೋಳ್ಗಳಲಿ ॥ ತಲೆಗಳೊಟ್ಟಿಲ ತೋಳ ಕಡಿಗಳ । ತಳತಖಂಡದ ಕುಣಿವಮುಂಡದ । ಸುಳಿಯರಕುತದ ಕಡಲ ರೌಕುಳವಾಯ್ತು ನಿಮಿಷದಲಿ ॥ ೨೭ ॥ ಬಿಟ್ಟಸೂರೆಯೊಳೊಗ್ಗು ಮುರಿಯದೆ । ಬಿಟ್ಟಕುದುರೆಯ ದಳವ ಮುರಿದನು । ಬೆಟ್ಟವನು ಬಲವೈರಿ ತರಿವವೊಲಿಭದಮೋಹರವ ॥ ಥಟ್ಟುಗೆಡಹಿದನುರವಣಿಸಿ ಸಾ । ಲಿಟ್ಟ ರಥವಾಜಿಗಳ ಸರೆ ಹುಡಿ । ಗುಟ್ಟಿದನು ಕಾಲಾಳಗಾಸಿಯನನುಜನಾನಂದ ॥ ೨೮ ॥ ಮುರಿಯೆ ಬಲನಾಚೆಯಲಿ ರವಿಸುತ । ಜಿಂದು ಬಿಟ್ಟನು ರಥವ ಭೀಮನ । ಬಿರುಬ ಕೊಳ್ಳದೆ ನೂಕಿದನು ಧರ್ಮಜನ ಸಂಮುಖಕೆ ॥ ಇಂತಕಂಜದಿರಂಜದಿರು ವೈ । ಮಾರೆಯುಟರು ಕೃಪಾಳುವೆನುತ ಬೊಬ್ಬಿರಿದು ಥಾಳಾಥೂಳಿಯಲಿ ತಾಗಿದನು ಕಲಿಕರ್ಣ ॥ ಎಚ್ಚನಾತನ ಭುಜವ ಕೆಲಸಾ । ರ್ದೆಚ್ಚನಾತನ ಸಾರಥಿಯ ರಥ । ದಚ್ಚನಾತನ ಹಯವ ನವನೀಪತಿಯ ಟೆಕ್ಕೆಯವ ॥ ಎಚ್ಚು ಮೂದಲಿಸಿದನು ಪುನರಪಿ । ಎಚ್ಚು ಭಂಗಿಸಿ ನೃಪನ ಮರ್ಮವ । ಚುಚ್ಚಿ ನುಡಿದನು ಗಾಸಿಮಾಡಿದನವನಿಪಾಲಕನ ॥ ೨೯ ॥ ಚೆಲ್ಲಿತವನೀಪತಿಯ ಮೋಹರ । ವಲ್ಲಿ ನರ ನುಗ್ಗಾಯ್ತು ರಾಯನ । ಘುಲ್ಲಿಸಿದನೈಯಂಟುಬಾಣದಲೀತನಡಿಗಡಿಗೆ ॥ ಅಲ್ಲಿಯದುಭುತರಣವನಪ್ರತಿ । ಮಲ್ಲಮಾರುತಿ ಕೇಳಿದನು ಬಳಿ । ಕಲ್ಲಿ ಕೋಪಜ್ವಾಲೆಯಲಿ ಮೊಳಗಿದನು ನಿಮಿಷದಲಿ ॥ ೩೦ ॥ ಅಳಲಿಸಿದನೇ ಧರ್ಮಪುತ್ರನ । ನುಳುಹಬಿಟ್ಟನ ಸಾಯಕೊಲ್ಲದೆ । ಕಳುಹಿದೆಡೆ ಬೆಂಬಿಡನಲಾ ಮುರುಕೊಳಿಸಿ ಮುರುಕೊಳಿಸಿ ॥ ತಲೆಕೊರಳ ಸಂಪ್ರತಿಗೆ ಭೇದವ । ಬಳಸಿದರೆ ಸಾಕೈಸಲೇ ಹೋಗಲಿ ಯೆನುತ ಕಣೆಗೆದಂ ಕರ್ಣನ ತರುಬಿದನು ಭೀಮ ॥ ೩೧ ॥ ಭೀಮಸೇನನ ದಳಪತಿಯ ಸಂ । ಗ್ರಾಮ ಮಸೆದುದು ಮತ್ತೆ ಕೈಕೊಳ । ಲೀಮಹಾರಥರೆನುತ ಕೈವೀಸಿದನು ಕುರುರಾಯ ॥ ಸೋಮದತ್ತನಸೂನು ಕೃಪನು । ದ್ದಾಮಶಕುನಿಸುಯೋಧನಾನುಜ । ರಾಮಹಾಹವಕೊದಗಿದರು ಕೃತವರ್ಮ ಗುರುಸುತರು ॥ ೩೨ ॥ ಅಖಿಳದಳಭಾರಣೆಯಲೊಂದೇ । ಮುಖದಲೌಕಿತು ಪವನಜನ ಸಂ । ಮುಖಕೆಯೊಡ್ಡಿತು ಕೆಣಕಿದರು ಕಲ್ಪಾಂತಭೈರವನ ॥ ಶಿಖಿಗಳಕಟಾ ನೀವು ಸಮರೋ । ನ್ಮುಖರಹರೆ ಕರ್ಣಂಗೆ ಸಾಪನ । ಸಖಿಗಳೈ ನೀವೆನುತ ಕೈಕೊಂಡೆಚ್ಚನಾಭೀಮ ॥ ೩೩ ॥ ಗುರುಸುತನನೈವತ್ತುಬಾಣದ । ಲರಸನನುಜನ ಕೃಪನ ಕೃತವ । ರ್ಮರುಗಳನು ನೂರಂಬಿನಲಿ ವೃಷಸೇನಸೌಬಲರ ॥ ಸರಳ ಮೂವತ್ತರಲಿ ಪುನರಪಿ । ಗುರುಸುತಾದಿಮಹಾರಥರನೆರ । ಡರಲಿ ಮುಂಮುಂಯೆಚ್ಚು ವಿಮುಖರ ಮಾಡಿದನು ಭೀಮ ॥ ೩೪ ॥ ಮತ್ತೆ ಜೋಡಿಸಿ ಕೌರವೇಂದ್ರನ । ನೊತ್ತಲಿಕ್ಕಿ ಮಹಾರಥರು ರಿಪು । ಮತ್ತದಂತಿಯ ಕೆಣಕಿದರು ಕೆದರಿದರು ಮಾರ್ಗಣೆಯ ॥ ಇತ್ತಲವನೀಪತಿಯ ಮೋಹರ । ವೆತ್ತಲಲ್ಲಿಗೆ ರಥವ ಬಿಟ್ಟನು । ಮುತ್ತಿ ಮೂದಲಿಸಿದನು ಯಮನಂದನನನಾಕರ್ಣ ॥ ೩೫ ॥ ದ್ರೋಣ ಬರಸಿದಭಾಷೆಯೊಂದೇ । ಕ್ಷೋಣಿಪತಿ ಬಗೆಯದಿರು ತನ್ನನು । ವಾಣಿಯದ ವಿವರದಲಿ ಸಲಹನು ಕೌರವರರಾಯ ॥ ಪ್ರಾಣದಾಸೆಯ ಮರೆದು ತನ್ನೊಳು । ಕೇಣವಿಲ್ಲದೆ ಕಾದೆನುತ ನಿ । ತ್ರಾಣನನು ನಿಬ್ಬರದನುಡಿಗಳಲಿರಿದನಾಕರ್ಣ ॥ ೩೬ ॥ ಬಿಡನು ರಾಯನ ಬೆನ್ನನಿವನನು । ಕೆಡಹಿ ರಕುತವ ಕುಡಿಯೆನುತ ಬಲ । ನೆಡನೊಳಿಟ್ಟಣಿಸಿದರು ಸಾತ್ಯಕಿನಕುಲಸಹದೇವ ॥ ತುಡುಕಿದರು ಪಾಂಚಾಲ ಮತ್ಸ್ಯರ । ಗಡಣಕೈಕಯಪಂಚಪಾಂಡವ । ರಡಸಿದರು ಹೊದಿಸಿದರು ಹಗೆಯನು ಸರಳಸಂಗಳಲಿ ॥ ೩೭ ॥ ಇನಿಬರೊಂದೇ

ಸೂಠಿಯಲಿಮುಂ । ಮೊನೆಯಕಣೆಗಳ ಸುರಿದರಡಿಗಡಿ । ಗಣಿತಶರವನು ಮುರಿದು ತರಿದನು ಸೂತಮಾಜಿಗಳ ॥ ತನತನಗೆ ಹೊಸರಥಗಳೊಳಗು । ಬ್ಬಿನಲಿ ತೆಗೆದೆಚ್ಚರು ಮಹಾ । ಹವವೆನಗೆ ಬಣ್ಣಿಸಲರಿದು ಧರಣೀಪಾಲ ಕೇಳೆಂದ ॥ ೩೮ ॥ ಭಟರು ಮುತ್ತಿದರಿನಸುತನ ಲಟ । ಕಟಿಸಲೆಚ್ಚರು ಶಿವಶಿವಾ ನಿ । ಚ್ಚಟರನಿಬ್ಬರದಂಘವಣೆ ಮಝು ಪ್ರೌಢ ಲೇಸೆನುತ ॥ ನಿಟಿಲನೇತ್ರನ ಕೋಪಶಿಖಿಯು । ಬ್ಬಟೆಗೆ ಸಮವೆನಿಸಿತ್ತು ಕರ್ಣನ । ಚಟುಲವಿಕ್ರಮಪವನಪರಿಗತಬಾಣಶಿಖಿನಿಕರ ॥ ೩೯ ॥ ನಕುಲನನು ನೋಯಿಸದೆ ಸಹದೇ । ವಕನಗಾಯಂಬಡಿಸಿದನು ಸಾ । ತ್ಯಕಿಯ ಮೈಮುಸೆಗಾಣಿಸಿದನಾಮತ್ಸ್ಯಕೈಕಯರ ॥ ವಿಕಳಗೊಳಿಸಿದನಾಮಹಾರಥ । ನಿಕರ ಸೈರಿಸಿ ಮತ್ತೆ ಮೇಳಾ । ಪಕದಲೊದಗಿತು ಮುತ್ತಿ ಮುಸುಕಿತು ಭಾನುನಂದನನ ॥ ೪೦ ॥ ಹೇಳಲರಿಯನು ನಿನ್ನವನ ಕ । ಟ್ಟಾಳುತನವನು ದೇವದೈತ್ಯರ । ಕಾಳಗದೊಳಿವನಂತೆ ಬಲ್ಲಿದರಿಲ್ಲ ಬಿಲ್ಲಿನಲಿ ॥ ಆಳ ಮುರಿದನು ಹೂಣೆಹೊಕ್ಕು । ಬ್ಬಾಳೆಗಳ ಭಿಲುನೆಗಹಿನೆಸುಗೆಯ । ಕೀಲಣದ ಕಾಲಾಟಪರಿತವ ಮೆರೆದನಾಕರ್ಣ ॥ ೪೧ ॥ ಸರಳಹತಿಯಲಿ ನಕುಲಸಾತ್ಯಕಿ । ಪೆರಸಿ ಸಹದೇವಾದಿವೀರರು । ಹಿರಿದು ನೊಂದರು ಮತ್ತೆ ತರುಬಿದರವನಿಪಾಲಕನ ॥ ಅರಸ ಹಿಡಿಹಿಡಿ ಧನುವನಿನ್ನರ । ಡರಸನಾದುದು ಧರಣಿ ನಿನ್ನಯ । ಶಿರವ ಬರಹವ ತೊಡೆವೆನೆಂದೆನುತೆಚ್ಚನಾಕರ್ಣ ॥ ೪೨ ॥ ಅಕಟಕಟ ರಾಧೇಯ ಕೇಳೀ । ನಕುಲನೀಸಹದೇವನೀಸಾ । ತ್ಯಕನರೇಶ್ವರರೆನಿಸುವೀಕುಂತೀಕುಮಾರರಲಿ ॥ ಅಕುಟಿಲರು ನಯಕೋವಿದರು ಧಾ । ರ್ಮಿಕರ ಕೊಲಬೇಡಿವರನತಿಬಾ । ಧಕರು ಭೀಮಾರ್ಜುನರ ಸಂಹರಿಸೆಂದನಾಶಲ್ಯ ॥ ೪೩ ॥ ಮುಳಿದು ಕಬ್ಬಿನತೋಟದಲಿ ನರಿ । ಹುಲಿಯ ಮೇಲ್ ಗರ್ಜಿಸಿತು ಗಡ ಹೆ । ಕ್ಕಳದಹೇರಾಳದಲಿ ಹೆಣಗಿದೆ ಬಾಲವೃದ್ಧರಲಿ ॥ ಬಲುಹು ನಿನಗುಂಟಾದೊಡಿತ್ತಲು । ಫಲುಗುಣನ ಕೂಡಾಡು ನಡೆ ಮರು । ವಲಗೆಯನು ಭೀಮನಲಿ ಬೇಡುವುದೆಂದನಾಶಲ್ಯ ॥ ೪೪ ॥ ಎನಲು ಕಿಡಿಕಿಡಿಯಾಗಿ ಭೀಮಾ । ರ್ಜುನರ ತೋರಾದೊಡೆಯೆನುತ ನಿಜ । ಧನುವ ಮಿಡಿದಬ್ಬರಿಸಲಿತ್ತಲು ರಾಯದಳದೊಳಗೆ ॥ ಅನಿಲಜನ ಕಾಲಾಟಕದಳಿಯ । ಬನದ ಕಾಡಾನೆಯ ಮೃಗಾಳಿಯ । ವನಚರರ ದೆಖ್ಖಾಳದಬ್ಬರ ಕಾಣಲಾಯ್ತೆಂದ ॥ ೪೫ ॥ ಅಂಡಿಸಿತು ಬಲಜಲಧಿ ಸುಳಿಸುಳಿ । ಗೊಂಡು ಸಿಕ್ಕಿದ ಕೌರವೇಂದ್ರನ । ಕೊಂಡು ಹಿಂಗುವಡೋಕೆ ನೂಕದೆ ಭೀತಿಗರ ಹೊಡೆದು ॥ ಗಂಡುಗುಂದಿದಭೀತಿ ಬಿರುದಿನ । ತೊಂಡುಗೇಡಿನ ಜಯದ ಜಾರಿನ । ಖಂಡಶೌರ್ಯದ ಬಿರುದರಿದ್ದರು ನೃಪನ ಬಳಸಿನಲಿ ॥ ೪೬ ॥ ವಾಯದಲಿ ಕೌರವನ ರಾಜ್ಯ । ಶ್ರೀಯು ಸೆರೆಹೋಯಿತ್ತು ಶಿವಕೈ । ಗಾಯಲಾಪವರಿಲ್ಲಲಾ ಗುರುಸೂನುಮೊದಲಾದ ॥ ನಾಯಕರು ಸುಪಲಾಯನದ ನಿ । ರ್ನಾಯಕರು ದುಷ್ಕೀರ್ತಿನಾರಿಯ । ನಾಯಕರು ಮಝು ಪ್ರೌಢರೆಂದುದು ನಿನ್ನ ಪರಿವಾರ ॥ ೪೭ ॥ ಕೇಳಿದನು ಮಾದ್ರೇಶ ಕಿವಿಗೊ । ಟ್ಟಾಲಿಸಿದನೇ ಕರ್ಣಕರ್ಣಭ । ಡಾಳರವವಿದೆ ಕೌರವೇಂದ್ರನ ಸೈನ್ಯಮಧ್ಯದಲಿ ॥ ಖೂಳ ಬಿಡಿಸಾ ಭೀಮಸೇನನ ತೋಳಪರೆಯಲಿ ಸಿಲುಕಿದನು ಭೂ । ಪಾಲನಕಟಾಯೆನುತ ತೇಜಿಯ ತಿರುಹಿದನು ಶಲ್ಯ ॥ ॥ ೪೮ ॥

ಅಂತು ಸಂಧಿ ೧೩ಕ್ಕೆ ಪದ ೫೦೬ಕ್ಕಂ ಮಂಗಳಮಸ್ತು.

## ಹದಿನಾಲ್ಕನೆಯ ಸಂಧಿ.

॥ ಸೂಚನೆ ॥ ಮರಳಿದನು ಪಾಳೆಯಕೆ ಪಾಂಡವ । ರರಸನಿತ್ತಲು ಪಾರ್ಥ ಕೇಳಿದು । ಬರುತಗೆಲಿದನು ಸಕಲಕೌರವರಾಯಮೋಹರವ ॥

॥ ಪದ ॥ ದೂರುವವರೆಲೆ ಕರ್ಣನೋಲೆಯ । ಕಾರತನವನು ಹಿಂದೆ ಕೆಲಬರು । ದೂರಬಲ್ಲರೆ ದೊರೆಯ ಧಕ್ಕಡಿತನಕೆ ಸರಿಯಹರೆ ॥ ಹಾರಲೂದಿದನಹಿತರಾಯರ । ಸೂರೆಗಡ ಹಾಯ್ದರಿಯ ಕರೆದನು । ಮೀರಿದುತ್ಸಾಹವನು ಕಂಡನು ಕರ್ಣನನಿಲಜನ ॥ ೧ ॥ ಅರರೆ ಸಿಂಹದ ತೋಳತೆಕ್ಕೆಯ । ಕರಿಯಣುಗಿವಂದದಲಿ ಗರುಡನ । ಕೊರಳ ಬಲದಲಿ ಬಿದ್ದಸರ್ಪವ ಸೇದುವಂದದಲಿ ॥ ಧರಣಿಪಾಲನ ತೆಗೆದು ಭೀಮನ । ಬಿರಿಯಲೆಚ್ಚನು ಜೋಡುಜೋಡಿಯ । ಜರುಹಿದನು ಜವಗೆಡಿಸಿದನು ನಿಸ್ರಾಣಿತ ಪವನಜನ ॥ ೨ ॥ ಅರಸ ಕೇಳ್ಳೆ ಕರ್ಣ ಭೀಮನ । ಧರಧುರದ ದೆಖ್ಖಾಳತನವ। ಬ್ಬರಿಸಿತಾಹವಗರುವಿಕರ ಗಾಢಾಯ್ಲ ಚೇತನವ ॥ ಧರಣಿಪಾಲನನಿತ್ತಲವರಾ । ದಂಸಿವರು ಸಹದೇವನಕುಲರು। ಸರಳಕಿರುಗಾಯವನು ಮಿಗೆ ತೊಳೆತೊಳೆದು ಮಂತ್ರಿಸುತ ॥ ೩ ॥ ದುರುದುರಿಪಬಿಸಿನೆತ್ತರುಗಳಲಿ । ಯೊರತೆ ಮಸಗಿತು ಬಹಳಧೈರ್ಯದ । ಹೊರಿಗೆ ಮುರಿದುದು ಮೂಗಿನುಸುರುಬ್ಬೆದ್ದುದಡಿಗಡಿಗೆ ॥ ಅರಿವುಮರವೆಗಳೊಂದನೊಂದನು । ಮುರಿಯನೂಕಿದನವನಿಪತಿ ಕಡು । ವೆರಗುಗೊಂಡವೊಲಿರ್ದನುರೆಬಹುವಿಧದ ಚೇಷ್ಟೆಯಲಿ ॥ ೪ ॥ ಜಯಸಮರ ಜಾರಾಯ್ತು ತೆಗೆ ಪಾ। ಳಯಕೆ ಮರಳಿಚು ರಥವನಿನ್ನೆ । ಲ್ಲಿಯದು ನೆಲ ನೆರೆ ಕುದಿದು ಕುರುಡನ ಮಕ್ಕಳೇ ಕೊಳಲಿ ॥ ನಿಯುತವೆಮ್ಮಿಬ್ಬರಿಗೆ ರಾಯನ । ಲಯವೆಜಯವೆಂದೆನುತಲಾವಾ । ದ್ವಿಯಕುಮಾರರು ದೊರೆಸಹಿತ ತಿರುಗಿದರು ಪಾಳೆಯಕೆ ॥ ೫ ॥ ರಾಯರಥ ಮಡಮುರಿಯೆ ಮುರಿದರು ॥ ನಾಯಕರು ಪಾಂಚಾಲಮರುಯಮ । ವಾಯುಜನುಮತ್ಸ್ಯಪ್ರಬಂಧಕಚೇಕಿತಾನಕರು ॥ ವಾಯುಹತಿಯಲಿ ಮೇಘದೊಡ್ಡಿಂ। ಗಾಯಸವು ಕರ್ಣಾಸ್ತ್ರಹತಿಯಲ। ಪಾಯವರಿರಾಯರಿಗಪೂರ್ವವೆ ನೃಪತಿ ಕೇಳೆಂದ ॥ ೬ ॥ ಮುರಿದುದೈ ರಿಪುರಾಯದಳ ಹಗೆ । ಹರಿದುದೈ ಕುರುಪತಿಗೆ ಹರುಷವ। ಕರೆದುದೈ ಕರ್ಣಪ್ರತಾಪಕ್ಷೇಮಜೀಮೂತ ॥ ಇರಿತವಾದುದು ನಿನ್ನವರ ಬೊ । ಬ್ಬಿರಿತವೆರೆದುದು ವಿಜಯಲಕ್ಷ್ಮಿಯ। ಸೆರಗು ಸೋಕಿತು ಕೌರವೇಶ್ವರೆಗರಸ ಕೇಳೆಂದ ॥ ೭ ॥ ಕುರುಬಲದ ಲಗ್ಗೆಯನು ನಿಜಮೋ । ಹರದ ಮುರಿದಿಹಸುದ್ದಿಯನು ಧರ । ಧುರದ ಪರಬಲದೊಸಗೆಯನು ನಿಜಬಲದಹಸುಗೆಗಳ ॥ ಮುರಮಥನನೀಕ್ಷಿಸಿದ ಮೂಗಿನ । ಬೆರಳ ತೂಗುವಮಕುಟದೊಲವಿನ । ಬೆರಳತುದಿಚಮ್ಮಟಿಗೆಯಲಿ ಸೂಚಿಸಿದನರ್ಜುನಗೆ ॥ ೮ ॥ ಆರರಥವಾಹೋಹರಥಹಿಂ । ದಾರವರಬಳುವಳಿಯಲೊದಗಿದ । ಲೋರಣಿಸಿ ಮುಂಚುವರ ಠೆಕ್ಕೆಯವಾರತೇರಿನದು ॥ ಆರಬಲವದು ವರಪಲಾಯನ। ಚಾರುದೀಕ್ಷಿತರಾಯ್ತು ಫಲುಗುಣ । ಧಾರುಣೀಪತಿಯಾಣೆ ಹೇಳೆಂದಸುರರಿಪು ನುಡಿದ ॥ ೯ ॥ ನೋಡಿನೋಡಿ ಕಿರೀಟವನು ತೂ । ಗಾಡಿದನು ಕಂಬನಿಗಳಾಲಿಯ । ನೀಡಿರಿದು ಸೋರಿದವು ಸೊಂಪಡಗಿತು ಮುಖಾಂಬುಜದ ॥ ಹೂಡಿದಂಬಿನತೋಳ ತೆಗಹಿನ । ಬಾಡಿದುತ್ಸಾಹದಲಿ ತಾಳದ । ಬೇಡಿಕೆಯ ಬೇಳುವೆಗೆ ಬೊಬ್ಬಳಿವೋದನಾಪಾರ್ಥ ॥ ೧೦ ॥ ಸೇನೆಮುರಿಯಲಿ ಕುರುಪತಿಯ ದುಂ । ಮಾನಹರಿಯಲಿ ಯೆನಗೆ ಚಿತ್ತ । ಗ್ಲಾನಿಯೆಳ್ಳನಿತಿಲ್ಲ ಕಟ್ಟಲಿ ಗುಡಿಯ ಗಜನಗರ ॥ ಅನರೇಂದ್ರನ ಸಿರಿಮೊಗಕೆ

ದುಂ। ಮಾನವೋ ಮೇಣ್ಸುರರೊಳಗೆ ಸಂ । ಧಾನವೋ ನಾನರಿಯೆನಳ್ಳೆದೆವೋಯ್ದುತ್ತನಗೆಂದ್ಗ॥೧೧॥ ಧರಣಿಪತಿ ಸತ್ಪ್ರಾಣಿಯೇ ಗಜ । ಪುರವರಾಜ್ಯಕೆ ನಿಲಿಸುವೆನು ಮೇ । ಣ್ಸುರರೊಳಗೆ ಸಂಮೇಳವೇ ಕುಂತೀಕುಮಾರಂಗೆ ॥ ಅರಿಗಳಿಗೆ ಧರ್ಮಜನ ಬಿಟ್ಟ್ಕಾ । ನಿರೆನು ಮುರಹರ ರಥವ ಮರಳಿಚು । ಮರ ಳಿಚ್ಛೈರಥ ಮುಂಚುವುದೊ ಮನಮುಂಚುವುದೊಯೆಂದ ॥೧೨॥ ತಿರುಹಿ ವಾಘೆಯ ಕೊಂಡು ಹರಿ ಹೂಂಕರಿಸಿ ಬಿಟ್ಟನು ರಥವನಾತನ । ಮುಂವ ಕಂಡುದು ಲಳಿಮಸಗಿ ಸಂಶಪ್ತಕರಸೇನೆ ॥ ಅರರೆನರ ಹಿಂಮೆಟ್ಟಿದನು ಪೈ । ಸರಸಿದನು ಫಡ ಹೋಗಬಿಡದಿ೦ । ಕುರುನೃಪಾಲನ ಪುಣ್ಯವೆನುತಟ್ಟಿದರು ಸೂಠಿಯಲಿ ॥ ೧೩ ॥ ಕವಿಮದದುಭುತಬಲ ಮುರಾರಿಯ।ತಿವಿದರಡಗಟ್ಟಿದರು ತೇಜಿಯ । ಜವಗೆಡಿ ಸಿ ತಲೆಯೂರಹಿಡಿದರು ತುಡುಕಿದರು ನೊಗನ ॥ ಅವರನೊಂದೇನಿಮಿಷದಲಿ ಸಂ । ಭವಿಸಿ ನಡೆತರೆ ಮುಂದೆ ಗುರುಸಂಭವನ ರಥವಡಹಾಯ್ದುದವನೀಪಾಲಕೇಳೆಂದ ॥೧೪॥ ಇತ್ತಲಿತ್ತಲು ಪಾರ್ಥಹೋ ಗದಿ । ರತ್ತಲಶ್ವತ್ಥಮನಾಣೆ ಮ । ಹೋತ್ತಮರು ಗುರುಭೀಷ್ಮರಲಿ ಮೆರೆ ನಿನ್ನಮೌಳಿಯನು ॥ ಕಿ ತ್ತುಬಿಸುಡುವೆನಸುವನಿಬರಾ। ಗಿತ್ತಲಿದಿರಿದಿರಾಗು ಜೋಕೆಯ। ಜೂತ್ತಿನಾಹವವಲ್ಲನುತ ತರುಬಿದನು ಗುರುಸೂನು ॥ ೧೫ ॥ ಆವುದಿಲ್ಲಿಗುಪಾಯಮೀತನ । ಭಾವ ಬೆಟ್ಟಿತು ಹಂವುಗೊಡನಂ । ದಾವಸಂಧಿ ಯೊಳರಿಯೆನವನಿಪನಾಗುಹೋಗುಗಳ ॥ ದೇವ ಹದನೇನೆನುತ ವರಗಾಂ। ಡೀವಿ ಮುಕ್ತಕಳಂಬಕಾಂ ಡ । ಪ್ರಾವರಣದಲಿ ಮುಸುಕಿದನು ಗುರುನಂದನನರಥವ ॥ ೧೬ ॥ ಖೂಳ ಹೆರದೆಗೆ ಸಾರು ಧಟ್ಟನ। ಠೌಳಿಯಾಟವೆ ಕದನಕುಟಿಲದ। ಬೇಳುವೆಯ ಡೊಳ್ಳಾಸಮದ್ದಿನಮಾಯವೆಮ್ಮೊಡನೆ॥ ಆಳುತನವುಳ್ಳೊ ಡೆ ಮಹಾಸ್ತ್ರದ । ಜಾಳಿಗೆಯನುಗಿಯೆನುತ ಪಾರ್ಥನ । ಕೋಲುಗಳ ಕಡಿದೊಡನ ಹೊಳಿದನಂಬಿನ ಲಿ ರಥವ ॥ ೧೭ ॥ ಸರಳ ಹಂಮೇಖಲೆಗೆ ನೀವೇ। ಗುರುಗಳಲ್ಲಾ ನಿಮ್ಮ ನೀವೇ । ಹುರುಳುಗಡಿಸಿದಿ ರೆನುತ ಗುರುಸುತನಂಬ ಹರಗಡಿದು ॥ ತುರಗದಲಿ ರಥಚಕ್ರದಲಿ ಕೂ । ಬರದೊಳಿಂಸಿನೊಳಚ್ಚಿನಲಿ ದು । ರ್ಧರಶಿಳೀಮುಖಜಾಲವನು ಜೋಡಿಸಿದನಾಪಾರ್ಥ ॥ ೧೮ ॥ ತಳಿತನಿನ್ನಂಬಿನಮಳೆಗೆ ಮನ । ನಲಿವದಾರಿಗೆಯಳಿಯಲಾಕಳ । ವಳಿಸಬಿರು ಕೊಳ್ಳಿದೊಡೆನುತೆಚ್ಚನು ಧನಂಜಯನ ॥ ಹೊಳೆವಕಣೆ ಮುಕ್ಕಿರಿದದಾರಿಯ । ಉಳಿದಕಣೆ ದಾಟಿದವು ಗುರುಸುತ । ತುಳುಕಿದನು ಫಲುಗುಣನ ಮೈಯ್ಯಲಿರೆ ಕುತರಾಟಳವ ॥೧೯॥ ಕಡುಗಿದರೆ ಕಾಲಾಗ್ನಿರುದ್ರನ । ಪಡಿಯಲಾಡುವನೀತನೇ ಸೈ । ಗೆಡದರೋಮ ದ ಧೂಮ್ರವಕೆಮಿಗೆಸ್ವೇದಬಿಂದುಗಳ ॥ ಝಡಿದಶೌರ್ಯದಳಲದಲಡಗಡಿ । ಗೊಡಲನೊಲೆದು ಮಹಾ ಸ್ತ್ರದಲಿ ತಡೆ । ಗಡಿದು ಬಿಸುಟನು ಗುರುಸುತನ ಸಾರಥಿಯ ರಥಹಯವ ॥ ೨೦ ॥ ಧನುವನುರೆ ಬ ತ್ತಳಿಕೆಗಳ ಶರ । ಕನಕಚೌರಿಯ ಟೆಕ್ಕೆಯುವ ಬಲು । ಬನಗಡಿತಪಿಕ್ಕಿದನು ಸೆಕ್ಕಿದನಂಬಿನಲಿ ನಭವ॥ ಧ ನುವರೂಥವು ಹೋಗಿ ಗುರುನಂ । ದನನಗರ್ವಕೆಹಾನಿಯೇಫಡ । ಯೆನುತ ಪಾರ್ಥನತರುಬಿನಿಂದನು ಸೆಳದೊಡಾಯುಧದಿ ॥ ೨೧ ॥ ಧಟ್ಟನೈ ಗುರುಸೂನುಂಪಜಗ । ಜಟ್ಟಿಯಲ್ಲಾ ಕೌರವೇಂದ್ರನ । ಥ ಟ್ಟನಲಿ ಭಟರಾರೆನುತ ತಲೆದೂಗಿದನು ಪಾರ್ಥ ॥ ಇಟ್ಟಣಿಸಿದರು ಹಿಂದೆ ಕೃಪರಡ । ಗಟ್ಟಿದರುಸಂಶ ಪ್ತಕರು ಸಲೆ । ಮುಟ್ಟಿ ಬಂದರು ಕೌರವೇಂದ್ರನನಖಿಳಬಲಸಹಿತ ॥ ೨೨ ॥ ತಡೆಯಪಾರ್ಥನನವರ ರಾಯನ । ಕೆಡಹಿದನು ಕಲಿಕರ್ಣನೀಗಲೆ । ಮಡುಹುವನು ಪವನಜನನೊಂದುಮಿಘಳಿಗೆಮಾತ್ರದಲಿ ॥

ಬಿಡದಿರೀತನನೆನುತ ಕುರುಪತಿ । ಯೊಡನೆ ದುಶ್ಯಾಸನಸಭಟಾಳಿಗ । ಳಡಸಿದರು ಕೆಂಗೋಲಮಳೆಯಲಿ ಕಾದಿದರು ನರನ ॥ ೨೩ ॥ ಅವನಿಪನ ಕಾಣಿಕೆಗೆ ಬಹುವಿ । ಘ್ನವನು ಬಲಿದುದೆ ದೈವಯಂತ್ರವ । ನೆವಗಡಿಸಿ ಮಿಾರುವರೆ ನಮ್ಮಳವೇ ಶಿವಾಯೆನುತ ॥ ಕವಲಗೋಲ್ಗೈದರಲಿ ಕೌರವ । ನವರತಮ್ಮಂದಿರನು ಸಂನಾ । ಹವನು ವಂಚಿಸಿ ಗೆಲಿದು ಸಂಶಪ್ತಕರನೊಡೆಹೊಯ್ದು ॥ ೨೪ ॥ ಹೋಗಹೋಗಲು ಮತ್ತೆ ಕುರುಬಲ । ಸಾಗರದ ಭಟಲಹರಿ ಮಸಗಿತು । ತಾಗಿದರು ತುಡುಕಿದರು ಕವಿದರು ನಾಲ್ಕುದೆಸೆಗಳಲಿ ॥ ನೀಗಿದರು ಶಸ್ತ್ರಾಸ್ತ್ರವನು ಕೈ । ಲಾಗಿನಲಿ ತಿರುಗಿದರು ಫುನರಪಿ । ತಾಗಿದರು ಗುರುಸೂನುಕೃತವರ್ಮಾದಿನಾಯಕರು ॥ ೨೫ ॥ ಮೇಲೆಬಿದ್ದುದು ಮತ್ತೆ ಬಲಮೇ । ಘಾಳಿಯಂದದಿ ಎಂಟುದಿಕ್ಕಿನ । ಮೂಲೆಯಲಿ ಸಂದಣಿಸಿ ತಿವಿದರು ಸರ್ವತೋಮುಖರು ॥ ಹೇಳಲೇನವನೀಶ ಚಪಲಛ । ಡಾಳಪಾರ್ಥಪರಾಕ್ರಮಾಗ್ನಿ । ಜ್ವಾಲೆಯಲಿ ನೆರೆ ಸೀದು ಸೀಕರಿವೋಯ್ತು ಕುರುಸೇನೆ ॥ ೨೬ ॥ ಗುರುಸುತನ ಮುರಿಯೆಚ್ಚು ಶಕುನಿಯ । ಪರಿಭವಿಸಿ ಕೃತವರ್ಮಕನ ವಿ । ಸ್ತರಿಸಲೀಯದೆ ಕೇರಳಾಂಧ್ರವಿಳಾಂಧ್ರಕೌಸಲರ ॥ ಹುರುಳುಗೆಡಿಸಿ ಸುಯೋಧನನ ಮೊಗ । ಮುರಿಯಲೆಚ್ಚು ಸುಷೇಣಗೌತಮ । ರುರವಣೆಯ ನಭಕೊತ್ತಿ ಹಾಯ್ದನು ಮತ್ತೆ ಹರಹಿನಲಿ ॥೨೭॥ ಆವರಿಸಿತಿದು ಮತ್ತೆ ಹೊಸಮೇ । ಳಾವದಲಿಕುರುಸೇನೆ ಘನಗಾಂ । ಡೀವವಿದಳಿತಬಾಣವಹ್ನಿ ಜ್ವಾಲೆ ವಂಚಿಸದೆ॥ಲಾವಣಿಗೆಗೊಳಲಲಸಿಯಮನಲಿ। ಜೀವಿಗಳು ಜಡನಾಯ್ತು ಫಲುಗುಣ।ನಾವವಹಿಲದಿನಿರಿದನೆಂಬುದನರಿಯೆ...ನೆಂದ॥೨೮॥ ಜಾಳಿಸಿತು ರಥ ಜಡಿದು ಕೌರವ । ರಾಳು ಝೋಂಪಿಸಿ ಜೋಡಿಮಾಡುವ । ರಾಳ ಜಂಕಿಸಿ ಬೈದು ಹೊಕ್ಕನು ಮತ್ತೆ ಗುರುಸೂನು ॥ ಖೂಳಫಡಫಡ ಜಾರದಿರು ... ರಾಳ ತೋರಿದಕೊಬ್ಬುಬೇಡವಿ। ಟಾಳವಿದ್ಯೆಯೆ ನಮ್ಮೊಡನೆಯೆನುತೆಚ್ಚ ನರ್ಜನನ ॥೨೯ ॥ ಗುರುಸುತನ ಮುರಿಯೆಚ್ಚು ಫಲುಗುಣ ತಿರುಗಿಹಾಯ್ದನು ಮುಂದೆಶರಪಂ । ಜರವ ಹೂಡಿದನೀತನಾತನ ಬೈದು ಬೆಂಬತ್ತಿ ॥ ಸರಳ ಹರಹಿನ ಹೂಟವನುಕಾ।ಹುರದಕಡುಹಿನೊಳೊದೆದು ಬೊಬ್ಬಿರಿ । ದುರವಣಿಸಿದನು ಪಾರ್ಥನೀತನ ಧನುವ ಖಂಡಿಸಿದ ॥ ೩೦ ॥ ಧನುವಮುರಿಯಲು ಧಿಟ್ಟತನವೀ । ತನಲಿ ಸಾಕಿನ್ನೆನುತ ಗುರುನಂ । ದನನು ಮುರಿದನು ಹೊಗುವಮೋರೆಯ ಹೊರೆದಬುಗುಡದಲಿ॥ ಅನಿಲತನಯನ ಹಳಚಿದನು ಮುಂ। ಮೊನೆಯಬೋಳೆಯ ಮೈಯ ತೊಳುತೊಡೆ । ಎನಗೆ ತನಗೆಂಬಗ್ಗಳಿಕೆಯನು ಮೆರೆದನೀಚೆಯಲಿ ॥ ೩೧ ॥ ತರಣಿತನಯನ ತೆಗೆಸಿ ಭೀಮನ । ನುರುವಣಿಸಿ ಗುರಸೂನುಕಾದು । ತ್ತಿರೆ ಧನಂಜಯತೆರಳಿದನು ಪಾಳಯದ ಪಥವಿಡಿದು ॥ ಅರರೆ ಫಲುಗಣನೋಟವನುಸಂ । ಗರಸಮರ್ಥರ ನೋಟವನು ನ । ಮ್ಮರಸ ಕಂಡನ ಲಾ ಯೆನುತ ನೂಕಿದನು ಕಲಿಕರ್ಣ ॥ ೩೨ ॥ ನೆಲೆದುದಲ್ಲಿಯದಲ್ಲಿ ಕಾಳೆಯ । ಧರಧುರದ ನಿಸ್ಸಾಳಸೂಳಿನ । ಮುರಜಜರ್ಝರರಾಯಗಿಡಗನಜಡಿವಜಂಬುಕನ ॥ ತುರಗಕರಿರಥಪಾಯದಳಚಾ । ಮರದ ಧವಳಚ್ಛತ್ರತೀವಿದ । ಪರಿಪರಿಯ ಫಲಹರದಲೌಕಿತು ಮತ್ತೆ ಸಂಗರಕೆ ॥ ೩೩ ॥ ಕವಿದು ಕೆಂಧೂಳಿಡುವಸೇನಾ । ನಿವಹದಲಿ ಕಲಿಕರ್ಣನಾತನ । ಲವಲವಿಕೆಯಾಯ್ತವನ ಕಂಡನು ಕದನಕೇಳಿಯಲಿ ॥ ಅವನಿಪನ ದರುಶನವೆನಗೆ ಸಂ । ಭವಿಸಲರಿಯದು ಭಾಪುರೇ ಕೌ । ರವಮಹಾಂಬುಧಿಯೆನುತ ಮುಕುಟವನ ತೂಗಿದನು ಪಾರ್ಥ ॥ ೩೪ ॥ ಬಳಿಕ ಸೇನಾಸ್ತಂಭಶರದಲಿ । ನಿಲಿಸಿದನು ಮಾರ್ಬಲವನಿತ್ತಲು । ಭ

ಳೆಯುದಲಿಹಿಂವುಟ್ಟುತಿರೆಕಂಡನು ಧನಂಜಯನ ॥ ಹೊಳಹು ದುವ್ವಾಳಿಯಲಿ ಪಾರ್ಥನ । ನೆಲಕೆ ಬಿಟ್ಟನು ರಥವ ನಿಲುನಿ । ಲ್ಲಲವೊ ಹೋಗದಿರೆನುತ ಬೆಂಬತ್ತಿದನು ಕಲಿಕರ್ಣ ॥ ೩೫ ॥ ಉಂಟು ಖತಿಯೆನಲಾಯೆನುತ ಹ । ತ್ತೆಂಟುಶರದಲಿ ಭಟನ ಗರ್ವದ । ಗಂಟಲನು ಮುರಿಯೆಸಲು ಭಯದಲಿ ಕೆದರಿಕಂಪಿಸುತ ॥ ಕಂಟಣಿಸಿ ಸುರನಿಕರವೈರಿಯ । ಗಂಟಲರುಣಾಂಬುವನು ಸರಳಿಂ । ಗೀಂಟಿಸುವೆ ತಾನೆನುತ ಕಿಡಿಕಿಡಿವೋದನಾಕರ್ಣ ॥ ೩೬ ॥ ಕಂಡನರ್ಜುನನಿದಿರೊಳಗೆಯು । ದ್ದಂಡತನವನು ನೃಪತಿ ಚಿಂತಾ । ಖಂಡಧೈರ್ಯರು ನಾವಲೇ ಕಂಡಿರೆ ಮುರಧ್ವಂಸಿ ॥ ಅಂಡಲೆದು ಕಾದಲ್ಕೆ ಸಮಯವೆ। ಚಂಡಬಲನಹನಡುವೆಗಲವೊ। ತಾಂಡನಂತಿರೆ ತೋರುತ್ಕೈದನೆ ರಥವ ತಿರುಹೆಂದ ॥ ೩೭ ॥ ಜೀವಿಸುವೊ ಡಾವಾವಲೇಸಿನ । ಠಾವ ಕಾಣೆವು ಜೀಯಕರ್ಣನೊ । ಳಾವು ತೊಡಕುವರಲ್ಲ ಮರಳಿಚು ಪಾಳೆಯಕೆ ರಥವ ॥ ಈವಿಗಡನಂತಿರಲೆನುತ ಗಾಂ । ಡೀವಿ ಚಾಪವನಿಳುಹೆ ರಥವನು । ದೇವಕೀಸುತ ನೂಕಿದನು ಪವಮಾನವೇಗದಲಿ ॥ ೩೮ ॥ ಬರುತ ಕಂಡನು ಭೀಮಸೇನನ । ಹೊರೆಗೆ ಬಿಟ್ಟನು ರಥವನರ್ಜುನ ಕರೆದು ಬೆಸಗೊಂಡನು ನೃಪಾಲನ ಕ್ಷೇಮಕುಶಲವನು ॥ ಅರಸನಿಂದು ಸುಜೀವಿಯೋ ಸುರ । ಪುರನಿವಾಸಿಯೊ ಯೆನಲು ನಾನೀ । ಧುರದೊಳಿದ್ದನು ನೀ ನಿಧಾನಿಸುಯೆಂದನಾಭೀಮ ॥ ೩೯ ॥ ಆದೊಡೆ ಲೆಪವಮಾನಸುತ ನೀ । ನಾದರಿಸು ನಡೆಯರಸನನು ನಾ । ಕಾದುವೆನು ಕೌರವನ ಸಕಲಬಲಪ್ರಹಾರದಲಿ ॥ ಕೈದುಕಾರರು ಸಕಲದೆಸೆಗಳ । ಲ್ಯೆದಿ ಬರುತಿದೆ ನೀಮರುಳುತ್ತ ಭೇದಿಸುವನರಗಳಿಗೆಮಾತ್ರದೊಳೆಂದನಾಪಾರ್ಥ ॥ ೪೦ ॥ ಎಲೆಧನಂಜಯ ನೀನೆ ಬಲುಗೈ । ಯ ಳಿದವರು ರಣಖೇಡರೇ ಕುರು । ಬಲವನೊಬ್ಬನೆ ಕೇಣಗೊಂಡೆನು ಕರ್ಣಮೊದಲಾಗಿ ॥ ಅಳುಕಿಸುವೆನೀಕ್ಷಣಕೆ ತನ್ನಗ್ಗಳಿಕೆಯನು ನೋಡ ವನಿಪಾಲನ । ಬಳಲಿಕೆಯ ಸಂತೈಸು ನೀ ನಡೆಯೆಂದನಾಭೀಮ ॥ ... ॥ ೪೧ ॥

ಅಂತು ಸಂಧಿ ೧೪ ಕ್ಕೆ ಪದ ೫೪೪ ಕ್ಕಂ ಮಂಗಳಮಸ್ತು.

---

## ಹದಿನೈದನೆಯ ಸಂಧಿ.

ಸೂಚನೆ ॥ ರಾಯರಿಪುಬಲವಿಪಿನದಹನದ । ಜೀಯನೇಕಾಂಗದಲಿ ಕೌರವ । ರಾಯದಳಬಹಳಾಂಬುಧಿಯ ಕಲಕಿದನು ಕಲಿಭೀಮ ॥

ಪದ ॥ ಕೇಳು ಧೃತರಾಷ್ಟ್ರಾವನಿಪ ದು । ವ್ವಾಳಿಯಲಿ ಕೃಷ್ಣಾರ್ಜುನರು ನಿಜ । ಪಾಳೆಯಕೆ ತಿರುಗಿದರು ಬಳಿಕಿತ್ತಲು ವೃಕೋದರನ ॥ ಆಳುತನದ ಸಗಾಡಿಕೆಯನಾ। ಹೇಳಲರಿಯೆನು ಸಕಲಕುರುಬಲ । ಜಾಲವೊಂದೆಸೆಭೀಮನೊಂದೆಸೆಕೇಳು ಕೌತುಕವ ॥ ೧ ॥ ಸೆರಗ ಬೀಸಿತುನಿನ್ನವರು ಬೊ । ಬ್ಬಿರಿದನರ್ಜುನನಿತ್ತಬೆನ್ನಿನ । ತೆರಿಗೆಯುತ್ಸಹ ಧನುವ ತೆಗೆ ಭಂಡಾರದೊಳಗೆನುತ ॥ ತುರುಗಿತಲ್ಲಿಯದಲ್ಲಿ ಲಗ್ಗೆಯ । ಬಿರುದನಿಯ ನಿಸ್ಸಾಳಕಹಳೆಯ । ಜರಹು ಜೋಡಿಸಿ ಜರುಹಿತಡಿಕಿಲ ಜಗದ ಜೋಡಿಗಳ ॥ ೨ ॥ ಆರುಸಾವಿರತುರಗ ಗಜಘಟೆ । ಮೂರುಸಾವಿರಸಾವಿರದನಾ । ನೂರುರಥ ಪರಿಗಣಿನೆ

ಗೊಂದೇಲಕ್ಷಪಾಯದಳ ॥ ನೂರುರಥದಲಿ ಸರಳ ಹೊದೆ ನಾ । ನೂರು ಪರಿಚಾರಕರು ಸಹಸ್ರ್ಯ । ದೋರಿ ನಿಂದನು ಭೀಮನೊಬ್ಬನೆ ತರುಬಿ ಕುರುಬಲವ ॥ ೩ ॥ ಧರಣಿಪತಿ ಕೇಳ್ನಿಮ್ಮ ದಳದಲಿ । ಗುರುತನುಜ ಕೃತವರ್ಮಕನು ಕೃಪ । ನರನು ಕಲಿರಾಧೇಯಸೌಬಲವೀರವೃಷಸೇನ ॥ ಮರುಯವನಸಂವೀರಕೇರಳ । ತುರಕಬಾಹ್ಲಿಕಮಗದನೇಪಾ । ಳರುಗಳಿವರೊಳಗಿಹುದು ಸಂಖ್ಯಾರಹಿತಬಲವೆಂದ ॥೪॥ ಮಾಳವಾಂಧ್ರಪುಳಿಂದಬರ್ಬರ । ಗೌಳವಂಗದ್ರವಿಡಸಿಂಗಳ । ಲಾಳಗುಜ್ಜರಚೀನಬೋಟಕರಾಳಕರ್ಪರರು ॥ ಚೋಳಸಿಂಧಕಳಿಂಗವರನೇ । ಪಾಳಪಾರಿಯಯಾತ್ರತುಳುವನ್ಯ । ಪಾಲರಿವರೊಡ್ಡಿನಲಿ ಸಂಖ್ಯಾತೀತ ಬಲವೆಂದ ॥ ೫ ॥ ಇದ್ದುದಾಸಂಶಪ್ತಕರುಜಗ । ವದ್ದಜಲಧಿಯ ತೆರೆಯವೊಲು ಮುರಿ । ದೆದ್ದಹರಿಬಲದಂತೆ ದುಶ್ಶಾಸನನ ಪಾಯದಳ॥ ದೊದ್ದೆಯಲ್ಲದದೊರೆಗಳೇ ಜರ । ದೆದ್ದುದೆರಡಕ್ಷೋಣಿಯಿನಿಬರ । ಗೆದ್ದನೊಬ್ಬನೆ ಭೀಮ ಕೇಳ್ ಜನಮೇಜಯಕ್ಷಿತಿಪ ॥೬॥ ಹೇಳುಸಂಜಯ ವಿಸ್ತರಿಸು ಕಾ । ಲಾಳುಮೇಲಾಳಿನಲಿ ಭೀಮನ । ಕಾಳಗದ ಕೌತುಕವನೀಹೆಬ್ಬಲದ ದುರ್ಬಲನ ॥ ಆಳುಹಿರಿದೆದ್ದೇಸುಫಲ ಹೀ । ಯ್ಯಾಳಿದೈವಕೆ ಬೇರೆ ಪರಿಪರಿ । ಕಾಲವಿಲ್ಲ ವಿಪಕ್ಷಪಾತದೊಳೆಂದನಂಧನೃಪ ॥ ೭ ॥ ಅರಸ ಕೇಳಾದೊಡೆ ಮಹಾಸಾ । ಗರಕೆ ಮುನಿ ಮಂಡಿಸಿದವೊಲು ಸಂ । ಹರಣದಿನವೀಜಗಕೆ ಮಲೆವಮಹೇಶನಂದದಲಿ ॥ ಅರಿಹಿರಣ್ಯಾಕ್ಷನ ಬಲಕೆ ಕೋ । ಡೆರಗಿ ನಿಂದವರಾಹನಂದದಿ । ಕುರುಕುಲಾಂತಕಭೀಮನಿದ್ದನು ತರುಬಿ ಪರಬಲವ ॥ ೮ ॥ ಆತನಿಂದಂಗವಣೆಯನು ನಿ । ಸ್ಸಾತ ಕಂಡನು ಮೆಚ್ಚಿದನು ಮಝು । ಪೂತು ಭೀಮ ಸುಧೀರನೈ ಸದ್ಗುಣಕೆ ಮತ್ಸರಿವೆ ॥ ಈತನೊಬ್ಬನೆ ಕೌರವರಸಂಖ್ಯಾತವೆಂಬುದು ಲೋಕ ಸಾಕಿ । ನ್ನೀತ ಮರಳಲಿ ಯೆಂದು ಭಟ್ಟರನಟ್ಟಿದನು ಭೂಪ್ಪ ॥ ೯ ॥ ಬಂದು ಭಟ್ಟರು ಭೀಮಸೇನಂ । ಗೆಂದರೆಲೆಕೌಂತೇಯ ನೀನಿಂ । ದಂದಿನಗ್ಗದದುಂದುಮಾರನ ಕಾರ್ತವೀರ್ಯಕನ ॥ ಸಂದಭರತಭಗೀರಥಾದಿಗ । ಳಿಂದಮಿಗಿಲು ಮಹಾಪ್ರಚಂಡರೊ । ಳಿಂದು ನಿನಗೆಣೆಯಿಲ್ಲ ದನುಜಾಸುರರ ಥಟ್ಟಿನಲಿ ॥ ೧೦ ॥ ರಾಯರಿಪುಜಗಜಟ್ಟಿಗಳು ಕುರು । ರಾಯಥಟ್ಟಿನೊಳಿನಿಬರೊಳು ನಿ । ಸ್ಸಾಯತದ ನಿಲುವಂಗವಣೆಗಾವೇನ ಹೇಳುವೆವು ॥ ರಾಯನನು ಸಂತೈಸುವುದು ಮಾ । ದ್ರೇಯಫಲುಗುಣಸಹಿತ ನಿಲು ನಿ । ಸ್ಸಾಯತದಲೆಮ್ಮರಸನೊಲ್ಲನು ನಿನ್ನೊಡನೆ ರಣವ ॥ ೧೧ ॥ ಆಗಲದು ತಪ್ಪೇನು ಧರ್ಮಜ । ನಾಗುಹೋಗರ್ಜುನನಮೇಲೆ ವಿ । ಭಾಗದಲಿ ಬಂದುದು ಸುಯೋಧನಸೈನ್ಯರಣವೆಮಗೆ ॥ ಈಗಳಿನ ವಿಗ್ರಹದ ವಿಷಯದ । ಯಾಗದಲಿ ರಿಪುಭಟರ ಪಶುಹಿಂ । ಸಾಗಮವ ತೋರುವೆನು ಸೈರಿಸಿಯೆಂದನಾಭೀಮ ॥ ೧೨ ॥ ವಿವಿಧಮಣಿಕನಕಾದಿವಸ್ತುವ । ನವರಿಗಿತ್ತನು ತನ್ನ ಪಾಠಕ । ನಿವಹವನು ಕಳುಹಿದನು ಕೌರವಬಲದಸುಭಟರಿಗೆ ॥ ಅವರು ಬಂದರು ಕರ್ಣಗುರುಸಂ । ಭವಶಕುನಿಕೃತವರ್ಮಕೃಪಕೌ । ರವನೃಪಾದಿಗಳಿದಿರೊಳೊದರಿದರನಿಲಜನ ಮತವ ॥ ಮುರಿದುಲೋಕವ ನುಂಗುವೊಡೆಕ । ಟ್ಟರುಹೆಯೋ ಕಾಲಂಗೆ ಕತ್ತಲೆ । ಯಿರಿತದಲಿ ಕೈದೀವಿಗೆಯ ಹಂಗೇಕೆ ದಿನಮಣಿಗೆ ॥ ಮರೆದೆಲಾರಾಧೇಯ ಕೃಪ ನಿಲು । ಹೊರಗೆ ಗುರುಸುತ ನಿಮ್ಮಗರ್ವವ । ಹರಿಸುವುದು ಭೀಮಾಸ್ತ್ರವೆಂದುದು ಭಟರ ಸಂದೋಹ ॥೧೪॥ ಆಶೆಯೇ ಜೀವದಲಿ ಕುರುಧರ । ಣೀಶ ಬಿಡು ರಾಜ್ಯವನು ಮಾತಿಸ । ವಾಸಿಯುಂಟೇ ಕದನವನು ಕೊಡುವುಳಿದಮಾತೇನು ॥ ಈಸುಶರ್ಮಕಶಕುನಿಕೃಪದು । ಶ್ಶಾಸನಾ

ದಿಪಿಪೀಲಿಕರು ತಮ । ಗೇಸುಬಲುಹುಂಟೈಸನೊದಗಲಿ ಯೆಂದರವರೆಂದು ॥ ೧೫ ॥ ಅವರ ಕಳುಹಿ ದರುಚಿತದಲಿ ನಿ । ನ್ನವರು ಮಸಗಿದಕಡಲವೊಲು ಬಲು । ತವಕಿಗರು ಕೋಲಳವಿಯೊಡ್ಡಿದ ಕೋಡ ಕೈಗಳಲಿ ॥ ತವತವಗೆ ದೆಖ್ಖಾಯಿ ಮಿಗೆಯುu । ಧ್ವನಿಸಲುರುಬಿದರವನಿಪಾಲನ।ಗವಿಯ ಗಾಡಿಕೆ ಜೋಡಿಸಿತು ಗೀರ್ವಾಣರಾಲಿಗಳ ॥ ೧೬ ॥ ಇನ್ನರಿಯಬಹುದೆನುತ ರಾಯನ । ಮನ್ನಣೆಯ ಮದಸೊಕ್ಕಿದಾನೆಗಳೆನ್ನಬಿಡುಬಿಡುತನ್ನಬಿಡು ರಣಕೆನುತ ಖಾತಿಯಲಿ ॥ ತಿನ್ನಡಗನೊಡೆಹೊಯ್ದು ಭೀಮನ । ಬೆನ್ನಲುಗಿಯುಗಿ ಕರುಳನಕಟಾ । ಕುನ್ನಿಗಳನೆನುತೊದಗಿದರು ದುಶ್ಯಾಸನಾದಿಗಳು ॥ ೧೭ ॥ ಈತನೇ ಸಮಗರ್ಜನನು ಕೊಳ್ಳೀತನನು ಗಾಯಕ್ಕೆನುತ ಗಡ। ಬೀತರಿಟ್ಟಣಿಸಿದರು ಸಂಶಪ್ತಕರು ಮಿಂಗಡಿಸಿ ॥ ಪೂತುಮಝರೇ ಭೀಮ ಯೆನುತವೆ । ಸೂತಸುತನೌಕಿದನುಕೃಪಗುರು । ಜಾತಕೃತವರ್ಮಾದಿರಥಿಕರು ಹೊಕ್ಕರವಗಡಿಸಿ ॥೧೮॥ ಒಂದುಕಡೆಯಲಿ ರಾಯನಿಪ್ಪ । ತ್ತೊಂದುಸಾವಿರರಥಸಹಿತಲುಘೆ । ಯೆಂದು ಬಿಟ್ಟನು ಭೀಮಸೇನನ ರಥದ ಸಂಮುಖಕೆ ॥ ಅಂದುಗೋಗ್ರಹಣದಲಿ ಪಾರ್ಥಗೆ । ನಿಂದರನಿಬರಿಗರೆಸ ಚಿತ್ತ್ರ । ಸಿಂದು ಸ್ಥಿರಿಸಿ ನಿಂದರನಿಬರಿಗೊಬ್ಬನೇ ಭೀಮ ॥೧೯॥ ಚೀರಿ ಕಾಲಿಡೆ ದಿಕ್ಕರಿಗಳೆದೆ। ಡೋರಿಹೋಗಲು ಸರ್ವಲಗ್ನೆಯ । ಲೇರಿತೀದಳ ದಳವುಳಿಸಿ ದಳಪತಿಯ ನೇಮದಲಿ ॥ ಏರುಸೂರೆಗೆ ಹೊಯ್ದು ಮಿಾಸಲಿ । ನೇರು ನಮ್ಮದು ತಮ್ಮದೆನುತು । ಬ್ಬೇರಿ ಭೀಮನ ಮುತ್ತಿದರು ಮೆತ್ತಿದರು ಬಾಣದಲಿ ॥೨೦॥ ಅರಸ ಕೇಳ್ಕೆ ನಿನ್ನಭೀಮನ । ಪರಿಯನೀಸರ್ವಾಂಗಘಾತ । ಸ್ಫುರಣಮದಕರಿಯಿ ಕ್ಷುಮವನವನು ಹೊಕ್ಕಮಾರ್ಗದಲಿ ॥ ಕೆರಳಿ ಕವಿದನು ಕೆರಳಿದುರಿ ಕ । ರ್ಪುರಕೆ ಕವಿವಂದದಲಿ ಕರ್ಣನ । ಕುರುಪತಿಯ ಗುರು... ದುಶ್ಯಾಸನನ ರಥಕಾಗಿ ॥೨೧॥ ಎಚ್ಚರವರವರೆಚ್ಚಬಾಣವ । ಕೊಚ್ಚಿದನು ಕೋಲ್ಗಳಲಿ ಗೊಡ್ಡಿದ । ನಿಚ್ಚಟರ ನೆಗ್ಗಿದನು ತಾಗಿದನರಸು ಮೋಹರವ ॥ ಹೆಚ್ಚಿ ವೀರಾವೇಶದಲಿ ಬಹ। ಬಿಚ್ಚರಥಿಕರನಾಯ್ದು ಧೈರ್ಯದ । ಕೆಚ್ಚ ಮುರಿದನು ಕದಡಿದನು ರಿಪುಸುಭಟಸಾಗರವ॥೨೨॥ ತುಡುಕುವಾನೆಯ ಸಂಮುಖಕೆ ಖುರ। ವಿಡುವ ಕುದುರೆಯನೊತ್ತಿ ಹಾಯ್ಸುವ । ಬಿಡುರಥವ ತಲೆವರಿಗೆಯಲಿ ತವಕಿಸುವಕಾಲಾಳ ॥ ಕಡಿದನಂಬಿನೊಳಾಗಜವನಾ । ಕಡುಹಯವನಾರಥವನಾನವ । ಗಡದ ಕಾಲಾಳುಗಳನೊಂದರೆಗಳಿಗೆಮಾತ್ರದಲಿ ॥೨೩॥ ಮುಂದೆ ಸಬಳಿಗಳೆಡಬಲದಲೋ । ರಂದದಲಿ ಬಲ್ಲವರು ದೊರೆಗಳ । ಮುಂದೆ ಹರಿಗೆಗಳೆರಡು ಬಾಹೆಯಲಾನೆ ಕುದುರೆಗಳ ॥ ಸಂದಣಿಸಿದುದು ಮತ್ತೆ ಬೀಳುವ । ಮಂದಿಗಿದು ನೆರವಾಯ್ತು ನೆಗ್ಗಿದ । ನೊಂದುಲಗ್ನೆಯಲೇರಿದರು ಜನಮೇಜಯಕ್ಷಿತಿಪ ॥೨೪॥ ಮುರಿದು ನುಗ್ಗಹರಥವ ಬರಿಕೈ । ಹರಿದು ಬೀಳುವಗಜದ ಗಾಯದ । ನೆರವಣಿಗೆಯಲಿ ನೆಗ್ಗಿಮುಗ್ಗುವಕುದುರೆಕಾಲಾಳ ॥ ಅರಿಯನಭಿವರ್ಣಿಸಲು ಬಲಮು । ಕ್ಕುರಿಕಿಕೊಂಡುದು ಮೇಲೆಮೇಲ । ಳ್ಳಿರಿವಕಹಳೆಯ ಬಹಳ ಬಹುವಿಧವಾದ್ಯರಭಸದಲಿ ॥೨೫॥ ಸಿಕ್ಕಿದನು ಹಗೆ ಸ್ವಾಮಿದ್ರೋಹಿಯ । ಸೆಕ್ಕಿಸುರಗಿಯಲಿವನಖಂಡವ । ನಿಕ್ಕಳಿನೊಳೆಡೆಯುವಚಿ ಕೊಯ್ಸುಂಟಿಗೆಯ ತಿನ್ನೆನುತ ॥ ಹೊಕ್ಕುಹೊಯ್ದರು ರಥವನಳವಿಗೆ । ಮಿಕ್ಕು ಕೈಮಾಡಿದರು ಕಾಲಾ । ಳೊಕ್ಕಿನಲಿ ಬೇಸರಿಸಿದರು ಪವಮಾನನಂದನನ ॥೨೬॥ ನೆಲಕೆದೊಪ್ಪನೆ ಹಾಯ್ದುಕೊಂಡನು । ಹಲಗೆಗದೆಯನು ಮೇಲುವಾಯ್ದು । ಪ್ಪಳಿಸಿ ಕೊಂದನು ವೈರಿಬಲವತಿಗಾಯಘಾತಿಯಲಿ ॥ ತಲೆಗಳೊಟ್ಟಲ ಕಲಿಗಳಟ್ಟೆಯ । ತಿಳಿವರಕುತದ ಹೊನಲ

ಮುಂಡದ । ಲಳಿಯು ನಾಟ್ಯದಲೆಸೆದುದ್ಧೈ ಭೀಭತ್ಸರೌದ್ರದಲಿ ॥ ೨೭ ॥ ಧುರಕಡೆಯಕಾಲಿನಲಿ ಜೋ
ದರು । ತೆರಳೆದೆಚ್ಚಾಡಿದರು ನೆಲದಲಿ । ನೆರೆಯೆ ರಥದಿಂದೊದಗಿದರು ಸಮರಥಮಹಾರಥರು ॥ ಅರಿ
ಯೆ ಹಯಜೋಡಿನಲಿ ಕವಿದ । ಬ್ಬರಿಸಿದರು ರಾವುತರು ಭೀಮನ । ಬಿರುಗದೆಯ ಘಲ್ಲಣೆಗೆ ಚೆಲ್ಲಿ
ತು ನಿನ್ನ ಪರಿವಾರ ॥೨೮॥ ರಾವುತರು ಕಡಿವಡೆಯಲಾತುರ । ಗಾವಳಿಗಳೋಡಿದವು ಜೋದರ । ಜೀ
ವ ಜಾಳಿಸೆ ಬೀದಿವರಿದವು ಮದಗಜಾದಿಗಳು ॥ ತಾವು ನಿಬ್ಬರಗತಿಯ ರಥತುರ । ಗಾವಳಿಗಳೆಳೆದವು
ರಥಂಗಳ । ನಾವಿಗಡವಿಗ್ರಹ ಮಹಾದ್ಭುತವಾಯ್ತು ಧೃತರಾಷ್ಟ್ರ ॥೨೯॥ ಕಡೆದರುಘಲ್ಲರಿಗಳ ರಥಾ
ಗ್ರದೊ । ಳುಡಿದಸಿಂಧದ ಮಕುಟಪದಕದ । ಕಡೆಯಸರಪಳಿಹೊನ್ನಬಂದಿಯ ವಜ್ರಮಾಣಿಕದ ॥ ಕ
ಡುಕುಹೀರಾವಳಿಯ ರಾಶಿಯ । ಕಡೆಯಹಾರದ ರಚನೆ ಯಮುನಂ । ಗಡಿಯ ಪಸರವಿದೆನಲು ಮೆರೆ
ದುದು ಕೂಡೆ ರಣಭೂಮಿ ॥೩೦॥ ಕಡಿದಹಕ್ಕರಿಕೆಗಳ ಸೀಳಿದ । ದಡಿಯನೆಗ್ಗಿದಗುಳದ ರೆಂಚೆಯ ।
ಸಿಡಿದಸೀಸಕಬಾಹುರಕ್ಕೆಯ ಜೋಡುಮೋಚೆಯವ ॥ ಜಡಿವಮಿಳಿಮೊಗರಂಬರೆಂಚೆಯ । ಕಡುಕುಗಳ
ಸೂತ್ರಿಕೆಯ ಕಂಬಿಯ । ಕಡಿಯಣದ ಕುಸುರಿಗಳಲೆಸೆದುದುಕೂಡೆ ರಣಭೂಮಿ ॥ ೩೧ ॥ ಮುರಿದ
ದೂಹತ್ತಿಗಳನೆಗ್ಗಿದ । ಸುರಗಿಗಳ ಚಿನಕಡಿಯ ತೋಮರ । ಪರಶುಶಲ್ಲೆಹಸಬಳಚಕ್ರಮುಸುಂಡಿಲೌ
ಡಿಗಳ ॥ ಹರೆದಹೊದೆಗಳ ಉಡಿದಬಿಲ್ಲಿನ । ಬಿರಿದಬತ್ತಳಿಕೆಗಳ ಸೀಳಿದ । ಹರಿಗೆಗಳ ಹೇರಾಳದಲಿ ರಂ
ಜಿಸಿತು ರಣಭೂಮಿ ॥೩೨॥ ಉರುಳ್ದತಲೆಗಳ ಕುಣಿವಮುಂಡದ । ಹೊರಳ್ದಕಡಿಗಳ ನೆಣನಹಾಸಿನ
ನರಳ್ದಬೀತರ ಮಿದುಳಜೋರಿನ ಕರುಳದೊಂಡೆಯುದ ॥ ಅರಳ್ದಕಡಿತಾಳಿಗೆಯ ರಕುತಕೆ । ಮರಳ್ದ
ಭೂತವ್ರಜವರ್ಘೋಂಪಿಸಿ । ಕೆರಳ್ದಭಟರಟ್ಟೆಗಳಲೆಸದುದು ಕೂಡೆ ರಣಭೂಮಿ ॥ ೩೩ ॥ ಅಲ್ಲಿಕರ್ಣ
ನ ರಥವ ವಾಜಿಯ । ಘಲ್ಲಿಸಿದನಾಕ್ಷಣದೊಳಾಚೆಯ । ರಲ್ಲಿ ನೆರೆ ಕೌದಿದನು ಚಿಗಿದನು ಕೌರವನ
ಹೊರೆಗೆ ॥ ತಲ್ಲಣಿಪಸಂಶಪ್ತಕರ ನೆರೆ । ಚಲ್ಲಬಡಿದನು ದಳದನಾಯಕ । ರೆಲ್ಲರಿಗೆ ಸವಿದೋರಿದನು ಬ
ಲುಗದೆಯ ಬಿರುಹೊಯ್ದು ॥೩೪॥ ಇತ್ತಲಿತ್ತಲು ಭೀಮನೆಂದುರೆ । ಮುತ್ತಿ ಮುಸುಕಿತು ಸೇನೆ ಚಿಂ
ಮಿದ । ಡತ್ತಲಾಚೆಯಲುರುಬಿ ದಳ ಥಾಡಿಸಿತು ವೇಢೆಯಲಿ ॥ ಇತ್ತ ಹೊಯ್ದನು ಹೊಯ್ದುಕುರು
ಪತಿ । ಯತ್ತ ಚಿಗಿದನು ಗುರುಸುತಾದಿಗ । ಳತ್ತಲಲ್ಲಿಗೆ ಮೊಳಗಿದನು ಮೊಟ್ಟಿದನು ಪಟುಭಟರ
॥೩೫॥ ಕರಿಘಟೆಯ ಮರೆಗೊಂಡು ನಿಂದವು । ತುರಗವಾನೆಗಳೋಡಿತೇರಿನ । ಮರೆಯ ಹೊಕ್ಕವು
ತೇರುಹಾಯ್ದವು ದೊರೆಯ ಹಿಂದಿಕ್ಕಿ ॥ ಕರಿಮುರಿಯೆ ತೇಜಿಗಳ ತೇರಿನ । ದೊರೆಗಳೇಹಿಂದೆದ್ದು
ದೊರೆ ಪೈ । ಸರಿಸಿತಲ್ಲಿಯದಲ್ಲಿ ಭೀಮನ ಹೊಯ್ಲು ಹೋರಟಿಗೆ ॥೩೬॥ ಭೂತುಮರುಘರಿಪುರಾಯ
ಮನ್ಮಥ । ಭೂತನಾಥವಿರೋಧಿರಾಯರಿ । ಗಾತು ಮುರಿದಘರಟ್ಟ ವೈರಿನಿಕಾಯಗಿರಿವಜ್ರ ॥ ಏತಕೀ
ಸೂಳೆಯರು ಕ್ಷತ್ರಿಯ । ಜಾತಿಯಲಿ ಜನಿಸಿದರು ಶಿವಶಿವ । ವಾತಸುತಗೆಣೆಯಾರೆನುತ ಹೊಗಳಿತು
ಭಟವ್ರಾತ ॥ ... ... ॥೩೭॥

ಅಂತು ಸಂಧಿ ೧೫ಕ್ಕೆ ಪದ ೫೫೫ಕ್ಕಂ ಮಂಗಳಮಸ್ತು.



## ಹದಿನಾರನೆಯ ಸಂಧಿ.

|| ಸೂಚನೆ || ರಾಯರಿಪುಬಲಗಿರಿನಿವಹವ | ಜ್ರಾಯುಧನುಕಲಿಪಾರ್ಥನಂಭೋ | ಜಾಯತಾಂಬಕ ಸಹಿತ ಕಂಡನು ಧರ್ಮನಂದನನ ||

ಕೇಳು ಧೃತರಾಷ್ಟ್ರಾವನಿಪ ಬಲು | ಗಾಳಗವ ಭೀಮಂಗೆ ಸೇರಿಸಿ | ಪಾಳೆಯಕೆ ತಿರುಗಿದರು ಕೃಷ್ಣಾರ್ಜುನರು ವಹಿಲದಲಿ|| ಹೇಳು ಮುರಹರ ಬುದ್ಧಿಕದಡಿ ಛ | ಡಾಳಿಸಿತು ಪರಿಖೇದದೊಸಗೆಯು| ಕೇಳಲಾರೆನು ರಾಜವಾರ್ತೆಯನೆಂದನಾಪಾರ್ಥ || ೧ || ನೋಡುವೆವು ನಡೆ ಧರ್ಮಪುತ್ರನ | ಕೇಡು ಕಲಿಯುಗಬೀಜವೀಪರಿ | ಕೂಡದೀಹೊತ್ತಿನಲಿ ಧರ್ಮಸ್ಥಿತಿಗೆ ಕೇಡಿಲ್ಲ || ಖೇಡನಾಗದಿರಿದಕೆಚಿಂತಿಸ | ಬೇಡೆನುತ ಫಲುಗುಣನ ಚಿತ್ತದ | ಪಾಡರಿದು ನುಡಿಯುತ್ತ ತಂದನು ರಥವ ಪಾಳೆಯಕೆ || ೨ || ಬರಲು ಪಾರ್ಥನ ಕಂಡು ಪರಿಜನ | ಹರಿಯದಲ್ಲಿಯದಲ್ಲಿ ದುಗುಡದ | ಭರದ ಗುಜುಗುಜುಗೋಷ್ಠಿಗಳ ಜನಜನದ ಮುಸುಕುಗಳ || ಮುರಿದಮಂಜನ ನಿಡುನಿಹಾರದ | ಸರಸಿರುಹವನದಂತೆ ಪಾಳೆಯ | ದಿರವು ಲೇಸಲ್ಲೆನುತ ಬಂದನು ರಾಜಮಂದಿರಕೆ || ೩ || ಕಳಚಿದನು ಸೀಸಕವ ಬೆಂಬ | ತ್ತಳಿಕೆಯನು ವಜ್ರಾಂಗಿಮೋಚೆಯ | ಬಿಲುಸರಳ ನಿಳುಹಿದನು ಬೇಗದಿ ದೈತ್ಯರಿಪುಸಹಿತ || ಇಳಿದು ರಥವನು ರಣದ ಭಾರಿಯ | ಬಳಲಿಕೆಯ ಕೈಕೊಳ್ಳದರಸನ | ನಿಳಯವನು ವಳಯದಲಿ ಹೊಕ್ಕನು ಕಂಡನವನಿಪನ ||೪|| ಝೋಂಪಿಸುವಸಿರಿಮೊಗವ ನೋಟದ | ಸೊಂಪಡಗಿದಾಲಿಗಳ ಸ್ಥೈರ್ಯದ | ಗುಂಪಳಿದನಿಜರಾಜತೇಜದ ವಿಪುಳವೇದನೆಯ || ಬಿಂಪರಿವೇಸರಿನ ತುರುಗಿದ | ಕಂಪಿನಗ್ಗಳಿಕೆಯಲಿ ಘಾತಿಯ | ಪೆಂಪಿನಲಿ ಹುದುಗಿದಮಹೀಶನ ಕಂಡನಾಪಾರ್ಥ || ೫ || ಬಿಗಿದು ಕಟ್ಟಿದಗಾಯಮದ್ದಿನ | ಜಿಗಿಯತೈಲದ ತಳಿತಲೇಪದ | ಬಿಗಿದಬಾಣವ್ಯಥೆಯ ಕರ್ಣಧ್ಯಾನಚೇತನದ || ಸೊಗಸು ಮಿಗೆ ದ್ರೌಪದಿಯ ತುದಿವೆರಳುಗುರುವೆರಸಿನ ಸಿರಿಮುಡಿಯ ಬಲು | ದುಗುಡಭರದಲಿ ಕುಸಿದಭೂಪನ ಕಂಡನಾಪಾರ್ಥ || ೬ || ನಕುಲಧೃಷ್ಟದ್ಯುಮ್ನಸಹದೇ | ವಕಯುಧಾಮನ್ಯಾದಿಸುತಸೋ | ಮಕಶತಾನೀಕಪ್ರಬದ್ಧರು ಚೇಕಿತಾನನರು || ಸಕಲಕೈಕಯಮತ್ಸ್ಯಸುತಸಾ | ತ್ಯಕಿಶಿಖಂಡಿಯುಯುತ್ಸುಪ್ರತಿವಿಂ | ಧ್ಯಕರು ಪಾರ್ಥನನುಪಚರಿಸಿ ಕುಳ್ಳಿರ್ದರಲ್ಲಲ್ಲಿ || ೭ || ಕರಗಿದಂತಃಕರಣವಾಲಿಗ | ಳೊರತೆಯೆನೆಕಣ್ಣೀರಿನಲಿಕಾ | ತರಿಸಿದವು ಜಲಬಿಂದುಗಳು ಪುರುಹೂತನಂದನನ|| ಅರಸನಿರವಿದೆಯೆನುತ ನೋಸಲನು|ಚರಣದಲಿ ಚಾಚಿದನು ಚೇಷ್ಟಾ | ಪರಿಗತಿಯನಾರೈವುತಭಿಮುಖವಾಗಿ ಕುಳ್ಳಿರ್ದ ||೮|| ನೊಂದೆಲಾನರನಾಥ ವಿಧಿಯೇ | ನೆಂದು ಮುನಿದುದು ನಿನಗೆನುತ ಮು | ಕುಂದ ನೆರೆಕಾರುಣ್ಯದೃಷ್ಟಿಯೊಳವನಿಪನ ನೋಡಿ || ಮಂದಘುಂಡದಿಪಾಣಿಪಲ್ಲವ | ದಿಂದ ತನುವನು ತಡವಲಾಗಳೆ | ಕಂದೆರದು ನೋಡಿದನು ಭೂಪತಿ ಕೃಷ್ಣಫಲುಗುಣರ ||೯|| ಹರಿಕರಾಬ್ಜಸ್ಪರ್ಶಮಾತ್ರ | ಸ್ಫುರದಲಂದಾಪ್ಯಾಯನಾಂತಃ | ಕರಣನಾದನು ನೆನೆದನುನ್ನತಬಾಷ್ಪವಾರಿಯಲಿ || ತುರುಗಿದೇರಿನ ವ್ಯಥೆವಳಿಯ ಲಘು | ತರದಿ ಬಳಿಕೊಯ್ಯನೆ ತನುವನಾದರಿಸಿ ಕುಳ್ಳಿರ್ದನು ಮಹೀಪತಿ ಮಾನಿನಿಯ ಮಲಗಿ || ಹದುಳವೇ ಪಾರ್ಥಂಗೆ ಹೇರಾ | ಳದಲಿ ಕಾದಿದೆಯಾ ಸುಶರ್ಮನ| ಕದನ ಬೆಟ್ಟಿತು ಶಪಥವಲ್ಲಾ ತಮ್ಮೊಳೆಲ್ಲರಿಗೆ || ಕೆದರಿದರು ಹಲ್ಲಣಿಗೆಯಲಿ ಬಂ|

ದೊದಗಿದವನೇ ವೀರಲೆಕ್ಕಕೆ । ದರಿಯುಬಂದುದೆಲಕ್ಷವೆಂದನು ನೃಪತಿ ಫಲುಗುಣನ ॥ ೧೧ ॥ ಆಯಿತೆದು ನೀ ಬಂದಪರಿ ರಿಪು। ರಾಯುಧಘಟ್ಟಿನೊಳೊಕ್ಕಲಿಕ್ಕಿದ । ದಾಯುವೊಳ್ಳಿತು ದಿಟ್ಟನಾವನು ನಿನ್ನಹೊಲಿಸಲು ॥ ಕಾಯಿದನೊ ಕಳುಹಿದನೊ ಮೇಣಾತ । ಹಾಯಿದನೊ ಕರ್ಣಂಗೆ ಮಾಡಿದು । ಪಾಯವಾವುದು ಪಾರ್ಥ ಹೇಳೆಂದವನಿಪತಿ ನುಡಿದ ॥ ೧೨ ॥ ಬೇರೆ ಸಂಶಪ್ತಕರೊಳಿಕ್ಕಟೆ । ದೋರಿಸಿದೆಲಾ ತೋಟಿನೋಲಿಯು । ಕಾರತನವನು ಸೂತಸುತನಿಲ್ಲವರ ಥಟ್ಟಿನಲಿ ॥ ಹಾರಜರೆದು ಸುಶರ್ಮನವದಿರ। ತೂರಿ ತಿರುಗಿದಬಳಿಕ ಕೈಮ್ಮೈ । ದೋರಿದನೆ ಕಲಿಕರ್ಣ ನಿನ್ನೊಡನೆಂದನಾಭೂಪ ॥ ೧೩ ॥ ಎಲೆಧನಂಜಯ ಸೂತತನಯನ । ಗೆಲಿದು ಬಂದೆಯೊ ದಿವಿಜನಗರಿಗೆ । ಕಳುಹಿಬಂದೆಯೊ ಕಂಡು ಕಣಕದೆ ಬಂದೆಯೋ ಮೇಣು ॥ ಉಳುಹಿಬಿಡುವನೆ ಕದನಮುಖದಲಿ । ಮಲೆತನಾದೊಡೆ ಕರ್ಣನೇನ । ಗ್ಗಳಿಕೆವಡೆದನೊ ಶಿವಶಿವಾಯೆಂದರಸ ಬಿಸುಸುಯ್ದ ॥ ೧೪ ॥ ಜೀಯ ಖಾತಿಯಿದೇಕೆ ಕರ್ಣನ । ಕಾಯದುಳುಹಿದೆನೊಂದುಭಾರಿವಿ । ಡಾಯದಲಿ ಘಟ್ಟಿಸುವೆನೀಗಳೆ ಹಾಯ್ಕುವೀಳೆಯುವ ॥ ರಾಯದಳಗಿಳವೆನ್ನ ಕೂಡೆ ನ । ವಾಯಯೋ ಕಲಿಕರ್ಣನಾಯುಷ । ಹೋಯಿತಿದೆಯೆಂದೊರಸಿದನು ವಾಮಾಂಘ್ರಿಯಲಿ ನೆಲನ ॥ ಈಸುಪರಿಯಲಿ ನಿಮ್ಮ ಚಿತ್ತದೊ । ಳಾಸರಾಯಿತೆ ನಮ್ಮದುಷ್ಕೃತ । ವಾಸನಾಮಯುವ್ಯಸಳೇ ನಿಮಗೆತ್ತಲೀವ್ಯಸನ ॥ ಆಸುಯೋಧನ ವಿಗಡಭಟವಾ । ರಾಸಿಯನು ಮುಕ್ಕಳಿಸುವೆನು ಧರಣೀಶ ನೇಮವ ಕೊಂಡೆ ನಿಮ್ಮಡಿಯಾಣೆ ತನಗೆಂದ ॥ ೧೬ ॥ ನಾಲಗೆಯು ನೆಣಗೊಬ್ಬು ಮಿಕ್ಕುಚ । ಡಾಳಿಸಿದೊಡೇನಹುದು ಕರ್ಣನ । ಕೋಲಗರಿ ಸೋಂಕಿನಲಿ ಸೀಯವೆ ಸೀತ್ಗತಿ ನಿನಗೆ ॥ ವೀಳೆಯವ ತಾ ಕರ್ಣನಾಯುಷ । ಕೋಳುಹೋಯ್ತೆಂದೆಂಬಗರ್ವದ। ಗಾಳುತನವನು ನಂಬಬಲ್ಲೆನೆ ಪಾರ್ಥ ಕೇಳೆಂದ ॥ ೧೭ ॥ ನಿನಗೆ ಕೀಳವನಲ್ಲ ರಾಧಾ । ತನಯನವ ಹೆಚ್ಚಾಳು ಕಡ್ಡಿಯ । ಮೊನೆಗಣೆಯು ಕೈಕೊಂಬನೇ ಹೆಮ್ಮಕ್ಕಳಿದಿರಿನಲಿ ॥ ಕನಲಿ ಕಳವಳಿಸಿದೊಡೆ ನೀನಾ। ತನ ವಿಭಾಡಿಸಲಾಪಸತ್ವನೆ । ಮನವ ಬಲ್ಲೆನು ಪಾರ್ಥ ನುಡಿಯದಿರೆಂದನಾಭೂಪ ॥೧೮॥ ಬಲನ ಜಂಭನ ಕೈಟಭನ ದಶ । ಗಳನ ನಮುಚಿಯು ಕಾಲನೇಮಿಯ । ಬಲನಿಶುಂಭಹಿರಣ್ಯಕಾದಿಪ್ರಮುಖದಿತಿಸುತರು ॥ ಅಳವಿಗೊಡುವರೆ ಪಾತಹುದು ನೀ । ನಿಲುಕಲಳವೇ ಕರ್ಣಜಯವತಿ । ಸುಲಭವೇ ನಿನ್ನಂದದವರಿಗೆ ಪಾರ್ಥ ಕೇಳೆಂದ ॥ ೧೯ ॥ ಜಾಣಪಣದಲಿ ಕಾದಿ ಹಿಂಗುವ। ದ್ರೋಣನಲ್ಲಳವಿಯಲಿ ಕಳವಿನ। ಕೇಣವಲಿ ಕೊಂಡಾಡುವೊಡೆ ಗಾಂಗೇಯನಿವನಲ್ಲ ॥ ಸಾಣೆಗೂಡಲಗಿವನು ಸಮರಕೆ । ಹೂಣಿಗನು ರಿಪುಬಲಕೆ ಹಾಣಾ । ಹಾಣಿಕಾರನು ಕರ್ಣನಾರೆಂದರಿಯೆನೀನೆಂದ ॥೨೦॥ ಜಾಳಜರೆದು ಜಡಾತ್ಮರಿಗೆ ಜಂ। ಘಾಳತನವನು ಮೆರೆದು ಖೋಡಿಯ । ಖೂಳರನು ಖೊಪ್ಪರಿಸಿ ಚೋಣಿಯ ಭಟರನಪ್ಪಳಿಸಿ ॥ ಆಳುತನದಲಿ ಮೆರೆವನಿನಗವ । ಸೋಲಲರಿಯನು ನಿನ್ನಗಂಟಲ । ಗಾಳವೆನಿಸುವ ಕರ್ಣನಾರೆಂದರಿಯೆ ನೀನೆಂದ ॥ ೨೧ ॥ ಏನ ಹೇಳುವೆ ನೆನ್ನದಳದಲಿ । ತಾನು ಭೀಮನ ಥಟ್ಟಿನಲಿ ಗುರು । ಸೂನುವೀಸಹದೇವಸಾತ್ಯಕಿನಕುಲರೊಡ್ಡಿನಲಿ । ಮಾನನಿಧಿರಾಧೇಯನೆತ್ತಲು । ತಾನೆ ಚಿನ್ಮಯವಾಯ್ತು ಪಾಂಡವ । ಸೇನೆ ತಾನಿನ್ನುಳಿದವರು ಸಮವಲ್ಲ ಕರ್ಣಂಗೆ ॥ ೨೨ ॥ ಎಲ್ಲಿ ಕರ್ಣನು ತಿರುಗಿನೋಡಿದೊ । ಡಲ್ಲಿ ತಾನೆಡವಂಕಬಲಮುಖ । ದಲ್ಲಿ ಸೂತನನೆಂಟುದೆಸೆಗಳ ಕೂಡಿ ಕರ್ಣಮಯ ॥ ಎಲ್ಲಿ ನೋಡಿದೊಡಲ್ಲಿ ಕರ್ಣನ । ಬಿಲ್ಲ ಛೊಬ್ಬೆರಥಾ

ಶ್ವರವವೆದೆ । ದಲ್ಲಣದ ದೆಕ್ಕಾಳೆರಚನಾರಸಿಕತನವೆಂದ ॥೨೩॥ ಮುರಿದು ಹಂಚದಮೋಹರವ ನೆರೆ। ಪರಿ
ದುಸಂತೈಸಿದೊಡೆ ಜೋಡಿಸಿ। ಜರೆದು ಗರಿಗಟ್ಟಿದವಿರೋಧಿವ್ರಜದ ಥಟ್ಟಣೆಯ॥ ಇರಿದು ಕುರಿದರಿಮಾ
ಡಿ ದೊರೆಗಳ। ನರಸಿ ಕಾದಿ ವಿಭಾಡಿಸಿದರಣ । ದುರಬೆಕಾರನದೆಂತು ಸ್ಥೈರಿಸಿ ಗೆಲುವ ನೀನೆಂದ ॥೨೪॥
ಕಾದಿ ನೊಂದೆನು ತಾನು ಬಳಿಕ ವೃ । ಕೋದರನನಡಹಾಯ್ದೊಡಾತನ । ಕಾದಿ ನಿಲಿಸಿ ಮದೀಯರಥ
ವನು ಮತ್ತೆ ತರುಬಿದನು ॥ ಮೊದಲಿಸಿ ಸಹದೇವನಕುಲರು । ಕಾದಲವರನು ಮುರಿದನಗ್ಗದ । ಕೈ
ದುಕಾರರ ದೇವಕರ್ಣನ ಗೆಲುವೆದಿಟವೆಂದ ॥ ೨೫ ॥ ಮಲೆತು ಧಾಳಾಧೂಳಿಯಲಿ ಬಲ । ಸುಳಿಮಸ
ಗಿತನ್ನುವನು ವೇಷ್ಟಿಸಿ।ಬಳಸಿ ಕಾದಿತು ಕರ್ಣನೊಬ್ಬನಕೂಡೆ ತಲೆಯೊತ್ತಿ॥ ಒಲವರವು ನಿನಗುಳ್ಳೊ
ಡಾಗಲೆ।ನಿಲಿಸೆಯಾನೀ ಬಂದು ಬಯಲ। ಗ್ಗಳಿಕೆಯನು ಬಿಡೆ ಬೆರೆಯುತಿಹೆ ಸಾರೆಂದನಾನೃಪತಿ॥೨೬॥
ಉಕ್ಕಿ ಕುದಿದುದು ವೀರರಸ ಮಗು । ಳುಕ್ಕಿಕುದಿದುದು ರೌದ್ರರಸವದ । ರಕ್ಕಜವ ಕೆಲಕೊತ್ತಿ ಕುದಿ
ದುದು ಶಾಂತಿರಸಲಹರಿ ॥ ಮಿಕ್ಕುಬಹಳಕ್ರೋಧ ಪೊಳಪೊಳ। ಗುಕ್ಕಿತಮಳೋತ್ಸವದ ಚಾಪಲ। ಸೊ
ಕ್ಕಿತೊಂದೇನಿಮಿಷ ಮೌನದೊಳಿರ್ದನಾಪಾರ್ಥ ॥ ೨೭ ॥ ಹೇಳಲಂಜವೆನಾಸುಶರ್ಮಕ । ನಾಳು
ತಾಯಿಗೆ ಮಕ್ಕಳಾಗದೆ । ಬೀಳಹೊಯ್ದುನಿಹಾರದಲಿ ತಿರುಗಿದೆನು ಹರಿಸಹಿತ ॥ ಕೋಲಗುರುವಿನ ಮ
ಗನಲೇ ಹರಿ । ವಾಳನರಿದಡಗಟ್ಟಿದನು ತಾ । ಹೇಳಿಫಲವಿನ್ನೇನೆನುತ ಬಿಸುಸುಯ್ದನಾಪಾರ್ಥ ॥೨೮॥
ಇಟ್ಟಣಿಸಿಕೊಂಡೆನ್ನೊಡನೆ ಕೈ । ಗಟ್ಟಿ ಕಾದಿದನೊಡನೊಡನೆ ಹುಡಿ । ಗುಟ್ಟಿದೆನು ರಥವಾಜಿಸೂತಶ
ರಾಸನಾವಳಿಯ ॥ ಮುಟ್ಟಿ ಬಂದನು ಖಡುಗದಲಿ ಮೈ । ಗೊಟ್ಟು ಹೆಣಗಿದೆನಾಕ್ಷಣಕೆ ಸಾ। ಲಿಟ್ಟು ಸ
ರಿದುದು ಸಕಲಕೌರವಸೇನೆ ಸರಿಸದಲಿ॥೨೯॥ ತೊಡಕಿದನುಗಡ ಗರುಡಹಾವಿನ । ತಡಿಕೆವಲೆಯಲಿ ನಿನ್ನ
ಗಮನವ । ತಡೆದರೇ ತಪ್ಪೇನು ಕೌರವದಳದನಾಯಕರು ॥ ತಡವಿನಲಿ ತಡವಾಯ್ತು ಪುಳಿದಂ । ತೆಡೆ
ಯಲುಳಿದರ್ಜನಗೆ ನಮ್ಮವ । ಗಡವ ಕೇಳಿದು ನಿಲ್ಲನೆಂದನು ನಗುತ ಯಮಸೂನು ॥ ೩೦ ॥ ಏನನೆಂ
ಬೆನು ಯೆನ್ನಪುಣ್ಯದ । ಹಾನಿ ತಲೆದೋರಿದೊಡೆ ಭೀಮನ । ಸೂನುವಿರಲಭಿಮನ್ಯುವಿರಲೆಮಗಿನಿತು
ಹದನಹುದೆ ॥ ಆನದೀಜದ್ರೋಣನಲಿ ತಾ। ಹಾನಿಯನು ಮಿಗೆ ಕಂಡೆನೇ ನೆರೆ। ಹೀನನನು ಕಂಡಾದೊ
ಡೆಯು ಬದುಕುವುದು ಲೇಸೆಂದ ॥ ೩೧ ॥ ಅರಳಿಚದೆ ಮಧುಮಾಸ ಮೊಣಲಿ । ವರುಷರುತುವೇ ಸಾ
ಕು ಜಾತಿಯ । ಜರೆದರೇನಮಗಿನ್ನು ಪೂರ್ವಪ್ರಕೃತಿವನವಾಸ ॥ ಸಿರಿಗೆ ಕಕ್ಕುಲಿತೆಯಲಿ ಪಕ್ಷವ । ಬೆರ
ಸಿ ಬದುಕುವನೈಸಲೇ ವರ । ಗುರುವಲಾ ಧೃತರಾಷ್ಟ್ರನೂಣಯವೇನು ತನಗೆಂದ ॥ ೩೨ ॥ ಬರಿದೆ
ಬಯಸಿದೊಡಹುದೆ ರಾಜ್ಯದ । ಹೊರಿಗೆಯನು ನಿಶ್ಶಂಕೆಯಲಿ ಹೊ । ಕ್ಕಿರಿವಮಿಗೆ ಸತ್ವಾತಿಶಯ ಬೇ
ಹುದು ರಣಾಗ್ರದಲಿ ॥ ಎರಗಿ ಮೇಣ್ತ್ರಿಪುರಾಯರನು ಕು । ಕ್ಕುರಿಸುವರೆ ರಾಧೇಯನಂದದ । ಉರುವ
ಡೊಬ್ಬನೆ ಬೇಹುದಲ್ಲದೊಡಿಲ್ಲಜಯವೆಂದ ॥ ೩೩ ॥ ಎಮಗೆ ವಿಕ್ರಮವೆಂಬಗೌರವ । ರವವ ಕಂಡೆವು ಕ
ರ್ಣನಂದದ। ಲೆಮಗೆ ದೀವಸಗೊಂಡು ಕಾದುವೊಡೆಂಬಡವರಿಲ್ಲ॥ಬವರ ಗೆಲುವದೆ ಹರಿಗೆ ಕೊಡುಗಾಂ।
ಡಿವವ ಸಾರಥಿಯಾಗು ನೀನೆಂ । ದವಗಡಿಸಿದನು ವೀರನಾರಾಯಣನಮೈದುನನ ॥ ॥ ೩೪ ॥

ಅಂತು ಸಂಧಿ ೧೬ಕ್ಕೆ ಪದ ೬೧೯ಕ್ಕಂ ಮಂಗಳಮಸ್ತು.

## ಹ ದಿ ನೇ ಳ ನೆ ಯ ಸ ಂ ಧಿ

ಸೂಚನೆ ॥ ರಾಯನನು ಕಡೆನುಡಿದನಾವ । ಜ್ರಾಯುಧನನಂದನನು ಬಳಿಕಬು । ಜಾಯತಾಂಬಕ ಸಂತವಿಟ್ಟನು ಧರ್ಮಜಾರ್ಜುನರ ॥

ಪದ ॥ ಕೇಳು ಧೃತರಾಷ್ಟ್ರಾವನಿಪ ಭೂಪಾಲನಾಡಿನಮಾತನಾಲಿಸಿ ಕೇಳಿದನು ಕೆದರಿದವು ಗುಡಿಯನು ರೋಮರಾಜಿಗಳು ॥ ಮೇಲೆಮೇಲುಬ್ಬೇಳ್ವರೋಷ । ಜ್ವಾಲೆ ಹೊದಿಸಿತುವದನವನು ಕ । ಣ್ಣಾಲಿ ಕೆಂಪೇರಿದವು ಮಿಗೆ ಪಾರ್ಥಂಗೆ ನಿಮಿಷದಲಿ॥೧॥ಆಯುಧವ ಹಿಡಿದೊರೆಯನುಗಿದನ । ಡಾಯುಧವನುಬ್ಬರದ ರೌದ್ರ । ಸ್ಥಾಯಿಭಾವದ ಭಾರದಲಿ ಭುಲ್ಲೈಸಿ ಭಯವಡಗಿ ॥ ರಾಯನಲ್ಲಿಗೆ ಮೆಲ್ಲಮೆಲ್ಲನು । ಪಾಯದಲಿ ಪಲ್ಲವಿಸಲುಪ್ಪರ । ಗಾಯದಲಿ ಲಾಗಿಸಿದಪಾರ್ಥನ ಕಂಡುದಖಿಳಜನ ॥ ೨ ॥ ಅಹಹ ಕೃತಪ್ರಾಯಶ್ಚಿತ್ತಲಾ ಹಾ । ಅಹಹರವವೇನೆನುತ ರಾಯನ । ಮಹಿಳೆ ಬಿದ್ದಳು ಮೇರೆ ಖಡುಗಕೆ ತನ್ನನಡಯೊಡ್ಡಿ ॥ ಬಹಳಶೋಕದಲಖಿಳಭಟರು । ವ್ಯಾಹವ ಬಿಟ್ಟರು ದೈವಕೃತಿದು। ಸ್ಸಹವಲಾಯೆನುತಸುರಂಪು ಹಿಡಿದನು ಧನಂಜಯನ ॥ ೩ ॥ ಹಿಡಿಯದಿರು ಮುರವೈರಿಪಾರ್ಥನ । ಬಿಡುಬಿಡೀತನ ಖಡ್ಗಕಿದ ತ।ನ್ನೊಡಲು ತನ್ನನು ಥಾರೆಯೆರೆದೆನು ನಯನವಾರಿಯಲಿ ॥ ತೊಡಗಿದೀತನ ರಾಜಕಾರ್ಯವ । ಕಡಿಸದಿರು ನಿರ್ವಹಿಸಲೀತನ । ಬಿಡುಬಿಡನೆ ಜರೆದನು ಮುರಾಂತಕನಿಂದ್ರನಂದನನ ॥ ೪ ॥ ಅಕಟ ಗುರುಹತ್ಯಾಮಹಾಪಾ । ತಕಕೆ ತಂದ್ಯೆ ಮನವ ಭರತ । ಪ್ರಕಟಕುಲಸಂಹಾರಲನಕೆ ನೀನೊಬ್ಬನುದಿಸಿದೆಲಾ ॥ ವಿಕಳಕುರುನೃಪರೊಳಗೆ ದುಂತಾ । ತ್ಮಕರ ಕಾಣೆನು ನಿನ್ನಸರಿಹೋ । ಲಿಕೆಗೆ ಹರಹರಹರ ಮಹಾದೇವೆಂದನಸುರಾರಿ ॥೫॥ ಧರಣಿಪನ ಕೊಲಲೆಂದೊಮೇಣೀ । ತರುಣಿಯರಗೀನಕುಲಸಹದೇ। ವರಗೆಯೋ ಮೇಣ್ನಿನಗೆಯೋ ನೀನುಗಿದಡಾಯುಧದ ॥ ಪರಿಯಿದೇನ್ಯೆ ಪಾರ್ಥ ಮೌನದೊ । ಳಿರಲಿದೆ ನಿನ್ನಣೆನಲು ಬೆರಗಿನ । ಗರದ ಗಾಹಿನೊಳದ್ದು ಮೌನದೊಳಿರ್ದ್ದನಾಪಾರ್ಥ ॥೬॥ ಬೆದರಿಸದಿರ್ಯ್ಯೆ ಕೃಷ್ಣ ದುಷ್ಕ । ರ್ಮದಲಿ ಸುಳಿಯೆನು ಭೂಪತಿಯ ಗದ । ಗದವಚೋಪನ್ಯಾಸಮನ್ಯಾಯಪ್ರಪಂಚವಲೆ ॥ ಅದಂಸೀತನ ಹೊಯ್ದುಕೊಲ್ಲದೆ । ಸುಟಿನನಿಷ್ಕೃತಿಯಿಲ್ಲ ಸತ್ಯಾ । ಭ್ಯುದಯವೇಯೆನ್ನುದಯ್ಯವಲ್ಲದಿಂನ್ನಲಂಯುವೆಂದ ॥ ೭ ॥ ದೇವ ಪೂರ್ವದಲೆನ್ನ ನುಡಿ ಗಾಂಡೀವವೀತಕೆ ನಿನಗೆ ತನಗೀ। ದೇವಧನು ಸಾಧ್ಯೆಶ್ಯವೇ ತಗೆಯೆಂದು ಕೋಪದಲಿ ॥ ಆವನೊಬ್ಬನು ನುಡಿದೊಡಾತನ । ಜೀವವನು ಜಕ್ಕುಳಿಸಿ ತನ್ನವ। ಚೋಪಿಲಾಸವ ಕಾಬನೆಂದನು ಕೃಷ್ಣಕೇಳೆಂದ ॥೮॥ ಸಾರು ತಗೆ ಗಾಂಡಿವವ ನಿನಗನು। ಸಾರಿಯೋ ಬಿಸುಡೆಂದುನುಡಿಯನ । ಧಾರುಣೀಪತಿಕೇಳ್ದರೇ ನೀವಿನಿಬರೀನುಡಿಯ ॥ ಆರದನ್ಯಾಯವು ವಿಚಾರವಿ । ಶಾರದನು ನೀನಲೆಮುಕುಂದ ವಿ।ಕಾರಿಯೋ ತಾನೆಂದು ಬಿನ್ನಹಮಾಡಿದನು ಪಾರ್ಥ ॥೯॥ ಲೇಸುಲೇಸಿದು ತಮ್ಮಮಾಡಿದ । ಭಾಷೆ ಬಾಹಿರವಾಗಬೇಡ ವಿ। ನಾಶಕಾನಂಬನು ಮುರಾಂತಕ ಬಿಡು ಧನಂಜಯನ ॥ಆಶಯೀ ನೀರಿವ್ಯದಲಿ ಮೇ। ಣೀಶನೀರದಲಿಲ್ಲ ಪಾರ್ಥನ । ಭಾಷೆ ಸಂದೊಡೆ ಸಾಕು ಲೇಸಾರೆಂದನಾಭೂಪ ॥ ೧೦ ॥ ಮರುಳ ಮೌನದೊಳಿರು ಯುಧಿಷ್ಠಿರ । ನರನ ನೀ ಮುಂದಿಟ್ಟು

ಯಮದೂ । ತರಿಗೆ ಕೈವರ್ತಿಸುವಪರಿಯೋ ಕೋಟಿನರಕದಲಿ ॥ ಹುರುಳನರಿಯದೆ ಧರ್ಮಶಾಸ್ತ್ರದ। ಪರಮತತ್ವವಿದಾವಮುಖವೆಂ।ದರಿಯೆ ವೈದಿಕಕ್ಷಾತ್ರತಾಮಸ ಬಿಡದು ನಿಮಗೆಂದ ॥೧೧॥ ಎಲೆಧನಂಜಯ ಧರ್ಮಪುತ್ರನ। ಕೊಲುವವಮನ್ನತಯೆಂಬನುಡಿಯು । ಗ್ಗಳಿಕೆಯದು ನಗೆಯಲ್ಲವೇ ನಿಶ್ಚಯವೆ ಹಿಂಸೆಯಲಿ ॥ ಕಲುಮನವಲಾ ನೀನಕಟ ನಿ । ರ್ಮಳಿತಧರ್ಮಸ್ಥಿತಿರಹಸ್ಯವ । ತಿಳುಹಿದವರಾರೆಂದು ತಲೆದೂಗಿದನು ಮುರವೈರಿ ॥ ೧೨ ॥ ನುಡಿದಮಾರ್ಗದಲಿರದು ಧರ್ಮದ । ಗೊಡವೆ ತಾನದುಬೇರೆ ಸತ್ಯವ । ನುಡಿದು ಕೆಟ್ಟವರುಂಟು ಹಿಂಸಾಧರ್ಮವೃತ್ತಿಯಲಿ ॥ ನಡೆದು ಯಾವಜ್ಜೀವದಲಿ ಗತಿ। ವಡೆದರುಂಟೆಲೆ ಪಾರ್ಥನಿನ್ನ । ಗ್ಗಡದವೀರಾವೇಶ ಮಾಣಲಿ ಮಾತ ಕೇಳೆಂದ ॥ ೧೩ ॥ ಬನದೊಳೊಬ್ಬನು ಕೌಶಿಕಾನ್ವಯ । ಮುನಿ ತಪಶ್ಚರ್ಯದಲಿ ಸತ್ಯವೆ । ತನಗೆ ಸುವ್ರತ ವೆಂದು ಬಟ್ಟೆಯೊಳಿರ್ದದೊಂದುದಿನ ॥ ವನಚರರು ಬೇಹಿನಲಿ ಭೂಸುರ । ಜನವ ಬೆಂಬತ್ತಿದರು ಕೌಶಿಕ । ಮುನಿಯ ಬೆಸಗೊಂಡರು ಮಹೀಸುರಮಾರ್ಗಸಂಗತಿಯ ॥ ೧೪ ॥ ವಿತತಸತ್ಯದ ವಿಷಯಭೇದ । ಸ್ಥಿತಿಯನರಿಯದೆ ವಿಗಡ ವನಚರ । ತತಿಗೆ ಭೂಸುರಚರರ ಮಾರ್ಗವ ತೋರಿದನು ಬಳಿಕ ॥ ಅತಿದುರಾತ್ಮಕರವದಿರನಿಬರು । ಕ್ಷಿತಿಸುರರ ಕೊಂಡಮುಳವಸ್ತು । ಪ್ರತತಿಯನು ಕೊಂಡೊಯ್ದರೆಲೆಕೌಂತೇಯ ನೋಡೆಂದ ॥ ೧೫ ॥ ಕಾಲವಶದಲಿ ಕೌಶಿಕನೆ ನಾ।ಕಾಲದೂತರು ತಂದರಾತನ। ಮೇಲುಪೋಗಿನ ಸುಕೃತದುಷ್ಕೃತವನು ವಿಚಾರಿಸಲು॥ ಮೇಲನರಿಯದೆ ಸತ್ಯವಾಕ್ಯ । ಸ್ಥೂಲದಲಿ ಬೊಮ್ಮೇತಿ ಬಂದುದು।ಹೇಳಲತಿಶಯಕರ್ಮಭೋಕ್ತ್ರದ ಪಾಪಫಲವೆಂದು ॥ ೧೬ ॥ ನರಕಕಾತನ ನೂಕಿದರು ವಿ । ಸ್ತರಣವೆಂತೈ ಪಾರ್ಥ ಸತ್ಯದ । ಹುರುಳನರಿಯದೆ ಕಾಳುಗೆಡೆದೊಡೆ ಕಾರ್ಯವೇನಹುದು॥ ಮರುಳೆ ಕೇಳದ್ಭುತವ ಹಿಂಸಾ।ಪರನಹರ್ನಿಶವಾದುರಾತ್ಮನ । ಹರಿಸಿದರು ದೇವಾಂಗನೆಯರಾಕಥೆಯ ಕೇಳೆಂದ ॥ ೧೭॥ ಬನದೊಳೊಬ್ಬಬಲಾಕನೆಂಬವ । ವನಚರನು ತನ್ನಯಕುಟುಂಬವ । ನನುದಿನವು ಮೃಗವೇಧೆಯಲಿ ಸಲಹಿದನು ಬೇಸರದೆ ॥ ತನಗೆ ಕಡೆಪರಿಯಂತ ಮತ್ತೊಂ । ದನುವನರಿಯನು ರಾಗಲೋಭವ । ನೆನೆಯದರಿಯದೆ ಹಿಂಸೆ ಸಂದುದು ಹಿಂಸೆವೃತ್ತಿಯಲಿ ॥ ೧೮॥ ವರವರಂಗೆ ಕುಟುಂಬರಕ್ಷಾ । ಕರಣಕಾರಣವಾಗಿ ಹಿಂಸಾ । ಭರಣವೆಂದೇ ಬರೆಹಧರ್ಮದ ಸೇನೆ ಬೋವರಲಿ ॥ ಮರಣವಾತಂಗಾಗೆ ಕೊಂಡೊ । ಯ್ದರು ಸುರಾಂಗನೆಯರು ಧನಂಜಯ । ಪರಮತತ್ವರಹಸ್ಯವಾವಂಗರಿಯಲಹುದೆಂದ ॥ ೧೯ ॥ ಪಿತೃಸಮೋಜ್ಯೇಷ್ಠೋಯೆನಿಪುದಾ । ಶ್ರುತಿವಚನವರಸಂಗೆ ನೀನುಪ । ಹತಿಯಮಾಡಲು ಬಗೆದೆ ಮಾತಿನವಾಸಿಬೇಕೆಂದು ॥ ಕ್ಷಿತಿಯೊಳಬುಜವೃಣಾಳಕೋಸುಗ । ಕೃತತಟಾಕವನೊಡೆದವೊಲು ಭೂಪತಿ ವಧಾವ್ಯಾಪಾರನಿರ್ಮಳಧರ್ಮವಹುದೆಂದ ॥ ೨೦॥ ಗುರುಹತಿಗೆ ಕರ್ತವ್ಯನಾನೆಧಿ । ಕರಿಸಿಮಾಡುವಮಾತನೇ ಪತಿ । ಕರಿಸುವುದು ಶ್ರುತಿಕರ್ಮವಿಹಿತವಿದೆಂಬುದೀಲೋಕ ॥ ಎರಡರಭ್ಯಂತರವ ನೀನೇ । ನರಿಯದಾತನೊ ವೇದಶಾಸ್ತ್ರದ । ಪರಮತತ್ವಜ್ಞಾತೃವಲ್ಲಾ ಪಾರ್ಥ ನೀನೆಂದ ॥ ೨೧ ॥ ಈಸುನಿರ್ದಯನೆಂಬುದನು ನಾ । ವೀಸುದಿನವರಿಯೆವು ಮಹಾದೇ । ವೇಸುಪರಿಯಂತಹುದಲೈ ನಿನ್ನಂತರಂಗದಲಿ ॥ ಏಸುನೋಡಿದೊಡೇನು ಪಾಪವಿ। ಲಾಸರಚನಾಕೌರವಾತ್ಮರ । ವಾಸನೆಗಳವು ಬೇರೆ ಹರಹರಯೆಂದನಸುಧಾರಿ ॥ ೨೨ ॥ ನನೆದುದಂತಃಕರಣ ಮಧುಸೂ । ದನಸೂಕ್ತಿಸುಧಾರಸದಿನೆರೆ । ನನೆದುದಾತನ ಮೈಲಿ ಲೋಚನವಾರಿಪೂರದಲಿ ॥

ಘನತರಕ್ಲೇಶವ್ಯಥಾಚಿ। ತ್ತನುವಡಾಯುಧವರೆಯೊಳೌಂಕುತ । ವಿನಯದಲಿ ಕೃಷ್ಣಂಗೆ ಬಿನ್ನಹವಮಾ ಡಿದನು ಪಾರ್ಥ ॥ ೨೩ ॥ ನಾವು ನೆರೆಸರ್ವಾಪರಾಧಿಗ । ಳಾವಗುಣದೋಷವನು ನಮ್ಮಲಿ । ಭಾವಿಸು ವೆನಾವೇನಬಲ್ಲೆವು ಧರ್ಮನಿರ್ಣಯುವ ॥ ಆವಪರಿಯಲಿ ತನ್ನ ಸತ್ಯದ । ಠಾವುನಿಲುವುದು ರಾಯುಗುಪ ಹತಿ । ಯಾವತಾವೆಂದೆನಿಸಲರಿಯರು ಬೆಸಸಬೇಕೆಂದ ॥ ೨೪ ॥ ಭರತವಂಶದಲುದಿಸಿ ನಮ್ಮೈ । ವರಿಗೆ ಯಿಹಲೋಕದಲಿ ಸುಖಸು । ಸ್ಥಿರದಪದದಲಿ ಹೊರುವಹೊಣೆ ನೀನಲ್ಲದೆಮಗಾರು ॥ ಮರುಳರಾವಪ್ಯ ಯುದಮದದು । ರ್ಧರಪರಾಕ್ರಮತಮದ ಘನವಮೂ । ರ್ಖರಿಗೆ ಕೃಪೆಮಾಡೆಂದು ಬಿನ್ನಹಮಾಡಿದನು ಪಾರ್ಥ ॥ ೨೫ ॥ ಕೊಲುವುದೇ ನಂದರಿದೆ ಟೆಕ್ಕರಿ । ಗಳೆವುದೇ ಪರಹಿಂಸೆ ಲೋಗರ । ಹಳಿವುದೇ ವಧೆ ಶಸ್ತ್ರವಧೆ ವಧೆಯಲ್ಲ ನೋಡುವರೆ ॥ ಖಳರ ದುಸ್ಸಂದಷ್ಟವಚನದ । ಹಿಳುಕು ಹೃದಯುವನೊದೆದು ಮರುವೊನೆ । ವೊಳೆತು ಬಳಿಕವ ಬದುಕಿದವನೇ ಪಾರ್ಥ ಕೇಳೆಂದ ॥ ೨೬ ॥ ಅರಸಗುಪಹತಿಯೆನಿಸ ದೇನಿ । ಷ್ಠುರದುರುಕ್ತಿಕೃಪಾಣದಲಿ ಸಂ । ಹರಿಸಿದೊಡೆ ನಿರ್ವಾಹವಾಗದೆ ನಿನ್ನನುಡಿಗಳಿಗೆ ॥ ಪರಮ ರುಷಿಮತವೆನೆ ಮುರಾರಿಯ । ಸಿರಿವಚನಕೆ ಹಸಾದವೆಂದು । ಬ್ಬರದ ಗರ್ವೋಕ್ತಿಯಲಿ ಗರುವಿಕೆಗೆಡಿಸಿ ದನು ಪಾರ್ಥ ॥ ೨೭ ॥ ಎಲೆಯುಧಿಷ್ಠಿರ ಜನಿಸಿದ್ಯೆ ಶಶಿ । ಕುಲದವಿಮಲಕ್ಷತ್ರವಂಶದ । ಲಳಿಮನದ ತಾಳಿಕೆಯ ತೊಡಹದ ಗಂಡುರೂಪಿನಲಿ ॥ ನೆಲನ ಕೊಂಡರು ನಿನ್ನವೋರೆಯ । ಬಲುಹಕಂಡಾಕೌರ ವರು ನಿ । ನ್ನೊಳಗೆ ಬಲ್ಲಿದನೆನ್ನ ಭಂಗಿಸಲೆಂದನಾಪಾರ್ಥ ॥ ೨೮ ॥ ನಿನ್ನ ಜೂಜಿನವಿಗಡದಲಿ ಸಂ । ಪನ್ನರಾಜ್ಯವ ಬಿಸುಟು ನಿನ್ನಯ । ಬೆನ್ನೊಳಗೆ ತೊಳಲಿದೆವು ಹದಿಮೂರಬುದ ವನದಲ್ಲಿ ॥ ಮನ್ನಿಸ ದೆಲೇ ಸಾರಿ ಕೌರವ । ರಿನ್ನು ಕೊಡುವರೆ ರಾಜ್ಯವನು ನೀ । ನಿನ್ನು ಭೀಮನ ಹಿಡಿದು ಬದುಕುವುದೆಂ ದನಾಪಾರ್ಥ ॥ ೨೯ ॥ ರಣದ ಘಾರಾಘಾರಿಯಾರೋ । ಗಣೆಯುಮನೆಯಲ್ಲರಸ ಸಿರದಲಿ । ಕುಣಿ ವಡಾಯುಧಸೀಳ್ವಸುರಗಿಗೆ ತಿವಿವಭಲ್ಲೆಯಕೆ ॥ ಹಣೆದು ಲೌಡಿಗೆಹಾಯ್ದು ಬೀಳುವ । ಕಣೆಗೆ ಖಂಡ ವ ರುಧಿರರಸದೌ । ತಣವ ರಚಿಸದೆ ರಾಜ್ಯ ಸಿರಿ ನಿನಗೊಲಿವಳಲ್ಲೆಂದ ॥ ೩೦ ॥ ಕರುಣಕಂಕಣಧಾರ ಮಿದುಳಿನ । ಸಿರದಬಾಸಿಗ ಭುಜದವಕ್ಷದ । ಕರದಹೊಯ್ಲಿನ ತೋಳಬಂದಿಯ ಪದಕಸರಪಳಿಯ । ಅರುಣಜಲಲುಳಿತಾಂಬರದ ಸಂ । ಗರವಿವಾಹದ ಭೂಷಣದ ಸೌಂ । ದರಿಯವಿಲ್ಲವೆ ವಿಜಯುಸಿರಿ ನಿನಗೊಲಿವಳಲ್ಲೆಂದ ॥ ೩೧ ॥ ಇಂದಿನಲಿ ಹದಿನೇಳುದಿನದ । ಲ್ಲಿಂದ ಹಿಂದಣ ಬವರದಲಿ ಸೀ । ನೊಂದುದುಂಟೇ ದ್ರೋಣಭೀಷ್ಮರ ಕೋಲತೋಹಿನಲಿ ॥ ಬಂದು ಕೂರಂಬಿನಲಿ ಗಡ ನೀ । ನೊಂ ದುಜೀವವ ಜಾರಿಸುವೆ ಸಾ । ಕಿಂದು ಕುಲಕಂಟಕರನಿರಿದೊಡೆ ದೋಷವಿಲ್ಲೆಂದ ॥೩೨॥ ಎನುತಡಾ ಯುಧದೊರೆಯನುಗಿದ । ರ್ಜುನನು ತನ್ನಯ ಕೊರಳಸಂಧಿಗೆ । ಮನದೊಳಗೆ ಖಯಖೋಡಿಯಿಲ್ಲದೆ ಚಾಚಿದನು ಬಳಿಕ ॥ ದನುಜರಿಪುವಡಹಾಯ್ದು ಹಿಡಿದಾ । ತನ ಕೃಪಾಣವ ಕೊಂಡು ನಿನ್ನಯ।ನೆನಹಿ ದೇನೈ ಪಾರ್ಥ ಹೇಳೆನ್ನಾಣೆ ಹೇಳೆಂದ ॥೩೩ ॥ ಏನಹೇಳುವೆನಡ್ಡಹಾಯಿದು। ನೀನೆ ಕೆಡಿಸಿದೆಯೆನ್ನನ ಲ್ಲದೊ । ಡೇನ ಮಾಡೆನು ಸತ್ಯಶೌರ್ಯದಹಾನಿಹಂಬದಲಿ ॥ ಈ ನರೇಂದ್ರನ ಕೊಂದತನಗೀ । ಹೀನ ದೇಹದತಲೆಯೊಡನೆ ಸಂ । ಧಾನವೇ ಸಾಕೆನ್ನ ಕೈದುವದೆನಗೆ ನೀಡೆಂದ ॥೩೪॥ ಎಲವೊಮರುಳೆ ಕಿರೀ ಟಿ ಮತ್ತೊಯು । ತಿಳಿಯಲಾ ನೀನಾವಪರಿಯಲಿ । ಮುಳಿದು ರಾಯನ ಮುಂದೆ ನಿನಗಾತದ್ವಿಧಾನದ

ಲಿ ॥ ಅಳಿವೆನೆನೆ ಯಾ ಸಾಕು ದೇಹವ । ನಿಳುಹುವುದು ಕೊಲೆಯಲ್ಲ ನೀನ । ಗ್ಗಳಿಕೆಗಳ ನೀಡಾಡಿ ನಿನ್ನನೆ ಕೊಂದು ಕೊಳ್ಳೆಂದ ॥೩೫॥ ಸಂದಪರಿಯಿದು ಜಗಕೆ ಲೋಗರ । ನಿಂದಿಸುವುದೇ ಹಿಂಸೆ ತನ್ನನು ಕೊಂದವನು ತನ್ನಾಳ ತನವನು ತಾನು ಹೊಗಳಿದೊಡೆ ॥ ಎಂದನರ್ಜನ ನವನಿಪಾಲಂ । ಗೆಂದನೆನ ಗಿದಿರಾರು ರಣದಲಿ । ನಿಂದು ಕಾದುವರಿಲ್ಲ ದನುಜಾಮರರ ಥಟ್ಟಿನಲಿ ॥೩೬॥ ತಾನಲಾ ದ್ರೌಪದಿಯ ಮದುವೆಯೊ । ಳಾನರೇಂದ್ರರ ಗೆಲಿದವನು ಬಳಿ । ಕಾನಿಶಾಟವ್ರಜವ ಮುರಿದುರುಹಿದನು ಖಾಂಡವವ ॥ ಏನನೆಂಬೆನು ಸಕಲಕೌರವ । ಸೇನೆಯನು ಗೋಗ್ರಹಣದಲಿ ಬಳಿ । ಕಾನಲೇ ರಥವೊಂದರಲಿ ಗೆಲಿದವನು ಕೇಳೆಂದ ॥೩೭॥ ಬಳಿಕ ಭೀಷ್ಮನನಾರು ರಣದಲಿ । ಗೆಲಿದವರು ದ್ರೋಣಪ್ರತಾಪಾ । ನಳವ ನಂದಿಸಿದಾತನಾರು ಮಹಾಹವಾಗ್ರದಲಿ ॥ ಮಲೆತು ಕಾದುವಸೂತತನಯನ । ನಳವನಿಲಿಸುವನಾವಟಿಕ್ಕರಿ । ಗಳೆದೆ ನೀನೆಮ್ಮೊಡನೆ ಸೆಣಸುವಭಟನ ತೋರೆಂದ ॥೩೮॥ ಮುರಿದೆ ಸಂಶಪ್ತಕರ ಸೈಂಧವ । ಶಿರವ ನಿಳುಹಿದೆ ಘೋಷಯಾತ್ರೆಯು । ಧುರದೊಳಗೆ ಕೌರವನ ಬಿಡಿಸಿದೆ ಮುನ್ನ ಪೌರುಷದಿ ॥ ಗುರುಗಳಡಿಗೆರಗಿಸಿದೆ ದ್ರುಪದನ। ವರಮಹಾಸಾಗರದ ಮಧ್ಯದ ।ದೊರೆಗಳೆಲ್ಲರ ಜಡಿದು ಕಪ್ಪವ ತಂದುದರಿಯಂದ ॥೩೯॥ ಉಂಟು ಫಲುಗುಣ ನಿನ್ನ ಹೋಲುವ । ರುಂಟೆ ಸುಭಟರು ದೇವದೈತ್ಯರೊ । ಳೆಂಟುಮಡಿ ನಾವರಿಯೆವೇ ಕೈವಾರವೇಕಿದಕೆ ॥ ಟೆಂಟಣಿಸದಿರು ಕೃಷ್ಣನಿಕ್ಕಿದ । ಗಂಟಿನಲಿ ಸಿಲುಕದಿರು ಯೆಂನಯು । ಗಂಟಲಿದೆ ನಿಶಿತಾಸ್ತ್ರವಿದೆ ನೀ ಬೇಗಮಾಡೆಂದ ॥೪೦॥ ಭರತಕುಲದಲಿ ಭಾಗಧೇಯ । ಸ್ಫುರಣಹೀನರನೆಮ್ಮನೀ ಧಿ । ಕ್ಕರಿಸಿ ನುಡಿದೊಡೆ ಮುನಿದು ಮಾಡುವದೇನು ವಿಧಿಯೊಡನೆ ॥ ಅರಿನೃಪಾಲರ ಗೆಲಿದು ವಿಶ್ವಂ । ಭರೆಯ ಕೊಂಡರೆ ಭೀಮಸೇನನ । ನರಸುತನದಲಿ ನಿಲಿಸಿ ಸುಖದಲಿ ರಾಜ್ಯಮಾಡೆಂದ ॥ ೪೧ ॥ ಇರಿದು ಮೆರೆವವಿನೋದವಿಗ್ರಹ । ದರಿತವೇ ಹಿಂದಾಯ್ತು ಹರಹಿನೊ । ಳುರುವಫಲಿತದ ಬೀಡು ಬಿಟ್ಟುದು ತನ್ನತನುವಿನಲಿ ॥ ಇರಿದಕರ್ಣನು ಸಾಲದೇ ಹೆಣ । ನಿರಿದು ಹಗೆಯೇಕೆಂಬವಮಾತನು । ಮರೆದುಕಳೆಯೆಕ್ಕೆ ತಮ್ಮಯೆಂದವನೀಶ ಬಿಸುಸುಯ್ದು ॥೪೨॥ ನಿನ್ನಜನನಿಯ ಜಠರದಲಿ ತಾ । ಮುನ್ನ ಜನಿಸಿದೆನೀಗುರುತ್ವಕೆ । ಮನ್ನಿಸದೆ ಸಾಕ್ಕೆಸಲೇ ಸರ್ವಾಪರಾಧವನು ॥ ಎನ್ನನೊಬ್ಬನನುಳಿಯೆ ನುಳಿದರ। ಭಿನ್ನಸೋದರಿಯರನು ಸಂಪ್ರತಿ। ಪನ್ನಗುಣರವರೊಡನೆ ಸುಖದಲಿ ರಾಜ್ಯಮಾಡೆಂದ ॥೪೩॥ ಸೇರುವುದು ಭೀಮನಲಿ ಸಾಹಂ । ಕಾರವಾತನ ಕೂಡೆ ನಡೆವುದು । ಕಾರಣಿಕ ನೀನಾದೊಡೆಯು ಸಹದೇವನಕುಲರನು॥ ಆರಯಿದು ಸಲಹುವುದು ದ್ರುಪದಕು। ಮಾರಿಯನು ಬೇಸರಿಸದೀಪರಿ । ವಾರವನು ಮನ್ನಿಸುವುದರ್ಜನ ದೇವ ಕೇಳೆಂದ ॥೪೪॥ ಎನುತ ನಯನೋದಕದ ಪರಿಯಲಿ । ನನೆದವಲ್ಲಿಯ ಬಾಹುಮೂಲದ । ಕನಕದೊರೆಯುಕಠಾರಿಯುವನಿಪನೆದ್ದು ಸಂವರಿಸಿ ॥ ಮನದ ದುಗುಡದ ದಡಿಯಮೋರೆಯ । ತನಿಹೊಗರ ಚಾವಡಿಯ ತವಕದ । ಬನದ ಪಯಣವ ಧರ್ಮಸುತ ಹೊರವಂಟನರಮನೆಯ ॥೪೫॥ ರಾಯನಪರೋಕ್ಷದಲಿ ರಾಜ್ಯ । ಶ್ರೀಯ ಬೇಟಕೆ ಶಿವಶಿವಾದರೆ । ತಾಯ ಸುಡಿತೊದಲಾಯ್ತುಲಾ ತಮ್ಮಂತರಂಗದಲಿ ॥ ಆಯಿತಿದು ಲೇಸೆನುತ ತಮ್ಮನಿ । ಜಾಯುಧಂಗಳ ಕೊಂಡು ವರಮಾ । ದ್ರೇಯರರಸನ ಕೂಡೆ ಹೊರವಂಟರು ನಿಜಾಲಯವ ॥೪೬॥ ತರಳೆ ನೊಂದಳು ಭಾನು ದ್ವೈವಳ । ಪರುಷವಣೆ ದುಶ್ಯಾಸನನ । ಕ್ಕುರಲಿ ವೇಣೀಬಂಧವಳುಟಿತಶಿವಮಹಾದೇವ ॥

ತರಣಿಬಿಜಿಯುಂಗೈಯೆ ಯಂಬುಜ । ಸಿರಿಗೆ ಸುಂಮಾನವೆ ಯೆನುತ ಪಂ । ಕರುಹಮುಖಿ ಸಖಿಜನ ಸಹಿತ ಹೊರವಂಟಳರಮನೆಯು ॥೪೭॥ ಸದನವನು ತನತನಗೆ ಹೊರವಂ । ಟುದು ನೃಪಾಲಸ್ತೋಮದುಂಮಾ । ನದಲಿ ದೃಷ್ಟದ್ಯುಮ್ನಸಾತ್ಯಕಿಚೇಕಿತಾನಕರು ॥ ಕೆದರಿತಾಪರಿವಾರವಾರಿಧಿ । ಕದಡಿ ಹೊರವಂಟುದು ಕಿರೀಟಿಯು । ಹೃದಯ ಹೊಗೆದುದು ಹೊತ್ತಿದನುಪಮಶೋಕವಹ್ನಿಯಲಿ॥೪೮॥ ಮೂಗನಾದನು ಪಾರ್ಥ ನೃಪಚಿಂ । ತಾಗಮದಲಳ್ಳಿರಿದಶೋಕದ । ಸಾಗರವನೀಜಾಡಿ ದೊರೆಗಳ ಹೊದರ ಹೊಯ್ಲಿನಲಿ ॥ ಆಗರುವನಡಿಗದ್ದು ಮೂಡಿದ । ನಾಗಲಾ ತಡಿವಿಡಿದು ಬಳಲಿದು । ತಾಗಿದನು ನೆರೆ ತಳೆಯ ಬಾರುತ ಪಾರ್ಥ ಹೊರವಂಟ ॥ ೪೯ ॥ ಹರಿದು ಬೀದಿಯೊಳವನಿಪಾಲನ । ಚರಣದಗ್ರದೊಳೊಡಲ ಹಾಯಿಕಿ । ಹೊರಳಿದನು ಹೊನಲಿಡುವಲೋಚನವಾರಿಪೂರದಲಿ ॥ ಧರಣಿಪಾಲದುರಾತ್ಮಕನನು । ದ್ಧರಿಸಬೇಹುದು ಜೀಯ ಕರುಣಾ । ಕರನಲಾ ನೀನೆನುತ ಹಿಡಿದನು ಭೂಪನಂಘ್ರಿಗಳ ॥ ೫೦ ॥ ಮಾಡಿದೆನ್ನಪರಾಧಶತವನು । ನೋಡಲಾಗದು ಚಿತ್ತದಲಿ ಖಯಖೋಡಿಯಿಲ್ಲದೆ ಮನವಕೊಡದಿರಿ ಖತಿಯ ಘಲ್ಲಣೆಗೆ ॥ ನೋಡುವುದು ಕಾರುಣ್ಯದೃಷ್ಟಿಯೊ । ಳೀಡಿರಿವಘನಶೋಕವಹ್ನಿಗೆ।ಖೇಡನಾದೆನು ಜೀಯ ಯೆಂದೊರಲಿದನು ಕಲಿಪಾರ್ಥ ॥ ೫೧ ॥ ಏಳು ತಂದೆ ಕಿರೀಟಿಯೆನ್ನಾ । ಣೇಳು ಸಾಕೀಹವಣಿನಲಿ ಮು । ನ್ನಾಳಿಕೆಯ ಕಾಂತಾರರಾಜ್ಯದ ಸಿರಿಯೆ ಸಾಕೆಮಗೆ ॥ ಬಾಲಕರು ನಿಮ್ಮೇಲಣಾದು ದು । ಷ್ಕಾಲವೀಸಾಮ್ರಾಜ್ಯಭೋಗ । ವ್ಯಾಳವಿಷಕಂಜುವೆನು ಪಾಂಡುವಿನಾಣೆಸಾರೆಂದ ॥ ೫೨ ॥ ಹಿಂಗದಿನ್ನೂದ್ವಾಪರದ ಸ । ರ್ವಾಂಗವೃತ್ತಿಯು ಯುಗದಸೀಮಾ । ಸಂಗದಲಿ ಸಿಗುರೆದ್ದ ಕಲಿಕೆಯ ಸೊಗಡಸೋಹಿನಲಿ ॥ ಸಂಗಡಿಸಿತಾಧರ್ಮಸಂಗತಿ । ಹಿಂಗುತಿದೆ ಯಿದನರಿತು ರಾಜ್ಯದ । ಸಂಘದಲಿ ಕಡುವ್ಯರ್ಥನಹೆನೆಲೆಪಾರ್ಥ ಕೇಳೆಂದ ॥ ೫೩ ॥ ಸಾಕು ಪಾರ್ಥನ ಬಿನ್ನಹವ ಕೆಡೆ । ನೂಕದಿರು ನೆಳಲಿಂಗೆ ಬೇರೆವಿ । ವೇಕ ಚೇಷ್ಟೆಗಳೇ ಸಹೋದರರೀಚತುಷ್ಟಯಕೆ ॥ ಈಕಮಲಮುಖಿಯರ್ಗೆ ನಿನ್ನಯ । ಲೋಕವಲ್ಲದೆ ಬೇರೆಕಾರ್ಯ । ವ್ಯಾಕುಲತೆ ಬೇಡೆಂದು ಮುರರಿಪು ತಿರುಹಿದನು ನೃಪನ ॥ ॥ ೫೪ ॥

ಅಂತು ಸಂಧಿ ೧೭ಕ್ಕೆ ಪದ ೬೭೩ಕ್ಕಂ ಮಂಗಳಮಸ್ತು.

## ಹದಿನೆಂಟನೆಯ ಸಂಧಿ.

॥ಸೂಚನೆ॥ ಗಂಡುಗಲಿಯುಮುತನುಜನಲಿ ಮಾ । ತಾಂಡತನಯನ ವಧೆಗೆ ನೇಮಿಪ । ಕೊಂಡು ಕದನೋದ್ದಾಮದಲಿ ಹೊರವಂಟನಾಪಾರ್ಥ ॥

॥ಪದ॥ ಕೇಳು ಧೃತರಾಷ್ಟ್ರಾವನಿಪ ಭೂ । ಪಾಲನನು ಸಾಮದಲಿ ಮುರರಿಪು । ಬೋಳವಿಸಿ ಭಾವಜ್ಞ ನಂದಿಸಿದನು ಮನೋವ್ಯಥೆಯ ॥ ಮೇಲುಸುರು ಬಿಕ್ಕಳಿನ ಬಿಗುಹಿನ । ತಾಳಿಗೆಯ ನೀರುಗಳ ಮುಕ್ಕಳಿ । ನಾಲಿಗಳ ನರನಾಥ ತೆಗೆದಪ್ಪಿದನು ಫಲುಗುಣನ ॥ ೧ ॥ ಒರಲುತರಸನ ಮುರುಚಿ ಕೊಂಡಡಿ । ಗೆರಗಿದನು ನರಕೈಯೊಡನೆ ನೃಪ । ಮರುಗೆ ಪಾರ್ಥನ ತೆಗೆದು ಬಿಗಿಯಪ್ಪಿದನು ಗೋಳಿ

ಡುತ ॥ ಮರುಗಿದಳು ದ್ರೌಪದಿ ದೃಗಂಬುಧಿ ।ಯೊರೆತೆಯಲಿ ಸಹದೇವನಕುಲರೆ । ಸರಿಯೆನುಪಮಿ
ಸಲವರ ಬಹಳಾಕ್ರಂದನಧ್ವನಿಯು॥೨॥ ಮುರಹರನ ಮಂತ್ರದಲಿ ಶೋಕ। ಜ್ವರಕೆ ಬಿಡುಗಡೆಯಾಯ್ತು
ಬಳಿಕಿನೊ । ಳರಸ ಕಂಬನಿದೊಡೆದು ವಸನಾಗ್ರದ ನಿಜಾನನವ ॥ ಒರಸಿಪಾರ್ಥನ ಸಂತವಿಸಿ ಮಂ । ದಿ
ರಕೆ ಬಿಜಯಂಗೈದು ಮುದದಲಿ । ಕರಸಿ ಕಾಣಿಸಿಕೊಂಡು ಪರಿವಾರಕೆ ನಿಯಾಮಿಸಿದ ॥ ೩ ॥ ಇಟ್ಟ
ಣಿಸುವರ ಸೈನ್ಯಶರಧಿಗೆ । ಕಟ್ಟೆಯಾದನು ಭೀಮನೊಬ್ಬನ । ಬಿಟ್ಟು ನೋಡುವುದುಚಿತವೇ ಪರಿವಾರ
ಪಂತದಲಿ ॥ ಕೊಟ್ಟನೇಮವು ಯಮಳರಿಗೆ ಜಗ । ಜಟ್ಟಿಸಾತ್ಯಕಿಕಮಲಮುಖಿಯೊಡ । ಹುಟ್ಟಿದರು
ಮೊದಲಾಗಿ ನೃಪಜನವೇಳಿ ನೀವೆಂದ ॥ ೪ ॥ ದೇವಪರಿವಾರಕ್ಕೆ ನೇಮವೆ । ನೀವಸಮಯದಲಂದು ನಿ
ಮ್ಮೆಕೃ । ಪಾವಲೋಕನವಾಯ್ತುವೆನ್ನ ಪರಾಕ್ರಮಾನಳನ ॥ ಜೀವಸಖನಲ್ಲಾ ಸುಯೋಧನ । ನಾವ
ಪಾಡುವಿರೋಧಿಕುಲವನ । ದಾವಕಗೆ ಕೊಡು ಯಮಗೆ ನೇಮವನೆಂದನಾಪಾರ್ಥ ॥ ೫ ॥ ಬರೆಸು ಭಾ
ಷೆಯನಿಂದು ಕರ್ಣನ। ಸಿರವುಳಿದುದಾದರೆಯೆನಗೆ ಪ್ರೈ । ಸರಿಸಿದರೆ ಮೈಬೆಸುಗೆ ಬಿಟ್ಟರೆ ಜಕ್ಕವಕ್ಕಿಗಳ॥
ಇರುಳುಬೀಜವನಿಂದು ಸಭದಲಿ।ಹರಿಹಿದರೆ ಕಲಿಭೀಮನಯ್ಯನ। ಹರಹುನಿಂದರೆ ಬಳಿಕ ನಿಮ್ಮಯತಮ್ಮ
ನಲ್ಲೆಂದ॥೬॥ ಖಳನ ಹಿಂಸಾಪರನ ಡಂಭನ । ಚಲಪತಿಯ ನಾಸ್ತಿಕನ ನಿಂದಾ । ಕುಳನ ಪರಧನನಾ
ಶಕನ ದತ್ತಾಪಹಾರಕನ ॥ ಮಲಿನಕಾಯನ ಘಾತಕನ ಪರಿ । ಗಳಿತಧರ್ಮನ ಗತಿಗಳಲಿ ತಾ । ನಿಳಿವೆ
ನಾದಿನಸುತನ ಕೊಲ್ಲದೊಡೆಂದನಾಪಾರ್ಥ ॥ ೭ ॥ ನೀನಿನಿತ ನೆರೆ ನುಡಿವರೇ ಯೆ। ನ್ನಾನೆ ಬಾರೈ ತಂ
ದೆ ಬಾರೆನು । ತಾನರೇಶ್ವರ ತೆಗೆದು ಬಿಗಿಯಪ್ಪಿದನು ಫಲುಗುಣನ ॥ ದಾನವಾಮರರೊಳಗೆ ನಿನಗೆ ಸ।
ಮಾನಭಟರಿಲ್ಲಿದುವೆ ನೀನ್ನೇ । ಹಾನುಗುಣವೇ ಲೋಕವರಿಯದೆ ಪಾರ್ಥ ಹೇಳೆಂದ ॥ ೮ ॥ ತಾಯಿ
ಸುತ ಘನಸಾರದುರುತವ । ಲಾಯಿಗಳ ನೂಕಿದನು ಮುದದಲಿ । ಬಾಯದಂಬುಲವಿತ್ತು ಪಾರ್ಥಸ
ಮೆತ್ತೆ ತಕ್ಕೈಸಿ ॥ ರಾಯಕೇಳ್ಳೆ ಬಳಿಕಖಿಳದಳ । ನಾಯಕರ ಕರಕರೆದು ಕದನಪ । ಸಾಯತರಿಗಿತ್ತು
ಪಚರಿಸಿ ಕರ್ಪುರದವೀಳೆಯವ ॥ ೯ ॥ ನೇಮವಾಯಿತು ಮತ್ತೆ ಸುಭಟ । ಸ್ತೋಮವರ್ಜುನನೊಡನೆ
ಕದನೋ। ದ್ದಾಮರುಬ್ಬರಿಸಿದರು ಪತಿಕರಣೆಗೆ ಮಹೀಪತಿಯ ॥ ಸೋಮಕರು ನಕುಲಾದಿಗಳು ಸುತ ।
ಸೋಮಕಾದಿಕುಮಾರರಖಿಳಸ। ನಾಮರೆದ್ದುದು ತೊಡರ ಝಣಝಣರವದ ರಭಸದಲಿ ॥ ೧೦ ॥ ನು
ಡಿವವಾದ್ಯದ ಜರವಕಹಳೆಯ । ಜಡಿವಭೇರೀರಭಸರಭಸದೊ । ಳೊಡೆದುದಾದಿಗುಭಿತ್ತಿಯೆನೆ ಚಲಿಸು
ವಚತುರ್ಬಲದ ॥ ತುದ್ದುಕುಚಮರಿಯ ಝಾಡಿಗೆದರುವ । ಗಢಣಿಸುವಝಲ್ಲರಿಯ ದಳ ಬರೆ । ಸಿಡಿ
ಲಮೇಳವದಂತೆ ಮೆರೆದುದು ರಾಯನಿದಿರಿನಲಿ ॥ ೧೧ ॥ ವೀರಸೇಸೆಯನಿಕ್ಕಿ ರಾಯನ। ನಾರಿ ಹರಸಿದ
ಳಖಿಳಭೂಸುರ । ಚಾರುಚಾತುರ್ವೇದಮಂಗಳಸೂಕ್ತಘೋಷದಲಿ ॥ ತೇರನೇರಿದನಸುರರಿಪುಸಹಿ। ತಾ
ರುಭಟೆಯಲಿ ನೂಕಿದವು ರಥು । ಸಾರಥಿಯ ತಳಿಗೆಗಳು ವರಕಾಂತಾಕದಂಬದಲಿ ॥ ೧೨ ॥ ಕೊಡೆ ಗು
ಡಿಗಟ್ಟಿದವು ರಥದಲಿ । ಹೂಡಿದಶ್ವವಾತ್ರವಾನೆಗ । ಳೀಡಿರಿಸು ಬರಿಕೈಯನೆತ್ತಿದಳೊಲೆದವಡಿಗಡಿಗೆ ॥
ಜೋಡಿಸಿತು ಜಯಜಯಜಯಧ್ವನಿ । ಕೂಡೆ ಜಗದಗಲದಲಿ ಬಿರುದಪ। ವಾದಿಗಳ ಮೊಗ ನೆಗಹಿ ಮೊ
ಳಗಿತು ವಂದಿಸಂದೋಹ ॥ ೧೩ ॥ ನಿಳಯವನು ಹೊರವಂಟು ಬೀದಿಗ । ಳೊಳಗೆ ಬರೆಬರೆ ಮುಂ
ದೆ ಮೋಹಿದ । ತಳಿಗೆತಂಬುಲ ವೀರಸೇಸೆಯುಮಂಗಳಾರತಿಯು ॥ ಫಲಸಮೂಹದ ಕಾಣಿಕೆಯ ಕೋ ।

ಮೆಲೆಯುರುಪ್ಪಾರತಿಯು ಮನೆಮನೆ । ಗಳಲಿಮನ್ನಿಸಿಕೊಳುತ ಪಾಳಯದಿಂದ ಹೊರವಂಟ ॥ ೧೪ ॥
ಮೇಲಿವೊಳಗುವದೇವದುಂದುಭಿ । ಜಾಲದೊಸಗೆಯು ಪಕ್ಷಿಮೃಗದನು । ಕೂಲಶಕುನದ ಸೌಮನಸ್ಯದ
ಸಾಧುವಾದದಲಿ ॥ ಲೋಲನೆಯು ಮೃವಳಿಯು ಸುಳಿವವಿ । ಶಾಲಘನದಾನಿಗಳಖಿಳಭೂ । ತಾಳಿ ಪರಿ
ತೋಷದಲಿ ಪತಿಕರಿಸಿತು ಧನಂಜಯನ ॥ ೧೫ ॥ ನಡೆದುಬಂದನು ರಾಯದಳ ಮುಂ । ಗುಡಿಯುವಾ
ದ್ಯಧ್ವನಿಯು ಧಟ್ಟನೆ । ತುಡುಕಿತರಿಚತುರಂಗಚಪಳರ ಕರ್ಣಕೋಟರವ ॥ ನಡುಗಿದವು ಕೈದುಗಳು
ಜೋದರ । ತೊಡಹಿದವು ಗಜರಾಜಿವಾಜಿಯು । ಗಡಣವೀಡಾಡಿದವು ರಾವ್ತರನಿವರ ಧಟ್ಟೆನಲಿ ॥೧೬॥
ಅರಸ ಕೇಳೈ ಸಮರಭೂಮಿಗೆ । ಹರಿದರರಸಾಳುಗಳು ರಾಯನ ।ಸಿರಿಮುಡಿಗೆ ಸುಕ್ಷೇಮ ಮುಚ್ಚಿ
ದವೇರುಮದ್ದಿನಲಿ ॥ ಮರಳಿನೇಮವ ಕೊಂಡುಫಲುಗುಣ । ಬರುತಲೈದನೆ ಜೀಯ ನಿಮ್ಮಯ । ಚರ
ಣಸರಸಿಜದಾಣೆಯೆಂದರು ಭೀಮಸೇನಂಗೆ ॥ ೧೭॥ ಜೋಡು ಬಿರಿದುದು ಹರುಷಲತೆ ಕಡೆ। ಗೋಡಿ
ಹರಿದುದು ರೋಮಪುಳಕದ । ಬೀಡು ಬಿಟ್ಟುದು ಮೆಯ್ಯನುಬ್ಬಿದನೊಲೆದನಡಿಗಡಿಗೆ ॥ ನೀಡುವೊಡೆತ
ಳುವೆನುತ ಕಳೆದೀ । ಡಾಡಿದನು ದೂತರಿಗೆ ರತುನದ । ಜೋಡಣೆಯ ಭುಜಕಂಠಕರ್ಣಾಭರಣಭೂಷ
ಣವ ॥೧೮॥ ರಾಯಹದುಳಿಸಿದನೆ ಮಹಾದೇ । ವಾಯಿದೆತ್ತಣಪುಣ್ಯವೋ ರಣ । ದಾಯಸವ ಸ [illegible]
ದತನಗಿದು ಸಫಲವಾಯಿತಲೇ॥ ದಾಯ ಬಂದುದು ನಮಗೆ ಹಾಲೇ । ಸಾಯಿತಯ್ಯ ವಿಶೋ
ಕುಳಿ । ದಾಯುಧವ ಪರಿಗಣಿತವನು ಹೇಳೆಂದನಾಭೀಮ ॥ ೧೯ ॥ ಉಳಿದಕೈದುಗಳೇಸು
ಲುಳಿದಸರಳಿನ ಹೊದೆಯಲೆಕ್ಕವ । ತಿಳಿದು ಹೇಳೈ ತಂದೆ ಸಾರಥಿ ನೋಡಲಹುದಿಂದು
ಕೌರವನ ರಕುತದ । ಮಳೆಯೊಳಲ್ಲದೆ ತನ್ನ ಕೋಪಾ । ನಳನರ್ಚುಳವಡಗದು ಯು
ಣೆಂದ ॥ ೨೦ ॥ ಅರಸಚಿತ್ತೈಸುಳಿದ ಬಿಲುಹ । ನ್ನೆರಡುಸಾವಿರ ಬಳಿಸರಳುಹ
ಲೆ ಐನೂರರ್ಧಚಂದ್ರಶರ ॥ ಪರಿಗಣಿತಲುಳಿಯಂಬುಕಣುಗಿಲೆ । ಸರಳುಗಳ
ರಡುಸಾವಿರವುಳಿದುದೀ ನಾರಾಚಜಾಲದಲಿ ॥ ೨೧ ॥ ಆಲಿಸೈಮುಗುಳಂ
ಭತ್ತುಸಾವಿರ । ಕೋಲುಮಿಂಚೆಯು ಕವಲುಗಣೆ ಹದಿಮೂರುಸಾವಿರ
ಮ್ಮೊನೆ। ಬೋಳೆಯಂಬಿರಲೈದುಸಾವಿರ।ನಾಳಿಯಂಬುಗಳಾರು ಭ
ಶುಮುಸಲಮುಸುಂಡಿಶಲ್ಲೆಹ । ಪರಿಘತೋಮರಚಕ್ರಮಸಿಮು
ವಾಳಚೆಯು ॥ ಸುರಗಿಮೊದಲಾದಖಿಳಶಸ್ತ್ರ । ತ್ಕರವನೊ
ರಾಯರೊಡಲಲಿ ಬೀಯ ಮಾಡೆಂದ ॥ ೨೩ ॥ ಧ್ರೂತು
ತನ್ನಕರಕಂ । ಡೂತಿಯನು ಕಳಚುವೆನಲ
ಸೋತು ಹಿಂಗಿದನೆಂಬಹಂಬಲು । ಬೀತುದಿನ
ದಲಿ ಫಲುಗುಣನ ಮೋಹರ। ಕಳನ ಹೊಕ್ಕು
ವಿಧವಾದ್ಯರಭಸದಲಿ ॥ ಅಳುಕಿದರು ಸನ
ಟಕೆ ನಿಲಲೆಂತೆನುತ ನೆಗ್ಗಿದುದು ಕುರು
ಘುವ್ವಾಳಿಸಿ ಧನಂಜಯ । ನಿಲಿಸಿದನು

ಳಾ । ಹಳವನಾತರುವಾಯುಲವ್ಯಾ । ಕುಳಸಮಾಧಾನವನು ಬಿನ್ನಹಮಾಡಿದನು ಪಾರ್ಥ ॥ ೨೬ ॥ ಜಿ
ನಪ ಕೇಳೈ ಬಳಿಕಭೀಮಾ । ರ್ಜುನರ ಮೋಹರಕೈದುಸಾವಿರ । ಕನಕಮಯರಥಸಹಿತ ಬಿಟ್ಟನು ಸೂಠಿ
ಯಲಿ ಶಕುನಿ ॥ ಅನಿಲಸುತನರ್ಜುನನ ನೀಸಾ । ರೆನುತ ಕಣಕಿದನಹಿತನಂಬಿನ । ಮೊನೆಯೊಳಳ್ಳಿರಿದೌ
ಕಿ ತುಡುಕುವ ತೇರ ಟೆಕ್ಕೆಗಳ ॥ ೨೭ ॥ ಬಂದು ಶರಸಂಧಾನದಲಿ ಕವಿ । ತಂದವೈ ಸಾವಿರಶರಾವಳಿ
ಬಂದುಧನುವಿನಲೀತಮೊಗೆದನು ಸರಳಸಾಗರವ ॥ ಸಂದಣಿಸಿತಾರಥಿಕರಾಹಯ । ವೃಂದವಾಸಾರಥಿಗ
ಳಾರಥ । ಕೊಂದುಹತ್ತರಲೆಕ್ಕದಲಿ ಮಿಕ್ಕುದು ಶರವ್ರಾತ ॥ ೨೮ ॥ ಬಗ್ಗನೈಸಾವಿರರಥಾವಳಿ । ನೆ
ಗ್ಗಿದವು ಕಣೆದಾಕಿ ರಥಿಕರು । ಮುಗ್ಗಿದರು ರಥವಾಜಿ ಬಿದ್ದವು ಬಾಣಗಾಯದಲಿ ॥ ಬಗ್ಗೊಡೆದು ಕ
ಲಿಶಕುನಿಗಾಯದ । ಲಗ್ಗಿಯಲಿ ಲಘುವಾಗಿ ಹರುಷದ । ತಗ್ಗಿಲೊಣಗಿಲ ಮೋರೆಯಲಿ ತಿರುಗಿದನು
ಮೋಹರಕೆ ॥ ೨೯ ॥ ಶಕುನಿ ಮುರಿದನು ಬೇಹದಳನಾ । ಯಕರು ತಿರುಗಿತು ಭೀಮಸೇನನ । ವಿಕಟ
ಸಿಂಹಧ್ವನಿಗೆ ಬಿರಿದುದು ಭಟರ ಬಲುಹೃದಯು ॥ ಅಕಟಕಟ ಕುರುಸೇನೆ ನಿನ್ನಾ । ಯಕವಲಾ ಹಾಯೆ
ನುತ ಮಂತ್ರಿ । ಪ್ರಕರ ಮರುಗಿತು ತುರುಗಿತಲ್ಲಿಯದಲ್ಲಿ ಕಳವಳಿಸಿ ॥ ... ॥ ೩೦ ॥

ಅಂತು ಸಂಧಿ ೧೮ಕ್ಕೆ ಪದ ೭೦೩ಕ್ಕಂ ಮಂಗಳಮಸ್ತು.



## ಹತ್ತೊಂಭತ್ತನೆಯ ಸಂಧಿ.

ಯಚೌಪಟಮಲ್ಲ ಮಲೆವರಿ । ರಾಯಧೂಳೀಪಟಲ ಗರ್ವಿತ । ರಾಯಭೀಕರ ಭೀಮ
ಂದನು ಕೌರವಾನುಜರ ॥

ಷ್ಟ್ರಾವನಿಪ ನಿ । ನ್ನಾಳು ತಲೆಕೆಳಕಾಯ್ತು ಭೀಮನ । ಧಾಳಿಗೇನದು
ಲಾಯ್ತು ॥ ಮೇಲೆಮೇಲುಬ್ಬೇಳ್ವರಿಪುಶರ । ಜಾಲಧಾರಾಧೂತವನ್ನಿ
ಕುರುಸೇನೆ॥೧॥ ಉಲುಕಲಮ್ಮುವರಿಲ್ಲಲಾ ಭಟ । ಳುಕಿದೊಡೆಭಾ
ತರೇ ಸೋತರೆ ಪಲಾಯನವ ॥ ವುಮಾತೇನೆಮ್ಮ ಮಾವನ
ನುತ ನೆರಹಿದನು ನಿನ್ನ ಮಾರಕನು ಬಲವ ॥೨॥ ಅವಿಗಡ
ದ್ವಿ । ತ್ಥಾಯ ಮೇಳೈಸಿ ನಿಲಿಸಿದನ್ನೆದುಸಾವಿರವ ॥
ರನಿಬರು । ಸಾವನೇನಿಶ್ಚೈಸಿ ಬಿಗಿದರು ವೀರ
। ನೊಡನೆ ಸಾದುಜವಾಜಿಲೇಪವ । ಮುಡಿದ
ರು ವೀಳೆಯದ ರತುನದ । ತೊಡಿಗೆಗಳಲಾ
ಹವಕೆ ॥ ೪ ॥ ದಳದೊಳಗೆ ಹೆಸರುಳ್ಳವ
ವರೆ ಮಕ್ಕಳ ತಂಡದಲಿ ಕೆಲರು ॥ ಅಳ
। ಬಳಗವೋನಿನ್ನವರ ಬಣ್ಣಿಸಲರಿಯೆ

ನಾನೆಂದ ॥ ೫ ॥ ಸಾಲಸಿಂಧವ ಕುಣಿವಗೋವಳಿ । ಗೋಲತೂಕದ ತಳಿತಚಮರೀ । ಜಾಲ ಮೋಹಿದಮೇಘಘಟಿಯೆನೆ ಜಡಿವರ್ಘುಲ್ಲರಿಯ ॥ ಜಾಳಿಗೆಯ ಹೊಗರೊಗುವವಹ್ನಿ । ಜ್ವಾಲೆಯೆನೆ ಝಳಪಿಸುವಕೈದುಗ । ಳೋಳಿ ಹೊಳೆದುದು ಸೆಳೆದುದೀತನ ಗರ್ವವಿಭ್ರಮವ ॥೬॥ ಹರೆದಬಲ ಹುರಿಗಟ್ಟಿಖಾತಿಯು । ದೊರೆಯಕೂಡೊದಗಿದುದು ಬೀರುವ । ಬಿರುದುಗಹಳೆಯದನಿಯು ಘೋಟದ ಭೂರಿಬೇರಿಗಳ ॥ ಮೊರೆವಬಹುವಿಧವಾದ್ಯ ರಭಸದ । ಧರಧುರದ ಕೆಂದೂಳಿಯುಲ್ಲಿ ಮೋ । ಹರಿಸಿ ನಿಂದುದು ಭೀಮಸೇನನ ರಥದ ಸಂಮುಖಕೆ ॥ ೭ ॥ ಸಾರಹೇಳೌ ರಾಯಕುವರ ಮುರಾರಿದುಶ್ಶಾಸನಕಣಾ ಘಡ । ವೈರಿಭೀಮದ್ವಿರದಕುಂಭಸ್ಥಳಕೆ ಪಂಚಮುಖ ॥ ವೀರಮದನನ ತ್ರಿಪುರಹರಜ । ಜ್ಝಾರರಿಪುಜಗಜಟ್ಟಿಗಿದಿರೆ ವಿ । ಕಾರವೇ ಘಡ ಭೀಮಯೆನುತ್ಕೈದಿತು ಭಟಸ್ತೋಮ ॥೮॥ ದಾಯುವಿದು ಮರುಘೂತು ಬಂದವಿ । ಡಾಯಿಯಹುದೋ ಕಲಿಯುಧಿಷ್ಠಿರ । ರಾಯನಾಣೆ ಸುಯೋಧನಾನುಜರೋಜೆ ಲೇಸೆನುತ ॥ ವಾಯುಸುತನಾಕರ್ಣ್ಣಕರುಷಿತ । ಸಾಯಕನ ರಿಪುಸುಭಟಕುಲಲಯ । ದಾಯಕನು ದಳದುಳವ ಶಯ್ದನು ವೈರಿಮೋಹರಕೆ ॥೯॥ ನುಸಿಗಳೆನ್ನವು ನೀವು ಜಗಸಾ । ಹಸಿಗಳೈ ಕಾಲಾಳುಜೋದ । ದೆಸುಗೆಗೆ ಹೆದರುವೆವು ಹೇರಾಳದಂಬುಗಳ ॥ ಮುಸಕವೃಕ್ಷವರಹಿರಿ ಸಮರಥ । ವಿಷಮರಾವಡುತಿರದಾ । ಲಿಸಲಿ ನಿಮ್ಮಯ ದೊರೆಗಳೆನುತುರವಣಿಸಿದನು ಭೀಮ ॥೧೦॥ ಸಾರಿರೈ ಕಾರು । ಸಾರಿರೈ ರಾಹುತರು ಜೋದರು । ಭಾರಣೆಯಲೀಮೊರೆಯುನರಸುವಬೈಲಬೋ ಭಟೆಗಾರಳುಕುವರು ಪರಿ । ವಾರ ಕೈಮಾಡದಿರೆನುತ ಕುರು । ವೀರಸನುಜರು ನನಂದನನ ॥೧೧॥ ಸಡಿಘಡೇನಿದು ನಿಮ್ಮತಲೆಗಳಿ । ಗೊಡೆಯರಲ್ಲದೆ ಕೌರವಾನು ವಾರದಪಮಾನಾಪಮಾನದಲಿ ॥ ಬಿಡುವವರು ನಾವಲ್ಲ ಭೀಮನ । ಕಡಿಯೊ ಕುಡಿವೆವೈ । ನಾವೆನುತ ಬಲ ಮುಕ್ಕುರಿಕಿತನಿಲಜನ ॥೧೨॥ಏನಹೇಳುವೆನ ರಾಚನಿಚಯದ ಸೋನೆ ಸುರಿದವು ಭೀಮಸೇನನ ರಥದ ಶಿಖರದಲಿ ॥ ವ । ನೇನಹೇಳುವೆನದಟರನು ಪವ । ಮಾನತನಯನ ಮುತ್ತಿಕೊಂ ಬಳಸಿನಲಿ ಚಾಚಿದವು ರಥಸಂ । ಕುಳಪದಾತಿಯು ಕೈದು ವಿ ಸೂತವಾಜಿಗಳು ॥ ಸಿಲುಕಿದನು ಹಗೆ ಸ್ವಾಮಿದ್ರೋಹಿಗೆ । ಯುಗಾಳವ ಕೊಳ್ಳದೆನುತೌಕಿದರು ಬಳಸಿನ ಮಸಗಿತು ಕೋಲ ಹೊದರಿನ । ಬಾಳುಗಿ ಬೈಲ್ಪಬೊಬ್ಬೆಯು । ತೂಳುವರೆ ಕಹಳೆಗ ಳಸಿನಲಿ ॥ ೧೫ ॥ ಅಳಲಿಗರಲೇ ಕೌರ ಮನೆನುತುಬ್ಬಿದರು ನಿನ್ನವರು ॥ ಜಲ ಕಳೆ । ವಳಿಸಲವರೇನರಿಯರೇ ತಮ್ಮ ಯನೆನುತುರವಣಿಪನಕುಲಾ । ದಿಗಳ ತರಣಿಬಿಂಬವ । ತಗುಳ್ದತಮವನುನಿ

ದ ॥ ೧೭ ॥ ಮಾತು ಹಿಂಚಿತ್ತದು ವಿಲಂಬಿನ । ಲೀತವಮುಗಿದನು ಮುತ್ತಿತಿಭಸಂ । ಘಾತವನು ಪಲ್ಲ
ಟಿಸಿ ಕಡಿಕೊಚ್ಚಿದನು ತೇರುಗಳ॥ ಆತು ಕಾದಿದರಾವುತರ ಸುರ । ಜಾತಿಯಲಿಕಂಡೆನು ಪದಾತಿ। ವ್ರಾತ
ಪಾಣಿಗ್ರಹಣವನು ಗೀರ್ವಾಣವಧುಗಳಲಿ ॥ ೧೮ ॥ ಬಲನೆಡನ ಖಡ್ಗದಲಿ ಗದೆಯಲಿ । ಬಲನಿಧಿಯ
ನೀಜಾಡಿದನು ಹೆ । ಬ್ಬೆಳೆಯ ಹೆಬ್ಬೆಳಸಾಯ್ತುಕೊಯ್ಲಿನ ಮೆದೆಗಳೊಟ್ಟಿನಲಿ ॥ ತುಳುಕುಗಳನಾಹ
ಯರಥದ ಹೊಸ। ಮೆಳೆಯಕಡಿತದ ಕಲಿಘುಟಾಳಿಯ । ಬಲುವೊರಡಿಗಳ ತೂರಿ ತಳಪಟವಮಾಡಿದನು
ಭೀಮ ॥ ೧೯ ॥ ಅಸಿಯಲಿಟ್ಟದರೆಂತೆ ಪಡೆ ನಿ । ಪ್ಪಸರದಲಿ ನುಗ್ಗಾಯ್ತು ನೀಗಿದ । ರುಸುರುಗಳ
ದುಶ್ಶಾಸನನ ಮನ್ನಣೆಯ ಪರಿವಾರ ॥ ಬಸಿವನೆತ್ತರ ಮೆಯ್ಯಯೆಲುವಿನ । ಕುಸುರಿಗಳ ತಲೆವಿಂದು
ಳ ಮೆತ್ತಿಗೆ । ವಸೆಯತೊರಳೆಯ ತೊಂಗಲಲಿ ರಂಜಿಸಿತು ರಣಭೂಮಿ ॥ ೨೦ ॥ ಹೋರಿ ಹಂಗಿಗರಾ
ದೆವೇ ಪರಿ । ವಾರ ನೆರೆದುದೆ ನಾಕದಲಿ ತೆಗೆ । ವೀರಕಂಕಣವೇಕೆ ನುತದುರಿಯೋಧನಾನುಜರು ॥ ತೇ
...ನೆಯ ಧಿ । ಕ್ಕಾರಪರಿಧಾನವದ ಧೂಳಿಯ । ಲೋರಣದಭಾರಣೆಯಲ್ಯೆದಿದರನಿಲ
... ॥ ಇಂದಲೇ ನೀವ್ಮದೆಯ ಹಬ್ಬಕೆ । ಬಂದಿರಿದು ಲೇಸಾಯ್ತು ನೀವೇ । ನೆಂದಿರ್ಬೈ
...ಮುಂದೆ ಭಾಷೆಗಳ ॥ ತಂದಿರ್ಬೈ ತಳ್ಳಂಕವನು ನಮ । ಗೆಂದು ಕೊಡುವಿರಿ ಕೌರವನ
...ನುತ ಸುಳಿದನು ಸಿಂಹನಾದದಲಿ ॥ ೨೨ ॥ ಗಿಡಗನೆತ್ತಲು ಗಿಳಿಯಮರಿಗಳ । ಗಡ
...ೀಳನೆತ್ತಲು । ತೊಡಕುವರೆ ತಗರೆತ್ತಲಿವದಿರಗೆಲ್ಲ ಸಾಲವನು ॥ ನುಡಿಯಲರಿಯನು
...ಶುಕಿನಂತರವೇನು ಪ್ರಳಯದ । ಸಿಡಿಲ ಬಿಗುಹೋ ಭೀಮನೋ ನಾನರಿಯೆನಿದ
...ಕೆಡಹಿ ಕುಮಾರಕರನೆರೆ। ಯಟ್ಟಿ ಹೊಯ್ದನು ಕೆಲಬಲವನಡ । ಗಟ್ಟಿದರನಪ್ಪಳಿ
...ಸಿದು ॥ ಇಟ್ಟಣಿಸಿ ಹೊಕ್ಕಸುವರನು ಹುಡಿ । ಗುಟ್ಟಿದನು ತಲೆವರಿಗೆಯಲಿ
... ರಕುತಜಲ ನರನಾಥ ಕೇಳೆಂದ ॥ ೨೪ ॥ ಬಂದುಲಗ್ಗೆಯಲ್ಯೆದುಹರಿಬಕೆ।
...ಯುಲಿ । ಹಿಂದೆ ಕೆಣಕಿದರೇಳು ಮಗುಳಿಬ್ಬರನು ಕದನದಲಿ ॥ ಕೊಂದನಿಂ
... ನೀಗಿದರು ತನುವನು । ನಿಂದು ಕರೆದನು ಬಳಿಕ ದುಶ್ಶಾಸನನನಾಭಿ
...ನಿನ್ನ ಕು । ಮಾರರೊಳು ತೊಂಭತ್ತು ... । ಪಾರಖಾಣೀ
ಕೌರಿಗಳೊಳೀವಿಶ್ವನೃಪಸಂ ।
... ॥ ಸಾರಭೂತರಲೇ ಸಮಸ್ತ...
...ಮುದಚ್ಚಾಳಚ್ಚ ಕುದುರೆಗ । ಳುರುಕು
...ಂದ ॥ ೨೬ ॥ ಮು...
ಸಹೋದರವ್ರಜವ ॥ ಹೊರಗೆಕರ್ಣಕ್ಕ
ವೆನೆಡೆಯಲಿಬಿಡೆನೆನುತ ಹಳಚಿದನುಕಲಿಭೀ
ಗುತಿದೆ ತಡವೇಕೆ ನೂಕೆನು । ತರಸ ಕೇಳ್ಳೈ
। ಖುರಪುಟಕೆ ಸ್ಯೆರಿಸುವನಿವನೀ । ಶ್ವರ
ಸಂಘಟಿಸಿ ಹೋಹೋ । ಸಾಕುಸಾಕಾ
ವೆಯಲಾ ॥ ನೀಕಳೆದುಕೊಳು ಧನುವ
ಡುವೆವು ನಿಲ್ಲೆಂದನಾಭೀಮ ॥ ೨೯ ॥

ರೂಡಿಸಿದಭಟನ ನೀನು ಹರಿಬವ । ಬೇಡಿತೊಡಕಿದೆ ನಾನು ಖಾಡಾ । ಖಾಡಿಯಲಿ ಸಿಗುರಿಲ್ಲ ತೆಗೆ
ಹಂಗೇಕೆ ತೆತ್ತಿಗರ ॥ ನೋಡುತಿರಲೀದಳವೆರಡು ಹೋ । ಗಾಡು ನಮ್ಮನು ಮೇಣು ನಿನ್ನನು । ಸೂ
ಡಿದರಿವೆನು ಸತ್ವದಳತೆಯ ಕಾಣಲಹುದೆಂದ ॥೩೦॥ ತೊಲಗಿರೈ ಕಾಲಾಳು ಬಾಳೆಯ । ತಳಿರ ಮುರಿ
ವತಿಸಹಸಿಗಡ ಮರಿ । ಮೊಲನ ಬೇಟೆಯ ವೀರಗಡ ಬಾಣಪ್ರಯೋಗದಲಿ ॥ ಸಲೆ ಮೃಗದಸಾಹಸಿಗಗೆ
ಡ ಕುಸು । ಮಳಿತಕೇತಕಿತೀಕ್ಷ್ಣಗಡ ನೀ । ವಳವಿಗೊಡದಿರಿಯೆನುತ ನಿನ್ನ ಕುಮಾರನನುವಾದ ॥೩೧॥
ಘೂತು ಸುಭಟಸುಯೋಧನನಸಹ । ಜಾತನಲ್ಲಾ ಮತ್ತೆ ಕೆಲಬರಿ । ಗೀತವಕವೀಶೌರ್ಯವೀಬಲವೀ
ಸುದಿಟ್ಟತನ ॥ ಸೋತುದುಂಟೇ ಹೊಕ್ಕುವಾತಿನ । ಹೂತೊಡಬೆ ನೀನಲ್ಲ ಶೌರ್ಯದ । ಧಾತುವೊಳ್ಳಿ-
ಕೊಳ್ಳೆನುತ ತೆಗೆದೆಚ್ಚನಾಭೀಮ ॥೩೨॥ ಫಡಯೆನುತ ಪವನಜನ ಬಾಣವ । ಕಡಿದು ಕೂರ
ತೆಗೆದೆ । ಚ್ಚಡಿಗಡಿಗೆ ಬಿಡದೆಚ್ಚು ಪುನರಪಿಯೆಚ್ಚು ಮಗುಳೆಚ್ಚು ॥ ಎಡೆಯೊಳೆಚ್ಚಂಬುಗ
ಕಡಿದರಂಬಂಬುಗಳ ಹೋರಟೆ । ಕಿಡಿಗೆದರೆ ನಿಬ್ಬರದ ಕದನವ ಕಂಡೆನಿಬ್ಬರಲಿ ॥೩೩॥
ಚ್ಚಾಡಿಬರು ಕಲಿ। ಪವನಸುತದುಶ್ಶಾಸನರು ರಣ। ದವಕಿಗರು ಕೋಪಾಗ್ನಿಭುಗಿಭುಗಿ
ಅವನಿಗಿಳಿ ಬಿಡು ಧನುವ ತೆಗೆ ಖಡು।ಗವನೆನುತ ರಥದಿಂದ ಚಿಗಿದರು।ಬವರಿಗಳ
ಡಿದರು ಗದೆಗಳಲಿ ॥೩೪॥ ಚಾರಣದ ಚಂಮಟದ ಕದಳೀ। ಯೋರಣದಲುಬ್ಬ
ದೊಡ್ಡಿನ ಹೊಯ್ಲು ಹೋರಟೆಗಳ ಸುರೇಖೆಗಳ ॥ ಸಾರತರಶ್ರಮದೊದಗಿ
ಮುರಿಯೆ ಕಾದಿ ಕ । ಠಾರಿಗಳಲೇ ತರುಬಿ ನಿಂದರು ದಂಡೆಮಂಡಿಯಲಿ
ಡುಗಳ ದಂಡೆಯ । ಬಳಿಯ ಲೋಹದ ಲವಣಿಗಳ ಮನ। ಲಳಿಯಲಾಗಿ
ದವಯವದ ॥ ಬಲಿದದಂಡೆಯ ಮರೆಯದೇಹದ । ಲುಳಿಯ ಠಾಣದ
ಲ್ಲಿ ಕಾದಿದರುಭಯಪಟುಭಟರು ॥ ಬಿಡಿಸುವೌಕುವಗಾಯಘಾತಿ
ಡೆಯ। ತುಡುಕಿನೊಳಗೊಡ್ಡುವ ನಿವಾರಿಸಿ ಜಡಿದು ಝಳಪಿಸುವ
ಯೊ । ಳೊಡಲನೊಲೆವಕಠಾರಿಕಾರರ । ಬಿಡುಶ್ರಮದ ಬಿನ್ನ
ಕಣೆಯ ಕಾಲಾಟದಲಿ ಹಿರಿಯಾ । ಬ್ಬಣದ ಹೋರಟೆಗಳ
ದ್ದುದು ಭಟರು ದೇಹದಲಿ ॥ ರಣಮುಖದಲಿದು ತನ್ನ
ಗೂದಿಶಾಪಟಭೀಮ ನುಡಿದನು ಕೌರವ...
ನೋಡುವೆನೆನುತ ಕೈದುಗ । ಳೇಕೆ ದ್ಯ
ನೇ । ಜೋಕೆಯುಳ್ಳವನಹೆಯೊ ಯು
ಏಸ ನ್ಗಿಸಿಕೊಂಬೆ ನಿನಗಿ । ನ್ನೈಸ
ಕುವೆನು ॥ ಏಸು ಬೇಹುದು ಮೆಲ್ಲಶ
ಯ್ಯೆ ನೆಂದನು ನಿನ್ನಮಗ ನಗುತ
ತ್ತ್ರಿರಿಯತಿಲಕವನೊಟ್ಟದರು ನೋ
ಳಾಘಟ್ಟಡದ ಮಣ್ಣಿನು। ಬೆರಳಲ

ಭುಜಶಿಖರನಿ । ಸ್ನಾಳವನು ನೆಲ ಕುಣಿಯೆ ದಿಕ್ಕಿನ । ಮೂಲೆ ಬಿರಿಯೆ ಪಯೋಧಿಗಳಲಿ ಪಯೋಧಿ ಪಲ್ಲಟಿಸೆ ॥ ಘೀಳಿಡಲು ಕಿವಿಗಳಲಿ ಸೇನಾ । ಜಾಲವೆರಡರೊಳುಭಯಗಜಶುಂ । ಡಾಲ ಕೈಯಿಕ್ಕಿದವೊಲಿವರೊತ್ತಿದರು ತೋಳ್ಗಳಲಿ ॥೪೨॥ ತೆಗೆದು ತಳಹತ್ತದಲಿ ತೋಳನು । ಬಿಗಿಯೆ ಬಿಡಿಸುವತೋರಹತ್ತದ । ಹೊಗುತೆಯನು ವಂಚಿಸುವತಳಹತ್ತದಲಿ ತವಕಿಸುವ ॥ ಲಗಡಿಯಲಿ ಲಟಕಟಿಸುವಂತರ। ಲಗಡಿಯಲಿ ಲಂಘಿಸುವಡೊಕ್ಕರ । ಣೆಗಳ ಬಿಗುಹಿನ ಬಿಡಯದಲಿ ಹೆಣಗಿದರು ಪಟುಭಟರು ॥೪೩॥ ಗಾಯವುಂಟೇ ತೋರುಮಲ್ಲರಿ। ಗಾಯಸವು ಜೋಕೆಯಲಿದೇಕಡು। ಪಾಯವೇಳೊಂದೊದೆದು ದಂಡೆ

ಯನೊಡ್ಡಿದನು ಭೀಮ ॥ ರಾಯ ಕೇಳ್ಕೆ ಸಿಡಿಲ ತಿವಿಗಳ । ತಾಯಿವನೆಯೋ ಭೀಮಸೇನನ । ಗಾ

ಕೋ ಘನತೋರಹತ್ತರು ತಿವಿದರುರವಣಿಸಿ ॥೪೪॥ ಮೈಗೆ ಮೇಣದ ಹಾಹೆ ಸರಿಮುಂ । ಗೈಗೆ

ನಿದವು ದೊರೆ ಹೊರ । ಗೈಗೆ ವಜ್ರದಹೊಯ್ಲು ಪಡಿಘಟ್ಟಣೆ ಮಹಾದೇವ । ಕೈಗಡಿಯಪ

ಗೆ ಬಲು । ಗೈಗಳೆಂದಸುರಾರಿ ಹೊಗಳಲು । ಹೊಯ್ಲಿನ ಹೊಸನಾಟಕವನಭಿನಯಿಸಿ

॥ ಒಂದು ಭೀಮನಮೇಲೆ ನಿನ್ನಯ । ನಂದನನಮೇಲೆರಡುಕುಂತೀ ನಂದನಗೆ ನಾಲ್ಕಂ

ಒಡಲಿನಲಿ ॥ ಸಂದಣಿಸಿದುದು ಗಾಯಗಾಯದ । ಹಿಂದೆ ಹೊದರೆದ್ದುದ ಸಗಾ

ಲುಕಿದುದು ನಿನ್ನಕುಮಾರನಂಗವಣೆ ॥೪೬॥ ತ್ರಾಣವೆಳದಾಯಿತ್ತು ಧೈರ್ಯದ

ರ್ಮಜಲವು । ಗ್ರಾಣಿಸಿತು ಭುಜಬಲವನಂಕುರಿಸಿತ್ತು ರಣಭೀತಿ ॥ ಪ್ರಾಣಪ

। ಗೋಣಿನಲಿ ಗರುವಾಯಿಗೆಡೆ ರಣ। ಹೂಣಿಗನು ದುಶ್ಶಾಸನನು ಜವಗುಂ

ದ್ದು ಮುಂದಲೆವಿಡಿದು ತೊಡೆ/ಗಾ । ಲೊಯ್ದು ಕೆಡಹಿದ ಸದೆಬಡಿದು

ಪ್ಪರಿಸಿ ಡೊಕ್ಕರವಿಕ್ಕಿ ವಾಘೆಯಲಿ ॥ ಹಾಯ್ದುವಾಲಿಗಳುಸುರಪಾಳೆ

ಗಿನಲಿ ಕೈ । ಗೆಯ್ದು ಕುಡಿತೆಯ ಶೋಣಿತಕೆ ಲಟಕಟಿಸಿದನು ಭೀ

ಯನು ಡೊ। ಕ್ಕರಿಸಿ ಡಾವರಿಸುವವೊಲಾನರ । ಹರಿ ಹಿರಣ್ಯಕಶಿ

ನಿನ್ನಕುಮಾರನನು ಕಡು । ಧುರದೊಳಗೆ ಕೆಡಹಿದನು ಕೊಬ್ಬಿ

ೀಮ ॥೪೮॥ ಸಿಕ್ಕಿದೆಯಲಾ ಸ್ವಾಮಿದ್ರೋಹಿಯೆ । ಸೋ

ಾಡಿದೆಯಲಾ ಮಾನಿನಿಯ ಮುಡಿವಿಡಿದು ॥ ಚುಕ್ಕಿಗಳ

ೀಡಿದರಕಟಿನುತ ತಲೆದೂಗಿದನು ಭೀಮ

ಳಕಾಂಬು ಕಂಗಳು । ಮುಕ್ಕುಳಿಸಿ

ಗೆ ಯೆವೆ । ಯಿಕ್ಕದೀಕ್ಷಿಸಿ ತಣಿಯ

॥ ಎತ್ತಿ ಕಳೆದಿರಿ ಬಸಕೆ ನಾವ್ನಿ

ೀಡಿಸಿ ಬೈದು ಭಂಗಿಸಿದ್ಯ॥ತೊತ್ತಲಿ

ಷದುಬ್ಬಟೆಗಳನು ನೆನೆಯೆಂದನಾಭಿ

ಯ ಭಂಗಿಸಿದಭುಜ । ಬಲವ ನಿಂ

ಗಾದುದು । ನೆಲೆ ಮದೀಯಮಕ

ಪ್ರತಿಜ್ಞೆಯು । ಸಲಿಸಿದೆನು ನಿನ್ನಾತ ಮೆಚ್ಚಲಿಯೆಂದನಾಭೀಮ ॥೫೩॥ ಖಳನ ವಕ್ಷದಮೇಲೆ ಮಡ
ವನು । ಬಲಿದು ಕೈಗಳನೊತ್ತಿ ಮಗ್ಗುಲ । ನುಲುಕಲೀಯದೆ ವಜ್ರಬಂಧುರ ಮುಷ್ಟಿಯನು ನೆಗಹಿ ॥
ಒಳಗೊಡೆಯು ಹಾಯ್ದೀಕ್ಷಿಸಿದಕಂ। ಗಳಲಿ ಕೆಂಪಡರಿದವು ಭೀಮನ। ಬಲವು ಘನವೆಗ್ಗಳಿಸೆ ರೋಷಾವೇ
ಶದಡಿಗಡಿಗೆ ॥ ೫೪ ॥ ಹೊಡೆದು ವಕ್ಷವನುಗಿದು ರಕ್ತವ । ಕುಡಿತೆಯಲಿ ಮೊಗೆಮೊಗೆದು ಮಾರುತಿ ।
ಕುಡಿದು ಮಿಕ್ಕುದ ಖಳನ ಕಟವಾಯಿಗಳಲೆರೆದೆರೆದು ॥ ಮಡದಿಯನು ಭಂಗಿಸಿದಫಲವದು । ಕಡೆಗೆ
ಗಣಿಸಿತೆ ಕೌರವಾನುಜ । ನುಡಿಯದಿರಲೇಕಂಜಬೇಡನ್ನಾಣೆ ನುಡಿಯೆಂದ ॥೫೫॥ ಎರಗಿದನು ಕಟವಾ
ಯಿಹಲುಗಳ । ಮುರಿಯಲುಗುರಲಿ ತೆಗೆದು ಹೃದಯವ । ನುರೆಬಗಿದು ಮೊಗೆಮೊಗೆದು ರಕುತವ
ಕುಡಿತೆಕುಡಿತೆಯಲಿ॥ ಸುರಿದುಸುರಿದಡಿಗಡಿಗೆ ಮಿಗೆ ಚ । ಪ್ಪರಿದು ಚಪ್ಪರಿಸಿದರಮಧುರಕೆ । ನೆರೆ
ಸುಧೆಮಿಕ್ಷುರಸಗಸವೆಂದನಾಭೀಮ ॥೫೬॥ ಆಡಿದುದು ಹುಸಿಯಲ್ಲ ನೀ ಸವಿ।ನೋಡು ಕರ್ಣ
ಕೌರವ । ನೋಡು ಸವಿಯೋ ಶಕುನಿಕೃಪಕೃತವರ್ಮಗುರುಸುತರು ॥ ನೋಡಿರೈ ಹೇವರ
ಮಾಡಿರೈ ನಿನ್ನಾತನಳಿವನು । ನೋಡುತಿಹುದಿದು ನಿಮಗೆ ನೀತಿಯೆ ಯೆಂದನಾಭೀಮ
ಸಬಾರದೆ ಕೈಮಕಾತಿಯ | ರಡಬಳವನೀ ಹುಲಿಯಬಾಯಿಗೆ । ಹಿಡಿಸಿ ಕಳೆದಿರಲಾ
ಗೌತಮರು॥ ಸುಡಲಿ ನಿಮ್ಮನು ಮೊಲೆಗಳಿಲ್ಲದ। ಕಡುಮವುಳಿ ನಿಮಗೇಕೆ ನಿಮ್ಮನ
ವೆಲ್ಲೆನುತ ಮದವೇರಿದನು ಭೀಮ ॥೫೭॥ ಎಲೆಲೆಕೌರವ ಮೋಹರದ ಮಂ । ಡ
ತೊ । ಟ್ಟಳಿಕೆಗಾಂತಿದೆ ಹರಣವಕಟಾ ಕಾಯಲಾರಿರಲಾ ॥ ಸಲಹಿದವನೊ
ವೆಡೆಗೆ ಮತವೇ ಮಹೇಶ್ವರ । ಬಲಕೆಪಂತವಿದೇನೆನುತಮೂದಲಿಸಿದನು ಭೀ
ನಿಂದುದೀನ । ಮ್ಮವರೊಳಗೆ ಮುರಹರಧನಂಜಯ । ನಿವಗೆ ಪೌರು
ಮಿಪರು । ಹವಣರಿವೆನೆಂದೆನುತಲಾಭೈ । ರವಭಯಂಕರಭೀಮನಾ
ರ್ದುದು ಹರುಷಭೀತಿಯಲಿ॥೬೦॥ ಏನುಧರ್ಮಜ ನಕುಲಸಹದೇ ।
ಗೇನುಪೌರುಷವಿಲ್ಲವೇ ದ್ರೌಪದಿಯತನಯರಿಗೆ ॥ ಏನುಧಯು
ರ್ಥ ಬಿಲುಸಂ । ಧಾನವನು ನೀ ಮಾಡಿ ಬಿಡಿಸೈ ಕೌರವಾನು
ಸೊಕ್ಕಾ । ವರಿಸಿ ಮಾರುತಿ ಸಮರಕೆನ್ನನು । ಕರೆದನೇ
ಯುಗಿದನುಗ್ರೈದು ರಥದಿಂ । ದಿರದೆ ದು
ನು ಧನಂಜಯನ ॥೬೧॥ ಏನುಫಲುಗು
ನಿದಿರಿಲ್ಲ ಬಿಡುಮಾನವರಪಾಡೇನು ॥ ಏ
ಚಾನನನ ಪರುಠವದ ಪಂತವನಿನ್ನುಕೇ
ಗಳ ವಿಲಯ ರುದ್ರನು । ಮೇದಿನಿಯ
ಭೀಮವೇಷದ । ಲೈದಿಹನು ಬಳಿಕಾತ
ದು ಪಾರ್ಥನ ತಿಳುಹಿ ತಿರುಗಿ ಮು ।
ಗಳೆಲ್ಲ ಬೆರಗಾಗೆ ॥ ನಿಂದು ನೋಡು

ನು ಕೈವೀಸಿ ಕರೆದನು ರಣಕೆ ಬೊಬ್ಬಿಡುತ ॥೬೫॥ ಮತ್ತೆ ಪವನಜನವನುರವ ಬಗ । ದೊತ್ತಿ ವೀ
ವೇಶದಲಿ ದೆಸೆ । ಹತ್ತರಲಿ ಸೂಸಿದನು ಕುಡಿವುತ ಬಹಳಶೋಣಿತವ ॥ ಮತ್ತಗಾಮಿನಿ ನುಡಿದನ
ಗಂ । ದಿತ್ತಭಾಷೆಯನೆನೆದು ದೂತರನತ್ತ ಕಳುಹಿದನಬುಜಮುಖಿಯನು ರಣಕೆ ಬರಹೇಳಿ ॥೬
ತಾಯೆ ಬಿನ್ನಹ ರಣಕೆ ನಿಮ್ಮನು । ವಾಯುಸುತ ಬರಹೇಳಿದನು ಕುರು । ರಾಯನನುಜನ ಕೆಡಹಿ
ಕಳವಮಾಡಿದನು ರಣದಿ ॥ ಹೋಯಿತಹಿತನ ಬಲುಹು ನಮ್ಮಯ । ರಾಯನಭ್ಯುದಯಪ್ರಪಂಚಕ
ಡಾಯತವ ಚಿತ್ತೈಸಿಯೆಂದರು ಚರರು ದ್ರೌಪದಿಗೆ ॥೬೭॥ ಕೇಳಿ ಹರುಷಿತೆಯಾದಳಾಪಾಂ । ಚ
ಕೆ ಶತಸಾವಿರಸಖೀ ಜನ । ಮೇಳದಲಿ ಹೊರವಂಟಳಾಹವಭೂಮಿಲೋಕನದ ॥ ಕೇಳಿಯಲಿ ರಥ
ರ್ಗ । ನಾಳಿಗಚ್ಚರಿ ವೀರರಸದಲಿ ಜೋಳಿಸಿತು ಶೃಂಗಾರರಸವೆನಲೈದಿದಳು ರಣವ ॥೬
ಲಿ । ಕಗ್ಗದ್ಭುತ । ತರವನಗಣಿತಕರಿತುರಂಗಮ । ನರನಿಕಾಯದ ರಥಿಕಚಯಕಡಿ
ಬರವ ಕಲ್ಲೋಲಿನಿಃಭೀ । ಕರದ ಭೂತವ್ರಾತಖಗಮೃಗ । ವಿರುತಿಯಿಂದ
ಕ ॥೬೯॥ ಹೊಕ್ಕಳಾಹವವನು ಭಯಾನಕ । ವಕ್ಕಜಕೆ ಬೆರಗಾಗಿ ವ
ಕೇಶನವ ಮುಚ್ಚುತಲಿ ಬರುತಿರಲು ॥ ಎಕ್ಕತುಳದಲಿ ಲಯಕೃತಾಂತನ ।
ನೊ । ಲೊಕ್ಕಲಿಕ್ಕುತ ಭೀಮನಿರೆ ಕಂಡಂಜಿದಳು ತರಳೆ ॥೭೦॥ ಆಯತಾಕ್ಷಿ
ಯುಸುತ ನಿಜಭುಜದ ವೀರ । ಶ್ರೀಯ ಬರವೆನಲುಬ್ಬಿದನು ಪುಳಕಾಂಬುಕ
ನುಡಿವನುಡಿಗೆ ಸ । ಹಾಯವಿದಲೇ ಕೌರವಾನ್ವಯ । ಬೀಯವಾಯಿತೆ
ಂದ ॥೭೧॥ ಕಂಡಳಂಗನೆ ಕೌರವಾನುಜ । ದಿಂಡುಗೆಡೆದಂದವನು ಭೀ
ಪ್ರವಾಹವನು ॥ ಗಂಡು ನೀನೇ ಮೂರುಲೋಕದ । ಗಂಡನೆನ
ಸಲಹಿದೆ ತನ್ನನೆನುತೆರಗಿದಳು ಚರಣದಲಿ ॥೭೨॥ ತರುಣಿ ನಿನ
ಶ್ಯಾಸನನ ರಕುತವ । ಸುರಿದೆನಿವನನುಜಾತನೂರ್ವರ ಹೊ
ರುಗಳ ಸಂ । ಹರಿಸುವುದು ಗದೆ ನಿನ್ನ ಕಬರಿಯ । ನರು
॥೭೩॥ ಶೋಣಿತಾಂಬುವಿನಿಂದ ತರುಣಿಯ । ವೇಣಿ
ಕಿದನು ಬೈತಲೆದೆಗೆದು ಚೆಲುವಿನಲಿ ॥ ರಾಣಿ ಹುಸಿ
ವಾರಿಯೆಂದವನು ಪವನಸುತ ನಗುತ ।
ಸುಮವಾಲೆಯ । ಮುಡಿವವೊಲ್ಮ
ಡದಿಯನು ಬೋಳೈಸಿ ಕಳುಹಿದ
ಡಿಗಡಿಗೆ ಕಡುಕಿರಿದು ರಕುತವ ।
ಯರಿಗೆ ಕೈಕೊಳಿಸಿ ॥ ಕುಡಿದು
ಹೊಡನೆ ನೆರನೆತ್ತರೋಕುಳಿಯಾ
ಸಕಲಸರೋವರಾಂಬುವ । ನೊ
ನ ಶೋಣಿತ । ದೊಂಡುಕ

ರುಳವಮಾಲೆಗಳ ॥ ತಿಳಿದರಕುತದ ಕೊಳನ ಘನಕೊಳು । ಗುಳದ ತೋಪಿನ ನಡುವೆ ಮಾರುತಿ । ಲಲ
ನೆ ಸಹಿತಾಡಿದನು ಶೋಣಿತವಾರಿಯೋಕುಳಿಯ ॥೮೪॥ ಉಡಿದು ಕೆಡೆದಸಿತಾತಪತ್ರದ । ನಡುವೆ ಹರಿ
ಸಾಲಿನ ಕಪಾಲದ । ಗಡಣವಿರೆ ಚೆಲುವಾಯ್ತು ಜನಮೇಜಯ ಮಹೀಪತಿಯೆ ॥ ಅಡಗಲಂತಕನಗಲ
ಲಂದುಣ । ಬಡಿಸಲಿಕ್ಕಿದತಳಿಗೆಯಲಿ ಸಂ । ಗಡಿಸಿದುದು ಕೆಲವಟ್ಟಲೆನೆ ರಂಜಿಸಿತು ರಣಭೂಮಿ
॥೮೫॥ ಸಿಡಿದಕಣ್ಣಾಲಿಗಳು ಜವನಂ । ಗಡಿಯ ನೀಲದಪಸರದಂತಿರೆ । ಲಡಗಕಂಡೆನು ಸೂನೆಗಾರರ
ಹಸರದಂತಿರಲು ॥ ಹೊಡೆಗೆಡೆದಗಜದಟ್ಟೆರಕುತದ । ಕಡಲೊಳೆಸೆದವು ಬೀತರಸುಗಳ । ಪಡಗುಜವ
ಲೋಕಕ್ಕೆ ಜಂಗುಳಿಸಿದ್ಧವೆಂಬಂತೆ ॥೮೬॥ ಮಡದಿಯನು ಕಳುಹಿದನು ಕೆಳದಿಯ । ರೊಡನೆ ನಡೆತ
ರೆ ನಾಲ್ಕುಕಡೆಯಲಿ । ಹಿಡಿದಜವನಿಕೆ ಜಲರುಹವದನೆ ಗಮಿಸಿದಳು ॥ ತುಡುಕಿ ವಾಮಾಂಘ್ರಿಯ
ಲಿ ಹಗೆಯನು । ಮಡದಲೊದೆದನು ಕೌ ಘ್ನನ । ಪಡೆಗೆ ಪವನಜ ಕೊಟ್ಟನಂತಕಪುರವನಾಂತ
ರವ ॥೮೭॥ ಲೋಕದೊಳು ಹೆಸರಾಯ್ತು ನಿ ಘ್ನ । ಶೋಕದೆಂದೇ ಧಿಟಕೆ ನಾವು ವಿ । ಶೋಕರಾ
ದವು ಶಬ್ದ ನಿನಗೆ ತದರ್ಥವೆಂದೆಮಗೆ । ಈಕುತಾಲ ಹಸರಿಂದಲ । ನೇಕವಿಧಿ ನಮಗಾಯ್ತು ಭಂ
ಗ । ವ್ಯಾಕುಲರು ಬಳಿಕೇನು ಮಾಡರು ಸೂತಹೇಳೆಂದ ॥ ಇವನ ನೆತ್ತರ ಕುಡಿವೆನೆಂಬುಕೆ । ರವ
ರನೂರ್ವರ ಕಡಿವಭಾಷಗ । ಳಿವಗೆ ಪೂರ್ಣವಾಯವೆ ಸ ಶಹರಣವೊಂದುಳಿಯೆ ॥ ಅವನಿಶಿಖಿ
ಜಲಪವನಪುಷ್ಕರ । ದಿವಿಜದನುಜೋರಗವ ನಜನನೀಕ್ಷೆಳಿಯೆಂದನು ಭೀಮ ಮೊ
ಗವೆಗಹಿ ॥೮೯॥ ಅರಿಯ ಹೆಣನ ಲಿ ಬೊಟ್ಟಿಟ್ಟನು ವರೂಥದ । ಹೊರೆ
ಗೆ ಬಂದನು ಕಲಶಜಲದಲಿ ಪ ನು ತೊಳೆದು ವರಕ । ರ್ಪೂರದ ಕ
ಸ್ತೂರಿಗಂಧಲೇಪದೊ । ಳೆ ಭೀಮ ॥೯೦॥ ಮೀಳೆಯವ ಕೊಂ
ಡನು ವರೂಥದ । ವೆ ನನಡರಿದನು ತುಡುಕಿದನು ನಿಜಧ
ನುವ ॥ ಕಾಳಗ ನೊ । ಪಾಲ ಬೀಳಲಿ ಧರ್ಮರಾ
ಲ ಧನನ ಮೋಹರಕಾದಿಭಂಡಿಯ।
ಕರೆಸುಕೌರವ । ಜನಸ್ತಕರ್ಣಾದಿ
॥ ನಿಯತಬಲಕ್ಕಕಡೆತರು ರಣ
ದರು ಭೀಮಕ್ರಮಿಣಗೆ ॥ ಹ
। ನೆಯಲಿ ಕಾಂದಳಿಂಬದುದಪಜ
ಾದವುಸಿಲ್ಕಿದನ ಶಿಥ । ದಿಟ್ಟಿ
ರಭೀಮನ ಹಗೆಟ್ಟು ದೆಸೆ
ಲಿ ಮಡದಸುಟದವೊಳ
ರೌದ್ರರಚನೆಯೆರ್ಥಸಕೋ
ಡೆದು ಮುಕಸರು ಕಂಗೆ
ಹೊಳೆವಸಾಧಿಯಲಿ ತೆರ

ರುಗಿದಂತಿರೆ । ತಲೆಮುಸುಕುವಳಿನೋಟದುರುವಣಿಗಾರನಾಯಕರು ॥ ನೆಲದೆಗೆದು ನಮ್ಮವರು ನೃಪನರೆ । ನೆಲೆಗೆ ಸೇರದೆ ಸರಿಯೆ ಕಂಡನು। ನಳಿನಮಿತ್ರನ ಮೊಮ್ಮನಡೆದನು ವೀರವೃಷಸೇನ ॥೯೬॥

ಅಂತು ಸಂಧಿ ೯೧ಕ್ಕೆ ಮಂಗಳಮಸ್ತು.

---

## ಇಪ್ಪತ್ತನೆಯ ಸಂಧಿ.

॥ ಸೂಚನೆ ॥ ಚಂಡಭುಜಬಲಪವನಜನ ಮುಂ । ಕೊಂಡುವಿರಥನ ಮಾಡಿ ಕದನೋ। ದ್ದಂಡನರನೊ ಳುಕಾದಿ ಮಡಿದನು ವೀರವೃಷಸೇನ ॥

॥ ಪದ ॥ ಕೇಳು ಜನಮೇಜಯಧರಿತ್ರೀ । ಪಾಲ ಧೃತರಾಷ್ಟ್ರಂಗೆ ಸಂಜಯ । ಹೇಳಿದನು ಮೇಲಿನ್ನು ಕರ್ಣ್ಣಕೆ ಸಹ್ಯವಿಲ್ಲದಿರೆ ॥ ಹೇಳಿದೆನು ಕೇಳಿದರೆ ಕೌರವ । ಜಾಲ ಸಮೆದುದ ಬೇಸರದ ಬಲು । ಗಾಳಗವನಭಿವರ್ಣಿಸಿದ ಮುಂದಣ ರಣೋನ್ನತಿಯ ॥ ೧ ॥ ಅವಧರಿಸು ಧೃತರಾಷ್ಟ್ರನೃಪ ನಿ। ನ್ನ ವಗೆಯಿಳಿದುದು ಸೊಕ್ಕುಚಿತ್ತದ । ಬವಣಿ ಬೀತುದು ಮನದ ಝೊಂಪಿಳಿದುದು ಭಡಾಳಿಸಿದ ॥ ತವಕಿಸಿದಡೊಳ್ಳಾಸರಣಬೇ । ಳುವೆಯ ಬಿಗುವಡಗಿದವೊಲನಿಬರು । ತವತವಗೆ ಬೆಚ್ಚಿದರು ಕೋಲಾಹಲಕೆ ಪವನಜನ ॥ ೨ ॥ ಮುಟ್ಟಿ ಬಂದುದು ಕೇಡು ನೃಪನೊಡ । ಹುಟ್ಟಿದನ ಹೊಯ್ದುರುಣಜಲದಲಿ । ಬಿಟ್ಟರಿದು ರಿಪುಚಾರಿವರಿದನು ಕದನಚೌಕದಲಿ ॥ ಇಟ್ಟಣಿಸುವೀರಣಮದಾಂಧನ । ತೊಟ್ಟುಳಿಕೆಯನು ಕೇಳ್ವರಾಘುಖ । ರಟ್ಟನಲ್ಲಾಯೆನುತ ತಾಗಿತು ರಿಪುಭಟಸ್ತೋಮ ॥ ೩ ॥ ದೊರೆಯೊಡನೆ ತಲೆಯೊತ್ತಿ ಘುರಿದ । ಬ್ಬರಿಗನುಬ್ಬುವಸಮಯದಲಿ ಯತಿ । ಬೆರಗಿನಿಂದಿದಿರೈವಬಲುಭಟನಿವನನರಿಯಿರಲಾರ್ಯ ಕರ್ಣನನುಜನ ಕುಡಿದನೆತ್ತರ । ಬರಿಸುವೆನು ಮೂಗಿನಲಿ ಮಾಣೆನು । ತರಿಯುರಥದುರವಣೆಗೆ ಕಣ್ಣಸೂನುವಿದಿರಾದ ॥ ೪ ॥ ಫಡ ವಿಕಾರವೆ ನೋಡು ನೆತ್ತರ । ಗುಡಿವತನವೇ ನಮ್ಮೊಡನೆ ಮೂರೆಡೆಯಮೂದಲೆಗರುಹರೇ ಕರ್ಣಾದಿನಾಯಕರು ॥ ಕುಡಿದನೆತ್ತರಜಿಗುಳೊಡನೆ ನಿ । ನ್ನೊಡಲ ನಿಸ್ಸಂಶುವೆ ನಿಲ್ಲೆನುತ ಬಲ । ದೆಡದ ಬಿರುದರ ಮೇಳದಲಿ ತೂಳಿದನು ವೃಷಸೇನ ॥ ೫ ॥ ಧೀರು ಮ ೧। ಸೇನಾಧಿಪತಿಯ ಕು । ಮಾರನೌಕಿದನೆನುತಖಿಳದಳ । ಭಾರ ಕವಿದುದು ಗಜರಥಾಶ್ವಪದಾತಿಯೊಗ್ಗಿನಲಿ ॥ ಅರುಹೊಗಳುವರನಿಲಸುತನನು । ದಾರತನವನು ಮೇಲೆ ಬೀಳ್ವಕ । ಠೋರಶಸ್ತ್ರಾಸ್ತ್ರವನು ಬೀಸಿದನರ್ಘಪರಿಘೆಯಲಿ ॥ ೬ ॥ ಅಕಟ ಮಗುವಿನಕೂಡೆ ದಳನಾ । ಯಕರು ಬೆಳಸಿದರಳಿವೆರಿದು ಸೇ । ವಕರ ಪಂತವಲೇ ನಿರೋಧವೆಯೆನುತ ಮುರಿದೆದ್ದು ॥ ಲಗುಡಹತನಿರ್ಭಿನ್ನಭಾಂಡ । ಪಕರಣವೊ ನಿನ್ನಾಳಕುದುರೆಯೊ । ಸಕಲಸುಭಟರನೊಕ್ಕಲಿಕ್ಕಿದನೊಂದು ನಿಮಿಷದಲಿ ॥ ೭ ॥ ನುಗ್ಗುಬಡಿದಂಜಿಸಿಪಗೆಲವಿನ । ಸುಗ್ಗಿಗಿದು ಲಯಕಾಲವೆನುತ ನಿರರ್ಗಳಿತಭುಜಶೌರ್ಯ ಸುರಿದನು ಸರಳಸರಿವಳೆಯ ॥ ಒಗ್ಗಿನಲಿ ಕವಿನಂಬುಗಳ ಗರಿ ಲಗ್ಗೆಗರಿನಾಯಕರ ಕಿವಿಗಳು । ನೆಗ್ಗಿದವು ಮನವಳುಕಿದವು ಮಾರಾಂಕದಲಿ ರಥವ॥೮॥ಬಲುಹು ಮಗುವಿನ ಶೌರ್ಯವೀಸ। ಗ್ಗಳಿಕೆಯೇ ಶಿವಯೆನುತ ಚಿತ್ತದೊಳಳುಕಿ ಹೊಡಿದನಂಬಸವಧಾನದಲಿ ಬಿಡೆಯರಿದು ॥ ಹಿಳುಕುಹಿಳುಕುಗಳೊರಸೊರಸಿ ಮುಂ । ಕೊಳೆ

ಸಿ ಹಾಯ್ದುವು ಹಿಂದಣಂಬು । ಚ್ಛಳಿಸಲೆಚ್ಚನು ಭೀಮ ರವಿನಂದನನ ನಂದನನ ॥ ೯ ॥ ಕೆಣಕಿದುರಿ ಯಿಂದದಲಿ ದಂಡೆಯು । ಲಣೆದ ಕಾಳೋರಗನವೊಲು ಚಂ । ಡಣೆಯು ಚಪಳಕ್ರೋಧಶಿಖಿ ಮೋಹಿದುದು ಮೋರೆಯಲಿ ॥ ಕಣೆಗಳೋ ಕಲ್ಪಾಂತವಹ್ನಿಯು । ಹೊಣೆಗಳೋ ಹಾಳಾಹಳದದಾ । ವಣಿಗಳೋ ನಾವರಿಯೆವೆಚ್ಚನು ವೀರವೃಷಸೇನ ॥ ೧೦ ॥ ಫಲಿತಶಾಲಿಯುವಸವ ಮುತ್ತಿದ । ಗಿಳಿಗಳೋ ತಾವರೆಯ ತಕ್ಕೆಯೊ। ಳಿಳಿದ ಮರಿದುಂಬಿಗಳೊ ವೃಷಸೇನನ ಶರಾವಳಿಯೋ॥ ಹಿಳುಕುದೋರಿದನಾತನಸ್ತ್ರಾ। ವಳಿಗಳಾತನ ಸೂತನೊಡಲಲಿ। ಹಲವು ಮಾತೇನಾತ ವಂಗೋಪಾಂಗವೀಧಿಯಲಿ ॥ ೧೧ ॥ ಕೂಡೆ ಹಾಹಾಧ್ವನಿಯುರವವ । ಲ್ಲಾಡಿಸಿತು ವರಬಲವನಾತನ । ತೋಡು ಬೀಡಿನ ಸಂಚೆ ಸೆಳೆದುದು ಹಗೆಯ ಸಾಹಸವ ॥ ಓಡಲರಿಯದೆ ಭೀತಿಯಂಬ ನಿ । ರೂಢಿ ನಿಗುರದೆ ಕಾದುವರೆ ಜಯ । ಜೋಡಿಸದೆ ಜಾವಳಿಸಿ ಜವಗುಂದಿದನು ಕಯಬೀಮ ॥ ೧೨ ॥ ಅರಸಕೇಳ್ಕೆ ಬಳಿಕ ಭೀಮನ । ತರಹರವನರಿದಾಚೆಯಲಿ ಸಂ। ವರಿಸಿಕೊಂಡುದು ನಕುಲ ಬಿಟ್ಟನು ಸೂಠಿಯಲಿ ರಥವ॥ ತರುವಲಿಗೆ ನೀನಿದಿರಹರೆ ಘಡ । ಸಂಸವನೆ ಭೀಮಂಗೆ ನೀನೆನು । ತರಿಭಟನ ಕೆಣಕಿದನು ಕೆದರಿದನಸ್ತ್ರಸಂತತಿಯ ॥ ೧೩ ॥ ಅರಿವರು ನಕುಲಾಂತರೇ ಜಝ್ಝಾರವೇನಿಮ್ಮಣ್ಣನಾಡಿದು । ಹಾರದಲಿ ಸೆರೆಹೋದನಾತನ ಹರಿಬವೇ ನಿಮಗೆ ॥ ತೀರದೋ ನಿನ್ನಲಿ ವೃಥಾಹಂ । ಕಾರವೇತಕೆ ಪಾರ್ಥನೆಂಬನ । ತೋರಿಸಾ ನೀ ಸಾರೆನುತ ತೆಗೆದೆಚ್ಚ ಬೊಬ್ಬಿರಿದ ॥ ೧೪ ॥ ಮಗುವು ನಿನ್ನೊಡನೇನು ಸರಿಯೋ । ಮಿಗಿಲೆನುತ ಶರವಿದ್ಯೆಯನು ಕೈ । ಮಗುಚಿದನು ಹೊಡೆಯಂಬನಾತನ ಮೇಲೆ ನಿಮಿಷದಲಿ ॥ ಮುಗಿಲುವರಿಗೆಗೆ ಮಾರುತನ ಬ । ದ್ದುಗೆಯ ಹೊಯ್ಲೋ ನಕುಲನೆಚ್ಚಂ । ಬುಗಳ ಕಿಡಿಸೂಸಿದವು ಕಂಡೆನು ರಥದಬಳಸಿನಲಿ ॥ ೧೫ ॥ ಮರಳಿ ನಕುಲನನೆಚ್ಚನಾತನ। ತುರಗವನು ಮುರಿಯೆಚ್ಚನಾತನ । ವರರಥವ ಸಾರಥಿಯನಾತನ ಕೆಕ್ಕೆಯವ ಧನುವ॥ ಉರುಳುಗಡಿದನು ಮತ್ತೆ ಜೋಡಿಸಿ । ಹರಿತರಲು ಮುರಿಯೆಚ್ಚ ಪುನರಪಿ । ಹುರುಳುಗೆಡಿಸಿದ ಮತ್ತೆ ಹರಿದನು ಪವನಜನ ಹೊರೆಗೆ ॥ ೧೬ ॥ ನಕುಲ ಮುರಿದನು ಭೀಮ ನಿಲು ಕಾ । ರ್ಮುಕವ ಹಿಡಿ ಬಿಡು ಸರಳನಳುಕುವೊ । ಡಕಟ ಕೊಲ್ಲೆನು ನಿನ್ನ ತಮ್ಮನ ಕಳುಹು ಫಲುಗುಣನ ॥ ವಿಕಳರಾಳಿದಿರಲಾಗಲೀಸಾ। ಯಕದ ಘಟಿತವಿರಿಂಚಿಸೃಷ್ಟಿ । ಪ್ರಕರದಲಿ ತಾನರಿಯನೆನುತೆಚ್ಚನು ವೃಕೋದರನ ॥೧೭॥ ಮುರಿದ ನಕುಲನು ಭೀಮಸೇನನ । ಸರಸಿಹಿಡಿದನು ಭಟನುರುಬೆ ಬಲು । ಹೊರಿಗೆಯಲಿ ಬಲುಧಿಟ್ಟನಹ ಕೌರವನ ಘಟ್ಟಿಸಲಿ ॥ ತೆರಹುಗೊಡದಿರಿ ನೂಕೆನುತ ಹೊ । ಕ್ಕುರುಬಿದೆನು ಸಹದೇವನಾತನ । ಶರುಬಿ ಮೊದಲಿಸಿದನು ಮುಸುಕಿದನಂಬಿನಲಿ ರಥವ॥೧೮॥ ಮೊದಲ ಬಲುಹನು ಕಂಡೆನಿನ್ನೀ । ರುಧಿರವದ ತನಿಗಿಚ್ಚ ನಮ್ಮನು । ಬೆದರಿಸುವುದೋ ಶಿವಶಿವಾ ತಪ್ಪೇನುತಪ್ಪೇನು ॥ ಸದೆಗರಿವದಿರ ಗೆಲುವುದಾವಂ । ಗದಲಿ ಬಹುದೋ ಯೆನುತ ಪರಿಹಾ । ಸದಲಿ ರಿಪುಭಟನಂಬುಗಳ ಕೆದರಿದನು ಕಣೆಗಳಲಿ ॥ ೧೯ ॥ ಆತನೊಡನೆಯು ತೇರು ತುರಗ । ವ್ರಾತವನು ಮುರಿಯೆಚ್ಚು ರಥಹಯ । ಸೂತಧನು ಶಸ್ತ್ರೌಘವಚಧ್ವಜಪತಾಕೆಗಳ ॥ ಘಾತಿಸಿದನೈದಂಬಿನಲಿ ಮಗು । ಳಾತನುರವನು ತೋಡಿತೊಲಗಿಸಿ । ವಾತಜನನರಸಿದನು ಮೊದಲಿಸಿದನು ಸರಳಿನಲಿ ॥ ೨೦ ॥ ಶಿವಶಿವಾ ಸಹದೇವನಕುಲರ । ಬವರ ಮುರಿದುದು ಬಿಡದೆ ಬಳಿಯಲಿ । ಪವನಜನ ತುಡುಕಿದನು ನೂಕಲಿ ಸರ್ವದಳವೆನುತ ॥ ತವತ

ವಗೆ ಸುತಸೋಮಕಾದಿಗ । ಳವಗಡಿಸಿದರು ಮತ್ಸ್ಯಕೈಕೆಯ । ನಿವಹಸಾತ್ಯಕಿಚೇಕಿತಾನರು ಕಡಿದರುರ
ವಣಿಸಿ ॥ ೨೧ ॥ ಎಲೆಲೆಪಾಂಡವ ಸರ್ವದಳವಿ । ತ್ಥಳಿಸಿತೋ ಸುಕುಮಾರನೊಬ್ಬನೆ। ಗೆಲುವದರಿದೋ
ನೋಕೆನುತ ಕುರುಸೇನೆ ಸಂವರಿಸೆ ॥ ಉಲುಕದಿರಿ ಭಾರಣೆಯ ಭಟರೆ । ಗ್ಗಳೆಯರೆವಿಾಮಕ್ಕಳಾಟಕೆ।
ಯಳವನೀಕ್ಷಿಸಿ ಸಾಕೆನುತೆ ತರುಬಿದನು ಪರಬಲವ ॥೨೨॥ ತೇರನೆಚ್ಚನು ಕುದುರೆಕಾರರ । ದೂರದಲಿ
ಖಂಡಿಸಿದರಾಕಿದ । ವಾರಣೌಘವ ಸೀಳಿದನು ಹೂಳಿದನು ರಕುತದಲಿ ॥ ಆರು ಬಲ್ಲರು ಪಾಯದಳವ
ನು । ವೀರಸುತಸೋಮಾದಿನಿಖಿಳಕು । ಮಾರರಂಗವಣೆಗಳನೆಳೆದುದು ಭೀತಿರಸಜಲಧಿ ॥ ೨೩ ॥ ಉ
ಗುಳುಗುಳು ದುಶ್ಶಾಸನನೇ । ಮಗುಳಿ ನೀನಿಸ್ಸಾರ ಬಸುರನಲಿ। ಹೊಗುವೆ ಮೊಲೆಮುಡಿಗಾರಿಗಿವು
ಘಡ ನಿಲ್ಲುನಿಲ್ಲೆನುತ ॥ ಹೊಗರೊಗುವಹೊಸಮಸೆಯ ಬಾಯ್ದಾ । ರೆಗಳ ಬಂಬಲುಗಿಡಿಯಬಾಣಾ।
ದಿಗಳೊಳಾತನ ನಂದಿದನು ಕಾಣೆನು ವೃಕೋದರನ ॥ ೨೪ ॥ ಕಳವಳಿಸಿತರಿಸೇನೆ ಚೂಣಿಯೊ । ಳು
ಲಿದುದೀನಮ್ಮವರು ಕಂಡರು । ಬಳಿಕ ಮುರರಿಪು ತೋರಿದನು ಪಾರ್ಥಂಗೆ ಪವನಜನ ॥ ಎಲೆಧನಂಜ
ಯ ಭೀಮಲಯುನಿ । ವ್ವಳಿವು ನಮ್ಮ ಪರೋಕ್ಷದಲಿ ನಾ । ವುಳಿವುದಿಲ್ಲೀಹದನ ಕಂಡೆನು ಕರ್ಣತನ
ಯನಲಿ ॥ ೨೫ ॥ ಈಸುಘನವೇ ಕೃಷ್ಣ ಮಗುವಿವ । ನೇಸರವನೆಂದಿರ್ದನಾದೊಡೆ । ಹಾಯ್ಸು ರಥ
ವನು ಭೀಮಸೇನನ ರಥದ ಮುಂಗುಡಿಗೆ ॥ ವಾಸಿಯೆಕೀವರಿವಜೋಡಿಂ । ನ್ಯಾಸದಿಂ ರಥ ಮುಂಚಿತ
ಹಿತನ । ಗಾಸಿಯಿಂದನಿಲಜನನುಗಿದನು ಬಗಿದು ರಿಪುಶರವ ॥ ೨೬ ॥ ಎಸುಗೆಯೊಳ್ಳಿತು ಹಾಲುಗಲ್ಲ
ದ । ಹಸುಳೆಯಂಗವಿದಲ್ಲ ತುಂಬಿಯ । ದೆಸೆಗೆ ಕೆಂದಾವರೆಯವನವೇ ಬಲದವಾನಲನು ॥ ಉಸುರದೀ
ಜಯದೊಪ್ಪದಲಿ ಜಾಳಿಸುವುದೊಳ್ಳಿತು ತೊಲಗೆನುತ ನಿ । ಪ್ಪಸರದಲಿ ತೆಗೆದೆಚ್ಚನರ್ಜನನಿನಜನಂದನ
ನ ॥ ೨೭ ॥ ಚಾರುಪೌರುಷಸಮರವಿಹ್ವಳ । ಕಾರಕರು ನೀವ್ ನಮ್ಮದಿದು ಕೌ । ಮಾರದೆಸೆ ತಾಮಸ
ವಲೇ ನಿಮಗಾನು ಸಮಬಲನೆ ॥ ಕೂರಲಗು ಕೊಲೆಗೋಲಿನಲಿ । ನಿಮ್ಮಾರುಭಟೆಯನು ನಿಮ್ಮಬಾಹು
ವಿ । ಕಾರಬಲವನು ತೂಗಿಯೆಸುತೆಚ್ಚನು ಧನಂಜಯನ ॥ ೨೮ ॥ ಮುರಮಥನ ಚಿತ್ತೈಸಿದೈ ತರು।
ವರಿಯಸಾಭಿಪ್ರಾಯವಾಕ್ಯ । ಸ್ಫುರಣವನು ಸರ್ವಜ್ಞಭಾಷಿತಭಾವನಿಷ್ಠುರವ ॥ ಪರಿಹೃತಿಯೆ ಕರ್ತ
ವ್ಯವೇಕ । ಬ್ಬರಿಸಿದನು ಮೌರ್ವೀನಿನಾದ । ಸ್ಫುರಿತವಿಮಲಪ್ರಣವಮಯಶರಸೂಕ್ತಿಸಂಗತಿಯ ॥೨೯॥
ಅದು ಬಳಿಕ ಲೋಕಾಯತಾಂಗ । ಗ್ಗದದವರಿನಾರಾಚನಿರ್ವಾ । ಣದಲಿ ಭಂಗಿತವಾಯ್ತು ಪಾರ್ಥನ
ಬಾಣದೊಡ್ಡವಣೆ ॥ ಬಿದಿರಮಳೆಯಲಿ ಮುಳುಗುವುದೆ ಬೆ । ಟ್ಟದಲಿ ಹರಿಯವಗಡಿಸಿ ಹರನಿಂ । ದೊ
ದಗಿದಂಬಿನ ಹವಣ ತೋರೆನುತೆಚ್ಚನರ್ಜನನ ॥ ೩೦ ॥ ದನುಜಹರ ಹುಸಿಯಾವುದೀಥ । ಟ್ಟನಲಿ ಭ
ಟನಭಿಮನ್ಯು ಪರ । ರೊಡ್ಡಿನಲಿ ಭಟನಿವನಲ್ಲದಿಲ್ಲ ಕುಮಾರವರ್ಗದಲಿ ॥ ಶ್ರನಗೆ ದೇವತ್ರಯದಲಲ್ಲದೆ ।
ದನುಜದಿವಿಜಾದಿತ್ಯಲೋಕದ । ಜನವಿದಿರ ಮೆಚ್ಚಿಸಿತು ಮಗುವಿನ ದಿಟ್ಟತನವೆಂದ ॥ ೩೧ ॥ ಪೂತು
ರೇ ವೃಷಸೇನ ಶರಸಂ । ಘಾತವಿದಕೋ ಸ್ಟರಿಸಾದೊಡೆ । ಪಾತಕಕ್ಕೊಸರಿಸಿದವೈ ಭೂರ್ಣಾದಿಹತಿ
ಯೆಂಬ ॥ ವೂತು ಹಲಬರಲೇನುಪಾರ್ಥಿವ । ಜಾತಿಗೆನುತ ಮಹಾಸ್ತ್ರನಿಕರದ । ಲೀತನನು ಮುಸು
ಕಿದನು ಶರಮಯವಾಯ್ತು ರಣಭೂಮಿ ॥ ೩೨ ॥ ಅವವಹಿಲದೊಳರ್ಜನನ ಬಾ । ಣಾವಳಿಯತರ
ದೊಟ್ಟಿಮಗುಳೆ ಶ । ರಾವಳಿಯಲದ್ದಿದನು ರಥಹಯವಾಧನಂಜಯನ ॥ ನಾವೆಯಿಯೆವೀಯದುಘುತವ

ನಿವ । ಕಾವನೇ ಮಿಕ್ಕವರನರ್ಜುನ ॥ ದೇವನೊಳು ಸರಿಮಿಗಿಲ ಕಾದಿದನರಸಕೇಳೆಂದ ॥ ೩೩ ॥ ಸದೆನ
ಮಾರಾಂಕದಮಹೇಶನ । ಚರಣಯುಗ ಬೆನ್ನಿನಲಿ ಬವರದೊ । ಳರಿದಲ್ಕೆ ಭೀಷ್ಮಾದಿಗಳಿಗೀತನ ರಣಾ
ಲಾಪ ॥ ಬರಡನೇಭಾರಾಂಕದೊಳಗಿವ । ತರಳನೇ ಕಾಲಗಿರಿಯನಾನುವ । ಕೊರಳಸತ್ವವು ಶಿವಶಿವೆಂ
ದುದು ಕೂಡೆ ಕುರುಸೇನೆ ॥ ೩೪ ॥ ಎಸಲು ಕಡಿದನು ಝಾಡಿಯಲಿ ಝಳ । ಪಿಸಲು ಝಡಿದನು ಚ
ಳಕದಲಿ ಚಾ । ಳಿಸಿದ ನಾಲ್ಕೆಂಟತ್ತ ಮಗುಳಿಪ್ಪತ್ತ ತೋರಿಸಿದ ॥ ಮಿಸುಕುವರೆ ಮಂತ್ರಾಸ್ತ್ರದಲಿ
ಮೋ । ಹಿಸುವಸರಿಸಕೆ ಸರಿಸವಿಷಮಕೆ । ವಿಷಮಗತಿಸರಿಸಾರಸಾರಂಗದಲಿ ರಂಜಿಸಿದ ॥ ೩೫ ॥ ಉರು
ಬ ನೋಡೈ ಕೃಷ್ಣನಿವನ । ಬ್ಬರವ ನೋಡೈ ಹೆಚ್ಚಿ ಬಹಬಲು । ಸರವ ನೋಡೈ ಸಾಹಸಕೆ ಮಿತಿಯಿ
ಲ್ಲ ಧೈರ್ಯದಲಿ ॥ ನೆರವ ಬಯಸುವನಲ್ಲ ಕರ್ಣನ । ವರಸುತನು ಸರಿ ಧೀರನೆಂದ । ಬ್ಬರಿಸಿ ಖತಿಯಲಿ
ಪಾರ್ಥ ಸುರಿದನು ಸರಳ ಸರಿವಳೆಯ ॥ ೩೬ ॥ ಭಾಪುರೇ ಫಲುಗುಣನ ಚಿತ್ತದ । ಕೋಪಕಿದಿರಹರಾ
ರುನಾವೇ । ನಾಪೆವೇ ಭೀಷ್ಮಾದಿಸುಭಟರಿಗರಿದು ಕಾದುವೊಡೆ ॥ ಆಪಿನಾಕಿಗೆ ನಿಲುವೊಡರಿದಿ । ನ್ನೀಪ
ರಿಯನೋಡೆನುತ ನಿಮಿಷಕೆ । ಚಾಪದಲಿ ಕೆರಳಿಚಿದನಂಬಿನೊಳಂಬ ಹರೆಗಡಿದ ॥ ೩೭ ॥ ಆಯಿತಿದು
ಸಮರದಲಿ ಗುರುಗಾಂ । ಗೇಯಕರ್ಣದ್ರೋಣಿಗಳ ತರು । ವಾಯ ಲೆಕ್ಕಕೆ ಸಂದನೇ ಮುಝುಪ್ರೊತು
ಪಾಯ್ಕೆನುತ ॥ ಸಾಯಕದೊಳಭಿಮಂತ್ರಿಸುತ ವೈ । ನಾಯಕವ ಹೂಡಿದನು ಕುರುಬಲ । ಬಾಯ
ಬಿಡೆ ಚಿಗಿದಂಬು ಕಡಿದುದು ಕರ್ಣಸುತಶಿರವ ॥ ೩೮ ॥ ಚಿಗಿಯೆ ತಲೆ ಬೊಬ್ಬಿರಿದು ಬಳಿಕಾ । ಳಗ
ಳದೇವಸುಮುಷ್ಟಿಬಿಲುಗೋ । ಲುಗಳನ್ಯೈದಾರೇಳಹಳುಹಳುವಾಯೆಯುಸುಗೆಯಲಿ ॥ ತೆಗೆದು ನಿಂದು
ದು ಭಯರಸದ ಹ । ಬ್ಬುಗೆಯಲುಬ್ಬಿದಶೋಕದೊಡ್ಡಿನ । ಮುಗಿಲು ಕರೆದುದು ಕುರುಬಲದ ಕಂಬ
ನಿಯ ಬಿರುವಳೆಯ ॥ ೩೯ ॥ ಕದಡಿ ರಿಪುಬಲಜಲಧಿಕಲ್ಪಾಂ । ತದಸಮುದ್ರದವೊಲು ಮಹಾಧ್ವನಿ ।
ಗದಗದಿಸಿ ಹಾಕರ್ಣಸುತ ನೀ ಮಡಿವರೇಯೆನುತ ॥ ಕದರಿತೀಶನ ಭಾಳನಯನದ । ಕದದೆಗೆದಶಿಖಿ
ಯಂತೆ ನೊಕಿತು । ಮದವದರಿ ಭಟಕರ್ಣ ಸಾಕಿದಮನ್ನಣೆಯಭಟರು ॥ ೪೦ ॥ ನೊಕಿತೀದಳದಳದ
ಪದಹತಿ । ಗೇಕೆ ಬಿರಿಯದು ಧರಣಿ ದಿಗ್ಗಜ । ವೋಕರಿಸವೇ ಮದವನಾದೊಡೆ ಪುಣ್ಯಾವಬ್ಜಜನ॥ ಈಕ
ಡುಹಿನುಬ್ಬಟೆಯನಾನಲು । ನಾಕಪತಿಯೇ ಸಾಲ್ವ ಕೆಲಕೆಲ । ರಾಕೆವಾಳರೆಯೆನುತಲಿದ್ದುದು ಕೂಡೆ
ಸುರಕಟಕ ॥ ೪೧ ॥ ಉರಿಗೆ ಸರಿಯೇರಿದಪತಂಗಕೆ । ಮರುಳುದಲೆಯೆಲ್ಲಿಯದು ರಣದಲಿ । ನರನೊ
ಡನೆ ತಲೆಯೆತ್ತಿದವದಿರ ಸತಿ ಸುವಾಸಿನಿಯೆ ॥ ಅರಳ್ವಹೊಸಸಂಪಗೆಯ ಮಧುವನು । ಮರಿಗೆ ತಹ
ವೇ ತುಂಬಿಗಳು ಕೇ । ಳರಸ ಹರಿಬಕೆ ಹೊಕ್ಕಸುಭಟರ ವಿಧಿಯ ನೋಡೆಂದ ॥ ೪೨ ॥ ಕೇಣವಿಲ್ಲದೆ
ಹೊಕ್ಕು ಕುದುರೆಗ । ಳಾಣತಿಯ ತುಂಬಿಯಕಪೋಲ । ದ್ರೋಣಿಯೊರತೆಯ ಮದಕರಿಗಳಲಿ ಕದಳಿ
ಕೆಯ ರಥವ ॥ ಸಾಣೆಯಲಗಿನ ಸರಿಯ ಸರವಿನ । ಜಾಣಫಣದಜವಾಯ್ಲರಥಿಕರ। ಕಾಣೆನಾಕ್ಷಣವೊಂ
ದರಲಿ ಸಂವರಿಸಿದನು ಪಾರ್ಥ ॥ ೪೩ ॥ ವೀರದುಶ್ಶಾಸನನ ಕರ್ಣಕು । ಮಾರನಾತನು । ಸಾಕಿದಗ್ಗದ।
ವೀರದಳ ಕೌರವಸಹೋದರಶೇಷಮೊದಲಾಗಿ ॥ ತೀರಿತಾಹವದಲಿ ಕುರುವ್ರಜ । ವಾರಿಧಿಗೆ ನೆಲೆಯಹಾ
ಯಿತ್ತು ನಿನ್ನಕು । ಮಾರನಿಂಗಿತವರಿದು ಸಮರಕೆ ಕರ್ಣನಿದಿರಾದ॥ ... ॥೪೪॥

ಅಂತು ಸಂಧಿ ೨೦ಕ್ಕೆ ಪದ ೮೦೫ಕ್ಕಂ ಮಂಗಳಮಸ್ತು.

ಇಪ್ಪತ್ತೊಂದನೆಯ ಸಂಧಿ.

||ಸೂಚನೆ|| ವೈರಿಗಜಪಂಚಾನನನು ರಣ | ಧೀರನಪ್ರತಿಮಲ್ಲ ಕರ್ಣನು | ದೂರದಲಿ ಹಳಚಿದನು ಹನುಮನ ಹಳವಿಗೆಯ ಭಟನ ||

||ಪದ|| ಕೇಳು ಧೃತರಾಷ್ಟ್ರಾವನಿಪನಿ | ನ್ನಾಳು ಸುಮಹಾನವನು ತನುರೋ | ಮಾಳಿ ಪಲ್ಲವಿಸಿದುದು ಪರಿತೋಷಪ್ರವಾಹದಲಿ || ಕಾಳಗಕೆ ಕೈಹೊಯ್ದು ಹಗಹಣ | ಮೇಳವದ ಕಣಿನೇರಿದನು ತ | ನ್ನಾಳತನವನು ತೋರಲಾಯೆನುತುಬ್ಬಿದನು ಕರ್ಣ || ೧ || ಆಳ ಹೊಯ್ಯೋಯ್ಯನಾಯಕರ ಬರ | ಹೇಳು ಕೃಪಗುರುನಂದನಾದಿಗ | ಳೇಳಿ ನಿಮಗುತ್ಸವವ ತೋರುವೆ ನಿಮಿಷಮಾತ್ರದಲಿ || ಕಾಳಗದೊಳಿಂದಹಿತರಾಯರ | ಭಾಳಲಿಪಿಗಳನೊರಸುವೆನು ಭೂ | ಪಾಲಕನ ಮೊಗವಡೆದಮುಗುಡಿಪೆನುಗಿಯಹೇಳೆಂದ || ೨ || ಸೇನೆ ಮುರಿದುದು ಸಮರದಲಿ ವೃಷ | ಸೇನ ಮಡಿದನು ಕುರುಕುಲಕೆ ಕಡು | ಹಾನಿ ಹೊರೆಹೋಯಿತ್ತು ಪಾಂಡವವೀರರುಪಟಳಕೆ || ಆನಲಮ್ಮುವರಿಲ್ಲೆನುತ ದುಂ | ಮಾನದಲಿ ದಾತಾರನಿರಲಾ | ಭಾನುನಂದನನಾಹವಕೆ ಮುಂಕೊಂಡು ನಡೆತಂದ || ೩ || ತರಿಸಿ ಸಾದುಜವಾದಿಗಳ ಹೊಂ | ಭರಣಿಗಳ ಮೊಗೆಮೊಗೆದು ಶಲ್ಯಗೆ | ಸುರಿದು ಹಡಪಿಗಚಮರಛತ್ರಾಹಿಯಬಾಣವಾಯಕರ|| ಕರೆದು ಮನ್ನಿಸಿ ತನ್ನನತಿವಿ | ಸ್ತರಿಸಿ ಹೊಸಮಡಿವರ್ಗದಲಿ ಮಿಗೆ | ಮೆರೆದು ರಣಸುಮಹಾನದಲಿ ಹೊರೆಯೇರಿದನು ಕರ್ಣ || ೪ || ತೊಳಗಿಬೆಳಗಿದ ತಿರೆದಪಚ್ಚೆಯ | ಹಳಕವೆರಸಿದವೀಳೆಯವನಿ | ಕ್ಕಿಲದಶಲ್ಯಾದಿಗಳಿಗಿತ್ತನು ವರರಥಾಗ್ರದಲಿ || ಕಳಚಿ ತೆಗೆದನು ತೊಡವ ಮೈವ | ಗ್ಗಳಿಸಿ ದಳವೇರಿದುದು ಮದಮುಖ| ಥಳಥಳಿಸೆ ಹೊರೆಹೆಚ್ಚಿದನು ಬಹಳಪ್ರತಾಪದಲಿ ||೫|| ತಳಿತು ಮುತ್ತಿದಮುಗಿಲ ಝುಡಿಯ | ಝುಳಪಿಸುವರವಿಯಂತೆ ಭುವನವ | ಬೆಳಗಳುದ್ರೇಕಿಸುವೆಭರ್ಗನ ಫಾಳಶಿಖಿಯಂತೆ || ಹೊಳಹೊಳೆವಕರ್ಣಪ್ರತಾಪಾ | ನಳನ ಸಾಟ್ಯವ ಕಂಡು ಕೌರವ | ಬಲಧೊಳೆಉಸೆಗೆಯ ಲಗ್ಗೆ ಮಸಗಿತು ಕೇಳು ಧೃತರಾಷ್ಟ್ರ ||೬|| ರಾಯನನುಜರು ರುಧಿರಜೀವದ | ಬೀಯದಲಿ ಕರ್ಣಾತ್ಮಜನು ಕುಲಿ | ಶಾಯುಧನ ಸಾಲೋಕ್ಯದಲಿ ಕಂದೆರೆದವೇದನೆಯ || ಆಯಸವ ನೆರೆಮರೆದು ಕೌರವ | ರಾಯ ಭುಲ್ಲೈಸಿದನು ಲಹರಿಯ | ಗಾಯದಲಿ ಗಜಬಜಿಸಿದವು ನಿಸ್ಸಾಳಕೋಟಿಗಳು || ೭ || ಸಾರಿ ಸುಭಟರ ಜರವಕಹಳೆಯ | ಗೌರಿಡುಮತಿಂತಿಣಿಯ ಚಿನ್ನದ | ಚೀರುಗಳ ನಿಡುಗೊಂಬುಗಳ ನಾನಾ ಚನಿಘೋರ್ಷ || ಡೋರುಗಳೆದವು ನೆಲನನುಪಧಿಯ | ಕಾಸಿದವಡಿಮೊಳಲನೆನೆ ಹರಿ | ಯೇರಿತಬ್ಬರ ನಿಮ್ಮಬಲದಲಿ ನೃಪತಿ ಕೇಳೆಂದ || ೮ || ರಥವಿಳಿದು ಬಲವರಿದು ನಿಜಸಾ | ರಥಿಗೆ ಕೈಮುಗಿದಪ್ಪಚೆಯಕತಿ | ರಥಭಯಂಕರನೆರಗಿ ಕಂದವತಟ್ಟಿ ಬೋಳೈಸಿ || ರಥವನಡರಿದು ನೋಡಿ ಗಗನವ| ರಥಿಗೆ ತಲೆವಾಗಿದನು ಲೋಕ | ಪ್ರಥಿತಸಾಹಸಮಲ್ಲ ಮೊದಲಿ ತುಡುಕಿದನು ಧನುವ || ೯ || ಸರಳಹೊದೆಗಳ ತೀವಿ ಭಂಡಿಯ | ನರಸ ಕಳುಹಿದನೆಂಟುನೂರನು | ಚರರು ಪರಿವೇಷ್ಟಿಸಿತು ಪರಿಚಾರಕರು ವಿಗ್ರಹದ || ಸರಿಸಸಿಂಧವನತ್ತಿಸುತ ಬೊ | ಬ್ಬಿರಿದು ಜವನಿಗವೆರಸಿ ಭೀಮಸೆನೊ | ಸರನೊ ನಿಲುವವನಾರು ಬರಹೇಳೆಂದನಾಕರ್ಣ || ೧೦ || ಮಸಗಿ ತಪ್ಪಿತು ರಿಪುಗಳೈದರಿ | ಗೌತಣಿಸಿದೆನು ನೆರವಹರೆ ಪುರು | ಹೂತಶಿಖಿಯಮನಿರುತಿವರುಣಸಮೀರಹರಸಖರು || ಆತುಕೊಳಲಿಷ್ಟು

ಸುಧಾಕರಬುಧರು ಪಾರ್ಥನ । ಧುರಕೆ ಪಕ್ಷೀಕರಿಸಿದರು ಸಂಗ್ರಾಮಭೂಮಿಯಲಿ ॥ ತರಣಿತನಯನು ರಾಹುಕೇತುಗ । ಳಿರದೆ ಕುಜಶುಕ್ರಾದಿಗಳುಪತಿ । ಕರಿಸಿ ಕರ್ಣನ ಜಯದಬಯಕೆಯಲಿರ್ದುದಂಬರದಿ ॥ ೬ ॥ ವಿವಿಧರತ್ನಾವಳಿ ಮಹಾಂಬುಧಿ । ಯವರದೆಸೆ ರಾಜಾದ್ರಿಲೋಹ । ಪ್ರವರಧಾತುಗಳಾದುದಿತ್ತಲು ನಮ್ಮ ಥಟ್ಟಿನಲಿ ॥ ರವಿಶನೈಶ್ಚರರಾಹುಬುಧಭಾ । ರ್ಗವರು ಕರ್ಣನದೆಸೆಯಲೀಮಿಕ್ಕವರು ಕರ್ಣವಿಪಕ್ಷವಾದರು ಕೇಳು ಧೃತರಾಷ್ಟ್ರ ॥ ೭ ॥ ಆಸುಕಕರ್ಕೋಟಕನು ತಕ್ಷಕ । ವಾಸುಕಿಪ್ರಮುಖರಿಗೆ ವಿಜಯನಿವಾಸಿಕರ್ಣನಪಕ್ಷ ಪಾರ್ಥನಪಕ್ಷ ಫಣಿಗಳಿಗೆ ॥ ಆಸೆಕರ್ಣನಮೇಲೆ ಮೃಗತತಿ । ಕೇಸರಿಗಳಾಚೆಯಲಿ ಜಂಬುಕ। ಶಾಶ್ವಿತವ್ಯಾಳಾದಿಖಗಮೃಗವಿತ್ತಲಾಯ್ತೆಂದ ॥ ೮ ॥ ಭರತನಳನಹುಷಾದಿಭೂಮಿಶ । ಶ್ವರರು ಪಾರ್ಥನದೆಸೆಯು ಮಹಿಷಾ । ಸುರದಶಾನನತಾರಕಾದಿಗಳಾದುದೀಚೆಯಲಿ ॥ ಸುರಮುನಿಗಳಿಂದ್ರಾನಲಾಂತಕ । ವರುಣವಾಯುಮಹೀಶ ವಿದ್ಯಾ । ಧರರು ಪಾರ್ಥನಪಕ್ಷವಾಯಿತು ನೃಪತಿ ಕೇಳೆಂದ ॥ ೯ ॥ ಯಾತುಧಾನಕುಬೇರಕಿನ್ನರ । ಮಾತೃಗಣ ಕರ್ಣನಲಿ ಸುಮನೋ। ದೂತಚಿತ್ರರಥಾದಿಗಂಧರ್ವರು ವಿಪಕ್ಷದಲಿ ॥ ಭೂತಗಣವೀಚೆಯಲಿ ದಶದಿಗು । ಜಾತಮನುವಸುನಾರದಾದಿಮ । ಹಾತಪಸ್ವಿಗಳತ್ತಲಾಯಿತು ಕೇಳು ಧೃತರಾಷ್ಟ್ರ ॥ ೧೦ ॥ ಖ್ಯಾತಿತೇಜಸ್ತೋಮವೀರ । ಪ್ರೀತಿವಿಕ್ರಮಸತ್ಯಸಿದ್ಧಿವಿ । ಭೂತಿಶೌರ್ಯದಮಕ್ಷಮಾದಿಗಳಾದುದಾಚೆಯಲಿ ॥ ಭೀತಿಕಾಮಕ್ರೋಧಕವಿದು । ನಿರ್ನೀತಿಮದಮಾತ್ಸರ್ಯಲೋಭವಿ। ಘಾತಿವಿಭ್ರಮಕೈತವಾದಿಗಳಾದುದೀಚೆಯಲಿ ॥ ೧೧ ॥ ಭೃಗುವಸಿಷ್ಠಾಂಗಿರಸದಕ್ಷಾ । ದಿಗಳು ಪಾರ್ಥನಪಕ್ಷವಾಯ್ತಾ । ಚೆಗೆ ಪುಲಸ್ತ್ಯದಧೀಚಿವಿಶ್ವಾಮಿತ್ರಗೌತಮರು ॥ ಜಗದಜೀವರಧಾತುಮೂಲಾ। ದಿಗಳೊಳಿಕ್ಕಟ್ಟಾದುದೀಕಾಳಗಚತುರ್ದಶಭುವನಜನಸಂಕ್ಷೇಪವಾಯ್ತೆಂದ ॥ ೧೨ ॥ ನಾಕವಿವರಲಿ ಪಕ್ಷಪಾತವಿ । ದೇಕೆನೋಡೈ ನಿಮ್ಮಕರ್ಣನು । ಲೋಕವಿಖ್ಯಾತಪ್ರತಾಪನಲಾ ಮಹಾದೇವ ॥ ಅಕೃತತ್ರೇತೆಯಲಿ ಕಾದಿದ । ನೇಕದಿವಿಜಕ್ಷತ್ರದನುಜಾ । ನೀಕರಲಿ ಯಿಾಚಿತ್ರವಿಲ್ಲವನೀಶ ಕೇಳೆಂದ ॥ ೧೩ ॥ ಯಮುನೆ ಕರ್ಣನಪಕ್ಷ ಗಂಗಾ । ವಿಮಲನದಿ ಪಾರ್ಥಂಗೆ ಗೌರಿಯು । ಮಮತೆ ಕರ್ಣನಮೇಲೆ ಶಂಕರನೊಲುಮೆಪಾರ್ಥನಲಿ ॥ ದ್ಯುಮಣಿಕರ್ಣನ ಹೊಗಳಲಾಗಲೆ । ಸುಮನಪತಿ ಭಂಗಿಸಿದನಿಬ್ಬರು । ಸಮರಸಂನಾಹದಲಿ ನಿಂದಂದವನು ಕೇಳೆಂದ ॥ ೧೪ ॥ ಅರಸ ಕೇಳಾತಕ್ರಸೂರ್ಯರ । ಮರುಳತನವೋ ಮೇಣುಮತ್ಸರ್ಯ । ಚರಣೆಗಳನಾಟಕವೊ ಮೇಣ್ಸಾಂಸಾರಿಕಭ್ರಮೆಯೊ ॥ ನರನಲೇ ಲೋಕೈಕವೀರೋ । ತ್ತರನು ಮರುಳುಭಾಷೆಂಬಸಡಿಘಡ । ಸರಿಯೆ ಕರ್ಣಂಗೆಂಬಕಳಕಳ ಕೇಳಲಾಯ್ತೆಂದ ॥ ೧೫ ॥ ಈಪರಿಯೊಳೆರಡಿಟ್ಟಜಗದಾ । ಳಾಪವನು ಕರ್ಣಾರ್ಜುನರಪ । ಕ್ಷೋಪಚಾರಪ್ರಕಟಕಲಹಕಠೋರಕೆಳಕಳದ ॥ ಆಪುರಂದರಕಮಲಸಖರಾ । ಟೋಪವನು ಭುವನೋಪಘಾತವ । ನಾಪಿತಾಮಹನರಿದು ಸಂತೈಸಿದನು ಸಾಮದಲಿ ॥ ೧೬ ॥ ಅರಸ ಚಿತ್ತೈಸುಭಯಬಲದು । ಬ್ಬರದ ಬಹುವಿಧವಾದ್ಯರವಗ । ಬ್ಬರಿಸಿದುದು ಮಿಗೆ ಪಾಠಕರ ನಿರ್ವಾಹನಿರ್ಘೋಷ ॥ ಸುರರಿಕಳಕಳವೀಧ್ವನಿಯಲು । ತ್ತರಿಸಿತೀಬಲುಗಜಬಜವನೆಡ । ತರದಲಿಕ್ಕಿತು ಕರ್ಣಪಾರ್ಥರ ಚಾಪಟಂಕಾರ ॥ ೧೭ ॥ ಆಳವಿಯುಂಕೆಯವಿಾರಿರಥಗಳು । ಹಳಚಿದವು ಭೂಮಾನದಲಿ ವೆ । ಗ್ಗಳಿಸಿದವು ವೇಗಾಯ್ಲುವಾಜಿಯು ಳಳಿಯ ಲಹರಿಯಲಿ ॥ ಹೊಳೆದವೆಡಬಲ ವಾಘೆಸಂನೆಯು । ಸುಳಿವಸೂತರ ಟ

ವರಭಂಗಿಯು। ಉಳಿಯಸುಭಟರರೇಖೆ ಸೆಳೆದುದು ಜನದ ಕಣುಮನವ ॥ ೧೮ ॥ ಉಪ್ಪಳಿಸಿ ಸುಳಿಯೆ ದ್ದುಸೂತರ । ಚಪ್ಪರಣೆಗಳ ಮೀರಿ ಖುರದಲಿ । ಖೊಪ್ಪರಿಸಿ ಹೊಯ್ದಾಡಿದವು ಹಲ್ಲಣೆಯಹೇಷಿತದ ॥ ದರ್ಪದಲಿ ತೇಜಿಗಳು ತೇಜಿಯ। ತಪ್ಪಡಿಯನಳವಡಿಸಿದವು ರಣ । ವೊಪ್ಪಿತೈ ಕರ್ಣಾರ್ಜುನರ ರಥರಥದ ವಾಜಿಗಳ ॥ ೧೯ ॥ ಅರಸ ಕೇಳೇನೆಂಬೆನೈ ಕಪಿ । ವರನ ಕೋಳಾಹಲದ ಕದನವ । ಕರೆದು ನಖದಲಿ ಕೆರೆದು ಕರದಲಿ ಕಾದಿದಂದದಲಿ ॥ ಮುರಿದು ಬಾಲವನಡಿಗಡಿಗೆ ಬೊ । ಬ್ಬಿರಿದು ಹೆಣಗಿದನಿನಸುತನ ಭಾ । ಸುರದ ಹೇಮಧ್ವಜದ ಹಲಿಗೆಯ ಹಸ್ತಿಕಾಗ್ರದಲಿ ॥ ೨೦ ॥ ಏನಹೇಳುವೆ ಸೂತತನದಭಿ। ಮಾನವೇರಿದಪರಿಯನಾವೇ । ಷಾನುರೂಪವಿಚೇಷ್ಟಕನ ಲೋಕೈಕಚೇಷ್ಟಕನ ॥ ನೀನೆನಗೆ ಸಾರಥಿಯತನದಿಸ । ಮಾನವೇ ಘಡ ತುರಗಹೃದಯ । ಜ್ಞಾನ ನಿನಗೇಕೆನುತ ಶಲ್ಯನಜರೆದನಸುರಾರಿ ॥ ೨೧ ॥ ಅಕಟ ಗೋರಕ್ಷಕನೆ ಪಶುಪಾ । ಲಕರಮಕ್ಕಳೊಳಶ್ವಹೃದಯ । ಪ್ರಕಟವಿಜ್ಞಾನಂಗಳುದಿಸಿದವೇ ವಿಶೇಷವಲಾ ॥ವಿಕಳರಾವಿದನೆತ್ತಬಲ್ಲೆವು । ಸಕಲ ನೀ ಸರ್ವಜ್ಞ ನಿನಗೀ । ಬಕವಿಡಂಬನವೇಕೆನುತ ಜರೆದನು ಮುರಾಂತಕನ ॥ ೨೨ ॥ ಪೂತನಿಯ ನೆರೆ ಮಡುಹಿ ಶಕಟನ । ನಾತತುಕ್ಷಣ ಕೆಡಹಿ ತೇಜಿಯ । ಭೀತಿಗೊಳಿಸಿ ಬಕಾಸುರನ ಭಾಳಾಕ್ಷರವ ತೊಡೆದು॥ನೀ ತವಕದಲಿ ನಮ್ಮ ಜರಿದೊಡೆ । ಸೋತೆವೇ ನಾವ್ಮಾತಿದಲಿ ಘಡ । ಸೂತತನ ನಿನಗೇಕೆನುತ ಜರೆದನು ಮುರಾಂತಕನ ॥ ೨೩ ॥ ಧಾರಿಣೀಪತಿಕೇಳು ಬಿಲುಟಂ । ಕಾರಕದನೋಪಕ್ರಮದೊಳೋಂ । ಕಾರವಾದುದು ಕಾರ್ಮುಕಸ್ವಾಧ್ಯಾಯವಿಸ್ತರಕೆ ॥ ಭೂರಿಬಹುವಿಧಬಾಣಗರ್ತವಿ । ಹಾರರೆಸೆದರು ಕರ್ಣಪಾರ್ಥರು । ದಾರಸಮರಾರಂಭವಳ್ಳಿರಿದವು ಜಗತ್ರಯವ ॥ ೨೪ ॥ ಸೂತಜಾತಿಯಲೀಧನುರ್ವೇ । ದಾತಿಶಯವೆಂತಾಯ್ತು ಪಾರ್ಥಿವ । ಜಾತಿಯಧ್ಯಾಪನವಿಧಾನನಿಯೋಗವಾವನದೊ ॥ ಭೂತು ಮಝುರೇ ಸೈರಿಸಾದರೆ । ಸೂತನಂದನ ಯೆನುತ ಬಾಣ । ವ್ರಾತದಲಿ ಹೊದಿಸಿದನು ಕರ್ಣನ ರಥವನಾಪಾರ್ಥ ॥ ೨೫ ॥ ಅರೆಗಡಿದನಾಕ್ಷಣದಲಾತನ । ಸರಳನೆಲವೋಪಾರ್ಥ ನಿಮ್ಮೈ । ವರಿಗೆ ಜನಕನೆ ಪಾಂಡುವೀವರರಮನೆಗೆ ಯೋಗ್ಯನಲಾ ॥ ಧರೆಯೊಳಗ್ಗದರಾಜಸೂಯಾ । ಧ್ವರಕೆ ಪ್ರತಿಗ್ರಯಾಗೆಯಜಮಾ । ನರುಗಳೇ ನೀವೇನ ಹೇಳುವೆನೆನುತ ತೆಗೆದೆಚ್ಚ ॥ ೨೬ ॥ ಆತನೆಚ್ಚಶರೌಘವನು ಕಡಿ । ದೀತ ನುಡಿದನು ಹೊಕ್ಕುವಾತಿನ । ಪೋತುದರಿಹಿಗಳವೆರುಪಾಧ್ಯರು ನಾವು ಸೂಳೆಯರೆ ॥ ಏತಕೀಬಳೆ ಕೈಗೆ ಬಿಲು ಹಿಣಿ । ಲೇತಕೀಚೊಲ್ಲೆಯಕೆ ಚಲ್ಲಣ। ವೇತಕೀಹೆಣ್ಣುಡಿಗೆಯೆನುತೆಚ್ಚನು ಧನಂಜಯನ ॥ ೨೭ ॥ ಸೂಳೆಯರುಗಡ ಸಾಮಗಾನವ। ನಾಳಿಗೊಂಬರುಗಡ ದಿನೇತನ । ಮೇಳವನು ಮುದಿಗೂಗೆ ಮೆಚ್ಚುದು ಹಾಮಹಾದೇವ ॥ ಆಳುತನದಂಗವಣೆಯುಂಟೇ । ಬೋಳೆಯಂಬುಗಳಾಡಲವಬಿಡು। ಚಾಳುನುಡಿಗಳ ಸವಡಿವಾತನೆನುತ್ತ ತೆಗೆದೆಚ್ಚ॥೨೮॥ ಕಾಣಿಸಿದನೈ ಕೌರವನ ಹರಿ । ವಾಣದಾಯುದಹಂತಿಕಾರನು । ಕೇಣಿಗೊಂಡನು ನಮ್ಮ ಚರಿತಕೆ ಹಾಮಹಾದೇವ ॥ ಜಾಣತನವೊಳ್ಳೆಯದು ಧರ್ಮಜ । ನಾಣೆ ಬಲ್ಲೆನು ದಿಟವೆನುತ ಬಲು । ಸಾಣೆಯಲಗಿನ ಸರಿಯ ಸುರಿದನು ಸವರಿ ರಿಪುಶರವ ॥೨೯॥ ರಾಯತನದಲಿ ಬೆರೆತು ರಾಜ್ಯ । ಶ್ರೀಯ ನೆರೆ ಹೆಡೋಗಾಡಿಪರಿಗೆ । ಜೀಯಬೆಸಸುವುದೆಂದು ಜೀವಿಸುವವರುನಾವಲ್ಲ ॥ ರಾಯತನ ನಮಗಿಲ್ಲ ಕೌರವ । ರಾಯ ನೋಲೆಯಕಾರರಹವೆಂ । ಮಾಯತವುತಾಬೇರೆನುತ ದೆಗದೆಚ್ಚನಾಕರ್ಣ ॥ ೩೦ ॥ ಆವೆಹಂಜರಗೋ

ಸುಧಾಕರಬುಧರು ಪಾರ್ಥನ । ಧುರಕೆ ಪಕ್ಷೀಕರಿಸಿದರು ಸಂಗ್ರಾಮಭೂಮಿಯಲಿ ॥ ತರಣಿತನುಜನು ರಾಹುಕೇತುಗ । ಳಿರದೆ ಕುಜಶುಕ್ರಾದಿಗಳುಪತಿ । ಕರಿಸಿ ಕರ್ಣನ ಜಯದಬಯಕೆಯಲಿರ್ದರಂಬರದಿ ॥ ೬ ॥ ವಿವಿಧರತ್ನಾವಳಿ ಮಹಾಂಬುಧಿ । ಯುವರದೆಸೆ ರಾಜಾದ್ರಿಲೋಹ । ಪ್ರವರಧಾತುಗಳಾದುದಿತ್ತಲು ನಮ್ಮ ಥಟ್ಟಿನಲಿ ॥ ರವಿಶನೈಶ್ಚರರಾಹುಬುಧಭಾ । ರ್ಗವರು ಕರ್ಣನದೆಸೆಯಲೀವಿಕ್ಕವರು ಕರ್ಣವಿಪಕ್ಷವಾದರು ಕೇಳು ಧೃತರಾಷ್ಟ್ರ ॥ ೭ ॥ ಆಸುಕಕರ್ಕೋಟಕನು ತಕ್ಷಕ । ವಾಸುಕಿಪ್ರಮುಖರಿಗೆ ವಿಜಯನಿವಾಸಿಕರ್ಣನಪಕ್ಷ ಪಾರ್ಥನಪಕ್ಷ ಫಣಿಗಳಿಗೆ ॥ ಆಸೆಕರ್ಣನಮೇಲೆ ಮೃಗತತಿ । ಕೇಸರಿಗಳಾಚೆಯಲಿ ಜಂಬುಕ । ಶಾಶ್ವಿತವ್ಯಾಳಾದಿಖಗಮೃಗವಿತ್ತಲಾಯ್ತೆಂದ ॥ ೮ ॥ ಭರತನಳನಹುಷಾದಿಭೂಮೀ । ಶ್ವರರು ಪಾರ್ಥನದೆಸೆಯ ಮಹಿಷಾ । ಸುರವಶಾನನತಾರಕಾದಿಗಳಾದುದೀಚೆಯಲಿ ॥ ಸುರಮುನಿಗಳಿಂದ್ರಾನಲಾಂತಕ । ವರುಣವಾಯುಮಹೇಶ ವಿದ್ಯಾ । ಧರರು ಪಾರ್ಥನಪಕ್ಷವಾಯಿತು ನೃಪತಿ ಕೇಳೆಂದ ॥ ೯ ॥ ಯಾತುಧಾನಕುಬೇರಕಿನ್ನರ । ಮಾತೃಗಣ ಕರ್ಣನಲಿ ಸುಮನೋ । ದೂತಚಿತ್ರರಥಾದಿಗಂಧರ್ವರು ವಿಪಕ್ಷದಲಿ ॥ ಭೂತಗಣವೀಚೆಯಲಿ ದಶದಿಗು । ಜಾತಮನುವಸುನಾರದಾದಿಮ । ಹಾತಪಸ್ವಿಗಳತ್ತಲಾಯಿತು ಕೇಳು ಧೃತರಾಷ್ಟ್ರ ॥ ೧೦ ॥ ಖ್ಯಾತಿತೇಜಸ್ತೋಮವೀರ । ಪ್ರೀತಿವಿಕ್ರಮಸತ್ಯಸಿದ್ಧಿವಿ । ಭೂತಿಶೌರ್ಯದಮಕ್ಷಮಾದಿಗಳಾದುದಾಚೆಯಲಿ ॥ ಭೀತಿಕಾಮಕ್ರೋಧಕವಿದು । ರ್ನೀತಿಮದಮಾತ್ಸರ್ಯಲೋಭವಿ । ಘಾತಿವಿಭ್ರಮಕೈತವಾದಿಗಳಾದುದೀಚೆಯಲಿ ॥ ೧೧ ॥ ಭೃಗುವಸಿಷ್ಠಾಂಗಿರಸದಕ್ಷಾ । ದಿಗಳು ಪಾರ್ಥನಪಕ್ಷವಾಯ್ತಾ । ಚೆಗೆ ಪುಲಸ್ತ್ಯದಧೀಚಿವಿಶ್ವಾಮಿತ್ರಗೌತಮರು ॥ ಜಗದಜೀವರಧಾತುಮೂಲಾ । ದಿಗಳೊಳಿಕ್ಕಟ್ಟಾದುದೀಕಾ । ಳಗಚತುರ್ದಶಭುವನಜನಸಂಕ್ಷೇಪವಾಯ್ತೆಂದ ॥ ೧೨ ॥ ನಾಕವಿವರಲಿ ಪಕ್ಷಪಾತವಿ । ದೇಕೆನೋಡ್ಯೈ ನಿಮ್ಮ ಕರ್ಣನು । ಲೋಕವಿಖ್ಯಾತಪ್ರತಾಪನಲಾ ಮಹಾದೇವ ॥ ಅಕೃತತ್ರೇತೆಯಲಿ ಕಾದಿದ । ನೇಕದಿವಿಜಕ್ಷತ್ರದನುಜಾ । ನೀಕರಲಿಯೀಚಿತ್ರವಿಲ್ಲವನೀಶ ಕೇಳೆಂದ ॥ ೧೩ ॥ ಯಮುನೆ ಕರ್ಣನಪಕ್ಷ ಗಂಗಾ । ವಿಮಲನದಿ ಪಾರ್ಥಂಗೆ ಗೌರಿಯು । ಮಮತೆ ಕರ್ಣನಮೇಲೆ ಶಂಕರನೊಲುಮೆಪಾರ್ಥನಲಿ ॥ ದ್ಯುಮಣಿಕರ್ಣನ ಹೊಗಳಲಾಗಲೆ । ಸುಮನಪತಿ ಭಂಗಿಸಿದನಿಬ್ಬರು । ಸಮರಸಂನಾಹದಲಿ ನಿಂದಂದವನು ಕೇಳೆಂದ ॥ ೧೪ ॥ ಅರಸಕೇಳಾಶಕ್ರಸೂರ್ಯರ । ಮರುಳತನವೋ ಮೇಣುಮತ್ಸರ । ಚರಣೆಗಳನಾಟಕವೊ ಮೇಣ್ಸಂಸಾರಿಕಭ್ರಮೆಯೊ ॥ ನರನಲೇ ಲೋಕೈಕವೀರರೋ । ತ್ತರನು ಮಝುಭಾಪೆಂಬಸಡಿಫಡ । ಸರಿಯೆ ಕರ್ಣಂಗೆಂಬಕಳಕಳ ಕೇಳಲಾಯ್ತೆಂದ ॥ ೧೫ ॥ ಈಪರಿಯೊಳೆರಡಟ್ಟಜಗಡಾ । ಳಾಪವನು ಕರ್ಣಾರ್ಜುನರಪ । ಕ್ಷೋಪಚಾರಪ್ರಕಟಕಲಹಕಠೋರಕಳಕಳದ ॥ ಆಪುರಂದರಕಮಲಸಖರಾ । ಟೋಪವನು ಭುವನೋಪಘಾತವ । ನಾಪಿತಾಮಹನರಿದು ಸಂತೈಸಿದನು ಸಾಮದಲಿ ॥ ೧೬ ॥ ಅರಸ ಚಿತ್ತೈಸುಭಯಬಲದು । ಬ್ಬರದ ಬಹುವಿಧವಾದ್ಯರವಗ । ಬ್ಬರಿಸಿದುದು ಮಿಗೆ ಪಾಠಕರ ನಿರ್ವಾಹನಿರ್ಘೋಷ ॥ ಸುರರಕಳಕಳವೀಧ್ವನಿಯಲು । ತ್ತರಿಸಿತೀಬಲುಗಜಬಜವನೆಡ । ತರದಲಿಕ್ಕಿತು ಕರ್ಣಪಾರ್ಥರ ಚಾಪಟಂಕಾರ ॥ ೧೭ ॥ ಅಳವಿಯಂಕೆಯಮೀರಿರಥಗಳು । ಹಳಚಿದವು ಭೂಮಾನದಲಿ ವೆ । ಗ್ಗಳಿಸಿದವು ವೇಗಾಯ್ಲವಾಜಿಯ ಉಳಿಯ ಲಹಲಿಯಲಿ ॥ ಹೊಳೆದವೆಡಬಲ ವಾಘೆಸಂನೆಯ । ಸುಳಿವಸೂತರ ಟ

ವರಭಂಗಿಯು। ಉಳಿಯಸುಭಟರರೇಖೆ ಸೆಳೆದುದು ಜನದ ಕಣ್ಣುಮನವ ॥ ೧೮ ॥ ಉಪ್ಪಳಿಸಿ ಸುಳಿಯೆ ದ್ದುಸೂತರ । ಚಪ್ಪರಣೆಗಳ ವಿಾರಿ ಖುರದಲಿ । ಖೊಪ್ಪರಿಸಿ ಹೊಯ್ದಾಡಿದವು ಹಲ್ಲಣೆಯಹೇಷಿತದ । ದರ್ಪದಲಿ ತೇಜಿಗಳು ತೇಜಿಯು। ತಪ್ಪಡಿಯನಳವಡಿಸಿದವು ರಣ । ವೊಪ್ಪಿತ್ತೈ ಕರ್ಣಾರ್ಜುನರ ರಥರಥದ ವಾಜಿಗಳ ॥ ೧೯ ॥ ಅರಸ ಕೇಳೇನೆಂಬೆನೈ ಕಪಿ । ವರನ ಕೋಳಾಹಲದ ಕದನವ । ಕರೆದು ನಖದಲಿ ಕೆರೆದು ಕರದಲಿ ಕಾದಿದಂದದಲಿ ॥ ಮುರಿದು ಬಾಲವನಡಿಗಡಿಗೆ ಬೊ । ಬ್ಬಿರಿದು ಹಣಗಿದನಿನಸುತನ ಭಾ । ಸುರದ ಹೇಮಧ್ವಜದ ಹಲಿಗೆಯ ಹಸ್ತಿಕಾಗ್ರದಲಿ ॥ ೨೦ ॥ ಏನಹೇಳುವೆ ಸೂತತನದಭಿ। ಮಾನವೇರಿದಪರಿಯನಾವೇ । ಷಾನುರೂಪವಿಚೇಷ್ಟಕನ ಲೋಕೈಕಚೇಷ್ಟಕನ ॥ ನೀನೆನಗೆ ಸಾರಥಿಯತನದಿಸ । ಮಾನವೇ ಘಡ ತುರಗಹೃದಯು । ಜ್ಞಾನ ನಿನಗೇಕೆನುತ ಶಲ್ಯನಜರೆದನಸುರಾರಿ ॥ ೨೧ ॥ ಅಕಟ ಗೋರಕ್ಷಕನೆ ಪಶುಪಾ । ಲಕರಮಕ್ಕಳೊಳಶ್ವಹೃದಯು । ಪ್ರಕಟವಿಜ್ಞಾನಂಗಳುದಿಸಿದವೇ ವಿಶೇಷವಲಾ ॥ವಿಕಳರಾವಿದನೆತ್ತಬಲ್ಲೆವು । ಸಕಲ ನೀ ಸರ್ವಜ್ಞ ನಿನಗೀ । ಬಕವಿಡಂಬನವೇಕೆನುತ ಜರೆದನು ಮುರಾಂತಕನ ॥ ೨೨ ॥ ಘೂತನಿಯ ನೆರೆ ಮಡುಹಿ ಶಕಟನ । ನಾತತುಕ್ಷಣ ಕೆಡಹಿ ತೇಜಿಯು । ಭೀತಿಗೊಳಿಸಿ ಬಕಾಸುರನ ಭಾಳಾಕ್ಷರವ ತೊಡೆದು॥ನೀ ತವಕದಲಿ ನಮ್ಮಜರಿದೊಡೆ । ಸೋತೆವೇ ನಾವ್ಮಾತಿದಲಿ ಘಡ । ಸೂತತನ ನಿನಗೇಕೆನುತ ಜರೆದನು ಮುರಾಂತಕನ ॥ ೨೩ ॥ ಧಾರಿಣೀಪತಿಕೇಳು ಬಿಲುಂಟಂ । ಕಾರಕದನೋಪಕ್ರಮದೊಳೋಂ । ಕಾರವಾದುದು ಕಾರ್ಮುಕಸ್ವಾಧ್ಯಾಯವಿಸ್ತರಕೆ ॥ ಭೂರಿಬಹುವಿಧಬಾಣಗರ್ತವಿ । ಹಾರರೆಸೆದರು ಕರ್ಣಪಾರ್ಥರು । ದಾರಸಮರಾರಂಭವಳ್ಳಿರಿದವು ಜಗತ್ರಯವ ॥ ೨೪ ॥ ಸೂತಜಾತಿಯಲೀಧನುರ್ವೇ । ದಾತಿಶಯವೆಂತಾಯ್ತು ಪಾರ್ಥಿವ । ಜಾತಿಯಧ್ಯಾಪನವಿಧಾನನಿಯೋಗವಾವನದೊ ॥ ಘೂತು ಮಝರೇ ಸೈರಿಸಾದರೆ । ಸೂತನಂದನ ಯೆನುತ ಬಾಣ । ವ್ರಾತದಲಿ ಹೊದಿಸಿದನು ಕರ್ಣನ ರಥವನಾಪಾರ್ಥ ॥ ೨೫ ॥ ಅರೆಗಡಿದನಾಕ್ಷಣದಲಾತನ । ಸರಳನೆಲವೋಪಾರ್ಥ ನಿಮ್ಮೈ । ವರಿಗೆ ಜನಕನೆ ಪಾಂಡುವೀವರರವುನೆಗೆ ಯೋಗ್ಯನಲಾ ॥ ಧರೆಯೊಳಗ್ಗದರಾಜಸೂಯಾ । ಧ್ವರಕೆ ಪ್ರತಿಗ್ರಯಾಗೆಯಜಮಾ । ನರುಗಳೇ ನೀವೇನ ಹೇಳುವೆನೆನುತ ತೆಗೆದೆಚ್ಚ ॥ ೨೬ ॥ ಆತನೆಚ್ಚಶರೌಘವನು ಕಡಿ । ದೀತ ನುಡಿದನು ಹೊಳ್ಳುವಾತಿನ । ಪೋತುದರಿಹಿಗಳವರುಪಾಧ್ಯರು ನಾವು ಸೂಳೆಯರೆ ॥ ಏತಕೇಬಳೆ ಕೈಗೆ ಬಿಲು ಹಿಣಿ । ಲೇತಕೀಚೊಲ್ಲೆಯಕೆ ಚೆಲ್ಲಣ। ವೇತಕೀಹಣ್ಣುಡಿಗೆಯೆನುತೆಚ್ಚನು ಧನಂಜಯನ ॥ ೨೭ ॥ ಸೂಳೆಯರುಗಡ ಸಾಮಗಾನವ। ನಾಳಿಗೊಂಬರುಗಡ ದಿನೇಶನ । ಮೇಳವನು ಮುದಿಗೂಗೆ ಮೆಚ್ಚದು ಹಾಮಹಾದೇವ ॥ ಆಳುತನದಂಗವಣೆಯುಂಟೀ । ಬೋಳೆಯಂಬುಗಳಾಡಲವಬಿಡು। ಜಾಳುನುಡಿಗಳ ಸವಡಿವಾತನೆನುತ್ತ ತೆಗೆದೆಚ್ಚ॥೨೮॥ ಕಾಣಿಸಿದನ್ಮೈ ಕೌರವನ ಹರಿ । ವಾಣದಾಯದಹಂತಿಕಾರನು । ಕೇಣಿಗೊಂಡನು ನಮ್ಮಚರಿತಕೆ ಹಾಮಹಾದೇವ ॥ ಜಾಣತನವ್ರೊಳ್ಳೆಯದು ಧರ್ಮಜ । ನಾಣೆ ಬಲ್ಲೆನು ದಿಟವೆನುತ ಬಲು । ಸಾಣೆಯುಳಗಿನ ಸರಿಯ ಸುರಿದನು ಸವರಿ ರಿಪುಶರವ ॥೨೯॥ ರಾಯತನದಲಿ ಬೆರೆತು ರಾಜ್ಯ । ಶ್ರೀಯ ನೆರೆ ಹೊಗಿಡಿಪರರಿಗೆ । ಜೀಯಬೆಸಸುವುದೆಂದು ಜೀವಿಸುವವರುನಾವಲ್ಲ ॥ ರಾಯತನ ನವುಗಿಲ್ಲ ಕೌರವ । ರಾಯನೋಲೆಯಕೌರರಹವೆಂ । ಮಾಯತವೃತಾಬೇರೆನುತ ದೆಗದೆಚ್ಚನಾಕರ್ಣ ॥ ೩೦ ॥ ಆವಹಂಜರಗ

ಮೊಗವೆಲೆ । ಗಾವಗಾಲಕೆ ಬೀಸುವೆಲೆಗಳ । ಶೀವಿದುದಕದಮಡುವೆಯಿದು ಸಂಗ್ರಾಮಭೂಮಿ ಸಾವು ನಿಮ್ಮಯ ಹೃದಯಸರಸಿಯು । ಜೀವಮತ್ಸ್ಯಕೆ ಗಾಳವಿಕ್ಕುವ । ಧೀವರರು ನೋಡೆನುತ ೯ ನನೆಚ್ಚನಾಪಾರ್ಥ ॥ ೩೧ ॥ ಬೇರೆ ಕೆಲವಂಬುಗಳುಗಡ ವೈ । ದೋರಿದವು ನಿನಗೆಂಬವರದನಿ । ತೇ ರಿಸಾ ನಿನಗಾಯ್ತುಗಡ ಶಶಿಮೌಳಿಯುಪದೇಶ ॥ ಹಾರಗಣಿಗಳ ಹವಹಿ ಹೆಮ್ಮೆಗೆ । ಬೇರೆ ಚತುರಿ ತನವ ಮೆರೆದೊಡೆ॥ ಧೀರನೆಂಬರೆ ನಿನ್ನನೆನುತೆಚ್ಚನು ಧನಂಜಯನ ॥ ೩೨ ॥ ಮೊಲನಬೇಟೆಗೆ ತಿವಿದು ಹಾಸವ । ಕಳೆಚುವರೆ ಕೇಸರಿಯನಕಟಾ। ಕೊಳಚೆಯುದಕಕೆ ಕೊಂಬರೇ ಹರಿಗೋಲಬಾಡಿಗೆಯ॥ ಗಳ ಹತನವೇ ಹರನಬಾಣಾ । ವಳಿಗೆ ಗುರಿಯೇ ನೀನೆನುತ ಕೈ । ಚಳಕದಲಿರಿಪುಶರವ ಖಂಡಿಸಿ ತುಳುಕಿದ ನು ಸರಳ ॥ ೩೩ ॥ ಡೊಂಬಿದೇಕೈ ಪಾರ್ಥ ಬಯಲಾ । ಡಂಬರವನಾವರಿಯೆ ಪೇ ತ್ರ್ಯ। ಯ್ಯಂಬಕಾಸ್ತ್ರನ ತೊಡಹವಲ್ಲಾ ನಿನ್ನವಿಕ್ರಮಕೆ ॥ ಶಂಬರಾರಿಯ ಸರಳವೊಲು ನಿ । ನ್ನಂಬುಬಲ್ಲಿಹವೆಂದು ಕೆಲಡವ । ರೆಂಬರ್ಕೆ ಹುಸಿಯೆನುತ ಶರತತಿಯನ್ನು ಖಂಡಿಸಿದ ॥೩೪॥ ಲೇಸನಾಡಿದೆ ಕರ್ಣ ತಾ ಬಳಿ । ಕೈಸುಖೂಳನೆ ನಿನ್ನವಂದಿಗ । ವೇಷವಧುಗಳನುಗಿವೊಡಿವುಮದನಾಸ್ತ್ರವೇಕಲ್ಲ ॥ ಈಶರಾವಳಿಕುಸುಮಶರನೀ । ವೇಷವನಿತಾಮಯನು ಪುಷ್ಪಶ । ರಾಸನನು ತಾನೆನುತ ಕರ್ಣನನೆಚ್ಚನಾಪಾರ್ಥ ॥೩೫॥ ಗಂಡುಗಲಿ ನೀ ಕಾಮನೇಕೈ । ಕೊಂಡೆವೈ ತಪ್ಪೇನು ನಾವೇ । ಖಂಡಪರಶುಗಳಾದೆವೈ ಭವದೀಯವಿಕ್ರಮಕೆ ॥ ಕಂಡೆನಿನ್ನನು ಸುಭಟವೇಷದ । ಭಂಡನೋ ಫಡಹೋಗೆನುತ ಪರಿ । ಮಂಡಳಿತಕೋದಂಡ ನೆಚ್ಚನು ಕರ್ಣನರ್ಜುನನ ॥ ೩೬ ॥ ನಿಮಿಷನಿಮಿಷಕೆ ಹೆಚ್ಚಿತಿಬ್ಬರ। ತಿಮಿರಮಯಘನರೋಷವಿಬ್ಬರ। ಸಮರಸಾಧನಕಾರ್ಯವಿಬ್ಬರಕಣೆಯ ಕೈಚಳಕ ॥ ಶ್ರಮನಿಧಾನವ್ಯಾಪ್ತಿ ಯಿಬ್ಬರ । ಸಮತೆ ಯಿಬ್ಬರ ಗಾಢವಿಬ್ಬರ । ಗಮಕವಿಬ್ಬರಗರ್ವವಿಬ್ಬರತೀವ್ರತರತೇಜ ॥ ೩೭ ॥ ಜನಪ ಕೇಳೈ ಬಳಿಕ ಕರ್ಣಾ । ರ್ಜುನರ ಬಲುಸಂಗ್ರಾಮವನು ಗುರು । ತನುಜ ಕಂಡನು ಕೌರವೇಂದ್ರನ ಬಳಿಗೆ ನಡೆತರಲು ॥ ತನತನಗೆ ತೊಲಗಿತು ಮಹೀಶನ । ಮೊನೆಯ ಸಮರಥರಾಗ ಗುರುನಂ । ದನನಲಾ ಯೆನುತಿದಿರುಬಂದನು ನಿನ್ನ ಮಗ ನಗುತ ॥ ೩೮ ॥ ಏನುಬಂದಿರಿ ಕಾಳಗದಹದ । ನೇನು ಪಾಂಡವರಾಜತಿಮಿರಕೆ । ಭಾನುವೋ ಭಾರಣೆಯಬಲುಹೋ ನಿಮ್ಮದಳಪತಿಯ ॥ ಏನುಹದನೈ ಪಾರ್ಥನೀತನ । ನಾನಲಳವೇ ರಾಜಕಾರ್ಯವಿ । ಧಾನವೇನೆಂದರಸ ನುಡಿದನು ದ್ರೋಣನಂದನನ ॥ ೩೯ ॥ ಏನನೆಂಬೆನು ಜೀಯ ಕರ್ಣನ । ನಾನುವೊಡೆ ಫಲುಗುಣನ ಪಾಡೆ ಕೈ । ಶಾನುನೇತ್ರನೊ ಕೈಟಭಾರಿಯೊ ಕಮಲಸಂಭವನೋ॥ಆನಿರೊಧಿಯಘೊರೆಗಳಿವನ ಸ । ಮಾನರೇ ಧುರದಲಿ ಸಮುತ್ಸರ । ಮಾನಿಸನೆ ನಿನ್ನಾಣೆ ಭಾರವ್ಯಾಜನಾಕೆಂದ ॥ ೪೦ ॥ ಹರಿಮಹೇಶ್ವರರಾಳುತನಕೆ । ಬೈರಳು ಮಿಗಿಲರ್ಜುನನಬಲುಹೀ । ಧರೆಯರಿಯಲೀಹೊತ್ತಿನಲಿ ನಿನ್ನಾತನಗ್ಗಳಿಕೆ ॥ ಸರಿಗೆ ಸಂದುದು ಸಾಕು ತೂಗಿದೊ । ಡರಸರವೆಗುಂದದುಪರಸ್ಪರ। ವರಸ ಕಾರ್ಯದವಾಸಿ ಬಂದುದು ರಾಯ ಕೇಳೆಂದ ॥ ೪೧ ॥ ಒವ್ಮೆ ಮುರಿವುದು ನಮ್ಮಬಲ ಮ । ತ್ತೊಮ್ಮೆ ಮುರಿವುದು ವೈರಿಬಲ ಮ । ತ್ತೊಮ್ಮೆ ಮಕ್ಕಳತಂಡವವರಲಿ ನಮ್ಮ ಥಟ್ಟಿನಲಿ ॥ ನಮ್ಮದಸಬಲುಡೂರೆಗಳಳಿ ವಿನೊ । ಳವ್ಮಿಹೋಯಿತು ಹೊತ್ತು ರಣದೊಳು । ನಿಮ್ಮ ವಿಲಸಕೆ ಮೇಲವಾಸಿ ನೃಪಾಲ ಕೇಳೆಂದ ॥ ೪೨ ॥ ಸಂಗಳವೆನರಡಂಕೆವೆನು ತಾ । ಕೆರಿಸಿಕೊಡುವೆನು ಧರ್ಮಜನನೆರ।

ವರ್ಗಗಳು ಸರಿಯಾಗಿ ಭೋಗಿಸುವುದು ಮಹೀತಲವ ॥ ಅರಸ ಕರ್ಣನ ಕೆಡಿಸದಿರು ನಿ। ಷ್ಠುರದ ಸು ದ್ಧಿದು ಕೆಂಡದಲಿ ಕ । ರ್ಪುರವ ಹಾಕದಿರೆಂದು ರಾಯನ ಗಲ್ಲವನು ಹಿಡಿದ ॥ ೪೩ ॥ ಆಗಲದು ತ ನು ಸಂಪ್ರತಿ । ಯಾಗಬೇಡೆನ್ನನು ಮಹಾಹವ। ವೇಗ ಸರಿಬರಿಯಸಾಯ್ತು ಬಂದುದು ವಾಸಿಯೆಂ ರಲೆ ॥ ಈಗಲಭಿಮನ್ಯುವಿಗೆ ಲಕ್ಷಣ । ಹೋಗಲಾಸ್ಸೈಂಧವಗೆ ದ್ರುಪದನ। ನೀಗಲದು ಸರಿಯಾದುದೆಂ ದೆನು ನಗುತ ಕುರುರಾಯ ॥೪೪॥ ಗುರುಪಿತಾಮಹರಳಿವುಭಯರಾ।ಯರಿಗೆ ಸರಿ ದುಶ್ಶಾಸನನನೆ। ತ್ತ ರನಿಪಾಕ್ರೀಡನಾಸೌಭಾಗ್ಯಸಂದುದಕೆ ॥ ಸರಿಯದಾವುದು ಕರ್ಣತನಯನ । ಮರಣಕಾವುದು ಸಮನು ಭೀಮನ । ಕರುಳತನ್ನಯ ಕರುಳ ತೊಡಕಲಿ ಮೇಲೆ ಸಂಧಾನ ॥ ೪೫ ॥ ಈ ದಿವಿಜರೀಸೇನೆಯೀಶಕ । ರ್ಣಾದಿಸುಭಟರು ನಾವು ನೀವೀ।ಮೇದಿನೀಶ್ವರರವರಥಟ್ಟೈಸನಿಖಿಳನಾಯಕರು॥ ಈದುರಾಗ್ರಹವುಚಿತವ ಲ್ಲೆನೆ । ಸೋದರನನಡೆಗೆಡಹಿ ರಕುತವ । ಸೇದಿ ಸಿಕ್ಕಿದ ಭೀಮನೊಡನೆಮಗೆಂತು ಸಂಧಾನ ॥ ೪೬ ॥ ನೆರಿಗರುಳ ಬಗಿಬಗಿದು ನೆತ್ತರಿ । ನೊರತೆಯಲಿ ಮೊಗೆಮೊಗೆದು ಬಾಯೊಳ । ಗೆರೆದುಸವಿನೋಡೆಂದು ನಿಮ್ಮೆಲ್ಲರಿಗೆ ಕೈನೀಡಿ ॥ ಇರಿದಿರಿದು ಮೂದಲಿಸಿ ಮಿಗೆ ಚ । ಪ್ಪರಿಸಿ ಚಪ್ಪರಿದಾಡಿ ರಕುತವ। ಸುರಿದು ಸೊಕ್ಕಿದಭೀಮನೊಡನೆಮಗೆಂತು ಸಂಧಾನ॥೪೭॥ಆಡಲೇಕದನಿನ್ನು ಹಿಂದಣ । ಕೇಡನೆಣಿಸಿದೊಡೇನುಫ ಲ ತಾ। ಗೂಡಿಹಲಬರುಜೀವಪುರುಷರು ಹೆಂಗಳಾದೆವಲಾ ॥ ಆಡದಿರು ಹಿಂದಾದಭಂಗವ । ನೋಡದಿ ರು ಬಹುಬಂಧುವರ್ಗದ । ಕೇಡಿದೆಲ್ಲರಿಗೊಬ್ಬಕರ್ಣನ ನೋಡಿ ಮರೆಯೆಂದ ॥ ೪೮ ॥ ತನುಜರಳಿದು ದು ನೂರು ಬವೆರದೊ । ಳನುಜರಳಿದುದು ನೂರು ಬಾಂಧವ। ಜನವುಸಂಖ್ಯಾತೀತವಿದ್ದೇನವರದಿದ್ದೇ ನು ॥ ಎನಗೆ ಕರ್ಣನ ಜೀವ ಜೀವನ । ವೆನಗೆಯೆಂಬೆಯಲಾ ಸಹೋದರ । ತನುಜರೆಲ್ಲರಿಗೊಬ್ಬಕರ್ಣ ನ ನೋಡಿ ಮರೆಯೆಂದ ॥ ೪೯ ॥ ರಣದೊಳಳಿದೀಸಕಲಬಾಂಧವ । ಗಣವಿದೆಲ್ಲರಿಗೊಬ್ಬಕರ್ಣನ ಗುಣವಕಂಡೇ ಮರೆಯಕಟ ಯೀಕರ್ಣನಳಿವಿನಲಿ ॥ ಎಣೆಯಾಗಲಿ ನೀ ಬದುಕುವ್ಯಥಾ । ರಣಪತಿಯೆ ಯೀಪಾರ್ಥವಹ್ನಿಯ । ನಣೆದು ಕರ್ಣನನುಳುಹಿಕೊಳು ಸಂಪ್ರತಿಯ ಮಾಡೆಂದ ॥ ೫೦ ॥ ಗುರುತ ನುಜ ನೀವಾಡಿದುದ । ಧಿಕ್ಕರಿಸುವವರಾವಲ್ಲ ಕರ್ಣನ । ಹಿರಿಯಮಗನನು ಪಾರ್ಥನುದರದೊಳಾಸ ಹೋದರನ ॥ ದುರುಳಭೀಮನ ಬಸುರಲುಗಿದು । ತ್ತರಿಸುವೆನುಭಾಷೆಯನು ನೀವ್ಹಿರಿ । ಯರಸುಗ ಳಿಗೆ ಸಮಾನ ಸಂಧಿಯ ಮಾಡಿಕೊಡಿಯೆಂದ ॥ ... ... ॥ ೫೧ ॥

ಅಂತು ಸಂಧಿ ೩೨ಕ್ಕೆ ಪದ ೧೬೭೦ಕ್ಕಂ ಮಂಗಳಮಸ್ತು.

---

## ಇಪ್ಪತ್ತು ಮೂರನೆಯ ಸಂಧಿ.

॥ ಸೂಚನೆ ॥ ಶಿವಶಿವಿದು ತಾರಕನ ಗುಹನಾ । ಹವವೊ ಮೇಣ್ರಾವಣನ ರಾಮನ। ಬವರವೋ ಹೊಸ ತಾಯ್ತುಕರ್ಣಾರ್ಜುನರಸಂಗ್ರಾಮ ॥

॥ ಪದ ॥ ಕೇಳು ಧೃತರಾಷ್ಟ್ರಾವನಿಪ ಭೂ । ಪಾಲಮುಖದಿರುಹಿದೊಡೆ ಬಳಿಕೀ । ಕೋಲಗು ರುವಿನ ಸೂನು ಮುರಿದನು ಬಿಗಿದಮುಗುಳ್ನಗೆಯಲಿ ॥ ಕೋಲಾಹೋದಯೆಂಬತ್ತುಭಂಡಿಯ । ಹೇಳಿದನು

ರ್ಣಂಗೆ ಕುರುಭೂ । ಪಾಲ ತಾನೊತ್ತಾಗಿ ನಿಂದನು ಸಕಲದಳಸಹಿತ ॥ ೧ ॥ ಅರಸಹೇಳುವುದೇನು ಬಳಿಕಿ । ಬ್ಬರ ಮಹಾಕೋದಂಡಚಂಡ। ಸ್ಫುರಿತಮೌರ್ವೀನಾದ ಮುಸುಕಿತು ಸಕಲದಿಗುತಟವ॥ ಸ್ಫುರದಮಂದೋಡ್ಡೀನಭಾಸ್ವ।ತ್ಕಿರಣಗರ್ಭಕಳಾಪಭದ್ರಾ।ಕರಣಕಪಿತಧ್ವಾಂತಬಿಂಬಕಳಂಬಸಂತತಿಯು॥೨॥ ಗಬ್ಬರಿಸಿದುದು ಗಗನವನು ಬಲು । ಬೊಬ್ಬೆ ಬಹುವಿಧವಾದ್ಯರಭಸದ । ನಿಬ್ಬರದನಿಡುಸೂಳು ಸೂಳೈಸಿದವು ದಿಗಂತಟವ ॥ ಉಬ್ಬುಗೆಡದಿರಿ ಕರ್ಣಪಾರ್ಥರ । ಗರ್ಬರಹಿರೋ ಪ್ರೊತು ಮೆರೆಯಿಂ । ಬಬ್ಬರಣೆ ಸುರಜಾಲದಲಿ ಜೋಡಿಸಿತು ಮೂಜಗವ ॥ ೩ ॥ ಅಡಿಗಡಿಗೆ ಹೊರೆಹೆಚ್ಚಿತಿಬ್ಬರ । ಹಿಡಿದ ಖಾತಿ ದಿಗಂತರೋಷದ । ದಡಿಯ ಬಲುಟಂಕಾರ ಮುಸುಕಿತು ಲೋಕಹದಿನಾಲ್ಕ ॥ ಜಡಿವಶೌರ್ಯದ ಮೃಗಳುಬ್ಬಿನ । ಗುಡಿಯಿರಿದರೋಮಾಳಿಪುಳಕದ । ಗಡಣತೇಜದ ಸುಭಟರೆಚ್ಚಾಡಿದರು ತವಕದಲಿ॥೪॥ ಬಿರಿದವಿಬ್ಬರಜೋಡು ಮೈಯ । ಬ್ಬರಿಸೆ ಹಳಹಳಿಕೆಯ ಸತೇಜವ । ಸುರಿದವಿಬ್ಬರಮೋರೆ ಮಿಗೆ ಗಂಟಿಕ್ಕಿ ಹುಬ್ಬುಗಳ ॥ ಅರಳನಿಡುಗಂಗಳ ನಿಹಾರದ । ಕರದಚಳಕದ ಕಾದನಾಸಿಕ । ವೆರಳಕೆತ್ತುವ ಘಾಸೆಗಳ ಭಟರೆಚ್ಚರುರವಣಿಸಿ ॥೫॥ ವಹಿಲವನು ಪ್ರೊಡ್ಡೈಸುವರೆ ನರ । ರಹಿಪತಿಗಳೇ ಭಟರ ಪಡಿಯಿಡ । ಬಹುದೆಪಲ್ಲವಪಂಡಿತರ ತ್ರಾಣಾಸುಗಳ ಗತಿಯು ॥ ಅಹಿಯುಸರವಮಾನದ ಸುತಾಳ । ಗ್ರಹಮುಖದ ಸರವಾದಿಗಳ ಸುರ।ರಹಿಯುನಾಯಕವಾಡಿಗಳ ನರನಾಥ ಕೇಳೆಂದ ॥೬॥ ಕಣೆ ಕಣೆಯನಿಟ್ಟೊರಸಿದವು ಮಾ । ರ್ಗಣೆಯ ಮಾರ್ಗಣೆ ಚಾಚಿದವು ಕಣೆ । ಕಣೆಗೆ ಮಲೆತವು ತರುಬಿದವು ಕಣೆ ಕಣೆಯ ಪಡಿಮುಖನ ॥ ಕಣೆ ಕಣೆಗೆ ತೆರಳಿದವು ಕಣೆ ಮಾರ್ಗಣೆಯನಣೆದವು ಹಿಂದುಗಣೆಸಂ । ದಣಿಗಣೆಯನಕ್ಕಾಡಿದವು ರಣಧೀರರೆಸುಗೆಯಲಿ ॥೭॥ ಎಸೆವಗತಿಗೊಮ್ಮೊಮ್ಮೆಗಜಗ । ರ್ಜಿಸಿದವೋ ಯೆಂಬೆರಡುಥಟ್ಟಿನ ಪೊಸಗೆಯಲಿ ಸೂಳೈಸಿದವು ನಿಸ್ಸಾಳಕೋಟಿಗಳು ॥ ನಿಶಿತಶರವೋ ಪ್ರಳಯಸೂರ್ಯರ । ಮಸಕವೋ ಹರನೇತ್ರವನ್ಹಿಯು। ಹಸರವೋಹೆಸರಿಡುವನಾವನು ರಾಯ ಕೇಳೆಂದ ॥೮॥ ಇವರ ಬಿಲುದನಿ ತುರಗಹೇಷಾ । ರವದ ಘುಲ್ಲಣೆ ಸೂತರಬ್ಬರ । ವಿವಿಧವಾದ್ಯನಿನಾದ ದಳವೆರಡರ ಮಹಾರಭಸ ॥ ಅವಿರಳಾಸ್ತ್ರಧ್ವಾನವಭ್ರದಿ । ದಿವಿಜನಿಕರದ ಸಾಧುವಾದದಿ । ಭುವನ ಶಬ್ದಬ್ರಹ್ಮಮಯವಾಯ್ತೊಂದುನಿಮಿಷದಲಿ ॥೯॥ ಮುಂಚುವುದು ಕೈ ಮನವ ಕೈಮ್ಮೆ । ಸಂಚವನು ಮನ ಮುಂಚುವುದು ಮಿಗೆ । ವಂಚಿಸುವುಧಂಬುಗಳ ಕೈಗತಿಮನದಕಲುಹೆಗಳ ॥ ಹಿಂಚಿದಂಬುಗಳಾರನೇಳನು । ಮುಂಚಿದವು ಹೊಂಬರಹದಂಬಿನ । ಮಿಂಚುಗಳೊಳಿವೆ ಹಳಚಿದವು ಹರಿಹರಪುರಂಧರರ ॥೧೦॥ ಮನದೊಳಗೆ ಮೊಗೆದೀಂಟಿದರು ಘೂಗಿನಲಿ ಸೂಸಿದರಡಿಗಡಿಗೆ ಕ । ಣ್ಕೊನಲಿ ಕುಡಿಕುಡಿದುಗುಳಿದರು ಮೊದಲೆಯ ಮೊತಿನಲಿ ॥ ಮನದಲಂಕುರವಾಗಿ ಕಡೆಗ । ಣ್ಗೊನಲಿ ಪಲ್ಲವವಾಗಿ ರಣವಾ । ತಿನಲಿ ಪ್ರೊತುದು ಕರ್ಣಪಾರ್ಥರ ರೋಷವಮಯಜಾಲ ॥೧೧॥ ಅರಸ ಕೇಳ್ಕೆ ಬೊಬ್ಬಿರಿದು ಚ । ಪ್ಪರಿಸಿ ತೇಜಿಯ ನೂಕಿದನು ಮುರ । ಹರ ಪುಶಾಪುತಿಯೆಸುಗೆಯಲಿ ಕೈದೋರಿದನು ಪಾರ್ಥ ॥ ಖುರಪುಟದೊಳಾಕಾಶವನು ಕ । ತ್ತರಿಸುವವೊಲಬ್ಬರದ ಬಲುನಿಬ್ಬರದ ಗತಿಯಲಿ ಸಿಗುರಿದವು ರಥವಾಜಿಗಳು ನರನ॥೧೨॥ ಕುಬುಬೆನುತ ಬೊಬ್ಬಿರಿದನುಗ್ರಪ್ರಬಲವಾನರನಾಥನಿದಿರಲಿ। ಕಬಳಿಸಿದುದರ್ಜುನನ ಶರ ಕರ್ಣನಪತಾಕೆಯಲಿ ॥ ಶಬರರೂಪವರಾಹದೃತ್ಯನ । ನಿಬಿಡದರ್ಪವ ಮುರಿವವೊಲು ವರ । ವಿಬುಧತತಿ ಕೊಂಡಾಡೆ ನಲವೇರಿದನು ಕಲಿಪಾರ್ಥ ॥೧೩॥

ಏನ ಹೇಳುವೆನವನಿಪತಿ ವಿ । ನ್ನಾಳಿನಗ್ಗಳಿಕೆಯನು ಮುಂದಣ । ದಾನವಾಂತಕನುರವನೆಚ್ಚನು ಜೋ
ಡು ಥಟ್ಟುಗಿಡು ॥ ಅನಿರೂಥಿಯ ಹಯದ ವಾಘೆಯ । ನೇನನೆಂಬೆನು ಜೀಯ ಬಿಂಕದ । ವಾನರವ
ವೇದನೆಯ ಗಡಣೆಯನರಿಯನಾನೆಂದ ॥೧೪॥ ಹನುಮನನು ಮತ್ತೊಮ್ಮೆ ಪುನರಪಿ। ದನುಜರಿಪುವನು
ಮತ್ತೆ ಹಯವನು । ಧನುವನರ್ಜುನನಂಬುಗಳನಾ ಛತ್ರ ಚಾಮರವ ॥ ಮೊನೆಗಣೆಯಲೇ ಮುಸುಕಿದನು
ಮುಮ್ಮೊನೆಯ ಚೋಳೆಯ ತೊಡಚಿದನು ಕುರು।ಜನಪ ನಾವಡೆ ನೋಡುನೋಡೆಂದುಬ್ಬಿದನು ಕರ್ಣ
॥೧೫॥ ಮೊದಲಲೇ ಭೀಷ್ಮನ ಶರವ್ರಾತದಲಿ ನೊಂದೆನು ಬಳಿಕ ಕರ್ಣನ।ಕದನದಲಿತಪ್ಪಲ್ಲ ತಪ್ಪಲ್ಲೆನುತ
ಮುಳವೈರಿ ॥ ಗದಗದಿಸುವಶ್ವವನು ಬೋಳೈ । ಸಿದನು ಹನುಮನ ನೋಡಿ ತಲೆದೂ । ಗಿದನು ಮಂ
ದಸ್ಮಿತಮಧುರಮುಖಕಮಲನೊಲವಿನಲಿ ॥೧೬॥ ಶರಹತಿಯಲುರೆನೊಂದು ಧೂಪಿಸಿ । ತರಹರಿಸಿದಶ್ವಾ
ಳಿ ಕೃಷ್ಣನ । ಕರುಣವಚನಾಮೃತರಸದಿನಾಪ್ಯಾಯನಂಬಡಲು ॥ ಖುರದಲವನಿಯ ಹೊಯ್ದುಲುಳಿವಿ
ಗ । ಲುರವಣಿಸಿದವು ಹನುಮನಂತಃ । ಕರಣ ಹದುಳಿಸಿ ಹಿಗ್ಗಿದನು ನರನಾಥ ಕೇಳೆಂದ ॥ ೧೭ ॥ ಬ
ಳಿಕ ಹೇಳುವುದೇನು ಪಾರ್ಥನ । ಮುಳಿಸಿನಲಿ ಕಾಲಾಗ್ನಿಜಿಹ್ವಾ । ವಳಿಯ ಲಳಿಯಲಿ ಕುಪಿತಕಾಳೋ
ರಗನ ವದನದಲಿ ॥ ಸುಳಿವವನ ಸಾಹಸವನಾತನ। ನಿಲುವನಾತನಜಯವನಾತನ। ಬಲುಹ ಕಂಡವರಾರು
ಸುರನರನಾಗನಿಕರದಲಿ ॥ ೧೮ ॥ ಎಚ್ಚನೀತನ ಸಾರಥಿಯ ಮಗು । ಳೆಚ್ಚನೀತನ ರಥವ ವಾಜಿಯ ।
ನೆಚ್ಚನೀತನ ಧನುವನೀತನ ಸಿಂಧಸೀಗುರಿಯ ॥ ಎಚ್ಚನೀತನನೀತನಸ್ತ್ರವ । ಕೊಚ್ಚಿದನು ಮಗುಳೆ
ಚ್ಚ ಪುನರಪಿ।ಯೆಚ್ಚು ಕರ್ಣನ ಹೊಕ್ಕುಗಳೆದನು ಪಾರ್ಥ ನಿಮಿಷದಲಿ ॥ ೧೯ ॥ ಬೊಬ್ಬಿರಿದುದಾಸೇ
ನೆ ನಿಮಿಷಕೆ । ಮಬ್ಬು ಮುಳುಗಿಸಿತೀಬಲವನಾ । ವುಬ್ಬಿಯನು ಸ್ಮರಿಸುತ ಸಾಹಸಮಲ್ಲ ತನಿಗೆದರಿ ॥
ಇಬ್ಬರಿಗೆ ಘಡ ಹುಬ್ಬನಿಕ್ಕುವ । ಳೊಬ್ಬಳೇ ಜಯವನಿತೆ ಜೋಡ್ಡಿಯ । ಕೊಬ್ಬ ನಿಲಿಸುವೆನೆನುತ ಖತಿ
ಮಸಗಿದನು ಕಲಿಕರ್ಣ ॥ ೨೦ ॥ ದೇವಬಿಲ್ಲಾಳೆನುತ ರಣದಲಿ । ಸಾವಿರಾಲಿಯ ಸುರಪಸುತ ಗಾಂ।
ಡೀವದಲಿ ಹೂಡಿದನು ಅರಿಜಯಮಂತ್ರಮಾರ್ಗಣವ ॥ ತೀವಿ ಕೆನ್ನೆಗೆ ತೆಗೆದು ಕರ್ಣಶ । ರಾವಳಿಯ
ಖಂಡಿಸಿದನಡಹಿಗೆ । ಪಾವಕನು ಮುಳಿದಂತೆ ಮುಳಿದವು ಪಾರ್ಥಶರಜಾಲ ॥ ೨೧ ॥ ಸರಳ ಖಂಡಿಸಿ
ವೀರರವಿಸುತ । ನುರುಬಿ ದಿವ್ಯಾಸ್ತ್ರಗಳನೆಸೆಯಲು । ತರಿದು ಫಲುಗುಣನೊಡನೆ ಯೆಚ್ಚನು ಭಾನು
ನಂದನನ ॥ ಸುರಪನಾಯುಧಹತಿಗೆ ಕುಲಗಿರಿ । ತೆರಳುವಂತಿರಲೊಂದುಯೋಜನ । ವರೆಗೆ ತಿರ್ರನೆ ತಿ
ರುಗಿತೇನೆಂಬೆನು ಮಹಾದ್ಭುತವ ॥ ೨೨ ॥ ಬೌಕಿ ವಾಘೆಯ ಕೊಂಡು ಶಲ್ಯನು। ನೂಕಿ ಮರಳಿಚಿ ತೇ
ರ ಸಮರ । ವ್ಯಾಕುಲದಿ ಕಲಿಕರ್ಣನೆಸೆದನು ದಿವ್ಯಮಾರ್ಗಣವ ॥ ನಾಕನಿಳಯರು ಪೊಗಳಿದರು ಶ ।
ಸ್ತ್ರಕವಿದ್ಯಾಪ್ರೌಢನಹುದೆನ।ಲಾಕಿರೀಟಿಯ ರಥವನೆಚ್ಚನು ಭಾನುನಂದನನು॥೨೩॥ಅರಿಯ ಸರಳಿನ
ಹತಿಗೆ ತಿರ್ರನೆ । ತಿರುಗೆ ಪಾರ್ಥನ ತೇರು ಬಿಲ್ಲಂ । ತರಕೆ ಹಿಮ್ಮೆಟ್ಟಿದುದು ಕಂಡಸುರಾರಿ ಬೆರಗಾಗಿ ॥
ಅರರೆ ಧಣುಧಣು ಭಾಪುಮಝರೇ। ಸರಿಯ ಕಾಣೆನು ಬಾರೆನುತ ವಿ । ಸ್ತರಿಸಿ ದಾನವವೈರಿ ಕರ್ಣನ
ಹಿರಿದು ಹೊಗಳಿದನು ॥ ೨೪ ॥ ಫಲುಗುಣನು ಖತಿಗೊಂಡು ಹೂಳಿದ । ಹಿಳುಕನೀಡಾಡಿದನು ಕಾ
ಲಧ। ಬಳಿಕ ಕೌತುಕವಾಯ್ತೆನುತ ತೂಗಿದನು ಮಕುಟವನು ॥ ಬಲವರವು ಹಿರಿದೆಂದು ನಾವು। ನ್ನ
ಲವುರಾಂತಕಬಲ್ಲನಾದೊಡೆ । ಕಳಹವನುಕೈಕೊಳ್ಳನೀವೆನುತಿಳುಹಿದನು ಧನುವ ॥ ೨೫ ॥ ಏನುಥ

ಲ್ಗುಣ ಧರ್ಮಜನ ಮದ । ದಾನೆಯೇನೆಲೆತಂದೆ ದುಗುಡವಿ । ದೇನು ಹೇಳೆಂದಸುರರಿಪು ಕೇಳಿದೊಡೆ ಮನವುರುಗಿ ॥ ದಾನವಾಂತಕ ಕಪಟನಾಟಕ । ನೀನಲಾ ತಪ್ಪೇನು ದುಷ್ಕೃತ । ವೇನುಮಾಡದೆ ನುತ್ತ ಮೇಗರೆನುಡಿದನಾಪಾರ್ಥ ॥ ೨೬ ॥ ಹೇಳುಹೇಳೆನ್ನಾಣೆ ಚಿತ್ತದೊ। ಳಾಳುವುದ ಮರೆಮಾಡದಿರುಜಿಯು । ಲೋಲಧರ್ಮಜನಾಣೆ ನಿನಗೆನೆಪಾರ್ಥ ನಸುನಗುತ ॥ ಕಾಲಗುಣವೆಂದರಿಯೆ ಮೋಣ್ ನಿ । ನ್ನಾಳುತನ ಹುಸಿಯಾಯ್ತುರಿಪುಭಟ । ನಾಳುತನದಿಟವಾಯ್ತು ಕೌತುಕವೆನ್ನ ಮನಕೆಂದ ॥ ೨೭ ॥ ಒಂದುಯೋಜನವರೆಗೆ ತೆರಳಿತು । ಹಿಂದಕಹಿತನ ತೇರುವರಿಶರ । ಕೊಂದು ಬಿಲ್ಲಂತರಕೆ ತೆರಳಿತು ನಮ್ಮರಥವೇಗ ॥ ಇಂದು ಕರ್ಣನ ಸಾಹಸವ ಮನ । ಬಂದು ಪತಿಕರಿಸಿದಿರಿ ಕೌತುಕ । ವೆಂದು ಪಾರ್ಥನು ನುಡಿವನಸುರಾರಾತಿಗುಚಿತದಲಿ ॥ ೨೮ ॥ ಆಳುತನದಲಿ ವೀರಕರ್ಣನ । ಹೋಲುವರ ನಾ ಕಾಣೆನ್ಯ ಸುರ । ಪಾಲಕರು ತಾವಾನಬಹುದೇ ಕರ್ಣನುರವಣೆಯ ॥ ಕೋಲು ಯೋಜನವರೆಗೆ ತಿರುಗಿಸಿ । ಚಾಳಿಸಿದುದನನುಡಿವೆ ನಿಜಬಿ । ಲ್ಲಾಳುತನವನು ನಿನ್ನ ಮನದಲಿ ತಿಳಿದುನೋಡೆಂದ ॥ ೨೯ ॥ ಬಸುರೊಳಗೆ ಬ್ರಹ್ಮಾಂಡಕೋಟಿಯು । ಮುಸುಕಿಕೊಂಡಿಹೆತಾಸಹಿತಮೇ । ಲೆಸೆವಸಿಂಧದಹನುಮಸಹಿತೀದಿವ್ಯಧನುಸಹಿತ ॥ ಎಸುಗೆಯಲಿ ತೊಲಗಿಸಿದವನ ಸಾ । ಹಸವುಹಿರಿದೋ ಹುಲುರಥವನೆ । ಬ್ಬಿಸಿದವನ ಸಾಹಸಹಿರಿದೊ ಹೇಳೆಂದನಸುರಾರಿ ॥ ೩೦ ॥ ಎನಲು ತಲೆವಾಗಿದನು ಫಲುಗುಣ । ಧನುವ ಕೊಂಡನು ದೃತ್ಯಮದನಗೆ । ವಿನಯದಿಂದೆರಗಿದನು ಕರುಣವ ಪಡೆದು ಮದವೇರಿ ॥ ಮೊನೆಯಲಗಿನಂಬಿನಲಿ ಬೊಬ್ಬಿರಿ । ದಿನಸುತನ ಮೂದಲಿಸಿ ಫಲುಗುಣ । ನನುವರದೊಳತಿಮತ್ಸರಿಸಿ ಕಾದಿದನು ಖಾತಿಯಲಿ ॥ ೩೧ ॥ ರಾಯ ಕೇಳಭಿಮಂತ್ರಿಸಿದನಾ । ಗ್ನೇಯವನು ಹೂಡಿದನು ಸುರಕುಲ । ಬಾಯಬಿಡೆ ಚಿಗಿದಂಬು ಹಾಯ್ದುವು ಬಿಲುದಿರುವನೊದೆದು ॥ ವಾಯು ಪಡಿಬಲವಾಗೆ ಕಿಡಿಗಳ । ಬಾಯಧಾರೆಯ ಹೊದರಕಬ್ಬೊಗೆ । ಲಾಯದಲಿ ಲವಣಿಸುವ ದಳ್ಳುರಿದಿರುಳು ಚೂಣಿಯಲಿ ॥ ೩೨ ॥ ಅಹಹ ಬೆಂದುದು ಲೋಕವಿನ್ನು । ರ. ವ ಮುಖವ ಚುಂಬಿಸುವರೋ ವಿ । ಗ್ರಹದ ಫಲನಿಗ್ರಹವಲಾ ಜಗಕೆನುತ ಸುರರುಲಿಯೆ ॥ ವಹಿಲ ಮಿಗೆ ವರುಣಾಸ್ತ್ರದಲಿ ಹುತ । ವಹನ ಬಿಂಕವ ಬಿಡಿಸಿದನು ಜಯ । ವಹುದೆ ಪರರಿಗೆ ಪಾರ್ಥನಿರೆ ನರನಾಥ ಕೇಳೆಂದ ॥ ೩೩ ॥ ಸರಳ ಜಡಿಝಡಿಸಿದುದುಕಬ್ಬೊಗೆ । ಹರೆದುದಲ್ಲಿಯದಲ್ಲಿ ತಂಪಿನ । ಸರಳಮೊನೆಯಲಿ ಸೊಂಪಿಸಿತು ತುಂತುರ ತುಷಾರದಲಿ ॥ ಅರಿಬಲದ ಬೊಬ್ಬಾಟದಲಿ ಧರೆ । ಬಿರಿಯಲರ್ಜುನ ಹೂಡಿದನು ಹೂಂ । ಕರಣಮಾನಿತಮಂತ್ರಮಂಡಿತಮೇಘಮಾರ್ಗಣವ ॥ ೩೪ ॥ ಹೊಗೆಯ ಹೊರಳಿಯ ವಿವಿಧವರ್ಣದ । ಮುಗಿಲ ಪಾಳೆಯವೆತ್ತಿ ಬಿಟ್ಟುದು । ಗಗನದಗಲದಲೌಕಿದುದು ದೆಸೆದೆಸೆಯ ಮೂಲೆಗಳು ॥ ಹಗಲುಗತ್ತಲೆ ಕಟ್ಟಿತೇನಿದು । ಜಗದ ಕಡೆಯೋ ಶಿವಶಿವಾಯೆನೆ । ಜಗಜಿಗತ್ಪ್ರಾಣಾಸ್ತ್ರವನು ಹೂಡಿದನು ಕಲಿಪಾರ್ಥ ॥ ೩೫ ॥ ಬಿಟ್ಟುಹೋದುದು ನಿರಿಮುಗಿಲುನೆರೆ । ಯಟ್ಟಿ ತೊಡಕಿತು ತಳಿತಮೇಘದ । ಥಟ್ಟು ಮುರಿದುದು ಬೀಸಿದುದು ಬಿರುಗಾಳಿವಹಿಲದಲಿ ॥ ಇಟ್ಟಣಿಸಿ ಕೈಯೊಡನೆ ಕೊಂಡನು । ಬೆಟ್ಟವುದುರುವಬಾಣವನು ಜಗ । ಜಟ್ಟಿಕೌರವರಾಯ ಬಾಳೆನುತಚ್ಚ ಸಾಕರ್ಣ ॥ ೩೬ ॥ ಗಿರಿಯ ಡೆಂಕಣಿಯಂತ್ರವನು ತರ । ಹರಿಸುವವನಾರೆಸಧಾರಿಣಿ । ಗಿರಿಯಧಾರೆಗೆ ಧಾತುಗೆಟ್ಟುದು ಪಾಂಡುಸುತಸೇನೆ ॥ ಅರರೆ ಘಡಘಡಯೆನುತ ವಜ್ರವ । ಸರಳ ಬಲುಹಿಂದಾವಪಹಿಲದ । ಉರುಳೆಗಡಿದನು ಪರ್ವತಾಸ್ತ್ರವನಿಂದ್ರನಂದನನು ॥ ೩೭ ॥

ಅವಚಳಕದಲರ್ಜುನನು ತಿಮಿ । ರಾವಲಂಬನಸರಳನೆಚ್ಚನು । ನಾವರಿಯೆವು ಮಹಾಂಧತಮ ಮುದ್ರಿಸಿತು ದೃಷ್ಟಿಗಳ ॥ ಅವನಾವನನರಿವನೋ ತಾ । ನಾವನಿದಿರಾರೆಂಬರೂಪಿನ । ಭಾವ ತೋರಿದುದಿಲ್ಲ ಮುಸುಕಿತು ನಿಮಿಷದಲಿ ಜಗವ ॥ ೩೮ ॥ ವೈರಿಶರಕೇನರಿಯನೇಪ್ರತಿ । ಕಾರವನು ನಿಸ್ಸಾತನಗ್ಗದ । ಸೌರಮಯಮಂತ್ರಾಭಿಮಂತ್ರಿತಭಾನುಮಾರ್ಗಣವ ॥ ಆರುಕಂಡರು ತಿಮಿರಜನಿತವಿ । ಕಾರವನು ಹೇಳಿಗೆಯ ಮುಚ್ಚಳ । ಜಾರಿಸಿದಫಣಿಯಂತೆ ಭುಲ್ಲೈಸಿತ್ತು ಕುರುಸೇನೆ ॥ ೩೯ ॥ ಆಗಲೇ ತೆಗೆದುರಗಬಾಣವ । ತೂಗಿ ಬಿಟ್ಟನು ನಿಮ್ಮ ಕರ್ಣನ । ಲಾಗುವೇಗವನಾರು ಬಲ್ಲರು ಚಾಪತಂತ್ರಕವ ॥ ಸೂಗರಿಸುವುರಿವಿಷದ ಲೋಳೆಯ । ಲಾಗಿಸುವನಾಲಗೆಯ ಸುಯ್ಲಿನ । ಬೇಗುದಿಯ ತೊಡೆಬೆಗಳ ಹಾವ್ ತುಡುಕಿದವು ಥಟ್ಟಿನಲಿ ॥ ೪೦ ॥ ಎಲೆಲೆಹಾವೋ ಹಾವು ಕೆಂಡದ । ಮಳೆಯ ಕಾವರ ಕರೆಯೆನುತ ಕಳ । ವಳಿಸಿತಲ್ಲಿಯದಲ್ಲಿ ಹರೆದುದು ಹುದುಗಿ ಹುರಿಯೊಡೆದು ॥ ಬಲುವಿಷದ ಕಿರುವನಿಯ ಹಾವಿನ । ಮಳೆಗೆ ಗರುಡಾಸ್ತ್ರದಲಿ ತನ್ನಯ । ದಳಕೆ ಹಿಡಿದನು ಕೊಡೆಯನರೆಗಳಿಗೆಯಲಿ ಕಲಿಪಾರ್ಥ ॥೪೧॥ ಏಸುಹಾವೆರಗಿದವೊ ಥಟ್ಟಿನೊ । ಳೈಸುಹದ್ದೆರಗಿದವು ತುಂಡಿಸಿ । ಬೀಸಿ ಬಿಸುಟವು ಕಡಿಗಳನು ಕೌರವನ ಥಟ್ಟಿನಲಿ॥ಏಸುಪರಿಯಲಿ ನರನ ಬಿನ್ನಣ। ವೈಸುಪರಿ ಕರ್ಣನಲಿ ಕರ್ಣನ। ಕೌಶಲವದೆಂತೆನಿತುಪರಿಯನು ಕಂಡೆನಿಬ್ಬರಲಿ ॥ ೪೨ ॥ ಬಲುಹು ಭೀಷ್ಮದ್ರೋಣರಿಂದ । ಗ್ಗಳವಲಾ ಕರ್ಣಂಗೆನುತ ಪಡಿ । ಬಲವ ಬಂದರು ಭೀಮಸಾತ್ಯಕಿನಕುಲಸಹದೇವ ॥ ದಳದ ಥಟ್ಟುಬ್ಬೆವರು ಪಾರ್ಥನ। ಕೆಲದಲೋರಣಿಸಿದರು ಬಲುವೆ । ಗ್ಗಳಯನ್ಸೆ ನಿಸ್ಸಾತನಿಂದಿನೊಳರಸ ಕೇಳೆಂದ ॥ ೪೩ ॥ ಎಲೆಧನಂಜಯ ಸಾಲದೇ ಹೆ । ಬ್ಬುಲಿಯ ಕಾಲಾಟದಲಿ ಮೃಗಶಿಶು । ಮಲೆತೊಡೇನಗ್ಗಳೆಯನೇ ಮೂಲೋಕವರಿವುದಲೆ ॥ ಅಳವಿಗೊಡದಿರು ಸೂತತನಯನ । ತಲೆಯ ಬೆಸುಗೆಯ ಬಿಡಿಸುವೆಂಬಿನ । ಹಿಳುಕನರಿಯಾ ಹೊಳ್ಳುಕಣೆಯೇಕೆಂದನಾಭೀಮ ॥ ೪೪ ॥ ಹುಸಿಯೆ ಭೀಮನ ಮಾತು ಘೂಸರ । ದೆಸುಗೆ ತಾನೇಕಿನ್ನು ರಿಪುನಿ । ಪ್ಪಸರದಲಿ ಕಲಿಯೇರಿದನು ಕೈಕೊಳ್ಳನೀಶ್ವರನ ॥ ನುಸಿಗಣೆಯಲೇನಹುದು ತೆಗೆ ಹರ । ವಿಶಿಖವನು ತೊಡು ಬೇಗ ಮಾಡೆಂ । ದಸುರರಿಪುವರ್ಜುನನ ಜರೆದನು ಕೇಳು ಧೃತರಾಷ್ಟ್ರ ॥ ೪೫ ॥ ಕ್ರೋಧಶಿಖಿ ಭುಲ್ಲೈಸಿ ಮುಳಿದು ವಿ । ರೋಧಿಯನು ನೋಡಿದನು ಮುಳುಗಲಿ । ರಾಧೆ ಕಂಬನಿಗಳಲಿ ಬೆತೆಯಲಿ ಪುತ್ರಶೋಕದಲಿ ॥ ಆಧಿ ತೀರಲಿ ನಮ್ಮ ಸೇನಾ । ವ್ಯಾಧಿಗಿದೆ ಮದ್ದೆನುತ ಪರಬಲ । ಸಾಧಕ ಬ್ರಹ್ಮಾಸ್ತ್ರವನು ತೊಟ್ಟೆಚ್ಚನಾಪಾರ್ಥ ॥ ೪೬ ॥ ಶಿವಶಿವಾ ಬ್ರಹ್ಮಾಸ್ತ್ರವಿದಲಾ । ಭುವನಜನಸಂಹಾರವೇ ಸಂ । ಭವಿಸಿತೇ ಹಾಯೆನುತ ಹರೆದುದು ಮೇಲೆ ದಿವಿಜಗಣ ॥ ತವಕದಲಿ ತತ್ಪ್ರತಿಮಹಾಸ್ತ್ರವ । ಜವಳಿವೆರಳಿಂದುಗಿದು ಬಿಡೆ ತಿವಿ । ತಿಪಿದು ತಮ್ಮೊಳಗಡಗಿದವು ದಿವ್ಯಾಸ್ತ್ರವಧ್ರುದಲಿ ॥ ೪೭ ॥ ಆಮಹಾಸ್ತ್ರದ ಹಾನಿ ರೋಷದ । ತಾಮಸಾಗ್ನಿಯಸೂದಿಬಿಡಲು। ದ್ದಾಮನರ್ಜುನ ಕೊಂಡನಗ್ಗದಶಾತಮನ್ಯುವನು ॥ ಆಮಹಾಬಾಣಾಭಿಮುಖದಲಿ । ಸೋಮಧರಮಾರ್ಗಣವೆನಿನ್ನೀ । ಭೀಮವಿಕ್ರಮಕರ್ಣನೆಚ್ಚನು ರಾಯ ಕೇಳೆಂದ ॥ ೪೮ ॥ ಆತನಲಿ ಕೌಬೇರಮಾರ್ಗಣ। ವೀತನಲಿ ವಾಯವ್ಯ ಕಬಳಿಸಿ । ತಾತನಲಿ ನೈರುತ್ಯವಿತ್ತಲು ಸಾಮವರ್ತಿಶರ ॥ ಆತನಲಿ ಸಾಮುದ್ರರೋಪಣವೀತನಲಿ ವಡಬಾಸ್ತ್ರವಿಂತಿರ । ಲಾತನೀತನ ಮಥನದಲಿ ನರನಾಥಕೇಳೆಂದ ॥ ೪೯ ॥

ಅಂತು ಸಂಧಿ ೨೩ಕ್ಕಂ ಪದ ೧೪೬ಕ್ಕೆ ಮಂಗಳಮಸ್ತು.

## ಇಪ್ಪತ್ತನಾಲ್ಕನೆಯ ಸಂಧಿ.

|| ಸೂಚನೆ || ರಾಯಸಾಹಸಮಲ್ಲ ವೆಗ್ಗಳ | ರಾಯಸುಭಟಶಿರೋರತುನ ರಾಧೇಯ ಪಾರ್ಥರ ವಿಷಮರಣ ರಂಜಿಸಿತು ಭೂಜಗವ ||

|| ಪದ || ರಾಯ ಕೇಳ್ಳೆ ಮತ್ತೆ ಕರ್ಣರ | ಸಾಯಕದ ಕಟ್ಟಾಳು ರಣದಲಿ | ಸಾಯಲಾಗದೆ ಶಿವಶಿವಾ ಸಾಯರೆ ಸುರಾಸುರರು || ಬಾಯ ಬಿಡೆ ನೃಪಸೇನೆ ಭೀತಿಯ | ಲಾಯದಲಿ ಕಟ್ಟಿದನು ಪಾರ್ಥನ | ವಾಯುಜನ ಕರಣೇಂದ್ರಿಯಾಶ್ವಂಗಳನು ಕಲಿಕರ್ಣ ||೧|| ಎಲೆಮುರಾಂತಕ ಸಾಕು ರಥದಿಂ | ದಿಳಿ ಸುದರ್ಶನವೆಲ್ಲಿ ಚಾಪವ | ಕಳೆದುಕೋ ಕೌಮೋದಕಿಯ ಹಿಡಿ ಹಾಯ್ಕು ವಾಘೆಯವ || ಉಳುಹುವವರಾವಲ್ಲ ಕೊಳ್ಳೆನು | ತಳವಿಯಲಿ ಕೈಮಾಡಿ ಕೃಷ್ಣನ | ನಳುಕದೆಚ್ಚನು ನೂರುಶರದಲಿ ಕರ್ಣ ಬೊಬ್ಬಿರಿದು ||೨|| ಜೋಡಿನಲಿ ಸೀಸಕದಮೇಲ | ಕ್ಕಾಡಿದವು ಕವಲಂಬು ಕವಚವ | ತ್ರೋಡಿ ನೆಟ್ಟವು ನೊಕಿದವು ನಾರಾಚ ಗರಿಸಹಿತ || ನೋಡಲೀವ್ಯಥೆಯುಂಟೆ ಭುವನದ | ಗೂಡು ಕೃಷ್ಣನ ದೇಹವಿದು ನಾ | ಡಾಡಿಗಳ ನಾಟಕವಲೇ ನರನಾಥ ಕೇಳೆಂದ ||೩|| ಏನ ಹೇಳುವೆ ಹೂಡಿದನು ಸಂ | ಧಾನದಲಿ ರಥಹಯವ ವಾಘೆಯ | ಜೇನಗೆಲಸದ ಹಕ್ಕರಿಗೆಯನು ನೊಗನ ಜೊತ್ತಿಗೆಯ || ಭಾನುಸುತ ಮುರಿಯೆಚ್ಚು ನಿಮಿಗಿ | ನ್ನೇನುಹದನ್ಕೆ ಹನುಮ ಲಂಕೆಯ | ದಾನವರು ನಾವಲ್ಲೆನುತ ಕೈಮಾಡಿ ಬೊಬ್ಬಿರಿದ ||೪|| ಸ್ಮರಿಸರ್ಜುನ ಶಿವನೊಡನೆ ನೀ | ಹೋರಿದಾತನೆ ನಿನ್ನ ಕೊಲುವೊಡೆ | ತೀರದೇ ತಪ್ಪೇನು ತಳುವಿತು ಹೇಳಲೇನೆನುತ || ಕೂರಲಗಿನಂಬುಗಳ ಹಿಳುಕಿನ | ಸಾರವನು ಮುದ್ರಿಸಿದನುದಯದ | ಲಾರನಿದಿರಲಿ ಕಂಡನೋ ಕಡುನೊಂದನಾಪಾರ್ಥ ||೫|| ಹರಿದುದಿಮ್ಮೈ ಜೋಡುನೆತ್ತರಿ | ನೊರತೆ ನೊಕಿತು ಭದ್ರಪೀಠವ | ಲೊರಗು ನನೆದುದು ರೋಮವಿನಲಿ ಜೋಲಿದನು ಮೈಮರೆದು || ಉರುಕುಗೊಂಡುದು ಕರಣಚಯವತಿ | ದೆರೆದಕಂಗಳ ರೋಮಕಂಪದ | ಲರಿದ ದಿಲ್ಲರೆಗಳಿಗೆಕೋಲಾಹಲವನಾಪಾರ್ಥ ||೬|| ಮತ್ತೆ ಕೇಳವನೀಶಭೀಮನ | ನೆತ್ತಿ ಬಿಟ್ಟವು ಬಾಣ ನಕುಲನ | ಕುತ್ತಿದವು ಸಹದೇವನೊಡಲಲಿ ಮಾಡಿದವು ಪಥವ | ಇತ್ತ ಸಾತ್ಯಕಿ ಚೇಕಿತಾನಕ | ನುತ್ತಮೌಂಜಶಿಖಂಡಿದಳಪತಿ | ಕೆತ್ತಿತ್ತೊಡಲಿನ ಜೋಲಿನಲಿ ಹೊರಳಿದರು ಹುಡಿ ನೆನೆಯೆ ||೭|| ಒಸಗೆಯೊಡೆದುದು ನೆಲನ ದಿಕ್ಕಿನ | ಭೆಸುಗೆ ಬಿಡೆ ನಿಸ್ಸಾಳತತಿ ಗ | ರ್ಜಿಸಿದವುಬ್ಬಿದಬೊಬ್ಬೆಯುಡಿಗಿತು ಧ್ರುವನಮಂಡಲವ || ಅಸಮಭುಜಬಲ ಪ್ರೊಟುರೇ ಸಾ | ಹಸಿಗ ಮಝುರೇ ಭಾಪುಧಣುಧಣು | ವಿಷಮರಣಸರಸಿಂಹ ಜಾಗೆಂದುದು ಭಟಸ್ತೋಮ ||೮|| ಜನಪ ಕೇಳ್ಳೆ ಪತ್ತೆ ಸುತಸೋ | ಮನಶತಾನೀಕಾದಿ ಘನನಂ | ದನರನೈವರನೆಚ್ಚು ಬೆರಸಿದ್ದ ನರಸುಥಟ್ಟಿನಲಿ || ಅನಿಲಜನ ಮಗುಳೆಚ್ಚು ಪಾಂಚಾ | ಲನ ವಿಭಾಡಿಸಿ ಸರಳಿನಲಿ ಧ್ಯುಮಂ | ಶ್ರೋಣಿಯ ಬೋಳೆಯಸರಿಯ ಸುರಿದುದು ಕರ್ಣನವಮೇಘ ||೯|| ಸಾಲಝಲ್ಲರಿಗಳ ಪತಾಕಾ | ಜಾಲವನು ಚಾಮರವ ಗೋವಳಿ | ಗೋಲ ಡೊಂಕಣಿಗಳ ಕಣೆಯ ಸೀಗುರಿಯ ಸಿಂಧಗಳ || ಧೂಳಿಪಟ್ಟವಮಾಡಿದನ್ನು ಮಿಡುಕು | ಳ್ಳಾಳ ಸದೆದನು ಗಜರಥಾಶ್ವದ | ಮಾಲೆಯನು ಮುತ್ತಿದುದು ಕರ್ಣಶೀಳಿಮುಖವಾತ ||

ಅರಸ ಕೇಳಾನರನನಾವುುರ । ಹರನಸಾಕಪಿವರನಸಾರಥ । ತುರಗನಿಕರವನಾಧನುವ ಟೆಕ್ಕೆಯುವ ಕಪಿವ
ರನ ॥ ಹುರುಳುಗೆಡಿಸಿದಭುಜಪರಾಕ್ರಮ । ದುರಿಯೊಳಗೆ ಬಿಡೆ ಕಾಶಿಹಗೆತರ । ಲಿರೆ ನಿರೂಧಿಸಿ ಧನು
ವ ನಿಜಶರನಿಕರವನು ಕರ್ಣ ॥ ೧೧ ॥ ಹೇಳಲರಿಯೆನು ವಿಕ್ರಮಾಗ್ನಿ ಛ । ಡಾಳಿಸಿದುದಡಿಗಡಿಗೆ ಸೇ
ನಾ । ಜಾಲವನು ಬೇಳಿದನು ಕೂರಂಬುಗಳ ಕೆಂಡದಲಿ ॥ ಆಲಿಗಳು ಸವಿನೋಡಲಿಂದಿ । ನ ಕಾಳಗವ
ನೋಡುವೊಡೆ ಕುರುಭೂ । ಪಾಲಕನ ಬರಹೇಳು ಬರಹೇಳೆನುತ ಬೊಬ್ಬಿರಿದ ॥ ೧೨ ॥ ಶರವಳೆಗೆ
ಮುಖದಿರುಹಿ ಕಾಲಾ । ಳ್ತುರಗಸೇನೆಯು ಮರೆಗೆ ಸಾರಿತು । ತುರಗದಳ ಬಗಿದಿಂಬುಗೊಂಡುದು ಕರಿ
ಘಟಾವಳಿಯ ॥ ಕರಿಘಟಾವಳಿ ಕೋಲಿನುಬ್ಬೆಗೆ । ತೆರಳಿದವು ತೇರುಗಳ ಮರೆಯಲಿ ಹೊರಳಿ ಯೊಡೆ
ದುದು ತೇರು ಥಟ್ಟು ನಿಹಾರದೆಸುಗೆಯಲಿ ॥ ೧೩ ॥ ಕೋಲ ಕೋಳಾಹಳಕೆ ತೇರಿನ । ಗಾಲಿಗಳ ನೊ
ಡ್ಡಿದರು ಹರಿಗೆಯ । ಹೇಳದಿರು ಹಂಮುಗೆಯ ಕೊಯ್ದೊಡ್ಡಿದರು ರೆಂಚೆಗಳ ॥ ಮೇಳಯುವ ಮಾಡಿ
ದರು ತಂಬುಗೆ । ನೂಲಹರಿಗೆತನುತ್ರಸೀಸಕ । ಜಾಲಗುಳಹಕ್ಕರಿಕೆಹಲ್ಲಣಬಾಹುರಕ್ಷೆಗಳ ॥ ೧೪ ॥ ಉ
ರಿಯ ಮಳೆಗಾಲದಲಿ ದಡ್ಡಿಯ । ನರಗಿನಲಿ ಮಾಡಿದರು ಮಿಗೆ ಕಾ । ರಿರುಳು ಕೋಟೆಯ ರಚಿಸಿದರು
ಗಡ ರವಿಯಮುತ್ತಿಗೆಗೆ ॥ ಹರಿಗೆಸೀಸಕಜೋಡುಕಾವವೆ । ಕೆರಳಿದೊಡೆಕರ್ಣಾಸ್ತ್ರಕೀನಿ । ಬ್ಬರದ ರಣ
ದುಬ್ಬಟೆಯ ಕಂಡುಬ್ಬಿದನು ಕುರುರಾಯ ॥ ೧೫ ॥ ನೋಡಿರೈ ನಿಮ್ಮವರ ದಳ ಕ್ರೈ । ಮಾಡುತಿದೆ
ನವಮ್ಮಾತನನು ನೀವ್ । ಖೋಡಿಗಾಬಿರಿ ನಿಮ್ಮ ಪವನಜಪಾರ್ಥರುಬ್ಬಟೆಯ ॥ ನೋಡಿರೈ ಲೇಸಾಗಿ ನೀ
ವ್ ಮಾ । ತಾಡಬಾರದೆ ನಿಮ್ಮನಾಲಿಗೆ । ಗೂಡುಗೊಂಡುದೆ ಯೆಂದನವನಿಪನಾಕೃಪಾದಿಗಳ ॥ ನರನ
ಬಿಗಿದುದು ಮೂರ್ಛೆ ಭೀಮನ । ಹರಣಕೊರಳಲಿ ಮಿಡುಕುತಿದೆ ಮುರ । ಹರನ ವೃಸುರೊಯ್ಯಾಳಿಯಿ
ದೆ ಮೂಗಿನಲಿ ಮೋಹರಿಸಿ ॥ ಬಿರುದಸಾತ್ಯಕಿನಕುಲಸಹದೇ । ವರಿಗದಾವುದು ಹದನು ಬಲುಧರ । ಧು
ರವ ನೋಡಿರೆ ನೀವು ಯೆಂದೆನು ನಗುತ ಕುರುರಾಯ ॥ ೧೬ ॥ ಕೂಡೆ ಮಕ್ಕಳನಿಕ್ಕಿ ತಂದೆಗಳೋ
ಡುತಿದೆ ಸರಳಿಂಗೆ ತಮ್ಮನ । ನೀಡಿ ತೋರಿಸಿ ಜಾರುತಿದೆ ಯಣ್ಣಂದಿರಾದವರು ॥ ಓಡುತಿದೆಯಾಳೊ
ಡೆಯನನು ಬಿಸು । ಟೋಡಿ ತಾಯಿಗೆ ಮಕ್ಕಳಾಗದೆ । ಕೂಡಿ ಮುಂಮುಳಿಮುಸುಗುತಿದೆ ಗುರುಸೂ
ನು ನೋಡೆಂದ ॥ ೧೭ ॥ ಅರಿಬಲದ ಕಡುಗೇಡು ಹಬ್ಬಿತು । ಸುರಟಬಲವನಕಟಕಟ ನೋಡೈ । ಸುರ
ಪತಿಗೆ ದುಮ್ಮಾನವಡಸಿತಲೇ ಮಹಾದೇವ ॥ ಸುರನದೀಜದ್ರೋಣರೀಪರಿ । ಪರಮಶೌರ್ಯಪರೊಡಗಿ
ದೊಡೆನಿ । ಷ್ಠುರದನುಡಿಯೆನ್ನದಿರು ಕಂಡುದನಾಡಬೇಕೆಂದ ॥ ೧೮ ॥ ಉಂಟು ಜೇಯ ವಿರೋಧಿಬ
ಲವಕಿ । ಕಂಟಣಿಸುತಿದೆ ಪಾಂಡುಪುತ್ರರ । ನೆಂಟರಿಷ್ಟರಿಗಾದುದೈ ದುಮ್ಮಾನ ಹುಸಿಯಲ್ಲ ॥ ಎಂ
ಟುಮಡಿ ನಿಮಗಾಗೆ ಜಯ ಹದಿ । ನೆಂಟುಮಡಿ ಜಯಪವರಸೇರುವು । ದುಂಟು ಹುಸಿದರೆ ಕೂಡಾ ಸಿ
ಕೊಡುವೆನು ತನ್ನನಾಲಿಗೆಯ ॥ ೨೦ ॥ ಮುಗುಳುನಗೆಯೊಬ್ಬನಲಿ ಸವಿವಾ । ತುಗಳ ರಸವೊಬ್ಬನಲಿ
ಕಡೆಗ । ಣ್ಣುಗಳ ಮಿಂಚೊಬ್ಬನಲಿ ನೇವುರದಳವೊಳಗಸಹಿತ ॥ ಸೊಗಸು ಬೇರೊಬ್ಬನಲಿ ನೇಹದ ।
ತಗಹು ಮತ್ತೊಬ್ಬನಲಿ ಸತಿಯರವಿಗಡತನಕಿದುಸಹಜ ಜಯವೆಧುಜಾರೆ ನೋಡೆಂದ ॥ ೨೧ ॥ ಒಂದು
ಕಡೆಗಣ್ಣಿನಲಿ ಕೌರವ । ವೃಂದವನು ನೋಡುವಳು ಕೃಯೊತ । ನೊಂದುಕಡೆಗಣ್ಣಿನಲಿ ಮಾತಾಡ
ಸುವಳಂಬಲವ ॥ ಇಂದುಜಯವಧು ದಿಟ ಪತಿವ್ರತೆ । ಯೆಂದುಬಗದ್ಯ ಭೂಪ ಹುಸಿ ಹೋ । ಗೆ

ದು ಗುರುಸುತ ಜರೆದು ಹೊಕ್ಕನು ತನ್ನ ಮೋಹರವ ‖ ೨೨ ‖ ಅರಸ ಚಿತ್ತೈಸಿತ್ತಲರ್ಜುನ । ಗರೆ ಮುಗಿದಕಣ್ಣಾರಳ್ದವಂತಃ । ಕರಣಪಂಚೇಂದ್ರಿಯಕೆ ಬಿಟ್ಟುದು ತಗಹು ಕಳವಳದ ‖ ಮುರಿಹುಮು ರಿದೆಡಬಲದತನ್ನವ। ರಿರವನೀಕ್ಷಿಸಿಕೋಪಶಿಖಿಯುಬ್ಬರದಲಿಬ್ಬಗಿಯಾದುದಂತರ್ಭಾವವೆಡಿಗಡಿಗೆ ‖೨೩‖ ಕಲಶಜಲದಲಿ ಮೈಯ ನೆತ್ತರ । ತೊಳೆದು ಹೊಸಮಡಿವರ್ಗದಲಿ ಮುರಿ । ಮಲಕ ಬಿಗಿದನು ಧರಿಸಿ ಸಾದುಜವಾಜಿಪರಿಮಳವ ‖ ಲುಳಿಯುಹೊಸಸೀಸಕವ ಕವಚವ। ನಳವಡಿಸಿ ಕರ್ಪುರದ ಕವಳದ। ಹಳುಕ ಹಾಯಿಕಿಕೊಳುತ ಕೊಂಡನು ಮತ್ತೆ ಗಾಂಡಿವವ ‖ ೨೪ ‖ ನಿಮ್ಮಸಿರಿಯೊಡಲಿನಲಿ ಜೋಡಿನ।ಹಂ ಮುಗೆಯ ನೋಡಂಬು ಹಾಯ್ದವು । ನಮ್ಮ ದುಷ್ಕೃತವ್ಯಸಲೇ ನಿಮಗೆತ್ತಲೀವ್ಯಸನ ‖ ನಿಮ್ಮಡಿಗ ಳೇ ಬಲ್ಲಿರಂತಿರ । ಲೆಮ್ಮ ರಾಜ್ಯದ ಹುದುವೆ ನೊಂದನು । ನಮ್ಮಹನುಮನೆನುತ್ತ ಮುಂಮಲವುರು ಗಿದನು ಪಾರ್ಥ ‖ ೨೫ ‖ ಸಾಕದಂತಿರಲಾಹವಕೆ ಬರ । ಲೇಕೆ ಕಬ್ಬಿನಬನವೆ ಬಾಣಾ । ನೀಕಕಭಿಮು ಖರಾಗಿ ಸಾವರು ನೋವರದಕೇನು ‖ ಆಕುಠಾರನಲೀಕ್ಷಣಕೆ ಕೈ । ತೂಕದಲಿ ಕಾದೈ ರಣಾಗ್ರದೊ। ಳಾ ಕರಿಸು ಜಯಸಿರಿಯನೆಂದನು ಕೃಷ್ಣನರ್ಜುನನ ‖ ೨೬ ‖ ಹರಿಸು ರಥವನು ವೈರಿಯುರುಬೆಗೆ । ತೆರ ಳುತಿದೆ ನಮ್ಮವರು ಕರ್ಣನ । ಕೊರಳ ಬಾಯಲಿ ಕೀಲಿಸುವೆನೀಶರಸಲಾಖೆಗಳ ‖ ಅರಸ ಕೇಳಾಮಾತು ಹಿಂಚಿತು । ನರನ ರಥ ಜೋಡಿಸಿತು ಕರ್ಣನ । ಸರಿಸದಲಿ ಜೋಡಿಸಿತು ಪಾಂಡವಸೇನೆ ನಿಮಿಷದ ಲಿ ‖ ೨೭ ‖ ಎಲೆಲೆಕರ್ಣ ಕಿರೀಟಿಯುರುಬೆಗೆ । ನಿಲುವೊಡರಿದೈ ಹಾವನರೆಗಡಿ । ದುಳುಹಿ ಕೆಡಿಸಿದೆ ಪಾಪಿ ರಾಯನ ರಾಜಕಾರಿಯವ ‖ ತೊಲಗಿಸುವೆನೇ ರಥವನೆನೆ ತೆ । ಕ್ಕಳಿಸಿ ಜರೆದನು ಕರ್ಣಶಲ್ಯನ । ನೆಲವೊ ಘಡಹೋಗೆನುತ ಮುರಿದೆಚ್ಚನು ಧನಂಜಯನ ‖ ೨೮ ‖ ಎಡೆಯಲೀತನ ಸರಳಸಾರವ। ಕಡಿ ದು ಕೈಯೊಡನೆಚ್ಚ ಮಗುಳೆ। ಚ್ಚಡಿಗಡಿಗೆ ಬಿಡದೆಚ್ಚ ಪುನರಪಿಯೆಚ್ಚ ಬಿಡದೆಚ್ಚ ‖ ಪಡಿಮುಖಕೆ ದಾವಾಗ್ನಿಯದನಿಂ । ಮಡಿಸಿ ಬೀಸುವಭೇದಪವನನು । ಸುಡದೆ ಬಿಡುವನೆ ಕಲಿಧನಂಜಯನಹಿತತೃಣ ವನವ ‖ ೨೯ ‖ ಒದೆದು ಕವಚವನೊದೆದು ಗರಿದೋ । ರಿದವು ಮೈಯಲಿ ಕೂಡೆ ಮೊನೆದೋರಿ । ದವು ಬೆನ್ನಲಿ ಕರ್ಣನನದ್ದನು ರುಧಿರವಾರಿಯಲಿ ‖ ಉದುರಿದವು ಕೈಯಂಬು ಬಲುಕಾ । ರಿದನು ರ ಕುತವ ಕಳಕಳದಕಂ । ಪದಲಿ ಝೋಂಪಿಸಿ ಮಲಗಿದನು ಮಣಿಮಯದ ಗದ್ದುಗೆಯ ‖ ೩೦ ‖ ತೋ ರಿಸಾ ನಿನ್ನೊಡೆಯನೋಲಿಯ । ಕಾರತನವನು ನಮ್ಮ ಬಲವನು। ಮೂರುಮೂಲೆಯಹಾಯ್ಸಿಬೆಚ್ಚಿ ಸಿ ಗೆಲಿದಗರುವನಲಾ‖ ಜಾರಿದವು ಬಿಲ್ಲಂಬು ಬಿದ್ದವು । ವೀರರಲಿ ಹಳಚಿಸಿದ್ಯ ಕೈಯಲಿ । ಮೋರೆಗೇತ ಕೆ ಮುರುಕವೆಂದನು ಭಾನುನಂದನನ ‖ ೩೧ ‖ ಮರಳಿ ಶಲ್ಯನನೆಚ್ಚನಾತನ । ಕರದ ಧನುವನು ಕಡಿದು ಪಾಥೆಯ । ತುರಗದೊಡಲಲಿ ಹೂಳಿದನು ಹೇರಾಳದಂಬುಗಳ ‖ ಹೊರೆಯ ಹಡಪದ ಜಾಹಿಯರ ಟಾ । ಮುಂಗರನು ನೋಯಿಸಿದ ಗೆಲವಿನ । ಗರುವತನವನು ಬಡ್ಡಿಸಹಿತುಗುಳಿಚಿದನಾಪಾರ್ಥ ‖೩೨‖ ದಳಪತಿಯ ದುಮ್ಮಾನದಲಿ ಕಳ । ವಳಿಸಿತೀಚೆಯ ಸೇನೆ ಪಾರ್ಥನ। ಹಿಳುಕು ಹೊಕ್ಕವು ಹರಹಿ ತಿವಿದ ವು ರಾಯನಿದಿರಿನಲಿ ‖ ಹಲವುಪಾತೇನಾಕೃಪನ ಸೌ । ಬಲನನಾಗುರುಸುತನನಾಕೌ । ಶಲನನಾಕೃತವ ರ್ಮಕನ ಮುರಿಯೆಚ್ಚಬೊಬ್ಬಿರಿದ ‖ ೩೩ ‖ ಸಿಕ್ಕಿದನು ಕುರುರಾಯನಾದುದು । ಮಕ್ಕಳಾಟಿಕೆ ಗು ಣನದೀಸುತ । ರಿಕ್ತ ಹಾಯ್ದರು ನಮ್ಮ ದಳಪತಿ ಕಾದಿ ಬಳಲಿದನು ‖ ಹೊಕ್ಕನರ್ಜುನನಿವರದರ್ಪವ ।

ನೊಕ್ಕಲಿಕ್ಕಿದೊಡಿನ್ನು ಪರಿವಾ । ರಕ್ಕೆ ಬಂದುದು ಪಂತವೆಂಧುಲಿದುದು ಭಟಸ್ತೋಮ ॥ ೩೪ ॥ ಅ
ರಸಚಿತ್ತೈಸಾರುಸಾವಿರ । ವರಮಹಾರಥರೌಂಕಿದರು ಝ । ಲ್ಲರಿಯ ಝಾಡಿಯು ಸೆಳೆಯು ಸಿಂಧದ
ಸುಳಿಯು ಸೀಗುರಿಯು ॥ ಬಿರಿಯೆ ನೆಲನಳ್ಳಿರಿವವಾದ್ಯದ । ಮುರುಜಡಿಂಡಿಮಪಟಹದಾಡಂ। ಬರದರವ
ವಡಗಿತ್ತುಕೈವಾರಿಗಳರಭಸದಲಿ ॥ ೩೫ ॥ ಫಡಫಡೆಲವೋ ಪಾರ್ಥ ರಾಯನ। ತುಡುಕಬಹುದೇ ಕೂಟ
ಗಿರಿಯಲಿ । ಕಡಲು ಮುಳುಗುವದೇನು ಸದರವೆ ಶಿವಮಹಾದೇವ ॥ ಹಿಡಿ ಮಹಾಸ್ತ್ರವನಿನ್ನುಮುಂ
ದಡಿ । ಮಿಡುಕಿದೊಡೆ ನಮ್ಮಾಣೆಯೆಂದವ । ಗಡಿಸಿ ನೂಕಿತು ನಿನ್ನವನ ಮನ್ನಣೆಯ ಪರಿವಾರ॥೩೬॥
ಜನಪ ಕೇಳ್ಳೆರ ಕುತಜಲದಲಿ । ನನೆದನೆಲ ಹುಡಿಮಸಗಿ ಕೆಂಧೂ । ಳಿನಲಿ ಕತ್ತಲಿಸಿದುದು ದಿಗ್ಭ್ರಮೆ
ಯಾದುದಡಿಗಡಿಗೆ ॥ ಅನಿಬರಾವೆಡೆ ಕರ್ಣನೋ ಫಲು । ಗುಣನೊ ಪಾಂಡವಬಲವೊ ನಿನ್ನಾ । ತನೊ
ನಿಧಾನಿಸಲರಿಯನೆಂದನು ಸಂಜಯನು ನಗುತ ॥ ೩೭ ॥ ಬಳಗೆ ಹೆಚ್ಚಿದಧೂಳಿನುಬ್ಬರ । ಮುಳಿದವೊ
ಲು ವಿಜಯಾಸ್ತ್ರಹತಿಯಲಿ । ಹಿಳಿದಕರಿನ ತುರಗದೊಡಲರುಣಾಂಬುಪೂರದಲಿ ॥ ಕಳಚಿತಾಕೆಂಧೂ
ಳಿ ಬಾಣಾ । ವಳಿಯ ಕತ್ತಲೆಯೊಳಗೆ ಕಾಣೆನು । ದಳದೊಳಾರಾರೆಂದು ಮತ್ತರೆಘಳಿಗೆಮಾತ್ರದ
ಲಿ ॥ ೩೮ ॥ ಬೆರಸಿ ಹೊಯ್ದರು ರಾವುತರು ರಥ । ತುರಗತತಿ ಯಿಟ್ಟಣಿಸಿದವು ಮದ । ಕರಿಗಳಂಗೈ
ಸಿದವು ಪಡಿಚಾಚಿದವು ಮುಂಕಣಿಗೆ ॥ ಹರಿಗೆಗಳ ಶಿರಕೊಡ್ಡಿ ಕಕ್ಕಡೆ । ಪರಶುಮುಸಲಮುಸುಂಡಿಗಳ
ಕೊಂ । ಡಿರದೆ ತರುಬಿದನರ್ಜುನನ ರಥದೆರಡುಬಾಹೆಯಲಿ ॥ ೩೯ ॥ ಅರಸ ಕೇಳು ಜಯದ್ರಥನ ಮೋ
ಹರದ ಮಧ್ಯದೊಳೆಂದು ಸಿಲುಕಿದ। ನರನ ರಥವೀಹೊಳ್ಳುಗರ ಹೋರಟೆಗೆ ಹೆದರುವುದೆ ॥ ಕರಿಘಟಾ
ವಳಿಗೊಂದುಸರಳಾ । ತುರಗದಳಕೊಂದಂಬು ಬಳಿಕೆರ । ಡೆರಡುಶರದಲಿ ಕೊಚ್ಚಿದನು ಕಾಲಾಳುತೇ
ರುಗಳ ॥ ೪೦ ॥ ಆಳುಮುರಿದುದಲೇ ಮಹಾರಥ । ರೇಳಿರ್ಛ ನೀವಾರುಸಾವಿರ । ಮೇಲುದಳದವರಾ
ಕೆವಾಳರು ನಿಮ್ಮಧಟ್ಟಿನಲಿ ॥ ಕಾಳಗದಪರಿಲೇಸು ಕರ್ಣನ । ಸೋಲದಲಿ ಸೀವರಿಸದಿರಿ ಭೂ । ಪಾಲ
ನಾಣೆ ದೊರಾರರಹಿರೆನುತೆಚ್ಚನಾಪಾರ್ಥ ॥ ೪೧ ॥ ಬಾಣಹತಿಗುಕ್ಕುಡಿಸಿ ಸುಭಟ । ಶ್ರೇಣಿ ಹೆದರಿತು
ಶೌರ್ಯನಗರದ । ವಾಣಿಯರು ಹೊಕ್ಕಚ್ಚು ಹೋಗಾಡಿದರು ಪತಿರಿಣವ ॥ ಗೋಣಕೊಯ್ಲಿನ ಕಾರ
ಣದ ಮುಂ । ಗೇಣಿಕಾರನು ಮೊಳಗಿದನು ಫಡ । ಕೇಣವಿನ್ನೇಕನುತ ಕೈದೋರಿತು ಭಟವ್ರಾತ॥೪೨॥
ಸೀಳಿದನು ಸಮರಥರ ಸುಳಿಗೊಂ । ಡಾಳಿ ಸದೆದನು ಸವರಿದನು ಭೂ । ಪಾಲಪುತ್ರನನಖಿಳದೇಶದ್ವೀ
ಪಪಾಲಕರ ॥ ಆಳು ಮುರಿದುದು ಮಾನಹಾನಿಯು । ಹೇಳುವೊಡೆ ನಗೆಯಿಂದು ಕುರುಬಲ । ಜಾಲದ
ಲಿ ಜಿಳ್ಳುಗರು ಬಂದರು ಭಂಗಜಲಧಿಯಲಿ ॥ ೪೩ ॥ ಬಿಡುದಲೆಯಲೋಡಿದರು ಬಿರುದಿನ । ತೊಡರ
ಬಿಸುಟರು ವಾಹನಂಗಳ । ಗೊಡವೆಬಿಟ್ಟುದು ನೆಲಕೆ ಕೈಯೊಡಗೊಟ್ಟು ಕೈದುಗಳ ॥ ಅಡಸಿದೀತನ ಸ
ತ್ಪ್ರತಾಪದ । ಕಡುಬಿಸಿಲ ಬೇಸಿಗೆಗೆ ವೀರರ । ಮಡುವುಗಳು ಬತ್ತಿದವು ಮೋರೆಗಳೊಣಗಿ ಪಟುಭಟ
ರ ॥ ೪೪ ॥ ಹೋಗದಿರಿಹೋಗದಿರಿ ದಳಪತಿ । ಯಾಗುಹೋಗರಿಯದೆ ನೃಪಾಲನ । ಮೂಗನಾರಿಗೆ
ಮಾರಿದಿರಿ ಕೊಂಬವರು ನಾವಲ್ಲಾ ॥ ಈಗರುವರೀಪರಿ ಫಲಾಯನ । ಯೋಗಸಿದ್ಧರೆ ಸಾಹಸಿಗರೈ ।
ಬಾಗೆನುತ ಬೆಂಬತ್ತಿ ಹುಡಿಗುಟ್ಟಿದನು ಕಲಿಪಾರ್ಥ ॥ ೪೫ ॥ ಇವರ ಹದನಿದು ಕರ್ಣನಾಡಿದ । ಕಟ
ಡಿಕೆಯ ಬೆಸಗೊಳ್ಳರೈ ಕೌ । ರವನ ಗರುವಗ್ರಾಸಕಿವ ರಾಹುಗಳು ಲಟಕಟಿಸಿ ॥ ನಿವಗೆ ಬವರದೊ

ಳೊಂದುಮುಷ್ಟಿಗೆ । ರವಣವುಂಟೇ ಹಾಯ್ಕು ನಿಮ್ಮಾ । ಯುವನು ನೋಡುವೆನೆನುತ ಕರೆದನು ಕೃಪನ ಗುರುಸುತನ ॥ ೪೬ ॥ ಅರಸ ಕೇಳಾಕ್ಷಣಕೆ ಮುಗ್ಗಿತು । ಮರೆವೆ ನೆಗ್ಗಿತು ಭೀತಿ ಶೌರ್ಯದ ।ತಿರುಳು ಬಲಿದುದು ಕೋಪ ತಳಿತುದು ಕೋಡಿನೀರೇರೆ ॥ ಕರಣಪಲ್ಲವ ಪಾಡಿನಲಿ ಸಂ । ವರಿಸಿಕೊಂಡುದು ವೀರರಸವು। ಬ್ಬರಿಸಿ ಸರ್ವೇಂದ್ರಿಯವ ಮುಸುಕಿತು ನಿನ್ನ ದಳಪತಿಯ ॥ ೪೭ ॥ ನೋಡಿದನು ಕೆಲಬಲನನುಗಿದೀ । ಡಾಡಿದನು ನೆಟ್ಟಂಬುಗಳ ಹರಿ । ಜೋಡತೆಗೆದನು ತೊಳೆದನಂಗೋಪಾಂಗಶೋಣಿತವ ॥ ಕೂಡೆ ಕತ್ತುರಿಗಂಧದಲಿ ಮುಳು । ಗಾಡಿ ದಿವ್ಯದುಕೂಲವನು ಮೈ । ಗೂಡಿ ಮೆರೆದನು ಕರ್ಣನನುಪಮದಿವ್ಯತೇಜದಲಿ ॥ ಬೋಳವಿಸಿದನು ಕರ್ಣಶಲ್ಯನ ।ಸೂಳವಿಸಿದನು ಭುಜವನುಬ್ಬಿನೊ । ಳಾಳವಿಸಿದನು ಚಾಪಗಾನಸ್ಥಾನಕವನರಿದು ॥ ಮೇಳವಿಸಿದನು ರಥವ ಕೆಲದಲಿ । ಬೋಳೆಯಂಬಿನ ಹೊದೆಯುಲಹಿತನ । ಪಾಳಿಸುವಸರಳಿದೆ ಯೆನುತ ತೂಗಿದನು ಕಲಿಕರ್ಣ ॥ ೪೯ ॥ ಫಡಫಡೆಲವೋ ಪಾರ್ಥ ಜೂಜಿಂ । ಗೊಡಬಡಿಕೆ ನಿನಗೇಕೆ ಬಿನುಗುಗ । ಳೊಡನೆ ಹೆಕ್ಕಳಬೇಡ ಹೋಗದಿರಿತ್ತಲಿದಿರಾಗು ॥ ಹಿಡಿದಮುಷ್ಟಿಯ ನಿನ್ನ ರಸಣವ । ಕೊಡಹಿ ನಿನ್ನೆದೆವೆರಳ ಕೊಳ್ಳದೆ । ಬಿಡುವೆನೇ ತಾನೆನುತ ಕರೆದನು ಕರ್ಣನರ್ಜುನನ ॥ ೫೦ ॥ ಅರಸಕೇಳೈ ಕರಿಯು ಗರ್ಜನೆ । ಗುರುವಣಿಪಕೇಸರಿಯವೋಲು ಕೃಪ । ಗುರುಸುತರ ಬಿಟ್ಟೆತ್ತ ಹರಿದನು ಹಗೆಯ ಸಮ್ಮುಖಕೆ ॥ ತಿರುಪುಸದರವೆ ನಿನಗೆ ಗತಿ ಕಾ । ಹುರಕಣಾವಳಿಕಂತಗತಬಾ । ಹಿರನು ನೀನೆಲೆಕರ್ಣ ಫಡ ಹೋಗೆನುತ ತೆಗೆದೆಚ್ಚ ॥ ೫೧ ॥ ಭರತಭಾಷೆಯಲಾವಿಧಾವಂ । ತರುವಿರಾಟನ ಮನೆಯಲಿದನಾ । ರರಿವರೈ ನಾವೆತ್ತಬಲ್ಲೆವು ನಿಮ್ಮ ವಿದ್ಯೆಗಳ ॥ ಪರರ ಮಾತಂತಿರಲಿ ಬಾಹು । ಸ್ಫುರಣವಭಿನವವಂಗಹಾರದ । ಪರಿಯ ತೋರಾ ಯೆನುತ ತೆಗೆದೆಚ್ಚನು ಧನಂಜಯನ ॥ ೫೨ ॥ ಝುಳಪಿಸಿದುದೆರಡಂಕದಲಿ ನಿ । ಷ್ಫಲಿತತೇಜಃಪುಂಜವಿಬ್ಬರ । ಹಳಹಳಿಕೆ ಹಬ್ಬಿದುದು ಗಬ್ಬರಿಸಿದುದು ಗಗನದಲಿ ॥ ಹಿಳುಕನುಗಿದವೊ ಹಿಳುಕ ಮುಂಮೊನೆ । ಯಲಗನುಗುಳುವಕಣೆಗಳಲಿ ಕಣೆ । ತಳಿತವೋ ತ್ರೈಲೋಕ್ಯ ಬಾಣಾದ್ವೈತವಾಯ್ತೆಂದ ॥ ೫೩ ॥ ಪರಶುರಾಮನ ಕಾರ್ತವೀರ್ಯನ । ವರದಿಳೀಪನ ದುಂದುಮಾರನ । ಭರತದಶರಥನಹುಷನಳರಾಘವನ ಲಕ್ಷ್ಮಣನ ॥ ಸರಿಮಿಗಿಲು ಕಲಿಪಾರ್ಥನೀಗಳಿ । ನರಸುಗಳ ಪಾಡೇಕಿರೀಟಿಯು। ಧರೆಗೆನುತ ಕೊಂಡಾಡಿತಮರಸ್ತೋಮವರ್ಜುನನ ॥ ೫೪ ॥ ತಾರಕನ ಜಂಭನ ನಿಕುಂಭನ । ತಾರಕಾಕ್ಷನ ಕಾಲನೇಮಿಯ । ವೀರಮಹಿಷಾಸುರನ ಬಾಣಾಸುರನ ರಾವಣನ ॥ತೋರಹತ್ತರ ಬಾಹುಬಲವದು। ಸೇರಿತೀಕರ್ಣಂಗೆ ಮಿಕ್ಕವ। ರಾರುಪಡಿಯೈ ಕದನದಲಿ ಸರಿಯೆಂದುದಮರಗಣ ॥ ೫೫ ॥ ಪೂತುಮಝುರೇ ಕರ್ಣವಿಶಿಖ । ವ್ರಾತವೊಂದಿನಿತಿಲ್ಲ ಲಂಕೆಯ । ಪಾತಕರ ಚಾಪಳವ ಕಂಡೆನು ಚಾಪತಂತ್ರಕವ ॥ ಈತನತಿಶಯಬಾಣರಚನಾ। ಖ್ಯಾತಿಯಿದು ಭೀಷ್ಮಾದಿಸುಭಟ । ವ್ರಾತಕಿಲ್ಲೆಯದೆಂದು ತಲೆದೂಗಿದನು ಹನುಮಂತ ॥ ೫೬ ॥ ಅದ್ದು ದುಮ್ಮಾನದಲಿ ಹೊಡೆಮಗು । ಳೆದ್ದುದೀಕುರುಸೇನೆ ತಡಿಯಲಿ । ಬಿದ್ದುದೈ ಸಂತೋಷಸಾಗರಕ್ಷೀರಜಲಧಿಯಲಿ ॥ ಗೆದ್ದನೈ ನಿನ್ನಾತನೊಸಗೆಯ । ಬಿದ್ದಿನರಲೈ ನಾವು ಪರರಿಗೆ। ಬಿದ್ದುದೊಂದಪಘಾತಿಯೆಂದನು ಸಂಜಯನು ನಗುತ ॥ ... ... ... ... ॥ ೫೭ ॥

ಅಂತು ಸಂಧಿ ೨೪ಕ್ಕಂ ಪದ ೧೦೧೩ಕ್ಕೆ ಮಂಗಳಮಸ್ತು.

## ಇಪ್ಪತ್ತೈದನೆಯ ಸಂಧಿ.

ಸೂಚನೆ ॥ ರಾಯುಪರಬಲಮಥನ ಕೌರವ । ರಾಯಧರಣಿವರಾಹ ಕಲಿರಾ । ಧೇಯನೆಚ್ಚನು ರೌದ್ರದರ್ಪದ ಸರ್ಪಬಾಣವನು ॥

ಪದ ॥ ಹೇಳು ಸಂಜಯ ಹಗೆಗೆ ಬಿದ್ದವಿ! ತಾಳವಾವುದು ಕಿವಿಗಳೊಲಿದವು। ನಾಲಿಗೆಯು ನೋಡುವೆನು ವಚನಾಂವ್ರುತದ ಸವಿ ಹಿರಿದು ॥ ಜಾಳಿಸಿತೆ ಹಗೆ ಕರ್ಣ ಗೆಲಿದನೆ । ಕಾಳಗವನೀಮಾತುಗಳನೀ । ಹೇಳುತಿರೆ ಸಾಕೆಂದು ನುಡಿದನು ನಗುತ ನರನಾಥ ॥ ೧ ॥ ಅವನಿಪತಿ ಕೇಳುವೊಡೆಸಾವಿರ । ಕಿವಿಗಳ್ಳೈದವು ನಿಮ್ಮ ಕರ್ಣನ । ಬವರದಲಿ ರೂಢಿಸಿದರೌದ್ರವರಾಜಕಾರಿಯವ ॥ ಸವಡಿವೆರಳಿನ ಸೇದುವಂಬಿನ । ತವಕಿಗನ ತಗ್ಗಿಸುವೆ ನಿಲ್ಲೆನು । ತವಗಡದ ಕೋಪದಲಿ ಕಿಡಿಕಿಡಿವೋದನಾಕರ್ಣ ॥ ೨ ॥ ವಿಾರಿತುದಿ ಸುಯ್ಲಿನಲಿ ಕಂಗಳು । ಹೇರಿದವು ಕಡುಗೆಂಪನೊಗಡಿಸಿ । ಕಾರಿದವು ರೋಮಾಳಿ ರೋಷಶ್ವೇದಬಿಂದುಗಳ ॥ ಕೌರಿಡಲು ಕುಡಿವಿಾಸೆ ಕಾದುದು । ಮೋರೆ ಬದ್ಧ ಭ್ರುಕುಟಿಯಲಿ ಹುರಿಯೇರಿತಧಿಕ ಕ್ರೋಧತಾಮಸ ನಿನ್ನ ದಳಪತಿಯ ॥೩॥ ಉಗಿದನು ರಗಾಸ್ತ್ರವನು ಹೊಂಮೂ । ಡಿಗೆಯೊಳಗೆ ಹೊರಕ್ಕೈಯ ಗಾಳಿಗೆ । ಹೊಗೆಯ ಹೊದರಿನ ಹೊರಳಿ ಹಬ್ಬಿತು ಕೂಡೆ ಖಿಡಿಯಿಡುತ ॥ ಗಗನಗಮನದ ನಿಖಿಳವಿಹಗಾ । ಳಿಗಳು ಬೆಂದವು ಗಾಢಗರಳದ । ಸೆಗೆಗಳುಕಿ ಸಲೆ ಮಸಗಿ ದಿವಿಜರ ಥಟ್ಟು ಕಳವಳಿಸೆ ॥೪॥ ಉಗಿಯೆಜಗ ಕಂಪಿಸಿತು ತಾರೆಯ । ನೊಗಡಿಸಿತು ನಭಜಲಧಿ ರತುನಾ । ಳಿಗಳನೋಕರಿಸಿತು ಕುಲಾದ್ರಿಗಳೊಲೆದವೆಡಬಲಕೆ । ದಿಗಿಭತತಿ ನಡನಡುಗೆ ಕಮಠನು ॥ ಬೆಗಡುಗೊಂಡೋಡಿದನು ನಭದಲಿ । ಭುಗಿಲಿಡಲು ಫಣಿಬಾಣ ಹೆದರಿಸಿತಖಿಲಲೋಕಗಳ ॥ ೫ ॥ ಬೆರಳಲಂಬನು ತೂಗಲುರಿಹೂಂ । ಕರಣೆಯಲಿ ಪಂಟಿಸಿತು ಸೂಯ್ಲಿನ । ಧರಧುರದ ಬೆಳ್ನೊರೆಯಲೊದಳೆಯ ವಿಷದಲಹರಿಗಳು ॥ ಉರವಣಿಸಿದವು ಗರಳರಸದು । ಬ್ಬರದ ಬೊಬ್ಬುಳಿಕೆಗಳ ಮುಸುಕದ । ಹೊರಳಿಹೊಗೆಗಳ ಛಟಛಟಧ್ವನಿ ಮಸಗಿ ತಡಿಗಡಿಗೆ ॥೬॥ ಹೊರೆಯವರು ಮರನಾದರಾರಥ । ತುರಗ ಲಟಕಟಿಸಿದವು ಅತಿನಿ। ಬ್ಬರದ ಬೆರಗಿನೊಳದ್ದುಹೋದನು ಶಲ್ಯ ನಿಮಿಷದಲಿ ॥ ಉರಿ ಛಡಾಳಿಸಿ ಹೂಂಕೃತಿಯ ಪಂ । ಜರದೊಳಗೆ ಪಲ್ಲವಿಸಿ ತುಂಬಿದ । ಹೊರಳಿಹೊಗೆಯಂಬರವ ತುಂಬಿತು ರಾಯ ಕೇಳೆಂದ ॥೭॥ ಅವರಿಸಿಸಿದವು ಪುಷ್ಕಳಾವ । ರ್ತಾವಳಿಗಳಿಗೆ ಧೂತವಿಷಧೂ । ಮಾವಳಿಯಲೇ ಧಾತುಗೆಟ್ಟುದು ಸಕಲಭುವನಜನ ॥ ದೇವತತಿ ಬೆಂಡಾಯ್ತು ಮೊದಲಿನ । ದೇವರುಬ್ಬಿದರುರಗಪತಿಯ ಫ । ಣಾವಳಿಯು ಗುಡಿಸೆಗೆಹಿದವು ಪಾತಾಳಲೋಕದಲಿ ॥೮॥ ಭುಜವ ಹೊಯ್ದರು ಸೂರ್ಯತಕ್ಷಕ । ರಜನಸಭೆಯಲಿ ಭಯದಿಸುರಪತಿ । ಭಜಿಸಿದನು ಗರುಡನನು ನಿರ್ವಿಷಮಸ್ತುವರಗೆನುತ ॥ ಗಜರಿದವು ನಿಸ್ಸಾಳವಾದ್ಯ । ವ್ರಜದ ಕಹಳೆಯ ಭಟರ ಬೊಬ್ಬೆಯ । ಗಜಬಜೆಗೆ ಗಾಡಿಸಿತು ಕೌರವಸೈನ್ಯಶರಧಿಯಲಿ ॥೯॥ಹಣುಗಿದರು ಭೀಮಾದಿಗಳು ಕ । ಟ್ಟುಣಿಗಿಲಾದವು ಭಟರ ಮೋರೆಗ । ಳೆಣಿಸುತಿರ್ದರು ಜಪಪವನರ್ಜನಕೃಷ್ಣರೆಂಬವರು॥ ಸೆಣಸುವರು ಕುರುರಾಯನೊಪನಿ । ನ್ನುಣಿಲಿ ದರೆಯನು ಧರ್ಮಸುತನೆಂ । ದೆಣಿಕವಾಯಿತು ನಿನ್ನ ದುಷ್ಕರಿಕಾರ ಹರುಷದಲಿ ॥೧೦॥ ಮೊಡಿಗೆಯಲಂಬುಗಿದು ತಿರುವಿಗೆ । ಹೂಡಲೀಹದ ನಾಯ್ತು ಚೌಕ

ದ । ಲೋಡಿಸಿದೊಡೇನಹುದೊ ಹರಹರಹರ ಮಹಾಸ್ತ್ರವಲಾ ॥ ನೋಡಿರೈ ಗುರುಸುತಕೃಪಾದಿಗ ಳೋಡದಿರಿ ನೀವೆನುತ ಹರುಷದ । ಬೇಡಿನಲಿ ಮನಮುಳುಗೆ ತೂಗಾಡಿದನು ಕರುರಾಯ ॥೧೧॥ ಉರಿಯಚೀರ್ಕೊಳವೆಗಳವೊಲು ಘೂ । ತ್ಕರಿಸಿದವು ಫಣಿವದನದಲಿ ದ । ಳ್ಳುರಿಯು ಸಿಮಿಸಿಮಿಸಿಮಿತು ಷಾರದ ಕಡಿಯತುಂತುರಿನ ॥ ಹೊರಳಿಗಿಡಿಗಳ ಕಾರ್ಬೊಗೆಯು । ಕಾ ಹುರದ ಸೂಯ್ಲಿನ ಝಳದಗರಳಾ । ಕ್ಷರದ ಜಗಿಯುರೆ ಮೂತುದೋರಿತು ಬೆಸಸುಬೆಸಸೆನುತ ॥೧೨॥ ಹೂಡಿದನು ತಿರುವಿನಲಿ ಬಾಣದ । ಝಾಡಿಯುರಿ ನಾಲಿಗೆಗೆ ನಿರುತವ । ನೋಡಿ ಪಾರ್ಥನ ಗಳಕೆ ಸಂಧಾನವ ನಿಧಾನಿಸುತ ॥ ನೋಡಿದನು ಶಲ್ಯನನು ಮಿಗೆ ಮಾ । ತಾಡಿವನು ಕುರುಪತಿಯು ಪುಣ್ಯದ । ಬೀಡುಬಿಡುವರೆಕಾಣಲಿನ್ನಹುದೆಂದನಾಕರ್ಣ ॥೧೩॥ ಏನುಸಾರಥಿ ಸರಳು ಪಾಂಡವ । ಸೇನೆಯನು ಗೆಲಲಹುದೆ ಪಾರ್ಥನ । ಮಾನನಿಗೆ ವೈಧವ್ಯದೀಕ್ಷಾವಿಧಿಯ ಕೊಡಬಹುದೆ ॥ ಆನಲಮ್ಮುವರುಂಟೆ ನಿನಗಿದು । ಸಾನುರಾಗವೆ ಹೇಳೆನಲು ರವಿಸೂನುವಿನ ಸರ್ಪಾಸ್ತ್ರವನು ಹೊಗಳಿದನು ಮಾದ್ರೇಶ ॥ ೧೪ ॥ ಲೇಸನಾಡಿದೆ ಕರ್ಣಕೌರವ ನೀಸುದಿನಸಾಕಿದ ಫಲವನೀ । ನೈಸಲೇ ತೋರಿಸಿದವನು ಶಿವಶಿವಮಹಾದೇವಾ ॥ ಏಸುಕಾಳಗವಾದುದೀಕ । ಟ್ಟಾಸುರದ ಶರವೆಲ್ಲಿ ಗುಪ್ತಾವಾಸವಾದುದೊ ಘೂತುರೆಂದನು ಶಲ್ಯನಿನಸುತನ ॥೧೫॥ ಆಯಿತಿದು ಶರವೊಳ್ಳಿತೈ ಕುರು । ರಾಯನಭ್ಯುದಯಪ್ರಪಂಚವಿ । ದಾಯತವು ಸಂಧಾನವಡಬಡದೆನ್ನಚಿತ್ತದಲಿ ॥ ಸಾಯಕವ ನೀ ತಿರುಗಿ ತೊಡುನಿ । ದಾಗ್ಯದಲಿ ಗೆಲಬಹುದೆಲಾ ರಾ । ಧೇಯಎಂದನು ಶಲ್ಯನವನೀಪಾಲ ಕೇಳೆಂದ ॥೧೬॥ ಕೊರಳಿಗೊಡ್ಡಿದೆ ಹೊಳ್ಳುವಾರಿದು । ಸರಳು ಮಕುಟವ ತಾಗುವುದು ತೆಗೆ । ದುರಕೆಕೊಟ್ಟೊಡೆಕೊಯ್ಯದೀಗಳೆ ಕೊರಳನರ್ಜನನ ॥ ಮರಳಿ ತೊಡುತೊಡು ಬೇಗ ಕೌರವ । ನರಸುತನವುಳಿವುದುಕಣಾ ಹೇ । ವರಿಸದಿರು ಹೇಳುವೊಡೆ ಪಂಥವಿದೆಂದನಾಶಲ್ಯ ॥೧೭॥ ಒಂದುಶರಸಂಧಾನ ನಾಲಿಗೆ । ಯೊಂದು ನಂಮಲಿ ಕುಟಿಲವಿದ್ಯೆಯ । ನೆಂದು ಕಂಡೈ ಶಲ್ಯನಾವಡಿಯಿಡುವಧರ್ಮದಲಿ ॥ ಇಂದು ಹೂಡಿದಸರಳನಿಳುಹುವು । ದಂದವೇ ನೀನರಿಯೆ ಹೆರಸಾ । ರೆಂದು ತಿರುವಿನಲಂಬನೊದೆದನು ಕರ್ಣಬೊಬ್ಬಿರಿದು ॥ ಏನ ಹೇಳುವೆ ಬಳಿಕ ಭುವನ । ಜ್ಞಾನವನು ತೆಗೆದೋಡಿದರು ವ್ಯೋಮಾನಿಕರು ವೆಂಠಣಿಸಿತುರಿಯುಪ್ಪಳಿಸಿತಂಬರವ ॥ ತಾನಿಡುವಕರ್ಬೊಗೆಯು ಚೂರಿಸು । ವಾನನಪ್ರಕಟವಾಯು ಲೊದಳೆಯು । ಜೇನಹುಟ್ಟೆಯು ಬಸಿವವಿಷದಲಿ ಬಂದುದುರಗಾಸ್ತ್ರ ॥೧೯॥ ಜನಪ ಕೇಳೈ ಬಳಿಕ ಭೀಮಾ । ರ್ಜನ ನಕುಲಸಹದೇವಸಾತ್ಯಕಿ । ತನತನಗೆ ದಿವ್ಯಾಸ್ತ್ರನಿಕರದಲೆಚ್ಚರಹಿಶರವ ॥ ಅನಿತುಶರವನು ನುಂಗಿ ಮಗುಳೆ । ಚ್ಚನಿತನೊಳಕೊಳುತಾಜ್ಯಧಾರೆಗೆ । ನನೆದಹುತವಹನಂತೆ ಹೆಚ್ಚಿತು ಮತ್ತೆ ಫಣಿಬಾಣ ॥೨೦॥ ಹಾವೃಕೋದರ ನಕುಲ ಹಾಸಹ । ದೇವ ಧರ್ಮಜ ಹಾ ಧನಂಜಯ । ಹಾ ವಿನಗ್ನಿಗೆ ಹವಿಗಳಾದಿರೆ ಹಾಮಹಾದೇವ ॥ ಸಾವೊಡೆಯು ಶಸ್ತ್ರಾಸ್ತ್ರಘಾತದ । ಸಾವುಕ್ಷತ್ರಿಯಕುಲಕೆ ಭಂಗವೆ । ಹಾವಿಧಿಯೆ ಯುಂದೊದರಿ ಮರುಗಿತು ಪಾಂಡುಸುತಸೇನೆ ॥೨೧॥ ತುರಗತತಿ ಕಳವಳಿಸಿದವು ಮದ । ಕರಿಗಳೊದರಿಬವು ಬಸವಳಿದು ರಥ । ತುರುಗವೆಳದವು ತೇರ್ಗಳುರಿದವು ವಿಷದ ಝಳಕೊಯ್ದು ॥ ಸುರಿಮಗರಳದ ಗಾಳಿ ಸೋಂಕಿದ । ನರರು ನಂಜೇರಿತು ಮುಹಾದ್ಭುತ । ಶರದ ಭಾರಿಯವಿಷಕೆ ಕೊಂಗುದಿಗೊಂಡುದರಸೇನೆ ॥೨೨॥ ಗರುಡಪಂಚಾಕ್ಷರಿಯು ಮಂತ್ರ್ಯೋ । ಚ್ಚರಣೆಯಲಿ

ಭೂನಾಗಸತ್ವದ । ಬೆರಳಮುದ್ರಿಕೆಗಳಲಿ ರಕ್ಷಾಯಂತ್ರತಂತ್ರದಲಿ ॥ ಮರಕತದ ಘುಟಿಕೆಯಲಿ ವಿಷಸಂ।
ಹರಣವಿವಿಧೋಪಾಯದಲಿ ನೃಪ । ವರರು ನಿಂದರು ಭೀಮಸೇನಾದಿಗಳುದುಗುಡದಲಿ ॥ ೨೩॥ ಹಿಂದೆ
ಭಗದತ್ತಾಂಕುಶದೊಳುರೆ । ನೊಂದು ಬದುಕಿದಬಳಿಕಲಾಗುರು । ನಂದನನ ನಾರಾಯಣಾಸ್ತ್ರದಲಾ
ದುದಪಘಾತ॥ ಅಂದುಪಾಯದಲುಳುಹಿದನು ಗೋ।ವಿಂದನಿಂದಪಮೃತ್ಯುವಿದನು ಮು । ಕುಂದತಾ
ನೇಬಲ್ಲನೆನುತಿರ್ದುದು ಭಟಸ್ತೋಮ ॥ ೨೪ ॥ ಆರು ನಿಲಿಸುವರಕಟ ನಿಷ್ಪ್ರತಿ। ಕಾರತರವಿದು ಭೀ
ಮಪಾರ್ಥರ । ಕೂರಲಗುಗಣೆ ಶಿವಶಿವಾ ಕೆಚ್ಚಾಯ್ತು ಕದಳಿಗಳು ॥ ಕೌರವನ ಜಯವಧುವಿನೊಡನೆ
ಯು । ಸೇರುವೆಯು ಕುಂಟಣಿಯೊಶರವಿ । ನ್ನಾರಿಗೊರಲುವೆವೆನುತ ಮರುಗಿತು ಪಾಂಡುಸುತಸೇನೆ
॥ ೨೫ ॥ ನಾಲಿಗೆಯು ಚೂರಣದ ದುಷ್ಕರಿ । ಜಾಳಿಗೆಯು ಚಂಮಟದ ಗರಳದ । ಜ್ವಾಲೆಗಳ ಭಾರ
ಣೆಯುಕಿಡಿಗಳ ಝಳಕಠೋರಕದ ॥ ಧೂಳಿಹೊಗೆಯುಬ್ಬರದ ಬಲುನೊರೆ । ಯೋಳಿಯಲಿ ಭುಗಿಭುಗಿ
ಲಬಿಡೆಯುದ । ಮೇಲುವಾಯ್ದುದು ಕೊರಳ ಸರಿಸಕೆ ಕಲಿಧನಂಜಯನ ॥ ೨೬ ॥ ಅರಸಕೇಳೀಸೇನೆ
ಭಾರಿಯ । ಕೊರಳಡಾಯುಧ ಕಳಚುವೈಸು । ಬ್ಬರದ ಮಾರಿಯು ಬಿಂಕ ಮುರಿಯದೆ ಪಾಂಡುತನ
ಯರಿಗೆ ॥ ಹರಿಯು ಹರಹಿನ ವಜ್ರಪಂಜರ । ದರಗಿಳಿಯಲೇ ಪಾರ್ಥನಹಿ ಮಂ । ಜರನ ಮರಕುವೆ
ಕೊಂಬುದೇ ಜನಮೇಜಯಕ್ಷಿತಿಪ ॥ ೨೭ ॥ ನಡುಗುತಿರ್ದುದು ಸುರನಿಕರ ಬೊ । ಬ್ಬಿಡುತಲಿರ್ದುದು
ನಮ್ಮವರು ಬಾ । ಯ್ಬಿಡುತಲಿರ್ದುದು ಪಾರ್ಥನಳವಿಗೆಪಾಂಡುಸುತಸೇನೆ ॥ ತಡೆಯದ್ವಾದಂಗುಲಕೆ ರ
ಥವನು । ನಡಿಸಿ ತುಳಿದನು ನೆಲಕೆ ಪಾರ್ಥನ । ಮುಡಿಯ ಸರಿಸಕೆ ಬಾಣಬಂದುದು ಕೊಲುವ ತವಕ
ದಲಿ ॥ ೨೮ ॥ ಅಣೆದುದಾಮಕುಟವನುತಾರಾ । ಗಣದ ಮಧ್ಯದ ಚಂದ್ರಮನ ಭಾ । ರಣೆಯೊಳಡ
ಗಿದರಾಹುವಿನ ರಚಿಯಾಯ್ತು ನಿಮಿಷದಲಿ ॥ ಕುಣಿಕೆಮುರಿದುದು ಮೌಕ್ತಿಕದ ಕೀ । ಲಣದ ವಜ್ರದ
ಮಾಣಿಕದ ವರ । ಮಣಿಗಳೊಕ್ಕವು ರಕುತದೊಳದೊಡೆಗಲಸಿದಂದದಲಿ ॥ ೨೯ ॥ ಬಿದ್ದುದೇ ಫಲುಗು
ಣನ ತಲೆ ನೆರಯು । ದ್ದುದೇನಮ್ಮಾಟ ಜಯಸಿರಿ । ಕದ್ದಳೇ ರಣದೊಸಗೆಗದ್ದಳೆ ದ್ರೌಪದೀದೇವಿ ॥ ಇ
ದ್ದುದೇ ಧರ್ಮಜನಸಿರಿ ತಳ । ಕದ್ದುದೇನಮ್ಮೊಡಲನಸುಬಿಡ । ದಿರ್ದುದೇಹರಯೆನುತ ಭೀಮಾದಿಗಳ
ಹೊರಳಿದರು ॥ ೩೦ ॥ ವಿಷವ ತೆಗೆದಳು ದ್ರುಪದಸುತೆಕೈ । ಮುಸುಕಿನಲಿ ಚೀಲಾಯುನುಗಿದನು। ವಸು
ಮತೀಶನನಾಮುಹೂರ್ತಕೆ ದೂತರೈತಂದು ॥ ಒಸಗೆ ಜೀಯರ್ಜುನನ ಮಕುಟದ । ಬೆಸುಗೆ ಸಡಲಿ
ತು ಹರಿವರೂಥವ । ಕುಸಿಯಲೊತ್ತಿದನಿಂದು ತಪ್ಪಿತು ತೀವ್ರಫಣಿಬಾಣ ॥ ೩೧ ॥ ಎನಲು ಸಂತೈಸಿ
ತ್ತುರಾಯನ । ಮನೆಯುವರು ಪಾಂಡವರು ಸೇನಾ । ನಿವಹ ಬಿಡೆಗರ್ಜಿಸಿತು ಬಹುವಿಧವಾದ್ಯರಭಸದ
ಲಿ ॥ ವಿನುತಮಕುಟವನುಗಿದು ಕಂಗನೆ । ಕನಲಿ ಮುರಿತಲೆ ಬದುಕಿತೇ ಹಾ । ಯನುತ ಹಲುಮೊರೆವ
ತ್ತಮಿಡಿಲಿತು ಕರ್ಣನಿದ್ದೆಡೆಗೆ ॥ ೩೨ ॥ ತುಡುಕಿ ತೊಡುಯಿನ್ನೊಮ್ಮೆಯಕಟಾ । ಕೆಡಿಸಿದೆಯಲಾ
ಸ್ವಾಮಿಕಾರ್ಯವ । ನುಡಿದುಹೇಳೆನೆ ನಿನ್ನ ಸಾರಥಿಲಕ್ಷ್ಯಭೇದನವ ॥ ಅಡಗಲಿನ್ನೀರೇಳುಭುವನದ । ಎ
ಡಗ ತಿಂಬೆನು ನರನನೆನುತವ । ಗಡಿಸಿ ಕರ್ಣನ ಬೆಸನಬೇಡಿತು ಮತ್ತೆ ಫಣಿಬಾಣ ॥ ೩೩ ॥ ಶಿವನ
ದೊಳಿರಲಿ ಮೇಣ್ವಾ । ಸವನ ಸೀಮೆಯೊಳಿರಲಿ ಪಾತಾಳವನು ಹೊಗಲಂಬುಧಿಯ ಮುಳುಗಲಿ ಬ
ನ ಕೆಳೆಗೊಳಲಿ ॥ ಶಿವಿದು ಕೆಡಹುವೆನಹಿತನನು ಪಂ । ತವನು ಹಾರದಿರೆನಲು ಕೇಳಿದು । ರವಿಯ

ಗ ಬೆರಗಾಗಿ ನೋಡಿದನಂದು ಫಣಿಶರವ ॥ ೩೪ ॥ ಎಸಲುಸರಳುಗಳತ್ತಲೇಕೀ । ಲಿಸುವದಲ್ಲದೆ ಮ ತ್ತೆ ಮರಳಿದು। ಬೆಸನ ಬೇಡುವಬಾಣವೆಂಬುದನರಿಯೆನಾ ಕೇಳ್ದು ॥ ವಿಷಮ ನೀನಾರೆನಲು ಕಿಡಿಗಳ। ಕುಸುರಿಗಳನುದಿರಿಸುತ ನುಡಿದುದು । ವಿಷಮನರಿಯಾಕಾಳಕೂಟಕರಂಡಕರ್ದಮನ ॥ ೩೫ ॥ ಉರಗ ಪತಿನಾನಶ್ವಸೇನನು । ಸುರಪತಿಯ ಕಾಂಡವದೊಳಿರಲದ । ನುರುಹುವಂದಿನಲೆನ್ನನರೆಗಡಿದೀದುರಾತ್ಮಕನ॥ಶಿರವನರಿವೆನು ಬೇಗ ತೊಡುತೊಡು।ಬೆರಗಹಾರದಿರೆನಲು ಸತ್ಯದ। ಪರಮಸೀಮೆಗೆ ತಪ್ಪಲರಿಯದೆ ಕರ್ಣನಿಂತೆಂದ ॥೩೬॥ ಅರಿಯೆನಾನೀನೆಂದುಲೋಗರ। ಮರೆಯುಲಹಿತರೆನಿರಿವಕರ್ಣ್ಣನೆ। ಮರೆದೆಲಾ ನೀನೆನ್ನ ಪರಿಯನು ತೊಡುವದಿಲ್ಲೆನಲು॥ ಮರುಗಿದನು ಶಲ್ಯನು ನೃಪಾಲನ। ನಿರಿದೆಯೋ ರಾಧೇಯ ನೀನೆಂ। ದುರುಬು ಮಿಗೆ ಗರ್ಜಿಸುತ ಕರ್ಣನ ಬೈದು ಕೋಪಿಸಿದ ॥ ೩೭ ॥ ತಿರುಹಿತೊಡು ಸಂಧಾನವನು ನಿ । ಮ್ಮರಸನಭ್ಯುದಯಾರ್ಥವೆನೆ ಧಿಕ್ಕರಿಸಿ ನಮ್ಮನು ನೂಕಿ ಕಳೆದೆ ಮಹಾಹಿಮಾರ್ಗಣವ ॥ ನರವತಲೆ ಬದುಕಿದುದು ಸಾಕಂ । ತಿರಲಿ ಸರಳೇ ತನ್ನ ಕಳುಹೆಂ । ದೊರೆಲು ತಿದೆ ತೊಡು ಮರಳಿ ಯೆಂದನು ಶಲ್ಯನಿನಸುತನ ॥ ೩೮ ॥ ತೊಡುತೊಡೆಲವೋ ಸರಳರಿಪುವನು । ತಡೆಗಡಿವನೆಂದೊರಲುತಿದೆ ನೃಪ । ನೊಡೆತನವ ನೀಬಯಸುವಾಯತವುಂಟೆ ರಿಪುಗಳಲಿ ॥ ನುಡಿದ ಮಾತೇ ನಾವು ಹೇಳಿದ ಕೊಡಬಡುವನೀನಲ್ಲ ಕುರುಪತಿ । ಬಿಡದೆ ನಿನ್ನನು ಸಲಹಿದಕ್ಕುಪಕಾರವಾಯ್ತೆಂದ ॥ ೩೯ ॥ ಎಲವೊ ನಿನ್ನನು ಜಗವರಿಯೆ ಕ । ಬ್ಬಿಲನ ಮಗನನು ತಂದು ವಂಚಿಸಿ । ಕುಲಜನನು ಮಾಡಿದನಲಾ ಪೊಡಸುಂಡುಪತಿಕರಿಸಿ ॥ ನೆಲನು ಹೇಸದೆ ನಿನ್ನ ಕೀರ್ತಿಯು । ಬೆಳಗುಮಾಸದೆ ಬಿಡದೆ ಸಾಕಿದ । ಹೊಲೆಯನವ ಸರಕೊದಗುವನು ನೀ ಕಷ್ಟಹೋಗೆಂದ ॥ ೪೦ ॥ ಕೌರವನ ಮನ್ನಣೆಯಲಾವುದು । ದೂರವಾದುದು ನಿನಗೆ ನಿಜ ದಾ । ತಾ ರನಲಿ ವಂಚಿಸಿದೆ ನಿನಗಿನ್ನಾವಗತಿಯಹುದೋ ॥ ಭಾರವಿದು ವಿಶ್ವಾಸಘಾತಕ । ಕೌರವಾಕರ್ಷಣವು ಸ್ವರ್ಗಕೆ । ದೂರವಹರೇ ಕರ್ಣಕೆಡಿಸದಿರಿಹಪರವನೆಂದ ॥ ೪೧ ॥ ನಂಬಿ ಹಿಡಿದರೆ ನದಿಯ ಮಗ ಹಗೆ । ಯಂಬಿಗಿತ್ತನು ಕಾಯವನು ಮಗ । ನೆಂಬ ನೆವದಲಿ ತನುವ ಬಿಸುಟನು ಗರುಡಿಯಾಚಾರ್ಯ ॥ ಅಂಬು ಬೆಸನನು ಬೇಡಿದರೆ ನೀ । ನೆಂಬನೀವಿಧಿಯಾದ ಮೂವರ । ನಂಬಿ ಕೆಟ್ಟನು ಕೌರವೇಶ್ವರನೆಂದನಾಶಲ್ಯ ॥ ೪೨ ॥ ಮಾತಗಿತ್ತನು ಭಾಷೆಯನು ನಿ । ನ್ನಾತಗಳೊಳೈವರೊಳಗಾರಿದಿ। ರಾದರೆಯುತಲೆಗಾಯ್ವೆನೆಂದನು ಮರಳಿತೊಡೆನೆಂಬ ॥ ಮಾತುಗಳು ಕವಲಾದಬಳಿಕಿ। ನ್ನೇತಕೀತನುವಿದನು ಪಾರ್ಥನ । ಘಾತಿಗೊಪ್ಪಿಸಿ ಕಳೆವೆನೆಂದನು ತನ್ನಮನದೊಳಗೆ ॥೪೩॥ ಮರುಳೆ ಮಾದ್ರಾಧೀಶ ಮರಳಿತೆ। ಸರಳ ತೊಡುವೆನೆಸ್ಯರಿಸನೆ ಕಾತರಿಸಿ ವಾಘೆಯ ಬಿಸಟು ಕಿಡಿಕಿಡಿವೋಗಿ ಖಾತಿಯಲಿ ॥ ಅರಸನೊಲಿದಂತಾಗಳೆನ್ನದು । ಮರಳುತನ ಕುಲಹೀನನಲಿ ಗುಣ । ವರಸಲೇನಹುದೆನುತ ಘುಂಮಿಕ್ಕಿದನು ಧಾರುಣಿಗೆ ॥ ೪೪ ॥ ಕಂಡು ದೀವ್ಯತಿಕರವನೀತನ । ನಂಡಲೆದು ಫಲವಿಲ್ಲಲಾಕ್ರೈ । ಕೊಂಡು ನೋಡುವೆನೆನ್ನ ಸಾಮರ್ಥ್ಯದ ಸಘಾಡಿಕೆಯ ॥ ಚಂಡಿಯಾದೆನೆ ತಾನೆನುತ ಖತಿ । ಗೊಂಡು ಮರಳಿತು ಸರ್ಪಶರವಾ । ಖಂಡಲಾತ್ಮಜನತ್ತ ಹಾಣಾಹಣಿದಚೂಣಿಯಲಿ ॥ ೪೫ ॥ ಇವನ ಬಲ್ಲೆ ತ್ರಿಪಾರ್ಥ ಚಕ್ಷು। ಶ್ರವನಸುತ ತಕ್ಷಕನಮಗಖಾಂ । ಡವದ ಬೇಳಂಬದಲಿ ಬದುಕಿದತಲೆಯನಡಹಾಯ್ದು ॥ ಇವನ ಮೂಡಿಗೆಯೊಳಗೆ ಶರವಾ । ಯಿ..ವನು ತಾನೇಮರಳಿದನು ನೀ । ನವದರಿಸಿಕೊಳೆಂದು ನುಡಿ

ದನು ಕೃಷ್ಣನರ್ಜುನನ ॥ ೪೭ ॥ ಅರಸಕೇಳೈಕರ್ಣಶಕ್ತಿ । ಸ್ಫುರಸಹಿತವೀಬಾಣವತಿನಿಷ್ಠುರವಿದಲ್ಲದೆ ಬರಿಯವಿಷದುಬ್ಬರದ ಸಾಹಸವ ॥ ನರನಲೇ ಕೈಕೊಳ್ಳಸೇಬಹ । ಸರಳನ್ನೈದಂಬುಗಳಲೆಡೆಯಲಿ । ತರಿದುಬಿಸುಟನು ವೀರನಾರಾಯಣನಕರುಣದಲಿ ... ... ॥ ೪೭ ॥

ಅಂತು ಸಂಧಿ ೨೫ಕ್ಕೆ ಪದ ೧೦೬೦ಕ್ಕಂ ಮಂಗಳಮಸ್ತು.

---

## ಇಪ್ಪತ್ತಾರನೆಯ ಸಂಧಿ

ಸೂಚನೆ ॥ ಚಂಡಭುಜಬಲವಿಕ್ರಮದ ಮಾ । ರ್ತಾಂಡತನಯದವಿಜಸಿರಿ ಮುಂ । ಕೊಂಡುಮನ್ನಿಸಿ ಭುಜಕೆ ಬಂದಳು ಕಲಿಧನಂಜಯನ ॥

ಪದ ॥ ಕೇಳು ಧೃತರಾಷ್ಟ್ರಾವನಿಪ ನಿ । ನ್ನಾಳ ಜಯಸಿರಿ ಸರ್ಪಬಾಣದ । ಮೇಳಯದ ಸೀಮೆಯಲಿ ನಿಂದುದು ಹಲವುಮಾತೇನು ॥ ಹೇಳಿ ಫಲವೇನಿನ್ನು ಮುಂದಣ । ಕಾಳಗದ ಕರ್ಣಾವೃತದ ಮಳೆ । ಗಾಲ ಮಾದುವಿಲೋಚನದ ಮಳೆಗಾಲವಾಯ್ತೆಂದ ॥ ೧ ॥ ತಳಿತಹೂವಿನ ಪರಿಮಳವೊ ಧರೆ । ಗಿಳಿದಸೂರ್ಯಪ್ರಭೆಯೊವಿರಜದ । ಹೊಳೆಯೊ ಮೇಘಸ್ಥಿತಿಯೊ ಸುರಪತಿಚಾಪವಿಭ್ರಮವೊ ॥ ಇಳಿದ ಜವ್ವನದೊಳುಮೆಯೋ ಕುರು । ಬಲವಕಂಡೆನು ಜೀಯ ಜಯದ । ಗ್ಗಳಿಕೆಗಳ ಚಾರುಗಳಲಿ ದುರ್ಗದು ನಿನ್ನ ಪರಿವಾರ ॥ ೨ ॥ ಅಗಳಿಳಿದುದು ಸರ್ಪಶರ ತಾ । ನಾಗಲೇ ಕುರುರಾಜಭುಜವನು । ನೀಗಿದಳು ಜಯವಧು ಧರಾವಧು ಭಾಗ್ಯವಧುವೆಂದು॥ ಆಗಲೇ ಬಿನ್ನೈಸನೇರಣ । ದಾಗುಹೋಗಿನ ಹೊರಿಗೆಯನುತಾ । ನೀಗಿ ಬಿಸುಟನು ತನ್ನ ಸತ್ವಸ್ಥಿತಿಗೆ ಕಲಿಕರ್ಣ ॥ ೩ ॥ ಅದೊಡೇನದು ಮತ್ತೆ ಕರ್ಣನ । ಕೈದುಕಾರತಿನಕ್ಕ ಸುಭಟರು। ಮೇದಿನಿಯಲಾರುಂಟು ಫಡ ದೈವಾಭಿಮುಖವುಳಿಯೆ ॥ ಹೋದೆ ಹೋಗಿನ್ನೆನುತ ಕಣೆಗಳ। ನಾದರಿಸಿ ತನಿವೀರರಸದಲಿ । ತೇದುಚಿತ್ತವ ಬರೆದನರ್ಜುನನಂಗಭಿತ್ತಿಯಲಿ ॥ ೪ ॥ ಇಳಿದುಹೋದೊಡೆ ಶಲ್ಯನೊಡನ । ಗ್ಗಳಿಕೆ ಹೋಯಿತೆ ಯೆನ್ನಭುಜಬಲ । ತೊಲಗಿತೇನಸಹಾಯಶೂರಗೆ ಪರರ ಹಂಗೇಕೆ ॥ ಗೆಲುವೆ ಹಗೆಯನು ಯೆನುತ ಮಿಗೆ ಕೈ । ಚಳಕದಲಿ ತೆಗೆದೆಸುತ ತಾವರೆ। ಗೆಳೆಯನಣುಗನ ಧೃತಿಗೆ ಬೆರಗಾಯಿತ್ತು ಸುರಕಟಕ ॥ ೫ ॥ ಚಳಕದಲಿ ತೆಗೆದೆಸಮಚಾಪವ । ನಿಳುಹುವಸು ರಥದೊಳಗೆ ಪಾರ್ಥಯ । ಸೆಳೆದು ತುರಗವ ತಿರುಹಿ ಸುಳಿಸುವನೆಡಬಲಕೆ ರಥವ॥ ಬಲಹುತನ್ನದು ಸಾರಥಿತ್ವದ । ಬಲಹು ತನ್ನದು ರಣದ ಕೌತೂ । ಹಳದ ಕರ್ಣನೊಳಾರುಸರಿಯನುತಿರ್ದುದಮರಗಣ ॥ ೬ ॥ ಮತ್ತೆ ಕೃಷ್ಣನನೆಚ್ಚುಹನುಮನ । ತೆತ್ತಿಸಿದನೆರಡಂಬಿನಲಿ ಕೈ । ವರ್ತಿಸಿದನೀರೈದುಶರವನು ತುರಗದೇಹದಲಿ॥ ಹೊತ್ತಿತದು ಕಡುಗೋಪವಹ್ನಿಯೊ । ಳೆತ್ತಲಿದೆ ನಿಲ್ಲೆನುತ ಪಾರ್ಥನ । ನೊತ್ತಿ ಕೂರ್ಗಂಬಿನಲಿ ಪುನರಪಿ ಕಪಿಯನೊಡೆಯಚ್ಚ ॥ ೭ ॥ ನೆಲನ ಬೆಟ್ಟದಬೇಗೆಗೋಸುಗ । ಸುಳಿದರಿದಿರು ಪಾಂಡುನಂದನ । ರಳಿಯತಿಪದಿರಬಳಿಯೆವೇಳಾಯಿತ್ತು ಕೃಷ್ಣಗಡ ॥ ಅಳಿಯುಲಡವಾಗಿಲಲಿಹಣುಹಂ । ಪಲುವೆ ಧನನೀನಿವರ ಬಲೆಯಲಿ । ಸಿಲುಕಿ ನೊಂದೈ ತಂದೆ ಪವನಜ

ಯೆಂದನಾಕರ್ಣ ॥ ೮ ॥ ಬಾಯಬಡಿಕನಲಾ ವೃಥಾರಾ। ಧೇಯ ಮದವೇಕಿನ್ನು ನಿನವಗಹಿ । ಸಾಯ
ಕದ ಸಾಲಿನಲಿ ನೀರಿಳಿಸುವೆನು ನೆತ್ತರಲಿ ॥ ತಾಯ ಬಸರಿಂಬಿಲ್ಲನೀನುಳಿ । ವಾಯತಿಕೆಯಿನ್ನೆಂತು ಕೌ
ರವ । ರಾಯ ನೋಡಲಿ ಕರೆಯೆನುತ ತೆಗೆದೆಚ್ಚನಾಪಾರ್ಥ ॥ ೯ ॥ ಆರುತರದಿಂದೆಚ್ಚು ಮಗುಳೀ ।
ರಾರುಬಾಣದಲೌಕಿ ಮೂವ । ತ್ತಾರುಮಾರ್ಗಣದಿಂದ ಮುಕ್ಕರಿಕಿದನು ರಿಪುಭಟನ ॥ ಮೂರುಕಣೆ
ಗಳಲರಿಯ ದೇಹವ । ಕೀರಿದನು ಮತ್ತೆರಡುಶರದಲಿ । ಜಾರಲೆಚ್ಚನು ಜರೆದು ಕರ್ಣನ ಕರ್ಣಕುಂಡ
ಲವ ॥ ೧೦ ॥ ಜೋಡ ಕಡಿದನು ಸೀಸಕವ ನೀಡಾಡಿದನು ಕೆಲಬಲದ ಕಣೆಗಳ । ನೀಡುಕಾರರನಿಕ್ಕಿದ
ನು ಗರಿಸಹಿತ ಕಣೆಯುಗಿಯೆ ॥ ಹೂಡಿದಂಬಿನ ಹೊದೆಯ ಭಂಡಿಯ । ಜೋಡ ತರಿದನು ಛತ್ರಚ
ಮರಿಯ । ಝಾಡಿಯನು ಜರುಗೆಡಹಿದನು ಕಲಿಪಾರ್ಥ ನಿಮಿಷದಲಿ ॥ ೧೧ ॥ ಈತನೇನಳುಕುವನೆ ಬ
ಳಿಕಿನೊ । ಳಾತತುಕ್ಷಣವರ್ಜುನನ ಚಮು । ರಾತಪತ್ರವ್ಯೂಹವನು ಕೈದುಗಳ ಭಂಡಿಗಳ ॥ ಘಾತಿಸಿದನೆ
ಡಬಲಡ ಸುಭಟ । ವ್ರಾತವನು ಕೆಡಹಿದನು ಸರಳಲಿ । ಘಾತಿಯಲಿ ಬಲುಗಾಯವಡೆದನು ಪಾರ್ಥನಿ
ಮಿಷದಲಿ ॥ ೧೨ ॥ ಅರಸ ಹೇಳುವುದೇನುರಾಯನ । ಶಿರಿಯಪೈಸರವನು ಸುಯೋಧನ । ನರಸುತನ
ದಾಥಾರಮೂಲಸ್ತಂಭಭಂಜನವ ॥ ನರನ ಗೆಲವೆಲ್ಲಿಯದು ದೈವವ । ಮರುಳು ಮಾಡಿದರವರು ನಿ
ಮ್ಮಯ । ಧರಣಿ ನಿಮಗನುಚಿತವನೆನದಳು ಹೇಳಲೇನೆಂದ ॥ ೧೩ ॥ ಧರೆ ನೆನೆದದುಷ್ಕರ್ಮವೇನಂ ।
ದರಸ ಬೆಸಗೊಂಬೈನಿರಂತರ । ಸುರಿವರುಧಿರದಸಾರದಲಿ ಕೆಸರೆದ್ದಕಳನೊಳಗೆ ॥ ಹರಿವಬಿಂಕದ ರಥದ
ಗಾಲಿಯ । ಗರುವತನಗಾಳಾಯ್ತು ನೆಲಖೊ । ಪ್ಪರಿಸಿತಗ್ಗಿತು ತೇರು ತಡೆದುದು ರಥವನಿಳೆಯಿಂ
ದ ॥ ೧೪ ॥ ಗಾಲಿಯದ್ದವು ಕೂಡೆಯಂತ್ರದ। ಕೀಲುಗಳು ಸಡಲಿದವು ಹಯತತಿ।ತೂಳಿಸತ್ವದಲೌಕಿ ಸೆ
ಳೆದವು ಕುಸಿದು ನಿಜಮುಖವ ॥ ಮೇಲು ಮಿಡುಕದು ತೇರು ಕುರುಬಲ । ಜಾಲಜರುಗಿತು ವೈರಿಬಲ
ದಲಿ । ಸೂಳವಿಸಿದರು ಭುಜವನೂದರಿತು ಬೆರಳಬಾಯ್ಗಳಲಿ ॥ ೧೫ ॥ ದುರುಳದುರ್ಯೋಧನನ ನಿಖಿ
ಳೈ । ಶ್ವರಿಯವಿಳೆಗದ್ದಂತೆ ಕರ್ಣನ । ತುರಗಸಹಿತವನಿಯೊಳಗದ್ದುದು ತೇರು ಕುಕ್ಕರಿಸೆ ॥ ಕೆರಳಿಕಂ
ಬಿಯ ಸೆಳೆದು ವಾಘೆಯ । ತಿರುಹಿ ಚಪ್ಪರಿಸಿದರೆ ಸತ್ವದ । ಲುವಣಿಸಿ ತಲೆವಾಗಿ ಜವಗುಂದಿದವು ತೇ
ಜಿಗಳು ॥ ೧೬ ॥ ಮೂಗಿನಲಿ ಬೆರಳಿಟ್ಟು ಮಕುಟವ ತೂಗಿ ತೊನೆದನು ಭಾಪು ವಿಧಿನಿ । ಭಾರ್ಗಧೇ
ಯನು ರಾಯನಕಟಾ ಶಿವಮಹದೇವ ॥ ಈಗಲಿದು ತಾನೇನವಿಧಿಬರೆ । ದೋಗಟೆಯೊ ಕುರುವಂಶವ
ಜ್ರದ। ಬೇಗಡೆಯೊ ಮಾಮಾಯೆನುತ ಮರುಗಿದನು ಕಲಿಕರ್ಣ ॥ ೧೭ ॥ ಇಳುಹಿದನು ರಥದೊಳಗೆ
ಚಾಪನ । ನೆಳವಡಿಸಿದನು ಸೆರಗನಲ್ಲಿಂ । ದಿಳಿದುಗಾಲಿಯನಲುಗಿ ಪಾರ್ಥನ ನೋಡಿ ನಸುನಗುತ ॥ ಎ
ಲೆಧನಂಜಯ ಸೈರಿಸಿನ್ನರಗಳಿಗೆಯಲಿ ರಥವೆತ್ತಿ ನಿನಗಾ । ನಳಪಿಗೊಡುವೆನು ತನ್ನ ಪರಿಯನು ಬಳಿಕ
ನೋಡೆಂದ॥೧೮॥ಶಿವನ ಬಲುಹುಂಟೆಂಬೆನೇ ಶಿವ। ನವರ ಕಡೆ ಹರಿಯೆಂಬೆನೇ ಪಾಂ। ಡವರ ಭಂಡಿಯ
ಬೋವನಿಂದ್ರಾದ್ಯರು ಸಹಾಯಿಗಳು॥ಅವರು ಸಾಕ್ಷಾತ್ಪರ್ಜುನ ನರುನಂ'ಮುವನಿ ನಮಗುಂಟೆಂಬನೇ ಕೌ
ರವನಪುಣ್ಯವಿದೇ ಯೆನುತ ಮರುಗಿದನು ಕಲಿಕರ್ಣ॥೧೯॥ ರೊಥಿಸಿದಭಟ ನೀನು ಪಂತದ । ಪಾಡುಗ
ಳ ನೀ ಬಲ್ಲೆ ಶಾಸ್ತ್ರವ । ಖೋಡಿಗಳೆವವನಲ್ಲ ವೈದಿಕಲೌಕಿಕಸ್ಥಿತಿಯ ॥ ನಾಡೆ ಬಲ್ಲಿರಿ ಶಸ್ತ್ರಹೀನರ
ಕೂಡೆ ವಾಹನರಹಿತರಲಿ ಕೈ । ಮಾಡಲನುಚಿತವೆಂಬಮಾರ್ಗವನೆಂದನಾಕರ್ಣ ॥ ೨೦ ॥ ಎನುತ ಗಾ

ಲಿಯುಸಲುಗಿ ಕೀಲ । ಚ್ಚಿನಲಿ ಮುಂಗೈಕೊಟ್ಟು ಮೊಳಕಾ । ಲಿನಲಿ ಧರಣಿಯನೌಗಿ ಮುಗ್ಗಿದರಥವ ನೆಗಹುತಿರೆ ॥ ದನುಜರಿಪುಚರಮಟಿಕೆಯುಲಿ ಫಲು । ಗುಣನ ತಿವಿದನು ನೋಡು ರಾಥಾ । ತನುಜನಿರ ವನು ಬೇಗ ಮಾಡೆಂದರ್ಜುನನ ಜರೆದ ॥ ೨೧ ॥ ಎಸೆಮರುಳೆ ಗಾಂಡೀವಿಅಪ । ತ್ತೆಸಗಿದಾಗಲೆ ಹಗೆ ಯು ಗೆಲುವುದು । ವಸುಮತೀಶರ ನೀತಿ ತೊಡುತೊಡು ದಿವ್ಯಮಾರ್ಗಣವ ॥ ವಿಷಮವೀರನು ರಥವ ಮೇಳಾ । ಪಿಸದಮುನ್ನವೆ ಹರುವ ನೆನೆ ನೀವೊಸೆದುಯೇರಿದಬಳಿಕ ಕೈಕೊಂಬನೆ ತ್ರಿಯಂಬಕನ॥೨೨॥ ಏನನೆಂಬೆನುಜೀಯು ಕರ್ಣಗೆ । ಯೇನಹನೊ ಫಲುಗುಣನು ಬಳಿಕಾ । ದಾನವಾರಿಯು ನುಡಿಯು ಕೇಳಿದು ಕೇಳಿದಾಕ್ಷಣಕೆ ॥ ಗಾನದಲಿ ಮುಳುಗಿದನು ಮನದಪ । ಮಾನದರ್ಪವ ತುಡುಕಿ ಧೈರ್ಯನಿ। ಧಾ ನವನು ಕೈಸೂರೆಗೊಂಡುದು ಶೋಕವರ್ಜುನನ ॥ ೨೩ ॥ ಮುಕ್ಕಿದನು ಮಹಿಮೆಯನು ಕಣ್ಣಿಲಿ। ಮು ಕ್ಕುಳಿಸಿದನು ನೀರನಹಿತನೊ । ಳುಕ್ಕಿದನು ರಾಗದಲಿ ಕೊಂಡನು ಬಳಿಕ ವೀಳಯವ ॥ ಸಿಕ್ಕಿದನು ಕರು ಣಾಲತಾಂಗಿಯು । ತೆಕ್ಕೆಯುಲಿ ನಾನೇನಹೇಳುವೆ । ನೊಕ್ಕಲಿಕ್ಕಿತು ಶೋಕವರ್ಜುನನಂತರಂಗದಲಿ ॥೨೪॥ ತೇರಿನಲಿಚಾಚಿದನು ಮೆಲ್ಲನೆ । ಭಾರಿಧನುವನು ಕೈಯುಕಣೆಗಳ। ನೋರೆಯಲಿ ಸ್ಮರಿಸಲು ಕಂಡನು ಮ ತ್ತೆ ಮುರವೈರಿ ॥ ಹಾರವೇಕ್ಷೈ ಕಂಗಳಲಿ ಕ । ಸ್ತೂರಿಯೇಕ್ಷೈಕ ದಹಿನಲಿ ಶ್ಯಂ । ಗಾರವಿದು ವಿಪರೀ ತವೇನೆಲೆ ಪಾರ್ಥ ಹೇಳೆಂದ ॥ ೨೫ ॥ ದೇವ ಹಗೆಯಾಗಿರನು ಕರ್ಣನ । ದಾವಹದನೆಂದರಿಯೆ ಮ ನದಲಿ । ನೋವು ಮಿಗುತಿದೆ ಕೈಗಳೇಳವು ತುಡುಕವರೆ ಧನುವ ॥ ಜೀವವಾತನಮೇಲೆ ಕರಗುವು । ದಾ ವಸುಖನೋ ಶತ್ರುವೆಂಬೀ । ಭಾವನೆಯು ಬಗೆಬೀಳುಕೊಂಡುದು ಕರ್ಣನಾರೆಂದ ॥ ೨೬ ॥ ಈತನೀಭವ ದಲ್ಲಿ ಯೊಡವಂ । ದಾತನೋ ಮೇಣ್ಪೂರ್ವದಜನ್ಮದ । ಲೀತನೊಡವಂದಾತನೋ ಮೇಣೆನ್ನ ಸಂದೇಹ॥ ಮಾತಿನಲಿ ಮನದಲ್ಲಿ ಗುಣದಲಿ । ನೀತಿಯುಲಿ ಸತ್ವಾತಿಶಯದಲಿ । ಸೂತ ಕುಲದವನಲ್ಲ ಕರ್ಣನದಾರು ಹೇಳೆಂದ ॥ ೨೭ ॥ ಕೌರವನಮೇಲಿಲ್ಲವಗ್ಗದ । ವೈರವೀತನಮೇಲೆನಮಗಪ । ಕಾರಿಯಾತನು ಮರಣ ವೆನುಸಂಧಾನವಿನ್ನ ಬರೆ ॥ ವೈರವುಪಶಮಿಸತುಯುಧಿಷ್ಠಿರ । ವೀರನಿಂದಿಮ್ಮಡಿಯು ನೇಹದ । ಭಾರವ ಣೆತೋರುವುದಿದೇನ್ಕೆ ಕರ್ಣನಾರೆಂದ ॥ ೨೮ ॥ ಅಸುರದವ್ಯಾಮೋಹವಿದು ಡೊ । ಳ್ಳಾಸವೋ ಕೌರವ ನ ತಕ್ಕಿನ । ವೈಸಿಕವೊ ನಿಮ್ಮಡಿಯುಮಾಯಾಮಯದಮಾಲೆಗಳೊ ॥ ವಾಸಿ ಬೀತುದು ಛಲದಾಳದ ಕ । ಳಾಸ ಸೋತುದು ಕರ್ನನಲಿ ಹಿರಿ । ದಾಸೆಯಾಯಿತು ಕೃಷ್ಣ ಕರುಣಿಸು ಕರ್ಣನಾರೆಂದ ॥೨೯॥ ಋಷಿಗಳನುಮತದಿಂದ ಕುಂತಿಯು । ಬಸುರಲೇ ಪುದಯಿಸನೆಲೇನೀ । ನಸುರರಿಪು ಬಹುಕಪಟನಾಟಕ ಸೂತ್ರಧಾರನಲೆ ॥ ವಸುಮತಿಯು ಭಾರವನು ಮಿಗೆ ಭಂ । ಗಿಸುವಕೃತ್ಯವು ನಿನ್ನದೆನಗು । ಬ್ಬಸವದೇ ಕೈ ಕೃಷ್ಣ ಕರುಣಿಸು ಕರ್ಣನಾರೆಂದ ॥ ೩೦ ॥ ಭೇದವನು ಕೆಡೆಯೊತ್ತಿ ರೋಷವಿ। ಷಾದ ತಲೆಯೊ ತ್ತುವುದು ರೋಷವಿ । ಷಾದಶಿಖಿಯುನು ನಂದಿಸುವುವೀನಯನವಾರಿಗಳು ॥ ಕೈದುವಲ್ಲವು ಕೈಗಳೇಮು। ಸ್ಸಾದಿಯುಲಿ ಹಿಂಗಿದವು ಮನಲೇ । ಸಾದುದೆಂದಾನರಿಯೆನಕಟಾ ಕರ್ಣ ನಾರೆಂದ ॥ ೩೧ ॥ ಕಾಲಯ ವನನುಪಾಯದಿಂದವೆ। ಬೀಳಿಸಿದೆ ಮಗಧನನು ಯಾಪರಿ । ಶೀಳಿಸಿದೆ ಭೀಷ್ಮಾದಿಗಳ ಸೋಲಿಸಿದೆ ಸಾಮ ದಲಿ ॥ ಧಾಳೆನಶಿಥಕ್ಕುಳಿಯತಕ್ಕಿನ । ತೌಳಿಕಾರನು ನಿನ್ನಮಾಯೆಯು । ಹೇಳಲಮ್ಮನು ಕೃಷ್ಣ ಕರು ಣಿಸು ಕರ್ಣನಾರೆಂದ ॥ ೩೨ ॥ ಮೊರೆವವರಾವಲ್ಲ ಕರುಣವ। ತೋರುಬಿನ್ನಹಮಾಡಿದೆನು ಹಗೆ। ಏ

ರ್ಧಿವನಲಿ ತೋರುವುದು ಸೋದರರದಸಂಬಂಧ ॥ ಆರೆನೀತನ ಕೊಲೆಗೆ ಹೃದಯುವ । ಸೂರೆಗೊಂಡನು
ಕರ್ಣನಕಟಾ । ತೋರಿನುಡಿಯುಲು ಕೃಷ್ಣ ಕರುಣಿಸು ಕರ್ಣನಾರೆಂದ ॥ ೩೩ ॥ ಧರೆಯುಬಿಟ್ಟವು ಕು
ರುಪತಿಗೆನಾ । ವರುವರೊಡಹುಟ್ಟಿದರು ವಿಪಿನಾಂ। ತರದೊಳಗೆ ಭಜಿಸುವೆವುನಿಮ್ಮನು ಭಾವಶುದ್ಧಿ
ಯುಲಿ ॥ ತೆರಳುವೀಸಿರಿಗೋಸುಗವು ಸೋ । ದರನ ಕೊಲುವೆನೆ ಕೃಷ್ಣ ಕರುಣಿಸು । ಕರುಣಿಸಕಟಾ
ಕೃಷ್ಣ ಹೇಳ್ಕೆ ಕರ್ಣನಾರೆಂದ ॥ ೩೪ ॥ ಅರಸ ಕೇಳ್ಕೆ ಬಳಿಕ ಪಾರ್ಥನ । ಕರುಣರಸವಾರೆಗಳ ವಾ
ಗ್ಬಿ । ಸ್ತರಕೆ ಮನದಲಿ ಮರುಗಿದನು ಮುರವೈರಿ ನಸುನಗುತ ॥ ಕೆರಳಿದನು ವಾತಿನಲಿ ಸುಡುಬಾ ।
ಹಿರನಲಾ ನೀನಿನ್ನವಂಶಕೆ । ಸರಿಯೆ ಸೂತಜನೆಂದು ಮುರರಿಪು ಜರೆದನರ್ಜುನನ ॥ ವಾಸಿಬೀತುದು
ಜಾತಿ ಶೌರ್ಯಕೆ । ಬೇಸರಾದುದು ಧೃತಿಗೆ ಕಲಿತನ । ಕೀಸುಮೊಲೆಗಳು ಮೂಡಿದವಲಾ ಪಾರ್ಥಸಮ
ರದಲಿ ॥ ಹೂಸರದ ವಿಸ್ತರದ ಹೂಂಕೃತಿ। ವಿಸಾಸಲಳಿದುದು ಶಿವಶಿವಾ ನಿ। ದೋಷದಲಿ ಬಹುದೋ
ಷವಾಯ್ತೆಂದನು ಮುರಧ್ವಂಸಿ ॥ ೩೫ ॥ ಕ್ಷಿತಿಯೊಳಗೆ ಕ್ಷತ್ರಿಯರ ಧರ್ಮ । ಸ್ಥಿತಿಯುಸರಿಯಾ ಕೃ
ಷ್ಣ ಚಾಪ । ಚ್ಯುತರನಪಗತವಾಹನರ ಪರಿಮುಕ್ತಕೇಶಿಗಳ ॥ ಗತಿವಿಹೀನರ ದೈನ್ಯವಾಚಾ । ಯುತರ
ವಲ್ಮೀಕರನು ಜಲಸಂ । ಗತರನಿರಿವುದು ಧರ್ಮವೇನಾವರಿಯೆವಿದನೆಂದ ॥ ೩೬ ॥ ಹೇಳುಹೇಳಿನ್ನೊ
ಮ್ಮೆ ಧರ್ಮವ । ಕೇಳಿದರಿಯುವನಿನ್ನ ಕೈಯುಲಿ। ಕೇಳಲಾಗದೆ ರಾಜಧರ್ಮಪುರಾಣಸಂಗತಿಯು ॥ ಆಳುತ
ನದಾಟವ ದೊಠಾರಿಸಿ । ಸೋಲಿಸುವುದೇನರಿದೆ ಬಲುಗೈ । ಯಾಳಲಾ ಧಿಟ ರಣಕೆ ನೀ ವಸುದೇವ
ನಾಣೆಂದ ॥೩೮॥ ಈಗ ಧರ್ಮಶ್ರವಣವಿದು ನೀ ನಾಗಳೇರಿಸಿ ನುಡಿನಭಾಷೆಯು । ಮೂಗು ಹೋದು
ದು ಮರೆದಲಾ ಮಾತುಗಳು ಹೆಚ್ಚುವರೆ ॥ ಹೋಗಲೆಲೆಮರುಳೇ ವಿಭಾಡಿಸು । ಬೇಗದಲಿ ಬಹುರಾಜ
ಕಾರ್ಯವ । ನೀಗಲೇ ತಿದ್ದಿಸುವೆ ತೊಲಗಿಸು ಸೂತಜನ ಶಿರವ ॥ ೩೯ ॥ ಅಕಟ ನಿಷ್ಕರುಣಿಯೆ ವೃ
ಥಾಪಾ । ತಕವಿದೇಕೈ ನಿನಗೆ ಜಯುಕಾ । ಮುಕರು ನಾವ್ ಕೊಲ್ಲದೊಡೆ ನಿಮಗೇಕೀಸುನಿರ್ಬಂಧ ॥
ಪ್ರಕಟಕುರುವಂಶದಲಿ ಯದುರಾ । ಜಕದೊಳಗೆ ಹಗೆಯಿಲ್ಲಲೇ ಮತಿ । ವಿಕಳನಾದೆನು ಕೃಷ್ಣ ಕರ್ಣ
ನ ಕೊಲ್ಲುವನಲ್ಲೆಂದ ॥ ೪೦ ॥ ಬಿಸುಟುಹೋದನು ರಥವ ಸಾರಥಿ । ವಸುಧೆಯೊಳು ತೇರದ್ದಿ ಕೆಡೆದು
ದು । ನಿಶಿತಮಾರ್ಗಣವಿಲ್ಲಕೈಯುಲಿ ದಿವ್ಯಧನುವಿಲ್ಲ ॥ಎಸೆಯಲೆಂತೇಳುವುದು ಕೈ ನೀ ಬೆಸಸುವೊಡೆಮ
ನವೆಂತು ಬಂದುದು । ಬಸುರ ಶಿಖಿ ಬಲುಹಾಯ್ತು ಕರ್ಣನಕೊಲುವನಲ್ಲೆಂದ॥೪೧॥ಗುರುವನಸುವೊ
ಡೆಮೇಣುಭೀಷ್ಮರ । ಸರಳುಮಂಚಕೆಚಾಚುವೊಡೆಧಿ । ಕ್ಕರಿಸಿದೆನೆ ಕುರುಪತಿಯುಶಕುನಿಯುಶಲ್ಯಸೈಂಧ
ವರ ॥ ಕೆರಳಿಚಲು ತೇರ್ಸಿದನೆ ಹಾ । ಮರುಗಿದೆನೆಕರ್ಣನಲಿಕಲಿತನ । ಕರಗಿತೇನೆಂದರಿಯೆ ಕರ್ಣನ
ಕೊಲ್ಲುವನಲ್ಲೆಂದ ॥ ೪೨ ॥ ಬಳಿಕ ಭೀಮಾದಿಗಳ ಮನದಲಿ । ಸುಳಿದುದೈಸಂದೇಹವೀತನ ಕೊಲುವು
ದೇನನುಚಿತವೊ ಮೇಣುಚಿತವೊ ಶಿವಾಯೆನುತ ॥ ಅಳುಕಿದಳು ದ್ರೌಪದಿಯುಧಿಷ್ಠಿರ । ರೊಳಗೊಳ
ಗೆ ಸಂತಾಪಶಿಖಿಯುಲಿ ।ತಳದತದುಗುಡದಿಬಿಗಿದಬೆರಗಿನಲಿದುರ್ದಾಚೆಯುಲಿ ॥೪೩॥ ಮೊದಲಲೆರಡೊಡ್ಡಿ
ನಲಿ ಸುಂಮಾ । ನದ ಸಘಾಡವ ಕಂಡೆನೀಗಲು । ತುದಿಗೆ ಬರೆಬರೆ ಕಂಡೆನವರಿವರೆರಡುಥಟ್ಟಿನಲಿ ॥
ತುದಿವೆರಳ ಕಂಬನಿಯ ಬಳಸಿದ । ಚೆದರುಗಳ ಕುಕ್ಕುರಿಕೆಡುತ್ತ । ಹದವಿತ್ತಾಳಿದನಷ್ಟಚಿಂತೆಯನರಸ
ಕೇಳೆಂದ ॥ ೪೪ ॥ ಮತ್ತೆ ಬಿರಿದನು ದನುಜಳ್ಳಪುತಲೆ । ಗುತ್ತಿಹನು ಕಲಿಪಾರ್ಥನಾತನ । ಕುತ್ತಿ

ಬರಸೆಳದಂತೆ ಭಂಗಿಸಿದನು ಮುರಧ್ವಂಸಿ ॥ ಒತ್ತುವುದು ಫಲುಗುಣನ ನುಡಿ ಮಿಗೆ । ಕುತ್ತುವುದು
ಹರಿವಚನವಾತನ । ಚಿತ್ತವನು ಹರಿ ತಿಳುಹಿ ಸಂತೈಸಿದನು ಸಾಮದಲಿ ॥ ಎಲೆಧನಂಜಯ ವಿಮಲಹಿ
ಮಕರ । ಕುಲದ ಸುಕುಮಾರಕನು ಲೋಕದ । ಕುಲವಿಹೀನನು ಕರ್ಣನವ ನಿನಗೆಂತು ಸರಿಯಹನು ॥
ತಲೆಯುಮಾರಿ ಶರೀರವನು ನೆರೆ । ಸಲಹಲೋಸುಗ ಕೌರವನ ತಂಬುಲಕೆ ಕ್ರಿಯಾಂತವನು ಬಂಧುವೆ
ಪಾರ್ಥ ಹೇಳೆಂದ ॥೪೬॥ ಕಾಡಿನೆಡೆಯೊಳು ನಿಮ್ಮ ಬೇಟೆಯ । ನಾಡಿದವನಿವ ಜೂಜನಾಡಿಸಿ । ನಾಡ
ಕೊಳಿಸಿದಹಿಸುಣನಿವ ನಿಮ್ಮೆಲ್ಲರನು ಕೆಡಿಸಿ ॥ ನಾಡ ಸಂಧಾನವನು ನಾವ್ ಮಾ । ತಾಡಲೆಮ್ಮನು ಬಿಗಿ
ಯಲನುವನು । ಮಾಡಿದವನೀಕರ್ಣ ನಿನಗತಿಹಿತವೆನಹನೆಂದ ॥೪೭॥ ಮೊಲೆಯ ಮೇಲಿರಿದವನನಂಗಿ
ಸಿ । ಸಲಹುವರು ಪುರುಷಾರ್ಥಜೀವಿಯ । ನಿಳಿಕೆಗಾಬರು ಸ್ವಾಮಿ ದ್ರೋಹಿಯನೊಲಿದು, ನಂಬುವ
ರು ॥ ತಿಳಿಯಲೀಕ್ಷತ್ರಿಯರ ಸಹಜದ । ಬಳಿಕೆ ನೀನರಸಾಗಿ ನಿನ್ನನು । ಕೊಲುವಕರ್ಣನ ನೀತಿವಚನದಿ
ದಿಟ್ಟನಡೆವೆಂದ ॥೪೮॥ ಕೊಲ್ಲನೇ ಅಭಿಮನ್ಯುವನು ಹಗೆ । ಯಲ್ಲವೇ ಮಾರುತಿಯ ಕೊರಳನು । ಬಿಲ್ಲ
ಕೊಪ್ಪಿನಲೆಳೆಯನೇ ಕೆಡೆಯೆಸನೆ ಧರ್ಮಜನ ॥ ನಿಲ್ಲು ನೀತಿಯು ನೆನೆಯದಿರು ನೀ । ನೆಲ್ಲಿಯುವನಿವ
ವೈರಿಕರ್ನನ । ದೆಲ್ಲಿಯುವ ನೆಸೆಮರುಳೆಯಂದನು ನಿಜವ ತೋರಿಸಿದ ॥೪೯॥ ಬೀಸಿದನು ನಿಜಮಾಯೆ
ಯನು ಡೊಳ್ಳಾಸದಲಿ ಹರಹಿದನು ತಮವನು। ರೋಷವನು ಬಿತ್ತಿದನು ಮನದಲಿ ನರನ ಕಲಿಮಾಡಿ ॥
ಐಸೆ ಬಳಿಕಿನ್ನೇನಖಿಲಗುಣ । ದೋಷ ನಿನ್ನದು ಪುಣ್ಯಪಾಪದ । ವಾಸಿ ಯನಗೇಕನುತ ಕೊಂಡನು ಧ
ನುವನಾಪಾರ್ಥ ॥೫೦॥ ಹಿಡಿ ಧನುವನನುವಾಗು ಸಾಕೆ । ನ್ನೊಡಬಲನ ಹಾರದಿರೆನುತ ಕೈ । ಗಡಿಯಲೆ
ಚ್ಚನು ನೂರುಶರದಲಿ ಸೂತನಂದನನ ॥ ತೊಡಗಿತೇ ಕಕ್ಕುಲಿತೆ ಮನದಲಿ । ಫಡಯನುತ ನೂರಂಬ
ನೆಡೆಯಲಿ । ಕಡಿದು ಬಿಸುಟನು ಶಳದು ಕಿಗ್ಗಟ್ಟಿನ ಕಠಾರಿಯಲಿ ॥೫೧॥ ರಥವ ಸಂವರಿಸಿದನು ಬಳಿಕ
ತಿ । ರಥಭಯಂಕರನೇರಿದನು ನಿಜ । ರಥವ ನತಿಹರುಷದಲಿ ತೊಳೆದನು ಚರಣಕರತಳವ ॥ ಪೃಥುವಿ
ನೆನೆದಪಕಾರ ಲೋಕ । ಪ್ರಥಿತವಾಯಿತೆ ಸಾಕು ಬದುಕಲಿ। ಪೃಥೆಯ ಮಕ್ಕಳೆನುತ್ತ ಕೊಂಡನು ನಗು
ತ ಮೀಳೆಯುವ ॥೫೨॥ ಧನುವ ಕೊಂಡನು ಹಗೆಯ ಜರೆದ । ರ್ಜನನ ತರುಬಿದನಖಿಳ ಕುರುಬಲ ।
ವನಧಿಗಭಯವನಿತ್ತು ಮುಸುಕಿದನಂಬಿನಲಿನರನ ॥ ಕನಲಿದವು ನಿಸ್ಸಾಳ ನೃಪರಿಪು । ಜನವ ಬೈದವು
ಕಹಳೆಯುದಟರ । ತನು ಬಿರಿಯೆ ಗರ್ಜಿಸಿದವೆರಡೊಡ್ಡಿನಲಿ ಘನವಾದ್ಯ ॥೫೩॥ ಅಳುಕಿದನೆ ರಥ ಮು
ಗ್ಗಿದೊಡೆಕಳ । ವೆಳಿಸಿದನ ಶಲ್ಯಾಪಸರಣಕೆ । ಕೆಲಬಲನ ಹಾರಿದನೆ ನರಸವಗಡಿಸಿ ಕಾದಿದೊಡೆ ॥ ಬಲಿ
ಮಥನ ಮಝುಭಾಪು ಪಾಂಡವ । ಭಲದಿಶಾಪಟ ರಾಯಮದನ । ಪ್ರಳಯಹರ ಭಾಪೆಂದು ಹೊಗಳಿ
ತು ಭಟ್ಟಸಂದೋಹ ॥೫೪॥ ಅರಸ ಕೇಳ್ಕೈ ಜೂಜುಗಾರರ । ಸಿರಿಯ ಸಡಗರ ಕಳಿವಗಲತಾ । ವರೆಯ
ನಗೆ ಸಜ್ಜನರ ಖಾತಿ ನಿತಂಬಿನೀಸ್ನೇಹ ॥ ಪರಮಯೋಗಿಯ ಲೀಲೆ ಕೌರವ । ರರಸನೊಡ್ಡಿನಜಯವಿ
ಧೀಸರ । ಗರುಡಿಪೊಂದೇತ್ರಮವ ಕೊಡುವುದು ತತ್ಕಧನುವೆಂದ ॥೫೫॥ ಉಬ್ಬಿದನು ನಿಸ್ಸಾತನಾತನ ।
ತಬ್ಬಿದನು ಕುರುಬಲದ ಹರುಷದ । ಜಬ್ಬರಿಯ ಹುರಿಗೂಡಿ ತೋರಿತು ಚತುರಚತುರಂಗ ॥ ತೆಬ್ಬಿ
ತುಳುಕುವ ಕಣೆಯ ಕಣೆ ಶರ । ಹಬ್ಬ ಹವೆದುದು ರೋಷದಲಿ ಬಲಿ । ದುಬ್ಬುಗವಳವ ಕೊಂಡವೊಲು
ಕರ್ಣಾವಸಾನದಲಿ ॥೫೬॥ ಹತ್ತು ಶರದಲಿ ತುರಗವನು ಮ ಹಾ । ವತ್ತರಲಿ ಮುರವೈರಿಯನು ತೊಂ।

ಛತ್ತರಲಿ ಫಲುಗುಣನನ್ನೆವತ್ತಂಬಿನಲಿ ಕಪಿಯ ॥ ಮತ್ತೆ ಮೂವತ್ತರಲಿ ನರನರ । ಥೊತ್ತಮವ ಬಿಡದೆಚ್ಚ ನೂರರ । ಪತ್ತುಶರದಲಿ ಗಾಯಗಾಣಿಸಿದನು ಚತುರ್ಬಲವ ॥೫೭॥ ಬಲಜಲಧಿ ಸುಳಿಗೊಂಡು ಪಾರ್ಥನ ಬಳಿಗೆ ತೆಗೆದುದು ತೆಗೆದುದೀತನ । ಕಲಿತನವವಿಕ್ರಮಧನಂಜಯನಾಧನಂಜಯನ ॥ ಅಳುಕಿದರು ಭೀಮಾದಿಗಳು ಕಳೆ । ವಳಿಸಿತೀಚೆಯ ಥಟ್ಟು ಕೌರವ । ಬಲವು ತಲ್ಲಣಗೆಟ್ಟುದೊಂದರಗಳಿಗೆಮಾತ್ರದಲಿ॥ ... ... ॥೫೮॥

ಅಂತು ಸಂಧಿ ೨೬ಕ್ಕೆ ಪದ ೧೧೧೮ಕ್ಕಂ ಮಂಗಳಮಸ್ತು.

---

## ಇಪ್ಪತ್ತೇಳನೆಯ ಸಂಧಿ.

॥ಸೂಚನೆ॥ ಸಮರಸಾಹಸಮಲ್ಲ ನನುಪಮ । ಕಮಲಸಖನ ಕುಮಾರ ಕರ್ಣನು । ಅಮರನಗರಿಗೆ ನಡೆಯೆ ಹಲುಬಿದನಂದು ಕುರುರಾಯ॥

॥ಪದ॥ ಸಾಲದೇ ಕಥೆಯನ್ನುಮೇಲಣ । ಕಾಳಗದ ಮಾತುಗಳನಾಲಿಸಿ । ಕೇಳಿಜೀವವ ಹಿಡಿಯಲಾಪ್ಪೆತಂದೆ ಧೃತರಾಷ್ಟ್ರ ॥ ಹೇಳುವೊಡೆ ಕರ್ಣವ್ಯಥೆಯ ನೀ । ನಾಲಿಸುವಡೇನರಿದು ನುಡಿಗಳ । ಕಾಳಕೂಟವ ಬ್ರಡಿಸುವೆನು ಕಿವಿಯಾರ ಕೇಳೆಂದ ॥ ೧ ॥ ತೂಳಿದನು ಕಲಿಪಾರ್ಥನೀತನ । ಮೇಲೆ ಶಿವಶಿವ ಕಣೆಯ ಕಡೆವಳೆ । ಗಾಲತಪ್ಪಲೆನುತ್ತ ತರಿದನು ಕರ್ಣನಂಬುಗಳ ॥ ಮೇಲೆಮೇಲೆಚ್ಚಂಬುಗಳ ಸಲೆ । ಸೀಳಿ ಕರ್ಣಧ್ವಜದ ಕಂಭದ । ಕೂಲ ಮುರಿಯೆಸಲುಡಿದು ಬಿದ್ದುದು ವರರಥಾಗ್ರದಲಿ॥೨॥ ಆಮಹಾಧ್ವಜದಂಡಪಾತದ । ಡಾಮರಕೆ ಕಳವಳಿಸಿ ಬೆದರಿತು । ಹಾಮಹಾದೇವೇನಹೇಳುವೆನ್ನೆ ಮಹೀಪತಿಯೆ ॥ ಧೂಮಚುಂಬಿತಚಿತ್ರದಂತೆ ಸ । ನಾಮರಿದ್ದುದು ಸೌಬಲಾಶ್ವ । ತ್ಥಾಮಕೃಪಕೃತವರ್ಮಕಾದಿಗಳೊಂದುನಿಮಿಷದಲಿ ॥ ೩ ॥ ಮತ್ತೆ ಕೇಳರಿವಿಕ್ರಮವ ನಭ । ಕೊತ್ತಿತೀತನ ಶೌರ್ಯವಾತನ । ನತ್ತರಲಿ ನಾದಿದನು ನಾನಾವಿಧಶರಾಳಿಯಲಿ ॥ ಹತ್ತುಶರದಲಿ ಕರ್ಣಚಾಪವ । ಕತ್ತರಿಸಿದನು ಪಾರ್ಥನೀತನ । ಚಿತ್ತದಲಿ ಕರುಣಾರಸದ ಕಾಲಾಟವಾಯ್ತೆಂದ ॥ ೪ ॥ ದ್ರೋಣಭೀಷ್ಮರ ನಚ್ಚಿದರ ಮುಂಗಾಣಿಕೆಯಲೇ ಮಡಿದಿರೆನ್ನಯ । ಗೋಣ ಕೊಯ್ದನು ಕೃಷ್ಣ ಮುನ್ನಿನಕುಲವನೆಚ್ಚರಿಸಿ ॥ ಪ್ರಾಣ ಪಾಂಡವರೆಂಬನುಡಿಯನು । ಜಾಣಿನಲಿ ಹರಿ ಬಲಿದನೊಡೆಯಗೆ । ಕಾಣೆನಾಪ್ತರನೆಂದು ಮಂಮಲಮರುಗಿದನು ಕರ್ಣ ॥ ೫ ॥ ಕುಲಕೆ ಕೀಳಿವನೆಂದು ಧಿಕ್ಕರಿಗಳೆಯಲಾಗಲಿ ಬಂಧುವರ್ಗಕೆ । ಮುಳಿದುಸಿಂಹಾಸನದಲೆನಗಭಿಷೇಕವನು ಮಾಡಿ ॥ ಕುಲಮಲಿರ್ದವ ತೊಳೆದು ತನ್ನಯ । ಕುಲದೊಳಗೆ ಬೆಚ್ಚವನಿಪಾಲಕ । ತಿಲಕಕುರುಪತಿಗಾಪ್ತರಿಲ್ಲೆಂದಳಲಿದನುಕರ್ಣ ॥ ೬ ॥ ನೋಡಿ ತಣಿಯನು ನಿಚ್ಚಲುಚಿತವ । ಮಾಡಿತಣಿಯನು ಕೇಳ ಮೇಳದ । ಲಾಡಿತಣಿಯನು ಶಿವಶಿವಾಯೆನ್ನೊಡೆಯಕುರುರಾಯ ॥ ನೋಡಲಳಿದುದು ದ್ರೋಣಭೀಷ್ಮರ । ಗೂಡಿ ತಲೆಗೊಟ್ಟೈಸರಿಂತಾ । ಮಾಡಿತೇನರಸಂಗೆನುತ ಸಲೆ ಮರ

ದನು ಕರ್ಣ ॥ ೭ ॥ ಮೊದಲಲಾತ್ಮಜರಳಿವನೊಡಹು । ಟ್ಟಿದರಮರೆಯಲಿ ಮರೆದನೊಡಹು । ಟ್ಟಿದರು ನೂರ್ವರು ಮಡಿಯೆ ಮರೆದನು ಯೆನ್ನಸುಳುವಿನಲಿ ॥ ಕದನವೆನ್ನಯ ಸುಳಿವನೊಳಕೊಂ। ಡುದು ಸುಯೋಧನನೃಪತಿಗಿನ್ನಾ । ವುದನು ಕಾಣೆನು ಶಿವಶಿವಾಯೆಂದೊರಲಿದನು ಕರ್ಣ ॥ ೮ ॥ ಕಲಹಿದೊಡೆಯನ ಜೋಳವಾಳಿಗೆ । ತಲೆಯ ಮಾರುವದೊಂದುಪುಣ್ಯದ । ಬೆಳಸು ಮರಣದಹೊತ್ತು ಕೃಷ್ಣನಕಾಬಸುಕೃತಫಲ ॥ ಇಳೆಯೊಳಿಂದೆನಗಿಲ್ಲದಾರಿಗೆ । ಫಲಿಸುವುದು ತಾ ಧನ್ಯನೆನುತವೆ । ಕಳಚದಸುರಾಂತಕನ ನೀಕ್ಷಿಸುತಿರ್ದನಾಕರ್ಣ ॥ ೯ ॥ ಒಳಗೆ ಹೃದಯಾಂಬುಜದ ಮಧ್ಯ । ಸ್ಥಳನೊಳಗೆ ಮುರವೈರಿಯನು ಹೊರ । ವಳಯದಲಿ ಫಲುಗುಣನ ಮಣಿರಥದಗ್ರಭಾಗದಲಿ ॥ ಹೊಳೆನೆಹರಿಯನು ಕಂಡನಿದು ಹೊರ । ಗೊಳಗು ಹರಿತಾನೆಂಬಭೇದವ । ತಿಳಿದುನಿಜದೆಚ್ಚರಿನ ತವಕದೊಳಿರ್ದನಾಕರ್ಣ ॥ ೧೦ ॥ ಅರಸಚಿತ್ತೈಸಾಚೆಯಲಿ ಮುರ । ಹರನಲೇ ನಿಮ್ಮನ್ವಯವ ಸಂ । ಹರಿಸಿದಾತನು ಭೀಮಸೇನನೊ ಮೇಣ್ಧನಂಜಯನೊ ॥ ಸರಳ ತೊಡು ಬೇಗದಲಿ ಕರ್ಣನ । ಶಿರವನಿಳುಹಾ ಹಾರದಿರುಹೇ । ವರಿಸದಿರು ತೆಗೆ ದಿವ್ಯಶರವ ಪು ಬೇಗ ಮಾಡೆಂದ ॥ ೧೧ ॥ ಕರಗುವರೆ ನೀ ಕಾರು ಭೀಮನ । ಕರೆದು ಕೊಲಿಸುವೆನೀತನನು । ನಿಷ್ಠುರನಲಾ ಯೆನ್ನದಿರು ತೆಗೆ ನಿನ್ನಿಂದತನ್ನಿಂದ॥ ಹರಿಯದೇ ಹಗೆ ನಮ್ಮ ಚಕ್ರದ। ಲರಿಭಟನ ಮುಂಬನು ಯುಧಿಷ್ಠಿರ । ನರಸುತವನು ನಿಲಿಸಿ ತೋರುವೆನೆಂದನಸುರಾರಿ ॥ ೧೨ ॥ ಈಸುಕರ್ಣನಮೇಲೆ ಬಹಳ । ದ್ವೇಷವೇನೋ ಯೆನುತ ಮನದಲಿ । ಗಾಸಿಯಾದನುಪಾರ್ಥ ಕರುಣಕ್ರೋಧದುಪಟಳಕೆ ॥ ಆಸಯನ್ನೇಕೆನುತ ಸೆಳೆದನು । ಸೂಸಿಗಡಗಳ ಸುಳಿಯಹೊಗರಿನ। ಮಿಾಸಲಳಿದಾರೆಂಜಲಿಸದಂಜಳಿತಮಾರ್ಗಣವ ॥ ೧೩ ॥ ಉರಿಯನುಗುಳುವ ಬಾಣದಲಿ ವಿ । ಸ್ತರಿಸಿ ಕರ್ಣನನೆಸಲು ಸಮರದೊಳುರವ ಕೀಲಿಸುದಂಬುಗಂಗಡಿಯಾಗಿ ಗಾಢದಲಿ ॥ ಹರಣ ತೊಲಗದಮರ್ಮವನು ಮುರ । ಹರನು ಕಂಡನು ರಥದವಾಘಿಯು । ನಿಂಸಿ ಕರ್ಣನ ಹೊರಗೆ ಬಂದನು ವಿಪ್ರವೇಷದಲ ॥ ೧೪ ॥ ಬಳಲಿದನು ಬಸವಳಿದು ಮಲ್ಲನೆ । ಹಳವಿಗೆಯ ನಮ್ಮದನು ಲಕ್ಷ್ಮೀ । ನಿಳಯನನು ನೋಡುತ್ತರವಿಸುತನಿರಲುಕಂಡಾಗ ॥ ಹೊಳೆದಕುಂಡಲವಿರಲು ಪ್ರಾಣವು। ತೊಲಗದಲ್ಲಿಂದಾಗ ಕೃಷ್ಣನು। ತಿಳಿದು ವಿಪ್ರನ ರೂಪತಾಳ್ದವನಲ್ಲಿಗೈತಂದ ॥ ೧೫ ॥ ತ್ಯಾಗ ಜಗದೊಳಗೆಂಬಕೀರ್ತಿಯ । ಲೋಗರಿಂದವೆ ಕೇಳಿ ಬಂದೆವು । ಈಗಲತಿಶಯಫಲವನೊಲುವರವುನಧಬಯಾಚಿಯನು ॥ ಈಗಲಾವುದು ನಿನ್ನಭೀಷ್ಟವು । ಶ್ರೀಗೆ ಮಂಗಳವೆಂದು ಹರಸಿದ । ನಾಗಲಂದನು ಕರ್ಣ ನಸುನಗುತಿರ್ದ ಮನದೊಳಗೆ ॥ ೧೬ ॥ ತ್ಯಾಗಸಿಂಹಾಸನದಮೇಲೆ । ದ್ದಾಗಬೇಡಿದೊಡೀವನಾಷೀಗ ರಣದಲಿ ಬಂದು ಬೇಡುವುದುಂಟೆ ಹೇಳೆನಲು । ತೂಗುತಿಹಕುಂಡಲವನೀಗಲೆ । ಬೇಗಧಾರೆಯನೆರೆದುಕೊಡುಯೆನ । ಲಾಗಲುದಕವನರಸಿ ಕರ್ಣನು ಕೆಲನ ನೋಡಿದನು ॥ ೧೭ ॥ ಉದಕವನು ಹೊರಗರಸುತಿರಲಾ । ಪದುಮನಾಭನು ನುಡಿದನಿನ್ನಯ । ಹೃದಯದೊಳಗಿದ್ದಮಲಗಂಗಾಜಲವ ತೆಗೆದೆನಗೆ ॥ ಪದುಳದಿಂದೆರೆ ಧಾರೆಯನು ಸಂ । ಪದದ ಮುಕ್ತಿಯ ಪದವನೊಲುವೊಡೆ । ಇದು ತುಭೋದಯವೆಂದು ಮಾಯಾವಿಪ್ರನರುಹಿದನು ॥ ೧೮ ॥ ಸರಳ ತೆಗೆದನು ಸರಸಿಜಪ್ರಿಯ। ವರಸುತನು ತನುವರ ಬಗಿದನು । ಘುರಿಘುಂಲುಘುಂಲೆನಲು ತೆಗೆದನು ನಿರ್ಮಲೋದಕವ ॥ ಪರಮಸಂತೋಷದಲಿ

ಧಾರೆಯನಿರದೆ ಮಾಡುತ್ತಿರಲು ಮೇಲಣಾಸುರರುಘೋಯೆಂದೆನಲು ಪುಷ್ಪಕವಿಳಿದುದಂಬರದಿ ॥೧೯॥
ಬೇಡಿದೊಡೆ ಕುಂಡಲವ ತೆಗೆದೀ । ಡಾಡಿದನು ಲೋಕೈಕನಾಥನ । ನೋಡಿ ಧನ್ಯನೆನುತ್ತ ರವಿಸುತನಿರ
ಲು ಭಕ್ತಿಯಲಿ ॥ ನೋಡಿದನು ಕರುಣಾಳು ಧಾರೆಯ । ಮಾಡಿದಾನವ ನೀವ್ರದೆನೆ ಕೈ । ನೀಡಿ ಹೃದ
ಯವ ಬಗಿದನಮೃತದ ಬಿಂದುಗಳು ಸುರಿಯೆ ॥ ೨೦ ॥ ಪರಮಕರುಣಾಸಿಂಧು ಕರ್ಣಂ । ಗಿರಿದೆ ನಿಜ
ಮೂರ್ತಿಯನು ತೋರಿಸಿ । ಯುರುತರಪ್ರೇಮದಲಿ ಮುಕ್ತಿಯಪದವ ನೇಮಿಸಿದ ॥ ನರನೊಳೆಚ್ಚರಿಸಿ
ದನು ಕರುಣಾ । ಕರನು ಅನುಸಂಧಾನಮಾಡಲು । ಧರೆಯೊಳೇನಚ್ಚರಿಯೆನುತ ಬೆರಗಾಯ್ತು ಸುರೆ
ಕಟಕ ॥ ೨೧ ॥ ಅಂದು ಪಾಶುಪತಕ್ಕೆ ಬಲುವಳಿ । ಬಂದುದಂಜನಬಾಣವನು ಡೊಣೆ । ಯಿಂದ ತೆಗೆ
ದನು ಗಿರಿಜೆಯಂಘ್ರಿಯ ನೆನೆದು ಮಂತ್ರಿಸುತ ॥ ಮಂದರಾಚಲ ನಡುಗೆ ಕಿಡಿಗಳ । ಸಂದಣಿಯ ಬಾ
ಯ್ದಾರೆಯಂಬಿನೊ । ಳೆಂದು ಕರ್ಣನ ಶಿರವನೆಚ್ಚನು ವಾಸವನಸೂನು ॥ ೨೨ ॥ ಶಿವಶಿವಾಯೆನುತಿ
ರ್ದ್ದೈ ತ್ರೈ । ಭುವನಜನವಾದಿವ್ಯಶರಗಾಂ । ಡಿವವನೊದೆದುದು ಸದೆದುದೀತನಬಹಳರಶ್ಮಿಯಲಿ ॥ ಅ
ವೆಘಡಿಸಿತೀಪ್ರಭೆಯಬಲದೃಗು । ನಿವಹವನು ಧಾರಾಳಿವನ್ನಿ । ಪ್ರವರಬಹಳಜ್ವಾಲೆ ಝಡಿತೆಯಲ್ಮೈದಿ
ಕರಿಭಟನ ॥ ೨೩ ॥ ಆಮಹಾಸ್ತ್ರದ ಬಹಳತೇಜ । ಸ್ತೋಮದಲಿ ಕಣ್ಮುಳುಗಿ ಮುಚ್ಚಿದು । ದೀಮ
ಹೀಶವ್ರಾತವೆರಡೊಡ್ಡಿನಲಿ ಕಣ್ದೆರೆಯೆ ॥ ಆಮುಹೂರ್ತಕೆ ಕರ್ಣಶಿರವು । ದ್ದಾಮಮಣಿಗಳು ರುಚಿರ
ನಾಮ । ಸ್ತೋಮದಲಿ ಪಲ್ಲಟಿಸಿ ಮೆರೆದುದು ಗಗನಮಾರ್ಗದಲಿ ॥ ೨೪ ॥ ಅರಸಕೇಳೈ ಕರ್ಣನೊ
ಡಲಲಿ । ಪರಮತೇಜಃಪುಂಜ ಹೊಳೆದು । ಪ್ಪರಿಸಿ ನೆಗೆದುದು ಹೋದುದಿನಮಂಡಲದಮಧ್ಯದಲಿ ॥ ಅ
ರರೆ ಭಾಪುರೆ ಕರ್ಣಮಜಭಾ । ಪುರೆ ಭಟಾಗ್ರಣಿ ನಿನ್ನ ಸರಿಧೊರೆ । ಯೆರಡುಯುಗದಲಿ ಕಾಣೆನೆಂದ
ಳಲಿದನು ಕಲಿಹನುಮ ॥ ೨೫ ॥ (ಕೊಟ್ಟಭಾಷೆಯ ಮೀರಿ ಬಾಣವ । ತೊಟ್ಟನೇ ತಾನೊಡೆಯನೆಂದರೆ ।
ಯಟ್ಟಿದನೆ ಪಾಂಡವರೊಳನುಸಂಧಾನವನು ಬಿಸುಟು ॥ ನೆಟ್ಟಕಣೆಗಳಕಿದನೆ ಕೌರವ । ಕಟ್ಟನಕಟಕ
ಟೆಂದು ಕಾಯುವ । ಬಿಟ್ಟಕರ್ಣಂಗಾರುಸರಿಯೆನುತಿರ್ದುದಮರಗಣ) ॥ ೨೬ ॥ ಬಲುಪಿಡಿಯಬಿಲು ವಾ
ಮದಲಿ ಬೆರ । ಳೊಳಗೆ ಸವಡಿಸಿ ತೆಗೆದತಿರುವಿನ । ಹಿಳುಕು ನಿಮಿರಿದತೋಳತೋರಿಕೆ ಬಲದಭಾಗದ
ಲಿ ॥ ಬಲಿದಮಂಡಿಯಬಾಗಿದೊಡಲಿನ । ಹೊಳೆವತನುಕಾಂತಿಯಮಹೀಪತಿ । ತಿಲಕ ಕೇಳೈ ಕರ್ಣನೆಸ
ದನು ರಥದ ಮಧ್ಯದಲಿ ॥ ೨೭ ॥ ಕಳಚಿ ದುರ್ಯೋಧನನ ಬೆಳುಗೊಡೆ । ನೆಲಕೆ ಬೀಳ್ವಂದದಲಿ ಕೌರ
ವ । ಕುಲದ ನಿಖಿಳೈಶ್ವರ್ಯವಿಳೆಗೋರ್ಗುಡಿಸಿ ಕೆಡೆದಂತೆ ॥ ಥಳಥಳಿಪನಗೆಮೊಗದ ಬಿಗುಹಿ । ಕ್ಕಳೆದಹು
ಬ್ಬಿನ ಬಿಟ್ಟಕಂಗಳ । ಹೊಳೆವಹಲುಗಳ ಕರ್ಣಶಿರ ಕೆಡೆದುದು ಧರಿತ್ರಿಯಲಿ ॥ ೨೮ ॥ ಕರ್ಣಹಾಹಾ
ಸೂತಸುತ ಹಾ । ಕರ್ಣ ಹಾ ರಾಧಾತನಯ ಹಾ । ಕರ್ನ ಹಾ ಯೆನ್ನಾಸೆ ಬಹಿರಂಗಜೀವನನೆ ॥ ನಿ
ರ್ಣಯವು ಕುರುಬಲಕೆ ಹಾಹಾ । ಕರ್ಣಬಾರ್ಕೈ ತಂದೆಯನುತವೆ । ನಿನ್ನ ಮಗ ರಥದಿಂದ ಧೊಪ್ಪನೆ
ಕೆಡೆದನವನಿಯಲಿ ॥ ೨೯ ॥ ರಾಯ ಹಮ್ಮೈಸಿದನು ಹಾರಾ । ಧೇಯ ಹಾಯೆಂನಾನ ಬಾರ್ಕೈ । ಮೂ
ಯವಾಗದ ಮಿನ್ನ ತೋರಾ ಕರ್ಣತೋರೆನುತ ॥ ಬಾಯ ಬಿಟ್ಟುದು ಕೈಯ ಕೈದುವ । ಹಾಯಿಕಿತು
ಕಂಬನಿಯ ಸರಿಯೊಳು । ಹಾಯಿದುದು ನೆರೆ ಹೊರಳುತಿರ್ದುದು ನಿಖಿಳಪರಿವಾರ ॥ ೩೦ ॥ ಸರಗೆ
ಸ್ಫುರಣೆಯಲ್ಲಿಯುದು ಕರಿ । ತುರಗಕಂಬನಿಗರೆದುದ್ಯ ಥರ । ಥರದಶೋಕಾಂಬುಧಿಯ ಲಳಿಯಲಿ ಸಿಲುಕಿ

ತರಿಸೇನೆ ॥ ಅರಸ ಕೇಳಾಚೆಯಲಿ ಭೀಮನು । ವರನಕುಲಸಹದೇವನರ್ಜುನ । ಧರಣಿಪತಿ ದ್ರೌಪದಿಯ ಚಿಂತೆ ದುರಂತವಾಯ್ತೆಂದ ॥ ೩೧ ॥ ಕಿತ್ತರೋ ಕಲ್ಪದ್ರುಮವ ಕೆಡೆ । ಕುತ್ತಿದರೊ ಸುರಧೇನುವ ನುಕ್ಕೈ । ವರ್ತಿಸಿದರೋ ಪರುಷವನು ಹಾಜಲಧಿಮಧ್ಯದಲಿ ॥ ಎತ್ತಣದು ಭಾರತದ ರಣ ತಾ । ನೆತ್ತಲರೆಸುತ ಬಂದುದಕಟಾ । ಮೃತ್ಯುವೆಂದೊರಲಿತ್ತು ವಂದಿಗಳೆರಡುಘಟ್ಟಿಸನಲಿ ॥ ೩೨ ॥ ಅರಸ ನೀ ಸೈರಿಸದಲಾ ಶಂ । ಕರವಿರಿಂಚಾದಿಗಳು ಕರ್ಣನ । ಪರಮಸತ್ಯವ್ರತವ ಕೊಂಡಾಡಿದರು ಅಕಟೆನುತ ॥ ಎರಡುಘಟ್ಟಿಸನ ದುಃಖಮಯಸಾ । ಗರವನತಿಹೇರಾಳವರ್ಜುನ । ತಿರುಗಿದನು ಪಾಳೆಯಕೆ ದುಮ್ಮಾನದಲಿ ಹರಿಸಹಿತ ॥ ೩೩ ॥ ಇತ್ತ ಪರವಶವಾದರಾಯನ । ತೆತ್ತಿಗರು ದಂಡಿಗೆಯೊಳರಸನ । ನೆತ್ತಿತಂದರು ಪಾಳೆಯದ ದುಸ್ಥಿತಿಯ ಮೇಳದಲಿ ॥ ತೆತ್ತನೇ ಮಗನಸುವನಕಟೆನು । ತೆತ್ತ ಚಿಂತಾರಾಗದಲಿ ಕಡ । ಲತ್ತ ಹಾಯ್ದನು ಬಿಸುಟನಂಬುಜಮಿತ್ರನಂಬರವ ॥ ೩೪ ॥ ದ್ಯುಮಣಿಕರ್ಣದ್ಯುಮಣಿಯೊಡ । ನ ಸ್ತಮಿಸ ಕಮಲಿನಿ ಕೌರವನಮುಖ । ಕಮಲ ಬಾಡಿತು ತಿಮಿರ ಹೆಚ್ಚಿತು ಶೋಕತಮದೊಡನೆ ॥ ಅಮಳಚಕ್ರಾಂಗಕ್ಕೆ ಭೂಪೋ । ತ್ತಮನ ವಿಜಯಾಂಗನೆಗೆ ಯಗಲಿಕೆ । ಸಮನಿಸಿತು ನೀ ಕೇಳು ಜನಮೇಜಯಮಹೀಪಾಲ ॥ ೩೫ ॥ ಕುದಿದು ಕೃಷ್ಣನು ಕರ್ಣನಳಿವನು । ವಿದಿತವೆಂದವೆ ಬಯಸಲಾಯಿತು । ಉದಧಿ ಹೆಚ್ಚಿತು ಹರುಷದಲಿ ಭೂಭಾರ ಹೋಯ್ತೆನುತ ॥ ಸದನವನು ಹೊಕ್ಕನು ನಿರಂತರ । ಕದಡು ದುರ್ಯೋಧನನಮೇಲಿರೆ । ಕದನದಲಿ ಪಾಂಡವರ ಸಲಹಿದ ವೀರನಾರಾಯಣ ॥ ೩೬ ॥ ಮರುಗುವರು ಪಾಂಡವರು ಕರ್ಣನ । ಮರಣದಲಿ ಯಡಿಗಡಿಗೆ ಮಿಗೆ ಸೋ । ದರದ ಸಂಬಂಧದಲಿ ಹೆಚ್ಚಿತು ಮನದಸಂತಾಪ ॥ ಬೆರೆಸಿತಕಟಾಯೆನುತ ಮುರರಿಪು । ಕರಗಿದಂತಃಕರಣದಿಂದವೆ । ನೆರೆ ಮರುಗಿ ಪಾಂಡವರ ಸಲಹಿದ ವೀರನಾರಯಣ ॥ ... ... ... ... ॥೩೭॥

ಅಂತು ಸಂಧಿ ೨೭ಕ್ಕಂ ಪದ ೧೧೪೪ಕ್ಕೆ ಮಂಗಳಮಸ್ತು.

---

ಇತಿ ಶ್ರೀಮದಚಿಂತ್ಯ ಮಹಿಮ ಗದುಗು ವೀರನಾರಾಯಣ ಚರಣಾರವಿಂದ ಮಕರಂದ ಮಧುಪಾನ ಪುಷ್ಟ ವಚಃ ಷಟ್ಪದಿನಿಕಾಯ ಶ್ರೀಮತ್ಕುಮಾರ ವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ಣಾಟ ಭಾರತ ಕಥಾಮಂಜರಿಯೊಳ್ ಕರ್ಣಪರ್ವಂ ಸಮಾಪ್ತಮಾದುದು.



ಶ್ರೀರಸ್ತು.

||ಶ್ರೀ ವೇದವ್ಯಾಸಾಯನಮಃ.||

# ಕನ್ನಡಮಹಾಭಾರತ-ಶಲ್ಯಪರ್ವ.

## ಮೊದಲನೆಯಸಂಧಿ.

||ಸೂಚನೆ|| ರಾಯ ಕೇಳೈ ಕದನದಲಿ ಕಲಿರಾ | ಧೇಯನವಸಾನದಲಿ ಕೌರವ|ರಾಯದಳಪತಿಯಾಗಿ ಹೊಕ್ಕನು ಶಲ್ಯನಾಹವವ ||

||ಪದ|| ಹೇಳರೇ ಭೀಷ್ಮಾದಿಹಿರಿಯರು | ಮೇಲುದಾಯವ ಬಲ್ಲವರು ಹೆ | ಚ್ಚಾಳುತನದಲಿ
ಹಿಗ್ಗಿ ಕಂಡಿರಿ ಜಯದ ಜಾರುಗಳ || ಮೇಲಣಾಹವದೊಳಗೆ ದೇಹವ | ಬೀಳುಕೊಟ್ಟನು ಶಲ್ಯನಲ್ಲಿಂ
ನ್ನೇಲೆ ದೊರಗೇನಾಯ್ತು ಯೆಂಬುದನರಿಯೆ ತಾನೆಂದ ||೧|| ಮರುಳೆ ಸಂಜಯ ಗಾಳಿಯಲಿ ಕುಲ
ಗಿರಿಯ ಬೈಸಿಕೆ ಬಿಚ್ಚಿದ್ದರೆ ಹುಲು | ಮೊರಡಿಗಳ ಪಾಡೇನು ಬೀತುದು ಕರ್ಣನೊಡ್ಡವಣೆ || ಕುರುಪ
ತಿಯ ಪಾಡೇನು ಮಾದ್ರೇ | ಶ್ವರನ ಮತ್ಸರವೇನು ಸಾಕಂತಿರಲಿ ಸವರಿತು ಕೌರವಾನ್ವಯವೆಂದನಂಧ
ನೃಪ ||೨|| ಬೇಯದೆನ್ನದೆ ಶೋಕವಹ್ನಿಯ | ಬಾಯಲಕಟಾ ಕರ್ಣಕೌರವ | ರಾಯರಳಿವಿನಲುಳಿದು
ಪುತ್ರದ್ರೋಹಿಯಾಗಿನ್ನು || ಸಾಯಿಸುವ ಸಾವಂಜಿತೆನಗೆ ಚಿ | ರಾಯು ತೊಡರಿಕ್ಕಿದನು ಮಾರ್ಕಂ
ಡೇಯಮುನಿಯೆಂದರಸ ಧೊಪ್ಪನೆ ಕೆಡೆದನವನಿಯಲಿ || ೩ || ಹದುಳಿಸೈ ರಾಜೇಂದ್ರ ನೀ ಬಿ | ತ್ತಿದವಿಷ
ದ್ರುಮ ಫಲಿತವಾಯಿತು | ಬೆದರ ಲೇಕನುಭವಿಸುಸಾಕಿನ್ನುಳಿದಮಾತೇನು || ಕದನದಲಿ ಸುರನದಿಯ
ಹೋಗಾ | ಡಿದೆ ನಿಜಾನ್ವಯಕಲ್ಪತರುವನು|ಮದಕರಿಗೆ ಮಾರಿದೆಯೆನುತ ನೆಗಹಿದನು ಧರಣಿಪನ ||೪||
ಮಲಗಿಸಿದ ನೊರಗಿನಲಿ ನಯನ | ಸ್ಥಳವನೇರಿಸಿದವನು ಶೋಕಾ | ನಳನ ತಾಪಕೆ ತಂಪನೆರೆದನು ನೀ
ತಿಮಯರಸದ || ಅಳಲಸರವಮಾಡಿದ ನದೀಸುತ | ರಳಿವಿನಲಿ ಗುರುಕರ್ಣಶಲ್ಯನ | ತಳುವಿಸಲಿ ಕಟ್ಟ
ಳಲ ಬಹಳಾಭ್ಯಾಸಿ ನೀನೆಂದ ||೫|| ಅಹುದು ಸಂಜಯ ಶೋಕಶಿಖಿ ನೆರೆ | ದಹಿಸದೆನ್ನನು ಬೆಂದದೇ
ಹಕೆ | ದಹನವುಂಟೇ ಯೆಂಬನಾಣ್ಣುಡಿ ನಿನ್ನೊಳಾದುದಲಾ || ಮಿಹಿರಸುತ ಪರಿಯಂತ ಕಥೆ ನಿ |
ರ್ವಹಿಸಿ ಬಂದುದು ಶಲ್ಯಕೌರವ | ರಹಿಗನೆಗಳಿದರೆಂಬುದನು ವಿಸ್ತರಿಸಿ ಹೇಳೆಂದ ||೬|| ತೆಗೆದು ದಾಹೆ
ಯುಲವರ ಬಲ ಜಿಗ | ದಗಲದುಬ್ಬಿನ ಬೊಬ್ಬೆಯಲಿ ಮೊರೆ | ಮುಗಿಲ ಮದದಂದದಲಿ ಬಹುವಿಧವಾ
ದ್ಯ ರಭಸದಲಿ || ಬಿಗಿದಮೋನದ ಬೀತಹರುಷದ | ಹೊಗರುಮೋರೆಯ ಹೊತ್ತುವ್ಯಥೆಗಳ | ದುಗುಡ
ದೊಡಲಿನ ನಿನ್ನ ಮೋಹರ ತೆಗೆದುದೀಚೆಯಲಿ || ೭ || ಸಿಡಿದು ಕರ್ಣನ ತಲೆ ಧರಿತ್ರಿಗೆ | ಕಡೆಯೆ

ಭೂಪನ ಮೂರ್ಛೆಯಲಿ ನೃಪ । ಕೆಡೆದು ಕಣ್ಮುಚ್ಚಿದನು ಶೋಕಜ್ವರದ ಝಳ ಝಡಿಯೆ ॥ ಹಡಪಿ
ಗರು ಚಾಮರದ ಚವುರಿಯ । ರೊಡೆಯ ನಿದಿರಿನಲೊದರೆ ಕಂಬಿಯು । ಕಡಿಯಣದ ಕುಡಿನೇಣು
ಕೊಂಡನು ತಿರುಹಿದನು ರಥವ ॥ ೮ ॥ ಇಂದು ಕರ್ಣನ ಹಾನಿ ಕೌರವ । ವೃಂದವನು ಮೇಳೈ
ಸಿತೇ ಹಾ । ಯೆಂದು ಕೃಪಗುರುಸುತರು ರಥವನು ಬಿಸುಟ ಸೂಠಿಯಲಿ ॥ ತಂದು ನಿಲಿಸಿದರರಸ ನಿ
ರವೆಂ। ತೆಂದುಸುರನಾರೈದು ವಿಧಿಯನು । ನಿಂದಿಸಿದವರವಧಾನು ಜೀಯೆನುತಾಮಹಾರಥರು ॥ ೯ ॥
ತಳಿತಳದು ಪಂನೀರನಕ್ಷಿಗೆ । ಚಳೆಯುವನು ಹಿಡಿದೆತ್ತಿ ಗುರುಸುತ । ಮಲಗಿಸಿದೊಡೇನ್ಯೆಯ ಕರ್ಣನ
ಯೆನುತ್ತ ಕಣ್ದೆರೆದು ॥ ಗಳಿಲನೆದ್ದನು ಕರ್ಣ ತೆಗಸ್ಕೆ । ದಳವನಿರುಳಾಯ್ತೆನುತ ಶೋಕದ । ಕಳವಳ
ದಲಿರೆ ಮುಚ್ಚುಗಣ್ಣಿಲಿ ಮತ್ತೆ ಪವಡಿಸಿದ ॥೧೦॥ ರಾಯ ಹದುಳಿಸು ಹದುಳಿಸಕಟಾ । ದಾಯಿಗಂಗೆ
ಡೆಗೊಟ್ಟೆಲಾ ನಿ । ರ್ದಾಯದಲಿ ನೆಲಹೋಯ್ತು ಭೀಮನ ಭಾಷೆ ಸಂದುದಲ ॥ ವಾಯುಜನ ಚಿಕರ
ದಲಿ ತೆಗೆಯಾ । ಜೀಯ ನಿನ್ನನುಜರನು ಪಾರ್ಥನ । ಬಾಯ್ಬಿಡುಸಿ ಸುತನನೆಂದನು ಬಿರೆದು ಕುರು
ಪತಿಯು ॥೧೧॥ ಏನು ಗುರುಸುತ ಮಡಿದನೇ ತಂ । ನ್ನಾನೆ ಬವರದೊಳಿಂದು ಕುಂತೀ । ಸೂನುವೇಕ್ಷ್ಮೆ
ತಪ್ಪಮಾಡಿದನೇ ಮಹಾದೇವ ॥ ಭಾನುನಂದನ ಸರಿದನೇ ತ । ಪ್ಪೇನು ಪಾರ್ಥನ ಬಸುರಲೆನ್ನನಿ ।
ಧಾನವಿದ್ದುದು ತೆಗೆವೆನ್ಯಸಲೆಯೆನುತ ಮುರಿದೆದ್ದ ॥ ೧೨ ॥ ತಾಪವಡಗಿತು ಮನದ ಕಡುಹಿನ । ಕೋ
ಪ ತಳಿತುದು ಭೀಮಪಾರ್ಥರ । ರೂಪು ಮುಖದಲಿ ಕರ್ಣದುಶ್ಶಾಸನರ ಕಲ್ಪಿಸಿದ ॥ ಭೂಪ ಕೇಳೈ ಪಾ
ಳೆಯಕೆ ಕುರು । ಭೂಪ ಬಂದನು ನಾಳೆ ಕರ್ಣೋ । ತ್ಥಾಪನವಲಾ ಯೆನುತ ಹೊಕ್ಕನು ಭದ್ರಮಂ
ಟಪವ ॥೧೩॥ ಶಕುನಿಕೃಪಗುರುಸೂನುಕೃತವರ್ಮಕಸು ಕೇತುಸುಶರ್ಮಸಂಸ । ಪ್ತಕರು ಮಾದ್ರೇಶ್ವ
ರಸುಬಾಹುಸುನಂದಚಿತ್ರರಥ॥ ಸಕಲಸುಭಟರು ವಾರಿಣೀನಾ। ಯಕರು ಬಂದರು ಕರ್ಣಹಾನಿ। ಪ್ರಕಟ
ತಳಿತಶಿರೋವಕುಂಠನವೈಮನಸ್ಯದಲಿ ॥೧೪॥ ಹಿಮದ ಹೊಯ್ಲಲಿ ಸೀದು ಸಿಕ್ಕಿದ । ಕಮಲವನಂದದಲಿ
ಹತವಿ । ಕ್ರಮದ ಕೀರ್ತಿಯು ಬಹಳಭಂಗಕೆ ಬಂದುದಾಸ್ಥಾನ ॥ ಸುಮುಖತಾವಿಚ್ಛೇದಕಲುಷ । ಸ್ಥಿ
ಮಿತರಿವರನು ಕಂಡು ನಾಳಿನ । ಸಮರಕೇನುದ್ಯೋಗವೆಂದನು ಕೃಪನಗುರುಸುತನ ॥೧೫॥ ಅರಸ ಕ
ರ್ಣಚ್ಛೇದವೇ ಜಯ । ಸಿರಿಯ ನಾಸಾಚ್ಛೇದವಿನ್ನಾ । ವರಿಸದಿರು ಹೋರಾಡಿ ಹೊಗೆಳಿಸು ಬಾಹು
ವಿಕ್ರಮವ ॥ ಗುರುನದೀಸುತರಳಿದಬಳಿಕೀ । ಧರೆಗೆ ನಿನನಗಸ್ತಮಯ ಕರ್ಣನ । ಮರಣದಲಿ ನೀನರ್ಧ
ದೇಹನು ರಾಯ ಕೇಳೆಂದ ॥ ಅವ್ವಕೋದರನರನೊಳಂತ । ಭಾವದುಶ್ಶಾಸನಿಗೆ ತನ್ನಯ । ಜೀವಸ
ಖರಾಧೇಯಸಾತನ ಮರಣಸಿದ್ಧಿಯಲಿ ॥ ಕೈವಿಡಿಯಲೇಕರ್ಣನಿಹನಂ । ದಾವು ನಿಶ್ಚೈಸಿದೆವು ಕರ್ಣನ
ಸಾವು ನಾಳಿನೊಳರಿವೆವೆಂದನು ನಿನ್ನ ಮಗ ನಗುತ ॥೧೬॥ ನಾವು ಹೊಯ್ದಾಡುವೆವು ಜಯಸ । ತ್ಯಾವ
ಲಂಬವ ತೋರುವೆವು ಕ । ರ್ಣಾವಸಾನವ ಕಂಡು ಬಳಿಕುಳಿಯನು ಯಥಾರ್ಥವಲೆ॥ನೀವುಸೇನಾಪತ್ಯ
ದಲಿ ಸಂ।ಭಾವಿಸಿರೆ ಸಾಕಿನ್ನು ಮಿಗಿಲಾ।ದೈವಕೃತಪೌರುಷವ ನಾಳಿನಲರಿಯಬಹುದೆಂದ॥೧೭॥ ಧರಣಿ
ಪತಿಚಿತ್ತೈಸುಸೇನಾ।ಧುರವನೀವುದು ಮಾದ್ರಭೂಪತಿ। ಗರಿದಲಾ ಜಯಲಕ್ಷ್ಮಿ ಬಳಿಕಾಪಾಂಡುತನಯ
ರಿಗೆ॥ಸುರನದೀಜದ್ರೋಣರಾಧೇ।ಯರಿಗೆ ಸರಿಮಿಗಿಲೆನಿಸಿ ಮಾದ್ರೇ।ಶ್ವರನುಳಿಯೆ ಬಳಿಕಾರು ಧಿಟ್ಟರು
ನಿನ್ನ ಘಟ್ಟಿಸಲೆ ॥೧೮॥ ನೀವು ಕಟಕಾಚಾರ್ಯಪುತ್ರರು।ನೀವಿರಲು ಕೃಪನಿರಲು ದಳಪತಿ।ನಾವಹವ ನೀ

ವಿಂದು ತೇಜೋದ್ಧತರ ರಥಿಕರಲಾ ॥ ನಾವು ತರುವಾಯವರುಗಳು ಜಯ । ಜೀವಿಗಳು ನೀವೆನ್ನ ಗು
ಣಸಂ । ಭಾವನರಲಾ ಯೆಂದನಶ್ವತ್ಥಾಮ ಶಲ್ಯಂಗೆ ॥ ೨೦ ॥ ಉಚಿತವಿತರೇತರಪದಸ್ತುತಿ । ರಚನೆ
ಗುಣಯುಕ್ತರಿಗೆ ವಿಜಯೋ । ಪಚಿತರಣನಾಟಕಕೆ ಜವನಿಗೆಯಾಯ್ತು ಲೇರಜನಿ ॥ ಅಚಲಮೂಲಿರ
ಪ್ಪಸರದ ಬಲ । ನಿಚಯ ನಂಮದುವೀರಸುಭಟ । ಪ್ರಚಯ ಮುಖ್ಯರಮಾಡಿಯೆಂದನು ಕೃಪನು
ಕುರುಪತಿಗೆ ॥೨೧॥ ಸುರನದೀಜದ್ರೋಣಕೃಪರೀ । ಕುರುಬಲಕೆ ಕಟ್ಟೊಡೆಯರವರಿ । ಬ್ಬರುಗಳಳಿವಿನ
ಲಾರದಿಲ್ಲಿಯು ಹಾನಿವೃದ್ಧಿಗಳು ॥ ಗುರುಸುತನೊ ಶಲ್ಯನೊಚಮೂಮು । ಖ್ಯರನು ನೀವೇ ಚಿಸಿ
ಯೆಂದನು । ಧರಣಿಪತಿ ಕೇಳ್ಕೆ ಕೃಪಾಚಾರಿಯಗೆ ಕುರುರಾಯ ॥೨೨॥ ಆದರಾಭೀಷ್ಮಾದಿಸುಭಟರು
ಕಾಧಿ ನೆಗ್ಗಿದಕಳನ ಹೊಗುವಾ । ಕೈದುಕಾರರ ಕಾಣೆನೀಮಾದ್ರೇಶಹೊರತಾಗಿ ॥ ಈಡುರಂತರ ಸಮರ
ಜಯ ನಮ । ಗಾದೊಡೊಳ್ಳಿತು ಶಲ್ಯನಲಿ ಸಂಪಾದಿಸಿರೆ ಸೇನಾಧಿಪತ್ಯವನೆಂದನರಸಂಗೆ ॥೨೩॥ ತರಿಸಿ
ಮಂಗಳವಸ್ತುಗಳನಾ । ದರಿಸಿ ಭದ್ರಾಸನದೊಳೀತನ। ನಿರಿಸಿ ನೃಪವಿಸ್ತರಿಸಿದನು ಮೂರ್ಧಾಭಿಷೇಚನ
ವ ॥ ಮೊರೆವವಾದ್ಯದಸಿಡಿಲ ಧರಣೀ । ಸುರರ ಮಂತ್ರಾಕ್ಷತೆಯ ಮಳೆಗಳೊ । ಳಿರುಳನುಗಿದವು ಮ
ಕುಟಮಣಿ ರಾಜಿಗಳ ಮಿಂಚುಗಳು ॥೨೪॥ ಆದುದುತ್ಸವ ಕರ್ಣಮರಣ । ಚ್ಛೇದವುಕ್ತಿತು ಹಗೆಗೆ ಕಾ
ಲ್ಗಳೆ । ಯಾದವೀರಸಮುದ್ರನೆಲೆತಪ್ಪಿದುದು ನಿಮಿಷದಲಿ ॥ ಬೀದಿವರಿದುದು ಬಿಂಕ ವೆನೆಕೊನೆ । ವೋ
ದುದಾಶಾಬೀಜ ಲಜ್ಜೆಯು । ಹೋದಮೂಗಿಗೆ ಕದಪ ಕೊಯ್ದನು ನಿನ್ನ ಮಗ ಬಳಿಕ ॥ ಕಾಣಿಕೆಯ
ನಿತ್ತಖಿಳಸುಭಟ । ಶ್ರೇಣಿ ಕಂಡುದು ನುಡಿಯ ಹಾಣಾ । ಹಾಣಿಗಳ ಭಾಷೆಗಳ ಹಕ್ಕಲು ವೀರರು
ಕ್ಕಿಗಳ ॥ ಪ್ರಾಣನಾಶಿಯನುಳಿದಹೊಯ್ಕಲ । ಹೂಣಿಗರು ವಿಜಯಾಂಗನಾಗ । ಕ್ಷೀಣಮಾನಸರೊಪ್ಪಿ
ದರು ಕುರುಪತಿಯ ಪರಿವಾರ ॥ ೨೬ ॥ ಪತಿಕರಿಸಿದ್ರೈ ಸಕಲಸುಭಟ । ಪ್ರತತಿಮಧ್ಯದಲೆನ್ನನಹಿತ ।
ಚ್ಯುತಿಗೆಸಾಧಸವೆಂದು ನಿಜಸೇನಾಧಿಪತ್ಯದಲಿ ॥ ಕೃತಕವಿಲ್ಲದೆ ಕಾದುವೆನು ಯಮ । ಸುತನೊಡನೆ ಜ
ಯಸಿರಿಗೆ ನೀನೇ । ಗತಿಯೆನಿಸಿ ತೋರಿಸುವೆನೆಂದನು ಶಲ್ಯ ಕುರುಪತಿಗೆ ॥೨೭॥ ಉಬ್ಬಿದನಲೇ ಮಧು
ರವಚನದ । ಹಬ್ಬದಲಿ ನಿನ್ನಾತನಸತ್ತಲು । ವುಬ್ಬಿನಪದಿರು ತಂದು ಬಿಸುಟರು ನಿನ್ನ ಪಾಳೆಯದ ॥
ಸರ್ಬವೃತ್ತಾಂತವನು ಗಾಢದ । ಗಬ್ಬ ಮುರಿದುದು ಕೃಷ್ಣರಾಯನ । ನೆಬ್ಬಿಸಿದನಿರುಳವನಿಪತಿ ಬಿನ್ನೈ
ಸಿದನು ಹದನ ॥೨೮॥ ದೇವ ಚಿತ್ತೈಸಿದರೆ ಬೊಪ್ಪನ । ಭಾವನನು ಸೇನಾಧಿಪತ್ಯವ । ನೋವಿದರಲೇ
ಶಲ್ಯ ಮಾಡಿದಭಾಷೆ ಸಮ್ಮೊಡನೆ ॥ ಆವನಂಗೈಸುವನು ಪಾರ್ಥನೊ । ಪಾವಮಾನಿಯೊ ನಕುಲನೋ
ಸಹ । ದೇವನೋ ತಾನೋ ನಿಧಾನಿಸಲರಿಯೆ ತಾನೆಂಬ ॥ ಕಲಹವೆಂಮವು ದಳಪತಿಗೆ ನಾ । ವಿಲುವೆ
ನೆಂದನು ಭೀಮನೆನ್ನನು । ಕಳುಹಿ ನೋಡೆಂದನು ಧನಂಜಯನೆನ್ನ ಮಾವನಲಿ ॥ ಸಲುಗೆಯೆನಗೆಂದ
ನು ನಕುಲನಂ । ದೊಳವಿಸರ್ಥಿಯುಳೆನ್ನ ಕಳುಹದ । ರುಳುಹಿದವರೆಂದರಗ್ಗಿದನು ಸಹದೇವಚರಣದಲಿ
॥೩೦॥ ಹರಿಯುವರ್ಜುನನಿಂದ ಭೀಮನ । ಸೆರವಣಿಗೆ ನೋಯಿಸದು ನಕುಲನ। ಹೊರಗೆಯೊದಗದು ಸ್ಮೃ
ತಿಸಹು ಸಹದೇವನಾಟೋಪ ॥ ಇರಿವರೇ ಮಾದ್ರೇಶ್ವರನ ನೆರೆ । ಮುರಿವೊಡಯು ನಿನಗಹುದು ನಿನ್ನ
ನು । ತರುಬಿಹವರೇ ಕಟ್ಟಕೆಂದನು ನಗುತ ಮುರವೈರಿ ॥೩೧॥ ಲೇಸವಾಡಿದೆ ಕೃಷ್ಣ ಶಲ್ಯಂ । ಗೀಸುಬ
ಲುಹುಂಟಾಪೊಡನುಜರು । ಗಾಸಿಯಾದರು ಹಿಂದೆ ಭೀಷ್ಮಾದಿಗಳ ಕದನದಲಿ ॥ ಈಸಮರದುರವಣೆ

ಗೆನಾಳಿನೊ । ಳೈಸಲೇ ನಳನಹುಷಭರತಮು । ಹೀತವಂಶೋದ್ಭವನ್ನನಾನೆಂದನು ಮಹೀಪಾಲ ॥ ೩೨ ॥ ನಾಯಿ ಹೆರಳೇ ಮಗನ-ನಿನ್ನನು । ಸಾಯಕನೆ ಲೋಕೈಕವೀರರ । ತಾಯಲಾ ನಿಮ್ಮವ್ವೆಯರ ಮೊಲೆ ಹಾಲಬಲುಹಿನಲಿ ॥ ರಾಯ ನೀಕ್ಷತ್ರಿಯನು ಸೇಸೆಯು । ತಾಯೆನುತ ತೂಪಿರಿದು ಕಮಲದ । ಳಾಯ ತಾಂಬೆಳೆ ಬೀಳುಕೊಂಡನು ಧರ್ಮನಂದನನ ॥೩೩॥ ಸಂದುದ್ಯೆ ಹದಿನೇಳು ರಾತ್ರಿಗ । ಳಂದಿನಿರುಳಾ ಸೇನೆ ನಿರ್ಭಯು । ದಿಂದ ನಿದ್ರಾವ್ಯಸನವಿಹ್ವಳಪೂರಣಹರುಷದಲಿ ॥ ನಿಂದುದ್ರೆ ನಿನ್ನವರು ರಾಧಾಸಂ ದನವ್ಯಪಗಮನನಷ್ಟ । ನಂದವಿಹ್ವಳಕರಣರಿದ್ದರು ನೃಪತಿ ಕೇಳೆಂದ ॥೩೪॥ ಆಶಿಖಂಡಿಯ ತೋರಿ ಸ ರಳಿನ । ಹಾಸಿಕೆಯು ಲೊಬ್ಬನನು ಮಾತಿನ । ವಾಸಿಯಿಂದೊಬ್ಬನನು ಮುನ್ನಿನ ಕುಲವನೆಚ್ಚರಿಸಿ ॥ ಗಾಸಿಮಾಡಿದನೊಬ್ಬನನು ಧರ । ಣೀಶಚೇಷ್ಟೆಯೊಳೊಬ್ಬನನು ಕೃಪೆ । ಯೇಸು ಬಲುಹೋ ವೀರನಾ ರಾಯಣನಭಕ್ತರಲಿ॥ ... ... ॥೩೫॥

ಅಂತು ಸಂಧಿ ೧ಕ್ಕೆ ಪದ ೩೫ ಕ್ಕಂ ಮಂಗಳಮಸ್ತು.



## ಎರಡನೆಯ ಸಂಧಿ.

॥ ಸೂಚನೆ ॥ ಗಂಡುಗಲಿ ಕದನಪ್ರಚಂಡನ । ಖಂಡಭುಜಬಲಧರ್ಮಸುತ ಮುಂ । ಕೊಂಡು ರಣದ ಲಿ ಕಾದಿದನು ಮಾದ್ರೇಶಭೂಪತಿಯು ॥

ಒಳಗೆಡಗೆ ನಗೆ ಹೊರಗೆ ಕಳಕಳ । ವಳಗೆಹೊರಗೆನೆವಾಯಿದಳವಾ । ಯೊಳಗೆ ಹೊರಗೆ ಸ ಘಾಡತನ ಬಲುಬಗೆಯತೊಳಲೊಳಗೆ॥ ಬಲುಹು ಹೊರಗೆ ಪರಾಭವದಕಂ । ದೊಳಗೆ ಕಡುಹಿನ ಕಲಿ ತನದ ಕೈ । ಚಳಕ ಹೊರಗೆ ಮಹೀಶಹದನಿದು ನಿನ್ನ ನಂದನನ ॥ ೧ ॥ ನೆಗ್ಗಿದನು ಗಾಂಗೇಯನಮ ರರೊ । ಳೊಗ್ಗಿದನು ಕಲಿದ್ರೋಣ ತನ್ನವ । ರಗ್ಗಳಿಕೆಗೂಣೆಯವ । ಬೆರಸಿದಬಿಂಬದಂದದಲಿ ॥ ಉ ಗ್ಗಡದ ರಣವಿದಕೆ ಶಲ್ಯನ । ನೆಗ್ಗಿಸಿದನೇ ಕೌರವೇಶ್ವರ ।ನೆಗ್ಗ ನೋಡುವೆನೆಂಬವೋಲ್ ರವಿಯಡರ್ದ ನಂಬರವ ॥ ೨ ॥ ಸೂಳವಿಸಿದವು ಲಗ್ನಯಲಿ ನಿ । ಸ್ಸಾಳ ದಳಪತಿಕುರುಬಲದಡೆ । ಖ್ಯಾಳವನು ನೋಡಿದನು ತೂಗಾಡಿದನು ಮಣಿಶಿರವ ॥ ಆಳು ನೆರೆದೊಡೆ ನಾಲ್ಕುದಿಕ್ಕಿನ । ಮೊಲೆ ನೆರೆಯದುಮು ನ್ನವೀಗಲು। ಪಾಳೆಯದ ಕಡೆವೀಥಿಗೈದುದು ಶಿವಶಿವಾಯೆಂದ ॥ ೩ ॥ ಗಜಕೆ ಗುಳ ಬೀಸಿದವು ವಾಜಿ । ವ್ರಜಕೆ ಹಲ್ಲಣಿಸಿದರು ಗಾಲಿಯ । ಗಜರು ಘೀಳಿಡೆ ಕೊರಳ ನೊಗದಲಿ ಕುಣಿದವಶ್ವಚಯ ॥ ಭುಜ ದ ಹೊಯ್ಲಿನ ಹರಿಗೆಗಳ ಗಜ । ಬಜದ ಬಿಲುಜೇವಡೆಯ ರವದ । ಕ್ಕಜದ ಕಾಲಾಳೊದಗಿತವನೀಪತಿ ಯ ಸನ್ನೆಯಲಿ ॥ ೪ ॥ ಮೊರೆವಕಹಳಾರವದ ಡಿಂಡಿಮ । ಮುರಜಗೋಮುಖಪಟಹಜರ್ಝರ। ಕರ ಡೆಪಣಹಮ್ಮದಂಗಡಮುರುಗಡಕ್ಕಡೌಡೆಗಳ॥ಬಿರಿಯೆ ನೆಲನಳ್ಳಿರಿವವಾದ್ಯದ । ಪರುಠವದ ನಿರ್ಘೋಷದಬ್ಬರ। ಜರುಹಿತಡಿಕಿಲು ಜಗದ ಜೋಡಿಯನರಸ ಕೇಳೆಂದ ॥ ೫ ॥ ವಿಾರಿಬರುವಮಹಾರಥರ ಕೈ। ಸೇರಿ ಬರುತಿಹರಾವುತರ ಮುಂ । ದಾರಿಬಹಕಾಲಾಳಗಮಕದ ಗಜದ ಗಾಡಿಕೆಯು ॥ ಭೋರು ಮೆರೆವ

ಮಹಾರಥಸರಣಿ। ಬೀರಿದಂಧಂಧಣಾಧಣಂಧಣ।ಧಾರಿಣಿಯು ಪರ್ಬಿದುದು ಬಲುವಾದ್ಯದ ಮಹಾಘೋಷ ॥ ಮುರಿದು ಬಲುಗುದುರೆಗಳ ಬಾಂದಣ । ಗೊರೆದಮ್ಮೈಯಾನೆಗಳ ಹಂತಿಗೆ। ಹರಿದಗಾಲಿಯು ರಥದ ಚಿನಿಕಡಿಗೊಡದಕಾಲಾಳ ॥ ಅರುಹಿದರು ಭೂಪತಿಗೆ ಸೇನೆಯೊ । ಳೆರಸಿ ತೆಗೆಥಾಯುಧಚತುರ್ಬಲ । ಹೊರಗೆ ನಿಂದುದು ಹೊಗೆದೆಗೆದಕೇಸುರಿಯ ತಿರುಳಂತೆ ॥ ೭ ॥ ಹತ್ತುಸಾವಿರದೇಳುನೂರರ । ಹತ್ತು ರಥಹನ್ನೆರೆಡುಸಾವಿರ । ಮತ್ತಗಜಘಟೆಯೆರಡುಲಕ್ಷವನೆಣಿಸಿದರು ಹಯವ ॥ ಪತ್ತಿ ಮೂರೇ ಕೋಟಿಯದು ಕ್ಕೆ । ವರ್ತಿಸಿತು ದಳಪತಿಗೆ ಸಾಗರ । ಬತ್ತಲೆಡೆಯಲಿ ನಿಂದನೀರವೊಲಾಯ್ತು ಕುರುಸೇನೆ ॥ ೮ ॥ ವೈರಿಬಲದೊಳಗಾರುಸಾವಿರ । ತೇರು ಗಜಘಟೆ ಮೂರುಸಾವಿರ । ವಾರುವಂಗಳ ನೆಣಿಸಿ ತೆಗೆದರು ಹತ್ತುಸಾವಿರವ ॥ ವೀರಚರರಾಯೊಂದುಕೋಟಿ ಮ । ಹೀರಮಣ ಕೇಳುಭಯಬಲವಿ । ಸ್ತಾರ ಹದಿನೆಂಟಣಿಸಿದಕ್ಷೋಹಿಣಿಯ ಶೇಷವಿದು ॥ ೯ ॥ ಶಕುನಿ ಮೋಹರಿಸಿದನು ಸಂಸಪ್ತಕರುಬೆರೊಂದಿದರುಕ್ಕತವ । ವರ್ಮಕಕ್ಕಪಾರ್ಶ್ವತ್ತಾ ಮರೊದಗಿದರೊಂದುಬಾಹೆಯಲಿ ॥ ಸಕಲಬಲ ಮಾದ್ರೇಶ್ವರನ ಹೇ । ಳಿಕೆಯೊಳೊಯ್ಯಾರಿಸಿತು ಕುರುಬಲ । ನಿಕರ ಶಳಿದುದು ಥರವಿಡಿದು ಕಳನೊಂದುಮೂಲೆಯಲಿ ॥ ೧೦ ॥ ಇದಿರೊಳೌಕಿತು ಗಾಳಿಪಟ್ಟದ । ಮದಗಜಾವಳಿ ಮುಗ್ಗಿದವು ಧ್ವಜ । ಪೆದುರಿದವು ಹೊಡೆಗೆಡೆದು ಹೊಳೆದುದು ತೇರುದಳಪತಿಯ ॥ ಬಿದಿರಿದವು ತಡಿಸಹಿತ ಥಟ್ಟಿನ । ಕುದುರೆ ಮೈಗಳ ನಾಯುಧದಕಿಡಿ । ಯುದುರಿದವು ಕುರುಬಲದಲದ್ಭುತವಾಯ್ತು ನಿಮಿಷದಲಿ ॥ ೧೧ ॥ ಬಂದುದಾಮೋಹರಬಲೌಘದ । ಮುಂದೆ ಪಾಠಕರ ವರಕಾಹಿನ । ಹಿಂದೆ ಬಿಲ್ಲವರವರೆ ಸುಯ್ದಾನದಲಿ ಸಬಳಿಗರು । ಹಿಂದೆ ತುರಗಸಮೂಹವಲ್ಲಿಂ । ಹಿಂದೆ ಗಜಘಟೆಗಜದಬಳಿಯಲಿ । ಸಂದಣಿಸಿದುದು ರಾಯದಳ ಮಣಿರಥನಿಕಾಯದಲಿ ॥ ೧೨ ॥ ಅರಸನೆಡವಂಕದಲಿ ಸಾತ್ಯಕಿ । ವರನಕುಲಸಹದೇವಸುತಸೋ । ಮರು ಯುಧಾಮನ್ಯೂತ್ತಮೌಂಜಸಸ್ಸಂಜಯಾದಿಗಳು॥ ನೆರೆದುದಾಬಲವಂಕದಲಿ ತನು । ಜರುವ್ವೆಕೋದರದ್ರುಪದಸುತದು । ರ್ಧರಸಿಖಂಡಿಪ್ರಮುಖರಾಪಾಂಚಾಲನಾಯಕರು ॥ ೧೩ ॥ ಆಯತಿಕೆಯಲಿ ಬಂದು ಪಾಂಡವ । ರಾಯದಳ ಮೋಹರಿಸಿನಿಂದುದು । ರಾಯರಿಬ್ಬರ ಬೀಸುಗೈಗಳ ಸನ್ನೆ ಸಮವಾಗೆ ॥ ತಾಯಿಮಳಲನು ತರುಬುವಬುಧಿಯ । ದಾಯಿಗರು ತಾವಿವರೆನಲು ಬಿಡೆ । ನೋಯಬೆರೆಸಿದುದುಭಯಬಲ ಬಲುಖತಿಯಬಿಂಕದಲಿ ॥ ೧೪ ॥ ಕೇಣವಿಲ್ಲದಭಟರಹಾಣಾ । ಹಾಣಿಕಮಸಗಿತು ಖಣಿಕಟಿಲಹೊ । ಯ್ಲಾಣಿಗಳ ಬಿಡುಗಿಡಿಯ ಹಿರಿಯುಬ್ಬಣದ ಹೋರಟೆಯ ॥ ಹೂಣಿಕೆಯ ಸಬಳಿಗರೊಳಿಮ್ಮ . . । ಗಾಣಿಕೆಯ ಹೂಂಕ್ಕತವ ಬಾಣದ । ಚೂಣಿಗಳ ಬಿಲ್ಲವರ ಥಾಳಾಧೂಳಿ ಬಲುಹಾಯ್ತು ॥ ೧೫ ॥ ರಾವುತರು ಝುಲ್ಲಿಸಿದರಗ್ಗದ । ಮಾವುತರು ಆನೆಗಳ ತುಡುಕಿ ಹ । ಯಾವಳಿಯ ಬೀಸಿದವು ರಥಿಕರು ಸೂತರೋಜೆಯಲಿ ॥ ಸಾವಿಗೆಣಿಸದೆ ಬೆರಸಿ ಮಾವುತ । ಮಾವುತರು ಮುಕ್ಕುರಿಕಿರಾವುತು । ರಾವುತರ ಚೂಣಿಯಲಿ ಮಸಗಿತು ಕಾರುಥಟ್ಟಿನಲಿ ॥ ೧೬ ॥ ಅರಸ ಕೇಳೈ ಹೊಕ್ಕಚೂಣಿಯ । ಲೆರಡುದಳದಲಿ ಕಾಣೆಸಗ್ಗದ । ಧೊರೆಗಳನುವಾಯ್ತಾಜಿಯಲಿ ಧರ್ಮಜನ ಸನ್ನೆಯಲಿ ॥ ಗುರುಜಕ್ಕಪಕ್ಕತವರ್ಮರಯವನೇ । ಶ್ವರಸುಬಾಹುಸುಶರ್ಮಶಕುನಿಗಳ । ಳುರುಮಣಿಸಿತೀಜೆಯಲಿ ಶಲ್ಯನ ಬೆರಳಸನ್ನೆಯಲಿ ॥ ೧೭ ॥ ನಿಲಿಸಿದರು ನಿನ್ನವರು ಬಲದ । ಗ್ಗಳೆಯರಿಸ್ಸುಬ್ಬಿದರು ಬಿರುದಾ । ವಳಿ

ಯ ಮೊದಲಿಸಿದರು ವಿಮಲಾನ್ವಯಮಹೋನ್ನತರ ॥ ಬಲನೆಡನ ತುದಿವೆರಳ ಮುಡಿಮುಂ। ದಲೆಯ ಲಘುವಾಗದಿರಿ ಶಸ್ತ್ರಾ । ವಳಿಯ ಬಾಯ್ದಾರೆಗಳ ತೆಗೆಯದಿರೆಂದರುಬ್ಬಿನಲಿ ॥ ೧೮ ॥ ಧೊರೆಯೊಳೊಬ್ಬನಸಹಾನಿ ಭಟರೆ । ಲ್ಲರಿಗೆ ಧೊರೆಧೊರೆತತ್ತರುಣಿಯದೆ। ನೆರಹುಬಹುದೋರೆಂದರೊಮ್ಮುಖರೊಂದಸಂಕೇತ ॥ ಉರವಣಿಸದಿರಿ ಕಂಡಮುಖದಲಿ । ತುರಗರಥಹಯಪತ್ತಿರಣಕು । ಬ್ಬರಿಸದಿರಿ ಕೃತಸಮಯವೆಂದರು ಸಾರಿಸುಭಟರಿಗೆ ॥ ೧೯ ॥ ನೂಕಿದರು ನಿನ್ನವರು ಹಿನ್ನಲೆ । ಗಾಕಿವಾಳರಜೋಡಿಯಲಿ ರಣ । ವ್ರೋಕರಿಸಿತರುಣಾಂಬುವನು ಗಜಹಯದ ಮೈಗಳಲಿ ॥ ವ್ಯಾಕುಳರ ಬೈಬೈದು ಚಪಳಾ । ನೀಕ ಝಡಿಸಿತು ಚಂಡಪಾಕನಿ। ರಾಕರಿಷ್ಣುಗಳೊಕ್ಕಲಿಕ್ಕಿತು ದಳದ ಮಧ್ಯದಲಿ ॥೨೦॥ ಕವಿದುದೊಂದೇವಾಘೆಯಲಿ ರಿಪು । ನಿವಹನಿಬ್ಬರದಬ್ಬರದ ಶರ । ಲವಣಿಗಳ ಲಾವಣಿಯ ಮಿಗೆ ಲಂಬನದಘನದ ॥ ಪವನಜನ ಪಡಿಬಲದಲೌಂಕಿದ । ನವನಿಪತಿಸಹದೇವನಕುಲರ । ನವಡಿರಥಸಂಮುಖಕೆ ಬಿಟ್ಟವು ಮಾದ್ರಭೂಪತಿಯು ॥ ೨೧ ॥ ಆರಿವರು ಸಹದೇವನಕುಲರೆ । ಭಾರಿಯಾಳುಗಳಹುದಲೇ ಬಿಲು । ಗಾರರಲ್ಲಾ ಕಳಸಸಿಂಧದಬಿರಿದನುಳ್ಳವರೆ ॥ ಸ್ಕರಿಸಿದೊಡೊಪ್ಪುವದಲಾ ಜ । ಝಾಜ್ಜರತನವಾಭರಣವಹುದೆನು । ತಾರುಭಟೆಯಲಿ ಶಲ್ಯ ಹಳಚಿದನರ್ಜನಾನುಜರ ॥ ಪಡಿತಳಿಸಿ ಸಹದೇವನಕುಲರೆ । ನೆಡೆಗಲಿಸಿತರ್ಜನನ ರಥ ನರ ॥ ನೊಡನೆ ಹೊಕ್ಕನುಭೀಮನುರುಪಾಂಚಾಲಬಲಸಹಿತ ॥ ಝಡಿವನಿಸ್ಸಾಳದಲಿ ಜಗ ಘೀ ।ಳಿಡೆ ಯುಧಿಷ್ಠಿರದೇವನೌಕಿದ ।ನೆಡಬಲನ ಕೊಂಡರು ಯುಯುತ್ಸುಶಿಖಂಡಿಸೃಂಜಯರು ॥ ೨೩ ॥ ಏರಿತೊಬ್ಬನ ಮೇಲೆ ರಿಪುರಥ । ವಾರುಸಾವಿರ ಮತ್ತಗಜಘಟೆ । ಮೂರುಸಾವಿರ ಹತ್ತುಸಾವಿರತುರಗದಳಸಹಿತ ॥ ತೋರುವಂಬಿನ ತುಂಡಿಸುವಬಿ । ಟ್ಟೇರುಗಳ ಚೂರಿಸಿದಸಬಳದ । ನೇರುಗಳ ಕಾಲಾಳು ಕವಿದುದು ಶಲ್ಯನಳವಿಯಲಿ ॥ ೨೪ ॥ ದಳಪತಿಯ ಮುಕ್ಕುರಿಕಿದರು ಪಡಿ । ಬಲಕೆ ಬರಹೇಳೆನುತ ಕವಿದರು । ಹಿಳುಕುಗೆನ್ನೆಯ ಹೊಗರುಮೋರೆಯ ಬಿಗಿದಹುಬ್ಬುಗಳ ॥ ಕಳಶಜನಮಗನೌಂಕಿದನು ಕೃಪ । ನಳವಿಗೊಟ್ಟನು ಸುಬಲಸುತರಿ। ಟ್ಟಳಿಸಿದರು ಶಲ್ಯಾತ್ಮಜರು ಕೈಕೊಂಡರೊಗ್ಗಿನಲಿ ॥ ೨೫ ॥ ಮೂರುಕೋಟಿಪದಾತಿಯಲಿ ಮೈ । ದೋರಿದನಲ್ಲೈ ನಿನ್ನಮಗನು । ಬ್ಬೇರಿರಾವ್ತರು ಹೊಕ್ಕರೆಡಬಲಕಿಕ್ಕಿ ತೇಜಿಗಳ ॥ ಕೇರಿದರು ಮಾರೊಡ್ಡ ನಿವರವ । ರೇರಿಹೊಯ್ದರು ನಿನ್ನವರಲೊಗು । ವೀರಬಾಯ್ಗಳ ರುಧಿರಜಲವೆಳೆದುದು ಚತುರ್ಬಲವ ॥ ೨೬ ॥ ಚಿಪ್ಪೊಡೆದು ಬಲುಮೈಗಳಲ್ಲಿಳಿ। ತಪ್ಪರಕುತದ ಸುರಿವಕೆಂಧೂ । ಳುಪ್ಪರಿಸಿದುದು ಚತುರಚಾತುರ್ಬಲದ ಪದಹತಿಯ ॥ ಅಪ್ಪಿದುದು ಕೆಂಧೂಳಿಯೊಡ್ಡಿನ । ದರ್ಪಣವನೀರಕುತವೆರಡರ। ದರ್ಪವಡಗದು ನಿಮಿಷದಲಿ ನರನಾಥ ಕೇಳೆಂದ॥೨೭॥ ತೆಗೆದರ್ಗಜನನನು ಸುಶರ್ಮನ । ವಿಗಡರಥಿಕರು ಭೀಮಸೇನನ । ನುಗಿದನತ್ತಲು ನಿನ್ನಮಗನಾಸಾತ್ಯಕಿಯ ರಥವ ॥ ಹೊಗರುಗಣೆಯಲಿ ಹೂಳಿದನು ಹೂ । ಣಿಗನಲ್ಲೈ ಗುರುಸೂನು ನಕುಲನ । ತೆಗೆಸಿದನು ಕೂರಂಬಿನಲಿ ತಡೆಯದೆ ಕೃಪಾಚಾರ್ಯ ॥ ೨೮ ॥ ಹಳಚಿದನು ದಳಪತಿಯುನವನಿಪ । ತಿಲಕನೆಚ್ಚನು ನೂರುಶರದಲಿ । ಕಳಚಿ ಕೈಯೊಡನೆಚ್ಚು ಬೇಗಡೆಗಳೆದನವನಿಪನ ॥ ಅಳುಕದಿರದೇಸಿಡಿಲ ಹೊಯ್ಲಲಿ । ಕುಲಕುಧರವೀಧರ್ಮಸುತನ । ಗ್ಗಳಿಕೆಗಿದೆಗುಪ್ಪಾರತಿಗಳಾದವು ಶಲ್ಯನಂಬುಗಳು ॥ ೨೯ ॥ ಅರಸಕೇಳೈ ಮುಳಿದಮಾದ್ರೇ । ಶ್ವರನ ಖಾತಿಯೊ ಕುಪಿತಯಮನು। ಬ್ಬರದ ಖತಿಯೋ ವಿಲಯರು

ತ್ರನ ಹಣೆಯ ಹೆಗ್ಗಡಿಯೊ ॥ ಉರಿದನುಗ್ರದ ಕೋಪದಲಿ ಹೊಗೆ । ಹೊರಳಿಗಟ್ಟಿತು ಸುಯ್ಲಿನೆಲಿ
ಸಂ । ವರಿಸಿಕೊಳುತ ಕೌಂತೇಯ ಯೆನುತೆಚ್ಚನು ಮಹೀಪತಿಯ ॥ ೩೦ ॥ ಮುಂದಣಂಬಿನ ಹಿಳುಕನೊ
ದೆದವು । ಹಿಂದಣಂಬುಗಳವರ ಮೊನೆಗಳ । ಹಿಂದಣಂಬಿನ ಹಿಳುಕ ಹೊಕ್ಕವು ಮುಂಚಿದಂಬುಗಳು ॥
ಹಿಂದಣವು ಹಿಂದಿಕ್ಕಿದವು ಮಿಗೆ । ಹಿಂದಣಂಬುಗಳಂಜಲಿಸಿ ಬಳಿ । ಸಂದವುಳಿದಂಬುಗಳೆನಲು ಕವಿದೆ
ಚ್ಚನವನಿಪನ ॥ ೩೧ ॥ ತೋಡಿ ನೆಟ್ಟವು ಸೀಸಕವನೊಡ । ದೋಡಿದವು ಕವಚದಲಿ ಕುದುರೆಯ । ಜೋ
ಡುಹಕ್ಕರಿಕೆಯಲಿ ತಳಿತವು ಹಿಳುಕು ಹರಹಿನಲಿ ॥ ಕೊಡೆ ರಥದಲಿ ಹಾಯ್ದು ಮಿಗೆ ವ್ಯಾ । ಗೂಡೆಗಾಲಿ
ಗಳರಿವರೂಥದ । ಲೀಡಿರಿದವಂಬುಗಳು ಕಲಿಮಾದ್ರೇಶನೆಸುಗೆಯಲಿ ॥ ೩೨ ॥ ಧೊರೆಗ ಬಲುಹೋ ಸ
ಮರಶಲ್ಯನ । ಶರವಳಿಗೆ ಹಿಡಿ ಕೊಡೆಯನೆಂದ । ಬ್ಬರಿಸಿ ಯಿಬ್ಬಿಗಿಯಾದುದೀಗಳೆ ಗಾಳಿಘುಲ್ಲಣೆಗೆ ॥
ಸರಳುಹೊದೆಯನು ತುಂಬಿ ರಥಸಾ । ವಿರಸಹಿತ ಪಾಂಚಾಲಬಲವು । ಪ್ಪರಗುಡಿಯ ಸಿಂಧದ ಸಗಾಢ
ದಳ್ಳಿದಿತರಿಭಟನ ॥ ೩೩ ॥ ಪ್ರೊತರೇ ಪಾಂಚಾಲಬಲ ಬಂ । ದಾತು ಕೊಂಡುದೆ ಧರ್ಮಪುತ್ರನ ।
ಗಾತಿಯನು ಘಟ್ಟಿಸಿದರೇ ಧಟ್ಟಿಸಿದನೇ ನೃಪತಿ ॥ ಈತಗಳ ಕೊಳ್ಳೆನುತ ಶರಸಂ । ಘಾತವನು ಕೆದರಿದ
ನು ಮಾದ್ರೀ । ಜಾತರಡಹಾಯಿದರು ಶಲ್ಯನ ರಥದ ಸಂಮುಖಕೆ ॥ ೩೪ ॥ ಮಕ್ಕಳಿರ ನಿಮಗೇಕೆರಣ
ವಿದು । ಮಕ್ಕಳಾಟಿಕೆಯಾಯ್ತಲಾಹಿಂ । ದಿಕ್ಕಿದರಲಾ ಧೊರೆಯಧೂಳಿಯ ಬೆನ್ನತೊಡದಿರಲಾ ॥ ಎಕ್ಕತು
ಳದಲಿ ನಿಮ್ಮರಾಯರ । ಸೆಕ್ಕಿ ಭೀಮಾರ್ಜುನರಿಗೌತಣ । ವಿಕ್ಕುವೆನು ಬರಹೇಳೆನುತ ಬೊಬ್ಬಿರಿದನಾಶ
ಲ್ಯ ॥ ೩೫ ॥ ದಳಪತಿಯ ದುವ್ವಾಳಿ ಪಾಂಡವ । ಬಲವ ಕೆದರಿತು ಕಲ್ಪಮೇಘದ । ಹೊಲಿಗೆ ಹರಿದ
ವೊಲಾಯ್ತು ಮಾದ್ರೇಶ್ವರನ ಕೈಚಳಕ ॥ ಅಳುಕದಿರಿ ಬದ್ಧರದ ಭಂಡಿಯ । ನಿಲಿಸಿ ಹರಿಗೆಯ ಪಾಠ
ಕರು ಮುಂ । ಕೊಳಿಸಿ ಮುಂದಣ ನೆಲನನೆನುತುಬ್ಬರಿಸಿತರಿಸೇನೆ ॥ ೩೬ ॥ ಅರಸ ಕೇಳ್ಳೈ ಬಳಿಕ ಶಲ್ಯನ ।
ಶರವಳಿಗೆ ಬೆಚ್ಚಿದವು ಹೊಡಿದ । ಹರಿಗೆಯಲಿ ನೆರೆಬಿಗಿದವಾ ಬದ್ಧರದ ಭಂಡಿಗಳು ॥ ಸರಳುಗಳ ಬಳಿ
ಸರಳ ಬೆಂಬಳಿ । ಸರಳ ಹಿಂದಣ ಸರಳುಗಳ ಪಡಿ । ಸರಳ ಸಾರದ ಸೋನೆ ಸದೆದುದು ವೈರಿವಾಹಿನಿಯ ॥ ೩೭ ॥
ಗಾಯವಡೆದನು ದ್ರುಪದಸುತ ಧೃ । ರಾಯುಧೇರಿನಲೋಡಿದರು ಮಾ । ದ್ರೇಯರುಬ್ಬಟೆ ನಿಂದು ಬೆ
ಚ್ಚಳೆಯೋದನವನೀಶ ॥ ರಾಯದಳ ದೆಸೆಗೆಟ್ಟುದೊಗ್ಗಿನ । ನಾಯಕರು ನುಗ್ಗಾಗೆ ಯಾದವ ರಾಯ
ಕಂಡನು ರಥವನಡಹಾಯಿಸಿದನರ್ಜುನನ ॥ ೩೮ ॥ ಎಲೆಲೆಹನುಮನಹಳವಿಗೆಯ ರಥ । ಹೊಳೆವುತಿದೆ
ದಳಪತಿಗೆ ಕಾಳಗ । ಬಲಹು ಬರಹೇಳುವುದು ಗೌತಮಗುರುಸುತಾದಿಗಳ ॥ ದಳವ ಕರೆ ಸಂಸಪ್ತಕರು
ನಿ । ಟ್ಟಳಿಸಿ ನೂಕಲಿ ಶಲ್ಯಸುತರೆಂ । ದುಲಿದು ಹೊಕ್ಕನು ನಿನ್ನ ಮಗನೈನೂರುರಥಸಹಿತ ॥ ೩೯ ॥ ಉ
ಲಿದು ಕೌರವಸರ್ವದಳವಿ । ಟ್ಟಳಿಸಿ ನೂಕಿತು ಶಲ್ಯನನು ಪಡಿ । ತಳಿಸಿ ಹೊಕ್ಕುದು ಸುಬಲಸುತಕೃಪ
ಗುರುಸುತಾದಿಗಳು ॥ ಪ್ರಳಯದಿನದಲಿ ಪಂಕಿಸಿದ ಸಿಡಿ । ಲೆಳಮದೆನೆ ಬಹುವಿಧದ ವಾದ್ಯದ । ಮೊಳ
ಗುಗಳ ತುದಿ ತುಡುಕಿತಾ ಬ್ರಹ್ಮಾಂಡಮಂಡಲವ ॥ ೪೦ ॥ ಧರಣಿಪತಿ ಕೇಳ್ಭೀಮಸೇನನ । ಕರಿಘಟೆಗ
ಳಿಟ್ಟಣಿಸಿದವು ಸಂ । ವರಿಸಿದವು ಸಾತ್ಯಕಿಯ ರಥವಾದ್ರೌಪದೀಸುತರ ॥ ತುರಗದಳವೊತ್ತಿದವು ರಾಯ
ನ । ಧುರನಿವಾಸಿಗಳುರೆ ನಿಹಾರದ । ಲುರವಣಿಸಿದರು ಶಲ್ಯನಂಬಿನ ಮೊನೆಯ ಮನ್ನಿಸದೆ ॥ ೪೧ ॥
ಶರಹರಿಸಿದುದು ರಾಯದಳ ತಲೆ । ವರಿಗೆಯಲಿ ಮೊಗವೊಡೆದರುಳ್ಳಿಯ । ಲರರೆ ರಾವುತ್ತನುತ ಕವಿ

ದದು ಬಿಟ್ಟಸೂಠಿಯಲಿ ॥ ತುರಗದಳ ಮಗರಂಬದಲಿ ಮೊಗ । ವರಿಗೆಗಳಲಾರೋಹಕರು ಚ। ಪ್ಪರಿಸಿ
ಚಾಚಿದರಾನೆಗಳನಾಶಲ್ಯನಿದಿರಿನಲಿ ॥ ೪೨ ॥ ಚೂರಿಸುವಮೊಗಸೂರಿಗೆಯ ಕೊ । ಲ್ಲಾರಗಳ ಶರ
ಖಂಡಿಗಳ ಹೊಂ । ದೇರು ಕವಿದವು ಕೋಲಕೋಲಾಹಳದತೋಹಿನಲಿ ॥ ಧೀರರುಬ್ಬಿನ ಬೊಬ್ಬೆಗಳ
ಜ । ಜ್ಝಾರರೇರಿತುಸರಳಧಾರಾ । ಸಾರದಕ್ಕಡತನದ ಬಿಲ್ಲವರೈದಿತರಿಭಟನ ॥ ೪೩ ॥ ಕಡಿದು ಬಿಸು
ಟನು ತಲವರಿಗೆಗಳ । ಲಡಶಿ ದತಿಪಾಯ್ದ್ಳದಲೊಗ್ಗಿನ । ತುಡುಕುಗುದುರೆಯೊಳರುವನೆಚ್ಚನು ಸರ
ಳ ರಚನೆಯಲಿ ॥ ಗಡಣದಾನೆಯ ಥಟ್ಟನುಪ್ಪರ । ಗುಡಿಯ ರಥಗಾಜಿಗಳ ರುಧಿರದ । ಕಡಲಲದ್ದಿದ
ಧರ್ಮಜನ ಮಾರ್ಬಲದ ಗರ್ವಿತರ ॥ ೪೪ ॥ ಮುರಿದುದೇ ಚತುರಂಗಬಲನಿನ್ನಿರಿತವಾದೊಡೆಧರ್ಮ
ಸುತ ಕೈ । ಮರದೆಲಾ ಕಲಿಭೀಮಪಾರ್ಥರ ಬಿಂಕ ಬೀತುದಲಾ ॥ ಮೊರೆಯಬಾಯಲಿನಿನ್ನಮೈದುನ।
ಹೊರಗಿರಲಿ ಸಹದೇವನಕುಲರ । ನರಿಯಬಹುದೆರೆದೆನುತ ಹೊಕ್ಕನು ಶಲ್ಯ ಪರಬಲವ ॥ ೪೫ ॥ ಸು
ರನದೀಸುತರೆಸುಗೆ ದ್ರೋಣನ । ಶರಚಮತ್ಕೃತಿಕರ್ಣಸಂಬಿನ । ಪರಹು ದೋರಿತು ದಳಪತಿಯ ಶರ
ಸೋನೆ ಸಾರವಲ ॥ ಧೊರೆಯ ಸುಯ್ದಾನದಲಿ ಸಾತ್ಯಕಿ । ಯಿರಿದು ದೃಷ್ಟದ್ಯುಮ್ನನಭಿವಂ । ದ್ಯರ
ನಿರೀಕ್ಷಿಸಿ ಹೇಳಿದನು ತಾಗಿದನು ಕಲಿಪಾರ್ಥ ॥ ೪೬ ॥ ಅರಸ ಕೇಳ್ಳೆ ಶಲ್ಯಪಾರ್ಥರ । ಶರನಿಧಾನವ
ನವರಬಾಣೋ । ತ್ಕರವನವರಂಬುಗಳ ಬಹಳಾಡಂಬರಧ್ವನಿಯ ॥ ನಿರುಪಮಾಸ್ತ್ರಪ್ರೌಢಿಯನು
ದು । ರ್ಧರಸಿಳೀಮುಖಸರ್ಗಬಂಧು । ಸ್ಫುರಣವನು ಹಿಂದೀಸುದಿನ ಕಾಣೆನು ರಣಾಗ್ರದಲಿ ॥ ೪೭ ॥
ಎಸೆವನರ್ಜುನನರ್ಜುನಾಸ್ತ್ರವ। ಕುಸುರಿದರಿವನು ಶಲ್ಯ ಶಲ್ಯನ । ವಿಶಿಖವನು ಮುರಿವನು ಧನಂಜಯ
ನಾಥನಂಜಯನ॥ ಮಸಕವನು ಮಾದ್ರೇಶನುರೆ ಝೋಂ । ಪಿಸುವನಾಮಾದ್ರೇಶಸಂಬಿನ। ಹಸರವನು ಹ
ರೆಗಡಿವನರ್ಜುನನಗಣಿತಾಸ್ತ್ರವಲಿ ॥ ೪೮ ॥ ಕಂಡನಾಶಲ್ಯಾರ್ಜುನರ ಕೋ । ದಂಡಸಾರಶ್ರುತಿರಹಸ್ಯ
ದ । ದಾಡಿಯನು ಕುರುರಾಯ ಕೈವೀಸಿದನು ತನ್ನವರ ॥ ಗಂಡುಗಲಿಗಳೊ ವೀರಸಿರಿಯಲಿ । ಮಿಂಡ
ರೋ ನಗೆಗೆಡೆಯ ಬಿರುದಿನ । ಭಂಡರೋ ನೀವಾರೆನುತ ಮೂದಲಿಸಿದನು ಭಟರ ॥ ೪೯ ॥ ದಳವ ಕೆ
ರೆ ದಳಪತಿಗೆ ಕಾಳಗ । ಬಲುಹು ಪಾರ್ಥನಕೂಡೆ ಗುರುಸುತ। ನಳವಿಗೊಡಲಿ ಸುಶರ್ಮ ತಾಗಲಿ ಶಕುನಿ
ಗೌತಮರು ॥ ನಿಲಲಿ ಸುಭಟರು ಜೋಡಿಯಲಿ ಪರ। ಬಲಕೆ ಜಾರುವಜಯ ಸಿರಿಯ ಮುಂ। ದಲೆಯ
ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ ॥ ೫೦ ॥ ನೂಕಿದರು ಶಲ್ಯಂಗೆ ಪಡಿಬಲ । ರಾಕೆವಾಳೆ
ರು ಗುರುಸುತಾದ್ಯರು। ಸೋಕಿದವು ಶರನಿಕರವರ್ಜುನನಂಬಿನಂಬುಧಿಯ ॥ ಕಾಕಭಟನಿವನುಬ್ಬಿದೊಡೆ
ಸು । ವ್ಯಾಕುಳರು ತಪ್ಪಿದೊಡೆ ತಪ್ಪೇ । ನೀಕಳಂಬವಕೊಯ್ದುಕೊಳ್ಳೆನುತೆಚ್ಚನಾಪಾರ್ಥ ॥ ೫೧ ॥
ಮುರಿಯೆಸುತ ಮಾದ್ರೇಶ್ವರನ ಹೊ । ಕ್ಕುರಿಬಿದನು ಗುರುಸುತನ ಶಕುನಿಯ । ನಿರಿದು ಸಂಶಪ್ತಕರ
ನೋಯಿಸಿ ಕೃಪನನೊಡೆಹಾಯ್ದು ॥ ತರುಬಿದನು ಕುರುಪತಿಯನರ್ಜುನ । ನೂರಸಿದನು ನೀಸ್ಸೈನ್ಯಸು
ಭಟರ । ನೆರವಣಿಗೆಯಸ್ತ್ರದಲಿಮುಸುಕಿತು ಕಲಿಧನಂಜಯನ ॥ ೫೨ ॥ ಅರಸಕೇಳಿತ್ತಲು ಯುಧಿಷ್ಠಿ
ರ । ನರಪತಿಯನರಸಿದನು ಮಾದ್ರೇ । ಶ್ವರನು ಸರಳಸರಾಗದಿಂ ಮುಸುಕಿದನು ಧರ್ಮಜನ ॥ ಧರೆಗೆ
ಕಾಮಿಸಿದೈ ಸುಯೋಧನ । ನರಸಿಯಲ್ಲಾ ಧಾತ್ರಿ ನಿಮ್ಮ । ವರಿಗೆ ಹುದುವಲ್ಲೆನುತೆ ಕವಿದೆಚ್ಚನು
ಮಹೀಪತಿಯ ॥ ೫೩ ॥ ಮಾವ ಮಾಯಾಡಂಬರದ ದು । ರ್ಭಾವವೇತಕೆ ಕೌರವ ನೂಳೆ ಮು । ಗೀಳ

ಸುಧೆಹುದುವಲ್ಲ ನೆಲನೇಕಾಧಿಪತ್ಯದಲಿ ॥ ನೀವು ಕೌರವಸರ್ವಭಾಗದು । ರಾವಹದಲೇ ಬಾಣಸ್ವಪ್ನಿತ್ಯ। ತಾವಧನವನು ಕೊಡೆನೆನುತ ತೆಗದೆಚ್ಚು ಬೊಬ್ಬಿರಿದ ॥ ೫೪ ॥ ಬರಿಯಬೊಬ್ಬಾಟವೊ ಶರಾಳಿಯೊ । ಳಿರಿಗೆಲಸವೇನುಂಟೊ ಧರಣಿಯೊ । ಳಿರಕ ನಿಂವ್ಯೈವರಿಗೆ ದ್ರೌಪದಿಯೆಸೆದು ವಧುವಾಗಿ ॥ ಹೊರಗು ಗಡ ಕುರುರಾಯನೀಗಳು । ಮರುದಿವಸವೋ ಸಿರಿಮುಡಿಗೆ ನೀ । ತಿರವಪಟ್ಟವದೆಂದೆನುತ ತೆಗೆದೆಚ್ಚ ನಾಶಲ್ಯ ॥ ೫೫ ॥ ಕಡಿದು ಬಿಸುಟನು ಶಲ್ಯನಸ್ತ್ರವ । ನೆಡೆಗೊಡದೆ ಮೂರಂಬುಗಳಲವ । ಗಡಿಸಿದನು ನೃಪನವರ ಶರಸಂತತಿಯ ಸಂತೈಸಿ ॥ ಒಡನೊಡನೆ ಕೈಮಾಡಿದನು ಕೈ । ಗಡಿಯನಂಬಿನಧಾರೆ ದಳ್ಳಿಸಿ । ಕಿಡಿಗೆದರಿದವು ನೃಪನ ರಥಸಾರಥಿಹಯಾಳಿಯಲಿ ॥ ೫೬ ॥ ಗೆಲಿದನೋ ಮಾದ್ರೇಶನವನಿಪ । ತಿಲಕನನು ಘಡ ಧರ್ಮಸುತನೀ । ದಳಪತಿಯನದ್ದಿದನು ಮಿಗೆ ಪರಿಭವಸಮುದ್ರದಲಿ ॥ ಅಳುಕಿದನು ನೃಪನೀಧರಾಧಿಪ । ನುಲುಕಲಂಜದನೆಂಬಲಗ್ಗೆ ಗೆ । ಲಳಿಮಸಗಿ ವೈದೋರಿದಾಚೆಯ ಸೇನೆ ಸಂದಣಿಸಿ ॥ ೫೭ ॥ ನೆಲ ಬಿರಿಯೆಲಳ್ಳರಿವವಾದ್ಯದ । ಕಳಕಳದ ಕೊಲ್ಲಣಿಗೆಯಲಿ ಮುಂ । ಕೊಳಿಸಿದರು ಸಹದೇವಸಾತ್ಯಕಿ ಸೃಂಜಯಾದಿಗಳು ॥ ದಳದ ಪದಹತಿಧೂಳಿಯಲಿ ಕ । ತ್ತಲಿಸೆ ದೆಸೆ ಪಾಂಚಾಲದ ಳವಿ। ಟ್ಟಳಿಸಿ ನೂಕಿತು ಧರ್ಮಪುತ್ರನ ರಥದ ಜೋಣಿಯಲಿ ॥ ೫೮ ॥ ಸಬ್ಬಲಗ್ಗೆಯಲರರೆ ಪಾಂಡವ । ಸರ್ಬದಳವಳಪತಿಯ ರೋಂಪಿಸ । ಲೊಬ್ಬನೊದಗಿದೊಡೇನಹುದು ಕರೆ ನೂಕುನೂಕೆನುತ ॥ ಬೊಬ್ಬಿಡಲು ಕುರುರಾಯನೀಬಲ । ದಬ್ಬರಣೆ ವಾರಿಜಭವಾಂಡವ । ನಬ್ಬರಿಸೆ ಥಾಡಿಸಿತು ಶಲ್ಯನ ರಥವ ಬಳಸಿನಲಿ ॥ ೫೯ ॥ ಸೆಳೆದುಹೊಯ್ದಾಡಿದರು ಚಾತು । ರ್ಬಲ ಛಡಾಳಿಸಿ ವಿವಿಧಶಸ್ತ್ರಾ । ವಳಿಯ ಮಾರ್ಗದೊಳಾಗಲೇ ಹೊನಲೆದ್ದುದರುಣಜಲ ॥ ಉಳಿದರಿಬ್ಬರುಧೊರೆಗಳೆನೆ ಮುಂ । ಮುಳಿತವಾಯಿತು ಸೇನೆ ನೃಪತಿಯ । ಹಳಚಿದನು ಮಾದ್ರೇಶನಾವೆಡೆ ಧರ್ಮಸುತನೆನುತ ॥ ೬೦ ॥ ಮತ್ತೆ ತರುಬಿದನವನಿಪನನಿದು । ಜೊತ್ತಿನಾಹವವಲ್ಲಲೇ ನೆರೆ । ಹೊತ್ತುಹೊರಿಗೆಯನೆರವಣಿಗೆ ಸೇನಾಧಿಪತ್ಯವಲೆ ॥ ತೆತ್ತಿಸಿದನಂಬುಗಳ ಜೋಡಿನ । ಹತ್ತಿತೆರಿಗೆಯ ಚಿಪ್ಪನೊಡೆದೊಳ । ನೆತ್ತರೋಕುಳಿಯಾಡಿದವು ಮಾದ್ರೇಶನಂಬುಗಳು ॥ ೬೧ ॥ ಏನ ಹೇಳುವೆನರಸ ಕುಂತೀ । ಸೂನುವೇ ಕಿರುಕುಳನೆ ಶಲ್ಯನ । ನೂನಶರಜಾಲದಲಿ ನೆನೆದನು ಬಹಳಧೈರ್ಯದಲಿ ॥ ಭಾನುವಿದಿರಲಿ ತಿಮಿರದನುಸಂ। ಧಾನದಂತಿರಲಹಿತಭಟನನಿ । ಧಾನತೆಯ ಕತ್ತಿದನು ಕುತ್ತಿದವಂಬು ದಳಪತಿಯ ॥ ... ॥ ೬೨ ॥

ಅಂತು ಸಂಧಿ ೩೨ಕ್ಕಂ ಪದ ೧೬೩೯ಕ್ಕೆ ಮಂಗಳಮಸ್ತು.

## ಮೂರನೆಯ ಸಂಧಿ

ಸೂಚನೆ ॥ ಸವೆದುದಗ್ಗದ ಕೌರವಬಲ । ರಣದಲಂಬುಧಿ ಧರ್ಮಜಸಂಭವ । ನವೆಯಿಸಿ ಸಮರದಲಿ ಮಡಿದನು ಮಾದ್ರಭೂಪಾಲ ॥

॥ ಪದ ॥ ಕೇಳು ಧೃತರಾಷ್ಟ್ರವನಿಪ ಭೂ । ಪಾಲಶಲ್ಯನ ಸಮರದೊಳಗಸು । ಕೂಲರಾದ

ಲೈ ಕೃಪಾದಿಗಳಿತ್ತಲಾಚೆಯಲಿ ॥ ಮೇಳವಿಶಿತ್ರಜರ್ಜನನಕುಲಪಾಂ । ಚಾಲಬಲಭೀಮಾದಿಗಳ ಪದ। ಧೂಳಿಯಲಿ ಜಗ ಮುಳುಗಿ ಜೋಡಿಸಿ ಜಡಿದುದುಭಯಬಲ ॥ ೧ ॥ ಕೆದರಿದನು ಕಲಿಭೀಮ ಬಲವಂ । ಕದಲಿ ಮಾದ್ರೀತನಯರೆಡವಂ । ಕನಲಿ ಚೂಣಿಗೆ ಚಿಮ್ಮಿದರು ಪಾಂಚಾಲನಾಯಕರು ॥ ಮದಮುಖವನೆತ್ತಿದರು ಬಾಣೌ । ಘದಲಿ ಫಲುಗುಣನನೊಂದೆವೆಸೆಯಲಿ । ಸದೆದು ಸವರಿದರೊಂದುದೆಸೆಯಲಿ ದ್ರೌಪದೀಸುತರು ॥೨॥ ಕ್ಷಿತಿಪ ಚಿತ್ತೈಸೀಚೆಯಲಿ ಗುರುಸುತ ಸುಶರ್ಮಕ ಸಾಲ್ವ ನಿನ್ನಯಸುತನು ಕೃತವರ್ಮಕಕೃಪಾಚಾರ್ಯಾದಿಗಳು ಮಸಗಿ ॥ ಘೃತಸಮುದ್ರದಸೆರಗು ಸೋಂಕಿದ । ಹುತವಹನಸೋಂಪಿನಲಿ ವೈರಿ। ವ್ರತತಿಯನು ತರುಬಿದರು ತರಿದರು ಸರಳ ಸಾರದಲಿ ॥ ೩ ॥ ಕೆಣಕಿದನು ಯಮಸೂನುವೊಡಹಾ । ಯ್ದಣದಲಂಬಿನಲರ್ಜುನನ ಮಾ । ರ್ಗಣಮಹಾರಣ್ಯದಲಿ ಕೆಡೆದುದು ಕಡಿತ ಗುರುಸುತನ ॥ ರಣವಿಶಾರದರಹಿರಲ್ಕೆ ನಿ । ಮ್ಮಣಕವೇತಕೆ ರಾಜಗುರುಗಳು । ಸೆಣಸುವೊಡೆ ಸ್ಮರಿಸುವುದೆಂದೆನುತೆಚ್ಚನಾಪಾರ್ಥ ॥ ೪ ॥ ಮೊಗೆದನಶ್ವತ್ಥಾಮನೆಚ್ಚಂ । ಬುಗಳನರ್ಜುನನಂಬು ಪಾರ್ಥನ । ಬಿಗಿದ ವಾನಿವಿಷದಲಿ ಭಾರದ್ವಾಜಶರಜಾಲ ॥ ಹೊಗರುಗಿಡಿಗಳ ಸೂಸುವುರಿಧಾ, ರೆಗಳ ಘೃತಲೇಪನದಬಂಧದ । ಹೊಗರುಗಣೆ ಹೂಳಿದವು ಗುರುಸುತನಂಬಿನಂಬುಧಿಯ ॥ ೫ ॥ ಅರಸ ಕೇಳಡಹಾಯ್ದು ಪಾರ್ಥನ । ವರರಥವ ಹಿಂದಿಕ್ಕಿ ಪವನಜ । ನುರುವಣಿಸಿದನು ನಕುಲಸಾತ್ಯಕಿಸಹಿತ ಗುರುಸುತನ ॥ ಸರಳಸರಿವಳೆಗಳ ಸಗಾಡದ । ಲರಿಭಟನ ಮುಸುಕಿದಮಹೋಗ್ರದ । ಧುರವಕಂಡನು ನೃಪತಿ ಬಂದನು ಬಿಟ್ಟಸೂಠಿಯಲಿ ॥ ೬ ॥ ರಾಯ ಹೊಕ್ಕನು ಭೀಮಸೇನನ । ದಾಯ ಬಲುಹೋ ಧರ್ಮಪುತ್ರನ । ದಾಯವಲ್ಲೀಮತ್ತೆನುತ ಕೃತವರ್ಮಗುರುಸುತರು ॥ ಸಾಯಕದ ಮಳೆಗರೆದು ಕೌರವ। ರಾಯನನು ಹಿಂದಿಕ್ಕಿ ಪಡಿಬಲ । ವಾಯುಜನ ವಂಗಡವ ಮುರಿದರು ತರಿದರರಿಬಲವ ॥ ೭ ॥ ಪಡಿಬಲಕೆ ಹೊಕ್ಕುದು ತ್ರಿಗರ್ತರ । ಗಡಣ ಕೃಪಕೃತವರ್ಮರಿಗೆ ಸಂ । ಗಡವನಶ್ವತ್ಥಾಮ ನೀ ಹೇರಾಳದಳಸಹಿತ ॥ ಕೊಡಹಿದರು ಪಾಂಡವರಬಲವವ । ಗಡಿಸಿದರು ಪವಮಾನಜನ ಬ । ಕ್ಕುಡಿಯುಬೆಳವಿಗೆಯಾಯ್ತು ಭೀಮನ ಭಾರಣೆಯುಭಟರು ॥ ೮ ॥ ಫಡಯೆನುತಪಾಂಚಾಲಬಲಸಂ । ಗಡಿಸಿತನಿಲಜನೊಡನೆ ಸೃಂಜಯ। ರೆಡೆಯಲೆಡೆಹಾಯಿದರು ಸುತ ಸೋಮಕಶಿಖಂಡಿಗಳು ॥ ಕಡಿಯಿಡುತ ಕಲಿಪಾರ್ಥನಂಬಿನ । ವಡಬನೆದ್ದುದು ಕುರುಬಲವ ಹೆ । ಗ್ಗಡಲು ಬರತುದು ಹೇಳಲೇನವನೀಶಕೇಳೆಂದ ॥ ೯ ॥ ಆಸಮಯದಲಿ ಬಹಳಶೌರ್ಯಾ । ವೇಶದಲಿನಿನ್ನಾತನೌಕಿದ । ನಾಶಕುನಿಐವತ್ತುಸಾವಿರತುರಗದಳಸಹಿತ ॥ ಕೇಸುರಿಯ ಕಾರ್ಬೊಗೆಯವೊಲು ನಿ । ರ್ಘೋಷದಾಯುಧದಾನೆಗಳು ಕೈ । ವೀಸಿದಲ್ಲಿಂಮುನ್ನ ಮೊಗೆದವು ವೈರಿಭೋಹರವ ॥ ೧೦ ॥ ಗಜರಥದ ಗಾಢಿಕೆಯ ವಾಜಿ । ವ್ರಜದ ಪೇಢೆಗೆ ಭೀಮನೇಗಿಜ। ಬಜಸುವವಹೊಡಚಂಡನಾಡಿದನಹಿತಮೋಹರವ ॥ ಗುಜರುಗುಲ್ಮನಿಕುಂಜವೇಣು । ವ್ರಜದ ಮಳೆಯಲಿ ತಿಲುಕಿಪವನಾ । ಸಜವರಾಶಿ ಕ್ರಮಿತಿಖಿಯ ಝಳ ಝೊಂಪಿಸಿತುಮೇಡೆಯಲಿ ॥ ೧೧ ॥ ಆಳಿದುದೈನೂರಾನೆ ಸಾವಿರ। ಬಲುಗುದುರೆ ರಥಮೂರುಸಾವಿರ । ನೆಲಕೆ ಕೈಮರ್ತಿಸಿತುಭೀಮನ ಹೊಯ್ಲು ಹೋರಟೆಗೆ ॥ ಬಿಲುವರಿಗೆ ಸಬಳದ ಪದಾತಿಯ । ತಲೆಯ ತೊಡಿಸಿದನೆಂಟುಲಕ್ಷವ । ನುಳಿವಬಲವೋಲೈಸುತಿರ್ದುದು ಚಾಪಳಾಯನವ ॥ ೧೨ ॥ ತಡೆದನಶ್ವತ್ಥಾಮನುಹತನ । ಕಡುಹನಾಸಹದೇವನಕುಲರ । ನಡುಗಿಸಿದ

ಸಾಟೋಪವನು ನಿಲಿಸಿದನು ಪವನಜನ ॥ ಇಡಿಸುದಂಬರವಳಯದಲಿ ಕೈ । ಗಡಿಯುನೆಸುಗೆಯಲಕ್ಷ್ಯವೆ ನುಮಿಗೆ । ನುಡಿಯುಬಲ್ಲವನಾರು ಗುರುನಂದನನ ಸಮರದಲಿ ॥ ೧೩ ॥ ಪವನಜನನೆಂಟಂಬಿನಲಿಪಾಂ। ಡವಬಲವನೈವತ್ತರಲಿ ಯಾ । ದವನನಿಪ್ಪತ್ತಂಬಿನಲಿ ಮಾದ್ರೀಕುಮಾರಕರ ॥ ಕವಲುಗೋಲಿಪ್ಪತ್ತರ ಲಿ ಮುರಿ । ದವಘಡಿಸಿ ಪಾಂಚಾಲಸೃಂಜಯ । ನಿವಹವನು ನೂರಂಬಿನಲಿ ಕೆಡೆಯೆಚ್ಚ ಬೊಬ್ಬಿರಿ ದ ॥ ೧೪ ॥ ಏನ ಹೇಳುವೆ ಗಜಘಟಪ್ರತಿ । ಮಾನದಲಿ ಕೊಂಡಂಬುಗಳು ಹಿಂ । ದಾನೆಗಳನೇಳೆಂಟ ನೊಡೆದೋಡಿದವುಪಂಚಕಕೆ ॥ ಭಾನುರಶ್ಮಿಗಳಂದಕಾರದ । ಮಾನಗರ್ವವಮುರಿವ ವೊಲುಗುರು । ಸೂ ನುವಿನ ಶರವೌಂಕಿದವು ಗಜಘಟೆಯ ಬಲುವೆಳೆಯ ॥ ೧೫ ॥ ತಾಗಿದವು ಕಂಧರದಿ ತಾಳಿಗೆ । ಗಾಗಿ ಹೊರವಂಟಶ್ವನಿಕರವ । ನೀಗಿದವು ಶರವೊಂದುಸಾವಿರರಥಹಯಾವಳಿಯ ॥ ಬಾಗಿದವು ಕಾಲುಗಳು ಕ ಳಿಸಿ । ತೇಗಿದವು ಚತುರಂಗಬಲವ ನಿ । ಯೋಗಿಸಿದವಂತಕನವರಿಗಂಬುಗಳು ಗುರುಸುತನ ॥೧೬॥ ಕಡಿವಡೆದವೈನೂರುಗಜ ಧರೆ । ಗುಡಿದು ಬಿದ್ದವು ತೇರುಸಾವಿರ । ವಡಗುದರಿಯಾಯ್ತಶ್ವಚಯ ಸಾ ವಿರದಮುನ್ನೂರು ॥ ಕಡುಗಲಿಗಳರವತ್ತುಸಾವಿರ । ವೊಡಲುನೀಗಿತುಪಾಯಿದಳವು । ಗ್ಗಡದದಾವರ ದಡಿಗಳಾಯಿತು ವೈರಿರಾಯರಿಗೆ ॥ ೧೭ ॥ ಮತ್ತೆ ಕವಿದುದು ಪಾಂಡುಬಲವರ। ವತ್ತುಸಾವಿರಕುದು ರೆ ನೂರರ । ವತ್ತುಗಜರಥನೂರುಮಿಾರಿತು ಲಕ್ಷಪಾಯದಳ ॥ ಸತ್ತಿಗೆಯ ಸಾಲುಗಳು ಧರಣಿಯ । ಕಿತ್ತು ಮಗುಚುವವಾದ್ಯರವ ಮಿಾ। ರಿತ್ತುಕಮಲಭವಾಂಡವಿಪುಳಕಟಾಹಖರ್ಪರವ ॥ ೧೮ ॥ ಇತ್ತ ಹೇಳಿಕೆಯಾಯ್ತು ಹಯವಿ । ಪ್ಪತ್ತುಸಾವಿರದಂತಿಘಟೆಐ । ವತ್ತುಸಾವಿರರಥದೊಳಗೆ ಸಾವಿರದಮು ನ್ನೂರು ॥ ತೆತ್ತಿಗರು ಕಾಳಾಳು ಲಕ್ಷವು । ಹತ್ತಿತಲ್ಲಿಯವಾದ್ಯರಭಸದ । ಲೆತ್ತಿನೂಕಿತು ಗುರುತನೂ। ಜನ ರಥದ ಚೂಣಿಯಲಿ ॥ ೧೯ ॥ ಉರವಣಿಸಿತಿದು ಗುರುಸುತನ ಹಿಂ । ದಿರಿಸಿ ಪರಬಲದಭಿಮುಖಕೆ ಮೋ । ಹರಿಸಿ ನಿಂದುದು ಕಂಡನತ್ತಲು ಶಲ್ಯ ನಿಜಬಲವ ॥ ಧುರಕೆನಾವಿರೆ ಸೇನೆಯುಪಸಂ । ಹರಿಸ ಬಹುದೇ ದ್ರೋಣಭೀಷ್ಮಾ । ದ್ಯರಿಗೆ ನಗೆಗೆಡೆಯಾಹವವೆ ತೆಗೆಯೆನುತ ನಡೆತಂದ ॥ ೨೦ ॥ ಬಲವ ತೆ ಗೆತೆಗೆನಾನಿರಲು ಕುರು । ಬಲಕೆ ಬೀಯವೆ ಕೌರವೇಂದ್ರನ । ಕೆಲಬಲವ ಸುಯ್ಧಾನದಲಿ ಕೃಪಗುರುಸು ತಾದಿಗಳು ॥ ನಿಲಲಿಶಕುನಿಯ ತುರಗಗಳು ಹಿಂ । ನೆಲೆಗೆಹೋಗಲಿ ರಾಯದಳ ನ । ಮ್ಮಳವ ನೋ ಡುತ್ತಿರಲಿಯೆಂದನು ಶಲ್ಯ ಕುರುಪತಿಗೆ ॥ ೨೧ ॥ ಕೇಳುಕೃಪಕೃತವರ್ಮ ಗುರುಸುತ । ಕೇಳುಶಕುನಿ ಸುಶರ್ಮಸಾಲ್ವನೃ । ಪಾಲರಾಯನಮಂತ್ರಿಸಚಿವಪಸಾಯಕಾದಿಗಳು ॥ ಕೇಳಿರೈ ಭೀಷ್ಮಾದಿಸುಭಟರ। ಕಾಳಗವ ಕಂಡಿರಿ ಮದೀಯಾ । ರಾಳಕದನೋತ್ಸವವ ನೋಡುವುದೆಂದನಾಶಲ್ಯ ॥ ತರಿಸಿಕಾಂಚನಮ ಯರಥವ ಸಂ । ವರಿಸಿದನು ಟೆಕ್ಕೆಯವನೆತ್ತಿಸಿ । ಸರಳ ತುಂಬಿಸಿ ಭಂಡಿಗಳನೆಡಬಲಕೆ ಜೋಡಿಸಿದ ॥ ಬಿರುದನೊದರುವಪಾಠಕರ ಮೋ । ಹರಕೆ ಮಣಿಕಾಂಚನವ ಮೊಗದಿ । ತ್ತರೆರೆಕರೆ ಧರ್ಮಜನನನು ತುಬ್ಬಿದನು ಮಾದ್ರೇಶ ॥ ೨೩ ॥ ರಾಯನೋ ನಿಲುವವನು ಪಾರ್ಥನೊ । ವಾಯುಸುತನೋ ನಿಮ್ಮ ತುಳಿವರೊ । ಳಾಯುಧವಕೊಂಡಾರುನಿಲುವರು ನಿಲುವೆನವರೊಡನೆ ॥ ನಾಯಕರು ಮಿಕ್ಕವರೊಡ ನೆ ಬಲು । ಸಾಯಕವ ತೊಡಚಿದೊಡೆಕೌರವ।ರಾಯನಾಣೆಯೆನುತ್ತ ಮದವೇರಿದನು ಕಲಿಶಲ್ಯ ॥ ೨೪ ॥ ಚೆರಳತುಟಿಗಳ ಬೊಬ್ಬೆ ಮಿಗಲ । ಬ್ಬರಿಸಿದವು ನಿಸ್ಸಾಳಶತ ಜ । ರ್ಝರಮೃದಂಗದ ಗೋಣಪಟಹ

ಹವಗೌತುಗಹಳೆಗಳ ॥ ಉರುರಥಸವಳ್ಳಿರಿಯೆ ರಥಚೀ । ತ್ಕರದ ರಥಹಯುಹೇಷಿತದ ನಿ । ಷ್ಠುರನಿನಾದದಲೌಂಕಿ ಹೊಕ್ಕನು ಶಲ್ಯನಾಹವವ ॥ ೨೫ ॥ ದಳಪತಿಯ ಸುವಮ್ಮಾನವುುಖ ಕಳ । ವಳಿಸುತಿದೆ ಗಂಗಾಕುಮಾರನ । ಕಲಶಜನ ರಾಧಾತನೂಜನ ಸವುರಥೂವಿುಯುಲಿ ॥ ಕಳನನಿನನಾಕ್ರಮಿಸುವೊಡೆವೆ । ಗ್ಗಳೆಯುವಾದ್ರಮಹೀಶನಲ್ಲದೆ । ಕೆಲರಿಗೇನಹುದೆನುತ ಕೊಂಡಾಡಿದುದು ಕುರುಸೇನೆ ॥ ಪೊತುವುರುಳೀ ಶಲ್ಯ ಹೊಕ್ಕನು । ಸೂತಜನ ಹರಿಬದಲಿ ವೀರವ್ರಾತ ಗಣನೆಯುಲೀತನೊಬ್ಬನೆ ಹಾವುಹಾದೇವ ॥ ಧಾತುವೊಳ್ಳಿತು ಧಿಟ್ಟನ್ರೆನಿ । ರ್ಭೀತನಹನೆಂದುಲಿದು ರಿಪುಭಟ । ರೀತನನು ಹೊಗಳಿದರು ಸಾತ್ಯಕಿ ಸೃಂಜಯಾದಿಗಳು ॥ ೨೭ ॥ ಒಡೆದು ನಿಂದನು ಪರಬಲವ ನಿ । ವ್ಮಡಯು ನಾವೆಡೆ ಸೇನೆ ಬವರವ । ಕೊಡಲುಕೊಂಬವರಲ್ಲ ಕೈದುವನಿಳೆಯ ಸುಳಿವರಿಗೆ ॥ ಪೊಡವಿಯುಲಿಹುದು ಕೌರವೇಶ್ವರ । ನೊಡನೆ ಸಲ್ಲದುಗಡ ಶರೌಘವ । ನುಡಿಸಹೇಳಾನೃಪನನೆಂದುರುಬಿದನುಕಲಿಶಲ್ಯ ॥ ೨೮ ॥ ಚೆಲ್ಲಿತದು ನಾನಾವುುಖಕೆ ನಿಂ । ದಲ್ಲಿಯಿಲ್ಲದೆ ಸೋವುಕಾದ್ಯರ । ನಲ್ಲಿಕಾಣೆನು ಸೃಂಜಯರ ಪಾಂಚಾಲನಾಯಕರ ॥ ಕೆಲ್ಲೆಯುಲಿ ಭೀಮಾರ್ಜುನರು ಬರೆ । ಬಿಲ್ಲನೊದಿರಿಸಿ ಕವನಚೌಪಟ । ಮಲ್ಲ ತಾನಿದಿರಾಗಿ ನಿಂದನು ಪಾಂಡವರಾಯ ॥ ೨೯ ॥ ಜೀಯುಬುಧನ ಪುರೂರವನಸುತ । ನಾಯುುವಿನ ನಹುಷನ ಯಯಾತಿಯ । ದಾಯುಭಾಗವ ಭೋಗನಿಧಿಯುವತರಿಸಿದ್ಯೆ ಧರೆಗೆ ॥ ಜೇಯುನೆನಿಸಿದೆ ಜೂಜಿನಲಿ ರಣ । ಜೇಯುನಹನೀಕೌರವನು ನಿ । ವ್ಮಾಯುತಿಯ ಸಂಭಾವಿಸೆಂದುದು ವಂದಿಸಂದೋಹ ॥ ೩೦ ॥ ಹರಿಗೆ ಹೊಡವಂಟಸ್ತ್ರವಿದ್ಯೆಯು । ಗುರುವ ನೆನೆದುಶ ರಾಸನಕೆ ಹೊಸ । ತಿರುವನೇರಿಸಿ ಮಿಡಿದು ನಿಜಸಾರಥಿಯ ಬೋಳೈಸಿ ॥ ಅರಸನಿದಿರಾದನು ವೃಕೋದರ । ವರನಕುಲಸಹದೇವಸಾತ್ಯಕಿ । ಬರಲು ಬಲನೆಡವಂಕದಲಿ ನರನಾಥ ಕೇಳೆಂದ ॥ ೩೧ ॥ ಮಾವನವರೇ ನಿವ್ಮ ಹಿಂಸೆಗೆ । ನಾವು ಹೋದರೆ ಕ್ಷತ್ರಜಾತಿಯ । ಜೀವನವಲೇ ಕಷ್ಟವಿದು ಕಾರ್ಪಣ್ಯವಶರಾಗಿ ॥ ನೀವು ಸ್ಮರಿಸಬೇಕು ನವ್ಮ ತ । ರಾವಳಿಯುನೆನುತವನಿಪತಿ ಬಾ । ಣಾವಳಿಯ ಕೆದರಿದನು ಸೇನಾಪತಿಯ ಸಂಮುುಖಕೆ ॥ ೩೨ ॥ ನಿನಗೆ ಮಾತುಳರಾವು ಮಾಣಿಳಿ । ಮುುನಿಯುವುಗ ಮೊರೆಯುಲ್ಲ ದುಶ್ಶಾ । ಸನಜಯುದ್ರಥರಲ್ಲಲಾ ಸಂಬಂಧಿಗಳು ನಿನಗೆ ॥ ಜನಪಥಮಂದ ಹಿಂಸೆ ಬಂದುದು । ನಿನಗೆ ಸಾವದನಾಡಲೇತಕೆ । ಮನದಗರ್ವದ ಗಾಢವ್ಯಸನಿಯೆನುತ ತೆಗೆದಚ್ಚ ॥ ೩೩ ॥ ಅರಸ ಕೇಳ್ ಶಲ್ಯನ ಯುಧಿಷ್ಠಿರ । ನರಪತಿಯ ಸಂಗ್ರಾಮವಂದಿಸ ಸುರನದೀನಂದನನ ದ್ರೋಣನ ಸೂತನಂದನನ ॥ ನರನ ಭೂರಿಶ್ರವ ಸುಷೇಣನ । ಕುರುಪತಿಯ ವೃಷಸೇನಸೌಭ । ದ್ರರ ಮಹಾಸಂಗರವ ಮೆರೆಸಿತು ಜೀಳಲೇನೆಂದ ॥ ೩೪ ॥ ಧಿಟ್ಟನಹೆ ಭೂಪತಿಗಳಲಿ ಜಗ । ಜಟ್ಟಿಯಹೆ ನಿನಗಸ್ತ್ರವಿದ್ಯೆಯು । ಕೊಟ್ಟವರ ನಾಬಲ್ಲೆ ನಿನ್ನದನಾಡಿ ಫಲವೇನು ॥ ತೊಟ್ಟಚೋಹದವಾಸಿಯೆಂಬುದ । ಬಿಟ್ಟು ನವುಗೋಡುಭವ ನಿನ್ನೊಡ । ಹುಟ್ಟಿದರ ನಿಬ್ಬರವೆನುತ ತೆಗೆದೆಚ್ಚನಾಶಲ್ಯ ॥ ೩೫ ॥ ವ್ಮಾವ ಭೀಮಾರ್ಜುನರ ಭಾರಣೆ । ಗಾವನಿಳುವನು ನಾಕದಂತಿರ । ಲೀವಿಚಿತ್ರಕಳಂಬುಖಂಡನಪಂಡಿತತ್ವವನು ॥ ನೀವು ತೋರಿರೆ ಸಾಕು ಸಾವು । ಥಾರ್ಸ್ಯವಲಂಬನವುಳ್ಳೊಡೀತಸಸ್ತ್ರಪ್ರಪ್ರಿಯ ಸ್ಮರಿಸಿಯೆನುತ ಯುವುಸೂನು ತೆಗೆದೆಚ್ಚ ॥ ೩೬ ॥ ಧರಣಿಪತಿಯುಂಬುಗಳನೆಡೆಯುಲಿ ತರಿದು ತುಳುಕಿದನಂಬನಂಬಿನ । ಗರಿಯ ಗಾಳಿಯ ದಾಳಿ ಪಸರಿಸಿದುದು ಪರೀತವ ॥ ಮೊರವ ಹ

ಮಾರ್ಗಣೆಗಳಲಿ ಕ । ತ್ತರಿಸಿದವು ಬಳಿಯಂಬುಗಳು ಪಡಿ । ಸರಳನುಗುಳಿದವೆಚ್ಚೊಡೆಚ್ಚನು ಮೆಚ್ಚ
ಲುಭಯಬಲ ॥ ೩೭ ॥ ಸ್ಯರಿಸಾದೊಡೆಯೆನುತ ಮುಳಿದು ಮ । ಹೀರಮಣಮಾದ್ರೇಶ್ವರನನೆ। ಚ್ಚಾ
ರಿದನು ಮಗುಳೆಚ್ಚ ಪುನರಪಿಯುಚ್ಚ ಬಳಿಯೆಸಲು ॥ ಕೂರಲಗುಸೀಸಕದ ಕವಚವ । ಹೋರುಗಳೆ
ದೊಳನೆತ್ತರಿನ ಬಾ । ಯ್ದಾರೆಗಳ ತೋರಿದವು ದಳಪತಿಯುಪರಭಾಗದಲಿ ॥ ಪ್ರಳಯಪವನನ ಹೊ
ಯ್ಲನಲಿ ಕಳ । ವಳಿಸಿದಮರಾದ್ರಿಯವೊಲುದುರಿದ । ಬಿಲುಸರಳ ಹೊಗೆಲೋರೆಗೊರಳಿನ ಮುಚ್ಚ
ಕಣ್ಣಗಳ ॥ ತಳಿತರಕುತಾಂಕುರದ ಬಳಕೆಗೆ । ಬಳಲಿದಿಂದ್ರಿಯಕರಣಮೂರ್ಛಾ । ವಿಲಸಿತಾಂಗದ
ಶಲ್ಯನಿದ್ದನು ವರರಥಾಗ್ರದಲಿ ॥ ೩೯ ॥ ಅರಸ ಕೇಳ್ಕೆ ಮರವೆಗಾತನ । ನೆರವ ಕೊಟ್ಟು ಮುಹೂರ್ತ
ಮಾತ್ರಕೆ । ಮರದವೊಲು ಕಣ್ದೆರೆದು ನೋಡಿದನಲ್ಲಿ ಕಲಬಲವ ॥ ಸರಳ ಕಿತ್ತೌಷಧಿಯ ಲೇಪವ। ನೊ
ಡಸಿದನು ತೊಳೆತೊಳೆದು ನೂತನ । ವರದುಕೂಲವನುಟ್ಟುಕೊಂಡನು ನಗುತ ವೀಳೆಯವ ॥ ೪೦ ॥
ತುಡುಕಿದನು ಬಲುಸರಳನಟ್ಟವ । ಗಡಿಸಿದನಲಾ ಧರ್ಮಸುತನು । ಗ್ಗಡಿವಲೊಂದುಮುಹೂರ್ತವಾ
ಯಿತೆ ಹಗೆಗೆ ಸುಮ್ಮಾನ ॥ ತೊಡಕಿದೊಡೆ ಜಯವೆಪಜಯವು ಸಂ। ಗಡಿಸುವುದುತಪ್ಪೇನು ಯಮಸುತ
ಹಿಡಿಧನುವನನುವಾಗೆನುತ ಮೂದಲಿಸಿದನು ಶಲ್ಯ ॥ ೪೧ ॥ ನರನ ರಥವನೆ ಮೊರೆಯಹೊಗು ಮುರ
ಹರನ ಮೊರೆಹೊಗು ಭೀಮಸೇನನ । ಕರಸಿ ನೂಕು ಶಿಖಂಡಿಸಾತ್ಯಕಿಸೃಂಜಯಾದಿಗಳ ॥ ಅರಸುಗುದಿ
ಗೆಳ ಹೊಯ್ಲು ಗೆಲುವಿನ । ಗರುವನಾದೊಡೆ ನಿಲ್ಲೆನುತಲ। ಬ್ಬರಿಸಿ ಮಾದ್ರಮಹೀಶನೆಚ್ಚನು ಧರ್ಮ
ನಂದನನ ॥ ೪೨ ॥ ಏನ ಹೇಳುವೆನರಸ ಶರಸಂ। ಧಾನವನು ಪುಂಖಾನುಪುಂಖನಿ । ಧಾನವನು ಜಂ
ಘಾಳಶರಜಾಲಪ್ರಸಂದಣಿಯ ॥ ಅನಿರಂತರಸರಳಸಾರದ । ಸೋನೆ ಸುರಿದುದು ಧರ್ಮಸುತ ಸರಣಾ
ತುರಾಗವ ಕೊಳ್ಳದದುಭುತವಾಯ್ತು ನಿಮಿಷದಲಿ ॥ ೪೩ ॥ ಸರಳ ಮುರಿಯೆಸಲಾಸರಳಕ । ತ್ತರಿಸಿ
ಛತ್ತ್ರಂಬಿಸಲಿ ರಾಯನ । ಬರಿಯಕವಚವ ಹರಿಯಲೆಚ್ಚನು ಮೂರುಬಾಣದಲಿ ॥ ಸಿರದ ಸೀಸಕವನು
ವಿಘಾತಿಯ । ಲೆರಡುಶರದಲಿ ಮತ್ತೆ ಭೂಪತಿ । ಯುರವನುಗುಳಿದನೆಂಟರಲಿ ಮಗುಳೆಚ್ಚು ಬೊಬ್ಬಿ
ರಿದ ॥ ೪೪ ॥ ಗರುಡತುಂಡವ ಹತಿಗೆ ಫಣಿಯೆಂದೆ । ಬಿರಿದವೊಲು ಯಮಸುತನ ತನು ಜ । ಜ್ಜರಿತ
ವಾದುದು ಜಡಿವಜೋಡಿನ ಜಗಿಯ ಜೋರಿನಲಿ ॥ ಮುರಿದಕಂಗಳ ಮಲಗಿಸಲಿ ಪ್ಪೆ । ಸರಿಸಿದಗ್ಗದ
ಗಾಢವೇದನೆ । ಯುರವಣಿಗೆ ಸೊಪ್ಪಡಗಿ ನಿಮಿಷ ಮಹೀಶ ಮೈಮರೆದ॥ ೪೫ ॥ ಬಿದ್ದನಾಚೆಯ ದೊ
। ಸುಯೋಧನ । ಗೆದ್ದನಿನ್ನೇನೆನುತ ಸುಭಟರ । ನದ್ದಿತಶಿಸಂತೋಷಸಾಗರ ನಿನ್ನ ಮೋಹರದ ॥ ಇ
ದ್ದರೋ ಶೋಕಾಂಬುಧಿಯೊಳೋತೆ । ಬಿದ್ದರೋ ಭೀಮಾರ್ಜುನಂಗುಸು । ರಿದ್ದುದೋ ಬರಹೇಳೆನು
। ಬೊಬ್ಬಿರಿದನಾಶಲ್ಯ ॥ ೪೬ ॥ ಗಜಬಜಿಸಿದುದು ವೈರಿಸುಭಟ । ವ್ರಜನಕುಲಸಹದೇವಸಾತ್ಯಕಿ । ಪಿ
ಶುದ್ಧೃಷ್ಟದ್ಯುಮ್ನಭೀಮದ್ರೌಪದೀಸುತರು ॥ ವಿಜಿತನೋ ವಿಗತಾಸುವೋ ಧ । ರ್ಮಜನ ಹದನೇ
ನೆ ಚಿಂತಾ । ರಜನಿಯಲಿ ಕಂಗೆಟ್ಟುದಾಬಲವರಸ ಕೇಳೆಂದ ॥ ೪೭ ॥ ತ್ತುಳಿ ಮುದಳೆಚ್ಚತ್ತನಸ್ತ್ರ
ಸಿವ ಕೊಳೆಡೆಸು ಗಾಯದಲಿ ಕೇ । ವಣಿಸು ದಿವ್ಯೌಷಧಿಯ ವರಗಂಧ[illegible]ನವ ॥ [illegible]
ಪಿವಸ್ತ್ರನುಣಿಭೂ । ಷಣಪರಿಶ್ರುತನಾಗಿ ತಿರುವಿನ । ಗೊನೆಯುವನು [illegible] ಸಂತೈಸಿದನು ಸಾ
ಹಸ ॥ ೪೮ ॥ ಮರವೆ ಮಸುಳಿಸಿ ಭೂಮಿಪತಿ ಕಂ । ದೆರೆದಿರಲು ಭೀಮಾರ್ಜುನರು । [illegible]

ದಾದುದಿಲ್ಲಲ್ಲಾ ನೀವೇಕೆ ರಣವೇಕೆ ॥ ನೆರೆಧನುರ್ವೇದಾರ್ಥಸಾರವ । ನರಿದೆಯಾದರೆ ಕೊಳ್ಳೆನುತ ಬಿಡೆ । ತರಿದನಂಬಿನಲಿ ಧ್ವಜರಥಹಯವನಾಶಲ್ಯ ॥ ೪೯ ॥ ಧನುವನೆರಡಂಬಿನಲಿ ಮುಗುಳೆ । ಚ್ಚನು ಮಹೀಶನ ಸಾರಥಿಯ ಮೈ । ನೆನೆಯುಸವರುಧಿರದಲಿ ಮುಗುಳೆಚ್ಚನು ಮಹೀಶ್ವರನ । ಮನನಶಾಸ್ತ್ರ ಶ್ರವಣನಿಯಮಾ । ಸನಸಮಾಧಿಧ್ಯಾನವಿಧ್ಯಾ । ವಿನಯವಲ್ಲದೆ ರಣದಜಂಜಡವೇಕೆ ನಿನಗೆಂದ ॥೫೦॥ ಉಡಿದು ಬಿದ್ದುದು ಚಾಪ ಸಾರಥಿ । ಕಡಿದರಥ ನೆರೆಸುಗ್ಗ ನುಸಿಯಾ । ಯ್ತೊಡಗುದರಿಯಾಯ್ತಶ್ವಚಯಸಂಜೋಡುದಡಿಸಹಿತ ॥ ನಡುಗಿತರಿಬಲವವನಿಪತಿ ಕಾ । ಲ್ನಡಗೆ ಬಂದನು ಮತ್ತೆ ಹೊಸವಂ । ಗಡವ ಮೇಳೈಸಿದರು ನಗುತಡರಿದನು ಮಣಿರಥವ ॥ ೫೧ ॥ ಬೊಬ್ಬಿರಿದುದಾಸೇನೆ ರಾಯನ । ಸರ್ಬದಳ ಜೋಡಿಸಿತು ಸೋಲದ । ಮಬ್ಬು ಹೊಡೆದುದು ಜಯದ ಜಸವೇರಿದನು ನರನಾಥ । ಉಬ್ಬಿದನು ಸುಕ್ಷಾತ್ರತೇಜದ । ಗರ್ಭಗಾಡಿಸಿತಾಲಿಮಿಡಿದನು । ತೆಬ್ಬಿನಸ್ತ್ರ ಪ ತೂಗಿ ತುಡುಕಿದನಂಬಿನಂಬುಧಿಯ ॥ ೫೨ ॥ ಕಾದುಕೊಳು ಮಾದ್ರೇಶ ಕುರುಬಲ । ಮೈದಿ ಬರಲಿಂದಿನಲಿ ನಿನ್ನಯ । ಮೈದುನನ ಕಾಣಿಕೆಯಲೇ ಸಂಘಟನೆಗೀಸರಳು ॥ ಕೈದುಕಾರರೊಳಂಟಿಕರೆ ನೀ । ನೈದಲಾರೆಯೆನುತ್ತ ಮುನ್ನೊ । ರೈದುಶರದಲಿ ಕಡಿದನಾಸಾರಥಿಯ ರಥಹಯವ ॥ ೫೩ ॥ ತೇರು ಹುಡಿಹುಡಿಯಾಯ್ತು ಹೂಡಿದ । ವಾರುವಂಗಳನಲ್ಲಿ ಕಾಣೆನು । ಸಾರಥಿಯ ತಲೆ ಕಳಚಿ ಬಿದ್ದುದು ಮಿದುಳ ಜೋಡಿನಲಿ ॥ ಆರಿ ಬೊಬ್ಬಿರಿದರಸನೆಸಲ । ವ್ವಾರದಲಿ ಕಣೆಯಡಸಿದವು ಕೈ । ವಾರವೇಕೆ ಚಡಾಳಿಸಿತು ಚಪಳತೆ ಯುಧಿಷ್ಠಿರನ ॥ ೫೪ ॥ ಅರಸ ಕೇಳ್ಕೆ ಬಳಿಕವಾದ್ರೇ । ಶ್ವರನ ರಥಸಾರಥಿವಿಸಂಚಿಸ । ಲುರಿದನಧಿಕಕ್ರೋಧಶಿಖಿ ಮೋಹಿಸಿತಕ್ಷಿಯಲಿ ॥ ಕುರುಬಲದ ತಲ್ಲಣವನುಪಸಂ । ಹರಿಸಿ ಹಗೆಯಡಾಯುಧದಲಾ । ಧರಣಿಪನ ಮೇಲ್ವಾಯ್ದು ಹೊಯ್ದನು ಹಯರಥಾವಳಿಯ ॥ ೫೫ ॥ ವಾರುವನ ಭಯನಿತ್ಯಕಡಸಂ । ಹಾರದಲಿ ಸಾರಥಿನರೇಂದ್ರನ । ತೇರ ತಿರುಗಿಸಿದನು ನಿಹಾರದಲೊಂದುಬಾಹೆಯಲಿ ॥ ಆರಿ ಹೊಯ್ದನು ಹಯವನಗ್ಗದ । ವಾರಣಾವಳಿಗಳ ಪದಾತಿಯ । ತೇರತೆಕ್ಕೆಯನಿಕ್ಕಿದನು ಪ್ರತ್ಯೇಕಸಾವಿರವ ॥ ೫೬ ॥ ಮಲೆತು ದೃಷ್ಟದ್ಯುಮ್ನನನು ಭಯ । ಗೊಳಿಸಿ ಸೋಮಕಸೃಂಜಯರನ । ಪ್ಪಳಿಸಿದನು ಸಾತ್ಯಕಿಯ ಥಾಮನ್ಯೋತ್ತಮೌಂಜಸರ ॥ ದಳದೊಳೋಡಿಸಿ ಮುರಿದು ಚಾತು । ರ್ಬಲವ ಸವರಿ ಸಿಖಂಡಿನಕುಲರ ಹೊಲಬುಗೆಡಿಸಿ ಮಹೀಪತಿಯ ಪಡಿಬಲಕೆ ಮಂಡಿಸಿದ ॥ ೫೭ ॥ ಎಸೆಯುಧಿಷ್ಠಿರ ಹಲಗೆಕಡಗವ । ಕುಸುರಿದರಿಯಾ ಚಾಪವಿದ್ಯಾ । ಕುಶಲನಂಬರಲೇ ತನುತ್ರರಥಂಗಳಲಿ ನಿಮಗೆ ॥ ಅಸುವ ಕಡೆವರೆ ರಣಪಲಾಯನ । ವೆಸವುದೈ ಕ್ಷತ್ರಿಯರಿಗತಿಸಾ । ಹಸಿಗನಾದೊಡೆ ನಿಲ್ಲೆನುತ ಮೊದಲಿಸಿದನು ಶಲ್ಯ ॥ ॥ ೫೮ ॥ ಅಕಟಕಟ ಧರ್ಮಜನ ನೀಂಕಂ । ಟಕಕೆ ಕ್ರಿಮಿಕರ್ಮಿಸಿದರೇ ಪಾತಕಿಗಳೋ ಪಾಂಡವರೆನುತ ಬಲವೆಲ್ಲ ತಲ್ಲಣಿಸೆ ॥ ವಿಕಟರೋಷದಿ ವಿಸ್ಫುಲಿಂಗ । ಪ್ರಕಟಭೀಷಣನಹಿತನಲಿ । ಸಾಯಕವ ಖಂಡಿಸಿ ಧರೆ ಬಿರಿಯೆ ಬೊಬ್ಬಿರಿದನಾಭೀಮ ॥ ೫೯ ॥ ಲೇಸ ಮಾಡಿದೆ ಭೀಮ ಕಟ್ಟಾ । ಳೈಸಲೇ ನಿನ್ನವರೊಳಗೆ ನಿಂ । ನಾತೆಯಲ್ಲಾ ಧರ್ಮಪುತ್ರನ ಸತ್ಯತತ್ವದಕೆ ॥ ಐಸೆ ತಪ್ಪೇನೆನುತ ಮಾದ್ರಮ । ಹೀಶ ಮುರಿಯಲು ಹೊಸರಥವ ಮೇಳೈಸಿ ಸಾರಥಿ ಸಂಧಿಸಿದನವಧಾನ ಜೀಯೆನುತ ॥ ೬೦ ॥ ರಥಕೆ ಬಂದು ಪಸಾಯವನು ಸಾ । ರಥಿಗೆ ಕೊಟ್ಟನು ಚಾಪಶರವನು । ರಥದೊಳಗೆ ತುಂಬಿಸಿದನಂಬಿಸಿದನು ಸುಂ...

ಧನನ ॥ ವ್ಯಥೆಯುಮಕ್ಕಳ ರಣಪರಾಕ್ರಮ । ವ್ಯಥಕಣಾ ಕರ್ಣಾದಿಸುಭಟ ॥ ವ್ಯಥೆಯು ನಿಲಿಸುವೆನೆನುತ ಮೂಲಿಸಿದನು ಧರ್ಮಜನ ॥ ೬೧ ॥ ಸಾರಥಿಗೆ ಸೂಚಿಸಿ ನೃಪಾಲನ । ಸಾರೆ ದುವ್ವಾಳಿಸಿತು ರಥ ನೃಪ । ನೋರೆಬಿಲಿದನು ಬಾಗಿ ತಿರುಗಿದನೊಲೆದೊಡಲನೊಲೆದ॥ ಚೂರಿಸಿದನಾರಾಚವಿಶ್ರವು । ದೋರಣದ ನಾರಾಚನೆಸೆತ್ತುವಿ । ಹಾರದಲಿ ವಿರಚಿಸಿದಶಲ್ಯನ ಸಮರಸಾಗರವ ॥ ೬೨ ॥ ಹಿಂದೆ ಕರ್ಣಧನಂಜಯರು ಬಳಿ । ಕಿಂದು ಶಲ್ಯಯುಧಿಷ್ಠಿರರು ಸಾ । ನಂದದಲಿ ಸಮತಲಿಸಿ ಕಾದಿದರುಭಯಬಲದೊಳಗೆ ॥ ಇಂದು ಮದ್ರಮಹೀಶರನು ಯಮ । ನಂದನಗೆ ಪಡಿ ಮದ್ರರಾಜಗೆ । ಸಂದುದೀಯಮಸುತಗೆ ಯೆಂದುದು ಸಕಲಪರಿವಾರ ॥ ೬೩ ॥ ಅರಸ ಕೇಳೈ ಕೃಷ್ಣಶಕ್ತಿ । ಸ್ಫುರಣವ್ಯಸಲೆ ನಿಮ್ಮಬಲಸಂ । ಹರಣಕಾವುದು ಬೀಜ ನಿರ್ದೈವರ ವಿಲಾಸವಿದು ॥ ಹರಿಯುಧಿಷ್ಠಿರನೃಪನನೆಕ್ಕಟಿ । ಗರೆದು ವರಶಕ್ತಿಪ್ರಯೋಗವ । ನೊರೆದರೊಡಬಟ್ಟನು ಹಸಾಧದಮಧುರವಚನದಲಿ ॥ ೬೪ ॥ ಆಯುದಲಿ ಶಸ್ತ್ರಾಸ್ತ್ರದಲಿ ದಿ । ವ್ಯಾಯುಧವ ನೆರೆಬಲಿದವರ ತಪ । ನೀಯರೇಖೆಯ ಹೊಳವಕೊಂಗಿರುಗೆಜ್ಜೆಘಂಟೆಗಳ ॥ ಬಾಯಧಾರೆಯ ತೈಲಲೇಪನ । ದಾಯತದ ಬವರಿಗಳ ರಿಪುಭಟ । ನಾಯುಷದ ಕಡೆಪೊನಲ ಮುರಿಯನು ಶಕ್ತಿಯನು ನೃಪತಿ ॥ ೬೫ ॥ ತುಡುಕಿದನು ಹೊಸರವಿಯ ತೇಜವ । ದಡಿಯನುಗುವಂದದಲಿ ಹೊಳೆಹೊಳೆ । ವುಡುಗಣಂಗಳ ಸಮವೆನಿಪಮಣಿಮಯದ ಕಾಂತಿಗಳ ॥ ಕಡುಮೊನೆಯ ಪಡಿಮುಖದಲುದಿರುವ । ಕಿಡಿಯ ಘಂಟಾರವದ ರಭಸದ । ಕಡುರುಘುಳವಝುಳಿಸುವಶಕುತಿಯಲಿಟ್ಟನವನೀಶ ॥೬೬॥ ಇದಿರೊಳೆಚ್ಚನು ಶಲ್ಯನಂಬಿನ । ಹೊದೆ ಸವೆಯೆ ಹರಿತಪ್ಪಶಕುತಿಯ । ತುದಿಗೆ ಕಬಳಗ್ರಾಸವಾದನೆಲೇ ಮಹಾದೇವ ॥ ಹೊದರುಗಿಡಿಗಳ ಕೇಸುರಿಯ ಹಾ । ರದಲಿ ಹರಿತಂದಖಿಳ ದಳಪತಿ । ಯದೆಯನೊದೆದು ನೆಲಕೆ ನೆಟ್ಟಿತು ನಾಲ್ಕುಮುಷ್ಟಿಯಲಿ ॥ ೬೭ ॥ ಕಾರಿದನು ರಕುತವನು ಧರಣಿಗೆ । ಹಾರಿಬಿದ್ದನು ಮಾದ್ರಪತಿಯದೆ । ಡೋರಿನಲಿ ಡಾವರಿಸಿದವು ರಕುತಾಂಬುಧಾರೆಗಳು ॥ ವಿಸ್ತಾರಿತಸು ಕಂಠದಲಿ ನಾತಿಕ ॥ ಕೇರಿದುದು ನಿಟ್ಟುಸುರಿನೆಗಲಕೆ । ಚೀರಿದುದು ಕುರುರಾಯದಳಶಲ್ಯಾವಸಾನದಲಿ ॥ ೬೮ ॥ ಅಹಹ ಸೇನಾಪತಿಯ ಮಗ್ಗಲು । ಮಹಿಗೆ ಮೆಚ್ಚಿದು ಬಿಚ್ಚಿತೀಚೆಯ । ಬಹಳಬಲವಿನ್ನಾರು ಕುರುಸೇನೆಗೆ ಧುರಂಧರರು ॥ ಮಿಹಿರಸುತಗುರುಭೀಷ್ಮರವಿಸಂ । ನಹಿತನಾದನು ರಾಯರೆನೆ ಕಿಂ । ಗಹನವೇ ರಣವೆನುತ ಶಲ್ಯತನೂಜಮಾರಾಂತ ॥ ಗೆಲವು ನಿಮಗಾಯುಸ್ತ್ರರಸ ಹರಿಬಕೆ । ನಿಲುಕಿದಮ್ಮನು ಸಂತವಿಸಿ ನಿಜ । ಬಲದಲೊಸಗೆಯ ಮಾಡಿ ಸಾ ಮದ್ರೇಶಮಾರಣವ ॥ ಅಳುಕದಿದಿರಾಗೆನುತ ಬಾಣಾ । ವಳಿಯ ಕೆದರಿ ನಿರಂತರಾಸ್ತ್ರದ । ಜಲನಿಧಿಗೆ ವಡಬಾಗ್ನಿಯಾದನು ನಗುತ ಯಮಸೂನು ॥ ೭೦ ॥ ಆತನಸ್ತ್ರವ ಮುರಿಯೆನುತ ರಥ । ಸೂತಹಯುವನು ತರಿದು ಬಾಣವ್ರಾತದಲಿ ಶಲ್ಯಾತ್ಮಜನ ಹೂಳಿದನು ಹರಹಿನಲಿ ॥ ಈತನನು ಕೆಡಹಿದನು ಸಾಲ್ವವು । ಹೀತಳಾಧಿಪನವರ ಹರಿಬಕೆ । ಭೂತಳೇಶನ ಕಣಕಿದನು ಕುರುರಾಯ ಸಾಮಜವ ॥ ೭೧ ॥ ಆರಿ ಹೊಕ್ಕನು ಶಲ್ಯನೊಳು ಪರಿ । ವಾರಮಾದ್ರರನಾಯಕರು ಜಿ । ಜ್ಯಾರಮನ್ನೆಯಮಂಡಲಿಕಸಾಮಂತಸಂದೋಹ ॥ ಭೂರಿಬಲಸಾಲ್ವನು ಭಟಾವಳಿ । ಯಾರುಭಟೆಯಲಿ ನೂಕಿದುದು । ವಿಸ್ತಾರಿಸಿತಲ್ಲಿ ಧರ್ಮನಂದನನೊಡನೆ ಘನಸಮರ ॥ ೭೨ ॥ ಕೇಳಿದನು ಕುರುರಾಯಮಾದ್ರನೃ । ಪಾಲನವಸಾನವನು ಕರೆಸಿದ ।

ಸಾಳುಕುದುರೆಯುರಥಮದೋತ್ಕಟಗಜಘಟಾವಳಿಯು ॥ ಮೇಳವದ ಮೋಡಿಯಲಿ ಬಲದು । ವ್ವಾಳಿಸಿ ತಳ್ಕೆ ಪಾಂಡುಪುತ್ರರ । ಸಾಲ ಹೊಯ್ಹೊಯೆನುತ ಹೊಕ್ಕನು ಲಳಿಯಲಗ್ಗಯಲಿ ॥ ೨೩ ॥ ರಾಯನೊಡನೆ ಸಮಸ್ತ ಬಲವದು । ಪಾಯಲೌಕಿತು ಪಾರ್ಥಸಾತ್ಯಕಿ । ವಾಯುಸುತರಾಚೆಯಲಿ ಮೋಹರಿಸಿತ್ತು ರಿಪುಸೇನೆ ॥ ಸಾಯಕದ ಕಿಡಿವರೆಯು ಸಬಳದ । ಪಾಯದಳರಥವಾಜಿಕರಿಘಟೆ । ಯಾಯುಶುದ್ಧದತೇಜಿ ಹೊಕ್ಕವು ವಾಘೆ ಸರಿಸದಲಿ ॥ ೨೪ ॥ ಥಟ್ಟನೊಡೆಹೊಯ್ದವನಿಪತಿ ಜಗ । ಜಟ್ಟಿಗಳ ಕೆಣಕಿದನು ನಕುಲನ । ನಟ್ಟಿದನು ಸಹದೇವನಡಹಾಯ್ದರೆ ವಿಭಾಡಿಸಿದ ॥ ಬಿಟ್ಟದೃಷ್ಟದ್ಯುಮ್ನನನು ಹುಡಿ । ಗುಟ್ಟಿದನು ಸಾತ್ಯಕಿಯ ಜೋಡಿನೊ । ಳೊಟ್ಟಿದನು ಕೂರಂಬುಗಳನಾವೀರಕುರುರಾಯ ॥ ೨೫ ॥ ಮರಳಿ ಪಂಚದ್ರೌಪದೇಯರ । ಪರಿಭವಿಸಿದನು ಧರ್ಮಪುತ್ರನ । ತೆರಳಿಚಿದಸಹದೇವನಕುಲರ ಮತ್ತೆ ಸೋಲಿಸಿದ ॥ ಪರಿಯುಧಾಮನ್ಯುತ್ತಮೌಂಜಸ । ರುರುಳಿಚಿದನವನಿಯಲಿ ಭೀಮಾ । ದ್ಯರಿಗೆ ಭೀತಿಯ ಬೀರಿದನು ಬೇಗದಲಿ ಕುರುರಾಯ ॥ ೨೬ ॥ ಕೆದರುತಿದೆ ನಮ್ಮವರು ಬಲಧೊರೆ ॥ ಯಧಟು [redacted] ಕಿನು ರಾಯನೊಬ್ಬನೆ ॥ ಕದನದಲ್ಲಿ ಕೈದೋರಿ ಭಂಗಿಸಿದನು ಮಹಾದೇವ ॥ ಹೆದರಿ ಹೊಕ್ಕರು [redacted] ವರಮಾ । ನದಲಿ ಮರಳ್ದವು ಪಾರ್ಥ ದಿವ್ಯಾ । ಸ್ತ್ರದಲಿ ಕೈಮಾಡೆಂದು ಮುನಿದನು ವೀರನಾರಾಯಣ ॥ ... ... ॥ ೨೭ ॥

ಅಂತು ಸಂಧಿ ೩ ಕ್ಕೆ ಪದ ೧೨೪ಕ್ಕಂ ಮಂಗಳಮಸ್ತು.

ಇತಿ ಶ್ರೀಮದಚಿಂತ್ಯ ಮಹಿಮ ಗದುಗು ವೀರನಾರಾಯಣ ಚರಣಾರವಿಂದ ಮಕರಂದ ಮಧುಪಾನ ಪುಷ್ಟ ವಚಃ ಷಟ್ಪದಿನಿಕಾಯ ಶ್ರೀಮತ್ಕುಮಾರ ವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ಣಾಟ ಭಾರತ ಕಥಾಮಂಜರಿಯೊಳ್ ಶಲ್ಯಪರ್ವ ಸಮಾಪ್ತಮಾದುದು.



ಶ್ರೀರಸ್ತು.

॥ಶ್ರೀ ವೇದವ್ಯಾಸಾಯನಮಃ.॥

# ಕನ್ನಡ ಮಹಾಭಾರತ—ಗದಾಪರ್ವ.

## ಮೊದಲನೆಯ ಸಂಧಿ.

ಸೂಚನೆ ॥ ಶಲ್ಯನವಸಾನದಲಿ ಕೌರವ । ಮಲ್ಲ ರಣದಲಿ ಕಾದಿಯಲ್ಲಿಯೆ । ನಿಲ್ಲದಡಗಿದನಿತ್ತ ಸಂಜಯ ಬಂಧಸಾಹವಕೆ ॥

ಪದ ॥ ಕೇಳು ಧೃತರಾಷ್ಟ್ರನೃಪ ಸಿರಿ । ಲೋಲಸಹಿತರ್ಜುನನು ಸೇನಾ । ಜಾಲವನು ಸಂತೈಸಿ ಥೊರೆ ಸುಯ್ಧಾನವೆಂದೆಸುತ । ಆಳೊಡನೆ ಬೆರಸಿದನು ಕುರುಭೂ । ಪಾಲಕನ ಥಟ್ಟನಲಿ ತಸ್ತ

ಜ್ವಾಲೆಗಳ ಕೆದರಿದನು ಹೊದರಿನ ಹಿಂಡಹರೆಗಡಿದು ॥ ೧ ॥ ಎಲವೊ ಕಪಟದ್ಯೂತ ಕೇಳಿಯು । ಕಲ್ಮಷಿತಾಂತಃಕರಣನಿನ್ನಿ್ನೀ । ಬಲಕೆ ಪತಿ ನೀನೋ ಕೃಪಾಚಾರಿಯನೊ ಗುರುಸುತನೋ॥ ಖಳಸುಶರ್ಮನೊ ಶಕುನಿಯೋ ನಿಂ । ನುಳಿದವೊಡಹುಟ್ಟಿದನೊ ರಾಜಾ। ವಳಿಯೊಳಾರಳವಿಗರು ನಿನಗೆನುತೆಚ್ಚನಾಪಾರ್ಥ ॥ ೨ ॥ ಅರಸ ಕೇಳೈ ಮೂರುಸಾವಿರ । ಕರಿಘಟೆಗಳಿಪ್ಪತ್ತುಸಾವಿರ । ತುರಗರಥದಳವೆಂಟುಸಾವಿರಲಕ್ಷಪಾಯದಳ ॥ ಅರಸುಗಳು ಮುನ್ನೂರುನಿಂದುದು । ಕುರುಬಲದವಿಸ್ತಾರಕೌರವ । ಧರಣಿಪತಿಏಕಾದಶಕ್ಷೋಹಿಣಿಯುಶೇಷದಲಿ ॥ ೩ ॥ ಕರಿಘಟೆಗಳೈನೂರುಮೂವ । ತ್ತೆರಡುಸಾವಿರಪಾಯದಳಸಾ । ವಿರದನೂರ್ವರು ಧೊರೆಸಹಿತ ನಿಂದನು ಮಹೀಪಾಲ ॥ ತುರಕಖರ್ಪರಪಾರಸೀಕರ । ತುರಗವೈಸಾವಿರಸಹಿತಮೋ । ಹರಿಸಿ ನಿಂದನು ಪಾರ್ಥನಿದಿರಿಲಿ ಶಕುನಿ ಮೊನೆದೋರಿ ॥ ೪ ॥ ನೂರುರಥವಿನ್ನೂರುಗಜವೈ । ನೂರುಹಯಗಳು ಸಾವಿರದಮುಂ । ನ್ನೂರುಸುಭಟರುಸಹಿತ ಮೋಹರವೆರಡುಬಾಹೆಯಲಿ ॥ ತೋರಿದರು ಕೃತವರ್ಮಕೃಪರೈ । ನೂರುಗಜ ಗುರುತನುಜಸಹಿತೀ । ಮೂರುದಳಕೊತ್ತಾಗಿ ನಿಂದನು ಕೌರವರರಾಯ ॥ ೫ ॥ ಕವಿದು ದುವ್ವಾಳಿಸುತಲಾರಥ । ನಿವಹ ಬಿಟ್ಟುದು ಕುದುರೆ ಸೂಠಿಯೊ । ಳವಗಡಿಸಿ ತೂಳಿದವು ಹೇರಾನೆಗಳು ಸಂದಣಿಸಿ ॥ ಸವಡಿವೆರಳಿನ ಸೇದುವಂಬಿನ । ತವಕಿಗರು ತುರುಬಿದರು ಬಲುಬಿಲ್ಲವರು ಮೊನೆಮುಂತಾಗಿ ಮೋಹಿತು ಮಿಕ್ಕ ಸಬಳಿಗರು॥೬॥ರಣಪರಿಚ್ಛೇದಿಗಳು ಮಿಗೆ ಸಂ।ದಣಿಸಿತಾಕುರುಸೇನೆ।ವಾದ್ಯದಿ।ಧರಣಿಪತಿಗಳು ನೋಡಿ ವುಬ್ಬಿದಬೊಬ್ಬೆಗಳಧ್ವನಿಗೆ ॥ ಕುಣಿದವಂದರ್ಜುನನ ರಥಮುಂ।ಕಣೆಯಲಾರೋಹಕರ ರಥಹಯ । ಹೆಣಗಿದವುಹಯದೊಡನೆ ಕಂದದ ಖುರದ ಹೊಯ್ಲಿನಲಿ ॥ ೭ ॥ ಸುತ್ತುವಲಗೆಯುಮೇಲೆ ಕಣೆಗಳ। ತೆತ್ತಿಸಿದರುಬ್ಬಿನಲಿ ಸಬಳಿಗ । ರೆತ್ತಿದರು ರಾವುತರುಹೊಯ್ದರು ರಥಹಯಾವಳಿಯ ॥ ಮುತ್ತಿದವು ಗಜಸೇನೆ ಪಾರ್ಥನ । ತೆತ್ತಿಗರ ಬರಹೇಳು ಯೆಡೆಯಲಿ । ಕಿತ್ತು ಮಗುಚುವರಾರೆನುತ ತಲ್ಲಣಿಸಿತರಿಸೇನೆ ॥ ೮ ॥ ಅರಸ ಕೇಳೈ ಬಳಿಕ ಪಾರ್ಥನ । ಕೆರಳಿಚಿದರೋ ಕಾಲರುದ್ರನ । ಸರಸವಾಡಿದರೋ ಪ್ರಚಂಡಪ್ರಳಯಭೈರವನ ॥ ಪರಿಭವಿಸಿದರೊ ಲಯಕೃತಾಂತನ । ಕರೆದು ಮೂದಲಿಸಿದರು ನಾವಿ । ನ್ನರಿಯೆವರ್ಜುನನೆಸುಗೆಯಲಿ ವರ್ಣನೆಯ ನಿರ್ಣಯವ ॥ ೯ ॥ ಎಡದಲೌಂಕಿದಭಟರನಾನಂ । ಗಡದರಾವ್ತರ ಸಮುಖದಲವ । ಗಡಿಸುವಾನೆಯ ಥಟ್ಟಿನಾಸಮರಥರ ತೇರುಗಳ ॥ ಕಡಿದನೊಂದೇಸರಳಿನಲಿ ಚಿನ । ಕಡಿಗಳನು ರುಧಿರಾಂಬುರಾಶಿಯೊ । ಳಡಗಿದಚತುರಂಗಬಲವನು ಒಂದುನಿಮಿಷದಲಿ ॥ ಅಳಿದವಿನ್ನೂರಾನೆಸರಳು । ಚ್ಛಳಿಸಿದವು ಮುನ್ನೂರು ಪುನರಪಿ । ಮಲಗಿದವು ನೂರಾನೆ ಕಡೆದವು ತಾರುಥಟ್ಟಿನಲಿ ॥ ಬಳಿಕ ನೂರು ನಿರಂತರಾಸ್ತ್ರಾ। ವಳಿ ವಿಧಾತಿಗೆ ನೂರುಲಿಖ್ಖವ । ಕಳೆದವಿನ್ನೂರಾನೆ ಪಾರ್ಥನ ಕೋಲ ತೋಹಿನಲಿ॥೧೧॥ ರಥ ಮುರಿದವೈನೂರು ತತ್ಸಾ । ರಥಿಗಳದ್ದುದು ನೂರು ಮಿಕ್ಕದು । ರಥವನಿಳಿದೋಡಿದುದು ಸಮರದೊಳೆಂಟುನೂರೈದು ॥ ಪೃಥಿವಿಗೊರಗಿದವೆಂಟುಸಾವಿರ । ಪೃಥುಳಹಯ ಸುಗ್ಗಾಯ್ತು ಗಣನೆಯ ಗತಿಪದಾತಿಯೊಳೆತ್ತಲೆನೆ ಸವರಿದನು ಬರಿಬಲವ ॥ ೧೨ ॥ ಒದೆದು ರಥವನು ಸೂತರಿಳಿದೋ । ಡಿದರು ಚಾಪವನಿಳುಹಿ ಸಮರಥ । ರೆದೆಯನೀನ್ನುತಕರೆದ ಖಂಡೆಯದೂಹತಿಯನಿಳುಹಿ ॥ ಕೆದರಿತಾರೋಹಕರು ವಿಕ್ರಮ । ವಿದಿತನಿಪುಣಪದಸ್ತಭೂಪರು । ಹುದುಗಿತಲ್ಲಿಯದಲ್ಲಿ ಪಾರ್ಥನ ಸರಳ ಧಾಳಿಯಲಿ

॥ ೧೩ ॥ ಬಿರುದ ಬಿಸುಟರು ಧ್ವಜದಕಂಭವ । ಹರಿಯಹೊಯ್ದರು ಕಾಲತೊಡರನು । ಧರೆಯೊಳೀಡಾಡಿದರು ಥಾಯ್ದರು ಛಟಛಟಭಟಭಟರು ॥ ಸುರಗಿಯನು ಸೆಕ್ಕಿದರು ರಥದಲಿ । ಕರಿಗಳಲಿ ವಾರುವದಲಿಳಿಗು । ಪ್ಪರಿಸಿದರು ಹರಹಿನಲಿ ಯ್ಯೈದಿತು ಹೊತ್ತುಮುಸುಕಿನಲಿ ॥ ೧೪ ॥ ಕೆದರಿ ಗಜವುಂಗಡಾಸನದೊಳೋ । ಡಿದವು ಚಮರೀಮೃಗದವೊಲು ಬಲು । ಗುದುರೆ ಬಿಟ್ಟೋಡಿದವು ಕಂದವನೊಗನನೀಡಾಡಿ ॥ ಕುದುರೆ ಸೆಳೆದವು ಬರಿರಥವನೊ । ಟ್ಟೆದಪದಾತಿಯು ಬಿಸುಟಕೈದುವ । ಹೊದೆದುದಿಳೆ ಕಳನಗಲದಲಿ ಕಂಡೆನು ಮಹಾದ್ಭುತವ ॥ ೧೫ ॥ ಮರಳಿ ವಾಘೆಯು ಕೊಂಡರಾವ್ತರು । ತಿರುಗಿದರು ಹಮ್ಮುಗೆಯನೇಣ್ಗಳ । ಹರಿದು ಹಕ್ಕರಿಕೆಗಳ ಹಾಯಿಕಿ ಖಂಡೆಯವ ಬಿಸುಟರು ॥ ಬಿರುದ ಸಂಭಾವಿಸುವಭಟ್ಟರ । ನಿರಿದರಾರೋಹಕರು ಕಲಿಗಳ।ತಿರುಹಿಗಳ ರಂಚೆಗಳ ಕೊಯ್ದಾಡಿದರು ನೆಲಕೆ ॥೧೬॥ ರಾಯಕೇಳ್ಕೆ ಬಲದ ಬಾಹೆಯು । ನಾಯಕರು ಕಾದಿದರು ವಾಮದ । ನಾಯಕರು ಕೆಲಸಿಡಿದು ತರಹರಿಸಿದರು ದೂರದಲಿ ॥ ರಾಯ ಕಂಡನು ಬಳಿಕ ರಣದಪಲಾಯನದ ಪರಿವಿಡಿಯನಸುವಿನ । ಬೀಯಕವ ರಂಜಿದರೆನುತ ಮೊದಲಿಸಿದನು ನೃಪರ ॥ ೧೭ ॥ ಎಲೆಮಹೀಪತಿ ಗಳಿರ ಪುಣ್ಯ । ಸ್ಥಳಕುರುಕ್ಷೇತ್ರವು ಮಹಾಸಂ । ಗರದೊಳಗೆ ತೆಗೆದೋಟವೇ ನೀವ್ ಕ್ಷತ್ರಿಯೋತ್ತಮರು ॥ ಅಳುಕದಂಗೈಸಿದೊಡೆ ಸುರಸಂ । ಕುಳದ ಸೇರುವೆತಪ್ಪಿದೊಡೆ ನೀ । ವಿಳಿವಿರೈ ರೌರವದೊಳಾವುದುಲೇಸು ನಿಮಗೆಂದ ॥ ೧೮ ॥ ವೀರಮಾತೆಗಳೆಂದು ತಾಯ್ಗಳ । ನಾರುಕೊಂಡಾಡುವರು ಸತಿಯರ । ವೀರಪತ್ನಿಯರೆಂದು ನುಡಿವರೆ ಸುರರರಾಣಿಯರು ॥ ವೀರಸಿರಿ ನಿಮಗೆಂದು ಮಂದಿಯೊ । ಳಾರ ಹೇಳುವೆವೆನ್ನಲೇಕೈ । ವಾರಿಸದೆ ಕಲಿನಿಕರ ನಾಚದೆ ಶಿವಶಿವಾಯೆಂದ ॥ ೧೯ ॥ ನರಶಿರದ ದರ್ಭೆಗಳ ಮಿದುಳಿನ । ಚರುವಿನೆಲುವಿನಸಮಿಧೆಗಳ ಬಿಲು । ದಿರುವೆರವಚತುರಂಗರಭಸದಸಾಮವೇದಿಗಳ ॥ ಅರುಣಜಲದಾಜ್ಯಾಶ್ರುವಾರಿಯು । ಸಿರಕಪಾಲದ ವೈರಿಪಶುಬಂ । ಧುರದ ಸಂಗರಯಜ್ಞದೀಕ್ಷೆಯ ಮರದಿರಕಟೆಂದ ॥ ೨೦ ॥ ಇಲ್ಲಿ ಮನುಜಸ್ತ್ರೀಯು ಮೇಳವ । ವಲ್ಲಿಸುರನಾರಿಯರ ರತಿ ನಿಮ । ಗಿಲ್ಲಿ ಸಾರೋದ್ಯಾನರಸ ಪೀಯೂಷರಸವಲ್ಲಿ ॥ ಇಲ್ಲಿಯುದ್ಧ್ಯವವಿಭವವಿಮಲತೆ । ಯಲ್ಲಿ ಕಿಲ್ಬಿಷವಿಲ್ಲಿ ಶಿವಮಯ । ವಲ್ಲಿನೀವಿಂನೇನ ನೋಂತಿರೊ ಶಿವಶಿವಾಯೆಂದ ॥ ೨೧ ॥ ಅವಭವದಲಿನಿಮ್ಮರಾಜ್ಯವ । ದಾವಬಂಧದ ಮಂತ್ರಮಿತ್ರರ । ವಾವಜನ್ಮಂಗಳಸ ಮಾಗಮ ನಿಮ್ಮರಾಣಿಯರು ॥ ಈವಿಡಂಬದದೇಹವಿದಸಂ । ಭಾವಿಸುತಪರಲೋಕಹಿತವನು । ನೀವುನೆನೆಯದೆ ಕೆಟ್ಟುದಕೆ ಬೆರಗಾದೆವಾವೆಂದ ॥ ೨೨ ॥ ನೃಪನ ಮೊದಲೆ ನಿಜಕುಲಕ್ರಮ ೯ ಕಪಟತಶೋಭೆಯು ಪಾರಲೌಕಿಕ । ದುಪಹತಿ ಪ್ರತಿಭಟರ ನಗೆಸದ್ಭಟಪರಿತ್ಯಾಗ ॥ ಕೃಪಣತನ ದುಷ್ಕೀರ್ತಿ ಭುಜಬಲ । ದಪದಶಾದುರ್ಭೇದವೀಭೂ । ಮಿಪರ ಮರಳಿಚಿತ್ತೇನನೆಂಬೆನು ರಾಯ ಕೇಳೆಂದ॥೨೩॥ ಕರೆದರೊಬ್ಬರನೊಬ್ಬರುರೆ ಧಿ । ಕ್ಕರಿಸಿದರು ತಮ್ಮೊಬ್ಬರೊಬ್ಬರ ॥ ಬಿರುದ ಹಳಿದರು ಬೈದರಪಮಾನಾನುತಾಪದಲಿ ॥ ತಿರುಗಿ ಹೇಳಾರಾವುತರಥ । ಕ್ಕರಿಗಜಾರೋಹಕರನೆಂದ । ಬ್ಬರಿಸಿ ಚೌರಿಯ ಬೀಸಿ ಮರಳಿತು ಭೂಪತಿವ್ರಾತ ॥ ೨೪ ॥ ವಾರುವಂಗಳ ಬಿಗುಹನೇರಿಸಿ । ವಾರಣಾಘದಗುಳವ ಜೋಡಿಸಿ। ತೇರುಗಳ ಕೀಲಚ್ಚುಕೂಬರಯುಗವನಾರೈದು ॥ ವೀರಪಣವನು ರಚಿಸಿ ಕಂಕಣ । ಧಾರವನು ಕಟ್ಟೈದರು ಸಂಗರ । ವೀರಸಿರಿಯ ವಿವಾಹಸಮಯದ ಸೌಮನಸ್ಯದಲಿ ॥ ೨೫ ॥ ಧೂಪಿಸಿದಬಿಳಿದೊಗಲನು

ಟ್ಟನು । ಲೇಪನಂಗಳ ಘೂಸಿ ಮಧುರಾ । ಳಾಪದಲಿ ಬೋಳೈಸಿ ಸಾರಥಿರಥಹಯಾದಿಗಳ ॥ ಭೂಪ ನೀರಣಯಜ್ಞಮುಖದಲಿ । ಚಾಪಘನಪೂರ್ಣಾಹುತಿಯಲಾ । ಶ್ರೀಪತಿಯ ಸಾಯುಜ್ಯವೆನುತಿದಿರಾಯ್ತು ನೃಪಕಟಕ ॥ ೨೬ ॥ ಅರಿಯಬಹುದ್ಯೆ ಭಾವವ್ಯೆದುನ । ಮೆರೆ ಭುಜಾಟೋಪವನು ಹಿಂದಣಿ। ಕೊರತೆಯನು ಕಳೆ ಮಗನೆ ಬೊಪ್ಪಕುಲಕ್ರಮಾಗತವ ॥ ಮರೆಯದಿರೆ ಮುಂಗೈತನಕೆ ತಾ । ನಿದುವೆ ತಾ ಮುನ್ನೆಂದು ತಮ್ಮೊಳು । ಜರೆದರೊಡಹುಟ್ಟಿದರು ಬಾಂಧವಮಿತ್ರಭೂಭುಜರ ॥ ೨೭ ॥ ನೂಕಿತೊಂದೇವಾಘೆಯಲಿ ಹಯ । ನಾಲ್ಕುಸಾವಿರರಥದ ಜೋಡಿನ । ಜೋಕೆ ಜರಿದುದು ಮೂರುಸಾವಿರರಾಜಪುತ್ರರಲಿ ॥ ತೋಕುವಂಬಿನ ಜೋಕೆ ಜೋಡಿನೊ । ಳೌಕಿದವು ಸಾವಿರಮದೇಭಾ । ನೀಕ ಬೊಬ್ಬೆಯಲಗ್ಗಿಕು ಲಕ್ಷಪಾಯಿದಳ ॥೨೮॥ ಸುರಿದುದಂಬಿನಸೋನೆ ರಥಿಕರ। ಕರಿಘಟೆಯ ಧಟ್ಟಿಂವಕಕ್ಕಡೆ।ಪರಶುಶೂಲಮುಸುಂಡಿಶಲ್ಯಹಸಬಳಶಕ್ತಿಗಳು ॥ ಅರಿಬಲಾಬ್ಧಿಯ ಬೀಸಿದವು ತತ್ತುರಗರಥವನು ಬೀಸಿದವುಮದ।ಕರಿಗಳಿಕ್ಕಡಿಗಾಯಕೊದಗಿತು ರಾಯರಾವುತರು ॥೨೯॥ ನೆರೆ ಪರಿಚ್ಛೇದಿಸಿವಬಲವು । ಕ್ಕುರಿಕಿತೋ ನಿಜಸೈನ್ಯಸಾಗರ।ಹರದುದೋ ಬಲುಗಲಿಗಳೆದೆಗಳಕಿಚ್ಚು ತಗ್ಗಿತಲ॥ ಮುರಿದು ಬರುತಿದೆ ಸೃಂಜಯರು ಕೈಮರೆದಿರೇ ಪಾಂಚಾಲಭಟರೆಂ । ದೊರಲಿದರು ಮಂತ್ರಿಗಳು ರಾಯನದಳದ ಬಳಸಿನಲಿ॥೩೦॥ ಅರಸ ಕೇಳು ಯುಧಿಷ್ಠಿರನ ಮೇಲುರವಣಿಸಿತೀಸೇನೆ ಭೀಮನ।ಬಿರುದ ತಡೆವುತ ಸಾವಿರಾನೆಗಳೊಂದುಬಾಹೆಯಲಿ ॥ ಅರರೆ ರಾವುತ್ತೆನುತ ಕವಿದುದು । ತುರಗಸಾವಿರ ನಕುಲಸಹದೇ । ವರಿಗೆ ಸಾತ್ಯಕಿಗಾಗಿ ಬಿಟ್ಟನು ರಥವನಾದ್ರೋಣಿ ॥ ೩೧ ॥ ರಾಯದಳದಲಿ ಚಾತುರಂಗದ । ಬೀಯಬೆದರಿಸಿ ತದಟರನುಬಲು । ನಾಯಕರಿಗಿದಿರೊಡ್ಡಿದರು ಕೃಪಭೋಜಗೌತಮರು ॥ ಆಯತಿಕೆ ರಣವೆನುತ ಪಾಂಡವ । ರಾಯ ಹೊಯ್ದನು ಬಳಿಕಲಾಕ । ರ್ಣಾಯತಾಸ್ತ್ರನು ಕಂಡನರ್ಜುನನೀಮಹಾಬಲವ ॥೩೨॥ ಮೇಲುಲೋಕವ ಬಯಸಿ ಕುರುಬಲ । ಮೇಲೆ ಬಿದ್ದುದು ಜೀಯ ಜಡಿದು ನೃ । ಪಾಲನೇಕಾಂಗದಲಿ ಹೊಕ್ಕನು ಹೊದರ ಹೊರೆಗಡಿದು ॥ ಮೇಲುದಾಯದಲವನಿಪನ ಸಂ । ಭಾವಿಸುವೆನೆನೆನಗುತ ಲಕ್ಷ್ಮೀಲೋಲಚಪ್ಪರಿಸಿದನು ತೇಜಿಯ ತಿರುಹಿ ರಿಪುಬಲಕೆ ॥ ೩೩ ॥ ಅರಸ ಕೇಳೈ ನಿಮಿಷದಲಿ ನೃಪ । ವರನ ರಥದಿಂ ಮುಂದೆ ಪಾರ್ಥನ । ದಿರುವಿನಬ್ಬರ ಕೇಳಲಾದುದು ಕಳನ ಚೌಕದಲಿ ॥ ಅರರೆ ಧೊರೆಯೋ ಕೊಳ್ಳವನಕ್ಕೆ । ಮರೆಯದಿರಿಕುರುಧರಣಿಪನ ಹಗೆ । ಹರಿಯಲೆಂದುರವಣಿಸಿ ಹೊಯ್ದುದು ರಿಪುಭಟವ್ರಾತ ॥ ೩೪ ॥ ಮೋಹಿದವು ಬರಿಕೈಯ ಗಜಘಟೆಯ । ವ್ಯೂಹಬಿಡದೌಕಿದವು ವಂಶ । ದ್ರೋಹಿಸಿಲುಕನೆನುತ ತಡೆದರು ರಥಿಕರೆಡಬಲನ ॥ ಗಾಹಿಸಿದದೂಹತ್ತಿಲೌಡಿಯ । ರಾವುತರು ಕಟ್ಟಳವಿಯಲಿವು। ತ್ಸಾಹಿಸುತಲೌಕಿತು ಪದಾತಿಧನಂಜಯನರಥವ ॥ ೩೫ ॥ ಏನನೆಂಬೆನು ಜೀಯ ಕರುಬಲ । ದಾನೆಗಳ ವಿಕ್ರಮವನತಿರಥ। ರೇನನಿಲುವರು ಕೆಲಬರೀಚತುರಂಗದುಪಹತಿಗೆ ॥ ಭಾನುಮಂಡಲವಧಿಕತಿಮಿರಾಂ। ಭೋನಿಧಿಯನೊಗ್ಗಡಿತಗೊಂಬವೊ । ಲಾನಿರಂತರರಥದ ಘಟ್ಟಣೆ ಧೂಳಿಪಟವಾಯ್ತು ॥ ೩೬ ॥ ಮೆಟ್ಟಂಡಿಯ ಹಿಡಿಪಾನೆಗಳನೆಡ । ವಂಕಕೌಕಿದರಥಚಯವ ಬಲ । ವಂಕಕೋಡಿವರಾವುತರನುಬ್ಬೆ ಸ್ಥಪಾಪ್ಪಳದ ॥ ಸಂಕೆಯನು ನಾಕಾಣೆ ಬಲನಡ । ವಂಕವನು ತರಿದೊಟ್ಟಿದನು ಮಾ । ರಾಂಕ ನಿಲುವುದೆ ಪಾರ್ಥ ಮುನಿದರೆ ನೃಪತಿ ಕೇಳೆಂದ ॥ ೩೭ ॥ ಉಡಿಯೆ ಮೋರೆಗಳಿರದೆಜೋಧರ । ಕೊಡಹಿ

ಹಾಯ್ದುವು ದಂತಿಘಟೆ ಖುರ| ಕಡಿವಡೆದು ಕುದುರೆಗಳು ಹರಿದವು ಹಾಯ್ಕಿ ರಾವುತರೆ|| ಮಡಿಯೆ ಸಾರ ಥಿ ಮುಗ್ಗಿದವು ರಥ । ನಡೆದುಕಾದಿ ಮಹಾರಥರು ಮೆದೆ । ಗೆಡದುದುಳಿದಪದಾತಿ ಸಂಖ್ಯೆಯನರಿಂಯೆ ನಾನೆಂದ ॥ ೩೮ ॥ ಕರಿಘಟೆಗಳೈನೂರು ರಥಸಾ । ವಿರದಮುನ್ನೂರೆರಡು ಸಾವಿರ । ತುರಗದಳವೆಂ ಭತ್ತುಸಾವಿರ ವಿಗಡಪಾಳೆಯದ ॥ ತೆರಳಿತೆಂತಕಪುರಕೆ ಪುನರಪಿ । ತುರಗಸಾವಿರನೂರು ರಥಮದ। ಕರಿಗಳಿನ್ನೂರೈದುಸಾವಿರವಾಯ್ತು ಪಾಯದಳ ॥ ೩೯ ॥ ಮತ್ತೆ ಮೇಲೊಡೆಗವಿದು ನೂರರು । ವ ತ್ತು ಗಜರಥಯೂಥ ನೂರಿ । ಪ್ಪತ್ತು ಮುನ್ನೂರಶ್ವಚಯ ಸಾವಿರದನಾನೂರು ॥ ಪತ್ತಿ ಮರಳೈ ವತ್ತುಗಜ ಮೂ । ವತ್ತುರಥವಿನ್ನೂರುಹಯಮೆರು । ವತ್ತುನಾಸೂರಿಂದ ಮೆರೆಯಿತ್ತುಳಿದಪಾಯ ದಳ ॥ ೪೦ ॥ ಬಿರುದುಪಾಡಿನ ಭಾಷೆಗಳ ವಿ । ಸ್ತರದ ನುಡಿಗಳ ರಾಜವರ್ಗದ । ಮರುಳದಲೆಗಳ ಕಾಣೆನರ್ಜುನನಾಹವಾಗ್ರದಲಿ ॥ ಹರಿವೆರೆಕುತದ ತಳಿರ ಖಂಡದ ಸಿರದ ಹರಹಿನ ಕುಣಿವ ಮುಂಡಡ । ತುರಗಪಯದಳ ಗಜದಹೆಣಮಯವಾಯ್ತು ರಣಭೂಮಿ ॥ ೪೧ ॥ ಮುರಿದುದೆಡಬಲವಂಕ ಪಾರ್ಥ ನ । ತರುಬಿದನು ನಿನ್ನಾತ ಸೈರಿಸಿ । ಹರಿದಳವ ಕೂಡಿದನು ಕೈಮಾಡಿದನು ಕಾತರಿಸಿ ॥ ಒರಲಿದವು ಬಹುವಿಧದವಾದ್ಯದ । ಬಿರುದನಿಗಳುಬ್ಬೆದ್ದುಮೊರಿಯ । ಸೆರಗ ಹಿಡಿದನು ಕೌರವೇಶ್ವರನರ್ಜುನನ ಕಣ ಕೆ ॥ ೪೨ ॥ ಕೊಲುವುದನುಚಿತವೆಂದುಭೀಮನ । ಕಳೆದಮಿಾಸಲು ನಿನ್ನತನು ನೀ । ನೊಲಿದಪರಿಯಿಂ ದೆಸು ವಿಭಾಡಿಸು ರಚಿಸು ಭಾಷೆಗಳ||ಅಳುಕಿದೆವು ನಿಮಗೆಂದು ರಾಯನ| ಬಳಿಯ ಜೋದರ ರಾವುತರ ತಲೆ । ಗಳ ಪದಾತಿಯನಿಕ್ಕಿದನು ಸೆಕ್ಕಿದನು ಸರಳುಗಳ ॥ ೪೩ ॥ ಜನಪ ಕೇಳೈ ನಿನ್ನ ಮಗನ । ರ್ಜುನ ಸನೆಚ್ಚನು ಫಲುಗುಣಾಸ್ತ್ರವೆ| ಚಿನಗಡಿದು ಮರಳೆಚ್ಚು ಪಾರ್ಥನೊಳೆರವ ತೋರಿಸಿದ ॥ ಮನದ ಮ ದ ಮಿಾರಿತು ಕಿರೀಟಿಯ| ಮೊನೆಗಣೆಯ ಮನ್ನಿಸದೆ ದುರ್ಯೋ । ಧನನು ದುವ್ವಾಳಿಸಿದನವನೀಪತಿಯ ಮೋಹರಕೆ ॥ ೪೪ ॥ ಅರಸುಮೋಹರ ಸಿಲುಕಿದುದು ದೊರೆ ಬೆರಸಿ ಹೊಯ್ದನು ಬೇಹಸುಭಟರು। ಮರಳಿಯೆನೆ ವ[illegible]ದರ[illegible]ಪ್ರಂಚದ್ರುಪದೀಸುತರು ॥ ಧರಣಿಪತಿಯು ವಿಭಾಡಿಗೊಪ್ಪಿಸಿ । ತಿರುವನೆನು ತುಬ್ಬೆದ್ದುಪಾರ್ಥ[illegible] ಪ್ರಬುದ್ಧಕಸೃಂಜಯರು ರೆಂಜಿಸಿತು ಚೂಣಿಯಲಿ ॥ ೪೫ ॥ ಇತ್ತ ಪಡಿ ಬಲವಾಗಿ ನಿಲ್ಲ[illegible] ಗಜಘಟೆ ಕೌರವೇಂದ್ರನ । ತೆತ್ತಿಗರು ತೂಳಿದರು ಪಾಂಚಾಲಪ್ರಬುದ್ಧಕ ರು ॥ ಹತ್ತುಸಾ[illegible]ಯುದಳ ಹೊಗ । ರೆತ್ತಿಮಿಂಚಿನ ಹೊಗರಿನಂತಿರೆ| ಮುತ್ತಿತವನೀಪತಿಯುಮೋ ಹರವೆರಡುಬಾಹೆಯಲಿ ॥ ೪೬ ॥ ನೂರುರಥದಲಿ ಬಲುಗುದುರೆ ನಾ । ನೂರರಲಿ ಕುರುರಾಯ ಸೂ ತಿಯ| ಲೇರಿದನು ಧರ್ಮಜನ ದಳ ಸುಗ್ಗಾಯ್ತು ನಿಮಿಷದಲಿ ॥ ಮಿಾರಿದವು ಗಜಘಟೆಗಳಾವೆಡೆ|ತೋ ರು ದೊರೆಗಳೆನಸುತ ಬೊಬ್ಬಿರಿ । ದೇರಿಸಿದರರಿಭಟರ ನೃಪತಿಗೆ ಜೋದರಂಬುಗಳು ॥ ೪೭ ॥ ಏನ ಹೇಳುವೆನವನಿಪತಿ ಯುಮ । ಸೂನುವಿನ ಸಾಮರ್ಥ್ಯವನು ನಿ । ನ್ನಾನೆಗಳನಗ್ಗಳಿಯರಾವುತ ರಥಪ ದಾತಿಗಳ ॥ ಭಾನುಬಿಂಬವ ತೆಗೆವತಮದವಿ । ತಾನದಂತಿರೆ ವಿರಥರಾಯ್ತು ತ । ದಾನುಗತಶರಜಾಲದ ಸನದಕಾಲವಾಯ್ತೆಂದ ॥ ೪೮ ॥ ಆಳ ಕೊಂದನು ನೂರ ಪುನರಪಿ । ಸೀಳಿದನು ಮುಂನೂರ ಕುದುರೆ ಮೊನೆ| ಬೋಳೆಯಂಬಿಗೆ ಬೀರಿದನು ನಾಲ್ಕೆರಡುಸಾವಿರವ ॥ ಮೇಲೆ ನಾಲ್ಸಾವಿರದ ಸವಡಿಯ । ಸೀಳಿ ಸಿದನಿನ್ನೂರುಕುದುರೆಗೆ । ಕಾಲನೂರಲಿ ಲಾಯ ನೀಡಿತು ಧಾಯ ಕೇಳೆಂದ ॥ ೪೯ ॥ ಚೆಲ್ಲಿದವು [illegible]

ಗಾಲಿ ಮುರಿದವು । ಗೆಲ್ಲಗೆಡದವು ಕೂಬರಂಗಳ । ನಲ್ಲಿ ಕಾಣೆನು ಕೊಚ್ಚಿದನು ಚಿನಕಡಿಯ ಬಿಲ್ಲುಗಳ ॥ ಎಲ್ಲಿಯವು ರಥವಾಜಿಗಳು ತಾ । ವೆಲ್ಲಿಯವು ಸಾವಿರಿಯೆವಾಗಲಿ । ಗಲ್ಲಿದರೆ ಕುರುಳಿಂಗೆ ಹಾಯ್ದರು ಸುರರ ಸೂಳೆಯರು ॥ ೫೦ ॥ ಅಳಿದಗಜನಾನೂರು ಕುದುರೆಗ। ಳಳಿದವರಸನ ಶರಹತಿಗೆ ಮುಂ। ಮು ಳಿತವಾದುದು ತೇರುಸಾವಿರ ವಿಗಡಪಾಯದಳ ॥ ಕಳಚಿ ಕೆಡೆದುದು ನೂರು ನೃಪರ । ಗ್ಗಳೆಯುತನವಲಿ ರಾಯರಲಿ ಹೆ । ಕ್ಕಳಿಸಿದನು ಕಳವಳಿಸಿದನು ಕುರುರಾಯ ಖಾತಿಯಲಿ ॥ ೫೧ ॥ ಜೋಡಿಸಿದಸಾವಿರ ಗಜಂಗಳ । ನೀಡಿರಿದರಂಕುಶದಿ ನೆತ್ತಿಯ । ತೋಡಿಬಿಟ್ಟರು ನೃಪನ ಮತದಲಿ ದೊರೆಯ ಸಾಮುಖ ಕೆ ॥ ರೂಢಿಸುವಬರಿಕೈಯುಪರಿಘದ । ಲೌಡಿಗಳ ಪಚ್ಚೆಯದಲೊಬ್ಬುಳಿ । ಗೂಡಿ ತೂಳಿದವಾನೆಗಳು ಯಮಸುತನ ಸಂಮುಖಕೆ ॥ ೫೨ ॥ ಎಲೆಲೆಭೂಪತಿ ಸಿಕ್ಕಿದನು ಗಜ । ದಳದ ಭಾರಣೆ ಬಲುಹೆನುತ ಬಲ । ಕಳವಳಿಸೆ ಕೇಳಿದನಲ್ಲಿ ಕಲಿಭೀಮನಾಚೆಯಲಿ ॥ ಪ್ರಳಯವಿಪಿನದ ಶಿಖಿಯ ಡಾವರ। ದೊಳಗೆ ಶ್ರಮಮಾಡಿದನೆನಲು ಮಿಗೆ। ಮೊಳಗಿ ಮಂದಿಯನಿಕ್ಕಿ ಮಲೆತನು ಸಿಂಹನಾದದಲಿ ॥ ೫೩ ॥ ಚೆಲ್ಲಿದವು ಗಜಯೂಥವಪ್ರತಿ । ಮಲ್ಲಭೀಮನ ಗದೆಯಘಾತಿಯ । ಘಲ್ಲಣೆಗೆ ವೆಂಟಣಿಸಿದಾನೆಗಳೆಲ್ಲ ಚೆಲ್ಲಿದವು ॥ ಸೆಲ್ಲಹದಮಳೆಗರೆದು ಝಾಡಿಯ । ಝಲ್ಲರಿಯ ತುರುಗಿದರು ಗಗನಕೆ । ಬಿಲ್ಲಜಂತ್ರದ ನಾಳಿಯಂಬಿನ ಸರಳಸಾರದಲಿ ॥ ೫೪ ॥ ಅವನಿಪನ ಹಿಂದಿಕ್ಕಿ ಗಜಯೂ । ಥವವಿಭಾಡಿಸಿ ಹಿಂಡ ಕೆಡಹಿದ । ನವಗ ಡಿಸಿದನು ಹಾರಲೂದಿದನೊದೆದು ಬೊಬ್ಬಿರಿದ ॥ ತಿವಿದನಣಸಿನ ಮೋರುಮೊನೆಯಲಿ। ಸವಡಿಯಾನೆಯ ನೆತ್ತಿದನು ಬಲ । ಬವರಿಯಲಿ ಯೆಡಬವರಿಯಲಿ ಸವರಿದನು ಕಲಿಭೀಮ ॥ ೫೫ ॥ ಒರಲಿ ತಿವಿದನು ಕರಿಯ ಬರಿಕೈ । ಮುರಿಯಲೆಲುಗಳನೊದೆದುದಾಡೆಯ । ತಿರುಹಿ ಕಿತ್ತನು ಸೆಕ್ಕಿದನು ಬೆನ್ನಿನಲಿ ಬಲು ಗದೆಯ ॥ ಜರೆದನಾರೋಹಕರ ತಲೆಗಳ । ತರಿದು ಬಿಸುಟನು ಗಜಘಟೆಯ ಥ । ಟ್ಟೊರಗಿದವು ದಡಿ ಸಹಿತ ನವರುಧಿರಾಂಬುಪೂರದಲಿ॥೫೬॥ಗುಳವನುಡಿದಾರೋಹಕರ ಮುಂ । ದಲೆಯ ಸೆಳೆದೊಡ ಮೆ ಟ್ಟಿದನು ಮಂ । ಡಳಿಸಿದೊಡ್ಡಿನಮೇಲೆ ಹಾಯ್ದನು ಹೊಯ್ದನುರವಣಿ ... ॥ ಕಳಚಿದನು ದಾಡೆಗಳಭ ರಿಕೈ । ಗಳನು ತುಂಡಿಸಿ ನಾಳಹಸ್ತವ । ಸೆಳೆದು ಕೆಡಹಿದನಾನೆಗಳ ಕೇಳ್ಪೆ ... ಘಾನದಲಿ ॥ ೫೭ ॥ ಕೋಡ ಕಿತ್ತನು ನೂರುಗಜವ ಮಿ। ಭಾಡಿಸಿದನಿನ್ನೂರನಡಹಾ। ಯ್ದೋಡ... ದಲಿ ॥ ... ರಾನೆಭೀಮನ ಗದೆ ಯ ಗಾಯದಲಿ ॥ ಝಾಡಿಗೆಡೆದವು ಮೋರುಮಗ್ಗುಲ । ನೀಡಿದವು ನಾನೂರು ಹೊಯ್ ... । ಕೇಡುಗೊಂ ಡವು ನೂರು ಭೀಮನ ಗದೆಯ ಹೊಯ್ಲಿನಲಿ ॥ ೫೮ ॥ ಧರಣಿಪತಿ ಕೇಳ್ಭೀಮಸೇನನ । ಧರಧುರದ ಪ ಕ್ಕಾಳದಲಿ ಸ। ಮ್ಮರಸ ನಿಂದನು ಕಾದಿದನು ನೂರಾನೆಯಲಿ ಮಲೆತು ॥ ಸರಳಸಾರದಲನಿಲಜನ ರಥ। ತುರಗವನು ಸಾರಥಿಯನಾತನ । ಭರವಸವ ನಿಲಿಸಿದನು ನಿಮಿಷಾರ್ಧದಲಿ ಕುರುರಾಯ ॥ ೫೯ ॥ ಒ ಡೆದು ರಥವನು ಧರೆಗೆ ಧುಮಿಮಿ । ಕ್ಕಿದನು ಕೌರವರಾಯ ರಥವೇ। ರಿದೆಯಲಾ ಕಲಿಯಾಗು ಪಾಲಿಸದಿ ಕುಟಿಲಾಯುನವ ॥ ಕದನದಲಿ ರೌದ್ರಾಹವದ ಕೋ । ವಿದನಲೇ ಕೊಳ್ಳೆನುತ ಕರಿಗಳ । ಕದರಿದನು ಕಲಿಕೋದರಂಬಿನ ಸರಿಯ ಸ್ಯಂಸುತ ॥ ೬೦ ॥ ಏನಹೇಳುವೆನವನಿಪನ ಮುದ।ದಾನೆ ಮುಂದುದು ಭೀ ಮಸೇನನು।ವೈಸತ್ತೇಯನ ಕರಿಗಳೋ ಕಾಳೋರಗನ ದಳವೋ ॥ ಮೌನವಿಧಿ ಮುರಿಪರದಪಸ್ಯ ವೈ । ಕಾ ನುಬಂಧದ ಬೇಗುದಿಯ ದು । ಮ್ಮಾನ ದಳವೇರಿದುದು ಹಾರಿತು ವಾಸಿ ಕುರುಪತಿಯ ॥ ೬೧ ॥

ನೂರುಗಜವಕ್ಕಾಡಲವನಿಪ । ನೇರಿದನು ವಾರುವವನೆಸಡದಲಿ । ಜಾರಿದನು ಸೂರಿಯಲಿ ದುವ್ವಾಳಿಸಿ ತು ರಂಗವುವ ॥ ಆರುಸಾವಿರಕುದ್ದುರೆ ರಥವಿ । ನ್ನೂರು ಗಜಘಟೆ ನೂರು ಮೂವ । ತ್ತಾರುಸಾವಿ ರಪಾಯುದಳದಲಿ ಬಂದನಾಶಕುನಿ ॥೬೨॥ ಶಕುನಿ ಕಂಡನು ಕೌರವೇಂದ್ರನ । ನಕಟ ನೀನೇಕಾಂಗದಲಿ ಬಾ । ಳಿಕೆಗೆ ಬಂದ್ಯೆ ಗರುವ ಗುರುಸುತಭೋಜಗೌತಮರು ॥ ಸಕಲಬಲವೇನಾಯ್ತು ಸಂಶಪ್ತಕರು ನಿನ್ನಯ ಮೂಲಬಲವಿದೆ । ವಿಕಳನಾಗದಿರೆಂದು ಸಂತೈಸಿದನು ಕುರುಪತಿಯ ॥ ೬೩ ॥ ದಳಪ ತಿಯು ಪವಡಿಸಿದನರಸನ । ಸುಳಿವು ಸಿಲುಕಿತು ಭಯದಬಲೆಯಲಿ | ಮೊಳಗುತಿದೆ ನಿಸ್ಸಾಳ ಸುಮ್ಮಾನ ದಲಿ ರಿಪುಭಟರ ॥ ಉಳಿದರೋ ಗುರುಸೂನುಕೃಪರೇ । ನಳಿದರೋ ಪಾಳೆಯದೊಳಗೆ ರಥ । ವಿಳಿದ ರೋ ತಾವೆನುತ ಮಿಗೆ ಚಿಂತಿಸಿತು ಕುರುಸೇನೆ ॥೬೪॥ ಕೂಡೆ ಹರಿಹಂಚಾದಸುಭಟರು । ಕೂಡಿಕೊಂ ಡರು ನೊಂದು ನಸಿದವ ॥ ರೋಡಿದವರೊಗ್ಗಾಯ್ತು ಕುರುರಾಯನ ಪರೋಕ್ಷದಲಿ ॥ ನೋಡಲ ಹುದಾಹವದೊಳಗೆ ಕೈ । ಮಾಡಿದವರಮರಾಂಗನೆಯರೊಡ । ಗೂಡುವುದು ಮತವೆಂದು ಕವಿದುದು ಮತ್ತೆ ಕುರುಸೇನೆ ॥೬೫॥ ಬಿಡದಲಾ ಕುರುಸೇನೆ ಹಕ್ಕಲು ಗಡಿಯ ಭಟರೊಗ್ಗಾಯ್ತಲಾ ನೃಪ । ಮ ಡಿದನೋ ಬಳಲಿದನೊಮಿಗೆ ಪೂರಾಯಗಾಯದಲಿ ॥ ತಡೆಯದೀಕ್ಷಿಸೆನುತ್ತೆ ಕೌರವ । ರೊಡೆಯನಾ ವೆಡೆ ನೋಡುನೋಡೆಂ । ದೊಡನೊಡನೆ ಪವಮಾನಸುತನರಸಿದನು ಕುರುಪತಿಯ ॥೬೬॥ ಅರಸ ಕೇ ಳ್ಳೆ ಕೌರವೇಂದ್ರನ । ನರಸುತರ್ಜನಭೀಮಸಾತ್ಯಕಿ। ಧರಣಿಪತಿಸಹದೇವನಕುಲರು ಕೂಡೆ ಕಳನೊಳಗೆ॥ ತಿರುಗಿದರು ಬಳಿಕಿತ್ತಲಾಮೋ । ಹರವ ಧೃಷ್ಟದ್ಯುಮ್ನ ಸೃಂಜಯ । ರೊರಸಿದರು ನಿಶ್ಶೇಷಕೌರವನೃ ಪ ಚತುರ್ಬಲವ ॥ ೬೭ ॥ ಧರಣಿಪತಿ ಕೇಳಿನ್ನುಮೇಲಣ । ಧುರದವೃತ್ತಾಂತವನು ಕುರುಪತಿ। ಯಿರ ವನರಿಯೆನು ಕಂಡುಬಹೆನೆನೆ ನೇಮವೇ ಯೆನಗೆ ॥ ಗುರುಸುತನು ಕೃಪಭೋಜಶಕುನಿಗ । ಳರಸನನು ಪರಿವೇಷ್ಟಿಸಿದರೆಂ । ದರಿದು ಬಹೆನೆನೆ ಕಳುಹಿದನು ಧೃತರಾಷ್ಟ್ರ ಸಂಜಯನ॥ ... ॥೬೮॥

ಅಂತು ಸಂಧಿ ೧ ಕ್ಕೆ ಪದ ೬೮ ಕ್ಕಂ ಮಂಗಳಮಸ್ತು.

## ಎರಡನೆಯ ಸಂಧಿ.

॥ ಸೂಚನೆ ॥ ಸಕಲಬಲ ನುಗ್ಗಾಯ್ತುಸಂಶ । ಪ್ತಕರು ಮಡಿದರು ಪಾರ್ಥಶರದಲಿ | ಶಕುನಿಯನು ಸೀಳಿದನು ಸಂಗ್ರಾಮದಲಿ ಸಹದೇವ ||

॥ ಪದ ॥ ಕೇಳು ಜನಮೇಜಯಧರಿತ್ರೀ । ಪಾಲ ಸಂಜಯ ಬಂದು ಕುರುಭೂ । ಪಾಲಕನನರ ಸಿದನು ಸಂಗರರಂಗಭೂಮಿಯಲಿ ॥ ಮೇಲುಸುಯ್ದಾನದ ತುರಂಗಮ । ಜಾಲಸಹಿತಗಲದಲಿ ಕುರು ಭೂ । ಪಾಲನಾವೆಡೆಯೆನುತ ಬೆಸಗೊಳುತಲ್ಲಿಗೈತಂದ ॥ ೧ ॥ ವಂದಿಗಳ ನಿಸ್ಸಾಳಬಡಿಕರ । ಮಂದಿ ಹಡಪಿಗಬಾಹಿಸೂತರ । ಸಂದಣಿಗಳಂ ನೂಕಿ ಹಯಗಜಸಂವಿದಾಯಕರು ॥ ನಿಂದುದಾಸಂಖ್ಯಾತಸನ್ನಿಟ ರ । ನೆಂದು ಸಂಜಯ ಕರೆದು ಕೇಳಿದ । ನಿಂದುಕುಲಸಂಭವನ ಕಂಡಿರೆ ಕೌರವೇಶ್ವರನ ॥ ೨ ॥ ಕೂಡೆ

ಸಂಜಯನರಸಿದನು ಪಯ । ಪಾಡಿನಲಿ ನಾನೂರುಕುದುರೆಯು । ಕೂಡಿ ಕೌರವನೃಪನ ಅಣಿಯಾದ ಕಳನ ಚೌಕದಲಿ ॥ ನೋಡುತಿರೆ ಸಾತ್ಯಕಿ ಚತುರ್ಬಲ । ಗೂಡಿ ಕವಿದನು ಹಯಬಲವ ಹುಡಿ । ಮಾಡಿದನು ನಾನೂರ ಕೊಂದನು ಸರಳ ಸಾರದಲಿ ॥ ೩ ॥ ಹಿಡಿದು ಸಂಜಯನನು ವಿಭಾಡಿಸಿ । ಕೆಡಹಿದನು ಬಲು ರಾವುತರನವ । ಗಡವ ಕೇಳಿದು ದ್ರೋಣಸುತಕೃತವರ್ಮಗೌತಮರು ॥ ಘಡಘಡಿಲವೋ ಸಂಜಯನ ಬಿಡು । ಬಿಡು ಮದೀಯಮಹಾಶರಕೆ ತಲೆ। ಗೊಡುವೊಡಿದಿರಾಗೆನುತ ತರುಬಿದರಿವರು ಸಾತ್ಯಕಿಯ ॥೪॥ ದ್ರೋಣಸುತ ಕುರುಪತಿಯು ಕದನಕೆ। ಹೂಣಿಗರು ಕೃತವರ್ಮಕರು ನೆರೆ । ಬಾಣವಿದ್ಯೆಯ ಬೀರಿ ಬಿಡಿಸುವರಿವರು ಸಂಜಯನ ॥ ಕಾಣಬಹುದಂತಿರಲಿ ನಮಗೀ । ಕೇಣದಲಿ ಫಲವಿಲ್ಲ ಕೃಪಯೆ । ನ್ನಾಣೆನೀ ಮರಳೆಂದು ಸಾತ್ಯಕಿ ಸುರಿದನಂಬುಗಳ ॥ ೫ ॥ ಕೋಡ ಕೈಯಲಿ ತಿರುಗಿ ಕೃಪ ಕೈ। ಮಾಡಿದನು ಕೃತವರ್ಮನೆಸುಗೆಯ । ತೋಡುಬೀಡಿನ ಭರವ ಬಲ್ಲವರಾರು ಸಮರದಲಿ ॥ ನೋಡಲೀತನ ಗರುಡಿಯಲಿ ಶ್ರಮ । ಮಾಡಿದವರೇ ಮೂರುಜಗವ ವಿ । ಭಾಡಿಸುವಿರೆನೆ ಪೊಗಳ್ವರಾರೀದ್ರೋಣನಂದನನ ॥ ೬ ॥ ಎಚ್ಚನಶ್ವತ್ಥಾಮನಾಕೃಪ । ನೆಚ್ಚನಾಕೃತವರ್ಮಕನು ಕವಿ । ದೆಚ್ಚನೀಶರಜಾಲ ಜಡಿದವು ಕಿಡಿಯಗಡಣದಲಿ ॥ ಬೆಚ್ಚದನೆ ಬೆದರಿದನೆ ಕೈಕೊಂಡೆಚ್ಚ ಸಾತ್ಯಕಿ ರಿಪುಶರಾಳಿಯ । ಕೊಚ್ಚಿದನು ಕೊಡಹಿದನು ಭಂಗಿಸಿ ಸಲೆ ವಿಭಾಡಿಸಿದ ॥ ೭ ॥ ಎಲೆಲೆಸಾತ್ಯಕಿಯಾಹವದ ಭರ । ಬಲುಹೆನಲು ಸೃಂಜಯನು ಸೋಮಕ । ಬಲಶಿಖಂಡಿದ್ರುಪದನಂದನಪಾಂಡವಾತ್ಮಜರು ॥ ಚಲಪತಾಕೆಯ ವಿವಿಧವಾದ್ಯದ । ಕಳಕಳದ ಕೈದುಗಳ ಹೊಳಹಿನ । ತಿಳುಪ ಝಳಪಿಸೆ ಜೋಡಿಸಿತು ಸಾತ್ಯಕಿಯ ಬಳಸಿನಲಿ ॥ ೮ ॥ ಹರಿಯದಿಲ್ಲಿಯ ಬವರ ರಾಯನ । ನರಸಬೇಹುದು ಕುರುಪತಿಯ ಮುಂ । ದಿರಿದು ಮೆರವುದು ಕೀರ್ತಿ ನಿಷ್ಫಲವಿಲ್ಲಿ ತರರಚನೆ ॥ ಅರಿವೆವೀಸಾತ್ಯಕಿಯ ಸಮರದ । ಮುರುಕವನು ಬಳಿಕೆನುತ ಕೌರವ । ನರಸುತತ್ತಲು ತಿರುಗಿ ಕೃಪಕೃತವರ್ಮಗುರುಸುತರು ॥ ೯ ॥ ತೆರಳಿದರು ಗುರುನಂದನಾದಿಗ । ಳರಿನೃಪಾಲನ ಕಾಣೆನಾತನ । ನರಸಬೇಹುದು ಶಕುನಿದುರ್ಯೋಧನಸುಶರ್ಮಕರು॥ ದೊರೆಗಳಿದು ಪರಿವೇಷದು ಪಸಂಹರಣವೇ ಕರ್ತವ್ಯವಿದು ದುಸ್ತರಣಶ್ರಮಫಲ ಸಫಲವೆಂದನು ಧರ್ಮಸುತ ನಗುತ ॥ ೧೦ ॥ ಮಸಗಿದುದು ಪರಿವಾರ ಕೌರವ । ವಸುಮತೀಶ್ವರನಿರಿಕೆಯಲಿ ಸಲೆ । ಪಸರಿಸಿತು ಬಂದಿವರ ಹಿಂಡರು ಕಳನ ಮೂಲೆಯಲಿ ॥ ಮಿಸುಪಸಿಂಧದ ಸೀಗುರಿಯ ಝಳ । ಪಿಸುವೆಖಡ್ಗಸಿತಾತಪತ್ರ । ಪ್ರಸರದಲಿ ಹೊಳೆಹೊಳೆವತಕುನಿಯ ಬಹಳಮೋಹರವ ॥ ೧೧ ॥ ಆದೆ ಸುಯೋಧನನೊಡ್ಡಿನಸುದೂ। ರದಲಿ ಕವಿಕವಿಯೆನುತ ಧಾಳಿ । ಟ್ಟುದು ಚತುರ್ಬಲ ಭೀಮಪಾರ್ಥರ ರಥದಸೋಹಿನಲಿ ॥ ಒದವಿ ಹಳಚಿತು ಭಟರು ಭುಜಗ । ರ್ವದಲಿ ಗುರುವರ ಗಾಢಶೌರ್ಯದ । ಮದಕೆ ಮಡಮುರಿಯಾಯ್ತು ಸಿಲುಕಿತು ಮಾನಮೋನದಲಿ ॥ ೧೨ ॥ ಹೆಗಲ ಹಿರಿಯುಬ್ಬಣದ ಕೈತಳ । ಮುಗುಚಲಮ್ಮದು ವಾಘೆಯಲಿ ಕೈ । ಬಿಗಿದು ಡಂಕಣೆತೊಳಕಿನಲಿ ಮರನಾದವಂಘ್ರಿಗಳು ॥ ಬಗೆಯಮದ ಮಸುಳಿಸಿತು ಬಳಕೆಯ । ಬೆಗಡು ಹುದುವನೆಯಾಯ್ತು ಕೈನಂ । ಬುಗೆಗೆ ಮರಳಿದರೊಬ್ಬರೊಬ್ಬರು ರಾಯರಾವುತರು ॥ ೧೩ ॥ ಬಂದುದಾಮೋಹರ ಸಗಾಢದಿ । ನಿಂದುದೀಬಲ ಸೊಥಿಯಲಿ ಹಯ । ವೃಂದ ಬಿಟ್ಟವು ತೂಳಿದವು ಹೇರಾನೆ ಸರಿಸವಳಿ ॥ ನೊಂದುದಾಳೆಯ ಭಟರು ಗಾಯದ । ಲೊಂದಿತೀಚೆಯ ಭಟರು ವ್ಯಥೆಯದ । ಮುಂದಿ ಬಿದ್ದು

ದು ಚೂಣಿಯೆದ್ದುದು ಕಳನ ಚೌಕದಲಿ ॥ ೧೪ ॥ ಜಾರಿದನೆ ಕುರುಪತಿಯಕಟ ವೈ । ದೋರನೇ ನ ಮಗೂರುಗಳ ಕೊಡ। ಲಾರದೀಕಾಳಗವ ಕೊಟ್ಟನು ಮತ್ತೆ ಕೊಂಡನಲಾ॥ತೋರಿಸನೆ ಖಂಡೆಯದಸಿ ರಿ ವೈ। ದೋರಹೇಳಾ ಕರೆಯೆನುತ ತಲೆ।ದೋರಿದರು ಭೀಮಾರ್ಜುನರು ಸೌಬಲರ ಥಟ್ಟಿನಲಿ॥೧೫॥ ಫಡಫಡೆಲವೋ ಪಾರ್ಥಕುರುಪತಿ । ಯಡಗುವನೆ ನಿನ್ನಡಗತರಿದುಣ । ಬಡಿಸನೇ ಭೇತಾಳರಿಗೆ ವೈತಾಳಿಕನೆ ನೀನು ॥ ಗಡಬಡಿಸಿ ಪರರುನ್ನತಿಯ ಕೆಡೆ । ನುಡಿದು ಫಲುಗುಣನೇನೆನುತ ನರ। ತಡೆದನಂದು ಸುಶರ್ಮಸಂಶಸಪ್ತಕರ ದಳಸಹಿತ ॥ ೧೬ ॥ ಮುತ್ತಿದವು ರಥವೇಳನೂರರು। ವತ್ತುಹಯವೈನೂರುಸಾವಿರ । ಮತ್ತಗಜವಿಪ್ಪತ್ತುಸಾವಿರ ಪಾಯದಳಸಹಿತ ॥ ತೆತ್ತಿಸಿದವಂಬುರವಣಿಸಿ ದೂ । ಹತ್ತಿಹೊಳೆದವು ಸುರಗಿ ಝಳಪಿಸಿ । ಮತ್ತೆಬಲುಗೈದುಗಳು ರುಚಿ ವೇಢೈಸಿತರ್ಜುನನ ॥ ೧೭ ॥ ಶಕುನಿಸಹದೇವನನುಲೂಕನು । ನಕುಲನನು ಕುರುರಾಯನನುಜನು । ಚಕಿತಚಾಪನ ಕೆಣಕಿದನು ಪವಮಾನನಂದನನ ॥ ಅಕಟ ಫಲುಗುಣಾಯೆನುತ ಸಂಶ । ಪ್ತಕರು ಕವಿದರು ನೂರುಗಜದಲಿ । ಸಕಲಬಲಕೊತ್ತಾಗಿ ನಿಂದನು ಕೌರವರರಾಯ ॥ ೧೮ ॥ ಏರಿದರು ಸಂಶಪ್ತಕರು ಕೈ । ದೋರಿದರು ಫಲುಗುಣನ ಜೋಡಿನ।ಜೋರು ತಳಿತುದು ನೊಂದುದಡಿಗಡಿಗಾತನಶ್ವಚಯ ॥ ನೂರುಶರದಲಿ ಕಡಿದ ವಿಶಿಖವ । ನೂರರಲಿ ಬಳಿಸರಳ ಬಳಿಶರ । ಮೂರುಸಾವಿರದಿಂದ ಕಡಿದನು ಪಾರ್ಥನತಿಬಲರ ॥ ೧೯ ॥ ಕಡಿವಡೆದವೇಳ್ನೂರುರಥ ಮುರಿ।ವಡದವೈಷ್ಣೂರಶ್ವಚಯ ಮುಂ । ಗೆಡೆದವಂದ್ಯನೂರುಗಜವಿಪ್ಪತ್ತುಸಾವಿರದ ॥ ಕಡುಗಲಿಗಳುರುಳಿತು ತ್ರಿಗರ್ತರ।ಪಡೆ ಕುರುಕ್ಷೇತ್ರದಲಿ ಪಾರ್ಥನ । ಬಿಡದೆ ಬಳಲಿಸಿದನಿಬರಳಿದುದು ಕೇಳು ಕ್ಷಿತಿಪಾಲ ॥ ೨೦ ॥ ದೊರೆಗಳವರಲಿ ಸತ್ಯಧರ್ಮನು। ವರಸುಶರ್ಮನ ದ್ರೋಣಸಮರದೊ । ಳೆರಡನೆಯದಿವಸದಲಿ ರಚಿಸಿದನಗ್ನಿಸಾಕ್ಷಿಕವ ॥ ಧುರದಶಪಥದಲರ್ಜುನನ ಸಂ।ಗರಕೆ ಬೆದರಿಸಿದರು ಪರಾಕ್ರಮ । ಪರಿಣತರು ಪವಡಿಸಿದರಿಂದುಧನಂಜಯಾಸ್ತ್ರದಲಿ ॥ ೨೧ ॥ ತರಿದನಗ್ಗದಸತ್ಯಧರ್ಮನ । ಧುರವ ಸಂತೈಸುವತ್ರಿಗರ್ತರ। ದೊರೆಸುಶರ್ಮನನವನ ಸಹಭವಗೋತ್ರಬಾಂಧವರ॥ ಬರಸಿದನು ಕುರುರಾಯನಾವೆಡೆ । ಬರಲಿ ತನ್ನಾಪ್ತರಿಗೆ ಕೊಟ್ಟನು । ಹರುವನಿನ್ನಾಹವವಿಳಂಬವ ಮಾಡಬೇಡೆಂದ॥೨೨॥ ಇತ್ತ ಭೀಮನಕೂಡೆ ನೂರರು। ವತ್ತುಗಜಸಹಿತರಿಭಟನು ರಥ । ದತ್ತನಿದಿರಾದನು ಸುಶರ್ಮಕನಂಥ ನೃಪಸೂನು ॥ ಹೆತ್ತಳವ್ವೆವಿರೋಧಿಸೇನೆಯ । ಮತ್ತಗಜಘಟೆಗೋಸುಗೆರವಿವು । ಮತ್ತೆ ದೊರಕವು ಕೊಂದರೆಂದುಮ್ಮಳಿಸಿದನು ಭೀಮ ॥ ೨೩ ॥ ಸೊಕ್ಕಿದಾನೆಯಕೈಯ ಕದಳಿಯು । ಸಿಕ್ಕ ಬಿಡಿಸುವರಾರು ಪವನಜ । ನೆಕ್ಕತುಳದಲಿ ದಂತಿನನವನು ಮುರಿದನುರವಣಿಸಿ ॥ ಇಕ್ಕಡಿಯ ಬಸುರುಟ್ಟಿಗಳೆವರ । ಸುಕ್ಕುಗಳ ನಾಟಕದವೊಲು ಕೈ । ಯಿಕ್ಕಿದಾನೆಯ ಹಿಂಡು ಹರಿದುದು ನಿಮಿಷಮಾತ್ರದಲಿ ॥ ೨೪ ॥ ಕೆಡಹಿ ದುರ್ಯೋಧನನ ತಮ್ಮನ। ನಡಗುದರಿಮಾಡಿದನುಲೂಕನ । ಕಡಿದು ಬಿಸುಟನು ನಕುಲನಿಪ್ಪತ್ತೈದುಬಾಣವಲಿ ॥ ತುಡುಕಿದನು ಸಹದೇವನಂಬಿನ। ಗಡಣವಲಿ ಸೌಬಲನಸೇನೆಯ । ಕೆಡಲ ಮೊಗೆದನು ನಿಮಿಷದಲಿ ನರನಾಥಕೇಳಿದಿವ ॥ ೨೫ ॥ ಎಲವೊ ಕಪಟದ್ಯೂತಬಂಧದೊ । ಳಳಲಿಸಿದೆಯೋ ಪಾಪಿ ಕೌರವ । ಕುಲದ ತಲೆಚೆಂಡಾಡಿದವ ನೀನೋ ಮದಗ್ರಜನೋ ॥ ಸಿಲುಕಿದೆಯಲಾ ನಮ್ಮಬಾಣದ। ಬಲೆಗೆ ನಿನ್ನನು ಕಾವನಾವವ। ನೆಲೆಕುಠಾರ ಯೆನುತ ನುಡಿದನು ನಗುತ ಸಹದೇವ ॥ ೨೬ ॥ ಮೊಳಗಿ

ಲೆಸಹದೇವ ನಿನ್ನ ಕ । ದರ್ಪದಲಿ ಫಲವಿಲ್ಲ ನೀ ಕಲ । ಹಾರ್ಥಿಯೋ ದಿಟ ತೋರಿಸಾದೊಡೆ ಬಾಹುವಿ
ಕ್ರಮವ ॥ ಪಾರ್ಥಭೀಮರ ಮರೆಯಲಿದ್ದ ನಿ । ರರ್ಥಕರನಿರಿದಿರಿದು ಜಯವ ಸ। ಮರ್ಥಿಸುವೆ ಫಡ
ಹೋಗೆನುತ ತೆಗೆದೆಚ್ಚನಾ ಶಕುನಿ ॥ ೨೭ ॥ ಮರುಗದಿರು ನಿನ್ನುಭಯಪಕ್ಷವ। ತರಿದು ತುಂಡವ ಸೀಳು
ವೆನು ನಾ । ವರೆವೆನೇ ಭವದೀಯರಚಿತಾಕಾರವಿಭ್ರಮವ ॥ ನೆರೆಪತತ್ರಿಗಳಿವೆ ಪತತ್ರಿಯ । ನುರುವೆಸ
ರು ನಿಮಗಿವರ ಕೇಳಿಗೆ । ತೆರವುಗೊಡು ನೀನೆನುತ ಮಾದ್ರೀತನುಜ ಮಗುಳೆಚ್ಚ ॥ ೨೮ ॥ ಎಸಲು ಸ
ಹದೇವಾಸ್ತ್ರವನು ಖಂ । ಡಿಸಿ ಶರೌಘದಿನಹಿತವೀರನ । ಮುಸುಕಿದನು ಮೊನೆಗಣೆಗಳೀಡಿರಿದವು ರಥಾ
ಗ್ರದಲಿ ॥ ಕುಸುರಿದರಿದೊಡೆ ರಥಿಕಬಾಣ । ಪ್ರಸರವನು ಭಯರಸದಲದ್ದಿದ । ನುಸುರ ತೆಗೆಬಗೆಮಾಡಿ
ದನು ಸಹದೇವ ಸೌಬಲನ ॥ ೨೯ ॥ ತೇರು ಹುಡಿಹುಡಿಯಾಗೆ ಹೊಯ್ದನು । ವಾರುವನಮೇಲುಗಿದ
ಡಾಯುಧ । ಲಾರಿಬಿದ್ದನು ಸೂರಿಯಲಿ ಸಹದೇವನಭಿಮುಖಕೆ ॥ ವೀರನಹೆಯೋ ಶಕುನಿ ಜೂಜಿನ ।
ಚೋರವಿದ್ಯೆಯಬಿಟ್ಟೆಲಾ ಜಿ । ಝುಜ್ಝರನಹೆ ಮಝು ಪೂತೆನುತ ಖಂಡಿಸಿದನಾಹಯವ ॥ ೩೦ ॥ ಬ
ಳಿಕ ಕಾಲಾಳಾಗಿ ಖಡುಗವ । ಝಳಪಿಸುತ ಬರೆ ಶಕ್ತಿಯಲಿ ಕೈ । ಚಳಕದಲಿ ಸಹದೇವನಿಟ್ಟನು ಸುಬ
ಲನಂದನನ ॥ ಖಳನೆದೆಯನೊದೆದಪರಭಾಗಕೆ। ನಿಲುಕಿತದು ಗಾಂಧಾರಬಲ ಕಳ।ವಳಿಸೆ ಸುಳಿದನು ಶಕು
ನಿ ಸುರತರುಣಿಯರ ತೋಳಿನಲಿ ॥ ೩೧ ॥ ಕವಿದುದಾಪರಿವಾರ ವಡಬನ । ತಿವಿವತುಂಬಿಗಳಂತೆ ಶಕುನಿ
ಯ । ಭವರಿಗಳು ಮಂಡಿಸಿತು ಸಹದೇವನ ರಥಾಗ್ರದಲಿ ॥ ತೆವರಿಸಿದನನ್ನನಿಬರ ಚತುರ್ಬಲ । ನಿವಹವ
ನು ನಿಮಿಷಾರ್ಧದಲಿ ಸಂ। ತವಿಸಿದನು ಸಹದೇವ ಕೊಂದನು ಸೌಬಲನ ಬಲವ ॥ ೩೨ ॥ ಹರಿಬದಲಿ
ಹೊಕ್ಕರಡುಸಾವಿರ । ತುರಗವನು ಸಲೆ ನೂರುಮದಸಿಂ। ಧುರಕೆ ನಿಧನವದಾಯ್ತು ಪಯದಳವೆಂಟು
ಸಾವಿರದ ॥ ಬರೆಹ ತೊಡೆದುದು ನೂರುರಥ ಯಮ । ಪುರಿಗೆ ಲಕ್ಕಾಡಿತು ವಿಡಂಬದ । ಕುರುಬಲಾಂ
ಬುಧಿ ಕೊಡೆಬರೆತುದು ನೃಪತಿ ಕೇಳೆಂದ ॥ ೩೩ ॥ ಓಡಿದವರಲ್ಲಲ್ಲಿ ಧೈರ್ಯವ । ಮಾಡಿಹರಿಹಂಚಾದ
ಸುಭಟರು । ಕೂಡಿಕೊಂಡರು ನೂರುಮದದಾನೆಯಲಿ ಕುರುಪತಿಯ ॥ ಓಡಲೇಕಿನ್ನೊಂದುಹಲಗೆ
ಯ । ಮಾಡಿ ನೋಡುವೆನೆಂಬವೊಲು ಕೈ । ಮಾಡಿದನು ಕುರುರಾಯನಾಸಹದೇವನಿದಿರಿನಲಿ ॥ ೩೪ ॥
ಧರಣಿಪತಿ ಥಟ್ಟಣೆಗೆ ನಿಲ್ಲದೆ । ತೆರಳಿದನು ಸಹದೇವನಾತನ । ಹಿರಿಯನಡ್ಡೈಸಿದೊಡೆ ತೊಟ್ಟನುಕೋ
ಲ ಬಿಲ್ಲಿನಲಿ ॥ ಶರಹತಿಗೆ ಸೆಡೆದಾನಕುಲ ವೈ । ಸರಿಸಿದನು ನೂರಾನೆಯಲಿ ಡಾ । ವರಿಸಿದನು ಧರ್ಮಜ
ಜನ ದಳದಲಿ ಧೀರಕುರುರಾಯ ॥ ೩೫ ॥ ಎಲೆನಪುಂಸಕ ಧರ್ಮಸುತ ಫಡ । ತೊಲಗು ಕರೆಯಾ ನಿ
ನ್ನ ಭೀಮನ । ಬಲುಹು ಬಲುಹರ್ಜುನನ । ವಿಕ್ರಮ ವಿಕ್ರಮವು ನಿನಗೆ ॥ ಮಲೆತು ಮರೆಯಾ ಕ್ಷತ್ರಧ
ರ್ಮವೆ। ನಳುಕದಿರು ನಿಲ್ಲೆನುತ ಕವಿದಿ । ಟ್ಟಳಿಸಿ ಬರಲೊಳಿಗದ ಬೊಬ್ಬೆಯ ಕೇಳಿದನು ಭೀಮ॥೩೬॥
ತೂಳಿ ತುಳಿದವು ನೂರುಗಜ ಭೂ । ಪಾಲಕನ ನೆರೆ ಕಡಿತದಡವಿಗೆ ಚಾಳಿಕಮ್ಮರನಾಯ್ತುಗಡ ಫಡ
ನೂಕುನೂಕೆನುತ ॥ ಆಲಿಕುಡಿಯಿಡೆ ಕೆಣಿವಪೆಸಿ ಕೆ । ರಾಳಿವದನದ ಬಿಗಿದಹುಬ್ಬಿನ । ಮೇಲುಗೋ
ಪದ ಭೀಮ ಬಂದನು ಬಿಟ್ಟಸೂಠಿಯಲಿ ॥ ೩೭ ॥ ನೆತ್ತಿಗುಳಿಯೊಳಗೂರಿದಂಕುಶ। ಪತ್ತಿಬೊಡೆ ತಲೆ
ಗೊಡಹಿದವು ಬೆರು । ಳೊತ್ತಿಗಿವಿಗಳ ಡವಕಿಸುವಡಾವರದ ಡಬ್ಬುಕವ ॥ ಕುತ್ತುವಾರೆಯ ಬಗೆಯ
ದಾನೆಗ। ಳತ್ತ ಮುರಿದವು ಸಿಂಹನಾದಕೆ। ಮತ್ತಗಜ ಘುಳಿಘಿರಿಹಿದವು ದಳವುಳಿಸಿದನು ಭೀಮ ॥೩೮॥

ಮೆಟ್ಟಿದನು ಬಲವಂಕದಲಿ ಹೊರ । ಕಟ್ಟಿದನು ವಾಮದ ಗಜಂಗಳ । ನಿಟ್ಟನೊಂದರೊಳೊಂದನಪ್ಪಳಿಸಿದನು ಪರಿಘದಲಿ ॥ ಘಟ್ಟಿಸಿದನೊಗ್ಗಿನ ಗಜಂಗಳ । ಥಟ್ಟುಗೆಡಹಿದನವಮವ ಹಣ ಸಾ । ಲಿಟ್ಟುದೈ ಕುರುನೃಪನ ನೂರಾನೆಗಳು ನಿಮಿಷದಲಿ ॥ ೩೯ ॥ ಉಳಿದವಿದರೊಳು ಛತ್ರಚಮರಾ । ವಳಿಯವರು ಹಡಪಿದರು ಬಿರುದಾ । ವಳಿಯ ಪಾಠಕವಾದ್ಯವಾದಕಮಲ್ಲಗಾಯಕರು ॥ ಸಲಿಲಭಕ್ಷವಿಧಾನಗಜಹಯ । ಕುಳದರಕ್ಷಾವ್ರಜಚಿಕಿತ್ಸಕ । ರುಳಿದರಥಕಾರರು ಧನುರ್ಧರಕರರಸಂಖ್ಯಾತ ॥ ೪೦ ॥ ಕುದುರೆರಾವ್ತರು ಜೋದಸಂತತಿ । ಮದಗಜವ್ರಜ ರಥಿರಥಾವಳಿ । ಪದಚರರು ಚತುರಂಗಬಲವೊಂದುಳಿಯದಿದರೊಳಗೆ ॥ ಪದಪಲೇ ಕುರುರಾಯ ನೆರೆ ಜಾ । ರಿದನು ಕುಂತೀಸುತರು ಬಹಳಾ । ಭ್ಯುದಯರಾದರು ವೀರನಾರಾಯಣನ ಕರುಣದಲಿ ॥　　…　　…　　…　　॥ ೪೧ ॥

ಅಂತು ಸಂಧಿ ೨ಕ್ಕಂ ಪದ ೧೧೯ಕ್ಕಂ ಮಂಗಳಮಸ್ತು.



## ಮೂರನೆಯ ಸಂಧಿ.

॥ಸೂಚನೆ॥ ರಾಯದಳವದು ಸವೆಯೆ ಸಮರದ । ನಾಯಕರು ನೆರೆಮುರಿಯಲಾದ್ವೈ । ಪಾಯನಸರೋವರವ ಹೊಕ್ಕನು ಕೌರವರರಾಯ

॥ಪದ॥ ಕೇಳು ಜನಮೇಜಯಧರಿತ್ರೀ । ಪಾಲ ಕುರುಪತಿ ಹೆಗಲ ಗದೆಯಲಿ । ಕಾಲುನಡೆಯಲಿ ಹಾಯ್ದನೇಕಾಂಗದಲಿ ಕಳನೊಳಗೆ ॥ ಆಳ ಕಾಣೆನು ಛತ್ರಚಮರದ । ಮೇಳಯದ ವಿಸ್ತಾರವಿಭವವ । ಬೀಳುಕೊಟ್ಟನು ನಡೆದನಿಂದ್ರದಿಶಾಭಿಮುಖವಾಗಿ ॥೧॥ ಅಕಟ ನಮ್ಮಯ ಪೂರ್ವರಾಜ। ಪ್ರಕಟಕೀವಿಧಿಯಾಯ್ತಲಾ ಕಂ । ಟಕನಲಾ ಧರ್ಮಪ್ರಭಾವಕೆ ಕೌರವೇಶ್ವರನು ॥ ಶಕುನಿಮತವಿಷಬೀಜವೇ ಬಾ । ಧಕವದಂತಿರಲಾಯುಧಿಷ್ಠಿರ । ಸಕಲಬಲಪರಿಶೇಷವೇನೆಂದರಸ ಬೆಸಗೊಂಡ ॥೨॥ ಧರಣಿಪತಿ ಕೇಳ್ಧರ್ಮಜನ ಮೋ । ಹರದೊಳುಳಿದುದು ತೇರು ಸಾವಿರ । ವೆರಡುಗಜವೇಳ್ನೂರು ಮಿಕ್ಕುದು ಲಕ್ಷಪಾಯದಳ॥ ತುರಗಸಾವಿರವೇಳು ಸಾತ್ಯಕಿ । ವರಯುಧಾಮನ್ಯೂತ್ತಮೌಂಜಸ । ರುರುಶಿಖಂಡಿದ್ರುಪದಸೂನುದ್ರೌಪದೀಸುತರು ॥೩॥ ಆಸುಯೋಧನಸೇನೆಯಲಿ ಧರ । ಣೀಶಕೃಪಕೃತವರ್ಮಗುರುಸುತ । ರೈಸುಬಲದಲಿ ನಾಲ್ವರುಳಿದರು ಹೇಳಲೇನದನು ॥ ಏಸುಬಹಳೈಶ್ವರ್ಯವಿದ್ದೇ । ನೇಸುಭಟರನಿತಗ್ಗಳಿಯರಿ । ದ್ದೇಸರಲಿ ಫಲವೇನು ದೈವವಿಹೀನರವರೆಂದ ॥೪॥ ಇತ್ತಲೀಸಂಜಯನ ತಂದುದು । ಮೃತ್ಯುಧೃಷ್ಟದ್ಯುಮ್ನ ನೀತನ । ಕುತ್ತಿ ಕೆಡಹಿದರಾಗದೇ ಕುರುಡಂಗೆ ರಣಕಥೆಯ ॥ ಬಿತ್ತರಿಸಿ ಹೇಳುವನು ಕೌರವ । ದತ್ತಲೀಕೆ ದುರಾತ್ಮಕನ ಕೈ । ವರ್ತಿಸಾ ಯಮನಗರಿಗೆಂದನು ಸಾತ್ಯಕಿಯ ಕರೆದು ॥೫॥ ಸೆಳೆದು ಕಡುಗವ ಸಂಜಯನ ಹೆಡ । ತಲೆಗೆ ಮೋಹಿದೊಡರಿವಸಮಯಕೆ। ಸುಳಿದನಗ್ಗದಬಾದರಾಯಣನವನ ಪುಣ್ಯದಲಿ ॥ ಎಲೆಲೆ ಸಾತ್ಯಕಿ ಲೇಸಮಾಡಿದೆ । ಖಳನೆ ಸಂಜಯ ನಮ್ಮಶಿಷ್ಯನ । ಕೊಲುವ

ವರೇ ವೀನೆನುತ ಕೊಂಡನು ಕೈಯಾಯುಧವ ॥ ೬ ॥ ದೇವನಿಮ್ಮಯ ಶಿಷ್ಯನೇ ಪರಿ । ಭಾವಿಸೆನು ತಾಸೆರಿದೆನಾದೊಡೆ । ದೇವಕೀಸುತನಾಣೆ ಬಿಟ್ಟೆನು ಸಂಜಯನ ವಧೆಯ ॥ ನೀವು ಬಿಜಯಂಗೈಯ್ಯುವುದೆನೆಬದ । ರಾವಳಿಯ ಮಂದಿರಕೆ ಮರಳಿದ । ನಾವಿಗಡಮುನಿ ಖೇದಕಲುಷಿತ ಸಂಜಯನ ಬಿಡಿಸಿ ॥೭॥ ಕುರುಪತಿಯ ಸಂತೈಸಿ ನೀನಾ । ಸರಸನಯ್ಯಗೆ ಯಿನ್ನು ಹಳಚುವ । ವರಗದಾಯುದ್ಧವನು ಪೇಳ್ವುದು ಸುನ್ನಿಸಂದದಲಿ ॥ ಅರಿತವಾಗಲಿ ನಿನಗೆನುತ ಮುನಿ । ಸರಿಯಲಿತ್ತಲು ಸಂಜಯನು ಪದ । ಸರಸಿರುಹಕಭಿನಮಿಸಿ ಬೀಳ್ಕೊಂಡನು ಮುನೀಶ್ವರನ ॥ ೮ ॥ ಅಸ ಕೇಳ್ಕೆ ಸಂಜಯನು ಬರೆಬರಲು ಕಂಡನು ದೂರದಲಿ ನಿರಿ । ಗರುಳ ಕಾಲ್ದೊಡಕುಗಳ ಖಂಡದ ಜಿಗಿಯಜಾರುಗಳ॥ ಕರಿಗಳೊಟ್ಟಿಲ ಸೇರಿಳಿದು ಪೆ ಸ್ಸರಿಸಿ ಮಿದುಳಿನ ಜೋರು ಜೋಡಿನ । ತೊರಳೆಯಲಿ ದಡಧಡಿಸಿ ಜಾರುತ ಬೀಳುತೇಳುವನ ॥೯॥ ಎಡಹುದಲೆಗಳ ದಾಟಿ ರಕುತದ । ಮಡುವಿನೊಳು ಗದೆಯೂರಿ ನೆಲೆಗಳ । ಪಡೆದು ಕಂಪಿಸಿ ಕುಣಿವಮುಂಡವ ಗದೆಯೊಳಪ್ಪಳಿಸಿ ॥ ಅಡಿಗಡಿಗೆ ಹೇರಾನೆಗಳ ಹೇರೊಡಲ ಹತ್ತಿಳಿದೇರಿ ಝೊಂಪಿಸಿ । ಮಿಡುಕಿ ನಿಲುವನು ಬಳಲಿಯೂರ್ಧ್ವಶ್ವಾಸಲಹರಿಯಲಿ ॥೧೦॥ ಓಡದಿಹ ನರಿಹದ್ದುಕಾಗೆಗೆ। ಕೂಡೆ ಗದೆಯನು ಬೀಸುವನು ಬಿಡೆ । ನೋಡುವನು ಹೆಣದಿನಿಹಿಗಳ ಹೇರಾಳರಕ್ಕಸರ॥ ಕೋಡುಕೈಗಳ ಮಿದುಳ ಬಾಯ್ಗಳ । ಬಾಡುಕರುಳಿನ ಚಿತ್ಕೃತಿಯ ತಲೆ । ಯೋಡುಗಳನೀರಕ್ತಪಾನದ ಶಾಕಿನೀಜನವ ॥೧೧॥ ಕಂದಪಖ್ಖಲೆಗಳಲಿ ತೀವಿದ । ಮಂದರಕುತದ ತೊಯ್ದ ತಲೆಗಳ । ತಿಂದುಬಿಸುಡುವನೆಣನ ಕಾರುವಬಗೆಯ ಬಾಡಿಸುವ ॥ ಸಂದಣಿಸಿ ಹರಿದೇರಿ ಬಾಯ್ಗಳ । ಲೊಂದಿ ಬಾಯ್ಗಳ ಬಿಡುವಭೂತನಿ । ವೃಂಪವನು ಕೊಂಡೋಸರಿಸುವನದೊಂದು ದೆಸೆಗಾಗಿ ॥೧೨॥ ಕುಣಿವಕರಿಗಳ ತಲೆಯ ಮೊಡಹಿನ । ಲಣೆದು ಹಜ್ಜೆಯನಿಡುವಭೂತದ । ಹೆಣನ ತಿನಿಹಿಗೆ ತವಕಿಸುವಭೇತಾಳಸಂತತಿಯ ॥ ರಣದೊಳಂಜಿಸುತಿರೆ ನರದಕಾ । ವಣದೊಳಗೆ ಕೈಯೂರೆ ಮಿಗೆ ಹಳೆ । ಹೆಣನ ಹೊಲಸಿಗೆ ಹೇಸಿ ಹರಿಹರಿದೆಡೆಗೆ ಬಳಲುವನ ॥೧೩॥ ಕಡಿದಹಕ್ಕರಿಕೆಗಳ ರೆಂಚೆಯ । ಕಡಿಗಳಲಿ ಕುಳ್ಳಿರ್ದ ಮೊಳಕಾ । ಲಡಿಯ ಗಾಢವ್ರಣದ ನೆಣವಸೆಗೇರಬಳಿಬಳಿದು ॥ ನಡೆದು ಹೆಣದೆರಹುಗಳೊಳಗೆ ಕಾ । ಲಿಡುತ ತೋಧಿಸಿ ಮುಂಡೆ ಹಜ್ಜೆಯ । ನಿಡುತ ಪ್ರಸರವಾಗಿ ಮಾರ್ಗಶ್ರಮಕೆ ಬೆಮರುವನ ॥ ೧೪ ॥ ಕಡಿದ ಕೈದುಗಳೊಟ್ಟಿಲಲಿ ತನಿ । ಗೆಡದಗಾಲಿಯ ಹಾಯ್ಕಿ ಮೇಲಡಿ। ಯಿಡುತ ಹಜ್ಜೆಯ ಮಿದುಳ ಕೆಸರಲಿ ಛತ್ರಚಮರಗಳ ॥ ಅಡಸಿ ಹಜ್ಜೆಯನಿಡುತ ರಕ್ತದ । ಮಡುವನೆಡಬಲಕಿಕ್ಕಿ ಮೆಲ್ಲನೆ । ನಡೆದು ದೈವವ ಬೈದು ಬೈದಡಿಗಡಿಗೆ ಸುಯ್ವವನ ॥ ಭೂತರಣಭೇತಾಳ ಕಲಹವಿ । ಧೂತಜಂಬುಕಘೂಕಕಾಕ । ವ್ರಾತರಭಸಕೆ ಮೆಚ್ಚುವನು ಪಾಂಡವರಬಲವೆಂದು ॥ ಆತ ಮರಳಿದಹಿಂದೆ ನೋಡಿ ಪ । ರೇತವಿಭವವಲಾಯೆಸುತ ಚಲ । ಚೇತನನು ಸಲೆ ಚಂಡಿಯಾದನು ಕಳನ ಚೌಕದಲಿ ॥೧೫॥ ಹೇಳುವೊಡೆ ಕುರುಪತಿಯನೇ ನೆರೆ । ಹೋಲುವೆನು ಗದೆ ಹೆಗಲಲದೆ ಮೊಳೆ । ಕಾಲ ಕಾಣೆನು ಛತ್ರಚಾಮರಗಜತುರಗಾವಳಿಯ ॥ ಹೋಲುವೆದು ಜನವೊಬ್ಬರೊಬ್ಬರೊ । ಳಾಳೊಳೊಬ್ಬನೊ ಮೇಣು ಕುರುಭೂ । ಪಾಲಕನೊ ನೋಡುವೆನೆನುತ ಸಂಜಯನು ನಡೆತಂದ ॥೧೬॥ ಬಂದು ಕಂಡನು ರಾಜವನನಮಾ । ಕಂದನನು ಧೃತರಾಷ್ಟ್ರರಾಯನ । ನಂದನನ ಸೌಜನ್ಯವಲ್ಲೀ ವಿಪುಲಕಂದರನ॥ ಮುಂದುವರಿವವಿಲೋಚನಾಂಬುಗ-

ಳಿಂದ ಸ್ವೈರಣೆ ಮಿಗದೆ ಸಂಜಯು।ನಿಂದು ಥೊಪ್ಪನೆ ಕೆಡೆದು ಹೊರಳಿದನರಸನಂಘ್ರಿಯುಲಿ ॥೧೮॥ ಕಡಲ
ತಡಿಪರಿಯಂತ ರಾಯರ । ಗಡಣದಲಿ ನೀನೊಬ್ಬನೆಂಬೀ । ನುಡಿಗೆ ನಿಶ್ಚಯವೀಗಳಾದುದೆ ತಂದೆಕು
ರುರಾಯ ॥ ಬಿಡದೆ ಬಾಗುವನೃಪರ ಮಕುಟದೊಳಿಡುವಕೋಮಲಚರಣವಿದರೊಳು । ನಡೆಯಲೆಂ
ತ್ಯಕಲಿತೆ ಯೆಂದನು ಸಂಜಯನು ನೃಪನ ॥೧೯॥ ರಣಮುಖದೊಳೇಕಾದಶಾಕ್ಷೋಹಿಣಿ । ಹಿಣಿಗೆ ಹರಿವಾ
ಯ್ತೀ ಯುಧಿಷ್ಠಿರ। ನುಣಲಿ ಧರೆಯನು ಗೋತ್ರವಧೆಯನ್ಯಾಯಕಿಲ್ಬಿಷವ॥ ಸೆಣಸವೊಡಿದ ದೈವದಲಿ
ಥಾ । ರುಣಿಯ ಹುದುವಿನ ಸಿರಿಗೆ ಸೇರದೆ । ಹಣಿದವಾಡಿದೆ ರಾಜವಂಶದ ಕಲ್ಪತರುವನವ ॥೨೦॥
ಶಶಿರುಚಿಗೆ ಸ್ವೈರಿಸದಸಿರಿಮುಖ । ಬಿಸಿಲಸೆಕೆಗಾಂತುದೆ ಸುಗಂಧ । ಪ್ರಸರಪೂರಘ್ರಾಣಗಳು ಹಳೆವೆಣ
ನ ಹೊಲಸಿನಲಿ ॥ ಉಸುರದೆಗೆವಂತಾಯ್ತು ಗೀತದ । ರಸದಮಧುರವನಾಂತಕಿವಿವಾ। ಯಸಸೃಗಾಲಧ್ವ
ನಿಗೆ ಸೊಗಸಿತೆ ಯೆನುತ ಹೊರಳಿದನು ॥೨೧॥ ಲಲಿತಮೃದುತರ ಹಂಸತೂಳದ । ಲುಳಿತಕೋಮಲ
ಕಾಯಕ್ಕೆದುಗ । ಳೆಲುಗಳೊಟ್ಟಿಲುವಾಸಿನಲಿ ಪೈಸರಿಸಿ ಮಲಗಿದೆಲಾ ॥ ಸುಳಿಯೆ ಕೈಗೊಡುವರಸುಗಳ
ಕೆಲ । ಬಲದ ಪಾಯವಧಾರು ಯಿವರನು । ಕಳುಹಿ ಬಂದ್ಯೆ ಸಾರ್ವಭೌಮರನ್ಯೆದನೀನೆಂದ ॥೨೨॥ ಎ
ತ್ತಣೇಕಾದಶಚಮೂಪತಿ । ಎತ್ತಣೇಯೆಕಾಕಿತನ ತಾ । ನೆತ್ತಹಯಗಜರಥಸುಖಾಸನದತಿಶಯದ ಸು
ಳಿವು ॥ ಎತ್ತಣೇಕೊಳುಗುಳದ ಕಾಲ್ನಡೆ । ಯೆತ್ತಣಾಹವದಭಿಮುಖಕೆ ಬಳಿ । ಕೆತ್ತಣಪಜಯವಿಧಿ
ಯ ಘಟನೆ ನೃಪಾಲ ನಿನಗೆಂದ ॥೨೩॥ ಮುಳಿದೊಡಗ್ಗದಪರಶುರಾಮನ । ಗೆಲಿದನೊಬ್ಬನೆಭೀಷ್ಮ
ಪಾಂಡವ । ಬಲದ ಸಕಲಮಹಾರಥರ ಸಂಹರಿಸಿದನು ದ್ರೋಣ ॥ ದಳಪತಿಯು ಮಾಡಿದೊಡೆ ಪಾರ್ಥ
ನ । ತಲೆಗೆ ತಂದನು ಕರ್ಣನೀಯ । ಗ್ಗಳೆಯರೆನಿತ್ಯೆ ಕಡೆಯಲೊಬ್ಬನೆ ಕೆಟ್ಟೆನೀನೆಂದ ॥೨೪॥ ಅವರು
ಬದುಕಿದರ್ಯೆವರುಂ ನಿ । ನ್ನವರೊಳಗೆ ನೀನುಳಿಯೆ ನೂರ್ವ್ವರು । ಸವರಿತಪರ್ಯೆವರು ಕುಮಾರರು ಸೌ
ಖ್ಯಜೀವಿಗಳು ॥ ಜವನ ನಗರಿಗೆ ಹತ್ತಿದರು ನಿ । ನ್ನವರು ಮಕ್ಕಳುನೂರುದ್ಯೆವವ । ನವಗಡಿಸಿ ದು
ಸ್ಥಿತಿಗೆ ಬಂದ್ಯೆ ತಂದೆ ಕುರುರಾಯ ॥೨೫॥ ಗೆಲಿದನರಸನು ಹಸ್ತಿನಾಪುರ । ದೊಳಗೆ ಕಟ್ಟಿಸು ಗುಡಿ
ಯನೆಂಬೆನೊ । ತಲೆಬೆರಸಿ ತಾ ನೋಡಿಬದುಕಿದೆನೆಂಬೆನೋ ಮೇಣು॥ಲಲನೆಯರಿಗೇನೊಸಗೆ ಕುರುಡನ
ನಳಿಸುವೆನೊ ನಗಿಸುವೆನೊ ತಾಯಿಗೆ । ಕಲಿಸುಬುದ್ಧಿಯನೇನನೆಂಬೆನು ಕೇಳು ಕುರುರಾಯ್ನ॥೨೬॥
ಹಿಂದೆ ರಾಯನ ಪಟ್ಟದರಸಿಯ । ತಂದು ಭಾರಿಯ ಭಂಗಪಡಿಸಿದೆ । ಬಂದು ಹರಿಯೈದೊರಬೇಡಿ
ದೊಡವನ ಚಿತ್ತದಲಿ ॥ ಕಂದ ಬಿತ್ತಿದೆ ಕದನದಲಿ ನೀ । ನೊಂದು ನೆಳಲುಳಿಯಲು ಸಹೋದರ । ವೃಂ
ದತನುಜಜ್ಞಾತಿಬಾಂಧವರಳಿದರದರಿಂದ ॥೨೭॥ ಮದದ ಮೋಡಿಯಲಂದು ಕೃಷ್ಣನ । ಸದರವೆಂದೇ
ಬಗೆದೆ ದೈವದ । ಹೃದಯವರಿಯದೆ ಕದನಕೇಳಿಗೆ ಮನವ ನೀ ಮಾಡಿ ॥ ವಿದುರನನು ಕೆಡೆನುಡಿದು ಸ
ಭೆಯಲಿ । ಹದನನರಿಯದೆ ಧನುವ ಹೋಗಾ । ಡಿದೆ ಮರುಳೆಸಾಕಿನ್ನು ಮೇಲಣಹದನ ಹೇಳೆಂದ
॥೨೮॥ ಪರಶುರಾಮನ ಬುದ್ಧಿ ಗಾಲವ । ನೊರೆದನೀತಿ ವಿಕರ್ನ್ನಭೀಷ್ಮರ । ಪರಮವಚನಾಮೃತವ ಕ
ಣ್ವನನುಡಿಯ ನಾರದನ । ಪರಮತತ್ವದ ಮಂತ್ರವಂಗೀ । ಕರಿಸಲರಿಯದೆ ಯಿಂತು ಘನಸಂ । ಗರ
ದಿ ಚಿಂತಿಸಲೇನುಫಲ ಕುರುರಾಯ ಹೇಳೆಂದ ॥೨೯॥ ಕೇಳು ಸಂಜಯ ಪೂರ್ವ್ವಸುಕೃತದ । ತಾಲಿವನ
ವೂಣಗಿದೊಡೆ ಭಾರಿಯ । ತೋಳಗುತ್ತಿನ ಜಯದ ಸಿರಿ ಯಂಗಳವದಾಂಟಿದೊಡೆ ॥ ಭಾಳಲಿಪಿಗಳ

ಲೆಕ್ಕವನು ಪ್ರತಿ । ಕೂಲವಿಧಿ ಪಲ್ಲಟಿಸಿ ಬರೆದೊಡೆ । ಹೇಳಿ ಫಲವೇನೆನುತ ತುಂಬಿದನರಸ ಕಂಬನಿಯ ॥ ಕದಡಿತಂತಃಕರಣವಿಕ್ರಮ । ದುದಧಿ ನೆಲೆಯಾದುದು ನಿರರ್ಥಕ । ಕೊದರದಿರು ಬೆದರದಿರು ಸಂಜಯ ಹಿಂದನೆಣಿಸದಿರು ॥ ಕದನದಲಿ ದುಶ್ಶಾಸನನ ತೇಗಿದನಲಾ ಬಕವೈರಿ ತಮ್ಮನ । ನುದರದಲಿ ತೆಗೆವೆನು ವಿಚಿತ್ರವ ನೋಡು ನೀನೆಂದ ॥೩೧॥ ನರನ ಬಸುರಲಿ ಕರ್ಣನನು ನೃಪ । ವರನೊಳಾಶಲ್ಯನನು ನೀಕಾ । ತರಿಸಿದಿರು ಶಕುನಿಯನುಲೂಕನ ಯಮಳರಿಬ್ಬರಲಿ ॥ ಹರಿಬಕೆದೆಲಾ ಗದೆ ಮುರಾಂತಕ । ಹರಹಿಕೊಳಲಿ ಮದೀಯಬಾಹು । ಸ್ಫುರಣಶಕ್ತಿಗೆ ಭಂಗಬಾರದು ನೋಡು ನೀನೆಂದ ॥೩೨॥ ಕಾನನಕೆ ಕೈಯಿಕ್ಕುವೊಡೆ ಪವ । ಮಾನಕನಪಾವಕನು ಬಯಸುವ । ಭಾನು ಭಾರಿಯತಮವ ತಿವಿವರದಾರ ನೆರವಿಯಲಿ ॥ ಈನಿಭೃತಗದೆ ಯಿರಲಿ ಕುಂತೀ । ಸೂನುಗಳ ಕೈಕೊಂಬೆನೇ ಮನ । ಹೀನನೇ ತಾನಕಟ ಸಂಜಯ ಯೆಂದನಾಭೂಪ ॥೩೩॥ ಆಳು ಬಿದ್ದುದು ಬೇಹನಾಯಕ । ರೋಲಗಿಸಿತವರಿಯರ ನೀರಣ । ದೂಳಿಗಕೆ ನಾನೊಬ್ಬನೆಂದೇ ನಿನಗೆ ತೋರಿತಲಾ ॥ ಆಳ ಹಂಗಿನ ನಾಯಕರ ಬಿಲುಗೋಲ ಜೋಡಿನ ಬಲವ ಚಿತ್ತದಿ । ತಾಳಿದರ ಧೃತರಾಷ್ಟ್ರರಾಯನ ಕಂದನಲ್ಲೆಂದ ॥೩೪॥ ಖಾತಿ ಗುಂದದು ಮನದ ಧೈರ್ಯದ । ಧಾತುಕುಂದದು ಲಜ್ಜೆಯಭಿಮತ । ಜಾತಿಗೆಡೆದು ವಿರೋಧಬಿಡದು ಯುಧಿಷ್ಠಿರಾದಿಗಳ ॥ ಏತಕೀನಿನ್ನೀಪ್ರಳಾಪ ವಿ । ಧೂತರಿಪು ಕುರುರಾಯನೆಂಬೀ । ಖ್ಯಾತಿಯಿಲ್ಲದೆ ಬೇರೆ ರಾಜ್ಯವನೊಲ್ಲೆ ತಾನೆಂದ ॥೩೫॥ ಜೀಯ ನಿಮ್ಮಡಿಗಳಿಗೆ ಗುರುಗಾಂ । ಗೇಯವಿದುರಾದಿಗಳು ಹೇಳಿದ । ಜೋಯಿಸುವ ಕೈಕೊಂಡಿರೇ ನಮ್ಮಿಪ್ರಳಾಪದಲಿ ॥ ರಾಯ ಫಲವೇನೈ ಯುಧಿಷ್ಠಿರ । ರಾಯನೊಲಿದಂತಿರಲಿ ನಿಮ್ಮಯ । ತಾಯಿತಂದೆಗೆ ಹೇಳಲೇನನು ಬುದ್ಧಿಗಲಿಸೆಂದ ॥೩೬॥ ಇದೆ ಸರೋವರವೊಂದು ಹರಿದೂರದಲಿ ಭುವನ ಖ್ಯಾತಿಯೊಳು ಧ್ಯಾ । ನದಲಿ ಮುಳುಗಿಹೆನೊಂದುದಿನಪರಿಯಂತ ಸಲಿಲದಲಿ ॥ ಕದನದಲಿ ಕೌಂತೇಯರನು ಯಮ । ಸದನದಲಿ ತೋರುವೆನು ತಾನೆಂಬುದು ರಹಸ್ಯವು ಜನನಿಜನಕರಿಗರುಹು ನೀನೆಂದ ॥೩೭॥ ತೆಗಸು ಪಾಳೆಯವೆಲ್ಲವನು ಗಜ । ನಗರಿಗೈದಿಸು ರಾಣಿಯರ ದಂ । ಡಿಗೆಯ ಕಳುಹಿಸು ಸೂತಸುತದುಶ್ಶಾಸನಾದಿಗಳ ॥ ಹಗೆಯ ವಿಜಯವ ಹರಹದಿರು ನಂ । ಬುಗೆಯ ನುಡಿಯಲಿ ಭಾನುಮತಿಯರ ಬಗೆಯ ಸಂತೈಸೆಂದು ಬೋಳೈಸಿದನು ಸಂಜಯನ ॥೩೮॥ ಎನುತ ಸಂಜಯಸಹಿತ ಕೌರವ । ಜನಪಬಂದನು ತತ್ಸರೋವರ । ಕನಿಲನಿದಿರಾದನು ಸುಗಂಧದ ಶೈತ್ಯಪೂರದಲಿ ॥ ತನುವಿಗಾಪ್ಯಾಯನದಿನಂತ । ರ್ಮನಕೆ ಪಲ್ಲಟವಾಯ್ತು ಭೀಮನ । ಜನಕನರಿದನು ತನ್ನ ಗುಪ್ತಸ್ಥಾನಸಂಗತಿಯ ॥೩೯॥ ಉಲಿವಕೋಕಿಲಪಾಠಕರ ಮೆರೆ । ವಳಿಕುಲದ ಗಾಯಕರ ಹಂಸಾ । ವಳಿಯ ಸುಭಟರ ಜಡಿವ ಕೊಳರ್ವಕ್ಕಿಗಳ ಪಡಿಯರರ ॥ ಅಲರ್ದಹೊಂದಾವರೆಯ ನವಪರಿ । ಮಳದ ಸಿಂಹಾಸನದಿ ಲಕ್ಷ್ಮೀ । ಲಲನೆಯೋಲಗಶಾಲೆಯಂತಿರೆ ಮೆರೆದುದಾಸರಸಿ ॥೪೦॥ ಬಂದು ತಡಿಯಲಿ ಸಂಜಯಾನಕರ । ದೆಂದ ನೀಸರಸಿಯಲಿ ಮುಳುಗಿಹೆ । ನಿಂದಿ ನೀದಿವಸವನು ಕಳೆವೆನು ಕೊಳನಮಧ್ಯದಲಿ ॥ ಮುಂದೆಪಾಂಡವರೈವರನು ಗೆಲಿ । ದಂದು ಹೊಗುವೆನು ಗಜಪುರವನಿಂ । ತೆಂದು ಜನನಿಗೆ ಜನಕವಿದುರರಿಗರುಹು ನೀನೆಂದ ॥೪೧॥ ಚಾರುಚಂದ್ರೋತ್ಪಲದ ರಮ್ಯಾ । ಗಾರದಲಿ ಮಣಿಮಯದ ರಚನೋ । ದಾರದಿಂ ಹೊಳೆಹೊಳೆವಭವನದ ಚಿತ್ರಶಾಲೆಯಲಿ ॥ ಸಾರಮಣಿಪರಿಯಂಕಪರಿಸಂ । ಸ್ಕಾರದಲಿ ಮಲಗುವ

ಮಹೀಪತಿ । ನೀರೊಳೊರಗುವನೆಂದು ಸಂಜಯ ನೊರಲಿದನು ಹೊರಳಿ ॥೪೨॥ ಒರೆಲದಿರು ಸಂಜಯ ವಿರೋಧಿಗ । ಳರಿವರೆನ್ನಿದ್ದೆಡೆಯನಿಲ್ಲಿಯ। ಮರೆದು ಕಳೆ ಪಾಳಯವ ತೆಗೆಸಬುಜಾಕ್ಷಿಯರ ಕಳುಹು॥ ತೆರಹುಗೊಡು ನೀ ಹೋಗೆನುತ ಮಂ। ಜಿರಗನಳವಡಿಸಿಕ್ಕಿ ಪೂರ್ವದ । ಲರಿದಸಲಿಲಸ್ತಂಭವಿದ್ಯೆಯ ನರಸ ಚಿಂತಿಸಿದ ॥ ೪೩ ॥ ಚರಣವದನಕ್ಷಾಳನಾಸಂ । ತರಪದತ್ರಯದಾಚಮನವಿ । ಸ್ತರಣದಲಿ ಸ ಪ್ರಣವದಂಗನ್ಯಾಸವಿಧಿಗಳಲಿ ॥ ವರುಣಮಂತ್ರಾಕ್ಷರದಿ ಜಪಪರಿ । ಕರಣದಲಿ ನಿರ್ಮುಕ್ತಚಿತ್ತ । ಸ್ಫುರಣಸಲಿಲಸ್ತಂಭನವನನೀಶ ಮಂತ್ರಿಸಿದ ॥ ದ್ಯುಮಣಿಮೊದಲಾದಖಿಳಸುರರಿಗೆ। ನಮಿಸಿ ವರುಣ ಧ್ಯಾನವನು ಹೃ । ತ್ಕಮಲದಲಿ ನೆಲೆಗೊಳಿಸಿ ನಾಲುಕುದೆಸೆಯನಾರೈದು ॥ ಕುಮತಿಯಿಳಿದನು ಜಾನು ಕಟಿಹೃ । ತ್ಕಮಲವಾನನಮೂರ್ಧಪರಿಯಂ । ತಮರಿದುದುಜಲಕೊಳನ ಮಧ್ಯದಲರಸ ಪವಡಿಸಿ ದ ॥ ೪೫ ॥ ಕುರುಪತಿಯ ಬೀಳ್ಕೊಂಡು ಸಂಜಯ । ಮರಳಿದನು ತನಗಾದಹಂದಣ । ಪರಿಭವವನೆನೆ ದಡಿಗಡಿಗೆ ಕಂಪಿಸುತ ಮನದೊಳಗೆ ॥ ಧುರದ ಮಧ್ಯದೊಳೊಬ್ಬನೇ ನಡೆ। ತರುತ ಭೂತಾವಳಿಯನೀ ಕ್ಷಿಸಿ।ಗುರುವ ನೆನೆದನು ಕೇಳು ಜನಮೇಜಯಮಹೀಪಾಲ ॥೪೬॥ ಬರುತ ಸಂಜಯ ದೂರದಲಿ ಕೃಪ । ಗುರುಸುತರ ಕೃತವರ್ಮಕನ ಕಂ । ಡರಿರಥಿಕರಿವರಲ್ಲಲೇ ಶಿವಶಿವಮಹಾದೇವ ॥ ಭರತ ಕುಲಮೊದ ಲೊಂದು ಬಳಿಕಾ । ಯ್ತೆರಡುಕವಲೊಬ್ಬರಿಗೆ ಜಯವಿ । ಸ್ತರಣ ಗದುಗಿನ ವೀರ ನಾರಾಯಣನ ಕರುಣದಲಿ ॥ ... ... ... ॥ ೪೭ ॥

ಅಂತು ಸಂಧಿ ೩ಕ್ಕಂ ಪದ ೧೫೬ಕ್ಕಂ ಮಂಗಳಮಸ್ತು.

---

## ನಾ ಲ್ಕ ನೆ ಯ ಸಂ ಧಿ .

॥ ಸೂಚನೆ ॥ ರಾಯಧರ್ಮಜ ಯಮಳಫಲುಗುಣ। ವಾಯುಸುತರರಸಿದರು ಕೌರವ । ರಾಯನನು ಕಳನೊಳಗೆ ಕಾಣದೆ ಮುತ್ತಿದರು ಕೊಳನ ॥

ಕೇಳು ಜನಮೇಜಯಧರಿತ್ರೀ । ಪಾಲ-ಸಂಜಯ ಬರುತ ಕುರುಭೂ । ಪಾಲನರಿಕೆಯ ಭೀಮನ ಪರಿಪಲ್ಲಲೇಯೆನುತ ॥ ಮೇಲೆ ಹತ್ತಿರೆ ಬರಬರಲು ಸಮ । ಪಾಳಿಯಲಿ ರಥಮೂರರಲಿ ಕೃಪ। ಕೋ ಲಗುರುವಿನ ಮಗನಲಾ ಯೆನುತಲ್ಲಿಗೈತಂದ ॥ ೧ ॥ ಇಳಿದು ರಥವನು ಸಂಜಯನ ಬರ । ಸೆಳೆದು ತ ಕ್ಕೈಸಿದರು ಹಗೆಯಲಿ । ಸಿಲುಕಿ ಬಂದೈ ಭಾಗ್ಯದಲಿ ಧೃತರಾಷ್ಟ್ರಭೂಪತಿಯ ॥ ಕಲಹಗತಿಯೇನಾ ಯ್ತು ಶಕುನಿಯ। ದಳದೊಳಿದ್ದನೊ ಕೌರವೇಶ್ವರ।ನುಳಿದನೋ ಹದನಾವುದೆಂದರು ಭಟರು ಸಂಜಯ ನ ॥ ೨ ॥ ಅರಿದುದಿಲ್ಲಾ ಕೌರವೇಂದ್ರನ।ನರಸಿಶಕುನಿಯ ದಳವ ಮುತ್ತಿದ । ರಿರಿದರವರು ತ್ರಿಗರ್ತ ರೆನು ಸೌಬಲಸುಶರ್ಮಕರ ॥ ಮುರಿದಬವರದ ಬಲಿದು ಗಜನೂ । ರರಲಿ ಹೊಕ್ಕನು ರಾಯನಹಿತರೆ । ಚಿರಿದು ಝಾಡಿಸಿ ಬೀದಿವರಿದನು ರಾಯದಳದೊಳಗೆ ॥ ೩ ॥ ಬಳಿಕ ಭೀಮನ ಗದೆಯಲಿಘಟಿತ । ಬೇ

ದನೊಬ್ಬನೆ ತಿರುಗಿ ಹಾಯ್ದನು । ಕೊಳುಗುಳದ ಕೋಲಾಹಳದ ಕೋಳ್ಗುದಿಯ ಕೆಸರಿನಲಿ ॥ ತಲೆಗೆ ಬಂದುದು ತನಗೆ ಚರಾಕ್ಷಣ । ಸುಳಿದೊಡೆಪರಾರಾಧ್ಯಮುನಿಪತಿ।ತಿಲಕವೇದವ್ಯಾಸದೇವರ ಕೃಪೆಯ ಭಾರದಲಿ ॥ ೪ ॥ ನೆಳೆದುಕೊಂಡನು ಮೃತ್ಯುವಿನ ಕೆಡ । ತಲೆಯ ನೊದೆದು ಕೃಪಾಳುವೆನ್ನನು । ತಲೆಬಳಚಿ ಕಳುಹಿದೊಡೆ ಬಂದೆನು ರಾಯನರಿಕೆಯಲಿ॥ ಬಳಲುತೇಳುತ ಬೀಳುತೊಬ್ಬನೆ।ತಲೆಮುಸುಕಿನಲಿ ನಡೆಯೆ ಕಂಡೆನು । ನೆಲನೊಡೆಯನಕುಡಲ್ನೆನುತ ಸುಳಿದೆನು ಸವಿಾಪದಲಿ ॥ ೫ ॥ ಕಂಡೆನರಸನೆ ನಿಬ್ಬರದ ಬಳಿ । ಕಂಡಲೆದುದತಿಶೋಕಶಿಖಿ ಕೈ । ಕೊಂಡುದಿಲ್ಲರೆಗಳಿಗೆ ಬಳಿಕೆಚ್ಚತ್ತು ಕಣ್ದೆರೆಯೆ ॥ ಖಂಡಿಸಿಯೆ ಯೆನ್ನುಬ್ಬೆಯನು ಹುರಿ । ಗೊಂಡುದಾತನ ಸತ್ವಪಾತನ । ದಂಡಿಯಲಿ ಬಹರಾರು ಸುರನರನಾಗಲೋಕದಲಿ ॥ ೬ ॥ ಬಂದನೆನ್ನನು ಸಂತವಿಡುತವ । ನೊಂದುಸರಸಿಯ ತಡಿಯಲಳವಡೆ। ನಿಂದು ಸಂವರಿಸಿದನು ಗದೆಯಲಿ ಬಾಹುಮೂಲೆಯಲಿ ॥ ತಂದೆಗರುಹೆಂದೆನಗೆ ಹೇಳಿದು । ಹಿಂದೆಮುಂದೆ ದಬಲನನಾರ್ತೆ । ದಂಡವಳಿಯದೆ ನೀರ ಹೊಕ್ಕನು ಕಾಣೆನವನಿಪನ ॥ ೭ ॥ ಅವರು ಕಂಬನಿದುಂಬಿದರು ಕೌ । ರವಮಹಾವಂಶಾಭಿಭಾರಾ । ಭ್ಯವಸಿತಕೆ ಫಲವಾಯ್ತಲಾ । ಯಮುನಂದನಾದಿಗಳ ॥ ಶಿವಶಿವಾ ಪವಡಿಸಿತೆ ಚತುರಾ । ರ್ಣವತಟೀಪರಿಧಾನಪೃಥ್ವೀ । ಯುವತಿಬಾಳಿಕೆ ನೀರೊಳೆಂದಳಲಿದನು ಗುರುಸೂನು ॥ ೮ ॥ ಅಳಲದಿರಿ ಗಜಪುರಿಗೆ ಸತಿಯರ । ಕಳುಹುವೆನು ನೀವವನಿಪಾಲನ । ತಿಳುಹಲಾವೊಡೆ ಸಂಧಿಗೊಡಬಡಿಸುವುದುಕುರುಪತಿಯ ॥ ಕೊಳನ ತಡಿಯಲಿ ಕಾಹಿದಂತಿರೆ । ಬಳಸಿ ನೀವೆಂದವರೆನತ್ತಲು। ಕಳುಹಿ ಸಂಜಯ ಬಂದು ಹೊಕ್ಕನು ನೃಪನ ಪಾಳಯವ ॥ ೯ ॥ ಅರಮನೆಗೆ ಬಂದಖಿಳಸಚಿವರ । ಕರೆಸಿದನು ಸರಹಸ್ಯವನು । ವಿಸ್ತರಿಸಿದನು ಸರ್ವಾಪಹಾರದ ನೃಪಪಲಾಯನವ ॥ ಅರಸಿಯರಿದಳು ಭಾನುಮತಿ ಮಿ । ಕ್ಕರಸಿಯರಿಗರುಹಿಸಿದಳಂತಃ । ಪುರದೊಳಲ್ಲಿಯದಲ್ಲಿ ಹರೆದುದು ಕೊಡೆ ರಣಭೀತಿ ॥ ೧೦ ॥ ಕೊಡೆ ಗಜಬಜವಾಯ್ತು ಪಾಳೆಯ । ವೋಡಿತಲ್ಲಿಯದಲ್ಲಿ ಜನವ । ಲ್ಲಾಡಿದುಘು ಕ್ರಯವಿಕ್ರಯದ ವಾಣಿಜವಿಸಂಧಿಯಲಿ ॥ ಹೂಡಿದವು ಭಂಡಿಗಳು ಹರಿದೆಡೆ । ಯಾಡಿದವುಕೊಲ್ಲಾರಿಗಳು ರಥ । ಜೋಡಿಸಿತು ಬದ್ದರದಬಂಡಿಗೆ ಬಂದವರಮನೆಗೆ ॥ ಭಾನುಮತಿ ಹೊರವಂಟಳರಸನ । ಮಾನಿನಿಯರು ಸಹಸ್ರಸಂಖ್ಯೆಯೊ । ಳಾನನೇಂದುಪ್ರಭೆ ವಿಭಾಡಿಸೆ ಬಿಸಿಲ ಬೇಗೆಗಳ ॥ ಭಾನುದತ್ತನ ಸೈಂಧವನ ರವಿ । ಸೂನುವಿನ ದುಶ್ಶಾಸನನ ಜಲ। ಜಾನನೆಯರೊಗ್ಗಿನಲಿ ರಥವೇರಿದರು ದುಗುಡದಲಿ ॥ ೧೨ ॥ ಸರಕ ಹಿಡಿದವು ಭಂಡಿ ಶತಸಾ । ವಿರ ನೃಪಾಲಯದಿಂದ ವಿವಿಧಾ । ಭರಣಭರಿತದ ಭೂರಿಪೆಟ್ಟಿಗೆ ಪೂರಿಸಿತು ರಥವ ॥ ವರದುಕೂಲದ ಪಟ್ಟೆ ವರ್ಣದ । ಥರದದಿಂದೊಟ್ಟಿದವು ಚಾಮರ । ಕರದ ಬಹುವಿಧಮಯದ ಭಾಂಡದ ಭಂಡಿ ಸೂಕಿದವು ॥ ೧೩ ॥ ಬಳಿಯ ಚೌರಿಯ ಹೊರೆಯ ಚಿತ್ರಾ । ವಳಿವಿತಾನದ ಹಾಸುಗಳಹೊಂ । ಬಳಿಯ ತೆರೆಸೀರೆಗಳ ಛತ್ರದ ವ್ಯಜನಸೀಗುರಿಯ ॥ ಹೊಳೆವಪಟ್ಟೆಯಚೋಳಿಗೆಯ ಹೊಂ । ಗೆಲಸದೊಳು ಝುಗೆಗಳ ಸುವರ್ಣಾ । ವಳಿಯದಿಂಡುಗಳೊಟ್ಟಿದವು ಭಂಡಿಗಳ ಜವಗೆಡಿಸಿ ॥ ೧೪ ॥ ಕರವತಿಗೆ ಹೊಂಗಳಸ ಹೊಂಗೊ । ಪ್ಪರಿಗೆ ದೀಪಸ್ತಂಭಹೆಮ್ಮದ । ಸರಘಳಿಯಮಣಿಮಯದಜಂತ್ರದ ಜೇನಸೂತ್ರಿಗಳ ॥ ಮರಕತದಮಣಿಪಾತ್ರನೀಲದ । ಕಲಶ ಸ್ಫಟಿಕೋರಿಂಜಪಡಿಗವ । ಚದುರು ತಂದೊಟ್ಟಿದರು ಬಂಡಿಗೆ ಭಾರಸಂಖ್ಯೆಯಲಿ ॥ ೧೫ ॥ ಮೆರೆವಗಜ

ಹಯಶಾಲೆಯಲಿ ಮೈ । ಮುರುಕವೃದ್ಧವ್ಯಾಧಿತಾವಳಿ । ಮುರಿಗುದುರೆ ಮುರಿಯಾನೆ ತೆಗೆದವು ಕೋಟಿ ಸಂಖ್ಯೆಯಲಿ ॥ ಉರುವಭಂಡಾರದ ಮಹಾರ್ಘವ । ಕಿರುವೆಡೆಗೆ ಗಾಡಿಸಿತು ಬೀದಿಯು । ತೆರಹ ಕೆತ್ತವು ಹೊತ್ತಸರಕಿನ ಭರದ ಭಂಡಿಗಳು ॥ ೧೬ ॥ ರಾಯನರಮನೆಮಂಡಲಿಗೆ ಮಾದಿ । ಲಾಯಚೌಕಿಗೆ ನಿಖಿಳಭವನನಿ । ಕಾಯವನು ತೆಗೆದೊಟ್ಟಿದರು ಬಂಡಿಗಳ ಹಂತಿಗಳ ॥ ರಾಯನನುಜರು ದ್ರೋಣಕೃಪರಾ । ಧೇಯಸೈಂಧವಶಕುನಿರಾಜಿಪ । ಸಾಯಿತರ ಗುಡಿಗೂಡಚಂಪೆಯವೇರಿದರು ರಥವ ॥ ೧೭ ॥ ಪಾಳೆಯಕೆ ಗಜಪುರದ ವಂಕಕೆ । ಕೀಲಿಸಿತು ದಂಡಿಗೆಯು ಸಂದಣಿ । ಮೇಲುಸರಕಿನ ಬಂಡಿ ತಲೆದೋರಿದವು ಕಂಬಿಗಳ॥ ಹೇಳಲೇನು ಮಹಾಸಮುದ್ರವನೇಳಿಸುವಪಾಳೆಯದುಸಿರಿ ಶೂನ್ಯಾಲಯಕೆ ಜೋಡಿಸಿತಲೈ ಜನಮೇಜಯಕ್ಷಿತಿಪ ॥ ೧೮ ॥ ತುಂಬಿದುದು ಗಜಪುರವನಲ್ಲಿಯು । ಕಂಬನಿಯು ಕಾಲುವೆಯನದನೇ। ನೆಂಬೆನೈ ಗಜಬಜಕೆ ಮೊಳೆತುದು ಕೇರಿಕೇರಿಯಲಿ ॥ ಲಂಬಿಸಿತು ಭಯತಿಮಿರ ಶೋಕಾ । ಡಂಬರದ ಡಾವರ ವಿವೇಕವ । ಚುಂಬಿಸಿತು ಧೃತರಾಷ್ಟ್ರವಿದುರರ ಪೌರಪುರಜನವ ॥ ೧೯ ॥ ಬಂದು ಸಂಜಯನಂಧನೃಪತಿಯ । ಮಂದಿರವ ಹೊಕ್ಕಖಿಳನಾರೀ । ವೃಂದವನು ಕಳುಹಿದನು ದಂಡಿಗೆಗಳಲಿ ಮನೆಮನೆಗೆ ॥ ಬಂದರಾರೆನೆ ಸಂಜಯನು ಜೀ । ಯೆಂದೊಡುತ್ಸವದಲ್ಲಿ ಬಂದ್ಯೆ । ತಂದೆ ಸಂಜಯ ಬಾರೆನುತ ಬೋಳೈಸಿದನು ನೃಪತಿ ॥ ೨೦॥ ಹೋಗಿ ತಳುವಿದೆ ಕೌರವೇಂದ್ರನ। ನೀಗಿದಳಲೋ ಜಯವು ಪಾಂಡವ । ರಾಗುಹೋಗೇನಾಯ್ತು ಶಕುನಿಯ ಹಯದ ಮೋಹರವ ॥ ತಾಗಿ ಮುರಿದನೆ ಭೀಮ ನೀಮೇ । ಲ್ಪೋಗಿನಾಹವವೇನು ರಾಯನ । ತಾಗುಥಟ್ಟೇನಾಯ್ತು ಮಡಿದವರಾರು ರಣದೊಳಗೆ ॥೨೧॥ ಏನುಸಂಜಯ ಕೌರವೇಶ್ವರ । ನೇನಮಾಡಿದನಲ್ಲಿ ಕುಂತೀ । ಸೂನುಗಳೊಳಾರಳಿದವರು ಸಲೆ ನಮ್ಮಥಟ್ಟಿನಲಿ ॥ ಏನುಹದನೈ ಶಕುನಿ ರಣದೊಳ।ಗೇನಮಾಡಿದನೆಂದು ಬೆಸಗೊಳಲೇನನೆಂಬೆನು ತಾಯಿಗಾಂಧಾರಿಗೆ ರಣೋತ್ಸವವ ॥ ೨೨ ॥ ಶಕುನಿ ಬಿದ್ದನು ಜೀಯ ಸಹದೇ । ವಕನ ಕೈಯಲುಲೂಕ ಮಡಿದನು । ನಕುಲನಂಬಿನಲಾತ್ರಿಗರ್ತಸುಶರ್ಮಕಾದಿಗಳು ॥ ಸಕಲಗಜಹಯಸೇನೆ ಸಂಶ । ಪ್ತಕರು ಪಾರ್ಥನ ಶರದಲಮರೀ । ನಿಕರವನು ಸೇರಿದರು ಹೇಳುವುದೇನು ರಣರಸವ ॥ ೨೩ ॥ ಬಳಿಕ ನೂರಾನೆಯಲಿ ನಿನ್ನವ । ನಳವಿಗೊಟ್ಟನು ಭೀಮಸೇನನ । ಚಳಗತಿಯ ಚಾತುರದ ಪೀಠಪದಪ್ರಹಾರದಲಿ ॥ ಕಳನೊಳಗೆ ಕೋಲೂರಿ ಮಗ್ಗುಲ । ನೆಲಕೆ ಕೀಲಿಸಲಾನೆಯಿಂದಿಳಿ । ಗಿಳಿದನೇಕಾಂಗದಲಿ ಹಾಯ್ದನು ಧರಿಯದಿ ಕುರುರಾಯ ॥ ೨೪ ॥ ಕುರುಪತಿಯನರಸುತ್ತ ತಾನೈ । ತರಲು ಸಾತ್ಯಕಿ ಕಂಡು ಸೂಠಿಯ । ಲುರವಣಿಸಿ ಹರಿತಂದು ಹಿಡಿದನು ಹೊಯ್ದು ಕಲಬಲನ ॥ ಕರೆದು ದೃಷ್ಟದ್ಯುಮ್ನ ತನ್ನಯ। ಶಿರವ ಕಡಿಯನೆ ಬಳಿಕ ಸಾತ್ಯಕಿ । ಕರದ ಸಬಳವನುಗಿದು ಹೂಡಿದನೆನ್ನ ಗಂಟಲಲಿ ॥ ೨೫ ॥ ಜಲಧಿಯಲಿ ಫಣಿವಳಯದಲಿ ರಿಪು । ಬಲದಮುಖದಲಿ ಸಿಡಿಲಹೊಯ್ಲಿನ । ಹಳುವದಲಿ ಗಿರಿಶಿಖರದಲಿ ದಾವಾಗ್ನಿ ಮಧ್ಯದಲಿ ॥ ಸಿಲುಕಿದೊಡೆ ಬಿಡಿಸುವವಳೇ ಪ್ರತಿ । ಫಲಿತಪೂರ್ವಾರ್ಜಿತದ ಪುಣ್ಯಾ । ವಳಿಗಳೆಂಬುದು ತನ್ನೊಳಾದುದು ಕೇಳು ಧೃತರಾಷ್ಟ್ರ ॥ ೨೬ ॥ ಅಪಹಲದೊಳಾದುದಾವಿ । ಭಾರ್ಗವವೆಂಬಾನೆರಿದ್ವಿನತಗಳು । ದೇವಮುನಿಯದ್ವೈಪಸಿ ಹಿಡಿದನು ಕೈಯಡಾಯುಧವ॥ ಸಾವು ತಪ್ಪಿತು ಬಾದಗಾರಯಣ । ನೋಡಿ ತೃಣದಲಿ ವ್ಯಾದಶವಿ ಸಂ । ಭಾವಿಸುತ ಕುರುಪತಿಯನರಸೆಂದೆನಗೆ ನೇಮಿಸಿದ ॥ ೨೭ ॥ ಬೀಳ

ಕೊಂದನು ಮುನಿಯುನವನೀಪಾಲಕನೆನರಸಿದನು ಕಳನೊಳು । ಸಾಲಹೆಣನೊಟ್ಟಿಲ ಕದಂಬದರು ಧಿರ ಪೂರದಲಿ ॥ ಬೀಳುತೇಳುತ ನಿಲುತ ನಿಲ್ಲುತ । ಕಾಲುನಡೆಯಲಿ ಸುಳಿವೆಕುರುಭೂ। ಪಾಲಕನ ಕಂಡೊಡನೆ ಬಂದೆನು ಕೊಳನ ತಡಿಗಾಗಿ ॥ ೨೮ ॥ ಇಳಿದು ಸರಸಿಯ ಮಧ್ಯದಲಿ ನೃಪ। ತಿಲಕನೆಂದನು ಪಾಳೆಯವನೀ । ಕಳುಹು ಗಜಪುರಿಗೆನಲು ಬಂದೆನು ಪಥದಮಧ್ಯದಲಿ ॥ ಸುಳಿವ ಕಂಡೆನು ಕೃಪನನಾಗುರು। ಗಳಮಗನ ಕೃತವರ್ಮಕನನಿಂ । ತುಳಿದಮೂವರ ಕಳುಹಿದೆನು ಕುರುಪತಿಯ ಹೊರೆಗಾಗಿ ॥ ೨೯ ॥ ತಂದೆನಿಲ್ಲಿಗೆ ಸಕಲನಾರೀ । ವೃಂದವನು ಕುರುಪತಿಯ ನೇಮದಿ । ನಿಂದಿನೀವೃತ್ತಾಂತ ವರ್ತಿಸಿತಿಲ್ಲಿಪರಿಯಂತ ॥ ಮುಂದೆ ಹೇಳುವುದೇನು ನೀ ಬೆಸ । ಸಂದೊಡವನೀಪತಿಯ ಹೊರೆಗೈ । ತಂದನೇ ಗುರುಸುತನು ಮೇಲಣಹದನ ಹೇಳೆಂದ ॥ ೩೦ ॥ ಅರಸ ಕೇಳ್ ಕೃಪಗುರುಜಕೃತವ । ರ್ಮರು ರಥಾಶ್ವಂಗಳನು ದೂರದ । ಲಿರಿಸಿ ತಲೆಮುಸುಕಿನಲಿ ಬಂದರು ಕೊಳನ ತಡಿಗಾಗಿ ॥ ತರುಲತೆಗಳಬ್ಬಿನಲಿ ಕಂಡಾ । ಕರದೊಳೊಯ್ಯನೆ ನಿಲುಕಿ ಮೆಲ್ಲನೆ । ಕರೆದು ಸೂಚಿಸಿ ಹೇಳಿದರು ತಮತಮ್ಮಹೆಸರುಗಳ ॥ ೩೧ ॥ ಬದುಕಿ ಬಂದೊಡೆ ಭೀಮ ನಿಮ್ಮನು । ಗದೆಯ ಸವಿಗಾಣಿಸನಲಾ ಸಾ । ಕಿದನ ಸಮರಕೆ ಸುಳಿದಿರೈ ಸಾಹಿತ್ಯ ರೇಖೆಯಲಿ ॥ ಕದನದಲಿ ಸೌಬಲಸುಶರ್ಮರ । ಹೊದರ ಹರೆಗಡಿತದಲಿ ನೀವ್ಮಾ । ಡಿದ ಪರಾಕ್ರಮವಾವುದೆಂದನು ನೃಪತಿ ಖಾತಿಯಲಿ ॥ ಜೀಯ ಖತಿಯೇಕೆಮ್ಮೊಡನೆ ಚ। ಕ್ರಾಯುಧನ ಚಾತುರ್ಯದಲಿ ರಣ । ದಾಯ ತಪ್ಪಿತು ಭಟರು ಬಿದ್ದರು ಹೇಳಲೇನದನು ॥ ಕಾಯಿದರೊ ಕಾದಿದರೊ ಗುರುಗಾಂ । ಗೇಯಸೈಂಧವಮಾದ್ರಪತಿರಾ । ಧೇಯರನುಗತಿವೊಗದಿಹುದಪರಾಧ ನಮಗೆಂದ ॥ ೩೩ ॥ ಅರಸ ಪೊರಮಡು ಭೀಮಪಾರ್ಥರ। ಕರುಳ ಬೀಯುವ ಭೂರಿನಿಕರಕೆ । ಬರಿಸುವೆವು ನೀನೋಡಲೊಡ್ಡುವೆವಸ್ತ್ರಸಂತತಿಯ ॥ ಗರುವರಿಹರೇ ನೀರೊಳಾಹಿಮ । ಕರಮಹಾನ್ವಯಕೀರ್ತಿಜಲದೊಳು । ಕರಗದಿಹುದೇ ಕಷ್ಟವೃತ್ತಿಯಿದೆಂದನವನಿಪನ ॥ ೩೪ ॥ ಕೇಳು ಕುರುಪತಿ ಪಾಂಡುಸುತಶತ । ಡಾಲಸೇನೆಗೆ ಸಿಂಹವಿಪಿನ। ನ್ನಾಳೆ ಬಿಡು ನೀ ನೋಡುತಿರು ಕರ್ಣಾದಿಸುಭಟರಲಿ ॥ ಜಾಳಿಸಿದಜಯಕಾಮಿನಿಯ ಜಂ। ಘಾಳತನವನು ನಿಲಿಸಿ ನಿನ್ನಯ । ತೋಳಿನಲಿ ತೋರುವೆನು ಮೈದೋರೆಂದರವನಿಪನ ॥ ೩೫ ॥ ಒಪ್ಪದಿದು ಭೀಷ್ಮಾದಿಯೌವನ । ದರ್ಪದಲಿ ಚಾರಿದಜಯಾಂಗನೆ। ಮುಪ್ಪಿನಲಿ ನಮಗೊಲಿವುದರಿದೇಕಾಕಿಯಾದವಳಿ ॥ ತಪ್ಪಿದುದು ಸಲಿಲವಾಸದೊ । ಳೊಪ್ಪಲಿಡುವೆನು ನಾಳೆ ನೀವ್ ತೊಲ । ಗಿಪ್ಪುದಿಂದಿನೊಳೆಂದನವನಿಪನಾಕೃಪಾದಿಗಳ ॥ ೩೬ ॥ ಇವೆ ಮಹಾಮಂತ್ರಾಸ್ತ್ರಸಂತತಿ । ಇವೆ ಮಹಾಥರ್ವಣಸಂಸ್ಕೃತಿ । ಪವನಸುತಪೇಕ್ಷಂಗಳಿವೆ ತ್ರೈರಥಿಕರೊಂದಾಗಿ ॥ ಅವನಿಪತಿನೀ ಸೇಸದಳಿ ಬಿ । ಕ್ಕಿರಶೇಷವಿರೋಧಿವರ್ಗಕೆ । ದಿವವೊ ಧರೆಯೋ ನೋಡಲಿಸ್ನಹುದೆಂದನಾದ್ರೌಣಿ ॥ ೩೭ ॥ ನೇಸದೆಳೆದನು ಭೀಷ್ಮನಗ್ಗದ । ಭಾಸ ನಿಮ್ಮಯ್ಯನಲಿ ಗತವಾ । ಯ್ತೇಸ ಪತಿಕರಿಸಿದನು ಕರ್ಣನ ಸಂದು ನೀನರಿಯ ॥ ಓಸರಿಸಿದನೆ ಮಾದ್ರಪತಿ ಬಳಿ । ಕೈಸು ಬಂದುದು ದೈವದೊಲುಮೆಯ । ಕೈಸರಿ ಸೇವೆಸ ಮಾಡುವಿರೆಂದನಾಭೂಪ ॥ ೩೮ ॥ ರಣದೊಳಾಗಾಂಗೇಯ ನಿಮ್ಮಡಿ । ಗುಣವ ತೋರುವೆನಪ್ಪರವರಿಂ । ದೆಣಿಸಿಕೊಳು ಮೊಳವಡಿಯನಗ್ಗದಸೂತನಂದನನ ॥ ರಣಕೆ ನಾಲ್ವಡಿ [illegible]ರಾಜನೆ । ಹೊಣೆಗೆ ಗೆಲ್ದುದು ಸುಶರ್ಮಕನಿಯ । ಬಣಗುಗಳು ಸರಿಯಿಲ್ಲ ನೋಡೇಳೆಂದನಾ

ದ್ರೌಣಿ ॥ ೩೯ ॥ ಖರೆಯಲ್ಲೈ ನೀವ್ ಉಭಯರಾಯರ । ಗುರುಗಳಲಿ ಕುಂದಿಲ್ಲ ಕೃಪರೇ । ಹಿರಿಯ ರಾಚಾರಿಯರು ಯಾದವರೊಳಗೆ ಕೃತವರ್ಮ ॥ ಗರುವರೈ ನೀವಿಲ್ಲಿ ರಣಬಾ। ಹಿರರೆ ಸಾಕಂತಿರಲಿ ಸುಕೃತದ । ಲರೆಗೆಲಸಿಗಳು ನಾವು ನಿಮ್ಮಲಿ ಕೊರತೆಯಿಲ್ಲೆಂದ ॥ ೪೦ ॥ ಅರಸ ಕೇಳತಿಸುಕೃತವನು ವಿ । ಸ್ತರಿಸುವೆನು ಪೂರಾಯವೆನೆ ಕಾ । ಹುರದನುಡಿ ಬೇಡೇಳು ನಡೆವುದು ಹಸ್ತಿನಾಪುರಿಗೆ ॥ ಅರಿಗಳೈತಂದಪೌಕಿದೊಡೆ ಗಜ। ಪುರದ ದುರ್ಗವ ಬಲಿದು ನಿಲುವುದು । ಪರಮಮಂತ್ರವಿದೆಂದನಶ್ವತ್ಥಾಮನವನಿಪಗೆ ॥ ೪೧ ॥ ಸಲಿಲವಾಸದೊಳಿಂದಿನಿರುಳನು । ಕಳೆದೆನಾದೊಡೆ ಪಾಂಡುಪುತ್ರರ । ಗೆಲುವೆನುದಯದೊಳಿದುವೆ ನಿಶ್ಚಯವೆನ್ನ ಚಿತ್ತದಲಿ॥ ಅಳುಕಿ ಕದನದೊಳೋಡಿದೊಡೆ ಸಲೆ। ಲಲನೆಯರ ಮರೆಗೊಂಬೆನೇ ನೀವ್। ತೊಲಗಿ ಭೀಮನ ಬೇಹು ಬಹುದಿರಬೇಡ ನೀವೆಂದ ॥೪೨॥ ಅರಸ ಕೇಳೈ ದೈವಯೋಗವ। ಪರಿಹರಿಸಲಾರಳವು ಪವನಜ । ನರಮನೆಯ ಮೃಗಬೇಂಟೆಕಾರರು ಮಾಂಸಭಾರದಲಿ ॥ ಬರುತ ನೀರಡಸಿದರು ಕಂಡರು । ಸರಸಿಯನು ನೀರ್ಗುಡಿಯಲೈತಂ । ದಿರಿಸಿದರು ತೀರದಲಿ ಬಹಳಾಮಿಷದಕಂಬಿಗಳ ॥ ೪೩ ॥ ಚರಣವದನವ ತೊಳೆದು ನಿರ್ಮಳತರವರಾಂಬುವನೀಂಟಿದರು ಕೃಪ। ಗುರುಸುತರ ನುಡಿಗಳನು ನಡುನೀರಿನಲಿ ನೃಪಧ್ವನಿಯ ॥ ಅರಿದರಿವರಾಲಿಸಿದರೇನಿದು । ಕುರುಪತಿಯ ತತ್ಸುಭಟವಾಚೋ । ತ್ತರವಲಾ ಲೇಸಾಯ್ತೆನುತ ಕೇಳಿದರು ಮರೆವಿಡಿದು ॥ ೪೪ ॥ ಆಯಿತಿದು ನೃಪ ರಾಜಕಾರ್ಯದ । ದಾಯಕಿದ್ದುದು ಫಲವಲಾ ಕುರು। ರಾಯಗುಪ್ತನಿವಾಸವಾರ್ತಾಪ್ರದವಲಾ ನಮಗೆ ॥ ಕಾಯದಿರಿ ಕಂಡಾಸರೋಜದ। ತಾಯಿ ಸರಸಿಯೆನುತ್ತ ಹಾಯ್ದರು । ವಾಯುತನುಜನ ಬೇಂಟೆಕಾರರು ನಗುತ ಪಾಳೆಯಕೆ ॥ ೪೫ ॥ ಅರಸ ಕೇಳ್ ಸಂಶಪ್ತಕರ ಸಂ । ಹರಿಸಿ ಶಕುನಿಯ ಮುರಿದು ಕಳನಲಿ। ದೊರೆಯ ಕಾಣದೆ ಭೀಮಸೇನಾದಿಗಳ ದುಗುಡದಲಿ ॥ ಹರಿಸಿದರು ದೂತರನು ಕೌರವ । ಧರಣಿಪನ ಪಾಳೆಯಕೆ ಹಸ್ತಿನ । ಪುರಿಗೆ ಕೂಡೆ ದಿಗಂತದಲಿ ಚರರರಸಿದರು ನೃಪನ ॥ ೪೬ ॥ ಹರಿದು ದೂತರು ನೃಪನ ಕಾಣದೆ । ಮರಳಿದೊಡೆ ಯಮಸೂನು ದುಗುಡದ । ಭರದ ಭಾರವಣೆಯಲಿ ಹೊಕ್ಕರು ತಮ್ಮ ಪಾಳೆಯವ ॥ ಕುರುನೃಪತಿ ತಪ್ಪಿದನು ಭೀಷ್ಮಾ । ದ್ಯರ ವಿಜಯ ನಿಷ್ಫಲವು ಹಸ್ತಿನ । ಪುರದ ಸಿರಿ ಜಾರಿದಳು ನಮಗೆಂದರಸ ಬಿಸುಸುಯ್ದ ॥ ೪೭ ॥ ಹೆಣನ ಬಗಿದರಸಿದರು ಕರಿಗಳ। ಹೆಣದವಲಿ ನೋಡಿದರು ರಥಸಂ । ದಣಿಗಳೊಟ್ಟಿಲ ಕೆದರಿ ಭೀಷ್ಮನ ಸರಳ ಮಂಚದಲಿ ॥ ಹೆಣಗಿದರು ಭಗದತ್ತನಾನೆಯ । ನೆಣೆದು ನೋಡಿದರರುಣವಾರಿಯ । ಕೆಣಕಿ ಕೂಡರಸಿದರು ಚಾರರು ಕಳನ ಚೌಕದಲಿ ॥ ೪೮ ॥ ಹುಡುಕಿದು ಕೂಡರಸಿ ದೂತರು । ಮರಳಿ ಬಂದರು ದುಗುಡಭರದಲಿ । ಬೆರಳ ಮೂಗಿನಲಿದ್ದ ದವನಿಪಸಹಿತ ಪರಿವಾರ ॥ ಇರುಳ ಬೇಗೆಯ ಚಕ್ರವಾಕರ । ತರಣಿ ತಲೆದೋರುವವೊಲಟವೀ । ಚರರ ರಥಸದ ಭಂಗಿಭಾವನೆ ಚಿತ್ರವಾಯ್ತೆಂದ ॥ ೪೯ ॥ ತಂದಮಾಂಸದ ಕಂಬಿಗಳನು ಪು । ಳಿಂದರೊಪ್ಪಿಸಿ ಭೀಮಸೇನನ । ಮಂದಿರವ ಸಾರಿದರು ಕಂಡರು ಜನದ ಕಳವಳವ ॥ ಇಂದಿನೀಸಂಗ್ರಾಮಜಯದಲಿ । ಬಂದಜಾಡ್ಯವಿದೇನು ಬಿನ್ನಹ । ವೆಂದು ಸಲುಗೆಯ ಶಬರಪತಿ ನುಡಿಸಿದನು ಪವನಜನ ॥ ೫೦ ॥ ರಣವಹಿತರೊಳೇಕಾದಶಾಕ್ಷೌ । ಹಿಣಿಯ ಗೆಲಿದುದು ವಿಫಲವಾದುದು । ಜುಣುಗಿದರಿನೃಪನಾವಜವನಿಕೆಯೊಳಡಗಿದನೊ ॥ ತೃಣವನದೊಳಿರುಬಿನಲಿ ಮಳೆ ಸಂ । ದಣಿಗಳಲಿ ಮರಗೋಡಿನಲಿ ಮೃಗ । ಗುಣಿ

ದ ನೆಲೆಯಲಿ ಕಾಣಿರೇ ನೀವೆಂದನಾಭೀಮ ॥ ೫೧ ॥ ಆದರಕಟಾ ಬಿನ್ನಹವನೀ । ವಾದರಿಪುದೆನೆ ತುಷ್ಟನಾಗಿ ವೃ । ಕೋದರನು ಕರೆಸಿದನು ಪರಿಮಿತಕಾಪುಳಿಂದಕರ॥ ಅದುದೇನೆಲೆಕುರುಪತಿಯ ದು॥ರ್ಭೇದವಿದು ಮೆಚ್ಚಂಟೆ ನಿನಗೆನ । ಲಾ ದುರಾತ್ಮಕನರುಹಿದನು ಕೇಳೆಲೆಮಹೀಪಾಲ ॥ ೫೨ ॥ ಜೀಯ ಕುರುಪತಿ ಗುಪ್ತದಲಿದ್ದೈ । ಪಾಯನನ ಸರಸಿಯಲಿ ಸಮರವಿ। ದಾಯತದವಾರ್ತೆಯನು ತನ್ನವರೊಡನೆ ತೀರದಲಿ ॥ ಬಾಯಿಗೇಳಿಸುತಿರ್ದನಾವ್ತ । ತ್ತೋಯಪಾನಕೆ ಬಂದು ಕಂಡೆವು । ರಾಯನಂಘ್ರಿಗಳಾಣೆಯೆಂದನು ಶಬರನನಿಲಜಗೆ ॥ ೫೩ ॥ ಇತ್ತನವರಿಗೆಯಂಗಚಿತ್ತವ । ನುತ್ತಮಾಂಬರವೀರನೂಪುರ । ಮುತ್ತಿನೇಕಾವಳಿಯ ಕರ್ಣಾಭರಣಮುದ್ರಿಕೆಯ ॥ ಹೊತ್ತಹರುಷದ ಹೊಳೆವಕಂಗಳ। ತೆತ್ತಿಸಿದಪುಳಕದ ಸರ್ಘಾಡಿಕೆ । ವೆತ್ತಸುಮ್ಮಾನದಲಿ ಬಂದನು ರಾಯನರಮನೆಗೆ ॥೫೪॥ ಗುಡಿಯ ಕಟ್ಟಿಸು ಜೀಯ ಚರರಿಗೆ। ಕೊಡು ಪಸಾಯವನೆನ್ನನೃಪನ ತೆಲೆ । ವಿಡಿವರ್ದೈ ದ್ವೈಪಾಯನ ಸರೋವರದ ಮಧ್ಯದಲಿ ॥ ಅಡಗದನು ತಡಿವಿಡಿದು ತನ್ನವ । ರೊಡನೆ ಮಾತಾಡಿದನು ಗಡ ನಿ । ಮ್ಮಡಿಯೆ ಬಲ್ಲಿರಿ ರಾಜಕಾರ್ಯವನೆಂದನಾಭೀಮ ॥ ೫೫ ॥ ಕರೆ ಮುಕುಂದನನರ್ಜುನನ ಸಂ । ವರಣೆ ಬರಲಿ ಶಿಖಂಡಿ ಪಾಂಚಾ । ಲರಿಗೆ ನೇಮಿಸು ಕರೆಸು ದೃಷ್ಟದ್ಯುಮ್ನಸೃಂಜಯರ ॥ ಕರಿತುರಗವಿಶ್ರಮವನವನಿಂ । ದಿರುಳು ಮಾಡಲಿ ಬೇಗ ಪೊರಮಡು । ಪೊರಮಡೆನೆ ನಿಸ್ಸಾಳ ಸೂಳೈಸಿದವು ಸನ್ನೆಯಲಿ ॥ ೫೬ ॥ ಅವರ ಸುಮ್ಮಾನವನು ಸೇನಾ । ನಿವಹರಭಸವ ಭೂರಿಭೇರಿಯ । ವಿವಿಧವಾದ್ಯಧ್ವನಿಯ ರಥಹಯಗಜದ ಗರ್ಜನೆಯ ॥ ಇವರು ಕೇಳಿದರಕಟಕಟ ಕೌ । ರವನ ಗುಪ್ತಪ್ರಕಟವಾದುದೆ।ಶಿವಶಿವಾ ಹರಿ ಸರ್ವಗತನಹನೆಂದನಾದ್ರೌಣಿ ॥ ೫೭ ॥ ಏಳು ಕುರುಪತಿ ಪಾಂಡುನಂದನ । ರಾಳು ಬರುತಿದೆ ನಾವು ಸಾಲ್ವರು । ಕಾಳಗವನಂಘೈಸುವೆವು ಬಿಡುಬಿಡು ಸರೋವರವ ॥ ಹೇಳು ಮನವೇನೆನಲು ನೀವಿ । ನ್ನೇಳಿ ದೂರದಲಿರಿ ವಿರೋಧಿಗ । ಳಾಳು ಮಾಡುವುದೇನು ಸಲಿಲದೊಳೆಂದನಾಭೂಪ ॥೫೮ ॥ ಅನಿಮಿಷರು ಗಂಧರ್ವಯಕ್ಷರು । ಮುನಿದು ಮಾಡುವುದಿಲ್ಲ ಮಾಯದ । ಮನುಜರಿಗೆ ತಾ ಸಾಧ್ಯವೆಹನೇ ತನ್ನನರಿಯರಲಾ॥ ವಿನುತಸಲಿಲಸ್ತಂಭವಿದ್ಯೆಯೊ । ಳೆನಗಿರವು ಪಾತಾಳದಲಿ ಯಮ । ತನುಜನೇಗುವ ರೂಹುದೋರದೆ ಹೋಗಿ ನೀವೆಂದ ॥ ೫೯ ॥ ಉರವಣಿಸಿತರಿಸೇನೆ ಮುತ್ತಿತು । ಸರಸಿಯನು ವೊಡ್ಡೈಸಿ ಗಿಡಮೆಳೆ। ತರುಲತೆಯನೊಳಕೊಂಡು ನಿಂದುದು ಚತುರಚತುರಂಗ ॥ ಚರರ ಗರ್ಜನೆ ವಾದ್ಯರವ ಕರಿ । ತುರಗ ರಥನಿರ್ಘೋಷ ಪರ್ವಿತೆ । ಬಿರಿಯ ಮೊಳಗಿತು ಸಿಲುಕಿದನು ಸಿಲುಕಿದನು ದೊರೆಯೆನುತ ॥ ೬೦ ॥ ಇವರು ತಿರುಗಿದರಿತ್ತ ದೈವ। ವ್ಯವಹರಣೆ ಫಲಿಸುವುದಲಾ ಕೌ । ರವನ ಸಿರಿ ಪುಣ್ಯಾಂಗನಾವಿಭ್ರಮವ ವರಿಸಿತಲಾ ॥ ಅವರಿಗಿದನಾರರುಹಿದರೊ ಪಾಂ। ಡವರಿಗಾವುದು ಕೊರತೆ ಪುಣ್ಯ । ಪ್ರವರಗದುಗಿನವೀರನಾರಾಯಣನ ಕರುಣದಲಿ ॥ ... ... ॥ ೬೧ ॥

ಅಂತು ಸಂಧಿ ೬೬ಕ್ಕೆ ಪದ ೨೧೬೬ಕ್ಕಂ ಮಂಗಳಮಸ್ತು



## ಐದನೆಯ ಸಂಧಿ.

||ಸೂಚನೆ|| ಮುತ್ತಿ ಮಾವಲಿಸಿದರು ಕುರುರಾ | ಜೋತ್ತಮನನುದಕದಲಿ ಹೊರವಡಿ | ಸುತ್ತ ಕಂಡರು ಪಾಂಡುತನುಜರು ರೋಹಿಣೀಸುತನ ||

ಪದ || ಕೇಳು ಧೃತರಾಷ್ಟ್ರಾವನಿಪ ರಿಪು | ಜಾಲ ಜಡಿದುದು ಕೊಳನ ತಡಿಯಲಿ | ತೂಳಿದುದು ಬಲುಬೊಬ್ಬೆಯಬ್ಬರವಭ್ರಮಂಡಲವ || ಸೂಳವಿಸಿದವು ಲಗ್ಗೆಯಲಿ ನಿ | ಸ್ಸಾಳಬಹುವಿಧವಾದ್ಯರವ ಹೆ | ಗ್ಗಾಳೆಗಳು ಚೀರಿದವು ಬೈಸಿಕೆ ಬಿಡೆ ಕುಲಾದ್ರಿಗಳು || ೧ || ತಳಮಳಲ ಮೊಗೆಮೊಗೆದು ಕವಡಿತು | ಕೊಳನ ಜಲಚರನಿಚಯ ಬಲುಬೊ | ಬ್ಬುಳಿಕೆ ಮಿಾಯೊಬ್ಬುಳಿಗೆ ನೆರೆದವು ಬೆದರ ಹೊಯ್ಲಿನಲಿ || ದಳವ ಬಗಿದಂಬುಜದೊಳಡಗಿದ | ವಳಿನಿಕರ ಹಾರಿದವು ಹಂಸಾ| ವಳಿ ಜವಾಯ್ಲರತನದಿ ಜಗುಳ್ದವು ಚಕ್ರವಕ್ಕಿಗಳು ||೨ || ಬಂದುದರಿಬಲ ಕೊಳನತೀರದ | ಲಂದು ವೆಡ್ಡೈಸಿದರು ಸರಸಿಯ | ಬಂದಿಕಾರರು ಬೊಬ್ಬಿರಿತದಬ್ಬರಕೆ ಧರೆ ಬಿರಿಯೆ || ಅಂದಳದಲೈತಂದು ಧರ್ಮಜ | ನಂದನರ್ಜುನಭೀಮಯಮಳಮು | ಕುಂದ ಸಾತ್ಯಕಿ ದ್ರುಪದಸೂನುಶಿಖಂಡಿಗಳುಸಹಿತ || ೩ || ವರಯುಧಾಮನ್ಯುತ್ತಮೌಂಜಸ | ರಿರಲು ಪಂಚದ್ರೌಪದೀಸುತ | ರರಸ ನಿಮ್ಮಯಯುಯುತ್ಸುಸೃಂಜಯಸೋಮಕಾದಿಗಳು || ಕರಿಗಳೈನೂರೈದುಸಾವಿರ | ತುರಗಪಾಯ್ದಳವೆಂಟುಸಾವಿರ | ವೆರಡುಸಾವಿರರಥವಿದರಿಮೋಹರದಪರಿಶೇಷ || ೪ || ದೇವ ಕಂಡಿರೆ ಕುರುಪತಿಯ ಮಾ | ಯಾವಿಡಂಬದ ವಿದ್ಯೆಯನು ನಿ | ರ್ಭಾವನಾವಿರ್ಭೂತಸಲಿಲಸ್ತಂಭಡಂಬರವ || ಆವುದಲ್ಲಿಯ ವಿಹಿತಸಮರ | ವ್ಯಾವಹಾರಿಕವಿಷಯ ತಪ್ಪದೆ| ನೀನು ಬೆಸಸುವುದೆಂದನರಸನು ದೇವಕೀಸುತನ || ೫ || ಭರತವಂಶಲಲಾಮ ಕೇಳ್ ನೃಪ | ವರರ ಪದ್ಧತಿ ಕಂಟಕದಿನು | ದ್ಧರಿಸುವುದು ಕಂಟಕರ ಮಾಯಾವಿಗಳ ವಿದ್ಯೆಗಳ || ಪರಿಹರಿಸುವುದು ಮಾಯೆಯಲಿ ಪ್ರತಿ | ಗರಳದಲಿ ಗರಳವನು ಮಾಯಾ | ಪರರು ಮಾಯೋಪಾಯವೈದ್ಯರು ನೃಪತಿ ಕೇಳೆಂದ || ೬ || ಮರಣವೊದಿಂಗಾಗದಂತಿರೆ | ವರವ ಕೊಂಡು ಹಿರಣ್ಯಕಾಸುರ | ಸುರನರೋರಗರನು ವಿಭಾಡಿಸಿ ಧರ್ಮ ಪದ್ಧತಿಗೆ || ಧರಧುರವ ಮಾಡಿದೊಡೆ ನರಕೇ| ಸರಿಯ ರೂಪಿನಲಾದಿವಿಷ್ಣುವಂ | ಭರನು ಗಲಿದನು ಮಾಯೆಯಲಿ ಮಾಯಾ ಪ್ರಪಂಚವನು || ೭ || ಲಲಿತವೈದಿಕಧರ್ಮಮಾರ್ಗವ | ನೆಳಿದು ಹೆಚ್ಚಿದಕಾಲನೇಮಿಯ| ತಲೆಯ ಕೊಂಡನು ಚಕ್ರದಲಿ ದೈತ್ಯಾರಿ ಪೂರ್ವದಲಿ || ಬಲನ ಭಂಜನ ವೃತ್ರನನು ಶ್ರಂ | ಖಲಿತಮಾಯದ ಮಾಯದಿಂದವ| ಬಲವಿರೋಧಿ ವಿಭಾಡಿಸಿದನವನೀಶ ಕೇಳೆಂದ || ೮ || ಹರನ ವರದಲಿ ಹೆಚ್ಚಿ ಭಸ್ಮಾ | ಸುರನು ಶಿವನ ವಿಭಾಡಿಸಿದೊಡೆ | ಬ್ಬರದವನನುರುಹಿದನು ಹರಿ ಮಾಯಾ ಪ್ರಯೋಗದಲಿ || ಸುರರ ನೆರೆಯಾಳಿದನ ಭುವನವ| ನೊರಸಿದಾರಾವಣನ ರೂಢಿಯ| ಶಿರವ ನೆರರೂಪಿಂದ ಕ್ಷಿತಿಯಲಿ ರಾಮ ಖಂಡಿಸಿದ || ೯ || ಎಮಗೆ ತಾಯೊಡಹುಟ್ಟಿದನ ನಿ| ರ್ಮಮತೆಯಲಿ ನಿರ್ದಾಂಟಿಸಿದೊಡಾ | ಕ್ರಮದಲೇ ಕಂಸಂಗೆ ಹಿಂಸಾಕೃತಿಯ ರಚಿಸಿದೆಲಾ || ಸಮರದಲ್ಲಿ ಸೃಗಾಲನೃಪನಾ | ಕ್ರಮಿಸಿದನು ಠಕ್ಕಿನಲಿ ಮಾಯಾ | ಶಿಬಿರವನು ಮಾಯೆಯಲಿಗೆಲಿದೆನು ರಾಯ ಕೇಳೆಂದ || ೧೦ || ಕಾಲಯವನನ ದಂತವಕ್ತ್ರನ | ಸಾಲ್ವನ ಮಾಗಧನ ನರಕನ | ಸೀಳಿದೆನು ಕೃತಮಾ

ಯರನು ಮಾಯಾಪ್ರಪಂಚದಲಿ ॥ ಧೂಳರನು ಧವಳರನು ತಕ್ಕಿನ । ಠೌಳಿಕಾರರ ವಿದ್ಯೆಯೆಲ್ಲವ । ನಾಳಿಗೊಂಡರೆ ದೋಷವಿಲ್ಲವನೀಶ ಕೇಳೆಂದ ॥ ೧೧ ॥ ದ್ಯೂತಮೃಗಯಾವ್ಯಸನಿಗಳು ನೃಪ । ಜಾತಿಗಾದ ವಿನೋದಕಪಟ । ದ್ಯೂತವಿದು ನೃಪಧರ್ಮವೇ ಮಾಯಾಭಿಯೋಗದಲಿ ॥ ಸೋತರಿಳೆಯನದಂತಿರಲಿನಿ । ಭೀತಿಯಲಿ ನಿಮ್ಮ ರಸಿಯುಟ್ಟುದ । ನೀತ ಸುಲಿದನು ಯಿವನು ಸುಜನನೆ ನೃಪತಿ ಹೇಳೆಂದ ॥ ೧೨ ॥ ಐಒಕದ ಸಂಭಾವನೆಯು ಸಂ । ಮೋಹನಕೆ ಮರುಳಾಗಿ ಸುಕೃತದ । ದ್ರೋಹವಾಗದಲೇ ಸುಯೋಧನವಧೆಯುದೆಸೆಯಿಂದ ॥ ಈಹದಕೆ ಬಿನ್ನೈಸಿದೊಡೆ ನೀ। ವಾಹದಕೆ ಧರ್ಮಾರ್ಥಶಾಸ್ತ್ರವ॥ ನೂಹಿಸಿದರೆಂದರಸನುಡಿಸಿದನಿತ್ತ ಕುರುಪತಿಯು ॥ ೧೩ ॥ ಏಳು ಕೌರವರಾಯು ಸಲಿಲ । ವ್ಯಾಳನೇ ನೀನಕಟ ಜಲದೊಳ । ಗಾಳುವರೆ ಕಾಳಾಯ್ತು ನಿನ್ನಲಿ ಗರುವಶಶಿವಂಶ ॥ ಕಾಳಗದೊಳಬ್ದಿದೆ ಸಹೋದರ। ಜಾಲಪುತ್ರಜ್ಞಾತಿಬಂಧು ನೃ । ಪಾಲರನು ನೀನೀರೊಳಡಗಿದೆ ಕಷ್ಟ ಹೋಗೆಂದ ॥೧೪॥ ಜಾತಮಾತ್ರದಮೇಲೆ ಬಂದವು । ಖ್ಯಾತಿವಿಖ್ಯಾತಿಗಳು ನಮಗೆನೆ । ಖ್ಯಾತರಾದೆವು ನಾವು ನಿರ್ಮಳ ಸೋಮವಂಶದಲಿ ॥ ಭೀತಿಯಲಿ ನೀ ನೀರ ಹೊಕ್ಕೊಡೆ। ಮಾತುಹೊರದೇನಮ್ಮನಕಟಾ । ಬೂತುಗಳ ಕೈಬಾಯ್ಗೆ ಬಂದೈತಂದೆ ಕುರುರಾಯು ॥ ನಾಡೊಳರ್ಧವ ಕೊಡದೆಹೋದರೆ । ಬೇಡಿದೈದೂರುಗಳ ಕೊಡೆನೆಂ । ದೇಡಿಸಿದೆ ಸೂಚ್ಯಗ್ರದಲಿ ಸಂಮಿಳಿತಧಾರುಣಿಯು ॥ ನಾಡೆ ನೀ ಕೊಡೆನೆಂದು ದರ್ಪವ । ಮಾಡಿ ಸಕಲಮಹೀತಳವ ಹೋ । ಗಾಡಿ ಹೊಕ್ಕೆ ಜಲವನಾವೆಡೆ ನಿನ್ನ ಛಲವೆಂದ ॥ ೧೬ ॥ ಹೇಳಿದರಲಾ ವಿದುರ ಭೀಷ್ಮರ। ಮೇಲುದಾಯುದ ತಾಗುಥಟ್ಟನು । ಕೇಳದಖಿಳಾಹಿಣಿಯು ಕ್ಷತ್ರಿಯರ । ತಡೆಗಡಿಸ್ದೆ ॥ ಕಾಳಗವನೊಟ್ಟೈಸಿ ನೀರೊಳ। ಗಾಳುವುದು ನಿನಗಾರು ಬುದ್ಧಿಯು । ಹೇಳಿದರು ನುಡಿನುಡಿ ಸುಯೋಧನಯೆಂದನಾನೃಪತಿ ॥ ೧೭ ॥ ಕಂಡೆನೆಂದೊಬ್ಬನ ಪಲಾಯುನ । ಪಂಡಿತನನುತ್ತರನ ನಾತನ। ಗಂಡ ನೀನಾದೈ ಪಲಾಯುಸಸಿರಿಯು ಸೂರೆಯಲಿ ॥ ಭಂಡರಿಬ್ಬರು ಭೂಮಿಪರೊಳಾ । ಭಂಡ ನೀನೇ ಮಿಗಿಲು ಸಲಿಲದ । ಕೊಂಡವನು ಹೊಕ್ಕನೆ ವಿರಾಟಜನೆಂದನಾರಾಯು ॥ ೧೮ ॥ ಅಡವಿಯೇ ನೆಲೆ ಪಾಂಡುಸುತರಿಗೆ । ಕೊಡೆನುಧರಣಿಯನೆಂದು ಖಡುಗವ ಝಡಿದೆಲಾ ನಿನ್ನೋಲಗದ ನಾಯಿಯರ ಸಂಮುಖದಿ ॥ ಖಡುಗವನು ಖಳನೊಳಗೆ ಹಾಯಿಸಿ। ವಡುಗೊಳನ ನೀ ನೋಡಿ ಹೊಕ್ಕೊಡೆ । ಮಡದಿಯರು ತವತವಗೆ ನಗರೇ ಹೊಯ್ದು ಕರತಳವ ॥ ೧೯ ॥ ಜೀವಸಖರಾಧೇಯನಾತನ । ಸಾವಿನಲಿ ಹಿಂದುಳಿದೆ ಸೋದರ । ಮಾವಶಕುನಿಯು ಸೈಂಧವನ ದುಶ್ಶಾಸನಾದಿಗಳ ॥ ಸಾವಿನಲಿ ಹಿಂದುಳಿದೆ ಜೀವನ । ಜೀವನವೆ ಜೀವನ ನಿವಾಸದೊ । ಳಾವಗೆಸುವಿಕೆ ಕೊಳನ ಹೊರುನಡು ಕೈದುಕೊಳ್ಳೆಂದ ॥ ೨೦ ॥ ಓಡಿ ಕೈದುವ ಹಾಯ್ಕಿ ರಣದಲಿ । ಹೇಡಿಗರ ಹಿಡಿದಳುಕಿ ಬದುಕಿದ । ಗೂಡಿತುದೆ ಗರುವಾಯಿಯಲಿ ಕಲ್ಪಾಂತಪರಿಯಂತ ॥ ಓಡಿ ಪಾತಾಳದಲಿ ಹೊಕ್ಕೊಡೆ । ಕೂಡೆ ಸಂಧಿಸಿ ನಿನ್ನ ಬೇಂಟೆಯ । ನಾಡದಿಹವೇ ನಾವು ಕುರುಪತಿ ಕೈದುಕೊಳ್ಳೆಂದ ॥ ೨೧ ॥ ಭರತನಹುಷಯಯಾತಿಗಳ ಸಂ । ವರಣಸಗರದಿಳೀಪನೃಗರಖು । ವರಪುರೂರವದುಂದುಮಾರಭಗೀರಥಾದಿಗಳು ॥ ಧರಣಿಪಾಲರನಂತಸಮರದೊ । ಳಿನ್ನೃಪರ ಸವೆದರು ನಿನ್ನವೊ । ಲುರುಳಿದವರಿಲ್ಲುದಕದಲಿ ನೃಪ ಕೈದುಕೊಳ್ಳೆಂದ ॥ ೨೨ ॥ ಕೊಳನ ಬಿಡು ಕಾದೇಳು ಹಿಂವಣಾ । ಹಳಿವ ತೊಡೆ ಹೇಳಾಳ ಬಾಂಧವ । ಬಳಗ

ಭೂಮೀಶ್ವರರ ಬಹಳಾ ಕ್ಷೌಹಿಣೀದಳವ ॥ ಅಳಿದಕೀರ್ತಿಯು ಕೆಸರ ತೊಡೆ ಭೂ । ವಳಯಮಾನ್ಯ
ನು ದೈನ್ಯವೃತ್ತಿಯ । ಬಳಸುವರೆ ಸುಡು ಮರುಳೆ ಕುರುಪತಿ ಕೈದುವಿಡಿಯೆಂದ ॥೨೩॥ ಅನಿಲಸುತ
ಬಾ ಕುರುಕಕುಲಾನ್ವಯ । ವನದವಾನಲ ವೈರಿಪುತ್ರಜ । ಘನಶರಧಿವಡಬಾಗ್ನಿ ಬಾರೈ ನುಡಿಸು ಕುರು
ಪತಿಯ ॥ ಎನೆ ಹಸಾದವ ಹಾಯ್ಕಿ ಯಮನಂ । ದನನ ನೇಮವ ಕೊಂಡು ಕೌರವ । ನನು ವಿಭಾಡಿ
ಸಿ ಬೈದು ನುಡಿದನು ಖಾತಿಯಲಿ ಭೀಮ ॥ ೨೪ ॥ ವಿಷವನಿಕ್ಕಿದೆ ಹಾವಿನಲಿ ಬಂ । ಧಿಸಿದೆ ಮಡುವಿ
ನೊಳಿಟ್ಟು ಬಳಿಕ । ಬ್ಬಸವ ಮಾಡಿದೆ ಹಿಂದೆ ಮನಮುನಿಸಾಗಿ ಬಾಲ್ಯದಲಿ ॥ ವಸತಿಯಲಿ ಬಳಿಕಗ್ನಿ
ದೇವರ । ಪಸರಿಸಿದೆ ಪುಣ್ಯದಲಿ ನಾವ' ಜೀ । ವಿಸಿದೆವಡಗಿದೊಡಿನ್ನು ಬಿಡುವೆವೆಯೆಂದನಾಭೀಮ
॥ ೨೫ ॥ ಎಲವೊ ರಾಯನ ಪಟ್ಟದರಸಿಯ । ಸುಲಿಸಿದಾಛಲವೆಲ್ಲಿ ಹಗೆಗಳ । ಹಳುವದಲಿ ಹೊಗಿಸಿದ
ಮಹಾಪೌರುಷದ ಸಿರಿಯೆಲ್ಲಿ ॥ ಖಳಶಿರೋಮಣಿ ನಿನ್ನ ತಲೆಕೂ । ದಲಲಿ ಕೈದುವ ಕಟ್ಟಿ ಖೇಚರ । ನೆ
ಳೆಯ ಬಿಡಿಸಿದನಾರು ಕೌರವ ಯೆಂದನಾಭೀಮ ॥ ೨೬ ॥ ಭೀಮನೆನೆ ಭುಗಿಲೆಂಬರೋಷದ । ತಾಮ
ಸವ ಬೀಳ್ಕೊಟ್ಟೆಲಾ ನಿ । ರ್ನಾಮವಾಯಿತೆ ಬಿರುದುಪಾಂಡವತಿಮಿರರವಿಯೆಂಬ ॥ ಭೀಮವನದಾವಾ
ಗ್ನಿ ಹೊರವಡು । ಭೀಮಭಾಸ್ಕರರಾಹು ಹೊರವಡು । ಭೀಮಗರ್ಜನೆಮಧುರಗೀತವೆ ನೃಪತಿಬಾರೆಂ
ದ ॥ ೨೭ ॥ ಕೆಡಹಿ ದುಶ್ಶಾಸನನ ರಕುತವ । ಕುಡಿದವನು ತಾನಲ್ಲಲೇ ನಿ । ನ್ನೊಡನೆಹುಟ್ಟಿದನೊ
ರನುಂಗಿದಕಾಲಯಮನಲಾ ॥ ಅಡಗಿದೊಡೆ ಬಿಡುವೆನೆ ಭುಜಜ್ವರ । ಹಿಡಿದು ನಿನ್ನನು ಸೆಳೆದು ರಣದಲಿ ।
ತೊಡೆಯ ಕಳಚುವಮೃತ್ಯು ಭೀಮನ ಕೈಯ ನೋಡೆಂದ ॥ ೨೮ ॥ ಜಲವ ಹೊಕ್ಕನ ಹುಲ್ಲಕಚ್ಚಿದ ।
ನರನನುರುಗಿರಿಶಿಖರದಲಿ ಕಾ । ಲ್ಗೊಳಿಸಿದನ ವಲ್ಮೀಕಸಂಗತನನು ನಿರಾಯುಧನ ॥ ಕೊಲುವುದನು
ಚಿತವೆಂಬಶಾಸ್ತ್ರವೆ । ತಿಳಿದು ನಂಬಿದೆ ನಿನ್ನನೊಬ್ಬನ । ಕೊಲುವುದಕೆ ಶ್ರುತಿಶಾಸ್ತ್ರ ತನಗಿಲ್ಲೆಂದ
ನಾಭೀಮ ॥ ೨೯ ॥ ಅರಸನಲಿ ಹಗೆಯಿಲ್ಲ ಯಮಳರು । ತರಳರಲಿ ಮುನಿಸಿಲ್ಲ ಫಲುಗುಣ । ಮುರ
ವಿರೋಧಿಸವರ್ಗಭೀಮನ ತನುವ ನೆರೆ ಕಡಿದು ॥ ಮರುಳ ಬಳಗವ ತಣಿಸಿದರ ಹಿರಿ । ಯರಸನಲಿ
ಸಂಧಾನವೆಂಬೀ । ಮರುಳೆ ಕುರುಪತಿ ಭೀಮಸೇನನ ಸೀಳಲೇಳೆಂದ ॥ ೩೦ ॥ ತನತನಗೆ ಸಾತ್ಯಕಿಯ
ಮಳರ । ರ್ಜುನನು ಪಂಚದ್ರೌಪದೀನಂ । ದನರು ಧೃಷ್ಟದ್ಯುಮ್ನಸೃಂಜಯಸೋಮಕಾದಿಗಳು ॥
ಅನುಚಿತವು ಸಲಿಲಪ್ರವೇಶವು । ಜನಪತಿಗೆ ಕರ್ತವ್ಯವೆಂಬುದು । ಜನಜನಿತವೆಂದುಲಿದುದಲ್ಲಿ ಸಮುದ್ರ
ಘೋಷದಲಿ ॥ ೩೧ ॥ ಅರಸ ಕೇಳೈ ನಿನ್ನ ಮಗನು । ಬ್ಬರಿಸಿದನು ರೋಮಾಂಚದಲಿ ಗ । ಬ್ಬರಿಸಿದ
ಧಿಕಕ್ರೋಧಶಿಖಿಕರಣೇಂದ್ರಿಯಾದಿಗಳು ॥ ತರುಬಿದಂತಃಖೇದಮಂತ್ರಾ । ಕ್ಷರಕೆ ಜವನಿಕೆಯಾದುದಾನಿ
ರ್ಭರದ ವೀರಾವೇಶದಲಿ ಪಲ್ಲಟಿಸಿದನು ನೃಪತಿ ॥ ೩೨ ॥ ಮರೆದುದುದಕಸ್ತಂಭಸಲಿಲದ । ಹೊರಗೆ
ಬೊಬ್ಬುಳಿಗಳಕೆ ತೆರೆನೊರೆ । ತರುಬಿದವು ಘುಳಿಘುಳಿಸಿ ಬಲುಬುದ್ಬುದದ ಚೂಣಿಯಲಿ ॥ ದುರುದು
ರಿಪಬಿಸುಸುಯ್ಲ ಸೆಕೆಯಲಿ । ಮರುಗಿ ಕುದಿದುದು ನೀರು ಭೀಮನ । ಬಿರುನುಡಿಯ ಬೇಳಂಬದಲಿ
ಬೆಂಡಾದನಾಭೂಪ ॥ ೩೩ ॥ ಜ್ಞಾನವಳಿದುದು ವೀರಪಣದಭಿ । ಮಾನ ಮಸೆದುದು ಮಂತ್ರದೃಷ್ಟಿ
ಯ । ಮೌನ ಹೆಬ್ಬೆಳಸಾಯ್ತು ಮೋಹಿದುದಾಹವವ್ಯಸನ ॥ ಧ್ಯಾನಮನಹೊರಗೆಳೆದು ಧಾರಣ । ಸಾ
ನಭಾವಕೆ ನಾಚಿದನು ತವ । ಸೂನು ಕಳವಳವೋದನಹಿತವಚೋವಿಘಾತಿಯಲಿ ॥ ೩೪ ॥ ಜಲಧಿಮಧ್ಯ

ದೊಳೇಳ್ವವಡಬಾ । ನೆಲನವೊಲು ತವಕದಲಿ ತಡಿಗು । ಚ್ಚಳಿಸಿದನು ತತ್ಕ್ರೋಧಶಿಖಿ ಕಿಡಿವುಸಗೆ ಕಂಗಳಲಿ ॥ ಹೊಳೆವಭಾರಿಯಹೆಗಲಗದೆ ಕರೆ । ತಳದ ವಿಪುಳಸಘಾಟಗರ್ವದ । ಚಲನಯನದ ಚಡಾಳ ಛಲದ ನೃಪಾಲ ಹೊರವಂಟ ॥ ೩೫ ॥ ಅರಳಿತರಸನ ವದನ ಭೀಮನ । ಹರುಷವುಕ್ಕಿತು ಪಾರ್ಥನುಬ್ಬಿದ । ನುರುಮುದದಲಿರೆ ನಕುಲನುಬ್ಬರಿಸಿದನು ಸಹದೇವ ॥ ಹರಕೆಯಲಿ ದೈವಂಗಳಿತ್ತವು । ವರವನೆಂದರು ದ್ರೌಪದೀಸುತ । ರುರುಶಿಖಂಡಿದ್ರುಪದಸುತಸಾತ್ಯಕಿಗಳೊಲವಿನಲಿ ॥ ೩೬ ॥ ನಗೆಮಸಗಿ ಕರತಳವ ಹೊಯ್ದ್ಯೋಂ। ದೊಗುಮಿಗೆಯ ಹರುಷದಲಿ ನಕುಲಾ । ದಿಗಳು ಬೊಬ್ಬಿರಿದಾಳಿವರು ಬಹುವಾದ್ಯ ರಭಸದಲಿ ॥ ಅಗಿದು ಗುಡಿ ಗಟ್ಟಿದವು ಮುಂಗಾ । ಲುಗಳ ಹೊಯ್ಲಲಿ ತೇಜಿಗಳು ಕೈ । ನೆಗಹಿ ಜಿಯಸೂಚನೆಯಲೊದೆದವು ಪಟ್ಟದಾನೆಗಳು ॥೩೭॥ ಧರಣಿಪತಿ ಕೇಳ್ಕೌರವನ ತಡಿಯಲಿ। ಕುರುಕುಲಾಗ್ರಣಿನಿಂದು ನೋಡಿದ । ನರಿಭಟರ ಸುಮ್ಮಾನವೆನು ಸುಭ್ರಾಂತಿಚೇತನವ ॥ ಉರಿದುದಾ ಮಸ್ತಕದ ಮೆರುಕೊ । ತ್ತರದ ಝಳ ಝಾಡಿಸಿತು ಸತ್ವ। ಸ್ಫುರಣ ಕಿಡಿಯಿಡಲವಮ ರೋಷಿತನಾದನಾರಾಯ॥ ॥ ೩೮॥ ಪ್ರೊತುಮರು ಕುರುರಾಯ ಘನಸ । ತ್ವಾತಿಶಯನೈ ಕೌರವಾನ್ವಯ । ಜಾತನಲ್ಲಾ ಬಾಧ ಪುರೂರವವಿಕ್ರಮಾಗತರ ॥ ಖ್ಯಾತನಲ್ಲಾ ಬಂದುದೊಂದ । ಖ್ಯಾತಿಸಲಿಲವೆಗಾಹದುಳಿದಂ । ದೀತನೊಲು ದೊರೆಯಾರು ಸರಿಯೆಂದನು ಮಹೀಪಾಲ ॥ ೩೯ ॥ ಅರಸ ತೊಡು ಕವಚವನು ಚಾಮಿಾ । ಕರಪರಿಷ್ಕೃತವಜ್ರಮಯಬಂ । ಧುರದ ಸೀಸಕವಿದೆ ದುಕೂಲವರಾನುಲೇಪನವ ॥ ಪರಿಹರಿಸಬೇಡೊಲವಿನಲಿ ಪತಿ । ಕರಿಸೆನುತ ಪೆಟ್ಟಿಗೆಯ ಮುಚ್ಚಳ । ದೆರೆದು ಮುಂದಿರಿಸಿದನು ಸೌಹಾರ್ದ್ರದಲಿ ಯಮಸೂನು ॥ ೪೦ ॥ ಪೂರವಿಸಿದನು ಗಂಧವನು ಸರ । ಳೋರೆಪೋರೆಯ ಮೈಯಗಾಯವ। ಹೋರುಗಳ ಮೆತ್ತಿದನು ಘಟ್ಟಿಸಿ ಗಂಧಸಾರದಲಿ ॥ ಸಾರತರಸಾದಿನ ಜವಾದಿಯ । ಭೂರಿಪರಿಮಳದಿಂದವರಕ । ತ್ತೂರಿತಿಲಕವ ರಚಿಸಿ ಗೆಲಿದನು ತಿಗುರ ತವಕದಲಿ ॥ ೪೧ ॥ ತೆಗೆದು ವಜ್ರಾಂಗಿಯನು ಮೈಯಲಿ । ಬಿಗಿದು ಹೊಂಬರಹದ ಸುರತ್ರಾ । ಣಿಗಳ ಬಲುಸೀಸಕವನಳವಡಿಸಿದನು ಸಿರಿಮುಡಿಗೆ॥ ಝಗಝಗಿಪಬೆಳುದಿಂಗಳಿನ ತೆಳು ॥ದಗಡೆನಲು ತೊಳಗುವದುಕೂಲವ । ಬಿಗಿದು ಮೊನೆಮುಂಜೆರಗನಳವಡಿಸಿದನು ಭೂಪಾಲ ॥ ೪೨ ॥ ಗಾಳಿಸಿದಕತ್ತುರಿಯ ಕರ್ಪೂರ । ವೀಳೆಯವ ಕೊಂಡೆದ್ದು ಸಮರಾ । ಭೀಳಗದೆಯನು ತುಡುಕಿದನು ಪಯಪಾಡನಾರೈದು ॥ ಆಳು ಕವಿಯಲು ರಾವುತರು ಸಮ । ಜೋಳಿಯಲಿ ಸಿಡಿಜೋದರಾನೆಯ । ತೂಳಿಸಲಿ ಸಮರಥರು ಸರಳಿನೊಳೆಂದನಾನೃಪತಿ ॥೪೩॥ಹಿಡಿ ಧನುವನೆಲೆರಾಯ ಪವನಜ । ತುಡುಕು ಗದೆಯನು ಪಾರ್ಥ ಸಮರಕೆ । ತಡೆಯದಿರು ಮಾದ್ರೀಕುಮಾರಕರೇಳಿಕಾಳಗಕೆ ॥ ಮಿಡುಕು ದೃಷ್ಟದ್ಯುಮ್ನ ಸಾತ್ಯಕಿ । ಹೊಡಕರಿಸು ಪಾಂಚಾಲ ನೀವಂ । ಗಡದಲೆಮ್ಮೊಡನೇಳ್ವುದೊಬ್ಬನೆ ನಿಲುವೆ ತಾನೆಂದ ॥ ೪೪॥ ಮೆಚ್ಚಿದನು ಯಮಸೂನು ಛಲ ನಿನೆ । ಗೊಚ್ಚತವಲೈ ವೈರಿಬಲದಲಿ । ಬೆಚ್ಚದಾಡಿದ ಯೋಧರೆಮ್ಮೈವರೊಳಗೊಬ್ಬನನು ॥ ಮೆಚ್ಚಿದವರನು ವರಿಸು ಕಾದುವು । ದಚ್ಚರಿಯ ಮಾಡುವುದು ಗೆಲುವಿನ । ನಿಚ್ಚಟನೆ ನೆಲಕೊಡೆಯನಹುದಿದು ಸಮಯಕೃತವೆಂದ ॥ ೪೫ ॥ ನಿನಗೆ ಬಲುಹೋ ನಾವು ಭೂಕಾ । ಮಿನಿಯನಾಳೆವು ನಮ್ಮೊಳೊಬ್ಬರು । ನಿನಗೆ ಸೋತೊಡೆಮಿಕ್ಕನಾಲ್ವರು ನಿನಗೆ ಕಿಂಕರರು ॥ ನಿನಗೆ ಹಸ್ತಿನಪುರದ ಸಿರಿಸಂ । ಜನಿತಮೀಸಂಕೇತವೇ ಸಾ । ಧನವು ನಿಮಗೆ

ಮಗೆಂದು ನುಡಿವನು ಧರ್ಮಸುತ ನಗುತ ‖ ೪೬ ‖ ದಿಟ್ಟನೈ ನೃಪರಾವು ಮಝುಜಿಗ । ಬಿಟ್ಟಯಲ್ಲಾ ದೊರೆಗಳೊಳಗೀ । ಘಟ್ಟಿಗೊಬ್ಬನೆ ನಿಲುವೆನೆಂದನಿದಾವ ಸಾಹಸವೋ ‖ ಹುಟ್ಟಿದವರಿಗೆ ಸಾವು ಹಣೆಯ ಲಿ । ಕಟ್ಟಿಹುದು ವಿಧಿಯಿಂದಲೀಪರಿ । ಮುಟ್ಟಿದವನೀಯಾವನೆಂದುದು ನಿಖಿಳಪರಿವಾರ ‖ ೪೭ ‖ ಹಾ ಯುಧಿಷ್ಠಿರ ನಿಮ್ಮ ಕೂಡೆವು । ಗಾಯ ಛಲವಿಲ್ಲರ್ಜುನನು ಮಗು । ವೀಯಮಳರಲಿ ಕೈದುಗೊಳ್ಳೆನು ಹೊಯ್ದು ಕೆಣಕಿದರೆ ‖ ಬಾಯಬಡಿಕನು ಸತ್ವದಲಿ ನಾ । ಗಾಯುತದ ಬಲನೆಂಬಡೊಂಬಿನ । ವಾ ಯುವಿನ ಮಗನೆನ್ನೊಡನೆ ಮಾರಾಂತೊಡಹುದೆಂದ ‖ ೪೮ ‖ ವರಿಸಿದೆನು ಭೀಮನನು ನೀವಾ । ದರಿ ಸುವೊಡೆ ಧರ್ಮವನು ದುರ್ಜನ । ಸರಣಿಯಲಿ ನಿಲು ಬಹಡೆ ದಳಸಹಿತೇಳಿ ಕಾಳಗಕೆ ‖ ತೆರಳುವರು ನಾವಲ್ಲ ನೀವ್‍ಪತಿ। ಕರಿಸಿದುದು ನಿಮ್ಮಿಷ್ಟವೆನೆ ಮುರ । ಹರ ಯುಧಿಷ್ಠಿರನೃಪನನೆಕ್ಕಟಿಕರೆದು ಗರ್ಜಿ ಸಿದ ‖ ೪೯ ‖ ಮರುಳೆ ನೀಹೆಚ್ಚಾಳ್ತನದಿಯು ' ಬ್ಬರಿಸಿ ನುಡಿದೆ ಸುಯೋಧನನ ನೀ । ನರಿಯಲಾ ಗದೆ ಕೈಗೆ ಬಂದೊಡೆ ಕದನಭೂಮಿಯಲಿ ‖ ಸರಿಸದಲಿ ಮಲೆತವನು ಜೀವಿಸಿ । ಮರಳಲರಿವನೆ ನಿಮ್ಮೊ ಳೊಬ್ಬರ । ವರಿಸು ವಿಗ್ರಹಕೆಂದು ನಮ್ಮನು ಕೊಂದೆ ನೀನೆಂದ ‖ ೫೦ ‖ ಗೆಲಿದರೈವರೊಳೊಬ್ಬನೆನು ವಿ ‖ ಕ್ಕಳಿದನಾಲ್ವರು ಕಿಂಕರರುಗಡ । ತಿಳಿದು ನುಡಿದಾ ನಿನ್ನ ಸಾಹವ ಮುಖಕೆ ವರಿಸುವೊಡೆ ‖ ಗೆ ಲಲುಬಲ್ಲಾ ಮೇಲುಫಲುಗುಣ । ಗೆಲುವನೇ ಯಿನ್ನುಳಿದರಿಬ್ಬರು । ನಿಲುವರೇ ಕುರುಪತಿಯ ಗಾಢ ದ ಗದೆಯಗಾಳಿಯಲಿ ‖೫೧‖ ಇಂದು ನಿಮ್ಮಯ ಭಾಗ್ಯಲಕ್ಷ್ಮಿಯ। ಕಂದೆರವೆಯಲಿ ಭೀಮ ಕಾದುವು। ದೆಂದು ಜಾರಿಸಿ ನಿಮ್ಮ ಬಿಟ್ಟನು ನಮ್ಮ ಪುಣ್ಯದಲಿ ‖ ಇಂದಿನೀಸಮರದಲಿ ಪವನಜ । ಸಂದೊಡೇನಹು ದೆಂಬ ಚಿತ್ತದ । ಸಂದೆಗವು ನಮಗುಂಟು ಕೌರವನೈಸುಬಲುಹೆಂದ ‖ ೫೨ ‖ ಎಲೆ ಮುರಾಂತಕ ನಿಮ್ಮ ಮುಂದ । ಗ್ಗಳೆಯತನವೆನಗೇಕೆ ನಿಮ್ಮಡಿ । ಗಳ ಸುಧಾಕರುಣಾವಲೋಕನವಜ್ರಕವಚವಲಾ‖ ಮಲೆತಹಗೆವನ ಪಡಿಮುಖದ ತನಿ। ಹೊಳೆವಗದೆಯಿಂದೇನು ರಾಯನ । ಬಲುಹು ಬಿರುದಾವಳಿಯಲೀ ನಹುದೆಂದನಾರಾಯ ‖ ೫೩ ‖ ಪೂತುಮಝು ಭಾಪೆನುತ ಕಂಸಾ । ರಾತಿ ಕೊಂಡಾಡಿದನು ಸಾತ್ಯ ಕಿ । ಭೂತಳಾಧಿಪಪಾರ್ಥಯಮಳಾದಿಗಳು ನಲಿವಿನಲಿ ‖ ವಾತಜನ ಹೊಗಳಿದರು ಸುಭಟ । ವ್ರಾತ ಸೌಹಾರ್ದದಲಿ ಶೌರ್ಯ । ಖ್ಯಾತಿಯನು ಬಣ್ಣಿಸಿದುದವನೀಪಾಲ ಕೇಳೆಂದ ‖ ೫೪ ‖ ಗದೆಯ ಕೊಂಡ ನು ಕೌರವೇಂದ್ರನ । ನಿದಿರುಗೊಂಡನು ಭೀಮ ಬಲವಂ । ಕದಲಿ ವಾಮದಲಿವರು ಬಳಸಿದರಗ್ರಜಾ ನುಜರು ‖ ಕದನಭೂಮಿಯ ಬಿಡವರಿದು ನಿಂ। ದುದು ಚತುರ್ಬಲವೈದೆ ಗಗನದೊ । ಳೊದಗಿದುದು ಸುರನಿಕರ ವಿವಿಧವಿಮಾನವೀಧಿಯಲಿ ‖ ೫೫ ‖ ಚಟುಳತರಭಾರಂಕದಲಿ ಬಲು । ಭಟರು ತರುಬಿದ ರುಬ್ಬಿನಲಿ ಲಟ । ಕಟಸಿದವು ಕಣ್ಣಾಲಿ ಬದ್ಧಭ್ರುಕುಟಿಭಂಗಿಯಲಿ ‖ ಕಟುವಚನವಿಕ್ಷೇಪರೋಷ। ಸ್ಫು ಟನದಲಿ ತತ್ವಾಕ್ಯಭಂಗಿಯ । ಘಟನವಿಘಟನದಿಂದ ಮೂದಲಿಸಿದರು ಮುಳಿಸಿನಲಿ ‖ ೫೬ ‖ ಅರಸ ಕೇಳಿವರಿಬ್ಬರುಬ್ಬಿನ। ಥರಥುಶಡ ದನಿ ಥಟ್ಟೈಸಿತು ಸುರ। ನರರಸಾಸಮಯದಲಿ ಪೂರ್ವೋತ್ತರದ ಭಾ ಗದಲಿ ‖ ಪರಮಮುನಿಸ್ತೋತ್ರಪುಪ ನಡುವೆ ಕಂ । ಧರದ ಮುಸಲದ ವಿಮಲನೀಲಾಂ‖ ಬರದ ರಾಮನ ಬ ರವ ಕಂಡಳು ಕೃಷ್ಣ ಪಾಂಡವರು ‖ ೫೭ ‖ ಅನಿಖಿಲಪರಿವಾರದನುಪಮ । ಧಾನವೃಷ್ಟಿಗಳತ್ತ ತಿರು ಗಿದ । ವೇನನೆಂಬೆನು ಮುಸಲಧರನಾಗಮನಸಂಗತಿಯ ‖ ಈನರೇಂದ್ರನ ಸುಮುಖತೆಯ ಸುಂ । ಮಾ

ನ ಹೊಳೆದುದು ಭಯದಿ ಕುಂತೀ । ಸೂನುಗಳು ಮತಿಗೊಳುತಲಿರ್ದರು ವೀರಸರ
ಯಣನ ... ... ॥ ೫೮ ॥

ಅಂತು ಸಂಧಿ ೫೫ಕ್ಕೆ ಪದ ೨೭೫೫ಕ್ಕಂ ಮಂಗಳಮಸ್ತು.

---

## ಅರನೆಯ ಸಂಧಿ.

ಸೂಚನೆ ॥ ರಂಜಿಸಿತು ತ್ರಿಭುವನವನರಿರಿಪು । ಭಂಜನೆಯು ಭಾರಣೆಯು ಸುಭಟರ । ನಂಜಿಸಿ
ತು ಕಲಿಭೀಮದುರ್‍ಯೋಧನರ ಸಂಗ್ರಾಮು ॥

ಪದ ॥ ಕೇಳು ಧೃತರಾಷ್ಟ್ರಾವನಿಪ ಸಿರಿ । ಲೋಲಸಹಿತ ಯುಧಿಷ್ಠಿರಾದಿನೃ । ಪಾಲಕರು ಕಾ ಣಿಕೆಯನಿತ್ತರು ನಮಿಸಿ ಹಲಧರನ ॥ ಮೇಲುದುಗುಡದ ಮೊಗದ ನೀರೂರೆ। ವಾಲಿಗಳ ಕಕ್ಷದಗದೆಯ ಭೂ । ಪಾಲ ಬಂದನು ನೊಸಲ ಚಾಚಿದನವರ ಚರಣದಲಿ॥೧॥ಇಳಿದು ಗಜಹಯರಥವ ಸುಭಟಾ ವಳಿಕೃ ತಾಂಜಳಿ ನೊಸಲೊಳಿರೆ ಕೆಲ । ಬಲಕೆ ಸಾರ್ದರ ನೋಡಿದನು ಪಾಂಡವಪತಾಕಿನಿಯ ॥ ಉಳಿದುದೀಚೆ ಯಲವರ ಬಲವಿದ । ನುಳಿದನೊಬ್ಬನೆ ದೈವಕೃತಿಗಾ। ರಳಲಿ ಮಾಡುವುದೇನೆನುತ ನುಡಿಸಿದನು ಕುರುಪ ತಿಯ ॥ ೨ ॥ ಗುರುವೊ ಗಂಗಾಸುತನೊ ಮಾದ್ರೇ । ಶ್ವರನೊ ಕರ್ಣ್ಣನೊ ಸೈಂಧವನೊ ಸೋ । ದರ ರ ಶತಕವೊ ಪುತ್ರಮಿತ್ರಜ್ಞಾತಿಬಾಂಧವರೋ॥ ಹರಸಿ ಬಲಿಗಳನಿಕ್ಕಿದೊಡೆ ಗೋ । ಚರಿಸದೇ ರಣ ವಿಜಯನಿಧಿ ಹರ । ಹರಯೆನುತ ಕರಗಿದನು ಘನಕರುಣದಲಿ ಬಲರಾಮ ॥ ೩ ॥ ಆಹವಕೆ ಪಾಂಡವ ಮಮಪ್ರಾಣಾಹ ಯೆಂಬೀನುಡಿಯು ಸಲಿಸಿದೆ । ಬೇಹವರನುಳುಹಿದೆ ಕುಮಾರರ ನಿನ್ನ ವೈರಿಜನರ ॥ ಗಾಹುಗತಕದೊಳೆಮ್ಮ ಶಿಷ್ಯಂ । ಗೀಹದನ ವಿರಚಿಸಿದೆ ನಿನ್ನಯ । ಮೋಹದವರೇ ಗೆಲಲಿಯೆಂದನು ಹರಿಗೆ ಬಲರಾಮ॥೪॥ತಿಳಿದು ನೋಡಿರೆ ರಾಮಧರ್ಮಸ್ಥಳಕೆ ನೀವು ಸಹಾಯವಿನಿಬರ।ಗೆಲವು ನಿರ್ಮ ಳಧರ್ಮಮೂಲವೊ ಧರ್ಮವಿರಹಿತವೊ॥ಛಲವ ಬಿಡಿರೇ ನಿಮ್ಮ ಶಿಷ್ಯನು। ಸಲೆ ಸುಯೋಧನನಲ್ಲದಿರ್ದೊಡೆ। ಬಳಸಬಹುದೇ ಪಕ್ಷಪಾತದೊಳೆಂದನಸುರಾರಿ ॥ ೫ ॥ ನಿಮಗೆ ಪಾಂಡವಪಕ್ಷಪಾತ । ವ್ಯವಹರಣೆ ಹುಸಿ ನಾವಲೇ ಕೌ । ರವರ ಪಕ್ಷೋದ್ದೇಶಿಗಳು ಸಾಕಿನ್ನದಂತಿರಲಿ ॥ ಎಮಗೆ ಸರಿಯಿಬ್ಬರು ಗದಾಭ್ಯಾ । ಸ ವನು ಸಮ್ಮುಖದಲಿ ಮಾಡಿಪರು ತಾ । ವಿವರು ಕಾದಲಿ ನಾವು ನೋಡುವೆವೆಂದನಾರಾಮ ॥೬॥ಎಲೆಮುನೀ ಶ್ವರ ಪೂರ್ವದಲಿ ಯದು । ಬಲವಿಭಾಗದಲವರದೆಸೆಯಲಿ । ಹಲಧರನು ಕೃತವರ್ಮ ನೀಪಾಂಡವರಿ ಗಸುರಾರಿ ॥ಬಳಿಕ ಸಾತ್ಯಕಿ ಯಾಹಸುಗೆಯ । ಸ್ಖಲಿತವಿದರಲಿ ರಾಮನೀ ಕುರು । ಬಲವ ಬಿಟ್ಟನಿದೇ ಕೆನುತ ಜನಮೇಜಯನು ನುಡಿದ ॥೭॥ ಕೇಳು ಜನಮೇಜಯಧರಿತ್ರೀ । ಶಾಲ ಸಂಧಿಯ ಮುರಿದು ಲ ಕ್ಷ್ಮೀ । ಲೋಲ ಬಿಜಯಂಗೈಯನೇ ಕುರುಪತಿಯನವಗಡಿಸಿ ॥ ಕಾಳಹಳವಿಗೆಯವನು ಯಾದವ। ಜಾ ಲಸಹಿತೈತಂದು ಕಾಳ್ಯದ । ಮೇಲುದಾಗಿನ ಹದನನರಿದನು ಕೃಷ್ಣನಭಿಮತವ ॥ ೮ ॥ ಎಮಗೆ ಸರಿಯಿ

ತ್ತಂತವೀಕ್ಷೌ । ರವನ ಮುರಿವೆ ಯುಧಿಷ್ಠಿರನನಾ । ಹವದಿ ಗೆಲಿಸುವೆ ಸಾಕು ನೃಪರಿಗೆ ಈಸುಸಂವಾದ ॥ ಎವಗೆ ತೀರ್ಥಕ್ಷೇತ್ರಯಾತ್ರಾ । ವ್ಯವಸಿತಕೆ ಮನವಾಯಿತೆಂದು । ತ್ಸವದಿನಸುರಾರಾತಿಯುನಃ ಬೀಳ್ಕೊಂಡನಾರಾನು ॥ ೯ ॥ ರಾಮ ಕಳುಹಿಸಿಕೊಂಡು ವಿಪ್ರ । ಸ್ತೋಮಸಹಿತ ಸಮಸ್ತಋಷಿಗಳು । ರಾಮಣೀಯಕವಸ್ತುದಾನವ್ಯಯುದವೈಭವಕೆ ॥ ಸೌಮನಸ್ಯದ ರೋಮಹರುಷಮು । ಹಾಮಹಿಮಃ ತೀರ್ಥಾಭಿರತಿಯುಲಿ । ಗೋಮಹೀಧನವಸ್ತ್ರದಿಂ ದ್ವಿಜಜನವನರ್ಚಿಸಿದ ॥ ೧೦ ॥ ಗಂಗೆಮೊದಲಾದಖಿಳವತೀ । ರ್ಥಂಗಳಲಿ ತದ್ವಾರಣಾಖ್ಯಾ । ನಂಗಳಲಿ ತತ್ತದ್ವಿಶೇಷವಿಧಾನದಾನದಲಿ ॥ ತುಂಗವಿಕಮನಾಸಮಸ್ತಜ । ನಂಗಳೊಡನೆ ಸುತೀರ್ಥಯಾತ್ರಾ । ಸಂಗತಿಯುಲೇ ಬಳಸಿ ಬಂದನು ಭೂಪ್ರದಕ್ಷಿಣವ ॥ ೧೧॥ ಅನನಿಪತಿ ಕೇಳ್ಪುಷ್ಯದಲಿ ಸಂ । ಭವಿಸಿದುದು ನಿರ್ಗಮನ ಬಳಿಕೀ । ಶ್ರವಣನಕ್ಷತ್ರದಲಿ ಕಂಡನು ಕೃಷ್ಣಪಾಂಡವರ ॥ ಅವರು ನೋಟಕರಾದರೀಕ್ಷೌ । ರವವೃಕೋದರರಂಕ ಮಸೆದು । ತ್ಸವದಿ ಕಳನೇರಿದರು ಹಾಯಿಕಿ ಹಿಡಿದು ನಿಜಗದೆಯ ॥ ೧೨ ॥ ಧಾರಿಣೀಪತಿ ಕೇಳ್ರೈ ಪರಿ । ವಾರ ಕುಳ್ಳಿರಿ ಪಾರ್ಥಸಾತ್ಯಕಿ । ವೀರಧೃಷ್ಟದ್ಯುಮ್ನಯುಮಳಶಿಖಂಡಿಮೊದಲಾದ ॥ ವೀರಭಟರಮ್ಮಾಹವದವಿ । ಸ್ತಾರವನು ಸಮವಿಷಮಪಯಗತಿ । ಯೋರೆಪೋರೆಯನರಿವುದೆಂದನು ನಗುತ ಕುರುರಾಯ ॥ ೧೩ ॥ ಚಿತ್ತವಿಸು ಬಲರಾಮ ರಿಪುಗಳ । ತೆತ್ತಿಗಿದೆ ಲೇಸಾಗಿ ನೋಡು ನೃ । ಪೋತ್ತಮರು ಪಾಂಚಾಲಸೋಮಕಸೃಂಜಯಾದಿಗಳು ॥ ಇತ್ತಲಭಿಮುಖರಾಗಿ ರಥಿಕರು । ಮತ್ತಗಜರೋಹಕರು ರಾವುತ । ರಿತ್ತಲೀಕ್ಷಿಸಿ ನಮ್ಮ ಸಮರವನೆಂದನವನೀಶ ॥ ೧೪ ॥ ಓಡಿ ಜಲದೊಳು ಮುಳುಗಿದವರಿಗೆ।ಖೋಡಿಯುಂಟೇ ರಥವಿಳಿದರಣ । ಖೇಡಕಾಲಾಳಿಂಗೆ ಪಯುಗತಿಯೋರೆಪೋರೆಗಳ ॥ ನೋಡುತಿದೆ ಪರಿವಾರ ನೀ ಕೈ । ಮಾಡಿ ತೋರಾ ಬಯಲ ಕಂತದ। ಮೂಡಿಗೆಯುವಾಕ್ಷರದಲೀನಹುದೆಂದನಾಭೀಮ ॥ ೧೫ ॥ ಆಟವಿಕ ಸಂಘದಲಿ ಬಲುವಾ । ಚಾಟ ನೀನಹೆ ನಿಮ್ಮ ಪುಣ್ಯದ । ತೋಟವನು ತರಿದೊಟ್ಟೆ ನಿಮ್ಮ ಕ್ರವರನು ಯಮಪುರದ ॥ ಗೋಟೆನಲಿ ಗುರಿಮಾಡುವೆನು ಜೂ। ಜಾಟದಲಿ ನೀವರಿಯಿರೇ ಬೊ । ಬ್ಬಾಟವೇನಾಯ್ತೆಂದು ಜರೆದನು ವೀರಕುರುರಾಯ ॥ ೧೬ ॥ ಶಕುನಿ ಕಲಿಸಿದಕಪಟದಲಿ ಕೌ।ಳಿಕದಲುಬ್ಬಿದೆಯುದರವಿಸ್ತಾ । ರಕವಲೇ ನಾವಿಂದಿನಲಿ ದುಶ್ಶಾಸನಾದಿಗಳ॥ ರಕುತಪಾನ ಭವತ್ಸಹೋದರ । ನಿಕರನಾಶವನರುಹದೇ ಸು । ಪ್ರಕಟವಿದು ಗಜವೆಂದು ಗದೆಯನು ತೂಗಿದನು ಭೀಮ ॥೧೭॥ ಸಾಯಲಾಗದೆ ಸುಭಟರಾಚೆಂ। ದ್ರಾಯತವೆ ತನುವಿಧಿಯಟಿಪ್ಪಣ । ದಾಯುಷವು ತೀರಿದೊಡೆಸಾವರು ನಿನ್ನೊಳೇನಹುದು ॥ ಕಾಯಲಳವೇ ನಿನಗೆ ಮುನಿದೊಡೆ । ನೋಯಿಸುವೊಡಳವಲ್ಲ ಫಡ ದೈ। ವಾಯತನನೀನೇಕೆ ಬೆರತಿಹೆ ಯೆಂದನಾಭೂಪ ॥ ೧೮ ॥ ಎಲವೊ ದುರ್ಮತಿ ಕೇಳು ನಿನ್ನಯ । ಕುಲದ ಶಿಕ್ಷಾರಕ್ಷೆಗಿನಿಪ್ಪ । ರೊಳರು ಹೊರಬಿಗದೈವವುಂಟೇ ನಾನೆ ದೈವಕಣಾ ॥ ಕಳಚಿದೆನಲಾ ಹಿಂದೆ ನೂರ್ವರೆ।ತಲೆಯನಿನ್ನರಗಳಿಗೆಯಲಿ ಹಿಡ । ತಲೆಯನೊದೆವೆನು ನೋಡೆನುತ ಹೊಯ್ದನು ಸುಯೋಧನನ ॥ ೧೯ ॥ ಬಿಡಿಸಿದನು ಗದೆಯಿಂದ ಹೊಯ್ಲಳ । ತಡೆದು ತಿವಿದನು ನಿನ್ನ ಮಗನವ । ಗದೆಯಗಾಯಕೆ ಗದೆಯ ನೊಡ್ಡಿದೊಡಾಗ ಕೋಪದಲಿ ॥ ತುಡುಕಿದನು ಕಲಿಭೀಮ ಹಚ್ಚೆಯ। ನೊಡೆಮುರಿದು ನಿನ್ನಾತನೌಕಿದ। ರೊಡನೊಡನೆ ಗಾಹಿಸಿದರುಚಿತದ ಗತಿಯ ಗಮಕದಲಿ ॥ ೨೦ ॥ ಹೊಯ್ಲು ಬಿಡಿಸಿದನನಿಲಸುತ ಮೇ।

ನ ಹೊಳೆದುದು ಭಯದಿ ಕುಂತೀ । ಸೂನುಗಳು ಮತಿಗೊಳುತಲಿರ್ದರು ವೀರಸರ
ಯಣಾನ ... ... ॥ ೫೮ ॥

ಅಂತು ಸಂಧಿ ೫೫ಕ್ಕೆ ಪದ ೨೭೫೫ಕ್ಕಂ ಮಂಗಳಮಸ್ತು.

## ಆರನೆಯ ಸಂಧಿ.

ಸೂಚನೆ ॥ ರಂಜಿಸಿತು ತ್ರಿಭುವನವನರಿರಿಪು । ಭಂಜನೆಯ ಭಾರಣೆಯ ಸುಭಟರ । ನಂಜಿಸಿತು ಕಲಿಭೀಮದುರ್ಯೋಧನರ ಸಂಗ್ರಾಮ ॥

ಪದ ॥ ಕೇಳು ಧೃತರಾಷ್ಟ್ರಾವನಿಪ ಸಿರಿ । ಲೋಲಸಹಿತ ಯುಧಿಷ್ಠಿರಾದಿನೃ । ಪಾಲಕರು ಕಾಣಿಕೆಯನಿತ್ತರು ನಮಿಸಿ ಹಲಧರನ ॥ ಮೇಲುದುಗುಡದ ಮೊಗದ ನೀರೊರೆ। ವಾಲಿಗಳ ಕಕ್ಷದಗದೆಯ ಭೂ । ಪಾಲ ಬಂದನು ನೊಸಲ ಚಾಚಿದನವರಚರಣದಲಿ॥೧॥ಇಳಿದು ಗಜಹಯರಥವ ಸುಭಟಾ ವಳಿಕೃತಾಂಜಳಿ ನೊಸಲೊಳಿರೆ ಕೆಲ । ಬಲಕೆ ಸಾರ್ದರ ನೋಡಿದನು ಪಾಂಡವಪತಾಕಿನಿಯ ॥ ಉಳಿದುದೀಚೆಯಲವರ ಬಲವಿದ । ನುಳಿದನೊಬ್ಬನೆ ದೈವಕೃತಿಗಾ। ರಳಲಿ ಮಾಡುವುದೇನೆನುತ ನುಡಿಸಿದನು ಕುರುಪತಿಯ ॥ ೨ ॥ ಗುರುವೊ ಗಂಗಾಸುತನೊ ಮಾದ್ರೇ । ಶ್ವರನೊ ಕರ್ಣನೊ ಸೈಂಧವನೊ ಸೋ । ದರರ ಶತಕವೊ ಪುತ್ರಮಿತ್ರಜ್ಞಾತಿಬಾಂಧವರೋ॥ ಹರಸಿ ಬಲಿಗಳನಿಕ್ಕಿದೊಡೆ ಗೋ । ಚರಿಸದೇ ರಣವಿಜಯನಿಧಿ ಹರ । ಹರಯೆನುತ ಕರಗಿದನು ಘನಕರುಣದಲಿ ಬಲರಾಮ ॥ ೩ ॥ ಆಹವಕೆ ಪಾಂಡವ ಮಮಪ್ರಾಣಾಹಿ ಯೆಂಬೀನುಡಿಯ ಸಲಿಸಿದೆ । ಬೇಹವರನುಳುಹಿದೆ ಕುಮಾರರ ನಿನ್ನ ಮೈದುನರ ॥ ಗಾಹುಗತಕದೊಳೆಮ್ಮಶಿಷ್ಯಂ । ಗೀಹದನ ವಿರಚಿಸಿದೆ ನಿನ್ನಯ । ಮೋಹದವರೇ ಗೆಲಲಿಯೆಂದನು ಹರಿಗೆ ಬಲರಾಮ॥೪॥ತಿಳಿದು ನೋಡಿರೆ ರಾಮಧರ್ಮಸ್ಥಳಕೆ ನೀವು ಸಹಾಯವಿನಿಬರ।ಗೆಲವು ನಿರ್ಮಳಧರ್ಮಮೂಲವೊ ಧರ್ಮವಿರಹಿತವೊ॥ಛಲವ ಬಿಡಿರೇ ನಿಮ್ಮ ಶಿಷ್ಯನು। ಸಲೆ ಸುಯೋಧನನಲ್ಲದಿರ್ದೊಡೆ। ಬಳಸಬಹುದೇ ಪಕ್ಷಪಾತದೊಳೆಂದನಸುರಾರಿ ॥ ೫ ॥ ನಿಮಗೆ ಪಾಂಡವಪಕ್ಷಪಾತ । ವ್ಯವಹರಣೆ ಹುಸಿನಾವಲೇ ಕೌ । ರವರ ಪಕ್ಷೋದ್ದೇಶಿಗಳು ಸಾಕಿನ್ನದಂತಿರಲಿ ॥ ಎಮಗೆ ಸರಿಯಿಬ್ಬರು ಗದಾಭ್ಯಾ । ಸವನು ನಮ್ಮಲಿ ಮಾಡಿದರು ತಾ । ವಿವರು ಕಾದಲಿ ನಾವು ನೋಡುವೆವೆಂದನಾರಾಮ ॥೬॥ಎಲೆಮುನೀಶ್ವರ ಪೂರ್ವದಲಿ ಯದು । ಬಲವಿಭಾಗದಲವರದೆಸೆಯಲಿ । ಹಲಧರನು ಕೃತವರ್ಮ ನೀಪಾಂಡವರಿಗಸುರಾರಿ ॥ಬಳಿಕ ಸಾತ್ಯಕಿ ಯಾಹಸುಗೆಯ । ಸ್ಖಲಿತವಿದರಲಿ ರಾಮನೀ ಕುರು । ಬಲವ ಬಿಟ್ಟನಿದೇಕೆನುತ ಜನಮೇಜಯನು ನುಡಿದ ॥೭॥ ಕೇಳು ಜನಮೇಜಯಧರಿತ್ರೀ । ಪಾಲ ಸಂಧಿಯ ಮುರಿದು ಲಕ್ಷ್ಮೀ । ಲೋಲ ಬಿಜಯಂಗೈಯನೇ ಕುರುಪತಿಯಸವಗಡಿಸಿ ॥ ಕಾಳಹಳವಿಗೆಯವನು ಯಾದವ। ಜಾಳಸಹಿತೈತಂದು ಕಾಳ್ಪಡೆ । ಮೇಲುದಾಗಿನ ಹದನನರಿದನು ಕೃಷ್ಣನಭಿಮತವ ॥ ೮ ॥ ಎಮಗೆ ಸರಿಯಿ

ತ್ತಿಂತವೀಕೌ । ರವನ ಮುರಿವೆ ಯುಧಿಷ್ಠಿರನನಾ । ಹವದಿ ಗೆಲಿಸುವೆ ಸಾಕು ನೃಪರಿಗೆ ಈಸುಸಂವಾದ ॥ ಎವಗೆ ತೀರ್ಥಕ್ಷೇತ್ರಯಾತ್ರಾ । ವ್ಯವಸಿತಕೆ ಮನವಾಯಿತೆಂದು । ತ್ಸವದಿನೆಸುರಾರಾತಿಯನು ಬೀಳ್ಕೊಂಡನಾರಾಮು ॥ ೯ ॥ ರಾಮು ಕಳುಹಿಸಿಕೊಂಡು ವಿಪ್ರ । ಸ್ತೋಮಸಹಿತ ಸಮಸ್ತಋಷಿಗಳು । ರಾಮಣೀಯಕವಸ್ತುದಾನವ್ಯಯದವೈಭವಕೆ ॥ ಸೌಮನಸ್ಯದ ರೋಮಹರುಷಮು । ಹಾಮುಹಿಮ ತೀರ್ಥಾಭಿರತಿಯಲಿ । ಗೋಮಹೀಧನವಸ್ತ್ರದಿಂ ದ್ವಿಜಜನವನರ್ಚಿಸಿದ ॥ ೧೦ ॥ ಗಂಗೆಮೊದಲಾದಖಿಳವರತೀ । ರ್ಥಂಗಳಲಿ ತದ್ವಾರಣಾಖ್ಯಾ । ನಂಗಳಲಿ ತತ್ತದ್ವಿಶೇಷವಿಧಾನದಾನದಲಿ ॥ ತುಂಗವಿಕ್ರಮನಾಸಮಸ್ತಜ । ನಂಗಳೊಡನೆ ಸುತೀರ್ಥಯಾತ್ರಾ । ಸಂಗತಿಯಲೀ ಬಳಸಿ ಬಂದನು ಭೂಪ್ರದಕ್ಷಿಣವ ॥ ೧೧॥ ಅನಿನಿಪತಿ ಕೇಳ್ಪ್ರಸ್ಯದಲಿ ಸಂ । ಭವಿಸಿದುದು ನಿರ್ಗಮನ ಬಳಿಕೀ । ಶ್ರವಣನಕ್ಷತ್ರದಲಿ ಕಂಡನು ಕೃಷ್ಣಪಾಂಡವರ ॥ ಅವರು ನೋಟಕರಾದರೀಕೌ । ರವವೃಕೋದರರರಂಕ ಮಸೆದು । ತ್ಸವದಿ ಕಳನೇರಿದರು ಹಾಯಿಕಿ ಹಿಡಿದು ನಿಜಗದೆಯ ॥ ೧೨ ॥ ಧಾರಿಣೀಪತಿ ಕೇಳಿರೈ ಪರಿ । ವಾರ ಕುಳ್ಳಿರಿ ಪಾರ್ಥಸಾತ್ಯಕಿ । ವೀರಧೃಷ್ಟದ್ಯುಮ್ನಯಮಳಶಿಖಂಡಿಮೊದಲಾದ ॥ ವೀರಭಟರೆಮ್ಮಾಹವದ ಪಿ । ಸ್ತಾರವನು ಸಮವಿಷಮಪಯಗತಿ । ಯೋರೆಪೋರೆಯನರಿವುದೆಂದನು ನಗುತ ಕುರುರಾಯ ॥ ೧೩ ॥ ಚಿತ್ತವಿಸು ಬಲರಾಮ ರಿಪುಗಳ । ತೆತ್ತಿಗಿದೆ ಲೇಸಾಗಿ ನೋಡು ನೃ । ಪೋತ್ತಮರು ಪಾಂಚಾಲಸೋಮಕಸೃಂಜಯಾದಿಗಳು ॥ ಇತ್ತಲಭಿಮುಖರಾಗಿ ರಥಿಕರು । ಮತ್ತಗಜರೋಹಕರು ರಾವುತ । ರಿತ್ತಲೀಕ್ಷಿಸಿ ನಮ್ಮಸಮರವನೆಂದನವನೀಶ ॥ ೧೪ ॥ ಓಡಿ ಜಲದೊಳು ಮುಳುಗಿದವರಿಗೆ।ಕೋಡಿಯುಂಟೀ ರಥವಿಳಿದರಣ । ಖೇಡಕಾಲಾಳಿಂಗೆ ಪಯುಗತಿಯೋರೆಪೋರೆಗಳ ॥ ನೋಡುತಿದೆ ಪರಿವಾರ ನೀ ಕೈ । ಮಾಡಿ ತೋರಾ ಬಯಲ ಕಂತದ। ಮಡಿಗೆಯವಾಕ್ಷರವಲೇನಹುದೆಂದನಾಭೀಮ ॥ ೧೫ ॥ ಆಟವಿಕ ಸಂಭುವಲಿ ಬಲುವಾ । ಚಾಟ ನೀನಹೆ ನಿಮ್ಮಪುಣ್ಯದ । ತೋಟವನು ತರಿದೊಟ್ಟೆನಿಮ್ಮಕ್ರವರನು ಯಮಪುರದ ॥ ಗೋಟೆನಲಿ ಗುರಿಮಾಡುವೆನು ಜೂ। ಜಾಟದಲಿ ನೀವರಿಯಿರೇ ಬೊ । ಬ್ಬಾಟವೇನಾಯ್ತೆಂದು ಜರೆದನು ವೀರಕುರುರಾಯ ॥ ೧೬ ॥ ಶಕುನಿ ಕಲಿಸಿದಕಪಟದಲಿ ಕೌ।ಳಿಕದಲುಬ್ಬಿದೆಯುದರವಿಸ್ತಾ । ರಕವಲೇ ನಾವಿಂದಿನಲಿ ದುಶ್ಶಾಸನಾದಿಗಳ॥ ರಕುತಪಾನ ಭವತ್ಸಹೋದರ । ನಿಕರನಾಶವನರುಹದೇ ಸು । ಪ್ರಕಟವಿದು ಗಜವೆಂದು ಗದೆಯನು ತೂಗಿದನು ಭೀಮ ॥೧೭॥ ಸಾಯಲಾಗದೆ ಸುಭಟರಾಚೆಂ। ದ್ರಾಯತವೆ ತನುವಿಧಿಯಟೆಪ್ಪಣ । ದಾಯುಷವು ತೀರಿದೊಡೆಸಾವರು ನಿನ್ನೊಳೇನಹುದು ॥ ಕಾಯಲಳವೇ ನಿನಗೆ ಮುನಿದೊಡೆ । ನೋಯಿಸುವೊಡಳವಲ್ಲ ಘಡ ದೈ। ವಾಯತನನೀನೇಕೆ ಬೆರತಿಹ ಯೆಂದನಾಭೂಪ ॥ ೧೮ ॥ ಎಲವೊ ದುರ್ಮತಿ ಕೇಳು ನಿನ್ನಯ । ಕುಲದ ಶಿಕ್ಷಾರಕ್ಷಿಗಿನಪ್ಪ । ರೊಳರು ಹೊರಬಿಗದೈವವುಂಟೀ ನಾನೆ ದೈವಕಣಾ ॥ ಕಳಚಿದೆನಲಾ ಹಿಂದೆ ನೂರ್ವರೆ। ತಲೆಯನಿನ್ನರಗಳಿಗೆಯಲಿ ಹಡ । ತಲೆಯನೊದೆವೆನು ನೋಡೆನುತ ಹೊಯ್ದನು ಸುಯೋಧನನ ॥ ೧೯ ॥ ಬಿಡಿಸಿದನು ಗದೆಯಿಂದ ಹೊಯ್ಲಳ । ತಡೆದು ತಿವಿದನು ನಿನ್ನ ಮಗನವ । ಗಡೆಯಗಾಯಕೆ ಗದೆಯನೊಡ್ಡಿದೊಡಾಗ ಕೋಪದಲಿ ॥ ತುಡುಕಿದನು ಕಲಿಭೀಮ ಹಬ್ಬೆಯ। ನೊಡೆಮುರಿದು ನಿನ್ನಾತನೌಕಿದ। ರೊಡನೊಡನೆ ಗಾಹಿಸಿದರುಚಿತದ ಗತಿಯ ಗಮಕದಲಿ ॥ ೨೦ ॥ ಹೊಯ್ಲು ಬಿಡಿಸಿದನನಿಲಸುತ ಮೇ।

ಲ್ಲಾಯ್ತುನವನಿಪನೊಡ್ಡುಗದೆಯಲಿ । ಕಾಯ್ದು ತಿವಿದನು ಭೀಮಸೇನನು ನೃಪತಿ ವಂಚಿಸಿದ ॥ ವ್ಯಾದ
ಗೆದರಿಟ್ಟಳಿಸಿ ಪವನಜ । ಹೊಯ್ದೊಡೊಲೆದನು ಭೂಪನಿಬ್ಬರ । ಕೈದುಕಾರತನಕ್ಕೆ ಬೆರಗಾದುದು ಸುರ
ಸ್ತೋಮ ॥ ೨೧ ॥ ಸುಳಿದರೆಡಬಲಚಾರಿಯಲಿ ಚಾ । ಪಳದ ಪಯಪಾಡಿನಲಿ ಚಿತ್ರದ । ಚಳೆಗತಿಯ
ಚೌಪಟದ ಚಾರಣೆಗಳ ಛಡಾಳದಲಿ ॥ ಹೊಳೆದರಾವರ್ತದಲಿ ಪರಿಮಂ । ಡಳಿಸಿದರು ತಾಣದಲಿ ಬಿರಿ
ಧೆಯ । ಲುಳಿಯುಲವತಾಣದಲಿ ಮೆರೆದರು ಭೀಮಕೌರವರು ॥ ೨೨ ॥ ಒಳಹೊಗುವಹೆರೆದೆಗೆವಗಾ
ಯ । ಕ್ಕಳೆರಿಚುವ ತಾನಡರಿ ದೃಷ್ಟಿಯ । ಲುಳಿಗೆ ಕೈಮಾಡುವವಿಘಾತಿಗೆ ಜಗುಳಜೋಡಿಸುವ ॥
ಸುಳಿವ ಸಂತೈಸುವ ಸುಸಂಚದೊ । ಳಗಲಿಯೊಡ್ಡಾಗಿಸುವ ಗಮಕದ । ಲಳಬಳವನಾರೈವ ಭಟರೊದ
ಗಿದರು ಸಮರದಲಿ ॥೨೩॥ ಬಿಡುವ ಬಿಡಿಸುವ ಪರರಗಾಯುವ । ತಡೆವಗೋಮೂತ್ರಿಕನ ಜಡಿಪದ । ಜ
ಡಿಪದವಘಾನದಲಿ ದಾಯದ ಗಾಯಖಂಡಗಳ ॥ ತುಡುಕಲವ್ವಳಿಸುವ ವಿಸಂಧಿಯ । ಹಿಡಿವ ಬೆಚ್ಚುವ
ಬಿಗಿವಸಳೆದವ । ಗಡಿಸು ವೌಕುವಕುಶಲದಲಿ ಕಾದಿದರು ಸಮರದಲಿ ॥ ೨೪ ॥ ಬವರಿ ಮೊಚ್ಚೆಯ
ತೇವಿ ಲಂಘನೆ । ವಿವಳಿತಾಂಗ ವರಾಹಮತ ಸಂ । ಪ್ಲವನ ಪಾರಿಷ್ಟವ ಗದಾಪರಿರಂಭ ನಿಕ್ಷೇಪ ॥
ಲವಣಿ ಲಹರಿಯವಂಚನ ದವಿ। ದ್ರವಣ ಲಘುವಿನ್ಯಾಸವೆಂಬೀ। ವಿವರದಲಿ ಕಾದಿದರು ಕೌತುಕವೇನನು
ಸುರುವೆನು ॥೨೫॥ ನೂಕಿದೊಡೆ ಹೆರದೆಗವ ಹೆರದೆಗೆ । ದೌಕಲೌಕುವಡೊತ್ತಲೊತ್ತಿದ । ಡಾಕೆಯ
ಲಿ ಪಂಠಿಸುವ ಪಂಠಿಸೆ ಕೂಡೆ ಸಂಧಿಸುವ ॥ ಆಕತೋರದ ಕೈದು ಕಿಡಿಗಳ । ನೋಕರಿಸೆ ಖಣಿಖಟಿಲ
ಜೋಡಿಯ । ಜೋಕೆಯಲಿ ಕಾದಿದರು ಸಮಬಲರಾಹವಾಗ್ರದಲಿ ॥ ೨೬ ॥ ಮರಹ ಹಡೆಯರುಗಾ
ಯಖಂಡಿಗೆ । ತೆರಹುಗಾಣರು ಹೊಯ್ಲ ಹೋರಟೆ । ಹೊರಗೆ ಬಿದ್ದವು ಕದ್ದವಿಬ್ಬರದೃಷ್ಟಿಮನವ
ನವ ॥ ಇರಿವಗದೆ ನೆಗ್ಗಿದವು ರೋಷದಿ । ಜರೆವನುಡಿ ತಾಗಿದವು ಹೊಗಳ್ವೊ। ಡರಿಯೆನಗ್ಗದಭೀಮ
ದುರ್ಯೋಧನರ ರಣರಭಸ ॥ ೨೭ ॥ ಗಾಹಿನಲಿ ಗಾಢಿಸಿದಗದೆ ಹೊರೆ। ಬಾಹೆಯಲಿ ಹಿಂದೌಕಿ ತಾ
ಣದೊ । ಳೂಹಿಸಿದಮನ ಮುಗ್ಗಿದುದು ಕಂದೊಳಲ ತೋಹಿನಲಿ ॥ ಕಾಹುರದ ಹೊಯ್ಲಿನ ನೋ
ಟದ । ಕಾಹಿನಲಿ ಕಿರಿದೌಕಿ ಗಾಯದ । ಸೋಹೆಯಲಿ ವಸುಜಾಣರೊದಗಿದರರಸ ಕೇಳೆಂದ ॥ ೨೮ ॥
ನೆನೆಹು ನೆಗ್ಗಿದುದುಪ್ಪರದ ಕೈ । ಮನವ ಕಬಳಿಸಿ ತೆರಹು ಬಲುಬಿ । ಮ್ಮಿನಲಿ ಬಿಗಿದುದು ತಗದವಿಬ್ಬ
ರಗಾಯಘಾತಿಗಳ ॥ ಕೊನರ್ವಕೋಪದ ಕುದಿವಕರಣದ। ತನುವಿನುಬ್ಬಿನ ಜಯದತವಕದ। ತನಿಮನದ
ಕಡುತೋಟಿಕಾರರು ಕಾದಿದರು ಕಡುಗಿ॥೨೯॥ಜಾಣು ಜಗುಳಿತು ಹೊಯ್ಲಮೊನೆ ಮ್ಯಾ।ಗಾಣಿಕೆಗೆ ಲಟ
ಕಟಿಸಿದುದು ಬರಿ। ರೇಣುಜನನದ ಜಾಡ್ಯ ಘಡಘಡವಾಯ್ತು ಪಯಗತಿಗೆ॥ ತ್ರಾಣ ತಳವಾದುದು ಶ್ರ
ಮದಬಿನ । ಸ್ಥಾಣ ಮೇಲ್ವಾಯಿತ್ತು ಕುಶಲದ । ಕೇಣದಲಿ ಕಾದಿದರು ಗದೆಗಳ ಖಡೆಯಕಿಡಿ ಕವಿ
ಯೆ ॥ ೩೦ ॥ ವಿಳಸದಪಸವ್ಯದಲಿ ಪರಿಮಂ । ಡಳಿಸೆ ಹೊಯ್ದನು ಸತ್ಯಮಂಡಲ । ವೆಳೆಯುತನನಾ
ಭೀಮಸೇನನೆ ಹೊಯ್ಲಹೊರಬೀಸಿ ॥ ವಳಿಬಗಿದು ಕಬ್ಬದಿಯ ಕಂಡ। ಪ್ಫಳಿಸಿದನು ನಿನ್ನಾತನಾಚೆಯ ।
ದಳದ ಭಟತತಿ ಹಾಯೆನಲು ಝೋಂಪಿಸಿದನಾಭೀಮ ॥೩೧॥ ಆಗಳೇ ಸಂತೈಸಿ ರಿಪು ಕೈ । ತಾಗಿಸಿದ
ನರಸನನು ಗಾಯದ । ಬೇಗಡೆಯಲವ್ವಳಿಸಿದುದು ಬಿಸಿರಕುತ ಹುಡಿ ನೆನೆಯೆ ॥ ಆಗರುಮನಿಡಬಗೆದನೇ
ಸಂ । ಭಾಗರಕುತವನನಿಲಸುತನಲಿ । ತೂಗ ತೆಗೆದವೊಲಾಯ್ತು ಹೊಯ್ದನು ಪವನನಂದನನ ॥೩೨॥

ಸೈರಿಸಿದವೆರಡಂಕದೆಗೆದವು । ದೂರದಲಿ ದುರಿದುರಿಪಶೋಣಿತ । ವಾರಿಗಳ ತೊಳೆದೊರಸಿದರು ಶ್ರೀಗಂಧಕರ್ದಮವ ॥ ವೀರ ಕೇಳ್ಕೈ ಶ್ರಮವಡಗೆ ಕ । ರ್ಪೂರಕವಳವ ಕೊಂಡು ಮಸ್ತಕ । ವಾರುಭಟೆಯಲಿ ಸುಭಟರೆದ್ದರು ತೂಗಿ ನಿಜಗದೆಯ ॥ ೩೩ ॥ ಮತ್ತೆ ಹೊಕ್ಕರು ದಿಗ್ಗಜಕೆಮದ । ವೆತ್ತದಿಗ್ಗಜಮಲೆತವೋಲ್ಮಿಗೆ। ಹತ್ತಿದರು ಶತಮನ್ಯುಶುಂಭ ವರಜೋಳಿತೆಗೆದಂತೆ । ತತ್ತರಿಸಿಬರುವಂಧಕಾಸುರ। ಕೃತ್ತಿವಾಸರವೋಲುರಣವೀ । ರೋತ್ತಮರು ಕೈಮಾಡಿದರು ಕೌರವವೃಕೋದರರು ॥ ೩೪ ॥ ಏನನೆಂಬೆನು ಜೀಯ ಕುರುಪತಿ । ಯಾನುವನು ಕಲಿಭೀಮನುಬ್ಬೆಯ । ನಾನುವನು ಧುರ್ಯೋಧನನ ಧಟ್ಟಣೆಯನಾಭೀಮ ॥ ದಾನವರ ಮಾನವರೊಳಿನ್ನು ಸ। ಮಾನರಾರಿವರಂತೆ ಪಾಂಡವ । ಗೇಸಸಾಕ್ಷ್ಯವು ವೀರನಾರಾಯಣನ ಕರುಣದಲಿ ॥ ... ... ॥ ೩೫ ॥

ಅಂತು ಸಂಧಿ ೬ಕ್ಕಂ ಪದ ೩೧೦ಕ್ಕಂ ಮಂಗಳಮಸ್ತು.



ಏಳನೆಯ ಸಂಧಿ.

ಸೂಚನೆ ॥ ರಾಯಭಾರತಮಲ್ಲರಾಯರ । ರಾಯವನದಾವಾನಲನು ಕಲಿ । ವಾಯುಸುತನಲಿ ಹಳಚಿ ಮಡಿದನು ಕೌರವರರಾಯ॥

ಪದ ॥ ಕೇಳು ಧೃತರಾಷ್ಟ್ರಾವನಿಪ ಕೈ । ಮೇಳವಿಸಿದರು ವಿಷಮಸಮರಕ । ರಾಳರೋಷಶ್ವಾಸಧೂಮದ ಮುಖಭಯಂಕರರು ॥ ಚಾಳನದ ಚೌಪಟರು ಶಸ್ತ್ರ । ಸ್ಫಾಲನದ ವಜ್ರಾಭಿಘಾತಾ । ಭೀಳನಿಷ್ಠುರರೊದಗಿದರು ಕೌರವವೃಕೋದರರು ॥ ೧ ॥ ಹಳಚಿದರು ಸುಳಿಗಾಳಿಯಂತಿರೆ । ಸುಳಿಮುಖಗಪತಿಯಂತೆ ಹೊಯ್ದರು ಬಳಸಿ ಬಗಿದೆರಗಿದರು ಬಿಡೆಯದ ಮತ್ತಗಜದಂತೆ॥ ನಿಲುಕಿದರು ಶಿಖಿಯಂತೆ ಚೂರಿಸಿ । ತುಳುಕಿದರು ಫಣಿಯಂತೆ ಪಯಮ್ಯ । ಲಾಳಿಯಲೊಲೆವರು ಪಾದರಸದಂದದಲಿ ಪಟುಭಟರು ॥ ೨ ॥ ಎರಗಿದರು ಸಿಡಿಲಂತೆ ಮಿಂಚಿನ । ಮಿಡುಗಿನಂತಿರೆ ಹೊಳೆದು ಹಜ್ಜೆಯ । ಹೆರೆದೆಗೆದು ಹಾಯಿದರು ತಗರಂದದಲಿ ತವಕಿಸುತ ॥ ಇರುಕಿದರು ಗ್ರಹದಂತೆ ಮಿಗೆ ಮು। ಕ್ಕುರಿಕಿದರು ಮುಗಿಲಂತೆ ರೋಷಕೆ। ನೆರೆಯದಿಬ್ಬರ ಮನವೆನಲು ಹೊಯ್ದಾಡಿದರು ಭಟರು ॥ ೩ ॥ ಗದೆಗದೆಯ ಹೊಯ್ಲಳಲಿ ಖಣಿಖಣಿ । ಲೊದಾತಿಬ್ಬರ ಬೊಬ್ಬೆ ಭುವನವ । ಬೆದರಿಸಿತು ಪದಘಟ್ಟಣೆಯ ಘಲ್ಲಣೆಯ ಘಾತಿಯಲಿ ॥ ಅದುರಿತಿಳೆ ಮುಖಭಾಪು ಭಟರೆಂ । ದೊದರುವಾಪರಿವಾರದಬ್ಬರ । ತ್ರಿದಶನಿಕರದ ಸಾಧುರವವಂಚಿಸಿತು ಮೂಜಗವ ॥ ೪ ॥ ಬೆರಳತೂಗಿದನಡಿಗಡಿಗೆ ಹಲ । ಧರನುದಗ್ರಗದಾಭಿಘಾತಕ। ಶಿರವನೊಲೆದನು ಶೌರಿ ಮಿಗೆ ಮೆಚ್ಚಿದನು ಯಮಸೂನು ॥ ವರಗದಾಯುದ್ಧದ ರಹಸ್ಯದ ... ತಜ್ಞವಿಧೇಯನರ್ಜನ । ನರರ ಮುಖರೇ ಚಾಗುಚಾಗೆಂದುದು ಭಟವ್ರಾತ ॥ ... ಲಚಿನ ತನು । ಕವಚ ಬಿರಿದುದು ಕೈಯೊಡನೆ ರಣ । ದವಕಿ ಕೈದೋರಿದನು

ಸವೆಗ ಸೀಳಿತು ಮರಳಿ ಹೊಯ್ದನು । ಪವನಜನ ಸೀಸಕವ ವರಮಣಿ । ನಿವಹ ಸಿಡಿದವು ಸಿಡಿಲುಮು ಟ್ಟಿದಮೇರುಗಿರಿಯಂತೆ ॥ ೭ ॥ ಅಡಿಗಡಿಗೆ ಕರ್ಪೂರರದ ಕವಳವ । ನಡಸಿದರು ತಾಳಿಗೆಗೆ ಬಳಿಕಡಿ । ಗ ಡಿಗೆ ಹೆರಸಾರಿದರು ಸಮರಶ್ರಮನಿವಾರಣೆಗೆ ॥ ಕಡುಹು ತಳಿತುದು ಹೂತಫಲವಾ । ಯ್ತಡಿಗಡಿಗೆಮ ತ್ಸರದ ಮಸಕದ । ತಡಿವಲಗೆ ನುಗ್ಗಾಯ್ತು ಮನೆ ಕುರುಪತಿಯ ಪವನಜನ ॥ ಶ್ವಾಸದಲಿ ಕಿಡಿಸಹಿತ ಕರ್ಬೊಗೆ । ಸೂಸಿದವು ಕಣ್ಣಾಲಿಗಳು ಕ । ಟ್ವಾಸುರದಿ ಕೆಂಪೇರಿದವು ಬಿಗುಹೇರಿ ಹುಬ್ಬುಗಳು ॥ ರೋಷ ಮಿಗೆ ಯೌಡೊತ್ತಿ ಬಹಳಾಭ್ಯಾಸಿಗಳು ಡಾವರಿಸಿದರು ಡೊ । ಳ್ಯಾಸವನು ರಿಪುಸೇನೆ ಕಾಣ ದು ಚಿತ್ರಮಯಗತಿಯ ॥ ೮ ॥ ಹೊಕ್ಕು ಕುರುಪತಿ ಭೀಮಸೇನನ । ನಿಕ್ಕಿದನು ಕಂದದಲಿ ಗದೆಯನು ಸೆಕ್ಕಿದನು ವಾಮಾಂಗದಲಿ ಪವಮಾನನಂದನನ ॥ ಜಕ್ಕುಲಿಸಿದವೊಲಾಯ್ತು ಜರೆದು ನ। ಭಕ್ಕೆ ಪುಟನೆ ಗೆದನಿಲಜನ ಸೀ । ಸಕ್ಕಮುರಿಯಲು ಹೊಯ್ದು ಕೌರವನೃಪನು ಖಾತಿಯಲಿ ॥ ೯ ॥ ಬಾಯೊಳೊ ಕ್ಕುದು ರುಧಿರ ಕಂಗಳ । ದಾಯ ತಪ್ಪಿತು ಡೆಂಡಣಿಸಿ ಕಲಿ । ವಾಯುಸುತನವ್ವಳಿಸಿ ಬಿದ್ದನು ಕೈಯ ಗದೆ ಕಳಚಿ ॥ ಹಾಯೆನುತ ತನ್ನವರು ಭಯದಲಿ। ಬಾಯಬಿಡೆ ನಿಮಿಷಾರ್ಧದಲಿ ನಿರ। ಪಾಯನೆದ್ದ ನು ಚೇತರಿಸಿ ನೋಡಿದನು ಕೆಲಬಲನ ॥ ೧೦ ॥ ಹೆದರು ಹಿಂಗಿತು ಕೆಲಕೆ ಮಾರು । ದ್ದಿದನು ಕರವನು ಸೂಸಿ ಹಾರಿದ । ಗದೆಯ ಕೊಂಡನು ಸೆರಗಿನಲಿ ಸಂತೈಸಿದನು ಶೋಣಿತವ ॥ ಅದಿರೆ ನೆಲನವ್ವಳಿಸೆ ಮೇಲ್ವಾ । ಯಿದನು ಹೊಳೆಹಿನ ಹೊಯ್ಲುಹೊದರೆ । ದ್ದುದು ವಿಭಾಡಿಸಿ ಭೀಮಹೊಯ್ದನು ನೃಪನ ಮಸ್ತಕವ ॥ ೧೧ ॥ ದಾಟಿ ಬಿದ್ದವು ಸೀಸಕವು ಸಮ । ತೋಟಿಗಾಯದ ಘಟ್ಟಣೆಗೆ ಶತ । ಕೋಟಿ ಗಾಯಕೆ ಸಿಡಿದಹೇಮಾಚಲದ ತುದಿಯಂತೆ ॥ ತಾಟಿಸಿತು ಕಂಠದಲುಸುರು ನಿಜ । ನೋಟ ತಪ್ಪಿತು ವ್ಯತ್ಯಯಿನ ದರ। ಚೀಟಿಹಿಡಿದನೊ ಹೇಳೆನಲು ಮೈಮರೆದು ಮಲಗಿದನು ॥ ೧೨ ॥ ಹಾರಿತೊಂದೆಸೆ ಗಾಗಿ ಗದೆ ಮುರಿ। ದೇರಿದವು ಕಣ್ಣಾಲಿ ನೆತ್ತಿಯ । ಜೋರುಮುಸುಕಿತು ಮುಖವನೊಂದರೆಗಳಿಗೆಮಾ ತ್ರದಲಿ ॥ ಚಾರಿತಂತತಸ್ತಿಮಿರ ಭಯ ಹುರಿ । ಯೇರಿತಧಿಕಕ್ರೋಧಕರಣದ । ತಾರಃಘಟ್ಟಡಗಿದುದು ಪಸರಿಸುತಸು ನಿಜಾಂಗದಲಿ ॥ ನಿಮಿಷದಲಿ ಕಂದೆರೆದನಂತಃ।ಶ್ರಮದ ಝಳವಡಗಿತು ವಿಪಕ್ಷ । ಭ್ರಮ ದ ತೇಜೋಭಾವಭವನದ ಮುಖವಿಲಾಸದಲಿ ॥ ತಮದ ತನಿಮಸಕದಲಿ ಭುಜವಿ । ಕ್ರಮ ಛಡಾಳಿಸೆ ಬಿದ್ದ ಭೂಪೋ । ತ್ತಮನು ಕೊಂಡನು ಗದೆಯನೆನುವಾಗೆಂದನನಿಲಜನ ॥ ೧೪ ॥ ಈಗಳಾದೊಡ ವಿಶ್ರಾಂತಿಯ । ಭಾಗವನು ಬೇಡಿದೊಡೆ ಕೊಡೆನಂ। ದಾಗಳನುವಾದುದುಕಣಾ ಗದೆ ನಿನ್ನ ತೊಡೆಗ ಳಿಗೆ ॥ ತಾಗಿ ನೋಡೆನ್ನೊಡ್ಡ ಸುತ ಮೈ । ಲಾಗಿನಲಿ ಹೊಳೆಹೊಳೆದು ಕೈದುವ । ತೂಗಿ ತುಡುಕಿದನ ಚಪಲನ ಬೊಬ್ಬಿರಿದು ಕಲಿಭೀಮ ॥ ೧೫ ॥ ಉಬ್ಬುಬೇಡಲೆಭೀಮ ಗದೆಯೋ । ಬೊಬ್ಬೆಯೋ ಬಲು [illegible] । ಗರ್ಭಗಿರಿಗಡೆ ಸಿಡಿಲೆನುತ ಹೊಯ್ದನು ವೃಕೋದರನ ॥ ನಿರ್ಭರದ ಗದೆಯಿಂದಗಾ [illegible]ದನು ವಾಯುಜನ ಖತಿಯಲಿ । ಕೊಬ್ಬಿದೊಡೆ ಹೊಯ್ಲುಗಳ ಧ್ವನಿ ಕಿವಿಗಡಿಸೆ ಮೂಜ [illegible] ಶರವಿಕ್ಕಿ ಕೆಲ್ಬೀಮಸೇನನ । ಥರಥುರದ ಹೊಯ್ಲುಗಳ ಗದೆಯಲಿ । ಹೊರಳಿಗಡಿ ಲು । ಪ್ಪಳಿಸಿ ಹೊ[illegible] ಮಂಡಲವ ॥ ಅರಸನೆರಗಿದನನಿಲಸುತ ಪೈ । ಸರಿಸಿ ಕಳಚಿದನಾಕ್ಷಣದ [illegible]ರವಸ್ಥಾನ ಕಂದರವ ॥೧೬॥ ನೋಡಿದನು ದಂಡೆಯಲಿ ಛಾಗಿಸಿ।

ಹೊಡಿದನು ನೃಪ ಭೀಮನಲಿ ಪಯ।ಪಾಡಿನಲಿ ಪಲ್ಲಟಿಸಿದನು ಪಡಿತಳಕೆ ಕುರುರಾಯ॥೧೭॥ ಗಾಡಿಸಿದ ನುಪ್ಪರದ ಗಾಯಕೆ। ಕೂಡೆ ತಗ್ಗಿದನನಿಲಸುತ ಖಯ।ಖೋಡಿಯಿಲ್ಲದೆ ಭಟರು ಹೊಯ್ದಾಡಿದರುಖಾತಿಯಲಿ ॥ ೧೮ ॥ ತೊಲಗಿ ನಿಂದರು ಮತ್ತೆ ಭಾರಿಯ । ಬಳಲಿಕೆಯ ಬೀಳುವೆಯ ಚಿತ್ತ । ಸ್ಖಲಿತರಂಗೀಕರಿಸಿದರು ಕರ್ಪುರದವೀಳೆಯವ ॥ ಗಳಿಲನೆದ್ದರು ನಿಮಿಷಮಾತ್ರಕೆ।ಮಲೆತು ನಿಂದರು ಗಾಯಘಾತಿಗೆ । ಸುಳಿವನವಧಾನಿಸುತ ತೂಗಿದರಾಯುಧದ್ವಯವ ॥ ೧೯ ॥ ಲಾಗಿಸುತ ಲಳಿಯೆದ್ದು ಭೀಮನ। ತಾಗಿಸಿದನವನೀಶನಾತನ।ಭಾಗದೇಯವನೇನನೆಂಬೆನು ಹೊಯ್ಲುಹೊರಗಾಯ್ತು ॥ ಬೇಗುದಿಯಲುಬ್ಬೆದ್ದು ನೃಪತಿ ವಿ । ಭಾಗಿಸುವೊಲನಿಲಜನ ಹೊಯ್ದನು । ಬೇಗದಲಿ ಕಳಚಿದನು ಪವನಜ ಪಯದ ಬವರಿಯಲಿ ॥ ೨೦ ॥ ತಪ್ಪಿದೊಡೆ ಗಾಯವನು ಘಡಘಡ । ತಪ್ಪಿಸೆನ್ನಾದರೆಯೆನುತ ಕಡು। ದರ್ಪದಲಿ ಹೊಯ್ದನು ಸಮೀರಾತ್ಮಜನನವನೀಶ ॥ ತಪ್ಪಿಸಿತು ಗದೆ ತನುವ ರಕುತದ। ದರ್ಪಣದ ರಹಿಯಾಯ್ತು ಗದೆ ಮಾ। ರಪ್ಪಿತರಸನನೆದ್ದುಹಾಯ್ದನು ಭಾಳದಲಿ ಭೀಮ ॥ ೨೧ ॥ ಒಟ್ಟೈ ಮುರಿದುದು ಸೀಸಕದ ಗದೆ । ನೆಟ್ಟತರಸನ ನೊಸಲರುಧಿರದ । ಕಟ್ಟೆಯೊಡೆದಾದದಲಿ ಕವಿದುದು ನೃಪನ ತನು ನೆನೆಯೆ ॥ ಕೊಟ್ಟಗಾಯಕೆ ಬಳಲಿ ಮರವೆಗೆ । ಬಿಟ್ಟ ಮನವನು ನಿಮಿಷದಲಿ ಜಗ। ಜಟ್ಟಿ ಕೌರವರಾಯ ಕೊಂಡನು ನಿಜಗದಾಯುಧವ ॥ ೨೨ ॥ ಗಾಯಗತಿ ಲೇಸಾಯ್ತು ಪೂತುರೆ। ವಾಯುಸುತ ನೀ ಸೈರಿಸೆನ್ನಯ । ಗಾಯವನು ಘೋರಪ್ರಹಾರಸಹಿಷ್ಣುಗಡ ನೀನು ॥ ಕಾಯಲಾಪರೆ ಫಲುಗುಣನನಬು । ಜಾಯತಾಕ್ಷನ ಕರೆಯೆನುತ ಕುರು । ರಾಯನೆರಗಿದನನಿಲಜನ ಕರ್ಣಪ್ರದೇಶದಲಿ ॥ ೨೩ ॥ ಎಡದದಂಡೆಯನೊಡ್ಡಿ ಹೊಯ್ಲಳ । ಕಡುಹ ತಪ್ಪಿಸಿ ಕೌರವೇಂದ್ರನ । ಮುಡುಹ ಹೊಯ್ದನು ಭೀಮ ಮಝು ಭಾಪೆನೆ ಸುರಸ್ತೋಮ॥೨೪॥ ತಡೆದನಾಗಾಯವನು ಗದೆಯಲಿ।ನಡುವನಪ್ಪಳಿಸಿದನು ಭೀಮನ।ಮಿಡುಕು ನಿಂದುದು ನಗುವಪಾಂಡವಬಲದ ತಲೆ ಮಣಿಯೆ ॥ ೨೫ ॥ ಒಲೆದು ಬಿದ್ದನು ಭೀಮ ಕುಲಗಿರಿ। ಮಲಗುವಂದದಿ ನೆರವು ಬಾಯಿಂ । ದಿಳಿದಶೋಣಿತಧಾರೆ ಮುಗ್ಗಲ ಮುಸುಕಿತವನಿಯಲಿ ॥ ಎಲೆಮಹಾದೇವಾ ವೃಕೋದರ । ನಳಿದನೇ ಹಾ ಭೀಮ ಹಾ ಯೆಂ । ದೊರಲಿದರು ಪರಿವಾರಸಾತ್ಯಕಿ ಸೃಂಜಯಾದಿಗಳು ॥ ೨೬ ॥ ಮೈಮರೆದನರಗಳಿಗೆಮಾತ್ರಕೆ । ಮೈಮನಸ್ಯದ ಜಾಡ್ಯರೇಖೆಯ । ಸುಯ್ಮಹಾದ್ಭುತವಾಯ್ತು ಪರಿಣತಪಾರವಶ್ಯದಲಿ ॥ ಹೈ ಮಹಾದೇವೆನುತ ಹಗೆವನ। ಕೈಮಯನು ಬಣ್ಣಿಸುತಲೆದ್ದನ । ಲೈಮರುತ್ಸುತ ಸೂಸಿ ಹಾರಿದಗದೆಯ ತಡವಂಸಿ ॥೨೭॥ ಕಾದುಕೊಳು ಕೌರವಗದಾಶ್ರಮ। ಭೇದವಭ್ಯಾಸಿಗಳಿಗೀಡು । ಭೇದದ ನೋಡಾ ಹೊಯ್ಲನಿದ ಮರೆಹೊಗುಮಹೇಶ್ವರನ ॥ ಹೋದೆಹೋಗೆನ್ನನುತ ಜಡಿದು ವಿ । ಷಾದಭರದಲಿ ಮುಂದುಗಾಣದೆ । ಕೈದಣಿಯಲಪ್ಪಳಿಸಿದನು ಕಲಿಭೀಮ ಕುರುಪತಿಯ ॥ ೨೭ ॥ ಹಾರಿತೊಂದೆಸೆಗಾಗಿ ಗದೆ ಮೈ । ಹೇರಿತುರುಗಾಯವನು ಮೊಣಕಾ । ಲೂರಿ ಬಿದ್ದನು ವದನದಲಿ ರಣಧೂಳಿ ಮೆಂಟಣಿಸೆ॥ ಕಾರಿದನು ರಕುತವನು ಕೌರವ।ನೇರು ಬಲುಹೋ ಹೊಡೆದನೆನುತವೆ। ಬೀರಿತಾಪರಿವಾರ ಸುಮ್ಮಾನದ ಸಘಾಡದಲಿ ॥ ೨೮ ॥ ಭಾಪು ಮಝುರೇ ಭೀಮ ಕೌರವಭೂಪವಿಲಯಕೃತಾಂತ ಕುರುಕುಲ । ದೀಪಚಂಡಸಮೀರ ಕುರುಪತಿತಿಮಿರಮಾರ್ತಾಂಡ । ಕೋಪನೃಪತಿಪಕ್ಷಕಾಲನಿ । ರ್ವ್ಯಾಪಕೈಕಸಮರ್ಥಯೆನುತಭೂ । ರೂಪನನು ಹೊಗಳಿದರು ವಂದಿಗಳಬುಧಿಘೋ

ಷದಲಿ ॥ ೨೯ ॥ ಜಾಳಿಸಿದವೇದನೆಯ ಝೊಮ್ಮಿನ । ಜಾಳಿಗೆಯ ಜವ ಹರಿದುದೆಚ್ಚರ । ಮೇಲುಮ
ರವೆಯ ಮುಸುಕು ಜಾರಿತು ಹಾರಿತರಿಭೀತಿ॥ ಬೇಳುವೆಯ ಕರಣೇಂದ್ರಿಯದ ವೈ । ಹಾಳಿ ನಿಂದುದು
ಬಿಗಿದಬಳಲಿಕೆ । ಝೂಳಿಗದ ಮೊನೆ ಮುರಿದು ಸಂತೈಸಿದನು ಕುರುರಾಯ ॥ ೩೦ ॥ ಒರೆವರೆಕುತವ
ಧೂಳಿಯಿಂದವೆ । ಹೊರಗೆ ತೊಡೆತೊಡೆದಾಕೆ ರೋಷದ । ಹೊರಗೆ ಝಳಿಪಿಸಿ ಹುಬ್ಬಿನಲಿ ಕಂಗಳಲಿ
ಸುಯ್ಲಿನಲಿ ॥ ಮುರುಕಿಸುವರಿಪುಭಟನ ಮೋರೆಯೊ । ಳೆರಗಿ ನೋಡುತ ಸಾರಸತ್ವದ । ನೆರವಣಿಗೆ
ವೈಗೂಡಲೆದ್ದರು ಗದೆಗೆ ಕೈನೀಡಿ ॥ ೩೧ ॥ ಹಾನಿಯೆಮಗಾಯ್ತೆಂದು ಕಡುಸುಂ । ಮಾನವುಕ್ಕಿತೆ
ನಿಮಿಷದಲಿ ದುಂ। ಮಾನಜಲಧಿಯೊಳದ್ದುವೆನು ತಿದ್ದುವೆನುನಿನ್ನವನ ॥ ಈನಗೆಯನೀಬಗೆಯನೀವಿಜ।
ಯಾನುರಾಗವ ನಿಲಿಸುವೆನು ಯಮ। ಸೂನು ಸೈರಿಸೆನುತ್ತ ಜರೆದನು ವಾಮಹಸ್ತದಲಿ ॥೩೨॥ ಎಲವೊ
ಭೀಮ ವಿಘಾತಿಗಳ ಕಂ । ದೊಡವಿನಲಿ ತೆರಹಾಯ್ತು ನೀನಿ । ಟ್ಟಳಿಸುವರೆ ನಿನಗಾದುದಸ್ಮತ್ಪತನದ
ಭ್ಯುದಯ ॥ ಛಲವ ಸಲಿಸುವೊಡೇಳು ನೀ ಮನ । ವಳುಕುವರೆ ನಿನ್ನವರ ಕರೆಹೊ । ಯ್ದೊಳಗದೊಂ
ದೇಹೊಯ್ಲೆನುತ ಹೊಕ್ಕನು ಮಹೀಪಾಲ ॥ ೩೩ ॥ ಹೌದು ತೋರಾ ಬಂಜೆನುಡಿಗಳ । ಬೈದೊಡ
ಧಿಕನೆ ಬಾಹುವಿಂ ಹೊರ । ಹೊಯ್ದವನೊ ಮೇಣ್ಮುಖಜನೋ ನೀನಾರು ಜಾತಿಯಲಿ ॥ ಕೈದುನಿನಗಿ
ದೆ ಸಮರಮುಖದಲಿ । ಯ್ಯೈದುವಡೆ ಗುಪ್ತಪ್ರತಾಪವ । ನ್ಯೈದೆ ಪಲ್ಲೈಸೆನುತ ತಿವಿದನು ಭೀಮ ಕು
ರುಪತಿಯ ॥ ೩೪ ॥ ಅವನಿಪತಿ ಕೇಳ್ ಭೀಮಸೇನನ । ತಿವಿಗಳನು ತಪ್ಪಿಸಿ ಸುಯೋಧನ । ಕವಿದು ಸಾ
ಧಿಗೆ ತೋರಿ ಜಂಘೆಗೆ ಹೊಡೆ ಝಳಪದಲಿ ॥ ಲವಣೆಯಲಿ ಲಳಿಯೆದ್ದು ಹೊಯ್ದನು। ಪವನಜನ ಭು
ಜಶಿರವ ಸೀಸಕ । ಕವಚವಜಗಿಜಗಿಯಾಗೆ ಬೀಳೆನುತರಸ ಬೊಬ್ಬಿರಿದ ॥ ೩೫ ॥ ಮತ್ತೆ ಹಾಯ್ದನು
ಭೀಮಸೇನನ । ನೆತ್ತಿಯನು ನಿಪ್ಪಸರದಲಿ ಖಳ । ಹತ್ತಿ ಝೊಂಪಿಸಿ ತಿರುಗಿ ಬಿದ್ದನು ಬಿಗಿದಮೂ
ರ್ಛೆಯಲಿ ॥ ತೆತ್ತಕಂಗಳ ಸುಯ್ಲಲಹರಿಯ । ಸುತ್ತಲೊಗುವರುಣಾಂಬುಗಳ ಕೆಲ । ದತ್ತಜಾರಿದಗ
ದೆಯ ಭಟನೊರಗಿದನು ಮರವೆಯಲಿ ॥ ೩೬ ॥ ಮಡಿದವನಕಹೊಯ್ಕೆನು ಧನಂಜಯ । ತೊಡು ಮ
ಹಾಸ್ತ್ರವನವನಿಪತಿ ಬಿಲು। ದುಡುಕು ಯಮಳರು ಕೈದುಗೊಳಿ ಸಾತ್ಯಕಿ ಶರಾಸನವ । ಹಿಡಿ ಶಿಖಂಡಿ
ಪ್ರಪಂಚೆಸುತರವ । ಗಡಿಸಿರೇ ನಿಮ್ಮವನ ಹರಿಬಕೆ । ಮಿಡುಕುವೊಡೆ ಬಹುದೆನುತ ತೂಗಿದನವನಿಪತಿ
ಗದೆಯ ॥ ೩೭ ॥ ಮೇಲೆ ಕಳವಳವಾಯ್ತು ದಿಕ್ಕಿನ । ಮೂಲೆ ಬಿರಿಯೆ ಪಿಶಾಚರಾಕ್ಷಸ । ಜಾಲವಿ
ದ್ಯಾಧರ ಮಹೋರಗಯಕ್ಷಕಿನ್ನರರು ॥ ಆಳು ನೀನಹೆ ನೆಳನಹುಷಭೂ । ಪಾಲಕುಲದಲಭಂಗನಾದ
ೆ । ಬಾಳೆಭುಜಬಲ ನೀನೆನುತ ಕೊಂಡಾಡಿತಮರಗಣ ॥ ೩೮ ॥ ಅರಸ ಕೇಳಾಶ್ಚರ್ಯವನು ನಿ । ಮ್ಮರ
ಸನಾಹವಸೌಖ್ಯ ಸುರಕುಲ । ಪೆರಳೆಮಳೆಗರೆದುದು ಕಣಾ ಕುರುಪತಿಯ ಸಿರಿಮುಡಿಗೆ ॥ ಅರಿಭಟರು
ತಲೆಗುತ್ತಿದರು ಮುರ । ಹರಯುಧಿಷ್ಠಿರಪಾರ್ಥಯಮಳರು । ಬೆರಳ ಮೂಗಿನಲಿದ್ದು ಬೈದರು ಸು
ರರ್ದುಷ್ಕೃತವ ॥ ೩೯ ॥ ಮಿಡಿದನರ್ಜನ ಧನುವ ಯಮಳರು । ತುಡುಕಿದರು ಕೈದುಗಳ ಸಾ
ತ್ಯಕಿ । ಮಿಡುಕಿದನು ಮರುಗಿದರು ಪಂಚದ್ರೌಪದೀಸುತರು ॥ ಒಡೆಯನಳಿವಿನೊಳೆಲ್ಲಿಯದು ನೃಪ ।
ನುಡಿವನುಡಿಯೆನುತನಿಲತನಯನ। ಪಡೆ ಗಜಾಶ್ವವ ಬಿಗಿಯೆ ಗಜಬಜಿಸಿತು ಭಟಸ್ತೋಮ ॥ ೪೦ ॥
ದುಗುಡದಲಿ ಹರಿ ರೋಹಿಣೇಯನ। ಮೊಗವ ನೋಡಿದೊಡಾತನಿದು ಕಾ। ಳಗವಲೇ ಕ್ಷೇಸನಾಯರಾ

ದಿರಿ ಪೂರ್ವಕಾಲದಲಿ ॥ ಹಗೆಯ ಬಿಡು ಕುರುಪತಿಯು ಸಂಧಿಗೆ । ಸೊಗಸಿನಲ್ಲಿ ಯುಧಿಷ್ಠಿರನ ಮಾ । ತುಗಳ ಕೆಡಿಸದಿರೆಂದನಾಕೃಷ್ಣಂಗೆ ಬಲರಾಮ॥೪೧॥ ಅರಸ ಕೇಳೈ ಬಿದ್ದಭೀಮನ।ಹೊರಗೆ ಬಂದರ್ಜುನನು ಮೂಗಿನ । ಬೆರಳ ನೋಡಿ ಸಮೀರನಂದನನುಸುರನಾರೈದು ॥ ಮರಳಿದನು ಮುರಹರನನೆಕ್ಕಟೆ। ಗರೆದು ಸತ್ರಾಣನು ಗದಾನಿ । ರ್ಭರಪರಿಶ್ರಮಭೀಮ ಬಳಲಿದನೆಂದನಾಪಾರ್ಥ ॥ ೪೨ ॥ ದೇವ ಬೆಸಸಿನ್ನನಿಲಸೂನು ಸ । ಜೀವನನು ನಿಮ್ಮಡಿಗಳಾಡಿದ । ಭಾವನನು ಕರುಣಿಸುವುದಾತನ ಧರ್ಮವಿಕೃತಿಗಳ ॥ ನೀವು ಕಂಡಿರೆ ನಾಭಿಜಂಘೆಗೆ। ಡಾವರಿಸಿದನು ಹಲವುಬಾರಿ ಜ। ಯಾವಲಂಬನವೆಂತು ಕೃಪೆಮಾಡೆಂದನಾಪಾರ್ಥ ॥ ೪೩ ॥ ನೀವು ಮೊದಲಲಿ ಬೆಸಸಿದಿರಿ ಮಾ । ಯಾವಿಗಳ ಮಾಯೆಯಲಿ ಗೆಲುವುದು । ದೈವಕೃತವಿದು ರಾಜಧರ್ಮದ ಸಾರತರವೆಂದು ॥ ಈವಿರೋಧಿಯ ಧರ್ಮಗತಿಸಂ । ಭಾವಕನು ಕರ್ತವ್ಯಭಾವವೆ । ನೀವುಬಲ್ಲಿರೆ ಯೆಂದ ನರ್ಜನದೇವ ವಿನಯದಲಿ ॥ ೪೪ ॥ ಘಾತುಗೆಟ್ಟನು ಭೀಮ ಮುಸುಕಿತು । ಭೀತಿ ನಮ್ಮೆಲ್ಲರನು ದೇವ । ವ್ರಾತವಾತನ ಕೊಂಡು ಕೊನರಿತು ಹೊಯ್ದುಹೊಮಳೆಯು ॥ ಪಾತಕಕೆ ಫಲವಾಗದಮಳ । ಖ್ಯಾತಿ ಕಂದದೆ ವಿಜಯಸಿರಿ ರಾ। ಗಾತಿಶಯದಲಿ ನಮ್ಮರವಿಸುವಬಗೆಯ ಹೇಳೆಂದ ॥ ೪೫ ॥ ಅನಿಲಸುತ ಸತ್ರಾಣಿಸಲು ನೃಪ । ಜನಪನೂರುವಿಭಾಗವೇ ಮುನ್ನಿನಪ್ರತಿಜ್ಞೆಯಲಾಸಭಾಮಧ್ಯದಲಿ ಕುರುಪತಿಯ ॥ ನೆನಸಿಕೊಡು ಸಾಕಿನ್ನು ಬೇರೊಂ । ದನುನಯವು ತಾನೇನು ವಿಜಯಾಂ । ಗನೆಗೆ ದ್ರುಪದ ಕುಮಾರಿ ತಪ್ಪದೆ ಸವತಿಯಹಳೆಂದ ॥ ೪೬ ॥ ಅರಸ ಕೇಳಾಕ್ಷಣದೊಳನಿಲ । ಸ್ಮರಣೆಯನು ಹರಿ ಮಾಡಿದೊಡೆ ಸಂ।ಚರಿಸಿದನು ತತ್ತನುಜನಂಗೋಪಾಂಗವೀಧಿಯಲಿ ॥ ಥರಥರದ ನಾಡಿಗಳೊಳಗೆ ವಿ । ಸ್ತರಿಸಿ ಮೂಲಾಧಾರದಲಿ ಚೇ । ತರಿಸಿ ಸರ್ವಾಂಗದಲಿ ಜೀವಸಮೀರ ಪಸರಿಸಿದ ॥ ೪೭ ॥ ಪ್ರಾಣವಿಮ್ಮಡಿಸಿತ್ತು ತಿರುಗಿದ । ಗೋಣು ಮರಳಿತು ರೋಷವಹ್ನಿಗೆ । ಸಾಣೆಹಿಡಿದವೊಲಾಯ್ತು ಕಣ್ಣುಗಳಿಡಿದು ಕೇಸುರಿಯ ॥ ತ್ರಾಣಸಡಲಿದದೆಸೆಯ ರಣಾಬಿ । ನ್ನಾಣವಮ ಸುಳಿಪವಮಾನಮರ್ದನ।ದೂಣೆಯದ ಸಂವ್ಯಥೆಯ ಭಟ ಸಂತೈಸಿದನು ತನುವ॥೪೮॥ ಕೊಡಹಿದನು ತನು ಧೂಳಿಯನು ಘಾ । ರಿಡುವ ರುಧಿರದ ಸರವಿನಲಿ ತೊಡೆ । ತೊಡೆದು ವರಕರ್ಪೂರರಕವಳವನೊಳಲೊಳೆಡಿಸಿದನು ॥ ತೊಡೆಯ ಹೊಯ್ದಾಡುವಮುರಾರಿಯ । ನೆಡೆಯುಡುಗವೀಕ್ಷಿಸುತ ದೂರಕೆ । ಸಿಡಿದಗದೆಯನು ತುಡುಕಿ ನೃಪತಿಯ ತೊಡೆಗೆ ಲಾಗಿಸಿದ ॥ ೪೯ ॥ ಭಾಷೆಗಳುಪರು ಪಾಂಡುಸುತರೆಂ । ಬಾಸೆಯಲಿ ನಿಶ್ಶಾತ ದೃಷ್ಟಿಯರೆ । ದೋಸರಿಸನಿದಿರಾದನೂರುದ್ವಯವ ವಂಚಿಸದೆ ॥ ಶ್ವಾಸಮುರಳಿತೆ ನಿನಗೆ ರಿಪುಗಾ । ಭ್ಯಾಸಿಯಾಪಿಂಗೋ ಭೀಮ ಸ್ಮರಣೆ । ಲೇಸು ಮೆಚ್ಚಿದೆನೆನುತ ನೃಪನೆರಗಿದನು ಪವನಜನ ॥ ೫೦ ॥ ಹೊಯ್ಲುಬೀಳಿಯಲಿ ಕರಣಗತಿಯಲಿ।ಹೊಯ್ಲು ನಭಕುಪ್ಪರಿಸಿ ಮರಳಿದು । ಹೊಯ್ಲುಹರಿಗುವನೃಪನ ತೊಡೆಗಳನಿಟ್ಟನಾಭೀಮ ॥ ಹೊಯ್ಲುಗದೆ ಹೆದ್ದೊಡೆಗಳನು ಮುರಿ । ದೈದಿತವನಿ ತುಲರುಣಜಲದಲಿ । ತೊಯ್ದುಧೊಪ್ಪನೆ ಕೆಡೆದನಿಳೆಯಲಿ ಕೌರವರರಾಯ ॥ ೫೧ ॥ ಹಾರೆ ಹರಿಹೊಡು ಕರ್ಪೂರದ । ಚಾರುಮೌಕ್ತಿಕನಿಕರ ಸಿಡಿದವು । ಧಾರಿಡುವರಕ್ತಾಂಬು ಮಡುಗಟ್ಟಿದುದು ಮಗುಳ್ಗಲಲಿ ॥ ವೀರಭೀಮನ ಮಧುಮಯಿಸುತ ಬಲ । ವಾರಿದುದು ನಿಸ್ಸಾಳಸೂಳಿನ । ವೀರಪಟಹದ ಬಗೆ ಮಸಗಿತು ಪಳರ ಹಟ್ಟಸಲಿ ॥ ೫೨ ॥ ಬಿದ್ದನೆ ನಿನಾಬ ತನೀನನ । ದಿದುದಾಯೆ ಜಾಚನಲಿ

ನೃಪ । ಗೆದ್ದುದಕೆ ಫಲ ಬಂದುದೇ ಸಂಧಾನದಲಿ ಛಲವ ॥ ಹೊದ್ದಿದಕೆ ಹುಲುಸಾಯ್ತು ಬಲುವಗೆ । ಬಿದ್ದನೆಂದುಳಿಹಿದೆನು ಪವನಜ । ನುದ್ಧುರುಟತನಕೇನನೆಂಬೆನು ನೃಪತಿ ಕೇಳೆಂದ ॥ ೫೩ ॥ ಏಕೆ ಸಂಜಯ ಕೌರವೇಂದ್ರನ । ಸಾಕಿದಕೆ ಫಲವಾಯ್ತು ನೀ ಬರಿ । ದೇಕೆ ಚುಚ್ಚುವೆ ಕಾಸಿಬಾಣದಕೊರೆದಗಾಯದಲಿ ॥ ನೂಕಿದರೆ ಬಲಭದ್ರನನು ಬಳಿ । ಕೇಕೆ ಪವನಜ ಮುನಿದನವರ। ವ್ಯಾಕುಲರಲ್ಲೈ ವೀರನಾರಾಯಣನ ಕರುಣದಲಿ ॥ ... ... ... ॥ ೫೪ ॥

ಅಂತು ಸಂಧಿ ೩೩ಕ್ಕಂ ಪದ ೩೬೭೪ಕ್ಕಂ ಮಂಗಳಮಸ್ತು.

## ಎಂಟನೆಯ ಸಂಧಿ.

॥ಸೂಚನೆ॥ ಕೆಡೆದ ಕೌರವನೃಪನ ನೇಮವ । ಪಡೆದು ಕೃಪಕೃತವರ್ಮಗುರುಸುತ । ರೊಡನೆ ಬಂದರು ಸೂರಿವರು ಪಾಂಡವರ ಪಾಳೆಯವ ॥

॥ಪದ॥ ಕೇಳು ಧೃತರಾಷ್ಟ್ರಾವನಿಪ ಕ । ಟ್ಟಾಳು ವಜ್ರಗದಾಭಿಹತಿಗೆ ನೃಪಾಲ ಬಿದ್ದನು ಭಾರತದ ದುಸ್ಸಂಗಭಂಗದಲಿ ॥ ಮೇಲೆ ಭಾರಣೆ ಸೂತಮಾಗಧ । ಜಾಲ ಹೊಗಳಿತು ಗರುವಕುರುಭೂ । ಪಾಲ ಗಂಡಿಗನೆಕಟೆನುತ ಕೊಂಡಾಡಿತಮರಗಣ ॥೧॥ ಏನನೆಂಬೆನು ಜೀಯ ಮಹಿಯಲಿ । ಮಾನನಿಧಿ ಮಲಗಿದನಲ್ಲೈ ತವ । ಸೂನು ರುಧಿರದ ತಿಲಕವಾದನಲ್ಲೈ ಧರಾಂಗನೆಗೆ ॥ ಭಾನುಮತಿ ವೈಧವ್ಯವಿಧಿಗಂ । ದೇನ ನೋಂತಳೊ ರಾಜರವಿಯುವ । ಸಾನ ಸಮಯದಲಾಮದುಭುತವರಸ ಕೇಳೆಂದ ॥ ೨ ॥ ನಡುಗಿತಿಳೆ ನಿರ್ಮೇಘದಲಿ ಬರ । ಸಿಡಿಲು ಸುಳಿದವು ನೆಣನವಸೆಸಹಿ । ತಡಗು ಸುರಿದುದು ಕದಡಿ ಹರಿದುದು ರಕುತದರೆವೊನಲು ॥ ಸಿಡಿದವರೆಗಳು ಕೆರೆಗಳುಕ್ಕಿದ । ವಡಿಗಡಿಗೆ ಹೆಮ್ಮರ ವಿಘಾತದ । ಲುಡಿದು ಬಿದ್ದುದು ಕೌರವೇಂದ್ರನ ಪತನಕಾಲದಲಿ ॥೩॥ ಬೀಸಿದುದು ಬಿರುಗಾಳಿ ಕತ್ತಲೆ । ಸೂಸಿದುದು ಹಗಲಳಿಯುವನು ಪರಿ । ವೇಷದಲಿ ಗ್ರಹ ನೆರೆದವೈ ದಾರೆಗಳು ರವಿಯೊಡನೆ ॥ ಸೂಸಿದವು ಹಗಲಲ್ಲಿ ಮೃಗಗಣ । ವಾಸುರದಲೊದಾದವು ಕಂಡಿತು । ವಾಸರಪ್ರಭೆ ಕೌರವೇಂದ್ರನ ಪತನಕಾಲದಲಿ ॥೪॥ ಸರಸಹಿತ ಕೈದುಗಳು ಕರದಿಂ । ಮುರಿದು ಬಿದ್ದವು ಗಜಹಯದ ಕ । ಣ್ಣೊರತೆಯೆದ್ದವು ಕಡಿದು ಬಿದ್ದವು ಧ್ವಜಪತಾಕೆಗಳು ॥ ತುರುಗದಂತಸ್ವಾಪದಲಿ ಮನ । ಮರುಗಿತಾಪಲವಾರ ಸುಭಟರ । ಗರುವತಾಕಸ್ಮಿಕದ ಭಯಾವವನೀಶ ಕೇಳೆಂದ॥೫॥ ದ್ರುಪದತನುಜಶಿಖಂಡಿಸೃಂಜಯ।ನೃಪಯುಧಾಮನ್ಯೂತ್ತಮೌಂಜಸ।ಚಪಳಪಂಚದ್ರೌಪದೀಸುತಸೋಮಕಾದಿಗಳು॥ ಅಪದಶಾವಿದ್ಧ್ಯುತಚೇತ । ಕ್ಷಪಣರತಿಚಿಂತಿಪರಿಂದಿರು । ಳಾಪಹತಿಯ ಸೂಚಿಸುವಾಮಧುಚಾಕ್ಷಿಕಂಪದಲಿ ॥ ೬ ॥ ಅವನಿಪತಿ ಕೇಳೀಚೆಯಲಿ ಗ । ರವಿನ ಹೊರಗೃತಂದು ನಿಂದನು । ಸವಡಿಕ್ಕೆಗದೆಯುಣಸುಗಲ್ಲದ ಗಾಢಗರ್ವದಲಿ ॥ ಪವನಸುತನ

ನುಡಿಸಿದನಲ್ಲ ನಿ । ನ್ನವನನೇನ್ನೃಭೂಪ ಕೊಡುವ್ಯೆ । ನವಗೆ ನೆಲನರ್ಧವನು ನಾಚಿಕೆಯಿಕೆ ನುಡಿಯಿ
ದ ॥೭॥ ಊರುಬೇಡಿದವೈದೆ ನೀನೆರ । ಡೂರುಗಳನೇಕೊಟ್ಟಯ್ಯೆ ನಿಜ । ಧಾರಿಣಿಯ ಕೊಡೆನೆಂ
ಲಾಸೂಚ್ಯಗ್ರ ಸಂಮಿತವ॥ನಾರಿ ರುತುಮತಿಯೆಂದೊಡೆಯು ಸುಲಿ।ಸೀರೆಗಳನೆಂಬಗ್ಗಳಿಕೆ ಕಾ। ಸಾರ
ಲಿ ಕರಗಿತೆ ಸುಯೋಧನ ಯೆಂದನಾಭೀಮ ॥೮॥ ಎತ್ತಿ ಕಳುಹಿದೆ ವನಕೆ ನಾವ್ ನಿ।ಮ್ಮೆತ್ತುಗಳೇ
ಬೆರಳಲೇಡಿಸಿ । ದೆತ್ತುಗಳ ಕೂಡೇಕೆ ಸರಿನುಡಿ ಸಾರ್ವಭೌಮರಿಗೆ ॥ ಇತ್ತಲೇತಕೆ ಬಿಜಯಮಾಡಿದಿ
ರೆತ್ತನೀಕಲುನೆಲನು ಪವಡಿಸಿ । ಮತ್ತೆ ತೊಡೆಗಳ ತಿವಿಯಲೇಕಿನ್ನೆಂದನಾಭೀಮ ॥೯॥ ಕೃತ್ರಿಮವ
ನಿರ್ಗಸಿದಫಲ ಕೈ । ವರ್ತಿಸಿತೆ ನೀಗರುವನೆಮ್ಮಲಿ।ಹೊತ್ತಿಸಿದಫಲ ಬಂದುದೇ ವ್ಯವಧಾನವಾದುದೆಲ
ಬಿತ್ತಿದಿರಿ ವಿಷಬೀಜವನು ನೆರೆ । ದತ್ತ ಫಲಕ್ಕೆ ಸಾದುರ್ದಾಗಲಿ।ತೆತ್ತುಕೊಂಡಿರಲೇಕೆ ನುಡಿಯೆನ್ನಾ
ನುಡಿಯೆಂದ ॥೧೦॥ ಸಂದವೈ ನೀ ಮೆಚ್ಚಿ ಸಭೆಯಲಿ । ಹಿಂದೆ ಮಾಡಿದಭಾಷೆ ಕುರುಡನ । ನಂದನ
ನಿಮ್ಮಡಿಸಿದ್ದೈವತ್ತನು ರಣಾಗ್ರದಲಿ ॥ ಕೊಂದು ದುಶ್ಯಾಸನನ ಖಂಡವ । ತಿಂದು ನೆತ್ತರಗುಡಿದು ಬೀ
ಗದೆ । ಯಿಂದ ನಿನ್ನಯ ತೊಡೆಯ ಮುರಿದೆನು ನೃಪತಿಕೇಳೆಂದ ॥೧೧॥ ರಾಯಸಾಸ್ಥಾನದಲಿ ಖೂ
ರ । ರಾಯ ನೀನೇ ಭಂಗಬಡಿಸಿದ । ವಾಯಿಯಲಿ ನಿಮ್ಮೂರಿಗೆಮ್ಮೈ ವರನು ನೀಕರೆಸಿ ॥ ದಾಯದ
ಜೂಜಾಡಿ ಕಪಟದ । ದಾಯದಲಿ ಸೋಲಿಸಿ ಯುಧಿಷ್ಠಿರ । ರಾಯನರಸಿಯ ಸುಲಿದುದಕೆ ಫಲ
ಯ್ತ್ತು ಕೇಳೆಂದ ॥೧೨॥ ಹಿಂದಣಪಕಾರವನು ಲೆಕ್ಕಿಸು । ತೊಂದೆರಡು ಮೂರಾಯ್ತು ನಾಲ್ಕೈ । ದ
ದು ಮೆಟ್ಟಿದವನಿಪಾಲನ ಮಕುಟ ಮಸ್ತಕವ ॥ ಇಂದುಮುಖಿಯನು ಬೂತುಗೆಡೆದುದ। ಕೊಂದು
ಯಾವ ಕೊಳ್ಳೆನುತ ಮದ । ದಿಂದ ವದನವನೊದೆದು ಹಲುಗಳ ಕಳೆದನಾಭೀಮ ॥ ೧೩॥ ಉಚಿತವೆಂ
ರು ಕೆಲರು ಕೆಲವರ । ನುಚಿತವೆಂದರು ಪೂರ್ವಜನ್ಮೋ । ಪಚಿತದುಷ್ಕೃತವೈಸಲೇ ಶಿವಯೆಂದು
ಲಕೆಲರು ॥ ಖಚರಕಿನ್ನರಯಕ್ಷನಿರ್ಜರ । ನಿಚಯ ಭೀಮನ ಬೈದು ಕುರುಪತಿ । ಯಚಲಬಲವನು
ಣ್ಣಿಸುತ ಹೊಕ್ಕರು ನಿಜಾಲಯವ ॥೧೪॥ ಹಳುವದಲಿ ನಾನಾಪ್ರಕಾರದ । ಲಳಲಿಸಿದ ಫಲಭೋಗ
ನು ನೀ । ತಲೆಯಲೇ ಧರಿಸೆಂದು ವಾಮಾಂಘ್ರಿಯನು ಮಕುಟದಲಿ ॥ ಇಳುಹಿದನು ಕುರುಕುಲದ
ವಿಯೆಂ । ದುಲಿದೆಲಾ ಯೆನುತೊದೆದು ಮಕುಟವ । ಕಳಚಿದನು ಕೀಲಣದ ಮಣಿಗಳು ಕೆದರೆ ದ
ದೆಸೆಗೆ ॥೧೫॥ ಭೀಮ ಹಾಹಾ ಕಷ್ಟವಿದುಸಂ । ಗ್ರಾಮಜಯವೇ ಸಾಲದೇ ಕುರು । ಭೂಮಿಪತಿ
ಶ್ಲಾಘ್ಯನೇಲೋಕೈಕವಾನ್ಯನಲಾ ॥ ನೀ ಮರುಳಲಾ ಸಾಕೆನುತ ತ । ತ್ಸ್ರೀಮಗೈತಂದನಿಲತನುಜ
ನಾಮಹೀಪತಿ ನೂಕಿ ಸಂತೈಸಿದನು ಕುರುಪತಿಯ ॥ ೧೬ ॥ ಗುಣನಿಧಿಯನೇಕಾದಶಾಕ್ಷೋ । ಹಿ
ಯ ಪತಿಯನಶೇಷಪಾರ್ಥಿವ । ಮಣಿಮಕುಟಕಿರಣೋಪಲಾಲಿತಪಾದಪಲ್ಲವನ ॥ ರಣದೊಳನ್ಯಾಯ
ಲಿ ತೊಡೆಗಳ । ಹಣಿದುದಲ್ಲದೆ ಪಾದದಲಿ ನೀ । ಕೆಣಕುವರೆ ಕುರುರಾಯಮೌಳಿಯನೆಂದನಾರಾ
॥೧೭॥ ಅನುಜರಳಿದುದು ನೂರು ರಣದಲಿ । ತನುಜರಳಿದುದು ಮಾವಮೈದುನ । ಜನಪಿತಾಮಹ
ತ್ರಮಿತ್ರಜ್ಞಾತಿಬಾಂಧವರು ॥ ಇನಿಬರವನೀಶ್ವರರು ಸಮರಾ । ವನಿಯೊಳಡಗಿತು ದೇಶದೇಶ
ಜನಪರನು ಮುರಿದಿದುವೆ ಸಾಲದೆ ಭೀಮ ನಿನಗೆಂದ ॥೧೮॥ ಅವಮೋರೆಯೊಳಪ್ಪದೇವನ।ನಾವು
[illegible] । ಬಾವಿಸುವೆವಾವಂಗದಲಿ ಗಾಂಧಾರಿ ಕಡುಗೋಪಿ ॥ ದೇವಿಯರುಗಳನಾ

ಧವಲಿ । ನಾವು ನಿಲಿಸುವೆನೀನೃಪನ ಕಾಂ । ತಾವಳಿಗಳೇನೆಂದು ಬೈಯುರು ಭೀಮ ಹೇಳೆಂದ ॥ ೧೯ ॥ ಅಳಲುದತಿಭಂಗಿಸಲು ಫರವಂ। ಡಳಿಕರೇ ನಾವ್ ಪಾಂಡುವಿನ ಮ । ಕ್ಕಳುಗಳಾಧೃತರಾಷ್ಟ್ರತನುಸಂ ಭವರು ಕೌರವನದು ॥ ನೆಲನ ಹುದುವಿನ ದಾಯಭಾಗದ। ಕಳವಳದೊಳಾಯ್ತಲ್ಲದುಳಿದಂ । ತೊಳಗು ಭಿನ್ನವೆ ಭೀಮ ಬಿಡು ಭಂಗಿಸದೆ ಸಾಕೆಂದ ॥ ೨೦ ॥ ಸ್ವೈರಿಸನ್ನ ಪಕಾರವೆನು ಕುರು । ವೀರಸನ್ನುತಪಾ ಪಕವೆಳಾವಿ । ಕಾರವಿದು ಭೋಕ್ತವ್ಯ ನಿನಗೆಂದರಸ ದುಗುಡದಲಿ ॥ ನೀರೊರೆವಕಣ್ಣುಗಳನೊರಸುತ । ಸೀರೆಯಲಿ ಗದಗದಿತ ಗಳದಲಿ । ಸಾರಹೃದಯಮಹೀಶನಿದ್ದನು ಖೇದಪಂಕದಲಿ ॥೨೧॥ ಕಂಡ ನೀವ್ಯ ತಿಕರವೆನರಸನ । ಮಂಡೆಯಂಘ್ರಿಯು ಭೀಮಸೇನನ । ದಂಡಿಯನು ಥಟ್ಟಿಸಿ ದಕ್ಷರಿತಿರುಳು ಚೋಣಿ ಯಲಿ ॥ ಗಂಡುಗೆದರಿದರೋಪತಿಖಿ ಹುರಿ । ಗೊಂಡುದಕ್ಷಿಗಳಲಿ ವೃಕೋದರ । ಕೊಂಡನೇ ತಪ್ಪಲ್ಲ ನುತ ನಿಂವಿರ್ದನಾರಾಮ ॥೨೨॥ ಎಲವೆಲವೊ ಪಾಂಡವರಿರಾ ನೀವೆಳುಪಿದಿರೆಲಾ ನಾಭಿಯಿಂದವೆ । ಕೆ ಳಗೆಕೈಮಾಡುವುದು ಸಲ್ಲದು ಗದೆಯ ಕದನದಲಿ ॥ ಚರಿಸಲಾಗದು ಧರ್ಮನಿನ್ನಯ ದೊಳಗಿದೊಂದೇ ಭಾಷಮಾಡಿದಿ । ರಳಿದರನ್ಯಾಯದಲಿ ಕೊಂದಿರಿ ಕೌರವೇಶ್ವರನ ॥೨೩॥ ನೀವುಮಾಡಿದಸತ್ಯಭಾಷೆಗೆ । ನೀವಲಾ ತಪ್ಪಿದಿರಿ ನೋಟಕ । ರಾವು ಮಧ್ಯಸ್ಥಿತರಲೇ ಧರ್ಮೈಕ್ಯರಕ್ಷಕರು ॥ ನಾವು ಸಾಕ್ಷಿಕರಬಲರೆಂ ಬೇ । ನೀವು ನೃಪತಿಯ ತೊಡೆಯನುಡಿದಿರಿ । ಡಾವರವ ಸಾಕ್ಯಸೆ ಕಾಲಿಕ್ಕಿದಿರಿ ಸಿರಿಮುಡಿಗೆ ॥೨೪॥ ಎಂಬು ನೇಗಿಲ ತುಡುಕಿಯೆಡಗೈ । ಯಿಂದ ನೆಗಹಿ ಮಹೋಗ್ರಮುಸಲವ । ನೊಂದುಕರದಲಿ ತಿರುಹಿ ಕೊಬ್ಬಿದಖತಿಯಭಾರದಲಿ ॥ ಮುಂದೆ ನಡೆತರೆ ಸಕಲಸೇನಾ । ವೃಂದ ನಡುಗಿತು ಬಹಳ ಭೀತಿಯ । ಬಂದಿಯಲಿ ಜರುಹಿದವು ಜವಳಿಯ ಜವದಜೋಡುಗಳ ॥ ಬಿಲ್ಲ ಹಿಡಿದನು ಪಾರ್ಥ ಭಾರತ । ಮಲ್ಲ ಕೊಂಡನು ಗದೆಯ ನೃಪ ನಿಂದಲಿ ಬೆರಗಾದನು ರಣೋತ್ಸವವಾಯ್ತು ಯಮಳರಿಗೆ ॥ ತಲ್ಲಣಿಸಿತು ಳಿದರಸುಮಕ್ಕಳು । ಚೆಲ್ಲಿತಾಸುಭಟಾಂಗವಿಜಯದ । ಭುಲ್ಲವಣೆ ಪಲ್ಲಟಿಸುತಿರ್ದುದು ಖೇದತಮದೊ ಡನೆ ॥೨೫॥ ಹಲಧರನ ಖತಿ ಬಲುಹು ಕದನಕೆ । ಮಲೆತವಾದರೆ ಹಾನಿ ತಪ್ಪದು । ಗೆಲವಿನಲಿ ಸೋ ಲವಲಿ ತಾನೌಚಿತ್ಯವೇನಿದಕೆ ॥ ಒಳಗೆ ಬಿದ್ದವಿಘಾತಿ ಮುರರಿಪು । ತಿಳುಹುವನೊ ತವಕಿಸುವನೋ ಕಾ । ವಳಿದವಿಂದೇನೆನುತ ನಡನಡುಗಿದನು ಯಮಸೂನು ॥೨೬॥ ಹಲಧರನ ಮುಸಕವನು ಪಾಂಡವ। ಬಲದ ದುಶ್ಚೇಷ್ಟೆಯನು ಭೀಮನ । ಫಲುಗುಣನ ಧರ್ಮಜನ ಯಮಳರ ಚಿತ್ತವಿಭ್ರಮವ ॥ ಬಲಿ ಬಂಧನನೀಕ್ಷಿಸುತ ರಜತಾ । ಚಲವ ತರುಬುವನೀಲಗಿರಿಯವೊ । ಲಳುಕದಿದಿರಲಿ ನಿಂದು ಹಿಡಿದನು ಬಲನ ಬಲಗೈಯ ॥೨೭॥ ಚಿತ್ತವಿಸಿದಿರೆ ಬರಿದೆ ದೋಷಕೆ ।ತೆತ್ತರೇನಹುದಂತರಂಗವ । ನುತ್ತಮರ ಪದ್ಧತಿಗಳನು ಶಾಸ್ತ್ರಾರ್ಥನಿಶ್ಚಯವ ॥ ಬಿತ್ತರಿಸುವುದು ಕೌರವೇಂದ್ರನ । ಕಿತ್ತಡವ ನೀವರಿಯಿರೇ। ನಿಮು । ಗೆತ್ತಸಾಗ್ರಹ ನಿಲಲಿತಿಳುಹುವೆನೆಂದನಸುರಾರಿ ॥ ೨೮॥ ಏನ ತಿಳುಹುವೆ ನೀನು ಶಾಸ್ತ್ರದ । ಹೀನನಡೆವರು ನಿನ್ನವರು ಯಮ। ಸೂನು ನುಡಿಯನೆ ಸಮಯವನು ಶಸ್ತ್ರಾರ್ಥಸಂಗತಿಯ ॥ ಹೀನ ಗತಿಬಡಿತಳದ ಹೊಯ್ದು । ತ್ತಾನಗಾಯವನೊದಗಬೇಕೆಂ । ದೀನಬಂಧನವಾರೊಳಳಿದುದು ಕೃಷ್ಣ ಹೇಳೆಂದ ॥೩೦॥ ಅದರನೀಕೌರವನ ತೊಡೆಗಳ । ಸದೆದನನ್ಯಾಯದಲಿ ನಿನ್ನವ । ನಿದಕೆ ಸೈರಿಸಬಹು ದೆ ಹೇಳೈ ಧರ್ಮನಿರ್ಣಯಕೆ ॥ ಮದ ಮುಖನ ಭುಜಬಲವ ನೋಡುವ । ನಿದೆ ವಿಕಾರವಲಾ ವಿಸುತ

ಮುರು । ಚಿವನು ಬಲ ಬಲಗೈಯನುರುವಣಿಸಿದನು ಖ್ಯಾತಿಯಲಿ ॥೩೧॥ ಹರಿದು ಹಿಡಿದನು ಮತ್ತೆ
ನೀಲಾಂ । ಬರನ ಸೆರಗನು ನಿಮ್ಮ ಕುರುಪತಿ । ಚರಿಸಿದನಲಾ ಧರ್ಮವಿಸ್ತರವನು ವಿಚಾರಿಸದೆ ॥ ಕರೆಸಿ
ಕಪಟದ್ಯೂತದಲಿ ನೃಪ । ವರನ ಸೋಲಿಸಿ ಪಟ್ಟದರಸಿಯ । ಕರೆಸಿ ಸುಲಿಸುವುದಾವಯುಷಿಮತ ಧರ್ಮ
ಶಾಸ್ತ್ರದಲಿ ॥೩೨॥ ಎಣಿಸಬಹುದೇ ನಿಮ್ಮ ನೃಪನವ । ಗುಣವನನ್ಯಾಯಪ್ರಬಂಧಕೆ । ಗಣನೆಯುಂ
ಟೇ ಭೀಮಗಡ ತುಂಡಿಸಿದತೊಡೆಗಳನು ॥ ಕೆಣಕಿದನು ಮೈತ್ರೇಯನನು ನೃಪ । ನಣಕಿಸಲು ಶಪಿಸಿದ
ನು ತೊಡೆಯಲಿ । ಹಣಿದವಾಗಲಿ ಯೆಂದನದು ತಪ್ಪುವುದೆ ಋಷಿವಚನ ॥೩೩॥ ಆಪತಿವ್ರತೆ ಬೈದಳೀ
ಕುರು । ಭೂಪ ತೊಡೆಗಳ ತೋರಿ ಜರಿಯಲು । ದ್ರೌಪದಿಯ ನುಡಿ ತಪ್ಪುವುದೆ ಋಷಿವಚನದನುಗತಿ
ಗೆ ॥ ಕೋಪಕೊನರಿಡಲೀ ವೃಕೋದರ । ಭೂಪನನು ನುಡಿದಪ್ರತಿಜ್ಞಾ । ಸ್ಥಾಪನಕೆ ಬಳಿಕೇನ ಮಾ
ಡುವುದೆಂದನಸುರಾರಿ ॥೩೪॥ ಎಂದು ರಾಮನ ಮನವ ನಯನುಡಿ । ಯಿಂದ ತಿಳುಹಿದದೈಸಲೇ ಬಳಿ ।
ಕೆಂದು ದುಗುಡದಲವರು ನಡೆದರು ದ್ವಾರಕಾಪುರಿಗೆ॥ ಬಂದಕಂಟಕ ಕಳೆಚಿತೇ ಹಾಯೆಂದು ಹರಿ ಕು
ರುಪತಿಯ ಹೊರೆಗೈ । ತಂದು ಬೊಳೈಸಿದನು ಭೀಮಾರ್ಜುನಯುಧಿಷ್ಠಿರರ॥೩೫॥ ಈಸುದಿನಪರಿಯಂ
ತ ಧರ್ಮದ । ವಿಸಲಳಿಯದೆ ಬಳಸಿ ಬಹಳಾ । ಯಾಸವನು ಸೈರಿಸಿದಿರಿಂದಿನ ಯುದ್ಧಕೇಳಿಯಲಿ॥
ಗಾಸಿಯಾದುದು ಧರ್ಮಗತಿ ಬುಧ । ರೈಸುಮನಗಾಣರು ವೃಥಾಭಿನಿ। ವೇಶವಾಯಿತು ಮಕುಟಭಂಗ
ದೊಳೆಂದನವನೀಶ ॥ ಅರಸ ತಲೆಗುತ್ತಿದನು ದೃಗುಜಲ । ಉರವಣಿಸಿ ಮೋನದಲಿ ಫಲುಗುಣ । ನಿ
ರೆ ಮುರಾರಿ ಸುಯೋಧನನ ಸರ್ವಾಪಗುಣಗಣವ ॥ ಪರಿಪರಿಯಲೆಚ್ಚರಿಸಿ ದುಗುಡವ । ಪರಿಹರಿಸಿ
ಸಂತೈಸಿದಡೆ ಮುರ । ಹರನ ಬೈದನು ನಿನ್ನಮಗ ನಾನಾವಿಡಂಬದಲಿ ॥೩೭॥ ಆರಬಸುರಲಿ ಬಂದು
ಮೊಲೆಯುಂ । ಡಾರಮಡಿಲೊಳು ಬೆಳದು ಬಳಿಕಿನೊ । ಳಾರ ಹೆಂಡಿರ ಕೊಂಡು ಕರುತುರುಗಾಯ್ದು
ಕಳವಿನಲಿ ॥ ವೀರದೈತ್ಯರ ಸದೆಬಡಿದು ಕುರು । ವೀರವಂಶದ ರಾಯರೆಮ್ಮೊಳು । ವೈರಬಂಧವ ಬಿ
ತ್ತಿಕೊಂಡವ ಕೃಷ್ಣನೀನೆಂದ ॥೩೮॥ ಬಣಗುಗಳು ಭೀಮಾರ್ಜುನರು ಕಾ । ರಣಿಕ ನೀನಡುಪಾಯ್ದು
ಧರ್ಮದ । ಕಣಿಯುಧಿಷ್ಠಿರನತ್ತಬಲ್ಲನು ನಿನ್ನಮಾಯೆಗಳ ॥ ಸೆಣಸನಿಕ್ಕಿದೆ ನಂಮೊಳಗೆ ಧಾ । ರು
ಣಿಯ ಭಾರವ ಕಳೆಯಲೋಸುಗ । ರಣವ ಹೊತ್ತಿಸಿ ನಮ್ಮ ಭೇಂಟೆಯನಾಡಿಸಿದೆಯೆಂದ ॥೩೯॥ ಪಾ
ಪಿ ನಿನಗೀಗೋತ್ರವಧೆಯನು । ತಾಪನಿನ್ನನು ತಾಗಲೀಸ । ರ್ವಾಪರಾಧವು ನಿನ್ನದೀಕೌರವರ
ಪಾಂಡವರ ॥ ಕೋಪವನು ತೊಲಗಿಸುವ ನೃಪನನು । ತಾಪವನು ತುಳುಕುವಕುಬುದ್ಧಿ । ವ್ಯಾಪ
ಕನು ನೀವೈರಿಯಲ್ಲದೆ ಭೀಮನಲ್ಲೆಂದ ॥ ೪೦ ॥ ರಣಮುಖದೊಳೀಕ್ಷಾತ್ರ ಧರ್ಮದೆ । ಕಣಿಕೆ ತಪ್ಪದ
ವೇದಶಾಸ್ತ್ರದ । ಭಣಿತೆ ನೋಯದೆ ವೀರವೃತ್ತಿಯ ಪದದ ಪಾಡರಿದು ॥ ಸೆಣಸು ಸೋಲದ ಭ
ಛಡಾಳಿಯೊ । ಳನುವ ಹಿಂಗದ ಜೀವದಾಶೆಗೆ । ಮಣಿಯದಳಿದುದನೆಲ್ಲ ಬಲ್ಲರು ಕೃಷ್ಣಕೇಳೆಂದ॥೪೧
ಮತ್ತೆ ಹೂವಿನಮಳೆಗಳೀತನ । ನೆತ್ತಿಯಲಿ ಸುರಿದವು ಮುರಾಂತಕ । ನತ್ತ ತಿರುಗಿದನವನಿಪನ ಕರ
ಳವ ತಳಕಿಕ್ಕಿ ॥ ಮುತ್ತಿದರು ಮಾಗಧರು ವಂದಿಗ । ಳೆತ್ತಣದೊ ನಾನರಿಯೆನರಸ ವಿ । ಯತ್ತ
ವನಳ್ಳಿರಿದುದಾಸ್ತುತಿಪಾಠಕರ ರಭಸ ॥೪೨॥ ಗರುವ ಸುಭಟರು ಗಾಸಿಯಾದಿರಿ । ತುರಗಗಳು ಬಳ
ಲಿದವು ಸೂರ್ಯನ । ತುರಗ ಬಿಡುತಿದೆ ಪಶ್ಚಿಮಾದ್ರಿಯ ತಡಿಯ ತಪ್ಪಲಲಿ ॥ ತ್ವರಿತದಲಿ ಪಾಂಚಾ

ಸೃಂಜಯು । ಧರಣಿಪರು ನೀವ್ ಹೋಗಿ ನಿವ್ರೆಯು । ನಿರುಳುನೂಕುವುದೆಂದು ನುಡಿದನು ದೈತ್ಯರಿಪು ನಗುತ ॥ ೪೩ ॥ ನಡೆಯೆ ಪಂಚದ್ರೌಪದೇಯರ । ಗಡಣ ದೃಷ್ಟದ್ಯುಮ್ನನಿಳಯಕೆ । ನಡೆಯೆ ಧಾವು ನ್ಯೋತ್ತಮೌಂಜಸಕಲಿಶಿಖಂಡಿಗಳು ॥ ತಡೆಯಿದಿರಿ ಭಟರೇಳಿ ವಾದ್ಯದ । ಗಡಬಡಿಗರೇಸಕಲಬಲ ನೀ ವ್ಕಡುಬಳಲಿದಿರಿ ಹೋಗಿ ಪಾಳೆಯಕೆಂದು ನೃಪ ನುಡಿದ ॥೪೪॥ ಬೀಳುಕೊಂಡುದು ಸಕಲಬಲ ಪಾಂ। ಚಾಲಪಂಚದ್ರೌಪದೇಯರು । ಪಾಳೆಯವ ಹೊಕ್ಕರು ಯುಧಿಷ್ಠಿರನೃಪನ ನೇಮದಲಿ ॥ ಏಳು ನಾವೀ ಕೌರವೇಂದ್ರನ । ಪಾಳೆಯವ ನೋಡುವೆವೆನುತ ವನ । ಮಾಲಿ ರಥವೇರಿದನವರು ತಮತಮ್ಮ ರಥವೇರೆ ॥೪೫॥ ನರಯುಧಿಷ್ಠಿರ ಭೀಮ ಸಹದೇ । ವರು ನಕುಲ ಸಾತ್ಯಕಿಸಹಿತ ಮುರ । ಹರನು ಹೊಕ್ಕನು ಕೌರವೇಂದ್ರನ ಶೂನ್ಯಶಿಬಿರವನು ॥ ಅರಸ ಕರ್ಣದ್ರೋಣಮಾದ್ರೇ । ಶ್ವರನ ಭಗದತ್ತನ ನದೀಜಾ । ದ್ಯರ ನಿವಾಸದ ನಿಳಯುಗಳ ಕಂಡಳಲಿದನು ನೃಪತಿ ॥೪೬॥ ಸೂತನಿಳಿದನು ಮುನ್ನ ರಥವನು । ಭೂತಳಾಧಿಪನಿಳಿದನಶ್ವ । ವ್ರಾತವನು ಕಡಿಯಣದ ನೇಣಲಿ ತೆಗೆದು ಬಂಧಿಸಿದ॥ ವಾತಜನ ಸಾತ್ಯಕಿಯ ಯಮಳರ । ಸೂತರಿಳಿದರು ಮುನ್ನ ತುರಗವ । ನಾತಗಳು ಸಂತೈಸಿದರು ಸಂಗರಪರಿಶ್ರಮವ॥೪೭॥ ಇಳಿ ರಥವನೆಲೆ ಪಾರ್ಥ ಬಳಿಕಾ । ನಿಳಿವೆನೆಂದನು ಶೌರಿ ನೀ ಮು । ನ್ನಿಳಿವುದೆಂದನು ಪಾರ್ಥನಾಯ್ತು ವಿವಾದವಿಬ್ಬರಿಗೆ ॥ ಎಲೆಲೆ ನಾವುನ್ನಿಳಿಯೆನೀನಿ । ನ್ನಿಳಿವೆಲಾಸಾಕಿನ್ನು ಗರ್ವದ । ಗಳಹತನವನು ಬಳಿಕ ತೋರುವೆ ರಥವನಿಳಿಯೆಂದ ॥೪೮॥ ಬಳಿಕ ಫಲುಗುಣರಥದ ಮೇಲಿಂ । ದಿಳಿಗೆ ಹಾಯ್ದನು ಕೃಷ್ಣ ನೀನಿ । ನ್ನಿಳಿಯೆನಲು ಚಂಮಟಿಗೆವಾಘೆಯ ನೇಣ ರಥದೊಳಗೆ ॥ ಇಳುಹಿ ನಗುತ ಮುಕುಂದ ರಥದಿಂ । ದಿಳಿಯೆ ಛಟಛಟಯೆಂದು ಕಿಡಿಯು । ಚ್ಛಳಿಸಲುರಿದುದು ತೇರು ಕೇಸುರಿ ನಥವನಪ್ಪಳಿಸಿ ॥೪೯॥ ಧ್ವಜದ ಹಲಗೆಯನೊಡೆದು ಹಾಯ್ದನು । ನಿಜನಿವಾಸಕೆ ಹನುಮ ಧೂಮ। ಧ್ವಜನ ಮಯವಾದುದು ರಥಾಶ್ವರಥಾಂಗರಾಜಿಗಳು ॥ ವಿಜಯಭೀಮಾದಿಗಳು ಕಂಡ । ಕ್ಕಜದೊಳಾಕಸ್ಮಿಕದ ಕಿಚ್ಚಿನ । ಗಜಬಜವಿದೇನೆನುತ ಬೆಚ್ಚಿದರವರು ತಮತಮಗೆ ॥೫೦॥ ಹರಿಯಿದೇನಾಕಸ್ಮಿಕದ । ಳ್ಳುರಿಯೊಳದ್ದುದು ತೇರು ನಮಗೀ । ಯುರಿಯಭಯ ಭಾರ್ಯಸಿತ್ತೇನು ನಿಮಿತ್ತವಿದಕೆನಲು । ಉರಿದುದಂದೇ ತೇರು ಕರ್ಣನ । ಗುರುನದೀನಂದನರು ದೈವಿಕ । ಶರಹತಿಯೊಳಿಮ್ಮಂದಲುಳಿದುದು ಪಾರ್ಥ ಕೇಳೆಂದ ॥ನಾವಿಳಿದಬಳಿಕೀರಥದೊಳಿರ । ಲಾವಹದನೋ ನಿನಗೆ ಕಂಡೈ । ದೈವಿಕಾಸ್ತ್ರದ ಮಹಿಮೆಗಳನೆನೆ ಪಾರ್ಥ ತಲೆವಾಗಿ ॥ ನೀವೆಬಲ್ಲಿರಿ ದೇವ ನೀ ಮಾ। ಯಾವಿ ಮಾಯಾಪಾಶಬದ್ಧರು।ನಾವ್ನಬಲ್ಲವೆ ನಿಮ್ಮನೆಂದರಗಿದನು ಚರಣದಲಿ ॥೫೧॥ ಧರಣಿಪತಿ ಕೇಳೀಚೆಯಲಿ ಕೃಪ । ಗುರುಸುತರು ಕೃತವರ್ಮಕರು ನ । ಮ್ಮರಸನೇನಾದನೊ ವಿರೋಧಿಯ ದಳಕೆವೆ ಡೈಸಿ ॥ ತರಣಿ ತಿಮಿರಕೆ ತೆರಪುಗೊಟ್ಟನು । ಭರತಖಂಡವನಿನ್ನು ರಾಯನ । ಪರಿಗತಿಯಸಾರ್ವೆವೆನುತೇರಿದರು ನಿಜರಥವ ॥೫೨॥ ಭರದಲಿವರು ನೃಪಾಲನಡಗಿದ । ಸರಸಿಗೈತಂದಿಳಿದು ತಡಿಯಲಿ । ತುರಗವನು ಬಿಡಿಸಿದರು ಸಾರಥಿ ಹೊಗಿಸಿದನು ಕೊಳನ ॥ ತ್ವರಿತದಲಿ ಶೌಚಾಚಮನವಿ । ಸ್ತರಣಸಂಧ್ಯಾವಂದನಾದಿಯ । ವಿರಚಿಸಿದರರಸಿದರು ಕೊಳನಲಿ ಕೌರವೇಶ್ವರನ ॥೫೩॥ ಬಳಸಿ ಜಂಬುಕಘೂಕಕಾಕಾ । ವಳಿಗಳೆದ್ದವು ಮೆಲುವಾಯಿದ । ವಿಳಿಸಲವು,ದೆ ಗಾಢತರಗರ್ಜನೆಗೆ ಕುರುಪತಿಯು ॥ ಕಳವಳಸಿದಸ [illegible]

ವಳಿಸಿ ಬಂದು ಮಹಾರಥರು ನೃಪ। ತಿಲಕನಿದ್ದನು ಕಂಡುಭೂಪ್ಪನೆ ಕೆಡೆದರವನಿಯಲಿ ॥೫೬॥ ಉಡಿದ ತೊಡೆಗಳ ಮಗ್ಗುಲಲಿ ಹೊಸ । ಲಿಡುವರಕುತದ ಭೀಮಸೇನನ । ಮಡದಗಾಯಕೆ ಕೆಲಕೆ ಸೂಸಿದಮ ಕುಟಮಣಿಗಣವ ॥ ಕಡಿದಮೈವೇದನೆಗೆ ಸರಳುವ । ನಿಡುಸರದ ಖಗಜಂಬುಕೌಘದ । ಲಿಡುವ ಕೈಗಲ್ಲುಗಳ ನೃಪತಿಯ ಕಂಡರವರಂದು ॥ ಒರಲಿದರು ಧರೆ ಬಿರಿಯೆ ಹುಡಿಯಲಿ । ಹೊರಳಿದರು ಬಾಯ್ಗಳನು ಹೊಯ್ಯೊ । ಯ್ದುರಿಚಿ ಕೆಡೆದರು ಕಂಡಿವರು ಕಾತರಿಸಿ ಕಳವಳಿಸಿ॥ ಮರುಗಿದರು ಮನಗುಂದಿದರು ಮೈ । ಮರೆದರದ್ದರು ಶೋಕಜಲಧಿಯೊ । ರೊರಲುಗೊಂಡರು ತಳ್ಳಬಾರಿದರವರು ನಿಮಿಷದಲಿ ॥೫೭॥ ಹದುಳಿಸಿರೆ ಸಾಕೇಳಿನೀವಿ । ನ್ನಿದರಲೇನಹುದಿನ್ನು ದೈವದ । ಕದಡು ಮನಗೊಳಿಸುತ್ತು ಸಮಗೀಕಂಟಕವ್ಯಥೆಯು ॥ ಉದಯದಲಿ ,ನಾವೀಶರೀರವ । ನೊದೆದು ಹಾಯ್ವೆವು ನೀವು ನಿಜಮಾರ್ಗದಲಿ ಬಿಜಯಂಗೈವುದೆಂದನು ನಗುತ ಕುರುರಾಯ॥೫೮॥ ಶೋಕವಡಗಿದುದಿವರಿಗಂತ । ವ್ಯಾಕುಲತೆ ಬೀಳ್ಕೊಂಡುದಹುದಿ । ನ್ನೇಕೆ ಸಂಸಾರಾನುಭೂತಾವೇಶದುವ್ಯಸನ ॥ ಸಾಕದಂತಿರಲಿನ್ನು ಬಿಡು ನೀ । ಸಾಕಿದಕೆ ಫಲವೆನಿಸಿ ರಜನಿಯೊ । ಳಾಕುತಾರರ ತಲೆಗಳನು ತಹೆವೆಂದನಾದ್ರೌಣಿ ॥೫೯॥ ಅರಟ ಮರುಳ್ಕೆ ಗುರುಸುತನ ಮಾತಿ । ವಿಕಳತನವನು ಕೃಪರು ಕೃತವ । ರ್ಮಕರು ಕಂಡಿರೆ ಪಾಂಡವಕತಲೆ ತನಗೆ ಗೋಚರವೆ ॥ ಬಕನ ಧರ್ಮಶ್ರುತಿಯವೊಲು ದೇ । ವಕಿಯಮಗ ಕಾದಿಹನಲ್ಲೈ ಕೌ । ಳಿಕದಸಿದ್ಧನ ಕೃತಿಯಸಾರಿಗೆ ವಿಚಾರಬಹುದೆಂದ ॥೬೦॥ ಹರಿಹರಬ್ರಹ್ಮಾದಿದೇವರು । ವೆರಸಿಕಾಯಲಿ ರಾತ್ರಿಯಲಿ ರಿಪು । ಶಿರವ ತಹೆನಿದಕೇನುಸಂಶಯವೆನ್ನ ಕಳುಹುವುದು ॥ ಇರಲಿ ಕೃಪಕೃತವರ್ಮಕರುಹ । ತ್ತಿರೆ ರಣಾಧ್ಯಕ್ಷದಲಿ ಭೂಷಾ । ಭರಣವೈಸರಿಸಿದೊಡೆ ದ್ರೋಣನ ತನುಜನಲ್ಲೆಂದ ॥೬೧॥ ಆಗಲಾಪಾಂಡವರ ವಧೆ ನಿನ । ಗಾಗಲರಿಯದು ನಿನ್ನ ಭುಜಬಲ । ವಾಗುರೆಯ ಮೇಡೆಯಲಿ ಬೀಳದು ಕೃಷ್ಣಬುದ್ಧಿಮೃಗ ॥ ಈಗಳಿನ ನಿರ್ಬಂಧವಚನವಿ । ರಾಗವೆಮಗೇಕಾಲಿಗಾವುದು । ಭಾಗದೈವವದಾಗಲೆಂದನು ಕೌರವೇಶ್ವರನು ॥೬೨॥ ವರಚಮೂಪತಿ ನೀನು ಬಳಿಕ । ಬ್ಬರುಚಮೂವಿಸ್ತಾರವೇ ವಿಸ್ತರಿಸಿ ರಚಿಸುವುದೆಂದು ರಥಿಕತ್ರಯಕೆ ನೇಮಿಸಿದ ॥ ಗುರುಜಕೃಪಕೃತವರ್ಮರೀ ಮೂ । ವರುರೇಂದ್ರನ ಬೀಳುಕೊಂಡರು । ಕರೆದು ಸೂತರ ಸನ್ನೆಯಲಿ ಬಂದೇರಿದರು ರಥವ ॥೬೩॥ ಇವರು ಬಂದರು ದಕ್ಷಿಣದ ದೆಸೆ । ಗವರ ಪಾಳೆಯಕಾಗಿ ಸುತ್ತಲು । ಸವಡಿಗತ್ತಲೆಯಾಯ್ತು ಘನರೋಷಾಂಧಕಾರದಲಿ ॥ ಇವರು ಮಡದಲಿ ಕುದಿವರಚಿತಾ । ರ್ಣವವದಿವರಿ ಗೋಚರವೆ । ಪಾಂಡವರು ಗದುಗಿನವೀರನಾರಾಯಣನ ಕರುಣದಲಿ॥ ... ... ॥೬೪॥

ಅಂತು ಸಂಧಿ ೮ ಕ್ಕಂ ಪದ ೬೨೮ ಕ್ಕಂ ಮಂಗಳಮಸ್ತು.



## ಒಂಬತ್ತನೆಯ ಸಂಧಿ.

||ಸೂಚನೆ|| ರಾಯವರಬಲಮಥನ ಹರರಿಪು | ರಾಯಕುವರರುಸಹಿತ ಪಾಂಡವ | ರಾಯಕಟಕವ ಕೊಂದನಶ್ವತ್ಥಾಮರಜನಿಯಲಿ||

||ಪದ|| ಕೇಳು ಧೃತರಾಷ್ಟ್ರಾವನಿಪ ನಿ | ನ್ನಾಳಚಿತ್ತದ ಪಟುಳಪಣವಚ | ಡಾಳತನವಸು ಸಂಗರದೊಳುದ್ದಾಮಸತ್ವದಲಿ || ಪಾಳೆಯವ ಸಾರಿದರು ವಿಟಪಿನಿ | ತಾಳಮಿಶ್ರಮತಿಮಿರಗಹನ ವಿ ಶಾಲವಟಕುಜವಿರಲು ಕಂಡರು ನಿಲಿಸಿದರು ರಥವ || ೧|| ನಿಲುವುದಿಲ್ಲಿ ವಿರೋಧಿಸಂಗತಿ | ಯುಲುಹ ನಾಲಿಸಬಹುದು ಕೋಟಾ| ವಳಯವಿದೆ ಹತ್ತಿರೆಯೆನುತ ಗುರುಸೂನು ರಥವಿಳಿಯೆ || ಇಳಿದರಿಬ್ಬರು ಸೂತರಿಗೆ ಕೈ | ಗೊಳಿಸಿದರು ಕುದುರೆಗಳ ನಾಲುಕು | ನೆಲದೊಳೊರಗಿದರಿವರು ಸಮರಶ್ರಮದ ಭಾರವಲಿ ||೨|| ಒಳಗೆ ತೊಳಲಿಕೆ ಯುಬ್ಬರಕೆ ಕಳ | ವಳಿಸಿ ಹೊಯ್ದುರದೊಂದುಮತ್ತಂ | ತಲೆಮಿಡುಕ ದಾಲಿಸಿ ನಿದಾನಿಸಿ ಸಾರಿದರು ಮರನ || ಬಳಲಿಕೆಯ ಬೇಸರಿನೊಳಾಕೃಪ | ಮಲಗಿದನು ಕೃತವರ್ಮನೊ ಲೆವಾ | ಕಳಿಸಿ ತೂಕಡಿಸಿದನು ತೆಗೆದುದೆನಿ ದ್ರೆತನುಮನವ||೩|| ಕುಸಿದರೊರೆಮಿನಜಾಡ್ಯದಲಿರೊರೆಂ| ಪಿಸಿದರಿಬ್ಬರುರಾಜಕಾರ್ಯದ | ಜಿಸದ ರಹಿಯಲಿ ಸ್ವಾಮಿಕಾರ್ಯದ ಹೊತ್ತುಹೊರಿಗೆಯಲಿ || ಉಸು ರು ಮಿಡುಕದೆ ನಿದ್ರೆ ನೆನಹಿನ | ಮುಸುಕುನುಗಿಯದೆಯಿಷ್ಟಸಿದ್ಧಿಯ | ವಿಷಮಸಮಸಂಧಿಗಳ ಸರು ವಿನೊಳಿರ್ದನಾದ್ರೌಣಿ ||೪|| ಭಾಗ ಬೀತುದು ರಜನಿಯಲಿ ಸರಿ | ಭಾಗವಿದ್ದುದು ಮೇಲೆ ತಕ್ಷಣ | ಗೂಗೆ ಬಂದುದದೊಂದುವಟಕುಜದಗ್ರಭಾಗದಲಿ || ಕಾಗೆಗಳ ಗೂಡುಗಳ ಹೊಯ್ದುವಿ | ಭಾಗಿಸಿತು ತುಂಡದಲಿ ಬಿದ್ದವು | ಕಾಗೆ ಸುಭಟನ ಸಮ್ಮುಖದಲಿ ಸಹಸ್ರಸಂಖ್ಯೆಯಲಿ||೫|| ಇದುಮದೀಯಮನೋ ಹೃದಯಸೌ | ಹೃದಯದೊಲು ಸಂಕಲ್ಪಕಾರ್ಯಾ | ಭ್ಯುದಯಸೂಚಕವೆನುತ ನಿದ್ರಾಮುದ್ರಿತೇಕ್ಷಣರ|| ಪದವ ಹಿಡಿದಲ್ಲಾಡಿದೊಡೆ ಮೈ | ಬೆದರರದೇನೇನೆನುತ ನಿದ್ರಾ| ಮದವಿಘೂರ್ಣನವಡಗೆ ಕುಳ್ಳಿರ್ದರು ಮಹಾರಥರು ||೬|| ಏನುಗುರುಸುತಕಾರ್ಯದನುಸಂ | ಧಾನವೇನೆನೆ ವಾಯಸಂಗಳ | ನಾನಿಶಾಟನನಿರಿ ವುತಿದೆ ಗೂಡುಗಳ ಗಬ್ಬರಿಸಿ || ಈನಿದರ್ಶನದಿಂದ ಪಾಂಡವ | ಸೇನೆಯನು ಕಲ್ಲೊಲೆಯೊಳಗೆ ಕೊ ಳ | ಲೇನುಸಂಶಯವಾವುದೆಂದನು ಕೃಪಗೆ ಗುರುಸೂನು || ೭ || ಲೇಸಲೇ ಕೃತವರ್ಮ ಬಳಿಕೇ | ನಾ ಸುರದ ಕಲ್ಲೊಲಿಗೆ ರಾಜಾ | ದೇಶದಲಿ ನಾವ್ಬಂದೆವ್ಪೆ ಪಾಂಡವರ ಪಾಳಯಕೆ || ಗಾಸಿಯಾದರು ಪಾಂಡುಸುತರಿಗೆ | ವಾಸುದೇವನ ಕಾಹು ಘನಕಾ | ಳಾಸ ತಪ್ಪಿದಬಳಿಕ ನಮಗಪಕೀರ್ತಿಯಹುದೆಂದ || ೮ || ಕ್ರತುಹರನ ಸಮುಜೋಳಿ ಗಂಗಾ | ಸುತನ ಜೈಸಿದರವರತೂಕದ | ವಿತತಬಳರ್ೈ ಧಾವನ ವರೊಗ್ಗಿದರು ದಿವಿಜರಲಿ || ಅತಿರಥರೊಳಗ್ಗಳೆಯರಾಧಾ | ಸುತಸುಯೋಧನಮಾದ್ರಪತಿಯಾ | ವ್ಯತಿಕರದೊಳೇನಾದರೈ ಮುರಹರನ ಕೃಪೆಯಿಂದ ||೯|| ಇರಿಸನಿಲ್ಲಿ ಮುರಾರಿಕೌಂತೇ | ಯರನಿದೊಂದ ಸುಮತವು ಮೇಣಿಲ್ಲಿರಿಸದೊಡೆ ಕೊಲಲೀಯನದ್ಭೈಸುವನು ಚಕ್ರದಲಿ | ಇರುಳುಹಗಲಡವಿಯಲಿ ಮನೆಯಲಿ | ಸರಸಿಯಲಿ ಪರ್ವತದೊಳಗ್ನಿಯೊ | ಳಿರಲಿ ತನ್ನವರಲ್ಲಿ ಹರಿಗವಧಾನ ಬಲುಹೆಂದ||೧೦|| ಮರಹಿನಲಿ ಮಡುಹುವನು ಗರ್ವದ | ಹೊರಗೆಯೇನೀನಿದ್ರೆಗೈವರ | ನಿರಿವುದೇನಿದು ಪಂಥವೇ

ಪೌರಾಣಮಾರ್ಗದಲಿ॥ ಅರಿಯದಾವಂಗೈಸಿದಿವರಲಿ।ಪರಿಸಮಾಪ್ತಿಯು ಕಂಡೆವಾದೊಡೆ।ನೆರೆ ಕೃತಾರ್ಥರು ವಿಘ್ನಶತವಡ್ಡೈಸದಿರದೆಂದ ॥ ೧೧ ॥ ತಪ್ಪದಾಚಾರಿಯನ ನುಡಿ ಮೇ । ಲಪ್ಪುದನು ದೈವಾಭಿಯೋಗದೊ । ಳೊಪ್ಪವಿಡುವುದು ರಜನಿಯಲಿ ಕಳ್ಳೇರುಕದನದಲಿ ॥ ಒಪ್ಪದಿದು ಸೌಭಟವಿಧಾನಕೆ, ನೊಪ್ಪಿ ತಹುದಿದರಿಂದರಿಪುಗಳ।ತಪ್ಪಿಸುವನಸುರಾರಿಯೆಂದನು ನಗುತ ಕೃತವರ್ಮ॥೧೨॥ ಆದೊಡರಿ ನೀವಿಬ್ಬರಿಲ್ಲಿ ವಿ । ವಾದನಿಮ್ಮೊಡನೇಕೆ ಜನಪತಿ । ವಾದಭಯವೆಮಗಿಲ್ಲ ಸಾರಥಿ ರಥವ ತಾರೆನುತ ॥ ಕೈದುಗಳ ಸಂವರಿಸಿ ರಥದಲಿ । ಹಾಯ್ದು ಪೊರಮಡೆ ಭೋಜಕೃಪರನು । ವಾದರೆಮಗೇನೆನುತ ಬಂದರು ಪಾಳೆಯದ ಹೊರೆಗೆ ॥೧೩॥ ಮುರಿದು ಕೋಟೆಯ ನೊಂದುಕಡೆಯಲಿ । ತೆರಹುಮಾಡಿ ಮಹಾರಥರು ಜನ । ವರಿಯದವೊಲೊಳಹೊಕ್ಕು ಹೆಬ್ಬಾಗಿಲಲಿ ರಥವಿಳಿಸಿ ॥ ತಳವರೆರ ತೊಳಲಿಕೆಯ ಮೇಲೆ । ಚ್ಚರಿಕೆ ಮಸುಳಲು ಮಧ್ಯರಾತ್ರಿಯೊ । ಳಿರಿತದಂಗವಣೆಯಲಿ ಪರುಠವಿಸಿದನು ಗುರುಸೂನು ॥೧೪॥ ಎರಡುಬಾಗಿಲು ಪಾಳೆಯಕೆ ಕೃಪ । ನಿರಲಿ ಮೂಡಲು ಪಶ್ಚಿಮಾಂಕದೊ । ಳಿರಲಿ ಕೃತವರ್ಮಕನು ಬಾಗಿಲೊಳಾಂತನೃಪಜನವ ॥ ಕರಿತುರಗರಥಪತ್ತಿಗಳ ಸಂ । ವರಿಸುವದು ನೀವಿಲ್ಲಿ ಮಧ್ಯದೊ । ಳರಸುವೊತ್ತಕೆ ವೈರಿಭೃತ್ಯಾತಾನಹೆನೆಂದು ಕೈಕೊಂಡ ॥೧೫॥ ಎರಡು ಬಾಗಿಲಲಿವರನಿಬ್ಬರೆ । ನಿರಿಸಿ ಚಾಪವ ಮಿಡಿದು ಬಾಣವ। ತಿರುಹುತೊಬ್ಬನೆ ರಥವ ಬಿಟ್ಟನು ರಾಜಬೀದಿಯಲಿ ॥ ಅರಸ ಕೇಳದ್ಭುತವನಾನಡು । ವಿರಳು ನೃಪವೀಧಿಯಲಿ ಸಾದುದು । ಧರೆಗೆ ಗಗನಕೆ ಕೀಲನಿಕ್ಕಿದವೋಲ್ಮಹಾಭೂತ ॥೧೬॥ ನಿಟಿಲನಯನದ ಜಡಿಮಜೂಟದ । ಜಟೆಯ ಹೂಂಕೃತಿಯಲ್ಲಿ ನಾಸಾ । ಪುಟವ ಕಕ್ಷದಲೆಸೆವವಿಷಧರ ಪತಿಯ ವಾಸುಗಿಯ ॥ ಚಟುಳಕಪಳಪ್ರಭೆಯ ಘನಸಂ।ಘಟಿತವೆನೆ ಘರ್ಘರದ ಘೋರ । ಸ್ಫುಟರವದ ರೌದ್ರಾಭಿನಯದಲಿ ರಂಜಿಸಿತು ರಭಸ॥೧೭॥ ಬೆಚ್ಚದನೆ ಭಾರಣೆಯ ಭೂತವ।ನೆಚ್ಚ ಬೊಬ್ಬಿರಿದಾಲಿದನು ಮಗು । ಳೆಚ್ಚನೈದಾರೇಳುನೂರೈನೂರುಸಾಸಿರವ ॥ ಹೆಚ್ಚಿಹಾಯ್ದಂಬುಗಳಭೂತದ ಕಿಚ್ಚ ಕಂಗಳ ಕೊಂಡವುರಿಯಲಿ । ವೆಚ್ಚಿಸಿದವರೆಸೇದು ಸೀಕರಿವೊಯ್ತು ನಿಮಿಷದಲಿ ॥ ೧೮ ॥ ತೆಗೆದು ಮಂತ್ರಾಸ್ತ್ರದಲಿ ತಿರುವಿಂ । ದುಗುಳಿಚಿದೊಡಾಭೂತವಂಘ್ರಿಗೆ । ಮುಗಿದಕೈಗಳಲೆರಗಿದರು ಶಸ್ತ್ರಾಧಿದೇವಿಯರು ॥ ಉಗಿದನೊರೆಯಲಡಾಯುಧವನು। ಬ್ಬೆಗವಲಪ್ಪಳಿಸಿದೊಡೆ ಕೈಯಿಂ । ಜಗುಳಿ ಬಿದ್ದುದು ಜಂಕೆಯಿದ್ದುದು ಭಯದಜೋಡಿಯಲಿ ॥೧೯॥ ಕಾಕಮುಖದಮಯೂರಟಿಟ್ಟಿಭ । ಕೋಕವದನದ ಹಂಸಕಂಕಬ । ಳಾಕವಕ್ತ್ರದ ಗೌಜಗೀಜಗಚಾತಕಾನನದ ॥ ಘೂಕಮೃಗದ ಸೃಗಾಲಶಾರ್ದೂಲ । ಲಾಕೃತಿಯ ಬಹುವಿಧದ ರೂಪವ। ನೇಕಭೂತವ್ರಾತ ನೆರೆದವು ಕೇಳು ಧೃತರಾಷ್ಟ್ರ॥೨೦॥ ಇದು ವಿರೂಪಾಕ್ಷನ ಮನಃಕ್ಷೋಭದ ವಿಕಾರವಲಾ ಪಿನಾಕಿಯ।ಪದವ ಹಿಡಿದೋಲೈಸುವೆನು ಸರ್ವಾಂಗಯಜ್ಞದಲಿ ॥ ಇದಕುಪಾಯವ ಬಲ್ಲೆನೆನುತು । ಬ್ಬಿದನು ಬೊಬ್ಬಿರಿದಾರಿ ತೋಡಿದ । ನುದರಕೆ ಹ್ನಿಯನಿದಿರೊಳಗ್ನಿತ್ರಯವ ನಿರ್ಮಿಸಿದ ॥ ೨೧ ॥ ಸೆರೆನರಂಗಳ ದರ್ಭೆ ಮಿದುಳಿನ। ಚರು ಕಪಾಲದ ಪಾತ್ರೆ ಯೆಲುವಿನ । ಬೆರಳಸಮಿಧೆಯ ಸಾಲಡಗುಮಜ್ಜೆಗಳಪೃಷದಾಜ್ಯ ॥ ಅರುಣಜಲದಾಹುತಿಯ ವಿಸ್ತರೀಕರಣವನು ವಿರಚಿಸಿದಮಂತ್ರೋಚ್ಚರಣೆಯಲಿ ಪೂರ್ಣಾಹುತಿಗೆ ತನ್ನೊಡಲನೊಪ್ಪಿಸಿದ॥೨೨॥ ಬೆಚ್ಚಿದನು ಮದನಾರಿ ಹೋಮದ । ಕಿಚ್ಚಿ ತೊಡಕದ ಮುನ್ನ ತೆಗೆದನು । ಬಿಚ್ಚಿ ಜಡೆಗಳ ಜನು

ಸುತೆಯಲಿ ಸಾದಿದನು ಭಟನ॥ ಅಚ್ಚಶರವಿದೆ ಖಡ್ಗವಿದೆ ಕೋ। ಮುಚ್ಚುಮರೆಯೇಕಿನ್ನು ಸುತರಲಿ ।
ಚುಚ್ಚಲವ ನೀನೆಂದು ಮೈದಡವಿದನು ಶಶಿಮೌಳಿ ॥ ೨೩ ॥ ಸಾರಥಿತ್ವದೊಳಿಳಿಸಿದನು ಭೂ। ಭಾ
ರಧುರಂಧರನೆಗಸುರಹರಗೇ । ಭಾರ ಬಿದ್ದುದು ನಮಗೆ ಪಾಂಚಾಲಪ್ರಬದ್ಧಕರ ॥ ತೀರಿತಮು ನಿನ್ನಲ್ಲಿ ನಿನ್ನ
ವಿ । ಹಾರವೆಡೆಬೆಚ್ಚುವುದರಿವ್ರಜ । ಮಾರಣಾಧ್ವರಕೃತಿಯ ನೀ ಕೈವಳಸು ಹೋಗೆಂದ ॥ ೨೪ ॥
ಎನೆ ಪುರಾರಿಯ ಪದಯುಗಕೆ ಗುರು । ತನುಜ ಮೈಯಿಕ್ಕಿದನು ಬಿಳ್ಕೊಂ । ಡನು ತಿರೋಹಿತನಾದನೀ
ಶ್ವರನೀತನನು ಕಳುಹಿ ॥ ಧನುವ ಕೊಂಡನು ಧೂರ್ಜಟಿಯ ರೂ । ಹಿನ ಮಹಾರಥ ರಥವನೇರಿದ ।
ನನುವರದ ರೌರವವನಂಗೈಸಿದನು ರಜನಿಯಲಿ ॥ ೨೫ ॥ ಧರಣಿಪತಿ ಕೇಳ್ ರಾಜಬೀದಿಯೊ । ಳುರ
ವಣಿಸಿ ಗುರುಸೂನು ರಥದಲಿ । ಬರುತ ಕಂಡನಲೈ ಯುಧಿಷ್ಠಿರರಾಜಮಂದಿರವ ॥ ಇವರು ಪಾಂಡ
ವರಿಲ್ಲಿ ಮೇಣಿವ । ರಿರಲಿ ಬಳಿಕಾದೈವೆನಯ್ಯನ । ಹರಿಬಹೋಗಲಿ ಮುನ್ನ ಕೊಲುವೆನು ದ್ರುಪದನಂದ
ನನ ॥ ೨೬ ॥ ಎಂದು ರಾಯನ ಗುಡಿಯ ಗೂಢವ । ಮಂದಿರದ ಬಲವಂಕವೀಧಿಯ । ಮುಂದೆ ಧೃ
ಷ್ಟದ್ಯುಮ್ನನರಮನೆಗಾಗಿ ನಡೆತಂದು ॥ ಬಂದು ಬಾಗಿಲ ಮುರಿದು ಕಾಹಿನ । ಮಂದಿಯನು ನಿಡು
ನಿದ್ರೆಗೈಸಿದ । ನಂದು ನುಣ್ಣನೆ ಹೊಕ್ಕನಾತನ ಸಜ್ಜೆಯರಮನೆಯ ॥ ೨೭ ॥ ತೊಳತೊಳಗುವಿಕ್ಕೆ
ಲದ ದೀಪದ । ಬೆಳಕಿನಲಿ ಮಣಿರುಚಿಯ ಚಿತ್ರಾ । ವಳಿಯ ಮೇಲ್ಕಟ್ಟಿನಲಿ ಲಲಿತಾಸ್ತರಣಮಧ್ಯದ
ಲಿ ॥ ಹೊಳೆಹೊಳೆವನವರತ್ನಭೂಷಣ । ಕಲಿತಕಾಯನ ಕಂಡು ರೋಷ । ಪ್ರಳಯಭೈರವರೂಪನೊ
ದೆದನು ವಾಮಪಾದದಲಿ ॥ ೨೮ ॥ ಗಳಿಲನೆದ್ದನಿದಾರು ನಿದ್ರೆಯ । ನಳಿದವನ ತಿವಿಯೆನುತ ಮುಂದ
ಣ । ಪ್ರಳಯರುದ್ರನ ರಹಿಯ ರೌದ್ರದ ರಣಭಯಂಕರನ ॥ ನಿಲವ ಕಂಡವನಾಯುಧವ ತಾ । ಹಲ
ಗೆಯಾವೆಡೆಯೆಂಬವನ ಮುಂ । ದಲೆಯ ಹಿಡಿವಡಗೆಡಹಿ ಕುಸುಕಿರಿದವನ ಸದೆಬಡಿದ ॥ ೨೯ ॥ ಉಗಿ
ದು ಬಿಲ್ಲಿನ ತಿರುವ ಕೊರಳಲಿ । ಬಿಗಿಯೆ ದ್ರುಪದಾತ್ಮಜನು ತಾ ಬೆರ । ಳುಗಳ ಬಾಯಲಿ ಬೇಡಿಕೊಂ
ಡನು ದ್ರೋಣನಂದನನ ॥ ಉಗಿದಖಡ್ಗದಲೆನ್ನ ತಿರವನು । ತೆಗೆದುಕಳೆಯೈ ಶಸ್ತ್ರಘಾತದಿ । ನುಗು
ಳಿಸುವೆನು ತನಗೆ ವೀರಸ್ವರ್ಗವಹುದೆಂದ ॥ ೩೦ ॥ ಅಕಟ ಗುರುಹತ್ಯಾಮಹಾಪಾ। ತಕಿಯೆ ನಿನಗೇ
ಸ್ವರ್ಗದೇಶ । ಪ್ರಕರ ನಿನ್ನನು ಹೊಗಿಸಿದೊಡೆ ಸುಡುವೆನು ಸುರಾಲಯವ॥ ಪ್ರಕಟಕುಂಭೀಪಾಕಮು
ಖನಾ । ರಕದೊಳರಮನೆ ನಿನಗೆ ಕೌಂತೇ । ಯಕದಹರಿಗೆಳೆತನವೆನುತ ಕಟ್ಟಿದನು ತಿರುಪಿನಲಿ ॥೩೧
ಉಗಲ ಹತ್ತಿಸಿ ಸೆಳೆದು ಗೋಣಿಲಿ।ಗುರುಗುರಿಸಲಸು ಜಾರಿದುದು ಬೊಬ್ಬಿರಿದು ಹೊಕ್ಕನು ಕದವನೊ
ದೆದು ಶಿಖಂಡಿಯರಮನೆಯ ॥ ತರಿದನಾತನನುತ್ತಮೌಂಜಸ । ನರಸಿಹೊಯ್ದನು ಹೊಕ್ಕು ಬಾಗಿಲ
ಮುರಿದು ಮೈಯುರುಹಿಸಿ ಯುಧಾಮನ್ಯುವ ವಿಭಾಡಿಸಿದ ॥ ೩೨ ॥ ಗಜಬಜವಿದೇನೆನುತ ನಿದ್ರೆಯ
ಲುಜಡರೊಳಗೊಳಗೆಂದರೀತಿನ । ಭುಜಬಲಕೆ ಮಲೆತವರ ಕಾಣೆನು ಸೃಂಜಯಾದಿಗಳ ॥ ರಜನಿಯು
ರೌಕುಳವ ಮಾಡಿದ । ನಜಿತಸಾಹಸನಿತ್ತ ದ್ರುಪದಾ । ತ್ಮಜೆಯ ಭವನದ ಹೊರಗೆ ಬಂದನು ಪಾಂ
ಡರನೆರಸು ॥ ೩೩ ॥ ಇದು ಯುಧಿಷ್ಠಿರರಾಜಗೃಹವೆಂ । ದೊದೆದು ಕಳೆದನು ಕಾಹಿನವರನು । ಸದೆ
ಹೊಕ್ಕನು ಸಜ್ಜೆಯಲಿ ಧರ್ಮಜನ ನಂದನನ ॥ ಒದೆದೊಡೆದ್ದನು ಸುರಗಿಯಲಿ ಕಾ। ದಿದನು ಖಡ್ಗ
ಹಿಡಿದು ನಿಮಿಷದಾ । ದರದಲವನ ತಲೆಗಡಿದು ಪತಿವಿಂದ್ಯನನಸುಗಳೆದ ॥ ೩೪ ॥ ಜನಪ ಕೇಳು ಬಾ

ಸುತಸೋಮನನು ಶ್ರುತಕೀರ್ತಿಯ ಶತಾನೀಕನನು ಶ್ರುತವರ್ಮಕನ ತರಿವನು ಪೌಸವೀರ್ಸುತರ॥ ಜನಪವೈರಿವರ ತಲೆಗಳಿಂದೇ । ಕನಕರಥದೊಳಗಿರಿಸಿ ಹೊಕ್ಕನು । ಮನೆಮನೆಗಳಲಿ ಸವರಿದನು ಸೋಮ ಪ್ರಬದ್ಧಕರ ॥ ೩೫ ॥ ಸೀಳಿದನು ಸಮರಥರುಗಳ ಪಾಂಚಾಲರಾವುತರಸು ಮಹಾರಥ । ಜಾಲವನು ಜೋದರರ ಭಾರಿಯಪಾರಕವ್ರಜವ ॥ ಸಾಲ ಹೊಯ್ದನು ಹುಯ್ಯಲಿಗೆ ಹೊಗು । ವಾಳ ತರಿದನು ಖಡ್ಗದಲಿ ರಿಪು । ಕಾಲಭೈರವ ಬೀದಿವರಿದನು ಕೇರಿಕೇರಿಯಲಿ ॥ ೩೬ ॥ ಎಲೆಲೆ ಕವಿ ಕಳ್ಳೇರುಕಾರನ । ತಲೆಯ ಹೊಯ್ಹೊಯ್ಯೆನುತ ನಿದ್ರಾ । ಕುಳರು ಗರ್ಜಿಸಿತಾಗುಳಿಸಿ ತೂಕಡಿಸಿದರು ಮರಳಿ ॥ ಕೆಲಕೆಲರು ನಿದ್ರೆಗಳ ಮರವೆಯ । ಕಳವಳಿಗರೊರೆಗೊಂಡು ಖಡುಗವ । ನೆಲಕೆ ಬಿಸುಟರು ಬತ್ತಳಿಕೆಯಲಿ ಹೂಡಿದರು ಧನುವ ॥ ೩೭ ॥ ಗಜವ ಹಲ್ಲಣಿಸಿದರು ವಾಜಿ । ವ್ರಜಕೆ ರೆಂಚೆಯ ಬೀಸಿದರು ಗಜ। ಬಜವಿದೇನೆನುತ ಗಾಲಿಗೆ ಬಿಗಿದು ಕುದುರೆಗಳ ॥ ರಜನಿ ಹೋಯ್ದದೆ ಹಗಲು ಬಂದುದೆ । ಗಜಬಜದಲಕಟೆನುತ ಸುಭಟ । ವ್ರಜ ಸುವಿಹ್ವಲಕರಣರಿರಿದಾಡಿದರು ತಮ್ಮೊಳಗೆ ॥ ೩೮ ॥ ಲಾಯದಲಿ ಹೊಕ್ಕಿರಿದು ಕುದುರೆಯ । ಬೀಯವಮಾಡಿದನಂತಕಂಗೆ ಯ । ಡಾಯುಧದ ಧಾರೆಯಲಿ ಕೊಟ್ಟನು ಕುಂಜರವ್ರಜವ ॥ ರಾಯದಳ ಧರೆಯಂತೆ ನವಖಂ। ಡಾಯುವಾನವೆಯಾಯ್ತು ಪಾಂಡವ । ರಾಯಕಟಕವ ಕೊಂದನಶ್ವತ್ಥಾಮ ರಜನಿಯಲಿ ॥ ೩೯ ॥ ದೊರೆಗಳೇಸಾದರೊ ಯುಧಿಷ್ಠಿರ । ನರವೃಕೋದರನಕುಲಸಹದೇ । ವರು ಮುರಾಂತಕಸಾತ್ಯಕಿಗಳೊಳಗಹರೆ ರೌಕುಳಕೆ ॥ ಹರನ ಖತಿಯ್ಯಿ ಕೃತಾಂತನ। ವಿರಸಧೃತಿಯೋ ಸರ್ವದಳಸಂ । ಹರಣಕೇನುನಿಮಿತ್ತವೆಂಬುದು ಭೂಸುರವ್ರಾತ[illegible]॥ ಉಳಿದುದೇಳಕ್ಷೌಹಿಣೀಬಲ । ದೊಳಗೆ ನಾರೀನಿಕರ ವಿಪ್ರಾ । ವಳಿ ಕುಶೀಲವಸೂತಮಾಗಧವಂದಿಸಂದೋಹ ॥ ಸುಳಿವ ಕಾಣೆನು ಕೈದುಹಿಡಿದವ । ರುಳಿದು ಜೀವಿಸಲಾನೆಕುದುರೆಗ । ಳೊಳಗೆ ಜಯವಿಲ್ಲೆನನೆಂಬನು ಕೇಳು ಧರಣೀಶ ॥ ೪೧ ॥ ಕೂಡೆ ಕಟ್ಟಿತು ಕಿಚ್ಚು ತೆರಹಿನ । ಲೋಡುವರೆ ಗುರುಸೂತ್ರನ ಶರ ವಿ । ಕ್ರೋಡು ವೆರೆ ಬಾಗಿಲುಗಳಲಿ ಕೃತವರ್ಮಕೃಪರೆಸಗೆ ॥ ಕೂಡೆ ಮುಮ್ಮಳಿಯ[illegible]ದೀಶರೆ। ಮೂಡಿಗೆಯ ಚತುರಂಗಬಲವೆ । ಕ್ಕಾಡಿತೇನೆಂಬೆನು ಯುಧಿಷ್ಠಿರನೃಪನ ಪರಿವಾರ॥ [illegible]೨ ಬಸಿವರಕ್ತದಡಾಯುಧದ ನೆಣ। ವಸೆಯತೊಂಗಲಗರುಳ ಬಂಧದ। ಲಸಮಕೈಮ್ರೆಗಳ ಕಠೋರಭ್ರುಕುಟಿಭೀಷಣದ ॥ ಮುಸುಡುಹೊಗರಿನ ದಂತದಂಶಿತ । ದಶನವಾಸದ ವೈರಿಹಿಂಸಾ । ವ್ಯಸನವೀರರಾವೇಶಿ ಬಂದನು ಕೃಪನ ಸಂಮುಖಕೆ ॥ ೪೩ ॥ ಹೇಳಿದನು ಸೃಂಜಯರವಧೆಯ ಪಾಂಚಾಲರಾಜಕುಮಾರವರ್ಗದ । ಮೌಳಿಗಳ ಬಲಿಗೊಟ್ಟಪರಿಯನು ಖಡ್ಗಧೃತನಿಗೆ ॥ ಪಾಳೆಯದೊಳರಸಿದನು ಪಾಂಡುಸೈ । ಪಾಲತನುಜರನವರು ಕೆಡುವರೆ।ಮೇಲುಗಾಹಿನ ವೀರನಾರಾಯಣನ ಕರುಣದಲಿ ॥ ... ... ॥೪೪॥

ಅಂತು ಸಂಧಿ ೯ಕ್ಕಂ ಪದ ೩೭೦ಕ್ಕಂ ಮಂಗಳಮಸ್ತು.

## ಹತ್ತನೆಯ ಸಂಧಿ.

॥ ಸೂಚನೆ ॥ ರಾಯಕಟಕವನಿರಿದಗುರುಸುತ । ನಾಯುಧದ ವಿಗ್ರಹದೊಳಗೆ ಹರಿ ಕಾಯಿದನು
ಕೃಪೆಯಿಂದಲಭಿಮನ್ಯುವಿನನಂದನನ ॥

॥ಪದ॥ ಕೇಳು ಧೃತರಾಷ್ಟ್ರಾವನಿಪ ರಿಪು । ಜಾಲಗೀರ್ವಾಣಕಕದಂಬ । ಸ್ಥೂಲಲಕ್ಷನು ಬಂದು ಕಂಡನು ಭೋಜಗೌತಮರ ॥ ಲೀಲೆಯಲಿ ರಥವೇರಿ ಕುರುಭೂ । ಪಾಲನಲ್ಲಿಗೆ ಬಂದರುಬ್ಬಿನ । ಮೇಲುಮದದ ಜಯಪ್ರಚಂಡರು ಕಂಡರವನಿಪನ ॥ ೧ ॥ ಬಲಿದಮರವೆಯ ಕರಣವೃತ್ತಿಯ । ಕಳಕಳದ ನಿಖಿಳೇಂದ್ರಿಯದ ಪರಿ । ಚಲನಸಂಚದ ಶಿಥಿಲಮೂಲಾಧಾರಮಾರುತನ ॥ ಅಲಗತದಪರಿವೇದನಾವಿ । ಹ್ವಲಿತಕಂಠಗತಾತ್ಮನೂರ್ಧ್ವ । ಸ್ಖಲಿತದೀರ್ಘಶ್ವಾಸನಿರ್ದನು ಕೌರವೇಶ್ವರನು ॥ ೨ ॥ ಕಂಡು ಕಂಬನಿದುಂಬಿದರು ಭೂ । ಮಂಡಲಾಧಿಪವೈರಿಮದವೇ । ತಂಡಕೇಸರಿನಿನಗಿದೇ ಮರುಘುಪೊತು ವಿಧಿಯೆನುತ ॥ ಗಂಡುಗಲಿಯವಧಾನ ರಿಪುಬಲ । ದಂಡಧರನವಧಾನ ಕುರುಕುಲ । ಚಂಡಕರನವಧಾನವೆಂದೆಚ್ಚರಿಸಿದನು ನೃಪನ ॥ ೩ ॥ ಕೆದರಿದುದು ಕುಡಿನೋಟಕರಣದ । ಕದಡು ಹರಿದುದುಯಿಂದ್ರಿಯಾವಳಿ । ಕುದಿಗೊಳಿಸಿದುದು ಪವನ ನಟಿಸಿತು ನಾಭಿಪರಿಯಂತ ॥ ವದನವನು ನಸುನೆಗಹಿ ನೃಪನುಡಿ । ಸಿದನಿದಾರ್ಯ್ಕೆ ಸಕ್ರೋಭಾ । ಗದಲಿ ಸೇವಾಮಧುರಸಚನವಿಲಾಸಪರರೆಂದ ॥ ೪ ॥ ನಾವು ನಿಮ್ಮವರೆಮ್ಮ ಬೊಪ್ಪನ ಭಾವಕೃಪಕೃತವರ್ಮನೀತನು । ದೇವರವಧರಿಸುವುದು ರಜನಿಯ ರಾಜಕಾರಿಯವ ॥ ನೀವು ಬಿನ್ನಹಮಾಡಬೇಹುದು। ಮಾವ ರಣಸಂಗತಿಯನಾತ್ಮ । ಸ್ತಾವಕರು ನಾವಲ್ಲವೆಂದನು ಕೃಪಗೆ ಗುರುಸೂನು ॥ ೫ ॥ ಏನನೆಂಬೆನು ಜೀಯ ದ್ರುಪದನ । ಸೂನು ಪಂಚದ್ರೌಪದೇಯರ । ಹಾನಿ ... ನು ಸ್ಕಂಜಯಶಿಖಂಡಿ ... ಮುಖರುಪಹತಿಯ ॥ ವೈನತೇಯನ ಲಳಿಯನಹಿಕುಲ । ವಾನುವುದೆ ಪಾಂಚಾಲಕದಳೀ । ... ನನವನಿನ್ನಾನೆ ಸವರಿತು ಹೇಳಲೇನೆಂದ ॥ ೬ ॥ ದೈವಕೃಪೆ ಜವನಿಕೆಯ ಮರೆಗೊಂ । ಡೈವರುಳಿದರು ಪಾಂಚಾಲ ಸಾತ್ಯಕಿ । ದೈವದೊಡಹುಟ್ಟಿದನಲೇಯವರಿಲ್ಲ ಶಿಬಿರದಲಿ ॥ ... ಲವಿನಿತಕ್ಕಧಿಟ ನಿ । ರ್ದೈವಬಲ ನಿಶ್ಚೇಷ್ಟವನಿತ್ತೆ । ದೈವವೆತ್ತಿದಭಲದ ಭಾಷೆಯರಾಯ ಕೇಳೆಂದ ॥ ೭ ॥ ಎಲೆ ಕೃಪಾಚಾರಿಯ ವಿರೋಧಿಗ । ಳುಳಿದರೈವರು ಬಲ್ಲೆನಾನಸ । ದಳದ ಕೃಪೆಯಲಿ ಬಸಿದು ಬೀಳುವನವರ ಮುರವೈರಿ ॥ ಅಳಿದುದೇ ನಿಶ್ಶೇಷಪಾಂಡವ । ದಳ ಕುಮಾರರುಸಹಿತವಿನ್ನ । ಗ್ಗಳೆಯನಶ್ವತ್ಥಾಮನಹನೆಂದನು ಮಹೀಪಾಲ ॥ ೮ ॥ ಏನನೆಸಗಿದರೆಮಗೆ ಗಂಗಾ । ಸೂನು ಭಾರದ್ವಾಜನೊಲಿದವ । ಗೇನಮಾಡಿದನಶ್ವತ್ಥಾಮನ ಭದ್ರಗಜವೆಂಬ ॥ ಮಾನನಿಧಿ ರಾಧಾತನುಜನಿಂ । ದೇನುಹರಿದುದು ಹರಿಬವನು ಗುರು। ಸೂನುವೇ ಮರಳಿಚಿದನೆಂದನು ಕೌರವರರಾಯ ॥ ೯ ॥ ಹರಿಬ ಬಿಡದ ಪಾಂಡುಸುತರುಳಿ । ದಿರಲಿ ಸಾಕಂತಿರಲಿ ನಿಮ್ಮಡಿ । ಪುರಕೆ ಬಿಜಯಂಗೈವುದೆಂದನು ಕೌರವೇರರಾಯ॥ ಹರಣವುಳಿದೊಡೆ ಪಾಂಡುತನುಜರ। ಶಿರವ ನೇವಣಿಸುವೆನು ತಾಕೇ । ಸರಿಯುಪೀಠದಲೆಂದನಶ್ವತ್ಥಾಮ ಕೈಮುಗಿದು ॥ ೧೦ ॥ ಸಾಕದಂತಿರಲಿನ್ನು ವೈರಿ । ವ್ಯಾಕರಣಪಾಂಡಿತ್ಯದಲ್ಲಿವಿ । ವೇಕಶೂನ್ಯ

ರು ಸಾವು ಮೊದಲಾಗೂರ್ಧ್ವದೈಹಿಕದ ॥ ಆಕೆವಾಳರಿಗರುಹಿ ನೀನಾ । ಶೋಕಪೂರ್ಣ್ಯರ ತಿಳುಹಿವಿದಳಿ
ತ । ಶೋಕರನಿಸುವುಪಾಂಧನೃಪಗಾಂಧಾರಿದೇವಿಯರ ॥ ೧೧ ॥ ಎಂದು ಮೂರಂಗುಲವನೆಣಿಸುತ ।
ಮಂದಮತಿಕುರುರಾಜನಿರಲವ । ನಂದನನು ಹರಿ ತಿಳಿದು ಯಮಪುರಿಗೈದಿಸುವೆನೆನುತ ॥ ಬಂಧುಬೆ
ಸಗೊಂಡನು ಸುಯೋಧನ । ಸಂದರಾಗವೆ ಬಿಡು ಮನೋವ್ಯಥೆ । ಯಿಂದ ಬೆರಳ್ಗಳ ಮಡಿಪಕಾರಣ
ವೇನು ಹೇಳೆಂದ ॥ ೧೨ ॥ ಗುರುಸುತನ ದಳಪತಿಯ ಮಾಡದೆ । ಸರಸಿಯೊಳು ಪೂರಿಸದೆ ಜಪವ
ನು । ವರಜನನಿ ಯಿಕ್ಷಿಸಿದಳೆನ್ನಂಗವನು ತೊಡೆಗಳಿಗೆ॥ ಮರೆಯಮಾಡಿದೆ ಲಜ್ಜಿಸುತ ಮು। ನ್ನರಿಯ
ದಾದೆನು ಮೋಸಮೂರರ । ಲಿರದೆ ಬಂದುದು ತನಗೆನಲು ನಸುನಗುತ ಹರಿನುಡಿದ ॥ ೧೩ ॥ ಗುರು
ಜ ದಳಪತಿಯಾದೊಡೆ ಯುಧಿ । ಷ್ಠಿರನ ಗಜವೇರಿಸುವೆ ಮಂತ್ರೋ । ಚ್ಚರಣೆ ನಿನ್ನಲಿ ಪಲಿಸೆಯುದ
ಕಾನಕುಲನನು ಕರಸಿ ॥ ತುರಗವಾರೋಹಿಸುವೆ ಜನನಿಯ । ಕರುಣದಲಿ ವಜ್ರಾಂಗನಾಗಲು । ಧರಿಸು
ವೆನು ತಾ ಚಕ್ರವೆನೆ ನಿಶ್ಚಿಂತೆಯಲಿ ನುಡಿವ ॥ ೧೪ ॥ ದೇವ ನೀ ಸಚರಾಚರಂಗಳ । ಠಾವಿನಲಿ ವ್ಯಾ
ದೋರಿ ಮೆರವವ । ನಾವ ರಿವನು ಯೆನ್ನಮನದೊಳಗಿರ್ದಭೀಷ್ಟ್ವಯದ ॥ ಭಾವವನು ನೆರೆಮಾರಿದೆ
ಯಿನ್ನಿನ । ಗಾವಸುಕೃತದ ಫಲವೊ ಪಾಂಡವ । ಜೀವ ನೀನಹುದೆನುತ ಕೊಂಡಾಡಿದನು ಕುರುನೃಪ
ತಿ ॥ ೧೫ ॥ ಎನುತ ಕಣ್ಮುಚ್ಚಿದನು ಜೀವಾ । ತ್ಮನು ಜವಾಯಿಲತನದಿನಡಹಾ । ಯ್ದನು ಸುರರಸಾ
ಲಂಬಿತಶ್ವಾಸದ ಸಮಾಪ್ತಿಯಲಿ ॥ ಜನಪ ಮರೆದೊರಗಿದನಲಾಹಾ । ಯೆನುತ ವದನಾಂಜಳಿಯ ಪು
ಟತಾ । ಡನದಲಿವರಳಲಿದರು ಕುರುರಾಜಾವಸಾನದಲಿ ॥೧೬॥ ತಿರುಗಿದರು ಕೈಟಭವ ಬಿಸುಟು ಮೂ ।
ವರು ಮಹಾರಥರಂದು ಶಿಬಿರಕೆ । ತರಣಿಕಿರಣದ ಧಾಳಿ ಹರಿದುದು ಕೂಡೆ ದೆಸೆದೆಸೆಗೆ ॥ ಅರಸನು
ಪ್ಪವಡಿಸಿ ಮುರಾರಿಯ । ಸಿರಿಮೊಗವ ನೋಡಿದನು ತಮ್ಮಂ । ದಿರುಸಹಿತ ಹೊರವಂಟನಾಕುರುಪತಿ
ಯ ಪಾಳೆಯದ ॥ ೧೭ ॥ ಪಾಳ್ಯದಲ್ಲಿ ಕುಮಾರರನು ಪಾಂ । ಚಾಲರನು ನೋಡುವೆವೆನುತ ಭೂ ।
ಪಾಲ ನಡೆತರಲಿದಿರುವಂದರು ಯುವತಿನಿಕುರುಂಬ ॥ ಸೂಳುಹೊಯ್ಲಿನ ತೇಗುವಸುರ ಕರ । ತಾಳದ
ಲಿ ಹಾಹಾವಿರಾವದ । ಮೇಳವದಗೀತದಲಿ ಬಂದಳು ದ್ರೌಪದೀದೇವಿ ॥ ೧೮ ॥ ಏನಿದೇನದ್ಭುತವೆನು
ತ ದುಂ । ಮಾನದಲಿ ಹರಿತಂದು ಹಿಡಿದನು । ಮಾನಿನಿಯ ಕೈಗಳನು ಕಂಬನಿದೊಡೆದು ಸೆರಗಿನಲಿ ॥
ಹಾನಿಯೇನೆನೆ ಮಡಿದರೆನ್ನಯ | ಸೂನುಗಳು ತನ್ನನುಜರೆನೆ ಪವ। ಮಾನಸುತ ಕೇಳಿದನು ಕೋಳಾ
ಹಳೆವ ಗುರುಸುತನ ॥ ೧ ॥ ಸುತರ ತಲೆಯೈದಕ್ಕೆ ರಿಪುಗುರು । ಸುತನ ತಲೆಯೇ ಹೊಣೆಕಣಾ ಬಿ
ಡು । ಸತಿಯೆ ಶೋಕವನೆನುತ ಬಿಟ್ಟನು ಸೂಠಿಯಲಿ ರಥವ ॥ ವ್ಯತಿಕರವನವಗಡಿ ಸವಿರಾರನ । ಸುತ
ಗೆ ಹರಿಯದು ಬವರ ಸಾಹಸದಿಂ। ದತಿರಥನ ಬಳಿಸಲಿಸಿದರು ನೃಪಹರಿಧನಂಜಯರು ॥ ೨೦ ॥ ನಿಲ್ಲು
ಗುರುತ ಶೌರ್ಯಪಣಿನಿ।ವ್ಮಲ್ಲಿಯೇ ಕುಲುಚೇಟರಿಗೆಜವ ।ನಿಲ್ಲಿ ಮೇಳವಿಯುಗುಳೆಬಂಚೆದ್ರೌಪದೀಸುತ
ರ ॥ ಬಿಲ್ಲಗುರು ನೀನಾದೊಡೆಮಗೇ । ನಿಲ್ಲಿದ್ರೌಪದಿಯಶ್ರುಜಲ ಕೃಪೆ । ಯಲ್ಲಿ ಲಂಬಿಸಬೇಕೆನುತಮೂ
ದಲಿಸಿದನು ಭೀಮ ॥ ೨೧ ॥ ಎಲವೊ ಶರಸನ್ಯಾಸವನು ಕುರು । ತಿಲಕನವಸಾನದಲಿ ಮಾಡಿದ ।
ದೆಳಲಿದೊಡೆ ಫಲವೇನು ನಾನೀಸ್ವಾಮಿಕಾರ್ಯದಲಿ ॥ ತಲೆಯ ಹೊಯ್ವೆನು ನಿನ್ನವರ ನೀ । ವಳುಕಿ
ದಣದೊಳಗಡಗಿಜೀವವ । ನುಳುಹಿಕೊಂಡಿರಿ ಕೊಲುವೆನಲ್ಲದೊಡೆಂದನಾದ್ರೌಣಿ ॥ ೨೨ ॥ ಮರುಳೆ

ಲಾ ಗುರುಸುತ ಯುಧಿಷ್ಠಿರ । ನರೆ ವಿಭಾಡಿಸುವಾವ್ಯಗೇಂದ್ರನ । ಗರವಟಿಕೆಯಲಿಗಡ ಸೃಗಾಲನ ಬಾಧೆ ಬಲುಹುಗಡ ॥ ಕುರುನೃಪತಿಯಾಸ್ಥಾನದಲ್ಲಿ । ಬ್ಬರಿಸಿ ಬೊಬ್ಬಿಡಲಾಹವಾಂತ । ಸ್ಸರಣಿ ಗುರುಸುತ ನಿಂಗೆ ಸದರವೆ ಯೆಂದನಸುರಾರಿ ॥ ೨೩ ॥ ಕಾಯಬಲ್ಲೆ್ಕ ಪಾಂಡವರನು ನಿ । ರಾಯುಧರು ನಾವೆಂದು ನೀ । ನಿರ್ವಾಣಯದಲಿ ಪಾಂಡವರು ಹೊಗುವರೆ ಹಸ್ತಿನಾಪುರವ ॥ ಸಾಯಕವನಪಹರಿಸು ಪಾಂಡವ।ರಾಯ ಜೀವಿಗನೆನುತವರಚ। ಕ್ರಾಯುಧನ ಬೋಳೈಸಿ ತೃಣದಿಂದಿಟ್ಟನಾಪ್ರಾಣಿ ॥೨೪॥ ಆಮಹಾಮಂತ್ರಾದಿಮಂತ್ರದಿ । ಭೀಮವಿಕ್ರಮತೃಣವನಶ್ವ । ತ್ಥಾಮನಿಡೆ ಲೋಕತ್ರಯಾಕ್ಷಾರಪ್ರಚಂಡಮಯ ॥ ವ್ಯೋಮಕೇಶಲಲಾಟವಿಶ್ರಮ । ಧೂಮಕೇತುಶಿಖಾವಿಸಂಸ್ಫುಳ । ಧಾಮಚಂಜಿತವನ್ನಿಭಯ ಭಾರಿಸಿತುವರಿನೃಪರ ॥ ೨೫ ॥ ಅವನಿಪತಿ ಕೇಳ್ಕೆ ಮಹಾವ್ಕೆ। ಷ್ಣವದ ಸತ್ರಾಣವನು ಗುರುಸಂ । ಭವನ ಮಂತ್ರದ ಪಾಡೆ ತಾ ಪಾಲಿಸಿತು ಪಾಂಡವರ ॥ ತವಕದಲಿ ತೃಣಬಾಣವಭಿಮ। ನ್ಯುವಿನ ರಾಣೀವಾಸದುದರೋ । ದ್ಭವದ ಗರ್ಭಕೆ ಮುಳಿದು ಹರಿದುದು ಸೂಕ್ಷ್ಮರೂಪಿನಲಿ ॥ ೨೬ ॥ ಜಗವ ಹಿಂಡುವ ಮೋಹ್ಯತುರ್ದಶ । ಜಗದಜೀವರ ನೋಡಿಯಾಡಿಸುವ। ಜಗವನಂತರ್ಭಾವವಲಿ ಭಟಿಸುವಗುಣತ್ರಯವ ॥ ಸೊಗಸು ತನ್ನ ಸಹಸ್ರದೇವತ । ಬಗೆಯೊಳೆನಿಪಮಹಾಸುದರ್ಶನ । ಬಿಗಿದು ಸುತ್ತಲು ವೇಡೆಯಾಯ್ತುತ್ತರೆಯ ಗರ್ಭದಲಿ ॥ ೨೭ ॥ ಕಳೆದುಕೊಂಡನು ಮೃತ್ಯುವಿನ ಗಂ । ಟಲನು ಮಾರ್ಕಂಡೇಯನನು ರಣ । ದೊಳಗೆ ಭಗದತ್ತಾಂಕುಶದಿ ನಾರಾಯಣಾಸ್ತ್ರದಲಿ ॥ ಉಳುಹಿದನು ಪಾಂಡವರ ಗುರುಸುತ । ಕಳುಹಿದಾಕುಶಿಯಸ್ತ್ರದಲಿ ಶಶಿ । ಕುಲದ ರಾಜಾಂಕುರನ ಕರುಣಿಸಿ ಕಾಯ್ದ ದನುಜಾರಿ ॥ ೨೮ ॥ ತೀರಿತೇ ಕುಶಿಯಸ್ತ್ರಘಾತಿಯು । ರಾರಿಗುರುಸುತರೊಬ್ಬರೊಬ್ಬರು । ವೀರವಣವಾಸಿಯಲಿ ತಗುಳಿವರಧಿಕರೋಷದಲಿ॥ ನಾರಿಯರಿತೆಸ್ತ್ರಾಪವಸ್ಥಿನಿ:ವಾರಣಕೆ ಬಲವೀತನೆಂದಾ । ಚಾರಿಯನ ನಂದನನ ಹಿಡಿದರು ಭೀಮಫಲುಗುಣರು ॥ ೨೯ ॥ ಬಂದಳಾದ್ರೌಪದಿಯು ವರಗುರು । ನಂದನನ ಕೊಲಬಾರದಕಟೀ । ನಂದನರ ಮರಣದ ಮಹಾವ್ಯಥೆಯಿರುತನಳಿವಿನಲಿ ॥ ಕೊಂದು ಕೂಗದೆ ಕೃಪೆಯನಬಲಾ । ವೃಂದಸಮಸುಖದುಃಖಿಗಳು ಸಾರೆಂದು ಭೀಮಾರ್ಜುನರ ತೆಗೆದಳು ಬಳಿಕ ಪಾಂಚಾಲಿ ॥ ೩೦ ॥ ತಲೆಯ ಕೊಂಬವಗಡದ ಭಾಷೆಯ । ಸಲಿಸಲೆಂದಾದ್ರೋಣತನುಜನ । ಹೊಳೆವಮಕುಟದ ಮಾಣಿಕವ ಕೊಂಡುತ್ತರಾಯದಲಿ ॥ ಗೆಲಿದು ತಿರುಗಿದನವರನಾಹವ । ವಳುಕಿಸದೆ ಮೂಜಗವ ಯದುಕುಲ । ತಿಲಕಗದುಗಿನವೀರನಾರಾಯಣನ ಕರುಣದಲಿ ॥ ... ॥ ೩೧ ॥

ಅಂತು ಸಂಧಿ ೧೦ಕ್ಕೆ ಪದ ೪೦೪ಕ್ಕಂ ಮಂಗಳಮಸ್ತು.



## ಹನ್ನೊಂದನೆಯ ಸಂಧಿ.

॥ ಸೂಚನೆ ॥ ರಾಯನಯ್ಯನ ತಿಳುಹಿದನು ದ್ವೈ । ಪಾಯನನು ಸಾಮದಲಿ ಕಮಲದ ಳಾಯತಾಕ್ಷಿಯು ಶಾಪವಿತ್ತಳು ಮುಳಿದು ಗಾಂಧಾರಿ ॥

॥ ಪದ ॥ ಕೇಳು ಜನಮೇಜಯಧರಿತ್ರೀ । ಪಾಲ ಕುರುಪತಿನಿಲಯ ಶೋಕ । ವ್ಯಾಳವಿಷವೆಡ್ಡೈಸಿದುದು ಗಜಪುರದ ಜನಮನವ ॥ ಹೂಳಿದುಬ್ಬೆಯ ಹುದಿದವೋನವ । ಸೂಳುಚಿಂತೆಯ ಬಲಿದಭೀತಿಯ। ಮೇಲುದುಗುಡದ ದಡಿಯವದನದಲಿರ್ದುದಖಿಳಜನ ॥ ೧ ॥ ಆಸಮಯದಲಿ ದೇವವೇದ । ವ್ಯಾಸಮುನಿ ಬಂದನು ಗತಾಕ್ಷಮಹೀಶನನು ಚರಣದಲಿ ಹೊರಳಿದೊಡೆತ್ತಿದನು ಹಿಡಿದು॥ ಆಸತಿಯಕರಸಿದನು ರಾಣೀ । ವಾಸವೆಲ್ಲವ ಬರಿಸಿ ಧರ್ಮವಿ । ಲಾಸವನು ವಿಸ್ತರಿಸಿದನು ವೈದಿಕವಿಧಾನದಲಿ ॥ ೨ ॥ ನಿನ್ನ ಸುತನುದ್ದಂಡತನದಲಿ । ನಿನ್ನ ತಮ್ಮನತನುಜರನು ಪರಿ । ಭಿನ್ನರನು ಮಾಡಿದನು ಕಪಟದ್ಯೂತಕೇಳಿಯಲಿ ॥ ನಿನ್ನಮತ ವಿದುರೋಕ್ತಿಗಳ ಮೇ । ಣ್ಮನ್ನಿಸಿದನೇ ಜಗವರಿಯೆ ಸಂಪನ್ನ ಶಠನಹನ್ಯ ಸುಯೋಧನನೆಂದನಾಮುನಿಪ ॥ ೩ ॥ ಸೈರಿಸುವರೇ ಪಾಂಡುಸುತರಂ । ಭೋರುಹಾಕ್ಷಿ ರಜಸ್ವಲೆಯ ಸುಲಿ । ಸೀರೆಯಲಿ ತತ್ಪೂರ್ವಕೃತಜತುಗೇಹದಾಹದಲಿ ॥ ವೈರಬಂಧವ ವಿವಿಧವಿಷಮವಿ । ಕಾರದಲಿ ವಿಗ್ರಹಮುಖವ ವಿಸ್ತಾರಿಸಿದರೇ ಪಾಂಡುಸುತರೆರುತ್ತಮರೆ ಹೇಳೆಂದ ॥ ೪ ॥ ಅವರು ಸುಚರಿತರೆಂದರೆಲೆಮಾ । ಧವನು ನೆರೆಮರುಳಾದನವರಿಗೆ । ಶಿವನುಮೆಚ್ಚಿಯೆ ಶರವನಿತ್ತನು ನರನ ಪತಿಕರಿಸಿ ॥ ಭುವನನೆರಡಾವಲ್ಲಿ ಸಾಧುಗ । ಳವರ ದೆಸೆ ದುಸ್ಸಾಧುಗಳು ನಿ । ನ್ನವರದೆಸೆಯಾಯ್ತರ್ಜುನನ ಸೂತಜನಸಮರದಲಿ ॥ ೫ ॥ ಅಹುದು ನಿಮ್ಮಯುಧಿಷ್ಠಿರನು ಗುಣಿ । ಯಹನು ಭೀಮಾರ್ಜುನರು ಬಲ್ಲಿದ । ರಹರು ಕೃಷ್ಣನ ಕರ್ಮ ಹಿರಿದು ಕಪರ್ದಿಯೊಲವಿನಲಿ ॥ ಕುಹಕಿ ಯುನ್ನವನವನೊಳಗೆ ನಿ । ಸ್ಪೃಹರು ವಿದುರಪ್ರಮುಖಸುಜನರು। ವಿಹಿತವೆನಗಿನ್ನಾವುದವ ನೀವ್ ಬೆಸಸಿ ಸಾಕೆಂದ ॥ ೬ ॥ ಧರ್ಮವೆಲ್ಲಿಹುದಲ್ಲಿ ಜಯ ಸ । ತ್ಕರ್ಮವೆಲ್ಲಿಹುದಲ್ಲಿ ಸಿರಿ ಸ । ದ್ಧರ್ಮಸಂರಕ್ಷಕರು ಹರಿಧೂರ್ಜಟಿಪಿತಾಮಹರು ॥ ಧರ್ಮದೂರರು ನಿನ್ನವರು ಸ । ತ್ಕರ್ಮಬಾಹಿರನಾತ್ಮರಚಿತವಿಕರ್ಮದೋಷದೆಳಿದ ನಿನ್ನವನೆಂದನಾಮುನಿಪ ॥ ೭ ॥ ಎನಲು ಬಿದ್ದನು ನೆಲಕೆ ಸಿಂಹಾ। ಸನದಿನಾಮುನಿವಚನಶರ ಮರು। ಮೊನೆಗೆ ಬಂದುದು ಬಹಳಮೂರ್ಛಾಪಾರವಶ್ಯದಲಿ ॥ ಜನಪತಿಗೆ ಗಾಂಧಾರಿ ನೃಪಮಾ । ನಿನಿಯರೊರಲಿತು ರಾಜಗೃಹದೋ । ಳನವರತಧ್ವನಿ ವಿಶಾಲ ಎಾಗೆದುದು ಹಸ್ತಿನಾಪುರವ ॥ ೮ ॥ ಆರು ಸಂತೈಸುವರು ಲೋಚನ ' ವಾರಿ ಹೊನಲಾಯ್ತರಮನೆಯ ನೃಪ । ನಾರಿಯರ ಬಹಳಪ್ರಲಾಪವ್ಯಥೆಯ ಬೇಳುವಗೆ ॥ ಆರು ಮರುಗರು ಶೋಕಪನ್ನಗ । ಘೋರವಿಷಮುನಿವರನ ಹೃದಯವ। ಡೋರಿತೇನೆಂಬೆನು ಲತಾಂಗಿಯರಳವ ಕಳವಳವ ॥ ೯ ॥ ಎತ್ತಿದರು ಧರಣಿಪನ ಕಂಗಳ। ಲೊತ್ತಿದರು ಪನ್ನೀರನುಸುಳಿನ । ತತ್ತಳವನಾರೈದರೊಯ್ಯನೆತಾಲವೃಂತದಲಿ ॥ ಬಿತ್ತಿ ತಂಗಾಳಿಯನು ಶೋಕದ । ಹತ್ತಿಗೆಗೆ ಹರೆದೆಗೆದು ಮರವೆಯ । ಚಿತ್ತವನು ಚೇತರಿಸಿ ಮೆಲ್ಲನೆ ನುಡಿಸಿದನು ಮುನಿಪ ॥ ೧೦ ॥ ಏನನೆಂದವ

ಹಿಂದೆ ಧರ್ಮಜನಿ । ಧಾನವನು ಕ್ರೈಯೊಡನೆ ಮರೆವ್ರೆ । ಮಾನವಿಧಿ ಕೇಳ್ ಮರೆಯಲಾಗದು ನಮ್ಮ ಹೇಳಿಕೆಯು ॥ ಭಾನುಮತಿಯನು ತಿಳಿಹು ನಿನ್ನಯ । ಮಾನಿನಿಯು ಸಂತೈಸು ಸಂಸಾ । ರಾನುಗತಿ ತಾವಿದು ಚತುರ್ದಶಜಗದ ಜೀವರಿಗೆ ॥ ೧೧ ॥ ಬಹುವಿಪತ್ತಿನರಕಭಯವಿದು । ಬಹುದಲಾ ಸುವಿವೇಕಗತಿನಿ । ರ್ದಹಿಸದೇ ಶೋಕಾಗ್ನಿ ಧರ್ಮದ್ರುಮದ ಬೇರುಗಳ ॥ ಅಹಿತರೇ ಜನಿಸಿದರು ಸುತರೆನ । ಬಹುದೆ ದುರ್ಯೋಧನನೆ ಹಗೆ ನಿನ । ಗಿಹಪರದ ಸುಖಗತಿಗೆ ಸಾಧನ ಧರ್ಮಸುತನೆಂದ ॥ ೧೨ ॥ ಕೇಳು ಮುನಿಭಾಷಿತವ ನೃಪ ನೀ । ನಾಲಿಸುವುದಾತ್ಮಜರಿಗಿಲ್ಲಿಂ । ಮೇಲೆ ಸಲಿಲಾಂಜಳಿಗಳನು ವೈದಿಕವಿಧಾನದಲಿ॥ ಪಾಲಿಸುವುದಾಪಾಂಡುಸುತರ ಸ । ಮೇಳದಲಿ ಸೇರುವುದು ಚಿತ್ತಕೆ । ತಾಳದಿರು ರಾಜಸವಿಕಾರವನೆಂದನಾವಿದುರ ॥೧೩॥ ತಾಯೆ ಹದುಳಿಸು ದೇವಲೋಕದ । ಲಾಯದಲಿ ಸಲಿಸಾ ಕುಮಾರರ । ನಾಯುಷದಲಿಪಿ ಹಣೆಯಲೊರೆಸಿದೊಡಾರವಶವಿದಕೆ ॥ ರಾಯನಲಿ ಸೊಸೆಯರಿಗೆ ಮಿಕ್ಕಬು । ಜಾಯತಾಕ್ಷಿಯರಿಗೆ ವಿಶೋಕದ । ಬಾಯಿನವ ಕೊಡಿಸೆಂದನಾಮುನಿ ಸುಬಲನಂದನೆಗೆ ॥ ೧೪ ॥ ಧರಣಿಪತಿ ಹೊರವಂಟನಂತಃ । ಪುರವ ಬಿಸುಟರು ಭಾನುಮತಿಸಹಿ । ತರಸಿಯರು ಹೊರವಂಟರೇಕಾಂಬರದ ಬಿಡುಮುಡಿಯ ॥ ಕರದ ಬಸುರಿನ ಹೊಯ್ಲ ಕಜ್ಜಳ । ಪರಿಲುಳಿತನಯನಾಂಬುಗಳ ಕಾ । ತರಿತಕಮಲಾಕ್ಷಿಯರು ನೆರೆದುದು ಕೋಟಿಸಂಖ್ಯೆಯಲಿ ॥ ೧೫ ॥ ವಣಿಜಸತಿಯರು ಶಿಲ್ಪಿಜನದುಪ । ವಣಿಜದ ಬಲಾಜನವಘಾಟದ । ಗಣಿಕೆಯರು ನಾನಾದಿಗಂತದ ರಾಜಪತ್ನಿಯರು ॥ ಹಣಿಲಕಬರಿಯ ಹೊಳೆವ ಮುಂವಲೆ । ಮಣಿಯ ಮುಕುರಮುಖಾಂಬುಜದ ಸರ । ಝಣಕು ಝಾಡಿಸೆ ಕೂಡೆ ನಡೆದುದು ಬೀದಿಬೀದಿಯಲಿ ॥ ೧೬ ॥ ಎಸಳುಗಂಗಳ ಬೆಳಗನಶ್ರು । ಪ್ರಸರತಡೆದುದು ಶೋಕಮಯಶಿಖಿ । ಮುಸುಡ ಕಾಂತಿಯ ಕುಡಿದುದೊಸರುವಬಿಸಿಲಬೇಗೆಗಳ ॥ ಮಿಸುಪಲಾವಣ್ಯಾಂಬುವನು ಬ । ತ್ತಿಸಿದ ವಂಗುಲಿಯುಪಹತಿಯ ಸ್ತ್ರೀ । ಬಿಸಜಸೆಳೆದುದು ಕುಚದಚೆಲುವನು ಕೋಮಲಾಂಗಿಯರ ॥ ೧೭ ॥ ತಮ್ಮೊಳೇಕತ್ವದ ಸಖಿತ್ವದ । ಸೊಮ್ಮಿನಲಿ ಸುರಿವಶ್ರುಜಲವನು । ನಿರ್ಮಿಸಿದರೆನೆ ಕರ್ಪೂರದ ಮುತ್ತುಸೂಸಿದವು ॥ ನೆಮ್ಮಿದತಿಶಯಶೋಕವಹ್ನಿಯೊ । ಳೊಮ್ಮಿಗೆಯ ಕರಣಂಗಳಲಿ ನೃಪ । ಧರ್ಮ[illegible] ಗುರೆಳುತ ಹೊರವಂಟರು ಪುರಾಂತರವ ॥೧೮॥ ಉಡಿದು ಬಿದ್ದವು ಸೂಸಕವು ಬಿಗು । ವಡಗಿ

[illegible] ಡನೊಡನೆ ಚೆಲ್ಲಿದವು ಮುತ್ತಿನ ಹಾರಚಯ ಹರಿದು॥ ಬಿಡುಮುಡಿಯ

[illegible] ನೆನೆ ಸೂಸಕದ ಮು । ತ್ತಡರಿ ಸುರಿದವು ನೆಲಕೆ ನೃಪವನಿತಾಕ

[illegible] ಂಕದ ಪೂರ್ವರೂಪಿನ । ಮೇಲೆ

[illegible] ವು । ರಾಳಿಯಾರಿದನೆಲೆ

[illegible] ವರು ಹಸ್ತಿ

[illegible] ರನ ॥ ಅರ

[illegible] ಸನರ ರಾಣಿ

[illegible] ಬುವಿಧಜನವ

। ನ್ನಣಲಿ

ಧರಣಿಯನೆಂದು ಸುಯ್ದರು ಬೈದು ಕಮಲಜನ ॥ ೨೨ ॥ ಬಂದು ಧೃತರಾಷ್ಟ್ರವನೀಶನ । ಮುಂದೆ ನಿಂದರು ರಾಯಕಟಕವ । ಕೊಂದರಜನಿಯುಗೆಲವನಭಿವರ್ಣಿಸಿದರರಸಂಗೆ ॥ ಸಂದುದೇ ಛಲವೆಮ್ಮ ಮಗನೇ । ನೆಂದನೈ ಹರಿಬದಲಿ ಹರುಷವ । ತಂದಿರೈ ರಾಯಂಗೆ ಲೇಸಾಯ್ತೆಂದನಂಧನೃಪ ॥ ೨೩ ॥ ಪತಿಕರಿಸಿದನು ನಮ್ಮನಹಿತ । ಸ್ಥಿತಿಯನೆಲ್ಲವ ತಿಳಿದನಮರಾ । ಪತಿಯ ಸತಿಯರ ಸೋಂಕಿನಲಿ ಸೇರಿದನು ನಿಮಿಷದಲಿ ॥ ಕ್ಷಿತಿಪನಂತ್ಯದೊಳಲ್ಲಿ ಶಸ್ತ್ರ । ಚ್ಯುತಿಯ ಮಾಡಿ ವಿರಾಗದಲಿ ಮನ । ಗತಿಗೆ ಸಾಸ್ತೆ ತಂದೆವೆಂದರು ಗುರುಸುತಾದಿಗಳು ॥ ೨೪ ॥ ಲೇಸ ಮಾಡಿದಿರಿನ್ನು ನಿಮಗಿ । ನ್ನೈಸಲೇ ಕರ್ತವ್ಯವೆನೆ ಧರ । ಣೀಶನನು ಬೀಳ್ಕೊಂಡರವರಗಲಿದರು ತಮ್ಮೊಳಗೆ ॥ ವ್ಯಾಸಮುನಿಯಾಶ್ರಮದ ಗಂಗಾ । ದೇಶವನು ತದ್ವಾರಕಿಯ ಸಂ । ವೇಶಿಸಿದರೈ ಗುರುಜಕೃಪಕೃತವರ್ಮಕಾದಿಗಳು ॥ ೨೫ ॥ ತಿರುಗಿದರು ಬಳಿಕಿತ್ತಲೀಮೋ । ಹರದ ಕಾಂತಾಕೋಟಿ ಬಂದುದು । ಹರಳು ಕಲುಮುಳ್ಳೊತ್ತು ಗಾಲಿನ ದೂರತರ ಪಥವ ॥ ಉರಿಯ ಜಠರದ ಬಿಸಿಲ ಝಳದಲಿ । ಹುರಿದ ಕದಪುಗಳೆರಡು ಕಡೆಯಲಿ । ಸುರಿವ ನಯನಾಂಬುಗಳ ರಾಜನಿತಂಬಿನೀನಿಕರ ॥ ೨೬ ॥ ಬಂದುದೀ ಗಜಪುರದ ನಾರೀ । ವೃಂದ ಧೃತರಾಷ್ಟ್ರವನೀಶನ । ಮುಂದೆ ವೇದವ್ಯಾಸಸಂಜಯವಿದುರಪೌರಜನ ॥ ಮುಂದೆ ಸಾಹಸರಂಗಧಾರುಣಿ । ಹೊಂದು ಕಲುಷವನದ ನೆಳಲಲಿ । ನಿಂದುದಿವರಾಗಮನವನು ಕೇಳಿದನು ಯಮಸೂನು ॥ ೨೭ ॥ ಮುರಮಥನಸಾತ್ಯಕಿಯಧಿಷ್ಠಿರ । ಧರಣಿಪತಿನರಭೀಮಮಾದ್ರೀ । ಯರುಗಳೈವರು ಸಾರಥಿಗಳು ಯುಯುತ್ಸುದಾರುಕರು ॥ ತೆರಳಿತೇಳಕ್ಷೋಹಿಣಿಯ ನೃಪ । ರರಸಿಯರು ದ್ರೌಪದಿಯರೋದನ । ಸರವ ಗಾನದ ಜಠರತಾಡನತಾಳಮೇಳದಲಿ ॥ ೨೮ ॥ ಇವರು ಬಂದರು ದೂರದಲಿ ಯಾ । ದವನ ಮತದಲಿ ನಿಂದರಾಚೆಯ । ಯುವತಿಜನ ಗಾಂಧಾರಿಕುಂತೀಭಾನುಮತಿಸಹಿತ ॥ ವಿವಿಧವಿಕೃತವಿಲಾಪನಯನೋ । ದ್ಭವನಯಸ್ಥಗಿತಾಂಶುಕೆಯರೆಂ । ದವನಿಯಲಿ ಕೆಡೆದೊರಲುತಿರ್ದರು ತಾರುಥಟ್ಟಿನಲಿ ॥ ೨೯ ॥ ಅರಸ ಕೇಳ್ ಧೃತರಾಷ್ಟ್ರಸಂಜಯ । ವರಮುನಿಪವಿದುರಾದಿಪರಿಜನ । ಪುರಜನಾವಳಿಯಿದ್ದುದುಪವನದೊಂದು ಬಾಹೆಯಲಿ ॥ ನೆರೆದುದೀಚೆಯೊಳೊಂದೆಸೆಯೊಳು । ತ್ತರೆ ಸುಭದ್ರಾದೇವಿಮೊದಲಾ । ದರಸಿಯರು ಸಹಿತೊರಲುತಿರ್ದರು ದ್ರೌಪದಿಯ ಸಹಿತ ॥ ೩೦ ॥ ಹರಿಸಹಿತ ಪಾಂಡವರದೊಂದೆಸೆ । ಯಿರೆ ಚತುರ್ವಿಧ ವಾದುದೀಮೋ । ಹರದೊಳಾಯ್ತೊಡೆಯಾಟ ವೇದವ್ಯಾಸವಿದುರರಿಗೆ ॥ ಧರಣಿಪನ ಕಾಣಿಸುವುದಂಧನ । ನಿರುಪಮಿತಶೋಕಾನಳನ ಸಂ । ಹರಿಸುವುದು ನಯವೆಂದು ವೇದವ್ಯಾಸಮುನಿ ನುಡಿದ ॥ ೩೧ ॥ ಇದಕೆ ಸಂಶಯವೇನು ಬೊಪ್ಪನ । ಪದಯುಗವ ಕಾಣಿಸುವುದೆಮ್ಮನು । ಹದುಳವಿಡುವುದು ಹಸ್ತಿನಾಪುರದರಸುತನ ನಮಗೆ ॥ ಒದೆದು ನೂಕಿದಹದನ ಮಕುಟಾ । ಗ್ರದಲಿ ಧರಿಸುವೆವೆಂದು ಬಿನ್ನೈ । ಸುದು ಮಹೀಪತಿಗೆಂದು ಮುನಿಗರುಹಿದನು ಯಮಸೂನು ॥ ೩೨ ॥ ಲೇಸನಾಡಿದೆ ಮಗನೆ ಧರ್ಮದ ವಿಲಾಸಲಲ್ಲಾ ನಿನ್ನ ಮತಿಬಳಿ । ಕೈಸಲೇಯೆನುತಿವರು ಬಂದರು ಭೂಪತಿಯ ಹೊರೆಗೆ ॥ ಆಸುಯೋಧನ ನಿನಗೆ ಮಗನ । ಲ್ಲೀಸಮಂಜಸಧರ್ಮಜನೆ ಹಿಡಿ । ದೀಸುವುದು ಭವಜಲನಿಧಿಯನೆಂದಮಲಮುನಿ ನುಡಿದ ॥ ೩೩ ॥ ನೃಪನ ಕಾಣಿಸಿಕೊಂಬುದನಿಬರ । ನುಪಚರಿಸುವುದು ನಿನ್ನ ಮಕ್ಕಳ । ಕೃಪಣತೆಯನಾರೈವರಲ್ಲವರೈವರುತ್ತಮರು ॥ ಉಪಹತಿಯ ನೆನೆಯದಿರು ದುರ್ಜನ । ರಪಕೃತಿಗೆ ಫಲವಾಯ್ತು ಧರ್ಮದ । ರಪಣವಿಹ ಪರಲೋಕಕೆ

ಲೆಧೃತರಾಷ್ಟ್ರ ಕೇಳೆಂದ ॥೩೪॥ ಹೈಹಸಾಧವು ನಿಮ್ಮ ಚಿತ್ತಕೆ । ಬೇಹಹದನೇ ಕಾರ್ಯಗತಿ ಸಂ । ದೇ
ಹವೇ ಪಾಂಡುವಿನ ಮಕ್ಕಳು ಮಕ್ಕಳವರೆನಗೆ ॥ ಕಾಹುರರು ಕಲ್ಮಷರು ಬಂಧು । ದ್ರೋಹಿಗಳುಗತ
ವಾಯ್ತು ನಿಷ್ಪ್ರ । ತ್ಯೂಹವಿನ್ನೇನವರಿಗೆಂದನು ಮುನಿಗೆ ಧೃತರಾಷ್ಟ್ರ ॥೩೫॥ ಖಳನ ಹೃದಯದ
ಕಾಳಕೂಟದ । ಗುಳಿಗೆಗಳನಿವರೆತ್ತ ಬಲ್ಲರು । ತಿಳುಹಿ ನುಡಿದೊಡಬಡಿಸಿದರು ನಾನಾಪ್ರಕಾರದಲಿ ॥
ಗಳಿಲನೀಚೆಗೆ ಬಂದು ಹದನನು । ನಳಿನನಾಭಂಗರುಹೆ ನಸುನಗುತ್ತೊಳಗೊಳಗೆ ಹರಿ ವಿಶ್ವಕರ್ಮನನೆ
ನೆದು ನೇಮಿಸಿದ ॥೩೬॥ ನೆನೆವಗಳಿಗೆಯೊಳಾತ ಕಟ್ಟ । ಕ್ಕಿನಲಿಸರ್ವಾವಯವ ತಾನಂ । ಜನಿಸಿದನು
ಪ್ರತಿರೂಪವನು ಪವಮಾನನಂದನನ ॥ ದನುಜರಿಪುಸಹಿತಿವರು ಬಂದರು । ಮುನಿಯೊಡನೆಬಳಿಕಂಧ
ನೃಪತಿಗೆ । ವಿನಯದಲಿ ಪೈಯಿಕ್ಕಿದನು ಭಕ್ತಿಯಲಿ ಯಮಸೂನು ॥೩೭॥ ಬಾ ಮಗನೆ ಕುರುರಾಜ
ವಂಶಶಿ । ರೋಮಣಿಯೆ ನಿರ್ಧೂತರಾಜಸ । ತಾಮಸನೆ ಸತ್ತ್ವೈಕನಿಧಿ ಬಾ ತಂದೆ ಬಾರೆನುತ ॥ ಭೂ
ಮಿಪನ ತೆಗೆದಪ್ಪಿಬಹಳ । ಪ್ರೇಮದಲಿ ಮುಂಡಾಡಿದನು ಕಲಿ । ಭೀಮನೋ ಬಾ ಮಗನೆ ಬಾತ್ರೈತನು
ಜ ಬಾರೆಂದ ॥೩೮॥ ಭೀಮನನು ಹಿಂದಿಕ್ಕಿ ಲೋಹದಭೀಮನನು ಮುಂದಿರಿಸಲಾನು । ಪ್ರೇಮನಪ್ಪಿದ
ನೇನನೆಂಬೆನು ಮೋಹವನುಮಗನ ॥ ಅಮಹಾವಜ್ರಾಯುಧಪ್ರೋ । ದ್ದಾಮದಾಯಸಭೀಮತನ ನಿ
ರ್ನಾಮವೆನೆ ನುಗ್ಗಾಗಿಬಿದ್ದುದು ನೃಪನ ತೆಕ್ಕೆಯಲಿ ॥೩೯॥ ಮಗನೆ ಹಾಹಾ ಭೀಮನೊಂದ್ಯೆ । ಮಗನೆ
ಕೆಟ್ಟೆನು ಮಗನೆ ಮಗನೆಂದೊಗುಮಿಗೆಯು ಶೋಕದಲಿ ನೆರೆಮರುಗಿದನು ಧೃತರಾಷ್ಟ್ರ ॥ದುಗುಡಬೇ
ಡೊಮ್ಮಿಂಗೆನಿನ್ನಯ । ಮಗನುಳಿದ ನಿಂಮಧಿಕರೋಷದ । ಹಗರಣದ ಹಗೆ ಹೋಯಿತೆಂದನು ನಗುತ
ಮುರವೈರಿ ॥೪೦॥ ತ್ರಾಣವಿಮ್ಮಡಿಸಿತ್ತು ಕೋಪದ । ಕೇಣವೆಚ್ಚರಿಸಿದೊಡೆ ನೃಪನಾ । ತ್ರಾಣದಲಿ ತನು
ಬಿರಿಯೆ ನುಗ್ಗಾಯ್ತಾಯಸಪ್ರತಿಮೆ ॥ ಮಾಣಿಭಯವನು ಭೀಮಭೂಪನ । ಕಾಣು ಹೋಗೆನೆ ನಡು
ಗಿ ಭುವನ । ಪ್ರಾಣನಾತ್ಮಜ ಬಿದ್ದನಾಧೃತರಾಷ್ಟ್ರನಂಘ್ರಿಯಲಿ ॥೪೧॥ ಪವನಸುತನೇ ಬಾರೆನುತ ತ
ಕ್ಕವಿಸಿದನು ಬಳಿಕೆರಗಿದೊಡೆ ವಾ । ಸವನ ಸುತ ಬಾ ಕಂದಬಾರೆಂದಪ್ಪಿದನು ಮಗನ ॥ ತವಕದಿಂದೆ
ರಗಿದೊಡೆ ಮಾದ್ರಿಯ । ಜವಳಿಮಕ್ಕಳನಪ್ಪಿದನು ಕೌ । ರವಕುಲಾಗ್ರಣಿಗಳಿರ ಕುಳ್ಳಿರಿಯೆಂದನಂಧನೃಪ
॥೪೨॥ ಕುರುಮಹೀಪತಿ ನಮ್ಮ ಪೂರ್ವದ । ಲರಸು ತತ್ಸಂತಾನಪಾರಂ । ಪರೆಯನಳಿವರೆ ಕೆಲಬರಾ
ವರು ಹೋದರಿನ್ನಿವರು ॥ ಭರತಕುಲವನು ಹೊರೆದು ಮಿಗೆ ವಿ । ಸ್ತರಿಸು ಮಗನೆ ಸುಯೋಧನಾದ್ಯ
ರ । ದುರುಳತನದವಗುಣವನೆಮ್ಮನು ನೋಡಿ ಮರೆಯೆಂದ ॥೪೩॥ ಅವರೊಳವಗುಣವೇ ನಿರಂತರ ।
ಭವದ ಕಿಲ್ಬಿಷಕರ್ಮಪಾಕ । ಪ್ರವರವೇ ದುರ್ಯೋಧನವ್ಯಪದೇಶಮಾತ್ರದಲಿ॥ ಎವಗೆ ರಚಿಸಿತು ರಾಜ
ವಿಭ್ರಂ । ಶವನು ತತ್ಸುಕೃತೋದಯಾಂಶ । ಪ್ರವರ ತಿರಿಗಿಸಿತೆಂದು ನಯದಲಿ ಧರ್ಮಸುತ ನುಡಿದ
॥೪೪॥ ಸಾಕದಂತಿರಲಬಲೆಯರೊಳು । ದ್ರೇಕಿ ನಿಮ್ಮಯ ಹಿರಿಯತಾಯಿ । ದ್ರೇಕವನು ಪರಿಹರಿಸು
ಶೋಕಕ್ರೋಧದುಪಟಳಕೆ ॥ ಅಕೆ ಸೈರಿಸಲರಿಯಳೆರುವಿನೊ । ಳಾಕೆವಾಳರು ತಿಳುಹಿ ತಮ್ಮನು ।
ಶಾಖೆಯನು ಕಾಣಿಸುವುದೆಂದನು ವ್ಯಾಸವಿದುರರಿಗೆ ॥೪೫॥ ವಿದುರವೇದವ್ಯಾಸಮುನಿಯಿಾ । ಹದನನ
ರುಹುವೆವೆಂದು ರಾಯನ । ಸುದತಿಯಲ್ಲಿಗೆ ಬಂದು ನುಡಿದರು ಮಧುರವಚನದಲಿ ॥ ಕದಪನಂಗೈಗ
ತ್ತು ತಲೆಗು । ತ್ತಿದಳು ನಯನೋದಕದ ಪರಿವಾ । ಹದಲಿ ನನೆದಳು ಮಹಿಳೆಯಿದ್ದಳು ಬಹಳಮ

ನದಲಿ ॥೪೬॥ ದುಗುಡವನು ಬಿಡು ಮೋಹಬಂಧವು । ತಗದ ಚಿತ್ತದ ಕದಡು ಹಣಿಯಲು । ಮಗಳೆ ಮರುಳಾದವು ವಿಲಾಸದವಿಹಿತವಿಹಪರಕೆ ॥ ಅಗಡುಮಕ್ಕಳು ತಾಯ್ನ್ಮ ತಪ್ಪದು । ಬೆಗಡು ಬೇಗೆ ಸುಯೋಧನಾದ್ಯರ । ವಿಗಡತನವನು ನೆನೆದು ನೀನೋಡೆಂದನಾಮುನಿಪ ॥೪೭॥ ಮುನಿಯದಿರು ಗಾಂಧಾರಿ ದಿಟವನಿ । ನ್ನನುಜನಿಕ್ಕಿದಸಾರಿ ನಿನ್ನಯ। ತನುಜರೆನು ನಿನ್ನಖಿಳಮಿತ್ರಜ್ಞಾತಿಬಾಂಧವರ ॥ ಮನುಜಪತಿಗಳನಂತವನು ರಿಪು । ಜನಪಶರವನ್ನಿಯಲಿ ಬೇಳಿದು । ದಿನಿತು ಶೋಕೋದ್ರೇಕ ನಿನಗೇಕೆಂದನಾಮುನಿಪ ॥೪೮॥ ಅಳಿದವರಿಗಳಲುವುದು ಸಲ್ಲದು । ನಿಲಲಿಸಾಕದು ನಿಮ್ಮ ಚಿತ್ತದ । ನೆಲೆಯು ಬಯಕೆಯು ಬಯಸುವುದು ಕರ್ತವ್ಯವೇ ನಿನಗೆ ॥ ಕಳವಳಿಪಕುಂತೀಸುತರ ಕಂ । ಗಳಿಗನುಗ್ರಹವಾಗುನಿರ್ಜರ । ರೊಳಗೆ ಮಕ್ಕಳವರ್ಮನ್ಯರನು ಮಾಡೆಂದನಾಮುನಿಪ ॥೪೯॥ ನಂಬಿಸುವುದ್ಯವರನು ಕಾಣಿಸಿ । ಕೊಂಬುದನಿಬರ ಕರಣವೃತ್ತಿಗೆ । ತುಂಬುವುದು ತನಿಹರುಷವನು ಸೌಹಾರ್ದಶೋಭೆಯಲಿ ॥ ಲಂಬಿಸಲಿ ಕೌರವರ ನಾಕನಿ । ತಂಬಿನಿಯರೆಳಕವನು ಮಗಗೆ ಪಿ। ಡಂಬಿಸುವಖಳರಭಿಮತಕೆ ಮನವೀಯಬೇಡೆಂದ ॥೫೦॥ ವಿಷವನಿಕ್ಕಿದರಂದು ಮಡುವಿನ । ಲಸಬಡಿದುಹಾಯ್ಕಿದರು ಅರಗಿನ । ವಸತಿಯಲಿ ಬೇಳಿದರು ಹೇಳುವುದೇನು ದುರ್ಜನವ ॥ ವಸುಮತೀಶನವಲ್ಲಭೆಯನೆಳೆ । ದುಸುರತೆಗೆಬಗೆಮಾಡಿದಲ್ಲದೆ ವಸನವನು ಸುಲಿಸಿದರಿದಾವುದು ಧರ್ಮಹೇಳೆಂದ॥೫೧॥ ರಾಯನನು ಕಾಣಿಸಿದಿರೇ ಪ್ರ ।ಜ್ಞಾಯತಾಕ್ಷನ ತಿಳುಹಿ ಬಂದಿರೆ । ತಾಯಿಗಳು ತಾವ್ಯೆಸಲೇ ಬಹುದುಂಟೆ ನಮಗಿವ್ನು ॥ ಸಾಯೆ ಸಾವೆನು ಕುರುಕುಲಾಗ್ರಣಿ । ನೋಯೆ ನೋವೆನು ತನಗೆ ದುರಭಿ । ಪ್ರಾಯವುಂಟೇ ಮಾವಯೆಂದಳು ಮುನಿಗೆ ಗಾಂಧಾರಿ ॥೫೨॥ ನಿನ್ನವರು ಮಾಡಿದವಿಘಾತಿಗ । ಳೆನ್ನಹವಣೇ ಬಣ್ಣಿಸಲು ತಾ । ತನ್ನದುಷ್ಕೃತ ಫಲದಳಳಿದನು ನಿನ್ನ ಮಗನಿಂದು । ಮನ್ನಿಸೌ ಯಮತನುಜನನು ಕೇಳನ್ಯರೇ ಶಿವಶಿವಮಹಾದೇ। ವಿನ್ನು ಖತಿಯನು ಬಿಟ್ಟು ರಕ್ಷಿಸು ಪಾಂಡುನಂದನರ ॥೫೩॥ ಐಸಲೇ ಗುಣಮಯವಚೋವಿ । ನ್ಯಾಸವನು ಸಾಕೇನು ಮರಳಿದು । ಭೂಸುರಾಗ್ರಣಿ ಬಂದು ನುಡಿದನು ಧರ್ಮನಂದನನ ॥ ರೋಷವಹ್ನಿಯನುಪಶಮಾಂಬುವಿ । ಲಾಸದಲಿ ನಿಲಿಸೇಳು ನೃಪನ ಮ । ಹಾಸತಿಯ ಖತಿ ಹಿರಿದು ಯೆನಗೊಳಗಾಗಿ ಭಯವೆಂದ ॥ ೫೪ ॥ ಎಂದು ಗಾಂಧಾರಿಯನು ನಾನಾ । ಚಂದದಲಿ ಮುನಿ ತಿಳುಹಿ ಮರಳಿ ಮು । ಕುಂದವಿದುರಯುಧಿಷ್ಠಿರನಿಲಜಪಾರ್ಥರಿದ್ದೆಡೆಗೆ ॥ ಬಂದು ಹೇಳಿದ ಸತಿಯಿರವ ಯಮ ।ನಂದನನ ಮೃದುವಾದವಾಕ್ಸುಧೆ । ಯಿಂದ ಸಂತೈಸುವಳು ಬನ್ನಿ ಯೆನುತ್ತ ಕೊಂಡೊಯ್ದ ॥೫೫॥ ಹರಿವಿದುರಸಂಜಯರು ಪಾರಾ । ಶರಮಹೀಪತಿಭೀಮಮಾದ್ರೀ । ಯರು ಧನಂಜಯಸಹಿತ ಬಂದರು ಬಹಳ ವಿನಯದಲಿ ॥ ಚರಣದಲಿ ಮೈಯಿಕ್ಕಿದೊಡೆ ನೃಪ । ವರನ ನೆಗಹಿದಲನಿಲಸುತಸಿತ । ತುರಗವಹದ್ರಿಸುತರು ಪದಕೆರಗಿದರು ಭೀತಿಯಲಿ ॥ ೫೬ ॥ ಏಳಿರೈ ಶಾಕೇಳಿ ಮಕ್ಕಳಿ । ರೇಳಿರೈ ದೇಸಿಗರು ನಾವು । ಪಾಲಕರು ನೀವೀಸುನಮ್ಮಲಿ ಭೀತಿನಿಮಗೇಕೆ ॥ ಬಾಲೆಯರು ನಾವಂಥಕರು ನಿ । ಮ್ಮಾಳಿಕೆಯೊಳೇ ನಿಮ್ಮ ಹಂತಿಯು । ಕೂಳಿನಲಿ ಬೆಂದೊಡೆಲ ಸೂರೆನವಳೆಂದಳಬುಜಾಕ್ಷಿ ॥ ೫೭ ॥ ತಾಯೆ ಖತಿ ಬೇಡಿನ್ನು ಧರಣಿಗೆ । ರಾಯನೇ ಧೃತರಾಷ್ಟ್ರನಾತನ । ಬಾಯದಂಬುಲಬೀಳ್ವೆಡೆಯ ಬಲದಿಂದ ಬದುಕುವೆವು ॥ ತಾಯೆ ನೀವಿಂದೆಮಗೆ ಕುಂತಿಯ । ತಾಯತನುವಂತಿರಲಿ ಕರುಣಿಸಿ । ಕಾಯಬೇ

ಕೆಂಪರಸ ಪುಗುಳೆರಗಿದನು ಚರಣದಲಿ ॥ ೫೮ ॥ ಧರ್ಮನಿಮ್ಮದು ಮಗನೆ ಬರಿಯಲಿ। ಕರ್ಮ ನಮ್ಮ ದುರ್ಯೋಧನನ ಮಕ್ಕಳು । ದುರ್ಮತಿಗಳನ್ಯಾಯಶೀಲರಸಾಧುಸಂಗತರು ॥ ನಿರ್ಮಳರು ನೀವೈವರಾಹವ। ಕರ್ಮಕುಶಲರು ಲೋಕವೆಚ್ಚಲು । ಧರ್ಮ ನಿಮಗೆಂದೆನುತ ತಲೆಗುತ್ತಿದಳು ಗಾಂಧಾರಿ ॥ ೫೯ ॥ ಧರ್ಮವಾಗಲಿ ಮೇಣು ರಣವಲಿ । ಧರ್ಮವಾಗಲಿ ನೀತಿಯಲಿ ಪರ । ಧರ್ಮಘಾತಕವಾಯ್ತಲೇ ಸಾಕಿನ್ನು ಫಲವೇನು ॥ ನಿರ್ಮಳಾಂತಃಕರಣಕೃತಪರಿ । ಕರ್ಮವಿಲಸಿತೆ ತಾಯೆ ಸೈರಿಸು । ನಿರ್ಮ ಮರೆ ಬೇಡೆಂದು ಮೈಯಿಕ್ಕಿದನು ಕಲಿಭೀಮ ॥ ೬೦ ॥ ಏಳು ತಮ್ಮ ವೃಥಾವಿಡಂಬನ । ಧಾಳಿ ಯಾಟವಿವೇಕ ಸೈರಿಸ । ಹೇಳಿದ್ಯೆ ಸೈರಿಸಿದೆ ಮುನಿದೊಡೆ ನಿಮಗೆ ಕೇಡಹುದೆ ॥ ಕಾಳಗವಕೃತಸಮ ಯಸತ್ಯವ । ಪಾಲಿಸಿದವರು ನೀವಲ್ಲೆ ದಿಟ । ಖೂಳರಾವೈಸಲೆಯೆನುತ ಗಜಿಸಿದಳು ಗಾಂಧಾರಿ॥೬೧॥ ಹೂರಿಸುವರೆ ದುಷ್ಕೀರ್ತಿ ನಮ್ಮಲಿ । ಹೋಗೆಯಾಯಿತು ನಾಭಿಯಿಂಕೆಳ । ಗೆರಗುವುದು ಗದೆಯಿಂದ ಸಲ್ಲದು ಶಸ್ತ್ರವಿದ್ಯೆಯಲಿ ॥ ಅರಿಕೆಯಿಂದನ್ಯಾಯವಿದುಜಗ । ವರಿಯೆ ನಮ್ಮದು ತಾಯೆ ನೀವೆನ । ನುರಿಯದವಧರಿಸುವೊಡೆ ಬಿನ್ನಹವೆಂದನಾಭೀಮ ॥ ೬೨ ॥ ಅರಗಿನರಮನೆ ಕೊಂಡವೆಮ್ಮ । ವರುಷವಿಂತ್ತುಗಳಾಸುಯೋಧನ । ಪರಮಯಜಮಾನನು ಜಯಾದ್ವಾರವಿಗಿಯಪೂರ್ವನನು ॥ ಕುರು ನೃಪಪಿಯನುಭವಿಸಿದನು ಸ । ಚ್ಚರಿತವೇನನ್ಯಾಯಪಥವೇ । ಧುರದೊಳೆಮಗನ್ಯಾಯವೈಸಲೆ ದೈವ ಕೃತವೆಂದ ॥ ೬೩ ॥ ಕಪಟದಲಿ ಜೂಜಾಡಿ ರಾಜ್ಯವ । ನಪಹರಿಸಿದೊಡೆ ಧರ್ಮ ನಿಮ್ಮದು । ಕೃಪ ಣತೆಯನಾನೇನ ಹೇಳುವೆನಾಸುಯೋಧನನ ॥ ದ್ರುಪದಪುತ್ರಿಯ ಗಾಢಗರುವಿಕೆ । ಗುಪಿತಶಿಯ ಮಾ ಡುವುದು ಧರ್ಮದ । ವಿಪುಳಪಥ ನಿಮ್ಮದು ಮಹಾಧರ್ಮಜ್ಞರಹಿರೆಂದ ॥ ೬೪ ॥ ಲಲನೆ ರುತು ಮತಿಯೆಂದೊಡೆಯು ಸಭೆ । ಗೆಳೆದುತಂದವರಧಿಕಸಜ್ಜನ । ರಳಿಕುಲಾಳಕಿಯುಟ್ಟ ಸೀರೆಯನೂ ರುಮಧ್ಯದಲಿ ॥ ಸುಲಿವವರು ಧಾರ್ಮಿಕರು ನಾವೇ । ಖಳರು ನೀವೇ ಸುಜನರೆವಿತ್ಮಾ । ಸ್ಖಲಿತವನು ನೀವಿಂದು ಸೈರಿಸಿ ತಾಯೆ ನಮಗೆಂದ ॥ ೬೫ ॥ ಕದನವಿಜಯದ ಬಂಗಿ ತಲೆಗೇ । ರಿದುದು ಮೋ ಲಂಕದೊಳಗೊಡಹು । ಟ್ಟಿದನ ನೆತ್ತರಗುಡುಹಿ ನಿನ್ನೊಳಗೆವಗೆ ಮಾತೇನು ॥ ಇದಿರಲಿರದಿರು ಸಾಕು ಕರೆ ಧ । ರ್ಮದ ವಿಡಂಬದ ಧರ್ಮಪುತ್ರನ । ಹದನ ಕೇಳುವೆನೆಂದು ಕಳವಳಿಸಿದಳು ಗಾಂ ಧಾರಿ ॥ ೬೬ ॥ ಧರಣಿಪತಿ ಕೇಳ್ಸುಬಲಸುತೆ ನಿ । ಷ್ಠುರವ ನುಡಿಯಲು ನಡುಗಿ ಭೂಪತಿ । ಕರವ ಮುಗಿದನು ವಿನಯಭರದಲಿ ಬಾಗಿ ಭೀತಿಯಲಿ॥ ಕರುಣಿಸೌ ಗಾಂಧಾರಿ ನಿರ್ಮಳೆ। ಕುರುಕುಲಾಗ್ರಣಿ ಜನನಿ ಕೋಪ । ಸ್ಫುರಣದಲಿ ಶಪಿಸೆನಗೆ ಶಾಪಕ್ಕರುಹ ತಾನೆಂದ ॥೬೭॥ ಶಾಪವನು ನೀ ಹೆಸಲಿಸೌ ಸ । ರ್ವಾಪರಾಧಿಗಳಾವು ನಿಮ್ಮಯ।ಕೋಪ ಶಿಳಿಯಲಿ ತಾಯೆ ಫಲಿಸಲಿ ಬಂಧುವಧೆ ನಮಗೆ॥ ನೀ ಪತಿ ವ್ರತೆ ನಿನ್ನ ಖತಿ ಜೀ । ವಾಪಹಾರವು ತನಗೆ ನಿಮ್ಮನು । ತಾಪವಡಗಲಿ ಯೆನ್ನನುಳುಹೆಂದೆರಗಿದನು ಪದಕೆ ॥೬೮॥ ನೆನೆದುದಂತಃಕರಣ ಕರುಣಾ । ವಿನುತರಸದಲಿ ಖತಿಯು ಝಳಝೊಂ । ಮಿನಲಿ ಜರಿ ದುದು ಚಾರಿತಗ್ನದಪುತ್ರಶತಶೋಕ॥ಜನಪ ಕೇಳ್ಕೆ ರಾಜಪದ ಸಂ। ಜನಿತಶಾಮಸಟೀಜಶೇಪದ । ವನಜ ಮುಖಿ ನೋಡಿದಳು ನಖಪಙ್ಕ್ತಿಗಳನವನಿಪನ ॥೬೯॥ ಉರಿದವರಸನ ಕನಿಕರದ ಹೊಗೆ।ಬೆರಸಿ ಕಾರಿಡ ಲೋಡಿ ಹೊಕ್ಕರು । ನರವೃಕೋದರರರಸುರರಿಪು ವಿನ ಪಶ್ಚಿಮಾಂಗದಲಿ ॥ ಹರಿಯಭಯಕರವೆತ್ತಿ ಯ

ಮಜಾ । ದ್ಯರನು ಸಂತೈಸಿದನು ರೋಷ । ಸ್ಫುರಣವಡಗಿತು ಸುಬಲಸುತೆ ನೀನಂಜಬೇಡೆಂದ ॥೭೦॥ ಕೃತಕಭೀಮನ ಕೊಂದು ಮುಳುಗಿತು । ಕ್ಷಿತಿಪತಿಯ ಕೋಪಾಗ್ನಿಯಾತನ । ಸತಿಯ ಖತಿ ಮಗ್ನಿತು ಮಹೀಶನ ನಖದಕಾಂತಿಯಲಿ ॥ ಜಿತವಿರೋಧವ್ಯಾಪ್ತಿ ಬಹಳ । ವ್ಯತಿಕರದೊಳಾಯ್ತೆಂದು ಲಕ್ಷ್ಮೀ । ಪತಿ ನರೇಂದ್ರನ ಸಂತವಿಟ್ಟನು ಸಾರವಚನದಲಿ ॥ ೭೧॥ ಲೇಸುಮಾಡಿದೆ ಮಗಳೆ ಯಮಸುತ । ನೀಸ ಸೈರಿಸಲಾಪನೇ ನಿನ । ಗೇಸ ತಿಳುಹಲು ಕಡೆಗೆ ತಾಮಸಬುದ್ಧಿ ಮಿಗಿಲಾಯ್ತು ॥ ಆಸುಯೋಧನ ನಿನಗೆ ಮಗನೆಂ । ಬಾಸೆ ಬಿಡದಾದುದೆ ಸುಧರ್ಮದ । ವಾಸಿಗೋಸುಗ ನೀಗಿದೆಯಲೇ ಯೆಂದನಾಮುನಿಪ ॥೭೨॥ ನಿನ್ನವರು ಮಾಡಿದವಿಘಾತಿಗ । ಳೆನ್ನಹವಣೇ ವರ್ಣಿಸಲು ಮಿಗೆ । ತನ್ನದುಷ್ಕೃತ ತನಗೆ ಫಲಿಸಿತು ಹಲವುಮಾತೇನು ॥ ನಿನ್ನಮನಸಿನ ಗಸಣಿಯನು ಮಾಡಿನ್ನು ಲೇಸನು ಮರೆದು ಗುಣದಲಿ। ಮನ್ನಿಸಾ ಯಮಸುತನನೆನಲಿಂತೆಂದಳಾಕಾಂತೆ॥೭೩॥ ಭೀತಿಬೇಡಲೆ ಮಕ್ಕಳಿರ ನಿ। ರ್ಧೂತಧರ್ಮಸ್ಥಿತಿಗಳನ್ವಯ । ಘಾತಕರು ತಮ್ಮಿಂದ ತಾವಳಿದರು ರಣಾಗ್ರದಲಿ ॥ ಖ್ಯಾತಿಯಲಿ ನೀವಿನ್ನು ಪಾಲಿಸಿ । ಭೂತಳವ ನೆರೆಕಳಿವು ಬಂಧು । ವ್ರಾತಕುದಕವನೀವುದೆಂದಳು ನೃಪಗೆ ಗಾಂಧಾರಿ ॥೭೪॥ ಅನುನಯವ ರಚಿಸಿದಳು ಕೌರವಜನನಿ ಲೇಸಾಯ್ತೆನುತ ಬಂದರು । ವಿನಯದಲಿ ಮೈಯಿಕ್ಕಿದರು ನಿಜಮಾತೆಯಂಘ್ರಿಯಲಿ ॥ ನೆನೆದಪಕ್ಷಿಪಯಃಪ್ರವಾಹದೊ । ಳನಿಬರನು ತೆಗೆದಪ್ಪಿ ಕುಂತೀ। ವನಿತೆ ಸಂತೈಸಿದಳು ನಯದಲಿ ತನ್ನನಂದನರ ॥೭೫॥ ಏಳ ಧರ್ಮಜ ಪುತ್ರ ಶೋಕ।ವ್ಯಾಳವಿಷಮೂರ್ಛಿತೆಯಲಾ ಪಾಂ । ಚಾಲಸುತೆಯನು ತಿಳುಹಿ ಕಾಣಿಸು ಸುಬಲನಂದನೆಯ॥ಬಾಲೆಯರನಾಭಾನುಮತಿಯ ಚ। ಡಾಳದುಃಖ ವನಪಹರಿಸು ಪರಿ । ತಾಳಬೇಡನೆ ಬಂದರೈವರು ದ್ರೌಪದಿಯಹೊರೆಗೆ ॥೭೬॥ ಕರೆದುತಂದರು ವಿಗತಲೋಚನ । ನರಸಿಯನು ಕಾಣಿಸಿದರತ್ತೆಯ।ಚರಣದಲಿ ಹೊರಳಿದೊಡೆ ಹಿಡಿದೆತ್ತಿದಳುಗಾಂಧಾರಿ ॥ ಮರುಳುಮಗಳೆ ಕುಮಾರವರ್ಗದ । ಹರಣ ಸೊಸೆಯತ್ತೆಯರಿಗೊಂದೇ । ಪರಿ ವೃಥಾವ್ಯಥೆಯೇಕೆನುತ ಸಂತೈಸಿದಳು ಸೊಸೆಯ ॥೭೭॥ ಸರಿಯೆ ತಾ ಪುತ್ರಶೋಕ ನಮ್ಮಿ । ಬ್ಬರಿಗೆ ನಮ್ಮೊಳು ಬೆರಸಿ ವೈರೋ । ತ್ತರವಿಸಂಸ್ತುಳರಣವಿಧಾನವನಮ್ಮೊಳಗೆ ರಚಿಸಿ ॥ ಎರಡು ಬಲದಲಿ ಸಕಲಭೂಮಿಶ । ್ವರರ ಚಾತುರ್ಬಲವನುಪಸಂ । ಹರಿಸಿದಾತನು ತಾನೆ ಗದುಗಿನವೀರನಾರಯಣ ॥ ॥೭೮॥

ಅಂತು ಸಂಧಿ ೧೧ಕ್ಕಂ ಪದ ೫೯೧ಕ್ಕಂ ಮಂಗಳಮಸ್ತು.



## ಹನ್ನೆರಡನೆಯ ಸಂಧಿ.

**॥ಸೂಚನೆ॥ ರಣವ ಶೋಧಿಸಲೆಂದು ಕಣನಲಿ । ಹೆಣನ ತುಳಿತುಳಿಸಿ ಸರಸಿ ಕುರು ಧಾ । ರಿಣಿಯುವತಿಯನು ಕಂಡು ಮಿಗೆ ಹೊರಳಿದಳು ಗಾಂಧಾರಿ ॥**

॥ಪದ॥ ಕೇಳು ಜನಮೇಜಯಧರಿತ್ರೀ।ಪಾಲ ಕೃಷ್ಣನ ಕರೆದುನಯವಲಿ।ಲೋಲಲೋಚನೆ ನುಡಿ

ದಳಂತಸ್ತ್ರಾಪತಿಖಿಜಡಿಯೆ ॥ ಹೇಳು ತಂದೆ ಮುಕುಂದ ಕದನ । ವ್ಯಾಳವಿಷ ಬಿದ್ದ ಧರಣೀ । ಪಾಲವರ್ಗವ ತೋರಸೆಂದಳು ಹರಿಗೆ ಗಾಂಧಾರಿ ॥ ೧ ॥ ನಿನ್ನಲೀಲೆಯು ಬೆಳೆಸಿರಿಯಸಂ। ಪನ್ನ ಮಾಯೆ ಯರಚನೆಯುದುನಿ । ರ್ಭಿನ್ನ ಭಾರತಬಹಳರಚಿತಾಕ್ಷೌಹಿಣೀಬಲದ ॥ ನಿನ್ನೊಡನೆ ಹಗೆ ಬೆಳೆದಶೌರ್ಯವಿ । ಪನ್ನರನು ತೋರೆನೆ ಜನಾರ್ದನ । ವನ್ನಿಸೆಂದಳು ನಯನಜಲವನು ಮಿಡಿದು ಗಾಂಧಾರಿ ॥ ೨ ॥ ತಾಯೆ ಬಾ ಗಾಂಧಾರಿ ಮನದಲಿ । ನೋಯದಿರು ಪೌರಾಣಜನ್ಮದ । ದಾಯಭಾಗದ ಭೋಗಭಂಗಿ ಸಲಳುಕಲೇಕಿನ್ನು ॥ ಸಾಯಲಾಗದೆ ಸುಭಟರಸುಗಳು। ಬೀಯವೇ ಬ್ರಹ್ಮಾದಿಗಳಿಗಿದು। ವಾಯಲೀಸಂಸಾರವೆಂದನು ನಗುತ ಮುರವೈರಿ ॥ ೩ ॥ ಎಂದು ಕೈಗೊಟ್ಟಬಲೆಯನು ಹರಿ । ತಂದನಾಸಂಗ್ರಾಮಭೂಮಿಗೆ । ಹಿಂದೆಬರ ಲಷ್ಟಾದಶಾಕ್ಷೌಹಿಣಿಯನಾರಿಯರು ॥ ಮುಂದೆ ಹೆಣದಿನಿಹಿಗಳು ಖಗಮೃಗ । ವೃಂದಚಲ್ಲಿತು ಭೂತಘಾತನಿ।ವೃಂದ ತೆರಳಿತು ಹೊಕ್ಕರಿವರದ್ಭುತರಣಾಂಗಣವ ॥ ೪ ॥ ಸೂಸಿತ ಬಲಾವೃಂದ ಕೆದರಿದ।ಕೇಶಪಾಶದ ತೆಳುವಸುರನಿ।ಟ್ಟಾಸುರಿನ ಹೊಯ್ಲುಗಳ ಲೋಚನವಾರಿಧಾರೆಗಳ॥ ಆಸುರಾತೋದನದಶೋಕ।ಕ್ಲೇಶಬಹಳದ ಬಾಲೆಯರು ಪ್ರಾ। ಣೇಶ ಮೈದೋರೆನುತ ಹೊಕ್ಕರಸಿದರು ಕಳನೊಳಗೆ ॥ ೫ ॥ ಹರೆದರಗಲಕೆ ನಾರಿಯರು ಕುರು । ಧರಣಿಯಲಿ ತಮತಮ್ಮ ಪತಿಗಳ । ಕರಿಗಳಲಿ ತುರಗದಲಿ ರಥದಲಿ ಕಂಡರಲ್ಲಲ್ಲಿ ॥ ಶಿರವ ಮುಂಡಾಡಿದರು ಹೆಣನಲಿ। ಹೊರಳಿದರು ವಿವಿಧಪ್ರಳಾಪದ ಪರಿತವವನೆಂತರಿದರೋ ವನ್ನಿಸುವೊಡರಿದೆಂದ ॥೬॥ ನಡೆದಳಾಗಾಂಧಾರಿ ಶೋಕದ । ಕಡಲೊಳೇಳು। ತ ಮುಳಿಗದಂಘ್ರಿಯು । ತೊಡಹುಕರುಣಾಂಬುವಿನ ಹೊನಲಿನ ಜಾನುಜಂಘೆಯಲಿ ॥ ಅಡಗಿನಲಿ ಕಾಲೂರಿ ಸಿಲುಕಿದ। ರೊಡನೆ ಹರಿ ನೆಗಹುವನು ನೆರವಿನ । ತೊಡಕ ಬಿಡಿಸುತ ಪೋಪಳಂಗನೆ ಹೆಣನ ಮಧ್ಯದಲಿ ॥ ೭ ॥ ಇತ್ತ ನೋಡೈ ದೇವಕೀಸುತ । ಮತ್ತಗಜಕಂದದಲಿ ಭಗ । ದತ್ತನನು ಕಂಡಾತ ನರಸಿಯು ರೈದೆ ಮೊಗನೆಗಹಿ ॥ ಸುತ್ತಿ ಬರುತಿದೆ ಭಾರಿದಂತಿಯು । ಹತ್ತಲರಿಯದೆ ನೂರು ಮಡಿ ಶೋ । ಕೋತ್ತರದಲಿದೆ ಶಿವಯನುತ ಮರುಗಿದಳು ಗಾಂಧಾರಿ ॥ ೮ ॥ ದೇವ ನೋಡಾ ಶೋಕವ ಹ್ನಿಯ । ಡಾವರವ ಕಾಂಭೋಜರರಸಿಯ । ರಾವನೋಂಪಿಯನೋಂತರೋ ಶಿವಶಿವಮಹಾದೇವ॥ ಆವನಾತನು ನಿಮ್ಮವರುಗಳ । ಮೂವನೈ ಪಾಂಚಾಲ ಸತಿಯನು । ಜೀವದಲಿ ಜಾರಿದರು ರಮಣರ ಮೇಲೆ ಶಲೆ ಹೊರಳಿ ॥ ೯ ॥ ಅದೆವಿರಾಟನ ಸತಿಯರೀಚೆಯ । ಲಿದೆ ಘಟೋತ್ಕಚನಂಗನೆಯರೀ । ಸುದತಿಯರ ಶೋಕವ ನಿರೀಕ್ಷಿಸು ಪಂಚಕೈಕೆಯರ ॥ ಒದರಿ ಪಾಂಡ್ಯನ ಹೆಂಡಿರಾಚೆಯು । ಲದೆ ಸುಸೋಮಕಸೃಂಜಯಾದ್ಯರು । ಕೆದರಿ ಹೊರಳುತಲಿದೆ ಮುರಾಂತಕ ನಿನ್ನ ಥಟ್ಟಿನಲಿ ॥ ೧೦ ॥ ಸುಖಿ ಕಣಾ ಭೂರಿಶ್ರವನ ವರ । ಸಖಿಯುದೇ ಪಾಡಳಿವ ನಿಮ್ಮಯ । ಸಖನ ಗೆಲಿಸಿದಿರಿವನ ಮುರಿದಿರಿ ರಾಧೆಯಾತ್ಮಜನ ॥ ನಿಖಿಳಯಾಚಕಜನಸಹಿತ ತ । ನ್ನಖಿಯರಳುತಿದೆ ಕರ್ಣ ಮರಣಕೆ । ನಿಖಿಳಜಗ ನೀನೊಬ್ಬ ತಪ್ಪಿಸಿ ಮರುಗಿತಂದಿನಲಿ ॥ ೧೧ ॥ ಭಾನುದತ್ತನ ಮೇಲೆ ಹೊರಳುವ । ಮಾನನೀಯರನೀಕ್ಷಿಸೈ ಮಾತ್ಸೂನುಗಳ ನೋಡಿತ್ತಲಿದೆ ದುಶ್ಶಾಸನಾದಿಗಳ ॥ ಏನನೆಂಬೆನು ತನ್ನ ಸೊಸೆಯರ। ಹಾನಿಯನು ಮಾದ್ರೇಶನರಸಿಯ । ರೇನುಧರ್ಮದರ್ಸ್ದರೆಂದಳಲಿದಳು ಗಾಂಧಾರಿ ॥ ೧೨ ॥ ತಂದೆ ನೋಡೈ ಕೃಷ್ಣ ತನ್ನಯ । ನಂದನನ ಸೊಸ್ಸೆಗೆ ಕಿರಿಯಳ। ನಿಂದು ಮುಖಮುಕ್ಕಳೆಯನಾ ಸೈಂಧವನವಲ್ಲ

ಭೆಯು ॥ ಅಂದು ಕಿವಿವಿಧವ್ಯೂಹದರಿಗುರು।ನಿಂದೊಡೆಯು ಹುಸಿರಾತ್ರಿಯಲಿ ನೀ । ಕೊಂದೆಲ್ಲೈ ತನ್ನಳಿಯನೆನು ವರಸಿಂಧು ಭೂಪತಿಯು ॥ ೧೩ ॥ ಎನುತ ಬರೆಬರೆ ಮುಂದೆ ಕಂಡಳು।ತನುಜನನು ಭೀಮನ ಗದಾಘು । ಟ್ಟನದ ಗಾಯದವ್ಯೈಯು ಖಂಡಿಸಿದೂರುಮಂಡಲದ ॥ ನನೆದಹುಡಿಮಗ್ಗುಲಿನ ರಕ್ತದ । ಹೊನಲ ಹೊಲಸಿನ ಘೂಕಕಾಕ । ಧ್ವನಿಭಯಂಕರಸಂವಿದಾನದಕೌರವೇಶ್ವರನ ॥ ೧೪ ॥ ಇತ್ತ ನೋಡ್ಕೆ ಕೃಷ್ಣ ತನ್ನಯ । ಮತ್ತದಂತಿಯನಿಂದುಕುಲರಾ । ಜೋತ್ತಮನನೇಕಾದಶಾಕ್ಷೌಹಿಣಿಯವಲ್ಲಭನ ॥ ಹತ್ತೆ ಹಿಡಿದೋಲೈಸುವರು ವರ । ಮತ್ತಗಜಗಾಮಿನಿಯರೀಗಳು । ಸುತ್ತುಮುತ್ತಿತು ಘೂಕವಾಯಸಜಂಬುಕವ್ರಾತ ॥ ೧೫ ॥ ಎನುತ ಬಿದ್ದಳು ಮೂರ್ಛೆಯಲಿ ಮಾ । ನಿನಿಯನೆತ್ತಿದನಸುರರಿಪು ನೃಪ । ವನಿತೆಯರು ವರಭಾನುಮತಿಮೊದಲಾದ ನಾರಿಯರು ॥ ಜನಪತಿಯ ಮುಕ್ಕುರಿಕಿದರು ಸಂ । ಜನಿತಶೋಕಾದ್ಭುತದ ಹಾಹಾ । ಧ್ವನಿಯ ಥಟ್ಟಣೆ ಘಟ್ಟಿಸಿತು ಬ್ರಹ್ಮಾಂಡಮಂಡಲವ ॥ ೧೬ ॥ ಕ್ಷೇಮಧೂರ್ತನನಾಕಳಿಂಗನ । ಸೋಮದತ್ತನ ಚಿತ್ರಸೇನನ । ಭೀಮವೈರಿಯ ಲಂಬಸನ ಕಿಂಮೀರ ನಂದನನ ॥ ಭೌಮಸುತನ ಸುಶರ್ಮಕನ ಸು । ತ್ರಾಮರಿಪುಗಳ ಭೂರಿಬಲದ ಸ । ನಾಮರರಸಿಯರುದೆ ನಿಜೇಶರಮೇಲೆ ತನು ಹೊರಳೆ ॥ ೧೭ ॥ ಜನಪ ಕೇಳೀಚೆಯಲಿ ಕುಂತೀ । ವನಿತೆ ಕರ್ಣನಮೇಲೆ ಹೊರಳಿದ । ಳಿನತನುಜ ಹಾ ಕರ್ಣ ಹಾಹಾಯೆನುತ ಹಂಬಲಿಸಿ॥ ನಿನಗೆ ಧರ್ಮಸುತಾದಿಭೂಮಿಪ । ರನುಜರೀ ಮಾಯಾವಿ ಮಧುಸೂ । ದನನೆ ಮರೆಯಿಸಿಕೊಂದನಕಟೆಂದಳಲಿದಳು ಕುಂತಿ ॥ ೧೮ ॥ ಅರಿದನಂತಕಸೂನು ಮುರಹರ । ನಿರಿದನೈ ನಾವಿಂದು ಕರ್ಣಗೆ । ಕಿರಿಯರೈಲೇನಾಯ್ತು ಗುರುಜನ ಬಂಧುಜನಹನನ ॥ ಉರುವ ಶಶಿವಂಶದ ಮಹಾನೃಪ। ರೆರಗಿದೊಡೆ ಪಾತಕಕೆ ಮುನ್ನೆ । ಚ್ಚರಿಸದಕಟಾ ತಾಯಿ ಕೆಡಸಿದಳೆಂದು ಬಿಸುಸುಯ್ದ ॥ ೧೯ ॥ ನುಡಿಯದಿಹರೇ ತಾಯೆ ಕರ್ಣನ । ವೊಡನೆ ನೀವ್ ಬಂದವರು ಯೆನ್ನದೆ । ಕೆಡಿಸಿದೆಯಲಾ ಧರಣಿಪತಿಯಾತನನು ಯೆನಿಸುವದ ॥ ಬಿಡಿಸಿದೆಯಲಾ ಯಿನ್ನು ಲೋಕದ । ಸಡಗರದ ನಾರಿಯರ ಹೃದಯದೊ। ಳೊಡೆದು ಹೋಗಲಿ ಯಂತರಂಗವು ಬಾಹ್ಯರಂಗದಲಿ ॥ ೨೦ ॥ ಹೋಗಲಿನ್ನಾ ಕ್ಷತ್ರಧರ್ಮ। ತ್ಯಾಗದುವ್ಯಸನಪ್ರಪಂಚವ । ನೀಗಿ ಕಳೆಯೆಂದಸುರರಿಪು ವೈತಂದು ಮನ್ನಿಸಿದ ॥ ಮೇಗಿವರ ಸಂಸ್ಕಾರಕಾರ್ಯನಿ । ಯೋಗವಿವೆ ಭಾರಾಂಕ ನಿನಗೆ ಸ । ರಾಗದಲಿ ಸಂತೈಸಿಯೆಂದನು ಭೂಪತಿಗೆ ಶೌರಿ ॥ ೨೧ ॥ ವ್ಯಾಸನಾರದವಿದುರಸಾತ್ಯಕಿ । ಕೇಶವರು ದಾರುಕಯುಯುತ್ಸುಮು । ಹೀಶಮೊದಲಾದನಿಬರರಸರ ಸಾರಥಿವ್ರಾತ ॥ ಆಸಚಿವರಾಹಸ್ತಿನಾಪುರ । ದಾಸಮಸ್ತಪ್ರಕೃತಿಜನ ಸಂ । ತ್ರಾಸಿದರು ಸಂಸ್ಕಾರವಿಧಿಯನು ಹತಮಹೀಶರಿಗೆ ॥೨೨॥ ಕುರುಪತಿಯ ರವಿಸುತನ ಮಾದ್ರೇ । ಶ್ವರನ ದುಶ್ಶಾಸನ ವಿಕರ್ಣ । ದ್ವರ ಜಯದ್ರಥಬಾಹ್ಲಿಕನಭಗದತ್ತಲಕ್ಷಣನ ॥ ಗರುವರನು ಪಾಂಚಾಲಮತ್ಸ್ಯೇಶ್ವರನ ಕುಂತೀಭೋಜನೃಪನು । ಬ್ಬರಿಸು ವಿಧಿಪೂರ್ವಕದಿದಹಿಸಿದರಾಹಿತಾಗ್ನಿಯಲಿ ॥೨೩॥ ಕಳಚೌಕವ ಸುತ್ತಲೊಟ್ಟಿಸಿ । ತಳಿಗಳನು ಬಹಳಾಗ್ನಿಯನು ಕೈ । ಗೊಳಿಸಿದರು ದಹಿಸಿದರು ಬಹಳಾಕ್ಷೌಹಿಣೀಭಟರ ॥ ಬಳಿಕ ಹಸ್ತಿನಪುರದ ಸಿಂಹಾಸ್ಥಳಕೆ ಬಂದರು ನಿಖಿಳಕಾಂತಾ । ವಳಿಸಹಿತ ಗಂಗಾವಗಹನವ ಮಾಡಿದನು ನೃಪತಿ ॥೨೪॥ ಆನದಿಯ ತೀರದಲಿ ತಿಂಗಳು । ಮಾನನಿಧಿ ತತ್ಪ್ರೇತರಿಗೆ ಜಲ । ದಾ

ನವಿಧಿವಿಹಿತಪ್ರಪಂಚದ ಸಕಲಸತ್ಕ್ರಿಯೆಯು ॥ ಭೂನೃಪತಿ ಮಾಡಿದುದು ಬಂದುದು । ಜಾನಪದಜನ ವ್ರೈದೆ ಕುಂತೀ। ಸೂನುವನು ದರುಶನವ ಮಾಡಿತು ಕಾಣಿಕೆಯನೀಡಿ ॥೨೫॥ ತಿಳುಹಿರಾಯನ ಹೃದಯ ಸಂಚಿತ । ಕಲುಷವನು ಖಂಡಿಸಿ ಗತಾಕ್ಷನ । ಬಲಿದಚಿತ್ತವ್ಯಥೆಯನಾರಿಸಿ ನೃಪವಧೂಜನದ ॥ ಅಳಲ ನಾರಿಸಿ ಗಜಪುರದ ನೃಪ । ನಿಳಯವನು ಹೊಗಿಸಿದನು ಯದುಕುಲ । ತಿಲಕಗದುಗಿನವೀರನಾರಾಯಣ ನು ಕರುಣದಲಿ ॥ ... ... ॥೨೬॥

ಅಂತು ಸಂಧಿ ೧೨ಕ್ಕಂ ಪದ ೬೦೭ಕ್ಕಂ ಮಂಗಳಮಸ್ತು.



## ಹದಿಮೂರನೆಯ ಸಂಧಿ.

॥ಸೂಚನೆ॥ ದೇವಸಂತತಿ ನಲಿಯೆ ಪಾಂಡವ । ಜೀವಹರಿಯೆಂಬೀ ಪ್ರತಿಜ್ಞೆಯು । ಭಾವ ಸಂಧುದು ಧರ್ಮಜನ ಪಟ್ಟಾಭಿಷೇಕದಲಿ॥

॥ ಪದ ॥ ಕೇಳು ಜನಮೇಜಯಧರಿತ್ರೀ । ಪಾಲ ಹಿಮಗಿರಿ ತೊಡಗಿ ಸಾಗರ। ವೇಳೆಪರಿಯಂ ತಖಿಳನಗರಗ್ರಾಮಪುರ ವರದ ॥ ಮೇಲುವರ್ಣಪ್ರಮುಖರಾಚಾಂ । ಡಾಲರವಧಿಯ ಸಕಲಭೂಜನ । ಜಾಲ ಹಸ್ತಿನಪುರಿಗೆ ಬಂದುದು ಕಂಡುದವನಿಪನ ॥ ೧ ॥ ಭುವನಮುದ್ಗಲಕಣ್ವಕರಭಾ । ರ್ಗವಭರ ದ್ವಾಜಾಂಗಿರಸ ಗಾ । ಲವಪುಲಸ್ತ್ಯವಸಿಷ್ಠಗೌತಮ ಯಾಜ್ಞವಲ್ಕ್ಯಮುನಿ ॥ ಧ್ರುವವಿಭಾಂಡಕಗಾ ರ್ಗ್ಯಘಟಸಂ । ಭವಮೃಕಂಡುಸುತಾದಿಭೂಮಿ । ಪ್ರವರಮುನಿಗಳು ಬಂದು ಕಂಡರು ಧರ್ಮನಂದ ನನ ॥ ೨ ॥ ಜಲಧಿಮಧ್ಯದಕುರುವಘಟ್ಟಾ । ವಳಿಯಕೊಳ್ಳದ ಕುಹರಕುಂಜರ । ನೆಲೆಯ ಗಿರಿಸಾನು ಗಳ ಶಿಖರದ ದುರ್ಗವೀಧಿಗಳ ॥ ನೆಲನಶೇಷಪ್ರಜೆ ನಿಖಿಳಮಂ । ಡಳಿಕಮನ್ನೆಯವಂದಿಜನಸಂ । ಕುಲ ಮತಂಗಜಪುರಕೆ ಬಂದುದು ನೃಪನಕಾಣಿಕೆಗೆ ॥ ೩ ॥ ವ್ಯಾಸನಾರದ ಕೃಷ್ಣ ಮೊದಲಾ । ಗೀಸಮಸ್ತ ಮುನೀಂದ್ರನಿಕರ ಮ । ಹೀಶನನು ಪಟ್ಟಾಭಿಷೇಕಕೆ ಮನವನೊಡಬಡಿಸಿ ॥ ದೋಷರಹಿತಮುಹೂರ್ತ ಲಗ್ನದಿ । ನೇಶವಾರಶುಭಗ್ರಹೋದಯ । ಲೇಸೆನಲು ನೋಡಿದರು ಮಿಗೆ ಗಾರ್ಗ್ಯಾದಿಜೋಯಿಸ ರು ॥ ೪ ॥ ತರಿಸಿ ಮಂಗಳವಸ್ತುಗಳ ಸಂ । ವರಿಸಿ ಬಹುವಿಧವಾದ್ಯರವವಿ । ಸ್ತರದ ಪಂಚಮಹಾನಿ ನಾದದ ಸರ್ವಜನ ಮನದ ॥ ಹರುಷಪೂರದ ವೇದಮಂತ್ರೋ । ಚ್ಚರಣ ಸಾರದನೃಪನ ಪಟ್ಟದ । ವರಮಹೋತ್ಸವವೆಸೆಯಲೆಸಗಿದನಸುರರಿಪುವಂದು ॥ ೫ ॥ ಸುರಪತಿಖಿಯಮನಿರುತಿವರುಣಾ । ದ್ಯ ರು ಮರುತಹರಸಖನುಯಿಶಾ । ನ್ಯರು ಮಹೋರಗ ಗರುಡಗಂಧರ್ವರು ವಿಮಾನದಲಿ ॥ ನೆರೆದು ಕಿ ನ್ನರಕಿಂಪುರುಷರ । ಪ್ಸರಿಯರಾನಂದದಲಿ ವೀಣಾ । ವರಸುಗಾನವಿನೋದನೃತ್ಯದೊಳೊಲಿಸಿದರು ಸ

ಭೆಯು ॥ ೬ ॥ ಧರಣಿಪತಿಧೃತರಾಷ್ಟ್ರ ವಿದುರರು ವರಪುರೋಹಿತಧೌಮ್ಯ ನೀಲಾಂ । ಬರರು ಯಾದವರರಸ ವೇದವ್ಯಾಸ ನಾರದರು ॥ ತರುಣಿಯರು ಗಾಂಧಾರಿ ಕುಂತಿಯು ಪರಮಮುನಿವಧುನಿಕರ ಧರಣೀ । ಸುರರು ಮಂತ್ರಾಕ್ಷತೆಯ ಸೂಸಿದರವನಿಪನ ಹರಸಿ ॥ ೭ ॥ ಆದುದಾ ಪಟ್ಟಾಭಿಷೇಕದೊ । ಳಾದುರಾತ್ಮಕಭಾಷ್ಯಳನ ಪರಿ। ವಾದವನು ಋಷಿನಿಕರ ಕೇಳಿದು ಖತಿಯು ಭಾರದಲಿ ॥ ಭೇದಿಸಿದನಿವನ ಸುರನೆಂದು ವಿ । ಷಾದವನ್ನಿಯಲುರುಹಿದರು ಬಳಿ । ಕಾದರಿಸಿ ಧರ್ಮಜನ ಸಂತೈಸಿದನು ಮುರವೈರಿ ॥ ೮ ॥ ವರಮುನೀಂದ್ರರನಖಿಳದೇಶಾಂ । ತರದ ಭೂಸುರವರ್ಗವನು ಸ । ತ್ಕರಿಸಿದನು ಗೋಭೂಮಿದಾನಹಿರಣ್ಯ ವಸನದಲಿ॥ಪರಿಜನವ ಪುರುಜನವ ರತ್ನಾ । ಕರಪರೀತಮಹೀಜನವ ಮಿಗೆ ಸ । ತ್ಕರಿಸಿ ವೈಭವ ವಿಭವಹಿತಸನ್ಮಾನ ದಾನದಲಿ ॥೯ ॥ ಅರಸಕೇಳ್ಕೆ ಪಟ್ಟವದು ಹಿರಿ। ಯರಸನದು ಯುವರಾಜಪಟ್ಟಕೆ । ಹರಿತನೂಜನೊಳಾಯ್ತು ಸೇನಾಪತಿ ಧನಂಜಯನು ॥ ವರಕುಮಾರರು ಯಮಳರಲ್ಲಿಗೆ । ಹಿರಿಯಸಚಿವರು ವಿದುರನವನಿಪ । ಪರುತವಿಸಿದಯುಯುತ್ಸುವನು ಸರ್ವಾಧಿಕಾರದಲಿ ॥೧೦॥ ಆಸುಯೋಧನನರಮನೆಯನವ । ನೀಶಹೊಕ್ಕನು ಪವನಸುತದು । ಶ್ಯಾಸನನ ಸದನದಲಿ ಪಾರ್ಥಗೆ ಕರ್ಣಭವನವನು ॥ ವಾಸವಾದುದು ಯಮಳರಿಗೆ ದು । ಶ್ಯಾಸನಾನುಜರರಮನೆಗಳಲಿ । ದೈಸುಮನೆ ಭಂಡಾರಕೋಠಾರಕ್ಕೆ ಸಮನಿಸಿತು ॥ ೧೧ ॥ ಮನ್ನಣೆಯಲಿ ಯುಯುತ್ಸು ಹೊಕ್ಕನು । ತನ್ನಮನೆಯನು ಭೀಷ್ಮಗುರುಕೃಪ । ರುನ್ನತಾಲಯವಾಯ್ತು ನೃಪನ ಪಸಾಯ್ತಸಂತತಿಗೆ ॥ ಮುನ್ನಿನವರೇ ಮಂತ್ರಿಸಚಿವರು । ಮುನ್ನದಾವಂಗಾವಪರುಠವ । ಭಿನ್ನವಿಲ್ಲದೆ ಪೌರಜನವೆಸೆದಿರ್ದುದಿಭಪುರಿಯ ॥ ೧೨ ॥ ಅರಸು ಧರ್ಮಜನಾದ ನಮಗಿ । ನ್ನುರವಣಿಪಮನ ಬೇಡಬೇಡು । ತ್ತರಿಸು ವಿಹಪರವೆರಡ ಪಡೆವೆವು ನಿಖಿಳಜನ ಹೊಗಳೆ ॥ ಪರಿಮಿತದ ಜನತಮ್ಮಸುಬಲವ । ನಿರದೆ ಮಾಡುವೆವೆಂದು ಮುನಿಜನ । ಧರಣಿಸುರರೊಳಗಾದಪುರಜನರೊಲಿದು ಹರಸಿದರು ॥ ೧೩ ॥ ಗೌಳಬರ್ಬರಮಗಧಸಿಂಧುನೆ । ಪಾಳವಾಂಧ್ರವಿದೇಹಕುರುಮಳೆ । ಯಾಳವತ್ಸತ್ರಿಗರ್ತಮತ್ಸ್ಯವಿದರ್ಭಕಾಂಭೋಜ॥ ಮಾಳವಾಂಗಕಿರಾತಭಲಿ ಬಂ । ಗಾಳಜೋನೆಗಚೀನಖರ್ಪರ । ಚೋಳಕೊಡಗನೃಪಾಲಕೊಂಕಣಕರು ಹಠಾಹರಾಷ್ಟ್ರ ॥ ೧೪॥ ಶೂರಸೇನಮರಾಟಬಾಹ್ಲಿಕ ಕೇರಳಯುಗಂಧರಕುಕುರಸಂ । ವೀರಕೊಂಕಣ ಚೇದಿಕೋಸಲನಿಷಧ ಸೌರಾಷ್ಟ್ರ ॥ ಪಾರಶಿಕಪಾಂಚಾಲವರಗಾಂ । ಧಾರಕರ್ಣಾಟಕ ಪುಳಿಂದಕಾ । ಶ್ಮೀರನಿಷಧವಿದರ್ಭಘೋಟಕವಂತಿಕಾಂಭೋಜ ॥ ೧೫ ॥ ಅಂಗಕುಂತಲಲಾಟಪೌಂಡ್ರಕ । ಲಿಂಗಗುರ್ಜರಪಾಂಡ್ಯಕೇಕಯ । ಸಿಂಗಳದಶಾರ್ಣವತುರುಷ್ಕಸಮುದ್ರಹೋಸಲದ ॥ ತುಂಗವಿಕ್ರಮನೃಪರನರವ । ರಂಗಚಿತ್ತವನಿತ್ತು ಲಾಲಿಸಿ।ಮಂಗಳೋತ್ಸವದಿಂದ ಮನ್ನಿಸಿ ಕಳುಹಿದನು ನೃಪತಿ ॥ ೧೬ ॥ ಬಳಿಕ ಭೀಷ್ಮನಬಾಣಶಯನ । ಸ್ಥಳಕೆ ಧರ್ಮಜ ಬಂದು ಧರ್ಮಂ । ಗಳನುಕೇಳ್ದನು ರಾಜಧರ್ಮಪುರಾಣಸಂಗತಿಯ ॥ ತಿಳಿದನಗ್ರದದಾನಧರ್ಮಾ । ವಳಿಯನಾತನ ರಾಜಪಾಲನ । ನಳನಹುಷಭರತಾದಿಭೂಪರ ಗತಿಗೆ ಗುರುವಾಯ್ತು ॥ ೧೭ ॥ ಕದನದಲಿ ಕೈಯಾರೆ ದೈತ್ಯರ । ಸದೆದು ಭೂಭಾರವನು ಪರಹಸ್ತದಲಿ ಮಾಡಿಸಿ ಕೊಟ್ಟಭಾಷೆಗೆ ಯುತ್ತರಾಯೆನಿಸಿ॥ ನದಿಯನಂದನನನು ಪರಾನಂ । ದದಲಿ ಸೇರಿಸಿ ಪರಮಪರಿತೋ। ಷದಲಿ ಪಯಣವ ಮಾಡಿದನು ಮುರವೈರಿ ನಿಜಪುರಿಗೆ ॥

॥ ೧೮ ॥ ಯಮಸುತನ ತಕ್ಕೈಸಿ ಭೀಮನ । ಮಮತೆಯನು ಭುಲ್ಲೈಸಿ ಪಾರ್ಥನ । ನಮಿತಮಕುಟವ ನೆಗಹಿದನು ಪುಳಕಾಶ್ರುಪೂರದಲಿ ॥ ಯಮಳರನು ಸಂತೈಸಿ ರಾಯನ ।ರಮಣಿಯನು ಬೋಳೈಸಿ ವಿದುರ । ಪ್ರಮುಖರನು ಬೀಳ್ಕೊಟ್ಟು ಬಿಜಯಂಗೈದನಸುರಾರಿ ॥ ೧೯ ॥ ದೇವದುಂದುಭಿರವದ ಗಗನದ । ಪೂವಳೆಯ ಪೂರದ ಸಪುಸ್ತ್ರ್ಯ । ನಾವಳಿಯ ಜಯರವದ ನಿರ್ಘೋಷದಗಡಾವಣೆಯ ॥ ದೇವಕಿಯವಸುದೇವರುಕುಮಿಣಿ । ದೇವಿಯರುಗಳ ಹರುಷದಲಿ ನಿ । ರ್ಭಾವ ಮಿಗೆ ನಿಜಪುರವ ಹೊಕ್ಕನು ವೀರನಾರಯಣ ॥ ೨೦ ॥ ಭೂಸುರರ ಋಷಿಗಳನು ದಿಗ್ಧರ । ಣೀಶರನು ಮನ್ನಿಯರ ದಿಕ್ಕಿನ । ದೇಶದೇಶದ ಮಂಡಲೀಕರ ನಗರಪಟ್ಟಣವ ॥ ಕಾಶಿಮೊದಲಾದಖಿಳತೀರ್ಥನಿ । ವಾಸಿಗಳ ಕಳುಹಿದನು ಧರ್ಮಜ । ನಾಸಹೋದರರೊಡನೆ ರಾಜ್ಯವನಾಳಿದನು ನೃಪತಿ ॥ ೨೧ ॥ ನೆಲೆನೆಲೆಯ ಸೌಧಂಗಳಲ್ಲಿಹ ।ಲಲನೆಯರು ಶತಸಾಪಿರಪ್ರ ಮ್ಕ । ಯೊಲವಿನಲಿ ದ್ರೌಪದಿಸುಭದ್ರಾದೇವಿಯರಕೂಡೆ॥ ಒಲಿದು ಗಾನವಿನೋದದಲಿ ಕೆಲ । ಕೆಲರು ವೀಣಾವಾದ್ಯದಲಿ ಕೆಲ। ಕೆಲರು ನಾನಾವಿದ್ಯೆಯಲಿ ರಂಜಿಸಿದ ರೊಲವಿನಲಿ ॥ ೨೨ ॥ ರಚಿತಮಂತ್ರಿಪಸಾಯ್ತರು ಘಟೋ । ತ್ಕಚನ ತನಯನು ಮೇಘನಾದನು । ಪ್ರಚುರತರನಾಕರ್ಣಸುತವೃಷಕೇತುಮೊದಲಾದ ॥ ಸಚಿವರಾಪ್ತಕುಮಾರಬಾಂಧವ । ನಿಚಯಮವರ್ಗದಲರಸ ರಂಜಿಸಿ । ಯುಚಿತದಿಂಪಾಲಿಸಿದನೇಕಚ್ಛತ್ರದಲಿ ನೆಲನ॥೨೩॥ ಭರತನಹುಷಯಯಾತಿನಳಕೂ। ಬರಹರಿಶ್ಚಂದ್ರನುಪುರೂರವ । ವರದಿಳೀಪನುಸಗರದಶರಥರಾಮಮೊದಲಾದ॥ಧರಣಿಪರಿಗೈವಡಿಯೆನಿಸಿ ಸು । ಸ್ಥಿರದಿ ನೃಪನಾಳಿದನು ರಾಜ್ಯದ । ಸಿರಿಯ ವರ್ಣಿಸಲರಿಯೆ ಕೇಳ್ ಜನಮೇಜಯಕ್ಷಿತಿಪ॥೨೪॥ ವಾಸವನ ವೈಭವಕೆ ಮಿಗಿಲೆಂ । ದಾಸುರರು ಕೊಂಡಾಡೆ ಶ್ರೀಲ । ಕ್ಷ್ಮೀಶನಂಘ್ರಿಯ ಭಜಿಸುತವೆ ಸಾಮ್ರಾಜ್ಯಭೋಗದಲಿ ॥ ಭಾಸುರದ ನವರತ್ನಮಯಸಿಂ । ಹಾಸನದ ವಿಭವದಲಿ ರಂಜಿಸೆ । ದೇಶ ನಲಿದುದು ಕೀರ್ತಿಲತೆ ಹಬ್ಬಿದುದು ತ್ರೈಜಗವ ॥ ೨೫ ॥ ಈತೆರದಿ ಪಾಂಡವರ ಸಲಹಿದ । ಪೀತವಸನಮುಕುಂದಕಂಸಾ । ರಾತಿಕೃಷ್ಣನ ಚರಿತಪೀಯೂಷವನು ಸಲಿಸಲಿದು ॥ ಸೂತಮುನಿ ಪೇಳಿದನು ತಪಸಿ । ವ್ರಾತವಾನಂದದಲಿ ಕೇಳ್ದತಿ ।ಪ್ರೀತಿಯಿಂ ಮನ್ನಿಸಿದರಾಮುನಿವರನ ಕರುಣದಲಿ ॥ ೨೬ ॥ ಅರಸ ಕೇಳೈ ಸಕಲವೇದದ । ತಿರುಳೆನಿಪಭಾರತದ ಕಥೆಯನು । ವಿರಚಿಸಿದಜಗದಘವ ಸಂಹರಿಸಲ್ಕೆ ಕೃತಿಯೆನಿಸಿ ॥ ಹರಹಿದನು ತ್ರೈಲೋಕ್ಯದಲಿ ಕೇ । ಳರಸ ವೇದವ್ಯಾಸಮುನಿ ಮುರ। ಹರಚರಿತ್ರವಿದಖಿಳಲೋಕದ ದುರಿತಹರವೆನಿಸಿ ॥ ೨೭ ॥ ಹರನ ಸಭೆಯೊಳಗೀಕೃತಿಯು ಮುರ । ಹರನಸಭೆಯೊಳು ಸಕಲವಿದ್ಯಾ । ಧರರ ಸಭೆಯೊಳು ಕಮಲಭವನುದ್ದಂಡಸಭೆಯೊಳಗ ॥ ಸುರಪತಿಯ ಸಭೆಯಲ್ಲಿ ಪಾವಕ। ತರಣಿಜನ ಸಭೆಯಲ್ಲಿ ನೈರುತಿ । ವರುಣಸಭೆಯಲಿ ಮೆರದುದ್ದೈ ಭಾರತಕಥಾಮೃತವು ॥ ೨೮ ॥ ಸರ್ಪಯಾಗದೊಳಾದಕರ್ಮದ । ದರ್ಪವನು ಕೆಡೆಯೊದೆದು ತೊಳಗಿದ । ನುಪ್ಪರದರವಿತೇಜದಲಿ ಸುರಸಭೆಯು ಬೆರಗಾಗೆ ॥ ತಪ್ಪದೀಭಾರತವ ಕೇಳ್ದಂ । ಗಪ್ಪುದಮರಶ್ರೀಕದಂಬದೊ। ಳೊಪ್ಪವಿಂದ್ರನ ವಾಡಿಯಲಿ ಜನಮೇಜಯಕ್ಷಿತಿಪ ॥ ೨೯ ॥ ಮುನಿಗಳೆಂಭತ್ತೆಂಟುಸಾವಿರ। ಘನಕಥಾಪೀಯೂಷವನು ಕೇ। ಳ್ದನಿಬರಿರ್ತ್ತರು ಸೂತ ಮನದಣಿವಂತೆ ವಸ್ತುಗಳ ॥ ವನವಸಂಗಳಿಬಂದು ತಾಪಸ।ರನಿಬರುಂ ಸ್ವಸ್ಥಾನಸಂಗತ । ರೆನಿಸಿ ಭಾರತಕಥೆಯ ಕೊಂಡಾಡಿದರು ಮನದಣಿಯೆ ॥ ೩೦ ॥ ಸನಕಕಶ್ಯಪಜನ್ನುಜೈಮಿ

ನಿ । ವಿನುತವಿಶ್ವಾಮಿತ್ರನಾಂಗಿರ । ಮನುಮತಂಗನಗಸ್ತ್ಯಕಸ್ಯಪಗಾರ್ಗ್ಯಗೌತಮರು ‖ ಘನತರದವಾಲ್ಮೀಕಿವಾಸಿಷ್ಠನನು ವೇದವ್ಯಾಸರೊಳಗಾದನಿಬರನು ಜನಮೇಜಯನು ಮನ್ನಿಸಿದನುಚಿತದಲಿ ‖೩೧‖ ನಿಮ್ಮ ಕಾರುಣ್ಯಾವಲೋಕನ । ವೆಮ್ಮಮೇಲುಂಟಾಗಿ ಭಾರತ । ಗಮ್ಯವೆನಿಸುವ ಕಥೆಯ ಪೇಳ್ದರಿಸೂತನಂದದಲಿ ‖ ನಿರ್ಮಳಿತವಾಯ್ತೆನ್ನ ತನು ಸ । ದ್ಧರ್ಮವೈಶಂಪಾಯನನ್ನನು । ಬೊಮ್ಮ ರಥಗೊಂಬೆನುಕಣಾ ಯೆಂದರಸ ಹೊಗಳಿದನು ‖ ೩೨ ‖ ಕೇಳುಜನಮೇಜಯನೃಪಸಿಂ । ಲೋಲಕಥೆಯಾದನಾದರಿಸಿಯಾ। ಕೇಳಿದೊಡೆ ಶತಯಾಗಫಲವಹುದಮರಲೋಕದಲಿ‖ ಲೋಲಲೋಚನೆಯರ ಸಮೇಳದ । ಲಾಳುವರು ಹದಿನಾಲ್ಕುಲೋಕದ । ರಾಳುಗೆಲಸವ ಮಾಡುವರು ತೆತ್ತೀಸಕೋಟಿಗಳು ‖ ೩೩ ‖ ಧರೆಯೊಳೀಸತ್ಕಥೆಯ ಕೇಳಿದ । ನರರ್ಗೆ ಸಕಲೈಶ್ವರ್ಯಸಂತತಿ । ವರಶುಭೋದಯಭುಕ್ತಿಮುಕ್ತಿಯನೀವುದನವರತ ‖ ಹರನಸಾರೂಪ್ಯವನು ಕೇಳ್ಕರ । ಹರನ ಸಾಲೋಕ್ಯವನು ಭಾರತಿ । ವರನ ಸಾಯುಜ್ಯವನು ಪಡೆವರು ನೃಪತಿಕೇಳೆಂದ ‖ ೩೪ ‖ ಪುಣ್ಯಕಥೆಯನು ಪೊಗಳ್ದಜನರಿಗ । ಗಣ್ಯದೈಶ್ವರ್ಯವನು ಹರಿ ಕಾ । ರುಣ್ಯದಲಿ ಕೊಟ್ಟಿಹಪರಂಗಳಲ್ಲಿದ ಸಲಹುವನು ‖ ಹಣ್ಣಿತಲೆಗೇಸಿ ಪುರವವು । ಕ್ಕಣ್ಣನಿಷ್ಟವನೀವನೀಲಾ । ವಣ್ಯಮಯ ಸತ್ಕೃತಿಯ ಕೊಂಡಾಡವವರಾರಂದ ‖ ೩೫ ‖ ಸರಸಿಜೋದ್ಭವನರಸಿ ಭಾರತಿ । ಹಿಂಯವಧುಗೋಮಿನಿಯ ಸಭೆಯಲಿ । ಸುರಸತಿಯರಾಸ್ಥಾನವಲಿ ದಿಗ್ವನಿತೆಯರ ಹೊರೆಯ ‖ ವರವನಿತೆಶಚಿದೇವಿಯೂರ್ವಶಿ । ಯರ ಸಮೀಪದರಂಭೆಯಿಂದಿಲಿ । ವರಕಥಾಪಿಯೂಷಪಾನಿಗಳಾದರೊಲವಿನಲಿ ‖ ೩೬ ‖ ವಿಪ್ರಜನರಾದರಿಸಿ ಕೇಳ। ಲ್ಕಪ್ಪುದೈ ಸಚ್ಚರಿತ ಸದ್ಗುಣ। ಸುಪ್ರತಿಷ್ಠಿತವಪ್ಪಪುತ್ರಕಳತ್ರಸಂಪದವು ‖ ಗೊಪ್ಪವೆನಿಸುವ ಶ್ರುತಿಸುಯೋಗ್ಯತೆ। ಕ್ಷಿಪ್ರದಲಿ ಕೈಸಾರುವುದುತಾ।ವೊಪ್ಪುವರಲ್ಲೆ ಬ್ರಹ್ಮಸಭೆಯೊಳಗೆಂದನವನಿಪ ‖೩೭‖ ಭವದುಂತಹರವಕಟ ಹಂಸಾ। ಮವನೆ ನೆನೆವರು ಕಾಲಚಕ್ರದ । ಜವನವೇಗೆಯ ಜುಣುಗಿಪಾರುವರಖಿಳಮಾನವರು ‖ ಕವಿಕುಮಾರವ್ಯಾಸಸೂಕ್ತದ । ಸವಿಯದಮೃತವನೊಲಿದೊಲಿದು ಸು । ಶ್ರವಣದಲಿ ಕುಡಿಕುಡಿದು ಪದವಿಯಪಡೆವುದೀಲೋಕ ‖ ೩೮ ‖ ವೇದಪಾರಾಯಣವಫಲ ಗಂ । ಗಾದಿತೀರ್ಥಸ್ನಾನಫಲ ಕೃಚ್ಛ್ರಾದಿತಪಸಿನಫಲವು ಜ್ಯೋತಿಷ್ಟೋಮಯಾಗಫಲ ‖ ಮೇದಿನಿಯನೊಲಿದಿತ್ತಫಲವ । ಸ್ತ್ರಾದಿಕನ್ಯಾದಾನಫಲವಹು । ದಾದರಿಸಿ ಭಾರತದೊಳೊಂದಕ್ಷರವ ಕೇಳ್ದರಿಗೆ ‖ ೩೯ ‖ ಹೇಮಖುರಶೃಂಗಾರಭರಣವು। ಕಾಮಧೇನುಸಹಸ್ರಕಪಿಲೆಯು । ಸೋಮಸೂರ್ಯಗ್ರಹಣದಲಿ ಸುರನದಿಯತೀರದಲಿ ‖ ಶ್ರೀಮುಕುಂದಾರ್ಪಣವೆನಿಸಿ ಶತ। ಭೂಮಿದೇವರಿಗಿತ್ತಫಲವಹು।ದೀಮಹಾಭಾರತದೊಳೊಂದಕ್ಷರವ ಕೇಳ್ದರಿಗೆ ‖೪೦‖ ಚೋರನಿಂದಿಸಿ ಶಶಿಮುಟ್ಟಿದೊಡೆ।ಕ್ಷೀರವನು ಕ್ಷಯರೋಗಿ ಹಳಿದೊಡೆ।ವಾರಣಾಶಿಯ ಹಳವ ನಿಂದಿಸಿ ನಕ್ಕೊಡೇನಹುದು ‖ ಭಾರತದ ಕಥನಪ್ರಸಂಗವ । ಕ್ರೂರಕರ್ಮಿಗಳೇನಬಲ್ಲರು । ಘೋರತರರೌರವವ ಕೆಡಿಪುದು ಕೇಳ್ದಸುಜನಂಗೆ ‖ ೪೧ ‖ ಶ್ರೀಮದಮರಾಧೀಶನುತ ಗುಣ । ತಾಮರಸದಳ ವಿಪುಳನಿರ್ಮಳ । ನಾಮನೆನ್ನಪಮನಿಖಿಳಯತಿಪತಿದಿವಿಜವಂದಿತನು ‖ ರಾಮನೂರ್ಜಿತನಾಮ ಸುಧೆಯಾ । ರಾಮನಾಹವಭೀಮ ರಘುಕುಲ । ರಾಮ ಪಾಲಿಸು ವೊಲಿದು ಗದುಗಿನವೀರನಾರಯಣ‖೪೨‖ರಾಮಮಂಗಳನಾಮಸ್ಸೌಖ್ಯಗ । ಸ್ತೋಮಭವಕುಲಭೀಮ ಸುಗುಣೋ । ದ್ದಾಮಜಯಸಂಗ್ರಾಮ ಸೀತಾರಾಮನಿಸ್ಸೀ

ಮು ॥ ಸಾಮಗಾನಪ್ರೇಮ ರಿಪುನಿ । ರ್ಧೂಮ ಕಾರುಣ್ಯಾಭಿರಾಮನೆ । ರಾಮ ರಕ್ಷಿಸು ಬೇಗ ದಶರಥ ರಾಮನೊಲಿದೆನ್ನ ॥ ೪೩ ॥ ಅರಸ ವೈಶಂಪಾಯನಿಗೆ ನಿಜ । ಕರವ ಮುಗಿದಕ್ಷ ಸುವರ್ಣವಸ್ತ್ರಾ । ಭರಣಗೋವ್ರಜಭೂಮಿಕನ್ಯಾದಾನಮಣಿಗಣದಿ ॥ ಹಿರಿದು ಪರಿಯಲಿ ಮನದಣಿವವೋಲ್। ಉರುತರದ ದ್ರವ್ಯಾದಿಗಳ ಭೂ । ಸುರರಿಗಿತ್ತನು ರಾಯಜನಮೇಜಯಮಹೀಪಾಲ ॥ ... ॥ ೪೪ ॥

ಅಂತು ಸಂಧಿ ೧೩೫ಕ್ಕಂ ಪದ ೭೫೦ಕ್ಕಂ ಮಂಗಳಮಸ್ತು

ಇತಿ ಶ್ರೀಮದಚಿಂತ್ಯಮಹಿಮ ಗದುಗು ವೀರನಾರಾಯಣ ಚರಣಾರವಿಂದ ಮಕರಂದ ಮಧುಪಾನ ಪುಷ್ಟವಚಃ ಷಟ್ಪದೀನಿಕಾಯ ಶ್ರೀಮತ್ಕುಮಾರವ್ಯಾಸಯೋಗೀಂದ್ರ ವಿರಚಿತಮಪ್ಪ ಕರ್ಣಾಟ ಭಾರತ ಕಥಾಮಂಜರಿಯೋಳ್ ಗದಾಪರ್ವಂ ಸಮಾಪ್ತಮಾದುದು.

ದಶಪರ್ವ ಭಾರತಂ ಸಂಪೂರ್ಣಂ.